# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ





ಸಂಪುಟ ೪೮.
ಸಂಚಿಕೆ ೧

Vol. 48
No. 1

ಜೂನ್
೧೯೬೩

JUNE
1963

Half-Yearly
JOURNAL OF THE KANNADA LITERARY ACADEMY

KANNADA SAHITYA PARISHAT

BANGALORE-18.

ವಾರ್ಷಿಕ ಚಂದಾ ರೂ. ೨-೫೦ ನ. ಪೈ. ★ Annual Subscription Rs. 2-50 NP.

# ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

## ಕಾರ್ಯಕಾರಿ ಸಮಿತಿಯ ಸದಸ್ಯರು

೧. ಆಸ್ಥಾನವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಅಧ್ಯಕ್ಷರು, ಬೆಂಗಳೂರು.

೨. ಶ್ರೀ ಅನ್ನದಾನಯ್ಯ ಪುರಾಣಿಕ, ಬಿ.ಕಾಂ., ಎಲ್‌ಎಲ್.ಬಿ., ಗೌರವ ಕಾರ್ಯದರ್ಶಿಗಳು, ಬೆಂಗಳೂರು.

೩. ಡಾ|| ಕೆ. ಎಂ. ಕೃಷ್ಣರಾಯರು, ಎಂ.ಎ., ಪಿಎಚ್.ಡಿ., ಗೌರವ ಕಾರ್ಯದರ್ಶಿಗಳು, ಬೆಂಗಳೂರು.

೪. ಶ್ರೀ ಜಿ. ಶ್ರೀನಿವಾಸನ್, ಗೌರವ ಕೋಶಾಧಿಕಾರಿಗಳು, ಬೆಂಗಳೂರು.

೫. ಶ್ರೀ ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ. ಅವರು, ಬೆಂಗಳೂರು.

೬. ಶ್ರೀ ಎಚ್. ಎಸ್. ರೇಣುಕಪ್ರಸಾದ್, ಬಿ.ಎ., ಬಿ.ಎಲ್. ಅವರು, ಬೆಂಗಳೂರು.

೭. ಶ್ರೀ ಟಿ. ಮಾದಯ್ಯಗೌಡ, ಬಿ.ಎ., ಎಲ್‌ಎಲ್.ಬಿ. ಎಂ.ಎಲ್.ಎ. ಅವರು, ರಾಮನಗರ.

೮. ಶ್ರೀಮತಿ ಬಿ. ಜಿ. ಸುಶೀಲಮ್ಮ, ಬಿ.ಎಸ್‌ಸಿ. (ಆನರ್ಸ್) ಅವರು, ಬೆಂಗಳೂರು.

೯. ಶ್ರೀ ವಿ. ಬಿ. ನಾಯಕ್, ಎಂ. ಎ., ಎಲ್‌ಎಲ್.ಬಿ. ಅವರು, ಬಿಜಾಪುರ.

೧೦. ಶ್ರೀ ಎಂ. ಬಿ. ಬೂದಿಹಾಳ ಮಠ ಅವರು, ಹುಬ್ಬಳ್ಳಿ.

೧೧. ಶ್ರೀ ರುದ್ರಾಪುರ ಎಸ್. ಎಂ. ದೇಸಾಯಿ ಅವರು, ಬೆಳಗಾಂವಿ.

೧೨. ಶ್ರೀ ಎನ್. ಎಸ್. ಹೆಗ್ಗಡೆ ಅವರು, ಕಾರವಾರ.

೧೩. ಶ್ರೀ ಎಂ. ವಾಸುದೇವರಾವ್, ಎಂ.ಎ., ಎಲ್.ಟಿ. ಅವರು, ಸುರತ್ಕಲ್ಲು.

೧೪. ಶ್ರೀ ಎಂ. ಎಸ್. ಅನಂತಪದ್ಮನಾಭರಾವ್ ಅವರು, ಶಿವಮೊಗ್ಗ.

೧೫. ಶ್ರೀ ಆರ್. ಜಿ. ಜೋಷಿ ಅವರು, ರಾಯಚೂರು.

೧೬. ಶ್ರೀ ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು, ಯಾದಗಿರಿ.

೧೭. ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳು, ಎಂ.ಎ., ಎಂ.ಎಲ್.ಸಿ. ಅವರು, ಬೆಂಗಳೂರು.

೧೮. ಡಾ|| ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ. ಅವರು, ಧಾರವಾಡ.

೧೯. ಪ್ರೊ|| ಕೆ. ಜಿ. ಕುಂದಣಗಾರರು, ಎಂ.ಎ., ಬೆಳಗಾಂವಿ.

## ವಿನಿಮಯ ಪತ್ರಿಕೆಗಳು

**ದಿನಪತ್ರಿಕೆ :**

(೧) ಜನವಾಣಿ-ಬೆಂಗಳೂರು. (೨) ಸಂಯುಕ್ತ ಕರ್ನಾಟಕ-ಬೆಂಗಳೂರು.

**ವಾರಪತ್ರಿಕೆ :**

(೧) ಪ್ರಜಾಮತ-ಬೆಂಗಳೂರು. (೨) ಚೇತನ-ಬೆಂಗಳೂರು. (೩) ಮೈಸೂರು ಗೆಜೆಟ್-ಬೆಂಗಳೂರು. (೪) ರಾಯಭಾರಿ-ಉಡುಪಿ. (೫) ವಿಕ್ರಮ-ಬೆಂಗಳೂರು. (೬) ಕಂಠೀರವ-ಮಂಗಳೂರು. (೭) ಪ್ರಭಾತ-ಮಂಗಳೂರು. (೮) ಕರ್ನಾಟಕ ವೈಭವ-ಬಿಜಾಪುರ. (೯) ಕರ್ಮವೀರ-ಹುಬ್ಬಳ್ಳಿ. (೧೦) ಬೆಳಕು-ಮೈಸೂರು. (೧೧) ನವಯುಗ-ಉಡುಪಿ. (೧೨) ಜನಪ್ರಗತಿ-ಬೆಂಗಳೂರು. (೧೩) ಕಾನಾಡವೃತ್ತ-ಕುಮಟ. (೧೪) ರಾಷ್ಟ್ರಮತ-ಮಂಗಳೂರು. (೧೫) ಕನ್ನಡಿಗ-ಹುಬ್ಬಳ್ಳಿ. (೧೬) ಚಲಚಿತ್ರ-ಬೆಂಗಳೂರು. (೧೭) ಪ್ರಪಂಚ-ಹುಬ್ಬಳ್ಳಿ. (೧೮) ಜನಸೇವಕ-ಅಂಕೋಲ. (೧೯) American Reporter. (೨೦) New York Times, New York. (೨೧) ಸಂದರ್ಶನ-ಬಿಜಾಪುರ. (೨೨) ಕರ್ನಾಟಕ ಬಂಧು-ಗದಗ. (೨೩) ಸಂದೇಶ-ಬೆಳಗಾಂವಿ. (೨೪) ಸತ್ಯವಾದಿ-ಮೈಸೂರು.

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

**HALF-YEARLY JOURNAL OF THE**

## KANNADA SAHITYA PARISHAT
## BANGALORE-18



---

*Editor*

ASTHANAVIDWAN, PANDITARATNAM
B. SIVAMURTHI SASTRY

*Associate Editor*

DR. K. M. KRISHNA RAO, M.A., Ph.D.

---

ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ :: ಬೆಂಗಳೂರು–೧೮
೧೯೬೩

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ಜ್ಯೇಷ್ಠ–ಆಷಾಢ ೧೯೬೩





**ಸಂಪುಟ ೪೮]** **ಜೂನ್ ೧೯೬೩** **[ಸಂಚಿಕೆ ೧**


## ವಿಷಯ ಸೂಚಿಕೆ

# HALF-YEARLY JOURNAL

OF THE

## KANNADA LITERARY ACADEMY, BANGALORE

Vol. 48] JUNE 1963 [No. 1

CONTENTS




ಶ್ರೀಮದಾನಂದತೀರ್ಥ ವಿರಚಿತ

# ತತ್ತ್ವ ನಿರ್ಣಯ

ಅನುವಾದಕರು : ಶ್ರೀ ಎಸ್. ಎಸ್. ರಾಘವಾಚಾರ್, ಎಂ.ಎ.,
ಡಾ|| ಕೆ. ಎಂ. ಕೃಷ್ಣರಾವ್, ಎಂ.ಎ., ಪಿಎಚ್.ಡಿ.

(೧೯೬೨ ರ ಡಿಸೆಂಬರ್ ಸಂಚಿಕೆಯಿಂದ ಮುಂದುವರಿದುದು)

"ವಿಭುವಾದ ವಿಷ್ಣುವು ಸೃಷ್ಟಿಕರ್ತನಾದುದರಿಂದಲೂ, ಸಂಸಾರಿಗಳಿಗಿಂತ ಅನ್ಯನು," "ಈ ಜೀವನಿಂದ ಪ್ರವೇಶ ಮಾಡಿ ನಾಮರೂಪಗಳನ್ನು ವಿಭಾಗ ಮಾಡುತ್ತೇನೆ," ಎಂಬುವಲ್ಲಿಯೂ, "ಈ ವೃಕ್ಷವು ಜೀವನಿಂದ ತುಂಬಿದಾಗ ಜಲಪಾನ ಮಾಡುತ್ತಾ ಹರ್ಷದಿಂದ ಇರುತ್ತದೆ," ಎಂಬುವಾಗಲೂ 'ಜೀವ' ಶಬ್ದ ಪರಮಾತ್ಮನನ್ನೇ ಹೇಳುತ್ತದೆ. 'ಜೀವ' ಎಂದರೆ ಭಗವಂತ, ಅದು ಅನಿರುದ್ಧನ ಹೆಸರು ಎಂದು ಶ್ರುತಿಯು ನಿರ್ವಚನ ಮಾಡಿದೆ. ಈ ವಿಷಯದಲ್ಲಿ ಸ್ಮೃತಿಪ್ರಮಾಣವೂ ಇದೆ. ಅದು ಹೀಗೆ:

"ಸರ್ವಕಾಲದಲ್ಲಿಯೂ ಪ್ರಾಣವನ್ನು ಧಾರಣೆ ಮಾಡುವುದರಿಂದ **ವಿಷ್ಣುವು ಜೀವ** ಎನ್ನಿಸಿಕೊಳ್ಳುತ್ತಾನೆ. 'ತೇಜಸ್ಸು,' 'ಅಪ್ಪು,' 'ಅನ್ನ' ಎಂಬ ಮೂರು ಭೂತಗಳ ಸಮ್ಮಿಶ್ರದಿಂದ ಆ ವಿಭುವು ಈ ಸ್ಥಾವರ ಜಂಗಮವಾದ ಶರೀರಗಳನ್ನು, ಮಹಾಭೂತಗಳನ್ನು ಪ್ರವೇಶಿಸಿ ನಾಮರೂಪ ವಿಭಾಗವನ್ನು ಮಾಡುತ್ತಾನೆ; ಸಂಸಾರಿಗಳನ್ನು ಭ್ರಮೆ ಹೊಂದುವಂತೆ ಮಾಡುತ್ತಾನೆ. ಹೀಗೆ ಅವನ ಸ್ವರೂಪವು ಸದಾ ಅನ್ಯತ್ವದಿಂದ ಕೂಡಿದೆ. ಆದುದರಿಂದಲೇ ಈ ಜೀವನು 'ವೃಕ್ಷತ್ವ'ವನ್ನು ಹೊಂದಿದರೂ, ಅವನ ದೆಸೆಯಿಂದ ಹರ್ಷವನ್ನು ಹೊಂದುತ್ತಾನೆ."

"ಆ ತೇಜಸ್ಸು ಸಂಕಲ್ಪಿಸಿತು, ಆ ಅಪ್ಪು ಸಂಕಲ್ಪಿಸಿತು" ಎಂಬುದಾಗಿ ಮೊದಲೇ ಈ ಭೂತಗಳಲ್ಲಿ ಚೇತನತ್ವವನ್ನು ಹೇಳಿರುವುದರಿಂದ ಪುನಃ "ಈ ಜೀವನಿಂದ ಪ್ರವೇಶ ಮಾಡಿ" ಎಂದು ಸಂಸಾರಿಯ ಪ್ರವೇಶವನ್ನು ಹೇಳುವುದು ಯುಕ್ತವಲ್ಲ. ಆದುದರಿಂದ ಈ ಪ್ರಕರಣದಲ್ಲಿ **ಜೀವ** ಶಬ್ದದಿಂದ ಪರಮಾತ್ಮನನ್ನೇ ಹೇಳಿದೆ ಎಂಬುದು ಸ್ಪಷ್ಟ.

"ಜೀವನಿಂದ ತುಂಬಿ ಪಾನ ಮಾಡುತ್ತ ಹರ್ಷದಿಂದ ವೃಕ್ಷವಿದೆ ಎಂದು ಹೇಳುವಲ್ಲಿ ಪರನನ್ನೆ ಜೀವಶಬ್ದದಿಂದ ಹೇಳಿದೆ. ರಸಪಾನ ಮಾಡುತ್ತ ಮೋದದಲ್ಲಿರುವವನು ಸಂಸಾರಿ. ಚೇತನವಲ್ಲದೇ ಇರುವ ಅಚೇತನ ವೃಕ್ಷಕ್ಕೆ ಸುಖ ಮತ್ತು ಸಂತೋಷಗಳ ಸಂಭವವಿಲ್ಲ." ಭಾರತದಲ್ಲಿ ಈ ವಿಷಯವನ್ನು ಹೇಳಲಾಗಿದೆ.

"ಸುಖಕ್ಕೆ ಮತ್ತು ದುಃಖಕ್ಕೆ ಶರೀರವು ಆಶ್ರಯ (ಆಯತನ) ಮಾತ್ರ. ಅದು ಅಚೇತನ ಮತ್ತು ಪ್ರಾಕೃತ ಎಂದು ಹೇಳುತ್ತಾರೆ. ಆ ಸುಖದುಃಖಗಳ ಭೋಕ್ತೃವು ಚೈತನ್ಯಯುಕ್ತವಾದ **ಶರೀರಿ.**" ಜೀವನಿಲ್ಲದಿದ್ದರೆ ಈ ಶರೀರ ಸಾಯುತ್ತದೆಯೇ ಹೊರತು ಜೀವ ಸಾಯುವುದಿಲ್ಲ, ಎಂದು ಹೇಳುವ ಸಂದರ್ಭದಲ್ಲಿಯೂ ಜೀವ ಶಬ್ದ ಪರಮಾತ್ಮನನ್ನೇ ಹೇಳುತ್ತದೆ.

ಮುಖ್ಯವಾದ ಪ್ರಾಣಧಾರಕತ್ವವು ಸಂಸಾರಿಗೆ ಸಲ್ಲುವುದಿಲ್ಲ. ಬ್ರಹ್ಮನು ದೇಹವನ್ನು ಬಿಟ್ಟರೆ ನರನು ಮೃತನಾಗುತ್ತಾನೆ–ಎಂಬುವ ಶಾಸ್ತ್ರವಾಕ್ಯವು ಇದನ್ನು ಸಮರ್ಥಿಸುತ್ತದೆ.

"ಎಲೈ ಸೌಮ್ಯನೆ, ಯಾವ ಈ ಅಣುತಮವಾದ ಪದಾರ್ಥವನ್ನು ನೀನು ನೋಡ ಲಾರೆಯೋ, ಅದರಿಂದಲೇ ಈ ಮಹಾ ನ್ಯಗ್ರೋಧ ವೃಕ್ಷವು ಉಂಟಾಗಿದೆ" ಎನ್ನುವಾಗಲೂ 'ಅಣಿಮ' ಎಂಬ ಶಬ್ದದಿಂದ ಪರಮಾತ್ಮನನ್ನೇ ಹೇಳಿದೆ. ಮುಂದೆ ಇದೇ ವಿಷಯವನ್ನು ಇನ್ನೂ ಹೀಗೆ ಹೇಳಲಾಗಿದೆ:

"ಎಲೈ ಶ್ವೇತಕೇತುವೆ, ಈ ಅಣುವಾದ ವಸ್ತು ಯಾವುದಿದೆಯೋ, ಅದನ್ನು ಈ ಸರ್ವ ಜಗತ್ತು ಆತ್ಮವಾಗಿ ಹೊಂದಿದೆ. ಅದು ಸತ್ಯ. ಅವನು ಆತ್ಮ. ನೀನು ಅದಲ್ಲ." ಬೀಜಗಳ ವಿಷಯದಲ್ಲಿ "ಅಣುವಿನಷ್ಟೆ ಇರುವ ಈ ಬೀಜಗಳು" ಎನ್ನುವಲ್ಲಿ ಸ್ತ್ರೀಲಿಂಗ ಪ್ರಯೋಗ ದಿಂದಲೂ ಮತ್ತು 'ಇವ' (ಅಂತೆ) ಶಬ್ದ ಪ್ರಯೋಗದಿಂದಲೂ, ನಿಜವಾದ ಅಣುತ್ವವನ್ನು ಅವುಗಳ ವಿಷಯದಲ್ಲಿ ಹೇಳಿಲ್ಲ–ಎಂದು ಸ್ಪಷ್ಟವಾಗುತ್ತದೆ. ಅವುಗಳನ್ನು ನೀನು ನೋಡಲಾರೆ ಎಂದು ಹೇಳಿಲ್ಲ. "ಐತದಾತ್ಮ್ಯಂ" (ಇದು ಎಲ್ಲದರ ಆತ್ಮ) ಎಂದರೆ ಸರ್ವವೂ, 'ಏತದೀಯ' ಎಂದರೆ ಇದಕ್ಕೆ ಸೇರಿದುದು ಎಂದರ್ಥ (ಸ್ವತಂತ್ರವಲ್ಲ). "ಸ ಆತ್ಮಾ" (ಅವನು ಆತ್ಮನು) ಎನ್ನುವಲ್ಲಿ **ಆತ್ಮ** ಶಬ್ದದಿಂದ ಪರಮಾತ್ಮನನ್ನೇ ಹೇಳಿದೆ. ಸೂತ್ರವೂ ಈ ಅರ್ಥವನ್ನು ಸಮರ್ಥಿಸುತ್ತದೆ.

"ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್, ನಾನುಮಾನಂ ಅಭತ್ ಶಬ್ದಾತ್ ಪ್ರಾಣಭೃಚ್ಚ ಓಂ" ಎಂಬ ಸೂತ್ರಗಳಲ್ಲಿ ಭಗವಾನ್ ವೇದವ್ಯಾಸರು "ಆತ್ಮನಾದ ಅವನೊಬ್ಬ ನನ್ನೇ ತಿಳಿ" ಎಂದು ಸ್ವ ಶಬ್ದಕ್ಕೆ ಸಮಾನಾರ್ಥಕವಾದ ಆತ್ಮ ಶಬ್ದದಿಂದ ಪರಮಾತ್ಮನನ್ನೇ ಹೇಳಿದ್ದಾರೆ. ಇಲ್ಲಿ ಪ್ರಕೃತಿಯನ್ನಾಗಲೀ ಜೀವನನ್ನಾಗಲೀ ಹೇಳಿಲ್ಲ ಆದರು–ಎಂದು ನಿರ್ಣಯ ಮಾಡಿರುತ್ತದೆ. ಆತ್ಮ ಶಬ್ದಕ್ಕೆ ಪರಮಾತ್ಮ ಎಂಬುದೇ ಮುಖ್ಯಾರ್ಥ.

**ಪರಮೋಪನಿಷತ್ತು** ಹೀಗೆ ಹೇಳಿದೆ:

"ವ್ಯಾಪ್ತನಾಗಿರುವುದರಿಂದಲೂ ಮತ್ತು ಜ್ಞಾತೃವಾಗಿರುವುದರಿಂದಲೂ, ಆತ್ಮ ಎಂದರೆ ಪರಮ ಹರಿ ಮಾತ್ರ. ಆತ್ಮನೆನಿಸಿಕೊಳ್ಳುವ ಮಿಕ್ಕವರೆಲ್ಲಾ ಆತ್ಮಾಭಾಸರು! ಅವರಿಗೆ ಈ ಗುಣಗಳಿಲ್ಲ."

"ಪರದೇವತೆಯಲ್ಲಿ ತೇಜಸ್ಸು ಎಲ್ಲಿಯವರೆಗೆ ಸೇರುವುದಿಲ್ಲವೋ ಅಲ್ಲಿಯವರೆಗೆ ಇವನು ಪ್ರಜ್ಞೆ ಹೊಂದಿರುತ್ತಾನೆ," ಎನ್ನುವ ಶ್ರುತಿಯಲ್ಲಿ, ಪರಮಾತ್ಮನು ಜೀವನ ಪ್ರಾಣಾದಿಗಳನ್ನು ಯಾವಾಗ ತನ್ನಲ್ಲಿ ಅಡಗಿಸಿಕೊಳ್ಳುತ್ತಾನೋ, ಆಗ ಜೀವನು ಏನನ್ನೂ ತಿಳಿಯಲಾರನು. ಅವನು ಪ್ರಾಣಾದಿಗಳನ್ನು ಯಾವಾಗ ಪ್ರದಾನ ಮಾಡುತ್ತಾನೋ ಆಗ ಜೀವನಿಗೆ ಪ್ರಜ್ಞೆ ಬರುತ್ತದೆ. ಎಂದರೆ ಎಲ್ಲ ದೃಷ್ಟಿಗಳಿಂದಲೂ, ಎಲ್ಲ ಸ್ಥಿತಿಗಳಲ್ಲೂ ಜೀವ ಪರಮಾತ್ಮನ **ವಶ, ಅಧೀನ** ಎಂಬುದು ಈ ಶ್ರುತಿಯಿಂದ ಸ್ಪಷ್ಟವಾಗಿ ಹೇಳಿದಂತಾಯಿತು. ಬೇರೆ ವಾಕ್ಯಗಳೂ ಈ ವಿಷಯವನ್ನು ಸಮರ್ಥಿಸುತ್ತವೆ. ಹೀಗೆ:

"ಈತನು ಯಾವಾಗ ಪ್ರಾಣಗಳನ್ನು ಕೊಡುತ್ತಾನೋ ಆಗ ಈ ಚೇತನನು ಸರ್ವ ವನ್ನೂ ತಿಳಿಯುತ್ತಾನೆ. ಯಾವಾಗ ಇವನ ಕರಣಗಳನ್ನು (ಇಂದ್ರಿಯಗಳನ್ನು) ಪರಮಾತ್ಮ ಗ್ರಸ್ತ (ಹಿಡಿ) ಮಾಡುತ್ತಾನೋ, ಆಗ ಜೀವನು ಏನನ್ನೂ ತಿಳಿಯಲಾರನು."

"ಅಪಹರಿಸಿದನು, ಚೌರ್ಯ ಮಾಡಿದನು," ಎಂಬುವ ದೃಷ್ಟಾಂತದಲ್ಲಿಯೂ, ಅನ್ಯರಿಗೆ ಸೇರಿದ ಪದಾರ್ಥವನ್ನೇ ಅಪಹಾರ ಮಾಡುವುದು. ಆದುದರಿಂದ ಅಲ್ಲಿಯೂ ಭೇದವನ್ನೇ ಸಮರ್ಥಿಸಲಾಗಿದೆ. ತನ್ನದೇ ಆದ ವಸ್ತುವನ್ನು ಪರಿತ್ಯಾಗ ಮಾಡುವವನು ಕಳ್ಳನಾಗಲಾರನು "!

ಯಾರು ಈ ಏಕಾತ್ಮ್ಯ (ಒಂದೇ ಆತ್ಮ ಎಂಬ ವಾದ) ವನ್ನು ಹೇಳುತ್ತಾರೋ ಅವರು ಜಾಣರಲ್ಲ (ಅವರಿಗೆ ಜಾಣತನವಿಲ್ಲ). ಶಾಸ್ತ್ರ ತತ್ತ್ವಗಳನ್ನು ತಿಳಿಯದೆ ಕೇವಲ ವಾದಬಲದಿಂದ ಕಾಮಕ್ರೋಧ ವಶರಾಗಿ ಅವರು ಅಹಂಕಾರಕ್ಕೆ ಒಳಗಾಗಿದ್ದಾರೆ. ಶಾಸ್ತ್ರಗಳ ಸರಿಯಾದ ಅರ್ಥವನ್ನು ತಿಳಿಯದೆ ಅವರು "ಶಾಸ್ತ್ರದಸ್ಯು" ಗಳಾಗಿದ್ದಾರೆ. ಅವರು 'ಬ್ರಹ್ಮ ಸ್ತೇನರು'-ಬ್ರಹ್ಮ ತತ್ತ್ವವನ್ನೇ ಅಪಹರಿಸುತ್ತಾರೆ. ಅವರು ನಿರಾನಂದರು, ಅಪಕ್ವ ಮನಸ್ಸುಳ್ಳವರು ಮತ್ತು ಅಮಂಗಳ ಸ್ವರೂಪರು. ಗುಣಶೂನ್ಯತೆಯನ್ನು ಅವರು ನೋಡುತ್ತಾರೆಯೇ ಹೊರತು ಪರಮಾತ್ಮನ ಅನಂತ ಗುಣ ಪರಿಪೂರ್ಣತ್ವವನ್ನು ನೋಡುವುದಿಲ್ಲ. ಅಂತಹ ತಮೋಗುಣ ಪ್ರಚಾರ ಶರೀರವುಳ್ಳವರಿಗೆ ತಮಸ್ಸೆಂಬ ನರಕ ವಿಶೇಷವೇ ಪ್ರಾಪ್ಯಸ್ಥಾನ (ಅವರು ಹೊಂದುವ ಸ್ಥಳ). ಸ್ವರೂಪ, ಜಾತಿ, ಶ್ರುತಿ ಮತ್ತು ಪ್ರಯೋಜನ ದೃಷ್ಟಿಗಳಿಂದ ಜೀವ ಬ್ರಹ್ಮರು ಬೇರೆಯಾಗಿರುವಾಗ "ನಾನೇ ಅವನು" ಎಂಬ ಅಯೋಗ್ಯ ಸಂಬಂಧವನ್ನು ಹೇಳುವುದು ಹೇಗೆ ತಾನೆ ಸಾಧ್ಯ?

**ಪರಮೋಪನಿಷತ್ತು** ಹೇಳುತ್ತದೆ:

"ಪಕ್ಷಿ ಮತ್ತು ಸೂತ್ರ; ನಾನಾ ವೃಕ್ಷಗಳ ರಸ; ಬೇರೆ ಬೇರೆ ನದಿಗಳು ಮತ್ತು ಸಮುದ್ರ; ಶುದ್ಧೋದಕ ಲವಣೋದಕ; ಚೋರ ಮತ್ತು ಅಪಹಾರ್ಯ ವಸ್ತು; ಗಾಂಧಾರ ದೇಶ, ಆ ದೇಶದ ಪುರುಷ; ಇವು- ಇವರು ಹೇಗೆ ಪರಸ್ಪರ ಭಿನ್ನವೋ, ಹಾಗೆಯೇ ಜೀವ ಮತ್ತು ಈಶ್ವರ ಭಿನ್ನರು. ಇವರು ಯಾವಾಗಲೂ ಪರಸ್ಪರ ವಿಲಕ್ಷಣರು. ಹಾಗಿದ್ದರೂ ಅತ್ಯಂತ ಸೂಕ್ಷ್ಮರೂಪಿಗಳಾದುದರಿಂದ, ಮಂದದೃಷ್ಟಿಯುಳ್ಳವರಿಗೆ, ಪ್ರೇರಕನೂ ಪರಮನೂ ಆದ ಶ್ರೀಹರಿ ಮತ್ತು ಜೀವರು ಬೇರೆ ಬೇರೆ ಎಂದು ಕಾಣುವುದಿಲ್ಲ. ಅವರಿಬ್ಬರ ವೈಲಕ್ಷಣ್ಯವನ್ನು ತಿಳಿದರೇ ಮೋಕ್ಷವು ಲಭಿಸುವುದು. ಇಲ್ಲದಿದ್ದರೆ ಬಂಧ ಸಿದ್ಧ"!!

ಸರ್ವಜೀವರಿಗೂ ಪ್ರೇರಕನಾದ ಪ್ರಾಣ ಮತ್ತು ಬುದ್ಧಿಗಳಿಗೆ ಚೋದಕನಾದ ಆ ಮಹಾವಿಷ್ಣುವು ಸಂಸಾರಿ ಜೀವನಿಂದ ಬೇರೆಯೇ. ಅವನನ್ನು ಹಾಗೆ ತಿಳಿಯದೆ ಮೂಢಬುದ್ಧಿಯುಳ್ಳವನಾಗಿ ಯಾವ ಜೀವನು ತಾನೆ ದೇಹ ಇಂದ್ರಿಯ ಪ್ರಾಣ ಮತ್ತು ಬುದ್ಧಿಗಳಿಗೆ ನೇತೃ ಎಂದು ತಿಳಿಯುತ್ತಾನೋ, ಅವನು ಸಂಸಾರ ಪದವಿಯನ್ನೇ ಹೊಂದುತ್ತಾನೆ. ಜೀವೇಶರಿಗೆ ಸದಾ ಇರುವ ವೈಲಕ್ಷಣ್ಯವನ್ನು ಚೆನ್ನಾಗಿ ತಿಳಿದುಕೊಂಡರೆ ಮುಕ್ತಿ ದೊರಕುತ್ತದೆ. ಇಲ್ಲದಿದ್ದರೆ ಬಂಧ ಸಿದ್ಧ.

ಸರ್ವ ವೇದಗಳನ್ನು ಅಧ್ಯಯನ ಮಾಡಿ ತಾನು ದೊಡ್ಡವನೆಂದು ತಿಳಿದುಕೊಂಡು, ವಿದ್ವಾಂಸನೆಂಬ ಅಹಂಕಾರದಿಂದ ಸ್ತಬ್ಧನಾಗಿ ಶ್ವೇತುಕೇತುವು ಬಂದನು. ಆತ್ಮನಿಂದ ಅನ್ಯನಾದ, ವಿದ್ಯೆಯೇ ಮೊದಲಾದ ಸದ್ಗುಣಪ್ರದನಾದ ಪರದೇವನನ್ನು ತಿಳಿಯದೆ, ಹೀಗೆ ಅವಿನೀತನಾಗಿರುವ ಶ್ವೇತಕೇತುವಿಗೆ, ಅವನಲ್ಲಿ ಪರಾಧೀನತ್ವ ಜ್ಞಾನವನ್ನು ಉಂಟುಮಾಡಿ,

ಅವನಲ್ಲಿದ್ದ ಅಹಂಕಾರವನ್ನು ಹೋಗಲಾಡಿಸಿ, ಅವನಿಂದ ಬೇರೆಯಾದ ಪರಮಾತ್ಮನಲ್ಲಿ ಅವನಿಗೆ ನಿಷ್ಠೆ ಉಂಟಾಗುವಂತೆ ಉಪದೇಶವಾಗುತ್ತದೆ ಇಲ್ಲಿ.

"ಸೃಷ್ಟಿಗೆ ಮೊದಲು ಇದೆಲ್ಲವೂ ಅಸತ್ ಆಗಿತ್ತು" ಎಂದು ಶ್ರುತಿಯಲ್ಲಿ ಹೇಳುವ ವಾದವು ವಾದಿಪ್ರಸಿದ್ಧವೆಂಬುದನ್ನು ಶ್ರುತಿಯು ನಿರಾಕರಿಸುವುದಿಲ್ಲ. "ಇಷ್ಟ ಮತ್ತು ಪೂರ್ತವನ್ನು ಬಹಳ ದೊಡ್ಡದೆಂದು ತಿಳಿಯುತ್ತ ಬೇರೊಂದು ಶ್ರೇಯಸ್ಸಿಲ್ಲವೆಂದು ಮೂಢರು ತಿಳಿದಿದ್ದಾರೆ," ಎಂಬುವಲ್ಲಿ ಶ್ರುತಿ ತಾತ್ಪರ್ಯದ ಅಜ್ಞಾನದಿಂದ ಬಂದ ವಾದವಿದು ಎಂಬುದು ಸ್ಪಷ್ಟ. ಹಾಗೆಯೇ ಇಲ್ಲಿಯೂ ಅಸದ್ವಾದವು ಅಜ್ಞಾನ ಪ್ರಾಪ್ತ. ಹಾಗೆಯೇ ಶ್ವೇತಕೇತುವಿನ ಅಹಂಕಾರವೂ ಅಜ್ಞಾನದಿಂದ ಬಂದುದು. ಅನಿಪುಣರಾದ ಕೆಲವರು ಏಕಾತ್ಮವಾದವನ್ನು ಹೇಳುತ್ತಾರೆ ಎಂದು ಶಾಸ್ತ್ರದಲ್ಲಿಯೇ ಈ ವಿಷಯವನ್ನು ಹೇಳಲಾಗಿದೆ (ಪ್ರಕಾಶಪಡಿಸಲಾಗಿದೆ). ಸರ್ವವೂ ಭಗವಂತನ ವಶ ಎಂಬುದನ್ನು ಉಪದೇಶಿಸುವುದಕ್ಕಾಗಿಯೇ, ಪ್ರಕೃತ ಶ್ರುತಿಯಲ್ಲಿ ಹೀಗೆ ಹೇಳಿದೆ:

"ಇದೆಲ್ಲವೂ ಮೊದಲು ಸತ್ತೇ ಆಗಿತ್ತು" ಎಂದು ಸೃಷ್ಟಿಯನ್ನು ಹೇಳಲಾಗಿದೆ. ಒಂದು ಜ್ಞಾನದಿಂದ ಸರ್ವ ಜ್ಞಾನವೂ ಬರುತ್ತದೆ ಎಂದು ಹೇಳುವಲ್ಲಿ ಪ್ರಾಧಾನ್ಯ ಸಾದೃಶ್ಯ ಮತ್ತು ಕಾರಣತ್ವಗಳು ಹೇತುವಾಗಿವೆ. ಬ್ರಹ್ಮನಿಗಿಂತ ಬೇರೆಯಾದ ಸಮಸ್ತವೂ ಮಿಥ್ಯೆ ಎಂಬುವ ದೃಷ್ಟಿಯಿಂದ – ಏಕಜ್ಞಾನದಿಂದ ಸರ್ವಜ್ಞಾನವನ್ನು ಹೇಳಿಲ್ಲ. ಸತ್ಯವಸ್ತುವಿನ ಜ್ಞಾನದಿಂದ ಅಸತ್ಯ ಪದಾರ್ಥದ ಜ್ಞಾನ ಎಂದಿಗೂ ಬರಲಾರದು! ಶುಕ್ತಿ ಎಂದೇ ತಿಳಿದವನನ್ನು ಇವನು ರಜತವನ್ನು ತಿಳಿದವನು ಎಂದು ಹೇಳುವುದಿಲ್ಲ! ಶುಕ್ತಿ ಜ್ಞಾನಕ್ಕೂ ರಜತ ಜ್ಞಾನಕ್ಕೂ ವಿರೋಧವಿರುವುದರಿಂದ ಹಾಗೆ ಹೇಳಲೂ ಕೂಡದು. ಇದು ರಜತವಲ್ಲ ಎಂದು ತಿಳಿದಿರುವ "ಅರಜತಜ್ಞನು" ಇದು ಶುಕ್ತಿ ಎಂಬ ಜ್ಞಾನವನ್ನು ಹೊಂದುತ್ತಾನೆ. ಇದು ರಜತವೆಂದು ಅವನು ತಿಳಿದಿದ್ದರೆ ಅವನು ಶುಕ್ತಿಜ್ಞನಲ್ಲ. ಒಂದು ವಸ್ತುವನ್ನು ತಿಳಿದವನು ಅದರ ಅಭಾವವನ್ನು ತಿಳಿದವನು ಎಂದು ಹೇಳುವುದು ಸರಿಯಲ್ಲ. ಅಭಾವ ಜ್ಞಾನ ಬರಬೇಕಾದರೂ ಅದಕ್ಕೆ ಮುಂಚೆ ಯಾವ ವಸ್ತು ಇಲ್ಲವೋ ಆ ವಸ್ತುವನ್ನು ಅದು ಇರುವ ಬೇರೆ ಸಂದರ್ಭದಲ್ಲಿ ನೋಡಿ ತಿಳಿದಿರಬೇಕು. ಬೇರೆಲ್ಲಿಯೂ ಆ ವಸ್ತು ಇಲ್ಲದಿದ್ದ ಪಕ್ಷದಲ್ಲಿ ಅದು ಇಲ್ಲ ಎಂಬ ಅಭಾವ ಜ್ಞಾನವು ಸಂಭವಿಸುವುದಿಲ್ಲ. ಪ್ರಧಾನ ವಿಷಯವನ್ನು ತಿಳಿದ ಮೇಲೆ ಅಪ್ರಧಾನ ವಿಷಯವನ್ನು ತಿಳಿದಂತೆಯೇ ಎಂದು ವ್ಯವಹಾರವಲ್ಲಿದೆ. ಒಂದು ಗ್ರಾಮದಲ್ಲಿ ಪ್ರಧಾನ ವ್ಯಕ್ತಿಗಳನ್ನು ತಿಳಿದದ್ದೇ ಆದರೆ, ಅಂತಹವನ ನಾಶವಾಗಿದ್ದೇ ಆದರೆ, ಅಥವಾ ಅವನು ಆಹ್ವಾನಿತನಾಗಿದ್ದರೆ, ಆ ಗ್ರಾಮವೇ ತಿಳಿದಿದೆ, ಆ ಗ್ರಾಮವೇ ನಾಶವಾಯಿತು ಅಥವಾ ಆ ಗ್ರಾಮಕ್ಕೇ ಆಹ್ವಾನ ಹೋಗಿದೆ ಎಂದು ಹೇಳುವ ವಾಡಿಕೆ ಉಂಟು. ಕಾರಣಭೂತನಾದ ತಂದೆ ತಿಳಿದಿದ್ದರೆ ಮಗನೂ ನಮಗೆ ತಿಳಿದಿದ್ದಾನೆ ಎಂದು ಹೇಳುತ್ತೇವೆ. ಇವನು ಅವನ ಮಗ. ಆದುದರಿಂದ ನಮಗೆ ಇವನ ವಿಷಯ ಗೊತ್ತು ಎಂದು ವ್ಯವಹರಿಸುತ್ತೇವೆ. ಪ್ರಕೃತ ಸಂದರ್ಭದಲ್ಲಿಯೂ ಜಗತ್ತನ್ನು ಈಶ್ವರ ಸೃಷ್ಟಿಸಿರುವುದರಿಂದ, ಈಶ್ವರಜ್ಞಾನದಿಂದ ಜಗತ್ತೂ ಜ್ಞಾತವಾಯಿತು (ತಿಳಿದಿದೆ) ಎಂಬ ನೀತಿ ಸಲ್ಲುತ್ತದೆ. ಹಾಗೆಯೇ ಅನೇಕ ಪದಾರ್ಥಗಳಿಗೆ ಸಾದೃಶ್ಯವಿರುವಾಗ ಅವುಗಳಲ್ಲಿ ಒಂದು ತಿಳಿದರೆ ಅವಕ್ಕೆ ಸದೃಶವಾದ ಉಳಿದೆಲ್ಲವೂ ತಿಳಿದಿವೆ ಎಂದು ಹೇಳುತ್ತೇವೆ. ಏಕಸ್ತ್ರೀ ಜ್ಞಾನದಿಂದ ಅನ್ಯಸ್ತ್ರೀ ಜ್ಞಾನವು ಇದೆ ಎಂದು ವ್ಯವಹಾರವಿದೆ. ಪ್ರಕೃತ ಸಂದರ್ಭದಲ್ಲಿಯೂ ಸಾದೃಶ್ಯವೇ ವಿವಕ್ಷಿತ.

"ಎಲೈ ಸೌಮ್ಯನೇ, ಒಂದು ಮಣ್ಣಿನ ಉಂಡೆಯಿಂದ ಎಲ್ಲಾ ಮಣ್ಣಿನ ಪದಾರ್ಥಗಳೂ ವಿಜ್ಞಾತವಾಗಿವೆ (ತಿಳಿದಿವೆ)" ಎಂಬುವಲ್ಲಿ ಸಾದೃಶ್ಯವೇ ಮುಖ್ಯವಾದ ಅಂಶ. ಇಲ್ಲದಿದ್ದರೆ "ಒಂದು ಮಣ್ಣಿನ ಉಂಡೆ" ಎಂಬಲ್ಲಿರುವ 'ಒಂದು' ಎಂಬ ಶಬ್ದಕ್ಕೂ 'ಪಿಂಡ' ಎಂಬ ಶಬ್ದಕ್ಕೂ ಸಾರ್ಥಕ್ಯವಿಲ್ಲ. ಮಣ್ಣನ್ನು ತಿಳಿದರೆ ಮಣ್ಣಿನಿಂದ ಮಾಡಿದ ಪದಾರ್ಥಗಳೆಲ್ಲ ತಿಳಿದಿವೆ ಎಂದು ಹೇಳಬೇಕಾಗಿತ್ತು. ಒಂದು ಮೃತ್ಪಿಂಡದಿಂದ ಸರ್ವ ಮೃಣ್ಮಯ ವಸ್ತುಗಳೂ ಉತ್ಪನ್ನವಾಗಿಲ್ಲ. ಅವುಗಳಿಗಿರುವುದು ಪರಸ್ಪರ ಸಾದೃಶ್ಯ ಮಾತ್ರ. "ಹೇಗೆ ಒಂದು ಕಬ್ಬಿಣದಿಂದ ಎಲ್ಲ ಕಬ್ಬಿಣದ ಪದಾರ್ಥಗಳೂ ತಿಳಿಯುತ್ತವೆಯೋ ಹಾಗೆ." "ಒಂದು ಸುವರ್ಣದ ಜ್ಞಾನದಿಂದ ಸರ್ವ ಸುವರ್ಣಮಯ ಪದಾರ್ಥಗಳೂ ವಿಜ್ಞಾತವಾಗಿವೆಯೋ" ಎಂಬುವಲ್ಲಿಯೂ ಇದೇ ರೀತಿ ವ್ಯರ್ಥಶಬ್ದ ಪ್ರಯೋಗವನ್ನು ಕಲ್ಪಿಸಬೇಕಾಗುವುದು. ಒಂದು ಸುವರ್ಣಪಿಂಡದಿಂದ ಸರ್ವ ಸ್ವರ್ಣಮಯ ವಸ್ತುಗಳೂ ನಿರ್ಮಿತವಾಗಿಲ್ಲ. ಒಂದು ಕಬ್ಬಿಣದ ಪಿಂಡದಿಂದ ಸರ್ವ ಕಬ್ಬಿಣದ ಪದಾರ್ಥಗಳೂ ನಿರ್ಮಿತವಾಗಿಲ್ಲ. (ಆದುದರಿಂದ "ಏಕ ವಿಜ್ಞಾನೇನ ಸರ್ವಂ ವಿಜ್ಞಾನಂ" ಎಂಬುವ ವಾಕ್ಯವು ಪ್ರಾಧಾನ್ಯ ಕಾರಣತ್ವ ಮತ್ತು ಸಾದೃಶ್ಯ-ಇವುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಹೊರಟ ಸೂತ್ರವಾಗಿದೆ).

"ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ" ಎಂದರೆ ಲೌಕಿಕ ವಾಕ್ ವ್ಯವಹಾರದಿಂದ ಹುಟ್ಟುವ ಹೆಸರುಗಳು ಕೇವಲ ವಿಕಾರಗಳು (ಎಂದರೆ ಸಂಸ್ಕೃತವಲ್ಲದ ಎಲ್ಲ ನಾಮಗಳು ವಿಕೃತ-ಎಂದರೆ ಪುರುಷ ಪ್ರಯತ್ನದಿಂದ ಉತ್ಪನ್ನವಾದವು). ಆದರೆ ಮೃತ್ತಿಕಾ ಎಂಬ ನಾಮಧೇಯವು ಅವಿಕೃತ ಸತ್ಯ (ಸಂಸ್ಕೃತ ಶಬ್ದಕ್ಕೆ ಅಭಿವ್ಯಕ್ತಿ ಉಂಟೇ ಹೊರತು ವ್ಯುತ್ಪತ್ತಿ ಇಲ್ಲ). ಈ ಮಾತು ಸತ್ಯ". ಇದೇ ಶ್ರುತಿಯ ಅರ್ಥ. "ವಾಚಾರಂಭಣ ಮಾತ್ರ" ಎಂದು ಹೇಳಿದ್ದರೆ ಮಾತ್ರ ಮಿಥ್ಯಾತ್ವವನ್ನು ಹೇಳಬಹುದಾಗಿತ್ತು. ಶ್ರುತಿಯಲ್ಲಿ 'ಮಾತ್ರ' ಎಂದಿಲ್ಲ. ಆದುದರಿಂದ ಇದು ಅಶ್ರುತಕಲ್ಪನೆಯಾಗುವುದು. ಮತ್ತು ಆ ಪಕ್ಷದಲ್ಲಿ ನಾಮಧೇಯ ಶಬ್ದಕ್ಕೂ ಇತಿ ಶಬ್ದಕ್ಕೂ ಯಾವ ಪ್ರಯೋಜನವೂ ಇಲ್ಲ.

ಆದ್ದರಿಂದ ಶ್ರುತಿಯಲ್ಲಿ ಎಲ್ಲಿಯೂ ಜಗತ್ತಿನ ಮಿಥ್ಯತ್ವವು ಹೇಳಿಲ್ಲ.

"ಸರ್ವಜ್ಞನೂ, ಮನಸ್ಸಿಗೆ ಒಡೆಯನೂ, ಸರ್ವತೋವರನೂ, ಸ್ವತಂತ್ರನೂ ಆದ ಪರಮೇಶ್ವರನು ಮಹದಾದಿ ಸರ್ವ ಪದಾರ್ಥಗಳನ್ನೂ ಸರ್ವ ಕಾಲದಲ್ಲಿಯೂ ಸತ್ಯವಾಗಿಯೇ ನಿರ್ಮಿಸಿದನು. ಪರಮೇಶ್ವರನು ಸ್ಪೃಹಣೀಯ ವಸ್ತುವನ್ನು ಭಕ್ತರಿಂದ ಸ್ವೀಕರಿಸುತ್ತಾನೆ. ಸ್ಪೃಹಣೀಯ ವಸ್ತುಗಳನ್ನು ಭಕ್ತರಿಗೆ ಕೊಡುತ್ತಾನೆ. ಹಾಗಿದ್ದರೂ ಅವನು ನಿರ್ಮಿಸಿರುವ ಈ ಜಗತ್ತು ಸತ್ಯವೇ. ಇಂತಹ ಜಗತ್ತು ಹೇಗೆ ತಾನೆ ಮೋಘವಾದೀತು? ಎಲೈ ಇಂದ್ರ ಬೃಹಸ್ಪತಿಗಳೇ, ನಿಮ್ಮ ಅಧೀನವಾಗಿರುವ ಈ ವಿಶ್ವವು ಸತ್ಯವಾಗಿಯೇ ಇದೆ. ನಿಮ್ಮ ಈ ಸತ್ಯವಾದ ಜಗತ್ತಿನ ಪರಿಪಾಲನಾದಿ ವ್ರತವನ್ನು ಸರ್ವ ದೇವತೆಗಳೂ ಕೂಡ ಅರಿಯಲಾರರು. ನಾನೊಬ್ಬನೇ ಮಾತ್ರ ಅಜ್ಞಾನಿಯಲ್ಲ. ಇದು ನಿಜವಾಗಿಯೂ ಆ ಸರ್ವೋತ್ಕೃಷ್ಟನೂ ಸತ್ಯನೂ ಆದ ಪರಮೇಶ್ವರನ ಮಹಿಮಾಸ್ಪಿತವೂ ಸತ್ಯವೂ ಆದ ಕರ್ಮಗಳಲ್ಲವೆ? ಹೇಳಿ. ಅನಾದಿಯೂ ಅನಂತವೂ ಆದ ಈ ಜಗತ್ತು ಈ ರೀತಿ ಪ್ರವರ್ತಿಸುತ್ತದೆ. ಈ ವಿಷಯದಲ್ಲಿ ವಿಚಾರಣೀಯಾಂಶವಿಲ್ಲ. ಬೇರೆ ಯಾವ ರೀತಿಯಲ್ಲಾಗಲೀ, ಎಲ್ಲಾಗಲೀ, ಮತ್ಯಾರ ವಶದಲ್ಲಾಗಲೀ ಈ ಜಗತ್ತು ಹಿಂದೆಯಾಗಲೀ ಮುಂದೆಯಾಗಲೀ ಆಗಲಾರದು. ಹರಿಯ ಪರಾಶಕ್ತಿಯನ್ನು ಯಾವ ಅಜ್ಞರು

ತಿಳಿಯಲಾರರೋ ಅವರು ಈ ಜಗತ್ತನ್ನು ಅಸತ್ಯವೆಂದು ಹೇಳುತ್ತಾರೆ. ಈ ಸತ್ಯರೂಪವಾದ ಜಗತ್ತನ್ನು ಸೃಷ್ಟಿಸಿ ಆ ಸ್ವಯಂಭುವಾದ ಪರಮಾತ್ಮನು **ಸತ್ಯಕರ್ಮ** ಎನ್ನಿಸಿಕೊಳ್ಳುತ್ತಾನೆ. ಕೆಲವರು ಈ ಜಗತ್ತನ್ನು ಅಸತ್ಯ ಅಪ್ರತಿಷ್ಠ ಮತ್ತು ಈಶ್ವರರಹಿತ ಎಂದು ಹೇಳುತ್ತಾರೆ. ಭೂತಗಳ ಪರಸ್ಪರ ಸಂಯೋಗದಿಂದಲೂ ಕಾಮದ ಕಾರಣದಿಂದಲೂ ಇದು ಉಂಟಾಗಿದೆ ಎನ್ನುತ್ತಾರೆ. ಈ ದೃಷ್ಟಿಯನ್ನು ಅವಲಂಬಿಸಿ ಆತ್ಮ ನಾಶಮಾಡಿಕೊಂಡ ಅಲ್ಪ ಬುದ್ಧಿಗಳು ಉಗ್ರ ಕರ್ಮಿಗಳಾಗಿ ಜಗತ್ತಿನ ಕ್ಷಯಕ್ಕೆ ಕಾರಣರಾಗಿ ಕೇವಲ ಅಮಂಗಳ ಸ್ವರೂಪರಾಗುತ್ತಾರೆ. ಜಗತ್ತಿಗೆ ಸ್ವಪ್ನಸಾದೃಶ್ಯವನ್ನು ಹೇಳಿರುವುದು ಜ್ಞಾನೋದಯವಾದ ಮೇಲೆ ಇದು ನಿವೃತ್ತಿಯಾಗುತ್ತದೆ ಎಂಬ ಅಭಿಪ್ರಾಯದಿಂದಲ್ಲ. ಇದು ಅನಿತ್ಯವಿಕಾರಿ ಮತ್ತು ಪರತಂತ್ರ ಎಂಬ ದೃಷ್ಟಿಯಿಂದ. ಸರ್ವಜ್ಞನಾದ ವಿಷ್ಣುವಿಗೆ ಸರ್ವದಾ ಇದು ವೇದ್ಯವಾಗಿದೆ. ಆದುದರಿಂದ ಜ್ಞಾನ ನಾಶ್ಯವಲ್ಲ. ಇದು ಅವನ ಆಜ್ಞಾನುವರ್ತಿಯಾಗಿದೆ ಎಂದು **ಪರಮೋಪನಿಷತ್ತಿ**ನಲ್ಲಿ ಶ್ರುತವಾಗಿದೆ. ಪ್ರಪಂಚ ಪರಮಾತ್ಮನ ಪ್ರಜ್ಞೆಯಿಂದ ನಿರ್ಮಿತವಾಗಿರುವುದರಿಂದ ಇದು 'ಮಾಯಾಮಯ' ಎನ್ನಿಸಿಕೊಳ್ಳುತ್ತದೆ. ಪರಮಾತ್ಮನು ಇದರಲ್ಲಿ ಅನುಗತನಾಗಿರುವುದರಿಂದ 'ಅನೃತ' ಎನ್ನಿಸಿಕೊಳ್ಳುತ್ತದೆ. ಜ್ಞಾನದಿಂದ ಇದು ನಿವರ್ತ್ಯವಲ್ಲ. ಪ್ರವಾಹತಃ ನಿತ್ಯವಾಗಿದೆ. 'ಅ' ಎಂಬುದೂ ಪರದೇವನ ಹೆಸರು! ಅವನಿಂದ ಇದು ಸತ್ಯವಾಗಿದೆ. ಎಂದರೆ ಅವನಿಗೆ ಅಧೀನವಾದ ಸ್ವರೂಪವುಳ್ಳದ್ದಾಗಿದೆ. ಆದುದರಿಂದ ಜಗತ್ತು 'ಅಸತ್ಯ' ಎನ್ನಿಸಿಕೊಳ್ಳುತ್ತದೆ. ಆ ವಿಭುವು ಸತ್ಯಕ್ಕೆ ಸತ್ಯ; ಇಂದ್ರಚಾಪಕ್ಕೆ ಸೂರ್ಯನಿದ್ದಂತೆ! "ಅವನು ಸತ್ಯದ ಸತ್ಯ. ಪ್ರಾಣಗಳು ಸತ್ಯ. ಅವುಗಳೆಲ್ಲಕ್ಕಿಂತಲೂ ಇವನು ಸತ್ಯ" ಎಂದು ಈ ವಿಷಯವನ್ನು ಕುರಿತು ಉಪನಿಷತ್ತು ಹೇಳಿದೆ.

"ಎಲೈ ಅನಂತನೆ, ನಿನ್ನ ಇಚ್ಛೆಯು ಮಹಾಮಾಯೆ, ಅವಿದ್ಯೆ, ನಿಯತಿ, ಪ್ರಕೃತಿ ಮತ್ತು ವಾಸನ ಎಂದು ಹೇಳಿಸಿಕೊಳ್ಳುತ್ತದೆ. ಪ್ರಕೃಷ್ಟವಾದ ಕೃತಿ—ಇದರಿಂದ ಪ್ರಕೃತಿ ಎಂದಾಗುತ್ತದೆ. ಇದರಿಂದ ವಾಸನೆ ಅಥವಾ ಭಾವನೆ ಉಂಟಾಗುವುದರಿಂದ ವಾಸನೆ ಎಂದು ಹೆಸರು. 'ಅ' ಎಂದರೆ ಹರಿ (ವಿಷ್ಣು). ಅವನಿಗೆ ಸೇರಿದ ವಿದ್ಯೆಯಾದುದರಿಂದ 'ಅವಿದ್ಯೆ' ಎನ್ನಿಸಿಕೊಳ್ಳುತ್ತದೆ. ಪ್ರಕೃಷ್ಟ (ಹೆಚ್ಚು) ವಾದುದರಿಂದ 'ಮಾಯೆ' ಎನ್ನಿಸಿಕೊಳ್ಳುತ್ತದೆ. ಪ್ರಕೃಷ್ಟವಾದ ವಸ್ತುವಿಗೆ 'ಮಾಯ' ಎಂದು ಹೆಸರು. ವಿಷ್ಣುವಿನ ಪ್ರಜ್ಞಪ್ತಿ ಒಂದೇ ಈ ಎಲ್ಲ ಶಬ್ದಗಳಿಂದ ವರ್ಣಿತವಾಗುತ್ತದೆ. ಶ್ರೀಹರಿ ಪ್ರಜ್ಞಪ್ತಿ ಸ್ವರೂಪನು. ಈ ಪ್ರಕೃತಿ ಅಥವಾ ಮಾಯೆಯು ಅವನ ಸ್ವಾನಂದರೂಪವಾಗಿದೆ; ಸರ್ವವೇದಗಳು, ಮತ್ತಿತರ ಸರ್ವ ವಸ್ತುಗಳಿಗಿಂತಲೂ ಶ್ರೀಹರಿಗಿರುವ ವೈಲಕ್ಷಣ್ಯವನ್ನು - (ಭೇದ-ವ್ಯತ್ಯಾಸ) ತಿಳಿಸುತ್ತವೆ. ಶ್ರೀಹರಿಯು ಸರ್ವವಸ್ತುಗಳಿಗಿಂತಲೂ ಭಿನ್ನನು ಎಂದು ಸರ್ವವೇದಗಳೂ ಬೋಧಿಸಿವೆ. ಈ ಭೇದದ ಸ್ವರೂಪ ಹೀಗಿದೆ— ಶ್ರೀಹರಿಯು ಸ್ವತಂತ್ರ; ಸರ್ವೇಶ್ವರ ಮತ್ತು ಸರ್ವಜ್ಞ. ಈ ಸ್ವರೂಪವೇ ಭೇದ. ಇತರ ವಸ್ತುಗಳಿಂದ ಒಂದು ವಸ್ತುವಿಗೆ ಯಾವುದರ ಸಹಾಯದಿಂದ 'ವ್ಯಾವೃತ್ತಿ' (differentiation) ಬರುತ್ತದೆಯೋ ಅದೇ ಆ ವಸ್ತುವಿನ ಸ್ವರೂಪ. 'ಸ್ವ' ಎಂಬುವ ಶಬ್ದಕ್ಕೆ ಈ ವ್ಯಾವೃತ್ತಿಯೇ ಅರ್ಥ. "ನೇತಿ ನೇತಿ" ಎಂಬ ಶ್ರುತಿಯು ಈ ಸರ್ವ ವ್ಯಾವೃತ್ತಿಯನ್ನೇ ಹೇಳುತ್ತದೆ. ವಿಷ್ಣುವು ಹೀಗೆ ಇತರ ಎಲ್ಲಾ ಪದಾರ್ಥಗಳಿಂದಲೂ ಭಿನ್ನನು ಎಂಬುದನ್ನು ಮಿಕ್ಕೆಲ್ಲಾ ಶ್ರುತಿಗಳೂ ಹೇಳುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲ"— ಎಂದು **ನಾರಾಯಣಿ** ಶ್ರುತಿಯು ಹೇಳುತ್ತದೆ.

"ನಾನು ಬ್ರಹ್ಮನಾಗಿದ್ದೇನೆ," "ನಾನು ಯಾರೋ ಅವನೂ ಅದೇ," "ಅವನು ಯಾರೋ ಅದು ನಾನೇ," "ಈ ಆದಿತ್ಯನಲ್ಲಿ ಯಾವ ಪುರುಷನಿರುವನೋ ಅವನು ನಾನೇ ಆಗಿದ್ದೇನೆ," "ನಾನೇ ಅವನಾಗಿದ್ದೇನೆ" ಇತ್ಯಾದಿ ವಾಕ್ಯಗಳು "ಅಂತರ್ಯಾಮಿತ್ವ"ವನ್ನು ಹೇಳುತ್ತವೆ.[೧೩] "ಯಾವನು ಈ ಪುರುಷನಲ್ಲಿ ಇರುವನೋ ಮತ್ತು ಯಾವನು ಆದಿತ್ಯನಲ್ಲಿರುವನೋ ಅವನೂ ಒಬ್ಬನೇ" ಎಂದು ಶ್ರುತಿಯು ಹೇಳುತ್ತದೆ. ಇಲ್ಲಿ "ಅಂತರ್ಯಾಮಿತ್ವ"ವು ಸ್ಪಷ್ಟವಾಗಿದೆ. 'ಅ' ಎಂದರೆ ಬ್ರಹ್ಮ, ಅವನಿಂದ ಆಗತನಾಗಿರುವವನಿಗೆ 'ಅಹಂ' ಎಂದು ಹೆಸರು. ಅವನ ರಹಸ್ಯನಾಮ 'ಅಹಂ' ಎಂದು. ಮತ್ತು 'ಅಹಂ' ಎಂದರೆ ಹರಿ. ನಿತ್ಯವೂ ಹೇಯರಹಿತನಾಗಿರುವುದರಿಂದ 'ತ್ವಂ' ಎನ್ನಿಸಿಕೊಳ್ಳುತ್ತಾನೆ. ಅವನೇ ಪರೋಕ್ಷನಾಗಿರುವುದರಿಂದ 'ಸಹ' ಎನ್ನಿಸಿಕೊಳ್ಳುತ್ತಾನೆ. ('ಅಹಂ,' 'ತ್ವಂ,' 'ಸಹ' ಈ ಮೂರೂ ಹರಿ ವಾಚಕಗಳೇ).

**ನಾರಾಯಣೀ** ಶ್ರುತಿಯು ಈ ವಿಷಯವನ್ನು ನಿರೂಪಣೆ ಮಾಡುತ್ತದೆ. "ಎಲ್ಲ 'ಅಸ್ಮತ್' ಶಬ್ದ ವಿಭಕ್ತಿಗಳು ಸರ್ವಾಂತರ್ಯಾಮಿಯಾದ ಹರಿಗೆ ಅನ್ವಯಿಸುತ್ತವೆ. ಹಾಗೆಯೇ 'ಯುಷ್ಮತ್' ಶಬ್ದ ಮತ್ತು 'ತತ್' ಶಬ್ದರೂಪಗಳೂ ಹರಿಗೇ ಅನ್ವಯಿಸುತ್ತವೆ. ಹಾಗೆಯೇ ಸರ್ವ ಶಬ್ದಗಳೂ ಸರ್ವ ವಚನಗಳೂ, ಅವನು ಸ್ವತಂತ್ರನಾಗಿರುವುದರಿಂದ ಎಲ್ಲದರಿಂದ ಭಿನ್ನನಾಗಿದ್ದರೂ ಅವನನ್ನೇ ಹೇಳುತ್ತವೆ. ಅವನ ಸಂಬಂಧವಿರುವುದರಿಂದ ಜೀವರಲ್ಲಿಯೂ ಮತ್ತು ಅಚೇತನ ವಸ್ತುಗಳಲ್ಲಿಯೂ ಶಬ್ದಗಳ ಪ್ರಯೋಗ ಆಗುತ್ತದೆ. ಇತರ ವಸ್ತುಗಳಲ್ಲಿ ಶಬ್ದಗಳನ್ನು ಪ್ರಯೋಗಿಸುವುದು **ಔಪಚಾರಿಕವೇ ಹೊರತು ಮುಖ್ಯವಲ್ಲ.** ಮುಖ್ಯ ಪ್ರಯೋಗ **ಹರಿ ಒಬ್ಬನಿಗೇ!** ಆದ್ದರಿಂದ **ವಿಷ್ಣುವು ಸರ್ವಗತನು.** ಆದರೂ **ಏಕನು. ಸರ್ವಭಿನ್ನನು.** ಆದರೂ **ಬಹುರೂಪಿ"!**

ಭಗವದ್ವಚನವು ಈ ವಿಷಯವನ್ನು ಸಮರ್ಥಿಸುತ್ತದೆ. "ಯಾವ ಜ್ಞಾನವು ಸರ್ವ ಭೂತಗಳಲ್ಲಿಯೂ ಅನ್ವಯವಾದ ಒಂದೇ ಭಾವವನ್ನು ತಿಳಿಯುತ್ತದೆಯೋ ಮತ್ತು ವಿಭಕ್ತವಾದ ಬೇರೆ ಬೇರೆ ವಸ್ತುಗಳಲ್ಲಿ ಅವಿಭಕ್ತವಾದ ಒಂದೇ ತತ್ತ್ವವನ್ನು ಕಾಣುತ್ತದೆಯೋ ಅದು ಸಾತ್ವಿಕ ಜ್ಞಾನ" (**ಶ್ರೀಮದ್ಭಗವದ್ಗೀತೆ** ಅ. ೧೮).

ಭೇದವು ಅಸತ್ಯವಲ್ಲ. "ಸ್ತೋತ್ರ ಮಾಡುತ್ತಿರುವ ಇಂದ್ರನ ಮಿತ್ರನಾದ ಈ ವಿಷ್ಣುವನ್ನು ಎಲ್ಲ ಪ್ರಾಣಿಗಳೂ ಸೇವೆ ಮಾಡುತ್ತಿದ್ದಾರೆ. **ಈ ಸ್ವಾಮಿ-ಭೃತ್ಯ ಸಂಬಂಧವು** ಸತ್ಯ. ಈ ವಿಷ್ಣುವಿನ ಮಹತ್ವವು ಎಂದರೆ **ಸರ್ವೋತ್ತಮತ್ವವು** ಸತ್ಯ. ಅಂತಹ ಸತ್ಯಮಹಿಮನಾದ ವಿಷ್ಣುವನ್ನು ಯಜ್ಞಗಳಲ್ಲಿ ನಾನು ಸುಖ ಪ್ರಾಪ್ತಿಗೋಸ್ಕರ ಸ್ತೋತ್ರ ಮಾಡುತ್ತೇನೆ. ಆತ್ಮನು ಎಂದರೆ **ಪರಮಾತ್ಮನು ಸತ್ಯ. ಜೀವನೂ ಸತ್ಯ. ಅವರಿಬ್ಬರಿಗೂ ಇರುವ ಭೇದವು ಸತ್ಯ ಸತ್ಯ ಸತ್ಯ . . .** ದೋಷಯುಕ್ತರಾದ ಚೇತನರಿಂದ ಇವನನ್ನು ಭಜಿಸಲು ಸಾಧ್ಯವಿಲ್ಲ, ಸಾಧ್ಯವಿಲ್ಲ, ಸಾಧ್ಯವಿಲ್ಲ . . . ಪರಮಾತ್ಮನು ಪರಮ ಸ್ವತಂತ್ರನು. ಸರ್ವಜ್ಞನು. ಸರ್ವಶಕ್ತನು. ಪರಮ ಸುಖರೂಪಿಯು. ಜೀವನಾದರೋ **ತದ್ವಶನು.** ಅಲ್ಪಜ್ಞನು. ಅಲ್ಪಶಕ್ತನು. ಆರ್ತನು

---

೧೩. "ಅಹಂ ಬ್ರಹ್ಮಾಸ್ಮಿ ತದ್ಯೋಽಹಂ. ಸೋಽಸೌ ಯೋಽಸೌ ಸೋಽಹಂ. ಯೋಽಸಾವಾದಿತ್ಯೇ ಪುರುಷಃ ಸೋಽಹಮಸ್ಮಿ ಸಹವಾಹ ಮಸ್ಮೀತ್ಯಾದಿತ್ವಂ ತರ್ಯಾಮ್ಯಪೇಕ್ಷಯಾ".

ಮತ್ತು ಅಲ್ಪನು."[೧೪] ಈ ಶ್ರುತಿಗಳೆಲ್ಲವೂ ಭೇದವು ಸತ್ಯ ಎಂಬುದನ್ನು ಬೋಧಿಸುತ್ತವೆ. ಇಲ್ಲಿ ಹೇಳಿರುವ ಸತ್ಯತ್ವವು **ಅವಾಂತರ ಸತ್ಯತ್ವ** ಅಥವಾ **ವ್ಯಾವಹಾರಿಕ ಸತ್ಯತ್ವ** ಎಂದು ಹೇಳಲು ಬಾರದು. ಮೋಕ್ಷಾನಂತರದಲ್ಲಿಯೂ ಭೇದವಿದೆ ಎಂದೂ ಶ್ರುತಿಗಳು ಹೇಳಿವೆ. ಅದಕ್ಕೆ ಉದಾಹರಣೆಯಾಗಿ ಈ ಕೆಳಗಿನ ಶ್ರುತಿಗಳನ್ನು ನೋಡಬಹುದು:

"ಹೃದಯ ಗುಹೆಯಲ್ಲಿರುವ ಪರಮಾತ್ಮನನ್ನು ಯಾರು ತಿಳಿಯುತ್ತಾರೋ ಅವರು ಪರಮವ್ಯೋಮದಲ್ಲಿ ಸರ್ವಜ್ಞನಾದ ಬ್ರಹ್ಮನೊಡನೆ ಸರ್ವ ಕಾಮಗಳನ್ನೂ ಹೊಂದುತ್ತಾರೆ. . ."

"ಈ ಆನಂದಮಯ ಆತ್ಮನನ್ನು ಹೊಂದಿ ಈ ಲೋಕಗಳನ್ನು ಈ ಕಾಮಗಳನ್ನು ಕಾಮರೂಪಿಯಾಗಿ ಅವನು ಅನುಭವಿಸುತ್ತಾನೆ. ಆ ಮುಕ್ತನು ಆನಂದದಿಂದ ಸಾಮಗಾನ ಮಾಡುತ್ತಾ ಇರುತ್ತಾನೆ . . ."

"ಚತುರ್ಮುಖ ಬ್ರಹ್ಮನು ಕೃತಕೃತ್ಯನಾಗಿ-ಸಂತೋಷದಿಂದ ಪುಷ್ಟವಾಗಿ ಋಗ್ವೇದವನ್ನು ಉಚ್ಚರಿಸುವವನಾಗಿರುತ್ತಾನೆ; ಋಗ್ವೇದದಲ್ಲಿ ಗಾಯತ್ರೀ ಛಂದಸ್ಸಿನ ಸಾಮವನ್ನು ಗಾಯನ ಮಾಡುತ್ತಾನೆ. ಅವನೇ ಪೌರುಷೇಯ ವಿದ್ಯೆಯನ್ನು (ಮಹಾಪುರುಷ ವಿದ್ಯೆ ಅಥವಾ ಬ್ರಹ್ಮಜ್ಞಾನ) ಹೇಳುತ್ತಾನೆ. ಆದರೂ ಬ್ರಹ್ಮನು ವಿಷ್ಣುವಿನ ಅಂಶವನ್ನು ಮಾತ್ರ ಧ್ಯಾನದಲ್ಲಿ ಹೊಂದಿರುತ್ತಾನೆ . . ."

"ಜೀವನು ಪರಂಜ್ಯೋತಿಯಿಂದ ಪರಮಾತ್ಮನನ್ನು ಸೇರಿ ತನ್ನ ನೈಜ ಸ್ವರೂಪವನ್ನು ಹೊಂದುತ್ತಾನೆ . . ."

"ಮುಕ್ತಜೀವನು ಅಲ್ಲಿ ಸ್ತ್ರೀಯರೊಂದಿಗಾಗಲೀ, ಯಾನಗಳಿಂದಾಗಲೀ, ಜ್ಞಾತಿಗಳೊಂದಿಗಾಗಲೀ ಅಥವಾ ಅಜ್ಞಾತಿಗಳೊಂದಿಗಾಗಲೀ ಸಂಚಾರವನ್ನು-ಕ್ರೀಡೆ ಭೋಗಗಳನ್ನು ಹೊಂದುತ್ತಾ ವಿಹರಿಸುತ್ತಾನೆ . . ."

"ಎಲ್ಲಿ ಎಲ್ಲವೂ ಆತ್ಮವೇ ಆಗಿದೆಯೋ ಅಲ್ಲಿ ಯಾವುದರಿಂದ ಯಾವುದನ್ನು ನೋಡುವುದಕ್ಕೆ ಸಾಧ್ಯ? ಯಾವುದರಿಂದ ಯಾವುದನ್ನು ಘ್ರಾಣಿಸಲು ಸಾಧ್ಯ? ಯಾವುದರಿಂದ ಯಾವುದನ್ನು ತಿಳಿಯಲು ಸಾಧ್ಯ? ಯಾವುದರ ಸಹಾಯದಿಂದ ಇದೆಲ್ಲವನ್ನೂ ತಿಳಿಯುತ್ತಾನೆಯೋ ಅದನ್ನು ಮತ್ತಾವ ಉಪಕರಣದ ಸಹಾಯದಿಂದ ತಿಳಿಯಲಾದೀತು? ವಿಜ್ಞಾತೃವನ್ನು ಯಾವ ಸಾಧನಬಲದಿಂದ ತಿಳಿಯಲಾಗುವುದು? . . ."

"ಶುದ್ಧವಾದ ಉದಕವನ್ನು ಶುದ್ಧವಾದ ಉದಕಕ್ಕೆ ಸೇರಿಸಿದಂತೆ ಮುಕ್ತಾತ್ಮನು ಪರಮಾತ್ಮನನ್ನು ಸೇರುತ್ತಾನೆ . . ."

"ಆಗ ಜ್ಞಾನಿಯಾದವನು ಪುಣ್ಯಪಾಪಗಳನ್ನು ಬಿಟ್ಟು ನಿರಂಜನನಾಗಿ ಪರಮಾತ್ಮನೊಡನೆ ಪರಮ ಸೌಮ್ಯವನ್ನು ಹೊಂದುತ್ತಾನೆ . . ."

---

೧೪. ಅಸ್ವತಂತ್ರನು ಜೀವ; ಹರಿ ಸರ್ವಸ್ವತಂತ್ರನು, ನಿತ್ಯ ಸುಖಮಯ
ನಿಃಸ್ವಬದ್ಧಾಲ್ಪಜ್ಞಶಕ್ತನದುಃಖಿನಿರ್ವಿಣ್ಣ |
ಪ್ರಸ್ವದೇಹಿ ಸನಾಥಜೀವನು ವಿಶ್ವವ್ಯಾಪಕಕರ್ತೃ ಬ್ರಹ್ಮ ಸ
ರಸ್ವತೀಶಾದ್ಯಮರನುತ ಹರಿಯೆಂದು ಕೊಂಡಾಡು ||

ಹ.ಕ.ಸಾ. ೧೧-೩.

"ಅಮೃತಕ್ಕೆ ಈ ಪರಮಾತ್ಮನು ಸೇತು (ಪ್ರಾಪಕ) . . ."

"ಕಣ್ಣು ಮತ್ತು ಕಿವಿಗಳುಳ್ಳ ಮುಕ್ತರು ಪರಸ್ಪರ ಪ್ರೀತಿಯುಕ್ತರಾಗಿ ಮನೋವೇಗವುಳ್ಳ ಪ್ರಜ್ಞಾದಿ ಗುಣಗಳಲ್ಲಿ ತಾರತಮ್ಯೋಪೇತರಾಗಿದ್ದರು. ಅಲ್ಲಿ ಕೆಲವರು ಹಾಲಿನ ಕಡಲಿನಲ್ಲಿ ಕ್ರೀಡಾಪರರಾಗಿದ್ದರು. ಮತ್ತೆ ಕೆಲವರು ವನ ಕ್ರೀಡಾರತರಾಗಿದ್ದರು. ಮತ್ತೆ ಹಲವರು ಸ್ನಾತರಾಗಿ ಗಂಭೀರರಾಗಿ ಪರಮೇಶ್ವರನನ್ನೇ ದರ್ಶನ ಮಾಡುತ್ತಿದ್ದರು . . ."

"ಸಂಸಾರ ಸಾಗರದಿಂದ ಉತ್ತೀರ್ಣರಾದ ಮುಕ್ತರು ಈಶ್ವರನನ್ನು ಆಶ್ರಯಿಸಿಕೊಂಡೇ ಇರುತ್ತಾರೆ. ಬ್ರಹ್ಮನವರೆಗೂ ಇರುವ ಮುಕ್ತರೆಲ್ಲರೂ ತಮಗೆ ಬೇಕಾದಂತಹ ಎಲ್ಲ ಭೋಗಗಳನ್ನೂ ಉತ್ತರೋತ್ತರ ಅಧಿಕವಾಗಿ ಅನುಭವಿಸುತ್ತಾ ಇರುತ್ತಾರೆ."

ಭಗವಂತನೂ ಹೀಗೆಯೇ ಹೇಳುತ್ತಾನೆ:

"ಈ ಜ್ಞಾನವನ್ನು ಆಶ್ರಯಿಸಿ ನನ್ನೊಡನೆ ಸೌಧರ್ಮ್ಯವನ್ನು ಹೊಂದಿದವರು ಸೃಷ್ಟಿಯಲ್ಲಿ ಪುನರುತ್ಪತ್ತಿಯನ್ನು ಹೊಂದುವುದಿಲ್ಲ. ಮತ್ತು ಪ್ರಳಯದಲ್ಲಿ ಅವರು ಯಾವ ವ್ಯಥೆಗೂ ಗುರಿಯಾಗುವುದಿಲ್ಲ" (**ಭಗವದ್ಗೀತೆ** ಅ. ೧೪).

"ಮುಕ್ತ ಜೀವನಿಗೆ ಜಗತ್‌ಸೃಷ್ಟ್ಯಾದಿ ವ್ಯಾಪಾರ ಕರ್ತೃತ್ವವಿಲ್ಲ. ಪ್ರಕರಣ ವಶದಿಂದಲೂ ಮುಕ್ತಜೀವನು ಇಲ್ಲಿ ಅಪ್ರಕೃತನಾಗಿರುವುದರಿಂದಲೂ ಹೀಗೆ ಸಿದ್ಧಾಂತ ಮಾಡಬೇಕು" ಎಂದು **ವ್ಯಾಸಸೂತ್ರ**ದಲ್ಲಿಯೂ ಮುಕ್ತ-ಪರಮಾತ್ಮರ ಭೇದವನ್ನು ಹೇಳಿದೆ.

"ಈ ಆತ್ಮನು ಅವಿನಾಶಿ ಮತ್ತು ಇವನ ಧರ್ಮ (ಗುಣ) ಗಳಿಗೆ ಚ್ಯುತಿಯಿಲ್ಲ," ಎಂದು ಜೀವಾತ್ಮನ ಧರ್ಮಗಳೂ ಅವಿನಾಶಿ ಎಂದು ಶ್ರುತಿಯು ಹೇಳಿದೆ—**ಬೃಹದಾರಣ್ಯಕ.** ಈ ವಿಷಯವೇ ಇಲ್ಲಿ ಪ್ರಸ್ತುತವಾಗಿದೆ—

ಮೈತ್ರೇಯಿಯು "ಎಲೈ ಭಗವಂತನೆ, ಮೋಕ್ಷ ಲಭಿಸಿದ ಅನಂತರ ಜ್ಞಾನವಿಲ್ಲವೆಂದು ನನಗೆ ಮೋಹ ಬರುವಂತೆ ನೀವು ಉಪದೇಶಿಸುತ್ತಿರುವಿರಿ" ಎಂದು ಜ್ಞಾನಾಭಾವವು ದೋಷವೆಂದು ಹೇಳಿದೆ.

"ಎಲ್ಲಿ ಎಲ್ಲವೂ ಆತ್ಮವೇ ಆಗುವುದೋ ಅಲ್ಲಿ ಏನನ್ನು ಏತರಿಂದ ನೋಡಬೇಕು" ಎಂದು ಆತ್ಮಾದ್ವೈತಕ್ಕೆ ಆಕ್ಷೇಪವೇ ಹೇಳಿದೆ. ಇಲ್ಲಿ ಭೋಗಾಭಾವವಾಗಲಿ "ವಿಜ್ಞಾತೃವನ್ನು ಏತರಿಂದ ತಿಳಿಯಬೇಕು" ಎಂದು ವಿಜ್ಞಾತೃವಿನ ಅಜ್ಞಾನವಾಗಲೀ ಅಪೇಕ್ಷಿತವಲ್ಲ.

**ಪರಮಶ್ರುತಿಯು** ಹೀಗೆ ಹೇಳುತ್ತದೆ:

"ಅಹಂ ಎಂದು ಯಾವನು ವೇದ್ಯನೋ ಅವನು ಜೀವ ಎನ್ನಿಸಿಕೊಳ್ಳುತ್ತಾನೆ. ಅವನೇ ಸುಖಿ, ದುಃಖಿ ಮತ್ತು ಬಂಧಮೋಕ್ಷಗಳಿಗೆ ಪಾತ್ರ."

**ಮೋಕ್ಷಧರ್ಮ**ದಲ್ಲಿ ಹೀಗೆ ಹೇಳಿದೆ:

"ಅತ್ಯಂತ ಅಜ್ಞಾನದಲ್ಲಿ ಮಗ್ನನಾದವನಿಗೆ ಇನ್ನೂ ದುಃಖತರವಾದುದು ಯಾವುದಿದೆ?"

"ಆದರೆ ಅಲ್ಲಿ ದ್ವಿತೀಯ ವಸ್ತುವಿಲ್ಲ (ಎರಡನೆಯ ವಸ್ತುವಿಲ್ಲ" ಎಂದು ಯಾವುದನ್ನು ಬ್ರಹ್ಮನು ದ್ವೈತತ್ವೇನ ಎರಡನೆಯದು ಎಂದು) ನೋಡುವುದಿಲ್ಲವೋ ಆ ದ್ವಿತೀಯ ವಸ್ತುವು

ಇಲ್ಲ ಎಂದು ಹೇಳಿದೆ. ವಾಕ್ಯಶೇಷದಲ್ಲಿಯೂ ಬೇರೆ ಯಾವ ವಸ್ತುವನ್ನೂ ವಿಭಕ್ತವಾಗಿರುವಂತೆ ನೋಡುವುದಿಲ್ಲ ಎಂದು ಹೇಳಿದೆ. ಇದಕ್ಕೆ ಹೇತುವನ್ನು ಶ್ರುತಿಯೇ ಹೇಳುತ್ತದೆ.

"ದ್ರಷ್ಟೃ ಸ್ವರೂಪಿಯಾದ ಆತ್ಮನಿಗೆ ದೃಷ್ಟಿಯು ಎಂದೂ ಲೋಪವಾಗುವುದಿಲ್ಲ."

"ಕರ್ಮಗಳು ವಿಜ್ಞಾನಮಯನಾದ ಆತ್ಮನು ಎಲ್ಲವೂ, ಪರನೂ, ಅವ್ಯಯನೂ ಆದ ಪರಮಾತ್ಮನಲ್ಲಿ ಏಕೀಭವಿಸುತ್ತದೆ" ಎನ್ನುವಲ್ಲಿಯೂ ಏಕೀಭಾವವೆಂದರೆ ಮತ್ಯೈಕ್ಯ[೧೫]ವಾಗಿರಬಹುದು. ಅಥವಾ ಕ್ಷೀರಾಬ್ಧಿ ಮೊದಲಾದ ಪ್ರದೇಶದಲ್ಲಿರುವುದರಿಂದ ಸ್ಥಾನೈಕ್ಯವಾಗಿರಬಹುದು.

"ಆ ಸರ್ವ ಸಂಹರ್ತೃ (ಸಂಹಾರಕರ್ತ) ವಾದ ಪರಮಾತ್ಮನ ಇಚ್ಛಾನುಸಾರವಾಗಿ ನನ್ನ ಕಾಮವು ಮುಕ್ತಿಯಲ್ಲಿ ಈಡೇರಲಿ. ಅವನ ಸಂಕಲ್ಪದಿಂದ ನನ್ನ ಸಂಕಲ್ಪವು ಈಡೇರಲಿ. ಅವನಿಗೆ ಪ್ರಿಯವಾದುದೇ ನನಗೂ ಪ್ರಿಯವಾಗಲಿ. ಬ್ರಹ್ಮನ ಬುದ್ಧಿಗೆ ಅನುಸಾರವಾಗಿ ಮುಕ್ತಿಯಲ್ಲಿ ನನ್ನ ಬುದ್ಧಿ ಇರುವುದು. ಆದುದರಿಂದ ಈಗಲೂ ನನ್ನ ಬುದ್ಧಿ ಅವನ ಬುದ್ಧಿಗೆ ಬಹುಮಟ್ಟಿಗೆ ಅನುಕೂಲವಾಗಿಯೇ ಇದೆ."

"ಯಾವ ಲೋಕದಲ್ಲಿ ಸತ್ಯ ಸ್ವರೂಪಿಯಾದ ಪರಮೇಶ್ವರನ ವಿಶೇಷ ಸನ್ನಿಧಾನವಿದೆಯೋ ಆ ಲೋಕವನ್ನು ಕೃತಾರ್ಥರಾದ ಋಷಿಗಳು ಯಾವ ದೇವಯಾನ ಮಾರ್ಗದಿಂದ ಹೊಂದುತ್ತಾರೆಯೋ . . ."

"ಈ ಆನಂದಮಯನಾದ ಆತ್ಮನನ್ನು ಮುಕ್ತಾತ್ಮನು ಉಪಸಂಕ್ರಮಿಸುತ್ತಾನೆ."

ಈ ಶ್ರುತಿಗಳಿಂದ "ಮತ್ಯೈಕ್ಯ" ಮತ್ತು "ಸ್ಥಾನೈಕ್ಯ" ಗಳೇ ಪ್ರತಿಪಾದಿತವಾಗಿವೆ. "ಸ್ವರೂಪೈಕ್ಯ" ವು ಅಭಿಪ್ರೇತವಾಗಿದ್ದ ಪಕ್ಷದಲ್ಲಿ ಕರ್ಮಗಳು ಮತ್ತು ವಿಜ್ಞಾನಮಯನು ಏಕೀಭಾವವನ್ನು ಹೊಂದುವರು ಎಂಬುದು ಯುಕ್ತವಾಗಿರಲಿಲ್ಲ. ಪೂರ್ವಪಕ್ಷಿಯ ಅಭಿಪ್ರಾಯದಲ್ಲಿಯೂ ಕರ್ಮಕ್ಕೂ ಮತ್ತು ಬ್ರಹ್ಮನಿಗೂ ಮುಕ್ತಿಯಲ್ಲಿ ಐಕ್ಯವು ಅಸಂಭವ (ಸಂಭವಿಸುವುದೇ ಇಲ್ಲ).

ಇಲ್ಲಿ ಏಕೀಭಾವವೆಂದರೆ ನಿವೃತ್ತಿ ಎಂದು ಅರ್ಥಮಾಡುವುದಾದರೆ ಪಂಚದಶ ಕಲೆಗಳಿಗೂ ಇದು ಅನ್ವಯಿಸುವದರಿಂದ ಅವುಗಳ ವಿಷಯದಲ್ಲಿ ಬೇರೆ ನಿವೃತ್ತಿಯನ್ನು ಹೇಳಿರುವುದು ವ್ಯರ್ಥವಾಗುವುದು.

"ಪಂಚದಶ ಕಲೆಗಳು, ಅವುಗಳಿಗೆ ಅಧಿಷ್ಠಾತೃಗಳಾದ ದೇವತೆಗಳು ಎಲ್ಲವೂ ಹೋದುವು" ಎಂದು ಬೇರೆ ಕಲೆಗಳ ಗಮನವನ್ನು ಹೇಳಿ ಕರ್ಮಗಳಿಗೂ ವಿಜ್ಞಾನಮಯನಾದ ಆತ್ಮನಿಗೂ ಏಕೀಭಾವವನ್ನು ಹೇಳುವುದು ವ್ಯರ್ಥ. ಎರಡಕ್ಕೂ ನಿವೃತ್ತಿಯನ್ನೇ ಹೇಳುವಾಗ ಈ ರೀತಿ ವಿಶೇಷ ವಚನ ಅನಾವಶ್ಯಕ. ಮತ್ತು ಜ್ಞಾನದಿಂದ ನಿವೃತ್ತವಾದ ರಜತಕ್ಕೆ ಶುಕ್ತಿಯೊಡನೆ ಅದು ಒಂದಾಗುವುದು ಎಂಬ ಮಾತು ವ್ಯವಹಾರದಲ್ಲಿಲ್ಲ. "ಪರನೂ ಅವ್ಯಯನೂ ಆದ ಆತ್ಮನಲ್ಲಿ" ಎಂದು ಆಧಾರವನ್ನು ಹೇಳಿರುವುದರಿಂದ ಇಲ್ಲಿ ಭೇದವೇ ಜ್ಞಾತವಾಗುತ್ತದೆ. ಹಾಗಿಲ್ಲದಿದ್ದರೆ ಪರನೇ ಆಗುತ್ತದೆ ಎಂದು ನಿರ್ದೇಶವಿರಬೇಕಾಗಿತ್ತು.

---

೧೫. ಮತಿ + ಐಕ್ಯ = ಬುದ್ಧಿಯಲ್ಲಿ ಐಕ್ಯ.

**ಪರಮ ಶ್ರುತಿಯು** ಹೀಗೆ ನಿರ್ಣಯಮಾಡಿದೆ:

"ಜೀವನಿಗೂ ಪರಮಾತ್ಮನಿಗೂ ಬರುವ ಐಕ್ಯ ಇಲ್ಲವೆ ಬುದ್ಧಿ ಸಾರೂಪ್ಯ ಅಥವಾ ಏಕಸ್ಥಾನ ನಿವಾಸ[೧೬]— ಮುಕ್ತನಿಗೂ ಪರಮಾತ್ಮನಿಗೂ ಸ್ವರೂಪೈಕ್ಯವಿಲ್ಲ. ಮುಕ್ತನು ಅವನಿಗಿಂತಲೂ ವಿರೂಪನೆ. ವಿರೂಪತ್ವವೆಂದರೆ ಪರಮಾತ್ಮನು ಸ್ವತಂತ್ರನೂ ಪೂರ್ಣನೂ; ಜೀವನು ಪರತಂತ್ರನೂ ಅಲ್ಪನೂ ಆಗಿರುವುದರಿಂದ ಬರುವ ಭೇದ."

"ಬ್ರಹ್ಮನನ್ನು ತಿಳಿದವನು ಬ್ರಹ್ಮನೇ ಆಗುತ್ತಾನೆ"[೧೭] ಎಂಬುವಲ್ಲಿಯೂ, ಬ್ರಾಹ್ಮಣನನ್ನು ಭಕ್ತಿಯಿಂದ ಸಮ್ಯಕ್ ಪೂಜೆ ಮಾಡಿದ ಶೂದ್ರನು ಬ್ರಾಹ್ಮಣನಾಗುತ್ತಾನೆ — ಎಂಬುವಂತೆ 'ಬೃಂಹಿತ'[೧೮]ನಾಗುತ್ತಾನೆ ಎಂದರ್ಥ. ಬ್ರಾಹ್ಮಣ ಪೂಜಕನು ಅವನಿಂದ ಪೂಜಿತನಾದ ಬ್ರಾಹ್ಮಣ ಬ್ರಾಹ್ಮಣನೇ ಆಗಿ ಬಿಡುವುದಿಲ್ಲ!!

"ಸರ್ವಜೀವರೂ ಬ್ರಹ್ಮರು. ಪರಬ್ರಹ್ಮನಲ್ಲಿ ಮುಕ್ತಿಯನ್ನು ಹೊಂದುವವರು ಬ್ರಹ್ಮರು. ಪ್ರಕೃತಿ ಎಂದರೆ ಮಹಾಲಕ್ಷ್ಮಿಯು ಪರಮ ಬ್ರಹ್ಮಳು. ಅಚ್ಯುತನು ಪರಮ ಮಹತ್ವವುಳ್ಳವನು. ಆದುದರಿಂದ ಮುಕ್ತರಾಗಲೀ ಮಹಾಲಕ್ಷ್ಮಿಯಾಗಲೀ ವಿಷ್ಣುವಿನ ವೈಭವವನ್ನು ಎಲ್ಲೂ ಹೊಂದುವುದಿಲ್ಲ. ಅವನೊಬ್ಬನೇ ಸ್ವತಂತ್ರನೂ ಮತ್ತು ಷಡ್ಗುಣ ಪರಿಪೂರ್ಣನೂ[೧೯] ಆದವನು"— **ಪರಮ ಶ್ರುತಿ.**

"ಹೇ ವಿಷ್ಣುವೇ ನೀನು ಸಮಸ್ತ ಪರಿಮಿತಿಯನ್ನೂ ಮೀರಿರುವೆ. ನೀನು ಸ್ವರೂಪತಃ ಪೂರ್ಣನು. ಹೀಗಿರುವ ನಿನ್ನ ಮಹಿಮೆಯನ್ನು **ಯಾರೂ ಹೊಂದಲಾರರು."** "ಬ್ರಹ್ಮ ಮತ್ತು ಈಶ್ವರ, ಇವರೂ ಹೊಂದುವುದಕ್ಕೆ ಅಶಕ್ಯವಾದ ಯಾವ ಕೈವಲ್ಯ ಉಂಟೋ, ಅದು ಹರಿಯೆ, ನಿನ್ನಲ್ಲಿ ಸ್ವಭಾವ ಸಿದ್ಧವಾಗಿದೆ."

"ಬೇರೆ ಬೇರೆ ಕಾಣುವ ತೇಜಸ್ಸುಗಳು ಹಗಲಿನಲ್ಲಿ ಹೇಗೆ ಮಹಾತೇಜಸ್ವಿಯಾದ ಭಾಸ್ಕರನಲ್ಲಿ ಒಂದಾಗಿ ಸೇರಿಹೋಗುತ್ತವೆಯೋ, ಹಾಗೆಯೇ ಜೀವಾಖ್ಯ ಬ್ರಹ್ಮರು ಪರಬ್ರಹ್ಮನಲ್ಲಿ ಒಂದಾಗುತ್ತಾರೆ. ಬೇರೆ ಬೇರೆ ತೇಜಸ್ಸುಗಳು ಭಾಸ್ಕರನಲ್ಲಿ ಒಂದಾದಾಗಲೂ ಸ್ವರೂಪತಃ ಬೇರೆಯಾಗಿಯೇ ಉಳಿಯುವುವು!! ಹಾಗೆಯೇ ಜೀವರು ಮುಕ್ತಿಯಲ್ಲಿಯೂ ಬೇರೆಯಾಗಿಯೇ ಇರುವರು. ಬ್ರಹ್ಮನಲ್ಲಿ ಒಂದಾಗುವುದು ಎಂದರೆ ಬ್ರಹ್ಮನ ತೇಜಸ್ಸಿನಲ್ಲಿ ಅವರು ಬೇರೆಯಾಗಿ ಇತರರಿಗೆ ಕಾಣುವುದಿಲ್ಲ. ಬ್ರಹ್ಮನಲ್ಲಿ ಲೀನವಾಗುವುದು ಎಂದರೆ ಈ ಬಗೆಯ ಐಕ್ಯವೇ ಹೊರತು **ಸ್ವರೂಪೈಕ್ಯವಲ್ಲ"** ಎಂದು **ನಾರಾಯಣೀ ಶ್ರುತಿಯು** ಹೇಳಿದೆ!!!

ಈ ಕಾರಣಗಳಿಂದ ಜೀವೇಶ್ವರ ಐಕ್ಯವು ಸರ್ವಾಗಮಗಳಿಗೂ ವಿರುದ್ಧವಾಗಿದೆ.

ಹಾಗೆಯೇ ಎಲ್ಲ ಯುಕ್ತಿಗೂ ವಿರೋಧವಾಗಿದೆ. ಪೂರ್ವಪಕ್ಷದ ಪ್ರಭೇದವಾದ ಏಕಜೀವವಾದವು ಸರಿಯಲ್ಲ.

ಜಗತ್ತೆಲ್ಲವೂ ಒಬ್ಬನ ಅಜ್ಞಾನದಿಂದ ಕಲ್ಪಿತವಾಗಿದ್ದರೆ "ಇದೆಲ್ಲವೂ ಕಲ್ಪಿತ" ಎಂದು ತಿಳಿದವನು ಶಿಷ್ಯಾದಿಗಳ ಉಪದೇಶಕ್ಕೆ ಪ್ರಯತ್ನಿಸುವ ಸಂಭವವಿಲ್ಲ. ಇದು ಸ್ವಪ್ನವೆಂದು

---

೧೬. ಇಲ್ಲಿ ಸ್ಥಾನವೆಂದರೆ ಅಭಿವ್ಯಕ್ತಸ್ಥಾನ ಎಂದರ್ಥ.

೧೭. (ಮುಂಡಕೋಪನಿಷತ್ತು) "ಬ್ರಹ್ಮವೇದ ಬ್ರಹ್ಮೈವ ಭವತೀತ್ಯಾದಿಚ"

೧೮. ಬೃಂಹಿತನಾಗುವುದು ಎಂದರೆ ಅಭಿವೃದ್ಧಿ ಹೊಂದುವುದು ಎಂದರ್ಥ.

೧೯. ಜ್ಞಾನ ಬಲ ಐಶ್ವರ್ಯ ವೀರ್ಯ ಶಕ್ತಿ ತೇಜಸ್ಸು.

ತಿಳಿದಮೇಲೆ ಸ್ವಪ್ನದ ಪುತ್ರನಿಗೆ ದಾಯಭಾಗವನ್ನು ಕೊಡಲು ಜಾಗ್ರವದಸ್ಥೆಯಲ್ಲಿ ಯಾರೂ ಪ್ರಯತ್ನಿಸುವುದಿಲ್ಲ. ಸ್ವಪ್ನಕಾಲದಲ್ಲಿಯೂ ಹಾಗೆ ಪ್ರಯತ್ನಿಸುವುದು, ಅದು ಸ್ವಪ್ನವೆಂದು ತಿಳಿಯದಿರುವ ಕಾರಣದಿಂದ. ಪ್ರಪಂಚ ಬಹು ಜನರಿಗೆ ಕಾಣುತ್ತದೆ. ಆದ್ದರಿಂದ ಈ ಜೀವನ ಅಜ್ಞಾನದಿಂದ ಇದು ಕಲ್ಪಿತ ಎಂದು ನಿಶ್ಚಯಿಸಲು ಸಾಧ್ಯವಿಲ್ಲ. ಸ್ವಪ್ನದಲ್ಲಾದರೋ, ಪ್ರಬೋಧಾನಂತರ ಸ್ವಪ್ನದೃಷ್ಟನೊಬ್ಬನೇ ಉಳಿಯುವುದರಿಂದ, ಅವನೇ ಕಲ್ಪಕನೆಂದು ನಿಶ್ಚಯಿಸಬಹುದು. ಆ ಅನುಕೂಲ ಈ ಜಗತ್ಕಲ್ಪನೆಯಲ್ಲಿಲ್ಲ. ಯಾರುಯಾರಿಗೆ ಏನೇನು ಕಾಣುತ್ತದೆಯೋ ಅದು ಅವನವನ ಕಲ್ಪನೆ ಎಂದು ಹೇಳಿದರೆ ವಸ್ತುಸ್ಥಿತಿಯು ವಿಕಲ್ಪಕ್ಕೆ ಅವಕಾಶ ಕೊಡಬಾರದಾದುದರಿಂದ ಜಗತ್ತು ಅಕಲ್ಪಿತವೆಂದೇ ತೀರ್ಮಾನವಾಗುವುದು.

**ಎಲ್ಲವೂ ಕಲ್ಪಿತ ಎಂದು ಹೇಳಲು ಯಾವ ಪ್ರಮಾಣವೂ ಇಲ್ಲ.** ಜಗತ್ತು, ಗುರು, ಅವನ ಉಪದೇಶವ್ಯವಹಾರಗಳು ಎಲ್ಲ ಶಿಷ್ಯನ ಅಜ್ಞಾನ ಪರಿಕಲ್ಪಿತ ಎಂದು ಹೇಳಿದರೆ, ಅವನು ಆಚಾರ್ಯನಾದಾಗ ತಾನೂ ತನ್ನ ಶಿಷ್ಯನ ಅಜ್ಞಾನದಿಂದ ಪರಿಕಲ್ಪಿತನಾಗುವನು. ಹೀಗಾದರೆ ಸಮ್ಯಕ್‌ಶಾಸ್ತ್ರ ಜ್ಞಾನವನ್ನು ಸಂಪಾದಿಸಿ ಗುರುವಾಗುವುದೇ ಅನರ್ಥಕ್ಕೆ ಕಾರಣವಾಗುವುದು. ಈ ವ್ಯವಸ್ಥೆಯಲ್ಲಿ ಯಾರಿಗೂ ಮೋಕ್ಷಕ್ಕೆ ಅವಕಾಶವಿಲ್ಲ. ಜ್ಞಾನ ಬಂದೊಡನೆ ಆಚಾರ್ಯನಾದರೆ ಪುನಃ ಶಿಷ್ಯನ ಅಜ್ಞಾನದಿಂದ ಕಲ್ಪಿತನಾಗುವುದರಿಂದ – ಇರುವ ಒಬ್ಬನೇ ಜೀವನು ಭೇದವಾಗಿದ್ದ ಪಕ್ಷದಲ್ಲಿ ಅವನಿಗೆ ಬೇರೊಬ್ಬರ ಅಭಿಪ್ರಾಯವು ಬರುವುದಕ್ಕೆ ಸಂದರ್ಭವೇ ಇಲ್ಲದಿರುವುದರಿಂದ ಅವನ ಭ್ರಮೆಯು ದೃಢವಾಗಿ ಭೇದವು ಎಂದಿಗೂ ನಿವೃತ್ತಿ ಹೊಂದುವುದಿಲ್ಲ. ಆದ್ದರಿಂದ ಯಾವನಿಗೂ ಮೋಕ್ಷ ಲಭಿಸುವ ಅವಕಾಶವೇ ಇಲ್ಲ! ಯಾವನು ಯಾವುದನ್ನು ಹೇಗೆ ಕಲ್ಪಿಸುತ್ತಾನೋ ಹಾಗೆಯೇ ಅದು ಇರುತ್ತದೆ—ಎಂದು ಏಕಜೀವ ವಾದಿಗಳು ಹೇಳಿದರೆ ಒಬ್ಬ ವ್ಯಕ್ತಿ ನಿತ್ಯನರಕವನ್ನು ಕಲ್ಪಿಸಿದರೆ ಅದು ಹಾಗೆಯೇ ಆಗಬೇಕಾಗುವುದು. ಒಬ್ಬ ಜೀವನ ಅಜ್ಞಾನ ಕಲ್ಪನೆಯಿಂದ ಸಮಸ್ತವೂ ಆಗಿವೆ ಎನ್ನುವುದಕ್ಕೆ ಯಾವ ಪ್ರಮಾಣವೂ ಇಲ್ಲ.

"ಪ್ರಪಂಚವು ಇದ್ದದ್ದೇ ಆದರೆ ಅದು ಖಂಡಿತವಾಗಿಯೂ ನಿವೃತ್ತಿಯನ್ನು ಹೊಂದುತ್ತದೆ. ಈ ದ್ವೈತವು ಮಾಯೆ ಮಾತ್ರ. ಅದ್ವೈತ ಒಂದೇ ಪರಮಾರ್ಥ-" ಎಂಬ ಮಾಂಡೂಕ್ಯೋಪನಿಷತ್ತಿನ ಶ್ಲೋಕಕ್ಕೆ ಈ ರೀತಿ ಅರ್ಥಮಾಡಬೇಕು — ಪ್ರಪಂಚವು ಒಂದು ವೇಳೆ ಉತ್ಪತ್ತಿಯನ್ನು ಹೊಂದುವ ವಸ್ತುವಾಗಿದ್ದರೆ ಅದು ನಿವೃತ್ತಿಯನ್ನು ಹೊಂದಬೇಕು. ಆದರೆ ಅದಕ್ಕೆ ನಿವೃತ್ತಿ ಇಲ್ಲ; ಆದುದರಿಂದ ಅದು ಅನಾದಿಯೇ ಆಗಿರಬೇಕು. ಪ್ರಪಂಚವೆಂದರೆ ಪ್ರಕೃಷ್ಟವಾಗಿ ಪಂಚವಿಧವಾದ ಭೇದವನ್ನು ಒಳಗೊಂಡ ವಿಶ್ವ; ಆದ್ದರಿಂದಲೇ ಇದಕ್ಕೆ ಪ್ರಪಂಚವೆಂದು ಹೆಸರು.[೨೦] ಇದು ಮಾಯ ಮಾತ್ರವಾಗಿರುವುದರಿಂದ ಇದಕ್ಕೆ ಅಸ್ತಿತ್ವವಿಲ್ಲ ಎಂದು ಹೇಳಲಾಗದು. ಮಾಯ ಎಂದರೆ ಭಗವಂತನ ಪ್ರಜ್ಞೆ. ಅದೇ ಮಾನವೂ ಪ್ರಾಣವೂ ಆಗಿರುವುದರಿಂದ ಇದಕ್ಕೆ ಮಾಯಾಮಾತ್ರ ಎಂದು ಹೆಸರು.[೨೧] ಪರಮೇಶ್ವರನಿಂದ ಜ್ಞಾತವೂ ರಕ್ಷಿತವೂ ಆದುದರಿಂದ ದ್ವೈತವು ಭ್ರಾಂತಿ ಪರಿಕಲ್ಪಿತವಲ್ಲ. ಈಶ್ವರನಿಗೆ ಭ್ರಾಂತಿ ಸಂಭವವಲ್ಲ. ಹಾಗಾ

---

೨೦. "ಪ್ರಕೃಷ್ಟಃ ಪಂಚವಿಧೋ ಭೇದಃ ಪ್ರಪಂಚಃ"
೨೧. ಮಾನ = ಜ್ಞಾನ; ಪ್ರಾಣ = ರಕ್ಷಣೆ.

ದರೆ "ಸರ್ವಭಾವಗಳಿಗೂ ಅದ್ವೈತವಿದೆ" ಎಂಬುವ ವಾಕ್ಯ ಹೇಗೆ ಬಂತು? ಎಂದರೆ ಅದಕ್ಕೆ ಉತ್ತರವನ್ನು **ಶ್ರುತಿಯೇ** ಹೇಳುತ್ತದೆ.

"ಪರಮಾರ್ಥತಃ ಅದ್ವೈತ" ಎಂಬುದೇ ಶ್ರುತಿಯ ಆ ಉತ್ತರ. ಇದರ ಅರ್ಥ ಹೀಗೆ—ಪರಮಾರ್ಥಾಪೇಕ್ಷೆಯಿಂದ ಅದ್ವೈತ-ಸರ್ವರಿಗೂ ಉತ್ತಮವಾದ ಅರ್ಥವು ಪರಮಾತ್ಮನೊಬ್ಬನೇ. ಹೀಗಿಲ್ಲದಿದ್ದರೆ ಅದ್ವೈತ ಎಂದು ಮಾತ್ರ ಹೇಳಬೇಕಾಗಿತ್ತೇ ಹೊರತು ಸರ್ವಭಾವಗಳಿಗೆ ಅದ್ವೈತವೆಂದು ಹೇಳಬೇಕಾಗಿರಲಿಲ್ಲ! ಹಾಗೆ ಹೇಳಿರುವುದರಿಂದ ಬರುವ ಅರ್ಥ — ಎಲ್ಲ ವಸ್ತುಗಳ ಮಧ್ಯೆ **ಅವನೊಬ್ಬನಿಗೇ ಅದ್ವೈತತ್ವ** ಇರುವುದು ಎಂದಾಗುತ್ತದೆ! ಎಂದರೆ **ಅವನಿಗೆ** ಸಮವಾಗಿಯಾಗಲೀ ಅಧಿಕವಾಗಿಯಾಗಲೀ ಇರುವ ಬೇರೊಂದು ವಸ್ತು — ವ್ಯಕ್ತಿ ಇಲ್ಲ ಎಂದೇ ಅರ್ಥ. ಮಿಕ್ಕೆಲ್ಲ ಭಾವಗಳಿಗೂ ಸಮರು ಮತ್ತು ಅಧಿಕರು ಇರುವುದರಿಂದ **ಅವುಗಳಿಗೆ ಅದ್ವೈತತ್ವ ಇಲ್ಲ!**

"ಈ ವಿಕಲ್ಪವು ಯಾರಿಂದಾದರೂ ಕಲ್ಪಿತವಾಗಿದ್ದ ಪಕ್ಷದಲ್ಲಿ ಅದು ನಿವೃತ್ತಿ ಹೊಂದಬೇಕಾಗಿತ್ತು" ಎಂಬ ವಾಕ್ಯಶೇಷದಲ್ಲಿಯೂ, ಇದು ಕಲ್ಪಿತವಲ್ಲ ಎಂದೇ ಸ್ಥಾಪಿತವಾಗುತ್ತದೆ. ನಿವೃತ್ತಿಯಾಗಬೇಕಾಗಿತ್ತು ಎಂಬುದಕ್ಕೆ 'ನಿವೃತ್ತಿಯಾಗುತ್ತದೆ' ಎಂದು ಅರ್ಥ ಹೇಳುವುದಾದರೆ, 'ನಿವೃತ್ತಿಯಾಗಬೇಕಾಗಿದ್ದಿತು' 'ಇರಬೇಕಾಗಿದ್ದಿತು' ಎಂದು ಪ್ರಸಂಗರೂಪದಿಂದ ಹೇಳುವುದು ಅಸಂಗತವಾಗುತ್ತಿತ್ತು. ಪ್ರಸಂಗದ ಸಂಭಾವನೆಯನ್ನು ಸೂಚಿಸುವ 'ಯದಿ' ಎಂಬ ಶಬ್ದವು ಅಸಂಗತವಾಗುತ್ತಿತ್ತು. 'ವಿದ್ಯೇತ' ಎಂಬುವ ಶಬ್ದಕ್ಕೆ 'ಹುಟ್ಟುವುದಾದರೆ' ಎಂಬರ್ಥವನ್ನು ಮಾಡದೆ 'ಇದೆ' ಎಂದು ಮಾತ್ರ ಅರ್ಥ ಮಾಡಿದರೆ, ಯಾವ ಯಾವುದು ಇದೆಯೋ ಅವೆಲ್ಲವೂ ನಿವೃತ್ತಿ ಹೊಂದುತ್ತದೆ ಎಂದು ವ್ಯಾಪ್ತಿಯನ್ನು ಮಾಡಬೇಕಾಗುವುದು. ಅದು ಅತ್ಯಂತ ಅಯುಕ್ತವಾದ ವ್ಯಾಪ್ತಿ. ಹಾಗೆ ಮಾಡಿದರೆ 'ನಿವರ್ತತೇ' ಎಂಬುದಕ್ಕೆ ಬದಲಾಗಿ 'ನಿವರ್ತೇತ' ಎಂದು ಹೇಳುವುದು ಯುಕ್ತವಲ್ಲ. ಆದ್ದರಿಂದ **ಪ್ರಪಂಚದ ಅನಾದಿ ಸತ್ಯತ್ವವನ್ನು** ಹೇಳುವುದು ಈ ವಾಕ್ಯದ ಗುರಿ!

"ಆದ್ದರಿಂದ ಉಪದೇಶದಿಂದ ಈ ವಾದ ಹುಟ್ಟುತ್ತದೆ. ಜ್ಞಾನವಿಲ್ಲದಿದ್ದಾಗ ದ್ವೈತವು ಇರುವುದಿಲ್ಲ"—**ಮಾಂಡೂಕ್ಯ.** ಇಲ್ಲಿ ಜ್ಞಾನಾಭಾವ ಕಾಲದಲ್ಲಿ ಮಾತ್ರ ದ್ವೈತದ ಅಭಾವವನ್ನು ಹೇಳಿದೆ ಎಂದರೆ ಅಜ್ಞಾನಿಗಳ ಪಕ್ಷದಲ್ಲಿ ಮಾತ್ರ ದ್ವೈತವಿಲ್ಲ.

"ಪ್ರಪಂಚವು ಭೇದಪಂಚಕವುಳ್ಳದ್ದು. ಇವರಲ್ಲಿ ಜೀವೇಶ್ವರ ಭೇದ, ಜಡೇಶ್ವರ ಭೇದ, ಜೀವ ಭೇದ, ಜಡಜೀವ ಭೇದ ಮತ್ತು ಜಡ ಭೇದ ಎಂದು ಐದು ವಿಧವಾದ ಭೇದಗಳಿವೆ. ಈ ಭೇದ ಪಂಚಕವು ಸತ್ಯ ಮತ್ತು ಅನಾದಿ. ಇದು 'ಸಾದಿ' ಯಾಗಿದ್ದ ಪಕ್ಷದಲ್ಲಿ ನಾಶ ಹೊಂದಬೇಕಾಗಿತ್ತು. ಇದಕ್ಕೆ ನಾಶ ಕಂಡುಬಂದಿಲ್ಲ. ಆದುದರಿಂದ ಅದು ಭ್ರಾಂತಿ ಕಲ್ಪಿತವಲ್ಲ. ಕಲ್ಪಿತವಾಗಿದ್ದಲ್ಲಿ ಇದಕ್ಕೆ ನಿವೃತ್ತಿ ಇರಬೇಕಾಗಿತ್ತು. ಆದರೆ ನಿವೃತ್ತಿ ಇಲ್ಲ. ದ್ವೈತವಿಲ್ಲ ಎಂಬುವುದು ಅಜ್ಞಾನಿಗಳ ಮತ. ಜ್ಞಾನಿಗಳ ಮತ ಹೀಗಿದೆ—ಪ್ರಪಂಚವು ವಿಷ್ಣುವಿನಿಂದ ಮಿತವೂ ತ್ರಾತವೂ ಆಗಿದೆ—ಆದ್ದರಿಂದ ಸತ್ಯ ಎಂದು ಹೇಳಲಾಗಿದೆ. ಇವುಗಳ ಮಧ್ಯೆ ಹರಿ ಪರಮನು-ಎಂದರೆ ಸರ್ವೋತ್ಕೃಷ್ಟನು" ಎಂದು **ಪರಮಶ್ರುತಿ**ಯಲ್ಲಿ ಹೇಳಿದೆ.

**ಮೈತ್ರೇಯೀ ಶಾಖೆಯಲ್ಲಿ**

"ಇನ್ನುಮುಂದೆ ಜ್ಞಾನದ ವಿಘ್ನಗಳನ್ನು ಹೇಳಿದೆ" ಎಂದು ಪ್ರಾರಂಭಿಸಿ-ಹೀಗೆ ಹೇಳಿದೆ-

"ಮಿಥ್ಯಾ ತರ್ಕದಿಂದಲೂ, ದೃಷ್ಟಾಂತಗಳಿಂದಲೂ, ಕುಹಕ ಇಂದ್ರಜಾಲದಿಂದಲೂ ಯಾವ ಇತರರು ವೈದಿಕ ಪಙ್ಕ್ತಿಯಲ್ಲಿ ಸೇರಲು ಪ್ರಯತ್ನಮಾಡುತ್ತಾರೋ ಅವರೊಡನೆ ವಾಸ ಮಾಡಕೂಡದು. ಅವರನ್ನು ಬಹಿರಂಗಪಡಿಸಬೇಕು. ಅವರು ತಸ್ಕರರು ಮತ್ತು ಸ್ವರ್ಗಕ್ಕೆ ಅನರ್ಹರು."

"ನೈರಾತ್ಮ್ಯವಾದದ ಕುಹಕದಿಂದಲೂ, ಮಿಥ್ಯಾ ದೃಷ್ಟಾಂತದ ಕಾರಣಗಳಿಂದಲೂ ಭ್ರಮಿಸುತ್ತಿರುವ ಲೋಕವು ವೇದ ವಿದ್ಯೆಯ ಅಂತರಂಗವನ್ನು ತಿಳಿಯುವುದಿಲ್ಲ." ನೈರಾತ್ಮ್ಯ ವಾದವೆಂದರೆ ಆತ್ಮನಿಗೆ ಸಂಬಂಧಿಯಾದ ಯಾವುದೂ ಇಲ್ಲ ಎಂಬ ವಾದ."

ಜಗತ್ತು ಭ್ರಾಂತಿಕಲ್ಪಿತವಾಗಿದ್ದರೆ ಸತ್ಯವಾದ ಎರಡು ಜಗತ್ತು ಬೇಕಾಗುವುದು. ಸತ್ಯವಾದ ಶುಕ್ತಿಯು ಸತ್ಯವಾದ ರಜತವು ಮತ್ತು ಅವೆರಡಕ್ಕಿರುವ ಸಾದೃಶವು ಇಲ್ಲದಿದ್ದರೆ ಶುಕ್ತಿ ರಜತ ಭ್ರಾಂತಿಯು ಬರಲಾರದು. ಸ್ವಪ್ನದಲ್ಲಿಯೂ ಸತ್ಯವಾದ ಜಗತ್ತೇ ವಾಸನಾ ರೂಪದಿಂದ ಮನಸ್ಸಿನಲ್ಲಿದ್ದುಕೊಂಡು ಹೊರಗಿರುವಂತೆ ಕಾಣುತ್ತದೆ. ದೇಹ ಮತ್ತು ಆತ್ಮರಿಗೂ ಏಕ ಪ್ರದೇಶದಲ್ಲಿರುವುದರಿಂದ ಸಾದೃಶ್ಯವಿದ್ದೇ ಇದೆ. ಶಂಖವು ಹಳದಿಯಾಗಿದೆ, ಆಕಾಶವು ನೀಲವಾಗಿದೆ ಎಂಬ ಭ್ರಾಂತಿಗಳಲ್ಲಿಯೂ ಹಳದಿ ಮತ್ತು ನೀಲಿ ಬಣ್ಣಗಳು ಬೇರೆ ಪ್ರದೇಶಗಳಲ್ಲಿ ತತ್ತ್ವತಃ ಇದ್ದೇ ಇವೆ. ಶಂಖಾದಿಗಳಿಗೆ ಪ್ರವೃತ್ತ್ವಾದಿ ರೂಪಗಳಿಂದ ಆ ಹಳದಿ ಮತ್ತು ನೀಲಿ ವಸ್ತುಗಳೊಡನೆ ಸ್ವಲ್ಪ ಸಾದೃಶ್ಯವು ಇದ್ದೇ ಇದೆ. ಆದುದರಿಂದ ಎಲ್ಲಿಯೂ ಎರಡು ಸದೃಶವೂ ಸತ್ಯವೂ ಆದ ವಸ್ತುಗಳಿಲ್ಲದೆ ಭ್ರಮೆಗೆ ಅವಕಾಶವೇ ಇಲ್ಲ.

ಆತ್ಮನಲ್ಲಿ ಅನಾತ್ಮ ಭ್ರಮೆಯನ್ನು ಎಲ್ಲಿಯೂ ಕಂಡಿಲ್ಲ. ಯಾವನೂ 'ನಾನು ನಾನಲ್ಲ' ಎಂದು ಭ್ರಾಂತಿ ಹೊಂದುವುದು ಅನುಭವಕ್ಕೆ ಬಂದಿಲ್ಲ. ಆತ್ಮನಲ್ಲಿ ಅನಾತ್ಮ ಭ್ರಮೆಯೇ ಈ ಪ್ರಪಂಚ ಎಂದು ಆ ವಾದಿಗಳು ಹೇಳುತ್ತಾರೆ. ಹಾಗೆ ಹೇಳದೆ ಅನಾತ್ಮನಲ್ಲಿ ಆತ್ಮನ ಭ್ರಮೆಯನ್ನು ಕಲ್ಪಿಸಿದರೆ ಅನಾತ್ಮವು ಸತ್ಯವಾಗುವುದು. ಆಗ ಅದ್ವಿತೀಯತ್ವವನ್ನು ಕಲ್ಪಿಸಿದ್ದೇ ಆದರೆ ಅನಾತ್ಮ ಒಂದೇ ಇರುವುದರಿಂದ ಆತ್ಮನಿಲ್ಲ ಎಂದು ಸಿದ್ಧಾಂತವಾಗುವುದು. ಆತ್ಮದ ಅಜ್ಞಾನದಿಂದ ಈ ಜಗತ್ತು ಉಂಟಾಗಿದೆ ಎಂದರೆ ಆತ್ಮನಿಗೂ ಜಗತ್ತಿಗೂ ನಮಗೆ ಕಾಣುತ್ತಿರುವ ಭೇದವು ಕಾಣದೇ ಇರಬೇಕಾಗಿತ್ತು. ಶುಕ್ತಿರಜತ ಭ್ರಾಂತಿ ಇರುವಾಗ ಶುಕ್ತಿಯೂ ರಜತವೂ ಬೇರೆಬೇರೆಯಾಗಿ ಕಾಣುವುದಿಲ್ಲ. ಒಂದೇ ವಸ್ತು ಒಂದೇ ಕಾಲದಲ್ಲಿ ಬಹುರೂಪವಾಗಿ ಭ್ರಾಂತಿಯಲ್ಲಿ ತೋರುವುದಿಲ್ಲ. ಎಲ್ಲಿಯೂ ಅನುಭವದಲ್ಲಿ ಆತ್ಮನಲ್ಲಿಯೇ ಭೇದವನ್ನು ಆರೋಪಿಸುವ ಭ್ರಮೆ ಇಲ್ಲ. ಸುಳ್ಳಾದ ಉಪಾಧಿಯ ವಶದಿಂದ ಎಲ್ಲಿಯೂ ಭ್ರಮೆಯು ಕಲ್ಪಿತವಾಗಿರುವುದು ಕಂಡುಬಂದಿಲ್ಲ. ಜ್ಞಾನ-ಅಜ್ಞಾನಗಳು ಸುಳ್ಳಾಗಿ ಕಲ್ಪಿತ ವಾಗಿವೆ ಎಂದು ಹೇಳುವುದು ಅನುಭವ ವಿರೋಧ. ಭ್ರಾಂತಿಯಲ್ಲಿ ವಿಷಯಗಳು ಅನ್ಯಥಾ ಕಾಣುತ್ತವೆ-ಎಂದು ಹೇಳುವೆವೇ ಹೊರತು ಜ್ಞಾನ ಮತ್ತು ಅಜ್ಞಾನಗಳೇ ಅನ್ಯಥಾ ಆಗಿವೆ ಎಂದು ಹೇಳುವುದಿಲ್ಲ. ಈ ರೀತಿಯಾಗಿ ಈ ಪಕ್ಷವು **ಅನಂತಯುಕ್ತಿ ವಿರುದ್ಧ**ವಾಗಿದೆ. ಗ್ರಂಥ ವಿಸ್ತಾರವಾಗುವುದೆಂಬ ಭಯದಿಂದ ಇಲ್ಲಿಗೇ ಇದನ್ನು ಉಪಸಂಹಾರ ಮಾಡಿದೆ. ಜಗತ್ತಿನ ಸತ್ಯತ್ವವನ್ನು ಹೇಳುವ ಪಕ್ಷದಲ್ಲಿ ಯಾವ ದೋಷವೂ ಇಲ್ಲ!! (ಅದ್ವೈತಿಗಳಲ್ಲಿ) ಬಹು ಜೀವವಾದಕ್ಕೂ ಭೇದದ ಮಿಥ್ಯಾತ್ವವನ್ನು ಅಂಗೀಕರಿಸುವುದರಿಂದ ಮೇಲೆ ಹೇಳಿದ ದೋಷಗಳು ಅನ್ವಯಿಸುತ್ತವೆ. ಬಹುತ್ವವು ಮಿಥ್ಯೋಪಾಧಿಯಿಂದ ಉಂಟಾಗುವುವು ಎಂದು ಅವರೂ

ಹೇಳುತ್ತಾರೆ. ಆದರೆ ಅನುಭವದಲ್ಲಿ ಎಲ್ಲಿಯೂ ಮಿಥ್ಯೋಪಾಧಿಯಿಂದ ಆದ ಭೇದವು ಕಾಣುವುದಿಲ್ಲ. ಮತ್ತು ಆತ್ಮನಲ್ಲಿ ಅನಾತ್ಮದ ಕಲ್ಪನೆಯೇ ಸ್ವರೂಪವಾಗಿ ಉಳ್ಳ ಮಿಥ್ಯೋಪಾಧಿಯು ಅಸಂಭವ. ಮಾಯಾಮಯವಾದ ಸೃಷ್ಟಿಯೂ ಕೂಡ ಅದಕ್ಕೆ ಸದೃಶವಾದ ಬೇರೊಂದು ಇದ್ದರೆ ಮಾತ್ರ ಸಾಧ್ಯ. ಮತ್ತು ದ್ರವ್ಯತ್ವವೇ ಮೊದಲಾದ ಸಾದೃಶ್ಯವನ್ನುಳ್ಳ ಯಾವುದಾದರೂ ಒಂದು ಆಧಾರವನ್ನು ಆಶ್ರಯಿಸಿಯೇ ಮಿಥ್ಯಾಸೃಷ್ಟಿಯ ಕಲ್ಪನೆಯೂ ಆಗಬೇಕು.

**ಬ್ರಹ್ಮವೈವರ್ತದಲ್ಲಿ** ಈ ತತ್ತ್ವವನ್ನು ಹೀಗೆ ನಿರೂಪಣೆ ಮಾಡಿದೆ:

"ಸತ್ಯವಾದ ಅಧಿಷ್ಠಾನ ಮತ್ತು ಅದಕ್ಕೆ ಸದೃಶವಾದ ಬೇರೊಂದು ವಸ್ತು ಇವುಗಳಿಲ್ಲದೆ ಭ್ರಾಂತಿಯು ಎಲ್ಲಿಯೂ ಆಗಲಾರದು. ಸ್ವಪ್ನ ಮಾಯಾವಿಗಳಲ್ಲಿಯೂ ಮನಸ್ಸಿನಲ್ಲಿರುವ ವಾಸನೆಗಳೇ ಬಾಹ್ಯ ವಸ್ತುಗಳಂತೆ ಕಲ್ಪಿತವಾಗುತ್ತದೆ. ಸ್ವಪ್ನಕಾಲದ ಭ್ರಮೆ ಮತ್ತು ಐಂದ್ರ ಜಾಲಿಕ ವ್ಯಾಪಾರಗಳು ಕರ್ತೃವಿನ ದೇಹವೇ ಮೊದಲಾದ ಸಾಮಗ್ರಿಗಳ ಸಹಾಯದಿಂದ ಹೊರಗಡೆ ಚತುರಂಗಬಲ ಮೊದಲಾದ ಬೇರೆಬೇರೆ ವಸ್ತುಗಳಂತೆ ಕಲ್ಪನೆಯಾಗುತ್ತದೆ. ಆದುದರಿಂದ ವಿಶ್ವವು ವಿಷ್ಣುಬಲಾಶ್ರಯವೇ ಹೊರತು ಭ್ರಾಂತಿಕಲ್ಪಿತವಲ್ಲ."

ಮಾಯಾವಿಯಾದವನು ಮಾಯೆಯನ್ನು ನೋಡುವುದಿಲ್ಲ. [ಎಂದರೆ ಮಾಯಾವಿಯು ತನ್ನಿಂದ ನಿರ್ಮಿತವಾದ ಮಾಯೆಗೆ ಒಳಗಾಗಿ ಮೋಸಹೋಗುವುದಿಲ್ಲ!] ಆದರೆ ಈಶ್ವರನು ವಿಶ್ವವನ್ನು ಸದಾ ನೋಡುತ್ತಿರುವನು. ಆದ್ದರಿಂದ ಅದು ಮಾಯೆಯಲ್ಲ ಎಂದೇ ನಿಶ್ಚಯಿಸಬೇಕು. ಸರ್ವದಾ ಅಪರೋಕ್ಷಜ್ಞಾನವುಳ್ಳವನು ಮಿಥ್ಯಾವಸ್ತುವನ್ನು ಎಂದೂ ನೋಡಲಾರನು. ವಿಷ್ಣುವು ಸರ್ವವನ್ನೂ ಅಪರೋಕ್ಷ ರೀತಿಯಲ್ಲಿ ನೋಡುತ್ತಿರುವನು. ಅವನು **ವಿಶ್ವದೃಕ್**. ಆದುದರಿಂದ ಆ ವಿಶ್ವವು ಮಿಥ್ಯೆ ಎಂದೂ ಆಗಲಾರದು. ಉಪಾಧಿಭೇದದ ದೆಸೆಯಿಂದ ಸಂಸಾರವನ್ನೂ ಮತ್ತು ಮೋಕ್ಷವನ್ನೂ ಬ್ರಹ್ಮನೊಬ್ಬನೇ ಹೊಂದುವವನಾಗಿದ್ದರೆ, ಸರ್ವ ಕಾಲದಲ್ಲಿಯೂ ಸಂಸಾರಿಗಳು ಇರುವುದರಿಂದ, ಬ್ರಹ್ಮನು ಸರ್ವದಾ ಸಂಸಾರಿಯೇ ಆಗಿರಬೇಕು. ಆದ್ದರಿಂದ ಬ್ರಹ್ಮಭಾವ ಬಂದರೂ ಮುಕ್ತಿ ಇಲ್ಲದೇ ಹೋಗುವುದು. ಏತಕ್ಕೆಂದರೆ ಬ್ರಹ್ಮನಿಗೆ ಸರ್ವದಾ ಉಪಾಧಿ ಸಂಬಂಧವು (Limiting Condition) ಇದ್ದೇ ಇರುವುದು. "ಶುದ್ಧನಿಗೆ ಉಪಾಧಿ ಸಂಬಂಧವಿಲ್ಲ" ಎಂದು ಪೂರ್ವ ಪಕ್ಷಿಯು ವಾದಿಸಲು ಸಾಧ್ಯವಿಲ್ಲ. ಉಪಾಧಿ ಸಂಬಂಧವನ್ನು ಹೊಂದುವುದಕ್ಕೆ ಮೊದಲು ಬೇರೊಂದು ಉಪಾಧಿಯ ದೆಸೆಯಿಂದ ಅಶುದ್ಧನಾಗಿರಬೇಕು—ಎಂದು ಹೇಳಿದರೆ ಅನಂತ ಉಪಾಧಿ ಪರಂಪರೆ ಒದಗುವುದರಿಂದ ಅನವಸ್ಥಾ ದೋಷ ಬರುವುದು. ಒಂದು ಉಪಾಧಿಯು ತಾನೇ ಬ್ರಹ್ಮನ ಶುದ್ಧಿಗೆ ಚ್ಯುತಿ ತಂದು ತದನಂತರ ಅದನ್ನು ಆಶ್ರಯಿಸುವುದು ಎಂದು ಹೇಳಿದರೆ 'ಆತ್ಮಾಶ್ರಯ' ಎಂಬುವ ತರ್ಕದೋಷವು ಬರುವುದು. ಈ ಕಾರಣದಿಂದಲೂ ಮಿಥ್ಯೋಪಾಧಿಯು ಸಿದ್ಧಿಸುವುದಿಲ್ಲ. (ಮಿಥ್ಯೋಪಾಧಿಯನ್ನು ಕಲ್ಪಿಸುವುದು ಯುಕ್ತವಲ್ಲ.)

ಅಜ್ಞಾನವಿದ್ದರೆ ಮಿಥ್ಯೋಪಾಧಿಯು ಕಲ್ಪಿತವಾಗುವುದು. ಅಜ್ಞಾನವಿಲ್ಲದಿದ್ದರೆ ಯಾವ ಮಿಥ್ಯಾವಿಷಯದ ಪ್ರತಿಭಾಸವೂ ಆಗುವುದಿಲ್ಲ. ಆದರೆ ಅಜ್ಞಾನವಿರಬೇಕಾದರೆ ಅದಕ್ಕೆ ಮೂಲವಾಗಿ ಮಿಥ್ಯೋಪಾಧಿ ಇರಬೇಕು. ಮಿಥ್ಯೋಪಾಧಿಯಿಂದ ಬೇರೆಯಾದ ಆತ್ಮನಿಗೆ ಅಜ್ಞತ್ವ ಬರುವುದು (ಶುದ್ಧನಾದ ಆತ್ಮನಿಗೆ ಅಜ್ಞಾನವಿಲ್ಲ). ಶುದ್ಧವಾದ ಆತ್ಮನಿಗೆ ಅಜ್ಞತ್ವ ಬರುವುದಾದರೆ ಮುಕ್ತನೂ ಅಜ್ಞನಾಗುವ ಪ್ರಸಂಗ ಬರುವುದು. ಹಾಗಾದರೆ

ಮುಕ್ತನಿಗೂ ಅಜ್ಞಾನ ಸಂಭಾವಿತವಾದರೆ ಅದು ಸ್ವಾಭಾವಿಕವೂ ಸತ್ಯವೂ ಆದುದರಿಂದ ಅವನ ಅದ್ವಿತೀಯತ್ವ ಹೋಗಿ ಸದ್ವಿತೀಯತ್ವ ಬರುವುದು! ಮತ್ತು ಪೂರ್ವಪಕ್ಷಿಗಳು ಸ್ವಾಭಾವಿಕವಾದುದಕ್ಕೆ ನಿವೃತ್ತಿ ಇಲ್ಲ ಎಂದು ಹೇಳುವುದರಿಂದ ಈ ಮುಕ್ತನಿಗೆ ಬರುವ ಅಜ್ಞಾನಕ್ಕೆ ಎಂದಿಗೂ ನಿವೃತ್ತಿ ಇಲ್ಲದೇ ಹೋಗುವುದು. ಸತ್ಯವಾದ ವಸ್ತುವಿಗೆ ನಿವೃತ್ತಿ ಇಲ್ಲವೆಂದು ಅವರ ಪಕ್ಷ. ಆದುದರಿಂದ ಅನ್ಯೋನ್ಯಾಶ್ರಯ ದೋಷವು ಆವಶ್ಯಕವಾಗಿ ಬರುತ್ತದೆ.[೨೨] ಮತ್ತು ಅಜ್ಞಾನವಿದ್ದಲ್ಲಿ ಮಿಥ್ಯೋಪಾಧಿ ಇರುವುದು. ಮಿಥ್ಯೋಪಾಧಿ ಇದ್ದಲ್ಲಿ ಜೀವನಿರುವನು. ಜೀವನಿದ್ದಲ್ಲಿ ಅವನನ್ನು ಅವಲಂಬಿಸಿ ಅಜ್ಞಾನವಿರುವುದು. ಹೀಗೆ 'ಚಕ್ರಕ' (Circular reasoning) ಎಂಬುವ ತರ್ಕದೋಷವು ಬರುತ್ತದೆ. ಶುದ್ಧನಾದ ಬ್ರಹ್ಮನೇ ಭ್ರಾಂತಿಯಿಂದ ಅಜ್ಞನಾಗಿ ತೋರುವನು—ಎಂದು ಹೇಳುವುದು ಯುಕ್ತವಲ್ಲ. ಹಾಗೆ ಹೇಳಿದರೂ ಅಜ್ಞಾನವಿದ್ದಲ್ಲಿ ಭ್ರಮೆ; ಭ್ರಮೆ ಇದ್ದಲ್ಲಿ ಅಜ್ಞಾನ ಎಂದೂ ಅನ್ಯೋನ್ಯಾಶ್ರಯ ದೋಷವು (Reciprocal dependence) ಬೇರೊಂದು ರೂಪದಲ್ಲಿ ಬಂದೇ ಬರುವುದು.

**ವತ್ಸಶ್ರುತಿಯು** ಹೀಗೆ ಹೇಳುತ್ತದೆ:

"ಅನಾಗತವೂ ಅತೀತವೂ ಆದ ಎಷ್ಟು ಲಕ್ಷಣಗಳಿವೆಯೋ; ಹಾಗೆಯೇ ಅನಾಗತವೂ ಅತೀತವೂ ಆದ ಪರಮಾಣುಗಳು ಎಷ್ಟಿವೆಯೋ, ಅವುಗಳಿಗಿಂತ **ಅನಂತ ಸಂಖ್ಯೆಯಲ್ಲಿ ಜೀವಗಳ ಬೇರೆಬೇರೆ ರಾಶಿಗಳಿವೆ.**" ಈ ಶ್ರುತಿಯ ಪ್ರಮಾಣದಿಂದ ನಮ್ಮ ಪಕ್ಷದಲ್ಲಿ ಸಂಸಾರಿಗಳಿಗೆ ಪರಿಸಮಾಪ್ತಿ ಎಂಬುವುದೇ ಇಲ್ಲ. **ಒಂದು ಪರಮಾಣುವಿನ ಪ್ರದೇಶದಲ್ಲಿಯೇ ಅನಂತ ಪ್ರಾಣರಾಶಿಗಳಿವೆ.** ಅವು ಸೂಕ್ಷ್ಮವಾಗಿರುವುದರಿಂದಲೂ, ಒಂದು ವೇಳೆ ಸ್ಥೂಲವಾಗಿದ್ದರೆ ಈಶ್ವರ ಶಕ್ತಿಯ ಮಹಿಮೆಯಿಂದಲೂ ಅವು ಹಾಗೆ ಒಂದೇ ಒಂದು ಪರಮಾಣು ಪ್ರದೇಶವನ್ನು ಆಕ್ರಮಿಸಿರಬಲ್ಲುದು!

**ಸ್ಕಾಂಧ ಪುರಾಣದಲ್ಲಿ** ಹೀಗೆ ಹೇಳಿದೆ:

"ಸಹಸ್ರಯೋಜನ ಸಭೆಯನ್ನು, ವಿಶ್ವಕರ್ಮನ ಪ್ರಭಾವದಿಂದ, ಪ್ರಜೆಗಳ ಅನಂತಾನಂತ ರಾಶಿಗಳು ಆಶ್ರಯಿಸಿರುತ್ತವೆ."

ಮಿಥ್ಯಾವಸ್ತುವು, ದುರ್ಘಟವಾಗಿರುವುದೇ ಅದರ ಭೂಷಣ—ಎಂದು ಹೇಳಲು ಬಾರದು.[೨೩] ದುರ್ಘಟತ್ವ ಯುಕ್ತಿಗೆ ವಿರುದ್ಧವಾಗುವುದು. (Irrational) ಪ್ರತ್ಯಕ್ಷಸಿದ್ಧವಾದ ವಸ್ತುವು ಅಸತ್ಯವೆಂದು ಕಲ್ಪಿಸಬೇಕಾದರೆ ಪ್ರತ್ಯಕ್ಷಕ್ಕಿಂತಲೂ ಪ್ರಬಲವಾದ ಪ್ರಮಾಣಗಳೂ ಯುಕ್ತಿಗಳೂ ಇರಬೇಕು. ಹಾಗಿಲ್ಲದಿದ್ದರೆ ಪ್ರತ್ಯಕ್ಷತಃ ಸಿದ್ಧವಾದ ಸತ್ಯತ್ವವೇ ದೃಢವಾಗುತ್ತದೆ. ಅನ್ನವೇ ಮೊದಲಾದ ಭೋಗ್ಯವಸ್ತುಗಳನ್ನು ನೋಡಿ, ಅವುಗಳನ್ನು ಭೋಗಿಸಲು ಆ ಪ್ರತ್ಯಕ್ಷಕ್ಕಿಂತ ಬೇರೆ ಪ್ರಮಾಣದ ಅಗತ್ಯವಿರುವುದಿಲ್ಲ. ಆದರೆ ಅದು ಅನ್ನವಲ್ಲ ಎಂದು ಯಾರಾದರೂ ಹೇಳಿದರೆ, ಆಗ ಅನ್ನದಂತೆ ಕಾಣುವುದು, ಯಾವ ಕಾರಣದಿಂದ ಅನ್ನವಲ್ಲ

---

೨೨. ಅಜ್ಞಾನವಿದ್ದರೆ ಸುಳ್ಳಾದ ಉಪಾಧಿಯು ಕಲ್ಪಿತವಾಗುವುದು. ಸುಳ್ಳಾದ ಉಪಾಧಿಯಿಂದ ಆತ್ಮನು ಅಶುದ್ಧನಾದರೆ ಅವನಿಗೆ ಅನಂತರ ಅಜ್ಞಾನವು ಸಂಭವಿಸಬಹುದು. ಹೀಗೆ ಉಪಾಧಿ ಮತ್ತು ಅಜ್ಞಾನಗಳು ಪರಸ್ಪರ ಕಾರ್ಯ ಕಾರಣವಾಗುವುದರಿಂದ ಅನ್ಯೋನ್ಯಾಶ್ರಯ ದೋಷ ಸಂಭವಿಸುತ್ತದೆ.

೨೩. "ದುರ್ಘಟತ್ವಂ ಅವಿದ್ಯಾಯಾಃ ಭೂಷಣಂ ನತು ದೂಷಣಂ"

ಎಂಬ ಪ್ರಶ್ನೆ ಏಳುತ್ತದೆ. ಅದು ಅನ್ನವಲ್ಲವೆಂದು ಸ್ಥಾಪಿಸಬೇಕಾದರೆ ಪ್ರತ್ಯಕ್ಷವನ್ನೂ ಬಾಧಿಸಲು ಸಮರ್ಥವಾದ ಬೇರೊಂದು ಪ್ರಮಾಣ ಬೇಕಾಗುತ್ತದೆ. ಪ್ರತ್ಯಕ್ಷ ಕಾಣುವ ವಸ್ತುವನ್ನು ಪ್ರಬಲವಾದ ಮತ್ತೊಂದು ಪ್ರತ್ಯಕ್ಷ ಮತ್ತು ಆಗಮಗಳ ಸಹಾಯವಿಲ್ಲದೆ ಕೇವಲ ಅನುಮಾನದಿಂದ ಬಾಧಿಸಲು ಆಗುವುದಿಲ್ಲ. ದೂರದಲ್ಲಿರುವ ವೃಕ್ಷ ಹ್ರಸ್ವವಾಗಿ (ಚಿಕ್ಕದಾಗಿ) ಕಾಣುತ್ತದೆ. ದೂರವಸ್ತುಗಳನ್ನು ನೋಡುವುದರಿಂದ ನಮ್ಮ ಕಣ್ಣಿನ ದೌರ್ಬಲ್ಯ – ಅನುಭವದಿಂದ – ತಿಳಿಯುತ್ತದೆ. ಆದುದರಿಂದ ಪ್ರತ್ಯಕ್ಷತಃ ವೃಕ್ಷವು ಹ್ರಸ್ವವಾಗಿ ಕಂಡರೂ, ಅದು ದೀರ್ಘವೇ ಎಂದು ನಿಶ್ಚಯಿಸುತ್ತೇವೆ. ಪ್ರತ್ಯಕ್ಷವು ದೂರವಸ್ತುಗಳ ವಿಷಯದಲ್ಲಿ ಮಂದಗ್ರಾಹಿ. ಅಷ್ಟೇ ಅಲ್ಲ ಆ ವಸ್ತುವಿನ ಪರಿಮಾಣವೇ ಮುಂತಾದ ವಿಷಯದಲ್ಲಿ ಅನ್ಯಥಾಗ್ರಾಹಿ ಎಂದು ಬಹು ಪ್ರಬಲವಾದ ಪ್ರತ್ಯಕ್ಷದಿಂದಲೇ ನಿಶ್ಚಯವಾಗಿದೆ. ಆದುದರಿಂದಲೇ ಪ್ರತ್ಯಕ್ಷಕ್ಕೆ ವಿರೋಧವಾಗಿ ನಿಶ್ಚಯ ಮಾಡಲು ಸಾಧ್ಯ.

ಜಗತ್ಪ್ರತ್ಯಕ್ಷದ ವಿಷಯದಲ್ಲಾದರೋ ಅದರ ಮಿಥ್ಯಾತ್ವವು ಯಾವ ಪ್ರಮಾಣದಿಂದಲೂ ನಿಶ್ಚಿತವಾಗಿಲ್ಲ. ವಿಶೇಷತಃ ಜ್ಞಾನ, ಅಜ್ಞಾನ, ಸುಖ, ದುಃಖ, ಆತ್ಮ, ಭೇದ ಮೊದಲಾದ ವಿಷಯಗಳ ಅನುಭವವು ಮಿಥ್ಯೆ ಎಂದು ಹೇಗೂ ನಿಶ್ಚಯವಾಗುವುದಿಲ್ಲ. ಆದ್ದರಿಂದ ಸಂಸಾರವೂ ಸತ್ಯವಾದುದರಿಂದ, ಸತ್ಯವಾದುದಕ್ಕೆ ನಿವೃತ್ತಿ ಇಲ್ಲದೇ ಇರೋಣದರಿಂದ ಎಂದಿಗೂ ಮೋಕ್ಷ ಸಿದ್ಧಿಸಲಾರದು. ಅನುಭವ ಸಿದ್ಧವಾದ ವಿಷಯವನ್ನು ಅದಕ್ಕಿಂತಲೂ ಬಲವಾದ ಅನುಭವದ ಸಹಾಯವಿಲ್ಲದೆ ಕೇವಲ ಯುಕ್ತಿಯಿಂದಲೇ ಅಸತ್ಯವೆಂದು ನಿರ್ಣಯಿಸುವುದಾದರೆ, ಆತ್ಮನಿಗೂ ಅಸತ್ಯವನ್ನು ಹೇಳಬೇಕು. ಮಿಕ್ಕೆಲ್ಲವೂ ಅಸತ್ಯವಾಗಿರುವುದರಿಂದ ಆತ್ಮನೂ ಅವುಗಳಂತೆ ಅಸತ್ಯವಾಗಿರಬೇಕು – ಎಂಬುವ ಯುಕ್ತಿ ಈ ನಿರ್ಣಯವನ್ನು ಸಮರ್ಥಿಸುತ್ತದೆ. ಆತ್ಮನ ವಿಷಯದಲ್ಲಿ ಒಂದು, ಜಗತ್ತಿನ ವಿಷಯದಲ್ಲಿ ಒಂದು – ಹೀಗೆ ಎರಡುಬಗೆಯಾಗಿ ಕಲ್ಪನೆ ಮಾಡಿದರೆ ಕಲ್ಪನಾ ಗೌರವವೆಂಬ ದೋಷವು ಬರುತ್ತದೆ. ಲೋಕದಲ್ಲಿ ಆತ್ಮನೇ ಅಧಿಷ್ಠಾನವಾಗಿ ಉಳ್ಳ ಯಾವುದೊಂದು ಭ್ರಮೆಯೂ ಇಲ್ಲ. ಆದ್ದರಿಂದ ಆತ್ಮನಿಗೆ ಅಧಿಷ್ಠಾನತ್ವವನ್ನು ಹೇಳಲಾಗುವುದಿಲ್ಲ. ದುರ್ಘಟತ್ವವೇ ಭೂಷಣವಾಗುವ ಪಕ್ಷಕ್ಕೆ ಆತ್ಮ ಮಿಥ್ಯಾತ್ವವು ಎಷ್ಟೇ ದುರ್ಘಟವಾದರೂ ಭೂಷಣವೂ ಸತ್ಯವೂ ಆಗಬೇಕು. ಹಾಗೆಯೇ

೧. ಪ್ರತೀತಿಯೂ ಅವಿದ್ಯಾಕಾರ್ಯವಾದುದರಿಂದ,

೨. ಅದರ ದುರ್ಘಟತ್ವವೂ ಭೂಷಣವಾದುದರಿಂದ ಮತ್ತು

೩. ಸತ್ಯವಾದ ವಸ್ತುವಿಗೆ ಮಾತ್ರ ಯುಕ್ತಿಯು ಅಪೇಕ್ಷಿತವಾಗಿರುವುದರಿಂದ,

ಸರ್ವಥಾ ವಿರುದ್ಧವಾದ ಘಟಾದಿಗಳ ದೃಷ್ಟೃತ್ವ, ಆತ್ಮನ ಜಡತ್ವ, ಸಾಕ್ಷಿಯಾದ ಆತ್ಮನಿಲ್ಲದಿದ್ದರೂ ಪ್ರತೀತಿ, ಅಧಿಷ್ಠಾನವಿಲ್ಲದಿದ್ದರೂ ಭ್ರಮೆ, ಎಂಬ ಕಲ್ಪನೆಗಳು ಯಥಾರ್ಥವಾಗಬೇಕು.

ಉಪಾಧಿ ಭೇದವನ್ನು ಅಂಗೀಕರಿಸುವುದಾದರೂ, ತ್ರೈಕಾಲು ಮೊದಲಾದ ಉಪಾಧಿಗಳು ಇದ್ದರೂ, ತದ್ಗತ ಸುಖದುಃಖಗಳು ಭೋಕ್ತೃವಿನಲ್ಲಿ ಹೇಗೆ ಭೇದವು ಪ್ರತೀತವಾಗುವುದಿಲ್ಲವೋ ಹಾಗೆಯೇ ಶರೀರ ಮೊದಲಾದ ಉಪಾಧಿಗಳ ಭೇದವಿದ್ದರೂ, ಭೋಕ್ತೃವಿನಲ್ಲಿ ಭೇದವು ಕಾಣದೇ ಇರಬೇಕಾಗಿತ್ತು. ಸರ್ವದೇಹಗತವಾದ ಸುಖದುಃಖಾದಿಗಳನ್ನು ಒಬ್ಬನೇ ಭೋಕ್ತೃ ಅನುಭವಿಸಬೇಕಾಗಿತ್ತು. ಒಂದು ಬೆರಳು ಹೋದರೆ ಜೀವನಿಗೆ ಹೇಗೆ ಮೋಕ್ಷ

ವಿಲ್ಲವೋ ಹಾಗೆಯೇ ಅನೇಕ ಉಪಾಧಿಗಳಿಗೆ ಸಂಬಂಧಿಸಿರುವ ಆತ್ಮನಿಗೆ ಒಂದು ಉಪಾಧಿ ಹೋದರೂ ಬೇರೆ ಅನಂತ ಉಪಾಧಿಗಳ ಸಂಬಂಧವಿರುವುದರಿಂದ ಮುಕ್ತಿ ಉಂಟಾಗಲಾರದು.

"ಕಬಂಧಗಳು (ಮುಂಡಗಳು) ಕೈಯಲ್ಲಿ ಆಯುಧಗಳನ್ನು ಹಿಡಿದುಕೊಂಡು, ಕೆಳಗೆ ಬಿದ್ದಿರುವ ತಮ್ಮ ತಲೆಗಳಲ್ಲಿರುವ ಕಣ್ಣುಗಳಿಂದ ನೋಡುತ್ತ ಯುದ್ಧದಲ್ಲಿ ಶತ್ರುಗಳನ್ನು ಜೀಳಿಸುತ್ತವೆ," ಎಂದು ಮಹಾಭಾರತದಲ್ಲಿ ಹೇಳಿರುವಂತೆ ಅವಯವಗಳು ಕತ್ತರಿಸಿಹೋದರೂ ಯಾವ ವಿಶೇಷವೂ ಇಲ್ಲದೆ ಬಂಧವು ಅನುವೃತ್ತವಾಗಬೇಕು.

ಮತ್ತೊಂದು ವಿಷಯ: ಉಪಾಧಿಯು ಆತ್ಮನ ಏಕದೇಶವನ್ನು (ಸ್ವಲ್ಪಭಾಗ) ನುಂಗುತ್ತದೆಯೋ? ಅಥವಾ ಸರ್ವಾತ್ಮನನ್ನು ನುಂಗುತ್ತದೆಯೋ? ಒಂದು ಭಾಗವನ್ನು ನುಂಗುತ್ತದೆ ಎಂದು ಹೇಳಿದರೆ ಆತ್ಮ ಸಾವಯವ[೨೪] ಎಂದು ಹೇಳಬೇಕಾಗುವುದು. ಸಾವಯವ ವಸ್ತುಗಳಿಗೆಲ್ಲ ಅನಿತ್ಯವನ್ನು ಅವರೇ ಹೇಳುತ್ತಾರೆ. ಆತ್ಮನ ಸರ್ವಗ್ರಾಸವಾಗುವುದಾದರೆ ಉಪಾಧಿಯು ಅವನಲ್ಲಿ ಭೇದಕವಲ್ಲ (ಉಪಾಧಿಯನ್ನು ಕಲ್ಪಿಸುವುದು ಅಖಂಡವಾದ ವಸ್ತುವಿನಲ್ಲಿ ಅನೇಕ ರೂಪವು ಪ್ರತಿಭಾಸವಾಗುವುದಕ್ಕಾಗಿ). ಉಪಾಧಿಯಿಂದುಂಟಾದ ಅಂಶದಲ್ಲಿ ಉಪಾಧಿಯು ಕೆಲಸ ಮಾಡುವುದು ಎಂದು ಹೇಳಿದರೆ, ಅದೇ ಉಪಾಧಿಯಿಂದ ಆ ಅಂಶವು ಕಲ್ಪಿತವಾಗಿದ್ದರೆ ಆತ್ಮಾಶ್ರಯ ದೋಷ ಬರುವುದು. ಬೇರೊಂದು ಉಪಾಧಿಯಿಂದ ಅಂಶಕಲ್ಪನೆಯಾಗಿದ್ದರೆ ಅನವಸ್ಥಾ ದೋಷ. ಈಶ್ವರನು ಸರ್ವಗತನಾದುದರಿಂದ ಬ್ರಹ್ಮಕ್ಕೂ (ಚತುರ್ಮುಖ ಬ್ರಹ್ಮನಲ್ಲ) ಅವನಿಗೂ ಔಪಾಧಿಕ ಭೇದವು ಉಂಟಾಗಲಾರದು. ಕಾಲತಃ ದೇಶತಃ ಅಪರಿಚ್ಛಿನ್ನವಾದ ಎರಡು ವಸ್ತುಗಳಲ್ಲಿ ಔಪಾಧಿಕ ಭೇದವು ಕಂಡುಬರುವುದಿಲ್ಲ. ಒಬ್ಬನೇ ಆದ ಈಶ್ವರನು ಸರ್ವಗತನಾದುದರಿಂದಲೂ, ಭೇದವು ಅಸತ್ಯವಾದುದರಿಂದಲೂ, ಕೈಕಾಲು ಮೊದಲಾದುವುಗಳು ಬೇರೆಬೇರೆಯಾದ ಉಪಾಧಿಗಳಾಗಿದ್ದರೂ ಅವುಗಳ ಭೋಕ್ತೃವು ಚ್ಯುತಿಯಿಲ್ಲದೇ ಒಬ್ಬನೇ ಆಗಿರುವುದರಿಂದಲೂ, ಸರ್ವ ಸುಖದುಃಖಗಳ ಭೋಕ್ತೃವು ಈಶ್ವರನೊಬ್ಬನೇ ಆಗಬೇಕು. ಕಾಲತಃ ದೇಶತಃ ಅಪರಿಚ್ಛಿನ್ನವಾಗಿರುವ ಎರಡು ವಸ್ತುಗಳ ಮಧ್ಯೆ ಔಪಾಧಿಕ ಭೇದವು ಇಲ್ಲದೇ ಇರುವುದರಿಂದಲೇ ದುಃಖಿಯಾದ ಜೀವನಿಗಿಂತ ಬೇರೆ ಶುದ್ಧನಾದ ಬ್ರಹ್ಮನಿರುವುದು ಸಾಧ್ಯವಿಲ್ಲ. ಆದ್ದರಿಂದ ಸಂಸಾರವು ಸ್ವಾಭಾವಿಕವಾಗಿರುವುದರಿಂದ ಅದರ ನಿವೃತ್ತಿಯು ಎಂದಿಗೂ ಉಂಟಾಗಲಾರದು. ಹಾಗೆಂದಮೇಲೆ ಸಂಸಾರವೆಂಬುದು ಅವಿದ್ಯಾದಿ ವಿಶಿಷ್ಟನಾದ ಆತ್ಮನಿಗೋ ಅಥವಾ ಶುದ್ಧನಿಗೋ? ಶುದ್ಧನಿಗೆಂದರೆ ಪರಸ್ಪರ ವಿರುದ್ಧವಾದ ಮಾತಾಗುತ್ತದೆ. ವಿಶಿಷ್ಟನಿಗೆಂದರೆ ಆ ವಿಶಿಷ್ಟನು ಅನ್ಯನೋ ಅಥವಾ ಶುದ್ಧನಾದ ಬ್ರಹ್ಮನೇನೊ? ಅನನ್ಯನೆಂದರೆ ಮೇಲೆ ಹೇಳಿದ ದೋಷವನ್ನು ತಪ್ಪಿಸಿಕೊಳ್ಳಲಾಗುವುದಿಲ್ಲ. ಅನ್ಯನೆಂದರೆ ಅವನು ನಿತ್ಯನೋ ಅನಿತ್ಯನೋ? ಅನಿತ್ಯನೆಂದರೆ ಅವನಿಗೆ ನಾಶ ಬರಬಹುದೇ ಹೊರತು ಮೋಕ್ಷವಿಲ್ಲ! ನಿತ್ಯನೆಂದರೆ ಭೇದವು ಸತ್ಯವಾಗುವುದು. ಅದು ಮೋಕ್ಷಾವಸ್ಥೆಯಲ್ಲಿಯೂ ಇರುವುದರಿಂದ ಸತ್ಯವೇ ಆಗುವುದು. ಸ್ವರೂಪ ಮಾತ್ರಕ್ಕೆ ಅಭೇದ, ಉಪಾಧಿಯಿಂದ ಭಿನ್ನ ಎಂದು ಹೇಳಿದರೆ ಸ್ವರೂಪವೇ ಉಪಾಧಿಯೊಡನೆ ಸಂಬಂಧವನ್ನು ಹೊಂದಿರಬೇಕಾಗಿರುವುದರಿಂದ ಅದಕ್ಕೆ ಶುದ್ಧತ್ವವು ಇರುವುದಿಲ್ಲ. ಅಶುದ್ಧವಾದುದಕ್ಕೆ ಎಂದಿಗೂ ಶುದ್ಧತ್ವವು ಬರುವುದಿಲ್ಲವೆಂದು ಅವರ ಪಕ್ಷ. ಉಪಾಧಿಯು ಅಸತ್ಯವೆಂದು ಹೇಳಿದರೆ

---

೨೪. Composite – ಅನೇಕ ಭಾಗಗಳು ಸೇರಿ ಆಗಿರುವ ಒಂದು.

ಮೇಲಾಗಲೇ ನಿರೂಪಣೆ ಮಾಡಿರುವಂತೆ ಅನ್ಯೋನ್ಯಾಶ್ರಯವೇ ಮೊದಲಾದ ಬಹುದೋಷಗಳು ಬರುತ್ತವೆ. ಅನಾದಿಯಾದ ಕರ್ಮಭೇದದಿಂದ ಆತ್ಮನಲ್ಲಿ ಭೇದವು ಉಂಟಾಗುತ್ತದೆ ಎಂದು ಹೇಳಲಾಗುವುದಿಲ್ಲ. ಔಪಾಧಿಕ ಭೇದವಿದ್ದರೆ, ಅದನ್ನು ಅವಲಂಬಿಸಿ ಕರ್ಮಭೇದ ಸಿದ್ಧಿಸುವುದು. ಕರ್ಮಭೇದವಿದ್ದರೆ, ಅದನ್ನವಲಂಬಿಸಿ ಔಪಾಧಿಕ ಭೇದ ಸಿದ್ಧಿಸುವುದು. ಹೀಗೆ ಅನ್ಯೋನ್ಯಾಶ್ರಯವು ಬೇರೊಂದು ರೀತಿಯಲ್ಲಿ ತಲೆ ಹಾಕುವುದು. ಆದುದರಿಂದ ಈ ಮತವು ಅನಂತ ದೋಷ ದುಷ್ಟವಾಗಿರುವುದರಿಂದ, ಗ್ರಂಥವೂ ವಿಸ್ತಾರವಾಗುವುದಲ್ಲ ಎಂಬ ಭಯದಿಂದಲೂ ಇಲ್ಲಿಗೇ ಉಪರಮಿಸಬೇಕಾಗಿದೆ.

ಆದುದರಿಂದ, ಸರ್ವಪ್ರಮಾಣ ವಿರೋಧವಾಗಿರುವುದರಿಂದ ಅಭೇದದಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲ — ಜೀವೇಶ್ವರ ಐಕ್ಯವು ಸರ್ವಪ್ರಮಾಣ ವಿರೋಧವಾದುದರಿಂದ, ಅದು ಶ್ರುತಿಯ ಹೃದಯವಲ್ಲ.

ಪೂರ್ವಪಕ್ಷಿಗಳು "ಬ್ರಹ್ಮನು ಸರ್ವ ಶಬ್ದವಾಚ್ಯನು" ಎಂದು ಹೇಳುತ್ತಾರೆ. ಸರ್ವ ಶಬ್ದವಾಚ್ಯವಾದುದು ಯಾವುದೂ ಲಕ್ಷಣೆಯಿಂದಲೂ (Secondary meaning) ನಿರ್ದೇಶಿಸಲು ಸಿಕ್ಕುವುದಿಲ್ಲ! ಆದ್ದರಿಂದ ಅದು ಶಾಸ್ತ್ರಗಮ್ಯವಾಗಲಾರದು. ಆದ್ದರಿಂದ ಅದು ಅವಾಚ್ಯವೂ ಅಜ್ಞೇಯವೂ ಆದುದರಿಂದ ಶೂನ್ಯವೆಂದೇ ಹೇಳಬೇಕಾಗುವುದು. ಬ್ರಹ್ಮ-ಎಂದರೆ ತನ್ನನ್ನು ತಾನೇ ತಿಳಿದುಕೊಳ್ಳುವುದು ಎಂದೂ ಆ ವಾದಿಗಳು ಹೇಳುವುದಿಲ್ಲ. ಆ ರೀತಿಯ ಸ್ವಜ್ಞಾನವು ಕರ್ತೃಕರ್ಮ ವಿರೋಧವುಳ್ಳದ್ದು ಎಂದು ಅವರು ಹೇಳುತ್ತಾರೆ. ತನ್ನ ಸ್ವರೂಪಭೂತವಾದ ಅಥವಾ ಭಿನ್ನವಾದ ಜ್ಞೇಯ ಮತ್ತು ಜ್ಞಾತೃ ಇವಿಲ್ಲದೆ ಜ್ಞಾನವೆಂಬುದು ಯಾವ ಅನುಭವ ಗೋಚರವೂ ಅಲ್ಲ. ಜ್ಞಾತೃ ಜ್ಞೇಯಗಳಿಲ್ಲದಿದ್ದರೆ ಜ್ಞಾನವೂ ಶೂನ್ಯವೇ ಆಗುವುದು! ಆದುದರಿಂದ ಈ ಮತಕ್ಕೂ ಶೂನ್ಯವಾದಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಜ್ಞಾತೃಜ್ಞೇಯ ರಹಿತವಾದ ಜ್ಞಾನವು ಎಲ್ಲಿಯೂ ಉಪಲಬ್ಧವಿಲ್ಲ. ಮತ್ತು ಈಶ್ವರ ಭೇದವು (ಈಶ್ವರನಿಗೂ ಜಗತ್ತಿಗೂ ಇರುವ ಭೇದ) ಮತ್ತಾವ ಪ್ರಮಾಣದಿಂದಲೂ ಪ್ರಾಪ್ತವಲ್ಲದುದರಿಂದ ಶ್ರುತಿಗೆ ಅಭೇದ ತಾತ್ಪರ್ಯ ಹೇಳುವುದು ಯುಕ್ತವಲ್ಲ.

**ಮಹೋಪನಿಷತ್ತು** ಹೀಗೆ ತತ್ತ್ವನಿರೂಪಣೆ ಮಾಡುತ್ತದೆ :

"ಸರ್ವವೇದಗಳೂ ಮುಖ್ಯವಾಗಿ ಪ್ರವೃತ್ತವಾಗಿರುವುದು – ಸರ್ವೋತ್ತಮನೂ, ಸರ್ವದೋಷರಹಿತನೂ, ಅಶೇಷಗುಣಪೂರ್ಣನೂ ಉಳಿದುದೆಲ್ಲಕ್ಕಿಂತಲೂ ಭಿನ್ನನೂ ಆದ ಪರಮಾತ್ಮನನ್ನು ಅವನ ವೈಲಕ್ಷಣ್ಯದೊಡನೆ ತಿಳಿಸುವುದಕ್ಕಾಗಿ! ಅವು ಮತ್ತೇನನ್ನೂ ತಿಳಿಸುವುದಿಲ್ಲ!"

ಆದುದರಿಂದ ಎಲ್ಲಕ್ಕಿಂತಲೂ ಭಿನ್ನನೂ, ಎಲ್ಲಕ್ಕಿಂತಲೂ ವಿಶಿಷ್ಟನೂ ಆದ ಭಗವಾನ್ ನಾರಾಯಣನನ್ನು ಸದಾಗಮಗಳಿಂದಲೇ ತಿಳಿಯತಕ್ಕದು — [ಸದಾಗಮಗಳಿಂದಲೇ ನಾರಾಯಣನು ವಿಜ್ಞೇಯನು] — ಎಂಬುವ ವಿಷಯ-ತತ್ತ್ವ-ಸಿದ್ಧವಾಯಿತು.

## ೨. ಕ್ಷರಾಕ್ಷರ ಸಮತೀತ

ಬ್ರಹ್ಮದೇವರು, ರುದ್ರದೇವರು ಮತ್ತು ಇತರ ದೇವತೆಗಳು ಮತ್ತು ಅವರ ಶರೀರಗಳು ವಿನಾಶಿಯಾಗಿರುವುದರಿಂದ ಅವರು 'ಕ್ಷರ' ಪುರುಷರೆನ್ನಿಸುತ್ತಾರೆ. ಅವಿನಾಶಿಯಾದ ದೇಹ

ಪ್ರಳಯವಿಲ್ಲವಾದುದರಿಂದ ಶ್ರೀದೇವಿಯು (ಮಹಾಲಕ್ಷ್ಮಿ) 'ಅಕ್ಷರ' ಪುರುಷಳೆನಿಸುತ್ತಾಳೆ. ಶ್ರೀಹರಿಯು ಈ ಕ್ಷರ ಮತ್ತು ಅಕ್ಷರ ಪುರುಷರಿಗಿಂತ ಶ್ರೇಷ್ಠನು - ಉತ್ತಮನು. ಅವನು ಸ್ವಾತಂತ್ರ್ಯ, ಶಕ್ತಿ, ವಿಜ್ಞಾನ ಮತ್ತು ಸುಖ ಮೊದಲಾದ ಸರ್ವ ಗುಣಗಳಲ್ಲಿಯೂ ಅನಂತನು. ಈ ಕ್ಷರ ಅಕ್ಷರ ಪುರುಷರೆಲ್ಲ ಶ್ರೀಹರಿಗೆ ಯಾವಾಗಲೂ ವಶರು - ಅಧೀನರು. ಸರ್ವ ಕ್ಷರ ಪುರುಷರಿಗೂ ಶ್ರೀಹರಿಯು ತಾನೊಬ್ಬನೇ-ಸೃಷ್ಟಿ-ಸ್ಥಿತಿ-ಲಯ (ಕ್ಷಯ), ನಿಯಮನ, ಪ್ರಕಾಶ, ಆವೃತಿ (ಜ್ಞಾನಾವರಣ) ಮತ್ತು ಬಂಧನ—ಇವುಗಳ ಕರ್ತೃವಾಗಿದ್ದಾನೆ. ಸಾತ್ವಿಕ ಜೀವರಿಗೆ ಮೋಕ್ಷದಾತನು ಶ್ರೀಹರಿಯೇ. ಅಕ್ಷರ ಪುರುಷಳಾದ ರಮಾದೇವಿಗೆ ಶ್ರೀಹರಿಯು ಸೃಷ್ಟಿ-ಸ್ಥಿತಿ-ನಿಯಮನ-ಜ್ಞಾನ ಮತ್ತು ನಿತ್ಯಾನಂದಗಳನ್ನು ಉಂಟುಮಾಡತಕ್ಕವನು.

**ಪರಮ ಶ್ರುತಿಯು ಹೀಗೆ ಹೇಳಿದೆ:**

"ಹರಿಯೊಬ್ಬನೇ ಸರ್ವರಿಗೂ ಪ್ರವರ್ತಕನಾಗಿರುತ್ತಾನೆ. ಅವನ ಸೃಷ್ಟ್ಯಾದಿ ಕರ್ತೃತ್ವ ಬೇರೊಬ್ಬರು ಯಾರೂ ಇಲ್ಲ! ಅವನು ದೋಷ ಶೂನ್ಯನು."

**ಸ್ಕಾಂಧ ಪುರಾಣದಲ್ಲಿ ಇದೇ ವಿಷಯ ಬಂದಿದೆ:**

"ಬ್ರಹ್ಮ-ಶೇಷ-ಸುಪರ್ಣ-ಈಶ-ಶಕ್ರ-ಸೂರ್ಯ-ಗುಹ ಮೊದಲಾದವರು ಸರ್ವರೂ ಕ್ಷರರು. ಶ್ರೀ ಒಬ್ಬಳೇ ಅಕ್ಷರಳು. ಇವರೆಲ್ಲರಿಗೂ ಪರನಾದವನು ಶ್ರೀಹರಿ."

**ಶ್ರುತಿಗಳೂ ಕೂಡ ಇದೇ ವಿಷಯವನ್ನು ಹೀಗೆ ನಿರೂಪಿಸುತ್ತವೆ:**

(**ಮಹಾಲಕ್ಷ್ಮಿಯ ಮಾತು**) -"ಯಾರನ್ನು ಉಗ್ರನನ್ನಾಗಿ ಮಾಡಬೇಕೆಂದು ಅಪೇಕ್ಷಿಸುತ್ತೇನೆಯೋ, ಅವನನ್ನು ಉಗ್ರನನ್ನಾಗಿ ಮಾಡುತ್ತೇನೆ. ಯಾರನ್ನು ಬ್ರಹ್ಮನನ್ನಾಗಿ ಮಾಡಬೇಕೆಂದು ಅಪೇಕ್ಷಿಸುತ್ತೇನೆಯೋ ಅವನನ್ನು ಬ್ರಹ್ಮನನ್ನಾಗಿ ಮಾಡುತ್ತೇನೆ. ಯಾರನ್ನು ಮೇಧಾವಿಯಾದ ಋಷಿಯನ್ನು ಮಾಡಬೇಕೆಂದು ನನಗೆ ಇಚ್ಛೆ ಬರುವುದೋ, ಅವನನ್ನು ಹಾಗೆಯೇ ಮಾಡುತ್ತೇನೆ. ನಾನು ಹಿಂಸಕನೂ ಬ್ರಹ್ಮದ್ವಿಟುವೂ (ಚತುರ್ಮುಖ ಬ್ರಹ್ಮದ್ವೇಷಿ) ಆದ ರುದ್ರನನ್ನು ಹನನ ಮಾಡುವುದಕ್ಕಾಗಿ ಧನುಸ್ಸನ್ನು ವಿಸ್ತರಿಸುತ್ತೇನೆ. ನಾನು ಜನಗಳಿಗೆ ಹರ್ಷವನ್ನುಂಟು ಮಾಡುತ್ತೇನೆ. ಊರ್ಧ್ವ ಮತ್ತು ಅಧೋ ಲೋಕಗಳೇ ಮೊದಲಾದ ಸರ್ವ ಲೋಕಗಳನ್ನೂ ಧಾರಣಮಾಡುವುದಕ್ಕಾಗಿ ಅವುಗಳೊಳಗೆ ನಾನು ಪ್ರವೇಶಿಸಿದ್ದೇನೆ. ಈ ಜಗತ್ತಿನ ತಂದೆಯಾದ ಬ್ರಹ್ಮನನ್ನು ನಾನು ಸರ್ವೋತ್ಕೃಷ್ಟವಾಗಿ ಉತ್ಪತ್ತಿ ಮಾಡುತ್ತೇನೆ. . ."

"ಸಮುದ್ರದೊಳಗಿರುವ ಯಾವನನ್ನು ಜ್ಞಾನಿಗಳೂ ಕೂಡ ಕೊಂಚವೇ ತಿಳಿಯುತ್ತಾರೋ, ಯಾವ ಅವಿನಾಶಿಯೂ ಪರತತ್ತ್ವವೂ ಆದವನಲ್ಲಿ ಪ್ರಜೆಗಳು ಅಧೀನರಾಗಿರುವರೋ, ಜಗನ್ಮಾತೆಯಾದ ಲಕ್ಷ್ಮಿಯು ಯಾರಿಂದ ಉತ್ಪತ್ತಿ ಹೊಂದಿದಳೋ, ಯಾರು ಸ್ವವೀರ್ಯದಿಂದ ಲೋಕಗಳಲ್ಲಿ ವಿವಿಧ ಜೀವರನ್ನು ಸೃಷ್ಟಿಮಾಡಿದನೋ, ಔಷಧಿಗಳೊಡನೆ ಪುರುಷ - ಪಶು ಮೊದಲಾದ ಚರಾಚರ ಭೂತಗಳನ್ನು ಪ್ರೇರಣೆಗಾಗಿ ಯಾರು ಪ್ರವೇಶಿಸಿದರೂ, ಅವನಿಗಿಂತಲೂ ಅತಿಶಯವೂ ಸೂಕ್ಷ್ಮವೂ ಆದ ಬೇರೊಂದು ವಸ್ತು ಇಲ್ಲ. ಅದು ಉತ್ಕೃಷ್ಟಕ್ಕೂ ಉತ್ಕೃಷ್ಟ

ವಾದುದು, ಮಹಾ ಪರಿಮಾಣವುಳ್ಳ ವಸ್ತುವಿಗಿಂತಲೂ ಮಹಾ ಪರಿಮಾಣವುಳ್ಳದ್ದು. ಅದು ಏಕ; ಕೇವಲ ಅವ್ಯಕ್ತ–ಪೂರ್ಣ. ಪ್ರಕೃತಿ ಮತ್ತು ಅಜ್ಞಾನವನ್ನು ಅತಿಕ್ರಮಿಸಿಕೊಂಡೇ ಇದೆ ಆ ತತ್ತ್ವ. ಅದು ಶುದ್ಧ ಜ್ಞಾನಸ್ವರೂಪ. ಅದು ಜ್ಞಾನಪೂರ್ಣವಾದ ಕ್ರಿಯೆಯುಳ್ಳದು. ಆ ತತ್ತ್ವವು ಕವಿಗಳ ಮತದಲ್ಲಿ ಪರಮ ಬ್ರಹ್ಮ . . . "

[ – **ಮಹಾ ನಾರಾಯಣೀಯೋಪನಿಷತ್ತು** ]

" ಈ ಪ್ರಸಿದ್ಧನಾದ ದ್ಯೋತನಾದಿ ಗುಣವಿಶಿಷ್ಟನಾದ ಭಾಕ್ತಾಭಿಲಾಷಿತವನ್ನು ವರ್ಷಿಸುವ (ಭಕ್ತರ ಅಪೇಕ್ಷೆಗಳನ್ನು ಮಳೆಗರೆವ) ಸತ್ಯಕಾಮನಾದ ವಿಷ್ಣುವಿನ ಆರಾಧನೆಯಲ್ಲಿ ಅವನ ಪ್ರಸಾದವನ್ನು ಸಂಪಾದಿಸಿ ಅಹಂಕಾರಾಭಿಮಾನಿಯಾಗಿ ಜೀವರಿಗೆ ಬಂಧಕನಾದ ರುದ್ರನು ತನ್ನ ಮಹತ್ವವನ್ನು ಹೊಂದಿದನು. ಎಲೈ ಅಶ್ವಿನೀ ದೇವತೆಗಳೇ, ವಿಷ್ಣುವಿನ ಪ್ರಸಾದದಿಂದ ನೀವು ಸಮಸ್ತ ಭೋಗವನ್ನುಳ್ಳ ಪದವಿಯನ್ನು ಪೊಂದಿರುವಿರಿ . . . "

[ – **ಋಗ್ವೇದ** ]

"ಚಂದ್ರನು ಮನಸ್ಸಿನಿಂದ ಹುಟ್ಟಿದನು. ಸೂರ್ಯನು ಕಣ್ಣಿನಿಂದ ಹುಟ್ಟಿದನು. ಮುಖದಿಂದ ಇಂದ್ರನೂ, ಅಗ್ನಿಯೂ ಹುಟ್ಟಿದರು. ಪ್ರಾಣದಿಂದ ವಾಯುವು ಜನಿಸಿದನು . . ."

[ – **ಪುರುಷಸೂಕ್ತ** ]

" ನಾರಾಯಣನೊಬ್ಬನೇ ಇದ್ದನು. ಬ್ರಹ್ಮನಾಗಲೀ, ಈಶಾನನಾಗಲೀ, ಅಗ್ನಿಯಾಗಲೀ, ಸೋಮನಾಗಲೀ ಈ ದ್ಯಾವ ಪೃಥ್ವಿಗಳಾಗಲೀ [ಆಗ] ಇರಲಿಲ್ಲ . . . "

[ –**ಮಹೋಪನಿಷತ್ತು** ]

" ನಾರಾಯಣನೊಬ್ಬನೇ ಇದ್ದನು. ಬ್ರಹ್ಮನಾಗಲೀ ಶಂಕರನಾಗಲೀ ಇರಲಿಲ್ಲ. ಅವನು ಮುನಿಯಾಗಿ (ಮನನಶೀಲನಾಗಿ) ಆಲೋಚಿಸಿದನು. ಅನಂತರ ಅವನಿಂದ ವಾಯು, ಹಿರಣ್ಯಗರ್ಭ, ಅಗ್ನಿ, ಯಮ, ವರುಣ ಮತ್ತು ಇಂದ್ರ ಮೊದಲಾದವರೆಲ್ಲರೂ ಉತ್ಪನ್ನರಾದರು . . . " [ – ? ]

"ಇದೆಲ್ಲವೂ ಮೊದಲು ವಾಸುದೇವನೊಬ್ಬನೇ ಆಗಿದ್ದಿತು. ಆಗ ಬ್ರಹ್ಮನಾಗಲೀ ಶಂಕರನಾಗಲೀ, ಇಂದ್ರನಾಗಲೀ, ಸೂರ್ಯನಾಗಲೀ, ಗುಹ ಸೋಮರಾಗಲೀ, ವಿನಾಯಕನಾಗಲೀ ಇರಲಿಲ್ಲ . . . " [ – ? ]

"ಯಾರಿಗಿಂತ ಪರವಾದದು ಯಾವುದೂ ಇಲ್ಲವೋ ಮತ್ತು ಯಾರಿಗಿಂತ ಅಪರವಾದುದು ಇದೆಯೋ . . . " ಎಂಬುವಲ್ಲಿ ಅಪರವಾದ ವಸ್ತುಗಳು ಇವೆ ಎಂದು ಅರ್ಥವಾಗುತ್ತದೆ. ಹಾಗಿಲ್ಲದಿದ್ದರೆ "ಆದರಿಂದ ಇದೆಲ್ಲವೂ ಪೂರ್ಣ. ಅದಕ್ಕಿಂತಲೂ ಯಾವುದು ಉತ್ತಮವೋ ಅದು ಅರೂಪ ಮತ್ತು ಅನಾಮಯ" ಎಂಬುವ ವಾಕ್ಯಶೇಷಕ್ಕೆ ವಿರೋಧ ಬರುತ್ತದೆ. ಆದರಿಂದ **ಇದು** ಪೂರ್ಣ ಎಂದು ಯಾವ ಈಶ್ವರವ್ಯಾಪ್ತವಾದ ಜಗತ್ತನ್ನು ನಿರ್ದೇಶಿಸಿದೆಯೋ ಅದೇ **ಅದಕ್ಕಿಂತಲೂ** ಯಾವುದು ಉತ್ತಮವೋ ಎನ್ನುವಲ್ಲಿ 'ತತಃ' ಎನ್ನುವ ಪದದಿಂದ ಪರಾಮರ್ಶಿಸಲ್ಪಟ್ಟಿದೆ. ಹಾಗಿಲ್ಲದಿದ್ದರೆ ಅದಕ್ಕಿಂತಲೂ ಪರವಾದುದು ಯಾವುದೂ ಇಲ್ಲ ಎನ್ನುವ ಮಾತಿಗೆ ವಿರೋಧ ಬರುತ್ತದೆ." [ – ? ]

"ಸರ್ವನಾಮಗಳು ಯಾರನ್ನು ಮುಖ್ಯವೃತ್ತಿಯಿಂದ ಹೇಳುತ್ತವೆಯೋ ಅವನನ್ನು ಪರಮ-ವಿಷ್ಣು ಎಂದು ಶಾಸ್ತ್ರ ಹೇಳುತ್ತದೆ."

"ಸರ್ವ ವ್ಯತಿರಿಕ್ತನಾದ ಇವನನ್ನೇ ಸರ್ವನಾಮಗಳು ಹೇಳುತ್ತವೆ. ಸ್ವತಂತ್ರನೂ ಸದಾ ಏಕ ಸ್ವರೂಪನೂ ಆದವನು ಯಾರೋ ಅವನೇ ವಿಷ್ಣು ಮತ್ತು ಅವನೇ ಪರಮೋತ್ಕೃಷ್ಟ."

ಇವೇ ಮೊದಲಾದ **ಶ್ರುತಿ**ಗಳಿಂದ ಅನ್ಯನಾಮಗಳು **ಅವನನ್ನೇ** ಬೋಧಿಸುತ್ತವೆ–ಎಂದು ಸಿದ್ಧವಾಗುವುದು. ಬೇರೆ ಯಾವ ಚೇತನರ ವಿಷಯದಲ್ಲಿಯೂ ಸರ್ವೇಶ್ವರತ್ವವೇ ಮೊದಲಾದ ಮಹಿಮೆಯನ್ನು ಹೇಳಿಲ್ಲ. ಸರ್ವ ವೇದಗಳಲ್ಲಿಯೂ **ಇವನು** ದೋಷರಹಿತನು ಎಂದೇ ಹೇಳಿದೆ. ಆದಿಯಲ್ಲಿ ಇವನಿರಲಿಲ್ಲ ಎಂದು ಯಾವ ಶ್ರುತಿವಾಕ್ಯವೂ ಹೇಳಿಲ್ಲ. ಆದರೆ ಅನ್ಯ ಚೇತನರ ವಿಷಯದಲ್ಲಿ ಸರ್ವವೇದಗಳಲ್ಲಿಯೂ ಈ ಎರಡು ಮಾತು ಹೇಳಿದೆ:

೧. ಚೇತನರು ದೋಷಯುಕ್ತರು ಮತ್ತು

೨. ಸೃಷ್ಟಿಕಾಲದಲ್ಲಿ ಅವರು ಇರಲಿಲ್ಲ.

ಮಿಕ್ಕ ಯಾವ ದೇವತೆಗೂ ಸರ್ವ ನಾಮಗಳೂ ಅನ್ವಯಿಸುತ್ತವೆ ಎಂದು ಶ್ರುತಿ ಎಲ್ಲಿಯೂ ಹೇಳಿಲ್ಲ. ವಾಸುದೇವನಿಗೆ ಉತ್ಪತ್ತಿ ಎಂದರೆ ಕೇವಲ **ಪ್ರಾದುರ್ಭಾವವೇ** ಹೊರತು ಬೇರೆ ಅಲ್ಲ. ಬ್ರಹ್ಮನೇ ಮೊದಲಾದ ಇತರ ಚೇತನರಿಗಾದರೋ, ವಾಸುದೇವನ ಪ್ರೇರಣೆಯಿಂದ ಆಗುವ ಅವರವರ ದೇಹೋತ್ಪತ್ತಿಯೇ ಉತ್ಪತ್ತಿ.

"ಹರಿಯ ದೇಹವು ಅನಾದಿ ಮತ್ತು ನಿತ್ಯ. ಬ್ರಹ್ಮಾದಿ ಚೇತನರ ದೇಹಗಳು ಅನಿತ್ಯ. ಇತರರ ಉತ್ಪತ್ತಿಯು ಮುಖ್ಯೋತ್ಪತ್ತಿ (ಸತ್ಯವಾಗಿ ಅವರ ದೇಹಗಳಿಗೆ ಉತ್ಪತ್ತಿ ಉಂಟು) ಹರಿಯ ಉತ್ಪತ್ತಿ ಕೇವಲ ಪ್ರಾದುರ್ಭಾವ (ಅಭಿವ್ಯಕ್ತಿ)" ಎಂದು **ಪರಮಶ್ರುತಿ** ಹೇಳಿದೆ.

## ೩. ನಿರ್ದೋಷಾಶೇಷ ಸದ್ಗುಣ

"ಸರ್ವದೋಷ ವಿವರ್ಜಿತನೂ, ಸರ್ವಗುಣಗಳೇ ಸ್ವಮೂರ್ತಿಯಾಗುಳ್ಳವನೂ, ಸ್ವತಂತ್ರನೂ, ಸರ್ವವನ್ನೂ ಸ್ವವಶನಾಗುಳ್ಳವನೂ ಆದ ವಿಷ್ಣುವೇ ಪರಮನು" ಎಂದು **ಪರಮೋಪನಿಷತ್ತು** ಹೇಳುತ್ತದೆ.

ನಿತ್ಯನೂ, ಪೂರ್ಣನೂ, ಅಖಿಲಗುಣನಿಧಿಯೂ, ಸರ್ವದಾ ನಿರ್ದೋಷಿಯೂ, ಸ್ವತಂತ್ರನೂ ಜನ್ಮ ಮರಣಾದಿ ವರ್ಜಿತನೂ ಆದ ವಿಷ್ಣುವು ಪರನು.

**ಬ್ರಹ್ಮಾಂಡ ಪುರಾಣದಲ್ಲಿ** ಬ್ರಹ್ಮ – ನಾರದರ ಸಂವಾದ ಹೀಗಿದೆ:

**ನಾರದರು** ಹೇಳುತ್ತಾರೆ—

"ವಿಷ್ಣುವು ನಿರ್ದೋಷನಾಗಿದ್ದ ಪಕ್ಷದಲ್ಲಿ ಮನುಷ್ಯರಲ್ಲಿ ಹೇಗೆ ಹುಟ್ಟುತ್ತಾನೆ? ಚಿಂತೆ, ಶ್ರಮ, ವ್ರಣ, ಅಜ್ಞಾನ ಮತ್ತು ದುಃಖ ಉಳ್ಳವನಂತೆ ಏಕೆ ಕಾಣುತ್ತಾನೆ? ಎಲೈ ಬ್ರಹ್ಮನೆ,

ಈ ಸಂಶಯವು ನನ್ನ ಹೃದಯದಲ್ಲಿ ಶಲ್ಯದಂತೆ (ಮುಳ್ಳು) ನಾಟಿದೆ. ಇತರ ಮನುಷ್ಯರಿಂದ ಇದರ ನಿವಾರಣೆ ಅಶಕ್ಯ. ನೀನು ನಿನ್ನ ಸೂಕ್ತಿ ಶಕ್ತಿಯಿಂದ ಈ ಶಲ್ಯವನ್ನು ಕೀಳಬೇಕು"!

**ಬ್ರಹ್ಮದೇವರು** ಉತ್ತರ ಕೊಡುತ್ತಾರೆ—

"ವಿಷ್ಣುವಿನ ದೇಹವು ಸ್ತ್ರೀಪುಂ ರೂಪದಲ್ಲಿಯೂ ಮತ್ತು ಮಲಯುಕ್ತವಾಗಿಯೂ ಇರುವುದಿಲ್ಲ. ಅದು ಹುಟ್ಟುವುದಿಲ್ಲ. ಆತನು ನಿತ್ಯವೂ ನಿರ್ದೋಷ ಚೈತನ್ಯ ಸುಖಾತ್ಮಕವೂ ಆಗಿರುವ ತನ್ನದೇ ಆದ ದೇಹವನ್ನು ಪ್ರಕಾಶಪಡಿಸುತ್ತಾನೆ. ಈ ರೀತಿಯ ಪ್ರಕಾಶಪಡಿಸೋಣವೇ ವಿಷ್ಣುವಿನ ಜನನ; ಬೇರೆಯಲ್ಲ! ಹೀಗಿದ್ದೂ, ಅವನು ಶುದ್ಧ ಸದ್ಗುಣಪೂರ್ಣನಾಗಿದ್ದೂ, ಅಸುರಮೋಹಕ್ಕಾಗಿ ಇತರರಿಗೆ ದುಃಖ ಅಜ್ಞಾನ ಶ್ರಮವುಳ್ಳವನಂತೆ ಕೆಲ ಕೆಲವು ಸಂದರ್ಭಗಳಲ್ಲಿ ತೋರುತ್ತಾನೆ. ಸ್ವತಂತ್ರನೂ ಅಚಿಂತ್ಯ ಸದ್ಗುಣನೂ ಆದ ಅವನೆಲ್ಲಿ-ವ್ರಣಾದಿಗಳು ಮತ್ತು ಅಜ್ಞಾನ ಎಲ್ಲಿ? ಅಜನಾದ ಶ್ರೀಹರಿಯು ಅಸುರರಿಗೆ ಅತ್ಯಂತ ತಮಃಪ್ರಾಪ್ತಿಯಾಗಲೆಂದೂ ಮತ್ತು ಇತರರಿಗೆ ಮೋಕ್ಷವಿಳಂಬವಾಗಲೆಂದೂ ಅಜ್ಞಾನ ಮತ್ತು ವ್ರಣಾದಿಗಳನ್ನೂ ಅಭಿನಯಿಸುತ್ತಾನೆ. ಈ ಅಸತ್ಯ ದರ್ಶನ ದೋಷದಿಂದ ದುರ್ಜನರು ಮುಕ್ತಿದೂರರಾಗುತ್ತಾರೆ-ತಮಸ್ಸನ್ನೂ ಹೊಂದುತ್ತಾರೆ. ಆದುದರಿಂದ ವಿಷ್ಣುವು ದೋಷ ವಿವರ್ಜಿತನೂ ಕೇವಲ ಪ್ರಾದುರ್ಭಾವರೂಪವಾದ ಜನ್ಮವುಳ್ಳವನೂ ಎಂದೂ ಖಂಡಿತವಾಗಿ ತಿಳಿಯಬೇಕು."

ವಿಷ್ಣುವಿನ ಗುಣಕ್ರಿಯಾದಿಗಳು ಅವನ ಸ್ವರೂಪವೇ ಹೊರತು ಬೇರೆಯಲ್ಲ. ಅವುಗಳಲ್ಲಿ ಪರಸ್ಪರ ಯಾವ ಭೇದವೂ ಯಾವಾಗಲೂ ಇಲ್ಲ. ಆ ಸ್ವರೂಪದಲ್ಲಿಯೇ ವಿಶೇಷವಿದೆ. ಸ್ವರೂಪ ಮತ್ತು ಸ್ವರೂಪತ್ವ ಎಂಬುದು ವಿಶೇಷವೆಂಬ ತತ್ತ್ವದ ಮೂಲಕ ಹೇಗಿದೆಯೋ, ಗುಣಕ್ರಿಯಾದಿಗಳೂ ಸ್ವರೂಪವೂ ಹಾಗೆಯೇ ವಿಶೇಷದ್ವಾರಾ ಒಂದೇ ಆಗಿವೆ.

"ಭೇದವು ಇಲ್ಲದೇ ಇದ್ದರೂ ಸ್ವರೂಪದಿಂದಲೇ ವಿಶೇಷ ತತ್ತ್ವದ ಮೂಲಕ ಸರ್ವವಿಧವಾದ ಭೇದ ವ್ಯವಹಾರವೂ ಆಗುವುದು." **-ಪರಮೋಪನಿಷತ್ತು.**

"ಅಭಿನ್ನತ್ವ ಮತ್ತು ಅಭೇದ ಹೇಗೆ ಅದ್ವೈತಿಯ ಮತದಲ್ಲಿ ಪರಸ್ಪರ ಭೇದ ವಿವರ್ಜಿತವೋ ಮತ್ತು ಅವು ಹೇಗೆ ಪೃಥಕ್ ವ್ಯವಹಾರಕ್ಕೆ ಆಸ್ಪದವಾಗಿದೆಯೋ ಹಾಗೆಯೇ ಶ್ರೀಹರಿಯ ಸರ್ವಗುಣಗಳೂ ಅಭಿನ್ನವಾಗಿದ್ದರೂ ಭೇದವ್ಯವಹಾರಕ್ಕೆ ಆಧಾರವಾಗಿವೆ. ಅಭೇದಕ್ಕೂ ಅಭಿನ್ನವಾದ ಧರ್ಮಿಗೂ ಒಂದುವೇಳೆ ಭೇದವಿದ್ದ ಪಕ್ಷದಲ್ಲಿ ಹಾಗೆಯೇ ಭೇದಕ್ಕೂ ಅದಕ್ಕೆ ಆಶ್ರಯವಾದ ಧರ್ಮಿಗೂ ಭೇದವಿದ್ದಲ್ಲಿ ಅನವಸ್ಥಾ ದೋಷವುಂಟಾಗುವುದು. ವಿಶೇಷಣ ವಿಶೇಷ್ಯಬುದ್ಧಿಯೂ ಕೂಡ ವಿಶೇಷ್ಯ ವಿಶೇಷಣಗಳ ಮಧ್ಯೆ ಇರಬೇಕಾದ ಮೂಲ ಸಂಬಂಧದ ತಿಳುವಳಿಕೆಯಿಲ್ಲದಿದ್ದರೆ, ಉಂಟಾಗುವುದಿಲ್ಲ. ಆದ್ದರಿಂದ ಒಂದೇ ಸ್ವರೂಪವು ಅನಂತ ಭಿನ್ನ ಭಿನ್ನ ವ್ಯವಹಾರಗಳಿಗೆ ಯೋಗ್ಯವಾಗುತ್ತದೆ. ಇದು ವಿಶೇಷ ಎಂಬುವ ತತ್ತ್ವದ ಮೂಲಕ ಸಾಧ್ಯವಾಗುತ್ತದೆ. ಹರಿಯ ಅತರ್ಕ್ಯ ಶಕ್ತಿಯಿಂದ ಇವೆಲ್ಲಾ ನಿರ್ವಹಣೆಯಾಗುವುದು. ವಿಶೇಷವೆಂದರೂ ವಸ್ತುವಿನ ಸ್ವರೂಪವೇ. ಅದು ಸ್ವನಿರ್ವಾಹಕ ಮತ್ತು ಪರನಿರ್ವಾಹಕ" ಎಂದು **ಬ್ರಹ್ಮತರ್ಕ**ದಲ್ಲಿ ಹೇಳಿದೆ.

**ಶ್ರುತಿ**ಗಳೂ ಈ ವಿಷಯವನ್ನು ಹೇಳಿವೆ:

"(ಬ್ರಹ್ಮವು) ಏಕವೂ ಅದ್ವಿತೀಯವೂ ಆಗಿದೆ." **-ಛಾಂದೋಗ್ಯ.**

"ಇಲ್ಲಿ ನಾನಾ ವಸ್ತುಗಳಿಲ್ಲ." –**ಬೃಹದಾರಣ್ಯಕ.**

"ಇಲ್ಲಿ ನಾನಾತ್ವವನ್ನು ನೋಡುವವನು ಮರಣದಿಂದ ಮರಣಕ್ಕೆ ಹೋಗುತ್ತಾನೆ." –**ಕಠ?**

"ಪರ್ವತ ಶಿಖರಗಳಲ್ಲಿ ಬಿದ್ದ ಮಳೆಯ ನೀರು ಬೆಟ್ಟದ ಬುಡಕ್ಕೆ ಹೇಗೆ ಧಾವಿಸುತ್ತದೆಯೋ, ಹಾಗೆಯೇ ಭಗವಂತನ ಧರ್ಮಗಳನ್ನು ಪೃಥಕ್ಕಾಗಿ (ಬೇರೆಬೇರೆಯಾಗಿ) ೨೫ ನೋಡುವವನು ಆ ನೀರಿನಂತೆ ಅಧೋಭಾಗಕ್ಕೆ ಧಾವಿಸುತ್ತಾನೆ." –**ಕಠ.**

**ಬ್ರಹ್ಮತರ್ಕ**ದಲ್ಲಿ ಇದೇ ವಿಷಯವು ಹೀಗೆ ನಿರೂಪಿತವಾಗಿದೆ:

"ದೇಶವು ಸರ್ವತ್ರ ಇದೆ, ಪುರುಷನು ಸ್ವತಂತ್ರ, ಕಾಲವು ನಿತ್ಯ ಎಂಬುವ ವಾಕ್ಯಗಳಲ್ಲಿ ಸ್ವಸಂಬಂಧದಿಂದ ಹೇಗೆ ಒಂದೇ ಸ್ವರೂಪವು ಗುಣರೂಪದಿಂದ ವ್ಯವಹರಿಸಲ್ಪಡುತ್ತದೆಯೋ, ಹಾಗೆಯೇ ವಿಷ್ಣುವಿಗೆ ಸ್ವಯಮೇವ ಗುಣಿತ್ವವೂ ಗುಣಭೋಕ್ತೃತ್ವವೂ ಸಲ್ಲುತ್ತದೆ."

**ಪರಮಶ್ರುತಿ**ಯು ಹೀಗೆ ಹೇಳುತ್ತದೆ:

"ವಿಷ್ಣು ಸರ್ವಗುಣ ಪರಿಪೂರ್ಣನೆಂದು ತಿಳಿದು ಸಂಸಾರ ವರ್ಜಿತನಾಗಿ ಜೀವನು ನಿರ್ದುಃಖಪೂರಿತವಾದ ಆನಂದವನ್ನು ಭೋಗಿಸುತ್ತ ವಿಷ್ಣುವಿನ ಸಮೀಪದಲ್ಲಿ ಮೋದಿಸುತ್ತಾನೆ. ವಿಷ್ಣುವು ಮುಕ್ತರಿಗೆ ಆಶ್ರಯನು. ಆತನು ಅವರಿಗಿಂತಲೂ ಅಧಿಕ – ಅವನೇ ಅವರ ಅಧಿಪತಿ. ಮುಕ್ತಜೀವರೆಲ್ಲರೂ ವಿಷ್ಣುವಶರು. ವಿಷ್ಣು ಸರ್ವದಾ ಈಶ್ವರನು."

**ಬೇರೆ ಶ್ರುತಿ**ಗಳೂ ಇದನ್ನು ಹೇಳಿವೆ:

"ಮುಕ್ತಸಮುದಾಯಕ್ಕೆ ಪರಮಾತ್ಮನು ಸೇತುವಿನಂತೆ ಆಶ್ರಯಸ್ವರೂಪನು." [–?]

"ಸರ್ವಜ್ಞನಾದ ಬ್ರಹ್ಮನೊಡನೆ ಮುಕ್ತನು ಸರ್ವ ಆಶಯಗಳನ್ನು ಹೊಂದಿ ತೃಪ್ತಿಯಿಂದಿರುತ್ತಾನೆ." –**ತೈತ್ತಿರೀಯ.**

"ನೃಪರಿಂದ ಮೊದಲುಗೊಂಡು ಶತಧೃತಿ (ಇಂದ್ರ) ಯವರೆಗೆ, ಮುಕ್ತಿಗೆ ಹೋಗುವವರೆಲ್ಲರೂ, ಸರ್ವಗುಣಗಳಲ್ಲಿಯೂ ಕ್ರಮವಾಗಿ ಉತ್ತರೋತ್ತರ ಶತಗುಣರಾಗಿರುವರು. ಅಂತೆಯೇ ಆನಂದವನ್ನೂ ಹೆಚ್ಚುಹೆಚ್ಚಾಗಿ ಹೊಂದುವರು–ಎಂದು ಶ್ರುತಿಯು ಹೇಳುತ್ತದೆ." –**ಪದ್ಮಪುರಾಣ.**

ಆದುದರಿಂದ ಶ್ರೀಮನ್ನಾರಾಯಣನು ನಿಶ್ಶೇಷದೋಷ ವರ್ಜಿತನೂ, ಪೂರ್ಣನೂ, ಅನಂತಗುಣನೂ ಎಂಬುದು ಸಿದ್ಧವಾಯಿತು.

ಕ್ರೀಡಾದಿ ವಿಶಿಷ್ಟರಾದ ಯಾವ ವಾಯುದೇವರಿಗೆ [**ಬಳಿತ್ಥ ಮೊದಲಾದ**] ವೇದವಾಕ್ಯಗಳು ದಿವ್ಯರೂಪಗಳನ್ನು ಹೇಳಿವೆಯೋ ಆ ವಾಯುದೇವರ ಮಧ್ವಮುನಿರೂಪದಿಂದಲೇ ಈ ಕೇವಲ ತತ್ತ್ವಪೂರಿತವಾದ ಸದ್ಗ್ರಂಥವು ರಚಿತವಾಯಿತು. ಆ ವಾಯುದೇವರ ಮೂಲರೂಪ

---

೨೫. ಧರ್ಮಗಳು ಧರ್ಮಿಯಿಂದ ಭಿನ್ನವೆಂದಾಗಲೀ ಇಲ್ಲವೇ ತಮ್ಮಲ್ಲಿಯೇ ಪರಸ್ಪರ ಭಿನ್ನವೆಂದಾಗಲೀ ತಿಳಿಯುವವರು.

ಅಧಿಕ ಬಲ ಮತ್ತು ಜ್ಞಾನ ಉಳ್ಳುದು; ಅಲ್ಲದೆ ಜಗದ್ಭರಣಗಮನ ಗುಣಗಳನ್ನು ಹೊಂದಿರುವಂತಹುದು. ಪೂಜ್ಯವೂ ಅಹುದು. ಭಗವಂತನ ಪ್ರೇರಣೆಯಿಂದ ವಾಯುದೇವರೇ ಮೂರು ಅವತಾರಗಳನ್ನು ಮಾಡಿದರು. ಮೂರರಲ್ಲಿ ಮೊದಲನೆಯದು – ಶ್ರೀರಾಮಚಂದ್ರನ ಮಾತುಗಳನ್ನು ಸೀತಾ ಸಮೀಪಕ್ಕೆ ಒಯ್ದ ಹನುಮಂತಾವತಾರ. ಎರಡನೆಯ ಭೀಮಾವತಾರವೇ ಕೌರವರ ಸಮಸ್ತ ಸೈನ್ಯವನ್ನೂ ಸದೆಬಡಿಯಿತು. ಆನಂದರೂಪನಾದ ಶ್ರೀಹರಿಯನ್ನು ಪ್ರತಿಪಾದಿಸುವ ಶಾಸ್ತ್ರ ನಿರ್ಮಾಣ ಮಾಡಿದ ಮೂರನೆಯದೇ ಮಧ್ವಾವತಾರವು! ೨೬

ಸರ್ವಸ್ವತಂತ್ರನೂ, ಸರ್ವ ನಿಯಾಮಕನೂ, ದೋಷ ಸಂಪರ್ಕ ಲವಲೇಶವೂ ಇಲ್ಲದಿರುವವನೂ, ಸಮಸ್ತ ಸುಗುಣಸ್ವರೂಪಿಯೂ, ನನಗೆ ಪ್ರಿಯತಮನೂ, ಜ್ಞಾನ ಆನಂದಾದಿ ಸದ್ಗುಣ ಪರಿಪೂರ್ಣನೂ ಆದ ನಾರಾಯಣನಿಗೆ ನಮಸ್ಕರಿಸುವೆನು.೨೭

ಶ್ರೀಮದಾನಂದತೀರ್ಥವಿರಚಿತ ಶ್ರೀಮದ್ವಿಷ್ಣುತತ್ತ್ವವಿನಿರ್ಣಯ ಕೃತಿಯ
ಕನ್ನಡ ಅನುವಾದ **ತತ್ತ್ವನಿರ್ಣಯ** ಮುಗಿಯಿತು.

"ಶ್ರೀ ಕೃಷ್ಣಾರ್ಪಣಮಸ್ತು"

---

೨೬. ಯಸ್ಯತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ ।
ಬಟ್ ತದ್ದರ್ಶನಮಿತ್ಥಮೇವನಿಹಿತಂ ದೇವಸ್ಯಭರ್ಗೋಮಹತ್ ।
ವಾಯೋ ರಾಮ ವಚೋನಯಂ ಪ್ರಥಮಕಂ ಪೃಕ್ಷೋದ್ವಿತೀಯಂ ।
ವಪುರ್ಮಧ್ವೋಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥

೨೭. ಸ್ವತಂತ್ರಾಯಾಖಿಲೇಶಾಯ ನಿರ್ದೋಷಗುಣರೂಪಿಣೇ ।
ಪ್ರೇಯಸೇಮೇ ಸುಪೂರ್ಣಾಯ ನಮೋ ನಾರಾಯಣಾಯತೇ ॥

# ಶ್ರೀ ವಿಜಯದಾಸರು ಮತ್ತು ಅವರ ಕೃತಿಗಳು*

ಲೇಖಕರು : ಶ್ರೀ ಎನ್. ಗೋಪಾಲಕೃಷ್ಣ ಉಡುಪ

(೧೯೬೩ರ ಡಿಸೆಂಬರ್ ತಿಂಗಳ ಸಂಚಿಕೆಯಿಂದ ಮುಂದುವರಿದುದು)

ಮನಸ್ಸು ಚಂಚಲವಾದುದು. 'ದುರುಳಮನ, ಹಾರಿ ಹಾರುವ, ಹರಿದೋಡುವ ಮನಸ್ಸು ನಿಲಿಸಲಾರಳವಲ್ಲ' ವೆಂದ ದಾಸರು ಶ್ರೀ ಹರಿಯನ್ನು ಮರೆತ ಮನಕ್ಕೆ ಎಚ್ಚರವೀಯುತ್ತಾರೆ.

ಯಾಕೆ ಜೀವವೆ ಶ್ರೀಕಾಂತನ ಮರೆವಿ ವಿವೇಕವೆ ನಗೆ ಇಂದು ||
ಜೋಕೆಯಿಂದಲಿ ನಿನ್ನ ಸಾಕುವ ಶ್ರೀಪತಿಯು ಬೇಕಾದ ವರವೀವ ಭಕ್ತವತ್ಸಲ ಹರಿಯು || ಅ.ಪ. ||

ಲೇಸಾದರು ವಿಷಯವಾಸನೆಯು ಬಿಡಲೊಲ್ಲಿ ಏಸು ಜನುಮಗಳಾದರೂ |
ಕಾಸುಬಾರದ ಸಂಸಾರದಿ ತೊಳಲುವಿ ಹೇಸಿಕಿಲ್ಲವೆ ನಿನಗೆ |
ಈ ಶರೀರವು ಎನ್ನದೆಂದು ತಿಳಿದು ನೀ ಸೂಸಿಲಿ ಇರುವೆ ಬಿಡದೆ |
ದೋಷರಹಿತ ಶ್ರೀನಿವಾಸನ ಸ್ತುತಿಸಿನೀ ದೋಷವ ಕಳೆದೆನ್ನ ಪೋಷಿಸೆನ್ನದೆಲೇ || ೧ ||

ಸತಿ ಸುತರನು ಹ್ಯಾಂಗೆ ಸಾಕೇನೆಂದು ವೃಥಾ | ಅತಿಚಿಂತೆ ನಿನಗ್ಯಾತಕೋ |
ಕ್ಷಿತಿಪತಿ ಲೋಕವನೆಲ್ಲ ಪೊರೆವಂದದಿ ಗತಿ ನೀನವರಿಗೇನೊ |
ಗತಿ ನಿನಗಾಗುವ ಹಿತಚಿಂತನೆ ಮಾಡೊ ಮತಿಹೀನನಾಗದೆಲೆ |
ರತಿಪತಿಪಿತ ಲಕ್ಷ್ಮೀಪತಿ ನೀನೆಗತಿಯೆಂದು ಪ್ರತಿಪ್ರತಿಕ್ಷಣ ಹರಿಕಥೆಯ ಕೇಳದಲೆ || ೨ ||

ಹೊಟ್ಟೆಗೋಸುಗ ಕ್ರಿಯಾಭ್ರಷ್ಟರಸ್ತುತಿಸಿ ನೀ ಕಷ್ಟಪಡುವುದ್ಯಾತಕೊ |
ಪುಟ್ಟಿಸಿದವ ಗೇಣುಹೊಟ್ಟೆಗೆ ಕೊಡನೇನು ಸೃಷ್ಟ್ಯಾದೃಷ್ಟ ಕರ್ತನು |
ಕೆಟ್ಟುಹೋಗದೆ ನೀನು ಶಿಷ್ಟರಸೇವಿಸೊ ದುಷ್ಟಗುಣಗಳಳಿಯೊ |
ಎಷ್ಟು ಹೇಳಲಿ ಮನೋಭೀಷ್ಟ ಪೂರೈಸುವ ಸೃಷ್ಟೀಶ ಗುರುವಿಜಯ ವಿಠ್ಠಲನ ನೆರೆನಂಬೊ || ೩ ||[೨೩]

ಕ್ಷಣಿಕವಾದ ದೇಹದ ಮೇಲಿನ ಅಭಿಮಾನ, ಜೀವನದ ಪ್ರಶ್ನೆ, ಸಂಸಾರದ ಮೋಹ, ಇವುಗಳನ್ನೆಲ್ಲ ತೊರೆದು ಸುಜನರ ಸೇವೆಮಾಡುತ್ತಾ ಏಕನಿಷ್ಠೆಯಿಂದ ಪರಮಾತ್ಮನ ಮೊರೆ ಹೊಗು ಎಂದು ನಿರ್ದೇಶಿಸುತ್ತಾರೆ. ಈ ಜೀವ ಏಕೆ ಈ ಕರ್ಮಭೂಮಿಯಲ್ಲಿ ಉದಿಸಿತು ಎಂದು ಚಿಂತಿಸುತ್ತಾರೆ.

ಯಾಕೆಬಂದಿ ಜೀವ ಯಾಕೆಬಂದಿ | ಲೋಕವ ಅನುಭವಬೇಕಾಯಿತೆ ನಿನಗೆ |
ಮೇರುಪರ್ವತದಲ್ಲಿ ವಾರಣವಂತನಾಗಿ | ಮಾರಮಣನ ಪಾದ ಆರಾಧನೆಯ ಬಿಟ್ಟು ||

* ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸಿದ್ದ ಶ್ರೀ ಅಸುಂಡಿ ಹುದ್ದಾರ ಕೃಷ್ಣರಾವ್ ಸ್ಮಾರಕ ಪ್ರಬಂಧ ಸ್ಪರ್ಧೆಯಲ್ಲಿ ಬಹುಮಾನ ಪಡೆದ ಲೇಖನ.

[೨೩] ಹರಿಭಕ್ತಿಸುಧೆ. ಪು. ೮೩.

ಉಣ್ಣು ಉಣ್ಣು ಉಣ್ಣು ಉಣ್ಣು ಮತ್ತೆ ಉಣ್ಣು । ಹೆಣ್ಣು ಹೊನ್ನು ಮಣ್ಣು ನಿನ್ನದೆಂತೆಂಬಿ ॥
ಆದದ್ದೆಲ್ಲ ಆಯಿತು ಹೋದಮಾತುಗಳ್ಯಾಕೆ । ಶ್ರೀದವಿಜಯ ವಿಠ್ಠಲನ್ನ ಆದರದಿ ಸ್ಮರಿಸುತಿರು ॥ ೩ ॥[೨೬]

ಈ ಲೋಕದಲ್ಲಿ ಹುಟ್ಟಿದ ತಪ್ಪಿಗೆ ಶ್ರೀಹರಿಯಲ್ಲಿ ಮುಂದೆ ಈ ಜಗದಲ್ಲಿ ಜನ್ಮವನ್ನು ನೀಡದಿರೆಂದು ಪ್ರಾರ್ಥಿಸುತ್ತಾ ಜನನದ ಜೀವನದ ಬವಣೆಗಳನ್ನು ವಿವರಿಸುತ್ತಾರೆ.

ಜನಿಸಲಾರೆನು ಜಗದೊಳಗೆ ಹರಿಯೆ । ಕನಸಿನೊಳುನೆನೆಯೆ ಕಂಪನವಾಗುತಿದೆ ಮನಕೆ ॥
ವಾರಿಮಂಡಲ ವೃಷ್ಟಿಧಾರೆ ಧಾರುಣಿ ಜನಕ । ದ್ವಾರದಿಂ ಸರಿದುಪೋಗಿ, ಸಾಗಿ ।
ಜಾರಿಜನನೀ ಜಠರ ನಾರುವಾ ದುರ್ಗಂಧ । ಸೇರಿ ಬೊಬ್ಬುಳಿಯತೆರದಿ, ಭರದಿ ।
ವಾರವಾರಕೆ ಬೆಳೆದು ತಾರಿ ತಗಲಿ ಬಳಲಿ । ಶಾರೀರವನ್ನೆ ಪೊತ್ತು, ತೆತ್ತು ।
ಖಾರ ಕಟುಲವಣಾದಿ ಘೋರತರ ಮಹಕ್ಲೇಶ । ವಾರಿಧಿಯೊಳಗೆ ಮುಳುಗಿ ಮರುಗಿ, ಸೊರಗಿ ॥ ೧ ॥

ಲೇಶಾವಕಾಶವಿಲ್ಲದ ದೇಶದೊಳುಸನ್ನಿ । ವಾಸ ಉಲ್ಬಣದೊಳಿದ್ದು ಕುದ್ದು ।
ಘಾಸಿಯಲಿ ಪರಿತಾಪ ಸೂಸಲು ಹಾಹಾ ಎಂಬ । ಘೋಷಧ್ವನಿಯಿಂದ ಬೆದರಿ, ಅದರಿ ।
ರೋಷವಾಗಿದ್ದ ಕ್ರಿಮಿರಾಶಿ ಮುಖಕಾಟದಿಂ । ಏಸುಬಗೆಯಿಂದ ನೊಂದು, ಬೆಂದು ।
ಶ್ವಾಸಬಿಡುವುದಕೆ ವ್ಯತ್ಯಾಸವಾಹುದು ಮುಂದೆ । ಮೋಸಗೊಂಡು ಮತಿಗೆಟ್ಟು ಬೇಸರಿಕೆ ಅಕಟಕಟಾ ॥ ೨ ॥

ಜಾಣುಮಧ್ಯದಲಿ ಶಿರಗೋಣುತೂರಿಸಿಕೊಂಡು । ಮಾಣದಲೆ ಬಿಕ್ಕಿಬಿಕ್ಕಿ, ಸಿಕ್ಕಿ ।
ಏನೆಂಬ ಮಸೆದುಕ್ಕಿನ ಬಾಣಪೆಟ್ಟನಸಮ । ಬೇನೆಯಿಂದಧಿಕವಾಗೆ, ಮೈಗೆ ।
ಮೇಣು ಕೈಕಾಲುಗಳು ಕಾಣಿಕಾ ಕಾಲವಗ । ಲಾನುಚರಿಸಲಾದೆನೊ ಇನ್ನೇನೊ ।
ಗಾಣ ತಿರುಗಿದಂತೆ ಗೇಣು ಬಯಲೊಳಗೆ ಈ । ಆನನ ಮೇಲಡಿಯಾಗಿ ಬಂದೆ, ನೊಂದೆ ॥ ೩ ॥

ಸೂತಿಕಾ ಮರುತ ಬೀಸಿದಾತುರಕೆ ಬೆಸಸುವ । ಯಾತನಗೆ ಕಾಣೆಲೆಕ್ಕ, ದುಃಖ ।
ಗಾತುರವು ಕಿರಿದಾಗಿ ಪೋತಭಾವವನಹಿಸಿ । ಭೂತಳಕ್ಕೆ ಉಗ್ಗಿ, ಬಿದ್ದು ಎದ್ದು ।
ಶೀತೋಷ್ಣ ಮಲರೋಗ ಭೀತಿಲಾಲನೆಯಿಂದ । ಮಾತೆಯಾ ಮೊಲೆಯನುಂಡು, ಉಂಡು ।
ಆ ತರುವಾಯ ಉಪನೀತ ವಿವಹಗಳಲ್ಲಿ । ಖ್ಯಾತನಾಗಿ ವಿಷಯವ್ರಾತಕ್ಕೆಕೊಂಡೆನಯ್ಯ, ಜೀಯಾ ॥ ೪ ॥

ಯೌವನದಿ ಚತುರ್ವಿಂಶತಿ ತತ್ತ್ವಜ್ಞಾನವ ಜರಿದು । ಯುವತಿಯರ ರೂಪಲಾವಣ್ಯ ನೋಡಿ, ಬಾಡಿ ।
ನೆವನೆವದಿ ಭೋಗಗಳ ಸವಿಸವಿದಪೇಕ್ಷಿಸಿ । ಭವನ ಭವನವನು ಪೊಕ್ಕು, ಸೊಕ್ಕು ।
ಅವರಿವರ ಜಾತಿ ಎನ್ನದೆ ಮಾತುಗಳನಾಡಿ । ದಿವರಾತ್ರಿಯಲಿ ಹೊರಳಿ, ಉರುಳಿ ।
ಕವಿಜನರ ಧಿಕ್ಕರಿಸಿ ಕೋಣನಂತೆ ಸದಾ । ಅವಧಿಯಿಲ್ಲದೆ ಕಾಲಕಳೆದೆ, ಉಳಿದೆ ॥ ೫ ॥

ಹೆಂಡ್ರುಮಕ್ಕಳಿಗಾಗಿ ತನ್ನ ಹಿತವನೆ ಮರೆತು । ಕಂಡಕಂಡವರ ಕಾಡಿ, ಬೇಡಿ ।
ಉಂಡುಟ್ಟು ಸುಖಪಟ್ಟು ಪಾರತ್ರಯವ ಮರೆದು । ಕೊಂಡೆಯಲಿ ನಿಪುಣನಾಗಿ, ತೂಗಿ ।
ಮಂಡೆಯನು ಬಲಿತಪಶುವಿನಂತೆ ಮದವೇರಿ । ಚಂಡವೃತ್ತಿಯಲಿ ನಡೆದು, ನುಡಿದು ।
ಒಂದು ಮಾತೇನು ಈಜರೆ ನರೆಬಂದೆನ್ನ । ಲಂಡತನ ಪೋಗದಕಟಾ, ಉಂಟೆ ವಿಕಟ ॥ ೬ ॥

ನಾನಾಯೋನಿಗಳಲ್ಲಿ ಬರಲಾರೆ ಬರಲಾರೆ । ನಾನು ಪೇಳುವುದು ಏನೊ ಇನ್ನೇನೊ ।
ನೀನೋಡದಿರೆ ಅನ್ಯಕಾವ ದೈವರಕಾಣೆ । ಮಾನಸದೊಳಗೆ ಒಮ್ಮೆ ಇಮ್ಮೆ ।

---

[೨೬] ಹರಿಭಕ್ತಿಸುಧೆ. ಪು ೩೪.

ದೀನರಕ್ಷಕ ಬಿರುದು ಅನವರತ ನಿನ್ನದು। ಎಣಿಸದಿರು ಎನ್ನದೋಷ, ಲೇಶ।
ಶ್ರೀನಾಥ ವಿಜಯ ವಿಠ್ಠಲರೇಯ ನೀನೊಲಿದು। ಧ್ಯಾನದಲಿ ಬಾರೊ, ನಿಜಮೂರುತಿಯ ತೋರೊ ॥ ೭ ॥[25]

ಎಂದು ಪರಮಾತ್ಮನಲ್ಲಿ ಮೊರೆಹೊಗುತ್ತಾರೆ.

ಜೀವನದ ಜಂಜಾಟದಲ್ಲಿ ತೊಳಲಿ ಬಳಲುತ್ತಿರುವ ಮನಕ್ಕೆ ಸಮಾಧಾನ ಹೇಳುತ್ತಾರೆ :

"ವ್ಯಾಕುಲವೇನೊ ಮನಕೆ ಯಾಕೆ ನಿನಗೆ ಚಿಂತೆ।
ಸಾಕುವದಾತನು ಶ್ರೀಕಾಂತನನುದಿನ"॥ ॥ ಅ.ಪ. ॥

ಲೋಕಾಲೋಕವನೆಲ್ಲ ಸಾಕುವ ಭಾರಕರ್ತ। ಜೋಕೆಯು ಪ್ರತಿದಿನ ಜೋಕೆ ಮಾಡುವನು।
ಕಾಕುಲಾತಿಯ ಪಿಡಿದು ಲೌಕಿಕದೊಳುಬಿದ್ದು। ಕುಕರ್ಮವನುಸರಿಸಿ ಶೋಕಕ್ಕೊಳಗಾಗದಿರು॥

..............................................................................

..............................................................................

ಅಣುರೇಣುಪೊಟ್ಟೆಗೆ ನಡೆಸುವ ದೇವನು। ನಿನಗೀಯ ದಿಹನೇನೊ ವಿಜಯ ವಿಠ್ಠಲಸ್ವಾಮಿ॥[26]
(ಚಿಂತಾಪರಿಹಾರಕ ಸುಳಾದಿ)

ಎಂದೂ,

ಎತ್ತಿಗೆ ಭತ್ತದ ಚಿಂತೆಯಾತಕ್ಕೆ। ಕತ್ತೆಗೆ ಬಣಜೇಯ ಯೋಚನೆಯಾತಕ್ಕೆ।
ತೊತ್ತಿಗೆ ಒಡೆಯನ ಭವಿಷ್ಯೋತ್ತರವ್ಯಾಕೆ। ಹೊತ್ತು ಹೊತ್ತಿಗೆ ಹಾಲು ಕುಡಿವ ಬಾಲಕನಿಗೆ।
ಸುತ್ತಲಿಪ್ಪವರ ಧಾವತಿಗೊಡವ್ಯಾಕೆ। ಮತ್ತವಾದಗಜಕ್ಕೆ ಅರಸು ಪೋಗಿಬರುವ।
ಕೃತ್ಯ ಹಚ್ಚಿಕೊಂಡು ಬಡವ್ಯಾಗುವುದ್ಯಾಕೆ। ಉತ್ತಮ ಗುಣನಿಧಿ ವಿಜಯ ವಿಠ್ಠಲರೇಯ।
ಪೆತ್ತಜನಕನಂತೆ ಹಗಲಿರುಳು ಬಿಡದೆ। ತುತ್ತು ಮಾಡಿತಂದು ಉಣಿಸುವ ಸತ್ಯವೂ ॥[27]

ಎಂದು ತಿಳಿಸಿ ಹೇಳುತ್ತಾರೆ.

"ನಿನ್ನ ಚಿತ್ತಕೆ ಬಂದುದನು ಮಾಡು ಸರ್ವೇಶ।
ಎನ್ನ ಸ್ವಾತಂತ್ರ್ಯಲವಮಾತ್ರ ಉಂಟೇ ಸ್ವಾಮಿ" ॥[28]

ಎಂದು ಪರಮಾತ್ಮನಲ್ಲಿ ಸರ್ವಾರ್ಪಣ ಭಾವವನ್ನು ಪ್ರಕಟಿಸುತ್ತಾರೆ.

ಛೀ ಎನಿಸು ಜನರಿಂದ। ನಿಂದ್ಯವನು ಮಾಡಿಸು। ಬಾಯದೆರೆಸೊ ಹೊಟ್ಟೆಗಾಗಿ।
ಗಾಯನವ ಮಾಡಿಸು। ಗುಪ್ತದಲ್ಲೀ ಇರಿಸು। ವಾಯಾದಿಗಳಿಗೊಪ್ಪಿಸು।
ರಾಯ ಪದವಿಯಕೊಡಿಸು। ರಾಜ್ಯವೆಲ್ಲವ ಮರೆಸು। ಕಾಯಕ್ಲೇಶವನು ಪಡಿಸು।
ಧನವನ್ನೇ ಕೊಡಿಸು। ದಾನವನೆ ಮಾಡಿಸು। ಗುಣವುಳ್ಳ ಮನುಜನೆನಿಸು।
ಮನಸು ಚಂಚಲವೆನಿಸು। ಮಾತುಗಳ ಹುಸಿಯೆನಿಸು। ಕ್ಷಣದೊಳಗೆ ಸಿದ್ಧನೆನಿಸು।
ಋಣದಭಯವನೆ ಹೊರಿಸು। ರಿಕ್ತ ನಾನೆಂವೆನಿಸು। ತೃಣದಂತೆ ಮಾಡಿನಿಲಿಸು।
ಯಾತ್ರೆಯನೆ ಮಾಡಿಸು। ಯೋಚನೆಯಲ್ಲೇ ಇರಿಸು। ಪಾತ್ರಜನರೊಳು ಪೊಂದಿಸು।
ಗೋತ್ರ ಉತ್ತಮನೆನಿಸು। ಗೋವುಗಳ ಕಾಯಿಸು। ಧಾತ್ರಿಯೊಳು ನೀಚನೆನಿಸು।

---

[25] ಶ್ರೀ ವಿಜಯವಾಸರ ಕೀರ್ತನೆಗಳು. ಪು. ೭೧. (ಬೆಂಗಳೂರು ಪ್ರತಿ)
[26] ,, ಪು. ೨೦೨. ,,
[27] ,, ಪು. ೧೫೭. ,,
[28] ,, ಪು. ೧೪೧. ,,

ಉಪವಾಸದಲ್ಲಿರಿಸು | ಉಚಿತಭೋಜನ ಉಣಿಸು | ಜಪತಪವನೆ ಮಾಡಿಸು |
ಅಪಹಾಸ್ಯ ಮಾಡಿಸು | ಅದ್ಭುತವನೈದಿಸು | ಗುಪಿತರೊಳಗಧಿಕ ನೆನಿಸು |

..................................................................................

..................................................................................

ಯಾವುದಾದರು ನೀನು ಇತ್ತುದಕೆ ಎನಗಿಷ್ಟು | ನೋವು ಒಂದಾದರಿಲ್ಲ |
ಜೀವೇಶರೆಂದೆಂಬ ದುರ್ಮತವಕೊಡದಿರು | ಭಾವದಲಿ ನಾ ಬೇಡುವೆ ॥
ಆವಾವ ನರಕದಲಿ ಬಹುಕಾಲ ಇಟ್ಟರು ಇಪ್ಪೆ | ನಾನೊಲ್ಲೆ ಮಿಥ್ಯಮತವ |
ಕಾವಕರುಣಿ ನಮ್ಮ ವಿಜಯ ವಿಠ್ಠಲರೇಯ | ಪಾವನ್ನ ಮಾಳ್ಪ ಶಕ್ತವ್ಯಕ್ತ ॥ [28]

ಯಾವ ಕಷ್ಟವನ್ನು ಪರಮಾತ್ಮನು ಕೊಟ್ಟರೂ ಅನುಭವಿಸುವೆ. ಆದರೆ ಅದ್ವೈತ ಮತ ತತ್ತ್ವಕ್ಕೆ ಮನಸೋಲದಂತೆ ಮಾಡು ಎಂದು ದ್ವೈತ ತತ್ತ್ವಾನುಯಾಯಿದಾಸರು ಬೇಡಿ ಕೊಳ್ಳುತ್ತಾರೆ.

ಭಕುತಿಯ ಪಾಲಿಸುಜೀಯಾ ಮುಂದೆ | ಮುಕುತಿಗೊಡವೆ ಯಾಕೆ ನೀನೊಲಿದ ಮೇಲೆ ॥ ಅ.ಪ. ॥

ತನುವೆ ನಿನ್ನಾಧೀನವೆನಿಸು, ಇದು | ಅನುದಿನಕೊಡು ಏಕಪ್ರಕಾರ ಮನಸು |
ಧನಒಡವೆಯು ಕಂಡ ಕನಸು, ಎಂದು | ಎನಗೆ ತೋರಲಿ ನಿನ್ನ ನಿತ್ಯಂಘ್ರಿ ನೆನಸು ॥ ೧ ॥

ತತ್ತ್ವ ಮತದೊಳಗಿರಿಸು, ಪುಸಿ | ಉತ್ತರಮತವೆಂಬ ಮಾರ್ಗವ ಮರೆಸು |
ಉತ್ತಮರೊಳಗೆನ್ನನಿರಿಸು, ಭವ | ವತ್ತುವ ನಿನ್ನ ನಾಮಾಮೃತ ಸುರಿಸು ॥ ೨ ॥

ಶ್ರವಣ ಮನನ ಧ್ಯಾನವೀಯೋ, ಎನ್ನ | ಅವಗುಣವೆಣಿಸದೆ ಕರುಣಾಳುಕಾಯೊ |
ಅವಸಾನದಲಿ ನೀನೆಗತಿಯೋ ತ್ರೈ | ಭುವನೇಶ ವಿಜಯ ವಿಠ್ಠಲನೀ ಧೊರೆಯೊ ॥ ೩ ॥ [29]

ಮುಕುತಿ ಬೇಡ, ಭಕುತಿ ಕೊಡು, ಎನ್ನ ವೇಳೆಯೆಲ್ಲವೂ ನಿನ್ನ ಶ್ರವಣ, ಮನನ, ಧ್ಯಾನದಲ್ಲಿ ಕಳೆಯುವಂತೆ ಮಾಡು ಎನ್ನುತ್ತಾರೆ.

ಪ್ರಾಯಶ್ಚಿತ್ತವು ಎನಗೆ ಇಲ್ಲವಯ್ಯ | ನಾಯಿಯಂತೆ ಕಂಡಕಂಡಲ್ಲಿ ತಿಂಬುವಗೆ ॥ ಪ. ॥

..................................................................................

ಪರರಿತ್ತ ಕೂಳಿನಲಿ ಅವರ ಕುಲಕೋಟಿ ಸಾವಿರ ಜನುಮದಲಿ ಆರ್ಜಿಸಿದ ಪಾಪ |
ಬೆರೆತಿಹುದು ಎಂದ್ವೇಳೆ ಕೇಳಿ ಕೇಳಿ ನಗುತ ಹರುಷದಿಂ ಕುಳಿತು ವಿಷವುಂಬ ಪಾತಕಿಗೆ ॥
ಯಾತ್ರೆಯಪೋಪಲ್ಲಿ ತಿಥಿಮತಿಹವ್ಯದಲಿ | ಮತ್ತೆ ಕುಲಹೀನರಲಿ ಅನ್ನತಿಂದು |
ನಿತ್ಯಹಿಂಗದಲೆ ಈ ನೀಚ ಒಡಲನು ಹೊರೆವ | ತೊತ್ತು ಬಡುಕಗೆ ಪುಣ್ಯವೆತ್ತದೊರಕುವುದೊ॥

..................................................................................

ಕ್ಷಿಪ್ರಪ್ರಾಯಶ್ಚಿತ್ತ ಒಂದಿಹುದು ಕೇಳಯ್ಯ | ಈ ಪೃಥ್ವಿಯೊಳಗೆಲ್ಲ ನಿನ್ನನಾಮ |
ಅಪ್ರಾಕೃತಕಾಯ ವಿಜಯ ವಿಠ್ಠಲರೇಯ | ಸುಪ್ರಸಾದವನಿತ್ತು ಶುದ್ಧಾತ್ಮನನು ಮಾಡು ॥ [30]

---

[28] ಶ್ರೀ ವಿಜಯದಾಸರ ಕೀರ್ತನೆಗಳು. ಪು. ೧೪೧. (ಬೆಂಗಳೂರು ಪ್ರತಿ)
[29] ,, ಪು. ೧೫೬. ,,
[30] ,, ಪು. ೨೨೭. ,,

ಶ್ರೀಹರಿಯ ನಾಮಸ್ಮರಣೆಯೇ ಸಕಲ ಪಾಪಗಳಿಗೆ ಪ್ರಾಯಶ್ಚಿತ್ತವೆಂದು ಸೂಚಿಸುತ್ತಾರೆ. ಪಾಪರಾಶಿಯ ಪ್ರಗಾಢತೆಯಳಿಯಲು ಶ್ರೀಹರಿಯನ್ನು ಈ ರೀತಿ ಬೇಡುತ್ತಾರೆ:

ದಾಸದಾಸರ ದಾಸ್ಯವಕೊಡೊ | ದೋಷರಾಶಿಯಳಿದು |
ಶ್ರೀಶಧೀಶ ಸರ್ವೇಶ ಸುರೇಶ್ವರ | ಭಾಸುರ ಗುಣಗಣ ಭವ್ಯ ಶರೀರ ‖ ಪ. ‖

ಚಿತ್ತ ನಿನ್ನ ಪದಸೇವೆಯೊಳಿರಲಿ | ಚಿಂತೆ ಇತರಬಿಡಲಿ |
ಅಂತರಂಗದಲ್ಲಾನಂದಿಸಲಿ | ಅಹಂಕೃತಿಯನ್ನೆಬಿಡಲಿ |
ಸಂತತ ನಿನ್ನ ಪದ ಪಂಕಜ ಭಕ್ತರ | ಪಂಥವ ಪಾಲಿಸೊ ಪರಮಪುರುಷ ಹರಿ ‖ ೧ ‖

ಅರಿಷಡ್ವರ್ಗಗಳಟವಿಯ ಖಂಡಿಸು | ಆನಂದದಲಿರಿಸು |
ದುರುಳರ ಸಂಗವ ದೂರ ಮಾಡಿಸು | ದುರ್ಮತಿಯನೆ ಬಿಡಿಸು |
ಸರಸ ಸಂಭ್ರಮ ಸಸ್ನುತ ಭಕುತರೊಳ್ | ನಿರುತವು ನಿಲ್ಲಿಸೊ ನೀರಜಾಕ್ಷ ಹರಿ ‖ ೨ ‖

ತ್ರಿಜಗನ್ಮೋಹನಾಕಾರ ತ್ರಿಗುಣಾತೀತ ತೀರ್ಥಪಾದ |
ಭಜಕರ ಪಾವನ ಭವನುತ ಚರಣ ಋಜುಗಣನುತಾಭರಣ |
ವಿಜಯ ವಿಠ್ಠಲಾಧೀಶ ವಿಶ್ವೇಶ್ವರ ಕುಜನವಿದಾರಣ ಕೋವಿದನುತ ಹರಿ ‖ ೩ ‖[31]

ಇತರ ಚಿಂತೆಗಳನ್ನು ಮರೆತು ಚಿತ್ತವು ಶ್ರೀ ಹರಿಯ ಪದಗಳನ್ನು ಸ್ಮರಿಸಬೇಕು. ಅರಿಷಡ್ವರ್ಗಗಳನ್ನು ನಿರೋಧಿಸಿ ಆನಂದಪಡೆಯಬೇಕು. ಎಷ್ಟು ಶ್ರೇಷ್ಠವಾದ ಪ್ರಾರ್ಥನೆ! ಶ್ರೀಹರಿಯ ಒಲುಮೆ ಗಳಿಸಿದವರಿಗೆ ಎಲ್ಲ ಭಯಗಳೂ ದೂರವಾಗುವುವಂತೆ. 'ಹುಲಿ – ಇಲಿಯಾಗುವುದು; ಕರಿ, ನಾಯಿಯಾಗುವುದು; ಭರದಿಂದ ಸುರಿವ ಮಳೆ ನಿಲ್ಲೆನಲು ನಿಲ್ಲುವುದು; ಪದೆಪದೆಗೆ ರೋಗಗಳು ಜಿನ್ನಟ್ಟುವು; ಭಯಗಳು ಬಾರವು, ಬಂದರೂ ನಿಲ್ಲವು—ಪದುಮನಾಭನ ಕೃಪೆಯ ಪಡೆದ ದಾಸರಿಗೆ'—

ಭಗವದನುಗ್ರಹಪಡೆದು ವಿಜಯದಾಸರಾಗಿ ಶ್ರೇಯಸ್ಸು, ಸಂಪದ, ವೈಭವಗಳನ್ನು ಗಳಿಸಿದ ದಾಸರು ಶ್ರೀಹರಿಯ ಒಲುಮೆಯನ್ನು ಕೊಂಡಾಡುತ್ತಾ ತಮ್ಮ ಹಿಂದಿನ, ಇಂದಿನ ಸ್ಥಿತಿಯನ್ನು ಶ್ರೀಹರಿಯಲ್ಲಿ ನಿವೇದಿಸುತ್ತಾರೆ:

ನಿನ್ನ ಒಲುಮೆಯಿಂದ ನಿಖಿಲಜನರು ಬಂದು ಮನ್ನಿಸುವರೊ ಮಹರಾಯ |
ಎನ್ನ ಪುಣ್ಯಗಳಿಂದ ಈ ಪರಿಯುಂಟೇನೊ ನಿನ್ನದೇ ಸಕಲ ಸಂಪತ್ತು ‖ ಅ.ಪ. ‖

ಒಬ್ಬ ಹೆಂಗಸಿನ ಹೊಟ್ಟೆಗೆ ಹಾಕುವುದಕಿನ್ನು ತಬ್ಬಿಬ್ಬುಗೊಂಡೆನೊ ಹಿಂದೆ |
ನಿಬ್ಬರದಿಂದಲಿ ಸ್ವರ್ಣದಕೊಡುಂಬೊ ಹಬ್ಬವನುಣಿಸುವಿ ಹರಿಯೆ ‖

ಸಂಜೆ ತನಕವಿದ್ದು ಸಣ್ಣ ಸೌಟಿನ ತುಂಬ ಗಂಜಿಕಾಣದೆ ಬಳಲಿದೆನೊ |
ವ್ಯಂಜನ ಮೊದಲಾದ ನಾನಾರಸಂಗಳು ಭುಂಜಿಸುವುದು ಮತ್ತೇನೊ ‖

ಮಧ್ಯಾಹ್ನಕಾಲಕ್ಕೆ ಅತಿಥಿಗಳಿಗೆ ಅನ್ನ ಮೆದ್ದೇನೆಂದರೆ ಈಯಗಾಣೆ |
ಈ ಧರೆಯೊಳಗೆ ಸತ್ಪಾತ್ರರ ಕೂಡುಂಬೊ ಪದ್ಧತಿ ನೋಡೊ ಪುಣ್ಯಾತ್ಮ ‖

---

[31] ಶ್ರೀ ವಿಜಯದಾಸರ ಕೃತಿಗಳು. ಪು. ೧೯೯. (ಬೆಂಗಳೂರು ಪ್ರತಿ)

ಜೀರ್ಣ ಮಲಿನವಸ್ತ್ರ ಕಾಣದ ನರನಿಗೆ ಪೂರ್ಣವಿಚಿತ್ರ ಸುವಸನ |
ವರ್ಣ ವರ್ಣದಿಂದ ಬಾಹೊದದೇನು ಸಂಪೂರ್ಣ ಗುಣಾರ್ಣವದೇವ ||

ನೀಚೋಚ್ಚ ತಿಳಿಯದೆ ಸರ್ವರಚರಣಕ್ಕೆ ಚಾಚಿದೆನೊ ಸಲಹಸ್ತಗಳ |
ಯೋಚಿಸಿನೋಡಲು ಸೋಜಿಗವಾಗಿದೆ ವಾಚಕ್ಕೆ ನಿಲುಕದು ಹರಿಯೆ ||

ಮನೆಮನೆ ತಿರಿದರು ಕಾಸುಪುಟ್ಟದೆ ಸುಮ್ಮನೆ ಚಾಲ್ವರಿದು ಬಳಲಿದೆನೊ |
ಹಣ ಹೊನ್ನು ದ್ರವ್ಯಂಗಳಿದ್ದಲ್ಲಿ ತನಗೆ ತಾನೇ ಪ್ರಾಪ್ತಿ ನೋಡೋ ಜೀಯ ||

ವೈದಿಕ ಪದವಿಯ ನೀವಗೆ ಲೌಕಿಕ ಐದಿಸುವುದು ಬಹುಖ್ಯಾತಿ |
ಮೈದುನಗೊಲಿದ ಶ್ರೀವಿಜಯ ವಿಠ್ಠಲನಿನ್ನ ಪಾದಸಾಕ್ಷಿಯನುಭವವೊ || [೩೨]

ಗುರು ಕರುಣದಿಂದ ಶ್ರೀಹರಿಯ ಕೃಪೆಗೆ ಪಾತ್ರರಾಗಿ ದಾಸಪ್ಪ ದಾಸರಾದ ಬಳಿಕ ಹಾಡಿದ ಈ ಗೀತೆಯಲ್ಲಿ ತಮ್ಮ ಜೀವನದ ಗತಿಯನ್ನು ಸೊಗಸಾಗಿ ಸೂಚಿಸಿದ್ದಾರೆ. ತಾವು ಕಂಡುಂಡ ಕಷ್ಟ ಸುಖಗಳನ್ನು ಅವಲೋಕಿಸಿದ್ದಾರೆ. ಅಂತರಂಗವನ್ನು ಶ್ರೀಹರಿಯಲ್ಲಿ ಅರ್ಪಿಸಿದ್ದಾರೆ. ವಿಜಯದಾಸರ ಈ ಬಗೆಯ ಕೃತಿಗಳಲ್ಲಿ ಅವರು ಭಗವಂತನಲ್ಲಿ 'ಸರ್ವ ಸಮರ್ಪಣ ಮನೋಭಾವ,' ದ್ವೈತಮತನಿಷ್ಠೆ, ಭಕ್ತಿಯ ಶ್ರೇಷ್ಠತೆ, ಶ್ರೀಹರಿ, ಗುರುಗುರುಗಳಲ್ಲಿ ದಾಸ್ಯದಾಸ ಮನೋಭಾವ, ಇವುಗಳನ್ನು ಸರಳನುಡಿಗಳಿಂದ ಸಂದರ್ಭೋಚಿತ ಉದಾಹರಣೆ ಗಳಿಂದ ವ್ಯಕ್ತಪಡಿಸಿದ್ದಾರೆ.

"ಭಕ್ತ ಮುಂದೆ, ಭಗವಂತ ಹಿಂದೆ"— 'ಭಕ್ತರಿದ್ದಲ್ಲಿ ಭಗವಂತ' ಎಂಬುದನ್ನು ಸುಂದರವಾಗಿ ನಿರೂಪಿಸುತ್ತಾರೆ. ಅವರು ಕೊಡುವ ಉದಾಹರಣೆಗಳು :—

"ಹರಿಯುವ ನದಿಯನ್ನು ಹರಿಗೋಲಿನಲ್ಲಿ ದಾಟುವಾಗ ಹುಟ್ಟು ಮುಂದಲ್ಲದೆ ಹರಿಗೋಲು ಮುಂದಿರುವುದೆ?" [೩೩]

"ಅರಸನ ಮೆರವಣಿಗೆ ಸಾಗುವಾಗ ಆಳು ಮುಂದಲ್ಲದೆ ಅರಸು ಮುಂದಿರುವನೆ?" [೩೩]

"ಉತ್ಸಾಹ ವಾಹನದಿ ಬೀದಿಯೊಳು ಮೆರೆಯುತಿರೆ ಸತ್ಸಂಗತಿಗೆ ಹರಿದಾಸರೆಲ್ಲ, ವತ್ಸಲ ಸಿರಿ ವಿಜಯವಿಠ್ಠಲ ವೆಂಕಟಾಧೀಶ ವತ್ಸ ಮುಂದಲ್ಲದೆ ಧೇನು ತಾ ಮುಂದೆ?" [೩೩]

## ವಿಜಯದಾಸರು ಕಂಡ 'ಕೃಷ್ಣಲೀಲೆ':

ಧ್ಯಾನಮಗ್ನರಾಗಿ, ಹರಿಭಾವರತರಾಗಿ ತಾವು ಕಂಡ 'ದರ್ಶನ'ವನ್ನು, ಭಗವಂತನ ಲೀಲೆಗಳನ್ನು ದಾಸರು ತಮ್ಮ ಕೆಲವು ಗೀತೆಗಳಲ್ಲಿ ವರ್ಣಿಸಿದ್ದಾರೆ.

---

[೩೨] ಶ್ರೀ ವಿಜಯದಾಸರ ಕೀರ್ತನೆಗಳು. ಪು. . ಬೆಂಗಳೂರು ಪ್ರತಿ)
[೩೩] ,, ಪು: ೧೭೭. ,,

ಒಮ್ಮೆ ಭಾವಸಮಾಧಿಯಲ್ಲಿದ್ದಾಗ ದಾಸರ ಕಣ್ಣಮುಂದೆ............

ಕಂದರ್ಪಜನಕ ಶ್ರೀ ಕರುಣಾಸಾಗರ ಮೂರ್ತಿ |
ಕುಟಿಲ ಕುಂತಳದೇವ ವಟುವೇಷದಿಂದಲಿ
ನಟನೆಮಾಡುತ ದಿವ್ಯ ಪಟುತರದಿಂದಲಿ ತಾನು ...
ಮುರಲಿಯನೂದುತ ಮರುಳಗೊಳಿಸಿ ಜನರ
ಕೊರಳಪದಕಹಾರ ಧರಿಸಿ ತಾ ನಲಿಯುತ್ತ ...
ಸುಜನರ ಪೊರೆಯುವ ಕುಜನರ ತರಿಯುವ
ವಿಜಯ ಸಾರಥಿ ನಮ್ಮ ವಿಜಯ ವಿಠ್ಠಲರೇಯ....[34]

—ನ ದರ್ಶನವಾಯಿತಂತೆ. ಶ್ರೀಕೃಷ್ಣನ ಮುರಲಿವಾದನದ ವೈಭವವನ್ನು ದಾಸರು ಸೊಗಸಾಗಿ ಬಣ್ಣಿಸಿದ್ದಾರೆ :

"ಶ್ರೀಶಾಕೊಳಲನೂದಿದನಂದು | ಶ್ರೀಧರನಿಂದು |
ವಾಸವವಂದಿತ ವಾತಜಸೇವಿತ ವಾಸುಕಿಶಯನನು ವಾರೆಸುನೋಟದಿ ||
ಬೆರಳಸಂದಿಲಿ ಮುರಲಿಯಪಿಡಿದು ...... ಹರುಷದಿಂದಲಿ
ಸ್ವರವನುಡಿದು, ಮಡದಿಯರೆಲ್ಲರ ಮರುಳು ಮಾಡುವನಂತೆ ... "

ಗೌರಿ, ಗಾಂಧಾರಿ, ಗೌಳಪಂತು, ಶೌರಿ, ಸಾರಂಗ, ಮೋಹನ, ಸಾವೇರಿ, ಸುರುಟಿ ಭೈರವಿ, ಬೇಗಡೆ, ಇಂತು ವಿಧವಿಧರಾಗದಿ, ಶ್ರೀಕೃಷ್ಣನು ಆನಂದದಿಂದ ನುಡಿಸುವನಂತೆ!

ನಾರದ ತುಂಬುರ ನಾಟ್ಯವನಾಡೆ, ನಳಿನನಾಭನ ಗಿರಿಜಾಪತಿಯು ವಂದಿಸಿಬೇಡೆ,
ಭಾರತಿಪತಿತಾ ಕೊಂಡಾಡೆ—ವನಿತೆಯರೆಲ್ಲರ ಹರುಷವ ಪಡಿಸುತ .... [35]

ಕೊಳಲ ಬಾರಿಸಿದನಂತೆ!

ದಾಸರ 'ದರ್ಶನ,' ಅದನ್ನು ವರ್ಣಿಸಿದ ಬಗೆ ಅದೆಷ್ಟು ದಿವ್ಯವಾಗಿದೆ! ವೇಣುವಾದನ ರತ ಶ್ರೀಕೃಷ್ಣನ ಸುಂದರ ಚಿತ್ರ ಕಣ್ಕಟ್ಟುವಂತಿದೆ, ಅವರ ಈ ಗೀತೆಯಲ್ಲಿ. ಗೋಪಾಲ-ಕೃಷ್ಣನ ವರ್ಣನೆ ಅವರ ಇನ್ನೊಂದು ಗೀತೆಯಲ್ಲಿದೆ. "ಕೊಳಲು ತನ್ನ ಕೈಲಿ ಪಿಡಿದು, ಮುರಳಿಗಾನ ಮಾಡುತ್ತಾ" ದನಕಾಯ್ದನಂತೆ. "ಒಂದು ತಿಂಗಳ ಕರುಗಳು ಇಂದಿರೇಶನು ಮೇಯಿಸಲು ಒಂದು ವರುಷದ ಕರುಗಳಂತೆ ಆನಂದದಿಂದ ಬೆಳೆದುವು." "ಅಜಗಳಂತಹ ಕರುಗಳು ಗಜಗಳಂತೆ" ಆದುವಂತೆ.

ಕೃಷ್ಣನಿಗೆ ಹೀಗೊಮ್ಮೆ ಉಪದೇಶಿಸುತ್ತಾರೆ :

ಕೋರೋವಸನ — ಎಷ್ಟೊವಿನೋದ ||
ಕಡಹದ ಮರನೇರಿ ಕಾಡುವುದುಚಿತವೆ |
ತಡವಾಗುವುದ್ಯೆ ಒಡೆಯರುಳ್ಳವರಿಗೆ ||
ಚಿತ್ತಜನ್ಯೆಯನೆ ಮತ್ತಗಮನೆಯರ |
ಬತ್ತಲೆ ನಿಲ್ಲಿಸುವುದುತ್ತಮವಲ್ಲವೊ || [36]

---

[34] ಹರಿಭಕ್ತಿ ಸುಧೆ. ಪುಟ ೧೫೧. ರಂ. ರಾ. ದಿವಾಕರ.
[35] ಶ್ರೀ ವಿಜಯದಾಸರ ಕೀರ್ತನೆಗಳು. ಪು. ೧೧೭. (ಬೆಂಗಳೂರು ಪ್ರತಿ)
[36] " ಪು. ೩೨. "

ಇನ್ನೊಮ್ಮೆ ಹೆದರಿಸಿಯೂ ನೋಡುತ್ತಾರೆ :

ತಕ್ಕೋಗಂಟ ನಿನ್ನಾಟವ ತಿಳಿಸುವೆ ಸಖಿಯರ ಕೂಡಿದಂತಲ್ಲೋ |
ಠಕ್ಕುಬಿಕ್ಕಿನ ಮಾತುಗಳಾಡಲು ಯುಕುತಿಯ ನಾ ಕೇಳೆನೆಲವೊ ‖ ಅ.ಪ. ‖

ಮದಗಜಗಮನೇರ ಹೆದರಿಸಿ ಬೆದರಿಸಿ ಅಧರವಸವಿದಂತಲ್ಲೋ |
ಸುದತಿಯರೆಲ್ಲರ ಅಂಜಿಸಿ ವಂಚಿಸಿ ದಧಿಘೃತ ಸವಿದಂತಲ್ಲೋ ‖

ಕ್ಷೋಣಿಯೊಳೆಲ್ಲಿಗೆ ಹೋದರು ಎನ್ನಯ ವೀಣೆಯ ಹೊರಬೇಕಲ್ಲೋ |
ಗಾಣದೆತ್ತಿನ ಪರಿಯಲಿ ತಿರುಗುತ ತ್ರಾಣತಪ್ಪಲು ಬಿಡೆನೆಲ್ಲೊ ‖
ಸಣ್ಣ ಮಾತುಗಳಾಡಲು ಕೇಳುತ ಚಿಣ್ಣನಂತಿರಬೇಕಲ್ಲೋ |
ಘನ್ನ ಮಹಿಮ ಶ್ರೀ ವಿಜಯ ವಿಠ್ಠಲ ಇನ್ನೆಂದಿಗು ಬಿಡೆನೆಲ್ಲೊ ‖ [37]

ದಾಸರ ಗಂಟು ಜೊತೆಗೆ ವೀಣೆಯನ್ನು ಹೊತ್ತು ಊರೂರು ಸುತ್ತುವ ಶಿಕ್ಷೆ ಬೆಣ್ಣೆಕದ್ದ ಕಳ್ಳನಿಗೆ !

ಶ್ರೀಹರಿಯ ದಶಾವತಾರವನ್ನು ಒಂದು ಗೀತೆಯಲ್ಲಿ ಸಂವಾದ ರೂಪದಲ್ಲಿ ವರ್ಣಿಸಿದ್ದಾರೆ :

ನೀಲವರ್ಣ ನಿರುಪಮ ಶ್ರೀಲೋಲನಲ್ಲೆ ಭಾಮೆ, ಅವಲೋಲನಲ್ಲೆ ಭಾಮೆ |
ಲೋಲನೊ ಬಾಲನೊ ಗೋಪಾಲನೊ ನಾನರಿಯೆ ‖
ಇಂದುತಮನಕೊಂದು ವೇದ ತಂದವನಲ್ಲೆ……
…………
ಅರ್ಥಿಯಿಂದಲಿ ಗಿರಿಯ ಬೆನ್ನಲಿ ಪೊತ್ತವನಲ್ಲೆ …
…………
ಭೂಮಿಚೋರನ ಕೊಂದ ವರಾಹಸ್ವಾಮಿಯಲ್ಲೆ ….
…………
ತರಳ ಪ್ರಹ್ಲಾದನಿಗೊಲಿದ ನರಹರಿಯಲ್ಲೆ ..
…………
ನೆಲನ ಈರಡಿ ಮಾಡಿ ಆಳಿದ ಚಲುವ ನಲ್ಲೆ….
…………
ಸೀತಾಚೋರನ ಕೊಂದ ರಘುನಾಥನಲ್ಲೆ …
…………
ಮಾವನ ಕೊಲಲು ಮಥುರೆಗೆ ಹೋದ ದೇವನಲ್ಲೆ …
…………
ತ್ರಿಪುರಾಂಗನೆಯರ ವ್ರತವನಳಿದ ಚಪಳನಲ್ಲೆ….
…………
ಓಜೆಯಿಂದ ತೇಜಿಯನೇರಿದ ರಾಜನಲ್ಲೆ….
…………
ಸೃಷ್ಟಿಗೆ ಕರ್ತನು ವಿಜಯವಿಠ್ಠಲನಲ್ಲೇ ಭಾಮೆ ಅರ ವಿಠ್ಠಲನಲ್ಲೇ ಭಾಮೆ ‖
ವಿಠ್ಠಲನಾದರೆ ಇಷ್ಟ್ಯಾಂದ್ಯಾತಕೆ ದಟ್ಟಡಿಗಳಿಗೊಂದಿಸುವೆ ‖ [38]

(ಮುಂದುವರಿಯುವುದು)

---

[37] ಶ್ರೀ ವಿಜಯದಾಸರ ಕೀರ್ತನೆಗಳು. ಪು. ೩೩. (ಬೆಂಗಳೂರು ಪ್ರತಿ)
[38] ,, ಪು. ೧೫೯. ,,

# ಮಹಾಕವಿ ಷಡಕ್ಷರದೇವನ ರಾಜಶೇಖರ ವಿಲಾಸದ ಪರಿಚಯ*

ಲೇ: ಸಾಹಿತ್ಯ ವ್ಯಾಕರಣ ವಿದ್ವಾನ್, ಪಂಡಿತ ಶ್ರೀ ಸ.ಹಾ. ಶಿವಮೂರ್ತಿಸ್ವಾಮಿಗಳು, ಮ.ಹಿರೇಮಠ.

(೧೯೬೩ನೇ ಡಿಸೆಂಬರ್ ಸಂಚಿಕೆಯಿಂದ ಮುಂದುವರಿದುದು.)

## ವರ್ಣನೆಯ ಸೊಗಸು

ಮಹಾಕವಿ ಷಡಕ್ಷರದೇವನ ವರ್ಣನಾರೀತಿಯೇ ಅದೊಂದು ವೈವಿಧ್ಯದಿಂದ ನವೀನವಾದುದು, ನಿರುಪಮವಾದುದು. ಅವನ ನೋಟದಲ್ಲಿ ಬರಿಯ ವರ್ಣನೆ ಮಾತ್ರವಲ್ಲ, ಆ ವಸ್ತುವಿನ ನೈಜಸ್ವರೂಪವೂ ಕಲ್ಪನಾಚಾತುರ್ಯದಲ್ಲಿ ರಸಮಯ ಚಮತ್ಕಾರವೂ ಕಥನ ಕ್ರಮದಲ್ಲಿ ಲೌಕಿಕಾನುಭವಜ್ಞಾನವೂ ಸಮಾವೇಶವಾಗಿರುತ್ತದೆ. ನಿದರ್ಶನಕ್ಕಾಗಿ ಈಗೊಂದು ಪದ್ಯವನ್ನು ಮಾತ್ರ ಉದಾಹರಿಸಲಾಗುವುದು:

ವೃತ್ತ ॥ ಪತಿ ನಿದ್ರಾಸಕ್ತನಾದಂ ಜಡಧಿಯೊಳದರಿಂ ಜಾಡ್ಯನಾದಂತೆ ಭಂಗಾ-
ಸ್ಥಿತನಾದಂ ತಂದೆ ಕುಂಭೋದ್ಭವನಿಂ + ಅದು ವಲಂ ತಳ್ತಪಾಂಗಿಂದೆ ಪುತ್ರಂ।
ಕೃತ ಶಂಭುದ್ವೇಷದಿಂ ಮೆಯ್ಯಳಿದ ನದು ಮಧುಸ್ನೇಹದಿಂದಾದ ದೋಲೆಂ-
ದು ತದುತ್ಕ್ವ್ಯಪೋಹನಮಂ ತಾಂ ತೊರೆದು ಸಿರಿ ನರಾಧೀಶನಂ ಸಾರ್ದುಬಾಳ್ದಳ್ ॥

—ಆಶ್ವಾಸ III, ಪದ್ಯ ೧೧.

ಇದು, ಸಂಪತ್ಶಾಲಿಯಾದ ಸತ್ಯೇಂದ್ರ ಮಹಾರಾಜನ ವರ್ಣನೆಗೆ ಸಂಬಂಧಪಟ್ಟ ಪದ್ಯ. 'ಸಿರಿ ನರಾಧೀಶನಂ ಸಾರ್ದು ಬಾಳ್ದಳ್'— ಸಾಕ್ಷಾತ್ ಲಕ್ಷ್ಮಿಯೇ ಸತ್ಯೇಂದ್ರ ಮಹಾರಾಜನ ಬಳಿ ಬಂದು ಬಾಳುತ್ತ ಇದ್ದಳು — ಎಂಬ ಮಾತಿನಿಂದ, ಈ ದೊರೆ ಮಹದೈಶ್ವರ್ಯ ಸಂಪನ್ನ (– ದರಿಯಾ ದೌಲತ್ತಿನವ)ನೆಂದು, ಇದರಿಂದೇನೋ ನಮಗೆಲ್ಲ ಗೊತ್ತಾಗುತ್ತದೆ. ಆದರೆ ಈಗೊಂದು ಸಮಸ್ಯೆ. ಅದಾವುದು? ಎಂದರೆ 'ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ': ಕುಲ ಸ್ತ್ರೀ ಎಂದೂ ಸ್ವಾತಂತ್ರ್ಯಕ್ಕೆ ಅರ್ಹಳಲ್ಲ; ಪಿತನಿಂದೆ ಬಾಲ್ಯದೊಳ್, ಪತಿಯಿಂದೆ ಹರೆಯದೊಳ್, ಸುತನಿಂದೆ ವೃದ್ಧಾಪ್ಯದೊಳ್ ಕುಲ ಸ್ತ್ರೀಯು ಬಾಳಬೇಕೆಂದು ಭಾರತೀಯರ ಕಟ್ಟಳೆಯುಂಟು. ಲಕ್ಷ್ಮಿಗಾದರೋ ತಂದೆ ಗಂಡ ಮಗ – ಇವರೆಲ್ಲ ಇರುವದರಿಂದ, ಅದೆಂತು ಅವಳು ಸತ್ಯೇಂದ್ರನನ್ನು ಸೇರಿದಳು? ಈ ಸಮಸ್ಯೆಯನ್ನೂ ಕವಿಯೇ ಪರಿಶೀಲಿಸಿದ್ದಾನೆ: ತನ್ನ ಪತಿ ಮಹಾವಿಷ್ಣುವು ಜಡಧಿಯೊಳಗೆ ಅಥವಾ ಜಲಧಿಯೊಳಗೆ ನಿದ್ದೆಬಡುಕನಾದ ಕಾರಣ, ಸೋಮಾರಿಯಾದನು. ಹಾಗೆಯೇ ತಂದೆ ಸಮುದ್ರನಾಥನು ಅಗಸ್ತ್ಯ ಮಹರ್ಷಿಯಿಂದ ಅಸ್ತಿತ್ವವನ್ನೇ ಕಳೆದುಕೊಂಡ ಪ್ರಯುಕ್ತ, ಕಳಂಕ ಹೊಂದಿದನು. ಇದೇ ರೀತಿಯಲ್ಲಿ, ಮಗನಾದ ಮನ್ಮಥನು ಮಹಾದೇವನ ದ್ವೇಷಮಾಡಿ ಮಧು (– ವಸಂತ) ಮಿತ್ರತ್ವದಿಂದ ಅಥವಾ ಮದ್ಯಸ್ನೇಹದಿಂದಾಗಿ,

---

* ಕನ್ನಡ ಸಾಹಿತ್ಯ ಪರಿಷತ್ತು ದಿನಾಂಕ ೨೬-೧೧-೬೨ ರಂದು ಏರ್ಪಡಿಸಿದ್ದ ಶ್ರೀಮತಿ ಸುಬ್ಬಮ್ಮ ಆರ್. ಚಂದ್ರಶೇಖರಯ್ಯ ದತ್ತಿ ಭಾಷಣ.

ಮೃತಪಟ್ಟನು. ಇಂತಾಗಲು ಲಕ್ಷ್ಮಿಯು ತಾನು ಅನಾಥೆಯಾದುದರಿಂದ ಅವರೆಲ್ಲರ ವ್ಯಾಮೋಹ ವಳಿದು ಸರ್ವಾತ್ಮನಾ ಸತ್ಯೇಂದ್ರನನ್ನು ಸೇರಿ ಬಾಳಿದಳು. ಈ ವರ್ಣನೆಯಲ್ಲಿ, ಆ ಮಹಾ ರಾಜನು ಮಹೋತ್ಸಾಹಶಾಲಿಯು. ಪವಿತ್ರ ಚರಿತ್ರನೂ ಪರಶಿವ ಲೋಲುಪನೂ ಆದ ಗುಣಾಗ್ರಣಿಯೆಂಬ ಪ್ರಸ್ತುತ ವಿಷಯವನ್ನು "ಸಿರಿ ನರಾಧೀಶನಂ ಸಾರ್ದು ಬಾಳ್ದಳ್" ಎಂಬ ಅಪ್ರಸ್ತುತವಾದ ಮಾತಿನಿಂದ ಸಮರ್ಥಿಸಿ ಎಂಥಾ ಧ್ವನಿಪೂರ್ಣವಾಗಿ ಕವಿ ಸೂಚಿಸಿದ್ದಾನೆ! ಮತ್ತು ಸೋಮಾರಿಯಲ್ಲಿ, ಕಳಂಕ ಚರಿತ್ರನಲ್ಲಿ, ದೈವ ದ್ವೇಷಿಯಲ್ಲಿ, ಮದ್ಯ ಪಾನಿಯಲ್ಲಿ ಲಕ್ಷ್ಮಿ (ಸಿರಿ) ನೆಲೆಸುವುದಿಲ್ಲೆಂಬ ನೀತಿಯೂ ಈ ವರ್ಣನೆಯಿಂದ ಮನವರಿಕೆಯಾಗುವುದು. ಸಚ್ಚಾರಿತ್ರ್ಯದ ಈ ಸತ್ಯೇಂದ್ರ ದೊರೆಯ, ಸಮೃದ್ಧ ಸಂಪತ್ತಿನ ವರ್ಣನೆಯಿಂದಾಗುವ ಕಾವ್ಯಾ ನಂದದ ಜತೆಗೆ, ಭಾಗ್ಯಲಕ್ಷ್ಮಿಯಂಥವಳಿಗೇ ಆದ ಈ ಭಂಗ ಪರಂಪರೆಯ ದೃಶ್ಯವು, ನೆಲೆಗೆಟ್ಟ ನೀರೆಯರ ಹೃದಯವನ್ನೇ ತಲ್ಲಣಗೊಳಿಸುವುದು. ಇಷ್ಟೆಲ್ಲ ರೀತಿ ನೀತಿಗಳನ್ನೊಳಗೊಂಡಿರುವ ಷಡಕ್ಷರದೇವನ ಈ ವೃತ್ತ ಪದ್ಯವು — ಭಾರತೀಯ ಸಂಸ್ಕೃತಿ ದ್ಯೋತಕವಾದ ಒಂದು ಪುಟ್ಟ ಚಿತ್ರದಂತೆ -- ದಿಟ್ಟಿಗೊಳಿಸುತ್ತಿದೆ. ಇಂಥ ಮೌಲ್ಯವಾದ ಪದ್ಯವು ಇಂದಿನ ಕಾವ್ಯಗಳಲ್ಲಿ ದೊರಕುವುದಾದರೆ, ಪಂಜು ಹೊತ್ತಿಸಿಕೊಂಡಾದರೂ ಅದನ್ನು ಹುಡುಕಿ ನೋಡಲು ನಾನಂತೂ ಸಿದ್ಧನಿದ್ದೇನೆ.

"ರಸೋ ವೈಸಃ" (ಪರಬ್ರಹ್ಮವದು ರಸಮಯವೇ ಆಗಿದೆ) ಎಂಬಿದೇ – ಸಾಹಿತ್ಯ ಶಾಸ್ತ್ರಕ್ಕೆ ಮೂಲ ಸೂತ್ರ. ಅಂತೆಯೇ ರಸವೇ ಜೀವನೆಂದು ಕವಿಗಳ ಹೇಳಿಕೆ. ಜೀವವಿಲ್ಲದ ಕಾಯದಂತೆ ರಸವಿಲ್ಲದ ಕಾವ್ಯ ಮೃತಪ್ರಾಯವಾದುದು. ರಸಪುಷ್ಟಿಯುಳ್ಳ ಕಾವ್ಯವು ಅಸಮಾನ ವಾದ ಅಮರ ಕಾವ್ಯ! ವಿದ್ವತ್ಸಭೆಯೊಳಗೆ ರಾಜಶೇಖರ ವಿಳಾಸವು ಸ್ಪರ್ಧಿಸಿ, ರಸಪುಷ್ಟಿ ಯುಳ್ಳದೆಂಬ ಪ್ರಶಸ್ತಿಪಡೆದ ಕಾವ್ಯವೆಂದು ಪ್ರಖ್ಯಾತವಾಗಿದೆ. ಇದರ ಸುಕವಿತ್ವದಲ್ಲಿಯ ಶಬ್ದ ಸೌಂದರ್ಯ, ಅರ್ಥಮಾಧುರ್ಯದ ಅತಿಶಯತೆಗಾಗಿ

ವೃತ್ತ ॥ ಜಿಹ್ವಾಂತರ್ ನಟದಂಬುಜಾಸನ ವಧೂ ಪಾದ ಪ್ರವಾಳ ಸ್ಫುರನ್ –
ಮಂಜೀರಪ್ರಿಯ ಮಂಜುನಾದ ವಿಭವ ಶ್ರೀ ಗರ್ವ ಸರ್ವಂಕಷಾಃ ।
ಜೀಯಾಸು ರ್ಭವತಃ ಷಡಕ್ಷರವಿಭೋ ಕುಂದಾರವಿಂದಾವಳೀ
ಮಂದಾರ ದ್ರುಮ ಮಂಜರೀ ಮಧುಝರೀ ಮಾಧುರ್ಯ ಧುರ್ಯಾ ಗಿರಃ ॥

ಎಂದರೆ — ನಾಲಗೆಯ ರಂಗದಮೇಲೆ ನಟಿಸುತ್ತ ಇರುವ ಸರಸ್ವತೀದೇವಿಯ, ಕೋಮಲ ಪಲ್ಲವ ಪಾದಗಳಲ್ಲಿ ನಾದಗೈಯುತ್ತಿರುವ ಜೋಡಿ ಕಾಲುಂಗುರಗಳ ಮಂಜುಳ ನಾದದ ಸೊಂಪು ಸೊಬ ಗಿನ ಗರ್ವವನ್ನು, ಭೋಸ್ವಾಮಿ ಷಡಕ್ಷರಿಯೆ! ಮಲ್ಲಿಗೆ ಮಂದಾರ ತಾವರೆಗಳ ಹೂಗೊಂಚಲ ಮಕರಂದ ರಸ ಹರಿವ ಹಳ್ಳದಂಥ ಅಪಾರ ಮಾಧುರ್ಯದ ನಿನ್ನ ಮಾತುಗಳು ಅದನ್ನು ಸಂಪೂರ್ಣ ಅಳಿಸುವಂಥವುಗಳಾಗಿವೆ, ಜಯಶೀಲನಾಗು!— ವಿದ್ವತ್ಸಭೆಯ ಈ ಪ್ರಶಸ್ತಿ ಪದ್ಯವು, ಸ್ವಾಮಿ ಶ್ರೀ ಷಡಕ್ಷರದೇವನ ಕವಿತ್ವದ ಹಿರಿಮೆ, ಕಾವ್ಯದ ಗರಿಮೆಗಳನ್ನು ತುಂಬಿಕೊಂಡು, ಅದನ್ನು ಜಗತ್ತಿಗೆ ಆಗಲೇ ಬೀರಿದೆ.

ರಸಪೊಸರುವ ಶೃಂಗಾರಾದಿ ವರ್ಣನೆಗಳಿಗೆ ರಾಜಶೇಖರ ವಿಲಾಸವು ಆಕರ ಗ್ರಂಥ ವಾಗಿದೆ. ಅದರಲ್ಲಿಯೂ ವಿಧವಿಧವಾದ ನಾಯಕ ನಾಯಿಕೆಯರ ಶೃಂಗಾರ ಕೇಳಿಗಳಂತೂ

'ಬಿಗಿದಪ್ಪಿದಂಗನೆಯ ಪೆರ್ಮೊಲೆ ಸೋಂಕಿನ ಸೌಖ್ಯದಂತೆ' ಬಲ್ಲ ರಸಿಕರ ಮನವ ಬಿಡದಿರುವುವು. ವೇಶ್ಯಾವಾಟದ ವರ್ಣನಾವಸರದಲ್ಲಿ, ಚೆಲ್ಲಗಾತಿಯೊಬ್ಬಳು ತನ್ನ ದೂತಿಯ ಮುಖವ ನೋಡಿ, ಮಿಸುಗುವ ನಗೆಯಿಂದ ಹೇಳುತ್ತಾಳೆ:

ವೃತ್ತ ॥ ಸುರಿಯೆ ಸುಖಾಶ್ರು + ಅಳ್ವಳಿವಳಿಂದತಿ ದೈನ್ಯಮನಾಡಿ, ಕಂಪನಂ –
ನೆರೆಯೆ ಭಯಾರ್ತಿಗೆತ್ತು + ಅಗಿದುನೋಡಿ, ಕರಾಗ್ರದೆ ಪೊಯ್ಯೆ ಕೋಪ ನಿ – ।
ರ್ಭರಯುತೆಯೆಂದು ಬಾಡಿ, ಸುರತಾಂತದೊಳ್ + ಅಕ್ಷಿಗಳಿಂ ಮುಗುಳ್ಚಿ ಪ –
ಟ್ಪರೆ ಪರಮಾಯು ತೀವಿ ತಿವಳ್ಗಿ + ಎಂದಿರದೋಡಿದ ನೋಡ್ದ ನೂರಿಚಂ ॥

ಆಶ್ವಾಸ XI, ಪದ್ಯ ೧೪೯.

ಶೃಂಗಾರ ಸಂಬಂಧದ ಹಾಸ್ಯರಸವು, ಇನಿದಾದ ಪಾಲು ಸಕ್ಕರೆಗಳ ಮೇಳದಂತೆ ಮಿಗೆ ಮಾಧುರ್ಯವಾದುದು. ಇಂಥದನ್ನು ಬಣ್ಣಿಸಿದ ಯೋಗಿಜನಾಲಂಕಾರನಾದ ಕವಿಯ ಬಗೆಗಾಗಲಿ, ಕಥಿಸುವನ ಮೇಲಾಗಲಿ ಕುತರ್ಕದಿಂದ ಕಣ್ಣು ಮೂಗುಗಳನ್ನು ಸಣ್ಣಿಸುವುದಾದರೆ ಅದೇ ಕುಹಕತನ; ಏಕೆಂದರೆ ನಾವೆಲ್ಲ ಇಲ್ಲಿ ಸೇರಿರುವುದು " ರಸೋ ವೈಸಃ " ಎಂಬ ತತ್ತ್ವಾತ್ಮಕವಾದ ರಸಾನಂದದ ಸಾಕ್ಷಾತ್ಕಾರಕ್ಕೇ ಹೊರತು, ಆ ಮಿಥ್ಯಾತ್ಮಕವಾದ ರತ್ಯಾನಂದಕ್ಕಲ್ಲ. ಈ ಸಂಬಂಧವಾಗಿ ಕವಿಯೇ ಹೇಳಿರುವ ಉತ್ತರವನ್ನು ಇನ್ನುಮುಂದೆ ಲಾಲಿಸುವಾಗ ಅದು ಮನ ವರಿಕೆಯಾಗುವುದು. ಇರಲಿ; ಎಲೆ ಸಖಿ! ಇಂದು ಇದೇ ಹೊಸತಾಗಿ ವಿಟನೊಬ್ಬನು ಬಂದ. ನಾನವನ ಸಂಗದಲ್ಲಿ ಸುಖಾಶ್ರುಗಳನ್ನು ಸುರಿಸಲು, ಅಳುವಳಿವಳಿಂದು ಬಗೆದು ಆತ ಅತಿ ದೈನ್ಯ ವಾಡಿದನು. ಬಳಿಕ ಕೈಮಿಕ್ಕ ಪ್ರೇಮಕ್ಕೆ ನ್ಯೆಯುದಿರಲು, ಭಯಪೀಡಿತೆಯೆಂದು ಬಗೆದು, ನೋಡಿದನು ಹೆದರಿ. ತರುವಾಯ ತುದಿಗೈಯಿಂದಾನು ಹೊಯ್ಯಲು, ತುಂಬ ಕೋಪಗೊಂಡವ ಳೆಂದು, ಕಂದಿಬಿಟ್ಟನು. ಕೂಟದ ಕೊನೆಯಲ್ಲಿ ತೇಲಿಸಿದ ಮೇಲುಗಣ್ಣಿಂದ ನಾನು ಮಲಗಲು, ಪರಮಾಯು ತುಂಬಿತಿವಳಿಗೆಂದು ಆತನಿರದೆ ಪಲಾಯನವಾದನು. ಇದನ್ನು ಕೇಳಿದ ಸಖಿ ನಕ್ಕುಬಿಡುತ್ತಾಳೆ. ಆ ಸಖಿಗೇ ಏಕೆ? ವಿಟನ ಈ ಬೆಪ್ಪುತನಕ್ಕೆ ಯಾರಿಗೆತಾನೆ ನಗೆ ಮುಕ್ಕುಳಿಸುವುದಿಲ್ಲಾ? ಇಂಥ ಬೆಪ್ಪುಗಳಿಗೂ ಬೇಕೇ ವೇಶ್ಯೆಯರ ಹಂಬಲ? ಎಂದು ಇದನ್ನು ಕವಿ ಹಾಸ್ಯದಿಂದ ನಿರೂಪಿಸಿದ್ದಾನೆ.

ಈ ಕಾವ್ಯದಲ್ಲಿರುವ ಇಂಥ ವರ್ಣನೆಗಳನ್ನೋದಿದ ಚಪಲತನದ ಕುಚೋದ್ಯಗಾರ ನೊಬ್ಬ ಷಡಕ್ಷರದೇವನ ಬಳಿಗೆ ಬಂದು, ನೆರೆದ ಶಿಷ್ಯವೃಂದ ಸಮಕ್ಷದಲ್ಲಿ ಕೇಳುವನು: ಸ್ವಾಮಿ! ತಾವು ಪುಣ್ಯಚಾರಿತ್ರ್ಯದ ಯೋಗಿಪುಂಗವರು. ತಮ್ಮ ರಾಜಶೇಖರ ವಿಲಾಸ ರಸಾತ್ಮಕವಾದ ಒಳ್ಳೆಯ ಕಾವ್ಯ. ಶೃಂಗಾರ ರಸವಂತೂ ಅತ್ಯಪೂರ್ವವಾಗಿದ್ದು ಅದು ರಸಿಕರ ರಸಾಯನವಾಗಿದೆ. ರತಿಲಂಪಟರಾದ ದಂಪತಿಗಳಿಗೂ ಸಹ ಗೋಚರವಿಲ್ಲದ ರತಿರಹಸ್ಯದ ಸಂಗತಿಗಳು ಅಲ್ಲಿ ಕುತೂ ಹಲವನ್ನು ಅತಿಗೊಳಿಸುತ್ತ ಇವೆ. ಆದರೆ ಅನುಭವವಿಲ್ಲದ ಸಂಗತಿಗಳನ್ನು ಇಷ್ಟು ವಾಸ್ತವಿಕ ವಾಗಿ ವರ್ಣಿಸಲಿಕ್ಕೆ ಯಾರಿಂಗೂ ಆಗುವುದಿಲ್ಲ ಎಂದನು. ಎಂದರೆ – ನೀವು ಸ್ತ್ರೀ ಸಂಪರ್ಕದ ಸುಖಾನುಭವವನ್ನು ಪಡೆದೇ ಇರುವಿರಿ – ಎಂಬ ಆತನ ವ್ಯಂಗ್ಯವಾದ ಟೀಕೆ ಕಾಣುತ ಇದ್ದುದ ರಿಂದ, ಶಿಷ್ಯರೆಲ್ಲಾ ಸ್ವಾಮಿ ಷಡಕ್ಷರದೇವನ ಮುಖವನ್ನೇ ನೋಡತೊಡಗಿದರು. ನಿರ್ವಿಕಾರ ಚಿತ್ತನಾದ ಷಡಕ್ಷರದೇವನು ಹಸನ್ಮುಖನಾಗಿಯೇ, ಅಯ್ಯಾ! ಇದು ನಿಮ್ಮ ಅಭಿಪ್ರಾಯ. ಆಗಲಿ, ಅದಕ್ಕೇನಂತೆ – ಎಂದು ಯಥಾಪ್ರಕಾರ ಶಿವಾನುಭವ ಪ್ರಸಂಗ ನಡೆಸಿದನು. ಅದು

ಮುಗಿದ ಬಳಿಕ ಆ ಕುಚೋದ್ಯಗಾರನು ಹೋಗಲು ಎದ್ದು ನಿಂತುಕೊಂಡನು. ಆಗ ಅವನನ್ನು ಹತ್ತಿರ ಕರೆದು, ಷಡಕ್ಷರದೇವನು, ತನ್ನ ಮುಂದಿದ್ದ ಕಿಲುಬಾಗಿರುವ ತಾಮ್ರದ ಒಂದು ಹಳೆಯ ನಾಣ್ಯವನ್ನು ಆತನ ಕೈಗೆ ಕೊಟ್ಟು – ಇದನ್ನೀಗ ನೀವು ತೆಗೆದುಕೊಂಡು ಹೋಗಿ ಶೌಚ ಕೂಪಕ್ಕೆ ಹಾಕಿಬಿಡಿ. ನಾನು ಹೇಳಿಕಳುಹಿಸಿದ ದಿವಸ ಇದನ್ನು ಮತ್ತೆ ನೀವು ತಂದು ಕೊಡಬೇಕು. ಇದರಿಂದ ನನಗೆ ಆಗಬೇಕಾದ ಕಾರ್ಯವೊಂದಿದೆ. ಹಾಗೆ ಮಾಡಿಕೊಟ್ಟು ನೀವು ಉಪಕರಿಸ ಬೇಕು – ಎಂದು ನೇಮಿಸಿ ಕಳುಹಿಸಿದನು. ಕೆಲವು ದಿನಗಳ ಮೇಲೆ ಷಡಕ್ಷರದೇವನ ಅನು ಮತಿಯಂತೆ ಆ ಶೌಚಕೂಪದೊಳಗಿದ್ದ ಆ ನಾಣ್ಯವನ್ನು ತೊಳೆದು ತಂದು ಮುಂದೆ ಇಟ್ಟನು. ನೋಡಿದ ಕವಿ – ಇದು ನಾನು ಕೊಟ್ಟಿದ್ದ ನಾಣ್ಯವಲ್ಲ, ಇದೇ ಬೇರೆ, ಇದು ಹೊಳಪಾದ ಹೊಸ ನಾಣ್ಯ. ನಾನು ಕೊಟ್ಟುದು ಹಳೆಯದು, ಕಿಲುಬು ಹಿಡಿದು ಅದು ಕಪ್ಪಾಗಿತ್ತು – ಎಂದನು. ಈ ಮಾತಿಗೆ ಆತನು – ಇದೇನು ಸ್ವಾಮಿ ತಾವು ಹೀಗೆನ್ನುವಿರಿ? ಇದುವರೆಗೆ ಕೂಪದೊಳಗಿದ್ದುದ ರಿಂದ ಅದರ ಹುಳಿಗೆ ಕಿಲುಬೆಲ್ಲ ಹೋಗಿ ಹೊಳಪಾಗಿ ಹೊಸನಾಣ್ಯ ವೆಂಬಂತೆ ಇದು ತೋರುತ್ತ ಇದೆ – ಎಂದು ಉತ್ತರಕೊಟ್ಟನು. ಷಡಕ್ಷರದೇವ ಕವಿ ಆಗ, ಅಯ್ಯಾ! ಅಮೇಧ್ಯದ ಆ ಹುಳಿಯ ಅನುಭವ ನಿಮಗಾದುದು ಹೇಗೆ? ಏಕೆಂದರೆ, ಸ್ವಯಂ ಅನುಭವಿಸದೆ ಅದನ್ನು ಯಾರೂ ಹೇಳಲಿಕ್ಕಾಗುವುದಿಲ್ಲವೆಂಬುದನ್ನು ಮೊನ್ನೆ ನೀವೇ ಮಾತಾಡಿದ್ದಿರಿ. ಅದನ್ನು ನೀವಾ ದರು ರುಚಿ ನೋಡಿದ್ದೀರಾ? ಎಂದು ಕೇಳಲು, ಆಗ ಆತ ತಲೆಬಾಗಿ ತಾನಾಡಿದುದಕ್ಕೆ ಕ್ಷಮೆ ಬೇಡಿದನು. ಷಡಕ್ಷರದೇವ ಆಗ ಆತನಿಗೆ ಹೇಳುತ್ತಾನೆ –

ಕಂದ ॥ ಕಲಿಸಿಮೊಡೇಂ ಬರ್ಕುಮೆ ಸ –
ಲ್ಲಲಿತ ಕವಿತ್ವಂ ನಿಸರ್ಗಸುಭಗಂ ರಮಣೀ।
ವಿಲಸಿತ ರತಿರಸ ರಸಿಕತೆ
ತಲೆದೋರ್ಪುದು ತಾನೆ ಕಲಿಸಲೇಂ ಬಂದಪುದೇ ? ॥

ಕವಿತಾಶಕ್ತಿ ಕಲಿತ ಅನುಭವದಿಂದ ಬರುವಂಥದಲ್ಲ, ಅದು ಸ್ವಭಾವ ಸಿದ್ಧವಾದದ್ದು. ಸುರ ತೇಚ್ಛೆಯುಳ್ಳ ಸುಂದರಿಯ ಮನಂಗೊಳಿಸುವ ಪ್ರೀತಿರಸದ ಜಾಣತನವು, ತನ್ನಷ್ಟಕ್ಕೆ ತಾನೇ ಅದು ಉಂಟಾಗುತ್ತದೆ ಅಲ್ಲದೆ, ಕಲಿತ ಅನುಭವದಿಂದಾಗಲಿ ಕಲಿಸುವದರಿಂದಾಗಲಿ ಬರುತ್ತದೆ ಯೇನು? ಕವಿತ್ವವು ದೈವದತ್ತವಾಗದೆ, ಕೇವಲ ಅಭ್ಯಾಸ ವಶದಿಂದ ಬರುವುದಾಗಿದ್ದರೆ, ಕಲಿತವರೆಲ್ಲ ಕವೀಶ್ವರರಾಗದೆ ಇದ್ದರೂ ಕವಿಗಳಾದರೂ ಆಗುತ್ತ ಇದ್ದರು. ದೈವದತ್ತವಾದ ಕವಿತ್ವವು ಸ್ವಭಾವ ಸುಂದರವಾದುದರಿಂದಲೇ 'ರವಿ ಕಾಣದುದನ್ನು ಕವಿ ಕಾಣುವನು' ಎಂದಿರುವಂತೆ ಅಗೋಚರವಾದುದನ್ನೂ ಕವಿ ಹೇಳಬಲ್ಲನು. ಸ್ವಭಾವಸಿದ್ಧವಾಗಿರುವ ಶಕ್ತಿಗೆ ಅನುಭವದ ಮಾತೇಕೆ? ಆ ವರ್ಣನೆಗಳನ್ನು ನೋಡಿ ನಿಮ್ಮಂಥವರೆಲ್ಲ ಕವಿಗಳ ಮೇಲೆ ಹೀಗೆ ಕಲ್ಪಿಸಬಾರದು – ಎಂಬುದಾಗಿ ಷಡಕ್ಷರದೇವ ಬೋಧಿಸಿದನಂತೆ. ಇದನ್ನು ಪರ್ಯಾಲೋಚಿಸಿದರೆ, ಜನರಂಜನೆಗೊಳಿಸುವ ಶೃಂಗಾರಕೇಳಿಯ ವರ್ಣನೆಗಳನ್ನು ಯೋಗಿಜನಾಲಂಕಾರನಾದ ಷಡ ಕ್ಷರದೇವ ಮಹಾಕವಿಯು ಎಂತುಮಾಡಿದನೆಂಬ ಆಕ್ಷೇಪ ಸಲ್ಲುವುದಿಲ್ಲ, ನಿಲ್ಲುವುದೂ ಇಲ್ಲ. ಆದರೂ ಕವಿಯು –" ಎಲ್ಲಬಗೆಯ ವರ್ಣನೆಗಳುಳ್ಳ ಇಂಪಾದ ಕಾವ್ಯಗಳನ್ನು ಶಿವಯೋಗಿವರ್ಯ ರಾದ ಹಂಪೆಯ ಹರೀಶ್ವರದೇವ, ಗುಬ್ಬಿಯ ಮಲ್ಲಣಾರ್ಯ ಇವರು ರಚಿಸಿದ್ದಾರೆ. ಹಾಗೆಯೇ ನಾನೂ ಹೇಳಿರುವೆನು. ಆದುದರಿಂದ ಇದನ್ನು ಅನುಚಿತವೆನ್ನದಿರಲಿ ಸಜ್ಜನರು "– ಎಂದಿದ್ದಾನೆ. ಇದು ಮಹಾಜನರು ಹೋದ ದಾರಿ ಎಂದಮೇಲೆ ಮತ್ತಲ್ಲಿ ಆಕ್ಷೇಪಿಸುವುದೇನಿದೆ?

## ಪದಪ್ರಯೋಗ ಚಾಣ್ಮೆ

ವರ್ಣನಾ ಸಂದರ್ಭಕ್ಕೊಪ್ಪುವಂಥ ಕರ್ಣಮನೋಹರವಾದ ವರ್ಣಗಳನ್ನು ತುಂಬಿಕೊಂಡಿರುವ ಪದ್ಯಗಳು ಬಹಳ ಹೃದ್ಯವೆನಿಸುತ್ತವೆ. ಹೇಗೆಂದರೆ: ಗುಡುಗು ಸಿಡಿಲುಗಳ ಖಡಖಡಾಟದಿಂದ ಬಿಡದೆ ಸುರಿವ ಮಳೆಯನ್ನಿಲ್ಲಿ ವರ್ಣಿಸಿರುವುದನ್ನು ಕೇಳಿ:

ಕಂದ॥ ಘುಡು ಘುಡು ಛಿಳಿ ಛಿಟಲೆಂದು –
ಗ್ಗಡದ ಸಿಡಿಲ್ ದನಿಯೆಪೊಡೆಯೆ ಗಗನಸ್ಥಳದಿಂ –
ದುಡುಗಳ್ ಪಳಪಳ ಸುದಿರ್ಪವೊ –
ಳೆಡೆವಿಡಿದಿಳಿ ವಾಲಿವರಲ ಮಳೆ ಬಗೆಗೋಳಿಕುಂ ॥

ರಾ. ವಿ. VIII, ೧೧೩.

ಪದ್ಯವು ನಾಲಗೆಯ ಮೇಲೆ ಪ್ರಾರಂಭವಾಗಿ – ಘುಡು ಘುಡು ಛಿಳಿ ಛಿಟಿಲೆಂ ದುಗ್ಗಡದ ಸಿಡಿಲ್ ದನಿಯೆ ಪೊಡೆಯೆ – ಎಂದೊಡನೆಯೇ ನಮಗೆ ಆ ವರ್ಣಗಳೂ ಸಹ ಆ ದನಿಯನ್ನು ಅಣಕಿಸುತ್ತವೆಯೇ ಎಂಬಂತೆ ಕೇಳಬಂದು, ಆ ಭಯಂಕರತೆಯನ್ನು ಚಿತ್ರಿಸುತ್ತಿದ್ದಂತೆ, ಮುಂದಾಗಲೆ ಆ ಸಿಡಿಲಿನ ಖಡ ಖಡಾಟದ ಹೊಡೆತಕ್ಕೆ ಅಲ್ಲಿದ್ದ ಉಡುಗಳ್ (ನಕ್ಷತ್ರಗಳು) ಪಳಪಳನೆ ಉದಿರುತ್ತಿರುವಂತೆ, ಆಲಿಕಲ್ಲಿನ ಜಡಿಮಳೆ ಎಡೆಬಿಡದೆ ಸುರಿಯುವುದು – ಈ ಪದ್ಯದಲ್ಲೇನೋ ಬಗೆಗೋಳಿಕುಂ – ಎಂಬುದು ನಿಜ. ಆದರೆ ಇಂಥಾ ಮಳೆಯೊಳಗೆ ಪ್ರವೇಶಿಸಿದರೆ – ಎದೆಗೆಡಿಕುಂ – ಎನ್ನಬೇಕಾಗುತ್ತದೆ. ಇನ್ನೂ ಶ್ಲೇಷಾರ್ಥದಲ್ಲಿ (ಎಂದರೆ ಒಂದು ರೆಂಬೆಯಲ್ಲಿ ಎರಡು ಕವಲುಗಳು ಕಂಡಂತೆ, ಒಂದೇ ಪದದಲ್ಲಿ ಎರಡು ಬಗೆಯ ಅರ್ಥ ತೋರುವುದಕ್ಕೆ 'ಶ್ಲೇಷ' ಎನ್ನುತ್ತಾರೆ). ಇರುವ ಪದ್ಯವೊಂದನ್ನು ಲಾಲಿಸಿ:

ಕಂದ॥ ಇನ ನಿಲ್ಲ ನಿಂದು ಬಾರಂ
ಘನ ತಿಮಿರ ಮಿದಪ್ಪುದಕಟ ನೇಹಮುದಿಲ್ಲಂ।
ಮನೆಯೊಳ್ ಸೊಡರಿದೆ ಪೋದುದು
ಜನರಹಿತಂ ನೆರೆ ಇದೆಂದು ಪದಿರಿಂ ನುಡಿದಳ್ ॥

— ರಾ. ವಿ.

[ಇನ = ಸೂರ್ಯ, ಮತ್ತು ಗಂಡ. ಇಂದು = ಚಂದ್ರ, ಮತ್ತು ಈದಿನ. ಘನ = ಮೋಡ, ಮತ್ತು ಬಹಳ. ತಿಮಿರ = ಕತ್ತಲೆ, ಹಾಗು ತೀಂಟೆ ಅಥವಾ ಕಡಿತಿಕ್ಕಿದುದು, ನೇಹ = ಪ್ರೀತಿ, ಮತ್ತು ಎಣ್ಣೆ. ಸೊಡರು = ದೀಪ, ಹಾಗೂ ಪರಸ್ಪರ ವೈಷಮ್ಯ. ನೆರೆ = ಅಕ್ಕಪಕ್ಕದೆಡೆ, ಮತ್ತು ಕೂಡು. ಪದಿರಿಂ = ಜಾಣತನದಿಂದ, ಮತ್ತು ಉಬ್ಬಿದ ಭಾವನೆಯಿಂದ.]

ಪದ್ಯ ಸಂದರ್ಭ: ಹರೆಯದ ಹಾದಿಕಾರನೊಬ್ಬ ಸಂಜೆಯಾಗಲು ಅಲ್ಲಿದ್ದ ಒಂದು ಮನೆಯ ಬಳಿ ಹೋಗುತ್ತಾನೆ. ಆಗಲೇ ಮಬ್ಬು ಮುಸುಕುತ್ತಿತ್ತು. ಪರಸ್ಥಳದ ಈತನಿಗೆ ಮೆಚ್ಚಿದ ಆ ಮನೆಯವಳು ಹೇಳುತ್ತಾಳೆ: ಎಲೆ ಪಾಂಥ! ಸೂರ್ಯ ಇಲ್ಲ, ಚಂದ್ರನೂ ಮೂಡುವುದಿಲ್ಲ. ಮೋಡಗತ್ತಲೆ, ಮನೆಯಲ್ಲಿ ಎಣ್ಣೆಯೂ ಇಲ್ಲ. ದೀಪವುಕೂಡ ಇದೇತಾನೆ ಹೋಗಿಬಿಟ್ಟಿತು. ಅಕ್ಕಪಕ್ಕವೂಕೂಡ ಜನರಹಿತವಾಗಿದೆ — ಇದು ಒಂದು ಅರ್ಥ. ಇನ್ನು ಈ ದಿನ

ಗಂಡ ಇಲ್ಲ; ಈವೊತ್ತು ಬರುವುದಿಲ್ಲ. ಭಾರಿ ತೀಟೆ (ಕಡಿತ) ಉಂಟಾಗಿದೆ. ಮನೆಯೊಳಗೆ ನನಗೆ ಪ್ರೀತಿಯಿಲ್ಲ (ಇಷ್ಟವಿಲ್ಲ). ಹೋಗಿಬಿಟ್ಟಿದ್ದಾರೆ ಜನರೆಲ್ಲ. ನಾನೆಂದೂ ಅಕ್ಕಪಕ್ಕದ ಜನರ ಹಿತವುಳ್ಳವಳು – ಎಂಬುದಾಗಿ ಜಾಣತನದಿಂದ ಅಥವಾ ಉಬ್ಬೆದ್ದ ಮನದಿಂದ ಹೇಳಿದಳು ಎಂಬುದಿದು ಇನ್ನೊಂದರ್ಥ. ಮೊದಲನೆಯ ಅರ್ಥದಲ್ಲಿ – ನಿರ್ಜನವಾಗಿರುವ ಈ ಕಾರ್ಗತ್ತಲೆ ಯೊಳಗೆ ನೀನೇನ ಮಾಡಿದರೂ ಇಲ್ಲಿ ಕೇಳುವವರೇ ದಿಕ್ಕಿಲ್ಲವಾದ ಸ್ಥಿತಿ ಇರುವುದರಿಂದ, ನೀನು ನನ್ನನ್ನು ಏನುಮಾಡಿದರೂ ಈಗ ನಡೆದು ಹೋಗಿಬಿಡುತ್ತದೆ – ಎಂದು ಆತನಿಗೆ ಧೈರ್ಯ ಮತ್ತು ಪ್ರೋತ್ಸಾಹ ಉಂಟಾಗುವುದಕ್ಕಾಗಿ ಇಲ್ಲೆಲ್ಲಾ ನಿನಗೇ ಅನುಕೂಲವಾದ ವಾತಾವರಣವಿದೆ ಎಂಬುದನ್ನು ಸೂಚಿಸಿದ್ದಾಳೆ. ಎರಡನೆಯ ಅರ್ಥದಲ್ಲಿ – ನನ್ನ ಉಬ್ಬೆದ್ದ ಮನ ನಿನ್ನ ನೋಡಿ ತಡೆಯಲೊಲ್ಲದು, ತಾಳಲಾರೆ – ಎಂಬುದನ್ನು ಪ್ರಕಟಿಸುತ್ತ ಇದೆ. 'ಜನರಹಿತಂ' ಎಂಬ ಪದವು 'ಜನರ – ಹಿತಂ' ಎಂದು ಒನ್ಮೆ, 'ಜನ – ರಹಿತಂ' ಎಂದು ಇನ್ನೊಮ್ಮೆ ಪದವಿಭಾಗ ಮಾಡಿಕೊಂಡು ಓದಬೇಕಾಗುತ್ತದೆ. ಹೀಗೆ ಪದಪ್ರಯೋಗವನ್ನು ಬಲ್ಲ ಕವಿಗೆ ಯಾರೂ ಅದನ್ನು ಹೇಳಿಕೊಡಬೇಕಾಗಿಲ್ಲ.

ತಿರುಕೊಳವಿನಾಚಿಯ ಪುತ್ರಶೋಕಾವಸರದಲ್ಲಿ ಸಾಮಾನ್ಯ ಜನರದಾಗಿರುವ ತ್ರಿಪುಡೆಯ ಛಂದಸ್ಸನ್ನು ಕವಿ ಮೆಚ್ಚಿಕೊಂಡಿರುವುದು, ಲೋಕಾನುಭವದಲ್ಲಿ ಅವನಿಗಿರುವ ತಾರತಮ್ಯಜ್ಞಾನ ವನ್ನು ಗೊತ್ತುಪಡಿಸುತ್ತ ಇದೆ. ಅವಿದ್ಯಾವಂತಳೂ ಸಾಮಾನ್ಯ ಜೀವನದವಳೂ ಆದ ಆ ತಿರು ಕೊಳವಿನಾಚಿಯ ಪುತ್ರಶೋಕಕ್ಕೆ ಇನ್ನುಳಿದ ವೃತ್ತ ಪದ್ಯಗಳನ್ನು ಬಳಸಿದ್ದರೆ ಪಾತ್ರೋಚಿತವಾಗಿ ಕಾಣುತ್ತ ಇರಲಿಲ್ಲ; ಪ್ರಶಸ್ತವೂ ಆಗಿ ತೋರುತ್ತಿರಲಿಲ್ಲ.

ಹೀಗೆಯೇ ಕವಿಯು ರಾಜಶೇಖರ ವಿಲಾಸವನ್ನು ಉದ್ದಕ್ಕೂ ಪದವೋ ಅರ್ಥವೋ ಕಲ್ಪನೆಯೋ ನೀತಿಯೋ ತತ್ತ್ವವೋ ವಸ್ತುನಿರೂಪಣವೋ ಯಾವುದೇ ಆಗಲಿ ಅದನ್ನು ಮನಂ ಬುಗುವಂತೆ ರಸವತ್ತಾಗಿ ರಚಿಸಿದ್ದಾನೆ.

ಕಂದ || ಕಡುರುಜೆ ಯಡಸಿದ ತನುವುಂ
ಬಡತನ ಮೆಡೆಗೊಂಡ ಬಾಳ್ಕೆಯುಂ ಖಲಜನರೊಂ–
ದೊಡನಾಟಮು ಮೆರ್ದೆಗಳಲಂ
ಪಡೆಯದೆ ಮಾಣ್ದಪುದೆ ಶೈವ ಹಿತ ಶುಭ ಚರಿತ ||

— ರಾ. ವಿ.

ಸಾಮಾನ್ಯ ಜನರ ಸುಖದುಃಖಾನುಭವದ ದುರವಸ್ಥೆಯನ್ನು ಕವಿ ಯೆಷ್ಟು ಅನುಭವ ಪೂರ್ಣವಾಗಿ ಹೃದಯ ಸ್ಪರ್ಶಿಯಾಗುವಂತೆ ಈ ಪದ್ಯದ ತುಂಬ ತುಂಬಿಟ್ಟಿದ್ದಾನೆ!

ಒಟ್ಟಿನಲ್ಲಿ ಮಂತ್ರಸಾಮರ್ಥ್ಯದಿಂದ ಮಹಾದೇವನನ್ನು ಮೆಚ್ಚಿಸಿದ ರಾಜಶೇಖರನು ಷಡಕ್ಷರದೇವನಿಂದ ಅಮರ ಪಾತ್ರವಾಗಿ ಕಂಗೊಳಿಸುತ್ತಾ ಇದ್ದಾನೆ. ವಿಸ್ತಾರ ಭಯದಿಂದ ಇಡೀ ಸಂದರ್ಭಗಳನ್ನೆಲ್ಲಾ ಇಲ್ಲೀಗ ವಿವರಿಸಲು ನನಗೆ ಹೊತ್ತಿಲ್ಲವಾದುದರಿಂದ, ರಾಜಶೇಖರ ವಿಲಾಸದ ಕೇವಲ ಹೊರಮ್ಮೆ ನೋಟಕ್ಕೆ ಹೋಗಿ, ಅದನ್ನೂ ಸಹ ಪೂರ್ತಿಗೊಳಿಸದೆ ಅದರ ದಿಗ್ದ ರ್ಶನ ಮಾತ್ರ ನಡೆಸಿದ್ದೇನೆ. ಷಡಕ್ಷರದೇವ ಮಹಾಕವಿಯ ಕೀರ್ತಿಕಾಂತೆಯ ಸಖಿಯಾದ ಈ ಕೃತಿಕಾಂತೆ ಸುಖದಿಂದ ಬಾಳಲಿ!

# ವಿಶ್ವದ ಮಿಕ್ಕ ಗ್ರಹಗಳಲ್ಲಿ ಜೀವಿಗಳುಂಟೇ ?*

ಲೇಖಕರು : ಡಾ|| ಹೆಚ್. ನರಸಿಂಹಯ್ಯ

ಪ್ರಿನ್ಸಿಪಾಲ್, ನ್ಯಾಷನಲ್ ಕಾಲೇಜು, ಬೆಂಗಳೂರು.

ಮಾನವನ ಯೋಚನಾಶಕ್ತಿ ಹೆಚ್ಚಿದಂತೆಲ್ಲಾ ಪ್ರಕೃತಿಯ ನಿಯಮಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ಆದಿಮಾನವನಿಗೆ ಹಸಿವು, ಬಾಯಾರಿಕೆ, ಮೇಲಕ್ಕೆ ಎಸೆದ ಕಲ್ಲು ಕೆಳಗೆ ಬೀಳುವುದು, ನಕ್ಷತ್ರಗಳ ಪ್ರಕಾಶ ಇವೆಲ್ಲವೂ ಸಹಜವಾದ ಘಟನೆಗಳಾಗಿದ್ದುವು. ಇವುಗಳಿಗೆ ವಿಶೇಷ ಅರ್ಥವಾಗಲಿ ಅಥವಾ ಇವುಗಳಿಂದ ತಿಳಿದುಕೊಳ್ಳಬಹುದಾದ ಹೊಸ ವಿಷಯಗಳಾಗಲೀ ಯಾವುದೂ ಇಲ್ಲವೆಂದು ಭಾವಿಸಿದ್ದನು. "ಏಕೆ ?" ಎನ್ನುವ ಪದ ಗೊತ್ತಿದ್ದಿತೋ ಇಲ್ಲವೋ ತಿಳಿಯದು. ಗೊತ್ತಿದ್ದರೂ ಪ್ರಕೃತಿ ಸಂಬಂಧವಾದ ಘಟನೆಗಳಿಗೆ ಇದನ್ನು ಉಪಯೋಗಿಸಬಾರದೆಂಬ ನಿಷಿದ್ಧ ಇದ್ದರೂ ಹೆಚ್ಚಲ್ಲ. ಕಾಲಕ್ರಮೇಣ ಮನುಷ್ಯನ ವಿವೇಚನಾಶಕ್ತಿ ಹೆಚ್ಚಿದಂತೆಲ್ಲಾ ತನ್ನ ಬಾಹ್ಯ ಪ್ರಪಂಚದ ಚಟುವಟಿಕೆಗಳನ್ನು ಸಹಜವಾಗಿ ತೆಗೆದುಕೊಳ್ಳದೆ ಆಶ್ಚರ್ಯಾತ್ಮಕ ರೀತಿಯಿಂದ ನೋಡಲು ಮೊದಲುಮಾಡಿ "ಮೇಲಕ್ಕೆಸೆದ ವಸ್ತುಗಳು ಕೆಳಕ್ಕೇ ಏಕೆ ಬೀಳಬೇಕು ? ತಮ್ಮಷ್ಟಕ್ಕೆ ತಾವೇ ಮೇಲಕ್ಕೆ ಏಕೆ ಹೋಗುವುದಿಲ್ಲ ? ದೂರದಲ್ಲಿ ಮಿನುಗುತ್ತಿರುವ ನಕ್ಷತ್ರಗಳ ಸ್ವರೂಪವೇನು ? ಕೆಲವು ವಸ್ತುಗಳು ಘಟ್ಟಿಯಾಗಿವೆ, ಕೆಲವು ನೀರಾಗಿವೆ; ಇನ್ನೂ ಕೆಲವು ಕೈಗೇ ಸಿಕ್ಕುವುದಿಲ್ಲ. ಇದೇನು ಆಶ್ಚರ್ಯ ! " ಎಂಬುದಾಗಿ ಪ್ರಕೃತಿಯ 'ಲೀಲೆ' ಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಪಡುತ್ತಿದ್ದಾನೆ. ಅವನ ಅಸಂಖ್ಯಾತ ಕೌತುಕಗಳಲ್ಲಿ "ಜೀವಿಗಳು ವಿಶ್ವದ ಉಳಿದ ಕಡೆಯೂ ಉಂಟೇ ಅಥವಾ ಭೂಮಿಯು ಮಾತ್ರ ಜೀವಿಗಳಿಗೆ ಆವಾಸಸ್ಥಾನವೇ" ಎಂಬ ಪ್ರಶ್ನೆಯು ಬಹು ಕಾಲದಿಂದ ಮನುಷ್ಯನನ್ನು ಬಾಧಿಸುತ್ತಿದೆ. ಈ ತೊಡಕನ್ನು ಬಿಡಿಸಬೇಕಾದರೆ ನಾವು ಹಲವು ವಿಷಯಗಳಲ್ಲಿ ಸಾಕಷ್ಟು ಜ್ಞಾನ ಸಂಪಾದಿಸಬೇಕಾಗಿದೆ.

## ಜೀವಪೋಷಣೆಗೆ ಸಾಧನಗಳು

### ವಾಯುಮಂಡಲ

ಜೀವ ಹೇಗೆ ಭೂಮಿಯ ಮೇಲೆ ಉತ್ಪತ್ತಿಯಾಯಿತು ಎನ್ನುವುದು ಇನ್ನೂ ಗೊತ್ತಿಲ್ಲ. ಆದರೆ ಜೀವಪೋಷಣೆಗೆ ಏನು ಸಾಧನಗಳು ಬೇಕು ಎನ್ನುವುದು ತಕ್ಕಮಟ್ಟಿಗೆ ತಿಳಿದಿದೆ. ಈ ಸಂದರ್ಭದಲ್ಲಿ ಇನ್ನೊಂದು ವಿಷಯವನ್ನು ಸ್ಪಷ್ಟಪಡಿಸಬೇಕಾಗಿದೆ. ಜೀವಗಳಲ್ಲಿ ವೈವಿಧ್ಯತೆ ಇರಬಹುದು. ಒಂದು ವಿಧವಾದ ಜೀವದ ಪೋಷಕ ದ್ರವ್ಯ ಇನ್ನೊಂದು ಬಗೆಯ ಜೀವಕ್ಕೆ ಕಂಟಕಪ್ರಾಯವಾಗಬಹುದು. ಒಂದು ಜೀವ ಕೆಲವು ಮೂಲವಸ್ತುಗಳಿಂದ ಆಗಿದ್ದರೆ ಇನ್ನೊಂದು ವಿಧವಾದ ಜೀವ ಬೇರೆ ಮೂಲವಸ್ತುಗಳಿಂದ ಆಗಿರಬಹುದು. ಆದುದರಿಂದ ಈ

---

* ಇದು ತಿಪಟೂರಿನಲ್ಲಿ ೧೭-೧೧-೧೯೬೨ ರಂದು ನಡೆದ ಬೆಳ್ಳಾವೆ ವೆಂಕಟನಾರಣಪ್ಪನವರ ದತ್ತಿ ಭಾಷಣ.

ಲೇಖನದಲ್ಲಿ ಜೀವ ಎಂದು ಉಪಯೋಗಿಸಿದರೆ ಅದು ನಾವು ನೋಡುತ್ತಿರುವ, ಭೂಮಿಯ ಮೇಲಿರುವ, ನಮಗೆ ಅಲ್ಪಸ್ವಲ್ಪ ಗೊತ್ತಿರುವ ಜೀವವೆಂದು ತಿಳಿಯಬೇಕು. ಊಹಾಪೋಹಗಳಿಂದ ಕೂಡಿರುವ ಉಳಿದ ಜೀವದ ವಿಷಯ ಬರೆಯಲು ನಮಗೆ ಯಾವ ಆಧಾರವೂ ಇಲ್ಲ. ಈ ವಿವರಣೆಯ ನಂತರ ಜೀವ ಉತ್ಪತ್ತಿಯಾಗಲು ಮತ್ತು ಬದುಕಲು ಯಾವ ಸಾಧನ ಸಂಪತ್ತು ಬೇಕು ಎಂಬುದನ್ನು ವಿಚಾರಮಾಡೋಣ.

ಜೀವಪೋಷಣೆಗೆ ಅಗತ್ಯವಾದುದು ಒಂದು 'ಒಳ್ಳೆಯ' ವಾಯುಮಂಡಲ. ಒಳ್ಳೆಯದು ಎಂದರೆ ಅದು ಇಂತಿಷ್ಟು ಆಮ್ಲಜನಕ, ಜಲಜನಕ, ಸಸಾರಜನಕ, ಇಂಗಾಲಾಮ್ಲ, ನೀರಿನ ಆವಿಗಳಿಂದ ಕೂಡಿರಬೇಕು. ಎಲ್ಲಾ ಗ್ರಹಗಳಲ್ಲಿಯೂ ವಾಯುಮಂಡಲ ಇರಲು ಸಾಧ್ಯವಿಲ್ಲ. ವಾಯುಮಂಡಲದ ಇರುವಿಕೆಗೆ ನೆರವಾಗಬಹುದಾದ ಸಾಧನಗಳಾವುವು ಎಂಬುದನ್ನು ಸ್ವಲ್ಪ ತರ್ಕ ಮಾಡೋಣ. ಒಂದು ಕಲ್ಲನ್ನು ಮೇಲೆ ಎಸೆದರೆ ಅದು ಮೇಲಕ್ಕೆ ಸ್ವಲ್ಪ ದೂರ ಹೋಗಿ ಪುನಃ ವಾಪಸಾಗುತ್ತದೆ. ಇನ್ನೂ ಹೆಚ್ಚಿನ ವೇಗದಿಂದ ಎಸೆದಾಗ ಮತ್ತಷ್ಟು ಎತ್ತರಕ್ಕೆ ಹೋಗಿ ನೆಲಕ್ಕೆ ಬೀಳುತ್ತದೆ. ಇದರ ಚಲನೆ ಭೂಮಿಯ ಆಕರ್ಷಣ ಶಕ್ತಿಯ ಹಿಡಿತಕ್ಕೆ ಸಿಕ್ಕಿದೆ. ಹಾಗಾದರೆ ಕಲ್ಲಿಗೆ 'ಮೋಕ್ಷ' ಸಿಗಲು ಅಂದರೆ ಪುನಃ ವಾಪಸು ಬರದೇ ಹೋಗಲು ಎಷ್ಟು ವೇಗದಿಂದ ಎಸೆಯಬೇಕು ಎಂಬುದಾಗಿ ಲೆಕ್ಕಾಚಾರ ಮಾಡಿದರೆ ಅದು ಒಂದು ಸೆಕೆಂಡಿಗೆ ಸುಮಾರು 7 ಮೈಲಿಯಾಗುತ್ತದೆ. ಈ ವಿಮೋಚನಾ ವೇಗ (Escape Velocity) ವು ಗ್ರಹದ ತೂಕ ಮತ್ತು ಗಾತ್ರವನ್ನು ಅವಲಂಬಿಸುತ್ತದೆ. ಈ ಕೆಳಗೆ ಸೂಚಿಸಿರುವ ಪಟ್ಟಿಯಿಂದ ಸೂರ್ಯಮಂಡಲದ ಗ್ರಹಗಳಲ್ಲಿ ಮತ್ತು ಉಪಗ್ರಹವಾದ ಚಂದ್ರನಲ್ಲಿ ಎಷ್ಟು ವಿಮೋಚನಾವೇಗವಿರಬೇಕೆಂದು ವಿದಿತವಾಗುತ್ತದೆ:

| | | ವಿಮೋಚನಾವೇಗ ಒಂದು ಸೆಕೆಂಡಿಗೆ ಮೈಲಿಗಳಲ್ಲಿ |
|---|---|---|
| ಸೂರ್ಯ | .... | 392·0 |
| ಬುಧ (Mercury) | .... | 2·4 |
| ಶುಕ್ರ (Venus) | .... | 6·5 |
| ಭೂಮಿ | .... | 7·1 |
| ಚಂದ್ರ | .... | 1·5 |
| ಮಂಗಳ (Mars) | .... | 3·2 |
| ಗುರು (Jupiter) | .... | 38·0 |
| ಶನಿ (Saturn) | .... | 23·0 |
| ಯುರೇನಸ್ | .... | 14·0 |
| ನೆಪ್ಚ್ಯೂನ್ | .... | 15·0 |
| ಪ್ಲೂಟೋ | .... | 2·2 |

ಭೂಮಿಯ ವಾಯುಮಂಡಲ ನಮಗೆ ತಿಳಿದಹಾಗೆ ಕೆಲವು ಅನಿಲಗಳಿಂದ ಕೂಡಿದೆ. ಈ ಅನಿಲಗಳ ಅಣುಗಳು ಸತತವಾಗಿ ಚಲಿಸುತ್ತಿರುತ್ತವೆ. ಈ ಚಲನೆಯ ವೇಗವು ವಾಯುಮಂಡಲದ ತಾಪವನ್ನು ಅವಲಂಬಿಸುತ್ತದೆ. ಪ್ರಯೋಗದ ಮೂಲಕ ಒಂದೇ ಅಣುವಿನ

ವೇಗವನ್ನು ಕಂಡುಹಿಡಿಯಲು ಸಾಧ್ಯವಿಲ್ಲ. ಈ ವೇಗವು ಅಣು ಅಣುವಿಗೂ ಬದಲಾಯಿಸುತ್ತದೆ. ಅತ್ಯಲ್ಪ ವೇಗದಿಂದ ಅತ್ಯಧಿಕ ವೇಗದ ತನಕ ವ್ಯಾಪ್ತಿಯನ್ನು ಹೊಂದಿರುತ್ತದೆ. ಆದರೆ ಅಣುಸಮೂಹದ ಸರಾಸರಿ ವೇಗವು ತಾಪದ ವರ್ಗಮೂಲಕ್ಕೆ ಅನುಗುಣವಾಗಿರುತ್ತದೆ. ಒಂದು ಅಣುವಿನ ವೇಗವು ವಿಮೋಚನಾವೇಗದಷ್ಟಿದ್ದರೆ ತಕ್ಷಣ ಅದು ಭೂಮಿಯ ಬಂಧನದಿಂದ ತಪ್ಪಿಸಿಕೊಳ್ಳುತ್ತದೆ. ಸರಾಸರಿ ವೇಗವು ಅದಕ್ಕಿಂತ ಕಡಿಮೆ ಇದ್ದರೂ ಕೂಡ ಕೆಲವು ಅಣುಗಳ ವೇಗ ವಿಮೋಚನಾವೇಗಕ್ಕಿಂತ 10 ರಷ್ಟು, 100 ರಷ್ಟು, 1,000 ದಷ್ಟು ಕೂಡ ಇರುತ್ತದೆ. ಆದುದರಿಂದ ವಾಯುಮಂಡಲವು ನಿಧಾನವಾಗಿ ನಶಿಸಿಹೋಗುತ್ತದೆ. ಸರ್ ಜೇಮ್ಸ್ ಜೀನ್ಸ್ ಎಂಬ ವಿಜ್ಞಾನಿಯ ಲೆಕ್ಕಾಚಾರದ ಪ್ರಕಾರ ಸರಾಸರಿ ವೇಗವು ವಿಮೋಚನಾವೇಗದ $\frac{1}{3}$ ಭಾಗವಿದ್ದರೆ ವಾಯುಮಂಡಲವು ಬರಿದಾಗಲು ಕೆಲವು ವಾರಗಳು ಬೇಕಾಗುತ್ತವೆ. $\frac{1}{4}$ ಭಾಗವಿದ್ದರೆ ಸುಮಾರು 50,000 ವರ್ಷಗಳೂ $\frac{1}{5}$ ಭಾಗವಿದ್ದರೆ ಸುಮಾರು 25,00,00,00,000 ವರ್ಷಗಳು ಬೇಕಾಗುವುದು. ಕೆಲವು ಅಣುಗಳ ಸರಾಸರಿ ವೇಗವನ್ನು (ಖರತ್ವ 0°C) ಈ ಕೆಳಗೆ ಕೊಟ್ಟಿದೆ :

| | | ಸೆಕೆಂಡಿಗೆ ಮೈಲಿಗಳು |
|---|---|---|
| ಜಲಜನಕ | .... | 1·15 |
| ಹೀಲಿಯಂ | .... | 0·82 |
| ನೀರಿನ ಆವಿ | .... | 0·38 |
| ಸಸಾರಜನಕ | .... | 0·31 |
| ಆಮ್ಲಜನಕ | .... | 0·29 |
| ಇಂಗಾಲಾಮ್ಲ | .... | 0·25 |

ಭೂಮಿಯ ಮೇಲಿನ ವಿಮೋಚನಾವೇಗವು ಸುಮಾರು ಸೆಕೆಂಡಿಗೆ 7 ಮೈಲಿ ಇರುವುದರಿಂದ ಮೇಲ್ಕಂಡ ಎಲ್ಲ ಅನಿಲಗಳೂ ಭೂಮಿಯ ಆಕರ್ಷಣೆಗೆ 'ಶಾಶ್ವತ' ವಾಗಿ ಸಿಕ್ಕಿ ವಾಯುಮಂಡಲದಲ್ಲಿ ನಷ್ಟ ಸಂಭವಿಸುವುದಿಲ್ಲ. ಆದರೆ ಭೂಮಿಯ ಮೇಲೆ ಈಗಿರುವ ವಾಯುಮಂಡಲ ಭೂಮಿಯು ಸೃಷ್ಟಿಯಾದಾಗ ಇದ್ದ ಮೂಲ ವಾಯುಮಂಡಲವಲ್ಲವೆಂದು ಖಚಿತವಾಗಿ ಸ್ಥಿರಪಡಿಸಲಾಗಿದೆ. ಭೂಮಿಯು ಸೃಷ್ಟಿಯಾದಾಗ ಅದು ತುಂಬಾ ಬಿಸಿಯಾಗಿದ್ದಿತು. ಆದುದರಿಂದ ಅದು ತನ್ನ ವಾಯುಮಂಡಲದ ಬಹುಭಾಗವನ್ನು ಶೀಘ್ರವಾಗಿ ಕಳೆದುಕೊಂಡಿತು. ಈಗಿರುವ ವಾಯುಮಂಡಲವು ಆಮೇಲೆ ಬೆಳೆದುಬಂದದ್ದು. ಈ ವಾಯುಮಂಡಲದ ರಚನೆಯು ಮುಖ್ಯವಾಗಿ ರಾಸಾಯನಿಕ ಕ್ರಿಯೆಗಳಿಂದ, ಜ್ವಾಲಾಮುಖಿಗಳಿಂದ ಯಥೇಚ್ಛವಾಗಿ ಹೊರಹೊಮ್ಮಿದ ಶಿಲಾಪ್ರವಾಹದಿಂದ ಮತ್ತು ಕಾಂತಿ ಸಂಯೋಜನೆ (Photo Synthesis) ಎಂಬ ಕ್ರಿಯೆಯಿಂದ. ಸಸ್ಯ ಸಂಪತ್ತಿನಲ್ಲಿರುವ ಹಸಿರುಭಾಗವು ಸೂರ್ಯನ ಕಾಂತಿಯ ಸಹಾಯದಿಂದ ವಾಯುಮಂಡಲದಲ್ಲಿರುವ ಇಂಗಾಲಾಮ್ಲವನ್ನು ಕಡಿಮೆ ಮಾಡಿ ಹೆಚ್ಚು ಆಮ್ಲಜನಕವನ್ನು ಒದಗಿಸುತ್ತದೆ.

## ತಾಪ

ಜೀವಪೋಷಣೆಯ ಮತ್ತೊಂದು ಮುಖ್ಯವಾದ ಸಾಧನ ಗ್ರಹದ ಮೇಲಿನ ತಾಪ. ಈ ಗ್ರಹದ ಎಲ್ಲಾ ವಿಧವಾದ ಜೀವಿಗಳೂ ಇಂಗಾಲದಿಂದ ಕೂಡಿದ ತೊಡಕಿನ ಸಂಯುಕ್ತ

ವಸ್ತುಗಳಿಂದ ಆಗಿವೆ. ಸಂಯುಕ್ತ ವಸ್ತುಗಳು ಕ್ಲಿಷ್ಟವಾದಷ್ಟೂ ಹೆಚ್ಚಿನ ತಾಪವನ್ನು ಅವು ಸಹಿಸಲಾಗುವುದಿಲ್ಲ. ಅದಕ್ಕಾಗಿಯೇ ಮನುಷ್ಯನ ತಾಪದಲ್ಲಿ ಸ್ವಲ್ಪ ಹೆಚ್ಚುಕಡಿಮೆಯಾದರೆ ಅವನ ಜೀವ ತಳಮಳಗೊಳ್ಳುತ್ತದೆ. ಅಂತೆಯೇ ವಾಯುಮಂಡಲದ ತಾಪವು 110° F ಗಿಂತ ಹೆಚ್ಚಾದರೆ ಮನುಷ್ಯನು ಬಿಸಿಲು ಹೊಡೆತದಿಂದ ಮೂರ್ಛೆ ಹೋಗುತ್ತಾನೆ ಅಥವಾ ಸತ್ತು ಹೋಗುವುದೂ ಉಂಟು. ಹಾಲನ್ನು ಚೆನ್ನಾಗಿ ಕಾಯಿಸಿದರೆ ಅದರಲ್ಲಿರುವ ಕ್ರಿಮಿಗಳು ಸತ್ತು ಹೋಗುತ್ತವೆ. ಭೂಮಿಯ ಮೇಲೆ ಕಂಡುಬರುವ ತಾಪ ವೈಪರೀತ್ಯಗಳಿಗಿಂತ ಬಹು ಹೆಚ್ಚು ಬದಲಾವಣೆಗಳಾದರೆ ನಮಗೆ ತಿಳಿದಿರುವ ಜೀವಿಗಳು ಬದುಕಲು ಸಾಧ್ಯವಾಗುವುದಿಲ್ಲವೆಂದು ಹೇಳಬಹುದು. ಅಂದರೆ ಗ್ರಹವು ನಕ್ಷತ್ರದ (ಸೂರ್ಯನ) ಪ್ರಕಾಶವನ್ನು ಅವಲಂಬಿಸಿ ಒಂದು ನಿರ್ದಿಷ್ಟ ದೂರದಲ್ಲಿರಬೇಕು.

ಜೀವಪೋಷಣೆಗೆ ಬೇಕಾಗುವ ಈ ಮೇಲ್ಕಂಡ ಕೆಲವಂಶಗಳನ್ನು ಜ್ಞಾಪಕದಲ್ಲಿಟ್ಟು ಕೊಂಡು ಸೂರ್ಯಮಂಡಲದ ಗ್ರಹ, ಉಪಗ್ರಹಗಳಲ್ಲಿ ಜೀವವಿರುವ ಸಾಧ್ಯಾಸಾಧ್ಯತೆಯನ್ನು ಪರೀಕ್ಷಿಸೋಣ.

## ಸೂರ್ಯಮಂಡಲದಲ್ಲಿ ಜೀವಿಗಳು

ಸೂರ್ಯನಿಗೆ ಅತ್ಯಂತ ಸಮೀಪದಲ್ಲಿರುವ ಗ್ರಹವೆಂದರೆ ಬುಧ. ಗ್ರಹದ ಮೇಲಿನ ವಿಮೋಚನಾವೇಗ ಸೆಕೆಂಡಿಗೆ 2·4 ಮೈಲಿಗಳು. ಸೂರ್ಯನಿಂದ ಪ್ರಕಾಶಿಸಲ್ಪಟ್ಟಿರುವ ಮುಖದ ಸರಾಸರಿ ತಾಪ ಸುಮಾರು 400°C. ಈ ಗ್ರಹದಲ್ಲಿ ಇಂತಹ ಪರಿಸ್ಥಿತಿಯಲ್ಲಿ ವಾಯುಮಂಡಲವಿರಲು ಸಾಧ್ಯವಿಲ್ಲ. ಆದುದರಿಂದ ಇಲ್ಲಿ ಜೀವಿಗಳಿಲ್ಲ.

ಎರಡನೆಯ ಗ್ರಹ ಶುಕ್ರ. ಇದು ಸುಮಾರು ಭೂಮಿಯಷ್ಟೇ ತೂಕ, ಗಾತ್ರ ಮತ್ತು ಸಾಪೇಕ್ಷ ಸಾಂದ್ರತೆಯಿಂದ ಕೂಡಿದೆ. ವಿಮೋಚನಾವೇಗ ಒಂದು ಸೆಕೆಂಡಿಗೆ 6·5 ಮೈಲಿಗಳು—ಸುಮಾರು ಭೂಮಿಯ ಮೇಲಿದ್ದಷ್ಟೇ. ಆದುದರಿಂದ ಭೂಮಿಯ ಮೇಲಿನ ವಾಯು ಮಂಡಲವೇ ಇಲ್ಲಿಯೂ ಇರಬಹುದೆಂದು ನಮಗನ್ನಿಸುತ್ತದೆ. ಆದರೆ ಭೂಮಿಯ ವಾಯು ಮಂಡಲಕ್ಕೂ ಈ ಗ್ರಹದ ವಾಯುಮಂಡಲಕ್ಕೂ ತುಂಬಾ ವ್ಯತ್ಯಾಸವಿದೆ. ಶುಕ್ರಗ್ರಹದ ತಾಪ 100°C ಗಿಂತ ಹೆಚ್ಚಾಗಿದೆ. ಈ ಗ್ರಹದ ಮೇಲೆ ಹೆಚ್ಚು ಭಾಗ ಇಂಗಾಲಾಮ್ಲವಿದ್ದು, ಆಮ್ಲ ಜನಕ, ನೀರಿನ ಆವಿಗಳ ಅಭಾವದಿಂದ ಕೂಡಿದೆ. ಇಲ್ಲಿ ಸಸ್ಯ ಸಂಪತ್ತಿಲ್ಲ. ಇದರ ಮೇಲೆ ಧೂಳಿನಿಂದ ಕೂಡಿದ ಸುಂಟರಗಾಳಿಗಳು ಸತತವಾಗಿ ಬೀಸುತ್ತಿರುತ್ತವೆ. ಒಟ್ಟಿನಲ್ಲಿ ಈ ಗ್ರಹ ದಲ್ಲಿಯೂ ಜೀವವಿರಲು ಸಾಧ್ಯವಿಲ್ಲ.

ಮೂರನೆಯ ಗ್ರಹ ಭೂಮಿ. ಅದರ ಉಪಗ್ರಹ ಚಂದ್ರ. ವಾಯುಮಂಡಲದ ಅಭಾವ ಮತ್ತು ಉಷ್ಣದ ವೈಪರೀತ್ಯಗಳಿಂದ ಈ ಉಪಗ್ರಹದಲ್ಲಿಯೂ ಜೀವವಿರಲು ಸಾಧ್ಯವಿಲ್ಲ.

ನಾಲ್ಕನೆಯ ಗ್ರಹ ಕುಜ. ಭೂಮಿಗೆ ಶುಕ್ರಗ್ರಹವು ಒಂದು ಪಕ್ಕದಲ್ಲಿದ್ದರೆ ಕುಜ ಗ್ರಹವು ಇನ್ನೊಂದು ಪಕ್ಕದಲ್ಲಿದೆ. ಭೂಮಿಯ ವ್ಯಾಸದ ಅರ್ಧಕ್ಕಿಂತ ಹೆಚ್ಚುಭಾಗ ಹೊಂದಿದ ಕುಜಗ್ರಹ ತೂಕದಲ್ಲಿ ಭೂಮಿಯ ತೂಕದ ಹತ್ತನೆಯ ಒಂದುಭಾಗದಷ್ಟಿದೆ. ಈ ಗ್ರಹದ ಮೇಲೆ ವಿಮೋಚನಾವೇಗವು ಸೆಕೆಂಡಿಗೆ ಸುಮಾರು ಮೂರು ಮೈಲಿಗಳು. ಇಲ್ಲಿಯ ತಾಪ ಭೂಮಿಯ ತಾಪಕ್ಕಿಂತ ಬಹಳ ಕಡಿಮೆ. ಕನಿಷ್ಟ ತಾಪ ಸುಮಾರು −130°F ಮತ್ತು ಅತ್ಯಧಿಕ ತಾಪ + 50°F. ಕುಜಗ್ರಹವು ತನ್ನ ಎಲ್ಲಾ ವಾಯುಮಂಡಲವನ್ನೂ ಕಳೆದುಕೊಳ್ಳದೆ ಇನ್ನೂ

ತೆಳ್ಳನೆಯ ವಾಯುಮಂಡಲವನ್ನು ಹೊಂದಿದೆ. ಆಮ್ಲಜನಕ ಸ್ವಲ್ಪವಿದೆ. ನೀರಿನ ಆವಿಯು ಅಷ್ಟಿಲ್ಲ. ಆದುದರಿಂದಲೇ ಅಷ್ಟು ಕಡಿಮೆ ಕನಿಷ್ಟ ತಾಪ. ಬಹು ವರ್ಷಗಳಿಂದಲೂ ಈ ಗ್ರಹವು ವೈಜ್ಞಾನಿಕರ ಗಮನವನ್ನು ಸೆಳೆದಿದೆ. ಇಲ್ಲಿ ಜೀವಿಗಳಿರಬಹುದೆಂದು ಅನೇಕ ಸಂಶೋಧನೆಗಳನ್ನು ನಡೆಸಿದ್ದಾರೆ. ಬುದ್ಧಿವಂತ ಜೀವಿಗಳಿದ್ದಾರೆಂದು ಕೂಡ ಸಿದ್ಧಾಂತ ಮಾಡಿದ್ದರು. ಆದರೆ ಇನ್ನೂ ಆಧುನಿಕ ಉಪಕರಣಗಳನ್ನು ಉಪಯೋಗಿಸಿ ನಡೆಸಿದ ಸಂಶೋಧನೆಗಳ ಆಧಾರದ ಮೇಲೆ ಇದು ಸಾಧ್ಯವಿಲ್ಲವೆಂದೂ ಆದರೆ ಒಂದು ವಿಧವಾದ ಪಾಚಿ ಮತ್ತು ಅದರ ಉಪಜಾತಿಯಾದ ಹಣಬೆಯಿಂದ ಕೂಡಿದ ಸಸ್ಯರಾಶಿ ಇರಬಹುದೆಂದೂ ನಿರ್ಧರಿಸಿದ್ದಾರೆ. ಬಹುಕಾಲದ ಹಿಂದೆ ಬುದ್ಧಿವಂತ ಜೀವಿಗಳು ಅಲ್ಲಿ ಇದ್ದಿರಬಹುದು. ಈಗ ಅಲ್ಲಿ ಕಾಣುವ ಪ್ರಥಮಾವಸ್ಥೆಯಲ್ಲಿ ಇರುವ ಸಸ್ಯರಾಶಿಯೂ ಕೂಡ ಅನತಿ ಕಾಲದಲ್ಲಿ ಸತ್ತುಹೋಗಬಹುದೆಂದು ವೈಜ್ಞಾನಿಕರ ಊಹೆ.

ಪ್ಲೂಟೋ ಬಿಟ್ಟು ಉಳಿದ ನಾಲ್ಕು ಗ್ರಹಗಳಾದ ಬೃಹಸ್ಪತಿ, ಶನಿ, ಯುರೇನಸ್ ಮತ್ತು ನೆಪ್ಚ್ಯೂನ್ ಭೂಮಿಗಿಂತ ಗಾತ್ರದಲ್ಲಿ ದೊಡ್ಡವು. ಈ ಗ್ರಹಗಳ ಮೇಲಿನ ವಿಮೋಚನಾ ವೇಗವು ಭೂಮಿಯ ಮೇಲಿನ ವಿಮೋಚನಾವೇಗಕ್ಕಿಂತ ಸುಮಾರು ಎರಡರಿಂದ ಐದು ಪಾಲಿನಷ್ಟು ಹೆಚ್ಚಾಗಿದೆ. ಜೊತೆಗೆ ಈ ಗ್ರಹಗಳ ಮೇಲಿನ ತಾಪ $-150°C$ ಗಿಂತ ಕಡಿಮೆಯಾಗಿದೆ. ಆದುದರಿಂದ ಅತ್ಯಂತ ಹಗುರವಾದ ಜಲಜನಕದಿಂದ ಮೊದಲುಗೊಂಡು ಉಳಿದ ಎಲ್ಲಾ ಅನಿಲಗಳೂ ಈ ಗ್ರಹಗಳ ಬಂಧನದಲ್ಲಿ ಸಿಕ್ಕಿಕೊಂಡಿವೆ. ಅಂದರೆ ಈ ಗ್ರಹಗಳ ಮೇಲೆಲ್ಲಾ ವಿಷಪೂರಿತವಾದ ಅಮೋನಿಯಾ, ಮಿಥೇನ್ ಅನಿಲಗಳಿಂದ ಕೂಡಿದ ದಟ್ಟವಾದ ವಾಯುಮಂಡಲಗಳಿದ್ದು ಜೀವನಾಶಕ್ಕೆ ಕಾರಣವಾಗಿವೆ. ಪ್ಲೂಟೋದಲ್ಲಿಯೂ ಕೂಡ $-200°C$ ಗಿಂತ ಕಡಿಮೆ ತಾಪವಿದ್ದು ಜೀವವಿರಲು ಸಾಧ್ಯವಿಲ್ಲವಾಗಿದೆ. ಅಂದರೆ ಸೂರ್ಯಮಂಡಲವನ್ನೆಲ್ಲಾ ಹುಡುಕಿದ ಮೇಲೆ ಭೂಮಿಯನ್ನು ಹೊರತು ಮತ್ತೆಲ್ಲಿಯೂ ಜೀವವಿರಲು ಸಾಧ್ಯವಿಲ್ಲವೆಂದೂ, ಆದರೆ ಕುಜಗ್ರಹದ ಮೇಲೆ ಒಂದು ವಿಧವಾದ ಪ್ರಥಮಾವಸ್ಥೆಯ ಸಸ್ಯರಾಶಿ ಇರಬಹುದೆಂದೂ ಇತ್ಯರ್ಥ ಮಾಡಬಹುದು.

### ಸೂರ್ಯಮಂಡಲದ ಆಚೆ ಜೀವಿಗಳುಂಟೇ?

ಸೂರ್ಯನು ಆಕಾಶದಲ್ಲಿ ನಕ್ಷತ್ರಕುಂಜವಾದ ಕ್ಷೀರಪಥದಲ್ಲಿ ಒಟ್ಟು ಇರುವ ಸುಮಾರು 2,00,00,00,00,000 ನಕ್ಷತ್ರಗಳಲ್ಲಿ ಒಂದು ಮಧ್ಯಮ ವರ್ಗದ ಮಧ್ಯ ವಯಸ್ಸಿನ ನಕ್ಷತ್ರ. ಕ್ಷೀರಪಥದಂತಹ ನಕ್ಷತ್ರರಾಶಿಗಳು ವಿಶ್ವದಲ್ಲಿ ಅಸಂಖ್ಯಾತವಾಗಿವೆ.

ಮುಂದಿನ ಪ್ರಶ್ನೆ ಸೂರ್ಯನಿಗೆ ಇದ್ದಹಾಗೆ ಉಳಿದ ನಕ್ಷತ್ರಗಳಿಗೂ ಗ್ರಹಗಳು ಇವೆಯೇ? ಇದ್ದರೆ ಅವು ಜೀವಿಗಳ ವಾಸಯೋಗ್ಯವಾಗಿವೆಯೇ? ಈ ತೊಡಕಿನ ಪ್ರಶ್ನೆಗಳನ್ನು ಬಿಡಿಸಬೇಕಾದರೆ ಸೂರ್ಯಮಂಡಲ ಹೇಗೆ ಹುಟ್ಟಿತು ಎಂಬ ಸಮಸ್ಯೆಗೆ ಸಮಾಧಾನಕರವಾದ ಉತ್ತರವನ್ನು ಪಡೆದು ಮುಂದೆ ನಡೆಯಬೇಕು. ವಿಶ್ವದಲ್ಲಿ ಸಂಚಾರ ನಿಯಮಗಳನ್ನುಲ್ಲಂಘಿಸಿ ಒಂದು ನಕ್ಷತ್ರ ಇನ್ನೊಂದಕ್ಕೆ ಡಿಕ್ಕಿ ಹೊಡೆದೋ ಅಥವಾ ಬಹು ಸಮೀಪಕ್ಕೆ ಬಂದುದರಿಂದ ಆದ ಅನಾಹುತವೋ ಈ ಗ್ರಹ ಉಪಗ್ರಹಗಳ ಉತ್ಪತ್ತಿಗೆ ಕಾರಣವೆಂದು ವೈಜ್ಞಾನಿಕರು 20-25 ವರ್ಷಗಳ ಹಿಂದೆ ನಂಬಿದ್ದರು. ಆದರೆ ಇತ್ತೀಚಿನ ಸಂಶೋಧನೆಗಳಿಂದ ಆ ವಾದ ಅಸಮಂಜಸವೆಂದು ವ್ಯಕ್ತಪಟ್ಟಿದೆ. ಸೂರ್ಯಮಂಡಲದ ಎಲ್ಲ ಗ್ರಹಗಳೂ ಉಪಗ್ರಹಗಳೂ ತಮ್ಮ ಪಥಗಳಲ್ಲಿ

ಒಂದೇ ದಿಕ್ಕಿನಲ್ಲಿ ಪ್ರಯಾಣ ಮಾಡುತ್ತಿರುವುದು, ಜೊತೆಗೆ ಅವೆಲ್ಲವೂ (ಸೂರ್ಯನೂ ಸಹಿತ) ಒಂದೇ ದಿಕ್ಕಿನಲ್ಲಿ ಬುಗುರಿಯಂತೆ ಸುತ್ತುತ್ತಿರುವುದೂ, ಇವುಗಳ ಪಥವು ಸಾಮಾನ್ಯವಾಗಿ ಒಂದೇ ಸಮತಲದಲ್ಲಿರುವುದೂ ಮುಂತಾದ ಕಾರಣಗಳಿಂದ ಈ ಸೂರ್ಯಮಂಡಲದ ರಚನೆಯು ಒಂದು ಆಕಸ್ಮಿಕ ಘಟನೆಯಲ್ಲವೆಂದೂ ಬೃಹತ್ ಪ್ರಮಾಣದಲ್ಲಿದ್ದು ಸುತ್ತುತ್ತಿರುವ ವಿಶ್ವದ ಧೂಳಿ (Cosmic dust) ಯ ಕುಗ್ಗುವಿಕೆಯಿಂದ ಉಂಡೆಯೋಪಾದಿಯಲ್ಲಿ ಆಗುವ ಮೊದಲು, ಹೊರಬಿದ್ದ ಭಾಗಗಳೇ ಗ್ರಹ ಉಪಗ್ರಹಗಳೆಂದೂ ಸಿದ್ಧಾಂತ ಮಾಡಿದ್ದಾರೆ. ಈ ಕೆಳಗೆ ಕಂಡ ಚಿತ್ರಗಳು ನಕ್ಷತ್ರಗಳ ಹುಟ್ಟು ಸಾವು ಹೇಗಾಗಿರಬಹುದೆಂಬುದನ್ನು ಸೂಚಿಸುತ್ತವೆ:

ಸೂರ್ಯನಿಗಿಂತ ಸುಮಾರು $1\frac{1}{4}$ ರಷ್ಟು ತೂಕವಿರುವ ನಕ್ಷತ್ರದ ಹುಟ್ಟು ಸಾವು.



1. ವಿಶ್ವದ ಧೂಳು ಮತ್ತು ಈ ಧೂಳು ಸಂಕುಚಿಸಿ ನಕ್ಷತ್ರ ಮತ್ತು ಗ್ರಹಗಳಾಗುವುದು.
2. ಸುಮಾರು ಒಂದುಕೋಟಿ ವರ್ಷಗಳಾದ ಮೇಲೆ 'ಮೈನ್ ಸಿಕ್ವೆನ್ಸ್' ಹಂತವನ್ನೂ ಮುಟ್ಟುತ್ತವೆ. ಈ ಹಂತದಲ್ಲಿ ಸುಮಾರು ಎಂಟು ಶತಕೋಟಿ ವರ್ಷಗಳನ್ನು ಕಳೆಯುತ್ತವೆ.
3. ಆಮೇಲೆ ಅವು ರೆಡ್ ಜೆಯಂಟ್ (Red Giant) ಘಟ್ಟವನ್ನೂ ಮುಟ್ಟುತ್ತವೆ.
4. ಈ ಘಟ್ಟದಲ್ಲಿ ಮೊದಲು ನಕ್ಷತ್ರಕ್ಕೆ ಅತ್ಯಂತ ಸಮೀಪದಲ್ಲಿರುವ ಗ್ರಹದ ಮೇಲೆ ಜೀವನಾಶವಾಗುತ್ತದೆ. ಆಮೇಲೆ ಉಳಿದ ಗ್ರಹಗಳು ಉರಿದುಹೋಗುತ್ತವೆ. ಈ ಬದಲಾವಣೆಗಳಾಗುವ ಕಾಲ ಸುಮಾರು ಹತ್ತುಕೋಟಿ ವರ್ಷಗಳು.
5. ಆಮೇಲೆ ನಕ್ಷತ್ರದ ಪ್ರಕಾಶಮಾನವು ಕೆಲವು ಗಂಟೆಗಳಿಗೊಮ್ಮೆ ಪರ್ಯಾಯಕ್ರಮದಿಂದ ವ್ಯತ್ಯಾಸ ಹೊಂದುತ್ತದೆ. ಈ ವ್ಯತ್ಯಾಸ ಸಾವಿರಾರು ವರ್ಷಗಳ ಕಾಲ ಸಾಗುತ್ತದೆ.
6. ಕೊನೆಗೆ ಸಿಡಿದು 'ನೋವಾ' (Nova) ಆಗುತ್ತದೆ.
7. ಕ್ರಮೇಣ ವೈಟ್ ಡ್ವಾರ್ಫ್ (White Dwarf) ಆಗುತ್ತದೆ. ಕೊನೆಯ ಮೂರು ಹಂತಗಳ ಕಾಲಾವಧಿ ಇನ್ನೂ ತಿಳಿದಿಲ್ಲ.

ಅಂದಮೇಲೆ ಎಲ್ಲಾ ನಕ್ಷತ್ರಗಳಿಗೂ ಇಂತಹ ಗ್ರಹಗಳಿರುವುದು ಅಸಾಮಾನ್ಯವಲ್ಲ. ಗ್ರಹಗಳಿದ್ದ ಮಾತ್ರಕ್ಕೇ ಜೀವ ಎಲ್ಲದರಲ್ಲಿಯೂ ಇರಲು ಸಾಧ್ಯವಿಲ್ಲವೆಂಬ ಅಂಶ ಸೂರ್ಯಮಂಡಲದ ಗ್ರಹಗಳ ಮೇಲಿನ ಲಕ್ಷಣಗಳ ಅಧ್ಯಯನದಿಂದ ವ್ಯಕ್ತವಾಗಿದೆ. ಗ್ರಹಗಳು ತುಂಬಾ ಚಿಕ್ಕದಾಗಿದ್ದರೆ ವಿಮೋಚನಾವೇಗವು ಕಡಿಮೆ ಇದ್ದು ವಾಯುಮಂಡಲವನ್ನು ಹೊಂದಲು ಸಾಧ್ಯವಿಲ್ಲ. ತುಂಬಾ ದೊಡ್ಡದಾಗಿದ್ದರೆ ದಟ್ಟವಾದ ವಿಷಪೂರಿತ ವಾಯುಮಂಡಲ ಬೆಳೆದು ಜೀವನಕ್ಕೆ ಕಂಟಕಪ್ರಾಯವಾಗುತ್ತದೆ. ಸೂರ್ಯನಿಗೆ (ಅಥವಾ ನಕ್ಷತ್ರಕ್ಕೆ) ತುಂಬಾ ಸಮೀಪದಲ್ಲಿದ್ದರೆ, ಶಾಖ ಹೆಚ್ಚಾಗಿದ್ದೂ ತುಂಬಾ ದೂರವಾಗಿದ್ದರೆ, ಶೀತ ಹೆಚ್ಚಾಗಿದ್ದೂ ಜೀವ ಬೆಳವಣಿಗೆಗೆ ಸಹಕಾರಿಯಾದ ವಾತಾವರಣ ಇರುವುದಿಲ್ಲ.

ತಾಪದ ಆಧಾರದ ಮೇಲೆ ನಕ್ಷತ್ರಗಳನ್ನು ಸ್ಥೂಲವಾಗಿ O,B,A,F,G,K ಮತ್ತು M ಎಂದು ಏಳು ವಿಭಾಗಗಳಾಗಿ ಮಾಡಿದ್ದಾರೆ. O ಎಂಬ ಗುಂಪಿನ ನಕ್ಷತ್ರಗಳು ಅತ್ಯಂತ ಬಿಸಿಯಾಗಿರುತ್ತವೆ. M ಎನ್ನುವುದರ ತಾಪ ಅತ್ಯಂತ ಕಡಿಮೆ. ಸೂರ್ಯನು G ಪಂಗಡಕ್ಕೆ ಸೇರಿದ್ದಾನೆ. ಒಂದು ನಕ್ಷತ್ರದ ಪ್ರಕಾಶಮಾನ ಆ ನಕ್ಷತ್ರ ಹುಟ್ಟಿನಿಂದ ಸಾಯುವ ತನಕ ಹೇಗೆ ಬದಲಾವಣೆಯಾಗುತ್ತದೆ ಎಂಬುದನ್ನೂ ಮುಂದಿನ ಚಿತ್ರದಿಂದ ತಿಳಿಯಬಹುದು.




ಸೂರ್ಯನ ತೂಕಕ್ಕಿಂತ 1·2 ರಷ್ಟು ಇರುವ ನಕ್ಷತ್ರದ ಬೆಳವಣಿಗೆಯನ್ನು ಮೇಲಿನ ಚಿತ್ರ ತೋರಿಸುತ್ತದೆ.

ಲಂಬವಾಗಿರುವ ಅಕ್ಷವು ಪ್ರಕಾಶಮಾನವನ್ನೂ (ಸೂರ್ಯನ ಪ್ರಕಾಶಮಾನ ಒಂದು ಎನ್ನುವ ಆಧಾರದ ಮೇಲೆ) ಅಡ್ಡವಾಗಿರುವ ಅಕ್ಷವು ನಕ್ಷತ್ರಜಾತಿಯನ್ನೂ ಸೂಚಿಸುತ್ತವೆ. ಅಡ್ಡಗೆರೆಗಳು ಮೈನ್ ಸೀಕ್ವೆನ್ಸ್ ಘಟ್ಟವನ್ನು ಸೂಚಿಸುತ್ತವೆ. ರೇಖಾಚಿತ್ರದಲ್ಲಿ ಸೂಚಿಸಿರುವ ಅಂಕಿಗಳು ಹಿಂದಿನ ಚಿತ್ರದಲ್ಲಿ ನಕ್ಷತ್ರದ ಬೆಳವಣಿಗೆಯ ವಿವಿಧ ಘಟ್ಟಗಳನ್ನು ಸೂಚಿಸುತ್ತವೆ.

1. ನಕ್ಷತ್ರವು ಗುರುತ್ವಾಕರ್ಷಣದಿಂದ ಸಂಕುಚಿಸುವ ಘಟ್ಟ.
2. 'ಮೈನ್ ಸೀಕ್ವೆನ್ಸ್' ಹಂತದಲ್ಲಿ.
3. ಹಿಗ್ಗುತ್ತಿರುವಾಗ.
4. ರೆಡ್ ಜೈಯಂಟ್ ಅವಸ್ಥೆಯಲ್ಲಿ.
5. ಪರ್ಯಾಯಕ್ರಮದಿಂದ ಕಂಪಿಸುತ್ತಿರುವಾಗ.
6. ಖಂಡರೇಖೆಯು 'ವೈಟ್ ಡ್ವಾರ್ಫ್' (White Dwarf). (7) ಘಟ್ಟವನ್ನು ಮುಟ್ಟಲು ಹೋಗುವ ಹಾದಿಯ ಅನಿಶ್ಚತೆಯನ್ನು ಸೂಚಿಸುತ್ತದೆ.

ನಕ್ಷತ್ರಗಳ ಜೀವನದಲ್ಲಿ ಮೂರನೇ ಘಟ್ಟವಾದ 'ಮೈನ್ ಸೀಕ್ವೆನ್ಸ್' ನಲ್ಲಿರುವ ಸೂರ್ಯನಿಂದ ಸುಮಾರು 4,00,00,00,000 ವರ್ಷಗಳ ಪರ್ಯಂತರ ಸತತವಾದ ಶಕ್ತಿ

ಯನ್ನು ಪಡೆದುದರಿಂದ ಭೂಮಿಯ ಮೇಲೆ ಜೀವೋತ್ಪತ್ತಿ ಮತ್ತು ಅದರ ಬೆಳೆವಣಿಗೆ ಸಾಧ್ಯವಾಗಿದೆ. ಮೂರನೇ ಘಟ್ಟವನ್ನು ದಾಟಿದೊಡನೆಯೇ ನಕ್ಷತ್ರವು ಅತ್ಯಂತ ಹೆಚ್ಚಿನ ಶಕ್ತಿಯನ್ನು ಹೊರಚೆಲ್ಲಿ ಜೀವವನ್ನೂ, ಕಾಲಕ್ರಮೇಣ ಗ್ರಹಗಳನ್ನೂ ದಹಿಸುತ್ತದೆ. ಆದುದರಿಂದ ನಕ್ಷತ್ರಗಳ ಮೂರನೆಯ ಘಟ್ಟವಾದ 'ಮೈನ್ ಸೀಕ್ವೆನ್ಸ್' ಒಂದೇ ಜೀವನಾಧಾರಕ್ಕೆ ಯೋಗ್ಯವಾದ ಕಾಲ. ಈ ಘಟ್ಟದ ಕಾಲವು ಸುಮಾರು 4,00,00,00,000 ವರ್ಷಗಳಿಗಿಂತ ಬಹು ಕಡಿಮೆ ಇದ್ದರೆ ಜೀವಿಗಳು ಬೆಳೆಯುವುದು ದುಸ್ಸಾಧ್ಯ. O ಮತ್ತು B ವರ್ಗಗಳ ನಕ್ಷತ್ರಗಳು G ವರ್ಗದ ಸೂರ್ಯನಿಗಿಂತ ಹೆಚ್ಚು ತೂಕವನ್ನು ಹೊಂದಿವೆ. ತುಂಬಾ ಹೆಚ್ಚು ತೂಕದ ನಕ್ಷತ್ರಗಳು ಬೇಗ ತರ್ಮೋನ್ಯೂಕ್ಲಿಯರ್ (Thermonuclear) ಕ್ರಿಯೆಗಳಿಂದ ಪದಾರ್ಥವನ್ನು ಸುಟ್ಟು ಶಕ್ತಿಯಾಗಿ ಮಾಡುತ್ತವೆ. ಆದುದರಿಂದ ಅವುಗಳ ಆಯಸ್ಸು ಜೀವನಾಧಾರಕ್ಕೆ ಬಹು ಮುಖ್ಯವಾದ ಮೂರನೆಯ ಘಟ್ಟವಾದ 'ಮೈನ್ ಸೀಕ್ವೆನ್ಸ್' ನಲ್ಲಿ ಸಾಮಾನ್ಯವಾಗಿ ಕಡಿಮೆಯಾಗಿದ್ದು ಜೀವಪೋಷಣೆಗೆ ಯೋಗ್ಯವಾಗಿಲ್ಲ. ವಿವಿಧ ಗುಂಪುಗಳ ನಕ್ಷತ್ರಗಳ ಪ್ರಕಾಶಮಾನ, ತಾಪ, 'ಮೈನ್ ಸೀಕ್ವೆನ್ಸ್' ಘಟ್ಟದಲ್ಲಿ ಆಯಸ್ಸು ಮತ್ತು ತೂಕ ಇವುಗಳನ್ನು ಮುಂದಿನ ಚಿತ್ರದಲ್ಲಿ ಕಾಣಬಹುದು.




ಎಡಪಕ್ಕದ ಲಂಬ ಅಕ್ಷವು ಪ್ರಕಾಶಮಾನವನ್ನು ಸೂಚಿಸುತ್ತದೆ (ಸೂರ್ಯನ ಪ್ರಕಾಶಮಾನ ಒಂದು ಎನ್ನುವ ಆಧಾರದ ಮೇಲೆ). ಬಲಗಡೆಯ ಅಕ್ಷವು ಮೈನ್ ಸೀಕ್ವೆನ್ಸ್

(Main Sequence) ಘಟ್ಟದಲ್ಲಿ ನಕ್ಷತ್ರವು ಕಳೆಯುವ ಕಾಲವನ್ನು ಶತಕೋಟಿ ವರ್ಷಗಳಲ್ಲಿ ಸೂಚಿಸುತ್ತದೆ. ಮೇಲೆ ಕೆಲ್ವಿನ್ ಡಿಗ್ರಿಗಳಲ್ಲಿ ತಾಪವೂ ಕೆಳಗಡೆ ನಕ್ಷತ್ರ ವರ್ಗವೂ ನಮೂದಿಸಲ್ಪಟ್ಟಿರುತ್ತವೆ. ನಕ್ಷತ್ರದ ಕೆಳಗಡೆ ಬರೆದಿರುವ ಸಂಖ್ಯೆಗಳು ಸೂರ್ಯನಿಗಿಂತ ಎಷ್ಟರಷ್ಟು ತೂಕವಿದೆ ಎಂಬುದನ್ನು ತಿಳಿಸುತ್ತವೆ.

O, B, A ಪಂಗಡದ ನಕ್ಷತ್ರಗಳ ಆಯುಸ್ಸು 'ಮೈನ್ ಸೀಕ್ವೆನ್ಸ್' ಘಟ್ಟದಲ್ಲಿ ಸಾಕಷ್ಟು ಇಲ್ಲದೆ ಇರುವುದರಿಂದ ಅವು ಉನ್ನತಮಟ್ಟದ ತನಕ ಜೀವ ವಿಕಸಿಸಲು ಸಹಕಾರಿಯಾಗಿಲ್ಲ. M ನಕ್ಷತ್ರಗಳ ಪ್ರಕಾಶ ಕಡಿಮೆ ಪ್ರಮಾಣದಲ್ಲಿರುವುದರಿಂದಲೂ ಮತ್ತು ಇನ್ನೂ ಕೆಲವು ಕಾರಣಗಳಿಂದಲೂ ಆ ಪಂಗಡದ ನಕ್ಷತ್ರಗಳ ರಾಶಿಯಲ್ಲಿ ಜೀವಿಗಳನ್ನು ಪೋಷಿಸುವ ಗ್ರಹಗಳು ಬಹಳವಾಗಿ ಇಲ್ಲದೆ ಇರಬಹುದೆಂದು ನಂಬಲಾಗಿದೆ. ಅಂದಮೇಲೆ ಕೆಲವು F ವರ್ಗದ, G ವರ್ಗದ ಮತ್ತು ಕೆಲವು K ವರ್ಗದ ನಕ್ಷತ್ರಗಳ ಗ್ರಹಗಳಲ್ಲಿ ಮಾತ್ರ ಜೀವ ಪೋಷಣೆಗೆ ಅನುಕೂಲವಾದ ಗ್ರಹಗಳಿರಬಹುದೆಂದು ಊಹಿಸಲಾಗಿದೆ. ಕ್ಷೀರಪಥದಲ್ಲಿ ಸುಮಾರು 2,00,00,00,00,000 ನಕ್ಷತ್ರಗಳಿವೆ. ಜೀವಪೋಷಣೆಗೆ ಬೇಕಾಗುವ ಎಲ್ಲಾ ನಿಯಮಗಳನ್ನೂ ಪಾಲಿಸುವ ಗ್ರಹಗಳು ಹೆಚ್ಚಾಗಿ ಇಲ್ಲದಿದ್ದರೂ ಭೂಮಿಯೊಂದೇ ಎಂದು ಹೇಳುವುದು ಅಸಹಜ. ಕ್ಷೀರಪಥದಲ್ಲಿರುವ ನಕ್ಷತ್ರಗಳಲ್ಲಿ ಸುಮಾರು ಹತ್ತನೆಯ ಒಂದು ಭಾಗದ ನಕ್ಷತ್ರಗಳಲ್ಲಿರುವ ಕೆಲವು ಗ್ರಹಗಳು ಜೀವನಾಧಾರಕ್ಕೆ ಯೋಗ್ಯವಾದುವು ಎಂದು ಅಂದಾಜು ಮಾಡಲಾಗಿದೆ. ಇದನ್ನೂ ನೇರವಾಗಿ ಪ್ರಯೋಗದ ಮೂಲಕ ಸಮರ್ಥಿಸುವುದು ತುಂಬಾ ಕಷ್ಟ. ನಮಗೆ ಅತ್ಯಂತ ಸಮೀಪದಲ್ಲಿರುವ ನಕ್ಷತ್ರದ ದೂರ ಸುಮಾರು 2,50,00,00,00,00,000 ಮೈಲಿಗಳು. ಅಂದರೆ ಸೆಕೆಂಡಿಗೆ 1,86,000 ಮೈಲಿ ವೇಗದಿಂದ ಚಲಿಸುವ ಬೆಳಕಿಗೇನೆ ಈ ದೂರವನ್ನು ಹಾಯಲು ನಾಲ್ಕು ವರ್ಷಕ್ಕೆ ಮೇಲಾಗುತ್ತದೆ. ಅಂದಮೇಲೆ ಮನುಷ್ಯಕೃತ ಎಂತಹ ಸಾಧನಕ್ಕಾದರೂ ಈ ನಕ್ಷತ್ರವನ್ನು ತಲುಪಲು ನೂರಾರು ವರ್ಷಗಳು ಬೇಕಾಗುತ್ತವೆ. ಅತ್ಯಂತ ಆಧುನಿಕ ದೂರದರ್ಶಿಯಿಂದ ನೋಡಿದರೂ ನಕ್ಷತ್ರಗಳು ತುಂಬಾ ಚಿಕ್ಕದಾಗಿ ಕಾಣಿಸುತ್ತವೆ. ಅವುಗಳ ಗ್ರಹಗಳು ಕಾಣಿಸುವ ಸ್ಥಿತಿಯಲ್ಲಿಲ್ಲ. ಆ ಗ್ರಹಗಳ ಮೇಲ್ಮೈಯ್ಯ ಲಕ್ಷಣಗಳನ್ನು ಗುರುತಿಸಲು ಸಾಧ್ಯವಿಲ್ಲ. ಆದರೆ ವಿಶ್ವದ ಕೆಲವು ನಕ್ಷತ್ರಗಳ ಗ್ರಹಗಳಲ್ಲಿ ನಮ್ಮ ಭೂಮಿಯ ಮೇಲೆ ಯಾವ ಘಟ್ಟದಲ್ಲಿದೆಯೋ ಸುಮಾರು ಅದೇ ಘಟ್ಟದಲ್ಲಿ ಜೀವಿಗಳಿರಬಹುದು ಎಂಬ ಆಶಾಭಾವನೆಯಿಂದ ಆ ಜೀವಿಗಳ ಜೊತೆಗೆ ಸಂಪರ್ಕವನ್ನು ಸ್ಥಾಪಿಸಲು ಅಮೆರಿಕಾ ದೇಶದಲ್ಲಿ ಇತ್ತೀಚೆಗೆ ಯತ್ನಗಳು ನಡೆಯುತ್ತಾ ಇವೆ. ಈ ಸಂಪರ್ಕವನ್ನು ಯಾವ ಭಾಷೆಯಲ್ಲಿ ಸ್ಥಾಪಿಸಬೇಕು ಎಂಬುದು ಇನ್ನೊಂದು ಸಮಸ್ಯೆ. ಒಂದು ನಿರ್ದಿಷ್ಟ (21cm.) ಉದ್ದವಿರುವ ಬಾನುಲಿಯ ಅಲೆಗಳ ಸಹಾಯದಿಂದ ಒಂದು, ಎರಡು, ಮೂರು . . . ಇಂತಹ ಕ್ರಮಾಗತ ಸಂಖ್ಯೆಗಳನ್ನೂ ಸೂಚಿಸುವ ಬಡಿತ (Pulses) ಗಳನ್ನು ಪುನಃಪುನಃ ಕಳುಹಿಸುವುದರಿಂದ ಬೇರೆ ಕಡೆ ಇರಬಹುದಾದ ಜೀವಿಗಳು ಆ ಸಂಖ್ಯೆಗಳನ್ನು ಅರ್ಥ ಮಾಡಿಕೊಂಡು ಅಲ್ಲಿಂದ ಉತ್ತರವನ್ನು ಅದೇ ರೀತಿಯಾಗಿ ಕಳುಹಿಸಬಹುದೆಂಬ ನಿರೀಕ್ಷಣೆಯಿಂದ ಈ ಪ್ರಯತ್ನಗಳು ನಡೆಯುತ್ತಾ ಇವೆ. ಈ ಪ್ರಯತ್ನಗಳಿಗೆ ರೇಡಿಯೋ ಟೆಲಿಸ್ಕೋಪ್ ಎಂಬ ಉಪಕರಣ ಹೆಚ್ಚು ಸಹಾಯಕವಾಗಿದೆ. ಇಲ್ಲಿಯತನಕ ಯಾವ ಪ್ರತ್ಯುತ್ತರವೂ ಬಂದ ಹಾಗಿಲ್ಲ!

## ಇತ್ತೀಚಿನ ಸಾಕ್ಷ್ಯ

ನಮ್ಮ ಮ್ಯೂಜಿಯಂಗಳಲ್ಲಿ ಸುಮಾರು ಒಂದು ಶತಮಾನದಿಂದಿರುವ ಉಲ್ಕಾಪಾತ, ಶಿಲಾಪಾತಗಳ ಸೂಕ್ಷ್ಮ ಪರಿಶೀಲನೆಯಿಂದ ಉಳಿದ ಗ್ರಹಗಳಲ್ಲಿ ಜೀವಿಗಳುಂಟೇ ಎಂಬ ಸಮಸ್ಯೆಯ ನಿವಾರಣೆಗೆ ಸ್ವಲ್ಪ ಮಟ್ಟಿಗೆ ನೆರವಾಗಿದೆ ಎಂಬ ಭಾವನೆಯನ್ನುಂಟುಮಾಡಿದೆ. ಈ ಪ್ರಯತ್ನವು ಅಮೆರಿಕಾ ದೇಶದಲ್ಲಿ ವಿಪುಲವಾಗಿ ನಡೆಯುತ್ತಾ ಇದೆ. ಇಂಗಾಲ ಹೆಚ್ಚಾಗಿರುವ ಕೆಲವು ಶಿಲಾಪಾತಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಬಹು ಕ್ಲಿಷ್ಟವಾದ ರಾಸಾಯನಿಕ ಸಂಯುಕ್ತ ವಸ್ತುಗಳನ್ನು ಹೊಂದಿರುವುದು ಗೊತ್ತಾಗುತ್ತದೆ. ಇವುಗಳು ಭೂಮಿಯ ಆಚೆ ಇದ್ದ ಬಹು ಸೂಕ್ಷ್ಮ ಜೀವಿಗಳ ಅವಶೇಷಗಳೋ ಅಥವಾ ಆ ಜೀವಿಗಳ ಉಪವಸ್ತುಗಳಾಗಿರ ಬಹುದೆಂದು ಊಹಿಸಲಾಗಿದೆ. ಈ ಊಹೆ ಚರ್ಚಾಸ್ಪದವಾದರೂ ಭೂಮಿಯ ಆಚೆ ಇಂತಹ ರಾಸಾಯನಿಕ ವಸ್ತುಗಳ ಬೆಳೆವಣಿಗೆಗೆ ಅನುಕೂಲ ವಾತಾವರಣವಿರಬಹುದೆನ್ನುವುದು ಅಷ್ಟು ಚರ್ಚಾಸ್ಪದವಲ್ಲವೆಂದು ಹೇಳಬಹುದು. ಈ ಉಲ್ಕಾಪಾತ ಶಿಲಾಪಾತಗಳ ಪರಿಶೀಲನೆ, ರೇಡಿಯೋ ಟೆಲೆಸ್ಕೋಪ್‌ಗಳಿಂದ ಜೀವಾನ್ವೇಷಣೆ ಮತ್ತು ಕೃತಕವಾಗಿ ಪ್ರಯೋಗಶಾಲೆಯಲ್ಲಿ ಜೀವಸೃಷ್ಟಿ ಇವೆಲ್ಲವೂ ಸತತವಾಗಿ ಮುಖ್ಯವಾಗಿ ಅಮೆರಿಕಾ ದೇಶದಲ್ಲಿ ಸಾಗುತ್ತಿವೆ. ಇನ್ನೂ ಹೆಚ್ಚಿನ ಸಂಶೋಧನೆಗಳು ರಹಸ್ಯಗರ್ಭದಿಂದ ಕೂಡಿದ ಜೀವಮೂಲವನ್ನು ತಿಳಿದುಕೊಳ್ಳಲು ಸಹಾಯ ಮಾಡುವುವೆಂದು ಆಶಿಸೋಣ.



---

# ಪರಿಷತ್ ಅಧ್ಯಕ್ಷರ ಪತ್ರಿಕಾಗೋಷ್ಠಿ

## ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರು ದಿನಾಂಕ ೨೫-೭-೧೯೬೩ ರಂದು ನಡೆಸಿದ ಪತ್ರಿಕಾಗೋಷ್ಠಿಯ ವಿಚಾರಗಳು

**ಸನ್ಮಾನ್ಯ ಪತ್ರಿಕಾಕರ್ತರೆ, ಮತ್ತು ಮಾನ್ಯ ಮಿತ್ರರೆ,**

ದಿನಾಂಕ ೨೮-೭-೬೩ ನೇ ಭಾನುವಾರ ಬೆಳಗ್ಗೆ ೯ ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ೪೭ ನೆಯ ವರ್ಷದ ಸಕಲ ಸದಸ್ಯರ ಅಧಿವೇಶನ ಕೂಡುತ್ತದೆ. ಅಂದು ಪರಿಷತ್ತಿನ ಮುಂದಿನ ಮೂರು ವರ್ಷಗಳ ಆಡಳಿತ ನಿರ್ವಹಣೆಗಾಗಿ ಅಧ್ಯಕ್ಷರ ಮತ್ತು ಕಾರ್ಯಕಾರಿ ಸಮಿತಿಯ ಚುನಾವಣೆ ನಡೆಯುತ್ತದೆ. ಇಂತಹ ಸಂದರ್ಭದಲ್ಲಿ ದಿನಾಂಕ ೧೭-೬-೧೯೫೭ ರಿಂದ ಪರಿಷತ್ತಿನ ಅಧ್ಯಕ್ಷನಾಗಿದ್ದು—ಗೌರವ ಕಾರ್ಯದರ್ಶಿಗಳು, ಗೌ॥ ಕೋಶಾಧಿಕಾರಿಗಳು, ವ್ಯವಸ್ಥಾಪಕರು, ಕಾರ್ಯಕಾರಿ ಸಮಿತಿಯ ಸದಸ್ಯರು, ಪತ್ರಿಕಾಕರ್ತರು, ಮತ್ತು ಪರಿಷತ್ತಿನ ಹಿತೈಷಿಗಳು ಇವರ ಸಹಾಯದಿಂದ ಪರಿಷತ್ತಿನ ಕಾರ್ಯಕಲಾಪಗಳನ್ನು ನಿರ್ವಹಿಸಿ ಈ ಮಹಾ ಸಂಸ್ಥೆಗೆ ಯಥಾಶಕ್ತಿಯ ಅಳಿಲು ಭಕ್ತಿಯ ಸೇವೆಯನ್ನು ಸಲ್ಲಿಸಿದ ನಾನು — ಈ ಸೇವಾವಕಾಶದಲ್ಲಿ ಪರಿಷತ್ತಿಗಾಗಿ ಸಲ್ಲಿಸಿದ ಕೈಂಕರ್ಯಗಳನ್ನು ಮಹಾ ಜನಗಳ, ಹಾಗೂ ಮಾನ್ಯ ಸದಸ್ಯರ ಮುಂದೆ ಇಂದು ನಿವೇದಿಸುವುದು ಅಗತ್ಯವೆಂದು ಭಾವಿಸಿದ್ದೇನೆ.

ನಾನು ೧೯೩೧ ರಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯನಾಗಿದ್ದೇನೆ. ಕೆಲವು ಕಾಲ ಕಾರ್ಯಕಾರಿ ಸಮಿತಿಯ ಸದಸ್ಯನಾಗಿ, ಕನ್ನಡ ನುಡಿಯ ಸಂಪಾದಕನಾಗಿ ಸೇವೆ ಸಲ್ಲಿಸಿದ್ದೇನೆ. ೧೯೩೧ ರಿಂದ ನಡೆದ ಸಾಹಿತ್ಯ ಸಮ್ಮೇಳನಗಳಲ್ಲಿ, ಹಲವಾರು ಸಮ್ಮೇಳನಗಳಲ್ಲಿ ಭಾಗ ವಹಿಸಿದ್ದೇನೆ. ಪರಿಷತ್ತಿನ ಅನೇಕ ಸಮಾರಂಭಗಳಲ್ಲಿ ಭಾಷಣಕಾರನಾಗಿ, ಪರಿಷತ್ತಿನ ಕನ್ನಡ ನಿಘಂಟು ಸಂಪಾದಕ ಸಮಿತಿಯ ಸದಸ್ಯನಾಗಿ, ಕನ್ನಡ ಕವಿಚರಿತೆಯ ಸಂಪಾದಕ ಮಂಡಲಿಯ ಸದಸ್ಯನಾಗಿ, ಹಾಗೂ ಹಲವು ಉಪಸಮಿತಿಗಳ ಸದಸ್ಯನಾಗಿ ಯಥಾಶಕ್ತಿ ಸೇವೆ ಸಲ್ಲಿಸಿದ್ದೇನೆ. ಪರಿಷತ್ತಿನ ಧ್ಯೇಯೋದ್ದೇಶಗಳಿಗನುಗುಣವಾದ ಕರ್ಣಾಟಕ ಏಕೀಕರಣ ಚಳುವಳಿಗಾಗಿ ಸುಮಾರು ೪೦ ವರ್ಷಗಳಿಂದ ಕೈಲಾದಷ್ಟು ಶ್ರಮಿಸಿದ್ದೇನೆ. ಕರ್ಣಾಟಕದ ಗಡಿಗಳಾದ, ಸೊಲ್ಲಾಪುರ, ಅಕ್ಕಲಕೋಟೆ, ಆದವಾನಿ, ಮಡಕಶಿರಾ, ಹೊಸೂರು, ಡೆಂಕಣಿ ಕೋಟೆ, ನೀಲಗಿರಿ, ಕಾರವಾರ, ಕಾಸರಗೋಡು, ತಾಳವಾಡಿ, ಗಡಹಿಂಗ್ಲೆಜ್, ನಿಪ್ಪಾಣಿ, ಕೊಲ್ಲಾಪುರ, ಬೀದರ್, ಭಾಲ್ಕಿ ಮೊದಲಾದ ಕಡೆ ಹಲವಾರು ಸಲ ಸಂಚರಿಸಿ ಕನ್ನಡದ ಜಾಗೃತಿಗಾಗಿ ಶ್ರಮಿಸಿದ್ದೇನೆ. ವಿಶಾಲ ಮೈಸೂರು ರಾಜ್ಯ ರಚನೆಗೆ ಕಿಂಚಿತ್ ಯತ್ನಿಸಿದ್ದೇನೆ.

## ಸಂಪದಭಿವೃದ್ಧಿ

ಪರಿಷತ್ಸದಸ್ಯರ ಅನುಗ್ರಹದಿಂದ ೧೯೫೬ ನೇ ಜೂನ್ ೧೭ ರಂದು ಪರಿಷತ್ತಿನ ಅಧ್ಯಕ್ಷ ಪದವಿಯನ್ನು ವಹಿಸಿಕೊಂಡಮೇಲೆ ಇಂದಿನವರೆಗೆ, ಪರಿಷತ್ತಿನ ಆರ್ಥಿಕ, ಶೈಕ್ಷಣಿಕ, ವಾಙ್ಮಯಾತ್ಮಕ ಮತ್ತು ಆಡಳಿತಗಳ ಪ್ರಗತಿಗಾಗಿ ಕಿಂಚಿತ್ತು ದುಡಿದಿದ್ದೇನೆ. ನಾನು ಅಧ್ಯಕ್ಷನಾದಾಗ ಪರಿಷತ್ತಿನ ಹಿಂಭಾಗದ ಪೌಳಿಗೋಡೆ (Compound) ಬಿದ್ದುಹೋಗಿತ್ತು. ಸಭಾಭವನದಲ್ಲಿ ಪೂರ್ತಿ ಕುರ್ಚಿಗಳಿರಲಿಲ್ಲ. ಪರಿಷತ್ತಿನ ಕೋಣೆಯೊಂದರಲ್ಲಿ ಪುಸ್ತಕಗಳು ರಾಶಿರಾಶಿಯಾಗಿದ್ದುವು. ಅವನ್ನೆಲ್ಲಾ ಸರಿಪಡಿಸಿ ಈಗ ವ್ಯವಸ್ಥೆಗೊಳಿಸಲಾಗಿದೆ. ಮೈಸೂರು ಸಂಗೀತ ನಾಟಕ ಅಕಾಡೆಮಿಯವರ ಸಹಾಯದಿಂದ ಪರಿಷತ್ತಿನ ರಂಗಮಂಟಪ ಸಜ್ಜುಗೊಂಡಿದೆ. ಸಂಗೀತೋಪಕರಣಗಳು ಸಿದ್ಧವಾಗಿವೆ. ಸಭಾಭವನದಲ್ಲಿ ಕುರ್ಚಿಗಳು ಸಂಪೂರ್ಣವಾಗಿ ಅಲಂಕರಿಸಲ್ಪಟ್ಟಿವೆ. ಪುಸ್ತಕಾಲಯದ ವ್ಯವಸ್ಥೆ ಅಚ್ಚುಕಟ್ಟಾಗಿದೆ. ವಾಚನಾಲಯವೂ ಉತ್ತಮಗೊಂಡಿದೆ. ಈ ಎಲ್ಲ ಸುಧಾರಣೆಗಳನ್ನೂ ಆಗ ಮೈಸೂರಿನ ಮುಖ್ಯಮಂತ್ರಿಗಳಾಗಿದ್ದ ಮಾನ್ಯ ಶ್ರೀ ಕೆ. ಹನುಮಂತಯ್ಯನವರು ನನ್ನ ಪ್ರಾರ್ಥನೆಯಂತೆ ಪರಿಷತ್ತಿಗೆ ಕೊಟ್ಟ ೩೫,೦೦೦ ರೂ. ಗಳ ಉದಾರ ಸಹಾಯದ್ರವ್ಯದ ನೆರವಿನಿಂದ ಮಾಡಲಾಯಿತು.

ಸರ್ಕಾರದಿಂದ ಪ್ರತಿವರ್ಷ ಪರಿಷತ್ತಿಗೆ ೫,೦೦೦ ರೂ.ಗಳ ಸಹಾಯ ದ್ರವ್ಯ ದೊರೆಯುತ್ತಿತ್ತು. ಆದರೆ ನಾವು ನಡೆಸಿದ ಪ್ರಯತ್ನದ ಫಲವಾಗಿ ೧೯೫೮-೫೯ ರಿಂದ ಪ್ರತಿವರ್ಷ ೭,೫೦೦ ರೂ.ಗಳ ಸಹಾಯ ದ್ರವ್ಯ ಬರುವಂತಾಯಿತು ಎಂಬುದನ್ನು ತಿಳಿಸಲು ಹರ್ಷಿಸುತ್ತೇನೆ. ಆದರೆ ಪರಿಷತ್ತು ನಡೆಸುತ್ತಿರುವ ಕಾರ್ಯಕಲಾಪಗಳಿಗೆ ಇದು ಸರಿಯಾದ ಸಹಾಯವಲ್ಲ. ಇತರ ರಾಜ್ಯಗಳಲ್ಲಿ ಇಂತಹ ಪರಿಷತ್ತುಗಳಿಗೆ ಉದಾರವಾಗಿ ಧನಸಹಾಯ ಸಿಗುತ್ತಿದೆ. ನಮ್ಮ ಸರ್ಕಾರ ಈ ವಿಷಯವಾಗಿ ಉದಾರವಾಗಬೇಕು. ವರ್ಷಕ್ಕೆ ೫೦,೦೦೦ ರೂ.ಗಳನ್ನಾದರೂ ಪರಿಷತ್ತಿಗೆ ಕೊಡಬೇಕೆಂಬುದು ನನ್ನ ಆಶೆ.

## ಬೆಂಗಳೂರು ಕಾರ್ಪೊರೇಷನ್ನಿನ ಸಹಾಯ

ಪರಿಷತ್ತಿನ ವಾಚನಾಲಯ ಮತ್ತು ವಸಂತ ಸಾಹಿತ್ಯೋತ್ಸವಕ್ಕೆ ಪ್ರತಿವರ್ಷ ಕೊಡುತ್ತಿದ್ದ ಹಣಕ್ಕಿಂತ ಹೆಚ್ಚು ಹಣವನ್ನು ನಗರಸಭೆ ಕೊಟ್ಟಿದೆ. ಅಲ್ಲದೆ ಪರಿಷತ್ತಿಗೆ ನೀರನ್ನು ಉಚಿತವಾಗಿ ಒದಗಿಸುತ್ತಿದೆ. ಬೆಂಗಳೂರು ನಗರಸಭೆಯ ಈ ಸಹಕಾರ ಶ್ಲಾಘನಾರ್ಹವಾಗಿದೆ.

## ಸನ್ಮಾನಸಭೆ

ಸಮ್ಮೇಳನಾಧ್ಯಕ್ಷರು ಮತ್ತು ಪರಿಷತ್ತಿನ ಸಂಪರ್ಕ ಮರೆಯದಿರಲೆಂದು ತಾ|| ೧೨-೧೨-೫೬ ರ ಶುಭದಿನ ಡಾ|| ಆರ್. ಆರ್. ದಿವಾಕರ್ ಅವರ ಅಧ್ಯಕ್ಷತೆಯಲ್ಲಿ ಮೈಸೂರಿನ ರಾಜ್ಯಪಾಲರ ಸಮ್ಮುಖದಲ್ಲಿ ಅದುವರೆಗೆ ಆಗಿಹೋದ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರನ್ನು ಆಹ್ವಾನಿಸಿ ಎಲ್ಲರಿಗೂ ರಜತಕರಂಡದಲ್ಲಿ ಬಿನ್ನಹಪತ್ರಿಕೆಯನ್ನು ಅರ್ಪಿಸಲಾಯಿತು. ಅದೇ ಸಂದರ್ಭದಲ್ಲಿ 'ಕನ್ನಡ ನುಡಿಯ ಸನ್ಮಾನೋತ್ಸವ ವಿಶೇಷ ಸಂಚಿಕೆ' (೧೯೫೬) ಪ್ರಕಟಿಸಲಾಯಿತು. ಆ ಸಂಚಿಕೆಯು ಪರಿಷತ್ತಿನ ಕಾರ್ಯಕಲಾಪಗಳ ಒಂದು ಕೈಪಿಡಿ ಎಂಬಂತಿದೆ. ಇದರ ರಚನೆಯ ಕಾಲದಲ್ಲಿ ಕಾರ್ಯಕಾರಿ ಸಮಿತಿಯ ಸದಸ್ಯರಾದ ಪ್ರೊ|| ಜಿ. ವೆಂಕಟಸುಬ್ಬಯ್ಯನವರು ಮಾಡಿದ ಉಪಕಾರವನ್ನು ನಾನು ಇಲ್ಲಿ ಸ್ಮರಿಸಬೇಕಾಗಿದೆ.

## ಪರಿಷತ್ತಿನ ಸರಸ್ವತೀ ಭಂಡಾರ

ಪರಿಷತ್ತಿನ ಪುಸ್ತಕ ಭಂಡಾರದಲ್ಲಿ ಈಗ ಒಟ್ಟು ೧೪,೦೦೦ ಪುಸ್ತಕಗಳಿವೆ. ನಾನು ಅಧ್ಯಕ್ಷನಾದಮೇಲೆ ಪುಸ್ತಕ ಭಂಡಾರಕ್ಕೆ ಸುಮಾರು ೩,೫೦೦ ಗ್ರಂಥಗಳು ಹೊಸದಾಗಿ ಸೇರಿವೆ. ಇದರಲ್ಲಿ ೧,೮೦೦ ಗ್ರಂಥಗಳು ಪುಕ್ಕಟೆಯಾಗಿ ಮತ್ತು ವಿಮರ್ಶೆಗೆ ಬಂದವುಗಳು. ನನ್ನ ಸಂಚಾರ ಕಾಲದಲ್ಲಿ ಗ್ರಂಥಕರ್ತೃಗಳೊಂದಿಗೆ ಸಂಭಾಷಿಸಿ ಪರಿಷತ್ತಿಗೆ ಅನೇಕ ಉಪಯುಕ್ತ ಗ್ರಂಥಗಳನ್ನು ಉಚಿತವಾಗಿ ತಂದುಕೊಟ್ಟಿದ್ದೇನೆ. ಪುಸ್ತಕಗಳ ಅಕಾರಾದಿಯಾಗಿ ಗ್ರಂಥಗಳ ಪಟ್ಟಿಯನ್ನು ಸಿದ್ಧಪಡಿಸಿ ಅಚ್ಚಿಗೆ ಕೊಡಲಾಗಿದೆ. ಕರ್ಣಾಟಕದ ಗ್ರಂಥಕಾರರು ಪ್ರತಿಯೊಬ್ಬರೂ ತಮ್ಮ ಗ್ರಂಥಗಳನ್ನು ಪರಿಷತ್ತಿಗೆ ಕಳುಹಿಸುವುದರ ಮೂಲಕ ನೆರವಾಗಬೇಕೆಂದು ನನ್ನ ಮನವಿ.

## ಗ್ರಂಥ ಪ್ರಕಟಣೆ

ನಾನು ಪರಿಷತ್ತಿನ ಅಧ್ಯಕ್ಷನಾದಮೇಲೆ ಕರ್ಣಾಟಕ ಕವಿಚರಿತ್ರೆಯ ಮೂರು ಭಾಗಗಳನ್ನೂ ಸಂಸ್ಕರಿಸಿ ಅವುಗಳನ್ನು ಎರಡು ಭಾಗವಾಗಿ ವಿಂಗಡಿಸಿ ಈಗ ಪ್ರಥಮ ಭಾಗವನ್ನು ಪರಿಷತ್ತಿನಿಂದ ಪ್ರಕಟಿಸಲಾಗಿದೆ. ಎರಡನೇ ಭಾಗವು ಈಗ ಅಚ್ಚಿಗೆ ಸಿದ್ಧವಾಗಿದೆ. ಈ ಕಾರ್ಯವು ಸಮಗ್ರ ಕರ್ಣಾಟಕಕ್ಕೆ ಪರಿಷತ್ತು ಕೊಟ್ಟ ದೊಡ್ಡ ದೇಣಿಗೆಯೆಂದು ಹೇಳಬಹುದು. ಕಷ್ಟಕರವಾದ ಈ ಸಂಪಾದನೆಯ ಕಾರ್ಯದಲ್ಲಿ ವಿಖ್ಯಾತ ವಿದ್ವಾಂಸರಾದ ಪ್ರೊ|| ಡಿ. ಎಲ್. ನರಸಿಂಹಾಚಾರ್, ಎಂ.ಎ., ಶ್ರೀ ಕೆ. ಎಸ್. ಧರಣೇಂದ್ರಯ್ಯ, ಎಂ.ಎ., ಬಿ.ಟಿ., ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ, ಪ್ರೊ|| ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.—ಈ ನಾಲ್ಕು ಮಂದಿ ಕೂಡಿ ಈ ಕಾರ್ಯವನ್ನು ನಿರ್ವಹಿಸಿದ್ದಾರೆ. ಕವಿಚರಿತೆ ೨ ನೇ ಭಾಗವು ಅಚ್ಚಾಗಿ ಪ್ರಕಟವಾದರೆ ಅದರಿಂದ ಕನ್ನಡಾಭ್ಯಾಸಿಗಳಿಗೆ ತುಂಬಾ ಪ್ರಯೋಜನವಾಗುವುದೆಂದು ಭಾವಿಸಿದ್ದೇನೆ. ಇದರಲ್ಲಿ ಹೊಸ ಕವಿಗಳ ಹೆಸರೂ ಹೊಸ ವಿಚಾರವೂ ಬಹಳವಾಗಿ ಸೇರಿವೆ. ನಾನು ಪರಿಷತ್ತಿನ ಅಧ್ಯಕ್ಷನಾದಮೇಲೆ ಪರಿಷತ್ತಿನ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಅನುಭವಮುಕುರಂ, ಚೇರಮಕಾವ್ಯಂ, ತ್ರಿಪುರದಹನ ಸಾಂಗತ್ಯ, ಉದ್ಭಟದೇವ ಚರಿತೆ,—ಎಂಬೀ ಪ್ರಾಚೀನ ಗ್ರಂಥಗಳು ಪ್ರಕಟವಾಗಿವೆ. ನೂತನ ಸಾಹಿತ್ಯ ಕೃತಿಗಳಾದ ಗಮಕ ಕಾವ್ಯಮಂಜರಿ, ಆಧುನಿಕ ಗದ್ಯಸಾಹಿತ್ಯ, ಅತ್ಯುತ್ತಮ ಸಣ್ಣಕತೆಗಳು, ಕಾದಂಬರಿ ಸಾಮಾನ್ಯ ಮನುಷ್ಯ, ಮೂರು ಸ್ಪರ್ಧಾ ನಾಟಕಗಳು, ವಾಚನ ಕಾವ್ಯಮಂಜರಿ, ಕಾವ್ಯ ಸೌರಭ ಮೊದಲಾದ ಗ್ರಂಥಗಳು ಪ್ರಕಟವಾಗಿವೆ. ಅಲ್ಲದೆ ಕನ್ನಡ ಬಾವುಟ, ಕನ್ನಡ ನಾಡಿನ ಚರಿತ್ರೆ ಮತ್ತು ನೂತನ ವಿಮರ್ಶೆಯಿಂದ ಕೂಡಿದ ಸೋಮೇಶ್ವರ ಶತಕ ಇವುಗಳ ಪುನರ್ಮುದ್ರಣವೂ ಆಗಿದೆ.

## ಕನ್ನಡ ನುಡಿ—ಪರಿಷತ್ಪತ್ರಿಕೆ

ವರ್ಷಕ್ಕೆ ೬ ರೂ. ಗಳ ಚಂದಾ ಪಡೆದು ಮಾನ್ಯ ಸದಸ್ಯರಿಗೆ 'ಕನ್ನಡ ನುಡಿ' ಮಾಸಿಕ (೧೨ ಪ್ರತಿ), 'ಸಾಹಿತ್ಯ ಪರಿಷತ್ ಪತ್ರಿಕೆ' ಷಾಣ್ಮಾಸಿಕ (೨ ಪ್ರತಿ) ಸಲ್ಲಿಸುವ ಪರಿಷತ್ತಿನ ಕಾರ್ಯ ಸಾಹಸಮಯವೇ ಸರಿ. ಮೇಲೆಕಂಡ ಎರಡು ಪತ್ರಿಕೆಗಳನ್ನೂ ಇತರ ಪರಿಷತ್ತಿನ ಸೌಲಭ್ಯಗಳನ್ನೂ ಪಡೆಯುವ ಮಾನ್ಯ ಸದಸ್ಯರು ವರ್ಷಕ್ಕೆ ೧೨ ರೂ. ಗಳ ಚಂದಾ ಸಲ್ಲಿಸುವುದಾದರೆ ಪರಿಷತ್ತಿಗೆ ಮಹೋಪಕಾರವನ್ನು ಮಾಡಿದಂತಾಗುತ್ತದೆ. ನಾನು ಪ್ರತಿ

ಯೊಂದು ಸಕಲ ಸದಸ್ಯರ ಸಭೆಯಲ್ಲೂ ಈ ಮಾತನ್ನು ಹೇಳುತ್ತಾ ಬಂದಿದ್ದೇನೆ. ಆದರೂ ಇದು ಸಭೆಯಿಂದ ಮಂಜೂರಾಗಿಲ್ಲ. ಈಗಲೂ ಮಾನ್ಯ ಸದಸ್ಯರು ದೊಡ್ಡ ಮನಸ್ಸು ಮಾಡಿ ನನ್ನ ಈ ಪ್ರಾರ್ಥನೆಯನ್ನು ಅಂಗೀಕರಿಸಿದರೆ ಪರಿಷತ್ತಿನ ಆರ್ಥಿಕಾಭಿವೃದ್ಧಿಗೆ ಸಹಾಯವಾಗುತ್ತದೆ. ಇದೇ ಊರಿನಲ್ಲಿರುವ ಒಂದು ಮಹಿಳಾ ಸಮಾಜವು ೧೨ ರೂ. ಗಳಂತೆಯೂ, ಗಾಯನ ಸಮಾಜವು ೧೫ ರೂ. ಗಳಂತೆಯೂ (ವರ್ಷಕ್ಕೆ) ಚಂದಾ ವಸೂಲು ಮಾಡುತ್ತಿವೆ. ಬಹುಮುಖವಾದ ಕಾರ್ಯಕಲಾಪಗಳನ್ನುಳ್ಳ ಪರಿಷತ್ತಿನಂತಹ ಮಹಾಸಂಸ್ಥೆಗೆ ವರ್ಷಕ್ಕೆ ೧೨ ರೂ. ಗಳ ಚಂದಾ ವಿಧಿಸುವುದು ಹೆಚ್ಚಲ್ಲವೆಂದು ನನ್ನ ಅಭಿಪ್ರಾಯ. ನಾನು ಪರಿಷತ್ತಿನ ಅಧ್ಯಕ್ಷನಾದ ಮೇಲೂ ಬಹುಕಾಲ ಕನ್ನಡ ನುಡಿ ಮತ್ತು ಪರಿಷತ್‌ಪತ್ರಿಕೆಗಳ ಸಂಪಾದಕನಾಗಿ ಕೆಲಸ ಮಾಡಿದ್ದೇನೆ. ಈಗ ಕನ್ನಡ ನುಡಿಗೆ ಶ್ರೀ ಅನ್ನದಾನಯ್ಯ ಪುರಾಣಿಕರು ಸಂಪಾದಕರಾಗಿದ್ದಾರೆ. ನಾನು ಪರಿಷತ್ಪತ್ರಿಕೆ ಸಂಪಾದಕನಾಗಿರುವೆನು. ಡಾ|| ಕೆ. ಎಂ. ಕೃಷ್ಣರಾಯರು ಇದರ ಸಹ ಸಂಪಾದಕರಾಗಿದ್ದಾರೆ.

## ಪರಿಷತ್ತಿನಲ್ಲಿರುವ ನಿಧಿಗಳು

ಪರಿಷತ್ತಿನ ಸಂಸ್ಥಾಪಕರ ದೂರದೃಷ್ಟಿಯ ಫಲವಾಗಿ ಪರಿಷತ್ತಿನಲ್ಲಿ ಗಮಕ ನಿಧಿ, ಹರಿದಾಸ ಸಾಹಿತ್ಯ ನಿಧಿ, ಸಾಹಿತ್ಯ ಪರೀಕ್ಷಾ ನಿಧಿ, ಉಪನ್ಯಾಸ ನಿಧಿ, ಇತರ ನಿಧಿಗಳು—ಹೀಗೆ ನಿಧಿಯ ರೂಪದಲ್ಲಿ ಒಟ್ಟು ೧೮,೯೫೧ ರೂ. ಗಳಿವೆ. ಇದರಿಂದ ಬರುವ ಬಡ್ಡಿಯಿಂದ ದಾನಿಗಳ ಉದ್ದೇಶಗಳಿಗನುಗುಣವಾಗಿ ಪರಿಷತ್ತಿನವರು ಕಾರ್ಯಕ್ರಮಗಳನ್ನು ನಿರ್ವಹಿಸುತ್ತಿದ್ದಾರೆ. ಈ ನಿಧಿಗಳು ಸಾಹಿತ್ಯೋನ್ನತಿಗೆ ನೆರವಾಗಿವೆ.

ನಾನು ಅಧ್ಯಕ್ಷನಾದ ಮೇಲೆ ಪರಿಷತ್ತಿನ ಉಜ್ವಲಾಭಿಮಾನಿಗಳೂ, ಬೆಂಗಳೂರಿನ ಪ್ರಮುಖ ವರ್ತಕರೂ, ಉದಾರದಾನಿಗಳೂ ಆದ ಶ್ರೀಮಾನ್ ಆರ್. ಚಂದ್ರಶೇಖರಯ್ಯನವರು ೨,೦೦೦ ರೂ. ಗಳನ್ನು ಪರಿಷತ್ತಿಗೆ ಒಂದು ನಿಧಿಯಾಗಿ ಅರ್ಪಿಸಿದ್ದಾರೆ. ಈ ನಿಧಿಯ ಸಮರ್ಪಣೆಯಲ್ಲಿ ಅವರ ಧರ್ಮಪತ್ನಿ ಶ್ರೀಮತಿ ಸುಬ್ಬಮ್ಮನವರು ನಮಗೆ ತುಂಬಾ ಉಪಕಾರ ಮಾಡಿದ್ದಾರೆ. ಬೆಂಗಳೂರಿನ ಮತ್ತೊಬ್ಬ ಗಣ್ಯಮಹನೀಯರೂ, ಕರ್ಣಾಟಕ ಮುದ್ರಣಾಲಯದ ಒಡೆಯರೂ ಆದ ಶ್ರೀಮಾನ್ ಟಿ. ಎನ್. ನಂಜುಂಡಪ್ಪನವರು ೧,೦೦೦ ರೂ. ಗಳ ನಿಧಿಯನ್ನು ಪರಿಷತ್ತಿಗೆ ಅರ್ಪಿಸಿದ್ದಾರೆ. ಅವರ ಉಪಕಾರವು ಇಲ್ಲಿ ಸ್ಮರಣಾರ್ಹವಾಗಿದೆ. ನಾಡಿನ ಮತ್ತು ನಗರದ ಪ್ರಮುಖ ವರ್ತಕರು ಈ ರೀತಿಯಾಗಿ ಪರಿಷತ್ತಿಗೆ ಹೆಚ್ಚು ನಿಧಿಗಳನ್ನು ಅರ್ಪಿಸಿ ಸಾಹಿತ್ಯ ಸೇವೆಗೆ ನೆರವಾಗಬೇಕೆಂದು ಕೋರುತ್ತೇನೆ.

## ಕನ್ನಡ ನಿಘಂಟು ರಚನಾಕಾರ್ಯ

ಪರಿಷತ್ತು ಕೈಗೊಂಡಿರುವ ಬಹು ದೊಡ್ಡ ಕಾರ್ಯ ಕನ್ನಡ-ಕನ್ನಡ ನಿಘಂಟಿನ ರಚನೆ. ಈ ಕಾರ್ಯವನ್ನು ಪರಿಷತ್ತಿನ ಹಿರಿಯರು, ೧೯೪೩ ರಿಂದ ಸುಪ್ರಸಿದ್ಧ ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳ ನೇತೃತ್ವದಲ್ಲಿ ಪ್ರಾರಂಭಿಸಿದರು. ಕರ್ನಾಟಕದ ಪ್ರಮುಖ ವಿದ್ವಾಂಸರಾದ ಪ್ರೊ|| ಟಿ. ಎನ್. ಶ್ರೀಕಂಠಯ್ಯ, ಪ್ರೊ||. ಡಿ. ಎಲ್. ನರಸಿಂಹಾಚಾರ್, ಡಾ|| ಆರ್. ಎಸ್. ಮುಗಳಿ, ಪ್ರೊ|| ಎಸ್. ಎಸ್. ಮಾಳವಾಡ್, ಪ್ರೊ|| ಡಿ. ಕೆ. ಭೀಮಸೇನ ರಾವ್, ಪ್ರೊ|| ಕೆ. ಜಿ. ಕುಂದಣಗಾರ್, ಪ್ರೊ|| ಎಂ. ಮರಿಯಪ್ಪಭಟ್, ಪ್ರೊ|| ಕೆ. ವಿ.

ರಾಘವಾಚಾರ್, ಶ್ರೀ ಎನ್. ಲಕ್ಷ್ಮೀನಾರಾಯಣರಾವ್, ಶ್ರೀ ಕೆ. ಎಸ್. ಧರಣೇಂದ್ರಯ್ಯ, ಡಾ|| ಆರ್. ಸಿ. ಹಿರೇಮಠ್, ಶ್ರೀ ಡಿ. ಸಿ. ಸುಬ್ಬರಾಯಪ್ಪ, ಶ್ರೀ ಸಿದ್ದಯ್ಯಪುರಾಣಿಕ್, ಪ್ರೊ|| ಡಿ. ಜವರೇಗೌಡ ಮತ್ತು ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ ಮೊದಲಾದವರು ಈ ಸಂಪಾದಕಮಂಡಲಿಯಲ್ಲಿದ್ದಾರೆ. ನಿಘಂಟು ಡೆಮ್ಮಿ ೧/೮ ಆಕಾರದಲ್ಲಿ ಸುಮಾರು ೫,೦೦೦ ಪುಟಗಳಷ್ಟಾಗುತ್ತದೆ. ಈ ನಿಘಂಟು ರಚನೆಯಾದರೆ ಕನ್ನಡಿಗರಿಗೆ ಇದರಿಂದ ಮಹೋಪಕಾರ ವಾಗುವುದೆಂದು ನಂಬಬಹುದು. ಮೈಸೂರು ಸರಕಾರದವರು ಇದರ ರಚನೆಗೆ ಧನಸಹಾಯ ಮಾಡಿದ್ದಾರೆ. ತಾ|| ೨೯-೫-೧೯೬೧ ರಲ್ಲಿ ಸರ್ಕಾರದ ಕೂಡ ಪರಿಷತ್ತು ೧೫ ಲಕ್ಷ ರೂ. ಗಳ ವೆಚ್ಚದಲ್ಲಿ ನಿಘಂಟನ್ನು ರಚಿಸಲು ಕರಾರುಮಾಡಿಕೊಂಡಿದೆ. ಇದರಲ್ಲಿ ೧೩ ಲಕ್ಷ ರೂ. ಗಳು ಬಂದಿವೆ. ಈ ಸಂದರ್ಭದಲ್ಲಿ ಆಗಿನ ಮುಖ್ಯಮಂತ್ರಿ ಶ್ರೀ ಬಿ. ಡಿ. ಜತ್ತಿ, ಅರ್ಥಮಂತ್ರಿ ಶ್ರೀ ಟಿ. ಮರಿಯಪ್ಪ, ವಿದ್ಯಾಮಂತ್ರಿ ಶ್ರೀ ಅಣ್ಣಾರಾವ್ ಗಣಮುಖಿ ಈ ಮಹನೀಯರು ಮಾಡಿದ ಸಹಾಯ ಸ್ಮರಣಾರ್ಹ. ಈಗ ಪರಿಷತ್ತು ನಿಘಂಟಿನ ಕಾರ್ಯಕ್ಕಾಗಿ ಒಂದು ಹೊಸ ಕಟ್ಟಡ ವನ್ನು ಉದಾರಿಗಳ ನೆರವಿನಿಂದ (೧೬,೦೦೦ ರೂ. ಗಳ ವೆಚ್ಚದಿಂದ) ಕಟ್ಟಿಸಿದೆ. ಸುಮಾರು ಒಂದು ಲಕ್ಷ ರೂ.ಗಳ ವೆಚ್ಚದಲ್ಲಿ ಮುದ್ರಣ ಯಂತ್ರ, ಅದಕ್ಕೆ ಸಂಬಂಧಪಟ್ಟ ಯಂತ್ರೋಪಕರಣ ಗಳು ಸಿದ್ಧವಾಗಿವೆ. ಈ ನಿಘಂಟು ಮುಕ್ತಾಯವಾದರೆ ಪರಿಷತ್ತಿಗೆ ತಕ್ಕಷ್ಟು ಆರ್ಥಿಕ ಲಾಭ ವಾಗುತ್ತದೆ. ನಿಘಂಟಿನ ಮಾರಾಟದಲ್ಲಿ ಶೇಕಡ ೧೦ ರಷ್ಟು ಹಣ ಪರಿಷತ್ತಿಗೆ ಸಂಭಾವನಾ ರೂಪದಲ್ಲಿಯೂ, ನಿಘಂಟಿನ ೫೦೦ ಪ್ರತಿಗಳು ಉಚಿತವಾಗಿಯೂ ಕೊಡುವಂತೆ ಸರ್ಕಾರದಲ್ಲಿ ಕರಾರಾಗಿದೆ. ತುರ್ತುಪರಿಸ್ಥಿತಿಯ ಕಾರಣದಿಂದ ಸರ್ಕಾರದಿಂದ ಈ ಹಣ ಬರುವುದು ತಡವಾಗಿದೆ. ಈ ಬಗೆಗೆ ಪರಿಷತ್ತು ಸರ್ಕಾರದಲ್ಲಿ ಹಣವನ್ನು ಪಡೆಯಲು ವ್ಯವಹಾರ ನಡೆಸಿದೆ. ಕರ್ಣಾಟಕದ ಮಹಾಜನರು ಉದಾರವಾಗಿ ಧನಸಹಾಯ ಮಾಡಿ ಪರಿಷತ್ತು ಕೈಗೊಂಡಿರುವ ಈ ಕಾರ್ಯ ದಲ್ಲಿ ಸಹಾಯಮಾಡಬೇಕಾಗಿ ಕೋರುತ್ತೇನೆ. ಈ ಕನ್ನಡ ನಿಘಂಟು ಗಾತ್ರದಿಂದ ಶ್ರೀ ಕಿಟ್ಟೆಲರ ನಿಘಂಟಿನ ನಾಲ್ಕರಷ್ಟಾಗಿ ಹೆಚ್ಚು ಪ್ರಯೋಜನಕಾರಿಯಾಗಿ ಇಡೀ ಭಾರತದಲ್ಲಿಯೇ ಪ್ರಖ್ಯಾತವೆನಿಸುವುದು.

## ಪರಿಷತ್ತಿಗೆ ಒಂದು ಕನ್ನಡ ಟೈಪ್‌ರೈಟರ್

ಪರಿಷತ್ತಿಗೆ ಒಂದು ಕನ್ನಡ ಟೈಪ್‌ರೈಟರನ್ನು ತರಿಸಿದೆ. ಈಗ ಪ್ರತಿದಿನ ಸಂಜೆ ಈ ಯಂತ್ರವನ್ನು ಉಪಯೋಗಿಸಲು ತರಗತಿಗಳನ್ನು ನಡೆಸಲಾಗುತ್ತಿದೆ. ಶ್ರೀ ಅನಂತಸುಬ್ಬ ರಾಯರು ಈ ವಿಷಯದಲ್ಲಿ ಪರಿಷತ್ತಿಗೆ ನೆರವಾಗಿದ್ದಾರೆ.

## ಪರಿಷತ್ತಿನ ಪರೀಕ್ಷೆಗಳು

ಕನ್ನಡ ಸಾಹಿತ್ಯ ಪರಿಷತ್ತು ಹಲವಾರು ವರ್ಷಗಳಿಂದ ಕನ್ನಡ ಕಾವ, ಕನ್ನಡ ಜಾಣ ಮತ್ತು ಗಮಕ ಪ್ರವೇಶ ಪರೀಕ್ಷೆಗಳನ್ನು ನಡೆಸುತ್ತಿದೆ. ಕೆಲವು ಸಮಯದಲ್ಲಿ ಗಮಕ ಪ್ರೌಢ ಪರೀಕ್ಷೆ ನಡೆದುದೂ ಉಂಟು. ನಾನು ಅಧ್ಯಕ್ಷನಾದಮೇಲೆ, ಈ ಪರೀಕ್ಷೆಗಳನ್ನು ಚುರುಕು ಗೊಳಿಸಿ ಹೆಚ್ಚುಮಂದಿ ವಿದ್ಯಾರ್ಥಿಗಳು ಭಾಗವಹಿಸುವಂತೆ ಪ್ರಯತ್ನಿಸಲಾಗಿದೆ. ೧೯೫೬ ರಿಂದ ಈವರೆಗೆ ಕನ್ನಡ ಕಾವ ಪರೀಕ್ಷೆಯಲ್ಲಿ ೪೭೪ ಮಂದಿ, ಕನ್ನಡ ಜಾಣ ಪರೀಕ್ಷೆಯಲ್ಲಿ ೨,೮೦೪ ಮಂದಿ, ಗಮಕ ಪರೀಕ್ಷೆಯಲ್ಲಿ ೫೨೨ ಮಂದಿ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಉತ್ತೀರ್ಣ

ರಾಗಿರುತ್ತಾರೆ. 'ಕನ್ನಡ ಜಾಣ' ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಹೈದರಾಬಾದು, ಬೊಂಬಾಯಿ ಕರ್ನಾಟಕದಲ್ಲಿ ಉಪಾಧ್ಯಾಯ ಪದವಿ ಸಿಕ್ಕುತ್ತಿದೆ. ಈ ಬಗೆಗೆ ಬಂದಿರುವ ಕೆಲವು ಅಡಚಣೆಗಳನ್ನು ಕುರಿತು ಶಿಕ್ಷಣಾಧಿಕಾರಿಗಳೊಡನೆ ಪರಿಷತ್ತು ವ್ಯವಹರಿಸುತ್ತಿದೆ.

ಪರಿಷತ್ತಿನಲ್ಲಿ ಹಿಂದಿನಿಂದ ನಡೆದುಕೊಂಡು ಬಂದಂತೆ ಗಮಕ ತರಗತಿಗಳು, ಮೈಸೂರು, ಬೆಂಗಳೂರು, ಭದ್ರಾವತಿ, ಪುತ್ತೂರು, ಬಿಜಾಪುರ, ಚಾಮರಾಜನಗರ, ಮಡಿಕೇರಿ, ಮಂಡ್ಯ, ತಿಪಟೂರು, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ದಾವಣಗೆರೆ ಮೊದಲಾದ ಕಡೆಗಳಲ್ಲಿ ನಡೆದಿವೆ. ನೂರಾರು ಮಂದಿ ವಿದ್ಯಾರ್ಥಿಗಳು ಉತ್ತೀರ್ಣರಾಗಿ ಸಾಹಿತ್ಯ ಮತ್ತು ಕಲಾ ಸೇವೆಯನ್ನು ಮಾಡುತ್ತಿದ್ದಾರೆ. ವಿದ್ಯಾರ್ಥಿಗಳ ಪ್ರಯೋಜನಕ್ಕಾಗಿ 'ಗಮಕ ಕಾವ್ಯಮಂಜರಿ' ಎಂಬ ಗ್ರಂಥವನ್ನು ಪ್ರಕಟಿಸಿದೆ. ಇದು ಗಮಕ ವಿದ್ಯಾರ್ಥಿಗಳಿಗೆ ಒಂದು ಕೈಪಿಡಿಯಾಗಿದೆ.

## ಸಾಹಿತ್ಯ ಸಮ್ಮೇಳನಗಳು

ನಾನು ಪರಿಷತ್ತಿನ ಅಧ್ಯಕ್ಷನಾದಮೇಲೆ, ಧಾರವಾಡ (೧೯೫೭), ಬಳ್ಳಾರಿ (೧೯೫೮), ಬೀದರ್ (೧೯೬೦), ಉಡುಪಿ (೧೯೬೦), ಗದಗ (೧೯೬೧), ಈ ಐದು ಸಮ್ಮೇಳನಗಳನ್ನು ನಡೆಸಲಾಗಿದೆ. ಇತ್ತೀಚಿನ ತುರ್ತು ಪರಿಸ್ಥಿತಿಯಲ್ಲಿ ಇಂತಹ ಸಮ್ಮೇಳನ ನಡೆಸುವುದು ನಮಗೆ ಕಷ್ಟಕರವಾಗಿದೆ. ಆದರೂ ಸಹ ೪೪ನೇ ಸಮ್ಮೇಳನವು ಈ ವರ್ಷ ಡಿಸೆಂಬರ್‌ನಲ್ಲಿ ತುಮಕೂರಿನಲ್ಲಿ ನಡೆಯಲು ಎಲ್ಲ ಏರ್ಪಾಡೂ ಆಗಿದೆ. ಈ ಎಲ್ಲ ಸಮ್ಮೇಳನಗಳಿಗೂ ಗಣ್ಯರೂ, ಜನಪ್ರಿಯರೂ ಆದ ಮಹನೀಯರನ್ನು ಅಧ್ಯಕ್ಷರನ್ನಾಗಿ ಆರಿಸಲಾಗಿದೆ. ಈ ವರ್ಷ ಡಾ|| ಆರ್. ಎಸ್. ಮುಗಳಿಯವರನ್ನು ಸರ್ವಾನುಮತದಿಂದ ಸಮ್ಮೇಳನಾಧ್ಯಕ್ಷರನ್ನಾಗಿ ಚುನಾಯಿಸಲಾಗಿದೆಯೆಂದು ತಿಳಿಸಲು ಹರ್ಷಿಸುತ್ತೇನೆ.

## ಪರಿಷತ್ತಿನಲ್ಲಿ ಸಂಗೀತ ತರಗತಿಗಳು

ನಾನು ಅಧ್ಯಕ್ಷನಾದಮೇಲೆ, ಪರಿಷತ್ತಿನಲ್ಲಿ ಹರಿದಾಸರ ಮತ್ತು ಶಿವಶರಣರ ಕೃತಿಗಳ ತರಗತಿಗಳನ್ನು ನಡೆಸಿ, ರಾಗ-ತಾಳ ಬದ್ಧವಾಗಿ ಕನ್ನಡ ಕೃತಿಗಳನ್ನು ಹಾಡಲು ಕಲಿಸುವ ಸಂಗೀತ ಶಾಲೆಯನ್ನು ಎರಡು ವರ್ಷಗಳ ಕಾಲ ಏರ್ಪಡಿಸಿತ್ತು. ವೈಣಿಕ ವಿದ್ವಾಂಸ ಶ್ರೀ ಎಲ್. ರಾಜಾರಾಯರು, ಸಂಗೀತ ವಿದ್ವಾನ್ ಶ್ರೀ ಎಸ್. ಚಂದ್ರಪ್ಪನವರು ಈ ತರಗತಿಗಳನ್ನು ನಡೆಸಿ ಉಪಕಾರ ಮಾಡಿದ್ದಾರೆ. ಧನಾಭಾವದಿಂದ ಈ ಶಾಲೆಗಳು ನಿಂತಿವೆ. ಸಂಗೀತ ನಾಟಕ ಅಕ್ಯಾಡೆಮಿಯವರು ಈ ಬಗೆಗೆ ಪರಿಷತ್ತಿಗೆ ಧನಸಹಾಯ ಮಾಡಿ ನೆರವಾಗುವರೆಂದು ನಂಬುವೆ.

## ಭಾಷಣ ಕಲಾ ತರಗತಿ

ಮಣಿಪಾಲಿನ ಅಕಾಡೆಮಿ ಆಫ್ ಜನರಲ್ ಎಜುಕೇಷನ್ನಿನ ರಿಜಿಸ್ಟ್ರಾರ್‌ರವರಾದ ಡಾ|| ಟಿ. ಎಂ. ಎ. ಪೈ ರವರ ಉದಾರವಾದ ಸಹಾಯದ ಫಲವಾಗಿ, ಈಗಾಗಲೇ ಸಂದಾಯವಾಗಿರುವ ೧,೦೦೦ ರೂ.ಗಳ ನೆರವಿನಿಂದ ಪರಿಷತ್ತಿನಲ್ಲಿ ಭಾಷಣಕಲಾ ತರಗತಿಯನ್ನು ಏರ್ಪಡಿಸಿದೆ. ಇದಕ್ಕೆ ಈಗ ೬೬ ಮಂದಿ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಸೇರಿದ್ದಾರೆ. ಗಣ್ಯ ವಿದ್ವಾಂಸರಾದ ಶ್ರೀ ಪಂಡಿತ ವೆಂಕಟೇಶ ದೇಶಿಕಾಚಾರ್ಯ, ಶ್ರೀ ಎ. ಆರ್. ಮಿತ್ರ, ಎಂ.ಎ., ಶ್ರೀ ಡಿ. ಆರ್. ರಾಮಯ್ಯ, ಬಿ.ಎ., ಇವರುಗಳು ಪಾಠ ಹೇಳುತ್ತಿದ್ದಾರೆ. ಈ ವಿದ್ಯಾರ್ಥಿಗಳ

ಉಪಯೋಗಕ್ಕಾಗಿ ವಾರಕ್ಕೊಂದು ಉಪನ್ಯಾಸವನ್ನೂ, ತಿಂಗಳಿಗೊಂದು ಚರ್ಚಾಕೂಟವನ್ನೂ ಏರ್ಪಡಿಸಲಾಗಿದೆ. ಆರು ತಿಂಗಳ ಕಾಲದಲ್ಲಿ ನಡೆಯುವ ಈ ತರಗತಿಯಲ್ಲಿ ಓದಿ ಉತ್ತೀರ್ಣರಾದವರಿಗೆ "ಕನ್ನಡ ವಾಗ್ಮಿ" ಎಂಬ ಪ್ರಶಸ್ತಿಪತ್ರವನ್ನು ಕೊಡಲಾಗುತ್ತದೆ. ಪರಿಷತ್ತಿನ ಈ ಸಾಹಸವು ಕನ್ನಡ ನಾಡಿನಲ್ಲೇ ಪ್ರಪ್ರಥಮವಾದುದೆಂದು ನಾವು ಹೇಳಬಹುದು. ಭಾಷಣ ಕಲೆಯನ್ನು ಕುರಿತು ಒಂದು ಪ್ರಮಾಣಭೂತವಾದ ಗ್ರಂಥವನ್ನು ಕೂಡ ಪರಿಷತ್ತು ಪ್ರಕಟಿಸಲು ಕೈಗೊಂಡಿದೆ. ಇದುವರೆಗೆ ಈ ಉಪನ್ಯಾಸ ಕಲೆಯನ್ನು ಕುರಿತು ಕನ್ನಡದಲ್ಲಿ ಒಂದು ಗ್ರಂಥವಾದರೂ ರಚನೆಯಾಗದಿರುವುದು ಆಶ್ಚರ್ಯ. ಪ್ರಜಾಪ್ರಭುತ್ವದ ಇಂದಿನ ಕಾಲದಲ್ಲಿ ಈ ಭಾಷಣ ಕಲೆಯ ಅಭ್ಯಾಸ ಜನರಿಗೆ ಅತ್ಯಗತ್ಯವೆಂದು ಹೇಳಬೇಕಾಗಿಲ್ಲವಷ್ಟೆ.

## ಗಡಿನಾಡಿನಲ್ಲಿ ಭಾಷಾ ಜಾಗೃತಿ

ಪರಿಷತ್ತಿನಲ್ಲಿ ನಡೆಯುವ ಸಾಹಿತ್ಯೋತ್ಸವಗಳನ್ನು ಕಾರ್ಯಸಮಿತಿಯ ಸಭೆಗಳನ್ನು ಬಹುಮಟ್ಟಿಗೆ ಗಡಿನಾಡಿನಲ್ಲಿ ಕನ್ನಡದ ಹಿತದೃಷ್ಟಿಯಿಂದ ನಡೆಸಲಾಗಿದೆ. ನೀಲಗಿರಿ, ಸೊಲ್ಲಾಪುರ, ಗೋಕರ್ಣ, ಬೀದರ, ಕಲಬುರ್ಗಿ, ಕೊಳ್ಳೇಗಾಲ, ಕಾಸರಗೋಡು, ತುಮಕೂರು, ಕೋಲಾರ, ಶಿವಮೊಗ್ಗ, ಉಡುಪಿ, ಮಡಿಕೇರಿ, ಬಳ್ಳಾರಿ, ಧಾರವಾಡ, ಗದಗ ಮೊದಲಾದ ಕಡೆ ಪರಿಷತ್ತಿನ ಈ ಸಭೆಗಳು ನಡೆದಿವೆ.

ದತ್ತಿಯ ಭಾಷಣಗಳನ್ನು ಕರ್ಣಾಟಕದಲ್ಲಿಯೇ ಅಲ್ಲದೆ ದಿಲ್ಲಿ ಮೊದಲಾದ ಹೊರನಾಡಿನಲ್ಲಿಯೂ ನಡೆಸಲಾಯಿತು. ನಾನು ಪರಿಷತ್ತಿನ ಅಧ್ಯಕ್ಷನಾದಮೇಲೆ, ಮದರಾಸು, ಬೊಂಬಾಯಿ, ಹೈದರಾಬಾದು, ಹೊಸದಿಲ್ಲಿಯ ಕರ್ನಾಟಕ ಸಂಘಗಳನ್ನು ಸಂದರ್ಶಿಸಿ ಇವುಗಳಿಗೂ ಪರಿಷತ್ತಿಗೂ ಇರುವ ಮಧುರ ಬಾಂಧವ್ಯ ಹೆಚ್ಚುವಂತೆ ಪ್ರಯತ್ನಿಸಿದ್ದೇನೆ.

## ಮಹಾಕವಿ ಕಾಳಿದಾಸ ಜಯಂತಿ

ನಾನು ಪರಿಷತ್ತಿನ ಅಧ್ಯಕ್ಷನಾದಮೇಲೆ, ಕಾಳಿದಾಸ ಜಯಂತಿಯನ್ನು ಸರ್ಕಾರದ ಉದಾರ ಸಹಾಯದಿಂದ ಪರಿಷತ್ತಿನಲ್ಲಿ ಪ್ರಾರಂಭಿಸಲಾಗಿದೆ. ಭಾರತದ ರಾಷ್ಟ್ರೀಯ ಮಹಾಕವಿಯ ಈ ಜಯಂತಿಯು ಸಮಗ್ರ ಕರ್ಣಾಟಕದಲ್ಲಿ ಆಚರಿಸಲ್ಪಟ್ಟಿದೆ. ಬೆಂಗಳೂರು, ತುಮಕೂರು, ಕೋಲಾರ, ರಾಯಚೂರು, ಶಿವಮೊಗ್ಗ, ಧಾರವಾಡ, ಕುಮಟ, ಸೊಲ್ಲಾಪುರ, ಬಿಜಾಪುರ, ಯಾದಗಿರಿ, ಕಲಬುರ್ಗಿ, ಕುಷ್ಟಗಿ, ಚನ್ನಪಟ್ಟಣ, ಮೇಲುಕೋಟೆ, ಬೆಳಗಾಂವಿ, ಗದಗ, ಹುಬ್ಬಳ್ಳಿ ಮೊದಲಾದ ಸ್ಥಳಗಳಲ್ಲಿ ಈ ಜಯಂತಿಯನ್ನು ಆಚರಿಸಲಾಗಿದೆ. ಪ್ರಸಿದ್ಧ ಸಂಸ್ಕೃತ ವಿದ್ವಾಂಸರು ಈ ಜಯಂತಿಯಲ್ಲಿ ಭಾಗವಹಿಸಿ ಜನತೆಗೆ ಕಾಳಿದಾಸನ ಕಾವ್ಯಸಂದೇಶವನ್ನು ಸಾರಿ ಹೇಳಿದ್ದಾರೆ. ಇದರಿಂದ ಕನ್ನಡ ಮತ್ತು ಸಂಸ್ಕೃತದ ಮಧುರ ಬಾಂಧವ್ಯಕ್ಕೂ ನೆರವಾಗಿದೆ,

## ರಾಷ್ಟ್ರೀಯ ಉತ್ಸವಗಳು

೧೯೬೧ರಲ್ಲಿ ರಾಷ್ಟ್ರೀಯ ಉತ್ಸವಗಳಾದ ರವೀಂದ್ರನಾಥರ ಶತಮಾನೋತ್ಸವ, ಸರ್ ಎಂ. ವಿಶ್ವೇಶ್ವರಯ್ಯನವರ ಶತಮಾನೋತ್ಸವ, ಶ್ರೀ ವಿವೇಕಾನಂದರ ಶತಮಾನೋತ್ಸವ, ಪಂಪ, ಹರಿಹರ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ಸರ್ವಜ್ಞ ಮೊದಲಾದ ಮಹಾಕವಿಗಳ ಜಯಂತ್ಯುತ್ಸವಗಳು ಪರಿಷತ್ತಿನಲ್ಲಿ ವಿಪುಲವಾಗಿ ನಡೆದಿವೆ.

## ಕನ್ನಡ ರಾಜ್ಯೋತ್ಸವ

ನಾನು ಪರಿಷತ್ತಿನ ಅಧ್ಯಕ್ಷನಾದಮೇಲೆ ೧೯೫೬ನೇ ನವೆಂಬರ್‌ನಿಂದ ಪ್ರತಿವರ್ಷ ತಪ್ಪದಂತೆ ಕನ್ನಡ ರಾಜ್ಯೋತ್ಸವವನ್ನು ನಡೆಸುತ್ತಾ ಬರಲಾಗಿದೆ. ಅಷ್ಟೇ ಅಲ್ಲದೆ ಪರಿಷತ್ತಿನ ಕಚೇರಿಗೆ ಆ ದಿನ ರಜಾ ಕೊಡಲಾಗಿದೆ. ಎರಡು ಕೋಟಿ ಐವತ್ತು ಲಕ್ಷ ಮಂದಿ ಕನ್ನಡಿಗರ ಸಂತೋಷಕ್ಕೆ ಕಾರಣವಾದ ಈ ರಾಜ್ಯೋದಯಕ್ಕೆ ಮೈಸೂರು ಸರ್ಕಾರ ರಜಾ ಕೊಡದಿರುವುದನ್ನು ನಾವು ಇಲ್ಲಿ ಸ್ಮರಿಸಿಕೊಳ್ಳಬಹುದು. ಈ ಬಗೆಗೆ ಕನ್ನಡ ಪತ್ರಿಕೆಗಳು ತಳೆದಿರುವ ಅಭಿಮಾನಕ್ಕೆ ನಾನು ಚಕಿತನಾಗಿದ್ದೇನೆ.

## ಭಾವೈಕ್ಯ ಸಾಧನೆ

೧೯೫೯ರಲ್ಲಿ ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ಬಂಗಾಳಿ ಸಾಹಿತ್ಯ ಸಮ್ಮೇಳನದ ಕಾರ್ಯಕಲಾಪಗಳಲ್ಲಿ ನಾನು ಪರಿಷತ್ತಿನ ಪರವಾಗಿ ಭಾಗವಹಿಸಿದ್ದೇನೆ. ಬಳ್ಳಾರಿ ಸಾಹಿತ್ಯ ಸಮ್ಮೇಳನ ಕಾಲದಲ್ಲಿ ತೆಲುಗು ವಿದ್ವಾಂಸರು ಹಲವರು ಬಂದು ಸಮ್ಮೇಳನದಲ್ಲಿ ಭಾಗವಹಿಸಿದುದು ಗಮನಾರ್ಹವಾಗಿದೆ.

ಬೆಂಗಳೂರಿನಲ್ಲಿರುವ ಮೈಸೂರು ಮುಸ್ಲಿಂ ಲೀಗಿನವರು ನನ್ನನ್ನು ಕರೆಸಿಕೊಂಡು ಬಿನ್ನವತ್ತಳೆಯನ್ನು ಅರ್ಪಿಸಿದ್ದಾರೆ. ಧರ್ಮಸ್ಥಳದ ಕನ್ನಡ ಸಾಹಿತ್ಯ ಸಮ್ಮೇಳನ ರಜತೋತ್ಸವ ಸಮಾರಂಭದಲ್ಲಿ ಮತ್ತು ಬೊಂಬಾಯಿ ಕರ್ಣಾಟಕ ಸಂಘದ ರಜತೋತ್ಸವದಲ್ಲಿ ಹಾಗೂ ಮದ್ರಾಸ್ ಕರ್ಣಾಟಕ ಸಂಘದ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸುವ ಸುಯೋಗವು ನನಗೆ ಒದಗಿತ್ತು. ಇದೆಲ್ಲವೂ ಜನರಿಗೆ ಪರಿಷತ್ತಿನ ಮೇಲಿರುವ ಅಭಿಮಾನದ ಫಲವೆಂದು ನಾನು ಭಾವಿಸಿದ್ದೇನೆ.

ಭದ್ರಾವತಿ ಕರ್ಣಾಟಕ ಸಂಘದವರು ಮತ್ತು ಮಳವಳ್ಳಿ, ಕಲಬುರ್ಗಿ, ನವಿಲುಗುಂದ, ಹಲಗೂರು, ಉಡುಪಿ, ಮಹಾಜನಗಳು ಪರಿಷತ್ತಿನ ಅಧ್ಯಕ್ಷನಾದ ನನ್ನನ್ನು ಕರೆಸಿಕೊಂಡು ಮಾನಪತ್ರವಿತ್ತು, ನಿಧಿಯನ್ನು ಸಮರ್ಪಿಸಿ ಗೌರವಿಸಿದ್ದಾರೆ. ಅವರ ಸಾಹಿತ್ಯಪ್ರೇಮವು ಶ್ಲಾಘ್ಯವೇ ಸರಿ. ಇಂದಿನ ತುರ್ತು ಪರಿಸ್ಥಿತಿಗಾಗಿ ವೀರಕವಿತೆಗಳ ವಾಚನಕ್ಕಾಗಿ ಕವಿಗೋಷ್ಠಿಗಳನ್ನು ಏರ್ಪಡಿಸಿದ್ದೇವೆ. ಮತ್ತು ರಾಷ್ಟ್ರೀಯ ರಕ್ಷಣಾನಿಧಿಗೆ ಪರಿಷತ್ತಿನ ಕಾರ್ಯಕರ್ತರು ಯಥಾಶಕ್ತಿ ಕಾಣಿಕೆಯನ್ನು ಕೊಟ್ಟಿದ್ದಾರೆ.

## ಪರಿಷತ್ತಿಗೆ ಸನ್ಮಾನ್ಯರ ಸಂದರ್ಶನ

ನಾನು ಅಧ್ಯಕ್ಷನಾಗಿದ್ದ ಈ ಅವಧಿಯಲ್ಲಿ ರಾಜ್ಯಪಾಲರಾದ ಮೈಸೂರಿನ ಶ್ರೀಮನ್ಮಹಾರಾಜರವರು ಎರಡು ಸಾರಿ ಪರಿಷತ್ತಿಗೆ ಬಂದು ಹೋಗಿದ್ದಾರೆ. ರಾಷ್ಟ್ರಾಧ್ಯಕ್ಷರಾಗಿದ್ದ ಡಾ|| ರಾಜೇಂದ್ರಪ್ರಸಾದರು (೧೪-೮-೧೯೫೯ ರಲ್ಲಿ) ಪರಿಷತ್ತಿಗೆ ಸಂದರ್ಶನವಿತ್ತಿದ್ದಾರೆ. ಕೇಂದ್ರ ಸಚಿವರಾಗಿದ್ದ ದಿ|| ಬಿ. ಎನ್. ದಾತಾರರು ಹಲವು ಸಾರಿ ಪರಿಷತ್ತಿಗೆ ಬಂದು ಹೋಗಿದ್ದಾರೆ. ಮಾನ್ಯರಾದ ಜಗಜೀವನರಾಮ್, ಡಿ. ಪಿ. ಕರ್‌ಮರ್‌ಕರ್, ಪ್ರೊ|| ಹುಮಾಯೂನ್ ಕಬೀರ್, ಶ್ರೀ ಅನಂತಶಯನಂ ಅಯ್ಯಂಗಾರ್, ಶ್ರೀ ಎಸ್. ವಿ. ಕೃಷ್ಣಮೂರ್ತಿರಾವ್,

ಮೈಸೂರಿನ ಮುಖ್ಯ ಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರು, ಶ್ರೀ ಬಿ. ಡಿ. ಜತ್ತಿಯವರು, ಶ್ರೀ ಎಸ್.ಆರ್. ಕಂಠಿಯವರು, ಡಾ|| ನಾಗಪ್ಪಆಳ್ವರು, ಶ್ರೀ ಆರ್.ಎಂ. ಪಾಟೀಲರು, ಸಭಾಪತಿ ಶ್ರೀ ಜಿ. ವಿ. ಹಳ್ಳಿಕೇರಿಯವರು, ಮೈಸೂರು ಹೈಕೋರ್ಟಿನ ಮುಖ್ಯ ನ್ಯಾಯಾಧೀಶ ಶ್ರೀ ಎನ್. ಶ್ರೀನಿವಾಸರಾಯರು, ಜ|| ಸೋಮನಾಥ ಅಯ್ಯರ್, ಜ|| ಇಕ್ಬಾಲ್ ಹುಸೇನ್, ಜ|| ಹೊಂಬೇಗೌಡರು, ಜ|| ಟಿ. ಕೆ. ತುಕ್ಕೋಳ್, ಜ|| ಹೆಗ್ಗಡೆ, ಜ|| ಸದಾಶಿವಯ್ಯ ಮೊದಲಾದವರು, ಡಾ|| ಕತ್ರೆ, ಡಾ|| ವಾಳ್ವೇಕರ್, ಶ್ರೀರಾಮನ್ (Illustrated Weekly), ಶ್ರೀ ಕೆ. ಹನುಮಂತಯ್ಯ, ಶ್ರೀ ಆರ್. ಆರ್. ದಿವಾಕರ್, ಮಣಿಪಾಲಿನ ಡಾ|| ಮಾಧವ ಪೈ, ಇತ್ಯಾದಿ ಅನೇಕ ಮಂದಿ ನಾಡಿನ ಗಣ್ಯ ಮಹನೀಯರು ಪರಿಷತ್ತಿಗೆ ಬಂದು ಹೋಗಿದ್ದಾರೆ. ವಿಖ್ಯಾತ ಕನ್ನಡ ಸಾಹಿತಿಗಳು ಮೇಲಿಂದ ಮೇಲೆ ಪರಿಷತ್ತಿಗೆ ದಯೆಮಾಡಿಸಿದ್ದಾರೆ. ಅಲ್ಲದೆ ಪ್ರಮುಖ ಮಠಾಧಿಪತಿಗಳಾದ, ಶ್ರೀ ಕೂಡಲಿ ಶೃಂಗೇರಿ ಜಗದ್ಗುರುಗಳವರು, ಶ್ರೀ ಸುತ್ತೂರು ಜಗದ್ಗುರುಗಳು, ಶ್ರೀ ಅದಮಾರು ಮಠಾಧೀಶ್ವರರು, ಶ್ರೀ ಸೋಸಲೆ ವ್ಯಾಸರಾಯ ಮಠಾಧೀಶ್ವರರು, ಶ್ರೀ ಪೇಜಾವರ ಮಠಾಧೀಶ್ವರರು, ಧಾರವಾಡದ ಶ್ರೀ ಮುರುಘಾ ಮಠಾಧೀಶ್ವರರು, ಶ್ರೀ ನವಲುಗುಂದ ಮಠಾಧೀಶ್ವರರು, ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು ಮುಂತಾದ ಪೂಜ್ಯ ಸ್ವಾಮಿಗಳವರು ಪರಿಷತ್ತಿಗೆ ಸಂದರ್ಶನವಿತ್ತು ತಕ್ಕಷ್ಟು ಧನಸಹಾಯವನ್ನೂ ಮಾಡಿ ನಮ್ಮನ್ನು ಅನುಗ್ರಹಿಸಿದ್ದಾರೆಂದು ತಿಳಿಸಲು ಹರ್ಷಿಸುತ್ತೇನೆ.

ಸಮಗ್ರ ಕನ್ನಡನಾಡಿನ ಹಿತಚಿಂತನೆಯಿಂದ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಏಳಿಗೆಗಾಗಿ ಪರಿಷತ್ತು ೧೯೧೫ ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟಿತು. ಕೀರ್ತಿಶೇಷರಾದ ಹೆಚ್. ವಿ. ನಂಜುಂಡಯ್ಯನವರು, ಕರ್ಪೂರ ಶ್ರೀನಿವಾಸರಾಯರು, ಬೆಳ್ಳಾವೆ ವೆಂಕಟನಾರಣಪ್ಪನವರು, ಬಿ. ಎಂ. ಶ್ರೀಕಂಠಯ್ಯನವರು, ಎಸ್. ಎಸ್. ಬಸವನಾಳ್‌ಅವರು, ಎಂ. ಆರ್. ಶ್ರೀನಿವಾಸಮೂರ್ತಿಗಳು, ಮುದವೀಡು ಕೃಷ್ಣರಾಯರು, ರೆ|| ಉತ್ತಂಗಿ ಚೆನ್ನಪ್ಪನವರು ಮೊದಲಾದ ಮಹನೀಯರು ಪರಿಷತ್ತಿನ ಪ್ರಗತಿಗಾಗಿ ಬಹಳವಾಗಿ ಶ್ರಮಿಸಿರುತ್ತಾರೆ. ನಾಡಿನಲ್ಲಿ ಸುವಿಖ್ಯಾತರಾಗಿರುವ ಶ್ರೀ ಆಲೂರು ವೆಂಕಟರಾಯರು, ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರರು, ಡಾ|| ಡಿ. ವಿ. ಗುಂಡಪ್ಪನವರು, ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳು, ಡಾ|| ಫ. ಗು. ಹಳಕಟ್ಟಿಯವರು ಮೊದಲಾದವರು ಈ ಪರಿಷತ್ತಿನ ಅಭಿವೃದ್ಧಿಗೆ ಬಹಳ ಮಟ್ಟಿಗೆ ಕಾರಣಕರ್ತರಾಗಿದ್ದಾರೆ. ಮೈಸೂರಿನ ಶ್ರೀಮನ್ಮಹಾರಾಜರವರು, ರಾಜಮನೆತನದವರು, ಮೈಸೂರು ಸರ್ಕಾರದವರು, ಬೆಂಗಳೂರು ಕಾರ್ಪೊರೇಷನ್ನಿನವರು, ನಾಡಿನ ಶ್ರೀಮಂತ ವರ್ಗದವರು, ಕನ್ನಡ ಸಾಹಿತ್ಯ ವಿದ್ವಾಂಸರು ಪರಿಷತ್ತಿಗೆ ಬೆಂಬಲವಾಗಿ ನಿಂತು ಅದನ್ನು ಪೋಷಿಸಿಕೊಂಡು ಬಂದಿದ್ದಾರೆ ಎಂಬುದನ್ನು ಈ ಸಂದರ್ಭದಲ್ಲಿ ನಾನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.

## ಪರಿಷತ್ತಿನ ಒಂದು ಮೈಲಿಗಲ್ಲು

ದಿನಾಂಕ ೧೦-೬-೧೯೬೩ರಂದು ರಾಜ್ಯಪಾಲರಾದ ಶ್ರೀಮನ್ಮಹಾರಾಜ ಜಯಚಾಮರಾಜ ಒಡೆಯರು ಪರಿಷತ್ತಿಗೆ ಆಗಮಿಸಿ ಕನ್ನಡ ನಿಘಂಟಿನ ಮುದ್ರಣವನ್ನು ಪ್ರಾರಂಭಿಸಿ, ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ ವಿಸ್ತರಣ ಕಟ್ಟಡದ ಪ್ರವೇಶೋತ್ಸವ ನಡೆಸಿ ಪರಿಷತ್ತು ಕೈಗೊಂಡಿರುವ ಕಾರ್ಯಕಲಾಪಗಳನ್ನು ಮನಸಾರ ಮೆಚ್ಚಿ ಹರಸಿರುವುದು ಪರಿಷತ್ತಿನ ಒಂದು ಮೈಲಿಗಲ್ಲು ಎಂದು ಕನ್ನಡ ಪತ್ರಿಕೆಗಳು ಕರೆದಿರುವುದು ಗಮನಾರ್ಹವಾದುದು. ಆ ಸಂದರ್ಭ

ದಲ್ಲಿ ನಮ್ಮ ಜನಪ್ರಿಯ ರಾಜ್ಯಪಾಲರು “ಕರ್ಣಾಟಕ ರಾಜ್ಯೋದಯವಾದ ಮೇಲೆ ಪರಿಷತ್ತು ಉತ್ಸಾಹಶಾಲಿಗಳಾದ ಆಸ್ಥಾನ ವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ನೇತೃತ್ವದಲ್ಲಿ ಅನೇಕ ಉಪಯುಕ್ತವಾದ ಮತ್ತು ಪ್ರಗತಿಪರವಾದ ಕೆಲಸಗಳನ್ನು ನೆರವೇರಿಸುತ್ತಿರುವುದು ಎಲ್ಲರ ಮೆಚ್ಚಿಗೆಗೂ ಪಾತ್ರವಾಗಲು ಅರ್ಹವಾಗಿದೆ. ಯಾವ ಪ್ರತಿಫಲವೂ ಇಲ್ಲದೆ ಕೇವಲ ನಾಡು ನುಡಿಗಳ ಅಭಿಮಾನದಿಂದ ಪರಿಷತ್ತಿನವರು ಸೇವೆ ಸಲ್ಲಿಸುತ್ತಿರುವುದು ಸ್ತೋತ್ರಾರ್ಹವಾಗಿದೆ” ಎಂದು ಅಪ್ಪಣೆ ಕೊಡಿಸಿರುವುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬೇಕಾಗಿದೆ.

## ಆಗಬೇಕಾಗಿರುವ ಕಾರ್ಯಗಳು

ಪರಿಷತ್ತು ಸುಸ್ಥಿರವಾಗಿ ನಿಲ್ಲಬೇಕಾದರೆ ಒಂದು ವಿಶಾಲ ಸಭಾಭವನ ಆಗಬೇಕು, ಒಂದು ಸಂಶೋಧನಾಲಯವಾಗಬೇಕು, ಪುಸ್ತಕಾಲಯ ವಿಸ್ತಾರವಾಗಬೇಕು, ಹೆಚ್ಚು ಹೆಚ್ಚು ಗ್ರಂಥ ಪ್ರಕಟನೆಯಾಗಬೇಕು, ಇವೆಲ್ಲಕ್ಕೂ ವಿಪುಲವಾಗಿ ಹಣಬೇಕು. ಮಹಾಜನಗಳು ಮನಸ್ಸುಮಾಡಬೇಕು. ಘನ ಸರ್ಕಾರದವರು ಕೃಪೆಮಾಡಬೇಕು. ಮೊನ್ನೆತಾನೇ ಪರಿಷತ್ತಿಗೆ ಆಗಮಿಸಿದ್ದ ಶ್ರೀಮನ್ ಮಹಾರಾಜರವರು ಪರಿಷತ್ತಿನಲ್ಲಿ ಒಂದು ಸಂಶೋಧನಾಲಯವನ್ನು ಸ್ಥಾಪಿಸುವುದಕ್ಕಾಗಿ ಉದಾರವಾಗಿ ಧನ ಸಹಾಯ ಮಾಡುವುದಾಗಿ ಅಪ್ಪಣೆಕೊಡಿಸಿರುತ್ತಾರೆ. ಪರಿಷತ್ತು ಈ ಎಲ್ಲ ಕಾರ್ಯಗಳನ್ನೂ ಸಾಧಿಸಲು ಕನಿಷ್ಠ ಪಕ್ಷ ಐದು ಲಕ್ಷ ರೂಪಾಯಿಗಳಾದರೂ ಅಗತ್ಯವಾಗಿದೆ.

## ನಾಟಕಕಲೆಗೆ ಪ್ರೋತ್ಸಾಹ

ಪರಿಷತ್ತು ನಾಟಕ ಸಾಹಿತ್ಯಕ್ಕೂ ಕನ್ನಡ ರಂಗಭೂಮಿಗೂ ಮಿಗಿಲಾದ ಸೇವೆಯನ್ನು ಸಲ್ಲಿಸಬೇಕಾಗಿದೆ. ಅದಕ್ಕಾಗಿ ಸುಸಜ್ಜಿತ ಸಭಾಭವನ ರಚನೆಯಾಗಬೇಕು, ನಾಟಕ ಸಪ್ತಾಹಗಳಾಗಬೇಕು, ಕಲಾವಿದರನ್ನು ಪ್ರೋತ್ಸಾಹಿಸಬೇಕು. ಆದರೆ ಇದೆಲ್ಲಕ್ಕೂ ಪರಿಷತ್ತಿನಲ್ಲಿ ಕಲಾಪ್ರೇಮದಿಂದ ದುಡಿಯುವ ಜನ ಬೇಕು, ಪ್ರೋತ್ಸಾಹಿಸುವ ಕಲಾಭಿಮಾನಿಗಳೂ ಬೇಕು.

## ಕೃತಜ್ಞತೆ

ನಾನು ಪರಿಷತ್ತಿನ ಅಧ್ಯಕ್ಷನಾದಮೇಲೆ ಕಾರ್ಯದರ್ಶಿಗಳಾಗಿ, ಕೋಶಾಧಿಕಾರಿಗಳಾಗಿ, ಕಾರ್ಯಸಮಿತಿಯ ಸದಸ್ಯರಾಗಿ ಸಹಾಯಮಾಡಿದ ಎಲ್ಲ ಮಹನೀಯರನ್ನೂ ಇಲ್ಲಿ ಸ್ಮರಿಸಿಕೊಳ್ಳುತ್ತೇನೆ. ಕೋಶಾಧಿಕಾರಿಗಳಾಗಿ ಸಹಾಯಮಾಡಿದ ಶ್ರೀ ಎಚ್. ಎಸ್. ಸೀತಾರಾಮ್, ಶ್ರೀ ಜಿ. ಶ್ರೀನಿವಾಸನ್, ಕಾರ್ಯದರ್ಶಿಗಳಾಗಿ ಸಹಾಯಮಾಡಿದ ಶ್ರೀ ಡಿ. ಆರ್. ರಾಮಯ್ಯ, ಶ್ರೀ ಸಿ. ಕೆ. ನಾಗರಾಜರಾವ್, ಶ್ರೀ ಕೆ. ಗೋಪಾಲಕೃಷ್ಣರಾವ್, ಶ್ರೀ ಅನ್ನದಾನಯ್ಯ ಪುರಾಣಿಕ, ಡಾ|| ಕೆ.ಎಂ. ಕೃಷ್ಣರಾವ್ ಮೊದಲಾದ ಮಹನೀಯರಿಗೂ, ಸನ್ಮಿತ್ರರಾದ ಕಾರ್ಯಸಮಿತಿಯ ಎಲ್ಲ ಸದಸ್ಯರಿಗೂ ಮತ್ತು ಉಪಸಮಿತಿಯ ವ್ಯವಸ್ಥಾಪಕರುಗಳಿಗೂ ನಾನು ಇಂದು ನನ್ನ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಪರಿಷತ್ತು ಕೈಗೊಂಡ ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದ ಹೊಸ ಕಟ್ಟಡಕ್ಕೆ ಉದಾರವಾಗಿ ಧನಸಹಾಯಮಾಡಿದ ಶ್ರೀ ಕೋಡೆ ಈಶ್ವರಸಾ ಅಂಡ್ ಸನ್ಸ್, ಮೇಯರ್ ಕೆ. ಎಂ. ನಂಜಪ್ಪನವರು, ನಾಟಕರತ್ನಂ ಜಿ. ಎಚ್. ವೀರಣ್ಣನವರು, ಶ್ರೀ ಕೆ. ಎಸ್. ಈಶ್ವರರಾಯರು, ಶ್ರೀ ಎಂ. ನಂಜಪ್ಪನವರು, ಶ್ರೀ ಜಿ. ಶ್ರೀನಿವಾಸನ್ ಅವರು, ಶ್ರೀ ಕೆ. ಶ್ರೀನಿವಾಸನ್ ಅವರು, ಶ್ರೀ ವಸುದೇವ ಭೂಪಾಲಂರವರು, ಶ್ರೀ ಟಿ. ಎಫ್. ನಂಜುಂಡಪ್ಪನವರು ಮೊದಲಾದ ಮಹನೀಯರ

ಉಪಕಾರವನ್ನು ನಾನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ. ಈಗಾಗಲೇ ವಾಗ್ದಾನ ಮಾಡಿರುವ ಉಳಿದ ಮಹನೀಯರೂ ಜನತಾ ವಿಶ್ವವಿದ್ಯಾನಿಲಯವೆನಿಸಿರುವ, ಕರ್ಣಾಟಕ ಸರಸ್ವತೀ ನಿವಾಸಸ್ಥಾನವೆನಿಸಿರುವ ಈ ಮಹಾಸಂಸ್ಥೆಗೆ ಕೂಡಲೇ ಧನಸಹಾಯ ಮಾಡಿ ಪುಣ್ಯಭಾಗಿಗಳಾಗುವರೆಂದು ನಂಬುತ್ತೇನೆ.

## ಪತ್ರಿಕಾಕರ್ತರ ಸಹಕಾರ

ನಾಡಿನ ಪ್ರಖ್ಯಾತ ಪತ್ರಿಕೆಗಳಾದ ಪ್ರಜಾವಾಣಿ, ಸಂಯುಕ್ತಕರ್ಣಾಟಕ, ಡೆಕ್ಕನ್ ಹೆರಾಲ್ಡ್, ತಾಯಿನಾಡು, ಜನವಾಣಿ, ಪ್ರಜಾಮತ, ಜನಪ್ರಗತಿ, ಮೈಸಿಂಡಿಯಾ, ಹಿಂದೂ, ಇಂಡಿಯನ್ ಎಕ್ಸ್‌ಪ್ರೆಸ್ ಮೊದಲಾದ ಪತ್ರಿಕೆಗಳೂ ಆಕಾಶವಾಣಿ ಸುದ್ದಿಗಾರರೂ ಪರಿಷತ್ತಿಗೆ ಸದಾ ಬೆಂಬಲ ನೀಡಿದ್ದಾರೆ. ಅವರೆಲ್ಲರ ಉಪಕಾರವನ್ನೂ ಇಲ್ಲಿ ನಾನು ಸ್ಮರಿಸುತ್ತೇನೆ.

ಈ ಸಂದರ್ಭದಲ್ಲಿ ನನ್ನನ್ನು ವಿಶ್ವಾಸದಿಂದ ಮೊದಲನೇ ಸಲ ಚುನಾವಣೆಯ ಮೂಲಕವೂ ಎರಡನೇ ಸಲ ಅವಿರೋಧವಾಗಿಯೂ ಪರಿಷತ್ತಿನ ಅಧ್ಯಕ್ಷನನ್ನಾಗಿ ಆರಿಸಿ ಸೇವಾವಕಾಶ ಕಲ್ಪಿಸಿಕೊಟ್ಟ ಪರಿಷತ್ತಿನ ಸರ್ವ ಸದಸ್ಯರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ.

ಇಂತು
ಬಿ. ಶಿವಮೂರ್ತಿಶಾಸ್ತ್ರೀ,
(ಕನ್ನಡಿಗರ ಕಿಂಕರ).

ದಿನಾಂಕ ೨೫-೭-೧೯೬೩
ಬೆಂಗಳೂರು-೧೮.

॥ ಸಿರಿಗನ್ನಡಂ ಗೆಲ್ಗೆ-ಬಾಳ್ಗೆ ॥

---



# ಮಲೆನಾಡಿನ ಕೆಲವು ಶಬ್ದಗಳು

ಸಂಗ್ರಾಹಕ ಶ್ರೀ ಬಿ. ಶಿವಮೂರ್ತಿಶಾಸ್ತ್ರೀ, ಬೆಂಗಳೂರು.

ಶ್ರೀ ಕಡಿದಾಳ್ ಮಂಜಪ್ಪನವರ " ಪಂಜರವಳ್ಳಿಯ ಪಂಜು " ಎಂಬ ಕಾದಂಬರಿಯಲ್ಲಿರುವ ಮಲೆನಾಡಿನ ಕೆಲವು ಶಬ್ದಗಳ ಅರ್ಥವಿವರಣೆ. —ಸಂಪಾದಕ.

ಅಕ್ಕಿಯ ಭೋಜ .... ಅಕ್ಕಿಯಿಂದ ತಯಾರು ಮಾಡುವ ಹೆಂಡ.
ಅಂಟಿಗೆ ಪಂಟಿಗೆ .... ಮಲೆನಾಡಿನಲ್ಲಿ ದೀಪಾವಳಿಯ ಕಾಲದಲ್ಲಿ ಕೈಯಲ್ಲಿ ಪಂಜು ಹಿಡಿದುಕೊಂಡು, ಹಾಡುಗಳನ್ನು ಹೇಳಿಕೊಂಡು ಹೋಗುವ ಜನರ ತಂಡ.
ಅಡವು .... ಗಿರವಿ (ಅಡ ಇಡುವುದು).
ಅರೂಪಾದ .... ಹಾಳಾದ, ರೂಪುಗೆಟ್ಟ, ಪಾಳುಬಿದ್ದ.
ಆಸ್ಗಾರ .... ಆಶ್ರಯ, ನೆರವು.
ಇಂಬುಳು .... ಜಿಗಣೆ, ರಕ್ತವನ್ನು ಹೀರುವ ಹುಳು (ಅಟ್ಟೆ).
ಇಲಿಕಿವಿ ಬೇರು .... ಮೂರೆಲೆ ಹೊನ್ನೆಯಗಿಡ (ಒಂದೆಲಗ).
ಈಡು .... ಗುರಿ.
ಐಗಳ ಮಠ .... ಓದುವ ಶಾಲೆ, ಸಾಲೆ (School).
ಒಕ್ಕಲು ಮಕ್ಕಳು .... ರೈತರ ಮಕ್ಕಳು, ವ್ಯವಸಾಯಗಾರರ ಪುತ್ರರು.
ಎಣೆ .... ಪ್ರಣಯ (ಸರ್ಪಗಳ ಪ್ರಣಯ).
ಕಲ್ಕುಟಿಗ .... ಒಂದು ದೆವ್ವ, ಕಲ್ಲು ಕೆಲಸ ಮಾಡುವವನು.
ಕುಲವಾರೆ (ಕುಲ್ಮಾರೆ) .... ಆಳುಗಳ ಮದುವೆ.
ಕಡ .... ಸಾಲ, ಋಣ.
ಕಕ್ಕಡ .... ಕಿರುದೀವಟಿಗೆ
ಕುರುದೆ .... ಆಳುಗಳ ಮಕ್ಕಳು.
ಕ್ಯಾಧ್ಗಿ .... ಕೇದಗೆ.
ಕೂಲಿ ಕೊಳಗ .... ಚಿಕ್ಕ ಕೊಳಗ.
ಕೊಟ್ಟೆ ಕಟ್ಟು .... ಅಡಕೆ ಗೊನೆಗಳಿಗೆ ರೋಗ ತಗಲದಂತೆ ಪಟ್ಟೆ ಕಟ್ಟುವುದು.
ಕೋವಿ .... ಬಂದೂಕ, ತುಪಾಕಿ.
ಕೆಂಜಿಗೆ ಉಡಿ .... ಒಂದು ಜಾತಿಯ ಮುಳ್ಳಿನ ಗಿಡದ ಪೊದೆ.
ಕಿತಾಪತಿ .... ಕೀಟಲೆ, ಗೊಂದಲ.
ಕುಚ್ಚುಲಕ್ಕಿ .... ಕುಸುವಲಕ್ಕಿ, ಬೇಯಿಸಿದ ಭತ್ತದಿಂದ ಮಾಡಿದ ಅಕ್ಕಿ, ಕುದುಪಲಕ್ಕಿ.
ಕುರ್ಕ .... ಚಿರತೆ, ಲುಟ್ಟ.
ಕೂಡಿಕೆ (ಕೂಡ್ಕಿ) .... ಹೆಣ್ಣು ಗಂಡು ಕೂಡುವುದು, ಎರಡನೆ ಮದುವೆ.
ಗೊರಬಿ .... ಸೂಳೆ, ಬಸವಿ, ದೇವದಾಸಿ, ವೇಶ್ಯೆ.
ಗಾಂಚ್‌ಕೊಡು .... ಮೋಸಮಾಡು, ದಗಾಕೊಡು.
ಗುಡಿ .... ಗುಡಿಸಲು, ಕುಟೀರ, ಎಲೆಮನೆ, ದೇಗುಲ.

ಗೊರಬು .... ಮಳೆಯಿಂದ ರಕ್ಷಿಸುವ ಚಾಪೆ ಮುಂತಾದುವುಗಳ ಗೋಟೆ, ಮುಸುಕು.

ಗುರಗಿ ಮಟ್ಟೆ .... ಒಂದು ಜಾತಿಯ ಕುರುಚಲುಗಿಡದ ಗುಂಪು.

ಗೆಜ್ಜೆಡ್ಡಿಗೆ .... ಸ್ತ್ರೀಯರು ಕೊರಳಿಗೆ ಹಾಕುವ ಒಂದು ಆಭರಣ (ಅಡ್ಡಿಗೆ).

ಗಣಾಕೇಳು .... ಮೈಮೇಲೆ ದೆವ್ವಗಳ ಆವೇಶ ಬಂದಾಗ ಜನರು ಪ್ರಶ್ನೆ ಕೇಳುವುದು ಮಲೆನಾಡಿನ ಒಂದು ಪದ್ಧತಿ.

ಗೋಗರೆ .... ಅಂಗಲಾಚು, ಬೇಡಿಕೊಳ್ಳು.

ಗದ್ದೆಯ ಕೋಗು .... ಗದ್ದೆಯ ಸಾಲು.

ಗಡಿ ಕೊಳಗ .... ಗೇಣಿ ಕೊಳಗ.

ಚರು .... ಅನ್ನ, ಹೋಮಕ್ಕಾಗಿ ಅರ್ಪಿಸುವ ಅನ್ನ.

ಚಿಲುಮೆ .... ನೀರಿನ ಬುಗ್ಗೆ, ತಲೆಪರಿಗೆ, ಸಣ್ಣಬಾವಿ

ಚಂಬು .... ತಂಬಿಗೆ, ಚೊಂಬು.

ಜಟಗ .... ಒಂದು ಜಾತಿಯ ದೆವ್ವದ ಹೆಸರು, ಕುದುರೆಗಾಡಿ.

ಜೀರಟ್ಲೆ .... ಕಾಡಿನಲ್ಲಿ 'ಜೀರ್ ಜೀರ್' ಎಂದು ಧ್ವನಿ ಮಾಡುವ ಹುಳು, ಜೀರುಂಡೆ ಹುಳು.

ಜಕಣಿ .... ಒಂದು ದೆವ್ವ.

ಜೀತ .... ಕೂಲಿ, ಊಳಿಗ.

ಜಡ್ಡುಬೀಳು .... ಪಾಳು ಬೀಳು.

ತರಪಡಿ .... ಹೆಚ್ಚಿಗೆ, ಮಿಗುತಿ (Excess).

ತಳರಾಶಿ .... ರಾಶಿ ಅಳೆದ ಮೇಲೆ ಕಣದಲ್ಲಿ ಮಿಗುವ ಧಾನ್ಯ.

ತೆಣೆ .... ಕಿರು ಜಗುಲಿ, ಮನೆಯ ಮುಂಭಾಗದಲ್ಲಿ ಆಳುಗಳು ನಿಂತುಕೊಳ್ಳುವ ಸ್ಥಳ.

ದೂಡುವುದು .... ನೂಕುವುದು, ಕಳೆಯುವುದು.

ದೀಡುಪತ್ರ .... ಆಧಾರಪತ್ರ, ಹೊಣೆಯ ಕಾಗದ.

ದೊಡ್ಡುಗಳು .... ಕಾಡುಕೋಣ, ಕಾಡೆಮ್ಮೆ.

ದೆಯ್ಯ .... ದೆವ್ವ, ಭೂತ, ಪಿಶಾಚಿ.

ದೊಂದಿ .... ಕಟ್ಟಿಗೆ ಪಂಜು.

ಪೆಟಾರಿ .... ಪೆಟ್ಟಿಗೆ, ಪೇಟಿಕಾ.

ಪಣತ .... ಧಾನ್ಯ ಸಂಗ್ರಹದ ಉಗ್ರಾಣ (ಕಣಜ, ಹಗೇವುಗಳಿಗಿಂತ ಭಿನ್ನ)

ಪಂಜರವಳ್ಳಿ .... ಒಂದು ಹಳ್ಳಿ ಹೆಸರು, ಒಂದು ದೆವ್ವದ ಹೆಸರು.

ಬಂದೂಕು ಸಿಸ್ತು .... ಬಂದೂಕದಿಂದ ಬೇಟೆಯಾಡುವ ಒಂದು ಉಪಾಯ.

ಬಳ್ಳು .... ಹುಚ್ಚು ನರಿ.

ಬಗನೆ ಕಳ್ಳು .... ಬಗಿಣಿಮರದ ಹೆಂಡ.

ಬಕ್ಕೆ ಹಲಸಿನ ಹಣ್ಣು .... ಒಂದು ಜಾತಿಯ ಹಲಸು.

ಬ್ಯಾರಿಗಳು .... ಮಾಪಿಳ್ಳೆಗಳು, ಕೇರಳದವರು.

ಬಳಿ .... ಗೋತ್ರ, ವಂಶ, ಕುಲ.
ಬೆಮ್ಮಾರ್ಲುಗಿಡ .... ಮುಳ್ಳು ಹಣ್ಣಿನ ಗಿಡ.
ಮದುವೆ ದಿಬ್ಬಣ .... ಮದುವೆಯ ತಂಡ.
ಮಟ್ಟು .... ಪೊದೆ, ಪೊದರು.
ಮೇಲ್ಗೊಳಗ .... ಕೊಸರು.
ಮಣಗಾಲ .... ಮಳೆಗಾಲ.
ಮುಯ್ಯಾಳು .... ತನಗಾಗಿ ಕೆಲಸ ಮಾಡಿದವನಿಗಾಗಿ ಹಿಂತಿರುಗಿ ದುಡಿಯುವ ಆಳು.
ಮುಸಿಯ .... ಕರಿಯ ಮುಖದ ಕೋತಿ.
ಮದುವೆ ಹುಂಡಿ .... ಮದುವೆ ಸೂಚನೆ.
ಮಣಿಕಟ್ಟು .... ಸೂಳೆಯರಲ್ಲಿ ರೂಢಿಯಲ್ಲಿರುವ ಗೆಜ್ಜೆ ಪೂಜೆ(ಕಂಕಣ ಪ್ರದೇಶ).
ರಣ .... ಒಂದು ದೆವ್ವ.
ಲಾಭಸೆರೆ .... ರೈತರು ಧಣಿಗಳಿಗೆ ಕೊಡುವ ಆರಂಬದ ಕಾಣಿಕೆ, ಗೌರವ ಧಾನ್ಯ.
ವ(ಒ)ತ್ತಿನ .... ಪಕ್ಕದ.
ಸೀಳುನಾಯಿ .... ಕಾಡುನಾಯಿ.
ಸಾಲಿಯಾನ .... ಪ್ರತಿವರ್ಷ.
ಸೊಪ್ಪುಗತ್ತಿ (ಸೊಪ್ಗತ್ತಿ).... ಸೊಪ್ಪು ಕತ್ತರಿಸುವ ಒಂದು ಆಯುಧ, ಮಚ್ಚು, ಕುಡಿಲು.
ಸೇರೆಗಾರರು .... ಮೇಲ್ವಿಚಾರಕ, ಮೇಸ್ತ್ರಿ.
ಸಗಟು ಅಡಕೆ .... ಉತ್ತಮ ಅಧಮ ಅಡಕೆ ಮಿಶ್ರಣ.
ಸೋಯುವ ಜನರು .... ಮೃಗಗಳನ್ನು ಬೇಟೆಯ ಕೇಂದ್ರಕ್ಕೆ ಅಟ್ಟುವ ಜನರು.
ಸೋಗೆ ಮನೆ .... ಅಡಕೆಗರಿ ಮುಚ್ಚಿದ ಮನೆ.
ಸಿಂಗರ ಬೆಕ್ಕು .... ಒಂದು ಜಾತಿ ಕಾಡುಬೆಕ್ಕು.
ಸರಕಲು .... ಝುರಿ, ಅಬ್ಬಿ.
ಶಬೆ .... ಒಂದು ವಿಧವಾದ ಬೇಟೆಯ ಶಿಸ್ತಿನ ಸಾಧನ.
ಸೀಮೆಧಾರಣೆ .... ಮೋಸದಿಂದ ಕೊಳ್ಳುವ ಧಾರಣೆ ಅಥವಾ ಕಡಿಮೆ ಬೆಲೆ.
ಹರೆ .... ಮರಗಳ ಕೊಂಬೆ, ರೆಂಬೆ.
ಹಣಿಹೆಂಡ .... ತಿಳಿಹೆಂಡ, ಮೇಲುಭಾಗದ ಹೆಂಡ.
ಹವ್ನಾಗಿದೆ .... ಚೆನ್ನಾಗಿದೆ, ಹದವಾಗಿದೆ, ಹವಣಾಗಿದೆ.
ಹಾಳೆ .... ಅಡಕೆಪಟ್ಟೆ.
ಹುಲಿಭತ್ತ .... ಬಡ್ಡಿಗಾಗಿ ಸಾಲ ತೆಗೆಯುವ ಭತ್ತ.
ಹುಲಿ .... ಧಾನ್ಯದ ಬಡ್ಡಿ.
ಹೆಗ್ಗಡ್ತಿ .... ಹೆಗ್ಗಡೆಯ ಹೆಂಡತಿ, ಹೆಗ್ಗಡಿತಿ
ಹಿಕ್ಮತ್ತು .... ಉಪಾಯ, ಯುಕ್ತಿ.
ಹಂದಿಬೆತ್ತ .... ದೊಡ್ಡ ಜಾತಿಯ ಬೆತ್ತ.
ಹೊಸ್ತಿನ ಮನೆ .... ಬೆಳಸಲು ಹಬ್ಬ, ತೆನೆಹಬ್ಬ.

# ಡಾ|| ರಂಗನಾಥ ಶ್ರೀನಿವಾಸ ಮುಗಳಿ ಅವರು

**ಲೇ : ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು.**

**ಸುಪ್ರಸಿದ್ಧ ಕನ್ನಡ ಸಾಹಿತಿಗಳೂ, ಸಾಂಗ್ಲಿ ವಿಲ್ಲಿಂಗ್ಡನ್ ಕಾಲೇಜಿನ ಅಧ್ಯಕ್ಷರೂ, ೪೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ (ತುಮಕೂರು) ನಿಯೋಜಿತಾಧ್ಯಕ್ಷರೂ ಆದ, ಡಾ|| ರಂಗನಾಥ ಶ್ರೀನಿವಾಸ ಮುಗಳಿ, ಎಂ.ಎ., ಬಿ.ಟಿ., ಡಿ.ಲಿಟ್.,ಅವರ ಸಂಕ್ಷಿಪ್ತ ಪರಿಚಯ.**

ಡಾ|| ಮುಗಳಿಯವರು ಮಲಪ್ರಭಾತೀರದ (ಧಾರವಾಡ ಜಿಲ್ಲೆ) ಹೊಳೆಆಲೂರು ಗ್ರಾಮದಲ್ಲಿ ೧೯೦೬ ನೆಯ ಜುಲೈ ೧೫ ರಂದು ಜನಿಸಿದರು. ಅವರ ಪ್ರಾಥಮಿಕ ಶಿಕ್ಷಣವು ಬಿಜಾಪುರದಲ್ಲಿ ಆಯಿತು. ೧೯೨೧ ರಲ್ಲಿ ಅಸಹಕಾರ ಚಳುವಳಿಯಲ್ಲಿ ಭಾಗವಹಿಸಿ ಶಾಲೆಗೆ ಅವರು ಬಹಿಷ್ಕಾರ ಹಾಕಿ ಗ್ರಾಮುಗಳಲ್ಲಿ ಖಾದಿ ಪ್ರಚಾರ ಮಾಡಿದರು. ಶ್ರೀ ಮುಗಳಿ ಅವರು ಅನಂತರ ರಾಜಕೀಯದ ಬಿಸಿ ಆರಿದ ಮೇಲೆ ಶಾಲೆಗೆ ಸೇರಿ ೧೯೨೪ ರಲ್ಲಿ ಬಿಜಾಪುರದ ಪಿ. ಡಿ. ಜೆ. ಪ್ರೌಢಶಾಲೆಯಲ್ಲಿ ಓದಿ ಪ್ರಥಮ ವರ್ಗದಲ್ಲಿ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ೧೯೨೪ ರಿಂದ ೩೦ ರ ವರೆಗೆ ಧಾರವಾಡದ ಕರ್ಣಾಟಕ ಕಾಲೇಜಿನಲ್ಲಿ ಅಭ್ಯಾಸ ಮಾಡಿ ಬಿ.ಎ. ಮತ್ತು ಎಂ.ಎ. ಪರೀಕ್ಷೆಗಳಲ್ಲಿ ಉತ್ತೀರ್ಣರಾದರು. ಆ ಕಾಲದಲ್ಲಿ ಅವರು ಸಂಸ್ಕೃತ ಮತ್ತು ಕನ್ನಡವನ್ನು ಚೆನ್ನಾಗಿ ಅಭ್ಯಾಸಮಾಡಿದರು. ತಮ್ಮ ಸಂಸ್ಕೃತ ಪ್ರಾವೀಣ್ಯಕ್ಕಾಗಿ "ದೀಪದ ಪದಕ" ವನ್ನು ಪಡೆದರು. ಬಿ. ಎ. ಪರೀಕ್ಷೆಯಲ್ಲಿ ಸಂಸ್ಕೃತವನ್ನೂ, ಎಂ.ಎ. ಪರೀಕ್ಷೆಯಲ್ಲಿ ಕನ್ನಡವನ್ನೂ ಮುಖ್ಯ ವಿಷಯವಾಗಿ ತೆಗೆದುಕೊಂಡಿದ್ದರು. ಅವರಿಗೆ "ವಿದ್ಯಾರಣ್ಯ ಪದಕ" ಆ ಕಾಲದಲ್ಲೇ ಪ್ರಾಪ್ತವಾಯಿತು.



ಧಾರವಾಡದ ನಿಸರ್ಗ ಪ್ರಕೃತಿ ಸೌಂದರ್ಯದಲ್ಲಿ ಅವರಿಗೆ (೧೯೨೪ ರಿಂದ ೩೦) ಕವಿತಾ ಶಕ್ತಿಯು ದೈವದತ್ತವಾಗಿ ಸ್ಫುರಿಸಿತು. ಇದೇ ಕಾಲದಲ್ಲಿ ಶ್ರೀ ದ. ರಾ. ಬೇಂದ್ರೆಯವರ "ಗೆಳೆಯರ ಬಳಗ" ದಲ್ಲಿ ಇವರು ಕೆಲಸಮಾಡಿದರು. ೧೯೩೨ ರಲ್ಲಿ ಬಿ. ಟಿ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ೧೯೩೨-೩೩ ರಲ್ಲಿ ಹುಬ್ಬಳ್ಳಿಯ ನ್ಯೂ ಇಂಗ್ಲಿಷ್ ಶಾಲೆಯಲ್ಲಿ ಶಿಕ್ಷಕರಾಗಿದ್ದರು. ೧೯೩೩ ರಿಂದ ೬೩ ರ ವರೆಗೆ ಸಾಂಗ್ಲಿಯ ವಿಲ್ಲಿಂಗ್ಡನ್ ಕಾಲೇಜಿನ ಪ್ರಾಧ್ಯಾಪಕರಾಗಿಯೂ ಉಪಾಧ್ಯಕ್ಷರಾಗಿಯೂ ಇದ್ದು ಈಗ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ.

೧೯೩೭ ರಿಂದ ಡೆಕ್ಕನ್ ಎಜುಕೇಶನ್ ಸೊಸೈಟಿಯ ಆಜೀವ ಸಭಾಸದಸ್ಯರಾಗಿದ್ದಾರೆ. ಇವರ ಬಹು ಭಾಗದ ಸಾಹಿತ್ಯ ಸೇವೆ ಸಾಂಗ್ಲಿಯಲ್ಲಿಯೇ ನಡೆದಿದೆ.

೧೯೪೧ ರಲ್ಲಿ ಹೈದರಾಬಾದಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಕಾಲದಲ್ಲಿ ಇವರು ನಾಟಕ ಗೋಷ್ಠಿಯ ಅಧ್ಯಕ್ಷರಾಗಿದ್ದರು. ೧೯೫೫ ರಲ್ಲಿ ಮೈಸೂರಿನ ಸಾಹಿತ್ಯ ಸಮ್ಮೇಳನದ ಕಾಲದಲ್ಲಿ ಇವರು ವಿಮರ್ಶಾಗೋಷ್ಠಿಯ ಅಧ್ಯಕ್ಷರಾಗಿದ್ದರು. ೧೯೫೬ ನೆಯ ಫೆಬ್ರವರಿಯಲ್ಲಿ ಇವರಿಗೆ ಪುಣೆ ವಿಶ್ವವಿದ್ಯಾಲಯದಿಂದ ಡಿ.ಲಿಟ್. ಪದವಿ ದೊರೆಯಿತು. ಅದೇ ವರ್ಷ ನವೆಂಬರ್‌ನಲ್ಲಿ ಇವರಿಗೆ ಕೇಂದ್ರ ಸಾಹಿತ್ಯ ಅಕ್ಯಾಡೆಮಿಯಿಂದ ರಾಷ್ಟ್ರಪ್ರಶಸ್ತಿ ಮತ್ತು ೫,೦೦೦ ರೂ. ಬಹುಮಾನ ದೊರೆಯಿತು.

ಕನ್ನಡ ಸಾಹಿತ್ಯ ಪರಿಷತ್ತಿನವರು ೧೯೫೫ ರಲ್ಲಿ ಇವರನ್ನು ಆಹ್ವಾನಿಸಿ ಮಾನಪತ್ರವನ್ನು ಕೊಟ್ಟು ಗೌರವಿಸಿದರು. ಆ ಮಾನಪತ್ರದಲ್ಲಿ ಇವರು ಮಾಡಿದ ಕನ್ನಡದ ಸೇವೆಯನ್ನು ಮುನಸಾರ ಪ್ರಶಂಸಿಸಲಾಗಿದೆ.

## ಇವರು ರಚಿಸಿರುವ ಗ್ರಂಥಗಳು :

| | |
|---|---|
| ಕಾವ್ಯಗಳು : | ೧. ಬಾಸಿಗ (೧೯೪೦) |
| | ೨. ಅಪಾರಕರುಣೆ (೧೯೫೧) |
| | ೩. ಓಂ ಅಶಾಂತಿಃ (೧೯೫೧) |
| ಕಾದಂಬರಿಗಳು : | ೪. ಬಾಳುರಿ (೧೯೩೪) |
| | ೫. ಕಾರಣ ಪುರುಷ (೧೯೩೯) |
| | ೬. ಅನ್ನ (೧೯೪೮) |
| ನಾಟಕಗಳು : | ೭. ಸೇವಾಪ್ರದೀಪ (೧೯೩೬) |
| | ೮. ಅಕ್ಕಮಹಾದೇವಿ (೧೯೩೭) |
| | ೯. ಪಾವನ ಪಾವಕ (೧೯೩೭) (ಪದ್ಯನಾಟಕ) |
| | ೧೦. ನಾಮಧಾರಿ (೧೯೩೯) |
| | ೧೧. ಎತ್ತಿದ ಕೈ (೧೯೪೬) (ಏಕಾಂಕ ಸಂಗ್ರಹ) |
| | ೧೨. ವಿಜಯ ಸಾಮ್ರಾಜ್ಯ (೧೯೪೮) |
| | ೧೩. ಮನೋರಾಜ್ಯ (೧೯೫೦) |
| | ೧೪. ಧನಂಜಯ (೧೯೫೭) |
| ಕಥಾಸಂಗ್ರಹ : | ೧೫. ಕನಸಿನ ಕೆಳದಿ (೧೯೪೭) |
| ವಿಮರ್ಶೆ : | ೧೬. ರನ್ನನ ಕೃತಿರತ್ನ (೧೯೪೬) |
| | ೧೭. ಕನ್ನಡ ಸಾಹಿತ್ಯ ಚರಿತ್ರೆ (೧೯೫೩) |
| | ೧೮. ಸಾಹಿತ್ಯೋಪಾಸನೆ (೧೯೫೫) |
| | ೧೯. ಸರಸ್ವತಿಯ ದರ್ಶನ (೧೯೫೭) |
| | ೨೦. ತವನಿಧಿ (೧೯೫೭) |
| | ೨೧. ಕನ್ನಡ ಸಾಹಿತ್ಯದ ಇತಿಹಾಸ (೧೯೬೩) |

ಪ್ರಬಂಧ ಸಂಗ್ರಹ: ೨೨. ಮಾತೆಂಬುದು ಜ್ಯೋತಿರ್ಲಿಂಗ (೧೯೫೮)
೨೩. ಸಾಂಸ್ಕೃತಿಕ ವಿಷಯಗ್ರಂಥ
The Heritage of Karnataka
(೧೯೪೬)

೪೪ ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ವಾಙ್ಮಯ ಸೇವೆಯು ಎಷ್ಟು ಅಗಾಧ ವಾಗಿದೆ ಎಂಬುದನ್ನು ಮೇಲಿನ ಗ್ರಂಥಗಳ ಪಟ್ಟಿಯಿಂದ ಅರಿಯಬಹುದು. ಇಷ್ಟೇ ಅಲ್ಲ. ಶ್ರೀ ಮುಗಳಿ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ಕೋಶದ ಸಂಪಾದಕ ಮಂಡಲಿಯ ಸದಸ್ಯರಾಗಿ ನಾಡುನುಡಿಗಳಿಗೆ ಮಿಗಿಲಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಡಾ॥ ಮುಗಳಿ ಅವರು ಕನ್ನಡನಾಡಿನ ಉದ್ದಾಮ ಕವಿಗಳು; ಕಾದಂಬರಿಕಾರರು; ವಿಮರ್ಶಕರು ಎನಿಸಿದ್ದಾರೆ. ಎಲ್ಲಕ್ಕೂ ಹೆಚ್ಚಾಗಿ ಇವರು ವಿದ್ಯಾವಿನಯ ಸಂಪನ್ನರು; ಸ್ನೇಹ ಪರರು. ಪರಿಶುದ್ಧವಾದ ಜೀವನ ಚರಿತ್ರೆಯುಳ್ಳವರು. ನಿಜವಾಗಿಯೂ ಹೇಳಬೇಕಾದರೆ ಅವರೊಬ್ಬ ವಾಙ್ಮಯ ತಪಸ್ವಿಗಳು. ಸಾಹಿತ್ಯ ಸಿದ್ಧರು. ಕಾಯಕದ ಕಲಿಗಳು.

ಸಾಂಗ್ಲಿಯು ಕರ್ಣಾಟಕದ ಉತ್ತರ ಭಾಗದಲ್ಲಿರುವ ಒಂದು ಪಟ್ಟಣ. ಅಲ್ಲಿ ಕನ್ನಡ ಅಲ್ಪ ಸ್ವಲ್ಪ ಇದ್ದು ಮರಾಠಿ ಪ್ರಭಾವ ಅಧಿಕವಾಗಿದೆ. ಇಂತಹ ಸ್ಥಳದಲ್ಲಿದ್ದುಕೊಂಡು ಕನ್ನಡಕ್ಕೆ ಮಿಗಿಲಾದ ಸೇವೆಯನ್ನು ಸಲ್ಲಿಸಿಯೂ ಸಲ್ಲಿಸುತ್ತಲೂ ಇರುವ ಮತ್ತು ಉನ್ನತವಾದ ಸ್ಥಾನವನ್ನು ಗಳಿಸಿರುವ ಡಾ॥ ಮುಗಳಿಯವರು ನಿಜಕ್ಕೂ ಕನ್ನಡನಾಡಿಗೆ ಗೌರವಾರ್ಹ ರಾಗಿದ್ದಾರೆ. "ಸೀಮಾ ಪುರುಷರು" ಎಂಬ ಗ್ರಂಥದಲ್ಲಿ ಇವರನ್ನು "ದಿಕ್ಪಾಲಕ" ಎಂದು ಕರೆದಿರುವುದು (ಪುಟ ೭೬) ಅಕ್ಷರಶಃ ಸತ್ಯವಾದುದು. ಡಾ॥ ಮುಗಳಿ ಅವರು ನಮ್ಮ ಕನ್ನಡ ಸರಸ್ವತಿಯ ಹಿರಿಯ ಮಕ್ಕಳಲ್ಲಿ ಒಬ್ಬರು, ಹಾಗೂ ಅಗ್ರಗಣ್ಯ ಸಾಹಿತಿಗಳು. ಅವರ ಅಧ್ಯಕ್ಷತೆ ಯಲ್ಲಿ ನಡೆಯುವ ತುಮಕೂರು ಸಾಹಿತ್ಯ ಸಮ್ಮೇಳನವು ಯಶಸ್ವಿಯಾಗಿ ನಡೆಯುವ ನಿರೀಕ್ಷಣೆಯಿದೆ. ಇಂತಹ ವಿಖ್ಯಾತರನ್ನು ಅಧ್ಯಕ್ಷರನ್ನಾಗಿ ಪಡೆದ ತುಮಕೂರು ಸ್ವಾಗತ ಸಮಿತಿಯವರು ನಿಜಕ್ಕೂ ಭಾಗ್ಯಶಾಲಿಗಳು.

---

# ಸಂಪಾದಕೀಯ

## ೧. ತುಮಕೂರು ಜಿಲ್ಲೆಯ ಸಾಹಿತ್ಯ ವೈಭವ

ಅಖಿಲ ಭಾರತೀಯ ೪೪ನೆಯ ಕನ್ನಡ ಸಾಹಿತ್ಯಸಮ್ಮೇಳನವು ಹಿರಿಯ ಸಾಹಿತಿಗಳಾದ ಡಾ|| ರಂ. ಶ್ರೀ. ಮುಗಳಿ ಅವರ ಅಧ್ಯಕ್ಷತೆಯಲ್ಲಿ ಇದೇ ವರ್ಷ ಡಿಸೆಂಬರ್ ತಿಂಗಳ ಕಡೆಯ ವಾರದಲ್ಲಿ ತುಮಕೂರು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆಯುವುದು. ಇದಕ್ಕಾಗಿ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಒಂದು ಸ್ವಾಗತ ಸಮಿತಿಯು ರಚನೆಯಾಗಿದೆ. ಈ ಸಂದರ್ಭದಲ್ಲಿ ತುಮಕೂರು ಜಿಲ್ಲೆಯ ಐತಿಹಾಸಿಕ ಹಾಗೂ ವಾಙ್ಮಯಾತ್ಮಕ ಮಹತ್ವಗಳನ್ನು ತಿಳಿಯಲು ಪ್ರಯತ್ನಿಸುವುದು ಅಗತ್ಯವಾಗಿದೆ.

ತುಮಕೂರು ಜಿಲ್ಲೆಯು ಕರ್ನಾಟಕದ ಮಧ್ಯಭಾಗದಲ್ಲಿದೆ. ಇದು 'ತಿರುಳ್ಗನ್ನಡ ನಾಡು' ಎಂದು ಹೆಸರಾಗಿದೆ. ಈ ಜಿಲ್ಲೆಯ ಬಿಜ್ಜಾವರದಲ್ಲಿ ೧,೦೦೦ ವರ್ಷಗಳಷ್ಟು ಹಿಂದಿನವಳಾದ **ಬಿಜ್ಜಮಹಾದೇವಿ** ಎಂಬ ಮಹಾಶರಣೆ ಆಗಿ ಹೋಗಿದ್ದಾಳೆ. ಇವಳ ವಿಚಾರ ಎಲ್ಲ ಬಸವ ಪುರಾಣಗಳಲ್ಲಿಯೂ ನಿರೂಪಿತವಾಗಿದೆ. ದಕ್ಷಿಣ ಭಾರತದಲ್ಲಿ ವಿಖ್ಯಾತ ಶಿಲ್ಪಿಯೆನಿಸಿದ ಜಕಣಾಚಾರಿಯು ಈ ಜಿಲ್ಲೆಯ ಕೈದಾಳದವನು. ತುಮಕೂರು ಜಿಲ್ಲೆಯಲ್ಲಿ ಗಂಗರು, ಹೊಯ್ಸಳರು ಮತ್ತು ವಿಜಯನಗರದವರು—ಇವರುಗಳ ಕಾಲದ ಹಲವಾರು ಶಿಲಾಶಾಸನಗಳನ್ನು ನಾವು ಕಾಣಬಹುದು. ಈ ಜಿಲ್ಲೆಯ ದೇವರಾಯನ ದುರ್ಗ, ಮಧುಗಿರಿದುರ್ಗಗಳು ಪ್ರಾಚೀನ ಕಾಲದಲ್ಲಿ ರಾಜಕೀಯ ಪ್ರಾಮುಖ್ಯತೆಯಿಂದ ಕೂಡಿದ್ದುವು. ಸೀರ್ಯದಲ್ಲಿ ಒಬ್ಬ ನವಾಬರು ಆಳಿ ಬಾಳಿದರು. ಇಂದಿಗೂ ಶ್ರೀ ಸಿದ್ಧಗಂಗೆ, ಕಗ್ಗೆರೆ, ಎಡೆಯೂರು, ಎಳನಡು, ದೇವರಾಯನದುರ್ಗ, ಕುಪ್ಪೂರುಗದ್ದಿಗೆ, ಸೀಬಿ, ಸಿದ್ಧರಬೆಟ್ಟ, ಗುಬ್ಬಿ ಮೊದಲಾದುವು ಜಿಲ್ಲೆಯ ಪವಿತ್ರ ಕ್ಷೇತ್ರಗಳೆನಿಸಿವೆ. ಈ ಜಿಲ್ಲೆಯ ಬಿಜ್ಜಾವರ ಮತ್ತು ಹಾಗಲವಾಡಿಯ ಅರಸರು ವೀರಶೈವ ಧರ್ಮಾವಲಂಬಿಗಳಾಗಿದ್ದು ಸರ್ವ ಸಮ್ಮತವಾದ ರೀತಿಯಿಂದ ರಾಜ್ಯಭಾರ ಮಾಡಿದರೆಂದು ಇತಿಹಾಸವು ಹೇಳುತ್ತದೆ.

ಆಧುನಿಕ ಕಾಲದಲ್ಲಿ ಕೂಡ ವಿಖ್ಯಾತ ಸಾಹಿತಿಗಳೆನಿಸಿ ಕಣ್ಮರೆಯಾದ ಪ್ರೊ|| ಬಿ. ವೆಂಕಟನಾರಣಪ್ಪ, ಹೊಸಕೆರೆ ಚಿದಂಬರಯ್ಯ, ಬೆಳ್ಳಾವೆ ನರಹರಿ ಶಾಸ್ತ್ರಿ ಮೊದಲಾದವರು ಇದೇ ಜಿಲ್ಲೆಯವರೆನಿಸಿದ್ದಾರೆ. ಸಮಕಾಲೀನ ನಾಟಕ ಕಲಾವಿದರಾದ ದಿವಂಗತ ಕೆ. ಹಿರಣ್ಣಯ್ಯ, ಗುಬ್ಬಿ ಗಂಗಾಧರರಾಯರು, ಚಿಕ್ಕನಾಯಕನಹಳ್ಳಿ ಮಲ್ಲಪ್ಪನವರು ಮತ್ತು ನಾಟಕರತ್ನಂ ಶ್ರೀ ಜಿ. ಎಚ್. ವೀರಣ್ಣನವರು—ಇವರೆಲ್ಲರೂ ತುಮಕೂರು ಜಿಲ್ಲೆಯವರು. ಹಿರಿಯ ಸಾಹಿತಿಗಳಾಗಿರುವ ಪ್ರೊ|| ಟಿ. ಎನ್. ಶ್ರೀಕಂಠಯ್ಯ, ಶ್ರೀ ಜಿ. ಬ್ರಹ್ಮಪ್ಪ, ಶ್ರೀ ವೆಂಕಟರಾಯ ಕವಿ ಮೊದಲಾದವರು ತುಮಕೂರು ಜಿಲ್ಲೆಯವರಾಗಿ ಕನ್ನಡದ ಸೇವೆಯಲ್ಲಿ ನಿರತರಾಗಿದ್ದಾರೆ.

ಸುಮಾರು ೧೫ನೆಯ ಶತಮಾನದಲ್ಲಿ ಅಮರಗೊಂಡದ ಮಲ್ಲಿಕಾರ್ಜುನನು (ಗುಬ್ಬಿ) ಪ್ರಸಿದ್ಧ ವಚನಕಾರನಾಗಿದ್ದಾನೆ. ಗುಬ್ಬಿಯ ಮಲ್ಲಣ್ಣನು 'ಗಣಭಾಷಿತರತ್ನಮಾಲೆ' ಮತ್ತು 'ವಾತುಲಾಗಮ ವ್ಯಾಖ್ಯಾನ'ಗಳನ್ನು ಬರೆದಿದ್ದಾನೆ (೧೪೭೫). ಇವನ ಪೌತ್ರನಾದ ಮಹಾಕವಿ ಮಲ್ಲಣಾರ್ಯನು "ವೀರಶೈವ ಮಹಾಪುರಾಣ" ಮತ್ತು "ಭಾವ ಚಿಂತಾರತ್ನಂ" ಎಂಬ

ಗ್ರಂಥಗಳನ್ನು ರಚಿಸಿದ್ದಾನೆ (೧೫೧೩). ಇವನ ಸುಪುತ್ರನಾದ ಕವಿ ಶಾಂತೇಶನು 'ತೋಂಟದ ಸಿದ್ಧೇಶ್ವರ' ಪುರಾಣವನ್ನು ಬರೆದಿದ್ದಾನೆ (೧೫೬೧). ಇವರ ಸಮಕಾಲೀನರಾದ ನಿಟ್ಟೂರು ನಂಜಣಾರ್ಯರು ಸಂಸ್ಕೃತದಲ್ಲಿ 'ವೇದಾಂತ ಸಾರ ವೀರಶೈವ ಚಿಂತಾಮಣಿ" ಎಂಬ ಗ್ರಂಥವನ್ನೂ ಕನ್ನಡದಲ್ಲಿ ಕೇಶಿರಾಜನ 'ಶಬ್ದಮಣಿ ದರ್ಪಣ'ಕ್ಕೆ ಒಂದು ವ್ಯಾಖ್ಯಾನವನ್ನೂ ಬರೆದಿದ್ದಾರೆ. ಗುಬ್ಬಿಯಲ್ಲಿ ಸಮಾಧಿಸ್ಥರಾಗಿರುವ ಶ್ರೀ ಗೋಸಲ ಚೆನ್ನಬಸವೇಶ್ವರರು **'ಕ್ಷೇತ್ರಜ್ಞ ಸುಮನೋಜ್ಞವಾದ'** ಎಂಬ ಗ್ರಂಥವನ್ನು ಬರೆದಿದ್ದಾರೆ. ಗುಬ್ಬಿಯ ವೀರೇಶ್ವರ ಶಾಸ್ತ್ರಿಗಳು (೧೯ನೆಯ ಶತಮಾನ) 'ವೀರಶೈವಾನ್ವಯ ಚಂದ್ರಿಕೆ' ಎಂಬ ಗ್ರಂಥವನ್ನು ಬರೆದಿರುತ್ತಾರೆ. ಅಮರಗುಂಡದ ಮಲ್ಲಿಕಾರ್ಜುನ ಪಂಡಿತನು ವಚನಕಾರನೆನಿಸಿದ್ದಾನೆ. (೧೫ನೆಯ ಶತಮಾನ) ಗೂಳೂರಿನ ಸಿದ್ಧವೀರಣಾಚಾರ್ಯರು (೧೬೦೦) ಸುಪ್ರಸಿದ್ಧ 'ಶೂನ್ಯ ಸಂಪಾದನೆ'ಯನ್ನು ಸಂಗ್ರಹಿಸಿದ್ದಾರೆ. ಮತ್ತು ಸಂಸ್ಕೃತದಲ್ಲಿ 'ಅನಾದಿ ವೀರಶೈವಾಚಾರ ಸಂಗ್ರಹ' ಎಂಬ ಒಂದು ಗ್ರಂಥವನ್ನು ಬರೆದಿರುತ್ತಾರೆ. ಇವರ ಸಂಪ್ರದಾಯದ ಪರ್ವತೇಶನು **'ಚತುರಾಚಾರ್ಯ ಪುರಾಣ'**ವನ್ನು ಬರೆದಿದ್ದಾನೆ (೧೬೫೦). ಇದೇ ಅನ್ವಯಕ್ಕೆ ಸೇರಿದ ವಿರಕ್ತ ತೋಂಟದಾರ್ಯನು 'ಪಾಲ್ಕುರಿಕೆ ಸೋಮೇಶ್ವರ ಪುರಾಣ' — 'ಸಿದ್ಧೇಶ್ವರ ಪುರಾಣ' 'ನಿರಂಜನ ಶತಕ' ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ (೧೫೬೦). ಸಂಪಾದನೆಯ ಗುರುಲಿಂಗದೇವ (೧೬೦೪), ಸಂಪಾದನೆಯ ಚೆನ್ನಂಜದೇವ (೧೫೩೦) ಮೊದಲಾದವರು ಗೂಳೂರಿನವರೇ ಆಗಿದ್ದಾರೆ. ಎಡೆಯೂರಿನಲ್ಲಿ ಐಕ್ಯರಾಗಿರುವ ಶ್ರೀ ತೋಂಟದಾರ್ಯರು 'ಷಟ್ಸ್ಥಲಜ್ಞಾನ ಸಾರಾಮೃತ' ವನ್ನು ಬರೆದಿದ್ದಾರೆ. ಚೇರುಮ ಕಾವ್ಯದ ಕವಿ ಚೇರಮಾಂಕ (೧೫೨೬) ಇದೇ ಜಿಲ್ಲೆಗೆ ಸೇರಿದವನು. ಮಧುಗಿರಿ ಪಕ್ಕದ ಬಿಜ್ಜಾವರದ ಅರಸು ಚಿಕ್ಕ ಭೂಪಾಲನು ಸಂಸ್ಕೃತದಲ್ಲಿ 'ಅಭಿನವ ಭರತಸಾರಸಂಗ್ರಹಂ' ಎಂಬ ಗ್ರಂಥವನ್ನು ಬರೆದಿದ್ದಾನೆ. ಇದೇ ರಾಜರ ಆಶ್ರಯದಲ್ಲಿದ್ದ 'ಮಲ್ಲಿಕಾರ್ಜುನ' ಎಂಬ ಕವಿಯು ಕಂಚಿ ಶಂಕರಾರಾಧ್ಯನ ಸಂಸ್ಕೃತ ಬಸವ ಪುರಾಣಕ್ಕೂ, ಗುರುರಾಜ ಕವಿಯ ಸಂಸ್ಕೃತ ಪಂಡಿತಾರಾಧ್ಯ ಚರಿತೆಗೂ ಕನ್ನಡದಲ್ಲಿ ಟೀಕೆಗಳನ್ನು ಬರೆದಿದ್ದಾನೆ. ಇದೇ ರಾಜಾಸ್ಥಾನದ ಕವಿಯೊಬ್ಬನು 'ತೋಂಟದಾರ್ಯನ ಸಾಂಗತ್ಯ' ಎಂಬ ಕಾವ್ಯವನ್ನು ಬರೆದಿದ್ದಾನೆ. ಗೌರಾಂಕನೆಂಬ ಕವಿಯು 'ಮೋಳಿಗೆ ಮಾರಯ್ಯನ ಪುರಾಣ'ವನ್ನು ಬರೆದಿದ್ದಾನೆ. ಇವನು ತುಮಕೂರು ಜಿಲ್ಲಾ ಹೊನ್ನವಳ್ಳಿ ಪ್ರಾಂತದವನು. ಇವನ ಕಾಲ ಸುಮಾರು ೧೫೨೫. ಇವನ ಕಾವ್ಯ ಸಾಂಗತ್ಯ ಶೈಲಿಯಿಂದ ವಿರಚಿತವಾಗಿ ಸುಂದರ ಕಾವ್ಯವೆನಿಸಿದೆ. ಭೈರವೇಶ್ವರ ಕಾವ್ಯದ 'ಕಥಾಸೂತ್ರ ರತ್ನಾಕರ' ವನ್ನು ಬರೆದ ಶಾಂತಲಿಂಗ ದೇಶಿಕನು ತುಮಕೂರು ಜಿಲ್ಲಾ ಸಾಸಲು ಗ್ರಾಮದವನು. ಇವನು ಕನ್ನಡ ಗದ್ಯ ಗ್ರಂಥಕಾರರಲ್ಲಿ ವಿಖ್ಯಾತನು.

ಸಿದ್ಧಗಂಗಾ ಕ್ಷೇತ್ರದ ಪಕ್ಕದಲ್ಲಿರುವ ಮತುಕೂರಿನ ಶ್ರೀ ನಂಜುಂಡ ಶಿವಯೋಗಿಯು ಅಡವೀಶ್ವರ ಗೀತಾಮಂಜರಿ, ಅಡವೀಶ್ವರ ಭಕ್ತಿಸಾರ, ಮಾರ್ಕಂಡೇಯ ವಿಳಾಸ, ಸುರಾಭಾಂಡೇಶ್ವರ ಆಖ್ಯಾನ ಮೊದಲಾದ ಗ್ರಂಥಗಳನ್ನು ವಿರಚಿಸಿದ್ದಾನೆ. ಇವನು ಪ್ರಖ್ಯಾತ ಚಿತ್ರಗಾರನು ಎನ್ನುವುದಕ್ಕೆ ತುಮಕೂರಿನಲ್ಲಿ ಹಾಲಪ್ಪನವರ ಮನೆಯಲ್ಲಿರುವ ಇವರ ಕೆಲವು ಚಿತ್ರಗಳು ನಿದರ್ಶನವಾಗಿವೆ. ನೊಣವಿನಕೆರೆ ಮಠದ ಸೋಮೆಕಟ್ಟೆ ಕರಿಬಸವ ಸ್ವಾಮಿಗಳು ಮಹತ್ವದ ಹಾಡುಗಳನ್ನು ರಚಿಸಿದ್ದಾರೆ. ಇವರ ಕಾಲ ಹದಿನೇಳನೇ ಶತಮಾನ. ಇವರ ಹಾಡುಗಳು ಈ ಜಿಲ್ಲೆಯಲ್ಲಿ ಜನರ ನಾಲಗೆಯ ಮೇಲೆ ಇಂದಿಗೂ ನಲಿದಾಡುತ್ತಿವೆ.

ತುಮಕೂರು ಜಿಲ್ಲೆಯು ಸಂಪದ್ಭರಿತವಾದುದು. ಈ ಜಿಲ್ಲೆಯ ದೇವರಾಯನ ದುರ್ಗದಲ್ಲಿ ಜಯಮಂಗಲಾ ನದಿಯು ಹುಟ್ಟುತ್ತದೆ. ತುಮಕೂರು ಪಕ್ಕದ ಕೈದಾಳದಲ್ಲಿರುವ ಕೇಶವ ದೇವಾಲಯ, ತುರುವೇಕೆರೆಯ ಗಂಗಾಧರೇಶ್ವರ ದೇವಾಲಯ, ತುಮಕೂರಿನ ಲಕ್ಷ್ಮೀಕಾಂತ ದೇವಾಲಯ, ಮಧುಗಿರಿಯ ಶಿವ-ವಿಷ್ಣು ದೇವಾಲಯುಗಳು ಈ ಜಿಲ್ಲೆಯಲ್ಲಿ ಪ್ರಸಿದ್ಧವೆನಿಸಿವೆ. ಹುಲಿಯೂರುದುರ್ಗ, ಸೀರ್ಯ, ಮಧುಗಿರಿ, ಪಾವುಗಡ, ದೇವರಾಯನ ದುರ್ಗ ಮೊದಲಾದುವುಗಳಲ್ಲಿರುವ ಕೋಟೆಗಳು ಈ ಜಿಲ್ಲೆಯ ಜನರ ಪರಾಕ್ರಮದ ನಿದರ್ಶನಗಳಾಗಿವೆ.

ತುಮಕೂರು ಜಿಲ್ಲೆಯು ತೆಂಗು, ಅಡಕೆ, ಬಾಳೆ, ಕಬ್ಬು, ಸೀಗೆ, ಹಲಸು, ಮಾವು, ರಾಗಿ, ಹುರುಳಿ, ಅವರೆ, ತೊಗರಿ, ಅರಳು, ಉಚ್ಚೆಳ್ಳು, ನೆಲಗಡಲೆ ಮೊದಲಾದ ಬೆಳೆಗಳಿಗೆ ಪ್ರಸಿದ್ಧವಾಗಿದೆ. ಬಗೆಬಗೆಯ ಹಣ್ಣುಹಂಪಲುಗಳು ಇಲ್ಲಿ ಬೆಳೆಯುತ್ತವೆ. ತಿಪಟೂರಿನ ಗಂಗಪಾಣಿ ಎಳನೀರು ಭಾರತದಲ್ಲಿಯೇ ರುಚಿಕರವೆನಿಸಿದೆ. ಎಡೆಯೂರು, ಗುಬ್ಬಿ, ಸಿದ್ಧಗಂಗೆ, ಕ್ಯಾಮೇನಹಳ್ಳಿ, ದೇವರಾಯನ ದುರ್ಗ ಜಾತ್ರೆಗಳು ಸುಪ್ರಸಿದ್ಧವೆನಿಸಿವೆ. ಶ್ರೀ ಕ್ಷೇತ್ರ ಸಿದ್ಧಗಂಗೆಯಲ್ಲಿ ನಡೆಯುವ ಅನ್ನ ಮತ್ತು ಜ್ಞಾನದಾನಗಳು ಈ ಜಿಲ್ಲೆಯಲ್ಲಿಯೇ ಏಕೆ ನಾಡಿನಲ್ಲಿಯೇ ಪ್ರಸಿದ್ಧವೆನಿಸಿವೆ. ರಾಜಕೀಯ ಮತ್ತು ವ್ಯಾಪಾರ ಕ್ಷೇತ್ರಗಳಲ್ಲಿ ತುಮಕೂರು, ತಿಪಟೂರು ಮೊದಲಾದ ಊರುಗಳು ಪ್ರಖ್ಯಾತವೆನ್ನಿಸಿವೆ. ಇವೆಲ್ಲಕ್ಕೂ ಮಿಗಿಲಾಗಿ ಈ ಜಿಲ್ಲೆಯ ಬೆಳ್ಳಾರದಲ್ಲಿ ಚಿನ್ನದ ಗಣಿಯಿದೆ. ಕಬ್ಬಿಣ ಮೊದಲಾದ ಲೋಹಗಳು ಭೂಮಿಯಲ್ಲಿವೆ. ತುಮಕೂರು ಜಿಲ್ಲೆ ಈ ಮೇಲೆ ಕಂಡಂತೆ ಹಲವಾರು ಕಾರಣಗಳಿಂದ ಗಣ್ಯತೆಯನ್ನು ಪಡೆದಿದ್ದರೂ ಸುಮಾರು ೫೦ ವರ್ಷಗಳ ಕಾಲದಲ್ಲಿ ಅಲ್ಲಿ ಒಮ್ಮೆಯಾದರೂ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯದಿರುವುದು ನಿಜಕ್ಕೂ ಚಿಂತಾಜನಕವಾದ ವಿಷಯವಾಗಿದೆ.

ಶ್ರೀಕ್ಷೇತ್ರ ಸಿದ್ಧಗಂಗಾ ಮಠಾಧೀಶ್ವರರು ದೂರದೃಷ್ಟಿಯಿಂದ ಳಳನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಅಲ್ಲಿ ವೈಭವದಿಂದ ನಡೆಸಲು ಸಂಕಲ್ಪಿಸಿರುವುದು ಆ ಜಿಲ್ಲೆಯ ಭಾಗ್ಯೋದಯವೆಂದು ಹೇಳಬಹುದು. ಈ ಸಮ್ಮೇಳನವನ್ನು ಯಶಸ್ವಿಗೊಳಿಸಲು ನೆರವಾಗಿರುವ ಸ್ವಾಗತ ಸಮಿತಿಯವರು ಅಭಿನಂದನಾರ್ಹರು. ಸಾಹಿತ್ಯ ಸಂಸ್ಕೃತಿಗಳ ಅಭಿಮಾನಕ್ಕೆ ಸಾವಿರಾರು ವರ್ಷಗಳಿಂದಲೂ ತುಮಕೂರು ಜಿಲ್ಲೆಯ ಜನರು ಹೆಸರಾಗಿದ್ದಾರೆ. ಸನ್ನಿಹಿತವಾಗಿರುವ ಈ ಸುವರ್ಣಸಮಯವನ್ನು ಅವರು ಸದುಪಯೋಗಮಾಡಿಕೊಳ್ಳುವರೆಂದು ನಾವು ನಂಬುತ್ತೇವೆ.

**೨. ಶ್ರೀ ಪುರಂದರದಾಸರ ೪೦೦ ವರ್ಷಗಳ ಉತ್ಸವವು ಕರ್ಣಾಟಕದಲ್ಲೆಲ್ಲಾ ನಡೆಯಲಿ**

ಕರ್ಣಾಟಕ ಸಾಹಿತ್ಯ ಚರಿತ್ರೆಯಲ್ಲಿ, ಹಾಗೂ ಕರ್ಣಾಟಕದ ಉಜ್ವಲೇತಿಹಾಸದಲ್ಲಿ ಇಮ್ಮಡಿ ಪುಲಿಕೇಶಿ, ಚಾಲುಕ್ಯ ವಿಕ್ರಮ, ನೃಪತುಂಗದೇವ ಆದಿಪಂಪ, ಬಸವೇಶ್ವರ, ಆನಂದ ತೀರ್ಥ, ಹರೀಶ್ವರ, ಲಕ್ಷ್ಮೀಶ, ವಿದ್ಯಾರಣ್ಯ, ಕುಮಾರವ್ಯಾಸ, ಪುರಂದರದಾಸರು, ಕನಕದಾಸರು, ಸರ್ವಜ್ಞ ಮೂರ್ತಿ, ಮೊದಲಾದ ಮಹಾನುಭಾವರು ನಕ್ಷತ್ರಗಳಂತೆ ಕಂಗೊಳಿಸುತ್ತಿದ್ದಾರೆ. ಇಂತಹವರ ನಾಮಸ್ಮರಣೆಯನ್ನು ಮಾಡುವುದು, ಇವರ ಜಯಂತಿ ಹಾಗೂ ಉತ್ಸವಗಳನ್ನು ನಡೆಸುವುದು ಕನ್ನಡ ನಾಡು ನುಡಿಗಳ ಹಿತದೃಷ್ಟಿಯಿಂದ ಅಗತ್ಯ. ಇಂತಹ ಉತ್ಸವಗಳನ್ನು ನಡೆಸುವುದು

ಕನ್ನಡ ನಾಡು ನುಡಿಗಳ ಹಿತದೃಷ್ಟಿಯಿಂದ ಅಗತ್ಯ. ಇಂತಹ ಉತ್ಸವಗಳಿಂದ ಕನ್ನಡಿಗರಿಗೆ ತಮ್ಮ ಕುಲ ನೆಲೆಗಳ ಅರಿವೂ ತಮ್ಮ ಸಾಹಿತ್ಯ ಸಂಸ್ಕೃತಿಗಳ ಹಿರಿಮೆ ಗರಿಮೆಗಳೂ ಹೆಚ್ಚು ಹೆಚ್ಚು ಮನ ವರಿಕೆಯಾಗಿ ಅದರಿಂದ ಜನಜೀವನದಲ್ಲಿ ಹೆಚ್ಚಿನ ಸ್ಫೂರ್ತಿಯುಂಟಾಗಲು ಕಾರಣವಾಗುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು ಸುಮಾರು ೪೮ ವರ್ಷಗಳಿಂದ ಇಂತಹ ಮಹಾಪುರುಷರ ಹಾಗೂ ಮಹಾಕವಿಗಳ ಉತ್ಸವವನ್ನು ನಡೆಸುವ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸುತ್ತಾ ಬಂದಿದೆ. ಇದು ಪರಿಷತ್ತಿನ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿದೆ. ಕನ್ನಡ ನಾಡು ನುಡಿಗಳ ಏಳಿಗೆಗೆ ಸಹಾಯವಾಗಿದೆ.

ಈಗಾಗಲೇ ಕನ್ನಡಿಗರು ಆದಿಪಂಪ, ಲಕ್ಷ್ಮೀಶ, ಹರೀಶ್ವರ, ರಾಘವಾಂಕ, ಮೊದಲಾದ ಮಹಾಕವಿಗಳ ಜಯಂತಿಯನ್ನು ಆಚರಿಸುತ್ತಾ ಬಂದಿದ್ದಾರೆ. ಬಸವ ಜಯಂತಿ, ಪ್ರಭು ಜಯಂತಿ, ಅಕ್ಕನ ಹುಣ್ಣಿಮೆಗಳು ನಾಡಿನಲ್ಲಿ ನಡೆಯುತ್ತಿವೆ. ಕನ್ನಡಿಗರ ವಿಖ್ಯಾತ ಸಾಮ್ರಾಜ್ಯ ವೆನಿಸಿದ ವಿಜಯನಗರದ ೬೦೦ ವರ್ಷಗಳ ಉತ್ಸವವನ್ನು ಪಂಪಾ ಕ್ಷೇತ್ರದಲ್ಲಿ ೧೯೩೬ ರಲ್ಲಿ ಕನ್ನಡ ಜನ ವೈಭವದಿಂದ ಆಚರಿಸಿದ್ದಾರೆ. ಅಂತೆಯೇ ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಯಾದವ, ಹೊಯ್ಸಳ ಮೊದಲಾದ ರಾಜ್ಯ ಸಾಮ್ರಾಜ್ಯಗಳ ಉತ್ಸವವನ್ನು ಕನ್ನಡಿಗರು ಆಚರಿಸುವುದು ಅಗತ್ಯವಾಗಿದೆ. ಜನತೆಗೆ ಸಂಸ್ಕೃತಿಯ ಅರಿವು, ಇತಿಹಾಸದ ಪರಿವೆ, ತನ್ನತನದ ಹಿರಿಮೆ ಮನದಟ್ಟಾಗಲು ಇಂತಹ ಉತ್ಸವಗಳು ಕರ್ನಾಟಕದಲ್ಲಿ ಮೇಲಿಂದ ಮೇಲೆ ನಡೆಯುವುದು ಅಗತ್ಯ. ಇದನ್ನೇ ಜನತೆಯ ಸಾಂಸ್ಕೃತಿಕ ಜೀವನ ಎಂದು ಹೇಳಬಹುದು. ಈ ಸಮಾರಂಭಗಳು ರಾಷ್ಟ್ರೀಯತೆಗೆ ಅನುಗುಣವಾಗಿಯೇ ಇರುತ್ತವೆ ಎಂಬುದು ಇಲ್ಲಿ ಗಮನಾರ್ಹವಾಗಿದೆ.

ಪ್ರಕೃತ ೧೯೬೪ ರಲ್ಲಿ, ಕರ್ನಾಟಕದ ಚರಿತ್ರೆಯಲ್ಲಿಯೂ ಕನ್ನಡ ಸಾಹಿತ್ಯದ ಇತಿಹಾಸ ದಲ್ಲಿಯೂ ವಿಖ್ಯಾತರೆನಿಸಿರುವ ಶ್ರೀ ಪುರಂದರದಾಸರ ೪೦೦ ವರ್ಷಗಳ ಜಯಂತಿಯನ್ನು ನಾಡಿನ ತುಂಬ ಆಚರಿಸಬೇಕೆಂಬ ಪ್ರಯತ್ನ ನಡೆದಿದೆ. ಇದಕ್ಕಾಗಿ ಬೆಂಗಳೂರು, ಧಾರವಾಡ ಮತ್ತು ಹೊಸಪೇಟೆಗಳಲ್ಲಿ ಸಂಘ ಸಂಸ್ಥೆಗಳು ಸ್ಥಾಪನೆಯಾಗಿವೆ. ಪುರಂದರದಾಸರ ಸಾಹಿತ್ಯದ ಪ್ರಸಾರ, ಪುರಂದರದಾಸರ ಸ್ಮಾರಕಗಳ ಜೀರ್ಣೋದ್ಧಾರ, ಪುರಂದರದಾಸರ ಸಾಹಿತ್ಯವನ್ನು ಭಾರತದ ಇತರ ಭಾಷೆಗಳಲ್ಲಿ ಭಾಷಾಂತರಿಸುವುದು—ಇವು ಮೇಲೆ ಕಂಡ ಸಂಘ ಸಂಸ್ಥೆಗಳ ಮುಖ್ಯೋದ್ದೇಶ ಗಳಾಗಿವೆ. ಸಮಗ್ರ ಕರ್ನಾಟಕದ ಹಿತದೃಷ್ಟಿಯಿಂದ ಈ ಪ್ರಯತ್ನವು ಸ್ವಾಗತಾರ್ಹವಾಗಿದೆ.

ಶ್ರೀ ಪುರಂದರದಾಸರು ನಾರದರ ಅವತಾರವೆಂದು ಪ್ರಸಿದ್ಧರಾಗಿದ್ದಾರೆ. ಸುಮಾರು ಕ್ರಿ. ಶ. ೧೪೮೦ ರಲ್ಲಿ ಇವರು ಅಂದಿನ ಕರ್ನಾಟಕದ (ಇಂದಿನ ಮಹಾರಾಷ್ಟ್ರದ) ಪುರಂದರಗಡದಲ್ಲಿ ವರದಪ್ಪನಾಯಕ ಎಂಬ ಭಾಗವತರ ಮಗನಾಗಿ ಜನಿಸಿದರು. ಇವರ ಹುಟ್ಟು ಹೆಸರು ಕೃಷ್ಣಪ್ಪ ನಾಯಕ ಎಂದು. ಇವರು ಆಗರ್ಭ ಶ್ರೀಮಂತರು. ಚಿನ್ನ ಬೆಳ್ಳಿಯ ವ್ಯಾಪಾರಗಾರರಾಗಿದ್ದರು. ಇವರಿಗೆ ಲಕ್ಷ್ಮೀಬಾಯಿ ಎಂಬ ಸಾಧ್ವೀಮಣಿಯು ಪತ್ನಿ ಎನಿಸಿದಳು. ಅನಂತರ ಭಗವಂತನ ಕೃಪೆಯೇ ಎಂಬಂತೆ ಕೆಲವು ದೈವಿಕ ಘಟನೆಗಳು ನಡೆದು ಅವರಿಗೆ ಸಂಸಾರದಲ್ಲಿ ಜಿಹಾಸೆ ಹುಟ್ಟಿ ವೈರಾಗ್ಯವನ್ನು ವಹಿಸಿದರು. ಅನಂತರ ಅವರು ಪಂಪಾ ಕ್ಷೇತ್ರಕ್ಕೆ ಬಂದು ಮಹಾತ್ಮರಾದ ಶ್ರೀ ವ್ಯಾಸರಾಯಸ್ವಾಮಿಗಳ ಶಿಷ್ಯರಾದರು. ಪಂಡರಾಪುರದ ಪಾಂಡುರಂಗನ ಭಕ್ತರೆನಿಸಿದರು. ದಾಸ ಕೂಟದಲ್ಲಿ ಅಗ್ರಗಣ್ಯರೆನಿಸಿದರು. ಸಮಗ್ರ ಭಾರತವನ್ನು ವಿಶೇಷವಾಗಿ ಕರ್ನಾಟಕವನ್ನು ಸುತ್ತಿ ಧರ್ಮೋಪದೇಶಮಾಡಿದರು. ಕನ್ನಡ ಜನರಲ್ಲಿ ದೈವಭಕ್ತಿ, ಧರ್ಮ ಶ್ರದ್ಧೆ, ಸಮನ್ವಯ ಬುದ್ಧಿ ಮೊದಲಾದ ಸದ್ಗುಣಗಳನ್ನು ಪ್ರಚಾರಮಾಡಿದರು. ಕನ್ನಡ ಸಾಹಿತ್ಯದಲ್ಲಿ ಉಪನಿಷತ್ತಿಗೆ ಸದೃಶ

ವೆನಿಸಿದ ಹಾಡುಗಳನ್ನೂ, ಉಗಾಭೋಗಗಳನ್ನೂ, ಸುಳಾದಿಗಳನ್ನೂ ರಚಿಸಿದರು. ಕನ್ನಡ ಜನತೆಯಲ್ಲಿ ನವಚೈತನ್ಯವನ್ನುಂಟುಮಾಡಿದರು. "ಪುರಂದರ ವಿಠಲ" ಎಂಬ ಅಂಕಿತದಿಂದ ಅಪಾರ ಸಾಹಿತ್ಯವನ್ನು ರಚಿಸಿ ಕನ್ನಡ ವಾಙ್ಮಯಕ್ಕೆ ಹೆಚ್ಚಿನ ಚೈತನ್ಯವನ್ನುಂಟುಮಾಡಿದರು. "ದಾಸರೆಂದರೆ ಪುರಂದರದಾಸರಯ್ಯ" ಎಂದು ದಾಸಕೂಟದ ಮುನಿಗಳಿಂದ ಶ್ಲಾಘಿಸಲ್ಪಟ್ಟರು. ಅವರ ಕೃತಿ ರಚನೆಗಳಿಂದ ಕರ್ಣಾಟಕ ಸಂಗೀತಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ಅವರ ಉಪದೇಶದಿಂದ ಕನ್ನಡಿಗರಲ್ಲಿ ಧರ್ಮಸಮನ್ವಯದ ಬುದ್ಧಿ ಬಳೆಯಿತು. ಈ ಎಲ್ಲ ಕಾರಣಗಳಿಂದ ಶ್ರೀ ಪುರಂದರದಾಸರು ಓರ್ವ ಮಹಾಪುರುಷರೆಂದು ಪರಿಗಣಿಸಲ್ಪಟ್ಟಿರುವರು.

ಶ್ರೀ ಪುರಂದರದಾಸರ ಸ್ಮಾರಕಗಳು ಇಂದಿಗೂ ಅವರ ಧಾರ್ಮಿಕ ತೇಜಸ್ಸನ್ನು ಸಾರಿ ಹೇಳುತ್ತಿವೆ. ಪಂಡರಾಪುರದ ಶ್ರೀ ಪಾಂಡುರಂಗ ವಿಠಲ ದೇವಾಲಯದಲ್ಲಿ "ಪುರಂದರದಾಸರ ಕಂಭ" ಎಂಬ ಒಂದು ಸ್ಮಾರಕವಿದೆ. ಅಲ್ಲಿ ದಾಸರು ದಿನವೂ ಕೂತು ದೇವರನ್ನು ಭಜಿಸುತ್ತಿದ್ದಂತೆ ಐತಿಹ್ಯವಿದೆ. ಹಂಪೆಯಲ್ಲಿ "ಪುರಂದರದಾಸರ ಮಂಟಪ" ಎಂಬ ಸ್ಮಾರಕವಿದೆ. ದಾಸರ ಭೌತಿಕ ದೇಹ ಅಲ್ಲಿಯೇ ಮರೆಯಾಯಿತೆನ್ನುತ್ತಾರೆ. ಪುರಂದರಗಡದಲ್ಲಿ ದಾಸರ ಸ್ಮಾರಕ ಏನಿದೆ ಎಂದು ನಮಗೆ ತಿಳಿದುಬಂದಿಲ್ಲ. ಇವನ್ನೆಲ್ಲಾ ಜೀರ್ಣೋದ್ಧಾರ ಗೊಳಿಸುವುದು ಸಮಗ್ರ ಕರ್ಣಾಟಕಕ್ಕೆ ಸೇರಿದ ಕೆಲಸವಾಗಿದೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ "ನೆಪೋಲಿಯನ್, ಷೇಕ್ಸ್‌ಪಿಯರ್, ವಾಷಿಂಗ್‌ಟನ್, ಟಾಲ್‌ಸ್ಟಾಯ್, ಮೊದಲಾದ ರಾಷ್ಟ್ರೀಯ ಪುರುಷರ ಸ್ಮಾರಕಗಳಿಗೆ ಹೆಚ್ಚಿನ ಗೌರವ ಉಂಟೆಂಬುದನ್ನು ನಾವು ಇಲ್ಲಿ ಸ್ಮರಣೆಗೆ ತಂದುಕೊಳ್ಳಬಹುದು.

ಈಗಾಗಲೇ ಪುರಂದರದಾಸರ ಕೃತಿಗಳು ಹಿಂದೀ ಭಾಷೆಯಲ್ಲಿ ಅನುವಾದವಾಗಿವೆ. ಅಂತೆಯೇ ಈ ಶ್ರೇಷ್ಠ ಕೃತಿಗಳು ಭಾರತದ ಇನ್ನಿತರ ಭಾಷೆಗಳಿಗೂ ಅನುವಾದವಾಗುವುದು ಅಗತ್ಯ. ಕನ್ನಡದಲ್ಲಿ "ಪುರಂದರದಾಸರ ಕೃತಿಗಳು" ಶುದ್ಧವೂ, ಸುಂದರವೂ ಆಗಿ ಪ್ರಕಟವಾಗುವುದು ಅಗತ್ಯ. ಈ ಮಹಾತ್ಮರು ದಕ್ಷಿಣಕಾಶಿ ಎನಿಸಿದ ಹಂಪೆಯಲ್ಲಿ ಕ್ರಿ. ಶ. ೧೫೬೪ರಲ್ಲಿ ಭಗವಂತನ ಪಾದಾರವಿಂದವನ್ನು ಸೇರಿದರೆಂದು ತಿಳಿದುಬಂದಿದೆ. ಆದ್ದರಿಂದಲೇ ೧೯೬೪ರ ಜನವರಿ ತಾರೀಖು ೧೪ ರಲ್ಲಿ ಇವರ ೪೦೦ ವರ್ಷಗಳ ಉತ್ಸವ ಆಚರಿಸಬೇಕಾಗಿದೆ.

ಶ್ರೀ ಪುರಂದರದಾಸರ ೪೦೦ ವರ್ಷಗಳ ಈ ಉತ್ಸವದ ಆಚರಣೆಯಿಂದ ಕನ್ನಡ ಸಾಹಿತ್ಯದ ಪ್ರಸಾರ ಅಧಿಕವಾಗುತ್ತದೆ. ಪರ್ಯಾಯವಾಗಿ ಕನ್ನಡಿಗರಲ್ಲಿ ಧರ್ಮ ಜಾಗೃತಿ ಅಧಿಕವಾಗುತ್ತದೆ. ಕರ್ಣಾಟಕ ಸಂಗೀತ ಕಳೆಗೊಳ್ಳುತ್ತದೆ. ಕನ್ನಡಿಗರಲ್ಲಿ ನಾಡು ನುಡಿಗಳ ಅಭಿಮಾನ ಅಧಿಕವಾಗುತ್ತದೆ. ಇದನ್ನೆಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನವರು ಪ್ರಕಟಿಸಿರುವ ಹರಿದಾಸ ಸಾಹಿತ್ಯ, ಹರಿದಾಸ ಕೃತಿ ಮಂಜರಿ ಮೊದಲಾದ ಗ್ರಂಥಗಳಲ್ಲಿ ಮಹಾಜನರನ್ನು ಸುಲಭವಾಗಿ ಅರಿಯಬಹುದು.

ನಮ್ಮ ರಾಷ್ಟ್ರದಲ್ಲಿ ಅಧಿಕಾರ, ಐಶ್ವರ್ಯಗಳಿಗೆ ಅಗ್ರತಾಂಬೂಲ ದೊರೆತಿರುವ ಈ ಕಾಲದಲ್ಲಿ ಜನರನ್ನು ಆಧ್ಯಾತ್ಮಿಕದೆಡೆಗೆ ತಿರುಗಿಸುವ ಹಾಗೂ ಭಕ್ತಿ, ಜ್ಞಾನ, ವೈರಾಗ್ಯ ಭಾವನೆಗಳನ್ನು ಜನಮನದಲ್ಲಿ ಪ್ರಚೋದಿಸುವ, ಕನ್ನಡ ನಾಡು ನುಡಿಗಳ ಮೇಲಿನ ಮಮತೆಯನ್ನು ಹುರಿದುಂಬಿಸುವ ಶ್ರೀ ಪುರಂದರದಾಸರ ೪೦೦ ವರ್ಷಗಳ ಜಯಂತಿ ಉತ್ಸವವು ನಾಡಿನ ತುಂಬಾ ವೈಭವದಿಂದ ನಡೆಯುವಂತಾಗಲೆಂದು ಕನ್ನಡ ಸಾಹಿತ್ಯ ಪರಿಷತ್ತು ರಾಷ್ಟ್ರದ ಜನತಾ ಜನಾರ್ದನನನ್ನು ಕುರಿತು ಪ್ರಾರ್ಥಿಸುತ್ತದೆ. ಕನ್ನಡ ನಾಡಿನ ಜನರೂ ಮೈಸೂರು ಸರ್ಕಾರದವರೂ ಈ ಪುಣ್ಯಾರಾಧನೆಗೆ ನೆರವಾಗಿ ಪುಣ್ಯಭಾಗಿಗಳಾಗುವರೆಂದು ನಾವು ನಂಬುತ್ತೇವೆ.

## ೩. ಕರ್ಣಾಟಕದಲ್ಲಿ ವಕ್ತೃತ್ವ ಕಲೆ—ಪರಿಷತ್ತಿನಲ್ಲಿ ತರಗತಿಗಳು

ಸ್ವತಂತ್ರ ಭಾರತದಲ್ಲಿ ಕರ್ಣಾಟಕ ರಾಜ್ಯವು ಹಲವಾರು ಕಾರಣಗಳಿಂದ ಗಣ್ಯತೆಯನ್ನು ಪಡೆದಿದೆ. ಕನ್ನಡಿಗರು, ಚಿತ್ರ, ಶಿಲ್ಪ, ನೃತ್ಯ, ಸಂಗೀತ, ಕಾವ್ಯ ಕಲೆಗಳಲ್ಲಿ ನಿಷ್ಣಾತರಾಗಿರುವಂತೆಯೇ ಗಮಕ ಹಾಗೂ ಭಾಷಣ ಕಲೆಯಲ್ಲಿಯೂ ಪ್ರತಿಭಾನ್ವಿತರೆನಿಸಿದ್ದಾರೆ. ಕರ್ಣಾಟಕದ ಮಹಾಕವಿಯಾದ ನೃಪತುಂಗನು ಕನ್ನಡಿಗರ ಗುಣಸಂಪತ್ತನ್ನು ಹೇಳುವಾಗ ಕವಿರಾಜಮಾರ್ಗದಲ್ಲಿ (ಕ್ರಿ. ಶ. ೮೧೪-೮೭೭).—

ಕಂದ ॥ ಪದನರಿದು ನುಡಿಯಲುಂ ನುಡಿ ।
ದುದನರಿದಾರಯಲುಮಾರ್ಪರಾ ನಾಡವರ್ಗಳ್ ।
ಚದುರರ್ ನಿಜದಿಂ ಕುರಿತೋ ।
ದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್ ॥

ಕುರಿತವರಲ್ಲದೆ ಮತ್ತಂ ।
ಪೆರರುಂ ತಂತಮ್ಮ ನುಡಿಯೊಳೆಲ್ಲಂ ಜಾಣರ್ ।
ಕಿರುವಕ್ಕಳುಮಾ ಮೂಗರು ।
ಮರಿಪಲ್ಕರಿವರ್ ವಿವೇಕಮಂ ಮಾತುಗಳಂ ।

—ಎಂದು ಹೇಳಿ,

ಕಂದ ॥ ಕುರಿವಂತು ಪೆರರ ಬಗೆಯಂ ।
ತೆರೆದಿರೆ ಪೆರರ್ಗರಿಪಲಾರ್ಪವಂ ಮಾತರಿವಂ ।
ಕಿರಿದರೊಳೆ ಪಿರಿದುಮರ್ಥಮ ।
ನರಿಪಲ್ ನೆರೆವಾತನಾತನಿಂದಂ ನಿಪುಣಂ ॥

—ಎಂದು ಕನ್ನಡಿಗರ ಮಾತುಗಾರಿಕೆಯ ಲಕ್ಷಣವನ್ನು ನಿರೂಪಿಸಿದ್ದಾನೆ.

ವಿಶಾಲವೂ ವಿಚಿತ್ರವೂ ಆದ ಈ ಸೃಷ್ಟಿಯಲ್ಲಿ ಮಾನವನು ಆವನಲ್ಲಿರುವ ಅಮೋಘವೂ, ಆತ್ಮಾಂಶೀಭೂತವೂ ಎನಿಸಿದ ಆಲೋಚನಾ ಶಕ್ತಿ, ಮಾತನಾಡುವ ಶಕ್ತಿ ಮತ್ತು ಸಂತೋಷ ಪಡುವ ಶಕ್ತಿ ಇವುಗಳಿಂದ ಮಿಗಿಲೆನಿಸಿದ್ದಾನೆ. ಮಾನವನ ಪ್ರಗತಿಗೆ ಈ ಮೂರು ಗುಣಗಳು ಮುಖ್ಯಕಾರಣವೆನಿಸಿವೆ. ಮನುಷ್ಯನ ಲೋಕವ್ಯವಹಾರವು ಬಹುಮಟ್ಟಿಗೆ ಮಾತಿನ ಮೂಲಕವಾಗಿ ನಡೆಯುವುದರಿಂದ ಮಾತು ಮನುಷ್ಯನ ಯೋಗ್ಯತೆಗೆ ನಿದರ್ಶನವೆನಿಸಿರುವುದರಿಂದ ನಮ್ಮ ಮನಸ್ಸಿನ ಭಾವನೆಗಳನ್ನು ಇತರರಿಗೆ ತಿಳಿಸಲು ಮಾತು ಮುಖ್ಯ ಸಾಧನವಾದುದರಿಂದ, ಜೀವನದಲ್ಲಿ ವಿಜಯವನ್ನು ಪಡೆಯಬೇಕೆಂದು ಆಶಿಸುವವರು ಮಾತುಗಾರಿಕೆಯ ಗುಟ್ಟುಗುರಿಗಳನ್ನು ತಿಳಿಯುವುದು ಅಗತ್ಯ. ಮಾತನಾಡುವ ಜನರಲ್ಲಿ ವಾಗ್ಮಿಯು ಮಿಗಿಲಾದವನೆಂದು ನಮ್ಮ ಶಾಸ್ತ್ರಜ್ಞರು ಹೇಳಿದ್ದಾರೆ. ಸಂಸ್ಕೃತ ಸುಭಾಷಿತಕಾರರು

ಶತೇಷು ಜಾಯತೇ ಶೂರಃ ಸಹಸ್ರೇಷುಚ ಪಂಡಿತಃ ।
ವಕ್ತಾ ದಶ ಸಹಸ್ರೇಷು—

—ಎಂದು ಹೇಳಿ, ಹುಟ್ಟಿದವರಲ್ಲಿ ಹತ್ತುಸಾವಿರಕ್ಕೆ ಒಬ್ಬನು ವಾಗ್ಮಿಯಾದಾನು ಎಂದು ಹೇಳಿದ್ದಾರೆ. ಅಂತೆಯೇ ಇನ್ನೊಬ್ಬ ಕವಿಯು

"ದಾತೃತ್ವಂ ಪ್ರಿಯವಕ್ತೃತ್ವಂ ಧೀರತ್ವಂ ಉಚಿತಜ್ಞತಾ"

—ಎಂಬ ಈ ನಾಲ್ಕುಗುಣಗಳು ಮನುಷ್ಯನಲ್ಲಿ ಶ್ರೇಷ್ಠವಾದುವುಗಳೆಂದು ಹೇಳಿದ್ದಾನೆ. ಮಹಾಕವಿಯಾದ ಭರ್ತೃಹರಿಯು "ಸರಸಿ ವಾಕ್ಪಟುತಾ"—ಅಂದರೆ ಸಭೆಗಳಲ್ಲಿ ಚಮತ್ಕಾರವಾಗಿ

ಸ್ವಾರಸ್ಯವಾಗಿ ಮಾತನಾಡುವ ಗುಣವು ಸಜ್ಜನರಿಗೆ ಸಹಜವಾದುದು ಎಂದು ಹೇಳಿದ್ದಾನೆ. ಕನ್ನಡ ಸಾಹಿತ್ಯದ ತಿರುಳಿನಂತಿರುವ ಶಿವಶರಣರ 'ವಚನ ವಾಙ್ಮಯ', ಹರಿದಾಸರ ಭಕ್ತಿ ಸಾಹಿತ್ಯ ಇವುಗಳಲ್ಲಿ ನಾವು ನಮ್ಮ ಜನರ ಕಲಾಭಿಜ್ಞತೆಯನ್ನು ಕಾಣಬಹುದು. ಶರಣ ಶ್ರೇಷ್ಠರಾದ ಬಸವಣ್ಣನವರು

"ನುಡಿದರೆ ಮುತ್ತಿನಹಾರದಂತಿರಬೇಕು,
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು,
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು,
ನುಡಿದರೆ ಲಿಂಗಮೆಚ್ಚಿ ಅಹುದೆನಬೇಕು"

—ಎಂದು ಹೇಳಿದ್ದಾರೆ.

ಪ್ರಜಾಪ್ರಭುತ್ವದ ಇಂದಿನ ದಿವಸಗಳಲ್ಲಿ ಲೋಕಸಭೆ, ರಾಜ್ಯಸಭೆ, ಶಾಸನಸಭೆ ಮೊದಲಾದುವುಗಳಲ್ಲಿ ಚೆನ್ನಾಗಿ ಮಾತನಾಡುವ ವಾಗ್ಮಿಗಳಿಗೆ ಹೆಚ್ಚಿನ ಮನ್ನಣೆ ಇದೆ. ಅಂತೆಯೇ ಹೊಣೆಗಾರಿಕೆಯುಳ್ಳ ಮಾನ್ಯ ಮಂತ್ರಿಗಳೇ ಮೊದಲಾದ ಜನತಾ ಮುಖಂಡರಿಗೆ ವಾಗ್ಮಿತ್ವವು ಸಿದ್ಧವಾಗಿದ್ದರೆ ಅವರ ಜನಪ್ರಿಯತೆಯೂ, ಕಾರ್ಯಸಿದ್ಧಿಯೂ ಮಿಗಿಲಾಗಿ ಉಂಟಾಗುತ್ತದೆ. ಧರ್ಮಬೋಧಕರು, ಉಪಾಧ್ಯಾಯರು, ಸಮಾಜಸುಧಾರಕರು ಮೊದಲಾದವರಿಗೆಲ್ಲ ವಾಗ್ಮಿತ್ವವು ಕಾಮಧೇನುವಿನಂತೆ ಎಂದು ಹೇಳಬಹುದು.

ಭಾರತದ ರಾಜಕಾರಣದಲ್ಲಿ ಅಗ್ರಗಣ್ಯರೆನಿಸಿರುವ ಲೋಕಮಾನ್ಯ ತಿಲಕ್, ಸುಭಾಷ್ ಚಂದ್ರಬೋಸ್, ಸರೋಜಿನೀದೇವಿ, ಶ್ರೀನಿವಾಸಶಾಸ್ತ್ರೀ, ಎಸ್. ಸತ್ಯಮೂರ್ತಿ, ಸಿ. ಆರ್. ರೆಡ್ಡಿ ಮೊದಲಾದವರೆಲ್ಲರೂ ವಿಖ್ಯಾತ ವಾಗ್ಮಿಗಳಾಗಿದ್ದರು ಎಂಬುದು ಇಲ್ಲಿ ಗಮನಾರ್ಹವಾಗಿದೆ. ಹಿಂದೂ ದೇಶದ ಧರ್ಮತತ್ವಗಳನ್ನು ವಿಶ್ವದಲ್ಲಿ ಸಾರಿ ಹೇಳಿದ ಸ್ವಾಮಿ ವಿವೇಕಾನಂದರು ಕೂಡ ನಮ್ಮ ಭಾರತದ ಒಬ್ಬ ವಿಖ್ಯಾತ ವಾಗ್ಮಿಗಳು.

ಕರ್ಣಾಟಕದಲ್ಲಿ ಕಳೆದ ದಶಮಾನಗಳಲ್ಲಿ ಕೀರ್ತಿಶೇಷರಾದ ಏ. ಎಸ್. ಸುಬ್ಬರಾವ್, ಎಂ. ವೆಂಕಟಕೃಷ್ಣಯ್ಯ, ಪಂಡಿತ ತಾರಾನಾಥ, ಮುದವೀಡು ಕೃಷ್ಣರಾವ್, ಬಿ. ಎಂ. ಶ್ರೀಕಂಠಯ್ಯ, ಕೆ. ಎಚ್. ರಾಮಯ್ಯ, ಡಾ॥ ಎಂ. ಎಚ್. ಕೃಷ್ಣ, ಎಂ. ಆರ್. ಶ್ರೀನಿವಾಸಮೂರ್ತಿ, ರೆ॥ ಉತ್ತಂಗಿ, ದೇವುಡು ನರಸಿಂಹಶಾಸ್ತ್ರೀ ಮೊದಲಾದ ವಾಗ್ಮಿಗಳು ಜನಿಸಿ, ತಮ್ಮ ವಾಗ್ಮಿತ್ವದ ಬಲದಿಂದ ನಮ್ಮ ನಾಡಿನ ಸರ್ವಾಂಗೀಣ ಪ್ರಗತಿಗೆ ನೆರವಾಗಿದ್ದಾರೆ. ಈಗಲೂ ನಮ್ಮ ಗಣ್ಯ ಸಾಹಿತಿಗಳನೇಕರ ಕೀರ್ತಿಗೆ ಕಾರಣ ಅವರ ಭಾಷಣಕಲಾ ಸಾಮರ್ಥ್ಯ.

ಕನ್ನಡ ಸಾಹಿತ್ಯ ಪರಿಷತ್ತು ಗಮಕಕಲೆ, ಗಾನಕಲೆ, ಲೇಖನಕಲೆ, ನಾಟಕಕಲೆ, ಕವನ ಕಲೆ ಮೊದಲಾದುವುಗಳನ್ನು ನಮ್ಮ ತರುಣರಲ್ಲಿ ಅಭಿವೃದ್ಧಿಗೊಳಿಸಲು ಸುಮಾರು ಅರ್ಧ ಶತಮಾನದಿಂದ ಬಗೆಬಗೆಯ ಕಾರ್ಯಕ್ರಮಗಳನ್ನು ಕೈಗೊಂಡಿದೆ. ಈಗ ಮಣಿಪಾಲದ ಮಹಾಂತರಾದ ಡಾ॥ ಮಾಧವ ಪೈ ಅವರ ದೇಶಾಭಿಮಾನದ ಫಲವಾಗಿ ಪರಿಷತ್ತು ಕನ್ನಡ ತರುಣರಲ್ಲಿ ಭಾಷಣಕಲೆಯನ್ನು ಅಭಿವೃದ್ಧಿಪಡಿಸುವ ತರಗತಿಗಳನ್ನು ಪ್ರಾರಂಭಿಸಲು ಪ್ರೇರಣೆಗೊಂಡಿದೆ. ದಿನಾಂಕ ೧೦-೭-೧೯೬೩ರ ಸಂಜೆ ಈ ತರಗತಿಗಳ ಪ್ರಾರಂಭೋತ್ಸವವು ನಾಡಿನ ಹಿರಿಯ ಸಾಹಿತಿಗಳಾದ ಡಾ॥ ಮಾಸ್ತಿ ವೆಂಕಟೇಶ ಐಯಂಗಾರ್ ಅವರ ಶುಭಾಶಯದೊಡನೆ ನಡೆಯಿತು. ಭಾಷಣ ಕಲೆಯ ಗುಟ್ಟುಗುರಿಗಳಾದ, ವಿಷಯ, ವಿಭಾಗ ಮತ್ತು ಸಾಹಿತ್ಯ ಎಂಬ ವಿಚಾರಗಳನ್ನು ಕುರಿತು ವಿಖ್ಯಾತರಾದ ಮೂರು ಮಂದಿ ವಿದ್ವಾಂಸರು ವಿದ್ಯಾರ್ಥಿಗಳಿಗೆ ಪಾಠಹೇಳಲು ಒಪ್ಪಿರುತ್ತಾರೆ. ವಾರಕ್ಕೊಮ್ಮೆ ಗಣ್ಯವಾಗ್ಮಿಗಳಿಂದ ಭಾಷಣವೂ, ತಿಂಗಳಿಗೊಮ್ಮೆ ವಿದ್ಯಾರ್ಥಿಗಳಿಂದ ಚರ್ಚಾ

ಕೂಟವೂ ನಡೆಯುತ್ತದೆ. ಆರು ತಿಂಗಳಕಾಲ ಈ ತರಗತಿಯಲ್ಲಿ ಭಾಗವಹಿಸಿ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ 'ಕನ್ನಡ ವಾಗ್ಮಿ' ಎಂಬ ಪ್ರಶಸ್ತಿ ಪತ್ರವು ಪರಿಷತ್ತಿನಿಂದ ದೊರೆಯುವುದು. ಬೆಂಗಳೂರು ನಗರದ ಮತ್ತು ಕನ್ನಡ ನಾಡಿನ ಉತ್ಸಾಹಿಗಳಾದ ವಿದ್ಯಾರ್ಥಿಗಳು ಈ ಸಂದರ್ಭದ ಸದುಪಯೋಗವನ್ನು ಮಾಡಿಕೊಳ್ಳುವರೆಂದು ನಂಬಲಾಗಿದೆ. ಇದುವರೆಗೆ ಕನ್ನಡ ನಾಡಿನಲ್ಲಿ ಯಾರೂ ಪ್ರಾರಂಭಿಸದಿದ್ದ ಈ ತರಗತಿಯನ್ನು ಪರಿಷತ್ತು ಪ್ರಾರಂಭಿಸಿದೆಯೆಂಬುದು ಗಮನಾರ್ಹ ವಾಗಿದೆ.

**೪. ಕನ್ನಡ ನಿಘಂಟು ಮತ್ತು ಕನ್ನಡ ವಿಶ್ವಕೋಶ ಇವು ಬೇಗನೆ ಬೆಳಕು ಕಾಣಲಿ.**

ಭಾರತದಲ್ಲಿ ಇಂದು ನವಚೈತನ್ಯ ಉದಯವಾಗಿದೆ. ಬಹುಕಾಲ ಪರಾಧೀನದಲ್ಲಿದ್ದ ಭಾರತರಾಷ್ಟ್ರವು ಮಹಾತ್ಮರಿಂದ ೧೯೪೭ ರಲ್ಲಿ ಸ್ವತಂತ್ರವಾಗಿ ಕ್ರಮಕ್ರಮದಿಂದ ಅಭ್ಯುದಯದ ಹಾದಿಯಲ್ಲಿ ನಡೆಯುತ್ತಿದೆ. ಜನತೆಯ ಅಪೇಕ್ಷೆಯಂತೆ ೧೯೫೬ ರಲ್ಲಿ ಭಾಷಾವಾರು ರಾಜ್ಯಗಳು ರಚನೆಯಾದುವು. ಅಂತೆಯೇ ಕರ್ಣಾಟಕ ರಾಜ್ಯ ಅಥವಾ ವಿಶಾಲ ಮೈಸೂರು ರಚನೆ ಯಾಗಿದೆ. ಜನತಾಮುಖಂಡರು ರಾಜ್ಯ ರಥವನ್ನು ಉತ್ಸಾಹದಿಂದ ಮುಂದೆ ನಡೆಸುತ್ತಿದ್ದಾರೆ.

ಸುಮಾರು ಎರಡುವರೆ ಕೋಟಿ ಕನ್ನಡ ಜನರ ಆಗು ಹೋಗುಗಳು ನಮ್ಮ ಮೈಸೂರು ಸರ್ಕಾರದ ಧೋರಣವನ್ನು ಅವಲಂಬಿಸಿದೆ. ಈಗ ನಾಡಿನಲ್ಲಿ ಎಲ್ಲೆಲ್ಲಿಯೂ ಕನ್ನಡದ ಜಾಗೃತಿ ಆಗಿದೆ. ನಮ್ಮ ಸರಕಾರವು ಕನ್ನಡವನ್ನು ರಾಜ್ಯಭಾಷೆಯನ್ನಾಗಿ ಮಾಡಲು ಸಂಕಲ್ಪಿಸಿದೆ. ರಾಜಧಾನಿಯಾದ ಬೆಂಗಳೂರು ನಗರ ಸಭೆಯು ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡಿ ಕೀರ್ತಿಗಳಿಸಿದೆ. ರಾಜ್ಯದ ಹಲವಾರು ನಗರಸಭೆಗಳು ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಿವೆ. ಕನ್ನಡ ಪತ್ರಿಕೆಗಳು ಈ ಬಗೆಗೆ ಹೆಚ್ಚಿನ ಆಸಕ್ತಿ ವಹಿಸಿವೆ. ಹಲವು ಮಂದಿ ಉತ್ಸಾಹಿ ತರುಣರೂ, ಸಾಹಿತಿಗಳೂ, ಕನ್ನಡದ ಪ್ರಸಾರವನ್ನು ಉತ್ಸಾಹದಿಂದ ಕೈಗೊಂಡಿದ್ದಾರೆ. ಇವೆಲ್ಲವೂ ಕನ್ನಡದ ಶುಭೋದಯವೆಂದು ಹೇಳಬಹುದು. ಹೊಸದಿಲ್ಲಿ, ಮುಂಬಯಿ, ಮದ್ರಾಸು, ಹೈದರಾಬಾದು, ಕಾಶಿ, ಭೂಪಾಲ್, ಅಲಹಾಬಾದ್, ಕಲ್ಕತ್ತ ಮೊದಲಾದ ಕಡೆಗಳಲ್ಲಿಯೂ ಕರ್ಣಾಟಕ ಸಂಘಗಳು ಸ್ಥಾಪನೆಯಾಗಿ ಅಲ್ಲೆಲ್ಲಾ ಕನ್ನಡಿಗರು ತಮ್ಮ ಸಂಸ್ಕೃತಿ ಏಳಿಗೆಗಾಗಿ ಶ್ರಮಿಸುತ್ತಿದ್ದಾರೆ.

ಭಾರತದಲ್ಲಿ ಭಾಷಾವಾರು ರಾಜ್ಯಗಳು ಯಶಸ್ವಿಯಾಗಬೇಕಾದರೆ, ಪ್ರಜಾ ಪ್ರಭುತ್ವವು ಸಫಲವಾಗಬೇಕಾದರೆ ದೇಶಭಾಷೆಗಳು ಪರಿಪುಷ್ಟವಾಗಬೇಕಾದುದು ಅಗತ್ಯ. ಆ ದೃಷ್ಟಿಯಿಂದ ಕನ್ನಡವನ್ನು ಪರಿಶೀಲಿಸಿದರೆ ನಮ್ಮ ಭಾಷೆ ಬಹಳ ಹಿಂದೆ ಬಿದ್ದಿದೆ ಎಂದು ಒಪ್ಪಿಕೊಳ್ಳ ಬೇಕಾಗುತ್ತದೆ.

ಕನ್ನಡದಲ್ಲಿ ಒಂದು ಒಳ್ಳೆಯ ನಿಘಂಟು ಅಗತ್ಯ ಎಂಬುದನ್ನು ಪರಿಷತ್ತು ಮನಗಂಡು ಸುಮಾರು ೨೦ ವರ್ಷಗಳಿಂದ ಅದಕ್ಕಾಗಿ ಶ್ರಮಿಸಿ ಒಂದು ಒಳ್ಳೆಯ ನಿಘಂಟನ್ನು ಸಿದ್ಧಗೊಳಿಸಿದೆ. ಅದರ ಪ್ರಕಟಣೆಗಾಗಿ ಮೈಸೂರು ಸರಕಾರದ ಕೂಡೆ ಒಡಂಬಡಿಕೆ ಮಾಡಿಕೊಂಡಿದೆ. ನಿಘಂಟಿನ ಒಂದು ಭಾಗ ಅಚ್ಚಾಗಲು ಸಿದ್ಧವಾಗಿದೆ. ಹೊಸ ಮುದ್ರಣಯಂತ್ರ, ಅಚ್ಚು ಮೊಳೆಗಳು ಮತ್ತು ಕಾಗದ ಇವೂಕೂಡ ಸಿದ್ಧವಾಗಿವೆ. ಇಂತಹ ಸಂದರ್ಭದಲ್ಲಿ ಮೈಸೂರು ಸರಕಾರವು ಈ ನಿಘಂಟಿನ ಪ್ರಕಟಣೆಗೆ ಮೊದಲು ಒಪ್ಪಿಕೊಂಡ ಪ್ರಕಾರ ನಡೆಯಲು ತುರ್ತು ಪರಿಸ್ಥಿತಿ ಯನ್ನು ಮುಂದೊಡ್ಡಿ ತಮ್ಮ ಸಹಾಯದ ಹಸ್ತವನ್ನು ಹಿಂತೆಗೆದುಕೊಂಡಿದೆ. ಇದು ನಿಜಕ್ಕೂ

ವ್ಯಸನಕರವಾದ ಸಂಗತಿ. ಒಬ್ಬ ಸಾಮಾನ್ಯ ಮನುಷ್ಯನೂ ಕರಾರಿನಂತೆ ನಡೆಯಬೇಕೆನ್ನು ವಾಗ ಘನ ಸರ್ಕಾರವು ಕರಾರು ಪಾಲಿಸಬೇಡವೆ?

ಮೈಸೂರು ಸರಕಾರವು ಕೈಗೊಂಡಿದ್ದ ಸಾಹಿತ್ಯ ಸಂಸ್ಕೃತಿ ಇಲಾಖೆ ಮಾಯವಾಗಿ ಅದು ವಿದ್ಯಾಖಾತೆಯ ಒಂದು ಅಂಗವಾಗಿದೆ. ಇದು ದೇವಗಂಗೆ ಭೂಮಿಗಿಳಿದ ಕಥೆಯನ್ನು ನೆನಪಿಗೆ ತರುತ್ತದೆ. ಇದಕ್ಕೂ ತುರ್ತು ಪರಿಸ್ಥಿತಿ ಮುಖ್ಯ ಕಾರಣವಾಗಿದೆ. ಈ ಇಲಾಖೆಯವರು ಕೈಗೊಂಡ ಕನ್ನಡ ವಿಶ್ವಕೋಶದ ಕಾರ್ಯವೂಕೂಡ ಸ್ಥಗಿತವಾಗಿದೆ. ಇದೂಕೂಡ ವಿಷಾದಕರ ವಾದ ಪರಿಸ್ಥಿತಿ ಎಂದು ಹೇಳಬೇಕಾಗಿದೆ.

ಸಾಹಿತ್ಯವು ಜನಜೀವನದ ಪ್ರತಿಬಿಂಬ. ಸಾಹಿತ್ಯ ಬಳೆದರೆ ಜನ ಬಳೆಯುತ್ತಾರೆ. ಪಾಶ್ಚಾತ್ಯ ದೇಶಗಳಲ್ಲಿಯೂ ನೆರೆಹೊರೆ ರಾಜ್ಯಗಳಲ್ಲಿಯೂ ಸಾಹಿತ್ಯಕ್ಕೆ ಹೆಚ್ಚು ಪ್ರೋತ್ಸಾಹ ಸಿಗುತ್ತಿದೆ. ಆದರೆ ಮೈಸೂರಿನಲ್ಲಿ ಜನರ ಅನ್ನ ಬಟ್ಟೆಗಳ ಹೊಣೆ ಹೇಗೆ ಸರ್ಕಾರಕ್ಕೆ ಸೇರಿದುದೋ ಹಾಗೆಯೇ ಜನರ ಭಾಷೆ, ಸಾಹಿತ್ಯ, ಸಂಸ್ಕೃತಿ, ತತ್ವ ಜ್ಞಾನ, ಲಲಿತಕಲೆಗಳು ಇವನ್ನೂ ಪ್ರೋತ್ಸಾಹಿಸುವ ಕಾರ್ಯಕೂಡ ಸರ್ಕಾರಕ್ಕೆ ಸೇರಿದುದು. ಸರ್ಕಾರ ಊಟ ಉಡುಗೆಗಳಿಗೆ ಪ್ರಾಮುಖ್ಯತೆ ಕೊಟ್ಟು ಸಾಹಿತ್ಯ ಸಂಸ್ಕೃತಿಗಳನ್ನು ತಿರಸ್ಕರಿಸಿದರೆ ಕಸವರವನ್ನು ಬಿಸಾಟು ಕಸವನ್ನು ಜೇಬಿಗೆ ತುಂಬಿಕೊಳ್ಳುವ ಜಾಣ (?) ನಂತಾಗುತ್ತದೆ. ಹಾಗಾಗಬಾರದೆಂದೇ ನಮ್ಮ ಈ ಸಮಯೋಚಿತ ಸಲಹೆ.

ಕನ್ನಡ ಜನರು ಸರ್ವಾಂಗೀಣ ಪ್ರಗತಿಯನ್ನು ಪಡೆಯಬೇಕಾದರೆ ಪರಿಷತ್ತಿನಿಂದ ಸಿದ್ಧವಾಗಿರುವ ಕನ್ನಡ ನಿಘಂಟು, ಕರ್ಣಾಟಕ ಕವಿಚರಿತೆ ಮೊದಲಾದ ಗ್ರಂಥಗಳು ಪ್ರಕಟ ವಾಗುವುದು ಅಗತ್ಯ. ಅಂತೆಯೇ ಸರ್ಕಾರದ ಆಶ್ರಯದಲ್ಲಿ ಆಗುತ್ತಿರುವ ಕನ್ನಡ ವಿಶ್ವಕೋಶ ಪ್ರಕಟವಾಗುವುದೂ ಅಗತ್ಯ. ಈ ಎರಡೂ ಕಾರ್ಯಗಳಿಗೆ ಸರ್ಕಾರ ಖರ್ಚುಮಾಡುವ ಹಣ ಸುಮಾರು ೩೫ ಲಕ್ಷ ಮಾತ್ರ. ಈಗಾಗಲೇ ಇದರಲ್ಲಿ ಸುಮಾರು ೫-೬ ಲಕ್ಷ ರೂ.ಗಳು ಖರ್ಚಾ ಗಿವೆ. ವರ್ಷಕ್ಕೆ ಸುಮಾರು ೧೦೦ ಕೋಟಿ ರೂ.ಗಳ ಆಯವ್ಯಯಗಳನ್ನುಳ್ಳ ಮೈಸೂರು ಸರ್ಕಾರವು ಸಮಗ್ರ ಕನ್ನಡಿಗರಿಗೆ ಉಪಯುಕ್ತವೆನಿಸುವ ಈ ಎರಡೂ ಗ್ರಂಥಗಳನ್ನು ಪ್ರಕಟಿಸುವ ಬಗೆಗೆ ಹಿಂದೆಮುಂದೆ ನೋಡುವುದು ಸಾಧುವಲ್ಲ. ಕರ್ಣಾಟಕವು ಏಳಿಗೆಯನ್ನು ಹೊಂದಬೇಕಾದರೆ ಕಾರವಾರ, ಮಂಗಳೂರು ಬಂದರುಗಳು ಅಭಿವೃದ್ಧಿಯಾಗಬೇಕು. ಹಾಸನ--ಮಂಗಳೂರು ಮತ್ತು ಹುಬ್ಬಳ್ಳಿ-ಕಾರವಾರ ರೈಲುಮಾರ್ಗಗಳಾಗಬೇಕು. ಕೃಷ್ಣ ಮತ್ತು ಮಲಪ್ರಭಾ ಅಣೆಕಟ್ಟು ಗಳು ರಚನೆಯಾಗಬೇಕು. ಬೆಂಗಳೂರು, ಮಣಿಪಾಲ, ಕಲ್ಬುರ್ಗಿಗಳಲ್ಲಿ ವಿಶ್ವವಿದ್ಯಾಲಯ ಗಳಾಗಬೇಕು. ಇದು ಹೇಗೋ ಹಾಗೆಯೇ ಪರಿಷತ್ತಿನ ಕನ್ನಡ ನಿಘಂಟು ಮತ್ತು ಸರ್ಕಾರದ ಕನ್ನಡ ವಿಶ್ವಕೋಶಗಳು ಪ್ರಕಟವಾಗಬೇಕು. ಪರಿಷತ್ತಿನ ಈ ಆತ್ಮೀಯವಾದ ಬಿನ್ನಹವನ್ನು ನಮ್ಮ ಸರಕಾರವು ಗಮನಿಸುವುದೆ?




---

# ವಿನಿಮಯ ಪತ್ರಿಕೆಗಳು

**Fortnightly :**—(1) British Information Service, Fortnightly Review of News and Events, Delhi. (2) Soviet Land.

**Monthly:**—1. P.E.N., Bombay. 2. Journal of Mysore State Educational Federation, Bangalore. 3. Divine Life, Rishikesh. 4. Mysore Information Bulletin, Bangalore. 5. British Book News, London. 6. Freedom First, Bombay. 7. The Indian Publisher and Book-seller, Bombay.

**ಮಾಸಪತ್ರಿಕೆ :**

(೧) ಜೀವನ-ಬೆಂಗಳೂರು. (೨) ಶರಣಸಾಹಿತ್ಯ-ಬೆಂಗಳೂರು. (೩) ಕತೆಗಾರ-ಬೆಂಗಳೂರು. (೪) ಕೊರವಂಜಿ-ಬೆಂಗಳೂರು. (೫) ಮಕ್ಕಳ ಪುಸ್ತಕ-ಬೆಂಗಳೂರು. (೬) ಮೈಸೂರು ವ್ಯವಸಾಯ ಸಂಶೋಧನ ಪತ್ರಿಕೆ-ಬೆಂಗಳೂರು. (೭) ವಿನೋದ-ಬೆಂಗಳೂರು. (೮) ಜಯಂತಿ-ಧಾರವಾಡ. (೯) ಜಯಕರ್ನಾಟಕ-ಧಾರವಾಡ. (೧೦) ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ-ಕಾಕಿನಾಡ. (೧೧) ಧನ್ವಂತರಿ-ಬಿಜಾಪುರ. (೧೨) ಅಧ್ಯಾತ್ಮಪ್ರಕಾಶ-ಹೊಳೇನರಸೀಪುರ. (೧೩) ಮೊಗವೀರ-ಬೊಂಬಾಯಿ. (೧೪) ಸದ್ಧರ್ಮ ದೀಪಿಕೆ-ಮೈಸೂರು. (೧೫) ದಿವ್ಯಜ್ಯೋತಿ-ಮೈಸೂರು. (೧೬) ಕಲ್ಯಾಣಿ-ಬಿಜಾಪುರ. (೧೭) ಪುಸ್ತಕ ಪ್ರಪಂಚ-ಮೈಸೂರು. (೧೮) ಭಾರತ ದರ್ಶನ-ಬೆಂಗಳೂರು. (೧೯) ವಿವೇಕಾಭ್ಯುದಯ-ಮಂಗಳೂರು. (೨೦) ಯುಗಪುರುಷ-ಕಿನ್ನಿಗೋಳಿ (ಉ. ಕ.). (೨೧) ಧರ್ಮಬೋಧ-ಉಡುಪಿ. (೨೨) ಅಮರವಾಣಿ-ರಾಯಚೂರು. (೨೩) ವಿಜಯಮಾಲ-ಬೆಂಗಳೂರು. (೨೪) ಪ್ರಕಾಶಿನಿ-ದ. ಕನ್ನಡ. (೨೫) ಪ್ರದೀಪ-ಧಾರವಾಡ. (೨೬) ನವಚೇತನ-ಪೇರಪಾಲ (ದ. ಕ.) (೨೭) ವೀರಮಾತಾ-ಧಾರವಾಡ. (೨೮) ಮಕ್ಕಳ ಬಾವುಟ-ಬೆಂಗಳೂರು. (೨೯) ಸೋವಿಯಟ್ ದೇಶ-ನ್ಯೂ ಡೆಲ್ಲಿ. (೩೦) ಭಾರತ ಸರ್ಕಾರದ ಪ್ರಕಾಶನ ವಿಭಾಗ-ನ್ಯೂ ಡೆಲ್ಲಿ. (೩೧) ಮಲೆನಾಡು-ಬೆಂಗಳೂರು. (೩೨) ಪಂಚಾಮೃತ-ಗದಗ. (೩೩) ತತ್ವವಾದ-ಬೆಂಗಳೂರು. (೩೪) ಪರಿಮಳ-ನಂಜನಗೂಡು. (೩೫) ಗಾಯನಗಂಗಾ-ಬೆಂಗಳೂರು. (೩೬) ಕಸ್ತೂರಿ-ಹುಬ್ಬಳ್ಳಿ. (೩೭) ಶ್ರೀ ಸುಧಾ-ಬೆಂಗಳೂರು. (೩೮) ನಿತ್ಯಾನಂದ ದರ್ಶನ-ಮುಂಬಯಿ. (೩೯) ಜ್ಯೋತಿರ್ವಾಣಿ-ಬೆಂಗಳೂರು. (೪೦) ಗುರುದೇವ-ಮೂಡಬಿದರೆ. (೪೧) ಸುಕುಮಾರ-ಶಿವಯೋಗಮಂದಿರ. (೪೨) ಸುಬೋಧ-ಬೆಂಗಳೂರು.

**Bi-Monthly:**—1. Journal of the University of Bombay, Bombay. 2. Public Affairs-G.I.P.A., Bangalore.

**Quarterly:**—1. Journal of the Mythic Society, Bangalore. 2. Journal of the Annamalai University, Annamalai Nagar. 3. Bulletin of the Deccan College Research Institute, Poona. 4. Journal of the University of Bombay, Bombay. 5. Annals of Bhandarkar Oriental Research Institute. 6. Bulletin of the School of Oriental and African Studies, London.

**ತ್ರೈಮಾಸಿಕ ಪತ್ರಿಕೆ :**

(೧) ಮೈಸೂರು ಸಕ್ಕರೆ-ಮಂಡ್ಯ. (೨) ಪ್ರಬುದ್ಧ ಕರ್ನಾಟಕ-ಮೈಸೂರು. (೩) ಕನ್ನಡ ನುಡಿ-ಬೊಂಬಾಯಿ. (೪) ಪುಸ್ತಕಮಿತ್ರ-ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ, ಮದರಾಸು.

**Half-Yearly :**—Half-Yearly Journal of the Mysore University, Mysore.

———

# ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ.ನ.ಪೈ |
|---|---|---|
| ೧. | ಕನ್ನಡದ ಬಾವುಟ (ಐದನೆಯ ಮುದ್ರಣ ೧೯೫೮) | ೨=೦೦ |
| ೨. | ಸೀತಾ ಪರಿತ್ಯಾಗ (ಜೈಮಿನಿ ಭಾರತದಿಂದ ೧೯೬೧) | ೦=೬೫ |
| ೩. | ಜೇಮ್ಸ್ ಏಬ್ರಹಾಮ್ ಗಾರ್ಫೀಲ್ಡನ ಚರಿತ್ರೆ : ಕ್ಯಾಲಿಕೋ ಪ್ರತಿ (೧೯೩೦) | ೧=೫೦ |
| | (ನಾಲ್ಕನೆಯ ಮುದ್ರಣ) ಸಾದಾ ಪ್ರತಿ (೧೯೩೮) | ೧=೦೦ |
| ೪. | ಜ್ಯೋತಿರ್ವಿನೋದಿನಿ (೧೯೩೧) | ೨=೦೦ |
| ೫. | ಹೂಮಾಲೆ (೧೯೪೩) | ೦=೬೩ |
| ೬. | ಕನ್ನಡ ನಾಡಿನ ಚರಿತ್ರೆ: ಭಾಗ ೧ (ಅಚ್ಚಿನಲ್ಲಿದೆ) | |
| | ,, ಭಾಗ ೨ (ಎರಡನೆಯ ಮುದ್ರಣ ೧೯೫೭) | ೨=೦೦ |
| | ,, ಭಾಗ ೩ ( ,, ೧೯೫೯) | ೧=೨೫ |
| ೭. | ಸರ್ವೋದಯ (೧೯೪೯) | ೦=೩೨ |
| ೮. | ಸೋಮೇಶ್ವರ ಶತಕ (ನಾಲ್ಕನೆಯ ಮುದ್ರಣ ೧೯೬೧) | ೧=೫೦ |
| ೯. | ಸಂಕಲನ (೧೯೪೯) | ೦=೬೩ |
| ೧೦. | ಕನ್ನಡದಲ್ಲಿ ಸುಧಾರಣೆಗಳು ೧೯೪೬ | ೦=೩೮ |
| ೧೧. | ಅರುಂಧತಿ (೧೯೫೧) | ೦=೨೫ |
| ೧೨. | ಶಿವಶರಣರ ಕೃತಿಗಳು (ಸ್ವರಪ್ರಸ್ತಾರ ಸಹಿತ ೧೯೫೨) | ೨=೦೦ |
| ೧೩. | ಹರಿದಾಸ ಸಾಹಿತ್ಯ-ಇಂಗ್ಲಿಷ್ ಉಪೋದ್ಘಾತದೊಡನೆ (೧೯೫೨) | ೧೦=೦೦ |
| ೧೪. | ,, ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ (೧೯೫೨) | ೮=೦೦ |
| ೧೫. | ಗಾಳಿಯಲ್ಲಿನ ಅಗೋಚರ ಶತ್ರುಗಳು (೧೯೫೪) | ೧=೨೫ |
| ೧೬. | ನಕ್ಷತ್ರದರ್ಶನ (೧೯೫೪) | ೧=೫೦ |
| ೧೭. | ಹರಿದಾಸ ಕೃತಿಮಂಜರಿ (೧೯೫೫) | ೧=೨೫ |
| ೧೮. | ಪ್ಲೇಟೋವಿನ ಆದರ್ಶರಾಜ್ಯ (೧೯೫೬) | ೧=೩೮ |
| ೧೯. | ವಾಚನ ಕಾವ್ಯಮಂಜರಿ (೧೯೫೫) | ೦=೧೯ |
| ೨೦. | ಚೇರಮ ಕಾವ್ಯಂ (೧೯೫೬) | ೨=೦೦ |
| ೨೧. | ಅನುಭವ ಮುಕುರಂ (೧೯೫೬) | ೦=೩೮ |
| ೨೨. | ಆಧುನಿಕ ಗದ್ಯ ಸಾಹಿತ್ಯ (ಎರಡನೆಯ ಮುದ್ರಣ ೧೯೬೧) | ೨=೫೦ |
| ೨೩. | ಗಮಕ ಕಾವ್ಯ ಮಂಜರಿ (ಎರಡನೆಯ ಮುದ್ರಣ ೧೯೬೧) | ೧=೦೦ |
| ೨೪. | ಕನ್ನಡದ ಅತ್ಯುತ್ತಮ ಸಣ್ಣ ಕತೆಗಳು (ಮೂರನೆಯ ಸಂಪುಟ ೧೯೫೮) | ೪=೦೦ |
| ೨೫. | ಕಾದಂಬರಿ-ಸಾಮಾನ್ಯ ಮನುಷ್ಯ (೧೯೫೭) | ೧=೦೦ |
| ೨೬. | ಉದ್ಭಟದೇವ ಚರಿತೆ (೧೯೫೭) | ೧=೫೦ |
| ೨೭. | ತ್ರಿಪುರದಹನ ಸಾಂಗತ್ಯ (೧೯೫೯) | ೦=೭೫ |
| ೨೮. | ಮೂರು ಸ್ಪರ್ಧಾ ನಾಟಕಗಳು (೧೯೫೯) | ೨=೭೫ |
| ೨೯. | ಕಾವ್ಯ ಸೌರಭ (೧೯೬೨) | ೨=೦೦ |
| **೩೦.** | **ಕರ್ಣಾಟಕ ಕವಿಚರಿತೆ (೧ನೆ ಭಾಗ)** | **೧೨=೦೦** |
| | **,, ,, ಲೈಬ್ರರಿ ಪ್ರತಿಗಳು** | **೧೫=೦೦** |

ವಿ. ಸೂ. ಪ್ರತಿಗಳು ಮುಗಿದಿವೆ: ಪಂಪರಾಮಾಯಣ (೪ನೆಯ ಆಶ್ವಾಸ), ತೊರವೆ ರಾಮಾಯಣ (ಬಾಲಕಾಂಡ ಸಂಧಿ ೧೩-೧೬), ಹರಿದಾಸರ ಕೃತಿಗಳು (ಸ್ವರಪ್ರಸ್ತಾರ ಸಹಿತ), ಹರಿಶ್ಚಂದ್ರನ ರಾಜ್ಯ ಸಮರ್ಪಣ, ವಡ್ಡಾರಾಧನೆ, ಕುಮಾರವ್ಯಾಸ ದರ್ಶನ, ಕವಿಜಿಹ್ವಾಬಂಧನ, ಪಂಪರಾಮಾಯಣದ ನಿಘಂಟು, ಜೈಮಿನಿಭಾರತದ ಕನ್ನಡ ಗದ್ಯಾನುವಾದ (ಅಶ್ವಮೇಧಿಕ ಪರ್ವ), ಚಂದ್ರಹಾಸೋಪಾಖ್ಯಾನ, ದೂತವಾಕ್ಯ, ಪಂಪಭಾರತದ ಕಥೆ (ವಚನ), ಪಂಪಭಾರತದ ನಿಘಂಟು ಮತ್ತು ಪಂಪರಾಮಾಯಣದ ಕಥೆ (ವಚನ), ಪಂಪರಾಮಾಯಣ, ಪಂಪಭಾರತ. ಶಬ್ದಮಣಿದರ್ಪಣ.

ಪುಸ್ತಕ ವ್ಯಾಪಾರಿಗಳಿಗೆ ಕರ್ಣಾಟಕ ಕವಿಚರಿತೆ ವಿನಹ ಮಿಕ್ಕೆಲ್ಲ ಪುಸ್ತಕಗಳಿಗೆ ಸೇ. 25ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

ಕಾವ್ಯಗಾಯನ ಕಲಾ ಸಂಗ್ರಹ .... .... .... ೧=೨೫

ಜಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು-೧೮.

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ





ಸಂಪುಟ ೪೮
ಸಂಚಿಕೆ ೨

Vol. 48
No. 2

ಡಿಸೆಂಬರ್
೧೯೬೩

DECEMBER
1963

Half-Yearly
JOURNAL OF THE KANNADA LITERARY ACADEMY
KANNADA SAHITYA PARISHAT
BANGALORE-18.

ವಾರ್ಷಿಕ ಚಂದಾ ರೂ. ೨-೫೦ ನ. ಪೈ. ★ Annual Subscription Rs. 2.50 NP.

# ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

## ಕಾರ್ಯಕಾರಿ ಸಮಿತಿಯ ಸದಸ್ಯರು

೧. ಆಸ್ಥಾನವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಅಧ್ಯಕ್ಷರು, ಬೆಂಗಳೂರು.

೨. ಡಾ|| ಕೆ. ಎಂ. ಕೃಷ್ಣರಾಯರು, ಎಂ.ಎ., ಪಿಎಚ್.ಡಿ., ಗೌರವ ಕಾರ್ಯದರ್ಶಿಗಳು, ಬೆಂಗಳೂರು.

೩. ಶ್ರೀ ಎಸ್. ಶಂಕರಪ್ಪ, ಎಂ.ಎ., ಬಿ.ಟಿ., ಗೌರವ ಕಾರ್ಯದರ್ಶಿಗಳು, ಬೆಂಗಳೂರು.

೪. ಶ್ರೀ ಆರ್. ಅನಂತರಾಮನ್, ಬಿ.ಎ., ಎಲ್ಎಲ್.ಬಿ., ಗೌರವ ಕೋಶಾಧಿಕಾರಿಗಳು, ಬೆಂಗಳೂರು.

೫. ಶ್ರೀ ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ. ಅವರು, ಬೆಂಗಳೂರು.

೬. ಶ್ರೀ ಎಚ್. ಎಸ್. ರೇಣುಕಪ್ರಸಾದ್, ಬಿ.ಎ., ಬಿ.ಎಲ್. ಅವರು, ಬೆಂಗಳೂರು.

೭. ಶ್ರೀ ಟಿ. ಮಾದಯ್ಯಗೌಡ, ಬಿ.ಎ., ಎಲ್ಎಲ್.ಬಿ., ಎಂ.ಎಲ್.ಎ. ಅವರು, ರಾಮನಗರ.

೮. ಶ್ರೀಮತಿ ಬಿ. ಜಿ. ಸುಶೀಲಮ್ಮ, ಬಿ.ಎಸ್‌ಸಿ. (ಆನರ್ಸ್) ಅವರು, ಬೆಂಗಳೂರು.

೯. ಶ್ರೀ ವಿ. ಬಿ. ನಾಯಕ್, ಎಂ. ಎ., ಎಲ್ಎಲ್.ಬಿ. ಅವರು, ಬಿಜಾಪುರ.

೧೦. ಶ್ರೀ ಎಂ. ಬಿ. ಬೂದಿಹಾಳ ಮಠ ಅವರು, ಹುಬ್ಬಳ್ಳಿ.

೧೧. ಶ್ರೀ ರುದ್ರಾಪುರ ಎಸ್. ಎಂ. ದೇಸಾಯಿ ಅವರು, ಬೆಳಗಾಂವಿ.

೧೨. ಶ್ರೀ ಎನ್. ಎಸ್. ಹೆಗ್ಗಡೆ ಅವರು, ಕಾರವಾರ.

೧೩. ಶ್ರೀ ಎಂ. ವಾಸುದೇವರಾವ್, ಎಂ.ಎ., ಎಲ್.ಟಿ. ಅವರು, ಸುರತ್ಕಲ್ಲು.

೧೪. ಶ್ರೀ ಎಂ. ಎಸ್. ಅನಂತಪದ್ಮನಾಭರಾವ್ ಅವರು, ಶಿವಮೊಗ್ಗ.

೧೫. ಶ್ರೀ ಆರ್. ಜಿ. ಜೋಷಿ ಅವರು, ರಾಯಚೂರು.

೧೬. ಶ್ರೀ ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು, ಯಾದಗಿರಿ.

೧೭. ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳು, ಎಂ.ಎ., ಎಂ.ಎಲ್.ಸಿ. ಅವರು, ಬೆಂಗಳೂರು.

೧೮. ಡಾ|| ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ. ಅವರು, ಧಾರವಾಡ.

೧೯. ಪ್ರೊ|| ಕೆ. ಜಿ. ಕುಂದಣಗಾರರು, ಎಂ.ಎ., ಬೆಳಗಾಂವಿ.

## ವಿನಿಮಯ ಪತ್ರಿಕೆಗಳು

**ದಿನಪತ್ರಿಕೆ:**

(೧) ಜನವಾಣಿ-ಬೆಂಗಳೂರು. (೨) ಸಂಯುಕ್ತ ಕರ್ನಾಟಕ-ಬೆಂಗಳೂರು.

**ವಾರಪತ್ರಿಕೆ:**

(೧) ಪ್ರಜಾಮತ-ಬೆಂಗಳೂರು. (೨) ಚೇತನ-ಬೆಂಗಳೂರು. (೩) ಮೈಸೂರು ಗೆಜೆಟ್-ಬೆಂಗಳೂರು. (೪) ರಾಯಭಾರಿ-ಉಡುಪಿ. (೫) ವಿಕ್ರಮ-ಬೆಂಗಳೂರು. (೬) ಕಂಠೀರವ-ಮಂಗಳೂರು. (೭) ಪ್ರಭಾತ-ಮಂಗಳೂರು. (೮) ಕರ್ನಾಟಕ ವೈಭವ-ಬಿಜಾಪುರ. (೯) ಕರ್ಮವೀರ-ಹುಬ್ಬಳ್ಳಿ. (೧೦) ಬೆಳಕು-ಮೈಸೂರು. (೧೧) ನವಯುಗ-ಉಡುಪಿ. (೧೨) ಜನಪ್ರಗತಿ-ಬೆಂಗಳೂರು. (೧೩) ಶಾನಾಡವೃತ್ತ-ಕುಮುಟ. (೧೪) ರಾಷ್ಟ್ರಮತ-ಮಂಗಳೂರು. (೧೫) ಕನ್ನಡಿಗ-ಹುಬ್ಬಳ್ಳಿ. (೧೬) ಚಲಚಿತ್ರ-ಬೆಂಗಳೂರು. (೧೭) ಪ್ರಪಂಚ ಹುಬ್ಬಳ್ಳಿ. (೧೮) ಜನಸೇವಕ-ಅಂಕೋಲ. (೧೯) American Reporter. (೨೦) New York Times, New York. (೨೧) ಸಂದರ್ಶನ-ಬಿಜಾಪುರ. (೨೨) ಕರ್ನಾಟಕ ಬಂಧು-ಗದಗ. (೨೩) ಸಂದೇಶ-ಬೆಳಗಾಂವಿ. (೨೪) ಸತ್ಯವಾದಿ-ಮೈಸೂರು.

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

HALF-YEARLY JOURNAL OF THE
KANNADA SAHITYA PARISHAT
BANGALORE-18

*Editor*

ASTHANAVIDWAN, PANDITARATNAM
B. SIVAMURTHI SASTRY

*Associate Editor*

DR. K. M. KRISHNA RAO, M.A., Ph.D.

ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ :: ಬೆಂಗಳೂರು-೧೮

೧೯೬೩

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ಮಾರ್ಗಶಿರ–ಪುಷ್ಯ ೧೯೬೩



ಸಂಪುಟ ೪೮ ] ಡಿಸೆಂಬರ್ ೧೯೬೩ [ಸಂಚಿಕೆ ೨

## ವಿಷಯ ಸೂಚಿಕೆ

# HALF-YEARLY JOURNAL

OF THE

KANNADA LITERARY ACADEMY, BANGALORE

Vol. 48] DECEMBER 1963 [No. 2

CONTENTS

# ಶ್ರೀ ವಿಜಯದಾಸರು ಮತ್ತು ಅವರ ಕೃತಿಗಳು*

ಲೇಖಕರು : ಶ್ರೀ ಎನ್. ಗೋಪಾಲಕೃಷ್ಣ ಉಡುಪ

(೧೯೬೩ರ ಜೂನ್ ತಿಂಗಳ ಸಂಚಿಕೆಯಿಂದ ಮುಂದುವರಿದುದು)

"ರಂಗನ ನೋಡಿರೈ–ಕರುಣಾಪಾಂಗನ ನೋಡಿರೈ" ಎಂಬ ಇನ್ನೊಂದು ಹಾಡಿನಲ್ಲಿ ಕೃಷ್ಣನ ವಿವಿಧ ಲೀಲೆಗಳನ್ನು ಕುರಿತು ಹಾಡುತ್ತಾರೆ.

ತಿರುಪತಿಯಲ್ಲಿ ಶ್ರೀನಿವಾಸನ ದರ್ಶನ ಸಮಯದಲ್ಲಿ ಹಾಡಿದ ಒಂದು ಮಂಗಳಗೀತೆ ನಿಂದಾರೂಪವಾಗಿ, ಸಹಜ ಸುಂದರವಾಗಿ, ಅರ್ಥಗರ್ಭಿತವಾಗಿದೆ.

ಜಯಮಂಗಲಂ–ನಿತ್ಯ ಶುಭಮಂಗಳಂ |
ತೊಳಸದಕ್ಕಿಯತಿಂಬ ಕಿಲುಬುತಳಿಗೆಯಲುಂಬ |
ಕೊಳಗದಲಿ ಹಣಗಳನು ಅಳೆದುಕೊಂಬ ||
ಇಲ್ಲ ಕಾಸು ಎಂದು ಸುಳ್ಳು ಮಾತಾಡಿದರೆ |
ಎಲ್ಲವನು ಕಸುಗೊಂಬ ಕಳ್ಳಧೊರೆಗೆ || ೧ ||

ತನ್ನ ನೋಡೇನೆಂದು ಮುನ್ನೂರು ಗಾವುದ ಬರೆ |
ತನ್ನ ಗುಡಿಯ ಪೊಕ್ಕ ಜನರಿಗೆಲ್ಲ ||
ಹೊನ್ನು ಹಣಗಳ ಕೊಂಡು ತನ್ನ ದರುಶನ ಕೊಡದೆ |
ಬೆನ್ನೊಡೆಯ ಹೊಯಿಸುವ ಅನ್ಯಾಯಕಾರಿಗೆ || ೨ ||

ಗಿಡ್ಡಹಾರವನಾಗಿ ಬಡ್ಡಿದಾನವ ಬೇಡಿ |
ದುಡ್ಡು ಕಾಸುಗಳಿಗೆ ಕೈಯ ನೀಡಿ ||
ಅಡ್ಡಬಿದ್ದ ಜನರ ವಿಡ್ಡೂರಗಳ ಕಳೆದು |
ದೊಡ್ಡವರ ಮಾಳ್ಪ ಸಿರಿ ವಿಜಯವಿಠ್ಠಲಗೆ[೩೯] || ೩ ||

ಏಕನಿಷ್ಠೆಯ ಭಕ್ತಿ ಭಾವಾರ್ಚನೆಯಿಂದ ಭಗವತ್ ಸಾಕ್ಷಾತ್ಕಾರವನ್ನು ಪಡೆದ ಭಕ್ತರ ಮನಃಪಟಲದಲ್ಲಿ ಆ 'ಸಿದ್ಧಭಾವ' ಜಾಗೃದ್ರೂಪದಲ್ಲಿ ಉಳಿಯುವುದು. ಆ ಭಾವದಲ್ಲಿಯೇ ತನ್ನ ಉಪಾಸ್ಯ ದೇವತೆಯ ವಿವಿಧ ಲೀಲೆಗಳನ್ನು ಕಾಣುವನು, ಆನಂದಿಸುವನು, ಸ್ತುತಿಸುವನು, ವರ್ಣಿಸುವನು. ಕೆಲವು ಬಾರಿ ಆತನ ತಪ್ಪುಗಳನ್ನೆತ್ತಿ ಹಿಡಿದು ನಿಂದಿಸುವನು. ಈ ಬಗೆಯ ಭಾವಗಳಲ್ಲಿ ಹರಿದಾಸರು ರಚಿಸಿದ ಕೃತಿಗಳು ಅನೇಕವಾಗಿವೆ.

---

* ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸಿದ್ದ ಶ್ರೀ ಅಸುಂಡಿ ಹುಮ್ಮಾರ ಕೃಷ್ಣರಾವ್ ಸ್ಮಾರಕ ಪ್ರಬಂಧ ಸ್ಪರ್ಧೆಯಲ್ಲಿ ಬಹುಮಾನ ಪಡೆದ ಲೇಖನ.

[೩೯] ಶ್ರೀ ವಿಜಯದಾಸರ ಕೀರ್ತನೆಗಳು. ಪುಟ ೪೦. (ಬೆಂಗಳೂರು ಪ್ರತಿ)

**ಜಗನ್ನಾಥದಾಸರು** ತಮ್ಮ 'ಹರಿಕಥಾಮೃತಸಾರ'ದಲ್ಲಿ 'ಭಕ್ತರ ಬಗ್ಗೆ ದೇವರ ಒಲುಮೆ' ಎಂತಿರುವುದೆಂಬುದನ್ನು ಹೀಗೆ ಹೇಳುತ್ತಾರೆ—

ಮಲಗಿ ಪರಮಾದರದಿ ಪಾಡಲು
ಕುಳಿತು ಕೇಳುವ, ಕುಳಿತು ಪಾಡಲು
ನಿಲುವ, ನಿಂತರೆ ನಲಿವ, ನಲಿದರೆ ಒಲಿವೆ ನಿಮಗೆಂಬ |
ಸುಲಭನೋ ಹರಿ, ತನ್ನವರನರೆ
ಘಳಿಗೆ ಬಿಟ್ಟಗಲನೋ, ರಮಾಧವ
ನೊಲಿಸಲರಿಯದೆ ಬಳಲುವರು ಪಾಮರರು ಭವದೊಳಗೆ [೧೦]

ಎಷ್ಟೆಂದರೂ ಹರಿ 'ಭಕ್ತರಾಧೀನ'ನಾಗಿರಬೇಕಲ್ಲವೆ? ಭಕುತರೆಂದರೆ ಭಗವಂತನಿಗೆ ಅದೆಷ್ಟು ಪ್ರೀತಿ! ವಿಜಯದಾಸರೂ ಕೆಲವು ಬಾರಿ ಪರಮಾತ್ಮನನ್ನು ಹಂಗಿಸುವ, ನಿಂದಿಸುವ, ಅಸಡ್ಡೆಯಾಗಿ ಕಾಣುವ ಭಾವಗಳುಳ್ಳ ಕೀರ್ತನೆಗಳನ್ನು ಹಾಡಿದ್ದಾರೆ.

"ನಿನಗೆ ಅಂಜುವನಲ್ಲ ನೀರಜಾಕ್ಷ |
ಮನ ವಚನ ಕಾಯದಿಂ ನಿನ್ನವರಿಗಂಜುವೆನು ||
....................................
ನಿನ್ನ ದರುಶನಕೆ ಬಂದವನಲ್ಲವೊ |
ಮಹಾ ಪುಣ್ಯವಂತರ ದಿವ್ಯ ಚರಣ ನೋಡಲು ಬಂದೆ ||" [೧೧]

ಮೊದಲಾದ ಹಾಡುಗಳಲ್ಲಿ ಅವರ ವ್ಯಂಗ್ಯ ಸಹಜ ಭಾವಗಳು ಸ್ಫುಟವಾಗಿವೆ.

ವಿಜಯದಾಸರ 'ಸಾಧನಮಾರ್ಗ' :—ದಾಸರು ತಮ್ಮೆಲ್ಲ ಕ್ರಿಯೆಗಳೂ ಭಗವದರ್ಪಿತವೆಂದು ಬಗೆದವರು. "ತೇನ ವಿನಾ ತೃಣಮಪಿ ನ ಚಲತಿ" ಎಂಬ ತತ್ತ್ವಾನುಯಾಯಿಗಳು ತಮ್ಮೆಲ್ಲ ಕ್ರಿಯೆಗಳು ಭಗವದರ್ಚನೆಯೆಂದು ಭಾವಿಸಿದವರು. ಮಾನವನ ದೈನಂದಿನ ಸಹಜ ಕರ್ಮಗಳಲ್ಲಿ ಭಗವತ್ಸಾಕ್ಷಾತ್ಕಾರವನ್ನು ಹೇಗೆ ಕಾಣಬಹುದೆಂಬುದನ್ನು ತಮ್ಮ ಒಂದು ಕೀರ್ತನೆಯಲ್ಲಿ ತಿಳಿಸಿದ್ದಾರೆ—

ಸಾಧನದ ಬಗೆಗಾಣೆನೆನ್ನಬಹುದೆ | ಸಾದರದಿ ಗುರು ಕರುಣ ತಾ ಪಡೆದ ಬಳಿಕ ||

ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ | ಉಂಡು ಉಟ್ಟದ್ದೆಲ್ಲ ವಿಷ್ಣು ಪೂಜೆ |
ತಂಡ ತಂಡದ ವಾರ್ತೆ ವಾರಿಜಾಕ್ಷನ ಕೀರ್ತಿ | ಹಿಂಡು ಮಾತುಗಳೆಲ್ಲ ಹರಿಯ ನಾಮ ||೧||

ವಾಗತ್ಯಪಡುವುದೆ ವಿಧಿ ನಿಷೇಧಾಚರಣೆ | ರೋಗಾನುಭವವೆಲ್ಲ ಉಗ್ರತಪವು |
ಆಗದವರಾಡಿಕೊಂಬುವುದೆ ಆಶೀರ್ವಾದ | ಬೀಗರುಪಚಾರವೇ ಭೂತದಯವು ||೨||

ಮೈಮರೆತು ಮಲಗುವುದೆ ಮಹಿತೆಗೆ ನಮಸ್ಕಾರ | ಕೈಮೀರಿ ಹೋದದ್ದೆ ಕೃಷ್ಣಾರ್ಪಣ |
ವೈಮನೋವೃತ್ತಿಗಳೇ ವಿಷಯದಲಿ ವೈರಾಗ್ಯ | ಹೊಯ್ಮಾಲಿತನವೆಲ್ಲ ಹರಿಯ ವಿಹಾರ ||೩||

ಹಿಡಿದ ಹಟ ಪೂರೈಸಲದು ಹರಿಯ ಸಂಕಲ್ಪ | ನಡೆದಾಡುವುದೆಲ್ಲ ತೀರ್ಥಯಾತ್ರೆ |
ಬಡತನವು ಬರಲದೇ ಭಗವದ್ಭಜನೆಯೋಗ | ಸಡಗರದವಲಿಪ್ಪುದೇ ಶ್ರೀಶನಾಜ್ಞೆ ||೪||

ಬುದ್ಧಿಸಾಲದೆ ಸುಮ್ಮನಿರುವುದೇ ಸಮಾಧಿ | ಯದೃಚ್ಛಾಲಾಭವೇ ಸುಖವು ಎನಲು |
ಮಧ್ವಾಂತರ್ಗತ ಶ್ರೀ ವಿಜಯವಿಠ್ಠಲರೇಯ | ಹೃದ್ಗತಾರ್ಥವ ತಿಳಿದು ಒಪ್ಪಿಕೊಳನೆ" [೧೨] ||೫||

---

[೧೦] ಹರಿಕಥಾಮೃತಸಾರ

[೧೧] ಶ್ರೀ ವಿಜಯದಾಸರ ಕೀರ್ತನೆಗಳು. ಪುಟ ೧೧೯. (ಬೆಂಗಳೂರು ಪ್ರತಿ)

[೧೨] ಹರಿಭಕ್ತಿಸುಧೆ. ಪುಟ ೧೧. ರ. ರಾ. ದಿವಾಕರ.

ಕಂಡದ್ದೆಲ್ಲವೂ ಪರಮಾತ್ಮನ ರೂಪ, ಆಡಿದ್ದೆಲ್ಲವೂ ಆತನ ನಾಮ, ಮಲಗುವುದೆ ನಮಸ್ಕಾರ, ನಡೆದಾಡುವುದೆ ತೀರ್ಥಯಾತ್ರೆ, ಸುಮ್ಮನಿರುವುದೇ ಸಮಾಧಿ, ಇತ್ಯಾದಿ 'ಕ್ರಿಯೆ ಎಲ್ಲವೂ ಆತನದು' ಸರ್ವಾರ್ಪಿತ ಮನೋಭಾವ ಮಾರ್ಗಕ್ಕಿಂತ ಉತ್ತಮವಾದ ಸಾಧನಾ ಮಾರ್ಗ ಬೇರೆಯಿದೆಯೆ ?

ಭಗವಂತನಿಗಲ್ಲದವನು ಎಲ್ಲಿದ್ದರೇನು ? ಎಲ್ಲವೂ ಅವನದೇ ಎಂದು ತಿಳಿಯದೆ ಸುಮ್ಮನೆ ಆತನ ಭಜನೆ ಮಾಡಿದರೆ ಸದ್ಗತಿ ಸಿಗುವುದೇ ಎನ್ನುತ್ತಾರೆ ದಾಸರು—

..................................................................................

ಕಪ್ಪೆ ಕಮಲದ ಬಳಿಯೆ ತಪ್ಪದಲೆ ಅನುಗಾಲ | ಇಪ್ಪುದೈ ಒಂದು ಅರೆಘಳಿಗೆ ಬಿಡದೆ |
ಒಪ್ಪದಿಂದಲಿ ಆದರ ಪರಿಮಳದ ಸೊಬಗು | ಕಪ್ಪೆವಾಸನೆಗೊಂಡು ಹರುಷ ಪಡಬಲ್ಲುದೆ ‖ ೬೩

ಕೆಚ್ಚಲಿಗೆ ಅಂಟಿಕೊಂಡಿರುವ 'ತೊನಸಿ' ಹಸುವಿನ ಹಾಲಿನ ರುಚಿ ತಿಳಿಯಬಲ್ಲುದೆ ? ತುಲಸಿಯ ಹತ್ತಿರ ನೀರುಳ್ಳಿ ಇದ್ದರೆ ಅದರ ವಾಸನೆ ಹೋದೀತೆ ?

'ತಿಳಿವಳಿಕೆ' ಇಲ್ಲದವ ಶ್ರೀ ವಿಜಯ ವಿಠ್ಠಲನ ಬಳಿಯಲಿದ್ದರೆ ಏನು ? ದೂರಿದ್ದರೇನು ? ಎಂದು ಪ್ರಶ್ನಿಸುತ್ತಾರೆ.

'ಧ್ಯಾನಯೋಗ'ವನ್ನು ಸಾಧಿಸುವ ಬಗೆಯನ್ನು ಒಂದು ಕೀರ್ತನೆಯಲ್ಲಿ ಹಾಡಿದ್ದಾರೆ.

ಧ್ಯಾನವನು ಮಾಡು ಬಿಂಬಮೂರುತಿಯ | ಆನಂದದಲಿ ಕುಳಿತು ಅಂತರಂಗದಲಿ ‖

ಸದಾಚಾರನಾಗಿ, ದ್ವಾದಶಗುರುಗಳಿಗೆರಗಿ, ಪದುಮಾಸನವನೆ ಹಾಕಿ ಮೂಲಮಂತ್ರವನೆ ಜಪಿಸುತ್ತಾ, ಅಂಗವನು ಚಲಿಸದೆ, ದೃಢವಾಗಿ ಕಂಗಳನೆ ಮುಚ್ಚಿ, ಇಂದ್ರಿಯಗಳನೆ ತೆರೆದು ಅಖಂಡ ಧ್ಯಾನದಂತರಂಗದೊಳಗೆ ನಿಲಿಸಿ ಎಲ್ಲವನ್ನು ಕಾಣಬೇಕು.

ಭಗವದ್ರೂಪಗಳೆಲ್ಲ ಒಂದು ಬಾರಿ ಸ್ಮರಿಸಿ | ಮುಗುಳೆ ಪರಮ ಗುರುವಿನ ಮೂರ್ತಿಗೆ |
ತೆಗೆದು ಆವ್ಹಾನ ಮಾಡಿ ಅಲ್ಲಿಂದ ಹರುಷದಿ | ಸ್ವಗುರು ಬಿಂಬ ಮೂರ್ತಿಯಲಿ ಐಕ್ಯವನೆ ಮಾಡು ‖

ಆತನೆ ಬಿಂಬಮೂರ್ತಿ ಎಂದು ತಿಳಿದು, ಅಷ್ಟದಳಕಮಲಮಧ್ಯ ನಿಲಿಸಿ ಪೂಜೆಯನು ಮಾಡು, ಸತ್, ಚಿತ್, ಆನಂದ, ಆತ್ಮ ಉಪಾಸನವ ಮಾಡು.

ಮಮತೆಯನು ತೊರೆದು, ಮೇಲೊಂದಪೇಕ್ಷಿಸದೆ, | ಸಮವಿಷಯ ತಿಳಿದೊಂದೆ ಭಕುತಿಯಲ್ಲಿ |
ಸಮಾಧಿಗೊಳಗಾಗಿ ದಿವ್ಯದೃಷ್ಟಿಲಿ ಸರ್ವಕ್ರಮ ಅನುಕ್ರಮದಿಂದ ಭರಿತ ಭಾವುಕನಾಗು ‖

ಈ ಪರಿಧೇನಿಸಲು ದೇವಕರುಣವ ಮಾಡೆ | ಪಾಪಸಂಚಿತವು ಪ್ರಾರಬ್ಧನಾಶ |
ಅಪರೋಕ್ಷಿತವಾಗಿ ತನ್ನ ಯೋಗ್ಯತೆಯನ್ನು | ಗೋಪಾಲ ವಿಜಯವಿಠಲನೊಲಿವನಾಗ ‖ ೬೪

'ಧ್ಯಾನಯೋಗ' ಸಾಧಿಸಲಾಗದವನು ಮೂರ್ತಿಪೂಜೆ ಮಾಡಬೇಕು. ಕಲ್ಲಿನ ಪೂಜೆ ಏಕೆ ಮಾಡಬೇಕು ಎಂದು ಉಪೇಕ್ಷಿಸುವವರಿಗೆ ದಾಸರು ಹೀಗೆ ಹೇಳುತ್ತಾರೆ....

ಕಲ್ಲಿನಿಂದಲಿ ಸರ್ವಫಲ ಬಾರದೆಮೋ | ಕಲ್ಲು ಭಜಿಸಿದರೆ ಕೈವಲ್ಯ ತೋರುವುದೊ ‖
ಕಲ್ಲು ಕಡೆಯುತ್ತಿರಲು ಅಮೃತವೇ ಪುಟ್ಟಿತು, ಕಲ್ಲು ಎತ್ತಲು ಮಳೆಯೊಳವಲ್ಲರು ಉಳಿದರು |
ಕಲ್ಲು ಹರಿಪಾದವನು ಸೋಕೆ ಹೆಣ್ಣಾಯಿತು, ಕಲ್ಲು ಲಂಕೆಗೆ ಮಾರ್ಗ ಚೆನ್ನಾಗಿ ಶೋಭಿಸಿತು ‖

---

೬೩ ಶ್ರೀ ವಿಜಯದಾಸರ ಕೀರ್ತನೆಗಳು.

೬೪ ,, ಪುಟ ೧೬೯. (ಬೆಂಗಳೂರು ಪ್ರತಿ)

ಕಲ್ಲಿನೊಳಗೆ ದೇವನೊಡಮೂಡಿ ಕಾಣುವ | ಕಲ್ಲು ಕೊರೆಯಲು ಮೂರ್ತಿಮಂತಾಹುದು |
ಕಲ್ಲುದೇವರ ಗುಡಿಗೆ ಗರುಡಗಂಬವು ಆಯ್ತು | ಕಲ್ಲು ಕೋಟ್ಯಾನುಕೋಟಿಗೆಲ್ಲ ಬೆಲೆಯಾಯ್ತು |
ಕಲ್ಲೆಂದುಪೇಕ್ಷಿಸದೆ ಕಾಲಕಾಲದಿ ನಿಮ್ಮ ಕಲ್ಲು ಮನಸನು ಬಿಟ್ಟು ಪೂಜೆಮಾಡಿ |
ಕಲ್ಲಿನೊಳಗಿದ್ದು ಸಿರಿ ವಿಜಯವಿಠ್ಠಲ ಒಳ್ಳೆ ಕಲ್ಲು ಪದವಿಯ ಕೊಟ್ಟು ಸತತ ಪಾಲಿಪನೋ ‖ [45]

**ನಾಮ ಮಹಿಮೆ :**

ಹರಿದಾಸರ ಮಾರ್ಗ 'ಭಕ್ತಿ ಮಾರ್ಗ'. ಈ ಮಾರ್ಗದಲ್ಲಿ 'ನಾಮ'ಕ್ಕೆ ಮಹತ್ವದ ಸ್ಥಾನವಿದೆ. ಉಳಿದ ಸಾಧನಾಮಾರ್ಗಗಳಲ್ಲಿ 'ಮೂಲಮಂತ್ರ'ಗಳಿಗಿರುವ ಮಹತ್ವ, ಭಕ್ತಿಪಂಥದಲ್ಲಿ 'ನಾಮ'ಗಳಿಗಿದೆ. ಮಂತ್ರಸಿದ್ಧಿಗಿರಬೇಕಾದ ವಿಧಿ, ನ್ಯಾಸಗಳ ಅವಶ್ಯಕತೆ ನಾಮಜಪಕ್ಕೆ ಬೇಕಾಗಿಲ್ಲ. ಯಾವ ನಿಯಮ, ನಿಬಂಧನೆಗಳಿಲ್ಲದಿರುವುದರಿಂದ, ಕುಳಿತಾಗ, ನಿಂತಾಗ, ಕರ್ತವ್ಯನಿರತರಾದಾಗಲೂ 'ನಾಮಸ್ಮರಣೆ' ಮಾಡುತ್ತಿರಬಹುದು. ಕಲಿಯುಗದಲ್ಲಿ ಇಂತಹ ಉತ್ತಮ ಮಾರ್ಗ ಬೇರೊಂದಿಲ್ಲವೆಂದು ದಾಸರು ಭಾವಿಸುತ್ತಾರೆ. ವಿಜಯದಾಸರು ಹರಿನಾಮದ ಮಹತ್ವವನ್ನು ತಮ್ಮ ಅನೇಕ ಪದ, ಸುಳಾದಿಗಳಲ್ಲಿ ವರ್ಣಿಸಿದ್ದಾರೆ.

ಹರಿನಾಮ ಪರಿ ಪರಿಯ ಭಕುತರೊಡನಾಡಿತು | ಹರಿನಾಮವೊಂದಿರಲು ಮತ್ತೊಂದುಪಾಯವೇಕೆ ?
ಹರಿನಾಮ ಸಮಸ್ತ ಭಯ ನಿವಾರಣವಯ್ಯ | .. ....ಹರಿನಾಮ ಸಮಸ್ತ ಪ್ರಾಯಶ್ಚಿತ್ತಕ್ಕೆ ಮೊದಲು ...
ಹರಿನಾಮ ನೆನೆದರೆ ಸರ್ವರೋಗಂಗಳು ಉರುಳಿಪೋಗುವುವು ... .......... .......... ...... .... .......
.... .......... . ... .... ...... ... ............... ....... .. ........... ....... ....... ...... ...............
..... .............. ................... ............ .......................... .... ..... ... ...................
ಹರಿಯ ನೆನೆಸಿದ ದಿವಸ ಶುಭಮಂಗಳ | ಹರಿಯ ನೆನೆಸದ ದಿವಸ ಅಮಂಗಳ ‖
.... ....... ... ....... ... ... ....... .... ... ... ... .......... ... ....... .. ......... .. ....
ಹರಿಯ ನೆನೆಸಿದ ದಿವಸ ಮುಕ್ತಿಗೆ ಬೆಳವಣಿಗೆ | ಹರಿಯ ನೆನೆಸದ ಘಳಿಗೆ ಅದು ಯಮನ ಬಳಿಗೆ ‖
.............. .... ....... ... ... ....... ....... ...... ....... .. .... .. ......... ..... ...................
ಹರಿಯ ನೆನೆಸಿದ ರಾತ್ರಿ ತೀರ್ಥಕ್ಷೇತ್ರ ಯಾತ್ರೆ | ಹರಿಯ ನೆನೆಸದ ರಾತ್ರಿ ಕಾಳರಾತ್ರಿ |
ಹರಿನಾಮವೆ ನಮ್ಮ ಮನ ವಶವಾಗಿರಲು | ಮರೆದು ಪಾಮರನಾಗಿ ಕೆಟ್ಟುವರೆ |
........ ....... ....... ... .. .... ... ... .. .... .. ... .... .......... .. ........ .......
........ ....... ... .......... ....... .......................... ..........................
ಒಂದೊಂದು ಹರಿನಾಮ ಪಾಡಿದರೆ ನಮಗೆ | ಸಂದಿ ಸಂದಿಯಲಿದ್ದ ರೋಗಂಗಳು ಪರಿಹಾರ |
ಕುಂದು ಎಣಿಸದಿರು ಕುತ್ಸಿತ ಯೋಚನೆ ಬಿಡು | ಪೊಂದು ತಿರುಗಿ ಪೊಂದು ಹರಿನಾಮ ಸ್ಮರಣೆಯನು |
ನಿಂದಲ್ಲಿ ಕುಳಿತಲ್ಲಿ ನಡೆದಾಡುವಲ್ಲಿ ಒಂದೊಂದು ನುಡಿಯಲ್ಲಿ ಮದಡನಾಗಿದ್ದಲ್ಲಿ |
ಸಂದೇಹಪಡದಲೆ ಸರ್ವೋತ್ತಮನ ಮನದಿಂದ ತೊಲಗಲೀಯದೆ ಮುಂದುಗೆಡದೆ ನೆನಸು | [46]
.... ... ... ... ... .. ... .......... ...... ....... ... ......... .......... ...... .................
.... .. .... ... .... ............ ..... ........ ... ... .. .. ......... .... ... .................
ಹರಿಯೆ ನಿನ್ನಾಧೀನ ಜ್ಞಾನೇಂದ್ರಿಯಂಗಳು | ಕರ್ಮೇಂದ್ರಿಯಂಗಳು | ಪಂಚಭೂತಾತ್ಮಗಳು |
ಮನಚಿತ್ತಾದಿಗಳು | ಸಕಲಚೇತನವು | ಸಕಲಚೇಷ್ಟೆಗಳು .......... ................ ....
ನೀ ಕುಣಿಸಿದರೆ ಕುಣಿವೆ | ನಗಿಸಿದರೆ ನಗುವೆ | ಮಣಿಸಿದರೆ ಮಣಿವೆ | ಅಳಿಸಿದರೆ ಅಳಿವೆ |

---

[45] ಶ್ರೀ ವಿಜಯದಾಸರ ಕೀರ್ತನೆಗಳು. ಪುಟ ೧೭೭. (ಬೆಂಗಳೂರು ಪ್ರತಿ)
[46] ಶ್ರೀ ವಿಜಯದಾಸರ ಕೃತಿಗಳು. ಪು. ೧೭೪. (ಬೆಂಗಳೂರು ಪ್ರತಿ)

ಉಣಿಸಿದರೆ ಉಣುವೆ | ಉಡಿಸಿದರೆ ಉಡುವೆ | ಮನುಜವೇಷನೆ ಸಿರಿ ವಿಜಯವಿಠ್ಠಲ ಸೇನೆ ;
ದಣಿಸಿದರೆ ದಣಿವೆ | ನೆನೆವಿತ್ತರೆ ನೆನೆವೆ ...... ... ........[47]

ರಾಮನಾಮ ಮಹಿಮೆಯನ್ನು ಬಣ್ಣಿಸುವ ಬಗೆ....

ರಾಮ ರಾಮ ಎಂಬೆರಡಕ್ಷರ ಪ್ರೇಮದೆ ಸಲಹಿತು ಸುಜನರನು |
ಆಲಾಪಿಸುತಾ ಶಿಲೆಯಾಗಿದ್ದ ಬಾಲೆ ಅಹಲ್ಯೆಯ ಕೇಳೀನು ||
ಅಂಜಿಕೆಯಿಲ್ಲದೆ ಗಿರಿಸಾರಿದ ಕಪಿ ಕುಂಜರ ರವಿಸುತ ಬಲ್ಲವನು |
ಎಂಜಲ ಫಲಗಳ ಹರಿಗರ್ಪಿಸಿದ ಕಂಜಲೋಚನೆಯ ಕೇಳೀನು ||
ಕಾಲವನರಿತು ಸೇವೆಯ ಮಾಡಿದ ಲೋಲ ಲಕ್ಷ್ಮಣನೆ ಬಲ್ಲವನು |
ವ್ಯಾಳಶಯನ ಶ್ರೀ ವಿಜಯವಿಠ್ಠಲನ ಲೀಲೆ ಶರಧಿಯ ಕೇಳೀನು ||[48]

ಹರಿಯ ಭಕ್ತರ ಗುಣ ವಿಶೇಷಗಳನ್ನು ದಾಸರು ಹೀಗೆ ತೋರಿಸುತ್ತಾರೆ....

ಬೂದಿ ಮುಚ್ಚಿದ ಕೆಂಡದಂತಿಪ್ಪರು ಈ ಧರೆಯ ಮೇಲೆ ಶ್ರೀಹರಿ ಭಕ್ತಜನರು |
ಅಂಗ ನೋಡಲು ಅಷ್ಟಾವಕ್ರರಾಗಿಪ್ಪರು | ಕಂಗಳಿಂದಲಿ ನೋಡೆ ಘೋರತರರು |
ಮಂಗಳಾಂಗನ ಅಂತರಂಗದಲಿ ಭಜಿಸುತ್ತ | ಹಿಂಗದೆ ಸಂತತಜನ ಸಂಗದೊಳಿಹರು |
....... .... ... ... ....... ....... ...... .... ....... . ... .... .. .... ... ...... ....... ....
.......................... ... ....... .. ........................ ........... .. .... .......................
ಶತ್ರು ಮಿತ್ರರುಗಳ ಸಮನಾಗಿ ಎಣಿಸುವರು | ಪಿತ್ರ ಮಿತ್ರ ಭ್ರಾತೃಗಳನೆಚ್ಚರು |
ಯಾತ್ರೆ ತೀರ್ಥಂಗಳಿಗೆ ಹೋಗುತ್ತ ಶ್ರೀಹರಿಯ| ಸ್ತೋತ್ರಗಳ ಮಾಡಿ ಸಾಧನೆ ಮಾಡಿಕೊಂಬರು||
ಕಷ್ಟ ಸೌಖ್ಯಂಗಳನು ಕರಿವರದಗರ್ಪಿಪರು | ಇಟ್ಟ ತೊಟ್ಟದ್ದು ಹರಿಕೊಟ್ಟೆಂಬರು |
ಸೃಷ್ಟೀಶ ಸಿರಿ ವಿಜಯವಿಠ್ಠಲನ ಪದಪದ್ಮ | ಮುಟ್ಟಿ ಭಜಿಸಿ ಮುಕ್ತಿ ಪದವಿ ಪಡೆಯುವರು ||[49]

**ಮನಸ್ಸಿಗೆ ಉಪದೇಶ :—**ಪ್ರಪಂಚದ ಮಾಯಾ ಮೋಹಗಳನ್ನು ವರ್ಜಿಸಿ ಚಿತ್ತೈಕಾಗ್ರತೆಯನ್ನು ಪಡೆಯುವುದು ಬಹು ಕಷ್ಟ. ಭಕ್ತಿಮಾರ್ಗದಲ್ಲಾಗಲೀ, ಇತರ ಮಂತ್ರಸಾಧನೆಗಳಲ್ಲಾಗಲೀ ಮನಸ್ಸಿನ ಸಾಧನೆಯನ್ನು ಸಾಧಿಸುವುದು ಕಷ್ಟಸಾಧ್ಯವಾದುದು. ಅದರ ಕಷ್ಟ ಎಷ್ಟೆಂಬುದನ್ನು ದಾಸರು ಈರೀತಿ ಹೇಳುತ್ತಾರೆ.

ಮನಸು ನಿಲಿಸುವುದು ಬಹಳ ಕಷ್ಟ | ಗುಣಿಸುವುದು ನಿಮ್ಮೊಳಗೆ ನೀವು ನೆರೆ ಬಲ್ಲವರು ||
ಮುರಿದೋಡಿಬರುವ ರಣರಂಗ ನಿಲಿಸಲುಬಹುದು | ಹರಿವ ನದಿಗಳನು ತಿರುಗಿಸಲುಬಹುದು |
ಕರಿಸೊಕ್ಕಿ ಬರುತಿರಲು ತಡೆದು ನಿಲಿಸಲುಬಹುದು | ದುರ್ಧುಳಮನ ನಿಲಿಸುವುದು ಸುರರಿಗಳವಲ್ಲ ||
ಭೈರವನ ದಾಡಿಯನು ಬಡಿದು ನಿಲಿಸಲುಬಹುದು | ಮಾರುತನ ತರುಬಿ ನಿಲ್ಲಿಸಲು ಬಹುದು |
ಮಾರಿಗಳ ಮುಂಜೆರಗು ತುಡುಕಿ ನಿಲ್ಲಿಸಬಹುದು | ಹಾರಿ ಹಾರುವ ಮನಸು ನಿಲಿಸಲೆನ್ನಳವಲ್ಲ ||
ಶರಧಿಗಳ ಘೋರ್ಗರೆವ ಧ್ವನಿಯ ನಿಲಿಸಲುಬಹುದು | ಸುರಿವ ಬಿರುಮಳೆಯನ್ನು ನಿಲಿಸಬಹುದು ||
ಹರಿದೋಡುವ ಮನಸು ನಿಲಿಸಲೆನ್ನಳವಲ್ಲ| ಸಿರಿಯರಸ ವಿಜಯವಿಠ್ಠಲ ತಾನೆ ಬಲ್ಲ ||[50]

ಅಸಾಧ್ಯವಾದುದನ್ನು ಸಾಧಿಸುವುದು, ಮನಸ್ಸಿನ ಏಕಾಗ್ರತೆಯನ್ನು ಸಾಧಿಸುವುದಕ್ಕಿಂತ ಸುಲಭ ಎಂಬ ತೀರ್ಮಾನಕ್ಕೆ ದಾಸರು ಬಂದಿದ್ದಾರೆ.

---

[47] ಶ್ರೀ ವಿಜಯದಾಸರ ಕೃತಿಗಳು, ಪು. ೧೫೪.
[48] ,, ಪು. ೧೬.
[49] ,, ಪು. ೨೧೬. (ಬೆಂಗಳೂರು ಪ್ರತಿ)
[50] ಶ್ರೀ ವಿಜಯದಾಸರ ಕೀರ್ತನೆಗಳು. ಪುಟ ೧೨೫. (ಬೆಂಗಳೂರು ಪ್ರತಿ)

ಕೆಟ್ಟ ಮನವನ್ನು ಹಿಡಿತಕ್ಕೆ ತರಲು ದೂಷಿಸಿ ನೋಡುತ್ತಾರೆ.

ಛೀ ಹಾ ಥೂ ಖೋಡಿ ಪಾಪಿ ಮನವೆ | ನಿನ್ನ ಕುಹಕಬುದ್ಧಿಗಳೆಲ್ಲ ಬಿಡು ಕಂಡ್ಯ ಮನವೆ ||
ಬಣ್ಣದ ಬೀಸಣಿಗ್ಯಂತೆ ಹೆಣ್ಣು ತಿರುಗೋದ ಕಂಡು ......ಕಣ್ಣುಸನ್ನೆಯ ಮಾಡಿ......
ಕಣ್ಣಿಗೆ ಮಣ್ಣು ಚೆಲ್ಲಿಕೊಂಬರೆ ಮನವೆ.......
ನೆರೆಹೊರೆ ಮನೆಗಳಲ್ಲಿ ಪ್ರಸ್ಥವನು ಮಾಡಿದರೆ.......
ಕರೆಯದಲೆ ಮೊದಲ್ಹೋಗಿ .......ಉದರವ ಪೊರೆವೆ ಮನವೆ.......
ತೊತ್ತುಬುದ್ಧಿಯನೆಲ್ಲ ಬಿಡು ಕಂಡ್ಯ ಮನವೆ.......
ಪಗಡೆ ಚದುರಂಗ ಕಪಡೆಯನಾಡ ಕರೆದರೆ .......ಕರ್ಣಗಳು ಸಿಗುರುವುವು......
ಜಗದೀಶನ ದಿನದಿ ಜಾಗರಕೆ ಕರೆದರೆ.... ಧರೆಗಿಳಿವೆ ಮನವೆ |
ವಾಸುದೇವನ ಪೂಜೆಯೊಮ್ಮೆ ಮಾಡೆಂದರೆ ಬೇಸತ್ತು......ಕುಳಿತೆ
ಆ ಸಮಯದೊಳಗೊಬ್ಬ ಕಾಸುಕೊಟ್ಟೇನೆನಲು......ಚೆನ್ನಟ್ಟಿ ಪೋಪೆ ಮನವೆ ||[51]
"ಗುಳ್ಳೆಯುಂದದ ದೇಹ ನೆಚ್ಚಿ ನೀ ಕೆಡಬೇಡ, ಉಳ್ಳಿಪರೆ ಸುಲಿದರೆ ಹುರುಳಿಲ್ಲ ಮನವೆ"[51]
'ಬಿಂದು ಮಾತ್ರವೆ ಸುಖವು, ದುಃಖ ಪರ್ವತದಷ್ಟು ಸಂದೇಹವಿಲ್ಲವಿದು ಶಾಸ್ತ್ರಸಿದ್ಧ'[51]

ಆದಕಾರಣ,

'ಎಂದೆಂದು ಸಿರಿಯರಸ ವಿಜಯವಿಠಲನಂಘ್ರಿ ಕುಂದದೆ ಹೃದಯದೊಳು ನೆನೆ ಕಂಡ್ಯ ಮನವೆ'[52]

ಎಂದು ಬುದ್ಧಿ ಹೇಳುತ್ತಾರೆ.

'ಎಚ್ಚರಿಕೆಚ್ಚರಿಕೆ ಮನವೆ ಇನ್ನು ಎಚ್ಚರಿಕೆಚ್ಚರಿಕೆ | ಯಮನ ಪುರದ ಬಾಧೆ
ಕಿಚ್ಚನಾದರು ಕೇಳಿ ದುಶ್ಚಿಂತವ ಬಿಡು'[52]

ಎಂದು ನರಕದ ವರ್ಣನೆ ಮಾಡಿ ಹೆದರಿಸುತ್ತಾರೆ.

ಮನಸ್ಸು ಹಿಡಿಯಬೇಕಾದ ಹಾದಿಯನ್ನು ನಿರ್ದೇಶಿಸುತ್ತಾರೆ:

ಎಚ್ಚತ್ತು ಇರು ಕಂಡ್ಯ ಮನವೆ | ನಮ್ಮ ಅಚ್ಯುತನಂಘ್ರಿಯ ನೆನೆ ಕಂಡ್ಯ ಮನವೆ || ಪ ||
ಹಾಳು ಹರಟೆಗೆ ಹೋಗಬೇಡ | ಕಂಡ ಕೂಳುಗಳನು ತಿಂದು ಒಡಲ್ಹೊರೆಯಬೇಡ |
ಕಾಲ ವ್ಯರ್ಥ ಕಳೆಯಬೇಡ | ನಮ್ಮ ಪ್ರಾರಬ್ಧ ಕರ್ಮಕ್ಕೆ ಮನ ಸೋಲಬೇಡ || ೧ ||
ಆಡದಿರಪವಾದಗಳನು | ಕೊಂಡಾಡದಿರಿದಿನ್ನು ಚಿಲ್ಲರೆ ದೈವಗಳನು ||
ಬೇಡದಿರಿಹಸೌಖ್ಯವನ್ನು | ನೀ ಮಾಡದಿರಿನ್ನು ದುರ್ಜನ ಸಂಗವನ್ನು || ೨ ||
ನಾನು ಎಂಬುದ ಬಿಡು ಕಂಡ್ಯ | ನಿನ್ನ ಮಾನಾಪಮಾನಕ್ಕೆ ಹರಿ ಎನ್ನು ಕಂಡ್ಯ |
ಜ್ಞಾನಿಗಳೊಡನಾಡು ಕಂಡ್ಯ | ವಿಷಯ ಜೇನೆಂದು ಮೆದ್ದರೆ ಅದು ವಿಷ ಕಂಡ್ಯ || ೩ ||
ಅನ್ಯಸ್ತ್ರೀಯರ ನೋಡಬೇಡ | ಹಿಂದೆ ಮಣ್ಣು ಕೂಡಿದವರನಿನ್ನು ನೀನೋಡ |
ಅನ್ಯಶಾಸ್ತ್ರವ ನೋಡಬೇಡ | ನಮ್ಮ ಪೂರ್ಣಪ್ರಜ್ಞರ ಬೋಧ ತಿಳಿದುಕೊ ಗಾಢ || ೪ ||
ನರಜನ್ಮ ಬರುವುದೆ ಕಷ್ಟ | ಇದನರಿತು ನೋಡಲು ವಿಪ್ರತ್ವವು ಶ್ರೇಷ್ಠ |
..................................................................................
ಗೋ ವಿಪ್ರರ ಸೇವೆ ಮಾಡು | ಸೋಹಂ ಭಾವಗಳನೆಬಿಟ್ಟು ದಾಸತ್ವ ಕೂಡೊ |
ಕೇವಲ ವೈರಾಗ್ಯ ಮಾಡೊ | ಎಂಟು ಝಾವಗಳಲಿ ಒಮ್ಮೆ ಹರಿಯ ಕೊಂಡಾಡೊ || ೬ ||

---

[51] ಶ್ರೀ ವಿಜಯದಾಸರ ಕೀರ್ತನೆಗಳು. ಪುಟ ೪೮. (ಬೆಂಗಳೂರು ಪ್ರತಿ)
[52] ,, ಪುಟ ೧೭೦. ,,

ಕಷ್ಟಪಡದೆ ಸುಖ ಬರದು | ಕಂಗೆಟ್ಟ ಮೇಲಿನ್ನು ಕಷ್ಟವು ತಿಳಿಯುವುದು |
ದುಷ್ಟ ವಿಷಯದಾಸೆ ಜರಿದು | ವಿಜಯ ವಿಠ್ಠಲನ್ನೊರತು ಮುಕ್ತಿಯು ದೊರೆಯದು [53] ॥ ೭ ॥

ಎಂದೆಂದಿಗೂ ಎಲ್ಲರೂ ಅನುಸರಿಸಬೇಕಾದ ಉಪದೇಶಗಳಿವು. ಸನ್ಮಾರ್ಗದಲ್ಲಿ ಸಾಗಬೇಕೆಂದೆಣಿಸುವ ಮಾನವನು ಮನಸ್ಸಿನಲ್ಲಿ ನಿತ್ಯ ನೆನೆಯಬೇಕಾದ ಕೀರ್ತನೆಯಿದು.

ತನ್ನ ತಪ್ಪನ್ನು ಮರೆತು ಹೆರರ ಅವಗುಣಗಳನ್ನು ಎಣಿಸಿ ಆಡುವ ಮನಸ್ಸಿಗೆ ದಾಸರು ಹೇಳುತ್ತಾರೆ—

ಏನು ಕಾರಣ ಮತಿಯಿಲ್ಲ ಮನವೆ | ಹೀನಾಯ ಮಾಡದಿರು ಪರರ ಗುಣಗಳನೆಣಿಸಿ ॥
ಅವನ ನುಡಿವೆ ಯಾಕೆ ಅವನ್ಯಾರು ನೀನ್ಯಾರು | ಅವನ ಪಾಪಕೆ ನೀನು ಭಾಗಿಯಾದೆ |
ಅವನುತ್ತಮನಾದರವನೆ ಬದುಕಿದ ತಾನೆ | ಅವ ಪುಣ್ಯ ಮಾಡಿದರೆ ಅವನ ಕುಲ ಉದ್ಧಾರ |
ನಿನಗೆ ಕೊಡುವುದರಲ್ಲಿ ಬೇಡ ಬಂದವನಲ್ಲ | ನಿನಗೆ ಅವನಿಗೆ ಏನು ಸಂಬಂಧವೊ |
ಮನೆ ಒಡವೆ ವಸ್ತ್ರಗಳ ಹಂಚಿಕೊಂಬುವುದಿಲ್ಲ | ಕ್ಷಣಕ್ಷಣಕೆ ಸಂದೇಹ ಮಾಡಿಕೊಂಬುದು ಸಲ್ಲ |
ನಿನ್ನ ಗತಿ ಮಾರ್ಗಕೆ ಅವ ನಡೆದು ಬಾಹನೆ | ನಿನ್ನಿಂದ ಪರಲೋಕ ಅವಗೆ ಉಂಟೆ |
ನಿನ್ನೊಳು ನೀ ತಿಳಿದು ವಿಜಯವಿಠ್ಠಲನ್ನ | ಸನ್ನುತಿಸಿ ಭವರೋಗವನ್ನು ಕಳಕೊಳ್ಳೊ ॥ [54]

'ನಿನ್ನೊಳು ನೀ ತಿಳಿದು ಪರಮಾತ್ಮನನ್ನು ಆಶ್ರಯಿಸಿ ಭವರೋಗವನ್ನು ಹರಿಸಿಕೊ' ಎಂದು ದಾಸರು ಉಪದೇಶಿಸುತ್ತಾರೆ.

ವಿಜಯದಾಸರು ಮೋಹನದಾಸನನ್ನು ಮೊದಲು ಕಂಡಾಗ ಆಶೀರ್ವಾದರೂಪವಾಗಿ ಹಾಡಿದ ಕೀರ್ತನೆ, ಅದು ಒಳಗೊಂಡಿರುವ ಉಪದೇಶ ಎಲ್ಲರಿಗೂ ಅನ್ವಯಿಸುವಂಥದು.

ಚಿರಂಜೀವಿಯಾಗಿರಲೊ ಚಿಣ್ಣ ನೀನು | ಪರಮ ಭಾಗವತರ ಪದಧೂಳಿ ಧರಿಸುತಲಿ ॥
ಜರಿಯಬೇಡ ಹರಿಯ ಮರೆಯಬೇಡೆಂದೆಂದು | ತಿರಿಯಬೇಡ ಖಳರ ಮನೆಗೆ ಪೋಗಿ |
ಒರೆಯಬೇಡನ್ಯರಿಗೆ ರಹಸ್ಯ ತತ್ತ್ವಗಳನ್ನು | ಬೆರೆಯಬೇಡ ಪರರ ಸತಿಯ ಸ್ವಪ್ನದಲೂ ॥
ಲೋಕವಾರ್ತೆಯ ನಿನ್ನ ಕಿವಿಗೆ ಕೇಳಿಸಬೇಡ | ಶ್ರೀಕಾಂತ ಚರಿತೆಯನು ಕೇಳದಿರಬೇಡ |
ಪಾಕವನು ಮಾಡಿ ಏಕಾಂಗಿಯಾಗುಣ ಬೇಡ | ಭೂಕಾಂತರನುಸರಿಸಿ ಬೆಸಗೊಳ್ಳಬೇಡ ॥
ಸಾಲಮಾಡಲುಬೇಡ ಸಾಲದೆಂದೆನಬೇಡ | ನಾಳೆಗೆ ಹ್ಯಾಗೆಂಬ ಚಿಂತೆ ಬೇಡ |
ಖೂಳಜನರೊಡಗೂಡಿ ಕಂಗೆಡಲಿಬೇಡ ನೀ | ಬಾಳುವರ ಸಂಗದಲಿ ಬಾಳೆಲವೊ ಬಾಲ ॥
ಪಂಡಿತರು ಪಾಮರರು ಅರಿಗಾದರು ನಿನ್ನ | ಕಂಡವರಿಗೆಲ್ಲ ಕೌತುಕತೋರಲಿ |
ಹೆಂಡಿರು ಮಕ್ಕಳು ಅಳಿಯ ಸೊಸೆ ಮೊಮ್ಮಕ್ಕಳು | ಉಂಡುಟ್ಟು ದ್ವಿಜರ ಸಹ ಗಂಡುಗಲಿಯಾಗೊ ॥
ಮಂದಮತಿಗಳ ಕೂಡೆ ಮಾತಾಡಲಿಬೇಡ | ನಿಂದಕರ ಕಣ್ಣೆತ್ತಿ ನೋಡಬೇಡ |
ಇಂದಿರೆಯರಸ ಶ್ರೀ ವಿಜಯವಿಠಲನ ಚರಣ | ದ್ವಂದ್ವದಲಿ ಮಸ್ತಕವ ನೀಡದಿರಬೇಡ ॥ [55]

ಈ ಕೀರ್ತನೆ ದಿನವೂ ಹಿರಿಯರು ಕಿರಿಯರಿಗೆ ನೆನಪು ತರುವಂಥದು.

### ಉಪದೇಶ ಮತ್ತು ಸಮಾಜ ವಿಮರ್ಶೆ :

ಜನತೆಯ ಉಪಯೋಗಕ್ಕಾಗಿ ದಾಸರು ತಾವು ತಿಳಿದುದನ್ನು ಹೇಳುತ್ತಾರೆ. ಅವರಲ್ಲಿ ಇರುವ ತಪ್ಪುಗಳನ್ನು ಎತ್ತಿಹಿಡಿದು ತಿದ್ದಿಕೊಳ್ಳಲು ಸೂಚಿಸುತ್ತಾರೆ. ತಮ್ಮ ಅನುಭವದಿಂದ ಕಂಡ ಮಾರ್ಗದಲ್ಲಿ ಸಾಗುವಂತೆ ತಿಳಿಸಿ ಹೇಳುತ್ತಾರೆ.

---

[53] ಶ್ರೀ ವಿಜಯದಾಸರ ಕೃತಿಗಳು. ಪುಟ ೧೨೯. (ಬೆಂಗಳೂರು ಪ್ರತಿ)
[54] ,, ಪುಟ ೪೪. ,,
[55] ,, ಪುಟ ೨೧. ,,

ವಿಜಯದಾಸರು ಹಾಡಿರುವ...."ನರಲೋಕ ಸುಖಕ್ಕೆ ಹಾರೈಸದೆ ಹರಿಲೋಕಾನಂದ ಬಯಸಿ" ಎಂಬ ಅರ್ಥದ ಕೀರ್ತನೆ ತುಂಬಾ ಸೊಗಸಾಗಿ, ಅರ್ಥವತ್ತಾಗಿ, ಉಪದೇಶಾತ್ಮಕವಾಗಿದೆ.

ನಂಬಿನೆಚ್ಚದಿರು ನರಲೋಕ ಸುಖವೆಂಬ ಅಂಬಲಿ ಪರಮಾನ್ನ ।
ಹಂಬಲಿಸುವುದು ಹರಿಲೋಕಾನಂದವೆಂಬ ಪೀಯೂಷಪಾನ ॥ ಪ ॥

ದುರುಳಜನರ ಸಂಗವೆಂಬುದು ಎಂದಿಗು ನೊಣ ಬೆರಸಿದ ಊಟ ।
ಪರಮ ಭಾಗವತರ ಪದ ಸಂಗವೆಂಬುದು ಮಸ್ತಕದ ಮಕುಟ ॥
ಮರೆಪೋಸಗೊಳಿಸುವ ಸತಿಸುತರೆಂಬೋದೆ ಕೇವಲ ಯಮಕಾಟ ।
ಪರತತ್ತ್ವವಾದ ಶ್ರೀಹರಿಯ ತಿಳಿವುದೆ ವೈಕುಂಠಕೆ ಓಟ ॥ ೧ ॥

ಬಿದ್ದಕಾಳಿಗೆ ಕಾಳು ಕೂಡಿಹಾಕುವುದೆಲ್ಲ ಹಾರಿಹೋಗುವ ಹೊಟ್ಟು ।
ಇದ್ದಾಗ ದಾನಧರ್ಮಂಗಳ ಮಾಡೋದು ಕೈವಲ್ಯಕೆ ಮೆಟ್ಟು ॥
ಹೊದ್ದಿರುವವರ ಕಂಡಾಸೆಯಪಟ್ಟರೆ ಹೋಗುವಿಸೀಕೆಟ್ಟು ।
ಬುದ್ಧಿಹೀನರಿಗೆ ಪೇಳದಿರೆಲೊ ತತ್ತ್ವಸಾರ ಸುಂದರಗುಟ್ಟು ॥ ೨ ॥

ಅಲ್ಪಾವಕಾಶವು ಈ ಶರೀರವು ಗಾಳಿಗೊಡ್ಡಿದ ದೀಪ ।
ಅಲ್ಪಸಂತೋಷನಾಗು ಅದು ನಿನಗೆ ನೋಡು ಹಾಲು ಸಕ್ಕರೆ ತುಪ್ಪ ॥[56]
ಬಲ್ಪಂಥ ಮಾಡದಿರು ಜನ್ಮಜನ್ಮದಲಿ ಬಿಡದೆಲೊ ಸಂತಾಪ ।
ಸ್ವಲ್ಪಕಾಲಾದರೂ ಮಧ್ವಮತವ ಪೊಂದು ಭವವೇ ನಿರ್ಲೇಪ ॥ ೩ ॥

ಹರಿಗರ್ಪಿಸದ ಕರ್ಮ ಆವಾವುದಾದರು ಸೂಳೆಗಿಕ್ಕಿದ ವಿತ್ತ ।
ಹರಿಗೆ ವಿಶ್ವಾಸದಿ ಅಣುಮಾತ್ರ ಅರ್ಪಿಸೆ ಅವನೆ ನಿರ್ಮಲಚಿತ್ತ ।
ನಿರುತಗ್ರಾಸಕೆ ಚಿಂತೆ ಮಾಡಲು ಒದಗದು ಪುಣ್ಯವು ನಿನಗತ್ತ ।
ಅರೆಮನವಿಲ್ಲದೆ ಪೃಥಮನದಿಪ್ಪವೆ ಸಂಪಾದನೆ ಭತ್ಯ ॥ ೪ ॥

ಭಾವವಿರಕ್ತಿಯ ವಹಿಸದಿದ್ದರೆ ನಿನಗಾಗುವುದು ಖೇದ ।
ಸಾವಿರಕೊಂದೆ ಮಾತು ಹರಿದಾಸನೆನಿಸೋದು ಪರಿಪರಿಯಾಸ್ವಾದ ।
ದೇವಕಿಸುತ ನಮ್ಮ ವಿಜಯವಿಠ್ಠಲನಂಘ್ರಿ ತೀರ್ಥಪ್ರಸಾದ ।
ಸೇವಿಸದವನೆ ನಿತ್ಯನಾರಕನಾಸಿ ಎನ್ನುತಲಿದೆ ವೇದ[57] ॥ ೫ ॥

ದುರುಳಜನಸಂಗ—ನೊಣಬೆರಸಿದ ಊಟ; ಭಾಗವತರ ಸಂಗ—ಮಸ್ತಕದ ಮಕುಟ; ಸತಿಸುತರೆಂಬುವುದೆ—ಯಮಕಾಟ; ಶ್ರೀಹರಿಯ ತಿಳಿವುದೆ—ವೈಕುಂಟಕೆ ಓಟ; ಈ ಶರೀರ ಗಾಳಿಗೊಡ್ಡಿದ ದೀಪ, ಅಲ್ಪಸಂತೋಷನಾಗು, ಮಧ್ವಮತವ ಪೊಂದು. ಕರ್ಮವನು ಹರಿಗೆ ಅರ್ಪಿಸು, ವಿಜಯವಿಠ್ಠಲನಂಘ್ರಿ ಸೇವಿಸು ಎಂದು ದಾಸರು ಉಪದೇಶಿಸುತ್ತಾರೆ. ಇನ್ನೊಮ್ಮೆ....

ನೆಚ್ಚದಿರು ಸಂಸಾರ ಕಡೆಗೆ ಹಾಕುವುದಲ್ಲ ಮೆಚ್ಚುಗೊಳಿಸುವುದು ವಿಷಯದಲಿ,॥[58]
ಎಚ್ಚತ್ತು ಪ್ರವರ್ತಿಸು ಇನ್ನಾದರು ಸಿರಿ । ಅಚ್ಯುತನ ಪಾದವನು ನಂಬೋ ಪ್ರಾಣ ॥

ಎನ್ನುತ್ತಾರೆ. ಸಂಸಾರದ ಕ್ಲೇಶಗಳನ್ನು ಕಣ್ಕಟ್ಟುವಂತೆ ಚಿತ್ರಿಸಿ—

ಅರ್ಥಬಾರದು ನಿನ್ನ ಸಂಗಾತ ಕೇಳ್ ಕೊನೆಗೆ
ವ್ಯರ್ಥಧಾವತಿ ಪ್ರಾಪ್ತಕರ್ಮ ॥

---

[56] ಶ್ರೀ ವಿಜಯದಾಸರ ಕೃತಿಗಳು. ಪುಟ ೭. (ಬೆಂಗಳೂರು ಪ್ರತಿ)
[57] ಶ್ರೀ ವಿಜಯದಾಸರ ಕೀರ್ತನೆಗಳು. ಪುಟ ೭. (ಬೆಂಗಳೂರು ಪ್ರತಿ)
[58] ,, ,, ಪುಟ ೫೩. ,, ,,

ತೀರ್ಥಯಾತ್ರೆಯ ಮಾಡಿ ನಿಸ್ಸಂಗನಾಗು ।
ಯಥಾರ್ಥಜ್ಞಾನದಿಂದ ಬಾಳೊ ಪ್ರಾಣಿ ॥ [59]

ಎಂದು ದಾರಿದೋರುತ್ತಾರೆ.

'ನನ್ನಲ್ಲಿ ಸಕಲ ಸಂಪದವಿದೆ; ನಾನು ಯಾರಿಗೆ ಕಡಿಮೆ' ಎಂದು ಹಿಗ್ಗುವ ಮಾನವನಿಗೆ ದಾಸರು ಹೀಗೆ ಹೇಳುತ್ತಾರೆ :

ಹಿಗ್ಗದಿರು ಹಿಗ್ಗದಿರು ಮನುಜಪಶುವೆ । ಮುಗ್ಗಿತಗ್ಗುವುದು ಮುಂದರಿಯದಲೆ ಮರುಳಾಗಿ ॥...[60]

ಕಾವ್ಯ, ಇತಿಹಾಸ, ಪುರಾಣಗಳ ವ್ಯಕ್ತಿಗಳ ಉದಾಹರಣೆಗಳನ್ನಿತ್ತು ಕಡೆಯಲ್ಲಿ

'ಹಮ್ಮಿನಲಿ ಬಾಳದಿರು ಹಿತವಾಗದು ನಿನಗೆ,
ಆ ಮಹಾಮಹಿಮರ ಸಮನಲ್ಲವೋ
ಸುಮನಸರೊಡೆಯ ಶ್ರೀ ವಿಜಯವಿಠ್ಠಲ ಹರಿಯ
ಒಮ್ಮನದಿ ನೆನೆದು ಭವದಿಂದ ಕಡೆಯಾಗೊ ॥ [60]

ಎನ್ನುತ್ತಾರೆ.

'ನಿಚ್ಚಳಾಗಲಿಬೇಕು ತಿಳಿದು ತಾನು । ನಿಚ್ಚ ಮಾಡುವ ದೋಷರಾಸಿಗಳಳಿದು'

ಎಂದು ಹೇಳಿ,

'ಪುಣ್ಯವೆಂಬುದು ಜೇರಿಲ್ಲ, ನಾನಾರಣ್ಯಚರಿಸಿದರು ದೊರಕುವುದಲ್ಲ ।
ಮನ್ಯು ಬಿಡದೆ ಮತ್ತೊಂದಿಲ್ಲ ನಿರುತ, ಅನ್ಯರಾಸೆಯು ಬಿಡದೆ ಗತಿಗವಸಲ್ಲ ॥ [61]

ಎಂದೆನ್ನುತ್ತಾರೆ. 'ಜ್ಞಾನವಿಲ್ಲದೆ ಮೋಕ್ಷ ಸಿಗದು' ಎಂಬುದನ್ನು ದಾಸರು ಹೀಗೆ ಹಾಡಿದ್ದಾರೆ.

ಏನಾದರೇನು ಮೋಕ್ಷವಿಲ್ಲ, ಜ್ಞಾನವಿಲ್ಲದೆ ॥
ವೇದ ಓದಿದರೇನು ಶಾಸ್ತ್ರನೋದಿದರೇನು । ಕಾದಿಕಾದಾಡಿ ಗೆದ್ದರೇನು, ಜ್ಞಾನವಿಲ್ಲದೆ ॥
ಕಾಶಿಗೆ ಹೋದರೇನು ಕಾನನ ಸೇರಿದರೇನು । ಕಾಶಿ ಪೀತಾಂಬರ ಉಟ್ಟರೇನು, ಜ್ಞಾನವಿಲ್ಲದೆ ॥
ಜಪತಪಮಾಡಲೇನು, ಜಾಣತನ ಮೆರೆದರೇನು । ವಿಜಯವಿಠ್ಠಲನ್ನ ಸಾರಿದರೇನು, ಜ್ಞಾನವಿಲ್ಲದೆ ॥ [62]

ದಾಸರ ಉಪದೇಶ ಸರಣಿ ನಿರ್ದುಷ್ಟವಾಗಿದೆ, ವಿಚಾರಪೂರಿತವಾಗಿದೆ. ಜೀವನದ-ಸಮಾಜದ ಸಮಸ್ಯೆಗಳನ್ನೆತ್ತಿ ಅವುಗಳಿಗೆ ಕೊಡುವ ಪರಿಹಾರಗಳು ಸಮಂಜಸವಾಗಿವೆ. ತಮ್ಮ ಜೀವನದಲ್ಲಿ ಕಂಡುದನ್ನು ಕಂಡಂತೆ ಹೇಳುವ ದಿಟ್ಟಮನೋಭಾವವನ್ನು ಅವರಲ್ಲಿ ಕಾಣುತ್ತೇವೆ. ಸಮಾಜದ ಟೀಕೆಯೊಂದನ್ನೇ ಮಾಡದೆ, ತಪ್ಪುಗಳನ್ನು ತಿದ್ದಿಕೊಳ್ಳುವ ಮಾರ್ಗವನ್ನು ಸೂಚಿಸಿದ್ದಾರೆ. ಅವರ ಬೋಧನೆಗಳು ಉತ್ಕೃಷ್ಟವಾಗಿವೆ.

'ಮಾನವನು ಅಸ್ವತಂತ್ರ, ಸೂತ್ರಧಾರ ಬೇರೊಬ್ಬನಿದ್ದಾನೆ' ಎಂಬುದನ್ನು ದಾಸರು ಹೇಳುತ್ತಾರೆ—

ಹರಿಮಾಡ್ದ ಮರ್ಯಾದೆ ಅನುಭವಿಸಲೀಬೇಕು । ಸರಸಿಜ ಭವಾದ್ಯರಿಗೆ ಬಿಡದು ॥
ವರಕಲ್ಪಕಲ್ಪದಲಿ ಮೀರಿದವರುಂಟೆ ನಿಂದಿರದಾವ ಜನುಮವಾಗೆ ಪ್ರಾಣಿ ॥ [63]

---

[59] ಶ್ರೀ ವಿಜಯದಾಸರ ಕೀರ್ತನೆಗಳು. ಪುಟ ೫೬. (ಬೆಂಗಳೂರು ಪ್ರತಿ)
[60] ,, ಪುಟ ೧೧೩. ,,
[61] ,, ಪುಟ ೧೨೦. ,,
[62] ,, ಪುಟ ೧೭. ,,
[63] ,, ಪುಟ ೧೯೨. ,,

ಬ್ರಹ್ಮ, ವಾಯು, ಈಶ್ವರ, ಇಂದ್ರ, ಮನ್ಮಥ, ಸೂರ್ಯಚಂದ್ರರು, ಅಗ್ನಿ, ಪರೀಕ್ಷಿತ ಮೊದಲಾದವರ ಉದಾಹರಣೆಯನ್ನಿತ್ತು—

ಭಗವತ್ಸ್ವತಂತ್ರ ತಿಳಿಯದೆ ಮರುಳಾಗಿ ಜಗದೊಳಗೆ ಚರಿಸದಿರೊ ಮಾನವ ।
ಅಘದೂರನಾಗೊ ನಾನಾಬಗೆಯಿಂದ ಅನ್ಯತರ ಚಿಂತೆಗಳೆಲ್ಲ ಬಿಟ್ಟು ಪ್ರಾಣಿ ॥[63]

ಎಂದು ಸೂಚಿಸುತ್ತಾರೆ.

ವಿಜಯದಾಸರ ಕೃತಿಗಳು ಸಮಾಜವನ್ನು ವಿಮರ್ಶಿಸುವ ಅನೇಕ ಪದ, ಸುಳಾದಿಗಳನ್ನು ಒಳಗೊಂಡಿವೆ. ಅವು ಅಮೂಲ್ಯವಾಗಿವೆ. ಅವುಗಳಲ್ಲಿ "ಹೊಲೆಯ ಮತ್ತು ಹೊಲತಿ ಸುಳಾದಿಗಳು" ದಾಸರ ಸಮಾಜ ವಿಮರ್ಶಾ ದೃಷ್ಟಿಯನ್ನು ತೋರಿಸುತ್ತವೆ.

ಹೊಲೆಯನಾವನೊ ಈ ಕಲಿಯುಗದೊಳಗೆ । ನಿಶ್ಚಲವಾಗಿ ತಿಳಿವುದು ಸುಲಭಮಾನವರು ।
.................................................................
ಒಳಗೆ ಬರಲು ಬಿಟ್ಟು ಒಳಗೆ ಉಂಬುವ ಹೊಲೆಯ । ಕುಲಗೇಡಿಯಾಗಿ ವಂಶಾವಳಿಯ ಕೆಡಿಸುವ ಹೊಲೆಯ ।
ಮಲಗಿದ್ದವರ ಮೋಸಗೊಳಿಸಿ ಮನೆಯ ಬದುಕ ಸೆಳೆದುಕೊಂಡೊಯ್ವ ಖಳ ಎಂದಿಗೂ ಹೊಲೆಯ ।
ಸತಿಪತಿಗೆ ಭೇದವನಿಕ್ಕುವನೇ ಹೊಲೆಯ ।...ಪಶು ಶಿಶುಗಳ ಒದ್ದು ನೂಕುವನೇ ಹೊಲೆಯ ।
.................................................................
ಪಿತ ಮಾತಾ ಗುರುಗಳ ಬೈಯುವನೇ ಹೊಲೆಯ । ಹಿತಮಾಡಿದವರಿಗೆ ಪ್ರತಿಕೂಲನು ಹೊಲೆಯ ॥
.................................
ಹಸಿದು ಬಂದವರನ್ನು ಕಳುಹುವನೇ ಹೊಲೆಯ........

ಹೀಗೆ ಸುಮಾರು ೬೯ ಸಾಲುಗಳ 'ಹೊಲೆಯ ಸುಳಾದಿ' ಇದೆ. 'ಹೊಲತಿ ಸುಳಾದಿ'ಯೂ ಇದೇ ಬಗೆಯಾಗಿದೆ.

.................................................................
ಮಕ್ಕಳ ಬಲುಮೆಯಲಿ ಗಂಡನ ಪಾದದಲಿ ಭಕ್ತಿಯ ಮಾಡದಲೆ ಇಪ್ಪವಳೇ ಹೊಲತಿ ।
ರೊಕ್ಕ ಕದ್ದುಕೊಟ್ಟು ವ್ಯಾಪಾರವ ಮಾಡಿ ನಿಕ್ಕರುಣಿಯಾಗಿ ತಿರುಗುವಳೇ ಹೊಲತಿ ।
ನಕ್ಕು ನಾಚಿಕೆಗೆಟ್ಟು ಕಂಡಲ್ಲಿ ಚರಿಸಿ ಕಕ್ಕಸಮನದಲ್ಲಿ ಇಪ್ಪವಳೇ ಹೊಲತಿ ।
.................................................................
ಮದ್ದಿಕ್ಕಿ ಜನರನ್ನು ಕೆಡಿಸುವಳೇ ಹೊಲತಿ । ಇದ್ದದ್ದು ಇಲ್ಲವೆಂದಾಡುವಳೇ ಹೊಲತಿ ।
ಶುದ್ಧಿಗೈಯದೆ ಪಾಕ ಕೆಡಿಸುವಳೇ ಹೊಲತಿ । ಸುದ್ದಿಗೆ ಕಿವಿಗೊಡುತು ಪೋಗುವಳೇ ಹೊಲತಿ ॥
.................................................................
.................................................................[64]

ಉತ್ತಮ ಜಾತಿಯವರೆಂದೆನಿಸಿಕೊಳ್ಳುವ ಎಲ್ಲರೂ ತಮ್ಮಲ್ಲಿ ವಿಚಾರಿಸಿಕೊಂಡರೆ ದಾಸರು ಹೇಳುವ 'ಹೊಲೆಯ', 'ಹೊಲತಿ'ಯರ ಲಕ್ಷಣಗಳಲ್ಲಿ ಕೆಲವಾದರೂ ಕಂಡುಬಂದೀತು. ಉತ್ತಮ ವರ್ಗದವರೆಂದುಕೊಂಡು ಅಧಮ ಕಾರ್ಯಗಳನ್ನಾಚರಿಸುತ್ತಿರುವ ಇಂದಿನ ಸಮಾಜದ ಜನರು ದಾಸರ ಈ ಸುಳಾದಿಗಳನ್ನು ಅಗತ್ಯ ಗಮನಿಸಬೇಕು.

ವಿಜಯದಾಸರು, ಪುರಂದರದಾಸರು, ಮಧ್ವಾಚಾರ್ಯರು, ರಾಘವೇಂದ್ರ ಸ್ವಾಮಿಗಳು, ವ್ಯಾಸರಾಯರು ಇವರನ್ನು ಸ್ತುತಿಸುವ, ಅವರ ವಿಚಾರ ವರ್ಣಿಸುವ ಅನೇಕ ಕೀರ್ತನೆ

[63] ಶ್ರೀ ವಿಜಯದಾಸರ ಕೃತಿಗಳು. ಪುಟ ೧೯೩. (ಬೆಂಗಳೂರು ಪ್ರತಿ)
[64] ಕರ್ನಾಟಕ ಭಕ್ತವಿಜಯ.

ಗಳನ್ನು ಹಾಡಿದ್ದಾರೆ. "ಎಂತು ವರ್ಣಿಸಲಮ್ಮಮ್ಮ ಈ ಗುರುಗಳ", "ಮಾಧ್ವಮುನಿಯೇ ಎನ್ನ ಹೃತ್ಕುಮುದ ಚಂದ್ರ", "ಶ್ರೀಶ ವೇದವ್ಯಾಸನಾದನು", "ನೋಡಿದೆ ಗುರುಗಳ ನೋಡಿದೆ", ಮೊದಲಾದ ಕೀರ್ತನೆಗಳು ಈ ಬಗೆಯವು. "ಈ ಸೊಬಗು ಇನ್ನಾವ ಕ್ಷೇತ್ರದಲಿ ಕಾಣೆ, ವಾಸುದೇವ ಮುನಿಯಿಂದ ಕಾರಣವು ಇಲ್ಲುಂಟು", ಎಂಬ ಕೀರ್ತನೆಯಲ್ಲಿ ಕ್ಷೇತ್ರವರ್ಣನೆಯೂ, 'ಆವ ಜನುಮದ ಪಾಪ ಒದಗಿತೋ ಎನಗಿಂದು ದೇವಗಂಗೆಯ ನೋಡಿದೆ' ಎಂಬಲ್ಲಿ ಗಂಗಾ ದೇವಿಯ ದರ್ಶನವಾದಾಗ ಭಾವಪೂರಿತವಾಗಿ ಹಾಡಿದ ಆತ್ಮಪರೀಕ್ಷಾ ಭಾವವೂ ಕಂಡು ಬರುತ್ತವೆ.

ಹಬ್ಬದ ವಿಚಾರವಾಗಿ ವಿಜಯದಾಸರು ಹಾಡಿರುವ 'ಹಬ್ಬ ಸುಳಾದಿ', ಹಬ್ಬವೆಂದರೆ ಏನು, ಹಬ್ಬ ಹೇಗಿರಬೇಕು, ಹಬ್ಬವನ್ನು ಹೇಗೆ ಆಚರಿಸಬೇಕು, ಎಂಬುದನ್ನು ವಿವರಿಸುತ್ತದೆ.

ಹಬ್ಬಗಳಿವೆ ಕೇಳಿ ಊರ್ವಿಯೊಳಗೆ ವೈ
ದರ್ಭಿರಮಣ ಕರುಣಾಬ್ಧಿಯೊಲಿದ ಬಳಿಕ
ಒಬ್ಬರ ಕಾಡಿಬೇಡಿ ಹಬ್ಬಮಾಡಿದರಿಂದ
ಉಬ್ಬು ತೀರದು ಕಣೋ ಬುದ್ಬುದ ಜನರಿಗೆ ‖

ಲಭ್ಯವಾದ ಧಾನ್ಯ ರುಬ್ಬಿ ಗಂಜಿಯ ಕಾಸಿ
ಒಬ್ಬ ಸತಿ ಪತಿ ಇಬ್ಬರಾನಂದದಿಂದ
ಹೆಬ್ಬೆಟ್ಟಿನಿಂದ ಸವಿದು ಸಭ್ಯರಾಗಿಪ್ಪುದೆ
ಹಬ್ಬವು ಬಲುಹಬ್ಬ ಹಬ್ಬವು ಕಾಣಿರೊ ‖

ನಿರ್ಭಯವಾದ ರತ್ನಗರ್ಭದಲ್ಲಿ ಕುಟೀರ
ಗುಬ್ಬಿಯ ಗೂಡಿನಷ್ಟು ಗರ್ಭವಾಸಮಾಡಿ
ನಿರ್ಬಂಧವಿಲ್ಲದೆ ಲಭ್ಯವಾಗಿಪ್ಪವೆ
ಹಬ್ಬವು ಬಲುಹಬ್ಬ ಹಬ್ಬವು ಕಾಣಿರೊ ‖

ಕರ್ಬೂರನಂತೆ ತಿಂದು ಕೊಬ್ಬಿ ತಿರುಗುವಂಗೆ
ದುರ್ಭಾಗ್ಯವಿಲ್ಲದೆ ಹಬ್ಬವೆನಿಸುವದೆ,
ಕರ್ಬುಬಿಲ್ಲನಯ್ಯ ವಿಜಯವಿಠಲನಿಗೆ
ಪರ್ಬ ಎರಿಸಿದರೆ ಸರ್ಬರ ಕರಪಿಡಿವ ‖

..............................................

ಕಾಮಕ್ರೋಧಂಗಳ ಬಿಡುವುದೆ ಬಲು ಹಬ್ಬ |

..............................................

ಬಂದ ಅತಿಥಿಗಳ ಪೂಜಿಸುವುದೆ ಹಬ್ಬ

..............................................

ಋಣರೂಪವಾಗದ ಸಂಸಾರವೆ ಹಬ್ಬ.......[೬೬]

ಹೀಗೆ ಈ ಸುಳಾದಿ ೫೯ ಸಾಲುಗಳಷ್ಟಿದೆ. ಸಾಲ ಮಾಡಿ, ಮಾಲು ತಂದು ಮನಸ್ಸಿಗೆ ತೃಪ್ತಿಯಿಲ್ಲದ ಹಬ್ಬದೂಟ ಹಬ್ಬವಲ್ಲ, ಅಲ್ಪತೃಪ್ತಿಯಿಂದ ಇದ್ದುದನ್ನೇ ಸಂತೋಷದಿಂದ ಬೇರೆಯವರಿಗೂ ನೀಡಿ ತಾನು ಉಣ್ಣುವುದು ಹಬ್ಬವೆನಿಸುತ್ತದೆ. ನಿತ್ಯವೂ ನಮ್ಮ ಆಚರಣೆಗಳನ್ನು ನಿರೀಕ್ಷಿಸಿ ಕೆಟ್ಟದ್ದನ್ನು ಕಳೆದು, ಒಳ್ಳೆಯದನ್ನು ಉಳಿಸಿಕೊಳ್ಳುವುದೂ ಒಂದು ಬಗೆಯ ಹಬ್ಬವೇ ಎಂದು ವಿಜಯದಾಸರ ಮತ.

---

[೬೬] ಕರ್ಣಾಟಕ ಭಕ್ತವಿಜಯ

**೫. ವಿಜಯದಾಸರ ಶೈಲಿ :—**

ವಿಜಯದಾಸರು ದೈವೀ ವರಪ್ರಸಾದದಿಂದ ದಾಸರಾದವರು. ಅವರ ಬಾಲ್ಯಶಿಕ್ಷಣ, ಶಾಸ್ತ್ರಜ್ಞಾನ, ಪಾಂಡಿತ್ಯ ಬಹುಕಡಿಮೆಯದಾದರೂ, ಭಕ್ತಿಯಿಂದ, ಅನುಭವದಿಂದ ಪಕ್ವವಾದ ಅವರ ಮನೋಧರ್ಮ, ಅವರ ಎಲ್ಲ ಕೃತಿಗಳಲ್ಲೂ ಅಭಿವ್ಯಕ್ತಿಯನ್ನು ಪಡೆದಿವೆ. ಭಕ್ತಿ, ಜ್ಞಾನ ಅನುಭಾವ—ಇವುಗಳನ್ನು ಪ್ರಕಟಿಸಿ, ಸಾಮಾನ್ಯ ಜನರ ಹೃದಯಕ್ಕೂ ಮುಟ್ಟುವಂತೆ ಮಾಡುವ ಸಹಜ ಸಿದ್ಧಿ, ಅವರ ಕೀರ್ತನೆಗಳಲ್ಲಿ, ಸುಳಾದಿಗಳಲ್ಲಿ ಕಾಣಬಹುದಾಗಿದೆ. ದಾಸ ಪರಂಪರೆಯಿಂದ ತೀರ ಭಿನ್ನವಲ್ಲವಾದರೂ, ತಮ್ಮದೇ ಆದ ವಿಶಿಷ್ಟ ಶೈಲಿಯೊಂದನ್ನು ವಿಜಯ ದಾಸರು ಸಾಧಿಸಿದ್ದಾರೆ ಎಂಬ ಮಾತು ನಿಜವಾದುದು.

"....ಕವಿಯನ್ನು ಛಾಯೆಯಂತೆ ಅವನ ಶೈಲಿ ಹಿಂಬಾಲಿಸುತ್ತದೆ, ಅವನ ಭಾವ-ಭಾವನೆಗಳು ಅವನ ಸೊತ್ತು, ಅವನ ಶೈಲಿಯೂ ಅವನ ಸೊತ್ತು"—ಎಂದು ಆಂಗ್ಲ ಸಾಹಿತ್ಯ ವಿಮರ್ಶಕನಾದ ನ್ಯೂಮನ್ನನ ಮಾತೊಂದಿದೆ. ಈ ಮಾತು ವಿಜಯದಾಸರ ಶೈಲಿ ಬಗೆಗೂ ಅನ್ವಯಿಸಬಹುದಾದುದು. ವೈಷ್ಣವ ಭಕ್ತಿತತ್ವಗಳ ಪ್ರಚಾರ, ದಾಸಪರಂಪರೆಯ ಪ್ರಸಾರ—ಇವುಗಳ ಚೌಕಟ್ಟಿನಲ್ಲಿ ಹರಿದಾಸರ ಕೃತಿರಚನೆಯಾಗಬೇಕಾಗಿದ್ದುದರಿಂದ, ಸ್ವತಂತ್ರ ಕವಿಗಿರ ಬೇಕಾದಷ್ಟು ಸ್ವಾತಂತ್ರ್ಯ ಹರಿದಾಸರಿಗೆ ಸಿಗಲು ಸಾಧ್ಯವಿರಲಿಲ್ಲ. ಇದರ ಪರಿಣಾಮ ವಿಜಯ ದಾಸರ ಕೃತಿಗಳ ಮೇಲೆ, ಆ ಕೃತಿಗಳಲ್ಲಿ ಅವರು ಬಳಸಿಕೊಂಡ ಶೈಲಿಯ ಮೇಲೂ ಕಾಣಿಸಿ ಕೊಳ್ಳದೇ ಇಲ್ಲ. ಆದರೂ ಕೂಡ ಅವರ ಕೀರ್ತನೆಗಳಲ್ಲಿ ಅಲ್ಲಲ್ಲಿ ಮಿಂಚಿ, ನಮ್ಮನ್ನು ಮುಗ್ಧ ಗೊಳಿಸುವ ಸಾಹಿತ್ಯ ಸೌಂದರ್ಯ, ಉಪಮಾ ಔಚಿತ್ಯ, ಭಾವಮಾಧುರ್ಯ—ಅವರ ಶೈಲಿ ಯನ್ನು ದಾಸಪಂಥದ ಇತರರಿಂದ ಪ್ರತ್ಯೇಕವಾಗಿ ಗುರುತಿಸಲು ಸಹಕಾರಿಯಾಗಿದೆ.

ವಸ್ತುನಿರೂಪಣೆ ಮತ್ತು ವಸ್ತುವಿನ ಆಯ್ಕೆಯ ದೃಷ್ಟಿಯಿಂದ ವಿಜಯದಾಸರ ಕೃತಿ ಗಳನ್ನು ಅವಲೋಕಿಸಿದರೆ, ಅಲ್ಲಿ ಬಹುಮಟ್ಟಿಗೆ ಸಂಪ್ರದಾಯಶರಣತೆ ಕಾಣಬಹುದಾದರೂ ಸಮಕಾಲೀನ ಜೀವನವನ್ನು ಅವರು ಕುರುಡುನಂಬಿಕೆಯ ಕನ್ನಡಕದಿಂದ ನೋಡುತ್ತಿರಲಿಲ್ಲ ವೆಂದು ಕೆಲವೊಮ್ಮೆ ಎನ್ನಿಸದಿರದು. ಸಮಾಜದ ಆಗುಹೋಗುಗಳನ್ನು ವಿಮರ್ಶಾದೃಷ್ಟಿ ಯಿಂದ ನೋಡಿ, ತಮ್ಮ ಅನುಭವವನ್ನು ಜನರಿಗೆ ಹೃದ್ಯವಾಗಿ ಹಂಚುವ, ಅಗತ್ಯಬಿದ್ದರೆ ಜನರನ್ನು ಎಚ್ಚರಿಸುವ ದಿಟ್ಟಶೈಲಿ ಅವರಿಗೆ ತಕ್ಕಮಟ್ಟಿಗೆ ಸಿದ್ಧಿಸಿತ್ತು.

ಬೂದಿ ಮುಚ್ಚಿದ ಕೆಂಡದಂತಿಪ್ಪರು ‖ ಪ ‖
ಈ ಧರೆಯ ಮೇಲೆ ಶ್ರೀ ಹರಿಭಕ್ತ ಜನರು ‖ಅ|ಪ‖
..................................................
..................................................
ಡಂಭಕತನದಿಂದ ಗೊಂಬೆ ನೆರಹಿಕೊಂಡು
ಡೊಂಬಕುಣಿತದಂತೆ ಕುಣಿದಾಡದರು,
ಹಂಬಲಗಳ ಬಿಟ್ಟು ಹರುಷವುಳ್ಳವರಾಗಿ
ಬಿಂಬಮೂರುತಿಯನ್ನು ಕೊಂಡಾಡುತಿಹರು ‖ [೬೮]

ಎನ್ನುವಲ್ಲಿ ಸಮಾಜದಲ್ಲಿನ ಕಪಟಿಗಳ ಹಾಗೂ ಪ್ರಾಮಾಣಿಕರ ಎರಡು ವಿರುದ್ಧ ಚಿತ್ರಗಳನ್ನು ನೀಡಿ, ಪ್ರಾಮಾಣಿಕರ ಬಗೆಗೆ ಕೇಳುವವರ ಅನುಕಂಪ, ಭಕ್ತಿಗಳು ಮೂಡುವಂತೆ ಮಾಡಬಲ್ಲರು.

---

[೬೮] ಹರಿಭಕ್ತಸುಧೆ. ಪುಟ ೨೦. ರಂ. ರಾ. ದಿವಾಕರ.

ಇಲ್ಲಿ ಉಪಯೋಗಿಸಲ್ಪಟ್ಟ 'ಡಂಭಕತನ', 'ಡೊಂಬಕುಣಿತ' ಎಂಬ ಪದಗಳು ಬರಿಯ ಪ್ರಾಸಕ್ಕಾಗಿ ಮಾತ್ರ ಬಂದಿಲ್ಲ. ಎಲ್ಲ ಕಾಲಗಳಲ್ಲೂ ಸಮಾಜದಲ್ಲಿ ಧರ್ಮ, ದೇವರುಗಳ ಹೆಸರಿನಿಂದ ಉದರಂಭರಣ ಮಾಡಿಕೊಳ್ಳುತ್ತಿರುವ ಸಮಾಜ ಪೋಷಕರ ಬಗೆಗೆ ತಿರಸ್ಕಾರ ಮೂಡಿಸುತ್ತಿವೆ ಈ ಮಾತುಗಳು! ಪದಗಳ ಔಚಿತ್ಯಪೂರ್ಣಪ್ರಯೋಗ ಒಳ್ಳೆಯ ಶೈಲಿಯ ಒಂದು ಪ್ರಮುಖ ಲಕ್ಷಣವಾಗಿದೆ.

ಪೌರಾಣಿಕ ವಸ್ತುಗಳನ್ನು ಆರಿಸಿಕೊಂಡು ಎಲ್ಲ ದಾಸರಂತೆಯೇ ಹಲವಾರು ಕೀರ್ತನೆಗಳನ್ನೂ, ಸುಳಾದಿಗಳನ್ನೂ ರಚಿಸಿದ್ದಾರೆ ಶ್ರೀ ವಿಜಯದಾಸರು. ಕೃಷ್ಣನ ಕೊಳಲಗಾನವನ್ನು ವರ್ಣಿಸುವ ಅವರ ಕೀರ್ತನೆ ಸುಕುಮಾರವಾದ ಶೈಲಿಯ ಒಂದು ನಿದರ್ಶನ. ಕೊಳಲನ್ನು ಕೈಯಲ್ಲಿ ಹಿಡಿದು, ಬುವಿಬಾನುಗಳು ಅನುರಣಿಸುವಂತೆ ಗಾನಗೈಯುತ್ತಿರುವ ಕೃಷ್ಣನ ಚಿತ್ರ ವಿಜಯದಾಸರ ಈ ಹಾಡಿನಲ್ಲಿ ಚಿರಂತನವಾಗಿ ಕಡೆಯಲ್ಪಟ್ಟಿದೆ.

ಬೆರಳಸಂದಿಲಿ ಮುರಳಿಯ ಪಿಡಿದು, ಮುರಾರಿ ತಾನು
ಹರುಷದಿಂದಲಿ ಸ್ವರವ ನುಡಿದು, ವಾರಿಜನೇತ್ರ
ಅರಳು ಮಲ್ಲಿಗೆ ಸರಗಳ ಮುಡಿದು
ಕೊರಳ ಪದಕ ಹಾರ ಕೌಸ್ತುಭ ಶೋಭಿತ
ಮರಳು ಮಾಡುತ ಮಡದಿಯರೆಲ್ಲರ— .. ಶ್ರೀಶಾ ಕೊಳಲನೂದುತ ಬಂದಾ ...[67]

ಹೀಗೆ ವಿವರ ವಿವರವಾಗಿ ನಾದಲೋಲ ಕೃಷ್ಣನ ಚಿತ್ರವನ್ನು ಕೊಡುತ್ತಾರೆ. ಕೊಳಲಿನ ಇಂಪಾದ ನಾದಕ್ಕೆ ಸೂಕ್ತವಾದಂಥಾ ರಾಗವನ್ನು ಬಳಸಿಕೊಂಡು ಉಚಿತ ಪದಗಳನ್ನು ಅಳವಡಿಸಿಕೊಂಡು ಈ ಕೀರ್ತನೆಯನ್ನು ರಚಿಸಿ, ವಿಜಯದಾಸರು ತಮ್ಮ ಉತ್ತಮ ಶೈಲಿಯ ಪ್ರಯೋಗವೊಂದನ್ನು ನಮಗೆ ನೀಡಿದ್ದಾರೆ.

ಭಾರತೀದೇವಿಯನ್ನು ಕುರಿತಾದ ಒಂದು ಸ್ತೋತ್ರ....

ಶ್ರೀ ಮಾರುತನ ಮಾನಿನಿ, ಭಾರತೀದೇವಿ
ಆ ಮಹಾ ಭಕುತಿಗಭಿಮಾನಿ [68]

ಎಂದು ಪ್ರಾರಂಭವಾಗುತ್ತದೆ.

ಈ ಕೃತಿಯಲ್ಲಿ ಪದ, ತಾಳ, ಲಯಗಳ ತ್ರಿವೇಣೀ ಸಂಗಮವಾಗಿ ನರ್ತನಕ್ಕೆ ಸುಂದರ ಹಿನ್ನೆಲೆ ಗೀತೆಯಾಗಲು ಯೋಗ್ಯವಾದ ಈ ಸಾಲುಗಳನ್ನು ಗಮನಿಸೋಣ—

ಕಡಗ ಕಂಕಣ ಮಣಿದೋರೆ—ದೋಷವಿದೂರೆ
ಝುಡಿತದುಂಗುರೆ ಶೃಂಗಾರೆ
ಮುಡಿದ ಮಲ್ಲಿಗೆ ವಿಸ್ತಾರೆ—ಕಂಚುಕಧರೆ
ಉಡಿಗೆ ಶ್ವೇತಾಂಬರೆ ನೀರೆ
ಬಡನಡು ಕಿಂಕಿಣಿ ನಿಡುತೋಳ್ಕದಳಿಯ
ತೊಡೆಪದದಂದಿಗೆ ಉಡುಗೆಯಿಂದೊಪ್ಪುತ
ಪೊಡವಿಗಳೊಡೆಯ ನಮ್ಮ ವಿಜಯವಿಠ್ಠಲನ್ನ
ಅಡಿಗಳರ್ಚಿಪುದಕೆ ಧೃಢಮನಕೊಡುವಳೆ ‖ [69]

---

[67] ಶ್ರೀ ವಿಜಯದಾಸರ ಕೃತಿಗಳು. ಪುಟ ೧೧೭. (ಬೆಂಗಳೂರು ಪ್ರತಿ)

[68] ,, ಪುಟ ೯೧.

ನಾದ ಮತ್ತು ಲಯ [Rhythm] ಗಳ ಸಂಗಮದಿಂದ ಎಷ್ಟು ದಿವ್ಯ ಪರಿಣಾಮ ವನ್ನುಂಟುಮಾಡಬಹುದೆಂಬುದನ್ನು ವಿಜಯದಾಸರು ಅನುಭವಪೂರ್ವಕವಾಗಿ ಅರಿತಿದ್ದಿರ ಬೇಕೆಂದು ಈ ಸಾಲುಗಳಲ್ಲಿ ಸ್ಪಷ್ಟವಾಗುತ್ತದೆ.

ಶುದ್ಧ ಕನ್ನಡ ಶಬ್ದಗಳ ಸಂಯೋಜನೆಯಿದ್ದರೂ ವಿಜಯದಾಸರ ಶೈಲಿಯಲ್ಲಿ ಒಂದು ಬಗೆಯ ಬಿಗಿಯಿರುತ್ತದೆ. ಶಬ್ದ ಶಬ್ದಗಳ ಉಚಿತ ಜೋಡಣೆ, ಆದಿ ಅಂತ್ಯ ಪ್ರಾಸಗಳ ನಿಯತತೆ, ಉಚಿತ ಉಪಮೆಗಳ ಸಾಲುಗಳಿಂದ ಸಾಮಾನ್ಯ ಜನರ ಮನಸ್ಸಿಗೆ ಮುಟ್ಟುವಂತೆ ತಮ್ಮ ಅಭಿಪ್ರಾಯವನ್ನು ಕೀರ್ತನೆ, ಸುಳಾದಿ, ಉಗಾಭೋಗಗಳ ಮೂಲಕ ವ್ಯಕ್ತಪಡಿಸುವ ಸಾಮರ್ಥ್ಯ ದಾಸರಿಗಿದೆ—ಎಂಬುದನ್ನು ಮುಂದಿನ ಉದಾಹರಣೆಗಳಿಂದ ಗಮನಿಸಬಹುದು.

ಬಿದ್ದ ಕಾಳಿಗೆ ಕಾಳು ಕೂಡಿಹಾಕುವುದೆಲ್ಲ, ಹಾರಿಹೋಗುವ ಹೊಟ್ಟು,
ಇದ್ದಾಗ ದಾನಧರ್ಮಂಗಳ ಮಾಡೋದೆ ಕೈವಲ್ಯಕೆ ಮೆಟ್ಟು ।
ಹೊದ್ದಿರುವರ ಕಂಡಾಸೆಯಪಟ್ಟರೆ ಹೋಗುವೆ ನೀ ಕೆಟ್ಟು,
ಬುದ್ಧಿಹೀನರಿಗೆ ಪೇಳದಿರೆಲೋ ತತ್ತ್ವಸಾರ ಸುಂದರ ಗುಟ್ಟು ॥ [69]

ದಿನನಿತ್ಯದ ಬಳಕೆಯ ಮಾತಿನಲ್ಲಿ ಹೇಳಬೇಕಾದುದನ್ನು ಸರಳವಾಗಿ, ಸಾಮತಿ ಯೊಡನೆ ಹೇಳುವ ಈ ಮಾತುಗಳು ಸಾರ್ಥಕವಾಗಿವೆ!

ಮನಸ್ಸಿನ ನೈಚ್ಯಾನುಸಂಧಾನವನ್ನು ಗಮನಿಸಿ, ಹಾಡಿದ ಒಂದು ಹಾಡಿನ ಕೆಲವು ಸಾಲುಗಳು:

ಪಗಡೆ ಚದುರಂಗ ಕವಡೆಯನಾಡಕರೆದರೆ
ನಿಗುರುವುವು ಕರ್ಣಗಳು ಮೊಚ್ಚೆಯಂತೆ
ಜಗದೀಶನ ದಿನದಿ ಜಾಗರಕೆ ಕರೆದರೆ
ಮುಗಿಲ್ಹರಿದು ಬಿದ್ದಂತೆ ಧರೆಗಿಳಿವೆ ಮನವೆ ॥

ವಾಸುದೇವನ ಪೂಜೆಯೊಮ್ಮೆ ಮಾಡೆಂದರೆ
ಬೇಸತ್ತು ತಲೆಯ ಚಿಟ್ಟಕ್ಕಿ ಕುಳಿತೆ
ಆ ಸಮಯದೊಳಗೊಬ್ಬ ಕಾಸುಕೊಟ್ಟೇನೆನಲು
ದಾಸಿಮಗನಂತೆ ಬೆನ್ನಟ್ಟಿಪೋಪೆ ಮನವೆ ॥ [70]

ಇಲ್ಲಿ "ನಿಗುರುವುವು ಕರ್ಣಗಳು ಮೊಚ್ಚೆಯಂತೆ" "ಮುಗಿಲ್ಹರಿದು ಬಿದ್ದಂತೆ" "ತಲೆಯ ಚಿಟ್ಟಕ್ಕಿ ಕುಳಿತೆ"....ಎಂಬಲ್ಲಿ ಸಾಮಾನ್ಯ ಜನರ ಭಾಷೆಯನ್ನು, ನಿತ್ಯಜೀವನದ ನುಡಿಗಟ್ಟನ್ನು ಸಮರ್ಥವಾಗಿ ಬಳಸಿಕೊಂಡು ಅರ್ಥ-ಸುಂದರವಾಗಿ ಮಾಡುವ ಕಲೆಯನ್ನು ವಿಜಯದಾಸರು ಕಂಡುಕೊಂಡಿದ್ದಾರೆ.

ಸಂಸ್ಕೃತ ಭೂಯಿಷ್ಠವಾಗಿಯೂ ಪದ್ಯಗಳನ್ನು ಬರೆಯಬಲ್ಲರು ವಿಜಯದಾಸರು. ಶ್ರೀ ಪುರಂದರದಾಸರ ಚರಿತ್ರೆಯನ್ನು ವಾರ್ಧಕ ಷಟ್ಪದಿಯಲ್ಲಿ ಬರೆದಿದ್ದಾರೆ. ಅದರಲ್ಲಿನ ಕೆಲವು ಸಾಲುಗಳು ಇಂತಿವೆ........

ದುರ್ಜನರ ಮಸ್ತಕಾದ್ರಿಗೆ ವಜ್ರ ಪ್ರಹರವಿದು
ಸಜ್ಜನರ ದಿವ್ಯ ಚರಣಾಬ್ಜಕ್ಕೆ ಭೃಂಗವಿದು
ನಿರ್ಜರರ ಮೆಚ್ಚು ಮೂರ್ಜಗದೊಳಗೆ ಬಲು ಹೆಚ್ಚು ಲಜ್ಜೆಯನು ತೊರೆದು ನಿತ್ಯ ।

---

[69] ಶ್ರೀ ವಿಜಯದಾಸರ ಕೃತಿಗಳು. ಪುಟ ೭. (ಬೆಂಗಳೂರು ಪ್ರತಿ)
[70] ,, ಪುಟ ೫೯ ,,

ಹೆಜ್ಜೆ ಹೆಜ್ಜೆಗೆ ಬಿಡದೆ ದಾಸರ ಕರುಣವೆಂಬ
ವಜ್ರಕವಚವ ತೊಟ್ಟು ನುಡಿದವನ ನುಡಿ ಸತ್ಯ
ಅರ್ಜುನಾಗ್ರಜ ವಲಿದು ಸಾಗಿಸುವ ಕರುಣದಲಿ ಅಬ್ಜ ಭವನೊಡನೆ ಗತಿಗೆ ‖ [71]

ಆರು ಸಾಲುಗಳ ಈ ಪದ್ಯದಲ್ಲಿ ಸುಮಾರು ೨೫ ಸಂಸ್ಕೃತ ಪದಗಳಿವೆ. ಆದರೂ ಈ ಕೆಳಗಿನ ಉದಾಹರಣೆಯನ್ನು ಗಮನಿಸಿದರೆ ಮೇಲಿನದು ಬಹುಮಟ್ಟಿಗೆ ಸರಳವಾಗಿದೆಯೆಂದೇ ಹೇಳಬಹುದು.

ಮೃಗಲಾಂಛನ ಸನ್ಮೌಳಿ ಶಿವಮಹಾದೇವ
ತ್ರಿಗುಣಾತುಮ ಗಾತುರ ಭಕ್ತ ಸಂಜೀವ
ನಿಗಮ ತುರಗ ಪಾವನ ಮೂಲದಾವಾ
ಮೃಗ ಪ್ರಾಣಿ ಮೃತ್ಯುಂಜಯ ಸುಪ್ರಭಾವಾ ‖ [72]

ಇಲ್ಲಿ ಮಾತ್ರ ಪದಗಳು ಸತ್ತ್ವಹೀನವಾಗಿ, ಅರ್ಥಹೀನವಾಗಿ ಉಪಯೋಗವಾಗಿವೆ. ಪ್ರಾಯಶಃ ದಾಸರ ಪ್ರಾಸಪ್ರಿಯತೆ ಈ ನೀರಸ ಸಾಹಸಕ್ಕೆ ಪ್ರಚೋದನೆಯಾಗಿರಬೇಕು.

ವಿಜಯದಾಸರ ಎಲ್ಲ ಕೃತಿಗಳಲ್ಲಿಯೂ ಆದಿ ಅಂತ್ಯ ಪ್ರಾಸಗಳಿಗೆ ಹೆಚ್ಚಿನ ಗಮನ ಕೊಟ್ಟಿರುವುದನ್ನು ನಾವು ಕಾಣಬಹುದು. ಈ ಮಾತು ದಾಸಪಂಥದ ಎಲ್ಲರ ಕೃತಿಗಳಿಗೂ ಸಾಮಾನ್ಯ ಅನ್ವಯಿಸಬಹುದಾದ ಮಾತು. ಅಷ್ಟೇ ಏಕೆ? ಈ ಪ್ರಾಸದ ನಿಯಮವನ್ನು ಕನ್ನಡದ ಪೂರ್ವ ಕವಿಗಳು ಎಂದೂ ಮೀರಿಲ್ಲ. ದೇಶೀಯ ಕಬ್ಬಗಳಲ್ಲೂ ಪ್ರಾಸವಿದೆ. ರಗಳೆಯಲ್ಲಿ, ಲಾವಣಿಗಳಲ್ಲಿ, ಅಕ್ಕರ ಸಾಂಗತ್ಯಗಳಲ್ಲಿ ಪ್ರಾಸದ ನಿಯಮವಿದೆ. ಪ್ರಾಸದ ನಿಯಮದಿಂದ ಕೆಲವೊಂದು ಅನುಕೂಲಗಳಿವೆ. "ಕವಿತಾಶಕ್ತಿ ಅತಿರೇಕವಾಗಿ ಹರಿಯದಂತೆ ರಚನೆಯಲ್ಲಿ ಒಂದು ಬಿಗಿ ಇರುವುದಕ್ಕೂ, ಪದಗತಿಯಲ್ಲಿ ಸಮತೂಕವಿದ್ದು ಅದರಿಂದ ನಾದಸಾಮರಸ್ಯ ಉಂಟಾಗುವುದಕ್ಕೂ, ಪದ್ಯಬಂಧದಲ್ಲಿ ಬರುವ ಬಿಗಿಯಿಂದ ಪದ್ಯವನ್ನು ಜ್ಞಾಪಕದಲ್ಲಿ ಇಟ್ಟುಕೊಳ್ಳಲು ಅನುಕೂಲವಾಗುವುದಕ್ಕೂ ಈ ಪ್ರಾಸವನ್ನು ಕಾವ್ಯದಲ್ಲಿ ಉಪಯೋಗಿಸಿದರು ಎಂದು ಹೇಳಬಹುದು."[73]

ಈ ದೃಷ್ಟಿಯಿಂದ ಪ್ರಾಸದ ಪ್ರಯೋಜನವನ್ನು ಪಡೆದು ಸಾರ್ಥಕವಾದ ಹಾಡುಗಳನ್ನು ವಿಜಯದಾಸರು–ಹಲವಾರು–ರಚಿಸಿದ್ದಾರೆ.

ಉದಾಹರಣೆಗೆ :—

ಅಹೋರಾತ್ರಿಯಲಿ ನಾನು ಅನುಚರಾಗ್ರಣಿಯಾಗಿ
ಮಹಿಯೊಳಗೆ ಚರಿಸಿದೆನೋ ಮಹದೇವನೆ
ಅಹಿಭೂಷಣನೆ ಎನ್ನವಗುಣಗಳೆಣಿಸದೆಲೆ
ವಿಹಿತ ಧರ್ಮದಿ ಕೊಡು ವಿಷ್ಣು ಭಕುತಿಯ ಸಂಭೋ ‖
—ಕೈಲಾಸವಾಸ ಗೌರೀಶ ಈಶ. [74]

ಎನ್ನುವಲ್ಲಿನ 'ಹ'ಕಾರದ ಆದಿಪ್ರಾಸವು ಹಿತವಾಗಿದೆ. ಹಾಡಿನ ಭಾವಕ್ಕೆ ಈ ಪ್ರಾಸದಿಂದ ಧಕ್ಕೆ ಬರುವ ಬದಲು ಪುಷ್ಟಿ ದೊರೆಯುತ್ತದೆ. ಆದರೆ ವಿಜಯದಾಸರ ಕೃತಿಗಳಲ್ಲಿಯೇ

[71] ಶ್ರೀ ವಿಜಯದಾಸರ ಕೀರ್ತನೆಗಳು. ಪುಟ ೧೨೮. (ಬೆಂಗಳೂರು ಪ್ರತಿ)
[72] ,, ,, ,,
[73] 'ಪ್ರಾಸ' ಎನ್. ಎಸ್. ಸರಸ್ವತಿ. 'ಬಾಗಿನ' ಪುಟ ೧೧೦.
[74] ಶ್ರೀ ವಿಜಯದಾಸರ ಕೃತಿಗಳು. ಪುಟ ೮೩. (ಬೆಂಗಳೂರು ಪ್ರತಿ)

ಪ್ರಾಸದ ನಿಯಮ ತ್ರಾಸದಾಯಕವಾಗಿದ್ದು, ಅರ್ಥಶಿಥಿಲತೆಯನ್ನುಂಟುಮಾಡಿರುವುದನ್ನೂ ಕಾಣಬಹುದಾಗಿದೆ. ಪ್ರಾಸವನ್ನು ಕೈಬಿಡಲಾರದೆ ಅರ್ಥವಿಲ್ಲದ ಪದಗಳನ್ನೂ, ಕ್ಲಿಷ್ಟಪದ ಗಳನ್ನೂ ಜೋಡಿಸಿ, ವಿಚಿತ್ರಭಾವ ವ್ಯಂಜಕವಾಗಬಹುದಾದ ಸಾಲುಗಳು ಅವರ ಕೃತಿಗಳಲ್ಲಿ ಅಲ್ಲಲ್ಲಿ ಕಂಡುಬರುತ್ತವೆ.

ಉದಾಹರಣೆಗೆ:—

ಕರ್ಬೂರನಂತೆ ತಿಂದು ಕೊಬ್ಬಿ ತಿರುಗುವಂಗೆ
ದುರ್ಭಾಗ್ಯವಲ್ಲದೆ ಹಬ್ಬವೆನಿಸುವುದೆ
ಕರ್ಬು ಬಿಲ್ಲಿನಯ್ಯ ವಿಜಯವಿಠಲನಿಗೆ
ದರ್ಭ ಏರಿಸಿದರೆ ಸರ್ಬರ ಕರ ಪಿಡಿವೆ [75]
......... ... . ......... .... ... ...

ಎಂದಿರುವ ಹಬ್ಬ ಸುಳಾದಿಯ ಸಾಲುಗಳಲ್ಲಿನ ಕರ್ಕಶ ಪದಗಳ ಜೋಡಣೆಗೆ, ಅವಶ್ಯಕ ವಿಲ್ಲದಿದ್ದರೂ ಪ್ರಾಸಕ್ಕಾಗಿ ಎಳೆದುತಂದಿರುವ 'ದರ್ಭೆ', 'ಸರ್ಬರ' ಮುಂತಾದ ಪದಪ್ರಯೋಗ ಗಳಿಗೆ ಅವರ ಪ್ರಾಸಪ್ರಿಯತೆಯೇ ಕಾರಣವಾಗಿರಬೇಕು!

ಹಾಗೆಯೇ 'ನರಸಿಂಹ ಸುಳಾದಿ'ಯಲ್ಲಿ ಬರುವ ಈ ಸಾಲುಗಳು—

ಲಟಲಟಲಟಾಲಟಕರಿಸಿ ವನಜಜಾಂಡ
ಕಟಹಪಟಪಟಾ ಪಟತ್ಕುಟದಿ ಬಿಚ್ಚುತಿರಲು
ಪುಟಪುಟಾ ಪುಟನೆಗೆದು ಚೀರಿ ಹಾರುತಪಲ್
ಕಟಕಟಾ ಕಟಕಟ ಕಡಿದು ರೋಷದಿಂದ
ಮಿಟಮಿಟ ಮಿಟಮಿಟನೆ ರಕ್ತಾಕ್ಷಿಯಲಿ ನೋಡಿ
ತಟತ್ಕೋಟಿ ಉದ್ಭಟನೆ ಅರ್ಭಟವಾಗಿ ತೋರಲು
ಕುಟಿಲರಹಿತನ್ಮಕ್ತ ವಿಜಯವಿಠಲ ಶಕ್ತ
ಧಿಟನಿಟಲನೇತ್ರ ಸುರಕಟಕ ಪರಿಪಾಲ [76]

ಪ್ರಾಸಕ್ಕಾಗಿ ದಾಸರು ಪಟ್ಟ ಕಷ್ಟವನ್ನು ತೋರಿಸುವಂತಿದೆ. ಕಂಭ ಸೀಳಿ, ನರಸಿಂಹ ಪ್ರತ್ಯಕ್ಷನಾಗುವ ಸನ್ನಿವೇಶವಿದು! 'ಲಟಲಟಾ' 'ವನಜಜಾಂಡ ಕಟಹ' ಇವುಗಳು ಈ ಸಂದರ್ಭ ದಲ್ಲಿ ಔಚಿತ್ಯಪೂರ್ಣವಾಗಿದ್ದು, ಸನ್ನಿವೇಶದ ರೌದ್ರತೆಯನ್ನು ವ್ಯಕ್ತಪಡಿಸುವುದಾದರೂ, ಪ್ರಾಸ ನಿಯಮಪಾಲನೆಗಾಗಿಯೇ ಬಂದ "ಮಿಟಮಿಟಮಿಟಮಿಟನ ರಕ್ತಾಕ್ಷಿಯಲಿ ನೋಡಿ" ಮುಂತಾದ ಮಾತುಗಳು ಸಂದರ್ಭದ ಗಂಭೀರತೆಯನ್ನು ಅಣಕಿಸುವಷ್ಟರ ಭಾವವನ್ನು ಸೂಚಿಸುತ್ತವೆ.

ಯಾವುದೋ ಒಂದು ಉಪಮಾನವನ್ನು ಎತ್ತಿಕೊಂಡು, ಅದನ್ನು ಹಾಡಿನುದ್ದಕ್ಕೂ ವಿಸ್ತರಿಸಿ, ಅರ್ಥವನ್ನು ಹಿಗ್ಗಿಸಿ, ತಮ್ಮ ಆಶಯವನ್ನು ಅಭಿವ್ಯಕ್ತಗೊಳಿಸುವ ಚಮತ್ಕೃತಿಯನ್ನು ವಿಜಯದಾಸರ ಕೆಲವು ಪದಗಳಲ್ಲಿ ಕಾಣಬಹುದು. ಉದಾಹರಣೆಗೆ:—

ಅಂತರಂಗದ ಕದವು ತೆರೆಯಿತೆಂದು |
ಎಂತು ಪುಣ್ಯದ ಫಲದ ಪ್ರಾಪ್ತಿ ದೊರಕಿತೊ ಎನಗೆ ||

---

[75] ಕರ್ಣಾಟಕ ಭಕ್ತವಿಜಯ (ಹಬ್ಬ ಸುಳಾದಿ)

[76] ಶ್ರೀ ವಿಜಯದಾಸರ ಕೃತಿಗಳು. ಪುಟ ೯೭. (ಬೆಂಗಳೂರು ಪ್ರತಿ)

ಐಸುದಿನವಾಯಿತೋ ಬೀಗಮುದ್ರೆಯ ಮಾಡಿ
ವಾಸವಾಗಿದ್ದರೋ ದುರುಳರಲ್ಲಿ
ಮೋಸವಾಯಿತು ಇಂದಿನತನಕ ತಮಸಿನ
ರಾಶಿಯೊಳಗೆ ಹೊಳಿ ಕಾಣಿಸುತ್ತಿರಲಿಲ್ಲ ॥ ೧ ॥

ಹರಿಕರುಣವೆಂಬಂಥ ಕೀಲಿಕೈದೊರಕಿತು
ಗುರುಕರುಣವೆಂಬಂಥ ಶಕ್ತಿಯಿಂದ
ಪರಮಭಾಗವತರ ಸಹವಾಸದಲಿ ಪೋಗಿ
ಹರಿಸ್ಮರಣೆಯಿಂದಲ್ಲಿ ಬೀಗಮುದ್ರೆಯ ತೆಗೆದೆ [77] ॥ ೨ ॥

ಹೀಗೆ ಒಟ್ಟು ಐದು ನುಡಿಗಳಲ್ಲಿ ಮುಗಿಯುವ ಈ ಹಾಡಿನಲ್ಲಿ ಕದ, ಕೀಲಿಕೈ, ದ್ವಾರ ಪಾಲರು, ದೀಪ, ಮಧ್ಯಮಂಟಪ, ಅರಮನೆ, ಅರಮನೆಯೊಳಗಿರುವ ಆರಾಧನಾಮೂರ್ತಿ, ಇತ್ಯಾದಿ ಒಂದಕ್ಕೊಂದು ಪೂರಕವಾಗಿ ಅರ್ಥವನ್ನು ವಿಸ್ತರಿಸುವ ಉಪಮಾನಗಳ ಸರಪಣಿ ಯಿಂದಲೇ ಹಾಡನ್ನು ಮುಗಿಸುತ್ತಾರೆ. ದಾಸಪರಂಪರೆಯ ಕೃತಿಗಳಲ್ಲಿ ಸಾಮಾನ್ಯವಾಗಿ ಈ ರೀತಿಯ ಹಾಡುಗಳನ್ನು ಕಾಣಬಹುದಾದರೂ, ಇಲ್ಲಿ ದೊರೆಯುವ 'ಶ್ರೀ ವಿಜಯವಿಠಲನ ಚಿತ್ರ' ರಮಣೀಯವಾಗಿದೆ. "ಹೃದಯಕಮಲದೊಳಕೆ ಕುಳಿತು ಕಮಲಜಾದಿಗಳಿಂದ ನುತಿ ಗೊಳ್ಳುತ್ತಿರುವ" ಆತನ ವರ್ಣನೆ ಅಲಂಕಾರಪೂರ್ಣವಾಗಿದೆ!

ವಿವರಣಾತ್ಮಕವಾದ ಹಾಡುಗಳನ್ನೂ ವಿಜಯದಾಸರು ರಚಿಸಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ವಿಷ್ಣುವಿನ ದಶಾವತಾರಗಳನ್ನು ವರ್ಣಿಸುವ ಹಾಡುಗಳೂ; ಪುರಂದರದಾಸರು, ವ್ಯಾಸರಾಯತೀರ್ಥರು, ತುಲಸೀ ಮಹಿಮೆ, ಈ ಬಗೆಯ ಉದಯರಾಗಗಳೂ, ಹೆಸರಾಗಿವೆ. ಸುಳಾದಿಗಳಲ್ಲಿ ನರಸಿಂಹ ಸುಳಾದಿ, ಕಪಿಲ ಸುಳಾದಿಗಳೂ ಈ ಬಗೆಯವು. ಈ ರೀತಿಯ ವಿವರಣಾತ್ಮಕ ಕೃತಿಗಳಲ್ಲಿ ಕೆಲವೊಮ್ಮೆ ಮಹಾಕಾವ್ಯದಲ್ಲಿ ಬರಬಹುದಾದಂಥ ಉತ್ತಮ ವರ್ಣನೆಗಳೂ, ಪ್ರಕೃತಿ ಚಿತ್ರಗಳೂ, ರಸಭಾವಗಳೂ ಮಿಂಚಿ ಮರೆಯಾಗುತ್ತವೆ. 'ಶ್ರೀ ವೆಂಕಟೇಶ ಸ್ತೋತ್ರ'ದಲ್ಲಿ ಬರುವ ವಾರ್ಧಿಕ ಷಟ್ಪದಿಯಲ್ಲಿನ ಪ್ರಕೃತಿವರ್ಣನೆ ಮನೋಜ್ಞವಾಗಿದೆ. ಪ್ರಭಾತದ ಸುಂದರ ಚಿತ್ರ ಈ ಪದ್ಯದಲ್ಲಿ ಕಣ್ಣೆದುರಿಗೆ ನಿಂತಂತಾಗುತ್ತದೆ.

ಅಂಬರವು ತಾಂಬ್ರಮಯವಾಗೆ ಗರುಡಾಗ್ರಜನು
ಇಂಬಿನಲಿ ತಲೆದೋರೆ ಕಿರಣಗಳು ಪರಹಿದವು
ಅಂಬುಜ ವಿರೋಧಿ ಕಳೆಗುಂದಿ ತಾರಾ ನಿಕರ ವಂಬರದಿ ರೂಹುಮಾಸೆ।
ಕುಂಭಿಣಿಯ ಮುಸುಕಿರ್ದ ಕತ್ತಲೆ ಪರಿದು ಪೋಗೆ
ಅಂಬುಜಸಳಕ್ಕೆ ಮರಿದುಂಬಿಗಳು ಎರಗಿದುವು
ತಾಂಬ್ರಚೂಡವು ಧ್ವನಿಮಾಡಿ ಕೂಗಿತು ಸರಸಿಜಾಂಬಕ ಮಂಚದಿಂದೇಳೊ ॥ [78]

ಹಾಗೆಯೇ 'ನೋಡಿದ್ಯಾ ರಂಗೈಯನ ನೋಡಿದ್ಯಾ' ಎನ್ನುವ ಶಂಕರಾಭರಣ ರಾಗ ದಲ್ಲಿರುವ ಹಾಡಿನಲ್ಲಿ ರಂಗೈಯನ ವರ್ಣನೆಯೂ ಅದ್ವಿತೀಯವಾಗಿದೆ—

ಉದಯರಾಗದ ದಿವ್ಯವಸನ—ಮೇಲೆ
ಉದರ ತ್ರಿವಳಿ ಬಂದಿಹಸನ—ಕೇಳು

---

[77] ಶ್ರೀ ವಿಜಯದಾಸರ ಕೃತಿಗಳು. ಪುಟ ೭೭. (ಬೆಂಗಳೂರು ಪ್ರತಿ)
[78] ,, ಪುಟ ೧೨೨. ,,

ಮುದದಿಂದ ಉದ್ಯಾನಚೆಸನ—ನೋಡು
ಯದುಕುಲಜಾತ ಮಾನಸನ—ಆಹ
ಮದಕರಿಯಂದದಿ ನಲಿದೊಲಿದಾಡಲು
ಮದನಾರಿ ಮಹಿಳಾದ ಅದುಭುತಚರಿಯನ್ನ [79]

ಇಲ್ಲಿ 'ಉದಯರಾಗದ ದಿವ್ಯ ವಸನ' ಎಂಬ ಮಾತಿನ ಕಾಂತಿ ಹಾಡಿನ ಉದ್ದಕ್ಕೂ ತನ್ನ ಬೆಳಕು ಚೆಲ್ಲುತ್ತದೆ.

ಶುಚಿಜೀವನದ ದರ್ಶನವನ್ನೂ ಸರಳಶೈಲಿಯ ಹಾಡುಗಳನ್ನೂ ವಿಜಯದಾಸರ ಕೃತಿಗಳಲ್ಲಿ ಆರಿಸುವುದು ಕಷ್ಟವಾಗಲಾರದು. ಹಿತಮಿತವಾದ ಪದಗಳೊಂದಿಗೆ ಸುಂದರನಾದ ಸಂಯೋಜನೆಯಿಂದ ರಚಿತವಾದ ಈ ಪದ್ಯವನ್ನು ಗಮನಿಸಬೇಕು—

ಚಿತ್ತ ನಿನ್ನ ಪದ ಸೇವೆಯೊಳಿರಲಿ, ಚಿಂತೆ ಇತರ ಬಿಡಲಿ,
ಅಂತರಂಗದಲ್ಲಾ ಸಂದಿಸಲಿ, ಅಹಂಕೃತಿಯನ್ನೆ ಬಿಡಲಿ,
ಸಂತತ ನಿನ್ನ ಪದ ಪಂಕಜ ಭಕ್ತರ ಪಂಥವ ಪಾಲಿಸೊ ಪರಮ ಪುರುಷ ಹರಿ |
ಅರಿಷಡ್ವರ್ಗಗಳಟವಿಯ ಖಂಡಿಸು, ಆನಂದದಲಿರಿಸು
ಮರುಳರ ಸಂಗವ ದೂರ ಮಾಡಿಸು, ದುರ್ಮತಿಯನೆ ಬಿಡಿಸು,
ಸರಸ ಸಂಭ್ರಮ ಸನ್ನುತ ಭಕುತರೊಳ್ ನಿರುತರು ನಿಲ್ಲಿಸೊ ನೀರಜಾಕ್ಷ ಹರಿ || [80]

ಒಳ್ಳೆಯ ಕಾವ್ಯದ ಲಕ್ಷಣವನ್ನು ಡಿ.ವಿ.ಜಿ.ಯವರು ಹೀಗೆ ವಿವರಿಸುತ್ತಾರೆ. "ಪುಸ್ತಕವನ್ನೋದಿ ಬಹುದಿನಗಳಾದಮೇಲೂ ಅದರ ಮಿಕ್ಕೆಲ್ಲ ಸಂಗತಿಗಳು ಮರೆತುಹೋದಮೇಲೂ ಯಾವುದೋ ಒಂದು ಪಂಕ್ತಿ—ಒಂದು ತುಂಡು—ನಮ್ಮ ಜ್ಞಾಪಕದಿಂದ ಅಳಿಸಿಹೋಗದೆ ಮನಸ್ಸಿಗೆ ಬಿಡುವಾದಾಗೆಲ್ಲ ನಮ್ಮ ನಾಲಗೆಯ ಮೇಲಕ್ಕೆ ಸಂದರ್ಭ, ಸನ್ನಿವೇಶಗಳಿಗೆ ತಕ್ಕಂತೆಯೂ ಬಂದು ನಲಿಯುತ್ತಿರುತ್ತದೆ........ಹಾಗೆಯೇ ಪದೇ ಪದೇ ನಮ್ಮ ಸ್ಮರಣೆಗೆ ಮರಳಿ ಬರುವ ವಾಕ್ಯವೇ ಕೃತಾರ್ಥವಾದ ಕಾವ್ಯ"[81]—ವಿಜಯದಾಸರ ಕೆಲವು ಕೃತಿಗಳಲ್ಲಾದರೂ ಈ ಲಕ್ಷಣ ಕಂಡುಬರುವುದರಿಂದ "ಕೃತಾರ್ಥಕಾವ್ಯ"ಗಳ ಸಾಲಿನಲ್ಲಿ ಸೇರಲು ಅವು ಯೋಗ್ಯವಾಗಿವೆ.

ವಿಜಯದಾಸರ ಕೀರ್ತನೆಗಳು ದಾಸಸಂಘದ ಇತರರ ಕೀರ್ತನೆಗಳಂತೆಯೇ ರಾಗತಾಳಬದ್ಧವಾಗಿ ಹಾಡಲನುಗುಣವಾಗಿ ರಚಿತವಾಗಿವೆ. ಅವರ ಕೆಲವು ಕೃತಿಗಳಿಗೆ ಸ್ವರ ಜೋಡಿಸಿ ಹಾಡಲನುಕೂಲವಾಗುವಂತೆ ಶ್ರೀ ರಾಜಾರಾಯರು ಪ್ರಕಟಿಸಿದ್ದಾರೆ.[82] ಶ್ರೀಪಾದರಾಯರು, ವ್ಯಾಸರಾಯರು ಮತ್ತು ಪುರಂದರದಾಸರ ಕೃತಿಗಳಲ್ಲಿ ಕಂಡುಬಾರದಿರುವ ಹೊಸಮಾದರಿಯ ಛಂದಸ್ಸೊಂದು ವಿಜಯದಾಸರ ಕೃತಿಗಳಲ್ಲಿ ಆರಂಭವಾಯಿತೆಂದು ತಿಳಿದಿದೆ.

ಕಟಕಿ, ವ್ಯಂಗ್ಯ, ವಿಡಂಬನೆ, ತಿಳಿಹಾಸ್ಯ—ಮುಂತಾದ ಹಾಸ್ಯದ ವಿವಿಧ ಪದರುಗಳನ್ನೂ ದಾಸರು ಅಲ್ಲಲ್ಲಿ ಬಳಸಿಕೊಂಡಿದ್ದಾರೆ. ತಿರುಪತಿ ಶ್ರೀನಿವಾಸನನ್ನು ಕುರಿತು ಹಾಡಿದ ಈ ಮಂಗಲಪದ ಉತ್ತಮ ವ್ಯಂಗ್ಯಕ್ಕೆ ಉದಾಹರಣೆಯಾಗಿದೆ.

---

[79] ಶ್ರೀ ವಿಜಯದಾಸರ ಕೃತಿಗಳು. ಪುಟ ೧೪೫. (ಬೆಂಗಳೂರು ಪ್ರತಿ)
[80] ಶ್ರೀ ವಿಜಯದಾಸರ ಕೃತಿಗಳು. ಪುಟ ೧೯೯. ,,
[81] ಸಾಹಿತ್ಯಶಕ್ತಿ.—ಡಿ. ವಿ. ಜಿ.
[82] ಹರಿದಾಸರ ಕೃತಿಗಳು.

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥

ತೊಳಸದಕ್ಕಿಯ ತಿಂಬ ಕಿಲುಬು ತಳಿಯಲುಂಬ
ಕೊಳಗದಲಿ ಹಣಗಳನು ಅಳೆದುಕೊಂಬ
ಇಲ್ಲ ಕಾಸು ಎಂದು ಸುಳ್ಳುಮಾತಾಡಿದರೆ
ಎಲ್ಲವನು ಕಸುಗೊಂಬ ಕಳ್ಳಧೊರೆಗೆ ॥ ೧ ॥

ತನ್ನ ನೋಡೇನೆಂದು ಮುನ್ನೂರು ಗಾವುದಕೆ ಬರೆ
ತನ್ನ ಗುಡಿಯ ಪೊಕ್ಕ ಜನರಿಗೆಲ್ಲ
ಹೊನ್ನು ಹಣಗಳ ಕೊಂಡು ತನ್ನ ದರುಶನ ಕೊಡದೆ
ಬೆನ್ನೊಡೆಯ ಹೊಯಿಸುವ ಅನ್ಯಾಯಕಾರಿಗೆ [83] ॥ ೨ ॥

ಇಂಥ ಜಿಪುಣಾಗ್ರೇಸರನಾದ ತಿರುಪತಿ ತಿಮ್ಮಪ್ಪನ ಮುಖಕ್ಕೆ ದಾಸರು ಸೊಗಸಾದ ರೀತಿಯಲ್ಲಿ ಮಂಗಲ ಹಾಡಿದ್ದಾರೆ!

ತಮ್ಮ ಆರಾಧ್ಯದೈವ ವಿಜಯವಿಠ್ಠಲನನ್ನು ಕುರಿತಾಗಿ—

ತಕ್ಕೋ ಗಂಟ ನಿನ್ನಾಟವ ತಿಳಿಸುವೆ
ಸಖಿಯರ ಕೂಡಿದಂತಲ್ಲೋ ॥ ಪ ॥

ಠಕ್ಕುಬಿಕ್ಕಿನ ಮಾತುಗಳಾಡಲು ಯುಕುತಿಯನಾ ಕೇಳೆನೆಲವೊ ॥ ಅ॥ ಪ ॥

ಮದಗಜಗಮನೇರ ಹೆದರಿಸಿ ಬೆದರಿಸಿ
ಅಧರವ ಸವಿದಂತಲ್ಲೋ,
ಸುದತಿಯರೆಲ್ಲರ ಅಂಜಿಸಿ ವಂಚಿಸಿ
ದಧಿಘೃತ ಸವಿದಂತಲ್ಲೋ [84] ॥ ೧ ॥

—ಎಂದೆಲ್ಲ ಬೆದರಿಕೆ ಹಾಕುತ್ತಾರೆ. ತುಂಟಪೋರನೊಬ್ಬನನ್ನು ಅಂಕೆಯಲ್ಲಿಟ್ಟು ಕೊಳ್ಳುವ ಸಹಜ ಪಿತೃವಾತ್ಸಲ್ಯದ ಮುಸುಕಿನಲ್ಲಿ ತಿಳಿಯಾದ ಹಾಸ್ಯದ ಹೊನಲು ಹರಿಯುತ್ತದೆ.

ಇಷ್ಟೆಲ್ಲ ಸಹಜ ಸುಂದರ ಶೈಲಿಯ ಸಿದ್ಧಿಯಿದ್ದರೂ, ವಿಜಯದಾಸರು ತಮ್ಮ ಪೂರ್ವಿಕರಾದ ಪುರಂದರದಾಸ, ಕನಕದಾಸರ ಕೃತಿಗಳನ್ನು ಕೆಲವು ಕಡೆ ಅನುಕರಣೆ ಮಾಡಿದ್ದಾರೆ. ಈ ಅನುಕರಣೆಯ ಜಾಡ್ಯದಿಂದಾಗಿ ಅವರ ಕೆಲವು ಕೃತಿಗಳು ತುಂಬ ನೀರಸವಾಗಿವೆ; ವಸ್ತುವಿನ ಆಯ್ಕೆಯಲ್ಲಿ, ನಿರೂಪಣೆಯಲ್ಲಿ ಬಳಸಿದ ಮಾತುಗಳಲ್ಲಿ, ಹಿರಿಯರನ್ನು ಹೆಜ್ಜೆಬಿಡದೆ ಅನುಸರಿಸಿ, ಅನುಕರಿಸಿ, ಕೆಲವೊಮ್ಮೆ ವಿಜಯದಾಸರು ತಮ್ಮ ವ್ಯಕ್ತಿತ್ವವನ್ನೇ ಕಳೆದುಕೊಂಡಿದ್ದಾರೆಂದೆನಿಸುತ್ತದೆ. ಕೆಲವೇ ಕೆಲವು ಉದಾಹರಣೆಗಳನ್ನು ಕೊಡುವುದಾದರೆ ಶ್ರೀ ವಿಜಯದಾಸರ "ದಾಸರ ಭಾಗ್ಯವಿದು–ಪುರಂದರ–ದಾಸರ ಭಾಗ್ಯವಿದು" ಎನ್ನುವ ಹಾಡು ಶ್ರೀ ಪುರಂದರದಾಸರ "ಗೋಪಿಯ ಭಾಗ್ಯವಿದು–ಶ್ರೀಪತಿ–ತಾ ಶಿಶುರೂಪಿಲಿರುವುದು"—ಎಂಬುದನ್ನು ಅನುಸರಿಸಿ, ಬರೆದಿರುವುದು ಸ್ಪಷ್ಟವಾಗುತ್ತದೆ. ಇಲ್ಲಿ ಎರಡು ಹಾಡುಗಳ ವಸ್ತು ಭಿನ್ನವಾಗಿದ್ದರೂ, ವಸ್ತು ನಿರೂಪಣೆಯಲ್ಲಿ, ಬಳಸಿಕೊಂಡ ಪದಗಳಲ್ಲಿ ಪುರಂದರದಾಸರ ಪೂರ್ಣಛಾಯೆ—ವಿಜಯದಾಸರ ಹಾಡಿನಲ್ಲಿ ಕಂಡುಬಂದು, ಹಾಡಿನ ಉದ್ದೇಶ, ಗುರಿಯನ್ನು ಸಾಧಿಸಲಾರದೆ ಹೋಗುತ್ತದೆ.

---

[83] ಶ್ರೀ ವಿಜಯದಾಸರ ಕೃತಿಗಳು. ಪುಟ ೪೦. (ಬೆಂಗಳೂರು ಪ್ರತಿ)

[84] ,, ಪುಟ ೩೩. ,,

ಪುರಂದರದಾಸರ ಇನ್ನೊಂದು ಪ್ರಸಿದ್ಧ ಕೃತಿಯೊದ "ಈ ಪರಿಯ ಸೊಬಗಾವ ದೇವರಲಿ ಕಾಣೆ" ಎನ್ನುವುದನ್ನು ಹೆಜ್ಜೆ ಹೆಜ್ಜೆಗೂ ಅನುಕರಿಸಿದ ವಿಜಯದಾಸರ ಹಾಡು :

"ಈ ಸೊಬಗು ಇನ್ನಾವ ಕ್ಷೇತ್ರದಲಿ ಕಾಣೆ
ವಾಸುದೇವ ಮುನಿಯಿಂದ ಕಾರಣವು ಇಲ್ಲುಂಟು" [85]

ಎನ್ನುವುದಂತೂ, ಅನುಕರಣೆಯ ವಿಷವರ್ತುಲದಲ್ಲಿ ವಿಜಯದಾಸರು ಸಿಕ್ಕಿ ಬಳಲುವುದನ್ನು ತೋರಿಸುತ್ತದೆ! ಅಂತೆಯೇ ಪುರಂದರದಾಸರ "ಈ ಪರಿಯ ಸೊಬಗು" ಕೃತಿಗೆ ಲಭಿಸಿದ ಹತ್ತರಲ್ಲೊಂದು ಪಾಲು ಜನಪ್ರಿಯತೆಯೂ ದೊರಕದಿದ್ದುದರಲ್ಲಿ ಆಶ್ಚರ್ಯವಿಲ್ಲ.

ಕನಕದಾಸರ 'ತಲ್ಲಣಿಸದಿರು ಕಂಡ್ಯ ತಾಳು ಮನವೆ' ಎನ್ನುವುದರಲ್ಲಿನ ಭಾವವನ್ನೇ ಅನುಸರಿಸಿ, ಕೆಲವು ಕಡೆ ವಿಸ್ತರಿಸಿ, ವಿಜಯದಾಸರು....

'ವ್ಯಾಕುಲವೇಸೊ ಮನವೆ, ಯಾಕೆ ನಿನಗೆ ಚಿಂತೆ
ಸಾಕುವವಾತನು ಶ್ರೀಕಾಂತನನುದಿನ— [86]

—ಎನ್ನುವ ಸುಳಾದಿಯಲ್ಲೂ, 'ಭಕ್ತಿ ಸುಳಾದಿ'ಯಲ್ಲಿಯ 'ಎತ್ತಿಗೆ ಭತ್ತದ ಚಿಂತೆ ಯಾತಕ್ಕೆ, ಕತ್ತೆಗೆ ಬಣವೆಯ ಯೋಚನೆ ಯಾತಕ್ಕೆ' ಎಂಬ ಭಾಗದಲ್ಲಿಯೂ ಉಪಯೋಗಿಸಿಕೊಂಡಿದ್ದಾರೆ.

ಯೌವನದಿ ಚತುರ್ವಿಂಶತಿ ತತ್ತ್ವಜ್ಞಾನವ ಜರಿದು ಯುವತಿಯರ ರೂಪಲಾವಣ್ಯ ನೋಡಿ ಬಾಡಿ |
ನೆವನೆವದಿ ಭೋಗಗಳ ಸವಿಸವಿದಪೇಕ್ಷಿಸಿ, ಭವನಭವನವನು ಪೊಕ್ಕು ಸೊಕ್ಕು ||
ಅವರಿವರ ಜಾತಿ ಎನ್ನದೆ ಮಾತುಗಳನಾಡಿ, ದಿವರಾತ್ರಿಯಲಿ ಹೊರಳಿ ಉರುಳಿ |
ಕವಿಜನರ ಧಿಕ್ಕರಿಸಿ ಕೋಣನಂತೆ ಸದಾ, ಅವಧಿಯಿಲ್ಲದೆ ಕಾಲಕಳೆದೆ ಉಣದೆ || [87]

ಎಂಬುದರೊಂದಿಗೆ, ಶ್ರೀ ಶಂಕರಾಚಾರ್ಯರ

"ಪ್ರೌಢೋಽಹಂ ಯೌವನಸ್ಥೋ ವಿಷಯ ವಿಷಧರೈಃ ಪಂಚಭಿರ್ಮರ್ಮ ಸಂಧೌ,
ದಷ್ಟೋ ನಷ್ಟೋ ವಿವೇಕಃ ಸುತ ಧನ ಯುವತಿ ಸ್ವಾದು ಸೌಖ್ಯೇ ನಿಷಣ್ಣಃ |
ಶೈವೀಚಿಂತಾವಿಹೀನಂ ಮಮ ಹೃದಯಮಹೋಮಾನಗರ್ವಾಧಿರೂಢಂ |
ಕ್ಷಂತವ್ಯೋಮೇಽಪರಾಧಃ ಶಿವಶಿವಶಿವಭೋಃ ಶ್ರೀ ಮಹಾದೇವ ಶಂಭೋ || [88]

ಎಂಬುದರೊಡನೆ ಹೋಲಿಸಬಹುದು.

ವಿಜಯದಾಸರು ರಚಿಸಿರುವ ಸುಳಾದಿಗಳು ಅವುಗಳ ವಿಷಯ ವೈವಿಧ್ಯತೆಗೆ, ವಸ್ತು ಪ್ರತಿಪಾದನಾ ಸುಭಗತೆಗೆ ಹೆಸರಾಗಿವೆ. ಅವುಗಳಲ್ಲಡಕವಾಗಿರುವ ತತ್ವಗಳು, ನೀತಿಗಳು, ವಿಷಯ ವಿಮರ್ಶೆ, ಪಂಡಿತ ಪಾಮರರಿಬ್ಬರಿಗೂ ರುಚಿಸುವಂಥದಾಗಿವೆ. ದಾಸವಾಙ್ಮಯ ವಾಖ್ಯಾನಕಾರರು ವಿವರಿಸುವಂತೆ 'ಸುಳಾದಿ' ಎಂದರೆ—'ಸುಳುವಾದ ಹಾದಿ'—ಸುಲಲಿತವಾದ, ಸುಲಭವಾದ, ಜ್ಞಾನಿಗಳಿಗೆ ಸುಲಭವಾಗಿ ಮನಸ್ಸಿಗೆ ಬೋಧೆಯಾಗುವ,—ಸುಳುವಾದ ಆದಿ—ಸುಲಭವಾಗಿ ಭಗವಂತನನ್ನು ಕಾಣಲು ಆದಿಯಾಗಬಲ್ಲ-ಬಗೆಯಲ್ಲಿ ತಮಗೆ ಹೊಳೆಯುವ

---

[85] ಶ್ರೀ ವಿಜಯದಾಸರ ಕೃತಿಗಳು. ಪುಟ ೩೧. (ಬೆಂಗಳೂರು ಪ್ರತಿ)

[86] ,, ಪುಟ ೨೦೨. ,,

[87] ,, ಪುಟ ೭೩. ,,

[88] ಶ್ರೀ ಶಂಕರಾಚಾರ್ಯರ 'ಶಿವಾಪರಾಧ ಕ್ಷಮಾಪನಾ ಸ್ತೋತ್ರ'

ವಿಷಯಗಳನ್ನು ಯಥಾರ್ಥವಾಗಿ ವಿವರಿಸುವುದು. ಈ ದಾಸವಾಙ್ಮಯಕ್ಕೇ ವಿಶಿಷ್ಟವಾದ ಈ ಪ್ರಕಾರವನ್ನು ಸಮರ್ಥವಾಗಿ ಉಪಯೋಗಿಸಿಕೊಂಡವರೆಂದರೆ ವಿಜಯದಾಸರು. 'ಸುಳಾದಿ'ಯಲ್ಲಿ ಸಪ್ತತಾಳಗಳಲ್ಲಿ ಹಾಡುವಂತೆ ಏಳು ನುಡಿಗಳೂ, ಕೊನೆಯಲ್ಲಿ ಸಾರಾಂಶ ವನ್ನೊಳಗೊಂಡ ಒಂದು 'ಜತೆ'ಯೂ ಇರುತ್ತವೆ. ಲಯ, ತಾಳಗಳ ಕಲಾಕೌಶಲ್ಯಕ್ಕೆ ಇಲ್ಲಿ ಪ್ರಾಧಾನ್ಯತೆ. ಸುಳಾದಿಗಳ ಪ್ರಥಮ ಕರ್ತೃ ಶ್ರೀಪಾದರಾಜರು. ಈ 'ಬಗೆ' ದಾಸವಾಙ್ಮಯದ ವಿನಾ ಬೇರೆಲ್ಲಿಯೂ ಕಂಡುಬರುವುದಿಲ್ಲ.

ವಿಜಯದಾಸರು ತಮ್ಮ 'ಸುಳಾದಿ'ಗಳಲ್ಲಿ 'ಸಪ್ತತಾಳ'ಗಳ ಬದಲಾಗಿ 'ಪಂಚತಾಳ' ಗಳನ್ನು ಮಾತ್ರ ಉಪಯೋಗಿಸಿದ್ದಾರೆ. ಅವರ 'ಸುಳಾದಿ'ಗಳು ಅವುಗಳ ವಿಷಯ ವೈವಿಧ್ಯತೆಗೆ, ವಸ್ತುಪ್ರತಿಪಾದನಾ ಸುಭಗತೆಗೆ ಹೆಸರಾಗಿವೆ. ಸ್ತೋತ್ರಸುಳಾದಿ, ಪ್ರಾಣದೇವರ ಚರಣ ಮಹಿಮಾ ಸುಳಾದಿ, ಅಭಯ ಸುಳಾದಿ, ಋಣ ಸುಳಾದಿ, ವ್ಯಾಸರಾಯ ಸುಳಾದಿ, ಪ್ರಾಣ ದೇವರ ಹಸ್ತಮಹಿಮಾ ಸುಳಾದಿ, ಪ್ರಾಣದೇವರ ಸುಳಾದಿ, ಭವಪರಿಹಾರಕ ಸುಳಾದಿ, ದುರ್ಗಾ ಸುಳಾದಿ, ಆತ್ಮಯಜ್ಞ ಸುಳಾದಿ, ಕರುಣಾಮೃತ ಸುಳಾದಿ, ಹರಿಸ್ವತಂತ್ರ ಸುಳಾದಿ, ವೇದವ್ಯಾಸರ ಸುಳಾದಿ, ಕಪಿಲ ಸುಳಾದಿ, ಭಕುತಿ ಸುಳಾದಿ, ದೀಕ್ಷಾ ಸುಳಾದಿ, ಹರಿನಾಮ ಸುಳಾದಿ, ಮೊದಲಾದುವು ಪ್ರಸಿದ್ಧವಾಗಿವೆ. ಪ್ರತಿಯೊಂದು ಸುಳಾದಿಯೂ ಧ್ರುವ, ಮಠ್ಯ, ತ್ರಿಪುಟ, ಅಷ್ಟ, ಆದಿತಾಳಗಳಿಂದ ಕೂಡಿ ಕೊನೆಯಲ್ಲಿ ಒಂದು 'ಜತೆ' ಸಾಲುಗಳಿರುತ್ತವೆ. ಪ್ರತಿಯೊಂದು ತಾಳಗಳ ಅಂತ್ಯದಲ್ಲಿಯೂ ದಾಸರ ಅಂಕಿತವಿರುತ್ತದೆ. 'ಆತ್ಮಯಜ್ಞಸುಳಾದಿ'ಯಂಥ ಕೆಲವು ಸುಳಾದಿಗಳು ೧೬೮ ಸಾಲುಗಳಷ್ಟು ದೊಡ್ಡದಾಗಿವೆ.

ಕೀರ್ತನೆ, ಪದಗಳಲ್ಲಿಗಿಂತಲೂ 'ಸುಳಾದಿ' ಹಾಗೂ 'ಉಗಾಭೋಗ'ಗಳಲ್ಲಿ ಕೃತಿಕರ್ತ ರಿಗೆ ಸ್ವಾತಂತ್ರ್ಯ ಹೆಚ್ಚು. ನುಡಿ, ಪಲ್ಲವಿಗಳ ಚೌಕಟ್ಟಿನಲ್ಲಿ ಹೆಚ್ಚು ಉದ್ದವಲ್ಲದ ಪರಿಮಿತವಾದ ಸಾಲುಗಳಲ್ಲಿ ಕೀರ್ತನೆ ಅಥವಾ ಹಾಡಿನ ವಸ್ತು ಹೊಂದಿಕೊಂಡಿರಬೇಕಾಗುತ್ತದೆ. ಆದರೆ 'ಸುಳಾದಿ'ಯಲ್ಲಿ ವಸ್ತುವನ್ನು ವಿವರಿಸಲು, ವರ್ಣಿಸಲು, ವಿಸ್ತಾರವಾದ ಅವಕಾಶವಿದೆ. ಛಂದಸ್ಸಿನ ದೃಷ್ಟಿಯಿಂದಲೂ 'ಸುಳಾದಿ'ಗಳಲ್ಲಿ ತಾಳ, ತಾಳಗಳಲ್ಲಿ ವ್ಯತ್ಯಾಸ ಬರುವುದರಿಂದ ಸಹಜವಾಗಿಯೇ ವೈವಿಧ್ಯತೆಯಿರಬೇಕಾಗುತ್ತದೆ. ಶ್ರಾವಕರ ಸಹನೆಯನ್ನು ಈ ಬಗೆಯ ವೈವಿಧ್ಯತೆ ಕಾಪಿಡುತ್ತದೆ.

ದಾಸವಾಙ್ಮಯದಲ್ಲಿ ಕಾಣಬರುವ 'ಉಗಾಭೋಗ' ಎಂಬ ಇನ್ನೊಂದು ರೂಪ, 'ಉದ್ಗ್ರಾಹ ಮತ್ತು ಆಭೋಗ' [ಉಕ್+ಆಭೋಗ] ಇವೆರಡರ ಸಂಯೋಗದಿಂದ ಆಗಿರು ವುದೆಂದು ತಿಳಿದುಬರುತ್ತದೆ. 'ಸುಳಾದಿ' ಲಯಪ್ರಧಾನಗೀತವಾದರೆ, 'ಉಗಾಭೋಗ'ದಲ್ಲಿ ಸ್ವರಕ್ಕೇ ಪ್ರಾಧಾನ್ಯ. 'ಉಗಾಭೋಗ'ವನ್ನು 'ಅನುಭವದ ಸಾರ'ವೆನ್ನುತ್ತಾರೆ. 'ಉಗಾಭೋಗ' ಎನ್ನುವ ಶಬ್ದದ ಸೃಷ್ಟಿಕರ್ತರೂ ಹರಿದಾಸರೇ.

ವಿಜಯದಾಸರು 'ಎಲೊ ಎಲೊ ದುರಿತವೆ, ಒಂದೆಂಟು ಬಾಗಿಲು, ಕಟ್ಟಿಯ ಕಟ್ಟಿದರು, ಕುಲಿಶವ ನಂಬಿದ ನರಗೆ ಶೈಲದ ಭಯವುಂಟೆ, ಜಾಲಿಸಬೇಕೊ ಜಾಲಸಾಗರನಾಗಿ ಪಾಪ, ಕ್ಷೇಮವ ಕೊಡು ಜೀಯಾ, ದೂರದಲ್ಲಿದ್ದಿಯೇನೊ, ಜನನದ ಭಯ, ಮರಣದ ಭಯ, ನಾನು ನೀನೆಂದು ಒಮ್ಮೆಗಾದರು, ಠಿಕ್ಕೆಯ ಮುಂದೆ ಪಕ್ಕಿ ಬಾಯಿಬಿಟ್ಟಂತೆ' ಮೊದಲಾದ ಉಗಾಭೋಗ ಗಳನ್ನು ರಚಿಸಿದ್ದಾರೆ. ಇವರ ಉಗಾಭೋಗಗಳು ವೀರಶೈವ ವಚನಕಾರರ ವಚನಗಳಂತೆ

ಹಾಡಲು, ಕೇಳಲು, ಉತ್ತಮವಾಗಿವೆ. ತಮ್ಮ ಅನುಭವಗಳನ್ನು ಈ ಚಿಕ್ಕ ಚಿಕ್ಕ ಉಗಾಭೋಗಗಳಲ್ಲಿ ಸೊಗಸಾಗಿ ನಿರೂಪಿಸಿದ್ದಾರೆ. ದ್ವಿತೀಯ ಪ್ರಾಸದ ನಿಯತತೆಯನ್ನು ಇಲ್ಲಿಯೂ ಕೈ ಬಿಟ್ಟಿಲ್ಲ.

ವಿಜಯದಾಸರು ಸುಮಾರು ೨೫೦೦೦ ಪದ, ಸುಳಾದಿ, ಉಗಾಭೋಗಗಳನ್ನು ರಚಿಸಿರುವುದಾಗಿ ತಿಳಿದುಬರುತ್ತದೆ. ಆದರೆ ಪ್ರಕಟವಾಗಿರುವುದು ಕೇವಲ ಸ್ವಲ್ಪ. ಬೆಂಗಳೂರಿನ 'ಶ್ರೀ ಸುಬೋಧ ಪ್ರಕಟನಾಲಯ'ದವರು ತಮ್ಮ 'ಹರಿದಾಸ ಕೀರ್ತನ ತರಂಗಿಣಿ'ಯ ಮಾಲೆಯಲ್ಲಿ ಶ್ರೀ ವಿಜಯದಾಸರ ಕೃತಿಗಳ ೧ಳಳ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಉಡುಪಿಯ 'ಶ್ರೀ ಮಧ್ವಸಿದ್ಧಾಂತ ಗ್ರಂಥಾಲಯ'ದವರು ಶ್ರೀ ವಿಜಯದಾಸರ ಕೀರ್ತನೆಗಳನ್ನು ಎರಡು ಭಾಗಗಳಲ್ಲಿಯೂ, (ಒಟ್ಟು ೧೯೯ ಕೃತಿಗಳು) ಸುಳಾದಿಗಳನ್ನು ಒಂದು ಭಾಗದಲ್ಲಿಯೂ ಪ್ರಕಟಿಸಿದ್ದಾರೆ. ಉಳಿದ ಅವರ ಕೃತಿಗಳೆಲ್ಲವೂ ಇನ್ನೂ ಕಾಲಗರ್ಭದಲ್ಲಿ ಹುದುಗಿವೆ. ಅವುಗಳಿನ್ನೂ ಹೊರಬರದಿರುವುದು ಕನ್ನಡಿಗರ ದುರದೃಷ್ಟ. ಆ ಬಗ್ಗೆ ಸಾಕಷ್ಟು ಪ್ರಯತ್ನ ನಡೆಯಬೇಕಾಗಿದೆ.

**೬. ಸುಭಾಷಿತಗಳು.**

ದಾಸರು ತಮ್ಮ ಅನುಭವಗಳನ್ನು ಜನತೆಯ ಮುಂದಿರಿಸುವಾಗ ಸೂತ್ರರೂಪದಲ್ಲಿ, ಸೂಕ್ತ ಉಪಮೆಗಳೊಡನೆ, ಜನಮನಸಮುಟ್ಟುವಂತೆ ರಚಿಸಿ ಹೇಳುತ್ತಾರೆ. ಅವರ ಅನುಭವದಾಳದಿಂದ ಪರಿಪಾಕಗೊಂಡು ಹೊರಬಂದ ಆ ನಲ್ನಾತುಗಳು ಜನರ ಹೃದಯದಾಸರೆಯಲ್ಲಿ ಬಹುಕಾಲ ನಿಲ್ಲುವಂತಿರುತ್ತವೆ. ಈ ಮಾತುಗಳೇ ಮುಂದೆ ಸುಭಾಷಿತಗಳೆಂದೂ, ಜಾಣ್ನುಡಿಗಳೆಂದೂ, ಗಾದೆಗಳೆಂದೂ ಕರೆಯಲ್ಪಡುತ್ತವೆ. ಎಲ್ಲರ ದೈನಂದಿನ ಬಳಕೆಮಾತುಗಳಲ್ಲಿ ಉಪಯೋಗಿಸಲ್ಪಡುತ್ತವೆ. ವಿಜಯದಾಸರ ಅನುಭವ ಸಂಪತ್ತಿನಿಂದ ರೂಪುಗೊಂಡ ಕೆಲವು 'ಮಾತು'ಗಳನ್ನು ಇಲ್ಲಿ ಸಂಗ್ರಹಿಸಲು ಯತ್ನಿಸಿದೆ.

'ಅಲ್ಪಸಂತೋಷನಾಗು, ಅದು ನಿನಗೆ ನೋಡು ಹಾಲು ಸಕ್ಕರೆ ತುಪ್ಪ'
'ಅನ್ನವಿತ್ತವನ ಪಾಪಗಳು ನಿರಂತರದಿ ಅನ್ನದಾತೃಯ ಮಾಡಿಕೊಂಡಿಪ್ಪವು'
'ಆವಾವ ಕಾಲ ತಪ್ಪಿಸಿ ಕಾವ ಹರಿ ತಾನು ಸಾವಕಾಲನ ಮಾತ್ರ ತಪ್ಪಿಸನೊ'
'ಕರ್ಮದಾರಿಯ ಪಿಡಿದು ಕಡೆಗೆದ್ದವರ ಕಾಣೆ'
'ಕಷ್ಟಪಡದೆ ಸುಖ ಬರದು, ಕಂಗೆಟ್ಟ ಮೇಲಿನ್ನು ಕಷ್ಟವು ತೀರದು'
'ಕಂಡ ಕೂಳುಗಳನು ತಿಂದು ಒಡಲ್ಹೊರೆಯಬೇಡ'
'ಕಲ್ಲುಮನಸನು ಬಿಟ್ಟು ಪೂಜೆಮಾಡಿ'
'ಗುಳ್ಳೆಯಂದದ ದೇಹ ನೆಚ್ಚಿ ನೀ ಕೆಡಬೇಡ'
'ತೊತ್ತುಬುದ್ಧಿಯನೆಲ್ಲ ಬಿಡು'
'ದುರುಳಮನ ನಿಲಿಸುವುದು ಸುರರಿಗಳವಲ್ಲ'
'ದುರುಳಜನಸಂಗವೆಂಬುದು ಎಂದಿಗು ನೊಣಬೆರಸಿದ ಊಟ'
'ದುರುಳರ ಸಂಗವ ದೂರಮಾಡಿಸು, ದುರ್ಮತಿಯನೆ ಬಿಡಿಸು'
'ನಾನು ಎಂಬುದ ಬಿಡು'

'ನಿಂದಕರ ಕಣ್ಣೆತ್ತಿ ನೋಡಬೇಡ'

'ಪಾಪವೆಂಬುದು ಹೊರಗಿಹುದೆ ತನ್ನ ಕೋಪವಲ್ಲದೆ ಬೇರೆ ಹೊಸದಾಗಿ ಬಹುದೆ'

'ಬಿದ್ದ ಕಾಳಿಗೆ ಕಾಳು ಕೂಡಿಹಾಕುವುದೆಲ್ಲ, ಹಾರಿಹೋಗುವ ಹೊಟ್ಟು'

'ಬಿಂದುಮಾತ್ರವೆ ಸುಖವು, ದುಃಖ ಪರ್ವತದಷ್ಟು'

'ಮರಣ ಆವಲ್ಲಿ ಇಪ್ಪುದಾ ದೇಶಕ್ಕೆ ಒಯ್ಯುವುದು'

'ಸಾಲಮಾಡಲಿ ಬೇಡ, ಸಾಲದೆಂದೆನಬೇಡ'

'ಹಮ್ಮಿನಲಿ ಬಾಳದಿರು, ಹಿತವಾಗದು ನಿನಗೆ'

'ಹೀನಾಯವಾಡದಿರು ಪರರ ಗುಣಗಳನೆಣಿಸಿ'

'ಹುಟ್ಟಾರಭ್ಯ ಮಂದನಾಗಿದ್ದವಗೆ ಮುಟ್ಟಿದಲ್ಲದೆ ಬುದ್ಧಿ ಬರುವುದೆಂತೊ'

## ೭. ಉಪದೇಶ ಸಾರಾಂಶ:—

"ವೈಷ್ಣವ ಹರಿದಾಸರು ಜೀವನದ ಅಂತರ್ನಿರೀಕ್ಷಣೆಗೆ ಜನರನ್ನು ಪ್ರೇರಿಸಿ ಭೇದಾದಿ ಪ್ರಮಾಣಗಳಿಂದ ಪ್ರಮಿತವಾದ ಪ್ರಮೇಯಗಳನ್ನು ಸ್ವಾನುಭವಕ್ಕೆ ತಂದುಕೊಳ್ಳುವಂತೆ ಜನತೆಯ ಹೃದಯವನ್ನು ಹೊಸ ಚೈತನ್ಯದಿಂದ ತುಂಬಿದರು. ಅವರು ಪರಾಪರ ತತ್ತ್ವಗಳನ್ನು ಸುಲಭವಾದ ಅನುಭವದ ದೃಷ್ಟಾಂತಗಳಿಂದ ಜನರಿಗೆ ತಿಳಿಸಿ ಹೇಳಿದರು. ತತ್ತ್ವ ನಿಶ್ಚಯವಾದ ಮೇಲೆ ಅಂತರ್ನಿರೀಕ್ಷಣೆಯನ್ನು ಬೆಳೆಸುತ್ತಾ ಶ್ರೀಹರಿಯ ಗುಣಾನುಚಿಂತನ ಮಾಡುವ ಕ್ರಮವನ್ನೂ ತಿಳಿಸಿ ತತ್ತ್ವಜ್ಞಾನ-ಉಪಾಸನೆಗಳ ಹೃದಯಂಗಮವಾದ ಸಂಗಮವನ್ನು ಮಾಡುವ ಬಗೆಯನ್ನು ಸ್ವಂತ ಚರಿತ್ರೆಯಿಂದಲೂ, ಪ್ರಹ್ಲಾದ, ಧ್ರುವ, ಅಜಾಮಿಳಾದಿ ಪೌರಾಣಿಕ ದೃಷ್ಟಾಂತಗಳಿಂದಲೂ ಜನರ ಮನಗಾಣಿಸಿದರು. ಅಂದರೆ ಧರ್ಮ ಮತ್ತು ತತ್ತ್ವಜ್ಞಾನಗಳು ವಿಸಂಗತವಾಗಿಯೂ, ವಿಷೂಚಿಯಾಗಿಯೂ ಬೆಳೆಯುತ್ತ ಬಂದುದರಿಂದ ಜನರಲ್ಲಿ ಬುದ್ಧಿಮತ್ತೆಯ ಜೊತೆಗೆ ಡಾಂಭಿಕತನದ ಬೇರುಗಳು ನೆಟ್ಟಿದ್ದವು. ಇವುಗಳನ್ನು ಕತ್ತರಿಸಿ ಎರಡನ್ನೂ ಒತ್ತಟ್ಟಿಗೆ ಸೇರಿಸಿದ ಮಹಾಶ್ರೇಯಸ್ಸು ಪರಮ ವೈದಿಕರಾದ ಕರ್ನಾಟಕದ ಹರಿದಾಸರಿಗೆ ಸಲ್ಲುತ್ತದೆ. ಭಕ್ತಿಜ್ಞಾನಗಳೂ ಸದಾಚಾರವೂ ವೈಷ್ಣವ ಸಿದ್ಧಾಂತದಲ್ಲಿಯಲ್ಲದೆ ಅನ್ಯತ್ರ ಸಮರಸವಾಗಿ ಬೆರೆಯಲಾರವೆಂಬುದನ್ನು ಅವರು ತಮ್ಮ ಕೃತಿಗಳಿಂದ ವಿಶದವಾಗಿ ವಿವರಿಸಿದ್ದಾರೆ."[89] ಗಣ್ಯ ಹರಿದಾಸರಲ್ಲೊಬ್ಬರಾದ ವಿಜಯದಾಸರ ವಿಚಾರಸರಣಿಯೂ ಹೀಗೆಯೇ ಸಾಗಿದೆ. ಅವರು ಮಧ್ವಮತಾನುಯಾಯಿಗಳಾಗಿ, ಶ್ರೀಹರಿಯೇ ಪರದೈವವೆಂದು ಬಗೆದವರು. ತಮ್ಮ ಧರ್ಮಕ್ಕನುಗುಣವಾಗಿ ನಡೆದು, ನುಡಿದವರು. ಹರಿಭಕ್ತರ ಲಕ್ಷಣಗಳನ್ನು ತಮ್ಮ 'ಹರಿದಾಸ ಲಕ್ಷಣ ಸುಳಾದಿ'ಯಲ್ಲಿ ವಿವರಿಸಿದ್ದಾರೆ. ಅವರ ಉಪದೇಶದ ಸಾರವನ್ನು ಈರೀತಿ ಸಂಗ್ರಹಿಸಬಹುದು.

ಶ್ರೀಹರಿಯು ಸರ್ವತಂತ್ರ ಸ್ವತಂತ್ರ. ಸಮಸ್ತ ಬ್ರಹ್ಮಾಂಡವೂ ಆತನ ಅಧೀನ. ಬ್ರಹ್ಮಾದಿ ದೇವತೆಗಳಿಗೂ ಆತನ ನಿಯಮ ಮೀರಲಸಾಧ್ಯವಾದುದು. ಆತನ ಆಜ್ಞೆಯನ್ನು ಅನುಸರಿಸಿ ಜಗತ್ತಿನ ಕ್ರಿಯೆಗಳೆಲ್ಲವೂ ನಡೆಯುತ್ತವೆ. ಆತನ ಅಧೀನದಲ್ಲಿ ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಪಂಚಭೂತಾತ್ಮಗಳು, ಮನಸ್ಸು, ಚೇತನ ಎಲ್ಲವೂ ಇವೆ.

[89] ಕರ್ನಾಟಕದ ಹರಿದಾಸ ಸಾಹಿತ್ಯ. ಪುಟ ೨೪೮. ರಾ. ಸ್ವಾ. ಪಂಚಮುಖಿ.

ಶ್ರೀಹರಿಯು ಬಿಂಬವಾದರೆ ಜೀವ ಪ್ರತಿಬಿಂಬದಂತೆ. ಶ್ರೀಹರಿಯ ಮಾಯೆಯಿಂದ ಪ್ರೇರಿತವಾದ ಜೀವನು ದೇಹಧಾರಿಯಾಗಿ ತಾನೇ ಸರ್ವಸ್ವತಂತ್ರನಂತೆ ವರ್ತಿಸುವನು. ಈ ಶರೀರವು ಗಾಳಿಗೊಡ್ಡಿದ ದೀಪವೆಂದು ತಿಳಿಯಲಾರದೆ ಹೋಗುವನು. ಸಂಸಾರದಲ್ಲಿ ಆಸಕ್ತನಾಗಿ ಶ್ರೀಹರಿಯನ್ನು ಮರೆಯುವನು. ಸಂಸಾರದಲ್ಲಿ ಲೇಶವೂ ಸುಖವಿಲ್ಲ-ಕರ್ಮದಾರಿಯ ಹಿಡಿದು ಕಡೆಗೆದ್ದವರ ಕಾಣೆ-ನಿರ್ಮಲಾತ್ಮಕ ವಿಜಯವಿಠ್ಠಲನ ತಿಳಿದರೆ ಮಾತ್ರ ಸುಖ.

ಮನಸು ನಿಲಿಸುವುದು ಬಹು ಕಷ್ಟ. ಅದನ್ನು ಸ್ಥಿರಗೊಳಿಸಲು ಕರ್ಮ ಬೇಕು. ಕರ್ಮವಿಲ್ಲದೆ ಮನೋಮಲ ನಿವಾರಣೆಯಾಗದು. ಆದರೆ ಕರ್ಮಾಚರಣೆ ಭಕ್ತಿಪೂರ್ವಕವಾಗಿರ ಬೇಕು. 'ಹರಿಗರ್ಪಿಸದ ಕರ್ಮ ಆವಾವುದಾದರೂ ಸೂಳೆಗಿಕ್ಕಿದ ವಿತ್ತ; ಹರಿಗೆ ವಿಶ್ವಾಸದಿ ಅಣುಮಾತ್ರ ಅರ್ಪಿಸೆ ಅವನೆ ನಿರ್ಮಲಚಿತ್ತ'

ಮುಕ್ತಿಮಾರ್ಗ ತಿಳಿಯಲು ಜ್ಞಾನ ಬೇಕು. ಜ್ಞಾನ ಗುರೂಪದೇಶದಿಂದ ಲಭಿಸು ವುದು. ಗುರುಮುಖದಿಂದ ಹರಿಕಥಾಮೃತಶ್ರವಣ ಮಾಡಿ, ಹರಿನಾಮ ಉಪದೇಶ ಪಡೆದು, ಹರಿಬಿಂಬವನ್ನು ಏಕನಿಷ್ಠೆಯಿಂದ ಧ್ಯಾನಿಸಬೇಕು. ಈ ಉಪಾಸನೆಯಿಂದ ಅಪರೋಕ್ಷಜ್ಞಾನ ಲಭ್ಯವಾಗುವುದು. ಸಂಚಿತಕರ್ಮ ನಾಶವಾಗಿ ಮೋಕ್ಷಪ್ರಾಪ್ತವಾಗುವುದು.

ಶ್ರೀಹರಿಯಲ್ಲಿ ಸಮಸ್ತವನ್ನು ಅರ್ಪಿಸಿದವನಿಗೆ ಏತರ ಚಿಂತೆಯೂ ಇರುವುದಿಲ್ಲ. ತನ್ನೆಲ್ಲ ಕರ್ಮಗಳೂ ಭಗವದಾರಾಧನೆಯೆಂದು ಭಾವಿಸುವನು. ಅವನು ಸಿದ್ಧಪುರುಷನೆನಿಸು ವನು. ಆತನ ಭಾವನೆ ಇಂತಿರುವುದು—

'ಮೈಮರೆತು ಮಲಗುವುದೆ ಮಹಿತೆಗೆ ನಮಸ್ಕಾರ
ಕೈಮೀರಿ ಹೋದದ್ದೆ ಕೃಷ್ಣಾರ್ಪಣ—
ಮೈಮನೋ ವೃತ್ತಿಗಳೆ ವಿಷಯದಲಿ ವೈರಾಗ್ಯ
ಹೊಯ್ಮಾಲಿತನವೆಲ್ಲ ಹರಿಯ ವಿಹಾರ'[೨೦]

ವಿಜಯದಾಸರು ದಾಸಶ್ರೇಷ್ಠರಾದ ಪುರಂದರದಾಸರ ನಂತರ ಹೆಚ್ಚು ಸಂಖ್ಯೆಯಲ್ಲಿ ಪದ, ಸುಳಾದಿ, ಉಗಾಭೋಗಗಳನ್ನು ರಚಿಸಿ, ದಾಸವಾಙ್ಮಯಕ್ಕೆ ಮಹತ್ಸೇವೆಯನ್ನು ಸಲ್ಲಿಸಿ, ಮಧ್ವಮತ ತತ್ತ್ವಗಳನ್ನು ಪಾಮರರೂ ಅರಿಯುವಂತೆ ಮಾಡಿ, ಮುದುರುತ್ತಿದ್ದ ದಾಸಪಂಥದ ತರುವಿಗೆ ಚಿಗುರುಮೂಡಿಸಿ, 'ದಾಸಚತುಷ್ಟಯ'ದಲ್ಲಿ ದ್ವಿತೀಯರೆನಿಸಿಕೊಂಡಿದ್ದಾರೆ. ದಾಸಪಂಥ ಮುಂದುವರಿಸಲು ಅವರು ಸಂಪಾದಿಸಿದ ಶಿಷ್ಯವರ್ಗ ಅವರ ಪ್ರಭಾವದ ದ್ಯೋತಕವಾಗಿದೆ. ಅವರ ಶಿಷ್ಯರಾದ ಗೋಪಾಲದಾಸರು, ಜಗನ್ನಾಥದಾಸರು, 'ದಾಸಚತುಷ್ಟಯ'ರಲ್ಲಿ ಉಳಿದಿಬ್ಬ ರೆಂದು ಗಣಿಸಲ್ಪಟ್ಟಿದ್ದಾರೆ. ಅವರಿಬ್ಬರೂ, ಮೋಹನದಾಸರು, ಆನಂದತೀರ್ಥ ದಾಸರು, ತಿಮ್ಮಣ್ಣದಾಸರು, ಕಲ್ಲೂರು ಸುಬ್ಬಣ್ಣದಾಸರು, ಶೇಷಗಿರಿದಾಸರು ಮೊದಲಾದವರು ವಿಜಯ ದಾಸರು ಹಾಕಿಕೊಟ್ಟ ಪಥದಲ್ಲಿ ಮುಂದುವರಿದು ದಾಸವಾಙ್ಮಯಕ್ಕೆ ಅಪೂರ್ವವಾದ ಸೇವೆ ಯನ್ನು ಸಲ್ಲಿಸಿದ್ದಾರೆ.



---

[೨೦] ವಿಜಯದಾಸರ ಕೃತಿಗಳು. ಪುಟ ೨೨,

# ವಿಷಮಲಯಗಳು ಇವೆಯೆ?

ಲೇಖಕರು : ಕೆ. ಶಿವರಾಮ ಐತಾಳ



1) ತಿರುಕ | ನೊಬ್ಬ | ನೂರ | ಮುಂದೆ | ಮುರುಕು | ಧರ್ಮ | ಶಾಲೆ | ಯಲ್ಲಿ
2) ಅರಸು | ಗಳಿಗಿದು | ವೀರ | ದ್ವಿಜರಿಗೆ | ಪರಮ | ವೇದದ | ಸಾರ | ಯೋಗೀ
3) ಸ್ಪಷ್ಟಭಾ | ವಂಗಳಿಂ | ಭಾವಪ್ರ | ಧಾನದಿಂ | ಕ್ಲಿಷ್ಟಪದ | ವರ್ಜ್ಯದಿಂ | ಲಕ್ಷಣಮ | ಲಂಕಾರ
4) ಸುಮುಗಳ || ಕೇಸರದೆ || ಮಧುಕರ | ಸಂಕುಲಂ

ಈ ಉದಾಹರಣೆಗಳಲ್ಲಿ ಕ್ರಮವಾಗಿ ಮೂರು, ಏಳು, ಐದು, ಒಂಭತ್ತು ಮಾತ್ರೆಗಳ ಲಯಗಳನ್ನು ಕಾಣುತ್ತೇವೆ. ಇವು ವಿಷಮ ಮಾತ್ರಕ ಗಣಗಳು.[1] ಈ ವಿಷಮ ಮಾತ್ರಕ ಗಣಗಳನ್ನುಳ್ಳ ಲಯಗಳಿಗೆ 'ವಿಷಮ ಲಯಗಳು'ಯೆಂದು ಕರೆಯಬಹುದು. 4-4 ಇದು ಸಮ ಮಾತ್ರಕವಾದುದರಿಂದ ಅದನ್ನು 'ಸಮಲಯ'ದಲ್ಲಿ ಸಮಾವೇಶಗೊಳಿಸಬಹುದು. ಮೇಲೆ ಉದಾಹರಿಸಲ್ಪಟ್ಟ ವಿಷಮ ಮಾತ್ರಕ ಲಯಗಳನ್ನು ಮಾತ್ರವಲ್ಲದೆ 6–7, 5–6, 7–8 ಮೊದಲಾದ ಲಯಗಳನ್ನೂ ಕಂಡುಕೊಳ್ಳಬಹುದು, ಪರಿಭಾವಿಸಬಹುದು. ಲಯಕಲ್ಪನೆಯಲ್ಲಿ ಲೆಕ್ಕಾಚಾರ ಪ್ರಧಾನವಲ್ಲ; ಒಂದು ಗಣ ಹೇಗೆ ಅಸ್ತಿತ್ವಕ್ಕೆ ಬರುತ್ತದೆ? ಯಾವ ಸಂಯೋಜನಾ ಕ್ರಮ ಅನುಸರಿಸಲ್ಪಡಬೇಕು ಎಂಬುದನ್ನು ಮನಗಂಡರೆ ಚೆನ್ನ—ಆಗ ಲಯ ಅಸ್ತಿತ್ವದಲ್ಲಿ ಬರಲು ಸೂಕ್ತವೆನಿಸುತ್ತದೆ.

ಸಮಲಯಗಳು ಎಷ್ಟಿವೆ? ನಾಲ್ಕರ ಲಯವೊಂದನ್ನು ಬಿಟ್ಟರೆ ಸಮಲಯವೆನಿಸುವ ಬೇರೊಂದು ಜಾತಿ ನಮಗೆ ಸಿಕ್ಕುವುದಿಲ್ಲ. ಸಿಕ್ಕಿದರೂ ಅದು ವಿಷಮಲಯಗಳಿಂದ ಲಭಿಸುವಂಥವುಗಳಾಗಿರುತ್ತವೆ. ಮೂರು ಮಾತ್ರೆಗಳ ಎರಡು ಗಣ ಸಂಯುಕ್ತವಾಗಿ ಸಮವೆನಿಸುವ ಆರು ಮಾತ್ರೆಗಳಾಗಬಹುದು. ಆದೇ ಪರಿವೃತ್ತಗೊಂಡು 2-4 ಆಗಬಹುದು. ಸ್ವತಂತ್ರವಾಗಿ ಪರಿಗಣಿಸಲ್ಪಡುವುದು ನಾಲ್ಕರ ಲಯವೊಂದೇ. ನಾಲ್ಕು ಮಾತ್ರೆಗಳ ಗಣಗಳು ವಿಷಮ ಸಂಖ್ಯೆಯಲ್ಲಿ ಬಂದಾಗ ಅದು ಸಮವಾದಂತೆ ಭಾಸವಾಗುವುದಿಲ್ಲ. ನಾಲ್ಕು ಮಾತ್ರೆಗಳ ಮೂರು ಗಣಗಳ ಲಯದ ಅಸ್ತಿತ್ವ ಸಾಧ್ಯ. ಆಗ ಅದರದು ಮೂರರ ಲಯವೆಂದು ಕರೆದರೂ ತಪ್ಪಿಲ್ಲ. ಇನ್ನೊಂದು ಉದಾಹರಣೆಯನ್ನು ಕೊಡಬಹುದು. ನಮ್ಮಲ್ಲಿ 3-4 ರ ಲಯವಿದೆಯಷ್ಟೆ.

3 4
ತಕಿಟ || ತಕದಿಮಿ

ಇದು ನಾಲ್ಕು ಬಾರಿ ಆವರ್ತಗೊಂಡರೆ ಒೞಗಾಗುತ್ತದೆ.

[1] ನಾಲ್ಕನೆಯ ಉದಾಹರಣೆ 9 ಮಾತ್ರೆಗಳದು. ಇದು 4-5 ಅಥವಾ 5–4 ಆಗಿ ನಿಯೋಜಿಸಲ್ಪಡಬಹುದು. ಈ 9 ಮಾತ್ರೆಗಳ ಲಯವೊಂದು ಇದೆಯೆ ಇಲ್ಲವೆ ಎಂದು ನಿಷ್ಕರ್ಷಿಸುವುದು ಇಲ್ಲಿನ ಕೆಲಸವಲ್ಲ.

ತಕಿಟತಕದಿಮಿ | ತಕಿಟತಕದಿಮಿ | ತಕಿಟತಕದಿಮಿ | ತಕಿಟತಕದಿಮಿ

ಇದನ್ನು ನಾಲ್ಕರ ಲಯದಲ್ಲಿ ನೋಡಿ—[2] ಇದನ್ನು 7 ರ ಲಯವೆನ್ನಬಹುದು.

| ತಕಿಟತ | ಕದಿಮಿತ | ಕಿಟತಕ | ದಿಮಿತಕಿ | ಟತಕದಿ | ಮಿತಕಿಟ | ತಕದಿಮಿ |
|---|---|---|---|---|---|---|
| 1 | 2 | 3 | 4 | 5 | 6 | 7 |

ಇಲ್ಲಿನ ಸೂತ್ರವಿಷ್ಟೆ.

$$(3+4)\times 4 = 28$$

ಕೇವಲ ಗಣಿತದ ದೃಷ್ಟಿಯಲ್ಲಾದರೂ $(3+4)\times 4$ ಇದು 28 ಹೇಗಾಗುತ್ತದೆ ಎಂಬುದನ್ನು ತೋರಿಸಿಕೊಡಬೇಕಾಗುತ್ತದೆ. ಲಯ ವಿಕಾಸದಲ್ಲೂ ಅದನ್ನು ಹೇಗೆ ಎಂದು ತೋರಿಸಬೇಕಾಗುತ್ತದೆ. ಅದು ಹೀಗೆಲ್ಲ ಸಾಧ್ಯ.

(ಅ) $3+4=7$ ; $7\times 4=28$.

ಇಲ್ಲಿ ಮೊದಲು ಹೇಳಿದಂತೆ 'ತಕಿಟ | ತಕದಿಮಿ' ಎನ್ನುವುದು ನಾಲ್ಕು ಬಾರಿ ಬರುತ್ತದೆ. ಅಂದರೆ 3-4 ರ ಲಯವುಳ್ಳ ಭಾಗ ನಾಲ್ಕು ಬಾರಿ ಬರುತ್ತದೆ.

(ಆ) $(3\times 4)+(4\times 4)=12+16=28$.

ಇಲ್ಲಿ ಹೀಗಾಗುತ್ತದೆ.

ತಕಿಟ | ತಕಿಟ | ತಕಿಟ | ತಕಿಟ ‖ ತಕದಿಮಿ | ತಕದಿಮಿ | ತಕದಿಮಿ | ತಕದಿಮಿ

(ಇ) $\overset{4}{1}\times 3+\overset{4}{4}\times 4=(4\times 3)+(4\times 4)=28$.

'3-4' ಈ ಗಣವನ್ನು ನಾಲ್ಕು ಬಾರಿ ಪಡೆವುದಷ್ಟೆ ನಮ್ಮ ಕೆಲಸ. 3 ಎನ್ನುವುದರಲ್ಲಿ ಮೂರು ಬಾರಿ ಒಂದುಗಳಿರುತ್ತವೆ. ಅಂದರೆ $1+1+1=3$. ಇಲ್ಲಿ ಒಂದೊಂದಕ್ಕೂ ನಾಲ್ಕು ಬೆಲೆಗಳನ್ನು ಕೊಡುವುದು ಇಲ್ಲಿನ ರೀತಿ. ಇದರಿಂದ ನಾಲ್ಕು ಮಾತ್ರೆಗಳ ಏಳು ಗಣಗಳು ದೊರೆಯುತ್ತವೆ.

| ತ | ಕಿ | ಟ | ತ | ಕ | ದಿ | ಮಿ |
|---|---|---|---|---|---|---|
| ತಕಿಟಕ ‖ | ತಕದಿಮಿ | ತಕಿಟಕ | ತಕದಿಮಿ | ತಕಿಟಕ | ತಕದಿಮಿ | ತಪಟಕ |

ಈ ಉದಾಹರಣೆಗಳಿಂದ ಸ್ಪಷ್ಟಪಡುವುದೇನು?

(ಅ) ಸಮಮಾತ್ರಕ ಲಯವು ವಿಷಮ ಸಂಖ್ಯೆಯ ಗಣಗಳಲ್ಲಿರಬಹುದು.[3]

(ಆ) ವಿಷಮಮಾತ್ರಕ ಲಯವು ಸಾಮಾನ್ಯವಾಗಿ ಸಮಸಂಖ್ಯೆಯ ಗಣಗಳಲ್ಲಿರುತ್ತವೆ.

ಈಗ ಏಳುವ ಪ್ರಶ್ನೆಯೆಂದರೆ 'ವಿಷಮಮಾತ್ರಕ ಲಯಗಳು ವಿಷಮ ಸಂಖ್ಯೆಯ ಗಣಗಳಲ್ಲಿ ಇರಬಹುದೇ?' ಎಂಬುದಾಗಿದೆ. ಹೀಗೆ ಇರುವುದರಿಂದ ಲಯಪ್ರತೀತಿ ಉಂಟಾಗುತ್ತದೆಯೇ? ನೋಡೋಣ. ಮೂರು ನಾಲ್ಕರ ಲಯವನ್ನು ಮೂರು ಗಣಗಳಲ್ಲಿ ಪಡೆಯೋಣ.

---

[2] ಚಂಪಕಮಾಲಾ ವೃತ್ತವನ್ನು ನೋಡಿ ಎರಡು ಮೂರನೆಯ ಹಾಗೂ ಆರು ಏಳನೆಯ 8 ಮಾತ್ರೆಗಳ ಸಂಯುಕ್ತ ಗಣಗಳು 3–5 ಆಗಿ ಪರಿವೃತ್ತಗೊಂಡಿರುವುದಷ್ಟೆ ವಿಶೇಷ ಈ ವೃತ್ತದಲ್ಲಿ.

[3] ಸಮಮಾತ್ರಕ ಲಯವು ಸಮಸಂಖ್ಯೆಯ ಗಣಗಳಲ್ಲಿರುವುದಕ್ಕೆ ಉದಾಹರಣೆ ಅನಾವಶ್ಯಕವೆನಿಸುವಷ್ಟು ಪ್ರಚಲಿತವಷ್ಟೆ.

ತಕಿಟತಕದಿಮಿ | ತಕಿಟತಕದಿಮಿ | ತಕಿಟತಕದಿಮಿ

ಇದು ನಾಲ್ಕಕ್ಕೆ ಹೊಂದುತ್ತದೆಯೇ?

ತಕಿಟತ | ಕದಿಮಿತ | ಕಿಟತಕ | ಧಿಮಿತಕಿ | ಟತಕಧಿ | ಮಿ
1 2 3 4 5

ಕೊನೆಗೆ ಒಂದು ಲಘು ಉಳಿಯುತ್ತದೆ ಅದನ್ನು ಗುರುವನ್ನಾಗಿ ಮಾಡಿ ಆರನೆಯ ಗಣವನ್ನು ತುಂಬಿಬಿಡಬಹುದು. ಆದರೆ ಆಗ ಕೊನೆಯ ಅಕ್ಷರಕ್ಕೆ ಲಘು ಬೆಲೆ ಮಾತ್ರವೇ ಅದಕ್ಕೆ ಸಿಕ್ಕಬೇಕು. ಲಯ ಪ್ರತೀತಿ ಉಂಟಾಗಬೇಕು. ಹೇಗೆ ಸಾಧ್ಯ? ನಾವು ಈಗ ವಿಷಮವನ್ನು ವಿಷಮದಿಂದ ಗುಣಿಸುತ್ತಿದ್ದೇವೆ. ಸಿಕ್ಕುವುದು ವಿಷಮವೆಂಬುದು ಎಲ್ಲರೂ ಬಲ್ಲ ವಿಷಯ. ನಾವು ಸವ್ಯಕ್ಕೆ ಮಾಡಬೇಕಾಗಿರುವುದು $(3+4)\times 3 = 21$. ಈ ಹಿಂದಿನ ಸೂತ್ರದಿಂದಲೇ ಇದನ್ನೂ ಬಿಡಿಸಬಹುದು. ಆಗ ನಮಗೆ ಈ ನಡೆಗಳು ದೊರಕುತ್ತವೆ.

(ಅ) ತಕಿಟತಕಧಿಮಿ | ತಕಿಟತಕಧಿಮಿ | ತಕಿಟತಕಧಿಮಿ |
1 2 3

(ಆ) ತಕಿಟ | ತಕಿಟ | ತಕಿಟ | ತಕಧಿಮಿ | ತಕಧಿಮಿ | ತಕಧಿಮಿ
1 2 3 4 5 6

(ಇ) ತಕಿಟ | ತಕಿಟ | ತಕಿಟ | ತಕಿಟ | ತಕಿಟ | ತಕಿಟ | ತಕಿಟ |
1 2 3 4 5 6 7

ಈ ಎಲ್ಲ ವಿಧಾನಗಳಲ್ಲೂ ಲಯಪ್ರತೀತಿ ಉಂಟಾಗುತ್ತದೆ. ಒಟ್ಟಿನಲ್ಲಿ ಈಗ ಸೂತ್ರ ರೂಪದಲ್ಲಿ ಇಷ್ಟನ್ನು ಹೇಳಬಹುದು.

(ಅ) ಸಮಲಯವನ್ನು ವಿಷಮ ವೃತ್ತಿಯಲ್ಲಿ ಹೇಳಿದಾಗ ವಿಷಮ ಸಂಖ್ಯೆಯ ಗಣಗಳಲ್ಲಿ ಸಮಲಯವೂ, ಸಮಸಂಖ್ಯೆಯ ಗಣಗಳಲ್ಲಿ ವಿಷಮಲಯವೂ ನಡೆಯುತ್ತದೆ.

(ಆ) ಸಮಲಯವನ್ನು ಸಮವೃತ್ತಿಯಲ್ಲಿ ಹೇಳಿದ ಸಮಲಯವು ಸಮಸಂಖ್ಯೆಗಳ ಗಣದಲ್ಲಿ ನಡೆಯುತ್ತದೆ.

(ಇ) ವಿಷಮಲಯವನ್ನು ಸಮವೃತ್ತಿಯಲ್ಲಿ ಹೇಳಿದಾಗ ವಿಷಮಸಂಖ್ಯೆಯ ಗಣಗಳಲ್ಲಿ ಸಮಲಯವೂ, ಸಮಸಂಖ್ಯೆಯ ಗಣಗಳಲ್ಲಿ ವಿಷಮಲಯವೂ ನಡೆಯುತ್ತದೆ.

(ಈ) ವಿಷಮಲಯವನ್ನು ವಿಷಮವೃತ್ತಿಯಲ್ಲಿ ಹೇಳಿದಾಗ ವಿಷಮಲಯವು ವಿಷಮ ಸಂಖ್ಯೆಯ ಗಣಗಳಲ್ಲಿ ನಡೆಯುತ್ತದೆ.[4]

## ವಿಷಮಲಯಗಳು ಇವೆಯೆ?

ಸಮಲಯಕ್ಕೆ ವಿಷಮಲಯ ಸ್ಪಷ್ಟವಾಗಿ ಭಿನ್ನವಾಗಿರುವುದು ಗೋಚರಿಸುತ್ತದೆ. 3, 3-4, 5—ಮೊದಲಾದುವನ್ನು ವಿಷಮಲಯವೆಂದು ಕರೆಯುತ್ತಲಿದ್ದೇವೆ. ಆದರೆ ಅವು ನಿಜವಾಗಿ ವಿಷಮಲಯವೆ? ವಿಷಮಲಯ ಎಂದು ಕರೆಯಲ್ಪಡುವ ಸ್ವತಂತ್ರವಾದ ಲಯಗಳು ಇವೆಯೇ? ಲಯದ ಮೂಲತತ್ವಕ್ಕೆ ಭಂಗವಿಲ್ಲದಂತೆ ವಿಷಮಲಯ ಕಲ್ಪನೆ ಸಾಧ್ಯವೆ?—

[4] ಆದರೂ ಕೂಡ ಸಮ ಆವರ್ತಕ್ಕಾಗಿ ಸಮವಾಗುತ್ತದೆ ಗಣಗಳ ಸಂಖ್ಯೆ.

ಈ ಪ್ರಶ್ನೆಗಳೆಲ್ಲ ಮೋಜಿನದೆನ್ನಿಸಬಹುದು. ಆದರೆ ಲಯತತ್ತ್ವದ ಹಿನ್ನೆಲೆಯಲ್ಲಿ ಮುಂದರಿದಾಗ ವಿಷಮಲಯವೆನ್ನುವುದು ಇಲ್ಲ ಎನ್ನುವುದು ಮನಗಾಣುತ್ತದೆ.[5]

ಒಂದು ವೇಳೆ ವಿಷಮಲಯಗಳಿವೆ ಎಂದು ಭಾವಿಸೋಣ. ಉದಾಹರಣೆಗೆ ಮೂರರ ಲಯ.

ತಿರುಕ | ನೊಬ್ಬ | ನೂರ | ಮುಂದೆ |

ಮೂರು ಮಾತ್ರೆಗಳ ಎರಡು ಗಣಗಳಿಗೆ ಪರಿವೃತ್ತಿಯಿಂದ 2+4 ಬರುತ್ತದೆ.

ಮೈ ಮಣ್ಣಿಗೆ | ಕುಡಿಗಣ್ಣಿಗೆ | ಈ ಹೆಣ್ಣಿಗೆ | ....

ಇಲ್ಲಿ 2, 4 ಎರಡೂ ಸಮವೆನಿಸುವುವಲ್ಲದೆ ವಿಷಮವೆನಿಸುವಂತಿಲ್ಲ. ಆರು ಮಾತ್ರೆಗಳ ಲಯವೆಂದರೂ ಒಂದೆ, ಮೂರು ಮಾತ್ರೆಗಳ ಲಯವೆಂದರೂ ಒಂದೆ. ನಡೆ ಬೇರೆಯಾಗಬಹುದು; ಸಮಗ್ರ ಲಯ ಒಂದೇ ಆಗಿರುತ್ತದೆ. 4 ಮಾತ್ರೆಗಳ ಎರಡು ಗಣಕ್ಕೆ ಪರಿವೃತ್ತಿಯಿಂದ 3+5 ಎಂಬ ವಿಷಮ ಗಣಗಳು ಬರುತ್ತವೆ. ಎರಡು ಬಾರಿ ವಿಷಮ ಸೇರಿದರೆ ಸಮವಾಗುತ್ತದೆ. ಆದರೆ ಸಮದಲ್ಲಿ ವಿಷಮ ಸೇರಿರುವುದರ ಬಗೆ ಏನು ಎನ್ನುವುದು ವಿಚಾರಾರ್ಹವಾದ ಅಂಶ. ಸಮದೊಡನೆ ವಿಷಮ ಸೇರಿದರೆ ಒಟ್ಟು ಆಗುವುದು ವಿಷಮ. ಇದು 3+4 ರಲ್ಲಿ ಕಂಡುಬರುತ್ತದೆ. ಇದು ಎರಡು ಬಾರಿ ಬಂದಾಗ 5, 5 ಲಯವೂ, ನಾಲ್ಕರ ಲಯವೂ ಉಂಟಾಗಬಹುದು. ಸಮಲಯಗಳಲ್ಲಿ ಸಿಕ್ಕುವ ಸಮತೋಲನ ವಿಷಮಲಯಗಳಲ್ಲಿ ಏಕೆ ಸಿಕ್ಕುವುದಿಲ್ಲ? ಸಮತೋಲನದಲ್ಲಿ ಸಿಕ್ಕುವ ತತ್ತ್ವವೇ ವಿಷಮಲಯದಲ್ಲೂ ಕಾಣಬರುವುದಾದರೆ ವಿಷಮಲಯವೆಂದು ಕರೆಯುವ ಅಗತ್ಯ ಕಡಮೆ.

## ಸಾಮಾನ್ಯ ಸೂತ್ರ

ಛಂದಶ್ಶಾಸ್ತ್ರದಲ್ಲಿ ಸಾಮಾನ್ಯವಾದ, ಪ್ರಧಾನವಾದ ಸೂತ್ರವೊಂದನ್ನು ಕಂಡುಕೊಳ್ಳಬೇಕಾಗಿದೆ. ಲಯವನ್ನು ಎರಡಾಗಿ ವಿಭಜಿಸಬಹುದು—(ಅ) ಸಂಕೀರ್ಣ ಲಯ, (ಆ) ನಿರ್ದಿಷ್ಟ ಲಯ. ಗದ್ಯಕ್ಕೂ ಪದ್ಯಕ್ಕೂ ಇಷ್ಟೇ ವ್ಯತ್ಯಾಸ: ಗದ್ಯದಲ್ಲಿ ಲಯವು ಒಟ್ಟಿನಲ್ಲಿ ಕಾಲದ ಸಮತೋಲನವಿದ್ದರೂ 3-4, 4, 5 ಮೊದಲಾಗಿ ಬರಬಹುದಲ್ಲದೆ 4, 4, 4, ಮೊದಲಾಗಿ ಬರಬೇಕೆಂದಿಲ್ಲ. ಪದ್ಯದಲ್ಲಿ ಅನುಕ್ರಮಣಿಕೆಯೇ ಪ್ರಧಾನಗುಣವಾಗಿರುತ್ತದೆ. ಅನುವೃತ್ತಿಯಲ್ಲಿ ಲಯ ಅಭಿವ್ಯಕ್ತವಾಗಬೇಕು. ಹಾಗೆ ಆಗುವ ಅನುವೃತ್ತಿ ಕ್ರಿಯೆಯು ಸಮವೃತ್ತಿಯಲ್ಲಿ ಆಗಬೇಕು. ಹಾಡಿನಲ್ಲಿ ಗಣಗಳು ಪರಿವೃತ್ತಿಗೊಳ್ಳಬಹುದು. ವಿಭಿನ್ನ ಲಯಗಳ ಅಂಶಗಳು ಒಡಮೂಡಬಹುದು. ಆದರೆ ನಿರ್ದಿಷ್ಟ ಕಾಲ ಪ್ರಮಾಣದ ತಾಳವು ಸಮಪ್ರಮಾಣದಲ್ಲಿ ಆವರ್ತಗೊಳ್ಳುತ್ತಿರುತ್ತದೆ. ಈ ಸಮ ಆವರ್ತ ಕ್ರಿಯೆಯಿಂದ 'ವಿಷಮ'ವೆನಿಸಿರುವುವೂ ಸಮವಾಗುತ್ತವೆ. 'ವಿಷಮ'ಗಳು ಸಮತೆಗೆ ತಿರುಗುವುದು ಪ್ರಕೃತಿಯ ಧರ್ಮ. ಆದರೆ ಛಂದಸ್ಸಿನಲ್ಲಿ ಸಮತೆಗೆ ತಿರುಗುವಂಥವು ಎನ್ನಿಸಿಕೊಳ್ಳುವ 'ವಿಷಮ' ತನಗೆ ಸ್ವಾಭಾವಿಕವಾಗಿ 'ವಿಷಮ'ವಾಗಿರುವುದಿಲ್ಲ. 'ವಿಷಮ' ಎಂದು ಕರೆಯಲ್ಪಡುವ ಇವುಗಳಲ್ಲಿ 'ಸಮತೆ' ಸಮಾವೇಶಗೊಂಡಿರು

---

[5] ಲಯವಿಶೇಷವೆಂಬಲ್ಲಿ 3, 3-4, 5 ಮೊದಲಾದುವನ್ನು ಹೆಸರಿಸಲು ಬೇಕಾದರೆ 'ವಿಷಮಲಯ'ವೆಂಬ ಹೆಸರನ್ನಿಟ್ಟುಕೊಳ್ಳಬಹುದು. ಆದರೆ ವಸ್ತುತಃ ವಿಷಮಲಯಗಳಿಲ್ಲ.

ತ್ತದೆ—'ಸಮ' ಎಂದೇ ಸಹಜವಾಗಿ ಅನ್ನಿಸಿಕೊಳ್ಳುತ್ತದೆ. ಅಂದರೆ 'ಮೂರು' ಮಾತ್ರೆಗಳ ಲಯವನ್ನು ಸಮಲಯವೆಂದು ಕರೆದಂತಾಯಿತು, ಕರೆಯಬಹುದು.

## ಮೂರನೆಯ ಒಂದು ಮಾತ್ರೆ?

ಮೂರು ಮಾತ್ರೆಗಳ ಒಂದು ಗಣದಲ್ಲಿ ಒಂದೊಂದು ಮಾತ್ರೆಗಳು ಮೂರು ಇರುತ್ತವೆ. ಈ ಒಂದೊಂದು ಮಾತ್ರೆಯೂ 'ವಿಷಮ' ಎಂದು ಕರೆಸಿಕೊಳ್ಳುತ್ತಿದೆ. ಆದರೆ ಆ ಒಂದೊಂದಕ್ಕೂ ಇರುವುದು ಸಮಬೆಲೆಯೇ ಆಗಿದೆ. ನಮ್ಮ ಬಳಿ ನಾಲ್ಕು ಆಣೆಗಳ ಪಾವಲಿ ಮೂರು ಇರಬಹುದು ಆದರೆ ಒಂದೊಂದು ಬಿಲ್ಲೆಗೂ ನಾಲ್ಕು ಆಣೆಗಳ ಮೌಲ್ಯವಿರುತ್ತದೆ. ಹೀಗೆ ಛಂದಸ್ಸಿನ ಮಾತ್ರೆಗಳ ಮೌಲ್ಯ.

ರಘುಪತಿ | ರಾಘವ | ರಾಜಾ | ರಾಮ್
**ಪತಿತ** | ಪಾವನ | ಸೀತಾ | ರಾಮ್

ಇಲ್ಲಿ 'ಪತಿತ' ಎನ್ನುವುದು ಗಮನಾರ್ಹವಾದುದು. ನಾಲ್ಕು ಮಾತ್ರೆಗಳಿರಬೇಕಾದಲ್ಲಿ ಮೂರು ಮಾತ್ರೆಗಳಿವೆ. ಲಯದ ಸಮತೋಲನಕ್ಕೆ ಇನ್ನೊಂದು ಮಾತ್ರೆ ಬೇಕು. ಆ ಒಂದು ಮಾತ್ರೆಯ ಸೇರಿಕೆಯನ್ನು ಹೇಗೆ ಮಾಡುವುದು? ಒಂದು ಮಾತ್ರೆಯನ್ನು ಮೂರು ಭಾಗಗಳನ್ನಾಗಿ ಮಾಡಿ ಒಂದೊಂದು ಭಾಗವನ್ನು ಇರುವ ಒಂದೊಂದು ಮಾತ್ರೆಗಳಿಗೆ ಸೇರಿಸುವುದು. ಅಂದರೆ ಪ್ರತಿ ಅಕ್ಷರದ ಬೆಲೆ ಒಂದು ಮೂರನೆಯ ಒಂದು ಮಾತ್ರೆಗಳಾಗುತ್ತವೆ. ಒಟ್ಟು ನಾಲ್ಕಾಗುತ್ತದೆ. ಆದರೆ ಇದು ಸಾಧ್ಯವೇ? ಒಂದು ವೇಳೆ ಒಂದು ಮಾತ್ರೆಗಳ ಕಾಲವು ಸರಿಯಾಗಿ ಮೂರು ಸಮಭಾಗಗಳನ್ನಾಗಿ ಮಾಡುವುದು ಸಾಧ್ಯವಾಗುವ ಪಕ್ಷದಲ್ಲಿ ವಿಷಮ ಲಯದ ಅಸ್ತಿತ್ವವನ್ನು ಒಪ್ಪಬಹುದು. ಆದರೆ ಅದು ಸಾಧ್ಯವಲ್ಲ–ನನ್ನ ಅನುಭವಕ್ಕೆ ತಕ್ಕಂತೆ, ನನಗೆ ತಿಳಿದಂತೆ.

## ಒಂದು ಮಾತ್ರೆ ಅಂದರೇನು?

– – ∪ – ∪ – – ∪ – ∪ – ∪∪∪ – ∪ ∪∪ –
ಒಮ್ಮಿದ್ದೆ ನೀನು ಈಗಿಲ್ಲವೆಂದು ಹೇಗೆನಲಿ ತಾಯಿ ನಿನಗೆ

ಇಲ್ಲಿ ಪ್ರಸ್ತಾರವನ್ನು ಹಾಕಿದೆಯಷ್ಟೆ. ಇದನ್ನು (ಅ) ವಿಳಂಬವಾಗಿ ಓದುತ್ತೇವೆ. (ಆ) ತೀರ ವಿಳಂಬವಾಗಿ ಓದುತ್ತೇವೆ. (ಇ) ವೇಗವಾಗಿ ಓದುತ್ತೇವೆ. (ಈ) ತೀರ ವೇಗವಾಗಿ ಓದುತ್ತೇವೆ.

ಹೀಗೆಲ್ಲ ಓದುವಾಗ ಯಾವ ಒಂದು ಹ್ರಸ್ವಸ್ವರವು ಪಡೆಯುವ ಕಾಲವನ್ನು ಒಂದು ಮಾತ್ರೆಯ ಕಾಲ ಎಂದು ನಿರ್ಣಯಿಸುವುದು? ಒಂದೊಂದು ರೀತಿಯಲ್ಲಿ ಓದುವಾಗಲೂ ಆಯಾ ರೀತಿಗಳಲ್ಲಿ ಒಂದೊಂದು ಮಾತ್ರೆ ಎನ್ನಿಸಿಕೊಳ್ಳುವ ಕಾಲಗಳು ಪರಸ್ಪರ ವ್ಯತ್ಯಾಸವಾಗಿರುತ್ತದೆ. ಛಂದಸ್ಸಿನಲ್ಲಿ ಕಾಲವನ್ನು ಪರಿಭಾವಿಸುವುದೇ ಮುಖ್ಯ ಕೆಲಸ. ಈ ಕಾಲವ್ಯತ್ಯಾಸವನ್ನು ತಿಳಿಯುವ ಬಗೆ ಹೇಗೆ? ಆಗುವ ವ್ಯತ್ಯಾಸ ನಿಯಮಬದ್ಧವಾದುದೇ? ಅಥವಾ ನಿಯಮಗಳಿಗೆ ಒಳಪಡುವಂತೆ ವ್ಯತ್ಯಾಸ ನಡೆಯುವುದುಂಟೆ? ರೀತಿ ವೈವಿಧ್ಯಕ್ಕೆ ತಕ್ಕಂತೆ ಒಂದು ಮಾತ್ರೆಗಳ ಕಾಲವೂ ವಿಧವಿಧವಾಗಿರುತ್ತದೆ. ಒಟ್ಟಿನಲ್ಲಿ ಕಾಲವನ್ನು ಸರಿಯಾಗಿ ಪರಿಭಾವಿಸಲು ಸರಿಯಾದ ಒಂದು ದಾರಿ ಅವಶ್ಯಕ. ಹಾಗೆ ಪರಿಭಾವಿಸಲು ಮಾರ್ಗವಿಲ್ಲದಿದ್ದರೆ ಛಂದಸ್ಸಿನ ಪುರುಷಾರ್ಥ

ವೇನು? ಇದಕ್ಕೆ ಸಂಗೀತದ ನೆರವು ಬೇಕು.[6] ಖಚಿತವಾದ ಯಾವುದಾದರೂ ಒಂದು ರೀತಿಯ ಓದುಗಾರಿಕೆಯನ್ನು ಮೂಲವನ್ನಾಗಿಟ್ಟುಕೊಳ್ಳಬೇಕು. ಅಲ್ಲಿನ ಒಂದು ಮಾತ್ರೆಯಿಂದ ಉಳಿದ ಓದುಗಾರಿಕೆಗಳಲ್ಲಿ ಬರುವ ಕಾಲವನ್ನು ನಿರ್ಣಯಿಸಬೇಕಾಗುತ್ತದೆ.

## ಒಂದು ಮಾತ್ರೆ ಸಮವೆ? ವಿಷಮವೆ?

ಒಂದು ಮಾತ್ರೆಯು ಸಮವೇ? ವಿಷಮವೇ? ಎಂಬುದನ್ನು ನಿರ್ಣಯಿಸಲು ಅದರ ಮೌಲ್ಯವೇನು, ಎಂತು ಎನ್ನುವುದನ್ನು ನೋಡಬೇಕಾಗುತ್ತದೆ. ತೀರ ವಿಳಂಬವೂ ಅಲ್ಲದ, ತೀರ ವೇಗವೂ ಅಲ್ಲದ ಒಂದು ತೆರನ ಓದುಗಾರಿಕೆಯನ್ನು ತೆಗೆದುಕೊಳ್ಳೋಣ.

∪ ∪ ∪
| ತ ಕಿ ಟ |

ಇದು ಮೂರು ಮಾತ್ರೆಗಳ ಒಂದು ಗಣ. ಒಂದೊಂದು ಮಾತ್ರೆಗಳ ಕಾಲವನ್ನು ತೆಗೆದುಕೊಳ್ಳುತ್ತದೆ. ಈಗ ಇದನ್ನು ವಿಳಂಬವಾಗಿ ಓದೋಣ.

– – –
ತಽ ಕಿಽ ಟ

ಈಗ ಇಲ್ಲಿ ಒಂದೊಂದೂ ದ್ವಿಗುಣಿತವಾದ ಕಾಲವನ್ನು ಪಡೆದಿದೆ. ಒಟ್ಟು 6 ಮಾತ್ರೆ
∪ ∪ ∪
ಗಳು. ಮೊದಲು ಹೇಳಿದ 'ತ ಕಿ ಟ' ಎಂಬುದರ ಎರಡರಷ್ಟು ಕಾಲವನ್ನು ತೆಗೆದುಕೊಳ್ಳುತ್ತದೆ.
– – –
'ತಽ ಕಿಽ ಟಽ' ಎಂಬುದರಲ್ಲಿ ಒಂದೊಂದೂ ಎರಡೆರಡು ಮಾತ್ರೆಗಳ ಕಾಲವನ್ನು ತೆಗೆದುಕೊಳ್ಳುತ್ತದಷ್ಟೆ. ಈಗ ಅವನ್ನು ವಿಭಜಿಸೋಣ. ಒಂದೊಂದು ಮಾತ್ರೆಗಳು ಸಿಕ್ಕುವಂತೆ ಮಾಡೋಣ.

– – –
ತಽ | ಕಿಽ | ಟಽ

∪ ∪ ∪ ∪ ∪ ∩
ತ ಕಿ || ಟ ತ | ಕಿ ಟ

∪ ∪ ∪ ∪ ∪ ∪ – – –
ಇಲ್ಲಿ 'ತ ಕಿ ಟ ತ ಕಿ ಟ' ಎಂಬುದನ್ನು 'ತಽ ಕಿಽ ಟಽ' ಎಂಬುದನ್ನು ಹೇಳಿದಂತೆ ಮತ್ತೆ ವಿಲಂಬಿಸೋಣ.

– – – – – –
ತಽ ಕಿಽ | ಟಽ ತಽ | ಕಿಽ ಟಽ

---

[6] ಅನುಕೂಲಕ್ಕೆ ತಕ್ಕಂತೆ ಯಾವುದಾದರೂ ಒಂದು ರೀತಿಯ ಓದುಗಾರಿಕೆಯನ್ನು ಆರಂಭದ ಮೂಲಮಾನವಾಗಿ ಇಟ್ಟುಕೊಳ್ಳಬೇಕಾಗುತ್ತದೆ. ಇದು ವಿಕಲ್ಪ. ವಿಕಲ್ಪದಿಂದ ಹೀಗೆ ಆರಿಸಿಕೊಂಡ ಓದುಗಾರಿಕೆಯಲ್ಲಿನ ಲಘುವೇ ಒಂದು ಮಾತ್ರೆ. ಆ ಕಾಲದ ಪ್ರಮಾಣದಿಂದ ಉಳಿದವುಗಳ ಬೆಲೆಯ ನಿರ್ಣಯ. ವಿಕಲ್ಪವಾಗಿ ಯಾವ ರೀತಿಯ ಓದುಗಾರಿಕೆ ಇಟ್ಟುಕೊಂಡರೂ ಕ್ರಿಯೆ ಒಂದೇ ತೆರ.

ಇದು 'ತಽಕಿಽಟಽ' ಎಂಬುದಕ್ಕೆ ಎರಡರಷ್ಟು. 'ತ ಕಿ ಟ' ಎಂಬುದಕ್ಕೆ ನಾಲ್ಕರಷ್ಟು ಕಾಲವನ್ನು ತೆಗೆದುಕೊಳ್ಳುತ್ತದೆ. ಇದನ್ನು ಮತ್ತೆ ಲಘುಗಳನ್ನಾಗಿ ಮಾಡಿದರೆ—

ತ ಕಿ ಟ ತ | ಕಿ ಟ ತ ಕಿ | ಟ ತ ಕಿ ಟ

ಇಲ್ಲಿ 'ತ ಕಿ ಟ ತ | ಕಿ ಟ ತ ಕಿ | ಟ ತ ಕಿ ಟ' ಮೂರರ ಲಯವಾದರೂ ವಿಭಜನೆ ನಾಲ್ಕರಂತೆಯೇ ಏಕೆಂದರೆ ಒಂದು ಮಾತ್ರೆಯೇ ನಾಲ್ಕರಷ್ಟಾಗಿರುವುದು. ಇಲ್ಲಿ ಹಿಂದೆ ಹೇಳಿದ ತ ಕಿ | ಟ ತ | ಕಿ ಟ ಎಂಬುದು ಇನ್ನೊಂದು ಬಾರಿ ಅನುವೃತ್ತಗೊಂಡಿದೆ.

ಇನ್ನು ಹಿಂದಕ್ಕೆ ಹೋಗುವ ಕೆಲಸ.

ತೀವ್ರ ವಿಳಂಬವೂ, ವೇಗವೂ ಅಲ್ಲದ ಮೊದಲ ಬಾರಿ ಸ್ವೀಕರಿಸಲ್ಪಟ್ಟ ಓದುಗಾರಿಕೆ ಇದು—

ತ ಕಿ ಟ

ಇಲ್ಲಿ ಒಂದೊಂದೂ ಒಂದೊಂದು ಮಾತ್ರೆಗಳ ಕಾಲವನ್ನು ತೆಗೆದುಕೊಳ್ಳುತ್ತದಷ್ಟೆ. ಇಂಥವುಗಳನ್ನು ಇನ್ನಷ್ಟು ಪಡೆಯೋಣ.

ತ ಕಿ ಟ ತ ಕಿ ಟ ತ ಕಿ ಟ ತ ಕಿ ಟ

ಇದನ್ನು ತೀವ್ರವಾಗಿ ಓದೋಣ. ಆಗ 'ತ ಕಿ ಟ' ಎಂಬುದು ತೆಗೆದುಕೊಂಡ ಕಾಲದಲ್ಲಿ ಅದರ ಎರಡರಷ್ಟಾದ 'ತ ಕಿ | ಟ ತ | ಕಿ ಟ' ಎನ್ನುವುದನ್ನು ಓದುತ್ತೇವೆ. ಇಲ್ಲಿ ಒಂದೊಂದು ಅಕ್ಷರಕ್ಕೂ ಅರ್ಧ ಮಾತ್ರೆಗಳ ಬೆಲೆ. ಇದನ್ನು ಮತ್ತಷ್ಟು ಶೀಘ್ರವಾಗಿ ಓದಿದರೆ

ತ ಕಿ ಟ ತ | ಕಿ ಟ ತ ಕಿ | ಟ ತ ಕಿ ಟ |

ಇಲ್ಲಿ ಒಂದೊಂದು ಅಕ್ಷರಕ್ಕೂ ಕಾಲು ಮಾತ್ರೆಗಳ ಕಾಲವಾಗುತ್ತದೆ. 'ತ ಕಿ ಟ ತ' ಎನ್ನುವುದನ್ನು 'ತ' ಎಂದು ಹೇಳುವಷ್ಟು ಕಾಲದಲ್ಲಿ ಹೇಳುತ್ತೇವೆ. ಹೀಗೆ ಕೇವಲ ಒಂದು ಮಾತ್ರೆಯ ಕಾಲದಲ್ಲಿ 8, 16, 32 ಮೊದಲಾಗಿ ಅಕ್ಷರಗಳಾಗಬೇಕಾಗುತ್ತದೆ.

ಇಲ್ಲಿ ಒಟ್ಟಿನಲ್ಲಿ ಏನು ಸ್ಪಷ್ಟಪಡುತ್ತದೆ?

ಯಾವುದೇ ಒಂದು ಲಯದ ಒಂದು ಗಣ; ಅದು ಎಷ್ಟು ಮಾತ್ರೆಗಳದೇ ಆಗಿರಲಿ; ಒಟ್ಟಿನಲ್ಲಿ ದ್ವಿಗುಣಿತ ತತ್ವಕ್ಕೆ ಸೇರಿರುತ್ತದೆ. ನಾಲ್ಕು ಮಾತ್ರೆಯ ಒಂದು ಗಣವನ್ನು ತೆಗೆದು ಕೊಳ್ಳೋಣ. ಅದರಲ್ಲಿ ಒಂದು ಮಾತ್ರೆಯು ನಾಲ್ಕು ಅಂಶಗಳಿರುತ್ತವೆ. ಹಾಗೆಯೇ ಮೂರು ಮಾತ್ರೆಗಳ ಗಣದಲ್ಲೂ. ಒಂದು ಮಾತ್ರೆಯ ಕಾಲವನ್ನು ಒಂದು ಗಣವೆಂದು ಪರಿಭಾವಿಸ ಬಹುದು. ಒಂದು ಎನ್ನುವ ಮಾತ್ರೆ ಕೇವಲ ಒಂದಲ್ಲ. ಯಾವ ರೀತಿಯ ಓದುಗಾರಿಕೆಯನ್ನೇ

ಸ್ವೀಕರಿಸಿ, ಅಲ್ಲಿನ ಹ್ರಸ್ವಸ್ವರವೊಂದಕ್ಕೆ ಒಂದು ಮಾತ್ರೆಯೆಂದು ಹೆಸರಿಟ್ಟರೂ ಕೂಡ, ಆ ಸ್ವೀಕೃತವಾದ ಒಂದು ಮಾತ್ರೆಯ ಕಾಲವು ತನಗಿಂತ ತೀವ್ರ ಓದುಗಾರಿಕೆಯಲ್ಲಿನ ಒಂದು ಮಾತ್ರೆಯ ಅರ್ಧದಷ್ಟು ಇರುತ್ತದೆ. ಒಟ್ಟಿನಲ್ಲಿ ನಡೆಯುವ ಕ್ರಿಯೆಯನ್ನು ಹೀಗೆ ತೋರ ಬಹುದು.

[1 ಮಾತ್ರೆಯ ಕಾಲ = 1 ಅಕ್ಷರ]

| (ವಿಳಂಬ ಗತಿ) | | | | (ತೀವ್ರ ಗತಿ) | | | |
|---|---|---|---|---|---|---|---|
| 2 | ಮಾತ್ರೆಯ | ಕಾಲ = ೧ | ಅಕ್ಷರ | 2 | ಅಕ್ಷರ | ಪಡೆಯುವ ಕಾಲ = | 1 ಮಾತ್ರೆ |
| 4 | ,, | ,, | ,, | 4 | ,, | ,, | ,, |
| 8 | ,, | ,, | ,, | 8 | ,, | ,, | ,, |
| 16 | ,, | ,, | ,, | 16 | ,, | ,, | ,, |
| 32 | ,, | ,, | ,, ಇತ್ಯಾದಿ | 32 | ,, | ,, | ,, ಇತ್ಯಾದಿ |

ಇಲ್ಲೆಲ್ಲೂ ವಿಷಮವೃತ್ತಿಯಿಲ್ಲ.

## ಲಯಕಲ್ಪನೆ ಹೇಗೆ?

ಒಂದು ಅಕ್ಷರಕ್ಕೆ ಮೂರು ಮಾತ್ರೆಗಳ ಬೆಲೆ ಬರಬಹುದು.

ಎನುತ | ತ | ಲ್ಲಣಿಸು | ತ
3 3 3 3

ಇಲ್ಲಿ ಒಂದು ಅಕ್ಷರಕ್ಕೆ ಮೂರು ಮಾತ್ರೆಗಳ ಬೆಲೆ ಬರುವುದರಿಂದಲೂ ವಿಷಮಲಯ ವಿದೆ; ಇಲ್ಲದಿದ್ದರೆ ನಾಲ್ಕು ಮಾತ್ರೆಗಳ ಬೆಲೆಯು ಸಿಕ್ಕಬೇಕಾಗಿತ್ತು ಎನ್ನಲಾಗದು. ಇಲ್ಲಿನ ರೀತಿಯೇ ಬೇರೆ. ಇಲ್ಲಿ 'ತಲ್' ಎನ್ನುವುದು ಪಡೆಯುವುದು ಅಂಶಬೆಲೆಯನ್ನಲ್ಲ; ಗಣದ ಬೆಲೆ ಯನ್ನು: ಮೂರು ಲಘುಗಳ ಬೆಲೆ—ಆ ಒಂದೊಂದೂ ಮೇಲಿನ ಸಮವೃತ್ತಿಯ ಸೂತ್ರಕ್ಕೆ ಒಳ ಪಡುತ್ತದೆ; ವಿಳಂಬ ತೀವ್ರ ಕ್ರಿಯೆಯಲ್ಲೂ. 'ತಲ್'ಗೆ ಪ್ರತಿಯಾಗಿ ಲಘುವೆನಿಸುವ 'ಕ' ಎಂಬು ದನ್ನು ತೆಗೆದುಕೊಳ್ಳೋಣ.

3 | ಕ | 3 | 3.

ಹೀಗಿರುವಾಗ ಎರಡನೆಯ ಗಣದ ನಿಯೋಜನೆ ಹೇಗೆ? ಆ ಗಣವನ್ನು ನಿಯೋಜಿಸಿ ಕೊಂಡ ಹೊರತು ಲಯಪ್ರತೀತಿಯೊದಗುವುದಿಲ್ಲ. ಇಲ್ಲಿ ನಿಯಮವಿಷ್ಟೆ: ಎರಡನೆಯ ಗಣವು ಮೂರು ಮಾತ್ರೆಗಳದ್ದು ∪∪∪. ಇಲ್ಲಿ ಅನುಕೂಲಕ್ಕೆ ತಕ್ಕುದಾದ ಒಂದು ಸ್ಥಾನವನ್ನು 'ಕ'ಕ್ಕೆ ಕೊಡುತ್ತೇವೆ. ಉಳಿದುದು ಮೌನ ಅಥವ ಸ್ವರ ಸೇರಿಕೆ. ಈ ನಿಯಮ ಎಲ್ಲ ಮಾತ್ರೆಗಳ ಲಯದಲ್ಲೂ ಸ್ವೀಕರಿಸುವಂಥದಾಗಿದೆ.

"**ಪತಿತ** | ಪಾವನ | ಸೀತಾ | ರಾಮ್"

ಇಲ್ಲೂ ಕೂಡ ಅದೇ ಸೂತ್ರ ಅನ್ವಯಾರ್ಹವಾದುದಾಗಿದೆ. ಇಲ್ಲಿ ಮೊದಲ ಗಣ ನಾಲ್ಕು ಮಾತ್ರೆಗಳದ್ದು. ಇರುವುದು ಮೂರು ಮಾತ್ರೆಗಳು. ಸರಿದೂಗಿಸುವುದು ಹೇಗೆ?

∪∪∪∪ / ಪತಿತ  ನಮಗೆ ಬೇಕಾದುದು ಒಂದು ಮಾತ್ರೆ ಹೆಚ್ಚಿಗೆ. ಆ ಒಂದು ಸೇರಿಕೆಯ ಮಾತ್ರೆ ಮೌನವಿರಬಹುದು ಇಲ್ಲವೆ ಸ್ವರರೂಪವಲ್ಲೇ ಇರಬಹುದು. ಆಗ ಈ ರೂಪಗಳು ನಮಗೆ

∪∪∪∪ – ∪∪∪ – ∪ ∪∪ –

ಸಿಕ್ಕುತ್ತವೆ. 'S ಪ ತಿ ತ, ಪS ತಿ ತ, ಪ ತಿS ತ, ಪ ತಿ ತS' ಈ ನಾಲ್ಕು ರೂಪಗಳೂ ಅಳವಡಲ್ಪಡಲು ಅರ್ಹವಾಗಿವೆ. ಆದರೂ ನಮ್ಮ ಅಭಿರುಚಿಗೆ ಚೆನ್ನ ಅನಿಸಿದುದನ್ನು ಅಳವಡಿಸಿಕೊಳ್ಳುತ್ತೇವೆ.[7] ಅಷ್ಟೆ ಹೊರತು 'ಪತಿತ' ಎನ್ನುವಲ್ಲಿನ ಪ್ರತಿ ಅಕ್ಷರಕ್ಕೂ ಮೂರನೆಯ ಒಂದನ್ನು ಸೇರಿಸುವಂತಿಲ್ಲ—ನನಗನಿಸುವ ಮಟ್ಟಿಗೆ.

ಇದು ಸೇರಿಕೆಯಾಯಿತಷ್ಟೆ. ಇನ್ನೂ ಒಂದು ವಿಶೇಷವಿದೆ. ನಾಲ್ಕು ಮಾತ್ರೆಗಳ ಗಣವೊಂದಕ್ಕೆ ಐದು ಅಕ್ಷರಗಳು ಬಂದರೆ ಏನು ಮಾಡುವುದು? ಆಗ ತೇಲಿಸುವುದು ಎನ್ನುತ್ತಾರೆ—ಆದರೆ ಅದು ಅಷ್ಟು ಸಮರ್ಪಕ ಶಬ್ದವಲ್ಲವೆನಿಸುತ್ತದೆ. ಒದಗುವ ಪರಿಸ್ಥಿತಿ ಎಂದರೆ ಇದು – ∪∪∪∪∪ / ಐದು ಅಕ್ಷರ  ಕೇವಲ ಅಕ್ಷರಗಳನ್ನು ಗಣಿಸಿದರೆ ಇರುವುದು ∪∪∪∪∪. ಇಲ್ಲಿ ಅನುಕೂಲಕ್ಕೆ ತಕ್ಕಂಥ ಎರಡು ಅಕ್ಷರಗಳನ್ನು, ಎರಡು ಲಘುಗಳನ್ನು ಒಂದು ಲಘುವಿನ ಕಾಲದಲ್ಲಿ ತೀವ್ರವಾಗಿ ಉಚ್ಚರಿಸಿ ನಾಲ್ಕು ಮಾತ್ರೆಗಳಿಗೆ ಸರಿಮಾಡಿಕೊಳ್ಳಬೇಕಾಗುತ್ತದೆ. ಆರು ಅಕ್ಷರಗಳಿದ್ದರೆ ಎರಡು ಬಾರಿ ಈ ಕ್ರಿಯೆ ನಡೆಸಿ ನಾಲ್ಕಾಗಿಸುತ್ತೇವೆ. ಇಷ್ಟಲ್ಲದೆ ಪ್ರತಿ ಅಕ್ಷರಗಳಿಗೂ ಐದನೆಯ ನಾಲ್ಕು ಅಥವಾ ಆರನೆಯ ನಾಲ್ಕು ಮಾತ್ರೆಗಳ ಬೆಲೆ ಇಡುವುದು ಪ್ರಾಯೋಗಿಕವಲ್ಲ.

ಸಂಗೀತದಲ್ಲಿ ನಾವೇನು ಮಾಡುತ್ತೇವೆ: ಒಂದನೆಯ ಕಾಲ, ಎರಡನೆಯ ಕಾಲ, ಮೂರನೆಯ ಕಾಲ ಎಂದು ಮೊದಲಾಗಿ ಹೆಸರಿಟ್ಟದ್ದೇವೆ.

ತ ಕಿ ಟ ಕ | ತಿ ರಿ ಗಿ ಡ ತ ಕ | ಜಂ ತಿ ರಿ ಗಿ ಡ | ತ ಜಂ ತ |

4 4 4 4

ಜಂSS | S ತನಕ | ತ ಕ್ಕಿ ಟ ಕಿ ಟ ತ ಕ | ಜಂSS ||

4 4 4 4

ಹೀಗೆ ನಡೆಯುತ್ತದೆ ಗಣಯೋಜನೆ.[8] ಲಯ ಕಲ್ಪನೆ.

## ವಿಷಮವೃತ್ತಿ, ವಿಷಮಲಯ ಇಲ್ಲ

ಒಟ್ಟಿನಲ್ಲಿ ವಿಷಮವೃತ್ತಿ ಛಂದಸ್ಸಿಗೆ ಹೊರಗು. ಯಾವ ಲಯವನ್ನೇ ತೆಗೆದುಕೊಂಡರೂ ತೀವ್ರವಿಳಂಬಗಳೆರಡರಲ್ಲೂ ಸಮವೃತ್ತಿಯೇ ಪ್ರಚುರ. ಗಣಗಳು, ಒಳಗೊಳ್ಳುವ

---

[7] 'S ಪತಿತ' ಇದನ್ನು ಅಳವಡಿಸಿಕೊಳ್ಳುವಾಗ ಆರಂಭದ 'S' ಸ್ವರವನ್ನು ಮೌನವಾಗಿ ಬಿಡುವುದು ಒಂದು ರೂಢಿಯಾದರೆ | ರಾಮ್S | ಎಂಬ ಚತುರ್ಮಾತ್ರಾ ಗಣದೊಡನೆ ಸೇರುವುದೂ ರೂಢಿಯಲ್ಲಿದೆ. ಸಾಮಾನ್ಯವಾಗಿ 'ಪತೀತ' ಎಂದು ಮಧ್ಯಗುರುವನ್ನಾಗಿ ಮಾಡಿಕೊಳ್ಳುವುದನ್ನೂ ಬಲ್ಲವರು ಗಮನಿಸಬಹುದು.

[8] ಈ ಸೂತ್ರದ ಬೆಳಕಿನಲ್ಲೇ ಅಂಶಲಯದ ಗುಟ್ಟು ಗೊತ್ತಾಗುವುದು.

ಮಾತ್ರೆಗಳು ಎಲ್ಲವೂ ಸಮವೃತ್ತಿಯಲ್ಲೇ ಸಹಚರಿಸುತ್ತದೆ. ವಿಷಮಲಯಗಳು ಕನ್ನಡದಲ್ಲೇಕೆ ಎಲ್ಲೂ ಇಲ್ಲವೆನ್ನುವುದು ಸಾಹಸದ ಮಾತಾದರೂ ಸತ್ಯಕ್ಕೆ ಹತ್ತಿರದ ಮಾತು. ವಿಷಮ ಸಂಖ್ಯೆಯ ಮಾತ್ರೆಗಳನ್ನೊಳಗೊಳ್ಳುವ ಗಣಗಳಿದ್ದರೂ ಅವುಗಳ ಲಯ ವಿಷಮವಲ್ಲ.

ಹಾಗಾದರೆ 3, 4, 3-4, 5—ಮೊದಲಾದ ಗಣಗಳು, ಲಯಗಳು ನಮಗೆ ಹೇಗೆ ದೊರೆತುವು, ಲಯ ನಿಷ್ಪತ್ತಿ ಹೇಗೆ? ವಿಕಾಸ ಎಂತು? ಇದಕ್ಕೆ ಮೂಲಸೂತ್ರವೇನಾದರೂ ಇದೆಯೆ? ಇದೆ.[9]



[9] ಗಾನಪದ್ಧತಿಯಲ್ಲಿ ನಾಲ್ಕು ಅಕ್ಷರಗಳ ಕಾಲದಲ್ಲಿ ಮೂರು ಶಬ್ದಗಳನ್ನು ನುಡಿಯುವುದು, ಅಂತೆಯೇ ಮೂರು ಅಕ್ಷರಗಳ ಕಾಲದಲ್ಲಿ ನಾಲ್ಕು ಶಬ್ದಗಳನ್ನು ನುಡಿಯುವುದು ವ್ಯವಹಾರವೇ ಆಗಿದೆ. ಸಂಗೀತದಲ್ಲಿ ಈ ಗಿಷ್ಟಿ ಇಲ್ಲವೇ ಕೈ ವಿಭಜನೆ ಖಚಿತವಾಗಿ ಸಾಧ್ಯವೆನ್ನುವುದು ನನ್ನ ಗುರುಮತ. ಆದರೆ ಆ ಅಕ್ಷರ ಗಿಷ್ಟಿ ಆಗಿಯೇ ಇದೆ; ತೀರ ಅತ್ಯಲ್ಪವೂ ವ್ಯತ್ಯಾಸವಾಗದಂತೆ ವಿಭಜಿಸುವುದು ಸಾಧ್ಯವೆನ್ನಲು ಆಧಾರವೇ ಇಲ್ಲ. ಎಷ್ಟರಮಟ್ಟಿಗೆ ಸಾಧ್ಯವೋ ಅಷ್ಟೇ ಅಸಾಧ್ಯವೆನ್ನಬಹುದು.

# ಪ್ರಾಚೀನ ಕರ್ಣಾಟಕದಲ್ಲಿ 'ದಿವ್ಯ' ಮತ್ತು 'ಮುಂಡಿಗೆ'

**ಲೇಖಕರು: ಎಂ. ಚಿದಾನಂದ ಮೂರ್ತಿ**
ಕನ್ನಡ ಅಧ್ಯಾಪಕ, "ಮಾನಸ ಗಂಗೋತ್ರಿ", ಮೈಸೂರು.

## "ದಿವ್ಯ"

ಕನ್ನಡ ಕಾವ್ಯಗಳನ್ನು ಅಧ್ಯಯನ ಮಾಡುವ ವಿದ್ಯಾರ್ಥಿಯ ಕಣ್ಣಿಗೆ '**ದಿವ್ಯ(ಬ್ಯ)**' ಎನ್ನುವ ಪದವು ಹಲವೆಡೆ ಗೋಚರವಾಗುತ್ತದೆ. ನನ್ನ ಗಮನಕ್ಕೆ ಬಂದ ಹಲವು ಉಲ್ಲೇಖಗಳನ್ನು ಕೆಳಗೆ ಕೊಟ್ಟಿದ್ದೇನೆ.

(i) ಶಂತನು ಮಹಾರಾಜನು ಯೋಜನಗಂಧಿಯ ಕೈಯನ್ನು ಹಿಡಿದದ್ದು "ನಲ್ಮೆಗೆ ದಿಬ್ಯಂಬಿಡಿವಂತೆವೋಲ್"೧ ಇದ್ದಿತೆಂದು ಪಂಪಕವಿಯ ವರ್ಣನೆ.

(ii) "ಕೆಲರ್ ನೆತ್ತರೊಳ್ ಮಿಂಪು ತಮಗೆ ದೋಷಮಿಲ್ಲೆಂದದರ್ಕೆ ದಿವ್ಯಂಬಿಡಿವಂತೆ ನಂಬಿಸಲ್ ಚಲಂಬಿಡಿದು ನಿಂತಾಂತರ್"೨

(iii) "ಕೊಲ್ಲೆಂ ಪುಸಿಯೆಂ ಕಳೆಂ ಪಾವರಿಗನಲ್ಲೆಂ ಪೆಱರರ್ಥಮಂ ಕೊಳ್ಳೆನೆಂದು ಕಿರ್ಚು ಮೊದಲಾಗೊಡೆಯ ದಿವ್ಯಂಗಳಿಂ ಶುದ್ಧರಾಗಿ ಪೋಪರಿಂದಮುಂ"೩

(iv) "ಮೋಹಿ ಪಿಡಿವಂತೆ ದಿವ್ಯದ ಕಾಸಿದ ಕುೞುವಂ"೪

(v) "ಏನಬೇಡಿದುದನೀವನಾಗಿ ಸಂಜಿಗೆಯುಳ್ಳ ಶಿವಭಕ್ತಂಗೆ ಇದೇ ದಿಬ್ಯ ಕೂಡಲಸಂಗನು ದೇವಾ"೫

(vi) "ಎನ್ನಿಂದ ಕಿರಿಯರಿಲ್ಲ, ಶಿವಭಕ್ತರಿಂದ ಹಿರಿಯರಿಲ್ಲ,
ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ !
ಕೂಡಲಸಂಗಮದೇವಾ, ಎನಗಿದೇ ದಿಬ್ಯ"೬

(vii) "ಮಜ್ಜನಕ್ಕೆಱೆವುದು ಲಿಂಗ —
ಅದು ಲಿಂಗ ಕರಸ್ಥಲದ ದಿಬ್ಯ —
ಗುರುವಚನ ಭಾಷಾಪತ್ರ ಶಿವಕರದಲ್ಲಿ !
ಸತ್ಯದಿಂದ ನಡೆವಂಗೆ ನಿತ್ಯನೇಮವಾಗಿ ಸಲಿಸುವನಲ್ಲದೆ,
ಹುಸಿವಂಗೆ ಮುಱಿಲ ಕಿಚ್ಚಾಗಿ ಸುಡುವ"೭

---

೧ ಪಂಪಭಾರತ, 1·70.
೨ ಶಾಂತಿಪುರಾಣ, 4·30, ವ.
೩ ಧರ್ಮಾಮೃತಂ, I, ಪು. 429.
೪ ಪಂಪರಾಮಾಯಣ ಸಂಗ್ರಹ, 4·62.
೫ ಷಟ್ಸ್ಥಲದ ಬಸವಣ್ಣನವರ ವಚನಗಳು (1954), ಪು. 60.
೬ ,, ಪು. 84.
೭ ,, ಪು. 169.

(viii) " ದಿವ್ಯದ ಗುಂಡಸಿರ್ಕ್ಕೆಯೊಳಾಂತನಚಳಿತಸಿದ್ಧನು " [೮]

(ix) " ನಲ್ಮೆಗೆ ದಿವ್ಯಂಬಿಡಿದಳೊ ಪೇಳಿಮೆನಿಪಳಾ ವ್ಯತಿಕರದೊಳ್ " [೯]

(x) ಮುಳಿಸಿಂದೀಕ್ಷಿಸೆ ಸಾರ್ದುಪೆಮ್ಮ ಧನಮುಂ ದೇಶಂಗಳುಂ ನಿನ್ನನ
ಗ್ಗಳವಿನ್ನೆಮ್ಮಯ ಜೀವಮೆಂದಸಿಲತೋದ್ಯತ್ಪತ್ರಮಂ ನೆತ್ತಿಯೊಳ್
ತಳೆದಾ ವೈರಿಗಳಂಬುದಿವ್ಯಮನೆ ಪೊಕ್ಕಂತುಷ್ಣ ಕಾಕ್ಷೇಯಕೋ
ಜ್ಜ್ವಳಧಾರಾಜಳದಲ್ಲಿ ಮುಳುಗುವುದು ನಿಚ್ಚಂ ತದ್ಧರಾಧೀಶನಾ ॥ ೧೦

(xi) ಹರನಾಣೆ ಶಿಖಿ ವಿಷಂ ತನಿ । ಸರಮುಧಿಕ ಘಟಾಹಿ ಕೋಶಪಾನಂ ದಲುಮೆಂ ।
ಬುದು ಸಪ್ತದಿವ್ಯಮೇಕಿಂ । ತಿರಲಾನೆಂದುದನೆ ಮಾಡಲಿವರ್ಗಳ್ ಶುದ್ಧರ್ ॥ ೧೧

(xii) ಗಂಡಹೆಂಡಿರು ತಾವು ನಿರ್ದೋಷರೆಂದೆಡೆ
ಗೊಂಡು ದಿಬ್ಬಗೆ ಕೈಯನಿಕ್ಕಿ
ಕೆಂಡವ ಪಿಡಿದು ತಂದೀವಂತೆ ಕೊಟ್ಟಳು
ಗಂಡಗೊರ್ವಳು ಮಾಣಿಕವನು ॥ ೧೨

ಇವು ಎಲ್ಲೋ ಕಣ್ಣಿಗೆ ಬಿದ್ದ ಕೆಲವು ಉಲ್ಲೇಖಗಳು. ಹುಡುಕಿದರೆ ಇನ್ನೂ ಹಲವು ಸಿಗುವುದರಲ್ಲಿ ಸಂದೇಹವಿಲ್ಲ. ಪ್ರಾಚೀನ ಕರ್ಣಾಟಕದಲ್ಲಿ 'ದಿವ್ಯ'ದ ಪದ್ಧತಿಯೆಂಬುದು ಸಾಕಷ್ಟು ಪ್ರಚಲಿತವಾಗಿದ್ದು ಆ ಪದ್ಧತಿಯ ಪ್ರತಿಧ್ವನಿಗಳು ಕಾವ್ಯಗಳಲ್ಲಿ ಹೇಗೆ ಮೂಡಿವೆಯೆಂಬುದನ್ನು ತೋರಿಸುವ ಉದ್ದೇಶದಿಂದ ಮಾತ್ರ ಮೇಲಿನ ಉಲ್ಲೇಖಗಳನ್ನು ಹೆಸರಿಸಲಾಗಿದೆಯೇ ಹೊರತು ಆ ಪದದ ನಿಷ್ಪತ್ತಿ ಮತ್ತು ಅರ್ಥಗಳನ್ನು ಚರ್ಚಿಸುವುದಕ್ಕಲ್ಲ. ಏಕೆಂದರೆ ಆ ಪದದ ಅರ್ಥ ಮತ್ತು ನಿಷ್ಪತ್ತಿಗಳೆರಡೂ ಸ್ಪಷ್ಟವಾಗಿವೆ ಮತ್ತು ಪ್ರಸಿದ್ಧವಾಗಿವೆ. ದಿವ್ಯ ಎನ್ನುವುದು ದೈವಕ್ಕೆ ಸಂಬಂಧಿಸಿದುದು. ಇಬ್ಬರ ಮಧ್ಯೆ ಎದ್ದ ವ್ಯವಹಾರ ಅಥವಾ ವಿವಾದವೊಂದರ ನಿರ್ಣಯಕ್ಕೆ ಮಾನುಷವಾದ ಅಥವಾ ಲೌಕಿಕವಾದ ಸಾಕ್ಷಿಗಳ ಅಭಾವವಿರುವಾಗ ದೈವದ ಸಹಾಯವನ್ನು ತೆಗೆದುಕೊಂಡು ಆ ವಿವಾದವನ್ನು ನಿರ್ಣಯಿಸುವ ವಿಧಾನವೇ ದಿವ್ಯ.[೧೩] ಒಬ್ಬನ ಮೇಲೆ ಯಾವುದೋ ದೋಷದ ಆರೋಪಣೆ ಇದೆಯೆಂದು ಭಾವಿಸೋಣ. ಅವನು ನಿರ್ದೋಷಿಯೆಂಬುದಕ್ಕೆ ಯಾವ ಭೌತಿಕವಾದ ಆಧಾರವೂ ಇಲ್ಲ. ಆಗ ಅವನು ತಾನು ನಿರ್ದೋಷಿಯೆಂಬುದನ್ನು ತೋರಿಸಿಕೊಡಲು ದೈವದ ಸಹಾಯವನ್ನು ಪಡೆಯಲು ಬಯಸಬಹುದು. ಉದಾಹರಣೆಗೆ ಅವನು ಬೆಂಕಿಯನ್ನು ಕೈಯಲ್ಲಿ ಹಿಡಿದಾಗ ಅದು ಸುಡದಿದ್ದರೆ ದೈವವು ಅವನ ಸಹಾಯಕ್ಕೆ ಬಂದು ಅವನು ಕಳಂಕರಹಿತನು ಎಂಬುದನ್ನು ಪ್ರಕಟಪಡಿಸಿದೆಯೆಂದು ಎಲ್ಲರೂ ನಂಬುತ್ತಿದ್ದರು.

---

೮ ಸಿದ್ಧರಾಮ ಚಾರಿತ್ರ, 7·20.

೯ ಚಂದ್ರಪ್ರಭ ಪುರಾಣ, 5·131. (ಪಂಪಭಾರತದ ಉಕ್ತಿಯನ್ನು ಹೋಲಿಸಿ)

೧೦ ಪಾರ್ಶ್ವನಾಥ ಪುರಾಣ, 2·6.

೧೧ ತ್ರಿಷಷ್ಟಿ ಪುರಾತನಚರಿತೆ, 7·105 (ಈ ಪದ್ಯವನ್ನು ಪ್ರೊ॥ ಡಿ. ಎಲ್. ನರಸಿಂಹಾಚಾರ್ಯರಿಂದ ಪಡೆದಿದ್ದೇನೆ).

೧೨ ಭರತೇಶವೈಭವ (ಭೋಗವಿಜಯ), ಪು. 44.

೧೩ " ತತ್ರ ಮಾನುಷ ಪ್ರಮಾಣಾನಿರ್ಣೇಯಸ್ಯಾಪಿ ನಿರ್ಣಾಯಕಂ ಯತ್ತದ್ದಿವ್ಯಮಿತಿ ಲೋಕಪ್ರಸಿದ್ಧಂ " (ದಿವ್ಯತತ್ತ್ವ, ಪು. 574). ಡಾ॥ ಪಿ. ವಿ. ಕಾಣೆಯವರ History of Dharmashāstra, III ಎಂಬ ಗ್ರಂಥದ 383ನೆಯ ಪುಟದಲ್ಲಿ ಉದ್ಧೃತವಾಗಿದೆ.

ವಿವಾದಗಳನ್ನು ಪರಿಹರಿಸಲು ಅನುಸರಿಸುತ್ತಿದ್ದ ಇಂತಹ ಮಾರ್ಗವನ್ನು ಪ್ರಾಚೀನ ಭಾರತದಲ್ಲಿ ದಿವ್ಯವೆಂದು ಕರೆಯುತ್ತಿದ್ದರು.

ದಿವ್ಯದಲ್ಲಿ ಅನೇಕ ಪ್ರಭೇದಗಳಿವೆ. ಅತ್ಯಂತ ಪ್ರಾಚೀನ ಕಾಲದಲ್ಲಿ ಅತ್ಯಲ್ಪ ಸಂಖ್ಯೆಯ ದಿವ್ಯಗಳಿದ್ದುದಲ್ಲದೆ ಅವುಗಳನ್ನು ನಡೆಯಿಸುವ ರೀತಿಯೂ ಬಹಳ ಸರಳವಾಗಿದ್ದಿತು. ಕಾಲ ಕಳೆದಂತೆ ಅವುಗಳ ಸಂಖ್ಯೆಯೂ ಬೆಳೆಯಿತು, ರೀತಿಯೂ ಜಟಿಲವಾಯಿತು. ಅದರ ಇತಿಹಾಸ ವನ್ನು ಡಾ|| ಪಿ. ವಿ. ಕಾಣೆಯವರ ಗ್ರಂಥವನ್ನಾಶ್ರಯಿಸಿ ಹೀಗೆ ಸಂಗ್ರಹಿಸಬಹುದು–"ಋಗ್ವೇದ ದಲ್ಲಿ ದಿವ್ಯದ ಪದ್ಧತಿಯ ಉಲ್ಲೇಖವಿದೆ ಎಂದು ಹಲವರು ಭಾವಿಸುತ್ತಾರೆ. ಆದರೆ ಅಲ್ಲಿಯ ಉಲ್ಲೇಖದ ವಿಷಯದಲ್ಲಿ ಪ್ರಬಲ ಸಂದೇಹಗಳಿಗೆ ಅವಕಾಶವುಂಟು. ಪಂಚವಿಂಶ ಅಥವಾ ತಾಂಡ್ಯ ಬ್ರಾಹ್ಮಣದಲ್ಲಿ (14.6.6) ವತ್ಸ ಎನ್ನುವವನು ತಾನು ಶೂದ್ರಳೊಬ್ಬಳ ಮಗನಲ್ಲ ವೆಂದೂ ಬ್ರಾಹ್ಮಣನೆಂದೂ ತೋರಿಸಲು ಅಗ್ನಿಪ್ರವೇಶ ಮಾಡಿ ಯಾವ ತೊಂದರೆಯೂ ಇಲ್ಲದೆ ಹೊರಬಂದಂತೆ ಹೇಳಿದೆ. ಸಂಸ್ಕೃತ ಗ್ರಂಥಗಳಲ್ಲಿ ದಿವ್ಯದ ವಿಷಯಕ್ಕೆ ಇದೇ ಅತ್ಯಂತ ಪ್ರಾಚೀನ ಉಲ್ಲೇಖ. ಛಾಂದೋಗ್ಯದಲ್ಲಿ (VI. 16.1) ಕಳ್ಳತನದ ಆಪಾದನೆಗೆ ಗುರಿಯಾಗಿರುವ ವ್ಯಕ್ತಿಯು ತಾನು ನಿರಪರಾಧಿ ಎಂಬುದನ್ನು ತೋರಿಸಲು ಬೆಂಕಿಯಲ್ಲಿ ಕಾಯಿಸಿದ ಕೊಡಲಿ ಯನ್ನು ಹಿಡಿಯುವ ವಿಷಯವಿದೆ. ಶಂಖಲಿಖಿತನು ನಾಲ್ಕು ದಿವ್ಯಗಳನ್ನು ಹೇಳುತ್ತಾನೆ— ತುಲಾ, ವಿಷ, ಜಲ ಮತ್ತು ಅಗ್ನಿ.[೧೪] ಯಾಜ್ಞವಲ್ಕ್ಯಸ್ಮೃತಿ, ವಿಷ್ಣುಧರ್ಮಸೂತ್ರ, ನಾರದಸ್ಮೃತಿಗಳು ಐದು ದಿವ್ಯಗಳನ್ನು ಹೆಸರಿಸುತ್ತವೆ—ತುಲಾ, ಅಗ್ನಿ, ಜಲ, ವಿಷ ಮತ್ತು ಕೋಶ. ನಾರದನಿಗೆ ಇನ್ನೂ ಎರಡು ದಿವ್ಯಗಳು ಗೊತ್ತಿದ್ದುವು - ತಪ್ತಮಾಷ ಮತ್ತು ತಂಡುಲ. ಬೃಹಸ್ಪತಿ ಮತ್ತು ಪಿತಾಮಹರು ಒಂಬತ್ತು ದಿವ್ಯಗಳನ್ನು ಹೇಳುತ್ತಾರೆ.—ತುಲಾ, ಅಗ್ನಿ, ಜಲ, ವಿಷ, ಕೋಶ, ತಪ್ತಮಾಷ, ತಂಡುಲ, ಫಾಲ ಮತ್ತು ಧರ್ಮ. ಇತ್ತೀಚಿನ ಮಿತಾಕ್ಷರಾ, ಸ್ಮೃತಿಚಂದ್ರಿಕಾ, ದಿವ್ಯತತ್ವ ಮುಂತಾದುವುಗಳಲ್ಲಿ ದಿವ್ಯಗಳ ವಿಸ್ತಾರವಾದ ನಿರೂಪಣೆ ಯಿದೆ."[೧೫]

ರಾಮಾಯಣದಲ್ಲಿ ಸೀತೆಯು ತನ್ನ ಪಾತಿವ್ರತ್ಯವನ್ನು ಸ್ಥಿರಪಡಿಸಲು ಅಗ್ನಿಪ್ರವೇಶ ಮಾಡಿದ ವಿಷಯವು ಬಹು ಪ್ರಸಿದ್ಧವಾದುದೇ. ಸಂಸ್ಕೃತ ಮೃಚ್ಛಕಟಿಕದಲ್ಲಿ ದಿವ್ಯಗಳನ್ನು ಪ್ರಸ್ತಾಪಿಸಿದೆ.[೧೬] ಸಂಸ್ಕೃತ ಪಂಚತಂತ್ರದಲ್ಲಿ ಮಾನುಷ ಸಾಕ್ಷಿಗಳಿಗಿಂತ ಲಿಖಿತ ಸಾಕ್ಷಿಗಳು ಶ್ರೇಷ್ಠವೆಂದೂ, ದಿವ್ಯಗಳಿಗಿಂತ ಮಾನುಷ ಸಾಕ್ಷಿಗಳು ಶ್ರೇಷ್ಠವೆಂದೂ ಹೇಳಿದೆ.[೧೭] ಏಳನೆಯ ಶತಮಾನದ ಹ್ಯುಯೆನ್‌ತ್ಸಾಂಗನು ಅಗ್ನಿ, ಜಲ, ವಿಷ ಮತ್ತು ತುಲಾ ಎಂಬ ನಾಲ್ಕು ದಿವ್ಯ

---

೧೪ ಆರಂಭದಲ್ಲಿ ಎರಡೇ ದಿವ್ಯಗಳಿದ್ದುವೆಂದೂ ಕ್ರಮೇಣ ಅವುಗಳ ಸಂಖ್ಯೆ ಒಂಬತ್ತಕ್ಕೇರಿತೆಂದೂ ಡಾ|| ಜಾಲಿಯವರು ಹೇಳುತ್ತಾರೆ. (Hindu Law and Custom, P. 313)

೧೫ P. V. Kāṇe: History of Dharmashāstra, III, P. 361-2

೧೬ ಮೃಚ್ಛಕಟಿಕದಲ್ಲಿ ಚಾರುದತ್ತನ ಈ ಮಾತುಗಳನ್ನು ನೋಡಿ—"ರಾಜನೆ, ಅಪರಾಧಿಯ ದೋಷ ವನ್ನು ನಿರ್ಣಯಿಸುವುದಕ್ಕೆ ವಿಷಪರೀಕ್ಷೆ, ಅಗ್ನಿಪರೀಕ್ಷೆ ಮೊದಲಾದ ಅನೇಕೋಪಾಯಗಳಿದ್ದರೂ, ಯಾವುದನ್ನೂ ಮಾಡದೆ ಒಬ್ಬ ದುಷ್ಟನ ಮಾತಿನಂತಲೇ ಬ್ರಾಹ್ಮಣನಾದ ನನಗೆ ಹೀಗೆ ಪ್ರಾಣಾಂತ ಶಿಕ್ಷೆಯನ್ನು ವಿಧಿಸಿದುದರಿಂದ ನೀನು ಪುತ್ರ ಪೌತ್ರ ಸಮೇತನಾಗಿ ನರಕಾನುಭವವನ್ನು ಮಾಡು ......"

(ಕರ್ನಾಟಕ ಮೃಚ್ಛಕಟಿಕ ಪ್ರಕರಣಂ, 1940, ಪು. 115)

೧೭ Encyclopaedia of Religion and Ethics, IX, P. 523

ಗಳನ್ನು ಹೆಸರಿಸುತ್ತಾನೆ.[೧೮] ಹನ್ನೊಂದನೆಯ ಶತಮಾನದ ಅಲ್ಬೆರೂನಿಯು ಪಂಚತಂತ್ರದಂತೆಯೇ ಲಿಖಿತ ಸಾಕ್ಷಿ, ಮಾನುಷಸಾಕ್ಷಿ, ದಿವ್ಯ— ಈ ಕ್ರಮದಲ್ಲಿ ಪ್ರಾಮುಖ್ಯವನ್ನು ಕೊಡಬೇಕು ಎನ್ನುತ್ತಾನೆ.[೧೯] ಪ್ರಾಚೀನ ಭಾರತದಲ್ಲಿ ದಿವ್ಯದ ಪದ್ಧತಿಯ ಪ್ರತಿಧ್ವನಿಗಳು ಬೇರೆಡೆಗಳಲ್ಲಿಯೂ ಕಾಣಿಸಿಕೊಂಡಿವೆಯೆಂಬುದಕ್ಕೆ ಇವು ಎಲ್ಲೋ ಕೆಲವು ನಿದರ್ಶನಗಳು.

ಒಂಬತ್ತು ರೀತಿಯ ದಿವ್ಯಗಳನ್ನು ಕೆಳಗೆ ಸಂಗ್ರಹವಾಗಿ ವಿವರಿಸಲಾಗಿದೆ. ಇಲ್ಲಿ ಡಾ॥ ಪಿ. ವಿ. ಕಾಣೆಯವರ ಗ್ರಂಥದ ಉಪಯೋಗವನ್ನು ಪಡೆದುಕೊಂಡಿದ್ದೇವೆ.[೨೦] ದಿವ್ಯವನ್ನು ನಡೆಯಿಸುವ ಹಿಂದಿನ ದಿನ ಧರ್ಮಾಧಿಕಾರಿಯೂ, ಪರೀಕ್ಷೆಗೆ ಒಳಗಾಗಿರುವ ಶೋಧ್ಯನೂ ಉಪವಾಸದಿಂದಿದ್ದು ದಿವ್ಯದ ದಿನ ಪ್ರಾತಃಕಾಲ ಸ್ನಾನವನ್ನು ಮಾಡಿ ಪೂಜಾದಿಗಳನ್ನು ನೆರವೇರಿಸಬೇಕು. ಧರ್ಮಾಧಿಕಾರಿಯು ಪೂರ್ವದಿಕ್ಕಿಗೆ ತಿರುಗಿ ಧರ್ಮದೇವತೆಯನ್ನು ಆಹ್ವಾನಿಸಿ ಬೇರೆ ಬೇರೆ ದೇವತೆಗಳ ಪೂಜೆಯನ್ನು ಸಾಂಗವಾಗಿ ನೆರವೇರಿಸಬೇಕು. ಒಂದು ಪತ್ರದ ಮೇಲೆ ವಿವಾದದ ವಿಷಯವನ್ನು ಬರೆದು ಅದನ್ನು ಶೋಧ್ಯನ ತಲೆಯ ಮೇಲಿಟ್ಟು[೨೧] 'ದೇವತೆಗಳೇ, ನೀವೆಲ್ಲರೂ ಜನರ ಕಾರ್ಯಗಳನ್ನು ಬಲ್ಲಿರಿ' ಎಂಬರ್ಥ ಬರುವ ಮಂತ್ರವನ್ನು ಉಚ್ಚರಿಸಬೇಕು. ಪೂರ್ವಭಾವಿಯಾಗಿ ನಡೆಯುವ ಇಷ್ಟು ಕಾರ್ಯಗಳು ಮುಗಿದ ಬಳಿಕ ದಿವ್ಯವು ನಡೆಯುತ್ತದೆ.

## ೧. ತುಲಾದಿವ್ಯ

ಉದುಂಬರದಂತಹ ವೃಕ್ಷದಿಂದ ಒಂದು ತುಲಾ ಅಥವಾ ತಕ್ಕಡಿಯನ್ನು ಮಾಡಬೇಕು. ತಕ್ಕಡಿಯ ಒಂದು ತಟ್ಟೆಯಲ್ಲಿ ಶೋಧ್ಯನನ್ನಿರಿಸಿ ಇಟ್ಟಿಗೆ, ಕಲ್ಲು ಮುಂತಾದುವುಗಳಿಂದ ತೂಗಬೇಕು. ವ್ಯಾಪಾರಿಗಳು ಅಥವಾ ಅಕ್ಕಸಾಲಿಗಳು ಬಂದು ನೋಡಿ ಅವನ ತೂಕಕ್ಕೆ ಸರಿಯಾಗಿದೆಯೇ ಇಲ್ಲವೇ ಎಂಬುವನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು. ಬಳಿಕ ಶೋಧ್ಯನು ಕೆಳಗಿಳಿದು ತಕ್ಕಡಿಯನ್ನು ಕುರಿತು, "ಓ ತಕ್ಕಡಿಯೇ, ನೀನು ಸತ್ಯದ ನಿಲಯ, ದೇವತೆಗಳು ನಿನ್ನನ್ನು ಅದಕ್ಕಾಗಿ ನಿರ್ಮಿಸಿದರು. ಸತ್ಯವನ್ನು ಪ್ರಕಟಪಡಿಸಿ ನನ್ನನ್ನು ಈ ಸಂಶಯದಿಂದ ಬಿಡುಗಡೆ ಮಾಡು. ಓ ತಾಯಿ, ನಾನು ದೋಷಿಯಾದರೆ ಕೆಳಗೆ ತೆಗೆದುಕೊಂಡು ಹೋಗು, ನಿರ್ದೋಷಿಯಾದರೆ ಮೇಲಕ್ಕೆ ತೆಗೆದುಕೊಂಡು ಹೋಗು" ಎಂದು ಪ್ರಾರ್ಥಿಸಿದ ಬಳಿಕ ಅವನನ್ನು ಮತ್ತೆ ತಕ್ಕಡಿಗೆ ಏರಿಸಬೇಕು. ಸ್ವಲ್ಪ ಕಾಲವಾದ ಮೇಲೆ ಅವನ ತೂಕವನ್ನು ಮತ್ತೆ ಪರೀಕ್ಷಿಸಬೇಕು. ಅವನ ತೂಕ ಕಡಮೆಯಾಗಿದ್ದರೆ ಅವನು ನಿರ್ದೋಷಿ; ತೂಕ ಹೆಚ್ಚಾಗಿದ್ದರೆ ಅಥವಾ ಅಷ್ಟೇ ಇದ್ದರೂ ಕೂಡ ದೋಷಿ.

## ೨. ಅಗ್ನಿದಿವ್ಯ

ಆಕಳಿನ ಸೆಗಣಿಯಿಂದ ಪೂರ್ವ ಪಶ್ಚಿಮಾಭಿಮುಖವಾಗಿ ಒಂಬತ್ತು ವರ್ತುಲಗಳನ್ನು ನಿರ್ಮಿಸಬೇಕು. (ಇವು ಅಗ್ನಿ, ವರುಣ, ವಾಯು, ಯಮ, ಇಂದ್ರ, ಕುಬೇರ, ಸೋಮ,

---

೧೮ Encyclopaedia of Religion and Ethics, IX, P. 523

೧೯ ,,

೨೦ D. C. Sircar ಅವರ "Successors of the Shātavāhanas in the lower Deccan" ಎಂಬ ಗ್ರಂಥದಲ್ಲೂ ದಿವ್ಯಗಳ ಸಂಕ್ಷಿಪ್ತ ವಿವರಣೆ ದೊರಕುತ್ತದೆ.

೨೧ ಈ ವಿಧಿಯನ್ನು ಪ್ರಾಚೀನ ಕರ್ಣಾಟಕದಲ್ಲಿಯೂ ಅನುಸರಿಸುತ್ತಿದ್ದರೆಂಬುದಕ್ಕೆ ಶಾಸನಾಧಾರವಿದೆ. (ಮುಂದೆ ನೋಡಿ).

ಸವಿತೃ ಮತ್ತು ಇತರ ದೇವತೆಗಳು). ಒಂದೊಂದು ವರ್ತುಲದಲ್ಲೂ ಕುಶವನ್ನು ಹರಡಬೇಕು. ಹೋಮಾದಿಗಳೆಲ್ಲ ಮುಗಿದ ಬಳಿಕ ಶೋಧ್ಯನು ಪೂರ್ವದಿಕ್ಕಿನ ಮೊದಲನೆಯ ವರ್ತುಲದಲ್ಲಿ ನಿಂತಮೇಲೆ ಅವನ ಅಂಗೈಗಳಿಗೆ ಬತ್ತವನ್ನು ತಿಕ್ಕಿ ಅಲ್ಲಿ ಮೊದಲೇ ಇದ್ದಿರಬಹುದಾದ ಗಾಯ ಗಳನ್ನು ಕೆಂಪುಚಿಹ್ನೆಗಳಿಂದ ಗುರುತಿಸಬೇಕು. ಬಳಿಕ ಅವನ ಅಂಗೈಮೇಲೆ ಏಳು ಅರಳಿ ಎಲೆ ಗಳನ್ನಿಟ್ಟು ಮೇಲೆ ಅಕ್ಕಿಯ ಕಾಳು ಮತ್ತು ಮೊಸರನ್ನು ಹಾಕಿ ಎಲೆಗಳನ್ನು ಅಂಗೈಗಳಿಗೆ ದಾರ ದಿಂದ ಕಟ್ಟಬೇಕು. ಬಳಿಕ ಕೆಂಪಗೆ ಕಾಯಿಸಿದ ಕಬ್ಬಿಣದ ಗುಂಡನ್ನು ಧರ್ಮಾಧಿಕಾರಿಯು ಇಕ್ಕುಳದ ಸಹಾಯದಿಂದ ಅವನ ಅಂಗೈಗಳ ಮೇಲೆ ಇಡಬೇಕು. ಶೋಧ್ಯನು ನಿಧಾನವಾಗಿ ನಡೆದುಕೊಂಡು ಬಂದು ಎಂಟನೆಯ ವರ್ತುಲದಲ್ಲಿ ನಿಂತು ಒಂಬತ್ತನೆಯ ವರ್ತುಲದೊಳಕ್ಕೆ ಎಸೆಯಬೇಕು. ಬಳಿಕ ಶೋಧ್ಯನ ಅಂಗೈಗಳನ್ನು ಬತ್ತದ ಕಾಳುಗಳಿಂದ ತಿಕ್ಕಬೇಕು. ಅವನು ಮುಖದಲ್ಲಿ ನೋವನ್ನು ವ್ಯಕ್ತಪಡಿಸಿದರೆ ಅಥವಾ ಹೊಸಗಾಯಗಳಾಗಿದ್ದರೆ, ಎಂದರೆ ಬೆಂಕಿ ಯಿಂದ ಅವನ ಕೈಗಳ ಮೇಲೆ ಗಾಯಗಳಾಗಿದ್ದರೆ ದೋಷಿ, ಇಲ್ಲದಿದ್ದರೆ ನಿರ್ದೋಷಿ.

## ೩. ಜಲದಿವ್ಯ

ಇದರ ವಿಧಾನವು ಸ್ವಲ್ಪ ಜಟಿಲವಾದುದು. ಕೊಳದ ಹತ್ತಿರ ಅದರ ದಡದ ಬಳಿ ಧರ್ಮಾಧಿಕಾರಿಯು ಒಂದು ತೋರಣವನ್ನು ಕಟ್ಟಿಸುತ್ತಾನೆ. ನೆಲದ ಮೇಲೆ ತೋರಣಕ್ಕೆ ನೂರೈವತ್ತು ಹಸ್ತಗಳಷ್ಟು ದೂರದಲ್ಲಿ ಒಂದು ಕಂಬವನ್ನೂ, ನೀರಲ್ಲಿ ಹೊಕ್ಕುಳುದ್ದದ ಆಳ ವಿರುವ ಪ್ರದೇಶದಲ್ಲಿ ಮತ್ತೊಂದು ಕಂಬವನ್ನೂ ನಿಲ್ಲಿಸುತ್ತಾರೆ. ನೀರಲ್ಲಿರುವ ಕಂಬದ ಬಳಿ ಮೊದಲ ಮೂರು ವರ್ಣಗಳ ಪೈಕಿ ಒಂದಕ್ಕೆ ಸೇರಿದ ಒಬ್ಬ ಬಲಶಾಲಿಯು ನಿಂತಿರುತ್ತಾನೆ. ಶೋಧ್ಯನು, ಜಲದೇವತೆ ವರುಣನಿಗೆ ಮತ್ತು ಒಂದು ಬಿಲ್ಲು ಮೂರು ಬಾಣಗಳಿಗೆ ಪೂಜೆ ಯನ್ನು ಸಲ್ಲಿಸಿದ ಮೇಲೆ ನೀರಲ್ಲಿ ನಿಂತಿರುವ ವ್ಯಕ್ತಿಯ ಬಳಿ ಹೋಗಿ ನಿಲ್ಲಬೇಕು. ತೋರಣದ ಬಳಿಯಿಂದ ನೆಲದ ಮೇಲಿನ ಕಂಬದ ಕಡೆಗೆ ಬಿಲ್ವಿದ್ಯೆಯನ್ನು ಚನ್ನಾಗಿ ಬಲ್ಲವನೊಬ್ಬನು ಮೂರು ಬಾಣಗಳನ್ನು ಪ್ರಯೋಗಿಸುತ್ತಾನೆ. ಯುವಕನೂ ಬಲಶಾಲಿಯೂ ಆದವನೊಬ್ಬನು ಓಡಿಹೋಗಿ ಎರಡನೆಯ ಬಾಣವು ಬಿದ್ದೆಡೆ ನಿಲ್ಲುತ್ತಾನೆ. ಇದಾದ ಬಳಿಕ ಧರ್ಮಾಧಿಕಾರಿಯು ಚಪ್ಪಾಳೆ ತಟ್ಟುತ್ತಾನೆ. ಆ ಕ್ಷಣದಲ್ಲಿ ನೀರಲ್ಲಿ ನಿಂತಿರುವ ಶೋಧ್ಯನು ತನ್ನ ಪಕ್ಕದ ವ್ಯಕ್ತಿಯ ತೊಡೆ ಹಿಡಿದುಕೊಂಡು ನೀರಲ್ಲಿ ಮುಳುಗಬೇಕು. ಅದೇ ಕ್ಷಣದಲ್ಲಿ ತೋರಣದ ಬಳಿಯಿಂದ ಮತ್ತೊಬ್ಬ ಬಲಶಾಲಿಯಾದ ಯುವಕನು ಎರಡನೆಯ ಬಾಣ ಬಿದ್ದೆಡೆಗೆ ಓಡಬೇಕು. ಅವನು ಆ ಸ್ಥಳವನ್ನು ಮುಟ್ಟಿದೊಡನೆ ಆ ಸ್ಥಳದಲ್ಲಿ ಹಿಂದಾಗಲೇ ಬಾಣವನ್ನು ಹಿಡಿದು ನಿಂತಿದ್ದ ಮೊದಲನೆಯ ಯುವಕನು ತೋರಣದ ಕಡೆಗೆ ಓಡಿಬರಬೇಕು. ಅವನು ತೋರಣವನ್ನು ಮುಟ್ಟುವುದರೊಳಗೆ ಶೋಧ್ಯನು ನೀರಲ್ಲಿ ಉಸಿರು ಬಿಗಿಹಿಡಿಯಲಾರದೆ ಮೇಲೆದ್ದರೆ ದೋಷಿ, ಇಲ್ಲದಿದ್ದರೆ ನಿರ್ದೋಷಿ.

## ೪. ವಿಷದಿವ್ಯ

ಶೋಧ್ಯನು ವಿಷಕಂಠನಾದ ಶಿವನನ್ನು ಅರ್ಚಿಸಿದ ಮೇಲೆ, ಅವನಿಗೆ ಶೃಂಗವೃಕ್ಷದಿಂದ ಮಾಡಿದ ವಿಷವನ್ನೋ ಮತ್ತಾವುದಾದರೂ ವಿಷವನ್ನೋ ಅದರ ಮೂವತ್ತರಷ್ಟು ಪ್ರಮಾಣದ ತುಪ್ಪದಲ್ಲಿ ಬೆರಸಿ ರಾತ್ರಿಯ ಕೊನೆಯ ಜಾವದಲ್ಲಿ ತಿನ್ನಿಸಬೇಕು, ಅಥವಾ ಕುಡಿಸಬೇಕು.

ಶೋಧ್ಯನು ಮಾರನೆಯ ದಿನ ಜನರ ಕಾವಲಲ್ಲಿ ನೆರಳಲ್ಲಿಯೇ ಇರಬೇಕಾಗುತ್ತದೆ. ಅವನು ವಿಷಪಾನದ ಪರಿಣಾಮಕ್ಕೊಳಗಾದರೆ ದೋಷಿ, ಇಲ್ಲದಿದ್ದರೆ ನಿರ್ದೋಷಿ.

### ೫. ಕೋಶದಿವ್ಯ

ರುದ್ರ, ದುರ್ಗಾ ಇತ್ಯಾದಿ ದೇವತೆಗಳ ವಿಗ್ರಹಗಳನ್ನು ತೊಳೆದ ನೀರನ್ನು ಶೋಧ್ಯನಿಗೆ ಕುಡಿಸುತ್ತಾರೆ. ಅವನು ಹಾಗೆ ಕುಡಿದ ಹದಿನಾಲ್ಕು ದಿನಗಳೊಳಗಾಗಿ ರೋಗ, ರಾಜಶಿಕ್ಷೆ, ಪತ್ನೀವಿಯೋಗ, ಧನಾಪಹರಣಗಳಂತಹ ದುರ್ಘಟನೆಗಳಿಗೆ ಒಳಗಾದರೆ ದೋಷಿ, ಇಲ್ಲದಿದ್ದರೆ ನಿರ್ದೋಷಿ.

### ೬. ತಂಡುಲದಿವ್ಯ

ಶೋಧನೆಯ ಹಿಂದಿನ ದಿನ ಅಕ್ಕಿಯನ್ನು ಪಾತ್ರೆಯೊಂದಕ್ಕೆ ಹಾಕಿ ಅದಕ್ಕೆ ಸೂರ್ಯ ವಿಗ್ರಹವನ್ನು ತೊಳೆದ ನೀರನ್ನು ತುಂಬಿ ಸೂರ್ಯನಿಗೆ ಕಾಣಿಸುವಂತೆ ಇಡಬೇಕು. ಶೋಧ್ಯನು ಆ ಅಕ್ಕಿಯನ್ನು ತಿಂದು ಅಷ್ಟನ್ನೂ ಒಂದು ಆಲದ ಎಲೆಯ ಮೇಲೆ ಉಗುಳಬೇಕು. ಹಾಗೆ ಉಗುಳಿದಾಗ ಅದರ ಜೊತೆಯಲ್ಲಿ ರಕ್ತ ಬಂದರೆ ದೋಷಿ, ಇಲ್ಲದಿದ್ದರೆ ನಿರ್ದೋಷಿ.

### ೭. ತಪ್ತಮಾಷದಿವ್ಯ

ಒಂದು ಪಾತ್ರೆಯಲ್ಲಿ ತುಪ್ಪ ಅಥವಾ ಎಣ್ಣೆಯನ್ನು ಕುದಿಯುವಂತೆ ಚನ್ನಾಗಿ ಕಾಯಿಸಿ ಅದರೊಳಕ್ಕೆ ಒಂದು ಚಿನ್ನದ ಚೂರನ್ನು ಹಾಕಬೇಕು. ಶೋಧ್ಯನು ಅದನ್ನು ತನ್ನ ಬೆರಳುಗಳಿಂದ ಹೊರಕ್ಕೆ ತೆಗೆಯಬೇಕು. ಆಗ ಅವನ ಕೈ ಸುಟ್ಟರೆ ದೋಷಿ, ಇಲ್ಲದಿದ್ದರೆ ನಿರ್ದೋಷಿ.

### ೮. ಫಾಲದಿವ್ಯ

ಕಬ್ಬಿಣದ ಕುಳವೊಂದನ್ನು ಚನ್ನಾಗಿ ಕಾಯಿಸಿದ ಮೇಲೆ ಶೋಧ್ಯನು ಅದನ್ನು ತನ್ನ ನಾಲಗೆಯಿಂದ ನೆಕ್ಕಬೇಕು. ಆಗ ಅವನ ನಾಲಗೆ ಸುಟ್ಟುಹೋದರೆ ದೋಷಿ, ಇಲ್ಲದಿದ್ದರೆ ನಿರ್ದೋಷಿ.

### ೯. ಧರ್ಮದಿವ್ಯ.

ಧರ್ಮದೇವತೆ ಮತ್ತು ಅಧರ್ಮದೇವತೆಗಳ ಎರಡು ವಿಗ್ರಹಗಳನ್ನು ಕ್ರಮವಾಗಿ ಬೆಳ್ಳಿ ಮತ್ತು ಕಬ್ಬಿಣಗಳಲ್ಲಿ ಮಾಡಿಸಬೇಕು. ಅಥವಾ ಅವುಗಳ ಚಿತ್ರಗಳನ್ನು ಬಟ್ಟೆಯ ಮೇಲೋ ಪತ್ರಗಳ ಮೇಲೋ ಕ್ರಮವಾಗಿ ಬಿಳಿಯ ಮತ್ತು ಕರಿಯ ಬಣ್ಣಗಳಲ್ಲಿ ಬರೆಯಿಸಬಹುದು. ಅವುಗಳನ್ನು ಬಿಳಿಯ ಮತ್ತು ಕರಿಯ ಹೂಗಳಲ್ಲಿ ಅರ್ಚಿಸಿಯಾದ ಮೇಲೆ ಅವುಗಳನ್ನು ಮಣ್ಣಿನ ಅಥವಾ ಆಕಳ ಸೆಗಣಿಯ ಚೆಂಡುಗಳಲ್ಲಿ ಹುದುಗಿಸಿ ಆ ಚೆಂಡುಗಳನ್ನು ಒಂದು ಹೊಸ ಪಾತ್ರೆಯಲ್ಲಿಡಬೇಕು. ಶೋಧ್ಯನು ಧರ್ಮದೇವತೆಯನ್ನು ಪ್ರಾರ್ಥಿಸಿ ಪಾತ್ರೆಯೊಳಕ್ಕೆ ಕೈಹಾಕಿ ಒಂದು ಚೆಂಡನ್ನು ತೆಗೆಯಬೇಕು. ಧರ್ಮದೇವತೆಯಿರುವ ಉಂಡೆ ಅವನ ಕೈಗೆ ಬಂದರೆ ನಿರ್ದೋಷಿ, ಇಲ್ಲದಿದ್ದರೆ ದೋಷಿ.

ಮೇಲಿನ ಪರಿಶೀಲನೆಯಿಂದ ಕೆಲವು ದಿವ್ಯಗಳು ಅತಿಕ್ರೂರವೂ ಅಮಾನುಷವೂ, ಇನ್ನು ಕೆಲವು ಧರ್ಮಾಧಿಕಾರಿ ಮತ್ತಿತರರ ಪಕ್ಷಪಾತವನ್ನವಲಂಬಿಸಿರತಕ್ಕುವೂ, ಇನ್ನು ಕೆಲವು ಕೇವಲ ಅದೃಷ್ಟವನ್ನವಲಂಬಿಸಿರತಕ್ಕುವೂ ಆಗಿರುವುದು ಸ್ಪಷ್ಟವಾಗುತ್ತದೆ. ಯಾವ ಯಾವ

ದಿವ್ಯಗಳನ್ನು ಯಾವ ಯಾವ ರೀತಿಯ ಅಪರಾಧಕ್ಕೆ, ಯಾವ ಯಾವ ಜಾತಿಯ ವ್ಯಕ್ತಿಗಳಿಗೆ, ಯಾವ ಯಾವ ಮಾಸಗಳಲ್ಲಿ ಹೇಗೆ ಹೇಗೆ ಅನುಸರಿಸಬೇಕು ಎಂಬ ವಿಷಯದಲ್ಲಿ ಸ್ಮೃತಿಗಳು ವಿಸ್ತಾರವಾದ ನಿಯಮಗಳನ್ನು ವಿಧಿಸಿವೆ. ಉದಾಹರಣೆಗೆ, ತುಲಾದಿವ್ಯವನ್ನು ಮಕ್ಕಳಿಗೆ ಮತ್ತು ಸ್ತ್ರೀಯರಿಗೆ, ಅಗ್ನಿದಿವ್ಯವನ್ನು ಕ್ಷತ್ರಿಯರಿಗೆ ಅನ್ವಯಿಸಬಹುದು. ನೀರಲ್ಲಿ ಎಷ್ಟುಹೊತ್ತು ಬೇಕಾದರೂ ಮುಳುಗಿರಬಲ್ಲ ಶಕ್ತಿಯಿರುವ ಅಂಬಿಗನಿಗೆ ಜಲದಿವ್ಯವನ್ನು ಅನ್ವಯಿಸಕೂಡದು. ಹೀಗೆ ನಿಯಮಗಳನ್ನು ಹಾಕುವುದರಲ್ಲಿ ಎಲ್ಲ ಧರ್ಮಗ್ರಂಥಗಳಲ್ಲೂ ಏಕಾಭಿಪ್ರಾಯವಿದೆಯೆಂದು ತಿಳಿಯಬಾರದು. ಜಲ, ಅಗ್ನಿ ಮುಂತಾದುವು ಪ್ರಾಕೃತಿಕ ಶಕ್ತಿಗಳಾದುದರಿಂದ ಅಪರಾಧಿಯೇ ಆಗಿರಲಿ ನಿರಪರಾಧಿಯೇ ಆಗಿರಲಿ ಅವು ಒಂದೇ ರೀತಿಯಾಗಿ ನಡೆದುಕೊಳ್ಳುತ್ತವೆಯಾದ್ದರಿಂದ ದಿವ್ಯಗಳು ವ್ಯರ್ಥವೆಂದು ಹಲವರು ವಾದಿಸಿದ್ದುಂಟು, ಅವರಿಗೆ ಧರ್ಮಗ್ರಂಥಗಳು ಉತ್ತರ ಕೊಟ್ಟು ದಿವ್ಯಗಳನ್ನು ಸಮರ್ಥಿಸಿದ್ದುಂಟು. ಆದರೆ ಧರ್ಮಗ್ರಂಥಗಳು ಒಂದು ವಿಷಯವನ್ನು ಮಾತ್ರ ಒಕ್ಕೊರಲಿನಿಂದ ಒಪ್ಪಿಕೊಂಡಿವೆ. ದಿವ್ಯವು ಅಪರಾಧನಿರ್ಣಯಕ್ಕೆ ಕೊನೆಯ ಸಾಧನ ಮಾತ್ರ. ಮಾನುಷವಾದ ಅಥವಾ ಲೌಕಿಕವಾದ ಯಾವ ಸಾಕ್ಷಿಯೂ ಉಪಲಬ್ಧವಿಲ್ಲದಿರುವಾಗ, ವಿವಾದವು ಬಹು ದೊಡ್ಡ ಪ್ರಮಾಣದ್ದಾಗಿದ್ದರೆ, ಉಳಿದೆಲ್ಲ ಮಾರ್ಗಗಳೂ ನಿಷ್ಫಲವಾಗಿ ಪರಿಣಮಿಸಿದ್ದರೆ ಮಾತ್ರ ಅನಿವಾರ್ಯವಾಗಿ ದಿವ್ಯವನ್ನು ನಡೆಸಬೇಕು. ದಿವ್ಯಕ್ಕೆ ಒಳಗಾಗಬೇಕಾದವನು ಸಾಮಾನ್ಯವಾಗಿ ಪ್ರತಿವಾದಿಯಾದರೂ (defendant) ಪರಸ್ಪರ ಒಪ್ಪಂದದ ಮೂಲಕ ವಿವಾದದ ಯಾವ ಪಕ್ಷದವನಾದರೂ ದಿವ್ಯಕ್ಕೆ ಒಳಗಾಗಬಹುದಿತ್ತು.

ಈ ದಿವ್ಯಗಳ ಪದ್ಧತಿಯು ಪ್ರಾಚೀನ ಕರ್ಣಾಟಕದಲ್ಲಿ ಸಾಕಷ್ಟು ಪ್ರಚಲಿತವಾಗಿದ್ದಿತು ಎಂಬುದನ್ನು ತೋರಿಸಿಕೊಡುವುದು ಈ ಪ್ರಬಂಧದ ಮುಖ್ಯೋದ್ದೇಶ. ಕನ್ನಡ ಕಾವ್ಯಗಳಲ್ಲಿ ದಿವ್ಯದ ಪ್ರಸ್ತಾಪವು ಹಲವೆಡೆ ಬಂದಿರುವುದಾದರೂ—ಆ ಉಲ್ಲೇಖಗಳಲ್ಲಿ ಕೆಲವನ್ನು ಮಾತ್ರ ಈ ಪ್ರಬಂಧದ ಆರಂಭದಲ್ಲಿಯೇ ಕೊಟ್ಟಿದ್ದೇವೆ—ಅವು ಕರ್ಣಾಟಕದಲ್ಲಿ ದಿವ್ಯಗಳ ಪದ್ಧತಿಯಿದ್ದಿತೆಂಬುದಕ್ಕೆ ಪ್ರಬಲವಾದ ಆಧಾರಗಳಾಗಲಾರವು. ಕವಿಗಳು ಲುಪ್ತವಾದ ಪ್ರಾಚೀನ ಸಂಪ್ರದಾಯವೊಂದನ್ನು ಹೆಸರಿಸಿರಬಹುದೆಂದೋ, ಸಂಸ್ಕೃತ ಕಾವ್ಯಗಳಿಂದ ಸ್ವೀಕರಿಸಿರಬಹುದೆಂದೋ ಆಕ್ಷೇಪಣೆಗಳನ್ನೆತ್ತಿ ಸಂದೇಹಗಳನ್ನೊಡ್ಡಲು ಅವಕಾಶವಿದೆ. ಆದರೆ ಶಾಸನಗಳಲ್ಲಿ ಬರುವ ಉಲ್ಲೇಖಗಳು ಪ್ರಾಚೀನ ಕರ್ಣಾಟಕದಲ್ಲಿ ಈ ಪದ್ಧತಿಯಿದ್ದಿತೆಂಬುದಕ್ಕೆ ಸ್ಪಷ್ಟ ಸಾಕ್ಷಿಗಳನ್ನೊದಗಿಸುತ್ತವೆ. ಆ ಶಾಸನಗಳನ್ನು ಇಲ್ಲಿ ಉಲ್ಲೇಖಿಸುತ್ತೇವೆ.

(i) "ನಡಪಿದನಸುವರದೊಳ್ ಕೈಮುಡಗದೆ ತಳ್ತಿಱಿದು ಪೋಗಲ್ ಕೊತ್ತಱಿ ದಿವ್ಯಂಬಿಡಿದು ಕಱಿಪಂತೆ ಕಱಿದನ ಪಡೆದ ಯಶಂ ಗೆಲ್ಲಡಿಂತುಮಗ್ಗಳವೇ" ೨೨

ಈ ಪದ್ಯಕ್ಕೆ ಅರ್ಥವನ್ನು ಹೇಳುವುದು ಸ್ವಲ್ಪ ಕಷ್ಟಸಾಧ್ಯವಾದರೂ ದಿವ್ಯವು ಉಪಮೆಯೊಂದರಲ್ಲಿ ಬಂದಿರುವುದರಿಂದ ಈ ಉಲ್ಲೇಖದ ಬೆಲೆ ಬಹಳ ಕಡಮೆಯೆಂದೇ ಹೇಳಬೇಕಾಗುತ್ತದೆ.

(ii) "ಸಲೆ ಧರ್ಮರೂಪದಿಂ ಶ್ರೀ ಕಲಿದೇವಸ್ವಾಮಿಯಲ್ಲೀ ಕೋಪ ರವಿ ತಂಡುಲವಗ್ನಿ ತಪ್ತಮಾಷಂ ಜಲ ವಿಷದೇಳ ಸಪ್ತದಿವ್ಯಮುಂ ವರ್ತಿಸುಗುಂ॥ ದೇವರ್ಗೆ ದಿವ್ಯದ ಮುಪ್ರಾವಣದಿಂ ಪುಟ್ಟಿದರ್ಥವಪ್ಪುದು ಸಲೆ ನಿಃಕೇವಳ ನೈಮಿತ್ತಿಕ ಸಪ್ಪಾವದೆ ಧರ್ಮಬ್ರಯಕ್ಕೆ ಸಲ್ಗುದು ಸತತಂ" ೨೩

---

೨೨ Ec, VIII. Sb. 16, 1015 A. D.

೨೩ SII, IX. i. 143, 1079 A. D.

ಕಲಿದೇವಸ್ವಾಮಿಯ ದೇವಸ್ಥಾನದಲ್ಲಿ ಏಳು ದಿವ್ಯಗಳೂ ಪ್ರವರ್ತಿಸುವುವೆಂದೂ ಅವುಗಳಿಂದ ಬರುವ ಹಣವನ್ನು ಧರ್ಮಾರ್ಥವಾಗಿ ಬಳಸಲಾಗುವುದೆಂದೂ ಶಾಸನವು ಹೇಳುತ್ತದೆ. ಇಲ್ಲಿಯ ಸಪ್ತದಿವ್ಯಗಳಲ್ಲಿ ರವಿ ಎಂಬುದು ಯಾವುದೋ ತಿಳಿಯದು. 'ಕೊಪ' ಎಂಬಲ್ಲಿ, ಛಂದಸ್ಸು ಸರಿಹೋಗಬೇಕಾದರೆ, ಒಂದು ದೀರ್ಘವಿರಬೇಕು. (ಆದರೂ ಛಂದೋದೋಷ ಉಳಿಯುತ್ತದೆ. ಏಕೆಂದರೆ 'ಲೀ' ಎಂಬ ಗುರುವನ್ನು ಎರಡು ಮಾತ್ರೆಗಳಾಗಿ ಒಡೆದು ಒಂದೊಂದನ್ನೂ ಹಿಂದಿನ ಮತ್ತು ಮುಂದಿನ ಗಣಗಳಿಗೆ ಹಂಚಬೇಕಾಗುತ್ತದೆ). ಆದ್ದರಿಂದ ಅದು 'ಕೋಶ' ಎಂದಿರ ಬಹುದೇ?* ಶಾಸನಗಳಲ್ಲಿ ಅನೇಕ ಕಡೆ ದೀರ್ಘವನ್ನು ಉಲ್ಲೇಖಿಸದೆ ಬಿಡುವುದು ಬಹಳ ಸಾಮಾನ್ಯವಾದ ಸಂಗತಿ.

(iii) ಶಿವಮೊಗ್ಗ ಜಿಲ್ಲೆಯ ತಾಳಗುಂದದ ಪ್ರಣವೇಶ್ವರ ದೇವಸ್ಥಾನದಲ್ಲಿ ಸಪ್ತದಿವ್ಯಗಳು ನಡೆಯುತ್ತಿದ್ದುವೆಂದು ಒಂದು ಶಾಸನವು ತಿಳಿಸುತ್ತದೆ—

"ಸಪ್ತದಿವ್ಯದಲುಂ ಭಕ್ತರು ಕೊಟ್ಟುದಜಲುವಿಂಶಿನಿತಜಿತೊಳಾದ ದ್ರವ್ಯದೊಳಗೆ..." ೨೪

(iv) ಹನ್ನೆರಡನೆಯ ಶತಮಾನದ ಒಂದು ಶಾಸನದಲ್ಲಿ ಬರುವ ದಿವ್ಯದ ವಿಷಯವು ಸ್ವಲ್ಪ ವಿಸ್ತಾರವಾಗಿಯೂ ಇದೆ, ಬಹಳ ಸ್ವಾರಸ್ಯವಾಗಿಯೂ ಇದೆ.೨೫ ಕಿತ್ತೂರಿನ ಅತ್ತಿಯ ಬಾವಿಯ ಶ್ರೀ ಕಲೇಶ್ವರ ದೇವರ ಆಚಾರ್ಯ ಶಿವಶಕ್ತಿಗೂ ಅದೇ ಊರಿನ ಮೂಲಸ್ಥಾನದೇವರ ಆಚಾರ್ಯ ಕಲ್ಯಾಣಶಕ್ತಿಗೂ ಒಂದು ಹೊಲದ ವಿಷಯದಲ್ಲಿ ಭಿನ್ನಾಭಿಪ್ರಾಯ ಬಂದು ಅದು ತನುತಮಗೆ ಸೇರಿದ್ದೆಂದು ಪರಸ್ಪರ ವಾದಿಸಿ ಆ ವಿಷಯವನ್ನು ಶ್ರೀಮನ್ಮಹಾಪ್ರಧಾನ ಈಶ್ವರ ದಂಡನಾಯಕನ ಗಮನಕ್ಕೆ ತರುತ್ತಾರೆ. ಕಲ್ಯಾಣಶಕ್ತಿಯ ತಂದೆಯು ಆ ಹೊಲವನ್ನು ಇತರರು ಹಾಕಿದ ಆಣೆಯನ್ನು ಮೀರಿ ಚಂಡಿಯ ಸಾವಂತನ ಬಳಿ ಕೊಂಡುಕೊಂಡು ಶಾಸನವನ್ನು ಬರೆಯಿಸಿಕೊಂಡನೆಂದೂ ಅದು ಮೂಲತಃ ಕಲೇಶ್ವರ ದೇವರದೆಂದೂ ಅದನ್ನು ಸಾಧಿಸಲು ತಾನು 'ಪಾಳದಿವ್ಯ'ವನ್ನು ಹಿಡಿಯಲು ಸಿದ್ಧವೆಂದೂ ಶಿವಶಕ್ತಿಯು ದಂಡನಾಯಕನ ಮುಂದೆ ಸಾರುತ್ತಾನೆ. ಅದಕ್ಕೆ ಪ್ರತಿಯಾಗಿ ಕಲ್ಯಾಣಶಕ್ತಿಯು ಆ ಹೊಲವು ತನಗೆ ಸೇರಬೇಕಾದುದೆಂದು ವಾದಿಸಿ ಅದನ್ನು ಸಾಧಿಸಲು ತಾನು 'ಶಿರಸ್ಥಾಯಿ'ಯಾಗಲು ಸಿದ್ಧವೆಂದು ಹೇಳುತ್ತಾನೆ. ಈಶ್ವರ ದಂಡನಾಯಕನ ಸಲಹೆಯಂತೆ ಇಬ್ಬರೂ ದೇಗಾವೆ ಎಂಬ ಅಗ್ರಹಾರಕ್ಕೆ ಬರುತ್ತಾರೆ. ಅಲ್ಲಿ ಮಲ್ಲಿಕಾರ್ಜುನ ದೇವರ ಮುಂದೆ ಮಹಾಜನಗಳ ಎಂದರೆ ಬ್ರಾಹ್ಮಣರ ಸಮಕ್ಷದಲ್ಲಿ ಶಿವಶಕ್ತಿಯು ಪಾಳದಿವ್ಯವನ್ನು ಹಿಡಿಯುತ್ತಾನೆ, ಕಲ್ಯಾಣಶಕ್ತಿಯು 'ಆಲಕೋಳನ ಕೆಯೆ(ಯಿ) ಮೂಲಸ್ಥಾನ ದೇವರದೆಂದು ಶಿರಸ್ಥಾಯಿ'ಯಾಗುತ್ತಾನೆ. ಮೂರನೆಯ ದಿನ ಸಮಸ್ತ ಮಹಾಜನರೂ ಸೇರಿ ಶಿವಶಕ್ತಿಯ ಕೈಯನ್ನು ಶೋಧಿಸಿ ಅವನು ಗೆದ್ದನೆಂದೂ 'ಶಿರಸ್ಥಾಯಿ'ಯಾಗಿದ್ದ ಕಲ್ಯಾಣಶಕ್ತಿಯು ಸೋತನೆಂದೂ ತೀರ್ಮಾನಿಸಿ ಶಿವಶಕ್ತಿಗೆ ಜಯಪತ್ರವನ್ನು ಕೊಡುತ್ತಾರೆ.

---

* ಈ 'ಕೋಶ' ದಿವ್ಯವನ್ನು ಬಸವಣ್ಣನವರು ಹೆಸರಿಸಿದ್ದಾರೆ–"ಶರಣರ ನಿಚ್ಚ ಪೂಜಿಸುವಂತೆ– ಇದಕ್ಕಿದೆ ದೃಷ್ಟ ದೀವಿಗೆ– ಪಾದೋದಕ ಕೋಶಪಾನವಲ್ಲದೆ ಏನೂ ಇಲ್ಲವಯ್ಯಾ". (ಪು. 169). ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿಯೂ ಈ ದಿವ್ಯದ ಹೆಸರಿದೆ - "ಶಪಥಂ ಮಾಳ್ಪಾಗಳ್ ಕೋ। ಶಪಾನಮಂ ಮಾಳ್ಪರೆಂಬರೆಲ್ಲಂ ಲಿಂಗ। ಕ್ಕೆ ಪೆಸರ್ ಕೋಶಂ ತತ್ಕೋಶಪಾನಮಸ್ಪೃಶ್ಯಮೆಂದು ತಿಳಿದರ್ ಕುಡಿಯರ್ ॥ " (8.20)

೨೪ Ec, VII. Sk. 185, 1158 A. D.

೨೫ JBBRAS, IX. P, 304.

ಪ್ರಾಚೀನ ಕರ್ಣಾಟಕದಲ್ಲಿ ದಿವ್ಯವು ನಡೆಯುತ್ತಿದ್ದ ರೀತಿಯನ್ನು ಈ ಶಾಸನವು ಕ್ರಮ ಕ್ರಮವಾಗಿ ನಿರೂಪಿಸುತ್ತದೆ. ಕಲ್ಯಾಣಶಕ್ತಿಯು 'ಶಿರಸ್ಥಾಯಿ'ಯಾದ ಅಂಶವನ್ನು ವಿವರಿಸುವುದು ಕಷ್ಟವೇ. ಶಿರಸ್ಥಾಯಿಯಾಗು ಎಂದರೆ ತಲೆಯ ಮೇಲೆ ನಿಂತುಕೊ ಎಂದರ್ಥ. ಕಲ್ಯಾಣಶಕ್ತಿಯು ತಲೆಯಮೇಲೆ ನಿಂತುಕೊಂಡನೆಂದು ಕಲ್ಪಿಸಿಕೊಳ್ಳುವುದು ದುಸ್ತರ. ಸಂಪಾದಕರು ಇದನ್ನು ಗಮನಿಸಿ ದೇವರಿಗೆ ಸಂಬಂಧಿಸಿದ ಪವಿತ್ರ ವಸ್ತುಗಳನ್ನು ಹೊತ್ತುಕೊಂಡು ಆಣೆ ಮಾಡಿದನು ಎಂಬರ್ಥ ಬರುವಂತೆ ಶಾಸನವನ್ನು ಅನುವಾದಿಸಿದ್ದಾರೆ. ಆದರೆ ಅವರ ಅಭಿಪ್ರಾಯ ಸರಿಯೆಂದು ಒಪ್ಪಿಕೊಳ್ಳಲು ಆಧಾರಗಳು ಸಾಲವು.

(v) ವಾಮಶಕ್ತಿ ಎಂಬ 'ಶುದ್ಧ ಶೈವಮಾರ್ಗ'ದ ತಪಸ್ವಿಯು ತಾನು ದೂರ್ವಾಸವಂಶದವನೆಂಬುದನ್ನು ಸ್ಥಾಪಿಸಲು ದಿವ್ಯವನ್ನು ಹಿಡಿದು ಗೆದ್ದಂತೆ ಒಂದು ಶಾಸನದಲ್ಲಿ ಹೇಳಿದೆ–

"ಆ ಮುನಿ ದೂರ್ವಾಸಾನ್ವಯನೇ ಮಾತಸುಪಹತನೆಂದು ದಿಬ್ಯಂಬಿಡಿದಾ ವಾಮಶಕ್ತಿ ಬ್ರತೀಶಂ ಭೂಮಿಸ್ತುತನೆನಿಸಿ ಜಯಿಸಿ ಪೆಸರ್ವಡೆದಂ" ೨೬

(vi) ಕ್ರಿ. ಶ. 1241 ರ ಶಾಸನವೊಂದರಲ್ಲಿ ದಿವ್ಯಕ್ಕೆ ಸಂಬಂಧಿಸಿದಂತೆ ಕೆಲವು ಸ್ವಾರಸ್ಯದ ಸಂಗತಿಗಳಿವೆ. ಕಾಳಗವುಡ ಮತ್ತು ಕೆಜಿಯಮಸೆಟ್ಟಿಯರ ಮಧ್ಯೆ ಭೂಮಿಗೆ ಸಂಬಂಧಿಸಿದ 'ಸಂವಾಜ'(= ಸಂವಾದ, ವಿವಾದ)ವೊಂದು ಕಾಣಿಸಿಕೊಳ್ಳುತ್ತದೆ. ತಾನು ಹಣವನ್ನು ಕೊಟ್ಟು ಕಾಳಗವುಂಡನ ಮುತ್ತಬ್ಬೆ ಜಕ್ಕಿಗವುಡಿ ಮತ್ತು ಗಳೆಯ ಚಟ್ಟಿಯ ಎಂಬುವರಿಂದ ಭೂಮಿಯನ್ನು ಕೊಂಡುಕೊಂಡೆನೆಂದು ಕೆಜಿಯಮಸೆಟ್ಟಿಯು ವಾದಿಸಿದರೆ, ಅದನ್ನು ಕಾಳಗವುಂಡನು ನಿರಾಕರಿಸಿ ಅದು ಸುಳ್ಳು ಎಂದು ಪ್ರತಿವಾದಿಸುತ್ತಾನೆ. ಆಗ ಅವರು ಬಂದಣಿಕೆ ಗ್ರಾಮದ ಕಲಿದೇವರ ದೇವಸ್ಥಾನದಲ್ಲಿ, ಮಹಾಜನರು ( = ಬ್ರಾಹ್ಮಣರು), ಪಂಚಮಠಗಳು, ನಾಡಪ್ರಭು, ಬೇರೆ ಬೇರೆ ಗೌಡರು, ನಖರ ಮುಮ್ಮುರಿದಂಡಗಳು—ಇವರ ಮುಂದೆ ತಮ್ಮ ವಿವಾದವನ್ನು ಮಂಡಿಸುತ್ತಾರೆ. ಕೆಜಿಯಮಸೆಟ್ಟಿಯು 'ಸಿರವಾಗಿ' ಎಂದರೆ ತಲೆಯನ್ನು ಬಾಗಿಸಿ ನಿಲ್ಲುತ್ತಾನೆ. (ಬಹುಶಃ ವಿವಾದದ ವಿಷಯವನ್ನು ಬರೆದ ಪತ್ರವನ್ನು ತಲೆಯಮೇಲೆ ಹೊತ್ತು ನಿಲ್ಲುತ್ತಾನೆ ಎಂದು ಇದಕ್ಕೆ ಅರ್ಥಮಾಡಬಹುದೇ? ಹಿಂದಿನ ಶಾಸನದಲ್ಲಿ ಬಂದಿರುವ 'ಶಿರಸ್ಥಾಯಿ'ಯಾಗು ಎನ್ನುವುದೂ ಇದನ್ನೇ ಸೂಚಿಸುವಂತೆ ಕಾಣಿಸುತ್ತದೆ). ಕಾಳಗವುಂಡನು ಆ ಎಲ್ಲರ ಮುಂದೆ, 'ಧರ್ಮಾಧ್ಯಕ್ಷ'ದ (ಸ್ಮೃತಿಗಳು ಹೇಳುವ 'ಧರ್ಮಾಧಿಕಾರಿ' ಇವನು) ಮುಂದೆ ದಿಬ್ಯವನ್ನು ಹಿಡಿದು ಜಯಪತ್ರವನ್ನು ಗೆದ್ದುಕೊಳ್ಳುತ್ತಾನೆ. ("ಕಾಳಗವುಡ ದಿಬ್ಯವ ಹಿಡಿದು ಗೆಲ್ದುಕೊಂಡ ಜಯಪತ್ರ ಮಂಗಳಮಹ ಶ್ರೀ ಶ್ರೀ). *

ಈ ಶಾಸನದಲ್ಲಿ ದಿವ್ಯವನ್ನು ನಡಸುವ ಧರ್ಮಾಧಿಕಾರಿ, ಶೋಧ್ಯನು ತಲೆಯನ್ನು ಬಾಗಿಸಿ ನಿಲ್ಲುವುದು, ದಿವ್ಯವನ್ನು ಹಿಡಿದು ಗೆದ್ದಮೇಲೆ ಜಯಪತ್ರವನ್ನು ಕೊಡುವುದು—ಇತ್ಯಾದಿ ವಿಷಯಗಳಿವೆ. ಶಿರವನ್ನು ಬಾಗಿಸಿ ನಿಲ್ಲುವುದು ಎಂಬುದಕ್ಕೆ ಸಮರ್ಪಕವಾಗಿ ಅರ್ಥೈಸುವುದು ಕಷ್ಟವೇ ಸರಿ. ವಿವಾದದ ವಿಷಯವನ್ನು ಬರೆದ ಪತ್ರವನ್ನು ತಲೆಯ ಮೇಲಿಡುವ ಸಂಪ್ರದಾಯವನ್ನು ಇದು ಸೂಚಿಸುವುದು ಎಂದಿಟ್ಟುಕೊಂಡರೆ, ಸ್ಮೃತಿಗಳ ಪ್ರಕಾರ ಪತ್ರವನ್ನು ಹೊರಬೇಕಾದವನು ದಿವ್ಯವನ್ನು ಹಿಡಿಯುವ ವ್ಯಕ್ತಿಯೇ ಹೊರತು ಇನ್ನೊಬ್ಬನಲ್ಲ. ಈ ಶಾಸನದಲ್ಲಿ ಯಾದರೋ ದಿವ್ಯವನ್ನು ಹಿಡಿಯುವ ವ್ಯಕ್ತಿಯೇ ಬೇರೆ, 'ಸಿರವಾಗಿ' ನಿಂತ ವ್ಯಕ್ತಿಯೇ ಬೇರೆ.

---

೨೬ JBBRAS, X, P. 260, 1229 A. D.
* Ec, VIII. Sb. 387, 1241 A. D.

ಹಿಂದಿನ ಶಾಸನದಲ್ಲಿಯೂ ದಿವ್ಯವನ್ನು ಹಿಡಿದ ವ್ಯಕ್ತಿಯೂ, 'ಶಿರಸ್ಥಾಯಿ'ಯಾಗಿ ನಿಂತ ವ್ಯಕ್ತಿಯೂ ಬೇರೆ ಬೇರೆ. 'ಶಿರಸ್ಥಾಯಿ'ಯಾಗು, 'ಸಿರವಾಗು' ಎಂಬ ಎರಡೂ ಒಂದೇ ಕ್ರಿಯೆಯನ್ನು ಸೂಚಿಸುವಂತೆ ಕಾಣಿಸುತ್ತದೆ. ಆ ಕ್ರಿಯೆ ಯಾವುದು ಎನ್ನುವುದು ಮಾತ್ರ ಅಸ್ಪಷ್ಟವಾಗಿಯೇ ಉಳಿಯುತ್ತದೆ.

ಈ ಶಾಸನದಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವಿದೆ. ಜಗಳವು ನಡೆದದ್ದು ಎಳಬಳ್ಳಿ ಎಂಬ ಊರಲ್ಲಿ. ವಿವಾದದ ತೀರ್ಮಾನವಾದದ್ದು ಬಂದಣಿಕೆಯ ಕಲಿದೇವರ ಮುಂದೆ. ಇದರಿಂದ ಒಂದು ಅಂಶ ಸೂಚಿತವಾಗುತ್ತದೆ. ಪ್ರಾಚೀನ ಕರ್ಣಾಟಕದ ಎಲ್ಲ ದೇವಸ್ಥಾನಗಳಲ್ಲಿಯೂ ದಿವ್ಯಗಳನ್ನು ನಡಸುತ್ತಿದ್ದಿಲ್ಲ. ದಿವ್ಯವು ನಡೆಯುತ್ತಿದ್ದ ದೇವಸ್ಥಾನಗಳು ಕೆಲವು; ಅವು ಅದಕ್ಕಾಗಿ ಪ್ರಸಿದ್ಧವಾಗಿದ್ದುವು; ದಿವ್ಯದ ಮೂಲಕ ವಿವಾದವನ್ನು ಪರಿಹರಿಸಿಕೊಳ್ಳಬೇಕಾದವರು ಆ ದೇವಸ್ಥಾನಗಳಿಗೆ ಬರುತ್ತಿದ್ದರು. ಈ ಅಂಶಗಳನ್ನು ನಾವು ಮುಂದೆ ಉಲ್ಲೇಖಿಸಿರುವ ಇನ್ನೂ ಕೆಲವು ಶಾಸನಗಳು ಸಮರ್ಥಿಸುತ್ತವೆ.

(vii) ಮೇಲಿನ ಸೀಮಾ ವಿವಾದದಂತಹ ಒಂದು ವ್ಯಾಜ್ಯವು ಎರಡು ಹಳ್ಳಿಗಳಿಗೆ ಒದಗಿಬರುತ್ತದೆ. ಒಂದು ಹಳ್ಳಿಯವರು ಯಾವುದೋ ಹೊಲವು ತಮ್ಮ ಊರಿಗೆ ಸೇರಿದ್ದೆಂದೂ ಇನ್ನೊಂದು ಊರಿನವರು ಅದನ್ನು ತಮ್ಮ ಊರಿಗೆ ಸೇರಿಸಿಕೊಂಡು ಬಲಾತ್ಕಾರದಿಂದ ಕಲ್ಲನ್ನು ನೆಟ್ಟರೆಂದೂ 'ಮುಂದಿ(ಡಿ)ಗೆ'ಯನಿಕ್ಕಿದಾಗ ಇನ್ನೊಂದು ಹಳ್ಳಿಯ ಕನ್ನಯ್ಯ ಎನ್ನುವವನು ನಟ್ಟ ಕಲ್ಲನ್ನು ಮುರಿಯಬೇಡಿ, ಆ ಹೊಲವು ತನಗೆ ಸೇರಿದ್ದು ಎಂದು ವಾದಿಸಿ ಅದನ್ನು ಸಾಧಿಸಿ ತೋರಿಸಲು ದೋರ ಸಮುದ್ರದ ಹೊಯ್ಸಳೇಶ್ವರನ ಸನ್ನಿಧಿಯಲ್ಲಿ ದಿವ್ಯವನ್ನು ಹಿಡಿದು ಗೆದ್ದ ವಿಷಯವು ಶಾಸನವೊಂದರಲ್ಲಿದೆ.[೨೭] ಈ ಶಾಸನದಲ್ಲಿ 'ಸಿ(ಶಿ)ರಃಪತ್ರ'ದ ಉಲ್ಲೇಖವಿದೆ. ಶೋಧ್ಯನ ತಲೆಯ ಮೇಲೆ ವಿವಾದದ ವಿಷಯವನ್ನು ಬರೆದ ಪತ್ರವನ್ನಿಡಬೇಕು ಎಂಬ ಧರ್ಮಗ್ರಂಥಗಳ ನಿಯಮವನ್ನು ಪ್ರಾಚೀನ ಕರ್ಣಾಟಕದಲ್ಲಿ ಪರಿಪಾಲಿಸಲಾಗುತ್ತಿತ್ತು ಎಂಬುದಕ್ಕೆ ಇದೊಂದು ಉತ್ತಮ ನಿದರ್ಶನ. ಪಾರ್ಶ್ವನಾಥ ಪುರಾಣದಿಂದ ಹಿಂದೆ ಉದ್ಧರಿಸಿರುವ ಪದ್ಯದಲ್ಲಿಯೂ ಈ ನಿಯಮದ ಉಲ್ಲೇಖವಿರುವುದನ್ನು ಗಮನಿಸಬಹುದು.

(viii) ಹದಿನಾರನೆಯ ಶತಮಾನದ ಶಾಸನವೊಂದು ಬಹಳ ಸ್ವಾರಸ್ಯದ ವಿಷಯಗಳನ್ನೊಳಗೊಂಡಿದೆ.[೨೮] ಅದರಲ್ಲಿ ಉಕ್ತವಾಗಿರುವ ವಿವಾದವು ಒಂದು ಕಡೆ ಕುಂಬಾರರಿಗೂ ಮತ್ತೊಂದು ಕಡೆ ಅಗಸ ಮತ್ತು ನಾಯಿಂದರಿಗೂ ಸಂಬಂಧಿಸಿದುದು. ಕುಂಬಾರರ ಮದುವೆಯ ಸಮಯದಲ್ಲಿ ಅಗಸರು ಚಪ್ಪರಕ್ಕೆ ಮೇಲುಕಟ್ಟು ಕಟ್ಟುವುದಿಲ್ಲವೆಂದೂ ನಾಯಿಂದರು ಕಾಲುಗುರು ತೆಗೆಯುವುದಿಲ್ಲವೆಂದೂ ಹಠ ಹಿಡಿಯುತ್ತಾರೆ.[೨೯] ಆಗ ತಮ್ಮ ಹಕ್ಕನ್ನು ಸ್ಥಾಪಿಸಿ

೨೭ Ec, III. Mandya. 79, C. 1275 A. D.

೨೮ Ec, IV. Yelandur. 2, C. 1580 A. D.

೨೯ ಇಂದಿಗೂ ಮೈಸೂರು ಜಿಲ್ಲೆಯ ಮದುವೆಗಳಲ್ಲಿ ಅಗಸರು ಬಂದು ಚಪ್ಪರಕ್ಕೆ ಮೇಲ್ಕಟ್ಟು ಕಟ್ಟುತ್ತಾರೆ, ನಾಯಿಂದರು ಕಾಲುಗುರು ತೆಗೆಯುತ್ತಾರೆ. ಗಂಡು ತನ್ನ ಮದುವೆಯಾಗುವ ತನಕ ಕಾಲುಗುರನ್ನು ತೆಗೆದುಕೊಳ್ಳುವುದು ನಿಷಿದ್ಧವಾದುದು. ಯಾವನಾದರೂ ಮದುವೆಯಾಗದ ಯುವಕ ಕಾಲುಗುರುಗಳನ್ನು ತೆಗೆದುಕೊಂಡರೆ, ಹಿರಿಯರು ಆಕ್ಷೇಪಿಸುವುದಲ್ಲದೆ ಹಾಸ್ಯವನ್ನು ಕೂಡ ಮಾಡುತ್ತಾರೆ. ಮದುವೆಯ ದಿನ ನಾಯಿಂದರು ನಡೆಯಿಸುವ 'ಕಾಲುಗುರಿನ ಶಾಸ್ತ್ರ' ಈ ರೀತಿ ಇದೆ—ಗಂಡಿನ ಪಾದವನ್ನು ಹೊಸ್ತಿಲ ಮೇಲಿಟ್ಟು ನಾಯಿಂದನು [illegible] ಕತ್ತಿಯಿಂದ ಮೂರು ಗೀರುಗಳನ್ನು ಎಳೆಯುತ್ತಾನೆ. ಅಲ್ಲಿಂದ ಮುಂದೆ ಆ ವ್ಯಕ್ತಿ ತಾನೇ ತನ್ನ ಕಾಲುಗುರುಗಳನ್ನು ತೆಗೆದುಕೊಳ್ಳುವ ಸ್ವಾತಂತ್ರ್ಯವನ್ನು ಪಡೆಯುತ್ತಾನೆ.

ಕೊಳ್ಳುವುದಕ್ಕಾಗಿ ಕುಂಬಾರರು ಹರದನಹಳ್ಳಿಯ ದಿವ್ಯಲಿಂಗೇಶ್ವರನ ಮುಂದೆ ಕಾದ ತುಪ್ಪದಲ್ಲಿ ಕೈಯಿಕ್ಕಿ ಗೆಲ್ಲುತ್ತಾರೆ. ಆಗ ಅಗಸರು ಮೇಲ್ಕಟ್ಟು ಕಟ್ಟಲು, ನಾಯಿಂದರು ಕಾಲುಗುರು ತೆಗೆಯಲು ಒಪ್ಪಿಕೊಳ್ಳುತ್ತಾರೆ.

ಈ ಶಾಸನದಲ್ಲಿ ಗಮನಿಸಬೇಕಾದ ಎರಡು ಅಂಶಗಳಿವೆ. ಕುಂಬಾರರು ದಿವ್ಯದಲ್ಲಿ ಗೆದ್ದಾಗ ಅವರ ಬೇಡಿಕೆಗೆ ಅಗಸರು ಮತ್ತು ನಾಯಿಂದರು ಆ ಕಾಲಕ್ಕೆ ಒಪ್ಪಿಕೊಂಡರು ನಿಜ. ಆದರೆ ಅದು ಮುಂದೆ ಸಾರ್ವತ್ರಿಕವಾಗಿ ಎಲ್ಲ ಅಗಸರ ಮತ್ತು ನಾಯಿಂದರ ಒಪ್ಪಿಗೆಯನ್ನು ಪಡೆದಂತೆ ಕಾಣಿಸಲಿಲ್ಲ. ಏಕೆಂದರೆ ಇಂದಿಗೂ ಮೈಸೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಕುಂಬಾರರ ಮದುವೆಯ ಸಮಯದಲ್ಲಿ ಅಗಸರು ಮತ್ತು ನಾಯಿಂದರು ಸಹಕರಿಸುತ್ತಿಲ್ಲವೆಂದು ವಿಶ್ವಸನೀಯವಾಗಿ ತಿಳಿದುಬಂದಿದೆ. ಈ ಶಾಸನದ ಇನ್ನೊಂದು ಗಮನಾರ್ಹವಾದ ಅಂಶ ಹರದನಹಳ್ಳಿಯ 'ದಿವ್ಯಲಿಂಗೇಶ್ವರ'ಕ್ಕೆ ಸಂಬಂಧಿಸಿದುದು. ಹೆಸರೇ ಸೂಚಿಸುವಂತೆ ಆ ದೇವ ಸ್ಥಾನವು ದಿವ್ಯಗಳು ನಡೆಯುವ ಕೇಂದ್ರವಾಗಿದ್ದಿರಬಹುದು. ಸು. ಕ್ರಿ. ಶ. 1560 ರಲ್ಲಿ ರಚಿತ ವಾದ ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣದಲ್ಲಿ ಇದನ್ನು ಅಕ್ಷರಶಃ ಪೋಷಿಸುವ ಹೇಳಿಕೆಯೊಂದು ದೊರೆಯುತ್ತದೆ. ಆ ದೇವಸ್ಥಾನದಲ್ಲಿ ಎಲ್ಲರೂ ದಿವ್ಯವನ್ನು ಹಿಡಿದು ಗೆಲ್ಲುತ್ತಿದ್ದರಾದ ಕಾರಣ ಆ ಲಿಂಗಕ್ಕೆ ದಿವ್ಯಲಿಂಗೇಶವೆಂದು ಧರೆಯಲ್ಲಿ ಹೆಸರಾಯ್ತು ಎಂದು ಕವಿ ಹೇಳುತ್ತಾನೆ–

"ಎಲ್ಲರುಂ ದಿಬ್ಬಮಂ ತುಡುಕಿ ಗೆಲುತಿರ್ಪ ರತಿನಿಷ್ಠೆಯಿಂ ಆನರಿಂದಮಿಳೆಯರಿಯಲಾ ಮಹಾ ಲಿಂಗಕ್ಕೆ ಅಧಿಕವಹ ದಿವ್ಯಲಿಂಗೇಶನೆಂದೆಂಬ ಪೆಸರದು ರೂಢಮಾಗಿರ್ಪುದು".[೩೦]

ಮೇಲಿನ ಶಾಸನವನ್ನು ನೋಡಿದರೆ ದಿವ್ಯಗಳನ್ನು ನಡೆಸುವುದಕ್ಕಾಗಿ ದೂರದ ಊರುಗಳಿಂದ ಹರದನಹಳ್ಳಿಯ ಆ ದೇವಸ್ಥಾನಕ್ಕೆ ಬರುತ್ತಿದ್ದರೆಂದು ಕಾಣಿಸುತ್ತದೆ.

ಕನ್ನಡ ಕಾವ್ಯಗಳಲ್ಲಿ ಮತ್ತು ಶಾಸನಗಳಲ್ಲಿ, ಮುಖ್ಯವಾಗಿ ಶಾಸನಗಳಲ್ಲಿ ಬರುವ ಉಲ್ಲೇಖಗಳಿಂದ ಕೆಲವು ತೀರ್ಮಾನಗಳಿಗೆ ಬರಬಹುದು. (ಅ) ಕರ್ಣಾಟಕದಲ್ಲಿ ಮುಖ್ಯವಾಗಿ ಸಪ್ತ ದಿವ್ಯಗಳು* ಪ್ರಚಲಿತವಾಗಿದ್ದು ಬಹುಮಟ್ಟಿಗೆ ಸ್ಮೃತಿಗಳಲ್ಲಿ ಉಕ್ತವಾಗಿರುವಂತೆ ಆಚರಿಸಲ್ಪಡುತ್ತಿದ್ದುವು. ಇವುಗಳಲ್ಲಿ ಪ್ರಸಿದ್ಧವಾಗಿದ್ದುದು ಕಾಸಿದ ಲೋಹವನ್ನು ಕೈಯಲ್ಲಿ ಹಿಡಿಯುವ ಅಗ್ನಿದಿವ್ಯ. ಇದನ್ನೇ ಶಾಸನವೊಂದರಲ್ಲಿ 'ಪಾಳದಿವ್ಯ' ( = ಫಾಲದಿವ್ಯ)ವೆಂದು ಕರೆದಿದೆ.[೩೧] ಸಿದ್ಧರಾಮಚಾರಿತ್ರದಲ್ಲಿಯೂ ಪಾಳದಿವ್ಯದ ಹೆಸರಿದೆ.[೩೨] ಸಿದ್ಧರಾಮನು ಕೈಯಲ್ಲಿ ಹಿಡಿದು

---

೩೦ ಸಿದ್ಧೇಶ್ವರ ಪುರಾಣ, 2. 30-1. ಈ ಪುರಾಣದ ಕಡೆಗೆ ನನ್ನ ಗಮನವನ್ನು ಸೆಳೆದವರು ಶ್ರೀ ಎಲ್. ಬಸವರಾಜು ಅವರು.

* ಕರ್ಣಾಟಕದಲ್ಲಿ ಘಟಾಹಿ ಅಥವಾ ಘಟಸರ್ಪ ದಿವ್ಯವು ಪ್ರಚುರವಾಗಿದ್ದಿತೆಂಬುದಕ್ಕೆ ಹಿಂದೆ ಹೇಳಿದ ತ್ರಿಷಷ್ಟಿ ಪುರಾತನ ಚರಿತೆಯು ಸಾಕ್ಷಿಯನ್ನೊದಗಿಸುತ್ತದೆ. ಇದಕ್ಕೆ ಆಧಾರವಾಗಿ ಕನ್ನಡ ನಾಡಿನವನಾದ ಸೋಮದೇವನ ಅಭಿಲಷಿತಾರ್ಥ ಚಿಂತಾಮಣಿಯಲ್ಲಿ 'ಭುಜಗ' ಅಥವಾ ಸರ್ಪದಿವ್ಯದ ಉಲ್ಲೇಖವಿರುವುದು ಗಮನಾರ್ಹ. ಅವನು ಇದಲ್ಲದೆ ವಿಷ, ಕ್ಷುತ್, ದಂತಿ, ಅನಲ, ಜಲ ಮುಂತಾದ ದಿವ್ಯಗಳನ್ನೂ ಹೇಳುತ್ತಾನೆ. (ಅಭಿಲಷಿತಾರ್ಥ ಚಿಂತಾಮಣಿ, ಮೈಸೂರು, ಪು. 177). ಬಸವಣ್ಣನವರೂ ಈ ದಿವ್ಯವನ್ನು ಹೆಸರಿಸುತ್ತಾರೆ. (ಪು. 169)

೩೧ ಸ್ಮೃತಿಗಳ ಪ್ರಕಾರ ಕಾಸಿದ ಕುಳವನ್ನು ನಾಲಗೆಯಲ್ಲಿ ನೆಕ್ಕುವುದು 'ಫಾಲದಿವ್ಯ'.

೩೨ ಇದರ ಚರ್ಚೆಗೆ, ನೋಡಿ—ಸಿದ್ಧರಾಮ ಚಾರಿತ್ರ (ಸಂಪಾದಕರು: ಟಿ. ಎಸ್. ವೆಂಕಣ್ಣಯ್ಯ ಮತ್ತು ಡಿ. ಎಲ್. ನರಸಿಂಹಾಚಾರ್), ಪು. 181-2.

ತೋರಿಸಿದ್ದು ಕಾಸಿದ ಕುಳವನ್ನಲ್ಲ, ಕಾಸಿದ ಕಬ್ಬಿಣದ ಗುಂಡನ್ನು. (ಅ) ದಿವ್ಯಗಳು ಸಾಮಾನ್ಯವಾಗಿ ನಡೆಯುತ್ತಿದ್ದುದು ದೇವಸ್ಥಾನಗಳಲ್ಲಿ. ಅವು ದೇವಸ್ಥಾನಕ್ಕೆ ಒಳ್ಳೆಯ ಆದಾಯವನ್ನು ತರುತ್ತಿದ್ದುವು. (ಇ) ದಿವ್ಯಗಳಲ್ಲಿ ಹಲವು ಬಾರಿ ಸತ್ಯವಂತರು ಗೆದ್ದು ಸುರಕ್ಷಿತವಾಗಿ ಹಿಂದಕ್ಕೆ ಬರುತ್ತಿದ್ದರು. ಇದು ಸಾಮಾನ್ಯ ನಿಯಮವೆಂದು ಪ್ರತಿಪಾದಿಸುವುದು ಕಷ್ಟವಾದರೂ ದಿವ್ಯದ ಕಲ್ಪನೆಯ ಹಿಂದೆ ಒಂದು ಮನಶ್ಶಾಸ್ತ್ರೀಯವಾದ ತತ್ವವಿದೆ. ದೈವದಲ್ಲಿ ಮತ್ತು ದೈವೀಶಕ್ತಿಯಲ್ಲಿ ಸಂಪೂರ್ಣ ವಿಶ್ವಾಸವಿದ್ದ ಆ ಕಾಲದಲ್ಲಿ ಅಪರಾಧಿಗಳು ದಿವ್ಯವನ್ನು ಹಿಡಿಯಲು ಅಂಜುತ್ತಿದ್ದರು ಅಥವಾ ಹಿಡಿಯಲು ಬಂದಾಗ ತಪ್ಪೊಪ್ಪಿಕೊಳ್ಳುತ್ತಿದ್ದರು ಅಥವಾ ಹಿಡಿದು ಅಪಾಯಕ್ಕೆ ಗುರಿಯಾಗಿ ದೋಷಿಗಳೆಂದು ಭಾವಿಸಲ್ಪಡುತ್ತಿದ್ದರು. ಪ್ರಾಮಾಣಿಕವಾಗಿರುವ ವ್ಯಕ್ತಿಯು ತನ್ನನ್ನು ದೈವವು ಕಾಪಾಡಿಯೇ ಕಾಪಾಡುತ್ತದೆ ಎಂಬ ಉತ್ಕಟವಾದ ಶ್ರದ್ಧೆಯಿಂದ ದಿವ್ಯವನ್ನು ಹಿಡಿದಾಗ ಆ ಪ್ರಾಕೃತಿಕ ಶಕ್ತಿಯನ್ನು ಅವನ ಅಚಲ ವಿಶ್ವಾಸವು ಗೆದ್ದಿರಲೂ ಸಾಧ್ಯ. ಈಗಲೂ ನಾವು ಹಳ್ಳಿಗಳಲ್ಲಿ ಎಷ್ಟೋ ಜನ ಮುಗ್ಧರು ಭಗವದ್ಭಕ್ತಿಯಿಂದ ಪ್ರೇರಿತರಾಗಿ ಅಗ್ನಿಕುಂಡವನ್ನು ತುಳಿಯುವುದನ್ನು ಕಾಣಬಹುದು. ಹಾಗೆ ನೋಡಿದರೆ ಸೀತೆಯು ಅಗ್ನಿಪ್ರವೇಶಮಾಡಿ ಸುರಕ್ಷಿತವಾಗಿ ಹೊರಗೆ ಬಂದುದರ ವಿಷಯದಲ್ಲಿ ನಾವು ಅವಿಶ್ವಾಸ ತೋರಬೇಕಾದ ಪ್ರಮೇಯವಿಲ್ಲ.

ದಿವ್ಯವು (= ಇಂಗ್ಲಿಷ್–'trial by ordeal') ಭಾರತಕ್ಕೆ ಮಾತ್ರ ವಿಶಿಷ್ಟವಾದುದಲ್ಲ, ಒಂದಾನೊಂದು ಕಾಲದಲ್ಲಿ ಹೆಚ್ಚು ಕಡಿಮೆ ಪ್ರಪಂಚದಾದ್ಯಂತ ಪ್ರಚಾರದಲ್ಲಿದ್ದಿತು.[೩೩] ಗ್ರೀಕರಿಗೆ ಅದು ಗೊತ್ತಿದ್ದರೂ ಅದನ್ನು ಆಚರಣೆಗೆ ತರಲಿಲ್ಲ. ರೋಮನರ ನ್ಯಾಯಾಂಗದಲ್ಲಿ ಇದಕ್ಕೆ ಸ್ಥಾನವಿರಲಿಲ್ಲ. ಪ್ರಾಚೀನ ಯುರೋಪಿಯನ್ ಜನಾಂಗಗಳಲ್ಲಿ ದೋಷ್ಯನನ್ನು ಹರಿಯುವ ನದಿಗೆ ಹಾಕಿ ಅದು ಅವನನ್ನು ಕೊಂಡುಹೋದರೆ ದೋಷಿಯೆಂದು ನಿರ್ಧರಿಸುವ ದಿವ್ಯವು ಬಹು ಪ್ರಚಾರದಲ್ಲಿದ್ದಿತು. ಆಫ್ರಿಕನ್ ಜನಾಂಗಗಳಲ್ಲಿ ಈಗಲೂ ದಿವ್ಯದ ಅನುಸರಣೆಯುಂಟು. ಆಧುನಿಕ ಅರೇಬಿಯದಲ್ಲಿ ಒಂದು ವ್ಯವಹಾರಕ್ಕೆ ಸಂಬಂಧಿಸಿದ ಇಬ್ಬರೂ ಕಾಸಿದ ಕಬ್ಬಿಣವನ್ನು ನೆಕ್ಕಬೇಕು. ಯಾರ ನಾಲಿಗೆ ಬಹುವಾಗಿ ಸುಡುವುದೋ ಅವನು ದೋಷಿ.[೩೪] ಪ್ರಾಚೀನ ಯೂರೋಪಿನಲ್ಲಿ ದ್ವಂದ್ವಯುದ್ಧವು ವಿವಾದವನ್ನು ಪರಿಹರಿಸುವ ಮಾರ್ಗಗಳಲ್ಲೊಂದಾಗಿದ್ದಿತು. ಅಂತಹ ಯುದ್ಧದಲ್ಲಿ ಭಾಗಿಗಳಾಗುವ ಇಬ್ಬರಲ್ಲಿ ಯಾರ ಕಡೆ ನ್ಯಾಯ ಇದೆಯೋ ಅವನನ್ನು ದೈವವು ಗೆಲ್ಲಿಸುತ್ತದೆಯೆಂದು ನಂಬಿದ್ದರು.[೩೫] ದಕ್ಷಿಣ ಜರ್ಮನಿಯಲ್ಲಿ ಇಂದಿಗೂ ಸೌಮ್ಯವಾದ ರೂಪದಲ್ಲಿ ದಿವ್ಯದ ಕೆಲವು ಪ್ರಭೇದಗಳು ಕಾಣಿಸಿಕೊಳ್ಳುತ್ತವೆ.

ದಿವ್ಯದ ಆಚರಣೆಯು ಭಾರತದಲ್ಲಿ ಇತ್ತೀಚಿನವರೆಗೂ ಇದ್ದಿತು. ಮಾನುಷಸಾಕ್ಷಿಯಿರುವಾಗ ದಿವ್ಯದ ಅನುಸರಣೆ ಬೇಡವೆಂದು ಪ್ರತಿವಾದಿಯ ಕೇಳಿಕೆಯನ್ನು ತಿರಸ್ಕರಿಸಿರುವ ನೂರಾರು ನಿದರ್ಶನಗಳು ಮರಾಠಾ ಆಳಿಕೆಯ ಕಾಲದ ಅನೇಕ ಲೇಖನಗಳಲ್ಲಿವೆ.[೩೬] ಕ್ರಿ. ಶ. 1783 ರಲ್ಲಿ ವಾರಣಾಸಿಯ ನ್ಯಾಯಾಧೀಶನು ಶಾಸ್ತ್ರೋಕ್ತವಾದ ರೀತಿಯಲ್ಲಿ ದಿವ್ಯಗಳನ್ನು ನಡೆಯಿಸುತ್ತಿದ್ದನು.[೩೭] ಕುದಿವ ಗಂಜಳದಲ್ಲಿ ಕೈಯದ್ದಿ ನಾಣ್ಯವನ್ನು ಹೊರತೆಗೆಯುವುದು, ಕಾದ ಕಬ್ಬಿಣವನ್ನು ಕೈಯಲ್ಲಿ

---

೩೩ ವಿವರಗಳಿಗೆ, ನೋಡಿ—Encyclopaedia of Religion and Ethics, IX, P. 509-11.
೩೪ ,, P. 512.
೩೫ Encyclopaedia Britannica, VII, P. 712.
೩೬ Altekar : History of Village Communities in Western India, P. 50.
೩೭ Encyclopaedia of Religion and Ethics, IX, P. 522.

ಹಿಡಿಯುವುದು—ಇತ್ಯಾದಿಗಳು ಭಾರತದಲ್ಲಿ ಈಗಲೂ ಸ್ವಲ್ಪಮಟ್ಟಿಗೆ ಉಂಟು. ಕ್ರಿ.ಶ. 1936 ರಲ್ಲಿ ನಡೆದ ದಿವ್ಯವೊಂದರಲ್ಲಿ ನಿರ್ದೋಷಿಯ ಕೈಗೆ ಯಾವ ಗಾಯವೂ ಆಗಲಿಲ್ಲ, ದೋಷಿಯ ಕೈ ಮಾತ್ರ ಸುಟ್ಟುಹೋಯಿತೆಂದು ನಂಬಿಕೆಗೆ ಅರ್ಹವಾದ ಪ್ರತ್ಯಕ್ಷದರ್ಶಿಯೊಬ್ಬನು ಬರೆದಿದ್ದಾನೆಂದು ಡಾ. ಹಟ್ಟನ್ ಹೇಳುತ್ತಾರೆ.[೩೮] ಈಗಲೂ ಬಂಗಾಳದಲ್ಲಿ ಅಗ್ನಿದಿವ್ಯಗಳನ್ನು ನಡಸುತ್ತಿದ್ದಾರೆಂದು ಲೇಖಕರೊಬ್ಬರು ಬರೆದಿದ್ದಾರೆ.[೩೯] ಕೆಲವು ವರ್ಷಗಳ ಹಿಂದೆ ಚಿತ್ರದುರ್ಗ ಜಿಲ್ಲೆಯಲ್ಲಿ ಹಿಂದುಳಿದ ಜನಾಂಗವೊಂದರಲ್ಲಿ (ಕೊರಚರಲ್ಲಿ) ಎರಡು ಪಕ್ಷಗಳಿಗೆ ಜಗಳ ಬಂದಾಗ ಕಾದ ಕಬ್ಬಿಣದ ತುಂಡನ್ನು ಹಿಡಿಯಬೇಕೆಂದು ತೀರ್ಮಾನವಾಗಿ ಎಲ್ಲವೂ ಸಿದ್ಧವಾಗಿರುವಾಗ ಬೇರೆಯವರ ಮಧ್ಯಪ್ರವೇಶದಿಂದ ನಿಂತುಹೋಯಿತೆಂದು ತಿಳಿದುಬರುತ್ತದೆ. ಈಗಲೂ ತಾವು ಹೇಳುವುದೇ ಸರಿ, ಅದನ್ನು ಸಾಧಿಸ ಬಲ್ಲೆವು ಎಂಬುದನ್ನು ಹೇಳುವಾಗ ಹಳ್ಳಿಗರ ಬಾಯಲ್ಲಿ ಬರುವ 'ಕೆಂಡವನ್ನು ಹಿಡಿಯುತ್ತೇನೆ', 'ಸೆರಗಿಗೆ ಬೆಂಕಿ ಹಾಕಿಸಿಕೊಳ್ಳುತ್ತೇನೆ',[೪೦] 'ದೇವಸ್ಥಾನದಲ್ಲಿ ಗಂಟೆ ಬಾರಿಸುತ್ತೇನೆ' ಇತ್ಯಾದಿ ಮಾತುಗಳು ಹಿಂದಿನ ಕಾಲದ ದಿವ್ಯದ ಪದ್ಧತಿಯ ವಾಗ್ರೂಪವಾದ ಅವಶೇಷಗಳಲ್ಲದೆ ಮತ್ತೇನು! ಅದೃಷ್ಟವಶಾತ್, ದಿವ್ಯಗಳು ಬಹುಪಾಲು ಹೀಗೆ ಮಾತಿನಲ್ಲಿ ಮಾತ್ರ ಉಳಿದುಕೊಂಡಿವೆ.

## "ಮುಂಡಿಗೆ"

ಹಿಂದೆ ಉದ್ಧರಿಸಿದ ಮಂಡ್ಯದ ಶಾಸನದಲ್ಲಿ[೪೧] ಒಂದು ಹಳ್ಳಿಯವರು 'ಮುಂದಿಗೆ' ಇಕ್ಕಿದಾಗ ಇನ್ನೊಂದು ಹಳ್ಳಿಗೆ ಸೇರಿದ ಕನ್ನಯ್ಯನೆಂಬಾತನು ದಿವ್ಯವನ್ನು ಹಿಡಿದು ಗೆದ್ದ ವಿಷಯ ವಿರುವುದನ್ನು ನಿರೂಪಿಸಿದ್ದೇವೆ. 'ಮುಂಡಿಗೆ' ಎಂಬುದರ ಬದಲು 'ಮುಂದಿಗೆ' ಎಂದು ತಪ್ಪಾಗಿ ಬಿದ್ದಿರುವುದರಲ್ಲಿ ಸಂದೇಹವಿಲ್ಲ. ಮುಂಡಿಗೆ ಅಥವಾ ಮುಡಿಗೆ ಎಂಬ ಪದಗಳು ನಮ್ಮ ಕಾವ್ಯಗಳಲ್ಲಿ ಹಲವೆಡೆ ಕಾಣಿಸಿಕೊಳ್ಳುತ್ತವೆ. ಅವುಗಳಲ್ಲಿ ಕೆಲವನ್ನು ಮಾತ್ರ ಕೆಳಗೆ ಸೂಚಿಸಲಾಗಿದೆ.

(i) ಪಂಪಭಾರತದಲ್ಲಿ ಕಿರಾತನಾದ ಶಿವ ಮತ್ತು ಅರ್ಜುನರ ಯುದ್ಧವನ್ನು ವರ್ಣಿಸು ವಾಗ ಈ ಪದ್ಯವು ಬರುತ್ತದೆ—

ಇಕ್ಕಿದನಭವಂ ಪಾರ್ಥನ । ನಿಕ್ಕಿದನಾ ತ್ರಿಪುರಹರನನರ್ಜುನನೆನೆ ಗೆ ।
ಲ್ಲಕ್ಕೆ ಮುಡಿಗಿಕ್ಕುವಂತೆವೊ । ಲಿಕ್ಕಿದನವಯವದೆ ನೆಲದೊಳರಿಗಂ ಹರನಂ ॥ [೪೨]

(ii) "ಶಿವಲೋಕಕ್ಕೆ ಸರಿ ಬೇಱೆ ಲೋಕವಿಲ್ಲ;
ಜಗಕ್ಕೆ ಇಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ:
'ಕೂಡಲ ಸಂಗಯ್ಯನೊಬ್ಬನೇ ದೈವ'ವೆಂದು." [೪೩]

---

೩೮ Hutton : Caste in India, P. 106.

೩೯ Sarat Chandra Mitra : 'Fire-Ordeals' (Quarterly Journal of The Mythic Society, XXIV, P. 232)

೪೦ ಸೆರಗಿನಲ್ಲಿ ಬೆಂಕಿ ಹಾಕಿಸಿಕೊಳ್ಳುವ ಸಂಪ್ರದಾಯವು ಬಸವಣ್ಣನವರ ಕಾಲದಲ್ಲಿಯೂ ಇದ್ದಿತೆಂಬು ದನ್ನು ಹಿಂದೆ ಉದ್ಧರಿಸಿರುವ ಅವರ ವಚನವೊಂದು ಸೂಚಿಸುವಂತೆ ಕಾಣುತ್ತದೆ—"..ಹುಸಿವಂಗೆ ಮುಡಿಲ ಕಿಚ್ಚಾಗಿ ಸುಡುವ"

೪೧ Ec, III. Mandya. 79.

೪೨ ಪಂಪಭಾರತ, 8. 22.

೪೩ ಬಸವಣ್ಣನವರ ಷಟ್ಸ್ಥಲದ ವಚನಗಳು (1954), ಪು. 195.

ಮುಂಡಿಗೆ ಎಂಬುದು ಒಂದು ರೀತಿಯ ಸವಾಲು ಎಂಬುದು ಇಲ್ಲಿ ಸ್ಪಷ್ಟ. ಬಸವಣ್ಣನವರ ಈ ವಚನಕ್ಕೆ ಸಂದರ್ಭವೊಂದನ್ನು ಸೃಜಿಸಿರುವ ಸಿಂಗಿರಾಜನು ತನ್ನ ಸಿಂಗಿರಾಜಪುರಾಣದಲ್ಲಿ 'ಮುಂಡಿಗೆ' ಎಂಬುದು ಶಿರೋವಸ್ತ್ರವನ್ನು ತೆಗೆದು ಇಡುವುದನ್ನು ಸೂಚಿಸುತ್ತದೆಯೆಂಬುದನ್ನು ಸ್ಪಷ್ಟಪಡಿಸುತ್ತಾನೆ—

> "ರಸಾಪೇಶರಿಂ ಬಸವ ತಲೆಸುತ್ತ ತೆಗೆದಿಕ್ಕಿದ ಜಗಕ್ಕೆ ಮುಂಡಿಗೆ ನೆಮ್ಮತ್ಯತಿಪ್ಪದ್ದಶಾಂಗುಲನ ಘನ ವಟಿಕವ್ರೊಳವೆಸುಕ್ಕೊರೆದ ವಚನ.." (ಸಿಂಗಿರಾಜಪುರಾಣ, 27. 58).

(iii) ಹರಿಹರನ 'ಮುಡಿಗೆಯಷ್ಟಕ' ಎಂಬ ಎಂಟು ಪದ್ಯಗಳ ಒಂದು ಪುಟ್ಟ ಕಾವ್ಯ ಇದೆ. ಆ ಕಾವ್ಯವು ಹುಟ್ಟಿದ ಸಂದರ್ಭವನ್ನು ಸಿದ್ಧನಂಜೇಶನು ಈ ರೀತಿ ನಿರೂಪಿಸುತ್ತಾನೆ.[೪೪] ಒಮ್ಮೆ ಹರಿಹರನು ಶಿವಲಿಂಗಕ್ಕೆ ಬಾಗಿ ನಮಸ್ಕರಿಸಿದಾಗ ಅವನ ತಲೆಯ ಮೇಲಿದ್ದ ಟೊಪ್ಪಿಗೆಯು ಕೆಳಗೆ ಬಿದ್ದಿತೆಂದೂ ಅದನ್ನು ಕಂಡ ಅಲ್ಲಿದ್ದ ಬ್ರಾಹ್ಮಣರು "ಮುಡುಗೆಯಿಂ ಸಸಿನೆ ಹರಿಯರಸನೇತ ಕಿಕ್ಕಿದನೊ" ಎಂದು ಕಟಕಿಯ ಮಾತನ್ನಾಡಿದರೆಂದೂ. ಆಗ ಹರಿಹರನು ಶಿವನೇ ಪರವಸ್ತು, ಶಿವಭಕ್ತರೇ ಶ್ರೇಷ್ಠರೆಂಬುದನ್ನು ತೋರಿಸಲು ತಾನು ಮುಡಿಗೆಯನ್ನು ಇಕ್ಕಿದುದಾಗಿಯೂ ಅದನ್ನು ತೆಗೆಯುವವರು ಯಾರಿದ್ದಾರೆ ಎಂದು ಅದನ್ನೇ ಒಂದು ಅಷ್ಟಕವಾಗಿ ಮಾಡಿ ಹೇಳಿದಂತೆಯೂ ಅಲ್ಲಿದ್ದ ಬ್ರಾಹ್ಮಣರು ಆ ಟೊಪ್ಪಿಗೆಯನ್ನು ಎತ್ತಲು ಹೋಗಿ ಅವರ ಬೆರಳುಗಳು ಮುರುಟಿದಾಗ ಹರಿಹರನ ಕೃಪೆಯಿಂದ ಅವು ಮತ್ತೆ ನೇರವಾದುವೆಂದೂ ಚಂಡೇಶನೇ ಬಂದು ಅದನ್ನು ಎತ್ತಿ ತನ್ನ ತಲೆಯಮೇಲಿಟ್ಟುಕೊಂಡು ಅಂತರ್ಧಾನನಾದನೆಂದೂ ಸಿದ್ಧನಂಜೇಶನು ನಿರೂಪಿಸುತ್ತಾನೆ. ಹರಿಹರನ ಅಷ್ಟಕದ ಕ್ಷಕಾರ ಪ್ರಾಸದ ಒಂದೊಂದು ಪದ್ಯವೂ 'ಮುಡಿಗಿಕ್ಕಿದೆನಿಕ್ಕಿದೆನಾವನೆತ್ತುವಂ' ಎಂದು ಕೊನೆಯಾದರೆ,[೪೫] ಮೇಲಿನ ಸಂದರ್ಭವನ್ನು ಸಿದ್ಧನಂಜೇಶನು ನಿರೂಪಿಸುವಾಗ 'ವಿರೂಪಾಕ್ಷನೇ ಪರಬ್ರಹ್ಮನೆಂದಿಕ್ಕಿದೀ ಮುಡಿಗೆಯಂ ತೆಗೆವರಿಲ್ಲಿಳೆಯೊಳು' ಎಂದು ಕೊನೆಯಾಗುವ ಕ್ಷಕಾರ ಪ್ರಾಸದ ಎಂಟು ವಾರ್ಧಕಗಳ ಒಂದು ಅಷ್ಟಕವನ್ನೇ ಬರೆದಿದ್ದಾನೆ.[೪೬]

(iv) "ಹಂಪೆಯ ಮಹಾದೇವನಾತ್ಮಜ ರಾಘವಾಂಕನ ಕಾವ್ಯ ತರ್ಕಿಗಿಕ್ಕಿದ ಮುಂಡಿಗೆ" [೪೭]

(v) "ಮುಡಿಗೆ + ಇಕ್ಕಿದಂ = ಮುಡಿಗಿಕ್ಕಿದಂ" [೪೮]

(vi) ತಡವೇಂ ಪೂಕ್ಕಗೆ ದಿವ್ಯಂ । ಬಿಡಿವೆ ರುಕ್ಮಿಣಿಯೊಳಲ್ಲದಿಂ ಹರಿ ಮಜಿಸಿದಂ ।
ಗಡಸತ್ಯಭಾಮೆಗೆಜಗಂ । ಮುಡಿಗಿಕ್ಕಿದನಾರ್ಪರೆತ್ತಿಕೊಳ್ಳಿಂ ಸಭೆಯೊಳ್ ॥ [೪೯]

(vii) "ಮತ್ತೊರ್ವಳಲರ್ಗೊಳಲ್ ನಡೆವಲ್ಲಿ—
ಮುಡಿಗಿಕ್ಕಿದೆನಾಂ ನಿಶ್ಚಯ । ಬಿಡಂಗುವವೆದೆಸೆವ ಕರ್ಪನೆಂದು ತಮಾಳಂ ।
ಮುಡಿಗಿಕ್ಕಿದವ್ರೋಲೆಲರಿಂ । ದುಡಿದಲರ್ಗುಡಿ ಬಿಟ್ಟುದೊಂದವಳ ಮುನ್ನಡಿಯೊಳ್ ॥ [೫೦]

ಇವು ಎಲ್ಲೋ ಕೆಲವು ಪ್ರಯೋಗಗಳು. ಮುಂಡಿಗೆ ಮತ್ತು ಮುಡಿಗೆಗಳೆರಡೂ

---

೪೪ ರಾಘವಾಂಕ ಚಾರಿತ್ರ, 14. 106–119.

೪೫ ಕರ್ನಾಟಕ ಕವಿಚರಿತೆ, I (1961), ಪು. 263. ಮುಡಿಗೆಯ ಅಷ್ಟಕದ ಪಾಠಕ್ಕೆ, ನೋಡಿ: ಬಿ. ಶಿವಮೂರ್ತಿಶಾಸ್ತ್ರೀ: ವೀರಶೈವ ಸಾಹಿತ್ಯ ಮತ್ತು ಇತಿಹಾಸ, III, ಪು. 2–3.

೪೬ ರಾಘವಾಂಕ ಚಾರಿತ್ರ, 14. 110-7.

೪೭ ಹರಿಶ್ಚಂದ್ರ ಕಾವ್ಯ, 1. 13.

೪೮ ಶಬ್ದಮಣಿದರ್ಪಣಂ (ಮದ್ರಾಸ್ ಆವೃತ್ತಿ), ಪು. 38.

೪೯ ಜಗನ್ನಾಥವಿಜಯ, 12. 74.

೫೦ ಚಂದ್ರಪ್ರಭ ಪುರಾಣ, 7. 110.

ಸಮಾನಾರ್ಥಕಗಳು.[೫೧] ಎರಡಕ್ಕೂ ಟೊಪ್ಪಿಗೆ ಅಥವಾ ತಲೆಯ ಮೇಲಿನ ಉಡುಪು ಎಂಬುದು ಮೂಲಾರ್ಥ. ಇಬ್ಬರ ಮಧ್ಯೆ ವಾದವೊಂದು ಎದ್ದಾಗ ಅವರಲ್ಲಿ ಒಬ್ಬನು ತನ್ನ ತಲೆಯ ಮೇಲಿನ ಉಡುಪನ್ನು ತೆಗೆದು ಎಸೆದರೆ ಅದು ಸವಾಲಿನ ಸೂಚಕವಾಗಿದ್ದಿತು. ಇನ್ನೊಬ್ಬನು ಅದನ್ನು ಎತ್ತಿಕೊಂಡರೆ ಆ ಸವಾಲನ್ನು ಅಂಗೀಕರಿಸಿದಂತಾಗುತ್ತಿದ್ದಿತು. ಪಂಪಭಾರತದ ಅರ್ಜುನನು ಶಿವನನ್ನು ಮೇಲೆತ್ತಿ ನೆಲಕ್ಕೆ ಹಾಕಿದುದು ಗೆಲ್ಲುವುದಕ್ಕೋಸ್ಕರ ಮುಡಿಗೆಯನ್ನು ಇಕ್ಕುವಂತೆ, ಅಷ್ಟು ನಿರಾಯಾಸವಾಗಿ ಆ ಕ್ರಿಯೆ ಇದ್ದಂತೆ ಪಂಪಕವಿಯ ವರ್ಣನೆ. ಬಸವಣ್ಣನವರ ವಚನದಲ್ಲಿಯಂತೂ ಶಿವಲೋಕಕ್ಕೆ ಮತ್ತು ಶಿವನಿಗೆ ಸಮಾನವಿಲ್ಲವೆಂಬುದನ್ನು ತೋರಿಸಲು ತಾವು ಮುಂಡಿಗೆಯನ್ನು ಹಾಕಿರುವುದಾಗಿಯೂ ಧೈರ್ಯವಿರುವವರು ಬಂದು ಅದನ್ನು ಎತ್ತಿಕೊಳ್ಳಬಹುದೆಂದೂ ಸ್ಪಷ್ಟವಾಗಿ ಹೇಳಿದೆ. ಹರಿಹರನ ಸಂದರ್ಭದಲ್ಲಂತೂ ಇನ್ನೂ ಸ್ಪಷ್ಟವಾಗಿದೆ. ಹೀಗೆ ಮುಂಡಿಗೆ ಮತ್ತು ಮುಡಿಗೆಗಳು ಮೊದಲು ಶಿರೋವಸ್ತ್ರವನ್ನು ಸೂಚಿಸುತ್ತಿದ್ದು ಕ್ರಮೇಣ 'ಸವಾಲು' ಎಂಬ ಅರ್ಥವನ್ನು ಪಡೆದುವು. 'ಮುಡಿಗಿಕ್ಕು' ಎನ್ನುವುದು ಇಂಗ್ಲಿಷಿನ 'throwing the gauntlet' ಎಂಬ ಉಕ್ತಿಗೆ ಸಮಾನವಾದುದು.[೫೨] gauntlet ಎಂಬುದು ಮುಂಗೈಯನ್ನು ರಕ್ಷಿಸಿಕೊಳ್ಳುವುದಕ್ಕೆ ಉಪಯೋಗಿಸುತ್ತಿದ್ದ ಕವಚ. ಅದನ್ನು ಚರ್ಮದಿಂದ ಮಾಡಿ ಉಕ್ಕಿನ ತಟ್ಟೆಗಳಿಂದ ಮುಚ್ಚುತ್ತಿದ್ದರು. ಆ ಕವಚವನ್ನು ಎಸೆಯುವುದು ("to throw down the gauntlet") ತನ್ನ ಪ್ರತಿಸ್ಪರ್ಧಿಗೆ ಸವಾಲು ಹಾಕಿದಂತೆ; ಆ ಕವಚವನ್ನು ಎತ್ತಿಕೊಳ್ಳುವುದು ("to pick up the gauntlet") ಆ ಸವಾಲನ್ನು ಅಂಗೀಕರಿಸಿದಂತೆ.[೫೩]

ದಿವ್ಯ ಮತ್ತು ಮುಂಡಿಗೆಗಳೆರಡೂ ವಿವಾದಕ್ಕೆ ಸಂಬಂಧಿಸಿದುವಾದರೂ[೫೪] ಮುಂಡಿಗೆ ಎಂಬುದು ಸವಾಲನ್ನು ಸೂಚಿಸಿದರೆ ದಿವ್ಯವು ವಿವಾದವನ್ನು ಪರಿಹರಿಸುವ ಒಂದು ಬಗೆಯನ್ನು ಸೂಚಿಸುತ್ತದೆ. ಮಂಡ್ಯದ ಶಾಸನದಲ್ಲಿ ಬಂದಿರುವ ವಿಷಯಗಳನ್ನು ಈಗ ಸ್ಪಷ್ಟಪಡಿಸಬಹುದು. ವಿವಾದದಲ್ಲಿ ಭಾಗಿಗಳಾದ ಒಂದು ಹಳ್ಳಿಯ ಜನರು 'ಮುಂಡಿಗೆ'ಯನ್ನು ಹಾಕಿ ಸವಾಲು ಮಾಡಿದರು. ಅವರು ಹಾಕಿದ ಸವಾಲನ್ನು ಅಂಗೀಕರಿಸಿದ ಇನ್ನೊಂದು ಹಳ್ಳಿಯ ಕನ್ನಯ್ಯನು ದಿವ್ಯವನ್ನು ಹಿಡಿದು ಗೆದ್ದನು, ಹೊಲವು ಅವನದೆಂದು ತೀರ್ಮಾನವಾಯಿತು. ನಮಗೆ ತಿಳಿದಮಟ್ಟಿಗೆ 'ಮುಡಿಗಿಕ್ಕು'ವ ಸಂಪ್ರದಾಯವು ಈಗ ಲುಪ್ತವಾಗಿಹೋಗಿದೆ.

---

೫೧ ಮುಂಡಿಗೆ ಮತ್ತು ಮುಡಿಗೆಗಳೆರಡೂ ಸಮಾನಾರ್ಥಕಗಳಾಗಿರುವುದರಿಂದ ಬಿಂದುಸಹಿತವಾದ ರೂಪವೇ ಪ್ರಾಚೀನವೆಂದೂ, ಮುಡಿಗೆ ಎಂಬಲ್ಲಿ ಬಿಂದು ಲೋಪವಾಗಿದೆಯೆಂದೂ ಹೇಳುವ ಮನಸ್ಸಾಗುತ್ತದೆ. ಆದರೆ ಪಂಪನಲ್ಲಿಯೇ 'ಮುಡಿಗೆ' ಎಂಬ ರೂಪವು ಸಿಗುವುದರಿಂದ ಮೇಲಿನ ಊಹೆಗೆ ಆಧಾರವಿಲ್ಲವೆಂದು ಕಾಣುತ್ತದೆ. ಮುಂಡಿಗೆ ಮತ್ತು ಮುಡಿಗೆಗಳೆರಡೂ ಭಿನ್ನಮೂಲಗಳಿಂದ ಬಂದಿರುವ ಸಾಧ್ಯತೆ ಇದೆ. ಮುಡಿಗೆಯಂತೂ ಅಚ್ಚ ದ್ರಾವಿಡ ಪದ. ಮುಡಿ (=ಧರಿಸು) ಎಂಬ ಧಾತುವಿನಿಂದ ಮುಡಿಗೆ (=ತಲೆಗೆ ಧರಿಸುವ ವಸ್ತ್ರ) ಎಂಬುದು ಬಂದಿದೆ. ಮುಂಡಿಗೆ ಎಂಬುದು ಸಂಸ್ಕೃತದ 'ಮುಂಡ'ದಿಂದ ಬಂದಿರಬಹುದೇ? 'ಕನಕನ ಮುಂಡಿಗೆ' ಎಂಬ ಹೆಸರಿನ ಕನಕದಾಸರ ಕೆಲವು ಹಾಡುಗಳು ದೊರಕುತ್ತವೆ. ಒಗಟನಂತಹ ಹಾಡುಗಳು ಬೇರೆಯವರಿಗೆ ಒಂದು ರೀತಿಯ ಸವಾಲಿನಂತೆಯೂ ಇರುತ್ತಿದ್ದುದರಿಂದ ಅವುಗಳನ್ನು ಆ ಹೆಸರಿಂದ ಕರೆದಿರುವಂತೆ ಕಾಣುತ್ತದೆ.

೫೨ ಇವು ಸಮಾನ ಉಕ್ತಿಗಳೆಂದು ಪ್ರೊ. ಬಿ. ಎಂ. ಶ್ರೀಕಂಠಯ್ಯನವರು ಹೇಳುತ್ತಿದ್ದುದು ತಮಗೆ ಇನ್ನೂ ಸ್ಪಷ್ಟವಾಗಿ ನೆನಪಿದೆಯೆಂದು ಪ್ರೊ. ಡಿ. ಎಲ್. ನರಸಿಂಹಾಚಾರ್ಯರು ತಿಳಿಸಿದ್ದಾರೆ.

೫೩ The Oxford English Dictionary, IV–'gauntlet' ಎಂಬ ಪದದ ಕೆಳಗೆ ನೋಡಿ.

೫೪ ರಾಘವಾಂಕ ಚಾರಿತ್ರದಲ್ಲಿ (ಪ್ರ. 401) ಮುಡಿಗೆಗೂ ದಿವ್ಯಕ್ಕೂ ಇರುವ ಸಂಬಂಧವನ್ನು ಗುರುತಿಸಿದೆ– "ಮುಡಿಗೆ ವಿಷ ಸರ್ಪ ಶಿರ ಮಡ್ಡುಗಳು ಮುಂತಾದ ದಿವ್ಯಂಗಳಂ ಗೆದ್ದು ತೋರ್ಪ". ಇದರ ಪ್ರಕಾರ ಮುಡಿಗೆಯೂ ಒಂದು ರೀತಿಯಾದ ದಿವ್ಯವೇ.




# ಗ್ರಂಥ ವಿಮರ್ಶೆ

**೧. ರಂ. ಶ್ರೀ. ಮುಗಳಿ:** ಡೆಮ್ಮಿ ೧/೮ ಪುಟ: ೭೧. ಬೆಲೆ: ೧-೫೦ ನ.ಪೈ.
ಪ್ರಕಾಶಕರು: ಪರಾಗ ಪ್ರಕಾಶನ, ಧಾರವಾಡ.

ಇದು, ೪೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಡಾ|| ರಂ. ಶ್ರೀ. ಮುಗಳಿ ಅವರ ಸಂಕ್ಷಿಪ್ತ ಪರಿಚಯ. ಈ ಹೊತ್ತಗೆಯಲ್ಲಿ ಶ್ರೀಗಳಾದ ಡಾ|| ಮಾಸ್ತಿ, ಎಕ್ಕುಂಡಿ, ಸುಬ್ಬಣ್ಣ, ಚನ್ನವೀರ ಕಣವಿ, ಕೆ. ಜಿ. ಶಾಸ್ತ್ರೀ, ಶ್ರೀನಿವಾಸ ಹಾವನೂರ, ಮಿರ್ಜಿ ಅಣ್ಣಾರಾಯ, ಬಿಂದುಮಾಧವ ಚಬ್ಬಿ, ಬಾಳೇಶ, ಪ್ರಭು ಪ್ರಸಾದ್, ಎ. ಟಿ. ಪಾಟೀಲ್, ಎಸ್. ಮಯ್ಯ, ಕೊಟ್ಟಲಗಿ, ವರದ, ಶಾಮಣ್ಣ ಮೊದಲಾದವರು ಲೇಖನ ಮತ್ತು ಕವನಗಳನ್ನು ಬರೆದಿದ್ದಾರೆ. ಹಲವಾರು ವರ್ಷ ಕಾಲ ಸಾಹಿತ್ಯ ಸೇವೆಗೆ ಬಾಳನ್ನು ಮುಡಿಪುಮಾಡಿದವರನ್ನು ಸಮಕಾಲೀನ ಜನರು ಹೀಗೆ ಗೌರವಿಸುವುದು ಬಹಳ ಒಳ್ಳೆಯ ಪದ್ಧತಿ. ಶ್ರೀ ಮುಗಳಿಯವರ ಜೀವನಕ್ಕೆ ಸಂಬಂಧಪಟ್ಟ ಕೆಲವು ಚಿತ್ರಗಳು ಈ ಪುಸ್ತಕದಲ್ಲಿ ಇವೆ. ಇದು ಸಾಹಿತ್ಯ ಪ್ರೇಮಿಗಳು ಓದಲು ಅರ್ಹವಾದ ಪುಸ್ತಕ. ಓದುಗರಿಗೆ ಸಾಹಿತ್ಯದ ಅಭಿರುಚಿ ಹೆಚ್ಚಿಸುವ ಪುಸ್ತಕ.

**೨. ಜೈನ ಧರ್ಮ ಪರಿಚಯ:** ಕ್ರೌ ೧/೮, ಪುಟ: ೧೧೨, ಬೆಲೆ: ೧ ರೂ.
ಲೇಖಕರು: ಶ್ರೀ ಓ. ಎಲ್. ಲಿಂಗಣ್ಣಯ್ಯ, ಬಿ.ಎ. (ಆನರ್ಸ್) ಅವರು, ಚಿತ್ರದುರ್ಗ.

ಈಗಾಗಲೇ ಹಲವಾರು ಗ್ರಂಥಗಳನ್ನು ಬರೆದು ಕನ್ನಡಿಗರಿಗೆ ಚಿರಪರಿಚಿತರಾಗಿರುವ ಶ್ರೀಮಾನ್ ಓ. ಎಲ್. ಲಿಂಗಣ್ಣಯ್ಯನವರು, ಪ್ರಕೃತ 'ಜೈನಧರ್ಮ ಪರಿಚಯ' ಎಂಬ ಗ್ರಂಥವನ್ನು ರಚಿಸಿರುತ್ತಾರೆ. ಕನ್ನಡ ಸಾಹಿತ್ಯವನ್ನು ಓದಿದವರಿಗೆ ಜೈನಧರ್ಮವು ಅಪರಿಚಯವೇನಲ್ಲ. ಆದಿಪುರಾಣ, ಅಜಿತತೀರ್ಥಂಕರ ಪುರಾಣ, ಶಾಂತಿಪುರಾಣ, ಚಂದ್ರಪ್ರಭ ಪುರಾಣ, ಜೀವಂಧರ ಚರಿತೆ, ಮಲ್ಲಿನಾಥ ಪುರಾಣ, ಯಶೋಧರ ಚರಿತೆ, ಭರತೇಶ ವೈಭವ ಇತ್ಯಾದಿ ಕಾವ್ಯಗಳು ಕನ್ನಡಿಗರೆಲ್ಲರ ಮನ್ನಣೆಗೂ ಪಾತ್ರವಾಗಿವೆ. ಸರಸ ಸಾಹಿತಿಗಳಾದ ಶ್ರೀ ಓ. ಎಲ್. ಲಿಂಗಣ್ಣಯ್ಯನವರು "ನನಗೆ ಬಾಲ್ಯದಿಂದಲೂ ಜೈನಧರ್ಮದ ಸಾಹಚರ್ಯವುಂಟಾಯಿತು. ಆ ಮತದ ಸಿದ್ಧಾಂತ, ಸಾಹಿತ್ಯ ಮತ್ತು ಸಂಸ್ಕೃತಿ ನನ್ನ ಮನಸ್ಸಿನ ಮೇಲೆ ಪ್ರಭಾವವನ್ನುಂಟುಮಾಡಿದವು....ಮೂಡಲು ಸೀಮೆಯ ಜೈನ ಸಮಾಜದಲ್ಲಿ ನಮ್ಮ ಹಿರಿಯರ ಕಾಲದಿಂದಲೂ ಅನ್ಯೋನ್ಯ ಪ್ರೀತಿವಿಶ್ವಾಸ ನಡೆದುಬಂದಿದೆ. ನಾನು ಜೈನಶಾಸ್ತ್ರದಲ್ಲಿ ಪಂಡಿತನಲ್ಲ. ಆದರೆ ಜೈನಧರ್ಮದ ಬಗೆಗೆ ಗೌರವ ನನ್ನಲ್ಲಿ ತುಂಬಿದೆ. ನನಗೆ ಜೈನಧರ್ಮದಲ್ಲಿ ಪರಮ ಶ್ರದ್ಧೆಯಿದೆ. ನನ್ನ ಜೈನ ಧರ್ಮಾಭಿಮಾನ ಅಚಲ. ಅದರ ಫಲ ಈ ಜೈನಧರ್ಮ ಪರಿಚಯ. ಜೈನ ಸಮಾಜ ಸಂವರ್ಧಿಸಲಿ" ಎಂದು ಗ್ರಂಥದ ಮೊದಲು ಅಂತರಂಗದಲ್ಲಿ ಬರೆದಿದ್ದಾರೆ.

ಈ ಪುಸ್ತಕದಲ್ಲಿ ಇತಿಹಾಸ, ಜೀವನ ವಿಕಾಸ, ಜೈನ ಧರ್ಮ, ಆದಿತೀರ್ಥಂಕರ, ಪರಿನಿಷ್ಕ್ರಮಣ, ಸ್ಯಾದ್ವಾದ, ಜೈನ ಸಂಸ್ಕೃತಿ, ಧರ್ಮ ಸಮನ್ವಯ, ಜೈನ ದರ್ಶನ, ಅನುಬಂಧ—ಎಂಬಿಷ್ಟು ವಿಷಯಗಳು ನಿರೂಪಿಸಲ್ಪಟ್ಟಿವೆ.

ಒಂದು ಧರ್ಮದಲ್ಲಿರುವವರು ಇನ್ನೊಂದು ಧರ್ಮವನ್ನು ಕುರಿತು ಗ್ರಂಥ ಬರೆಯುವುದು ತುಂಬಾ ಒಳ್ಳೆಯ ಸಂಪ್ರದಾಯ. ಬಹಳ ವರ್ಷಗಳ ಹಿಂದೆ ಪಂಡಿತ ಪ್ರಭಾಕರ ಪೂಜಾರ

ಅವರು "ಜೈನಧರ್ಮ ಪರಿಭಾಷೆ" (೧೯೩೦) ಎಂಬ ಗ್ರಂಥವನ್ನು ಬರೆದಿರುತ್ತಾರೆ. ಸುಪ್ರಸಿದ್ಧ ಸಾಹಿತಿ ಜಿ. ಪಿ. ರಾಜರತ್ನಂ "ಮಹಾವೀರನ ಮಾತುಕತೆ" (೧೯೩೭) ಎಂಬ ಗ್ರಂಥವನ್ನು ಪ್ರಕಟಿಸಿರುತ್ತಾರೆ. ದಿವಂಗತ ಎಂ. ಆರ್. ಶ್ರೀ. ಅವರು 'ವಚನಧರ್ಮಸಾರ' (೧೯೪೬) ಮತ್ತು 'ಭಕ್ತಿ ಭಂಡಾರಿ ಬಸವೇಶ್ವರ' (೧೯೩೧) ಎಂಬ ಗ್ರಂಥಗಳನ್ನು ಬರೆದಿದ್ದಾರೆ. ಡಾ|| ಆರ್. ಆರ್. ದಿವಾಕರ್ 'ವಚನಶಾಸ್ತ್ರ ರಹಸ್ಯ' (೧೯೩೬) ಬರೆದಿದ್ದಾರೆ. ಇದೆಲ್ಲವೂ ಭಾರತೀಯರ ಭಾವೈಕ್ಯತೆಗೆ ಒಳ್ಳೆಯ ನಿದರ್ಶನವೆಂದು ನಾವು ಹೇಳಬಹುದು. ಮೇಲೆ ಕಂಡ ಹಿರಿಯರ ದಾರಿಯಲ್ಲಿಯೇ ಶ್ರೀ ಲಿಂಗಣ್ಣಯ್ಯನವರು 'ಜೈನಧರ್ಮ ಪರಿಚಯ' ಬರೆದಿರುವುದು ಶ್ಲಾಘ್ಯವಾಗಿದೆ. ಈ ಗ್ರಂಥದಲ್ಲಿ 'ಜೈನ ಮತ್ತು ಶೈವ ಧರ್ಮ ಸಮನ್ವಯ' ಎಂಬ ೯ನೆಯ ತರಂಗವು ಸ್ವಾರಸ್ಯವಾಗಿದ್ದು ವಾಚನಾರ್ಹವಾಗಿದೆ. ಒಟ್ಟಿನಲ್ಲಿ ಓದಬೇಕಾದ ಗ್ರಂಥವಿದು.

**೩. ಶ್ರೀ ಪುರಂದರದಾಸರು (ನಾಟಕ):** ಕ್ರೌ ೧/೮, ಪುಟ: ೭೬. ಬೆಲೆ: ೧ ರೂ.
ಲೇಖಕರು: ಕೀರ್ತನಕೇಸರಿ ಶ್ರೀ ಭದ್ರಗಿರಿ ಕೇಶವದಾಸರು, ಬಿ.ಎ., ಎಲ್‌ಎಲ್.ಬಿ., ದಾಸಾಶ್ರಮ, ಬೆಂಗಳೂರು.

ಪುರಂದರದಾಸರ ೪೦೦ನೇ ವರ್ಷದ ಪುಣ್ಯಾರಾಧನೆ ಎಲ್ಲೆಲ್ಲಿಯೂ ನಡೆಯುವ ಸಂದರ್ಭದಲ್ಲಿ ಈ ಗ್ರಂಥ ಅಚ್ಚಾಗಿದೆ. ಇದಕ್ಕೆ ಸುಬೋಧ ಎಂ. ರಾಮರಾಯರು ಮುನ್ನುಡಿ ಬರೆದಿದ್ದಾರೆ.

ಕೃಷ್ಣದೇವರಾಯನ ಆಸ್ಥಾನದಿಂದ ಈ ನಾಟಕ ಪ್ರಾರಂಭವಾಗುತ್ತದೆ. ವ್ಯಾಸರಾಯರು, ಕನಕದಾಸರು, ಅಮಾತ್ಯರು, ಮಧ್ವಪತಿ (ಪುರಂದರದಾಸರ ಮಕ್ಕಳು) ಸರಸ್ವತಿ, ವೇಶ್ಯೆ, ವೆಂಕಮ್ಮ ಮೊದಲಾದ ಪಾತ್ರಗಳು ಬಂದಿವೆ. ಈ ನಾಟಕದಲ್ಲಿ ಒಟ್ಟು ಎರಡು ಅಂಕಗಳೂ, ೩೪ ದೃಶ್ಯಗಳೂ ಇವೆ. ಗ್ರಂಥದ ಕೆಲವು ಪಾತ್ರಗಳ ಮುಖದಿಂದ ಗ್ರಾಮ್ಯಭಾಷೆಯನ್ನು ಆಡಿಸಲಾಗಿದೆ. ದಾಸಪ್ರಿಯರು ಒಮ್ಮೆ ಈ ನಾಟಕವನ್ನು ಓದಿ ನೋಡಬಹುದು.

—ಶೂಲಪಾಣಿ

**೪. ವೀರಶೈವದ ಉಗಮ ಮತ್ತು ಪ್ರಗತಿ:** ಗ್ರಂಥಕರ್ತೃ: ಶ್ರೀ ಟಿ. ಎನ್. ಮಲ್ಲಪ್ಪನವರು, ಬೆಂಗಳೂರು. ರಾ. ೧/೮, ಪುಟ ೨೩೪.

ಪ್ರಕೃತ ಗ್ರಂಥದಲ್ಲಿ ವೀರಶೈವ ಧರ್ಮದ ಹುಟ್ಟು ಬೆಳವಣಿಗೆಗಳನ್ನು ಕುರಿತು ವಿವರವಾಗಿ ವಿವೇಚಿಸಲಾಗಿದೆ. ಇದರಲ್ಲಿ ನಾಲ್ಕು ಅಧ್ಯಾಯಗಳಿವೆ. ಪ್ರಥಮಾಧ್ಯಾಯದಲ್ಲಿ ವೀರಶೈವದ ಪ್ರಾಚೀನತೆಯನ್ನೂ ದ್ವಿತೀಯಾಧ್ಯಾಯದಲ್ಲಿ ಆದಿಮಾನವನ ಕಾಲದಲ್ಲಿ ವೀರಶೈವದ ಉಗಮವನ್ನೂ ತೃತೀಯಾಧ್ಯಾಯದಲ್ಲಿ ವೇದಾಗಮೋಪನಿಷತ್ ಪುರಾಣಗಳ ಕಾಲದಲ್ಲಿ ವೀರಶೈವದ ಪ್ರಗತಿಯನ್ನೂ ಚತುರ್ಥಾಧ್ಯಾಯದಲ್ಲಿ ಶುದ್ಧಿ ಸಂಘಟನೆಯಿಂದ ವೀರಶೈವದ ಸಂಪೂರ್ಣತೆಯನ್ನೂ ವಿವರಿಸಿದ್ದಾರೆ.

ವೀರಶೈವ ಧರ್ಮವು ಅತ್ಯಂತ ಪ್ರಾಚೀನವಾದುದು. 'ಅದು ಬಸವಾದಿ ಪ್ರಮಥರ ಕಾಲದಿಂದೀಚೆಗೆ ತಲೆದೋರಿತು' ಎಂಬ ಕೆಲವರ ವಾದದಲ್ಲಿ ಹುರುಳಿಲ್ಲವೆಂಬುದನ್ನು ವೇದಾಗಮೋಪನಿಷತ್ತುಗಳ ಆಧಾರದಿಂದಲೂ ಶಾಸನಾಧಾರಗಳಿಂದಲೂ ಲೇಖಕರು ಸ್ಪಷ್ಟಪಡಿಸಿದ್ದಾರೆ. ಅಲ್ಲದೆ ಭಾರತದಲ್ಲಿನ ಶೈವ ಪ್ರಭೇದಗಳೆಲ್ಲವನ್ನೂ ಸೂಕ್ಷ್ಮವಾಗಿ ಸೂಕ್ತವಾಗಿ ವಿವೇಚಿಸಿ ವಿಮರ್ಶಿಸಿ ವೀರಶೈವ ಧರ್ಮದ ಸಾರೋದ್ಧಾರತೆಯನ್ನು ಗ್ರಂಥಾಧಾರಗಳಿಂದ ಪ್ರತಿಪಾದಿಸಿದ್ದಾರೆ.

ಹನ್ನೆರಡನೆಯ ಶತಮಾನದ ಹಿಂದಿನ ವೀರಶೈವ ಸ್ವರೂಪವನ್ನು ಅನ್ವೇಷಣೆ ಮಾಡಿರುವುದು ಈ ಗ್ರಂಥದ ವೈಶಿಷ್ಟ್ಯ. ಹಾಗೆಯೇ ಕ್ರಿಯಾಸಾರ, ಶ್ರೀಕರಭಾಷ್ಯ ಮತ್ತು ಶ್ರೀಕಂಠ ಭಾಷ್ಯಗಳ ಸಿದ್ಧಾಂತವು ಒಂದೆಂಬುದನ್ನು ಆ ಗ್ರಂಥಗಳ ಆಧಾರಗಳಿಂದ ಸಿದ್ಧಾಂತ ಮಾಡಿರುವುದು ಶ್ರೀಕಂಠ ಶಿವಾಚಾರ್ಯರ ಮತವಿಷಯದಲ್ಲಿ ಹೊಸ ಬೆಳಕನ್ನು ಬೀರುತ್ತದೆ. ಶಿವಮಹಾಪುರಾಣದಲ್ಲಿ ಹೇಳಿರುವ ಮಾರ್ಗದಿಂದ ಮೋಕ್ಷವಾಗುವುದೆಂಬುದು ಶ್ರೀಕಂಠಭಾಷ್ಯದಿಂದ ತಿಳಿಯಬರುವುದು. ಆ ಪುರಾಣದಲ್ಲಿ ಲಿಂಗವನ್ನು ಕರದಲ್ಲಿ ಪೂಜಿಸುವುದನ್ನು ಹೇಳಿದೆಯಲ್ಲದೆ ಪೂಜೆಯಾದಮೇಲೆ ಆ ಲಿಂಗವನ್ನು ತಲೆಯಲ್ಲಿ ಧರಿಸಬೇಕೆಂದು ಹೇಳಿದೆ. "ಪೂಜಾ ಕೃತ್ವಾಥ ತಲ್ಲಿಂಗಂ ಶಿರಸಾ ಧಾರಯೇತ್ ಸದಾ" ಎಂದು ಮೊದಲಾಗಿ ಶಿವಮಹಾಪುರಾಣದಲ್ಲಿ ಹೇಳಿರುವ ಶ್ಲೋಕಗಳು ಕ್ರಿಯಾಸಾರದಲ್ಲಿ ಉದ್ಧೃತವಾಗಿವೆ. ಶ್ರೀ ಶಂಕರ, ಶ್ರೀಕಂಠ, ಶ್ರೀಪತಿ ಮೊದಲಾದವರು ಆಧಾರವಾಗಿ ತೆಗೆದುಕೊಂಡಿರುವ ಶಿವಮಹಾಪುರಾಣವು ಹಿಂದಿನ ವೀರಶೈವ ಧರ್ಮದ ಮೇಲೆ ಹೊಸಬೆಳಕನ್ನು ಬೀರುತ್ತದೆಯೆಂಬುದನ್ನು ಗ್ರಂಥಕರ್ತರು ಆಧಾರಪೂರ್ವಕವಾಗಿ ತೋರಿಸಿದ್ದಾರೆ. ಈ ಗ್ರಂಥದಲ್ಲಿ ಭಾರತೀಯ ಸನಾತನ ಧರ್ಮದ ಉಗಮ ಪ್ರಗತಿಗಳ ಮೇಲೆಯೂ ವಿಶೇಷ ಬೆಳಕು ಬಿದ್ದಿದೆ. ಒಟ್ಟಿನಲ್ಲಿ ಈ ಗ್ರಂಥವು ಸರ್ವಾದರಣೀಯವಾಗಿದೆ.

ವೀರಶೈವ ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಸಂವರ್ಧನೆಗೆ ಶ್ರೀ ಮಲ್ಲಪ್ಪನವರು ಗಣನೀಯವಾದ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ. ಪ್ರಸ್ತುತ ಗ್ರಂಥದ ಪ್ರಸ್ತಾವನೆಯಲ್ಲಿ "ಶೈವ ಧರ್ಮದ ಉಗಮ ಮತ್ತು ಪ್ರಗತಿಯ ಚರಿತ್ರೆಯು ಬಹ್ವಂಶದಿಂದ ಸನಾತನ ಭಾರತೀಯ ಧರ್ಮದ ಉಗಮ ಮತ್ತು ಪ್ರಗತಿಯ ಚರಿತ್ರೆಯೇ ಆಗಿದೆ. ತಲಕಾವೇರಿಯಲ್ಲಿ ಸೂಕ್ಷ್ಮರೂಪದಲ್ಲಿ ಹುಟ್ಟಿ ಬೇರೆ ಬೇರೆ ದೇಶದ ಉಪನದಿಗಳಿಂದ ಪುಷ್ಟಿಗೊಂಡು ಪ್ರಗತಿ ಹೊಂದಿ, ಕೃಷ್ಣರಾಜ ಮಹಾಸಾಗರದಲ್ಲಿನ ಆಧುನಿಕ ಪ್ರಯೋಗಗಳಿಂದ ವೈಶಾಲ್ಯತೆಯನ್ನು ಪಡೆದ ತಾಯಿ ಕಾವೇರಿಯಂತೆ, ಸನಾತನ ಕಾಲದಲ್ಲಿ ಸೂಕ್ಷ್ಮವಾದರೂ ಸ್ಪಷ್ಟವಾದ ರೂಪದಿಂದ ಹೊರಹೊಮ್ಮಿ, ವೇದಾಗಮೋಪನಿಷತ್ ಪುರಾಣಗಳಿಂದ ಪುಷ್ಟಿ ಪಡೆದು, ಆಧುನಿಕ ಕಾಲದಲ್ಲಿ ಪ್ರಚಲಿತವಾಗಿರುವ ಸುಧಾರಣೆಗಳಿಂದ ಹನ್ನೆರಡನೆಯ ಶತಮಾನದಿಂದಲೂ ಪ್ರಗತಿ ಹೊಂದಿ, ವಿಶ್ವಧರ್ಮವಾಗಲು ತಕ್ಕ ವೈಶಾಲ್ಯತೆಯನ್ನು ಈ ಧರ್ಮವು ಪಡೆದಿದೆ. ಇದರ ಪರಿಪೂರ್ಣ ರೂಪದಲ್ಲಿ ದ್ವೈತಮತದ ಭವ್ಯಭಕ್ತಿಭಾವನೆಯೂ, ವಿಶಿಷ್ಟಾದ್ವೈತಮತದ ಶರಣಾಗತಿ ಪ್ರಪತ್ತಿಗಳ ಪಾರವಶ್ಯತೆಯೂ ಶಾಂಕರಸಿದ್ಧಾಂತದ ಅವಿರಳ ಐಕ್ಯವನ್ನು ಸಾಧಿಸುವ ಜ್ಞಾನಮಾರ್ಗವೂ ಕೂಡಿ ಸಮರಸವಾಗಿ ಕಾಣಬರುವುದರಿಂದಲೂ, ಸಂಕುಚಿತಭಾವನೆಗಳನ್ನತಿಗಳೆದ ಅತಿವರ್ಣಾಶ್ರಮ ಧರ್ಮವಾಗಿರುವುದರಿಂದಲೂ ವಿಚಾರಸ್ವಾತಂತ್ರ್ಯ, ವೃತ್ತಿಸ್ವಾತಂತ್ರ್ಯ ಮೊದಲಾದ ಸುಧಾರಣೆಗಳಿಂದ ಹನ್ನೆರಡನೆಯ ಶತಮಾನದಲ್ಲಿ ಶುದ್ಧಿಸಂಘಟನೆಗೊಳಗಾಗಿ ರೂಪುಗೊಂಡಿರುವುದರಿಂದಲೂ ವೀರಶೈವಧರ್ಮವು ಹಿಂದೂಧರ್ಮದಲ್ಲಿನ ಅತ್ಯಂತ ಸುಧಾರಿತ ಧರ್ಮವೆನ್ನಬಹುದು" ಎಂದು ಹೇಳಿರುವ ಅಭಿಪ್ರಾಯವು ಆಧಾರಗಳಿಂದ ಸಿದ್ಧಾಂತಮಾಡಲ್ಪಟ್ಟಿದೆ. ಈ ಗ್ರಂಥವು ಶ್ರೀ ಮಲ್ಲಪ್ಪನವರ ಆಳವೂ ಪರಿಪಕ್ವವೂ ಆದ ಅನುಭವಕ್ಕೆ ಸಾಕ್ಷಿಯಾಗಿದೆ. ವಾದಪ್ರತಿವಾದಗಳ ಮಂಥನಕ್ಕೆ ಸಿಲುಕದೆ ಪ್ರಶಾಂತ ಮನೋಭಾವದಿಂದ ಧಾರ್ಮಿಕ ಗ್ರಂಥಗಳ ರಚನೆಗೆ ತೊಡಗಿರುವ ಶ್ರೀ ಮಲ್ಲಪ್ಪನವರಿಂದ ಈ ತೆರನಾದ ಹಲವಾರು ಉದ್ಗ್ರಂಥಗಳನ್ನು ನಿರೀಕ್ಷಿಸಬಹುದಾಗಿದೆ.

—ಎನ್. ಬಸವಾರಾಧ್ಯ

# ಸಂಪಾದಕೀಯ

**(೧) ೪೪ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ:**

ಈ ಮೊದಲೇ ಪ್ರಕಟವಾದ ಪ್ರಕಾರ ೪೪ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ವಿಖ್ಯಾತ ಸಾಹಿತಿಗಳಾದ ಡಾ|| ರಂ. ಶ್ರೀ. ಮುಗಳಿ ಅವರ ಅಧ್ಯಕ್ಷತೆಯಲ್ಲಿ ತುಮಕೂರು (ಪಕ್ಕದ) ಸಿದ್ಧಗಂಗಾ ಕ್ಷೇತ್ರದಲ್ಲಿ ಅತ್ಯಂತ ವೈಭವದಿಂದ ನಡೆಯಿತು. ವಿದ್ಯಾಮಂತ್ರಿ ಶ್ರೀ ಎಸ್. ಆರ್. ಕಂಠಿಯವರು ಸಮ್ಮೇಳನವನ್ನು ಉದ್ಘಾಟಿಸಿದರು. ಮಣಿಪಾಲದ ಮಹಾಂತರಾದ ಡಾ|| ಟಿ. ಎಂ. ಎ. ಪೈ ಗ್ರಂಥಪ್ರದರ್ಶನವನ್ನು ಪ್ರಾರಂಭಿಸಿದರು. ಲೋಕಸಭೆಯ ಉಪಾಧ್ಯಕ್ಷರಾದ ಮಾನ್ಯ ಎಸ್. ವಿ. ಕೃಷ್ಣಮೂರ್ತಿರಾಯರು ಸಮ್ಮೇಳನದ ಮುಕ್ತಾಯ ಸಮಾರಂಭ ನಡೆಸಿದರು. ಸಮ್ಮೇಳನದ ಕಡೆಯಲ್ಲಿ ಉಪಯುಕ್ತವಾದ ಹತ್ತೊಂಭತ್ತು ನಿರ್ಣಯಗಳು ಸರ್ವಾನುಮತದಿಂದ ಮಂಜೂರಾದುವು.

ತಾ|| ೨೭-೧೨-೬೩ ರ ಸಂಜೆ, ಕ್ಯಾತಸಂದ್ರದಿಂದ ಸಿದ್ಧಗಂಗೆಯವರೆಗೆ ಸಮ್ಮೇಳನಾಧ್ಯಕ್ಷರು, ಪರಿಷತ್ತಿನ ಅಧ್ಯಕ್ಷರು ಮತ್ತು ಡಾ|| ಟಿ. ಎಂ. ಎ. ಪೈ ಅವರು—ಇವರುಗಳನ್ನು ಮಂಗಲವಾದ್ಯಗಳೊಡನೆ ಕರೆದೊಯ್ಯಲಾಯಿತು. ಸಾವಿರಾರು ಮಂದಿ ಈ ಉತ್ಸವದಲ್ಲಿ ನೆರೆದಿದ್ದರು. ಜಯಜಯಕಾರಗಳೊಡನೆ ಈ ಮೆರೆವಣಿಗೆಯು ಮುಂದುವರಿಯಿತು.

ತಾ|| ೨೯-೧೨-೬೩ ರ ಬೆಳಿಗ್ಗೆ ತುಮಕೂರು ನಗರಭವನದಲ್ಲಿ ನಗರಸಭಾಧ್ಯಕ್ಷರು, ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರ ಮತ್ತು ಡಾ|| ರಂ. ಶ್ರೀ. ಮುಗಳಿ ಅವರ ಗೌರವಾರ್ಥವಾಗಿ ಸತ್ಕಾರಕೂಟವನ್ನು ಏರ್ಪಡಿಸಿದ್ದರು. ಡಾ|| ಆರ್. ಸಿ. ಹಿರೇಮಠ ಇದರ ಅಧ್ಯಕ್ಷರಾಗಿದ್ದರು.

ಸಮ್ಮೇಳನ ಕಾಲದಲ್ಲಿ ಶ್ರೀ ಆರ್. ವೈ. ಧಾರವಾಡಕರ್ ಅಧ್ಯಕ್ಷತೆಯಲ್ಲಿ ಸಾಹಿತ್ಯ ಗೋಷ್ಠಿಯೂ, ಡಾ|| ಜಿ. ಎಸ್. ಶಿವರುದ್ರಪ್ಪನವರ ಅಧ್ಯಕ್ಷತೆಯಲ್ಲಿ ಕವಿಗೋಷ್ಠಿಯೂ, ಶ್ರೀ ಟಿ. ಎಸ್. ರಾಮಚಂದ್ರರಾಯರ ಅಧ್ಯಕ್ಷತೆಯಲ್ಲಿ ಪತ್ರಿಕಾಗೋಷ್ಠಿಯೂ, ಶ್ರೀಮತಿ ಸರೋಜಿನೀ ಮಹಿಷಿ, ಎಂ. ಪಿ. ಅಧ್ಯಕ್ಷತೆಯಲ್ಲಿ ಮಹಿಳಾಗೋಷ್ಠಿಯೂ, ಡಾ|| ಎಂ. ಎಸ್. ಸುಂಕಾಪುರ್ ಅಧ್ಯಕ್ಷತೆಯಲ್ಲಿ ನಾಟಕಗೋಷ್ಠಿಯೂ ಉತ್ಸಾಹಪೂರ್ಣವಾಗಿ ನಡೆದುವು. ಈ ಎಲ್ಲ ಗೋಷ್ಠಿಗಳಲ್ಲಿಯೂ ನಮ್ಮ ನಾಡಿನ ವಿದ್ವಾಂಸರು ಭಾಗವಹಿಸಿದ್ದರು. ಈ ಮೂರೂ ದಿನ ಸಂಜೆ ಮನರಂಜನ ಕಾರ್ಯಕ್ರಮ ಏರ್ಪಾಡಾಗಿತ್ತು. ಸಂಗೀತ, ನಾಟಕ, ನೃತ್ಯ ಮೊದಲಾದುವುಗಳು ನಡೆದುವು. ಪ್ರತಿ ದಿನ ಸಂಜೆ ಮುಂಜಾನೆ ಸಭೆಗಳಿಗೆ ಐದು ಆರು ಸಾವಿರ ಜನರು ತಪ್ಪದೆ ಬರುತ್ತಿದ್ದರು. ಸುಮಾರು ೮೦೦ ಮಂದಿ ಪ್ರತಿನಿಧಿಗಳು ಬಂದಂತೆ ತಿಳಿದುಬಂದಿದೆ.

ಸ್ವಾಗತ ಸಮಿತಿ ಅಧ್ಯಕ್ಷರಾದ ಶ್ರೀ ನಿ. ಪ್ರ. ಶಿವಕುಮಾರ ಸ್ವಾಮಿಗಳು, ಪ್ರಧಾನ ಕಾರ್ಯದರ್ಶಿ ಶ್ರೀ ಆರ್. ಎಸ್. ಆರಾಧ್ಯರು, ಕೋಶಾಧಿಕಾರಿ ಶ್ರೀ ಟಿ. ಎಸ್. ಮಲ್ಲಿಕಾರ್ಜುನಯ್ಯ ಮತ್ತು ಸ್ವಾಗತ ಸಮಿತಿಯ ಎಲ್ಲ ಕಾರ್ಯದರ್ಶಿಗಳು ಮತ್ತು ಸದಸ್ಯರು ಅತ್ಯಂತ ಶ್ರದ್ಧಾಸಕ್ತಿಗಳಿಂದ ಕೆಲಸ ಮಾಡಿ ಸಮ್ಮೇಳನವನ್ನು ಯಶಸ್ವಿಗೊಳಿಸಿದರು. ಊಟ, ವಸತಿ

ಮೊದಲಾದ ಎಲ್ಲ ವ್ಯವಸ್ಥೆಗಳೂ ತೃಪ್ತಿಕರವಾಗಿದ್ದುವು. ಸ್ವಾಗತ ಸಮಿತಿಯವರು 'ಸುವರ್ಣ ಸಂಪುಟ' ಎಂಬ ವಿಶೇಷ ಸಂಚಿಕೆಯನ್ನೂ, ಪರಿಷತ್ತಿನವರು 'ಕನ್ನಡ ನುಡಿ ಬೆಳ್ಳಿಯ ಸಂಚಿಕೆ' ಯನ್ನೂ ಇದೇ ಸಂದರ್ಭದಲ್ಲಿ ಪ್ರಕಟಿಸಿದರು. ಇವೆರಡೂ ಉಪಯುಕ್ತ ವಿಷಯಗಳಿಂದ ಕೂಡಿವೆ.

ತುಮಕೂರು, ಕ್ಯಾತಸಂದ್ರಗಳ ಮಹಾಜನರೂ, ಸಿದ್ಧಗಂಗೆಯ ಭಕ್ತಮಂಡಲಿಯವರೂ, ಜಿಲ್ಲೆಯ ಮಹಾಜನರೂ ಈ ಸಮ್ಮೇಳನಕ್ಕೆ ಮಿಗಿಲಾಗಿ ಶ್ರಮಿಸಿದರು. ತುಮಕೂರು ಜಿಲ್ಲೆಯ ಕೀರ್ತಿಯನ್ನು ಬೆಳಗಿಸಿದರು. ಕರ್ಣಾಟಕಕ್ಕೆ ಮಿಗಿಲಾದ ಘನತೆ ಗೌರವಗಳನ್ನು ತಂದರು. ಶ್ರೀ ಸಿದ್ಧಗಂಗಾ ಮಠಾಧೀಶರು ಮಾರ್ಗದರ್ಶಕರಾಗಿದ್ದರು.

೪೫ನೆಯ ಕನ್ನಡ ಸಾಹಿತ್ಯ ಸಮ್ಮೆಳನಕ್ಕೆ ಸಾಗರ, ಹುಬ್ಬಳ್ಳಿ ಮತ್ತು ಬೆಳಗಾಂವಿಗಳಿಂದ ಆಹ್ವಾನ ಬಂದಿದೆ. ಆದರೆ ಸಾಗರದವರ ಒತ್ತಾಯ ಬಹಳವಾಗಿದೆ. ಐದು ವರ್ಷಗಳಿಂದ ಅವರು ಸಮ್ಮೇಳನಕ್ಕೆ ಆತುರರಾಗಿದ್ದಾರೆ.

ಈ ಎಲ್ಲ ದೃಷ್ಟಿಗಳಿಂದಲೂ ೪೪ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಯಶಸ್ವಿಯಾಗಿ ನಡೆಯಿತೆಂದು ನಾಡಿನಲ್ಲಿ ಸುದ್ದಿ ಹಬ್ಬಿದೆ. ಇದನ್ನು ದಿಗ್ವಿಜಯಗೊಳಿಸಿದ ಎಲ್ಲರಿಗೂ ನಮ್ಮ ಧನ್ಯವಾದಗಳು. ಸಿರಿಗನ್ನಡಂ ಗೆಲ್ಗೆ-ಬಾಳ್ಗೆ!

### (೨) ಶ್ರೀ ಪುರಂದರದಾಸರ ೪೦೦ ವರ್ಷಗಳ ಪುಣ್ಯಾರಾಧನಾ ಮಹೋತ್ಸವ :

ಕರ್ಣಾಟಕದ ಸುಪ್ರಸಿದ್ಧ ಕವಿಗಳೂ, ವಾಗ್ಗೇಯಕಾರರೂ, ದಾಸಕೂಟದ ಹಿರಿಯರೂ ಮಹಾಸಂತರೂ ಆದ ಶ್ರೀ ಪುರಂದರದಾಸರು ಕ್ರಿ. ಶ. ೧೪೮೦ ರಲ್ಲಿ ಪುರಂದರಗಡದಲ್ಲಿ ಜನಿಸಿದರು. ಕ್ರಿ. ಶ. ೧೫೬೪ ನೇ ಜನವರಿ ೧೪ ರಂದು ಪಂಪಾಕ್ಷೇತ್ರದಲ್ಲಿ ಭಗವಂತನ ಪಾದವನ್ನು ಸೇರಿದರು ಎಂದು ತಿಳಿದುಬಂದಿದೆ. ಕನ್ನಡ ನಾಡು ನುಡಿಗಳಿಗೆ ಆ ಮಹಾತ್ಮರಿಂದಾದ ಉಪಕಾರಕ್ಕಾಗಿ ನಮ್ಮ ಜನ ಅವರಿಗೆ ತಮ್ಮ ಕೃತಜ್ಞತೆಯನ್ನು ಇಂದು ಒಪ್ಪಿಸುತ್ತಿದ್ದಾರೆ.

ತಾ|| ೧೩, ೧೪, ೧೫-೧-೬೪ ರ ಶುಭದಿನಗಳಲ್ಲಿ ಹಂಪೆಯ ಪುರಂದರ ಮಂಟಪದ ಮುಂಭಾಗದಲ್ಲಿ ದಾಸರ ಪುಣ್ಯಾರಾಧನೆ ನಡೆಯುತ್ತದೆ. ಮೈಸೂರಿನ ಶ್ರೀಮನ್ಮಹಾರಾಜರು, ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪನವರು, ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರು, ಡಾ|| ಆರ್. ಆರ್. ದಿವಾಕರರು, ಪದ್ಮಶ್ರೀ ಸುಬ್ಬುಲಕ್ಷ್ಮಿ, ಕರ್ಣಾಟಕದ ಸಹಸ್ರಾರು ಜನ ಭಕ್ತಮಂಡಲಿಯವರು ಈ ಉತ್ಸವದಲ್ಲಿ ಭಾಗವಹಿಸುತ್ತಾರೆ. ಮೈಸೂರು ಸರ್ಕಾರವು ಈ ಆರಾಧನೆಗಾಗಿ ೬೫ ಸಹಸ್ರ ರೂ.ಗಳನ್ನು ಮಂಜೂರುಮಾಡಿದೆ. ಇದೇ ಕಾಲದಲ್ಲಿ ದಾಸವರ್ಯರ ಗ್ರಂಥಗಳನ್ನು ಪ್ರಕಟನಗೊಳಿಸುವ, ಅವರ ಭಾವಚಿತ್ರವನ್ನು ಪ್ರಕಟಿಸುವ, ಅವರ ಸ್ಮಾರಕಗಳನ್ನು ರಕ್ಷಿಸುವ ಏರ್ಪಾಡು ಕೂಡ ನಡೆಯುತ್ತದೆ. ಪಂಡರಪುರದಲ್ಲಿ ಪುರಂದರದಾಸರ ಕಂಭವಿದೆ ಪಾಂಡುರಂಗನ ಗುಡಿಯಲ್ಲಿ, ಹಂಪೆಯಲ್ಲಿ ದಾಸರ ಮಂಟಪವಿದೆ. ೧೯೩೬ ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ೬೦೦ ವರ್ಷಗಳ ಮಹೋತ್ಸವವು ಜಗದ್ಗುರು ಕುರ್ತುಕೋಟಿ ಶಂಕರಾಚಾರ್ಯರ ಸಮ್ಮುಖದಲ್ಲಿ ನಡೆಯಿತು. ಆ ಮಹಾ ಸಾಮ್ರಾಜ್ಯಕ್ಕೆ ಸಂಬಂಧಪಟ್ಟ ಹಲವಾರು ಗ್ರಂಥಗಳು ಪ್ರಕಟಗೊಂಡವು. ಕರ್ಣಾಟಕ ರಾಜ್ಯೋದಯಕ್ಕೆ ಆ ಉತ್ಸವವು ಹೆಚ್ಚಿನ ಪ್ರೋತ್ಸಾಹವನ್ನಿತ್ತಿತು. ಅಂತೆಯೇ ಕನ್ನಡ ನಾಡು ನುಡಿಗಳ ಏಳಿಗೆಗೆ ಈ ಪುಣ್ಯಾರಾಧನಾ ಮಹೋತ್ಸವವು ಹೆಚ್ಚಿನ ಸ್ಫೂರ್ತಿಯನ್ನು ಕೊಡುವಂತಾಗಲೆಂದು ನಾವು ಹಾರೈಸುತ್ತೇವೆ.

ತಾ|| ೨೯-೧-೬೪ ರಿಂದ ನಾಲ್ಕು ದಿನ ಪರ್ಯಂತವಾಗಿ ಬೆಂಗಳೂರು ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಶ್ರೀ ಪುರಂದರದಾಸರ ಪುಣ್ಯಾರಾಧನೆ ನಡೆಯುತ್ತದೆ. ನಿವೃತ್ತ ಶ್ರೇಷ್ಠ ನ್ಯಾಯಾಧೀಶರೂ ಮಾಜಿ ರಾಜ್ಯಪಾಲರೂ ಆದ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಈ ಉತ್ಸವವನ್ನು ಪ್ರಾರಂಭಿಸಿ ಶ್ರೀ ಪುರಂದರದಾಸರ ಭಾವಚಿತ್ರವನ್ನು ಅನಾವರಣ ಮಾಡುತ್ತಾರೆ. ನಾಡಿನ ಹಲವಾರು ಮಂದಿ ವಿದ್ವಾಂಸರೂ ಕಲಾವಿದರೂ ಇದರಲ್ಲಿ ಭಾಗವಹಿಸುತ್ತಾರೆಂದು ತಿಳಿಸಲು ನಾವು ಹರ್ಷಿಸುತ್ತೇವೆ. ಶ್ರೀ ದಾಸರ ಬಗೆಗೆ ಒಂದು ಗ್ರಂಥ ಪ್ರಕಟವಾಗಲಿದೆ.

ಕರ್ಣಾಟಕದ ಪ್ರಮುಖ ಸ್ಥಳಗಳಾದ ಮೈಸೂರು, ಉಡುಪಿ, ಧಾರವಾಡ, ಶಿವಮೊಗ್ಗ ಮೊದಲಾದ ಕಡೆಗಳಲ್ಲಿ ಈ ಪುಣ್ಯಾರಾಧನೆಯು ವೈಭವದಿಂದ ನಡೆಯಲು ಏರ್ಪಾಡಾಗಿರುವುದು ಕೂಡ ಸಂತೋಷಪ್ರದವಾಗಿದೆ. ಇಹಪರಗಳ ಸಾಧನೆಗೂ, ನಾಡುನುಡಿಗಳ ಏಳಿಗೆಗೂ ನೆರವಾಗುವ ಈ ಸಮಾರಂಭವನ್ನು ಆಚರಿಸುವವರೆಲ್ಲರೂ ನಿಜಕ್ಕೂ ಭಾಗ್ಯಶಾಲಿಗಳು.

## (೩) ಶ್ರೀ ಎಡೆಯೂರು ಸಿದ್ಧಲಿಂಗೇಶ್ವರ ಜಯಂತಿ, ಧಾರವಾಡ :

ಕರ್ಣಾಟಕದ ಸಾಹಿತ್ಯದಲ್ಲಿಯೂ, ದರ್ಶನಪ್ರಪಂಚದಲ್ಲಿಯೂ, ಶ್ರೀ ಎಡೆಯೂರು ಸಿದ್ಧಲಿಂಗೇಶ್ವರರು ವಿಖ್ಯಾತರು. ಇವರು ಶ್ರೀ ಗೋಸಲ ಚೆನ್ನಬಸವೇಶ್ವರರ ಶಿಷ್ಯರು. "ಷಟ್ಸ್ಥಲ ಜ್ಞಾನ ಸಾರಾಮೃತ" ಎಂಬ ಉದ್ಗ್ರಂಥವನ್ನು ಬರೆದಿದ್ದಾರೆ. ಈ ಮಹಾತ್ಮರನ್ನು ಕುರಿತು ವಿರಕ್ತ ತೋಂಟದಾರ್ಯ, ಗುಬ್ಬಿ ಶಾಂತೇಶ ಕವಿ ಪುರಾಣಗಳನ್ನು ಬರೆದಿದ್ದಾರೆ. ಹೇರಂಬಕವಿ ಎಂಬಾತನು "ಸಿದ್ಧೇಶ್ವರ ಸಾಂಗತ್ಯ" ಎಂಬ ಗ್ರಂಥವನ್ನು ಬರೆದಿದ್ದಾನೆ. ಕಲ್ಯಾಣ ಪಟ್ಟಣದ ಶೂನ್ಯ ಸಿಂಹಾಸನದಲ್ಲಿ ಇವರು ೧೯ನೆಯ ಅಧ್ಯಕ್ಷರೆನಿಸಿದ್ದಾರೆ. ಗೂಳೂರು ಸಿದ್ಧವೀರಣಾಚಾರ್ಯ, ಸ್ವತಂತ್ರ ಸಿದ್ಧಲಿಂಗೇಶ್ವರ, ಗುಮ್ಮಳಾಪುರದ ಸಿದ್ಧಲಿಂಗ ಯತಿ, ಸುತ್ತೂರಿನ ಘನಲಿಂಗಿದೇವ ಮೊದಲಾದ ವಚನಕಾರರೆಲ್ಲರೂ ಇವರ ಶಿಷ್ಯಪರಂಪರೆಗೆ ಸೇರಿದವರು. ಇವರು ವಿಜಯನಗರದ ವಿರೂಪಾಕ್ಷರಾಯನ ಕಾಲದಲ್ಲಿ (ಕ್ರಿ. ಶ. ೧೪೬೦) ಇದ್ದಂತೆ ತಿಳಿದುಬಂದಿದೆ. ಎಡೆಯೂರು ಸಿದ್ಧಲಿಂಗೇಶ್ವರ ದೇವಾಲಯದಲ್ಲಿರುವ ಒಂದು ಶಿಲಾಶಾಸನದಲ್ಲಿ ಇವರ ವಿಷಯವನ್ನು ಸಂಪೂರ್ಣವಾಗಿ ಚಿತ್ರಿಸಲಾಗಿದೆ.

ಮೈಸೂರು ಜಿಲ್ಲೆಯ ಹರದನಹಳ್ಳಿ, ತುಮಕೂರು ಜಿಲ್ಲೆಯ ಕಗ್ಗೆರೆ, ಮಂಗಲ, ತುಮಕೂರು, ಎಡೆಯೂರು ಮೊದಲಾದ ಕಡೆ ಇವರ ಪವಿತ್ರ ಕ್ಷೇತ್ರಗಳಿವೆ. ಕನ್ನಡ ನಾಡಿನಲ್ಲಿ ಲಕ್ಷೋಪಲಕ್ಷ ಮಂದಿ ಇವರ ಭಕ್ತಮಂಡಲಿಯವರಿದ್ದಾರೆ.

ದಿನಾಂಕ ೧೫-೧-೬೪ ರ ದಿನ ಧಾರವಾಡದ ಮುರುಘಾಮಠದಲ್ಲಿ ಇವರ ಪುಣ್ಯದಿನಾಚರಣೆಯು ಕ. ಸಾ. ಪರಿಷತ್ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರ ಅಧ್ಯಕ್ಷತೆಯಲ್ಲಿ ನಡೆಯುವುದೂ, ಇವರಿಂದ ವಿರಚಿತವಾದ 'ಷಟ್ಸ್ಥಲ ಜ್ಞಾನ ಸಾರಾಮೃತ' ಎಂಬ ಗ್ರಂಥದ ಪ್ರಕಟನಕಾರ್ಯ ನಡೆಯುವುದೂ ನಿಜಕ್ಕೂ ಸ್ವಾಗತಾರ್ಹವಾಗಿದೆ.

## (೪) ಕನ್ನಡ ಗ್ರಂಥಕಾರರಿಗೆ ಸರ್ಕಾರವು ಪ್ರೋತ್ಸಾಹವೀಯಲಿ :

ಕನ್ನಡ ನಾಡು ನುಡಿಗಳ ಹಿತಚಿಂತನೆಯ ದೃಷ್ಟಿಯಿಂದ, ನೃಪತುಂಗ, ಆದಿಪಂಪ, ಬಸವೇಶ್ವರ, ಹರೀಶ್ವರ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ಚಾಮರಸ, ಸರ್ವಜ್ಞ

ಮೊದಲಾದ ಕವಿಗಳ ಪುಣ್ಯದಿನಾಚರಣೆಗಳೂ ಆಗುವುದಗತ್ಯವಾಗಿದೆ. ಮೈಸೂರು ಸರ್ಕಾರದವರು ಶರಣರ ವಚನಗಳು, ಜಾನಪದ ಗೀತಗಳು, ಕನ್ನಡ ಜೈಮಿನಿ ಭಾರತ ಮೊದಲಾದುವುಗಳನ್ನು ಪ್ರಕಟಿಸಿ ಸಾಹಿತ್ಯಕ್ಕೆ ಪ್ರೋತ್ಸಾಹವಿತ್ತಿದೆ. ಪರಿಷತ್ತು ಕೈಗೊಂಡಿರುವ ಕನ್ನಡ ಕೋಶಕ್ಕೆ ೧೫ ಲಕ್ಷ ರೂ.ಗಳನ್ನು ಕೊಡಲು ಮುಂದೆ ಬಂದಿದೆ. ಕನ್ನಡ ಜ್ಞಾನಕೋಶವನ್ನು ಪ್ರಕಟಿಸಲು ಸಂಕಲ್ಪಿಸಿದೆ. ಇದೆಲ್ಲವೂ ಸರ್ಕಾರವು ಮಾಡುವ ಒಳ್ಳೆಯ ಕಾರ್ಯಗಳೇ ಸರಿ.

ಮೈಸೂರು ಸರ್ಕಾರವು ಕನ್ನಡವನ್ನು ರಾಜ್ಯಭಾಷೆಯನ್ನಾಗಿ ಅಂಗೀಕರಿಸಿದೆ. ಅಂದಮೇಲೆ ಕನ್ನಡವು ಸರ್ವಾಂಗಸುಂದರವಾಗಿ ಬಳೆಯಲು ಸರ್ಕಾರವು ಎಲ್ಲ ಬಗೆಯ ಪ್ರಯತ್ನಗಳನ್ನೂ ಮಾಡಬೇಕು. ಆದರೆ ಈ ವರ್ಷ ಉತ್ತಮ ಗ್ರಂಥರಚನೆ ಮಾಡಿದವರಿಗೆ ಇದುವರೆಗೆ ಕೊಡುತ್ತಿದ್ದಂತೆ ಸರ್ಕಾರ ಬಹುಮಾನ ಕೊಡುವುದಿಲ್ಲ ಎಂದು ಮಾಡಿರುವ ತೀರ್ಮಾನ ದೂರದೃಷ್ಟಿಯಿಂದ ಕೂಡಿದುದಲ್ಲ ಎಂದು ನಾವು ಹೇಳಬೇಕಾಗುತ್ತದೆ. ಇದೇ ವಿಷಯದಲ್ಲಿ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಒಂದು ನಿರ್ಣಯವನ್ನು ಸರ್ಕಾರದ ಗಮನಕ್ಕೆ ತರಲು ಬಯಸುತ್ತೇವೆ. ವರುಷಕ್ಕೆ ಕೇವಲ ೨೫,೦೦೦ ರೂ.ಗಳನ್ನು ಈ ಬಹುಮಾನಕ್ಕಾಗಿ ನಮ್ಮ ಘನ ಸರ್ಕಾರ ವೆಚ್ಚಮಾಡುವುದನ್ನು ತಡೆಹಿಡಿಯುವುದರಲ್ಲಿ ಯಾವ ಜಾಣತನವೂ ಇಲ್ಲ. 'ತುರ್ತು ಪರಿಸ್ಥಿತಿಯನ್ನು ಸಾಹಿತ್ಯ ಸಂಸ್ಕೃತಿಯ ಪ್ರೋತ್ಸಾಹ ಕಾರ್ಯಕ್ಕೆ ಅನ್ವಯಿಸಬಾರದೆಂದು ಪಂಡಿತ ನೆಹರು ಹೇಳಿದ್ದಾರೆ.' (ತಾ|| ೩೧, ಮಾರ್ಚ್, ೧೯೬೩, ಹೊಸದಿಲ್ಲಿ) ಆದುದರಿಂದ ನಮ್ಮ ಸರ್ಕಾರದವರು ಪುನರ್ವಿಮರ್ಶೆ ಮಾಡಿ ಕನ್ನಡದ ಉತ್ತಮ ಗ್ರಂಥಗಳಿಗೆ ಪ್ರತಿ ವರ್ಷವೂ ಉದಾರವಾಗಿ ಬಹುಮಾನ ಕೊಡಬೇಕೆಂದು ನಾವು ಒತ್ತಾಯಪೂರ್ವಕವಾಗಿ ತಿಳಿಸಬಯಸುತ್ತೇವೆ.

|| ಸಿರಿಗನ್ನಡಂ ಗೆಲ್ಗೆ-ಬಾಳ್ಗೆ ||

# ಪ್ರಾಚ್ಯಲೇಖನ ಸೂಚಿ

**ಜೀವನ**

ಫೆಬ್ರುವರಿ-ಮಾರ್ಚ್ ೧೯೬೩

ಕನ್ನಡ ಛಂದಸ್ಸಿನ ಸಾಮಾನ್ಯ ನಿರೂಪಣೆ—ಶ್ರೀ ಟಿ. ವಿ. ವೆಂಕಟಾಚಲಶಾಸ್ತ್ರೀ.

ಏಪ್ರಿಲ್ ೧೯೬೩

ಪುರಾಣರತ್ನವೂ ಕವಿರತ್ನನೂ—ಶ್ರೀ ಉಡುಪಿ ವೆಂಕಟಕೃಷ್ಣರಾವ್.

ಮೇ ೧೯೬೩

ವಿಜಯನಗರ ಸಾಮ್ರಾಜ್ಯದಿಂದ ಸಾಹಿತ್ಯಕ್ಕೆ ಆದ ಉಪಕಾರ—ಶ್ರೀ ಶ್ರೀನಿವಾಸ ಉಡುಪ.

ಜೂನ್ ೧೯೬೩

ಬಿ. ವೆಂಕಟಾಚಾರ್ಯರು—ಶ್ರೀ ಜಿ. ವೆಂಕಟಸುಬ್ಬಯ್ಯ.

**ಪರಿಮಳ**

ಜನವರಿ-ಫೆಬ್ರುವರಿ ೧೯೬೩

ಕರ್ನಾಟಕದ ಹರಿದಾಸರು—ದಿವಂಗತ ಡಾ|| ಎಚ್. ಕೆ. ವೇದವ್ಯಾಸಾಚಾರ್ಯ.

ಭಾರತದೇಶದ ಸಂಸ್ಕೃತಿಯ ಪರಿಚಯ.

ಮೇ, ೧೯೬೩

ಪುರಂದರೋಪನಿಷತ್—ಶ್ರೀ ಬಿ. ಕೇಶವದಾಸ್.

ಕನಕದಾಸರೂ ಮತ್ತು ಹರಿಭಕ್ತಿಸಾರವೂ—ಶ್ರೀ ನ. ತ. ಜಕಾತಿ.

ಜೂನ್-ಜುಲೈ ೧೯೬೩

ಭವಭೂತಿಯ ರಾಮ—ಶ್ರೀ ಕೆ. ಟಿ. ಪಾಂಡುರಂಗಿ.

**ಪ್ರಬುದ್ಧ ಕರ್ನಾಟಕ**

ಸಂಪುಟ ೪೪-ಸಂಚಿಕೆ ೩

ಶಾಕುಂತಲ (ನಾಟಕರತ್ನ)—ಶ್ರೀ ಎನ್. ಅನಂತರಂಗಾಚಾರ್.

ಛಂದಸ್ಸು ಮತ್ತು ಗುರು ಲಘುಗಳ ರಹಸ್ಯ—ಶ್ರೀ ಟಿ. ಕೇಶವಭಟ್ಟ

ಧ್ವನಿ ಶಾಸ್ತ್ರದ ಸ್ವರೂಪ—ಶ್ರೀ ಬಿ. ವಿ. ವೀರಭದ್ರಪ್ಪ.

ಈಜುಲ್ ಎಂದರೇನು?—ಶ್ರೀ ಡಿ. ಎಲ್. ಎನ್.

ತಮ್ಮಟದ ಕಿಡಿಗಳು—ಶ್ರೀ ಎಂ. ಚಿದಾನಂದ ಮೂರ್ತಿ.

**ಯುಗವಾಣಿ-ಗಣರಾಜ್ಯೋತ್ಸವ ವಿಶೇಷಾಂಕ**

ಮುದ್ದಣ—ಶ್ರೀ ಗಜಾನನ ಹೆಗಡೆ ಧಾರೇಶ್ವರ.

ಐತಿಹಾಸಿಕ ನಗರ ಬನವಾಸಿ—ಶ್ರೀ ಜಿ. ಎಸ್. ಹೆಗಡೆ ಆಲೇಕರ್.

ಮಹಾಕವಿ ಸುಬ್ರಹ್ಮಣ್ಯಭಾರತಿ—ಶ್ರೀ ಟಿ. ಕೆ. ಮಹಮೂದ್.

**ಜಯಕರ್ನಾಟಕ**

ಜನವರಿ ೧೯೬೩

ಸ್ವಾಮಿ ವಿವೇಕಾನಂದರ ದೇವಮಾತೆ—ಶ್ರೀ ಸ್ವಾಮಿ ಶಾಸ್ತ್ರಾನಂದಜಿ.

ಸೊಹ್ರಾಬ್ ರುಸ್ತುಮ್—ಶ್ರೀ ಮ. ಮಲ್ಲಪ್ಪ.

ಕೌಟಿಲ್ಯನ ಅರ್ಥನೀತಿ—ಶ್ರೀ ಟಿ. ಟಿ. ಶರ್ಮ.

**ಜಯಂತಿ**

ಜನವರಿ ೧೯೬೩

ಭೋಜನ ಸುಖರತ ಕರ್ಣಾಟಕ—ಶ್ರೀ ಕು. ಜ್ಯೋತ್ಸ್ನಾ ಬುರ್ಡೆ.

ಫೆಬ್ರುವರಿ ೧೯೬೩

ಜಿತಕಾಮ ಸಿದ್ಧರಾಮ—ಶ್ರೀ ಬಿ. ವಿ. ಮಲ್ಲಾಪುರ.

ಮಾರ್ಚ್, ೧೯೬೩

ಕರ್ನಾಟಕ-ಮಹಾರಾಷ್ಟ್ರ—ಶ್ರೀ ಕಿರ್ಲೋಸ್ಕರ ಶಂಕರರಾಯರು.

ರನ್ನನ ಲಲಿತವೃತ್ತ—ಶ್ರೀ ಮೇವುಂಡಿ ಮಲ್ಲಾರಿ.

ಜುಲೈ ೧೯೬೩

ಮಹಾಕವಿ ಮೀರ ತಕಿಮೀರ್—ಶ್ರೀ ದೇವೇಂದ್ರಕುಮಾರ ಹಕಾರಿ.

**ಯುಗಪುರುಷ–ಪ್ರಜಾಪ್ರಭುತ್ವಾಂಕ ೧೯೬೩**

ಕನ್ನಡ ಸಾಹಿತ್ಯವೆತ್ತ ಸಾಗುತ್ತಿದೆ?—ಶ್ರೀ ಮೊಗಸಾಲೆ ನಾರಾಯಣಭಟ್

**ಪುಸ್ತಕ ಪ್ರಪಂಚ**

ಜನವರಿ ೧೯೬೩

ಖ್ಯಾತ ಕಲಾಯೋಗಿ ಶ್ರೀ ಕೆ. ವೆಂಕಟಪ್ಪನವರು—ಶ್ರೀ ಪಿ. ಆರ್. ತಿಪ್ಪೇಸ್ವಾಮಿ.

ಮಾರ್ಚ್ ೧೯೬೩

ಕಾಳಿದಾಸನ ಋತುಮಾಧುರಿ—ಶ್ರೀ ಆರ್. ಶ್ರೀನಿವಾಸಾಚಾರ್.

ಮೇ ೧೯೬೩

ಪುರಾಣಗಳ ಸೃಷ್ಟಿ—ಶ್ರೀ ಎಂ. ವಿ. ನಾಗರಾಜ್.

**ವಿವೇಕಾಭ್ಯುದಯ–ಜನವರಿ, ಫೆಬ್ರುವರಿ ಇತ್ಯಾದಿ**

ರತ್ನಾಕರ—ಶ್ರೀ ಜಿ. ಬ್ರಹ್ಮಪ್ಪ.

ಮೇ ೧೯೬೩

ಗೊಮ್ಮಟಸಾರ—ಶ್ರೀ ಜಿನರಾಜ ಶಾಸ್ತ್ರಿ.

**ಗಾಯನ ಗಂಗಾ**

ಡಿಸೆಂಬರ್-ಜನವರಿ ೧೯೬೨-೬೩

ಕರ್ಣಾಟಕ ಸಂಗೀತಕ್ಕೆ ಪುರಂದರದಾಸರ ಕಾಣಿಕೆ—ಶ್ರೀ ಎಲ್. ರಾಜಾರಾವ್.

ಹೊಸ ಹಾದಿಯ ಪ್ರವರ್ತಕ ಪುರಂದರದಾಸರು—ಶ್ರೀ ಎಸ್. ಕೆ. ರಾಮಚಂದ್ರರಾವ್.

ಮಾನವ ಜನ್ಮ ದೊಡ್ಡದು—ಡಾ॥ ಜಿ. ವರದರಾಜರಾವ್.

ಯಕ್ಷಗಾನ ಮೊದಲಾದ ನೃತ್ಯ ನಾಟಕಗಳು—ಶ್ರೀ ಶಿವರಾಮಕಾರಂತರು.

ನಾಟಕ ಕಲೆಯಲ್ಲಿ ಪ್ರತಿಕೃತಿ ಮತ್ತು ಪ್ರತಿಮಾ ವಿಧಾನಗಳು—ಶ್ರೀ ಕುವೆಂಪು.

ಜೂನ್-ಜುಲೈ ೧೯೬೩

ಕರ್ಣಾಟಕ ಸಂಗೀತ ಪುನರುದ್ಧಾರಕ ಶ್ರೀ ಪುರಂದರದಾಸರು—ಡಾ॥ ಕೆ. ಎಂ. ಕೃಷ್ಣರಾವ್.

ಕರ್ನಾಟಕ ಸಂಗೀತ—ಶ್ರೀ ಕೊಳತ್ತೂರು ರಾಮಕೃಷ್ಣ ಶಾಸ್ತ್ರಿ.

**ಪುಸ್ತಕಮಿತ್ರ**

ಮಾರ್ಚ್ ೧೯೬೩

ಮಕ್ಕಳ ಸಾಹಿತ್ಯ ಹೇಗಿರಬೇಕು—“ನವಗಿರಿನಂದ”.

**ತತ್ವವಾದ**

ಜನವರಿ ೧೯೬೩

ಮಹಾ ಪ್ರವಾದಿ ಆನಂದತೀರ್ಥರು—ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು.
ಶ್ರೀ ಪುರಂದರದಾಸರು ಮತ್ತು ಖಂಡೋಬ—ಶ್ರೀ ಹರಿದಾಸರತ್ನ ಗೋಪಾಲದಾಸರು.
ಆದರ್ಶ ಸತಿ ಅರುಂಧತಿ—ಲೇಖಕರು ?

ಜೂನ್ ೧೯೬೩

ಮಂಗಲತರಂಗಿಣಿ ಗಂಗೆ—ಶ್ರೀ ಪಂಢರೀನಾಥಾಚಾರ್ಯ ಗಲಗಲಿ.

ಜುಲೈ ೧೯೬೩

ರಾಮಾಯಣದ ರಸಋಷಿ ವಾಲ್ಮೀಕಿ—ಶ್ರೀ ಗಾಲವ.

**ಧರ್ಮಸಂದೇಶ**

ಮೇ ೧೯೬೩

ಶ್ರೀ ಶಂಕರ ಸಂದೇಶ—ಶ್ರೀ ಎಚ್. ವಿ. ನಾರಾಯಣಶಾಸ್ತ್ರಿ.

**ಪ್ರಕಾಶಿನೀ**

ಮೇ, ಜೂನ್, ಜುಲೈ ೧೯೬೩

ಹರಿವಂಶ ಕಥಾಸಂಗ್ರಹ—ಶ್ರೀ ಪಡುಪೇಟೆ ಶ್ರೀನಿವಾಸಾಚಾರ್ಯ.

ಜುಲೈ ೧೯೬೩

ಸಂಸ್ಕೃತ ಸಾಹಿತ್ಯದಲ್ಲಿ ಗದ್ಯ ಪರಂಪರೆ—ಶ್ರೀ ಕೆ. ವೆಂಕಟರಾಯಾಚಾರ್ಯ.

**ಸುಬೋಧ**

ಜೂನ್ ೧೯೬೩

ವಿಶ್ವಾಮಿತ್ರ—ಶ್ರೀ ಎಂ. ವಿ. ಸಂಪತ್ಕುಮಾರಾಚಾರ್ಯ.

**ಶರಣ ಸಾಹಿತ್ಯ**

ಜನವರಿ ೧೯೬೩

ಶಿವಶರಣೆಯರು—ಶ್ರೀ ಬಿ. ಶಿವಮೂರ್ತಿಶಾಸ್ತ್ರೀ.

ಏಪ್ರಿಲ್-ಮೇ ೧೯೬೩

ನಿಜಮುಕ್ತೆ ಲಿಂಗಮ್ಮನ ಪರಂಜ್ಯೋತಿದರ್ಶನ—ಶ್ರೀ ಜ. ಸುಂದರೇಶ.
ಪೆರಿಯ ಪುರಾಣಂ—ಡಾ॥ ಎ. ಎನ್. ಕಡಿಲಾಯ.

**ಆರಾಧನೆ**

ಏಪ್ರಿಲ್ ೧೯೬೩

ಹೊಸ ಧಾರ್ಮಿಕತೆಯ ಆವ್ಹಾನ—ಶ್ರೀ ಗೌರೀಶ ಕಾಯ್ಕಿಣಿ.

QUARTERLY JOURNAL OF THE MYTHIC SOCIETY

April and July 1962

Pratibha—*Sri K. Guru Dutt.*
Vrsa-Kapi, the Apc-Man of the Rig Veda—*Dr. V. M. Apte.*

THE INDIAN P.E.N.

March 1963

Bengali Literary Journals—*Lila Ray.*

April 1963

Oriya Literary Journals—*Gopal Chandra Misra.*

May 1963

Telugu Literary Journals—*P. S. Murthy.*

June 1963

Panjabi Literary Journals—*Attar Singh.*

July 1963

English Literary Journals in India—*Prema Nandakumar.*

JOURNAL OF THE MYSORE STATE EDUCATION FEDERATION

Jan 1963.

ಪದ್ಯ ಪ್ರಶಂಸನೆಯ ಕಲೆ—*Sri B. B. Joshi.*

March 1963

ಶಿಕ್ಷಣದಲ್ಲಿ ಭಾಷೆಯ ಸ್ಥಾನ—*Sri K. R. Lakshmikantaiah.*

April 1963

ಕನ್ನಡದಲ್ಲಿನ ಮಕ್ಕಳ ಸಾಹಿತ್ಯ—*Sri K. S. Venkataramu.*

ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ Vol. 51 Part V and VI

ನನ್ನ ಚೂಡುನಿ ಕವಿತ್ವಮು-ರಸಪೋಷಣಮು—ಶ್ರೀ ಶಿಷ್ಟ್ಲಾ ರಾಮಕೃಷ್ಣಶಾಸ್ತ್ರಿಗಾರು.

ಶ್ರೀ ಕಾಳಿದಾಸ ಸೌಂದರ್ಯ ಸಮಾರಾಧನಮು—ಶ್ರೀ ಖಂಡಪಲ್ಲಿ ಸೂರ್ಯನಾರಾಯಣಶಾಸ್ತ್ರಿಗಾರು.

---

---

## ೪೪ನೆಯ ಅಖಿಲ ಭಾರತ
## ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ

# ಶ್ರೀ ರಂ. ಶ್ರೀ. ಮುಗಳಿ ಅವರ ಭಾಷಣ

( ೨೮–೧೨–೧೯೬೩ )

---

# ಕನ್ನಡ ದರ್ಶನದಿಂದಲೆ ಕನ್ನಡಿಗರ ಭಾವೈಕ್ಯ

**ನೀರಜಜಾತ ವಿಸ್ತರಿಸಿ ದಂಡಮುಮಂ ಮಣಿಮಾಲೆಯಾಗಿ ಬಿ-**
**ಸ್ತಾರಿಸಿ ಹಸ್ತದಿಂ ಪಿಡಿದು ತನ್ನ ಸರಣ್ಬುಗುವರ್ಗೆ ಲೇಸುಮಂ**
**ಪ್ರೇರಿಸಲೋಸುಗಂ ಜಪಿಸುತಿರ್ಪಳಿರುಲ್‌ಪಗಲಾವಳೊರ್ವಳಾ**
**ಭಾರತಿ ನಮ್ಮ ಜಿಹ್ವೆಯೊಳನಾವಿಳದಿಂದಿರುತಿರ್ಕೆ ಸಂತತಂ||**

—ದಾವಣಗೆರೆಯ ಶಾಸನದಿಂದ

(ಬ್ರಹ್ಮಾಂಡವನ್ನು ದೊಡ್ಡದೊಂದು ಮಣಿಮಾಲೆಯಾಗಿ ಮಾಡಿ ತನ್ನ ಕೈಯಲ್ಲಿ ಹಿಡಿದು, ತನ್ನ ಶರಣಾಗುವವರಿಗೆ ಲೇಸನ್ನು ಪ್ರೇರಿಸಲೋಸುಗ ಹಗಲಿರುಳು ಯಾವಳೊಬ್ಬಳು ಜಪಿಸುತ್ತಿರುವಳೋ ಆ ಭಾರತಿ ನಮ್ಮ ನಾಲಗೆಯಲ್ಲಿ ಯಾವಾಗಲೂ ನಿರ್ಮಲವಾಗಿ ನೆಲಸಲಿ!)

**ಭಾರತ ಭಾರತಿಗೆ ನಮಸ್ಕಾರ, ಕನ್ನಡ ಸರಸ್ವತಿಗೆ ಶರಣು!**

**ಕರ್ನಾಟಕದ ಮುಖ್ಯಮಂತ್ರಿಗಳೆ, ಪೂಜ್ಯ ಸ್ವಾಗತಾಧ್ಯಕ್ಷರೆ, ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೆ, ಕನ್ನಡ ಬಂಧು ಭಗಿನಿಯರೆ,**

ಈ ಪುಣ್ಯಕ್ಷೇತ್ರದಲ್ಲಿ ನೆರವೇರುವ ನಾಲ್ವತ್ತು ನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಲನಕ್ಕೆ ಅಧ್ಯಕ್ಷನೆಂದು ನನ್ನನ್ನು ತಾವು ಬರಮಾಡಿಕೊಂಡು ಸರಸ್ವತಿಯ ಹಿರಿಯ ಸೇವಕರಿಗೆ ಸಲ್ಲತಕ್ಕ ಎತ್ತರದ ಪೀಠದಲ್ಲಿ ನನ್ನನ್ನು ಕೂರಿಸಿ ಗೌರವಿಸಿದ್ದೀರಿ. ಈ ಗೌರವದಿಂದ ನಾನು ನಿಜವಾಗಿ ಧನ್ಯನಾಗಿದ್ದೇನೆ. ನನ್ನ ಈ ಧನ್ಯತೆಗೆ ಕಾರಣರಾದ ತಮ್ಮನ್ನೆಲ್ಲ ನಾನು ಕೃತಜ್ಞತೆ ತುಂಬಿದೆದೆಯಿಂದ ವಂದಿಸುತ್ತೇನೆ. ನಾನು ಮಾಡಿದ ಅಲ್ಪ ಸಾಹಿತ್ಯ ಸೇವೆಗೆ ತಾವು ಉದಾರ ಹೃದಯದಿಂದ ತಮ್ಮ ಮನ್ನಣೆಯನ್ನು ಸಲ್ಲಿಸಿದಿರಿ. ನನ್ನ ಬಗ್ಗೆ ನಾಲ್ಕು ಒಳ್ಳೆಯ ಮಾತುಗಳನ್ನು ಹೇಳಿದಿರಿ. ನಾನು ಇದಕ್ಕೆ ಅನರ್ಹ ಎಂದು ಹೇಳಿದರೆ ನಿಮಗೆ ಅಗೌರವವನ್ನು ಸೂಚಿಸಿದಂತಾದೀತು, ಸುಳ್ಳು ವಿನಯವನ್ನು ತೋರಿಸಿದಂತಾದೀತು.

ಸುಮಾರು ನಾಲ್ವತ್ತು ವರುಷಗಳ ಹಿಂದೆ ಕನ್ನಡ ಸೇವೆಯ ಹಿರಿಗನಸನ್ನು ಕಂಡು ಹಿರಿಯರು ಹಾಕಿಕೊಟ್ಟ ದಾರಿಯಲ್ಲಿ ಮೆಲ್ಲಮೆಲ್ಲನೆ ನಡೆದು, ಕಲ್ಲುಮುಳ್ಳುಗಳನ್ನು ತುಳಿದು, ನೆತ್ತರು ಸುರಿದರೂ ಎತ್ತರದಲ್ಲಿಸಿರಿದ ನೋಟವನ್ನು ಕೆಳಗಿಳಿಸದೆ ನಾನು ಅಲ್ಪಸ್ವಲ್ಪ ಕಾರ್ಯವನ್ನು ಮಾಡಿದ್ದೇನೆ; ಕೆಲಮಟ್ಟಿಗೆ ಸಾಫಲ್ಯಭಾವವನ್ನು ಹೊಂದಿದ್ದೇನೆ. ಆದರೆ ನನಗೆ ಎಷ್ಟೂ ತೃಪ್ತಿಯಿಲ್ಲ, ಎಳ್ಳಷ್ಟೂ ತುಷ್ಟಿಯಿಲ್ಲ. ನೀವು ತೋರಿರುವ ಗೌರವದಿಂದ ನನ್ನ ಕೃತಿಗಳ ಬಗ್ಗೆ ಯಾವ ಭ್ರಮೆಯೂ ನನ್ನನ್ನು ಮುತ್ತದಿರಲಿ, ಆಯುಷ್ಯದ ಕೊನೆಯವರೆಗೆ ಉನ್ನತ ಕೃತಿ ನಿರ್ಮಿತಿಯ ಹಾರೈಕೆ ಸುತ್ತುವರಿದಿರಲಿ ಎಂದು ದೇವರಲ್ಲಿ ಬೇಡಿಕೊಳ್ಳುತ್ತೇನೆ.

ನನ್ನ ಈ ಭಾಷಣ ಪ್ರಾರಂಭದಲ್ಲಿ ಕನ್ನಡ ನಾಡು ನುಡಿಗಳ ಏಳ್ಗೆಗಾಗಿ ಮನಮುಟ್ಟಿ ದುಡಿದು ಕನ್ನಡ ಸಾಹಿತ್ಯಕ್ಕೆ ಜೆಸಿಯುಳ್ಳ ಕಾಣಿಕೆಗಳನ್ನು ನೀಡಿ ಕಣ್ಮರೆಯಾದ ಎಲ್ಲ ಕನ್ನಡ

ಸೇವಕರ ಮತ್ತು ಸಾಹಿತಿಗಳ ಸ್ಮೃತಿಗೆ ನಾನು ಕೃತಜ್ಞಭಾವದಿಂದ ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ. ಕಳೆದ ಸಮ್ಮೇಲನದ ತರುವಾಯ ನಿಧನಹೊಂದಿದ ಹಿರಿಯ ಸಾಹಿತ್ಯ ಸೇವಕರಾದ ಸರ್ವಶ್ರೀ ಚೆನ್ನಪ್ಪ ಉತ್ತಂಗಿ, ನರಸಿಂಹಶಾಸ್ತ್ರಿ ದೇವುಡು, ಎಂ. ಗೋವಿಂದಪೈ, ಆನಂದ ಇವರನ್ನೂ, ಅಕಾಲ ಮರಣಕ್ಕೆ ತುತ್ತಾದ ಶ್ರೀಮತಿ ತ್ರಿವೇಣಿ ಮತ್ತು ಶ್ರೀ ದ. ಬಾ. ಕುಲಕರ್ಣಿ ಇವರನ್ನೂ ಈ ಸಂದರ್ಭದಲ್ಲಿ ವಿಶೇಷವಾಗಿ ನೆನೆಯುತ್ತೇನೆ. ತಂತಮ್ಮ ಕ್ಷೇತ್ರದಲ್ಲಿ ಅವರು ಮಾಡಿದ ಸೇವೆ ಹೊಸಗನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಚಿರಸ್ಮರಣೀಯವಾಗಿ ಉಳಿಯುವುದು ಎಂಬಲ್ಲಿ ಸಂಶಯವಿಲ್ಲ.

ತುಮಕೂರು ಜಿಲ್ಲೆ ಮತ್ತು ಶ್ರೀ ಸಿದ್ಧಗಂಗಾ ಕ್ಷೇತ್ರವು ಶ್ರೀ ಸಿದ್ಧಲಿಂಗೇಶ್ವರ, ನಿಟ್ಟೂರು ನಂಜಣ್ಣ, ವಿರಕ್ತ ತೋಂಟದಾರ್ಯ, ಗುಬ್ಬಿಯ ಮಲ್ಲಣಾರ್ಯ ಮತ್ತು ಮಲ್ಲಣಾಚಾರ್ಯ, ಕವಿ ಶಾಂತೇಶ, ಗೂಳೂರು ಸಿದ್ಧವೀರಣಾಚಾರ್ಯ, ಸಂಪಾದನೆಯ ಪರ್ವತೇಶ್ವರ, ಮುಂತಾದ ಹಲವಾರು ಮನ್ನಣೆವೆತ್ತ ಪಂಡಿತ ಕವಿಗಳ ಮತ್ತು ಶರಣರ ಪಾದಸ್ಪರ್ಶದಿಂದ ಪುನೀತವಾಗಿವೆ; ಅವರ ಕೃತಿಗಳಿಂದ ಪ್ರಖ್ಯಾತವಾಗಿವೆ. ಇಂಥ ಜಿಲ್ಲೆಯ ಈ ಪುಣ್ಯ ಕ್ಷೇತ್ರದಲ್ಲಿ, ವಿದ್ಯಾಪ್ರೇಮಿಗಳೂ ವಿದ್ಯಾದಾನಿಗಳೂ ಆದ ಪೂಜ್ಯ ಶ್ರೀ ನಿ. ಪ್ರ. ಶಿವಕುಮಾರಸ್ವಾಮಿಗಳ ಸಮರ್ಥ ನೇತೃತ್ವದಲ್ಲಿ, ಇದೇ ಜಿಲ್ಲೆಯವರೂ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆಗಿರುವ ಮಾನ್ಯ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಚತುರ ಬೆಂಬಲದಿಂದ ಸ್ವಾಗತ ಸಮಿತಿಯು ಸಾಹಿತ್ಯ ಸಮ್ಮೇಲನವನ್ನು ನೆರವೇರಿಸಿರುವುದು ತುಂಬ ಅಭಿನಂದನೀಯ ಸಂಗತಿಯಾಗಿದೆ. ಸುಮಾರು ಐವತ್ತು ವರ್ಷಗಳಲ್ಲಿ ಇದುವರೆಗೆ ಕನ್ನಡ ಸಾಹಿತ್ಯ ಸಮ್ಮೇಲನವು ಈ ತುಮಕೂರು ಜಿಲ್ಲೆಯಲ್ಲಿ ಆಗಲಿಲ್ಲೆಂಬ ಅಪವಾದವನ್ನು ಈ ಸಮ್ಮೇಲನ ಪರಿಹರಿಸಿದೆ ಎನ್ನಬಹುದು. ಇದು ಸಂತೋಷದಾಯಕವಾದ ಸಂಗತಿಯಾಗಿದೆ.

ಈವರೆಗಾದ ಸಮ್ಮೇಲನಗಳಲ್ಲಿ ಮತ್ತು ಇತರ ಸಂದರ್ಭಗಳಲ್ಲಿ ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಗಳನ್ನು ಕುರಿತು ಅನೇಕ ಹಿರಿಯರು ಮತ್ತು ಮಿತ್ರರು ತಮ್ಮ ವಿಚಾರಗಳನ್ನು ವ್ಯಕ್ತಮಾಡಿದ್ದಾರೆ. ಕಾಲೋಚಿತವಾದ ಸ್ಫೂರ್ತಿಯನ್ನು ಕೊಟ್ಟಿದ್ದಾರೆ. ನಾನು ಹೊಸದಾಗಿ ಏನು ಹೇಳಬಲ್ಲೆ? ನನ್ನ ಹೇಳುವ ಕ್ರಮದಲ್ಲಿ, ರೀತಿಯಲ್ಲಿ ಬಹಳಾದರೆ ಹೊಸದು ಎಂದು ತೋರಬಹುದು. ಸಾಹಿತ್ಯಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನು ಇಲ್ಲಿ ಎತ್ತಿ ಹೇಳುವದು ಸಾಧ್ಯವಿಲ್ಲ. ಸಂಬಂಧಪಡದ ವಿಷಯಗಳನ್ನಂತೂ ಎತ್ತಿ ಹೇಳುವುದು ಇಷ್ಟವಲ್ಲ. ಮುಖ್ಯವಾಗಿ ಭಾರತೀಯ ಐಕ್ಯವನ್ನು ಹೇಗೆ ಸಾಧಿಸಬೇಕು, ಕನ್ನಡಿಗರ ಭಾವೈಕ್ಯವನ್ನು ಹೇಗೆ ಮೂರ್ತಗೊಳಿಸಬೇಕು ಎಂಬ ಪ್ರಶ್ನೆಗಳಿಗೆ ಮೂಲಗಾಮಿಯಾದ ಉತ್ತರಗಳನ್ನು ಪಡೆಯಲು ಈ ಭಾಷಣದಲ್ಲಿ ನಾನು ಪ್ರಯತ್ನಿಸುತ್ತೇನೆ. ಸಾಹಿತ್ಯ ಮತ್ತು ವಿಮರ್ಶೆಯ ಕ್ಷೇತ್ರದಲ್ಲಿಯ ಜಟಿಲಪ್ರಶ್ನೆಗಳ ಊಹಾಪೋಹಕ್ಕೆ ಕೈಹಾಕುವ ಉದ್ದೇಶವಿಲ್ಲ.

## ಪರಿಷತ್ತು-ಸಮ್ಮೇಲನಗಳ ವಿಚಾರಕ್ಷೇತ್ರ-ಕಾರ್ಯಕ್ಷೇತ್ರ

ಎಲ್ಲಕ್ಕೆ ಮೊದಲು ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಸಾಹಿತ್ಯ ಸಮ್ಮೇಲನ ಇವುಗಳ ವಿಚಾರಕ್ಷೇತ್ರ ಮತ್ತು ಕಾರ್ಯಕ್ಷೇತ್ರ ಈ ವಿಷಯದಲ್ಲಿ ಸ್ಪಷ್ಟವಾದ ತಿಳಿವಳಿಕೆ ಇಂದು ತೀರ ಆವಶ್ಯಕವೆಂದು ನನಗೆ ತೋರುತ್ತದೆ. ಸಾಹಿತ್ಯದ ಎಲ್ಲ ಶಾಖೆಗಳಲ್ಲಿ ಆಗಿರುವ ಪ್ರಗತಿ, ಆಗಬೇಕಾದ ಕಾರ್ಯ, ಸಾಹಿತ್ಯ ಸಂವರ್ಧನೆಗೆ ಆವಶ್ಯಕವಾದ ವಿಮರ್ಶೆಯ ಸ್ಥಿತಿಗತಿ, ಸಾಹಿತ್ಯ

ಸೇವಕರ ಮತ್ತು ಪ್ರಕಾಶಕರ ಪರಿಸ್ಥಿತಿ, ಈ ಮುಂತಾದ ಸಾಹಿತ್ಯ ಸಂಬಂಧಿಯಾದ ವಿಷಯಗಳಿಗೆ **ಸಾಹಿತ್ಯ ಪರಿಷತ್ತು** ಮತ್ತು **ಸಾಹಿತ್ಯ ಸಮ್ಮೇಲನಗಳು** ತಮ್ಮ ಮುಖ್ಯವಾದ ಗಮನವನ್ನೀಯಬೇಕು; ಉದಾತ್ತ ಧ್ಯೇಯದಿಂದ, ವಿಧಾಯಕ ಕಾರ್ಯದಿಂದ, ವರುಷದಿಂದ ವರುಷಕ್ಕೆ ಮುನ್ನಡೆಯುತ್ತ ಸಾರ್ಥಕತೆಯನ್ನು ಗಳಿಸಬೇಕು. ಸಾಹಿತ್ಯದ ಮಂದಿರಕ್ಕೆ ಮೂಲ ಆಧಾರ ಭಾಷೆ, ಅದರ ಶಿಖರ ಸಂಸ್ಕೃತಿ. ಭಾಷೆ, ಸಾಹಿತ್ಯ, ಸಂಸ್ಕೃತಿ ಈ ಮುಪ್ಪುರಿಯ ಮುನ್ನಡೆ, ಪರಿಷತ್ತು-ಸಮ್ಮೇಲನಗಳ ಹಿರಿಯ ಗುರಿಯಾಗಿರಬೇಕು. ಅಷ್ಟರಮಟ್ಟಿಗೆ ಅವುಗಳ ವಿಚಾರಕ್ಷೇತ್ರ, ಕಾರ್ಯಕ್ಷೇತ್ರಗಳು ವಿಸ್ತಾರಗೊಳ್ಳುತ್ತವೆ. ಆದರೆ ಅವು ಇನ್ನೂ ಹಿಗ್ಗುತ್ತ ಹೋಗಿ ರಾಜಕೀಯದ ರಣರಂಗವಾಗುವುದಾದರೆ ಅದಕ್ಕಿಂತ ಬೇರೆ ಅನಿಷ್ಟವಿಲ್ಲ. ಸಾಹಿತ್ಯ ಸೇವಕರಿಗೆ ಭಾಷಿಕ ರಾಜಕಾರಣ, ದೇಶದ ರಾಜಕಾರಣ ಮುಂತಾದ ಅನೇಕ ವಿಷಯಗಳಲ್ಲಿ ಆಸ್ಥೆಯಿರಬಹುದು. ಆ ಬಗ್ಗೆ ಅವರ ಸ್ವಂತ ಅಭಿಪ್ರಾಯಗಳೂ ಇರಬಹುದು. ಆದರೆ ಅವನ್ನು ವ್ಯಕ್ತಗೊಳಿಸಲು ಸಾಹಿತ್ಯದ ವೇದಿಕೆಯನ್ನು ಅವರು ಬಳಸಬಾರದು. ಅವವಕ್ಕೆ ಸಂಬಂಧಪಟ್ಟ ವೇದಿಕೆಗಳಲ್ಲಿ ಹೋಗಿ ನಿಲ್ಲಬೇಕು. ಈ ಸೂಕ್ಷ್ಮ ಸಂಯಮ ಇಂದು ನಮ್ಮ ಜನಕ್ಕೆ ಅತ್ಯಂತ ಅವಶ್ಯವಾಗಿದೆ. ಯಾರು ಬೇಕಾದವರು ಯಾವಲ್ಲಿಯೂ ನುಗ್ಗಬಹುದು, ಏನನ್ನೂ ಹೇಳಬಹುದು ಎಂಬುದು ಕೇಡಿಗೆ ತೋಡಿಕೊಟ್ಟ ದಾರಿಯಾಗುವುದು ಖಂಡಿತ. ಭಾಷೆ-ಭಾಷೆಗಳ ಅನ್ಯೋನ್ಯ ಸಂಬಂಧ, ಭಾಷಾನುಗುಣ ಪ್ರಾಂತರಚನೆಯಿಂದ ತಲೆಯೆತ್ತಿದ ಸಮಸ್ಯೆಗಳು, ಇವನ್ನು ಸಾಹಿತ್ಯ ಪರಿಷತ್ತು ಹಾಗೂ ಸಮ್ಮೇಲನಗಳು ತಾತ್ವಿಕ ದೃಷ್ಟಿಯಿಂದ ಪರಿಶೀಲಿಸಬೇಕು-ಆಂದೋಲನ ದೃಷ್ಟಿಯಿಂದಲ್ಲ. ಆಂದೋಲನಕ್ಕೆ ಬೇರೆ ಸಮ್ಮುಖಗಳಿರುತ್ತವೆ; ವೇದಿಕೆಗಳಿರುತ್ತವೆ. ಭಾಷಿಕ ರಾಜಕಾರಣದ ಅತಿರೇಕಗಳಿಂದ ಭಾರತೀಯ ಐಕ್ಯಕ್ಕೆ ಬಾಧೆ ತರುವ ಮತ್ತು ಸರಸ್ವತಿಯ ಪವಿತ್ರ ಪೀಠವನ್ನು ಮಲಿನಗೊಳಿಸುವ ಪ್ರವೃತ್ತಿಯನ್ನು ಯಾವ ಭಾಷೆಯವರೇ ತೋರಲಿ ಅದು ಅವರಿಗೂ ನಾಡಿಗೂ ಅಪಶಕುನವೆಂದು ತಿಳಿಯಬೇಕು.

## ಭಾರತೀಯ ಐಕ್ಯದ ಅಗತ್ಯ

ಭಾರತೀಯ ಐಕ್ಯ ಇಂದಿನ ನಿತಾಂತ ಅಗತ್ಯ. ಭಾಷೆ-ಸಾಹಿತ್ಯ-ಸಂಸ್ಕೃತಿಗಳ ಮೂಲಕ ಈ ಐಕ್ಯವನ್ನು ಹೇಗೆ ಸಾಧಿಸಬೇಕೆಂಬುದು ನಮ್ಮ ಧ್ಯಾನವಿಷಯವಾಗಬೇಕು. ಧ್ಯಾನಕ್ಕೆ ಮೊದಲು ಧ್ಯೇಯದ ಮಹತ್ವ ತಿಳಿಯಬೇಕು. ಅಂತೆ ಈ ವಿಷಯವನ್ನು ಸ್ವಲ್ಪ ವಿಸ್ತರಿಸಲು ಬಯಸುತ್ತೇನೆ. ಭಾರತವು ಬಹು ದೊಡ್ಡ ದೇಶ. ತರತರದ ಜನವುಳ್ಳ ದೇಶ. ಇಂಥಲ್ಲಿಯೂ ಪ್ರಾಚೀನ ಕಾಲದಿಂದ ದ್ರಷ್ಟಾರರು ಭಾರತೀಯ ಐಕ್ಯವಿಷ್ಟೇ ಏಕೆ, ವಿಶ್ವದ ಐಕ್ಯದ ಸ್ವಪ್ನವನ್ನೂ ಕಂಡರು. 'ಅವಿಭಕ್ತಂ ವಿಭಕ್ತೇಷು', ವಿವಿಧತೆಯಲ್ಲಿ ಏಕತೆ, ಇದು ಭಾರತೀಯ ಸಂಸ್ಕೃತಿಯ ಶ್ರೇಷ್ಠ ಆದರ್ಶವಾಯಿತು. ಧಾರ್ಮಿಕ ಜೀವನದಲ್ಲಿ, ತೀರ್ಥಯಾತ್ರೆಯ ಸಂಪ್ರದಾಯಗಳಲ್ಲಿ, ಕೆಲಮಟ್ಟಿಗೆ ಐಕ್ಯಸಾಧನೆಯೂ ನಡೆಯಿತು. ಜೊತೆಗೆ ಜನಾಂಗಿಕವಾದ ಮತ್ತು ರಾಜಕೀಯವಾದ ಸಂಘರ್ಷಗಳೂ ನಡೆದಿದ್ದುವು. ಪರಕೀಯರು ನುಗ್ಗಿ ಬಂದಾಗ ಭಾರತೀಯರ ಅನೈಕ್ಯ ಅವರಿಗೆ ಪಥ್ಯವಾಯಿತು. ಅವರಲ್ಲಿ ಕೆಲವರು ದೇಶವನ್ನು ಸುಲಿದುಕೊಂಡು ಹೋದರು. ಕೆಲವರು ಇಲ್ಲಿಯೇ ಉಳಿದುಕೊಂಡುಬಿಟ್ಟರು. ಕಳೆದ ಇನ್ನೂರು ವರುಷಗಳಲ್ಲಿ ನಮ್ಮ ನಾಡಿಗೆ ಬಂದ ಪರಕೀಯರು ನಮ್ಮ ಅನೈಕ್ಯದ ಕರೆಯಿಂದಲೇ ಬಂದವರೆಂಬಂತೆ ಬಹು ವಿಚಿತ್ರವಾದ ಬಗೆಯಲ್ಲಿ ನಾಡಿನ ಹಣೆಯ ಮೇಲೆ ದಾಸ್ಯದ ಕಲಂಕವನ್ನು

ಒತ್ತಿದರು. ನಮ್ಮ ಎಲ್ಲ ಸಂಸ್ಕೃತಿಯ ಹಣೆಬರಹವನ್ನು ಒರಸಲು ಪಣ ತೊಟ್ಟರು. ನಮ್ಮ ದೇಶದ ಸ್ವಾತಂತ್ರ್ಯ, ನಮ್ಮ ಬುದ್ಧಿಯ ಸ್ವಾತಂತ್ರ್ಯ, ನಮ್ಮ ಆತ್ಮದ ಸ್ವಾತಂತ್ರ್ಯ ಎಲ್ಲವೂ ನಷ್ಟವಾಗುವದರಲ್ಲಿದ್ದುವು. ಆದರೆ ನಾಡಿನ ಸುದೈವದಿಂದ ಭಾರತೀಯ ಚೈತನ್ಯ ಜಾಗೃತ ವಾಯಿತು. ಅದ್ಭುತ ತ್ಯಾಗ ಐಕ್ಯಗಳ ಬಲದಿಂದ ಹದಿನಾರು ವರುಷಗಳ ಹಿಂದೆ ಭಾರತವು ಸ್ವತಂತ್ರವಾಯಿತು. ಚಮತ್ಕಾರವೆಂದರೆ ಪರದಾಸ್ಯದ ಕಾಲ್ಕೆಳಗೆ ನರಳುತ್ತಿರುವ ಕಾಲದಲ್ಲಿ ಜಾಗೃತವಾದ ಸ್ವಾತಂತ್ರ್ಯದಾಹವು ಸ್ವತಂತ್ರ ಭಾರತದಲ್ಲಿ ಕಡಿಮೆಯಾಗುತ್ತ ನಡೆದಿದೆ. ನಾವು ಪರತಂತ್ರರಾಗಿದ್ದಾಗ ತೋರಿದ ಸ್ವಾತಂತ್ರ್ಯಪ್ರೇಮ ಮತ್ತು ಐಕ್ಯಭಾವ ನಾವು ಸ್ವತಂತ್ರರಾದ ಮೇಲೆ ಎಲ್ಲಿ ಹೋದುವು? ಪರತಂತ್ರ ಸ್ಥಿತಿಯಲ್ಲಿ ನಾವು ನಿಜವಾಗಿ ಸ್ವತಂತ್ರರಾಗಿದ್ದೆವು, ಸ್ವತಂತ್ರರಾದ ಕೂಡಲೆ ಪರತಂತ್ರ ಸ್ಥಿತಿಗೆ ಇಳಿದೆವು-ಎಂದು ಅನ್ನುವಂತಾಯಿತೆ? ಸ್ವಾತಂತ್ರ್ಯ ಬಂದೊಡನೆ ಸ್ವರ್ಗವೇ ಕಣ್ಣು ತೆರೆದಂತೆ ಆಗಿ ನಾವು ಸರ್ವಪ್ರಕಾರದ ಸುಖೋಪಭೋಗದ ಬೆನ್ನು ಹತ್ತಿದೆವು. ಪ್ರಜಾಪ್ರಭುತ್ವದ ಅಪಕ್ವ ಅರಿವಿನ ಮೂಲಕ ಅಧಿಕಾರ ಲಾಲಸೆ, ಸಂಕುಚಿತ ಭಾವ, ಸ್ವಸ್ಥವೃತ್ತಿ ಇವುಗಳಿಗೆ ನಾವು ಬಲಿಯಾಗಿದ್ದೇವೆ. ಕಳೆದ ವರ್ಷ ತನ್ನ ಗೆಳೆತನದ ಸೋಗಿನ ಮುಸುಕನ್ನು ತೆಗೆದೊಗೆದು ನೆರೆಯ ರಾಷ್ಟ್ರವು ಮಾಡಿದ ಆಕ್ರಮಣದಿಂದ ನಾವು ಗಡಬಡಿಸಿ ಎಚ್ಚೆತ್ತೆವು. ತುರ್ತು ಪರಿಸ್ಥಿತಿ ನಿರ್ಮಾಣವಾಯಿತು, ಭಾರತೀಯರನ್ನು ಒಂದುಗೂಡಿಸಿತು. ಸೂಕ್ಷ್ಮವಾಗಿ ನೋಡಿದರೆ, ಸ್ವಾತಂತ್ರ್ಯ ಬಂದ ಕ್ಷಣದಿಂದಲೇ ಈ ನಾಡಿನಲ್ಲಿ ತುರ್ತು ಪರಿಸ್ಥಿತಿ ಉಂಟಾಗಿದೆ. ಇದು ಬರಿಯ ತುರ್ತು ಪರಿಸ್ಥಿತಿ (Emergency) ಅಲ್ಲ, ಸಂಕಟಸಮಯ (Crisis) ಎಂದರೆ ತಪ್ಪಲ್ಲ. ಹೆಚ್ಚು ಕಡಿಮೆ ಪ್ರಮಾಣದಿಂದ ಜಗತ್ತಿಗೆಲ್ಲ ಸಂಕಟಸಮಯ ಬಂದಿದೆ. ಭಾರತದ ಮಟ್ಟಿಗೆ ಸ್ವತಂತ್ರತೆ ದೇಶವನ್ನು ಎರಡು ಹೋಳು ಮಾಡಿ ರಕ್ತದ ಹೊಳೆಯಲ್ಲಿ ಮಿಂದು ಹಾಹಾಕಾರದ ಜಯಜಯಕಾರದೊಡನೆ ಬಂದಿತು. ಈ ಅನೈಕ್ಯದ, ಪಶುತ್ವದ ಆವಿಷ್ಕಾರದಿಂದ ನಾವು ಗಾಬರಿಗೊಂಡೆವು. ಎಚ್ಚರಿಯ ಲಿಲ್ಲ. ಕಲ್ಪವೃಕ್ಷಕ್ಕೆ ಕಲ್ಲೊಗೆದು ಕೈಗೆ ಸಿಕ್ಕ ಹಣ್ಣುಗಳನ್ನು ದೋಚಿಕೊಳ್ಳತೊಡಗಿದೆವು; ಒಬ್ಬರೊಬ್ಬರಿಗೆ ಕಲ್ಲು ತಾಕಿದರೂ ಲೆಕ್ಕಿಸಲಿಲ್ಲ. ಈ ಪರಿಸ್ಥಿತಿಯಲ್ಲಿ ಉತ್ತರದ ಆಕ್ರಮಣ ಎತ್ತರದಿಂದ ಬಂತು. ನಮಗೆ ಎಚ್ಚರು ಬಂತು, ನಾವು ಒಂದಾದೆವು. ಎಲ್ಲ ಬಗೆಯ ತ್ಯಾಗಕ್ಕೆ ಸಿದ್ಧರಾದೆವು. ಭಾರತಮಾತೆಯ ಮುಖದ ಮೇಲಿನ ತೆರೆಯನ್ನು ತೆಗೆದೊಗೆದಂತಾಯಿತು. ಮೂಲ ಸ್ವರೂಪದ ದರ್ಶನವಾಯಿತು. ಆದರೆ ಆ ತೆರೆ ಮತ್ತೆ ಆವರಿಸಿದೆ. ನಮ್ಮ ಒಡಕಿನ, ಆಳಿಯಾಸೆಯ, ಕಚ್ಚಾಟದ ದೃಶ್ಯಗಳು ಕಣ್ಣಿಗೆ ಬೀಳುತ್ತಲಿವೆ. ತುರ್ತು ಪರಿಸ್ಥಿತಿಯ ಅರಿವು ಸಡಿಲುತ್ತಿದೆ, ಅಂತೇ ಸಂಕಟಸಮಯವು ಇನ್ನಷ್ಟು ಎದ್ದು ಕಾಣುತ್ತಿದೆ. ಇಂಥ ಸಮಯದಲ್ಲಿ ಭಾರತೀಯ ಐಕ್ಯದ ಮಹತ್ವವನ್ನು ಅರಿತುಕೊಂಡು ಅದನ್ನು ಸಾಧಿಸುವುದು ಹೇಗೆ? ಸ್ಥಿರಗೊಳಿಸುವುದು ಎಂತು? ಈ ಬಗ್ಗೆ ನಾವೆಲ್ಲ ಗಂಭೀರವಾಗಿ ಆಲೋಚಿಸಬೇಕಾಗಿದೆ. ಸಾಹಿತ್ಯ ಸಮ್ಮೇಲನದ ಸಂದರ್ಭಕ್ಕೆ ಅನುಗುಣವಾದ ರೀತಿಯಲ್ಲಿ ನನಗೆ ತಿಳಿದಿರುವ ಕೆಲವು ಐಕ್ಯಸಾಧಕವಾದ ಮನೋಭಾವಗಳನ್ನೂ ಕ್ರಮಗಳನ್ನೂ ಸೂಚಿಸಬಯಸುತ್ತೇನೆ.

## ಐಕ್ಯ ಸಾಧಕ ಉಪಾಯಗಳು

೧. ದೇಶಾಭಿಮಾನ ಮತ್ತು ಭಾಷಾಭಿಮಾನ ಇವುಗಳ ತಿಕ್ಕಾಟವನ್ನು ತಪ್ಪಿಸುವುದು ಮಾತ್ರವಲ್ಲ, ಇವುಗಳ ಸಮತೂಕ, ವಿವೇಕ ನಮ್ಮ ತಿಳಿವಳಿಕೆಯ ಮತ್ತು ದೈನಂದಿನ ಜೀವನದ

ಅವಶ್ಯ ಭಾಗವಾಗುವಂತೆ ನಾವು ಬಾಳಲು ಕಲಿಯಬೇಕು. ಭಾರತೀಯ ಹಿತದ ಶ್ರುತಿಯಲ್ಲಿ ಪ್ರತಿಯೊಬ್ಬ ಭಾರತೀಯನೂ ತನ್ನ ಜೀವನ ಸಂಗೀತವನ್ನು ನಡೆಸುತ್ತಿರಬೇಕು. ಇನ್ನೂ ಮುಂದೆ ಹೋಗಿ, ಸಂಗೀತಗಾರನು ಎರಡು ತಂಬೂರಿಗಳ ಶ್ರುತಿಯಲ್ಲಿ ಹಾಡುತ್ತಿರುವಂತೆ ಮಾನವ ಸಂಸ್ಕೃತಿ ಮತ್ತು ಭಾರತೀಯ ಸಂಸ್ಕೃತಿ ಇವೆರಡರ ಶ್ರುತಿಗೆ ಹೊಂದಿಕೊಂಡು ಅವನು ತನ್ನ ಪ್ರದೇಶದ, ತನ್ನ ಧರ್ಮದ ಮತ್ತು ತನ್ನ ಭಾಷೆಯ ಗೀತವನ್ನು ರಚಿಸಿಕೊಳ್ಳಬೇಕು. ಇದು ತುಂಬ ಕಷ್ಟವಾದ ಸಿದ್ಧಿ, ಬಯಸಿದೊಡನೆ ಬರುವಂಥದಲ್ಲ. ಇದು ಬಾರದೆ ವೈವಿಧ್ಯ ಪೂರ್ಣವಾದ ಭಾರತದ ಸಮಸ್ಯೆಗಳನ್ನು ನಾವು ಬಗೆಹರಿಸಲಾರೆವು-ಕೊನೆ-ಬಾಳುವ ಸಾಮರಸ್ಯ-ಸಹಜೀವನಗಳನ್ನು ಕಲಿಯಲಾರೆವು. ಜಗತ್ತಿಗೆ ಕಲಿಸಲಾರೆವು. ಈ ಸಮತೂಕದ ಸಾಧನೆಗಾಗಿ ಒಂದೆರಡು ನಿಶ್ಚಿತ ಮನೋಭಾವಗಳನ್ನು ನಾವು ಬೆಳೆಸಿಕೊಳ್ಳಬೇಕು. ನಂನಮ್ಮ ಭಾಷೆಯ ವಿಷಯದಲ್ಲಿ ನಿರಭಿಮಾನವೂ ಸಲ್ಲದು, ದುರಭಿಮಾನವೂ ಸಲ್ಲದು, ಸದಭಿಮಾನವಿರಬೇಕು. ಈ ಸದಭಿಮಾನವು ನಮ್ಮ ಭಾಷೆಯ ಸಾಹಿತ್ಯ ಸಂಸ್ಕೃತಿಗಳ ಜ್ಞಾನದಿಂದ ಪ್ರೇರಿತವಾದದ್ದಿರಬೇಕು, ಕೇವಲ ಭಾವನೆಯ ಗುರುಳೆಯ ಮೇಲೆ ಕಟ್ಟಿದ ಗಾಳಿಗೋಪುರವಾಗಬಾರದು. ಮಾತೃಭಾಷೆ, ಪ್ರಾದೇಶಿಕ ಭಾಷೆ ಇವು ಯಾರಿಗೂ ಜನ್ಮಜಾತವಾಗಿ ಬರುವುದಿಲ್ಲ. ಅವರವರ ಹುಟ್ಟಿನ ಪರಿಸರದಲ್ಲಿ, ಬೆಳೆದ ಆವರಣದಲ್ಲಿ, ಇವು ಅಭಿವ್ಯಕ್ತಿಯ ಸಾಧನಗಳಾಗಿ ಲಭಿಸುತ್ತವೆ. ಇವುಗಳ ವಿಷಯದಲ್ಲಿ ಅತಿರೇಕದ ಅಭಿಮಾನ ಅಸ್ಮಿತೆಗಳು-ವ್ಯಕ್ತಿಗೂ ದೇಶಕ್ಕೂ ಬಾಧಕವಾಗುತ್ತವೆ. ಯಾವೊಂದು ಭಾಷೆಯ ಪರಿಸರದಲ್ಲಿ ಯಾರೊಬ್ಬರು ಹುಟ್ಟಿ ಬೆಳೆಯುತ್ತಾರೆ. ಹುಟ್ಟಿದ ನೆಲದಲ್ಲಿಯೇ ಒಮ್ಮೊಮ್ಮೆ ಬದುಕಿನ ನೆಲೆ ಕಾಣುತ್ತಾರೆ. ಒಮ್ಮೊಮ್ಮೆ ಬೇರೆ ಪ್ರಾಂತದಲ್ಲಿ, ಬೇರೆ ದೇಶದಲ್ಲಿ ಬದುಕಿಗೆ ಆಸರೆ ಪಡೆಯುತ್ತಾರೆ. ಹೀಗಾಗಿ ಹೊರಗಡೆ ಹೋಗಿ ಒಂದೋ ನೂರೋ ಕೆರೆಯ ನೀರು ಕುಡಿಯುತ್ತಾರೆ. ಅವುಗಳ ಸಮ್ಮಿಶ್ರ ಸಂಸ್ಕಾರವು ಅವರ ಮೇಲೆ ಆಗಿಯೇ ತೀರಬೇಕು. ಯಾವೊಂದು ಭಾಷೆಯಿಂದ ಅವರು ತಮ್ಮ ವಿಕಾಸವನ್ನು ಮಾಡಿಕೊಳ್ಳುತ್ತಾರೆ. ತಮ್ಮ ವಿಚಾರಗಳನ್ನೂ ಭಾವನೆಗಳನ್ನೂ ಆಯಾ ಭಾಷೆಯಲ್ಲಿ ಸಲೀಲವಾಗಿ, ಸಮರ್ಥವಾಗಿ ವ್ಯಕ್ತಗೊಳಿಸುತ್ತಾರೆ. ಜೊತೆಗೆ ಕೆಲವರು ಇತರ ಭಾಷೆಗಳಲ್ಲಿಯೂ ಪ್ರಭುತ್ವ ಪಡೆಯುತ್ತಾರೆ. ಇವುಗಳಲ್ಲಿ ತಾಯಿಯ ತೊಡೆಯ ಮೇಲೆ, ಮನೆಯ ಅಂಗಣದಲ್ಲಿ ಕಲಿತ ತಾಯ್ನುಡಿ ಇಲ್ಲವೆ ಮನೆಮಾತು ಇದು ಹೆಚ್ಚು ಪ್ರಭಾವಿಯೂ ಸಹಜ ಸ್ಫೂರ್ತವೂ ಆಗಿರುತ್ತದೆ. ಈ ದೃಷ್ಟಿಯಿಂದ ಮಾತೃಭಾಷೆಯ ವಿಷಯದಲ್ಲಿ ಸದಭಿಮಾನ ಸ್ವಾಭಾವಿಕ ಮತ್ತು ಆವಶ್ಯಕ. ಆದರೆ ಇತರ ಭಾಷೆಗಳ ಬಗ್ಗೆ ದ್ವೇಷ, ಅಸೂಯೆ, ಪೂರ್ವಗ್ರಹ ತುಚ್ಛಭಾವ ಇವು ಸಲ್ಲವು. ಇಂಥ ಮನೋಭಾವ ಮಾತೃತತ್ವಕ್ಕೆ ಅವಮಾನಕರ, ಐಕ್ಯಕ್ಕೆ ಬಾಧಕ ಎಂಬುದನ್ನು ನಾವು ತಿರುತಿರುಗಿ ಹೇಳಿಕೊಳ್ಳಬೇಕು. ನಮ್ಮದು ನಮ್ಮ ಮಾತೃಭಾಷೆಯಾದರೆ ಬೇರೆಯವರದು ಅವರ ಮಾತೃಭಾಷೆ. ಎಲ್ಲ ಮಾತೆಯರೂ ಪೂಜ್ಯರು, ಲೋಕಮಾತೆಯ ಮತ್ತು ಭಾರತಮಾತೆಯ ಅಂಶಾವತಾರ ಸ್ವರೂಪರು.

ಭಾಷಾಭಿಮಾನದ ಅತಿರೇಕದಿಂದ ಕೆಲವೊಂದು ಸಲ ನಾವು ರಕ್ತದಲ್ಲಿಯೂ ಭಾಷಾ ಭೇದವನ್ನು ಕಾಣುತ್ತೇವೆ. ಒಂದು ಭಾಷೆಯನ್ನಾಡುವವರ ದೇಹದಲ್ಲಿ ಒಂದು ರಕ್ತ, ಅನ್ಯ ಭಾಷಿಕರ ದೇಹದಲ್ಲಿ ಬೇರೆ ರಕ್ತ ಹರಿಯುತ್ತಿದೆ ಎನ್ನುತ್ತೇವೆ. ಅಷ್ಟೇ ಅಲ್ಲ, ಬೇರೆ ರಕ್ತದವರು ಎಲ್ಲ ರೀತಿಯಿಂದಲೂ ಅಗದವರು, ಒಬ್ಬರೊಬ್ಬರಿಗೆ ವೈರಿಗಳು ಎಂಬಂತೆ ಆಡುತ್ತೇವೆ, ನಡೆಯುತ್ತೇವೆ. ರಕ್ತ ಪದದಲ್ಲಿಯ ಲಾಕ್ಷಣಿಕ ಅರ್ಥವನ್ನು ತಿಳಿದುಕೊಳ್ಳಲಾಗದ ಜನವು ಜೀವಿತನದ

ಹುಚ್ಚು ಹೊಕ್ಕು ನೆಲದ ಮೇಲೆ ನಿಜವಾದ ರಕ್ತವನ್ನು ಸುರಿಸಿಯಾರು ಎಂಬುದನ್ನು ಅರಿಯುವ ಎಚ್ಚರ ನಮ್ಮಲ್ಲಿ ಬರಬೇಕು. ಅದೇ ರೀತಿ, ನಮ್ಮ ಭಾಷೆ ಶ್ರೇಷ್ಠ, ಇತರರ ಭಾಷೆ ಕನಿಷ್ಠ, ಎಂಬ ಹುಸಿ ಹೆಮ್ಮೆಯೂ ಅಷ್ಟೇ ಅಪಾಯಕಾರಕವಾದುದು. ಭಾಷೆಭಾಷೆಗಳ ತುಲನಾತ್ಮಕ ಅಭ್ಯಾಸದಿಂದ ಕಂಡ ಸಂಗತಿಗಳನ್ನು ಹೇಳುವುದು ಬೇರೆ, ಭಾವನಾತಿರೇಕದಿಂದ ನಾ ಹೆಚ್ಚು ಎಂದು ಕೂಗಿಕೊಳ್ಳುವುದು ಬೇರೆ. ನಿಜವಾಗಿ ಬಹುಭಾಷಿಕವಾದ ಭಾರತದಲ್ಲಿ ಪ್ರತಿಯೊಂದು ಭಾಷೆಯ ವಿಷಯದಲ್ಲಿ ಆದರ ಭಾವ, ಸಹಜ ಕುತೂಹಲ, ಇವು ಪ್ರತಿಯೊಬ್ಬ ಭಾರತೀಯ ನಾಗರಿಕನೂ ಪಡೆಯಬೇಕಾದ ಹೊಸ ಸಂಸ್ಕೃತಿಯಲ್ಲಿ ಸೇರಿಕೊಂಡಿರಬೇಕು. ಎಲ್ಲ ಭಾಷೆಗಳನ್ನು ಎಲ್ಲರೂ ಕಲಿಯಲಾರರು. ಆದರೆ ತನ್ನ ಭಾಷೆಯ ಬಗ್ಗೆ ಹೇಗೋ ಹಾಗೆ ಇತರ ಭಾಷೆಗಳ ಬಗ್ಗೆ ಹೆಚ್ಚು ಹೆಚ್ಚಾಗಿ ತಿಳಿದುಕೊಳ್ಳಲಿಕ್ಕೆ ಯಾವಾಗಲೂ ನಮ್ಮ ಮನಸ್ಸನ್ನು ನಾವು ತೆರೆದಿಡಬೇಕು. ಇತರ ಭಾಷೆಗಳಲ್ಲಿಯ ಒಳ್ಳೆಯ ಸಾಹಿತ್ಯಕ್ಕೆ ನಮ್ಮ ರಸಿಕತೆ ಹಾತೊರೆಯಬೇಕು, ಒಳ್ಳೆಯ ವಿಚಾರಕ್ಕೆ ನಮ್ಮ ಬುದ್ಧಿ ಆತುರವಾಗಬೇಕು. ಕನಿಷ್ಟಪಕ್ಷಕ್ಕೆ, ತನಗೆ ಗೊತ್ತಿಲ್ಲದ ಭಾಷೆ ಮತ್ತು ಸಾಹಿತ್ಯಗಳ ಬಗ್ಗೆ ಯಾರೂ ಅವಹೇಳನೆಯ ಮಾತುಗಳನ್ನಾಡಬಾರದು. ಅಜ್ಞಾನಜನ್ಯವಾದ ಅಹಂ ಮನ್ಯತೆ ಮತ್ತು ಇತರರ ನಿಂದೆ ಭಾರತೀಯರಲ್ಲಿ ಬೆಳೆಯುತ್ತ ಹೋದರೆ ಅವರಲ್ಲಿಯ ಒಕ್ಕಟ್ಟು ಕೊನೆಯವರೆಗೆ ಬಿಕ್ಕಟ್ಟೇ ಆಗಿ ಉಳಿದೀತು !

೨. ಭಾರತೀಯ ಐಕ್ಯಕ್ಕೆ ಪೋಷಕವಾದ ವಿಚಾರಪ್ರಧಾನ ಮತ್ತು ಸ್ಫೂರ್ತಿಪ್ರಧಾನ ಕೃತಿಗಳನ್ನು ಲೇಖಕರು ರಚಿಸಬೇಕು, ವಾಚಕರು ವಾಚಿಸಬೇಕು. ಇಂಥ ಲೇಖನವು ಒಳಗಿನ ಒತ್ತಾಸೆಯಿಂದ ಉಕ್ಕಿಬರಬೇಕು, ಹೊರಗಿನ ಒತ್ತಡದಿಂದಲ್ಲ. ಭಾರತದಲ್ಲಿ ಸಂಚಾರ ಮಾಡಿ ಭಾರತೀಯ ಇತಿಹಾಸ, ಸಾಹಿತ್ಯ, ಸಂಸ್ಕೃತಿಗಳ ನಿಕಟ ಪರಿಚಯವನ್ನು ಮಾಡಿಕೊಂಡು ವಿವಿಧ ನಾಮರೂಪಗಳಲ್ಲಿ ಅಂತರ್ಯಾಮಿಯಾಗಿರುವ ಭಾರತರಾಷ್ಟ್ರಪುರುಷನ ದರ್ಶನವನ್ನು ಪಡೆದು ರೋಮಾಂಚಿತರಾಗಿ ಇಂದಿನ ಲೇಖಕರು ಸಹಜಸ್ಫೂರ್ತ ಕಲಾಕೃತಿಗಳ ಮೂಲಕ ಜನಕ್ಕೆ ಐಕ್ಯಮಂತ್ರವನ್ನು ಕಲಿಸಬೇಕು. ಯಾವುದೋ ಸ್ಪರ್ಧೆಗಾಗಿ, ಇಲ್ಲವೆ ತುರ್ತು ಪರಿಸ್ಥಿತಿಯ ಅವಸರಕ್ಕಾಗಿ ಪ್ರಚಾರದ ಧಾಟಿಯಲ್ಲಿ, ಕವನ, ಕಥೆ, ನಾಟಕಗಳನ್ನು ಎಷ್ಟು ಬರೆದರೂ ಅವು ನೀರಮೇಲಿನ ಬರೆಹಗಳಾಗುವ ಸಂಭವ ಹೆಚ್ಚು. ಜಾಜ್ವಲ್ಯಮಾನವಾದ ರಾಷ್ಟ್ರಪ್ರೇಮ, ವಿಶಾಲವಾದ ಆಳವಾದ ಅನುಭವ ಮತ್ತು ವಿಚಾರ ಸಂಪತ್ತಿ, ಭಾರತೀಯ ಸಂಸ್ಕೃತಿಯ ಸಾಕಲ್ಯ ಪರಿಚಯ, ಭಾರತೀಯನಾಗಿ ಬಾಳಬೇಕೆಂಬ ಹವ್ಯಾಸ, ಮುಖ್ಯವಾಗಿ ಪರಿಪಕ್ವವಾದ ಪ್ರತಿಭೆ ಇವಿಲ್ಲದೆ ಇಂಥ ಕೃತಿಗಳು ನಿರ್ಮಾಣವಾಗಲಾರವು.

೩. ಪ್ರತಿಯೊಂದು ಭಾಷೆಯಲ್ಲಿಯ ಒಳ್ಳೆಯ ಕೃತಿಗಳು ಎಲ್ಲ ಇತರ ಭಾಷೆಗಳಲ್ಲಿ ಸಮರ್ಪಕವಾದ ಭಾಷಾಂತರವಾಗಿ ಭಾರತೀಯ ಸಾಹಿತ್ಯದ ಸಮಗ್ರದರ್ಶನವು ಎಲ್ಲರಿಗೆ ದೊರೆಯಬೇಕು. ಈ ದರ್ಶನವನ್ನು ಪಡೆಯಲು ಎಲ್ಲ ಭಾರತೀಯರೂ ಆತುರರಾಗಬೇಕು. ಪ್ರಾಚೀನ ಮತ್ತು ಅರ್ವಾಚೀನ ಭಾರತೀಯ ಸಾಹಿತ್ಯವು ಹದಿನಾಲ್ಕು ಭಾಷೆಗಳ ವಿವಿಧ ಮುಖದಿಂದ ಒಂದೇ ಪ್ರೇರಣೆಯ, ಒಂದೇ ಸಂಸ್ಕೃತಿಯ ಅಮೃತವನ್ನು ಧಾರೆಯಾಗಿ ನೀಡುತ್ತದೆ ಎಂಬುದು ಎಲ್ಲ ಜನಕ್ಕೂ ತಿಳಿಯಬೇಕು. ಎಲ್ಲರಿಗೆ ಸ್ಫೂರ್ತಿಯನ್ನೀಯಬೇಕು. ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ ವಿದ್ಯಾರ್ಥಿಗಳು ಓದುವ ಪಠ್ಯ ಮತ್ತು ಪಠ್ಯೇತರ ಪುಸ್ತಕಗಳಲ್ಲಿ ಎಲ್ಲ ಭಾಷೆಗಳಲ್ಲಿಯ ಉತ್ತಮ ಕವಿಗಳ ಮತ್ತು ಅವರ ಕೃತಿಗಳ ರಸಪೂರ್ಣ ಪರಿಚಯಗಳು

ಬರಬೇಕು. **ಅವು ಹೊಸ ಕಣ್ಣನ್ನು ತೆರೆಯಿಸಬೇಕು, ಹೊಸ ಹೆಮ್ಮೆಯನ್ನು ಅರಳಿಸಬೇಕು. ಭಾರತೀಯನ ನವೀನ ವ್ಯಕ್ತಿತ್ವದ ನಾಂದಿಯಾಗಬೇಕು ಅವು.** ವೈವಿಧ್ಯದಲ್ಲಿ ಏಕತೆ ಅಂದರೇನು ಎಂಬುದನ್ನು ಅವನು ಕಾಣಬೇಕು, ಕಂಡಂತೆ ಬಾಳತೊಡಗಬೇಕು. ನಾಡಿನಲ್ಲಿಯ ಎಲ್ಲ ಮಕ್ಕಳು ಎಳೆಚಿಗುರಿನಂತಿದ್ದ ತಮ್ಮ ಎಳವೆಯಲ್ಲಿ ಭಾರತೀಯ ಸಂಸ್ಕೃತಿಯ ಗಾಳಿಯಲ್ಲಿ ಅಲುಗಾಡಿ ನಲಿದಾಡಿದರೆ, ಭಾರತೀಯ ಸಾಹಿತ್ಯದ ಸವಿಯುಂಡು ಪುಳಕಿತರಾಗಿ ಬೆಳೆಯತೊಡಗಿದರೆ, ಮುಂದೆ ಅವರಿಗೆ ಭಾರತ ಭಕ್ತಿಯನ್ನು ಒತ್ತಾಯದಿಂದ ಕಲಿಸಬೇಕಾಗಿಲ್ಲ. ಐಕ್ಯದಿನವನ್ನು ಒತ್ತೂಂಬದಿಂದ ಆಚರಿಸಬೇಕಾಗಿಲ್ಲ.

ಪ್ರಾಂತಪ್ರಾಂತದ ಜನದಲ್ಲಿ ಅನ್ಯೋನ್ಯ ಸ್ನೇಹ ಬೆಳೆಯಲೆಂದೂ ಅವರವರ ಸಾಹಿತ್ಯ ಪರಿಚಯವಾಗಲೆಂದೂ, ಪಿ. ಇ. ಎನ್, ಅಂತರಭಾರತಿ, ಸಾಹಿತ್ಯ ಅಕೆಡಮಿ ಮುಂತಾದ ಸಂಸ್ಥೆಗಳು ತಂತಮ್ಮ ರೀತಿಯಲ್ಲಿ ಬೆಲೆಯುಳ್ಳ ಕಾರ್ಯ ಮಾಡುತ್ತ ಬಂದಿರುತ್ತವೆ. ಭಾರತೀಯ ಭಾವೈಕ್ಯದ ಮಹತ್ವವನ್ನರಿತ ವಿಚಾರವಂತರು ಮತ್ತು ಕಾರ್ಯಕರ್ತರು ಇಂಥ ಸಂಸ್ಥೆಗಳ ಉತ್ಕರ್ಷಕ್ಕಾಗಿ ಹೆಚ್ಚು ಗಮನ ಕೊಡಬೇಕು. ಇವುಗಳಿಂದ ಪ್ರಕಾಶಿತವಾಗುವ ಪತ್ರಿಕೆ ಪುಸ್ತಕಗಳ ಪ್ರಸಾರವು ಜನರಲ್ಲಿ ಹೆಚ್ಚುವಂತೆ ಪ್ರಯತ್ನಿಸಬೇಕು. ಸಾಹಿತಿಗಳು ಮತ್ತು ಸಾಹಿತ್ಯ ಪ್ರೇಮಿಗಳು, ಇಷ್ಟೇಕೆ ಸಾಧ್ಯವಿದ್ದಷ್ಟು ಭಾರತೀಯರು ಭಾರತದ ಎಲ್ಲ ಪ್ರಾಂತಗಳಲ್ಲಿ ಸಂಚಾರ ಮಾಡಿ ಅಲ್ಲಲ್ಲಿಯ ಪ್ರೇಕ್ಷಣೀಯ ಸ್ಥಳಗಳನ್ನು ಕಂಡು ಜನದೊಡನೆ ಸಂಪರ್ಕ ಬೆಳೆಯಿಸಿ ಪ್ರತ್ಯಕ್ಷವಾಗಿ ಭಾರತದರ್ಶನವನ್ನು ಪಡೆಯಬೇಕು. ಹೊಸ ಬಂಧುತ್ವದ ಪರಂಪರೆಯನ್ನು ನಿರ್ಮಿಸಬೇಕು. **ತಂತಮ್ಮ ಸರಕಾರಗಳ ನೆರವಿನಿಂದ ಕನ್ನಡ ಸಾಹಿತ್ಯ ಪರಿಷತ್ತಿನಂಥ ಸಂಸ್ಥೆಗಳು ಇತರ ಪ್ರಾಂತಗಳಲ್ಲಿ ತಮ್ಮಲ್ಲಿಯ ಸಾಹಿತಿಗಳ ಸಂಚಾರವನ್ನು ಏರ್ಪಡಿಸಬೇಕು, ಅಲ್ಲಲ್ಲಿಯ ಸಾಹಿತಿಗಳ ಸಂಪರ್ಕವುಂಟಾಗುವಂಥ ಕಾರ್ಯಕ್ರಮಗಳನ್ನು ಯೋಜಿಸಬೇಕು.**

೪. ಇವೆಲ್ಲ ಕ್ರಮಗಳೊಡನೆ ಸಾಹಿತ್ಯ ಸಂಬಂಧಿಯಲ್ಲದ ಬೇರೆ ಕಾರ್ಯಗಳೂ ಐಕ್ಯಕ್ಕೆ ಪೋಷಕವಾಗಿ ನಡೆಯುವುದು ಆವಶ್ಯಕ. ಈ ದೃಷ್ಟಿಯಿಂದ, ಜನರ ಮನಸ್ಸನ್ನು ಒಡೆಯುವ ಮತ್ತು ಐಕ್ಯಕ್ಕೆ ಭಂಗ ತರುವ ರಾಜಕೀಯ, ಸಾಮಾಜಿಕ, ಆರ್ಥಿಕ ಮುಂತಾದ ಎಲ್ಲ ರಂಗಗಳಲ್ಲಿಯ ಸಮಸ್ಯೆಗಳನ್ನು ಸಣ್ಣಪುಟ್ಟವೆಂದು ಅಲ್ಲಗಳೆಯದೆ ನಾಡಿನ ಧುರೀಣರು ಸಮಂಜಸವಾದ ರೀತಿಯಲ್ಲಿ ಬಗೆಹರಿಸಬೇಕು. ವಿಚಾರಾಂತ್ಯದಲ್ಲಿ ಒಮ್ಮೆ ಮಾಡುವ ನಿರ್ಧಾರಗಳನ್ನು ಆಂದೋಲನ ಭಯದಿಂದ ಸಡಿಲಿಸಬಾರದು. ಭಾಷಾನುಗುಣ ಪ್ರಾಂತರಚನೆಯ ತತ್ತ್ವವನ್ನು ಒಪ್ಪಿಕೊಂಡಮೇಲೆ ಅದರ ಅನ್ವಯವನ್ನೂ ಕಾರ್ಯಾಚರಣೆಯನ್ನೂ ಸುಸಂಬದ್ಧ ರೀತಿಯಲ್ಲಿ ಮಾಡಬೇಕು. ಅದರಿಂದ ಎದ್ದಿರುವ ತೊಡಕು ತೊಂದರೆಗಳನ್ನು ನಂಬಲರ್ಹವಾದ ತ್ರಯಸ್ಥ ಸಮಿತಿಯ ಮೂಲಕ ಪರಿಹರಿಸಿಕೊಳ್ಳಬೇಕು. ಅದರ ತೀರ್ಮಾನಗಳಿಗೆ ಲೋಕಸಭೆಯ ಮಾನ್ಯತೆಯಿಂದ ನಿರ್ಧಾರದ ಸ್ವರೂಪ ಕೊಡಬೇಕು. ತೀರ್ಮಾನಗಳನ್ನು ಒಪ್ಪದವರು ಎಷ್ಟೇ ವಿರೋಧ ಮಾಡಿದರೂ ನಿರ್ಧಾರವನ್ನು ಬದಲಿಸಬಾರದು. ಎಲ್ಲ ಅಭಿಪ್ರಾಯಗಳನ್ನೂ ಸಂಪೂರ್ಣವಾಗಿ ಕೇಳಿಕೊಂಡು ತ್ರಯಸ್ಥ ಸಮಿತಿ ತೀರ್ಮಾನಗಳನ್ನು ಮಾಡಿರುತ್ತದೆ. ಸರಕಾರ ಮತ್ತು ಲೋಕಸಭೆ ಅವಶ್ಯ ಕಂಡ ಮಾರ್ಪಾಡುಗಳೊಡನೆ ಅವನ್ನು ಒಪ್ಪಿರುತ್ತದೆ. ಈ ವಿಷಯದ ಮೇಲೆ ಈಗ ತೆರೆ ಬಿದ್ದಿತು ಎಂಬುದು ಜನಕ್ಕೆ ತಿಳಿಯಬೇಕು. ಇದಾಗದೆ ಗಾಳಿಗೊಡ್ಡಿದ ಸೊಡರಿನಂತೆ, ಅಡ್ಡಗೋಡೆಯ ಮೇಲಿನ ದೀವಿಗೆಯಂತೆ ನಿರ್ಧಾರಗಳಾದರೆ ರಾಜಕೀಯ

ಗತ್ತುಗಾರಿಕೆ, ಚಳುವಳಿಯ ತಂತ್ರಗಾರಿಕೆ, ಹುಂಬತನದ ಪುಂಡುಗಾರಿಕೆ ಇವುಗಳ ಕೈಯಲ್ಲಿ ಸಿಕ್ಕಿ ಸ್ವಾತಂತ್ರ್ಯದ ಮತ್ತು ಪ್ರಜಾಪ್ರಭುತ್ವದ ನಂದಾದೀಪವೇ ಆರಿಹೋಗುವುದೆಂಬ ಭೀತಿ ಯುಂಟಾಗುತ್ತದೆ.

೫. ಮುಖ್ಯವಾಗಿ, ಭಾರತೀಯ ಐಕ್ಯ ಅಥವಾ ಭಾವನಾತ್ಮಕ ಏಕಾತ್ಮತೆ (Emotional Integration) ಇದಕ್ಕೆ ಕೇವಲ ಭಾವನೆ ಸಾಲದು. ಕಳೆದ ಐವತ್ತು ವರುಷಗಳ ಇತಿಹಾಸ ನೋಡಿದರೆ ಪರಕೀಯ ಸತ್ತೆಯ ಕಾಲದಲ್ಲಿ ಅದಕ್ಕೆ ಪ್ರತಿಭಟನೆಯೆಂದು ಭಾರತೀಯ ಭಾವನೆ ಉತ್ಕಟವಾಗಿ ಬೆಳೆಯಿತು. ಅದು ಹೆಚ್ಚಾಗಿ ನಿಷೇಧರೂಪ (negative) ವಾಗಿತ್ತು. ಸ್ವಾತಂತ್ರ್ಯ ಬಂದ ಮೇಲೆ ಈಗ ಬೇಕಾದದ್ದು ವಿಧಿರೂಪವಾದ (positive) ರಾಷ್ಟ್ರೀಯ ಭಾವನೆ. ಇಂಥ ಭಾವನೆ ಚಿರಸ್ಥಾಯಿಯಾಗಬೇಕಾದರೆ ನಮ್ಮ ವ್ಯಕ್ತಿತ್ವ ಮತ್ತು ಜೀವನದಲ್ಲಿ ಭಾವನೆ, ವಿಚಾರ, ಸಂಕಲ್ಪಗಳ ಹಾಗೂ ದೇಹ, ಮನಸ್ಸು, ಪ್ರಾಣ, ಆತ್ಮ ಇವುಗಳ ಸಮಗ್ರೀಕರಣ ಅಂದರೆ ಸಮನ್ವಯವಾಗಬೇಕು. ನಾಡು ವಿಶಾಲವಾದ ಆಧ್ಯಾತ್ಮಿಕ ತಳಹದಿಯ ಮೇಲೆ ಈ ಸಮನ್ವಯಕ್ಕಾಗಿ ತಪಸ್ಸನ್ನು ಆಚರಿಸಬೇಕು. ಸಮನ್ವಿತವಾದ ವ್ಯಾಪಕ ವ್ಯಕ್ತಿತ್ವದಲ್ಲಿಯೇ ರಾಷ್ಟ್ರೀಯ ಐಕ್ಯವು ಸಹಜ ಸಂಪನ್ನವಾಗಿ ಮೆರೆಯುತ್ತಿದೆ. ಭಿನ್ನ ಭಿನ್ನ ಧರ್ಮ, ಮತ, ಪಂಥ, ಭಾಷೆ, ವಿವಿಧ ಸಾಹಿತ್ಯ, ವಿವಿಧ ಪರಂಪರೆ ಇವುಗಳಿಂದ ಕೂಡಿದ ಭಾರತೀಯ ಸಂಸ್ಕೃತಿಯ ಪ್ರತೀಕವಾದ ಭಾರತ ರಾಷ್ಟ್ರದ ಅಭಿಮಾನ, ಭಾರತೀಯ ಭಾವೈಕ್ಯ ಒಂದು ಸರಿಯಾದ ತೂಕದಲ್ಲಿ ನೆಲೆಯೂರಿ ನಿಲ್ಲುವುದು ನಾಳೆ ಬೆಳಗಾದರೆ ಕಾಣುವ ಸಂಗತಿಯಲ್ಲ. **ಇದಕ್ಕಾಗಿ ಐದು ವರ್ಷದ ಆರ್ಥಿಕ ಯೋಜನೆಯೊಡನೆ ಐವತ್ತು ವರ್ಷದ ಸಾಂಸ್ಕೃತಿಕ ಯೋಜನೆಯನ್ನೂ ಮಾಡಬೇಕಾಗುತ್ತದೆ.** ತಿಳಿವಳಿಕೆ, ತಾಳ್ಮೆ, ತ್ಯಾಗ ಇವುಗಳ ಬಲದಿಂದ ಕ್ರಮೇಣ ಐಕ್ಯವನ್ನು ಸಾಧಿಸಬಲ್ಲೆವು ಎಂಬ ಶ್ರದ್ಧೆ ಮಾತ್ರ ಬೇಕು. ಇತಿಹಾಸ ಮತ್ತು ಪರಂಪರೆಯ ಪರಿಣಾಮವಾಗಿ ನಮ್ಮನ್ನು ಅಂಟಿಕೊಂಡು ಬಂದ ದೋಷ ದೌರ್ಬಲ್ಯಗಳ ಎಣ್ಣೆಜಿಡ್ಡನ್ನು ನಾವು ಬೇಗನೆ ತೊಡೆದುಹಾಕಲಾರೆವು. ಪರಕೀಯ ಸತ್ತೆ ಬಿತ್ತಿದ ವಿಷಬೀಜಗಳನ್ನು ನಾವು ಕೂಡಲೇ ಕಿತ್ತೊಗೆಯಲಾರೆವು. ನಮ್ಮ ಸಂಸ್ಕೃತಿಯ ಮೂಲ ಪ್ರವಾಹ ನಿರ್ಮಲವಾಗಿದೆ, ಗತಿಶೀಲವಾಗಿದೆ. ಮೇಲೆ ಹರಡಿದ ಹಾವಸೆಯನ್ನು ಸರಿಸಲು ಮಾತ್ರ ಕಾಲ ಬೇಕು. ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಹೀಗೆ ಅನೇಕ ಸಮ್ಮುಖಗಳಲ್ಲಿ ಒಂದೇ ಹೊತ್ತಿಗೆ ನಮ್ಮ ಅಂತಃಶತ್ರುಗಳ ಮೇಲೆ ದಾಳಿ ಮಾಡಿ ನಾವು ಗೆಲುವನ್ನು ಪಡೆಯ ಬೇಕಾಗಿದೆ. ಶಿಕ್ಷಣದ ಎಲ್ಲ ಹಂತಗಳಲ್ಲಿ ಐಕ್ಯಸಾಧಕ ಕ್ರಮಗಳನ್ನು ಕೈಕೊಂಡು ಹೊಸ ಪೀಳಿಗೆಯ ವ್ಯಕ್ತಿತ್ವದಲ್ಲಿ ಭಾರತೀಯತ್ವವನ್ನು ಸ್ಥಿರಗೊಳಿಸಲು ಯತ್ನಿಸಬೇಕಾಗಿದೆ. ನಮ್ಮ ಭಾರತೀಯ ಐಕ್ಯದ ಭಾವನೆ ವಿಚಾರದ ಗಟ್ಟಿತಳಹದಿಯ ಮೇಲೆ ನಿಲ್ಲುವಂತೆ ಭಾರತೀಯ ಇತಿಹಾಸ, ಪರಂಪರೆ, ಭಾಷೆ, ಸಾಹಿತ್ಯ—ಇವುಗಳ ವೈವಿಧ್ಯದ ಮತ್ತು ಅವುಗಳಲ್ಲಿ ಅನುಸ್ಯೂತ ವಾದ ಐಕ್ಯದ ದರ್ಶನವನ್ನು ಜನಕ್ಕೆ ಮಾಡಿಕೊಡಬೇಕಾಗಿದೆ. ವಿಚಾರ ಮತ್ತು ತರ್ಕಗಳಿಗೆ ಒಪ್ಪಿಗೆಯಾಗದ ಭಾವನೆ ಸುಸ್ಥಿರವಾಗಿ ನಿಲ್ಲಲಾರದು, ಬೆಳೆಯಲಾರದು.

## ಭಾಷೆಗಳ ಸಮಸ್ಯೆ

ಭಾರತೀಯ ಐಕ್ಯ ಸಾಧನೆಗಾಗಿ ನಮ್ಮ ಭಾಷೆಗಳ ವಿಷಯದಲ್ಲಿ ಒಂದು ಸಮಂಜಸವಾದ ವಿಚಾರಪ್ರಣಾಲಿ ಮತ್ತು ಧೋರಣೆ ಆವಶ್ಯಕವಾಗಿವೆ. ಈವರೆಗೆ ನಡೆದ ವಿಚಾರಮಂಥನದಿಂದ

ಹಾಗೂ ಅನುಭವದಿಂದ ರಾಷ್ಟ್ರೀಯ ಮಟ್ಟದಲ್ಲಿ ಕೆಲವು ನಿರ್ಣಯಗಳಾಗಿ ಅವು ಕಾರ್ಯಗತವಾಗಿವೆ. ಆದರೆ ಅವಕ್ಕೆ ವಿರುದ್ಧ ಪ್ರತಿಕ್ರಿಯೆಗಳೂ ತೀವ್ರವಾಗಿ ತಲೆಯೆತ್ತಿವೆ. ಅವನ್ನೆಲ್ಲ ಅರಿತುಕೊಂಡು ಭಾವನಾವಶವಾಗದೆ ಅವಶ್ಯಕಂಡ ವ್ಯತ್ಯಾಸಗಳನ್ನು ರಾಷ್ಟ್ರಹಿತದೃಷ್ಟಿಯಿಂದ ಮಾಡಬೇಕು. ಭಾರತದಲ್ಲಿ ಪ್ರಮುಖವೆಂದು ಮನ್ನಣೆ ಪಡೆದ ಹದಿನಾಲ್ಕು ಭಾಷೆಗಳಿವೆ. ಅವೆಷ್ಟೋ ಉಪಭಾಷೆಗಳಿವೆ. ಹದಿನಾಲ್ಕರಲ್ಲಿ ಒಂದಾದ ಹಿಂದೀ ಭಾಷೆ 'ರಾಷ್ಟ್ರಭಾಷೆ' ಎಂದು ಪರಿಗಣಿಸಲಾಗಿದೆ. ಈ ತತ್ವದ ಅನ್ವಯದಲ್ಲಿ ಮತಭೇದ ಹುಟ್ಟಿದೆ, ಭಾವನೆ ಕೆರಳಿದೆ. ಸ್ವಲ್ಪದರಲ್ಲಿ ಹೇಳುವದಾದರೆ, ಹಿಂದಿಯ ಬಗ್ಗೆ ಉತ್ತರದವರ ದುಡುಕು, ಅದರಿಂದ ದಕ್ಷಿಣದವರಿಗೆ ಆದ ಮಿಡುಕು, ಇದರಿಂದ ಭಾರತದ ಒಡಕು ಎದ್ದುಕಾಣುವಂತಾಗಿದೆ. ಇಂಗ್ಲಿಷೇ ರಾಷ್ಟ್ರೀಯ, ಅಂತರರಾಷ್ಟ್ರೀಯ ಸೌಕರ್ಯದೃಷ್ಟಿಯಿಂದ ರಾಷ್ಟ್ರಭಾಷೆಯಾಗಲಿ ಎಂದು ಪ್ರತಿಪಾದಿಸುವ ವಿಚಾರವಂತರಿದ್ದಾರೆ. ಸಂಸ್ಕೃತವು ಈ ಸ್ಥಾನಕ್ಕೆ ಅತ್ಯಂತ ಯೋಗ್ಯವೆಂದು ಗಂಭೀರವಾಗಿ ಸಾಧಿಸುವವರಿದ್ದಾರೆ. ಯಾವೊಂದು ಪ್ರಾದೇಶಿಕ ಭಾಷೆ ರಾಷ್ಟ್ರಭಾಷೆಯಾದರೆ ಆ ಭಾಷೆಯನ್ನಾಡುವ ಜನಕ್ಕೆ ರಾಷ್ಟ್ರೀಯ ರಂಗದಲ್ಲಿ ಹೆಚ್ಚಿನ ಸೌಕರ್ಯಗಳೂ ಲಾಭಗಳೂ ದೊರೆಯುತ್ತವೆ. ಅವರಷ್ಟು ಸುಲಭವಾಗಿ ಅದನ್ನು ಆಡಲಾರದ ಇತರ ಭಾಷಿಕರಿಗೆ ಅನ್ಯಾಯವಾಗುವ ಸಂಭವವಿರುತ್ತದೆ; ಇದನ್ನು ತಪ್ಪಿಸಲು ಎಲ್ಲರಿಗೂ ಅಷ್ಟೇ ಶ್ರಮಸಾಧ್ಯವಾದ ಇಂಗ್ಲಿಷು ರಾಷ್ಟ್ರಭಾಷೆಯಾಗಲಿ ಎಂದು ಹೇಳುವುದುಂಟು. ಈ ವಾದದಲ್ಲಿ ಅಡಕವಾದ ಭೀತಿಯನ್ನೂ ದುಃಖವನ್ನೂ ಅರಿತುಕೊಳ್ಳಬೇಕು. ಜೊತೆಗೆ ಇಂಗ್ಲಿಷು ಎಷ್ಟೇ ಪ್ರಗತಭಾಷೆಯಾದರೂ ಈ ದೇಶದ ಸರ್ವಜನದಲ್ಲಿ ಅದು ಬೇರುಬಿಡಲಾರದು, ಬಿಡುವುದು ಇಷ್ಟವಲ್ಲ ಎಂಬುದನ್ನು ಅದರ ಪರವಾಗಿ ವಾದಮಾಡುವವರು ಅರಿಯಬೇಕು. ಹಿಂದೀ ಇದು ಬರೀ ಒಂದು ಪ್ರಾದೇಶಿಕ ಭಾಷೆಯಲ್ಲ. ಅಂತರ್‌ರಾಜ್ಯ ವ್ಯವಹಾರಕ್ಕೆ ಅದನ್ನು ಭಾರತದ ಅನೇಕ ಭಾಗಗಳಲ್ಲಿ ಬಳಸುತ್ತಿದ್ದಾರೆ. ಈ ದೃಷ್ಟಿಯಿಂದ ಅದು ನಮ್ಮ ರಾಷ್ಟ್ರಭಾಷೆಯೆಂಬ ನಿರ್ಣಯವು ಯೋಗ್ಯವಾಗಿದೆ. ಎರಡು ಮಾತ್ರ ಪಥ್ಯಗಳನ್ನು ಪಾಲಿಸಬೇಕು. ಒಂದು, ಇತರ ಪ್ರಾದೇಶಿಕ ಭಾಷೆಗಳಿಂದ ಶಬ್ದಗಳನ್ನೂ ಪ್ರಯೋಗಗಳನ್ನೂ ಅವಶ್ಯಕಂಡಲ್ಲಿ ಸೇರಿಸಿ ಅದನ್ನು ರಾಷ್ಟ್ರೀಯ ಯೋಗ್ಯತೆಯ ನವಹಿಂದಿಯನ್ನಾಗಿ ಬೆಳೆಸಬೇಕು. ಇತರ ಭಾಷಿಕರು ಅದನ್ನು ಕಲಿಯುವುದಕ್ಕೆ ಸುಕರವಾಗುವಂತೆ ಮಾರ್ಪಾಟುಗಳನ್ನು ಮಾಡಬೇಕು. ಪ್ರಾದೇಶಿಕ ಹಿಂದಿಯಲ್ಲಿಯೂ ಪ್ರಭೇದಗಳುಂಟು, ಆದರೆ ಹಿಂದಿಯ ಈ ಹೊಸ ಅವತಾರ ಅಥವಾ ನವಹಿಂದಿ ಒಂದು ಪ್ರಮಾಣಭೂತವಾದ ಭಾರತದ ಭಾರತಿಯಾಗಿ ಭಾರತೀಯರಿಗೆಲ್ಲ ಗ್ರಾಹ್ಯವೂ ಆದರಣೀಯವೂ ಆಗಬೇಕು. ಈ ದೃಷ್ಟಿಯಿಂದ ಸಂಶೋಧನೆ ಮತ್ತು ವ್ಯವಹಾರ ಪ್ರಾರಂಭವಾಗುವುದು ಅವಶ್ಯ. ಎರಡು, ಭಾರತೀಯರಿಗೆಲ್ಲ ವಿಶೇಷವಾಗಿ ಅಹಿಂದೀ ಭಾಷಿಕರಿಗೆ ಗ್ರಾಹ್ಯವಾಗುವವರೆಗೆ ಅದನ್ನು ಕಡ್ಡಾಯವಾಗಿ ಕಾಯಿದೆಯಿಂದ ಒತ್ತಾಯಿಸಕೂಡದು. ಹಿಂದಿ ಮತ್ತು ಇಂಗ್ಲಿಷು ಇವೆರಡೂ ಕೆಲಕಾಲ ಲೋಕಸಭೆಯ ಮತ್ತು ಅಂತರ್‌ರಾಜ್ಯ ವ್ಯವಹಾರದ ಭಾಷೆಯಾಗಿರಲಿ ಎಂಬ ನಿರ್ಣಯವು ಸಮಂಜಸವೆಂದು ತೋರುತ್ತದೆ. ನಮ್ಮ ಪ್ರಧಾನ ಮಂತ್ರಿಗಳ ಧೋರಣವು ಈ ವಿಷಯದಲ್ಲಿ ವಿವೇಕಯುಕ್ತವೂ ಮಾರ್ಗದರ್ಶಿಯೂ ಆಗಿರುತ್ತದೆ. ನವಹಿಂದಿ ರಾಷ್ಟ್ರಭಾಷೆ, ದೇಶದ ಎಲ್ಲ ಪ್ರಮುಖ ಭಾಷೆಗಳು ರಾಷ್ಟ್ರೀಯ ಭಾಷೆಗಳು ಎಂಬ ಸೂತ್ರವನ್ನು ತ್ರಿಕರಣಪೂರ್ವಕವಾಗಿ ನಾವು ಪಾಲಿಸಬೇಕು.

ಈ ಸೂತ್ರಕ್ಕೆ ಅನುಸರಿಸಿ ವಿದ್ಯಾಭ್ಯಾಸ ವ್ಯವಸ್ಥೆಯಲ್ಲಿ ತ್ರಿಭಾಷೆಗಳ ನಿಯಮವೊಂದು ಸಿದ್ಧವಾಗಿದೆ. ಪ್ರಾದೇಶಿಕ ಭಾಷೆ, ಹಿಂದಿ, ಇಂಗ್ಲಿಷು ಈ ಮೂರು ಭಾಷೆಗಳನ್ನು ಎಲ್ಲ ಭಾರತೀಯ ವಿದ್ಯಾರ್ಥಿಗಳು ಬೇರೆ ಬೇರೆ ಮಟ್ಟದಲ್ಲಿ ಕಲಿಯಲೇಬೇಕೆಂಬುದು ತ್ರಿಭಾಷಾ ನಿಯಮದ ಅರ್ಥ. ಹಿಂದಿಯೇ ಪ್ರಾದೇಶಿಕ ಭಾಷೆಯಾಗಿರುವಲ್ಲಿ ಇನ್ನೊಂದು ಪ್ರಾದೇಶಿಕ ಭಾಷೆಯನ್ನು ಕಲಿಯುವುದು ಅವಶ್ಯವೆಂದು ಅದರಲ್ಲಿ ಗೃಹೀತವಾಗಿದೆ. ಒಟ್ಟಿನಲ್ಲಿ ಇದು ಒಪ್ಪತಕ್ಕ ಮಾತಾದರೂ ವ್ಯವಹಾರದಲ್ಲಿ ಉಂಟಾಗುವ ಕೆಲವು ತೊಂದರೆಗಳನ್ನು ನಾವು ಗಮನಿಸಬೇಕು. ಹಿಂದಿಯನ್ನು ಕಡ್ಡಾಯವಾಗಿ ಕಲಿಯುವ ವಿಷಯದಲ್ಲಿ ಹಿಂದೀ ಭಾಷಿಕರಲ್ಲದವರಲ್ಲಿ ಹೇಗೆ ಅನಿಚ್ಛೆಯ ಭಾಗವಿರಬಹುದೊ, ಹಾಗೆ ಬೇರೆ ಪ್ರಾದೇಶಿಕ ಭಾಷೆಯನ್ನು ಕಲಿಯುವ ಬಗ್ಗೆ ಹಿಂದೀ ಭಾಷಿಕರಲ್ಲಿ ಅನಿಚ್ಛೆಯ ಭಾಗವಿರಬಹುದು. ಭಾಷಾ ವಿಷಯಕವಾದ ರಾಷ್ಟ್ರೀಯ ಘೋಷಣವನ್ನು ಜನತೆ ಮನಸಾರೆ ಒಪ್ಪುವವರೆಗೆ ಕೆಲವು ವರ್ಷ ಇದು ಅಪರಿಹಾರ್ಯ. ಆದರೆ ಅಪರಿಹಾರ್ಯವೆಂದು ಅನಾವಶ್ಯಕವಾದ ಭಾರವನ್ನು ಮಾತ್ರ ಹೇರಕೂಡದು. ಆದ್ದರಿಂದ ಹಿಂದಿ ಮತ್ತು ಇತರ ಪ್ರಾದೇಶಿಕ ಭಾಷೆ ಈ ಎರಡನ್ನೂ ಹಿಂದೀ ಭಾಷಿಕ ಪ್ರಾಂತಗಳಲ್ಲಿ ಹಾಗೂ ಪ್ರಾದೇಶಿಕ ಭಾಷೆ ಮತ್ತು ಹಿಂದಿ ಇವೆರಡನ್ನು ಇತರ ಪ್ರಾಂತಗಳಲ್ಲಿ ಪ್ರಾಥಮಿಕ ಅವಸ್ಥೆಯ ಏಳನೆಯ ಇಯತ್ತೆಯ ಕೊನೆಯವರೆಗೆ ಮಾತ್ರ ಅವಶ್ಯವಾಗಿಡಬೇಕು. ದೇಶವಲ್ಲೆಲ್ಲ ಎರಡನೆಯ ಭಾಷೆಯಾಗಿ ಕಡ್ಡಾಯವಾಗಿ ಕಲಿಯುವ ಹಿಂದಿ ಅಥವಾ ಇತರ ಪ್ರಾದೇಶಿಕ ಭಾಷೆ ಇವುಗಳ ಶೈಕ್ಷಣಿಕ ಮಟ್ಟ ಒಂದೇ ಸಮನಾಗಿರಬೇಕು. ಅದರಲ್ಲಿ ಹೆಚ್ಚುಕಡಿಮೆಯಾಗದಂತೆ ಎಚ್ಚರ ವಹಿಸಬೇಕು. ಇದರ ಪರಿಣಾಮವಾಗಿ ಮೊದಲನೆಯ ಇಯತ್ತೆಯಿಂದ ಏಳರ ಕೊನೆಯವರೆಗೆ ಕೇವಲ ಪ್ರಾದೇಶಿಕ, ಐದನೆಯ ಇಯತ್ತೆಯಿಂದ ಏಳರ ಕೊನೆಯವರೆಗೆ ಹಿಂದಿ ಅಥವಾ ಪ್ರಾದೇಶಿಕ(ಆಯಾ ಪ್ರಾಂತಕ್ಕೆ ಅನುಸರಿಸಿ) ಮತ್ತು ಇಂಗ್ಲಿಷು ಹೀಗೆ ಅವಶ್ಯ ಭಾಷೆಗಳ ಕಲಿವು ನಡೆಯಬೇಕು. ಎಂಟರಿಂದ ಮುಂದೆ ಮಾಧ್ಯಮಿಕ ಅವಸ್ಥೆ ಪೂರ್ಣವಾಗುವವರೆಗೆ ಪ್ರಾದೇಶಿಕ ಭಾಷೆ ಮತ್ತು ಇಂಗ್ಲಿಷು ಇವೆರಡೇ ಕಡ್ಡಾಯವಾಗಿರಬೇಕು, ಹಿಂದಿ ಇಲ್ಲವೆ ಇತರ ಪ್ರಾದೇಶಿಕ ಐಚ್ಛಿಕವಾಗಬೇಕು. ಸಂಸ್ಕೃತವೂ ಐಚ್ಛಿಕವಾಗಬೇಕು. ಆದರೆ ಪ್ರಾದೇಶಿಕ ಭಾಷೆಯನ್ನು ಕಲಿಸುವಾಗ ಆಯಾ ಭಾಷೆಗೆ ಸಂಬಂಧಪಟ್ಟ ಸಂಸ್ಕೃತ ಪ್ರಭಾವವನ್ನು ಅವಶ್ಯವಾಗಿ ತಿಳಿಸಿ ಹೇಳಬೇಕು. ಕಾಲೇಜು ಅಥವಾ ಮಹಾವಿದ್ಯಾಲಯದ ಅವಸ್ಥೆಯಲ್ಲಿ ಪ್ರಾದೇಶಿಕ ಭಾಷೆ ಮತ್ತು ಇಂಗ್ಲಿಷು ಇವು ಅವಶ್ಯ, ಉಳಿದುವು ಐಚ್ಛಿಕವಾಗಬೇಕು. ಈ ಯೋಜನೆಯಲ್ಲಿ ಅಡಕವಾದ ಅನೇಕ ವಿವರಗಳನ್ನು ಹೇಳಲು ಇದು ಸಂದರ್ಭವಲ್ಲ. ಮಾತೃಭಾಷೆ ಮತ್ತು ಪ್ರಾದೇಶಿಕ ಭಾಷೆ ಬೇರೆಯಾಗಿದ್ದಾಗ ಒಂದು ಪ್ರಾಂತದ ಮಧ್ಯಭಾಗದಲ್ಲಿ ಎರಡರ ಅಭ್ಯಾಸವು ಕಡ್ಡಾಯವಾಗಬೇಕು; ಮಾತೃಭಾಷೆ ಮೊದಲು, ಆಮೇಲೆ ಮೂರನೆಯ ಅಥವಾ ನಾಲ್ಕನೆಯ ಇಯತ್ತೆಯಿಂದ ಪ್ರಾದೇಶಿಕ ಎಂಬ ನಿಯಮವನ್ನು ಮಾಡಬಹುದು. ಪ್ರಾಂತದ ಗಡಿಗಳಲ್ಲಿ ಮಾತ್ರ ಕೆಲವು ಕಾಲ ಪ್ರಾದೇಶಿಕವನ್ನು ಐಚ್ಛಿಕವಾಗಿಡುವುದೇ ಮೇಲು. ಒಟ್ಟಿನಲ್ಲಿ ನಮ್ಮ ಶಿಕ್ಷಣ ಪದ್ಧತಿಯಲ್ಲಿ ಭಾಷಾಭ್ಯಾಸದ ವ್ಯವಸ್ಥೆಯನ್ನು ಈರೀತಿ ಮಾಡುವುದರಿಂದ ಭಾಷಾವಿಷಯಕ ಸಂಘರ್ಷಗಳು ಅಳಿದು, ಸ್ನೇಹ ಸೌಹಾರ್ದಗಳು ಬೆಳೆದು ರಾಷ್ಟ್ರೀಯ ಐಕ್ಯಕ್ಕೆ ಬೇಕಾದ ವಾತಾವರಣವು ಉಂಟಾದೀತು ಎಂಬುದೇ ನಮ್ಮ ಮುಖ್ಯ ಮನೋಭಾವ.

ದೇಶಕ್ಕೆಲ್ಲ ಒಂದೇ ಲಿಪಿಯಿರಬೇಕು, ಅದರಿಂದ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯಲು ಸುಲಭವಾಗುತ್ತದೆ ಎಂಬುದನ್ನು ಹಲವು ವಿಚಾರವಂತರು ಹೇಳುತ್ತ ಬಂದಿದ್ದಾರೆ. ಈ ಸಮಾನ ಲಿಪಿ ದೇವನಾಗರಿಯಾಗಬೇಕೆಂದು ಅನೇಕರು ಅಭಿಪ್ರಾಯಪಡುತ್ತಾರೆ. ಭಾರತೀಯ ಭಾಷೆಗಳಿಗೂ ಅನುಕೂಲ ಎಂಬ ದೃಷ್ಟಿಯಿಂದ ರೋಮನ್ ಲಿಪಿಯೇ ಸಾರ್ವತ್ರಿಕವಾಗಲಿ ಎಂದು ಕೆಲವರು ವಾದಿಸುತ್ತಾರೆ. ಸಮಾನ ಭಾಷೆಯ ವಿಷಯದಲ್ಲಿ ಹೇಗೋ ಹಾಗೆ ಸಮಾನ ಲಿಪಿಯ ವಿಷಯದಲ್ಲಿಯೂ ಭಾವಾವೇಶವಿದೆ, ಸಂಘರ್ಷದ ಬೀಜವಿದೆ. ಭಾರತೀಯ ಐಕ್ಯಕ್ಕೆ ಪೋಷಕವೆಂದು ಬದಲಾವಣೆಯನ್ನು ಮಾಡಹೋಗಿ ಅದಕ್ಕೆ ಬಾಧಕವಾಗುವಂಥ ಹೆಜ್ಜೆಯನ್ನಿಡುವುದು ಯುಕ್ತವಲ್ಲ. ಸಮಾನ ಲಿಪಿಯಲ್ಲಿ ಸೌಕರ್ಯಗಳಿವೆ, ತೊಂದರೆಗಳೂ ಇವೆ. ಪ್ರತಿಯೊಂದು ಭಾಷೆಯಲ್ಲಿಯ ಹಳೆಯ ಹೊಸ ಗ್ರಂಥಗಳನ್ನು ಸಮಾನ ಲಿಪಿಯಲ್ಲಿ ಮುದ್ರಿಸಬೇಡವೆ? ಪ್ರಾದೇಶಿಕ ಲಿಪಿಯನ್ನರಿಯದ ಹೊಸ ಮಕ್ಕಳು ತಂತಮ್ಮ ಭಾಷೆಯಲ್ಲಿಯ ಸಾಹಿತ್ಯವನ್ನು ಓದುವುದು ಹೇಗೆ? ಇದಕ್ಕೆಲ್ಲ ಎಷ್ಟು ರಾಷ್ಟ್ರೀಯ ಧನದ ವೆಚ್ಚವಾಗಬೇಕಲ್ಲ! ಅಲ್ಲದೆ ಪ್ರಾದೇಶಿಕ ಲಿಪಿಯಲ್ಲಿದ್ದ ಈಗಿನ ಎಲ್ಲ ಪುಸ್ತಕಗಳ ಗತಿಯೇನು? ದೇವನಾಗರಿ ಲಿಪಿಯಾದರೆ ಕೆಲವು ಭಾಷೆಗಳಿಗೆ ಈ ತೊಂದರೆಯಿಲ್ಲ. ಆದರೆ ಹೊಸ ಸಮಾನ ಲಿಪಿ ತದ್ರೂಪ ದೇವನಾಗರಿಯಾಗಲಾರದು. ಎಲ್ಲ ಭಾಷೆಗಳಲ್ಲಿಯ ಎಲ್ಲ ಉಚ್ಚಾರಗಳಿಗೆ ಅಕ್ಷರಗಳನ್ನೂ ಸಂಕೇತಗಳನ್ನೂ ಅದರಲ್ಲಿ ಅಳವಡಿಸಬೇಕಾಗುತ್ತದೆ. ನನ್ನ ಮಟ್ಟಿಗೆ ಈ ಹವ್ಯಾಸವನ್ನು ಸದ್ಯಃ ಬಿಟ್ಟುಬಿಡುವದು ಯುಕ್ತವೆಂದು ಕಾಣುತ್ತದೆ. ಭಾಷೆಯನ್ನು ಕಲಿಯಬೇಕೆಂಬ ಇಚ್ಛೆ ತೀವ್ರವಾಗಿರುವಾಗ ಹೊಸ ಲಿಪಿಯನ್ನೂ ಕಲಿಯಬಹುದು. ಲಿಪಿಯೊಂದು ಗೊತ್ತಿದ್ದ ಮಾತ್ರಕ್ಕೆ ಹೊಸ ಭಾಷೆಯನ್ನೂ ಕಲಿಯುವುದು ಸುಲಭವೆಂದೇನಲ್ಲ. ಸಮಾನ ಭಾರತೀಯ ಲಿಪಿಯಾಗದೆ ಹೋಗಲಿ, ಬಹುಮಟ್ಟಿಗೆ ಮೊದಲಿನಂತೆ ಸಮಾನವಾದ ಲಿಪಿಗಳು ಒಂದಾಗಬೇಡವೆ? ಈ ದೃಷ್ಟಿಯಿಂದ ಕನ್ನಡ-ತೆಲುಗು ಲಿಪಿಗಳ ಸಮೀಕರಣದ ಪ್ರಯತ್ನಗಳು ಎರಡೂ ಪ್ರಾಂತಗಳಲ್ಲಿ ನಡೆದಿವೆ. ಎರಡೂ ರಾಜ್ಯ ಸರಕಾರಗಳು ಮತ್ತು ಸಾಹಿತ್ಯ ಸಮ್ಮೇಲನಗಳು ಸಮೀಕರಣ ತತ್ವಕ್ಕೆ ಒಪ್ಪಿಗೆಯಿತ್ತಿವೆ. ಆಂಧ್ರ ಪ್ರದೇಶದ ಸರಕಾರವು ಈ ಬಗ್ಗೆ ನೇಮಕ ಮಾಡಿದ ಸಮಿತಿ ತನ್ನ ವರದಿಯನ್ನು ಜನಾಭಿಪ್ರಾಯಕ್ಕಾಗಿ ಇತ್ತೀಚೆಗೆ ಪ್ರಕಟಿಸಿರುವುದೆಂದು ತಿಳಿದಿದೆ. ಎರಡೂ ರಾಜ್ಯಗಳಲ್ಲಿಯ ತಜ್ಞರ ಸಮಿತಿ ಸೇರಿ ಈ ವಿಷಯವನ್ನು ಅವಶ್ಯಕವಾಗಿ ಪರ್ಯಾಲೋಚಿಸಬೇಕು. ಸಮೀಕರಣವು ಸಂಘರ್ಷವಿಲ್ಲದೆ ಸಾಧ್ಯವಾಗುತ್ತಿದ್ದರೆ ಅದು ಹಿತಕರವಾದುದು. ಸಣ್ಣ ಪುಟ್ಟ ಅಂಶಗಳಲ್ಲಿ ಮತಭೇದ ಹುಟ್ಟಿ ಜಗಳದ ಮೊಳಕೆ ಮರವಾಗುವದಾದರೆ ಮಾತ್ರ ಈ ಪ್ರಶ್ನೆಯನ್ನು ಮುಂದಕ್ಕೆ ಹಾಕುವುದು ಹೆಚ್ಚು ಹಿತಕರವೆಂದು ತೋರುತ್ತದೆ.

## ಕರ್ನಾಟಕದ ಸತ್ಯಸೃಷ್ಟಿ

ರಾಷ್ಟ್ರೀಯ ಐಕ್ಯವು ಸುದೃಢವಾಗಬೇಕಾದರೆ ರಾಷ್ಟ್ರದ ಘಟಕಗಳಾದ ಪ್ರಾಂತಗಳು ತಂತಮ್ಮೊಳಗಿನ ಸಮಸ್ಯೆಗಳನ್ನು ರಾಷ್ಟ್ರೀಯ ಹಿತದೃಷ್ಟಿಯಿಂದ ಪರಿಹರಿಸಿಕೊಂಡು ಅನ್ಯೋನ್ಯ ಸ್ನೇಹ ಸಹಕಾರಗಳನ್ನು ಹೆಚ್ಚುಹೆಚ್ಚಾಗಿ ದೃಢಗೊಳಿಸಬೇಕು. ಈ ಬಗೆಯ ಬಂಧುತ್ವ ಬೆಳೆಯುವುದಕ್ಕೆ ಪ್ರಾಂತೀಯ ಜೀವನದಲ್ಲಿ ಮೊದಲು ಅನ್ಯೋನ್ಯ ಭಾವವು ಕಂಡುಬರಬೇಕು. ಭಾಷಾನುಗುಣ ಪ್ರಾಂತರಚನೆ ಪೂರ್ಣಗೊಂಡ ಮೇಲೆ, ಒಂದು ಭಾಷೆಯನ್ನಾಡುವ ಜನರು

ಒಂದಾಗಿ ತಮ್ಮ ಪ್ರಗತಿಯನ್ನು ಸಾಧಿಸಿ ರಾಷ್ಟ್ರ ಪ್ರಗತಿಗೆ ಪೋಷಕರಾಗುವರು ಎಂಬ ನಂಬಿಕೆಯಿತ್ತು. ಕೆಲವು ಪ್ರಾಂತಗಳಲ್ಲಿ ಈ ನಂಬಿಕೆ ಬಹುಮಟ್ಟಿಗೆ ನಿಜಗೊಂಡಿದೆ. ಕರ್ನಾಟಕದಲ್ಲಿಯ ಪರಿಸ್ಥಿತಿಯೇನು ಎಂಬುದನ್ನು ನಿರ್ವಿಕಾರವಾಗಿ ಪರೀಕ್ಷಿಸಬೇಕು. ಹಿಂದೆ ಹದಿನೆಂಟು ಆಡಳಿತಗಳಲ್ಲಿ ಹುಚ್ಚು ಹುಚ್ಚಾಗಿ ಹಂಚಿಹೋದ ಕರ್ನಾಟಕವು ಒಂದು ರಾಜ್ಯವಾದೀತೇ ಎಂಬ ಹೆದರಿಕೆ ನಮ್ಮ ಮನದಲ್ಲಿ ಮನೆಮಾಡಿತ್ತು. ಭಾರತವು ಸ್ವತಂತ್ರವಾದ ಮೇಲೆ ಕರ್ನಾಟಕದ ಏಕೀಕರಣವಾಗಲು ಒಂಬತ್ತು ವರುಷಗಳು ಹಿಡಿದುವು. ಕರ್ನಾಟಕ ಪ್ರಾಂತವು ಕನಸಿನ ರಾಜ್ಯದಿಂದ ಸತ್ಯಸೃಷ್ಟಿಗಿಳಿಯಿತು; ಕನಸನ್ನು ಕಂಡವರಿಗೆಲ್ಲ ಅತ್ಯಾನಂದವಾಯಿತು. ಆದರೆ ಪ್ರಾಂತರಚನೆಯಾದ ಕಾಲದಿಂದ ಈವರೆಗಿನ ವಿದ್ಯಮಾನಗಳನ್ನು ಕಣ್ಣಿಟ್ಟು ನೋಡಿದರೆ ಕನಸಿನ ರಾಜ್ಯಕ್ಕಿಂತ ಸತ್ಯಸೃಷ್ಟಿಯೆ ಬೇರೆ ಎಂಬ ಅನುಭವವು ಬರುತ್ತಿದೆ. ಈ ಅನುಭವಕ್ಕೆ ಕಾರಣವಾದ ರಾಜಕೀಯ ಘಟನೆಗಳು, ಜನಜೀವನದ ಮೇಲಾದ ಅವರ ಪರಿಣಾಮಗಳು ಇವುಗಳ ಪೃಥಕ್ಕರಣವು ಈ ಸಂದರ್ಭಕ್ಕೆ ಪ್ರಸಕ್ತವಲ್ಲ. ಕರ್ನಾಟಕ ಪ್ರಾಂತದ ಬೇಡಿಕೆಯಲ್ಲಿ ಸೂಚಿತವಾದ ವಿಚಾರ ಪ್ರಣಾಲಿ ಅಥವಾ ತತ್ವಜ್ಞಾನವು ಎಷ್ಟರಮಟ್ಟಿಗೆ ಇಂದು ಮನ್ನಣೆಯನ್ನು ಪಡೆದಿದೆ? ಕನ್ನಡಿಗರು ತಮ್ಮತಮ್ಮಲ್ಲಿಯ ಭೇದಗಳನ್ನು ಮೀರಿ ಎಷ್ಟು ಹತ್ತಿರ ಹತ್ತಿರ ಬಂದಿದ್ದಾರೆ? ತಮ್ಮ ಪ್ರಾಂತ ಜೀವನದಲ್ಲಿ ಪ್ರಗತಿಯನ್ನು ಸಾಧಿಸಿ ರಾಷ್ಟ್ರೀಯ ಜೀವನಕ್ಕೆ ಅವರು ಯಾವ ಕಾಣಿಕೆಯನ್ನು ಸಲ್ಲಿಸಿರುತ್ತಾರೆ? ಈ ಮುಂತಾದ ಮೂಲಭೂತ ಪ್ರಶ್ನೆಗಳನ್ನು ನಾವೆಲ್ಲ ಕೇಳಬೇಕು. ಇದಕ್ಕೆ ದೊರೆಯುವ ನಿಷ್ಪಕ್ಷಪಾತವಾದ ಉತ್ತರದಲ್ಲಿ ಮೆಚ್ಚುವ ಭಾಗವಿದ್ದರೆ ಮೆಚ್ಚೋಣ, ಮೆಚ್ಚಲಾರದಂಥ ಭಾಗವಿದ್ದರೆ ಹಾಗೆ ಹೇಳೋಣ, ನಮ್ಮನಮ್ಮೊಳಗೆ ಹೇಳಿಕೊಳ್ಳೋಣ. ನಮ್ಮ ಅಂತಃಕರಣಶುದ್ಧಿಯನ್ನು ಮಾಡಿಕೊಂಡು ಹೊಸ ನೋಟದಿಂದ, ಹೊಸ ಹುರುಪಿನಿಂದ ಭವಿಷ್ಯತ್‌ಕರ್ನಾಟಕದ ಸರ್ವಾಂಗಸುಂದರವಾದ ಮಂದಿರವನ್ನು ಕಟ್ಟೋಣ; ಭಾರತಮಾತೆಯ ಮೂರ್ತಿಯನ್ನು ಅಲ್ಲಿ ಪ್ರತಿಷ್ಠೆಮಾಡಿ ಅವಳನ್ನು ಅರ್ಚಿಸೋಣ! ಅವರಿವರ ದೋಷದರ್ಶನದಿಂದ ಬರುವುದೇನು? ಅವರಲ್ಲಿಯ ದೋಷ ಎಲ್ಲರ ದೋಷ, ಅವರಲ್ಲಿಯ ಗುಣ ಎಲ್ಲರ ಗುಣ. ಇಡಿಯ ನಾಡೇ ತನ್ನ ಗುಣರಾಶಿಯನ್ನು ತನ್ನ ವಿವೇಕವನ್ನು ಮರೆಮಾಡಿದೆಯೆ, ತನ್ನ ದೋಷ ಸಮುಚ್ಚಯಕ್ಕೆ ಎಡೆಕೊಟ್ಟಿದೆಯೆ ಎಂಬುದನ್ನು ಕೇಳಬೇಕು. ಮೊದಲು ಪ್ರತಿಯೊಬ್ಬರೂ ತಮ್ಮನ್ನು ತಾವು ಕೇಳಬೇಕು. ಬಸವಣ್ಣನವರ ಮುತ್ತಿನಂಥ ಈ ವಚನವು ಇಂದು ನಮಗೆ ಸ್ಫೂರ್ತಿ ಕೊಡಬೇಕು: 'ಹೆರವರ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ಮನವ ಸಂತೈಸಿಕೊಳ್ಳಿ.'

ಕರ್ನಾಟಕದ ಇಂದಿನ ಒಂದು ದುಃಖವೇನು? ಕರ್ನಾಟಕ ಪ್ರಾಂತವಾದರೂ ಆ ಹೆಸರಿನಿಂದ ಅದನ್ನು ಕರೆಯುವಂತಿಲ್ಲ. 'ಹೆಸರಾಗಿಯೂ ಕೂಡ ಹೇಳಹೆಸರಿಲ್ಲ' ಎಂದು ಅಂಬಿಕಾತನಯದತ್ತರು ಮಾರ್ಮಿಕವಾಗಿ ಹೇಳಿದ ಮಾತು ಮರ್ಮಕ್ಕೆ ಹತ್ತುವಂತೆ ದಿಟವಾಗಿ ಬಿಟ್ಟಿತು, 'ವಾಚಮರ್ಥೋಽನುಧಾವತಿ' ಎಂಬುದನ್ನು ಸಿದ್ಧಗೊಳಿಸುವಂತೆ! ಹೆಸರು ಹೋಗಲಿ, ಹೆಸರಿನಲ್ಲೇನಿದೆ ಎಂದು ವಿವೇಕ ಹೇಳುವವರು ಈಗಿನ ಹೆಸರೇ ಇರಲಿ ಎಂದು ಹಟತೊಟ್ಟ ಬಂಧುಗಳಿಗೆ ಅದೇ ವಿವೇಕವನ್ನು ಹೇಳಬೇಕಲ್ಲವೆ? ನಿಜವಾಗಿ ಈ ಹೆಸರಿನ ಹಟದ ಹಿಂದೆ ಒಂದು ಭೀತಿಯಿದೆ, ರಾಜನೀತಿಯಿದೆ. ಇದನ್ನು ವಿಂಗಡಿಸಿ ನೋಡಿದರೆ ಕನ್ನಡಿಗರಲ್ಲಿಯ ಭಾಷೈಕ್ಯವು ಕನ್ನಡಿಯೊಳಗಿನ ಗಂಟಾಗಿದೆ, ಈ ಸಮಸ್ಯೆ ಕಗ್ಗಂಟಾಗುತ್ತ ಹೊರಟಿದೆ ಎಂಬುದು

ಎನ್ನುಕಾಣುವಂತಿದೆ. ಹೆಸರಿನ ಬದಲಾವಣೆಗಿಂತ ಮುಖ್ಯವಾಗಿ ನಾವು ವಿಚಾರಮಾಡಬೇಕಾದ ಮೂಲಪ್ರಶ್ನೆಯೆಂದರೆ ಕನ್ನಡಿಗರನ್ನು ಒಂದುಗೂಡಿಸುವ ಶಕ್ತಿ ಯಾವುದು? ಆ ಶಕ್ತಿಯನ್ನು ಹೇಗೆ ಪಡೆಯಬೇಕು? ಇಂದಿನ ಸಮಸ್ಯೆಗಳನ್ನು ಬಿಡಿಸಲು ಮುಂದಿನ ಪೀಳಿಗೆಯಾದರೂ ಹೇಗೆ ಸಮರ್ಥವಾದೀತು?

## ಕನ್ನಡಿಗರನ್ನು ಒಂದುಗೂಡಿಸುವ ಶಕ್ತಿ

ಕನ್ನಡ ಸಂಸ್ಕೃತಿಯ ಸಮಗ್ರ ಸ್ವರೂಪದ ಜ್ಞಾನ, ಜ್ಞಾನಪೂರ್ವಕವಾದ ಸದಭಿಮಾನ, ಸದಭಿಮಾನದಿಂದ ಪ್ರೇರಿತವಾದ ನಡೆನುಡಿ–ಇದೇ ಕನ್ನಡಿಗರನ್ನು ಒಂದುಗೂಡಿಸುವ ಶಕ್ತಿ. ಈ ಶಕ್ತಿ ಸರ್ವವ್ಯಾಪಿಯಾಗಿ ಜನದಲ್ಲಿ ಜಾಗೃತವಾದರೆ, ನಾಡಿನ ತುಂಬೆಲ್ಲ ಮಿಂಚಿನಂತೆ ಹರಿದಾಡಿದರೆ ದೋಷಗಳನ್ನೆಲ್ಲ ಸಿಡಿಲಿನಂತೆ ಅದು ನಾಶಗೊಳಿಸುತ್ತದೆ, ಗುಣಗಳನ್ನೆಲ್ಲ ಬೆಳಕಿಗೆ ತರುತ್ತದೆ. ಕನ್ನಡ ಸಂಸ್ಕೃತಿಯೆಂದರೇನು? ಕನ್ನಡಕ್ಕೆ ತನ್ನದೇ ಆದ ಸಂಸ್ಕೃತಿ ಇರುವುದೆ? ಈ ಪ್ರಶ್ನೆಗಳನ್ನು ನಾವು ಅವಶ್ಯ ಕೇಳಬೇಕು, ತೆರೆದ ಮನಸ್ಸಿನಿಂದ ಕೇಳಬೇಕು. ಇವಕ್ಕೆ ಸಮಾಧಾನಕರವಾದ ಉತ್ತರವು ದೊರೆತರೆ ಮಾತ್ರ ಕನ್ನಡ ಸಂಸ್ಕೃತಿಯ ಜ್ಞಾನವು ಒಂದು ಪ್ರೇರಕಶಕ್ತಿಯಾಗಿ ಪರಿಣಮಿಸುತ್ತದೆ. ಕನ್ನಡ, ಕನ್ನಡ ಎಂಬ ಕೇವಲ ಭಾವೋದ್ರೇಕದ ಕೂಗಿನಿಂದ ಜ್ಞಾನ, ಭಕ್ತಿ, ಕರ್ಮ ಇವು ಮೂರೂ ಮುಪ್ಪುರಿಗೊಂಡು ತೋರಲಾರವು. ಸಂಕ್ಷಿಪ್ತವಾಗಿ ಹೇಳುವುದಾದರೆ, ಕನ್ನಡ ನಾಡಿನ ಇತಿಹಾಸ, ಪರಂಪರೆ, ಸಾಹಿತ್ಯ, ಕಲೆ ಈ ಮುಂತಾದ ಅಂಗಗಳಲ್ಲಿ ಉತ್ತಮವೆಂದು ವ್ಯಷ್ಟಿ ಸಮಷ್ಟಿಯಲ್ಲಿ ವ್ಯಕ್ತವಾಗಿರುವುದೆಲ್ಲ ಕನ್ನಡ ಸಂಸ್ಕೃತಿ. ಕರ್ನಾಟಕದ ಭೂಮಿಯಲ್ಲಿ, ಕನ್ನಡ ಜನದ ಜೀವನದಲ್ಲಿ ಅದರ ಆವಿಷ್ಕಾರವಾಗಿರುವುದೆಂದು ಅದು ಕನ್ನಡ ಸಂಸ್ಕೃತಿ. ಅದಕ್ಕೆ ಒಂದು ಸಂತತವಾದ ಪರಂಪರೆಯಿದೆ, ಅದರಿಂದ ಕನ್ನಡ ಮನವು ರೂಪುಗೊಂಡಿದೆ, ಕನ್ನಡಿಗರ ಬಾಳು ಚೆಲುವಾಗಿದೆ ಎಂದು ಅದು ಕನ್ನಡ ಸಂಸ್ಕೃತಿ. ಅದು ಭಾರತೀಯ, ಅದೇಕೆ ಮಾನವ ಸಂಸ್ಕೃತಿಯ ಒಂದು ಪ್ರಕಾರ, ಒಂದು ಆವಿಷ್ಕಾರ. ಎಲ್ಲ ಅಂಶಗಳಲ್ಲಿ ಅದು ಇತರ ಸಂಸ್ಕೃತಿಗಳಿಂದ ಬೇರೆಯಾಗಿಲ್ಲ, ಬೇರೆ ಯಾಗಬೇಕಾಗಿಲ್ಲ. ಒಟ್ಟು ರೂಪದಲ್ಲಿ ಮಾತ್ರ ಅದು ತನ್ನತನವನ್ನು ಪಡೆದಿದೆ. ಈ ವಿಷಯದ ವಿಸ್ತಾರವಾದ ಚರ್ಚೆ ಇಲ್ಲಿ ಪ್ರಸ್ತುತವಲ್ಲ. ಆದರೆ ಉದಾಹರಣೆಗೆಂದು ಕನ್ನಡ ಸಂಸ್ಕೃತಿಯ ಅಂಗವಾದ ಕನ್ನಡ ಸಾಹಿತ್ಯವನ್ನು ಕಣ್ಣಿಟ್ಟು ನೋಡೋಣ. ಅದರಲ್ಲಿ ಚೆಲುವಾಗಿರುವವನ್ನು ತಲೆಯ ಮೇಲಿಟ್ಟು ಕುಣಿಯೋಣ, ತಲೆಯೊಳಗೆ ಹಾಕಿಕೊಂಡು ಬಾಳೋಣ. ಆಗ ಕನ್ನಡ ಜನವನ್ನು ಒಂದುಗೊಳಿಸುವ ಮಹಾಶಕ್ತಿ ಈ ಸಾಹಿತ್ಯದಲ್ಲಿದೆ ಎಂಬುದರ ಅರಿವು ಬರುವುದು. ಸಾವಿರಾರು ವರ್ಷಗಳಿಂದ ಬೆಳೆದು ಬಂದ ಈ ಕನ್ನಡ ಸಾಹಿತ್ಯವು ವಿಪುಲವೂ ವಿವಿಧವೂ ಆಗಿದೆ. ಎಲ್ಲ ಮತಪ್ರವಾಹಗಳು ಈ ಮಹಾನದಿಯಲ್ಲಿ ಬಂದು ಸೇರಿವೆ. **ಇದರಲ್ಲಿ ಸಂಘರ್ಷವಿದೆ, ಅದನ್ನು ಮೀರಿದ ಸಮನ್ವಯವಿದೆ. ಮತೀಯ ಭಾಗವಿದೆ, ಮತಾತೀತ ಭಾಗವಿದೆ. ಮಾರ್ಗವಿದೆ, ದೇಸಿಯಿದೆ. ಸ್ಥಿತಿಯಿದೆ, ಗತಿಯಿದೆ. ಕ್ರಾಂತಿಯಿದೆ, ಶಾಂತಿಯಿದೆ.** ಹೊಸಗನ್ನಡ ಸಾಹಿತ್ಯದಲ್ಲಿ ವೈವಿಧ್ಯವು ಇನ್ನೂ ಹೆಚ್ಚಿದೆ, ವ್ಯಕ್ತಿತ್ವವು ಇನ್ನೂ ಅರಳಿದೆ. ಎಲ್ಲ ಕನ್ನಡಿಗರು ಈ ಸಾಹಿತ್ಯದಲ್ಲಿಯ ಒಳ್ಳೆಯದನ್ನು ಓದಬೇಕು, ಸವಿಯಬೇಕು, ನುರಿಯಬೇಕು, ಅರಿಯಬೇಕು. ತಂತಮ್ಮ ಬಾಳಿನಲ್ಲಿ ಇದರಿಂದ ಸ್ಫೂರ್ತಿಯನ್ನು ಪಡೆಯಬೇಕು, ಬೆಳಕನ್ನು ಕಾಣಬೇಕು. ಕರ್ನಾಟಕದಲ್ಲಿ ಬೇರೆ ಕಡೆಗೆ ಇರುವಂತೆ ಜಾತಿ ಮತ ಪಂಥಗಳಿವೆ,

ಬೇರೆ ಬೇರೆ ದೇಸಿಗಳಿವೆ, ಉಪಭಾಷೆಗಳಿವೆ. ಅವವುಗಳ ವೈವಿಧ್ಯವನ್ನು ಕಳೆದುಕೊಳ್ಳಬೇಕಿಲ್ಲ, ಅದು ಶಕ್ಯವೂ ಇಲ್ಲ. ಕನ್ನಡ ಸಾಹಿತ್ಯದಲ್ಲಿ ಅವರವರ ವಿಚಾರಸರಣಿಗೆ ಮತ್ತು ಶ್ರದ್ಧೆಗೆ ಉದ್ದೀಪಕವಾದ ಭಾಗಗಳಿವೆ. ಅವುಗಳೊಡನೆ, ಯಾವುದೇ ಮತವಿರಲಿ, ಯಾವುದೇ ಪಂಥ ವಿರಲಿ, ಎಲ್ಲ ಕನ್ನಡಿಗರನ್ನು ಹತ್ತಿರ ಕರೆದು ಕೂಡಿಸಿಕೊಂಡು ಜೀವನ ವಿವೇಕವನ್ನು ಸಾರಿ ಹೇಳುವ ಭಾಗಗಳಿವೆ, ಮೆಚ್ಚತಕ್ಕ ರಸಸ್ಥಾನಗಳಿವೆ. ಇವು ಎಲ್ಲ ಕನ್ನಡಿಗರ ಅಕ್ಷಯ ನಿಧಿ. ಈ ನಿಧಿಯನ್ನು ನಾವು ನಮ್ಮದಾಗಿ ಮಾಡಿಕೊಳ್ಳಬೇಕು. ಆಗ ನಮ್ಮನ್ನು ಒಂದುಗೂಡಿಸುವ ಶಕ್ತಿಯ ಅರಿವು ನಮಗೆ ಉಂಟಾಗುತ್ತದೆ. ಆಗ ಇಂದಿನ ಹಲವಾರು ಸಮಸ್ಯೆಗಳು ತಾವಾಗಿ ಕರಗಿಹೋಗುತ್ತವೆ–ಹೆಸರಿನ ಸಮಸ್ಯೆ ಕೂಡ! ಇಷ್ಟು ಮಾತ್ರವಲ್ಲ, ಕನ್ನಡ ಸೂತ್ರದಿಂದ ನಾಡನ್ನು ಕಟ್ಟುವುದಕ್ಕೆ ಜನವು ತಾನಾಗಿ ಮುಂದಾಗುತ್ತದೆ. ಇನ್ನೂ ಮುಂದೆ ಹೋಗಿ, ಭಾರತದಲ್ಲಿ, ಜಗತ್ತಿನಲ್ಲಿ ಎಲ್ಲೆಲ್ಲಿ ಒಳ್ಳೆಯದು, ಚೆಲುವಾದದ್ದು ಇದೆಯೋ ಅದನ್ನೆಲ್ಲ ಕನ್ನಡ ಜನವು ಬೇಡಿ ಬಯಸುತ್ತದೆ, ಅದರಿಂದ ಪುಷ್ಟವಾಗಿ ವಿಶಾಲ ಮಾನವ ಸಂಸ್ಕೃತಿಯ ಉತ್ತುಂಗ ಶಿಖರವನ್ನು ಏರಲು ಹವಣಿಸುತ್ತದೆ. ಕನ್ನಡ ಪರಂಪರೆಯಲ್ಲಿ, ಕನ್ನಡ ಮನದಲ್ಲಿ ಅಚ್ಚೊತ್ತಿ ನಿಂತ ಗಾದೆ ಮಾತಿದು: 'ಮನೆ ಗೆದ್ದು ಮಾರು ಗೆದಿ; ನಿನ್ನದನ್ನು ಕಾಯ್ದುಕೊಂಡು ಅನ್ಯ ವನ್ನು ಅರಗಿಸಿಕೊಳ್ಳು'. ಈ ತೂಕವನ್ನು ಕಳೆದುಕೊಂಡಾಗ ಕನ್ನಡಿಗರು ತಮ್ಮದನ್ನು ಮರೆಯುತ್ತಾರೆ, ಅನ್ಯದಲ್ಲಿ ಬೆರತುಹೋಗುತ್ತಾರೆ, ಇಲ್ಲವೆ ತಮ್ಮದೂ ಬೇಡ, ಅನ್ಯವೂ ಬೇಡ ಅನ್ನುತ್ತಾರೆ. ಕನ್ನಡ ಕುಲ ಎಂಬ ಪದ ಹಿಂದಿನ ಕಾಲದಿಂದ ಬಂದಿದೆ. ಅದನ್ನು ಹೊಸ ಅರ್ಥದಲ್ಲಿ ನಾವು ಪುನರುಜ್ಜೀವಿಸಬೇಕು. ಆ ಕುಲ ಈ ಕುಲ, ಈ ಭೇದದಿಂದ ನಾವು ವ್ಯಾಕುಲರಾಗಿದ್ದೇವೆ, ಜರ್ಜರಿತರಾಗಿದ್ದೇವೆ, ಒಡೆದುಹೋಗುತ್ತಿದ್ದೇವೆ. ಕನ್ನಡ ಕುಲ, ಕನ್ನಡ ಕುಟುಂಬ ಎಂಬ ಸದಭಿಮಾನವೇ ನಮ್ಮನ್ನು ಕೂಡಿಸಬಲ್ಲುದು. ಸ್ವತಂತ್ರ ಭಾರತದ ಪ್ರಭಾವಿ ಯಾದ ಅಂಗವಾಗಿ ಈ ಕನ್ನಡ ಕುಲವನ್ನು ನಾವು ಕಟ್ಟಬೇಕು. ಇದು ಯಾವ ಹೊಸ ಸಂಘರ್ಷಗಳನ್ನು ಹುಟ್ಟಿಸಬಾರದು, ಇದ್ದ ಸಂಘರ್ಷಗಳನ್ನು ಆರಿಸಬೇಕು. ಭೇದದಲ್ಲಿಯ ಅಭೇದವನ್ನು, ವೈವಿಧ್ಯದಲ್ಲಿಯ ಏಕತ್ವವನ್ನು ಸಾಧಿಸಬೇಕು. 'ಸಮರಸವೇ ಜೀವನ' ಎಂಬ ಸಿದ್ಧಿಗೆ ವೀಳ್ಯವೆತ್ತಬೇಕು.

ಹಿಂದೆ ವಿಜಯನಗರ ಕಾಲದಲ್ಲಿ ೧ನೆಯ ದೇವರಾಯನ ಅಮಾತ್ಯ ಲಕ್ಷ್ಮೀಧರನು ಬಾಲಕನಾಗಿದ್ದಾಗ ಅವನ ತಾಯಿ ಅವನಿಗೆ: 'ಕೆರೆಯನ್ನು ಕಟ್ಟಿಸು, ಬಾವಿಯನ್ನು ಸವೆಸು, ದೇವಾಗಾರವನ್ನು ಮಾಡಿಸು, ಅಜ್ಜೆರೆಯೊಳು ಸಿಲುಕಿದ ಅನಾಥರನ್ನು ಬಿಡಿಸು, ಮಿತ್ರರಿಗೆ ಇಂಬುಗೊಡು, ನಂಬಿದವರಿಗೆ ಆಶ್ರಯ ಕೊಡು, ಶಿಷ್ಯರನ್ನು ಕಾಪಾಡು' ಎಂದು ಮುಂತಾಗಿ ಹಾಲೆರೆಯುವಾಗಿನಿಂದ ತೊಟ್ಟು ಕಿವಿಯಲ್ಲಿ ಎರೆಯುತ್ತಿದ್ದಳಂತೆ. ಇಂದು ಮುಂದು ಕನ್ನಡ ತಾಯಿ ಬೆಳೆಯುತ್ತಿರುವ ಮಕ್ಕಳಿಗೆ ಕನ್ನಡ ಸಂಸ್ಕೃತಿಯ ಈ ಸಾರವನ್ನು ಉಣ್ಣಿಸಲಿ; ಅವಕ್ಕೆ ಹಾಲೆರೆಯುವಾಗ ತೊಟ್ಟಿಲು ತೂಗುವಾಗ ಕನ್ನಡ ಕವಿಗಳ, ಶರಣರ, ದಾಸರ ನುಡಿಮುತ್ತು ಗಳನ್ನು ಕಿವಿಗೆ ತೊಡಿಸಲಿ! 'ಮಾನವ ಜಾತಿ ತಾನೊಂದೆ ವಲಂ, ಆರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ' ಎಂಬ ಪಂಪಮಹಾಕವಿಯ ಮಾತು, 'ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ, ದೇವನೊಬ್ಬ ನಾಮ ಹಲವು, ಅಯ್ಯಾ ಎನೆ ಸ್ವರ್ಗ ಎಲವೊ ಎನೆ ನರಕ' ಎಂಬ ಬಸವಣ್ಣನವರ ವಚನ, 'ಈಸಬೇಕು ಇದ್ದು ಜೈಸಬೇಕು,

ಬಿಲ್ಲಾಗಿರಬೇಕು ಬಲ್ಲವರೊಳು ಕಲ್ಲಾಗಿರಬೇಕು ಕಠಿಣ ಭವ ತೊರೆಯೊಳು' ಎಂಬ ಪುರಂದರ ದಾಸರ ನುಡಿ, ತಂತಮ್ಮ ಜಾತಿ ಮತವೇನೆ ಇರಲಿ, ಎಲ್ಲ ಕನ್ನಡಿಗರ ಮನೆಮಾತಾಗಿರಬೇಕು ಇವು. ಬೆಳೆಯುತ್ತಿರುವ ಮಕ್ಕಳು ಇಂಥ ನೂರಾರು ಮಾತುಗಳನ್ನು ತಮ್ಮ ನಾಲಗೆಯ ಮೇಲೆ ಕುಣಿಸಬೇಕು, ಎದೆಯ ಮೇಲೆ ಕೊರೆಯಬೇಕು. ಕನ್ನಡಿಗರ ಭಾವೈಕ್ಯಕ್ಕೆ ಈ ಬಗೆಯ ಕನ್ನಡ ದರ್ಶನವು ಮಾತ್ರ ಸಹಾಯವಾಗುತ್ತದೆ ಎಂಬುದನ್ನು ನಾನು ಎಷ್ಟು ಒತ್ತಿ ಹೇಳಿದರೂ ಸಾಲದು.

## ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯ

ಕರ್ನಾಟಕ ವಿದ್ಯಾವರ್ಧಕ ಸಂಘ, ತರುವಾಯ ಕನ್ನಡ ಸಾಹಿತ್ಯ ಪರಿಷತ್ತು ಈ ಸಂಸ್ಥೆಗಳು ಅತ್ಯಂತ ಪ್ರತಿಕೂಲವಾದ ಪರಿಸ್ಥಿತಿಯಲ್ಲಿ ಕನ್ನಡಿಗರನ್ನು ಒಂದುಗೂಡಿಸಲು ಮತ್ತು ಅವರ ಆಶೋತ್ತರಗಳನ್ನು ಮೂರ್ತಗೊಳಿಸಲು ಪ್ರಯತ್ನಮಾಡಿದವು. ಕರ್ನಾಟಕ ಪ್ರಾಂತವಾಗಬೇಕೆಂಬುದು ಅವು ಕಂಡ ಹಿರಿಗನಸುಗಳಲ್ಲಿ ಹಿರಿಯದಾಗಿತ್ತು. ಆ ಕನಸು ನನಸಾಗಿ ಕನ್ನಡ ನಾಡು ಒಂದಾಗಿರುವ ಸಂದರ್ಭದಲ್ಲಿ ಈ ಸಂಸ್ಥೆಗಳನ್ನೂ ಇವನ್ನು ಕಟ್ಟಿಬೆಳೆಸಿದ ಹಿರಿಯರನ್ನೂ ಇಂದಿಗೂ ಮನಃಪೂರ್ವಕವಾಗಿ ಸೇವೆಸಲ್ಲಿಸುತ್ತಿರುವ ಕಾರ್ಯಕರ್ತ ರನ್ನೂ ನಾವು ಅತ್ಯಂತ ಕೃತಜ್ಞತೆಯಿಂದ ವಂದಿಸಬೇಕು. ಕನ್ನಡ ಸಾಹಿತ್ಯ ಪರಿಷತ್ತು ಎಲ್ಲ ಭಾಗದ ಕನ್ನಡಿಗರ ಮತ್ತು ಸಾಹಿತ್ಯ ಪ್ರೇಮಿಗಳ ಪ್ರಾತಿನಿಧಿಕ ಸಂಸ್ಥೆಯಾಗಿ ಸುಮಾರು ಐವತ್ತು ವರ್ಷಗಳವರೆಗೆ ಅವ್ಯಾಹತವಾಗಿ ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಗಳ ಅಭಿವೃದ್ಧಿ ಕಾರ್ಯ ವನ್ನು ಮಾಡುತ್ತ ಬಂದಿದೆ. ಅದು ಕೈಕೊಂಡಿರುವ ಅನೇಕ ಕಾರ್ಯಗಳಲ್ಲಿ ಕನ್ನಡ-ಕನ್ನಡ ನಿಘಂಟು ಚಿರಸ್ಮರಣೀಯವಾದ ಕಾರ್ಯ. ಶಾಸ್ತ್ರಶುದ್ಧವಾದ ತಳಹದಿಯ ಮೇಲೆ ಅದರ ಯೋಜನೆಯನ್ನು ಮಾಡಿ ಸಾಧ್ಯವಾದಷ್ಟು ಮಟ್ಟಿಗೆ ಸರ್ವಸಂಗ್ರಹವೂ ನಿರ್ದುಷ್ಟವೂ ಆಗುವಂತೆ ಅದನ್ನು ರಚಿಸಲಾಗುತ್ತಿದೆ. ಅದರ ಮೊದಲನೆಯ ಸಂಚಿಕೆ ಬೇಗನೆ ಪ್ರಕಟವಾಗುವುದೆಂಬ ನಿರೀಕ್ಷೆಯಿದೆ. ಕನ್ನಡದ ಮೇಲಿನ ಅಕ್ಕರೆಯಿಂದ ಅದಕ್ಕಾಗಿ ಶ್ರಮಿಸುತ್ತಿರುವ ವಿದ್ವಾಂಸರಿಗೂ ಅದರ ಪ್ರಕಟನೆಗಾಗಿ ಧನಸಹಾಯವನ್ನು ಪೂರ್ತಿಯಾಗಿ ನೀಡಿರುವ ಮೈಸೂರು ಸರಕಾರಕ್ಕೂ ಕನ್ನಡಿಗರು ಕೃತಜ್ಞರಾಗಿರಬೇಕು. ತುರ್ತು ಪರಿಸ್ಥಿತಿಯ ಝಳವು ಅದಕ್ಕೆ ತಾಕದಂತೆ, ಎಲ್ಲ ಸಂಚಿಕೆಗಳು ಬೇಗನೆ ಪ್ರಕಟವಾಗುವಂತೆ ಸರಕಾರವು ಎಲ್ಲ ಬಗೆಯ ಸೌಕರ್ಯಗಳನ್ನು ನಿಯತ ವಾಗಿ ಒದಗಿಸುವುದೆಂದು ನಾವು ಹಾರೈಸೋಣ. ಸಾಹಿತ್ಯ ಪರಿಷತ್ತು ಘಟನಾಬದ್ಧವಾದ, ಅನೇಕ ಹಿರಿಯರ ತ್ಯಾಗ-ಸೇವೆಗಳಿಂದ ಪರಿಪೂತವಾದ, ಕನ್ನಡಿಗರ ಆಶಾಸ್ಥಾನವಾದ ಸಂಸ್ಥೆ. ಅದರ ಉದಾತ್ತವಾದ ಪರಂಪರೆಯನ್ನು ಸಾಗಿಸಿಕೊಂಡು ಹೋಗುವ ಹೊಣೆ ಎಲ್ಲ ಸಾಹಿತ್ಯ ಪ್ರೇಮಿಗಳ ಮೇಲಿದೆ. ಅದರಲ್ಲಿ ನಡೆಯುವ ಯಾವ ಚಟುವಟಿಕೆಯೂ ಉನ್ನತ ಮಟ್ಟದಲ್ಲಿ ನಡೆಯುವದು ಅವಶ್ಯ. ಅದರ ಲೋಪದೋಷಗಳ ವಿಮರ್ಶೆ ಇರಲಿ, ಘಟನೆಗೆ ಸಂಬಂಧವಾದ ಚರ್ಚೆಯಿರಲಿ ಎಲ್ಲವೂ ಒಂದು ಮಾದರಿಯ ತೂಕದಿಂದ ನಡೆಯಬೇಕು. ಕೊನೆಗೆ ನಿಯಮಾನುಸಾರವಾಗಿ ಕೈಕೊಂಡ ನಿರ್ಣಯಗಳನ್ನು ನಾವೆಲ್ಲರೂ ಅನುಸರಿಸಬೇಕು. ಲೋಕಕ್ಕೆಲ್ಲ ವಿವೇಕವನ್ನು ಹೇಳಹೊರಟ ಸಾಹಿತ್ಯಪ್ರೇಮಿಗಳಾದ ನಾವು ಅದಕ್ಕೆ ವಿರುದ್ಧವಾಗಿ ನಡೆದರೆ ಗತಿಯೇನು? ಪರಿಷತ್ತಿನ ಆರ್ಥಿಕಸ್ಥಿತಿ ಎಷ್ಟೂ ಸಮಾಧಾನಕರವಾಗಿಲ್ಲ. ಎರಡು ಕೋಟಿಗೂ ಹೆಚ್ಚಾಗಿರುವ ಕನ್ನಡಿಗರನ್ನು ಪ್ರತಿನಿಧಿಸುವ ಸಾಹಿತ್ಯ ಪರಿಷತ್ತಿಗೆ ಸಾವಿರ ಜನ

ಕೂಡ ಸದಸ್ಯರಿಲ್ಲವೆಂದರೆ ಏನು? ಹತ್ತುಸಾವಿರ ಜನವಾದರೂ ಸದಸ್ಯರಾಗುಂತೆ ನಾವು ನೀವೆಲ್ಲ ಯತ್ನಿಸಬೇಕು, ಐವತ್ತು ಸಾವಿರವಾದರೂ ವಾರ್ಷಿಕ ಸಹಾಯದ್ರವ್ಯ ನೀಡುವಂತೆ ಸರಕಾರವನ್ನು ಪ್ರಾರ್ಥಿಸಬೇಕು.

## ಮೈಸೂರು ಸರಕಾರ ಮತ್ತು ಕನ್ನಡ ಭಾಷೆ

ಮೈಸೂರು ಸರಕಾರವು ಕನ್ನಡದ ಮುನ್ನಡೆಯ ದೃಷ್ಟಿಯಿಂದ ಕೆಲವು ಕಾರ್ಯಕ್ರಮಗಳನ್ನು ಕೈಕೊಂಡಿರುವುದಕ್ಕಾಗಿ ಅದನ್ನು ನಾವು ಹಾರ್ದಿಕವಾಗಿ ಅಭಿನಂದಿಸಬೇಕಾಗಿದೆ. ಮುಖ್ಯವಾಗಿ **ಕನ್ನಡವು ಆಡಳಿತದ ಭಾಷೆಯಾಗಬೇಕೆಂದು ನಿರ್ಣಯವನ್ನು ಮಾಡಿ ಸೂಕ್ತ** ಕ್ರಮಗಳನ್ನು ತೆಗೆದುಕೊಳ್ಳಲು ಸರಕಾರವು ಇತ್ತೀಚಿಗೆ ಮನಸ್ಸು ಮಾಡಿದೆ. ಕರ್ನಾಟಕ ಪ್ರಾಂತರಚನೆಯ ಮೂಲಭೂತ ತತ್ವದ ವಿಜಯವಿದು. ಕನ್ನಡಿಗರು ಬೇರೆ ಭಾಷೆಗಳನ್ನು ಕಲಿಯಬಹುದು, ಮೆಚ್ಚಬಹುದು. ಆದರೆ ಕನ್ನಡದಲ್ಲಿಯೇ ಆಡಳಿತದ ವ್ಯವಹಾರಗಳು, ವಿಧಾನ ಸಭೆಯ ಮತ್ತು ನ್ಯಾಯಾಲಯದ ಕಾರ್ಯಕಲಾಪಗಳು, ವಿಶ್ವವಿದ್ಯಾಲಯದ ಪಾಠ ಪ್ರವಚನಗಳು ನಡೆಯುವುವಾದರೆ ಮಾತ್ರ ಬಹುಸಂಖ್ಯ ಕನ್ನಡಿಗರು ರಾಜ್ಯಕಾರಭಾರದಲ್ಲಿ ತಂತಮ್ಮ ಪಾತ್ರವನ್ನು ವಹಿಸಬಲ್ಲವರಾಗುತ್ತಾರೆ. ಲೋಕಮತಕ್ಕೆ ಬೆಲೆ ಬರುತ್ತದೆ. ಈ ನಿರ್ಣಯವನ್ನು ಬೇಗನೆ ಜಾರಿಯಲ್ಲಿ ತರುವುದಕ್ಕೆ ಇರುವ ಅಡ್ಡಿ ಆತಂಕಗಳಲ್ಲಿ ಶಾಸನಾತ್ಮಕ ಪರಿಭಾಷೆಯ ಅಭಾವವೊಂದು ಮುಖ್ಯವಾದುದು. ಇದಕ್ಕಾಗಿ ಒಂದು ತಜ್ಞರ ಸಮಿತಿಯನ್ನು ನೇಮಿಸಿ, ಭಾರತದ ಇತರ ರಾಜ್ಯಗಳಲ್ಲಿ ನಡೆದಿರುವ ಪ್ರಯತ್ನಗಳನ್ನು ಗಮನಿಸಿ ತ್ವರಿತದಲ್ಲಿ ತೀರ್ಮಾನಕ್ಕೆ ಬರುವುದು ಅವಶ್ಯ. ಮೈಸೂರು ಸರ್ಕಾರವು ಈ ದಿಶೆಯಲ್ಲಿ ಕಾರ್ಯಪರವಾಗುವುದೆಂದು ಆಶಿಸುತ್ತೇನೆ. ಎರಡನೆಯದಾಗಿ ಒಂದು ಬೃಹತ್‌ಸ್ವರೂಪದ ಕನ್ನಡ ವಿಶ್ವಕೋಶವು ಬೇಕೆಂದು ಸರಕಾರವು ಒಂದು ಯೋಜನೆಯನ್ನು ಮಾಡಿದೆ. ಪ್ರಾರಂಭಿಕ ಸ್ವರೂಪದ ಕಾರ್ಯವೂ ಆಗಿದೆ. ಇದಕ್ಕೆ ತಡೆಯುಂಟಾಗದಂತೆ ಮುಂದುವರಿಸಬೇಕು. ಯೋಗ್ಯರಿಂದ ಲೇಖನಗಳನ್ನು ಬರೆಯಿಸಿ ಯೋಗ್ಯ ಕಾಲಕ್ಕೆ ಅವರಿಗೆ ಯೋಗ್ಯ ಸಂಭಾವನೆಯನ್ನು ಕೊಟ್ಟು ಈ ಮಹಾಕಾರ್ಯವನ್ನು ಯಥಾಸಾಂಗವಾಗಿ ನೆರವೇರಿಸುವುದು ಆವಶ್ಯಕವಾಗಿದೆ. ಕನ್ನಡಿಗರಿಗೆ ಪ್ರಪಂಚದ ಅದ್ಯಯಾವತ್ತಾದ ಜ್ಞಾನವು ಕನ್ನಡದಲ್ಲಿ ದೊರೆಯಬೇಕು, ಅದರಿಂದ ಅವರು ಜ್ಞಾನಸಂಪನ್ನರಾಗಿ ಸ್ವತಂತ್ರ ವಿಚಾರಿಗಳಾಗಿ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬೇಕು, ಕರ್ನಾಟಕಕ್ಕೆ ಮತ್ತು ಭಾರತಕ್ಕೆ ತಮ್ಮ ಕಾಣಿಕೆಗಳನ್ನು ಸಲ್ಲಿಸಬೇಕು. ಕರ್ನಾಟಕ ಪ್ರಾಂತ ರಚನೆಯಲ್ಲಿದ್ದ ಇನ್ನೊಂದು ಮೂಲಭೂತ ತತ್ವವಿದು. ಈವರೆಗೆ ಕನ್ನಡದಲ್ಲಿ ಜ್ಞಾನ-ವಿಜ್ಞಾನ ಸಾಹಿತ್ಯ, ವಿಚಾರಸಾಹಿತ್ಯ ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯ, ಮಿಂಚಿನಬಳ್ಳಿ ಮುಂತಾದ ಗ್ರಂಥಮಾಲೆ ಇವುಗಳ ಸತತ ಪರಿಶ್ರಮದ ಮೂಲಕ ಕೆಲಮಟ್ಟಿಗೆ ನಿರ್ಮಾಣವಾಗಿದೆ. ಯಾವ ಕ್ಷೇತ್ರದಲ್ಲಿ ಯಾವ ಗ್ರಂಥಗಳ ಕೊರತೆಯಿದೆ ಎಂಬುದರ ಪಟ್ಟಿಮಾಡಿ ಸರಕಾರದ ನೆರವಿನಿಂದ ಈ ಸಂಸ್ಥೆಗಳು ರಾಶಿರಾಶಿಯಾಗಿ ಸಣ್ಣ ಹಾಗೂ ದೊಡ್ಡ ಪ್ರಮಾಣದ ಪುಸ್ತಕಗಳನ್ನು ಪ್ರಕಟಿಸುವಂತಾಗಲಿ. ಕಾಲೇಜು ಮಟ್ಟದಲ್ಲಿ ಕನ್ನಡ ಮಾಧ್ಯಮವಾಗುವುದಕ್ಕೂ ಇವುಗಳಿಂದ ಪುಟದೊರೆಯುತ್ತದೆ. ಈ ಮಾಧ್ಯಮ ಅಥವಾ ಬೋಧಭಾಷೆಯ ಪ್ರಶ್ನೆ ಒಂದು ದುಷ್ಟಚಕ್ರದಲ್ಲಿ ಇಂದು ತಿರುಗುತ್ತಿದೆ. ಪೂರ್ವಸಿದ್ಧತೆಯಾಗದೆ ಮಾಧ್ಯಮದ ಬದಲಾವಣೆ ಅಪಾಯಕರವೆಂದು ತಜ್ಞರ ಮತ. ಪೂರ್ವಸಿದ್ಧತೆ ಅನಿಯತ ಕಾಲದವರೆಗೆ

ಆಗುವಂತಿಲ್ಲ. ಪರಿಣಾಮವಾಗಿ, ಇದ್ದ ಮಾಧ್ಯಮವೇ ಇರಲಿ ಎಂದು ಇತ್ಯರ್ಥಕ್ಕೆ ಬಂದಂತೆ ಆಗುತ್ತದೆ. ಕರ್ನಾಟಕ ಪ್ರಾಂತರಚನೆಯಲ್ಲಿ ಅಡಕವಾದ ಇನ್ನೊಂದು ತತ್ವವೆಂದರೆ ಹೆಚ್ಚು ಹೆಚ್ಚಾದ ಕನ್ನಡ ಜನ ಉಚ್ಚವಾದ ಜ್ಞಾನವನ್ನೂ ತಿಳಿವಳಿಕೆಯನ್ನೂ ಪಡೆಯಬೇಕೆಂಬುದು. ಶಿಕ್ಷಣ ಮಾಧ್ಯಮವು ವಿಶ್ವವಿದ್ಯಾಲಯಗಳಲ್ಲಿ ಕನ್ನಡವಾಗದೆ ಇದು ಸಾಧ್ಯವಿಲ್ಲ. ಈವೊತ್ತು ಮಾಧ್ಯಮಿಕ ಶಿಕ್ಷಣದ ಕೊನೆಯವರೆಗೆ ಕನ್ನಡ, ಆಮೇಲೆ ಇಂಗ್ಲಿಷು ಈ ತ್ರಿಶಂಕು ಪರಿಸ್ಥಿತಿಯಲ್ಲಿ ಯಾವ ಭಾಷೆಯೂ ಚೆನ್ನಾಗಿ ಬರುವಂತಿಲ್ಲ, ಯಾವ ಜ್ಞಾನವೂ ಆಳವಾಗಿ ದೊರೆಯುವಂತಿಲ್ಲ. ಒಂದೊಂದು ವಿಷಯದಲ್ಲಿ ಒಂದಾದರೂ ಪ್ರಮಾಣಭೂತವಾದ ಪಠ್ಯಪುಸ್ತಕವನ್ನು ಬರೆಯಿಸಿ ಧೈರ್ಯವಾಗಿ ಮಾಧ್ಯಮವನ್ನು ಪ್ರಾರಂಭಿಸಬೇಕು. ಇತರ ಪುಸ್ತಕಗಳು ಕ್ರಮೇಣ ಬರುತ್ತವೆ. ಕಲಿಸುವಾಗ ಕೆಲವು ಕಾಲ ಕನ್ನಡ, ಇಂಗ್ಲಿಷು ಎರಡನ್ನೂ ಬಳಸಬಹುದು. ಕನ್ನಡ ಮಾಧ್ಯಮಕ್ಕೆ ವಿರೋಧವೇಕಿದೆ, ನಿಜವಾದ ತೊಂದರೆಗಳು ಯಾವುವು ಇವನ್ನು ನಾನು ಬಲ್ಲೆ. ಆದರೆ ಕೊನೆಯವರೆಗೆ ಈ ಪರಿಸ್ಥಿತಿ ಉಳಿಯಲಾರದು, ಉಳಿಯಬಾರದು. ನಾಡಿನ ಸ್ವಾಭಿಮಾನಕ್ಕೆ, ಸಂಸ್ಕೃತಿಗೆ, ಉತ್ಕರ್ಷಪ್ರಯತ್ನಕ್ಕೆ ಇದು ಅವಮಾನ. ಸರಕಾರದವರೂ ವಿಶ್ವವಿದ್ಯಾಲಯಗಳ ಅಧಿಕಾರಿಗಳೂ ಈ ದಾರಿಯಲ್ಲಿ ದಿಟ್ಟ ಹೆಜ್ಜೆಯನ್ನಿಡುವರೆಂದು ಆಶಿಸುತ್ತೇನೆ.

## ಕರ್ನಾಟಕದಲ್ಲಿ ಸಂಶೋಧನೆ

ಕನ್ನಡ ನಾಡಿನ ಇತಿಹಾಸ, ಸಂಸ್ಕೃತಿ, ಕನ್ನಡ ಭಾಷೆ, ಸಾಹಿತ್ಯ ಇವಕ್ಕೆ ಸಂಬಂಧಿಸಿ ಈವರೆಗೆ ಸಂಶೋಧನೆ ನಡೆದಿದೆ, ಗ್ರಂಥ ಪ್ರಕಟನೆಯಾಗಿದೆ. ಈ ಕಾರ್ಯ ಇನ್ನೂ ಹೆಚ್ಚಾಗಿ, ಹೆಚ್ಚು ಕೂಲಂಕಷವಾಗಿ ನಡೆಯಬೇಕು. ನಾಡಿನ ಇತಿಹಾಸ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಎಲ್ಲ ಮೂಲ ಸಾಮಗ್ರಿಯ ಸಂಗ್ರಹ, ಕನ್ನಡ ಭಾಷೆಯನ್ನು ಕುರಿತು ಶಾಸ್ತ್ರೀಯ ಅಭ್ಯಾಸ, ಕನ್ನಡ ಸಾಹಿತ್ಯದ ಮೂಲ ಆಕರಗಳ ಸಂಕಲನ ಇವನ್ನು ಮಾಡಬೇಕಾಗಿದೆ. ಕನ್ನಡವನ್ನು ಮುಖ್ಯ ವಿಷಯವಾಗಿ ಮಾಡಿಕೊಂಡು ಬಿ. ಎ. ಮತ್ತು ಎಮ್. ಎ. ವರ್ಗಗಳಲ್ಲಿ ಓದುತ್ತಿರುವವರು ಈ ದಾರಿಯಲ್ಲಿ ಮುಂದೆ ಸಾಗಿ ತಮಗೆ ಅಭಿರುಚಿಯಿದ್ದ ಕ್ಷೇತ್ರದಲ್ಲಿ ಒಂದೊಂದು ಪ್ರಬಂಧ, ಗ್ರಂಥ ಇದರ ಕಾಣಿಕೆಯನ್ನು ಅರ್ಪಿಸುವುದಾಗಿ ದೃಢವಾದ ಸಂಕಲ್ಪ ಮಾಡಬೇಕು. ಅವರಿಗೆ ಬೇಕಾದ ಸೌಕರ್ಯಗಳು ವಿದ್ಯಾಸಂಸ್ಥೆಗಳಿಂದಲೂ ಸರಕಾರದಿಂದಲೂ ದೊರೆಯಬೇಕು. ವಿಶೇಷತಃ, ಕನ್ನಡ ವಿಷಯದಲ್ಲಿ ಹೆಚ್ಚಿನ ಪ್ರಾವೀಣ್ಯ ಪಡೆದವರನ್ನು ಕಾಲೇಜುಗಳಲ್ಲಿ ಮಾತ್ರವಲ್ಲದೆ ಮಾಧ್ಯಮಿಕ ಶಾಲೆಗಳ ಮೇಲಿನ ವರ್ಗಗಳಲ್ಲಿ ಹೆಚ್ಚಿನ ವೇತನಶ್ರೇಣಿಯನ್ನು ಕೊಟ್ಟು ನೇಮಿಸುವುದಾಗಬೇಕು. ಅಂದರೆ ಕನ್ನಡ ವ್ಯಾಸಂಗವು ಬೆಳೆಯಲು ನೆರವಾಗುತ್ತದೆ. ಬೇರೆ ವಿಷಯಗಳ ಬಗ್ಗೆಯೂ ಈ ವ್ಯವಸ್ಥೆಯನ್ನು ಮಾಡಬಹುದು. ವಿಶ್ವವಿದ್ಯಾಲಯದ ಮಟ್ಟದಲ್ಲಿ, ಒಮ್ಮೊಮ್ಮೆ ಮಾಧ್ಯಮಿಕ ಶಾಲೆಗಳಲ್ಲಿ, ಕನ್ನಡದಲ್ಲಿ ಪಾಠ ಹೇಳುವ ಅಧ್ಯಾಪಕರಿಗೆ ಗ್ರಂಥಪಾಠ, ಖಚಿತವಾದ ಅರ್ಥ ಮುಂತಾದ ಅಂಗಗಳಲ್ಲಿ ಅನೇಕತರದ ಸಂದೇಹಗಳು ಉಳಿದಿರುತ್ತವೆ. ಅವರೆಲ್ಲ ಸೇರಿ ಆಮೇಲೆ ಪತ್ರವ್ಯವಹಾರ ಮಾಡಿ ಸಾಧ್ಯವಿದ್ದಲ್ಲಿ ಈ ಸಂದೇಹಗಳನ್ನು ಪರಿಹಾರ ಮಾಡಿಕೊಂಡು ತಮ್ಮ ಅಧ್ಯಾಪನಕಾರ್ಯದಲ್ಲಿ ಹೆಚ್ಚು ಪ್ರಗತಿಪರರಾಗಬೇಕು.

## ಕನ್ನಡ ವೃತ್ತಪತ್ರಿಕೆಗಳು

ವೃತ್ತಪತ್ರಿಕೆಗಳು ಜನಾಭಿಪ್ರಾಯವನ್ನು ಮತ್ತು ಜನಭಾಷೆಯನ್ನು ರೂಪಿಸುವಲ್ಲಿ

ಪ್ರಭಾವಿಯಾದ ಕಾರ್ಯ ಮಾಡುತ್ತವೆ. ಅವುಗಳಲ್ಲಿ ಸದ್ಯಕ್ಕೆ ಪದಪ್ರಯೋಗ, ಭಾಷಾಶೈಲಿ, ಲೇಖನಪದ್ಧತಿ ಇವು ಪ್ರಾದೇಶಿಕ ಭೇದಗಳಿಂದ ಬೇರೆಬೇರೆಯಾಗಿರುತ್ತವೆ. ಪ್ರಾದೇಶಿಕ ವೈಶಿಷ್ಟ್ಯ ಕೆಲಮಟ್ಟಿಗೆ ಇರಬಹುದಾದರೂ ಸಾಧ್ಯವಾದ ಏಕರೂಪತೆಯನ್ನು ಅವು ಪಡೆಯಬೇಕು. ಕೆಲಕೆಲವು ಪದಗಳು ಇಂಗ್ಲಿಷಿನ ತೀರ ಕೃತ್ರಿಮವಾದ ಭಾಷಾಂತರವಾಗಿ ರೂಢಗೊಂಡಿವೆ. ಅಶುದ್ಧ ರೂಪಗಳೂ ಬೆಳಕಿಗೆ ಬಂದಿವೆ. ಅಂಕಿತನಾಮಗಳ ಲೇಖನವೂ ಚಿತ್ರವಿಚಿತ್ರವಾಗಿದೆ. ಈ ವಿಷಯದಲ್ಲಿ ವೃತ್ತಪತ್ರಿಕೋದ್ಯಮದಲ್ಲಿ ನಿರತರಾದವರು ಒಂದು ಸಮಿತಿಯನ್ನು ರಚಿಸಿಕೊಂಡು ಪರಸ್ಪರ ವಿಚಾರವಿನಿಮಯದಿಂದ ಮುಂದಡಿಯನ್ನು ಇಡಬೇಕು. ಕೆಲವು ವಾರಪತ್ರಿಕೆಗಳು ಮತ್ತು ನಿಯತಕಾಲಿಕೆಗಳು ವಿವಿಧ ವಿಷಯಗಳಿಂದಲೂ ಕಥೆ ಪ್ರಬಂಧಗಳಿಂದಲೂ ಲೋಕಶಿಕ್ಷಣ ಮತ್ತು ಜನರಂಜನೆಯ ಕಾರ್ಯವನ್ನು ಮಾಡುತ್ತಿವೆ. ಆದರೆ ಲೇಖನಗಳ ಮಟ್ಟವನ್ನು ಉನ್ನತಗೊಳಿಸುವ ಪ್ರಯತ್ನ ನಡೆಯಬೇಕು. ಒಳ್ಳೆಯ ಸ್ಥಿತಿಯಲ್ಲಿದ್ದ ಪತ್ರಿಕೆಗಳು ಲೇಖಕರಿಗೆ ನಿಯತವಾಗಿ ಸಂಭಾವನೆ ಕೊಡುವ ಯೋಜನೆ ಮಾಡಿ ಉತ್ತಮ ಲೇಖನಗಳನ್ನು ಬರಮಾಡಿಕೊಳ್ಳಬೇಕು, ಪ್ರಸಕ್ತ ವಿಷಯಗಳನ್ನು ಕುರಿತು ಅಧಿಕಾರಯುಕ್ತವಾದ, ಸ್ವತಂತ್ರ ವಿಚಾರದಿಂದ ಕೂಡಿದ ಲೇಖನಗಳನ್ನು ಬರೆಯಿಸಿ ಪ್ರಕಟಿಸಬೇಕು. ಪ್ರತಿ ದಿನದ, ವಾರದ, ತಿಂಗಳ ಮತ್ತು ವರ್ಷದ ಭವಿಷ್ಯ, ನಟನಟಿಯರ ವೈಯಕ್ತಿಕ ಜೀವನಚಿತ್ರಣ ಇಂಥ ಬರೆಹಗಳಿಂದ ಬದುಕುವ ಹವ್ಯಾಸ ಎಷ್ಟು ಹಿತಕರ ಎಂಬುದನ್ನು ಅವರು ಗಂಭೀರವಾಗಿ ಯೋಚಿಸಬೇಕು. ಈ ಭವಿಷ್ಯಗಳು ಒಂದಕ್ಕೊಂದು ವಿರುದ್ಧವಾಗಿರುತ್ತವೆ, ಇವುಗಳ ನಿರೂಪಣ ರೀತಿ ವಿಚಿತ್ರವಾಗಿರುತ್ತದೆ. ಇವುಗಳ ಸಹಾಯದಿಂದ ಈ ನಾಡಿನ ಜನತೆಯ ಶೀಲವನ್ನು ರೂಪಿಸಬೇಕೆನ್ನುವವರು ಸ್ವಲ್ಪ ಅಂತರ್ಮುಖಿಯಾಗಿ ನೋಡಿಕೊಳ್ಳಲಿ. ಓದುಗರು ಇವಿನ್ನು ಸಾಕು ಎಂಬ ಪ್ರಚಾರ ಮಾಡುವ ಕಾಲ ಬಂದಿದೆ. ಜ್ಯೋತಿಷ್ಯದಲ್ಲಿ ವಿಶ್ವಾಸವಿದ್ದವರು ಒಳ್ಳೆಯ ಜ್ಯೋತಿಷಿಯ ಕಡೆಗೆ ಹೋಗಲಿ, ಅವರಿಗೆ ಜಾತಕ ತೋರಿಸಲಿ, ತಮ್ಮ ಹಿಂದು ಮುಂದನ್ನು ತಿಳಿದುಕೊಳ್ಳಲಿ. ಕೆಲಕೆಲವು ಮಾಸಪತ್ರಿಕೆಗಳು ತೀರ ಸಂಕೀರ್ಣಸ್ವರೂಪದ 'ಮಿಸೆಲನಿ'ಗಳಾಗಿ ಬಿಟ್ಟಿರುತ್ತವೆ. ಅವುಗಳಿಗೆ ವಿಶಿಷ್ಟ ಧ್ಯೇಯ, ಪ್ರತ್ಯೇಕ ಕಾರ್ಯ ಯಾವುದೂ ಇರುವಂತಿಲ್ಲ. ಸಂಗ್ರಾಹ್ಯವಾದ ಅಭ್ಯಾಸಪೂರ್ಣವಾದ ಒಂದು ಲೇಖನವೂ ಕೆಲವು ಸಲ ಅವುಗಳಲ್ಲಿ ಕಾಣುವದಿಲ್ಲ. ಪತ್ರಿಕೆಗಾಗಿ ಪತ್ರಿಕೆ ಎಂಬ 'ಕರ್ಮಯೋಗ'ದಿಂದ ಏನು ಸಿದ್ಧಿ ದೊರೆಯುವುದೊ ತಿಳಿಯದಂತಾಗಿದೆ. ಕನ್ನಡ ಜನಕ್ಕೆ ಮೇಲ್ಮಟ್ಟದಲ್ಲಿ ಜ್ಞಾನವನ್ನು ನೀಡುವ, ರಸವನ್ನು ಒದವಿಸುವ, ವಿಚಾರವನ್ನು ಪ್ರಚೋದಿಸುವ ಜೀವಂತ ಝುರಿಗಳಾಗಿ ಅವು ಹರಿಯಲಿ ಎಂದು ನಮ್ಮ ಹೆಬ್ಬಯಕೆ. ಕನ್ನಡ ಜನವು ಅವನ್ನೋದಿ ತಮ್ಮ ವ್ಯಕ್ತಿತ್ವವನ್ನು ಸಂಪನ್ನಗೊಳಿಸಬೇಕು, ಅಭಿರುಚಿಯನ್ನು ಬೆಳೆಸಿಕೊಳ್ಳಬೇಕು, ತಮ್ಮ ನಾಲಗೆಯ ಮೇಲೆ ಚೆಲುವಾದ ಕನ್ನಡ ನುಡಿಯನ್ನು ನಲಿದಾಡಿಸಬೇಕು. ಇಂದು ಕಾಣಬರುವ ವಿಚಾರದಾರಿದ್ರ್ಯ ಮತ್ತು ಭಾಷಾ ದಾರಿದ್ರ್ಯ ಇವು ಆರ್ಥಿಕ ದಾರಿದ್ರ್ಯದಷ್ಟೇ ಭೀಕರವಾಗಿವೆ, ಅಪಾಯಕರವಾಗಿವೆ. ನಾವು ಆಡುವ ಮಾತು, ನಾವು ಮಾಡುವ ಭಾಷಣ, ನಾವು ಬರೆಯುವ ಲೇಖನ ಇವುಗಳಲ್ಲಿ ನಮ್ಮ ಕುಳ್ಳತನ, ನಮ್ಮ ತೊದಲುತನ ಎದ್ದುಕಾಣುತ್ತವೆ. ಕನ್ನಡದೊಡನೆ ಇಂಗ್ಲಿಷನ್ನು ವಿಚಿತ್ರವಾಗಿ ಬೆರಸಿ ನಾವು ಆಡುವ ಮಾತು ಇಂದು ಸುಶಿಕ್ಷಿತತನದ ಲಕ್ಷಣವಾಗಿದೆ, ಅಂತೇ ಅಶಿಕ್ಷಿತರೂ ನಮ್ಮ ಅನುಕರಣ ಮಾಡಹೋಗುತ್ತಾರೆ. ಈ ದುರಭ್ಯಾಸದಿಂದ ನಾವು ಹೊರಬೀಳಬೇಕು. ಶುಚಿಯಾದ ರುಚಿಯಾದ ಕನ್ನಡವು ನಮ್ಮ ನಾಲಗೆಯ ಮೇಲೆ ಯಾವಾಗಲೂ ನಲಿದಾಡಬೇಕು,

ಈ ವಿಷಯದಲ್ಲಿ ಹಿಂದೆ ನಡೆದ 'ಕಾಸಿನ ಸಂಘ'ಗಳು ವಿನೋದದಲ್ಲಿ ಪರಿಸಮಾಪ್ತವಾಗದೆ ರಾಶಿರಾಶಿಯಾಗಿ ಊರೂರಿನಲ್ಲಿ ನಡೆಯಬೇಕು.

ಸಮಗ್ರ ಕನ್ನಡಿಗರನ್ನು ಒಂದುಗೂಡಿಸುವ ಮಹಾಶಕ್ತಿ ಕನ್ನಡ ಭಾಷೆ ಸಂಸ್ಕೃತಿಯ ಪ್ರಮುಖ ಅಂಗವಾದ ಕನ್ನಡ ಸಾಹಿತ್ಯದಲ್ಲಿದೆ ಎಂದು ಈವರೆಗಿನ ವಿವೇಚನೆಯಲ್ಲಿ ಸೂಚಿಸ ಲಾಗಿದೆ. ಕನ್ನಡ ಸಾಹಿತ್ಯದ ಪ್ರಾರಂಭ, ವಿಕಾಸ, ವೈವಿಧ್ಯಗಳನ್ನೂ ಕನ್ನಡ ಪ್ರತಿಭೆಯ ಏರಿಳಿತಗಳನ್ನೂ ಕನ್ನಡಿಗರು ಹೆಚ್ಚುಹೆಚ್ಚಾಗಿ ತಿಳಿದಿರುವುದು ಅವಶ್ಯ. ಈ ತಿಳಿವಿಗೆ ನೆರವಾಗ ಲೆಂದು ಪ್ರೌಢ ವ್ಯಾಸಂಗಿಗಳಿಗೋಸ್ಕರ 'ಕನ್ನಡ ಸಾಹಿತ್ಯ ಚರಿತ್ರೆ'ಯನ್ನೂ ಸಾಮಾನ್ಯ ವಾಚಕರಿಗಾಗಿ ಇತ್ತೀಚೆ ತಾನೆ ಸಾಹಿತ್ಯ ಅಕೆಡೆಮಿಯಿಂದ ಪ್ರಕಟವಾದ 'ಕನ್ನಡ ಸಾಹಿತ್ಯದ ಇತಿಹಾಸ'ವೆಂಬ ಪುಸ್ತಕವನ್ನೂ ನಾನು ಬರೆದಿದ್ದೇನೆ. ಎರಡನೆಯ ಪುಸ್ತಕದಲ್ಲಿ ಸುಮಾರು ನೂರು ಪುಟಗಳು ಹೊಸ ಸಾಹಿತ್ಯಕ್ಕೆ ಮೀಸಲಾಗಿರುತ್ತವೆ. ಪೂಜ್ಯರಾದ ದಿವಂಗತ ಆರ್. ನರಸಿಂಹಾಚಾರ್ಯರ ಕವಿಚರಿತೆಯಿಂದ ಮೊದಲುಮಾಡಿ ಈವರೆಗೆ ಹಲವು ವಿದ್ವಾಂಸರೂ ಅಭ್ಯಾಸಿಗಳೂ ಈ ಬಗ್ಗೆ ಪುಸ್ತಕಗಳನ್ನೂ ಲೇಖನಗಳನ್ನೂ ಬರೆದಿದ್ದಾರೆ. ಕನ್ನಡಿಗರು ಇವೆಲ್ಲದರ ಸಹಾಯದಿಂದ ಕನ್ನಡ ಸಾಹಿತ್ಯದ ದರ್ಶನ ಪಡೆದು ಮೂಲಕೃತಿಗಳ ಸ್ವಾರಸ್ಯವನ್ನು ಸವಿಯುವವರಾದರೆ ಅವರ ಜೀವನದಲ್ಲಿ ಒಂದು ಹೊಸ ಶಕ್ತಿ ಕೇಂದ್ರವೇ ನಿರ್ಮಿತವಾಗುವದು. ಈ ಸಮ್ಮೇಲನ ಸಂದರ್ಭದಲ್ಲಿ ವಿಸ್ತಾರವಾದ ಸಾಹಿತ್ಯಸಮೀಕ್ಷೆ ಸಾಧ್ಯವಿಲ್ಲ, ಸಂಕ್ಷಿಪ್ತವಾದ ಸಮೀಕ್ಷೆಯಿಂದ ಪ್ರಯೋಜನವಿಲ್ಲ. ಅಂತೇ ಹಳೆಯ ಮತ್ತು ಹೊಸ ಸಾಹಿತ್ಯದ ಮೂಲ ಪ್ರೇರಣೆ ಗಳು, ಸಿದ್ಧಿ-ಅಸಿದ್ಧಿಗಳು, ಹೊಸ ಅಪೇಕ್ಷೆಗಳು ಈ ಮುಂತಾದ ಸಾಮಾನ್ಯ ಅಂಶಗಳನ್ನು ಎತ್ತಿಕೊಂಡು ಮುನ್ನಡೆಯ ದೃಷ್ಟಿಯಿಂದ ನನ್ನ ಕೆಲವು ವಿಚಾರಗಳನ್ನು ಇಲ್ಲಿ ಮಂಡಿಸುತ್ತೇನೆ.

## ಕನ್ನಡ ಸಾಹಿತ್ಯದ ಮೂಲ ಪ್ರೇರಣೆಗಳು

ಹಳೆಯ ಸಾಹಿತ್ಯವನ್ನು ತೀರ ಮೊದಲಿನಿಂದ ಪರಿಕಿಸಿದರೆ ನೀತಿ ಮತ್ತು ಧರ್ಮ ಇವುಗಳ ಪ್ರಸಾರವು ಅದರ ಮೂಲ ಪ್ರೇರಣೆಗಳಲ್ಲಿ ಪ್ರಮುಖವಾಗಿತ್ತೆಂಬುದು ಕಂಡುಬರುತ್ತದೆ. ಅಂದಂದಿನ ಕಾಲ ದೇಶ ಪರಿಸ್ಥಿತಿಯಲ್ಲಿ ಅದು ಸ್ವಾಭಾವಿಕವಾಗಿತ್ತು. ಈ ಪ್ರೇರಣೆಯಲ್ಲಿ ಸರ್ವಸಾಮಾನ್ಯವಾದ ನೀತಿಧರ್ಮವಿತ್ತು, ವಿಶಿಷ್ಟವಾದ ಮತಧರ್ಮವಿತ್ತು. ಹನ್ನೆರಡನೆಯ ಶತಮಾನದಿಂದ ಮುಂದೆ ಆಧ್ಯಾತ್ಮಿಕ ಅನುಭವ, ಅನುಭಾವ ಇವುಗಳ ಅಭಿವ್ಯಕ್ತಿ ಎಂಬ ಪ್ರೇರಣೆ ಇದರಲ್ಲಿ ಸೇರಿಕೊಂಡಿತು. ಭಕ್ತನ, ಜ್ಞಾನಿಯ, ಸಾಧಕನ ಅಂತರಂಗದ ಆವಿಷ್ಕಾರ ತರತರವಾಗಿ ಶಿವಶರಣರ ಮತ್ತು ಹರಿದಾಸರ ವಚನ-ಕೀರ್ತನೆಗಳಲ್ಲಿ ಮೈದಾಳಿತು. ಒಟ್ಟಿನಲ್ಲಿ ನೋಡಿದರೆ ಕನ್ನಡ ಸಾಹಿತ್ಯ ನೀತಿ, ಧರ್ಮ, ಅಧ್ಯಾತ್ಮ ಇವುಗಳ ತ್ರಿವೇಣೀ ಸಂಗಮ ವಾಗಿದೆ ಎಂದರೆ ತಪ್ಪಲ್ಲ. ಆದರೆ ಆ ಕಾಲದಲ್ಲಿಯೂ ಕೂಡ ಲೌಕಿಕವನ್ನು ಬೆಳಗುವಂಥ ಕೆಲವು ಕೃತಿಗಳು ನಿರ್ಮಾಣವಾದುವು. ಪಂಪಭಾರತ, ಗದಾಯುದ್ಧ ಇವು ಅವುಗಳಲ್ಲಿ ಶ್ರೇಷ್ಠ ಪದವಿಗೇರಿದುವು. ಇವುಗಳ ಕಥಾನಕದಲ್ಲಿ ಲೌಕಿಕತೆ ತಾನಾಗಿ ಇರುವುದಲ್ಲದೆ ತಮ್ಮ ಬೇರೆ ಕೃತಿಗಳಲ್ಲಿ ತೋರಿದ ಆಗಮಿಕ ಅಥವಾ ಧಾರ್ಮಿಕ ಮನೋಭಾವವು ಇವುಗಳಲ್ಲಿ ಹೊಕ್ಕಾಡದಂತೆ ಪಂಪ ರನ್ನರು ಎಚ್ಚರ ವಹಿಸಿದರು. ಈ ವಿವೇಕವನ್ನೂ ರಸಪ್ರಜ್ಞೆಯನ್ನೂ ನಾವು ಮೆಚ್ಚಬೇಕು. ಕುಮಾರರಾಮಚರಿತೆ, ಕಂಠೀರವ ನರಸರಾಜ ವಿಜಯ, ಕೆಳದಿ ನೃಪ ವಿಜಯ ಮುಂತಾದ ಇತಿಹಾಸ ಕಾವ್ಯಗಳು, ಚಿಕದೇವರಾಜವಿಜಯ, ಚಿಕದೇವರಾಯ

ವಂಶಾವಳಿಯಂಥ ಧರ್ಮಸಮ್ಮಿಶ್ರ ಇತಿಹಾಸ ಕಾವ್ಯಗಳು ಇವನ್ನೂ ಈ ಸಂದರ್ಭದಲ್ಲಿ ನೆನೆಯ ಬೇಕು. ಧಾರ್ಮಿಕ ಹಾಗೂ ಆಧ್ಯಾತ್ಮಿಕವೆಂದು ಡಂಗುರ ಸಾರಿ ನಿರ್ಮಿತವಾದ ಕೃತಿಗಳಲ್ಲಿ ಆಗಾಗ ಮತೀಯತೆ ಹಣೆಯಿಕ್ಕಿದರೂ ಕಾವ್ಯಧರ್ಮ ಮತ್ತು ಧರ್ಮ ಇವುಗಳನ್ನು ಮೇಳವಿಸ ಲಾಗಿದೆ, ಅಧ್ಯಾತ್ಮಕ್ಕೆ ರಸಪಟ್ಟವನ್ನು ಕಟ್ಟಲಾಗಿದೆ. ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಯೆಂದರೆ ಅವುಗಳಲ್ಲಿಯ ಕವಿ ಇಲ್ಲವೆ ಅನುಭಾವಿ ಒಂದು ಜೀವಂತವಾದ ಮತ್ತು ವಿಕಸನ ಶೀಲವಾದ ವ್ಯಕ್ತಿತ್ವವನ್ನು ಪಡೆದಿದ್ದಾನೆ ಎಂಬುದು ಅವನ ಕೃತಿಯಿಂದ ನಿಚ್ಚಳವಾಗುತ್ತದೆ. ಅವನು ತಾನು ನಂಬಿದ ಮತ-ಧರ್ಮದ ವಾಹಕನಾಗಿರಲಿ ಅಥವಾ ಮತ-ಮತಗಳ ಮಂಥನ ದಿಂದ ತಾನು ಪಡೆದಿರುವ ಸಮನ್ವಯದ ವಾಹಕನಾಗಿರಲಿ, ಪ್ರಾಮಾಣಿಕವಾಗಿ ರೂಪುಗೊಂಡ ಒಂದು ವ್ಯಕ್ತಿತ್ವದ ಅಚ್ಚು ಅವನ ಕೃತಿಯಲ್ಲಿ ಮೂಡಿರುತ್ತದೆ. ಹೊಸ ಸಾಹಿತ್ಯದ ಮೂಲ ಪ್ರೇರಣೆಯಲ್ಲಿ ಯಾವುದಕ್ಕೆ ಹೆಚ್ಚಿನ ಸ್ಥಾನವಿರುವುದೋ ಆ ಸ್ವತಂತ್ರ ವ್ಯಕ್ತಿತ್ವದ ಸ್ವರೂಪಕ್ಕೆ ಪೂರ್ವಪರಂಪರೆಯಿದೆ ಎಂಬುದನ್ನು ನೆನೆದಿರಬೇಕು. ಅಲ್ಲದೆ ಇಂದು ಹೇಗೆ ಮತ ನಿರ್ದೇಶ ದಿಂದ ಲೇಖಕನ ವ್ಯಕ್ತಿತ್ವವು ಸೂಚಿತವಾಗುವುದಿಲ್ಲವೊ ಅಂದಿಗೆ ಸಹ ಕೆಲವು ಕವಿಗಳ, ಜ್ಞಾನಿಗಳ ಮತ್ತು ಸಾಧುಸಂತರ ವಿಷಯದಲ್ಲಿ ಅವರು ಹುಟ್ಟಿಬಂದ ಮತವು ಅವರ ಸಮಗ್ರ ವ್ಯಕ್ತಿತ್ವದ ಗಮಕವಾಗುತ್ತಿರಲಿಲ್ಲ ಎಂಬುದನ್ನು ಗಮನಿಸಬೇಕು.

ಹಳೆಯ ಕಾವ್ಯದ ಇತರ ಪ್ರೇರಣೆಗಳಲ್ಲಿ ಅಜ್ಜ ನೆಟ್ಟ ಆಲದ ಮರದ ಸುತ್ತು ಹಾಕುವ ಒಂದು ಬಗೆಯ ಸಂಪ್ರದಾಯ ನಿಷ್ಠೆ ಕಂಡುಬರುವಂತೆ 'ಆನೆ ನಡೆದುದೆ ಬೀದಿ' ಎಂಬ ರೀತಿಯ ಕ್ರಾಂತಿಕಾಂಕ್ಷೆಯೂ ಕಂಡುಬಂದಿದೆ. ಒಂದು ಮಾರ್ಗ ಕಾವ್ಯದ ಎಲ್ಲ ರೂಪಗಳಿಗೆ ಜನನಿಯಾದರೆ ಇನ್ನೊಂದು ದೇಸಿಗಬ್ಬದ ಎಲ್ಲ ಪ್ರಕಾರಗಳ ಪ್ರಸವಿತ್ರಿ ಯಾಯಿತು. ಜೀವನ ಮತ್ತು ಸಾಹಿತ್ಯದಲ್ಲಿ ಸಂಪ್ರದಾಯ ನಿಷ್ಠೆ ಅತಿಯಾಗಿ, ಗತಿ ಕುಂಠಿತ ವಾದಾಗ ಕ್ರಾಂತಿಕಾಂಕ್ಷೆ ಸಿಡಿದೆದ್ದಿದೆ. ಕ್ರಾಂತಿಯಿಂದ ಅತಿಸ್ವತಂತ್ರತೆ ತಲೆಯೆತ್ತಿ ಶಿಥಿಲತೆ ಹಬ್ಬುವುದೆಂದು ತೋರಿದಾಗ ಅದಕ್ಕೆ ಕಡಿವಾಣ ಹಾಕಲು ಮತ್ತೆ ಸಂಪ್ರದಾಯ ನಿಷ್ಠೆ ತಲೆದೋರಿದೆ. ಮುಂದೆ ಮುಂದೆ ಎರಡೂ ಪ್ರೇರಣೆಗಳ ಮತ್ತು ಎಲ್ಲ ಪ್ರಕಾರಗಳ ಸಹಜೀವನವು ಸಾಗಿದೆ. ಕೆಲವು ಸಲ ತಮ್ಮ ಪ್ರೇರಣೆ, ಆಶಯ ಏನೇ ಇರಲಿ, ಕವಿಗಳು ಕಣ್ಣುಮುಚ್ಚಿಕೊಂಡು ಪ್ರಚಲಿತ ರೂಪದಲ್ಲಿ ಗ್ರಂಥ ರಚಿಸಿದ್ದಾರೆ. ಇಂಥ ಗ್ರಂಥಗಳಲ್ಲಿ ರಚನೆಯಿದೆ, ಚಮತ್ಕೃತಿಯಿದೆ, ನಿರ್ಮಿತಿಯಿದೆಯೆಂದು ಹೇಳಬಾರದು. ಇವರೆ ಇನ್ನು ಕೆಲವು ಸಲ ತಮ್ಮ ಪ್ರೇರಣೆ ಮತ್ತು ಆಶಯಗಳಿಗೆ ಅನುಗುಣವಾದ ಹಳೆಯ ಸಾಹಿತ್ಯರೂಪಗಳನ್ನು ಆಯ್ದುಕೊಂಡು ಅಥವಾ ಹೊಸ ರೂಪಗಳನ್ನು ನಿರ್ಮಿಸಿಕೊಂಡು ಕವಿಗಳೂ ಅನುಭಾವಿಗಳೂ ತಮ್ಮ ಅಭಿವ್ಯಕ್ತಿಯನ್ನು ಪಡೆದಿದ್ದಾರೆ. ಇಂಥ ಶಬ್ದಾರ್ಥಗಳ ಮತ್ತು ಅಂತರಂಗ ಬಹಿರಂಗಗಳ ಸಹಿತತ್ವದಲ್ಲಿ ಕನ್ನಡ ಸಾಹಿತ್ಯವು ಸಾರ್ಥಕತೆಯನ್ನು ಪಡೆದಿದೆ ಎಂದು ಹೆಮ್ಮೆಯಿಂದ ಹೇಳಬಹುದು.

ಹೊಸ ಸಾಹಿತ್ಯಕ್ಕೆ ಬಂದರೆ ಸಂಪೂರ್ಣವಾಗಿ ಹೊಸ ಜಗತ್ತಿನಲ್ಲಿಯೆ ನಾವು ಕಾಲಿಡು ತ್ತೇವೆ. ಆದರೂ ಹಿಂದೆ ತೋರಿದಂತೆ ಹೊಸ ಸಾಹಿತ್ಯದಲ್ಲಿ ಕಂಡುಬರುವ ಸ್ವತಂತ್ರ ವ್ಯಕ್ತಿತ್ವದ ಮತ್ತು ನವೀನ ರೂಪ ನಿರ್ಮಾಣದ ಪ್ರೇರಣೆಗಳಿಗೆ ಹಳೆಯದರಲ್ಲಿ ಕೆಲಮಟ್ಟಿಗೆ ಪರಂಪರೆಯಿದೆ ಎಂಬುದನ್ನು ಮರೆಯಲಾಗದು. ಮುಖ್ಯವಾಗಿ ಹೊಸ ಸಾಹಿತ್ಯಕ್ಕೆ ಇಪ್ಪತ್ತನೆಯ ಶತಮಾನದ ನಾಗರಿಕತೆ ಗಾಳಿಯಲ್ಲಿ ತೂರಿದ ಎಲ್ಲ ಪ್ರೇರಣೆಗಳು ಹರಿದುಬಂದಿವೆ. ಆಧುನಿಕ ಜಗತ್ತಿನ

ಯಾವ ಭಾಗವೂ ಇದರಿಂದ ಅಲಿಪ್ತವಾಗಿಲ್ಲ. ಹಳೆಯ ಸಾಹಿತ್ಯದಲ್ಲಿ ನೀತಿ, ಧರ್ಮ, ಮತ, ಇವು ಪ್ರಮುಖ ಪ್ರೇರಣೆಗಳಾಗಿದ್ದರೆ ಇಂದು ಅವುಗಳ ಸಾರಭೂತವಾದ ಆದರೆ ಅವಕ್ಕಿಂತ ಬೇರೆ ಯಾದ ಮಾನವ ಸಂಸ್ಕೃತಿ ಹೊಸ ಸಾಹಿತ್ಯದ ಪ್ರಮುಖ ಪ್ರೇರಕವಾಗಿರುತ್ತದೆ. ಸಾಮಾನ್ಯ ವಾಗಿ ಇಂದಿನ ಲೇಖಕನ ಉಚ್ಚತಮ ಆದರ್ಶದಲ್ಲಿ ಮತಧರ್ಮಕ್ಕೆ ಹೆಚ್ಚಿನ ಸ್ಥಾನವಿಲ್ಲ, ಮಾನವ ಸಂಸ್ಕೃತಿಗೆ ಆ ಸ್ಥಾನ ಸಂದಿದೆ. ಸಂಸ್ಕೃತಿಯೆಂದರೇನು, ಮಾನವ ಸಂಸ್ಕೃತಿಯೆಂದರೇನು ಈ ಪ್ರಶ್ನೆಗಳಿಗೆ ಅವನ ಉತ್ತರಗಳು ಯಾವಾಗಲೂ ಖಚಿತವಾಗಿರುತ್ತವೆ ಎಂದು ತೋರುವದಿಲ್ಲ. ಸಂಧಿಕಾಲದ ಜೀವನದಲ್ಲಿರುವ ಎಲ್ಲ ವಿರೋಧಗಳೂ, ವಿರೋಧಾಭಾಸಗಳೂ ಅವನ ವ್ಯಕ್ತಿತ್ವದಲ್ಲಿ ಎದ್ದು ಕಾಣುತ್ತವೆ. ಅವನ ವ್ಯಕ್ತಿತ್ವವು ರೂಪಗೊಳ್ಳುವುದರಲ್ಲಿದೆ, ಅದು ಒಂದೇ, ಎರಡೇ, ಹಲವೇ, ಎನ್ನುವಷ್ಟು ಅದಕ್ಕೆ ಸಂಕೀರ್ಣತೆಯಿದೆ. ಆದರೆ ತನ್ನ ಬಾಳಿಗೆ, ತನ್ನ ತಿಳಿವಳಿಕೆಗೆ ಪ್ರಾಮಾಣಿಕನಾಗಿ ಅವನು ಬೆಳೆಯುತ್ತಿದ್ದಾನೆ ಎಂಬಮಟ್ಟಿಗೆ ಅವನಿಗೆ ಸ್ವತಂತ್ರ ವ್ಯಕ್ತಿತ್ವವಿದೆ. ಯಾವ ಹಿಂದಿನ ಕಾಲದಲ್ಲಿಯೂ ಇಲ್ಲದಂಥ ಸ್ವಾತಂತ್ರ್ಯ ಮತ್ತು ವೈವಿಧ್ಯ ಇಂದಿನ ಲೇಖಕನ ಈ ವ್ಯಕ್ತಿತ್ವದಲ್ಲಿ ಕಣ್ಣಿಗೆ ಬೀಳುತ್ತದೆ. ಇದಕ್ಕೆ ಅನುಗುಣವಾಗಿ ಅವನು ಆಸ್ತಿಕ, ನಾಸ್ತಿಕ, ಧ್ಯೇಯವಾದಿ, ವಾಸ್ತವವಾದಿ, ಯಾವ ವಾದಿಯಾದರೂ ತನ್ನ ಜೀವಸ್ವರದೊಡನೆ ಸಂವಾದಿಯಾಗಿದ್ದರಾಯಿತು ಎಂಬುದು ಮುಖ್ಯ ಸಂಗತಿ. ಅವನ ವಿಷಯದ ಆಯ್ಕೆಯಲ್ಲಿ, ಪ್ರತಿಪಾದನೆಯ ರೀತಿಯಲ್ಲಿ-ಸಾಹಿತ್ಯದ ಎಲ್ಲ ಪ್ರಕ್ರಿಯೆಗಳಲ್ಲಿಯೂ ಅವನಿಗೆ ಇಂದು ಸಂಪೂರ್ಣ ಸ್ವಾತಂತ್ರ್ಯವಿದೆ. ಹೊಸ ಹೊಸ ರೂಪಗಳನ್ನು ಆತನು ನಿರ್ಮಿಸಿಕೊಳ್ಳ ಬಲ್ಲನು; ಹೊಸ ಹೊಸ ಛಂದಗಳಲ್ಲಿ ಹಾಡಬಲ್ಲನು, ಅವನ ವಿಚಾರಕ್ಕೆ, ಅನುಭವಕ್ಕೆ, ಅಭಿವ್ಯಕ್ತಿಗೆ ಯಾವ ಎಲ್ಲೆಯೂ ಇಲ್ಲ. ಆದರೆ ಈ ಅನಿರ್ಬಂಧ ಸ್ವಾತಂತ್ರ್ಯದ ಸದುಪಯೋಗ ವನ್ನು ಮಾಡಿಕೊಳ್ಳಲು ಅವನು ಮುಗಿಲೆತ್ತರ ಬೆಳೆಯಬೇಕಾಗುತ್ತದೆ. ಬಾಳ ಕಡಲಲ್ಲಿ ಮುಳುಗೇಳಬೇಕಾಗುತ್ತದೆ. ಕಣ್ಣೀರನ್ನು ಕುಡಿಯಬೇಕಾಗುತ್ತದೆ. ನುಡಿಯ ಟಂಕಸಾಲೆ ಯಲ್ಲಿ ಸತತವಾಗಿ ದುಡಿಯಬೇಕಾಗುತ್ತದೆ.

## ಕನ್ನಡ ಸಾಹಿತ್ಯದ ಸಿದ್ಧಿ-ಅಸಿದ್ಧಿಗಳು

ಕನ್ನಡ ಸಾಹಿತ್ಯಕ್ಕೆ ಸಾವಿರಾರು ವರ್ಷಗಳ ಹಳಮೆಯಿದೆ, ಸಾವಿರಾರು ಕೃತಿಗಳ ಕಣಜವಿದೆ. ಈ ಸಾವಿರದ ಅಂಕಿಗಿಂತ 'ಸಾವಿರದ' ಕೃತಿಗಳೆಷ್ಟು ಎಂಬುದರಿಂದ ಅದರ ಬೆಲೆ ಯೇರುತ್ತದೆ, ಕಳೆಕಟ್ಟುತ್ತದೆ. ಕನ್ನಡಿಗರ ಸುದೈವದಿಂದ ಅಂಥ ಕೆಲವು ಕೃತಿಗಳು ವಿಧವಿಧ ರೂಪ ತಾಳಿ ಕನ್ನಡ ಸರಸ್ವತಿಯ ಮುಕುಟರತ್ನಗಳಾಗಿ ಮೆರೆಯುತ್ತಿವೆ ಎಂದು ಹೆಮ್ಮೆಯಿಂದ ಹೇಳಬಹುದು. ಚಂಪು, ವಚನ, ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ, ಕೀರ್ತನೆ ಈ ಎಲ್ಲ ರೂಪಗಳಲ್ಲಿ ಕನ್ನಡ ಪ್ರತಿಭೆ ಹಿಂದಿನ ಕಾಲದಲ್ಲಿ ಬೆಳಗಿದೆ. ಅವುಗಳಲ್ಲಿ ಕೆಲವಾದರೂ ಉತ್ತಮ ಕಾವ್ಯದ ಒರೆಗೆ ಹತ್ತುವವು. ಸಂಸ್ಕೃತ ಕಾವ್ಯದಿಂದ ಸ್ಫೂರ್ತಿ ಪಡೆದು ಸಂಪ್ರದಾಯದ ಸಂಕೋಲೆಗಳನ್ನು ತಾನಾಗಿ ತೊಟ್ಟು ಸಹ ಕನ್ನಡ ಚಂಪೂ ಕಾವ್ಯ ತನ್ನ ಶಿಖರಗಳಲ್ಲಿ ಹೆಚ್ಚಿನ ರಸಸಿದ್ಧಿಯನ್ನು ಎತ್ತಿ ತೋರಿಸಿದೆ. ಸಂಸ್ಕೃತ ಚಂಪೂಗ್ರಂಥಗಳು ಪಾಂಡಿತ್ಯಜಡವೂ ಚಮತ್ಕೃತಿಪ್ರಧಾನವೂ ಆಗಿದ್ದರೆ ಕನ್ನಡ ಚಂಪೂಕೃತಿಗಳು ಸಾಮಾನ್ಯವಾಗಿ ರಸಸ್ಯಂದಿ ಯಾಗಿವೆ, ಉತ್ತಮಿಕೆಯಲ್ಲಿಯಂತೂ ರಸಘಟ್ಟಿಗಳಾಗಿವೆ, 'ಸಂಸಾರ ಸಾರೋದಯ'ವಾದ ಭವ್ಯ ನಿರ್ಮಿತಿಗಳಾಗಿವೆ. ವಚನವಾಙ್ಮಯದಲ್ಲಿ ಅನುಭಾವ ಗದ್ಯವು ಭಾವಕವಿತೆಯ ವಾಹಕವಾಗಿ,

ಎತ್ತರದ ಅನುಭವವನ್ನು ಜನದ ಹತ್ತಿರ ತಂದು ಬಿತ್ತರಿಸುವ ಸವಿನುಡಿಯಾಗಿ ಚೆಲ್ಲವರಿದಿದೆ, ಕನ್ನಡವು ಜಗತ್ತಿಗೆ ನೀಡಿದ ಅನೂನದಾನವಾಗಿದೆ. ರಗಳೆಯಲ್ಲಿ ಭಕ್ತರ ಜೀವದ ಭಾವದ ಹೊಳೆ ಬಿಚ್ಚತವಾಗಿ ತಡೆಯಿಲ್ಲದೆ ಕಡೆಯಿಲ್ಲದೆ ಹರಿದಿದೆ. ಷಟ್ಪದಿ ವಿಶಾಲಪಾತ್ರವಾಗಿ ತರತರದ ಗಾತ್ರವಾಗಿ ತನ್ನ ತೊಡೆಯ ಮೇಲೆ ಕತೆ, ಪಾತ್ರ, ವರ್ಣನೆಗಳ ತೆಪ್ಪಗಳನ್ನು ತೇಲಿಸುತ್ತ ನಿದಾನವಾಗಿ ಸಾಗಿದೆ. ತ್ರಿಪದಿ, ಸಾಂಗತ್ಯ, ಕೀರ್ತನೆಗಳು ಜನಜೀವನ, ಜನಭಾಷೆಗೆ ಇನ್ನೂ ಹತ್ತಿರ ಬಂದು ಜೀವನ ವಿವೇಕವನ್ನೂ, ಸಮನ್ವಯ ದರ್ಶನವನ್ನೂ, ಭಕ್ತಿಸಾರವನ್ನೂ ಸುಲಭತರವಾಗಿ ಸಾರಿರುತ್ತವೆ. ಈ ಸಾಹಿತ್ಯರೂಪಗಳ ಸಾರ್ಥಕ್ಯದಲ್ಲಿಯೂ ಹಳೆಯ ಕಾವ್ಯ ತನ್ನ ಸಿದ್ಧಿಯನ್ನು ಹೊಂದಿ ನಿಂತಿದೆ. ಹಳೆಯ ಕಾವ್ಯದ ಸಿದ್ಧಿ ತಲೆದೂಗಿಸುವಂತೆ ಅದರ ಅಸಿದ್ಧಿ ಕಣ್ಣೊತ್ತುವುದು. ಅಂದಿನ ಕಾಲಮಾನದಲ್ಲಿ ಅದರ ವಿಷಯಕ್ಕೆ ಮಿತಿ ಮರ್ಯಾದೆ ಗಳಿದ್ದುವು, ವರ್ಣನೆಗೆ ನಿಯಮ ನಿರ್ಬಂಧಗಳಿದ್ದುವು. ಹೀಗಾಗಿ ಕೆಲವು ಚಂಪೂ ಕಾವ್ಯಗಳಲ್ಲಿ ಚರ್ವಿತ ಚರ್ವಣದಿಂದ ರಸದ ಬದಲು ಬೇಸರ ಹುಟ್ಟುತ್ತದೆ. ಕತೆಗಿಂತ ವರ್ಣನೆಯ ಪ್ರಸ್ಥ ಬೆಳೆಯುತ್ತದೆ. ವರ್ಣನೆಯಲ್ಲಿಯೂ ಕವಿ ಸಮಯದ ಕಣ್ಣುಕಟ್ಟು, ಶ್ಲೇಷ ಚಮತ್ಕಾರಗಳೇ ಹೆಚ್ಚು. ಷಟ್ಪದಿ ಕಾವ್ಯಗಳಲ್ಲಿ ಭಾಷೆಯ ಬಿಗುಹು ಕಡಿಮೆಯಾದರೂ ವರ್ಣನೆಯ ಧಾಟಿ ಹಳೆಯದೇ ಆಗಿದೆ. ಕ್ವಚಿತ್ತಾಗಿ ಕೆಲವು ಕೃತಿಗಳಲ್ಲಿ ವರ್ಣನೆಯ ಸ್ವತಂತ್ರ ರೀತಿ ಬಂದಿದೆಯೆನ್ನ ಬಹುದು. ಸಾವಿರಾರು ವರ್ಷ ಹಿಂದಿನ ಭಾರತದಲ್ಲಿ, ಕರ್ನಾಟಕದಲ್ಲಿ, ರಾಜಕೀಯ, ಸಾಮಾಜಿಕ, ಮುಂತಾದ ಅವೆಷ್ಟು ಅರ್ಥಪೂರ್ಣವಾದ ಘಟನೆಗಳು ನಡೆದಿರಬೇಡ? ಜನಜೀವನದ ಮೇಲೆ, ಕವಿಹೃದಯದ ಮೇಲೆ ಅವು ಮಾಡಿದ ತೀವ್ರ ಪರಿಣಾಮವೇನು? ಅಂದಿನ ತಾಕಲಾಟವೇನು? ತೂಗಾಟವೇನು? ನೋವೇನು ನಲಿವೇನು? ಎತ್ತರಕ್ಕೆ ಹೋದಾಗ ಜನರ ಬದುಕು ಹೇಗಿತ್ತು? ಇಳಿದಾಗ ಹೇಗಿತ್ತು? ಪರಕೀಯರ ದಾಳಿ ಬಂದಾಗ ಜನ ಪಟ್ಟ ಪಾಡೇನು? ತೋರಿದ ನೀರೇನು? ಸೂರ್ಯ ಚಂದ್ರ ತಾರೆಗಳ ನೆರವಿನಿಂದ ನೆಲದಲ್ಲಿ, ಬಾನಿನಲ್ಲಿ ಪ್ರಕೃತಿ ಹೂಡಿರುವ ರಂಗುರಂಗಾದ ನಾಟಕದ ದೃಶ್ಯಗಳು ಎಷ್ಟು ರಮ್ಯವಾಗಿರ ಬಹುದು! ಕೃಷ್ಣೆ, ತುಂಗಭದ್ರೆ, ಕಾವೇರಿಗಳು ದಡ ತುಂಬಿ ಹರಿದು ಬರುವಾಗ ಅಂದಿನ ಕವಿ ಹೃದಯವನ್ನು ಅಲುಗಿಸಲಿಲ್ಲವೆ? ಜೋಗದ ಜಲಪಾತವು ಕವಿಯನ್ನು ದಂಗುಬಡಿಸಿ ನಿಲ್ಲಿಸ ಲಿಲ್ಲವೆ? ಅವು ಕವಿಪ್ರತಿಭೆಯನ್ನು ಜಾಗರಿಸಲಿಲ್ಲವೆ? ಬರಲಿರುವ ಹೊಸ ಕವಿಗೆಂದು ಹಿಂದಿನ ಕವಿ ಇದನ್ನು ಬಿಟ್ಟುಕೊಟ್ಟನೆ? ಒಟ್ಟಿನಲ್ಲಿ ಹಳೆಯ ಕಾವ್ಯ ಪೌರಾಣಿಕ ಪಾತ್ರಗಳ ತತ್ಕಾಲೀನ ಮಹಾ ವ್ಯಕ್ತಿಗಳ ಚರಿತ್ರ ನಿರೂಪಣೆಯಲ್ಲಿ ಹೆಚ್ಚು ತೊಡಗಿ ಪ್ರತ್ಯಕ್ಷಜೀವನದ ಪ್ರತಿಬಿಂಬ ವಾಗಲು ಹವಣಿಸಲಿಲ್ಲ. ಅದರ ಪ್ರಕೃತಿವರ್ಣನೆಗಳು ಬಹುಮಟ್ಟಿಗೆ ಕವಿಸಮಯದ ಪಡಿಯಚ್ಚಿ ನಲ್ಲಿ ಮೂಡಿಸಿದ ಪ್ರತಿಕೃತಿಗಳಾದವು. ಇದನ್ನೆಲ್ಲ ಹೇಳುವಾಗ ನಮ್ಮ ಉತ್ತಮ ಕಾವ್ಯಗಳಲ್ಲಿ, ಇತರ ಕಾವ್ಯದ ಉತ್ತಮ ಭಾಗಗಳಲ್ಲಿ ಮೂಡಿರುವ ಹೃದಯಸ್ಪರ್ಶಿಯಾದ ಜೀವನಚಿತ್ರಣ ಮತ್ತು ಪ್ರಕೃತಿವರ್ಣನೆ ಇವುಗಳ ಸ್ವಾರಸ್ಯವನ್ನು ಅಲ್ಲಗಳೆಯುತ್ತೇನೆಂದು ಯಾರೂ ಭಾವಿಸ ಬಾರದು. ಅಂದಂದಿನ ಮಿತಿಯಲ್ಲಿ ಹಳೆಯ ಕವಿಗಳು ತಮ್ಮ ಕಲ್ಪಕತೆಯನ್ನು ಚೆನ್ನಾಗಿ ತೋರಿದ್ದಾರೆ.

ಹೊಸ ಸಾಹಿತ್ಯದ ಸಿದ್ಧಿಯನ್ನು ಇಷ್ಟರಲ್ಲಿ ಹೇಳುವುದು ಧಾರ್ಷ್ಟ್ಯವಾದೀತು. ಅದು ತನ್ನ ಶೈಶವ ಬಾಲ್ಯಗಳನ್ನು ದಾಟಿ ತಾರುಣ್ಯದ ಮಧ್ಯದಲ್ಲಿದೆ. ಅದಿಟ್ಟುಕೊಂಡ ಹವ್ಯಾಸಕ್ಕೆ ಕಳೆದುಹೋದ ಕಾಲಾವಧಿ ಕಡಿಮೆಯಾಗಿತ್ತು. ಹೊಸ ಆಶಯ, ಹೊಸ ರೂಪ, ಹೊಸ ಶೈಲಿ

ಇವುಗಳ ನಿಸ್ಸೀಮ ಸಾಗರದಲ್ಲಿ ಹೊಸ ಸಾಹಿತ್ಯ ಈಸತೊಡಗಿದೆ. ಕೆರೆ ಹೊಳೆಗಳಲ್ಲಿ ಈಸುವುದು ಬೇರೆ, ಕಡಲಲ್ಲಿ ಈಸುವುದು ಬೇರೆ. ಬೆಟ್ಟದೆರೆಗಳ ನಡುವೆ ತಾನು ಮುಳುಗದಂತೆ ಈಸಿ ಅದು ಮುಂದರಿಯಬೇಕಾಗುತ್ತದೆ. ಇಷ್ಟು ಹೇಳಿಯೂ ವ್ಯಕ್ತಿತ್ವದ ಅನಿರ್ಬಂಧ ಸ್ವಾತಂತ್ರ್ಯ, ಅಭಿವ್ಯಕ್ತಿಯ ನಾವೀನ್ಯ ಹಾಗೂ ವೈವಿಧ್ಯ ಇವುಗಳಿಂದ ಇಂದಿನ ಗಣ್ಯ ಲೇಖಕರು ತಂತಮ್ಮ ಕೃತಿ ನಿರ್ಮಾಣದ ಪರಿಪಾಕದತ್ತ ಹೊರಟಿದ್ದಾರೆ ಎನ್ನಬಹುದು. ಕೆಲವರಲ್ಲಿ ಈ ಪರಿಪಾಕವು ಪ್ರತ್ಯಕ್ಷ ಸಿದ್ಧಿಯಾಗಿ ಲಭಿಸಿರುತ್ತದೆ. ಭಾವಗೀತೆ, ಸಣ್ಣಕತೆ, ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ, ಚರಿತ್ರೆ ಈ ಮೊದಲಾದ ರೂಪಗಳಲ್ಲಿ ಹೊಸಗನ್ನಡವು ಮೇಲ್ಮೆಯನ್ನು ಪಡೆದಿದೆ. ವಿಶೇಷತಃ ಕನ್ನಡ ಭಾವಗೀತೆ, ಬಗೆಬಗೆಯ ಬೆಡಗು, ಆಳ ನಿರಾಳ, ಕುಣಿತ ಮಣಿತ ಇವುಗಳಲ್ಲಿ ಒಳ್ಳೆಯ ಮಟ್ಟವನ್ನು ತೋರಿದೆ, ತನ್ನ ಉತ್ತಮಿಕೆಯಲ್ಲಿ ಅನ್ಯ ಭಾರತೀಯ ಭಾಷೆಗಳಲ್ಲಿಯ ಉತ್ತಮ ಕೃತಿಗೆ ಸರಿದೊರೆಯಾಗಿದೆ. ಒಳ್ಳೆಯ ಸಣ್ಣಕತೆ-ಕಾದಂಬರಿಗಳು ಸಂಖ್ಯೆಯಲ್ಲಿ ಅಷ್ಟು ಹೆಚ್ಚಾಗಿಲ್ಲವಾದರೂ ತಂತ್ರ-ವೈವಿಧ್ಯದಲ್ಲಿ ಮತ್ತು ಕುಶಲರಚನೆಯಲ್ಲಿ ಎತ್ತಿದ ಕೈಯಾಗಿವೆ. ಮುಖ್ಯವಾಗಿ ಸ್ವತಂತ್ರ ವ್ಯಕ್ತಿಮತ್ವ, ಅನುಭವ ಪ್ರಾಮಾಣ್ಯ, ಪ್ರಯೋಗಶೀಲತೆ, ವಾಸ್ತವ ಪ್ರಜ್ಞೆ, ವಿಶ್ವದೃಷ್ಟಿ ಇವುಗಳಲ್ಲಿ ಹೊಸ ಸಾಹಿತ್ಯವು ತನ್ನದೇ ಆದ, ಹಿಂದೆಂದೂ ತೋರದ ಕಳೆಯನ್ನು ಪಡೆದಿದೆ, ಹೆಚ್ಚುಹೆಚ್ಚಾದ ಸಿದ್ಧಿಯತ್ತ ಸಾಗಿದೆ. ಅದರ ಅಸಿದ್ಧಿಯನ್ನು ಅನೇಕ ರೀತಿಯಲ್ಲಿ ಹೇಳಬಹುದು, ಬೆಳೆಯುತ್ತಿರುವ ಯಾವ ಸಾಹಿತ್ಯದ ಬಗ್ಗೆಯೂ ಹೇಳಬಹುದು. ಹೊಸ ಕಾವ್ಯದಲ್ಲಿ ರಮ್ಯ, ನವ್ಯ ಎಲ್ಲ ಪ್ರಕಾರಗಳು ಬಂದಿದ್ದರೂ ಎಷ್ಟು ಅವು ಜೀವನಸ್ಪರ್ಶಿಯಾಗಿವೆ ಎಂಬುದನ್ನು ಪರೀಕ್ಷಿಸಿ ನೋಡಬೇಕು. ತನ್ನ ವ್ಯಕ್ತಿತ್ವದಲ್ಲಿ ಅವೆಷ್ಟು ಬೆರೆತು ಬಂದಿವೆ, ಸುತ್ತುಮುತ್ತಿನ ಜೀವನಕ್ಕೆ ಅವೆಷ್ಟು ಹೊಂದಿಬಂದಿವೆ ಎಂಬ ಪ್ರಶ್ನೆಯನ್ನು ಕವಿ ಕೇಳಬೇಕು. ಕೆಲವು ಸಲ ಕಡ ತಂದ ಗರಿಗಳನ್ನು ಸಿಕ್ಕಿಸಿಕೊಂಡು ನಮ್ಮ ಕವಿತೆಯ ನವಿಲು ಕುಣಿಯುವಂತೆ ಕಾಣುತ್ತದೆ. ಕತೆ ಕಾದಂಬರಿಗಳೂ ಕೆಲವು ಸಲ ಒಪ್ಪಿಯೊ, ಒಪ್ಪದೆಯೊ ಪಶ್ಚಿಮದ ನಿರ್ಮಿತಿಯ ನಿರ್ಮಾಲ್ಯಗಳಾಗಿ ತೋರುತ್ತವೆ.

## ಕನ್ನಡ ಸಾಹಿತ್ಯದ ಬಗ್ಗೆ ಹೊಸ ಅಪೇಕ್ಷೆಗಳು

ಆಧುನಿಕ ಸಾಹಿತ್ಯದ ಮುನ್ನಡೆಯ ದೃಷ್ಟಿಯಿಂದ ಲೇಖಕರ ಬಗ್ಗೆ ರಸಿಕರ ಮತ್ತು ವಿಚಾರವಂತರ ಹೊಸ ಅಪೇಕ್ಷೆಗಳಾವುವು, ಅವನ್ನು ಹೇಗೆ ಪೂರೈಸಬೇಕು ಎಂಬುದು ಈಗ ಯೋಚಿಸಬೇಕಾದ ವಿಷಯವಾಗಿದೆ. ೧. ಮೊದಲನೆಯದಾಗಿ, ಇಂದಿನದು ಅವಸರದ ಯುಗವೆಂದು ಅವಸರದ ಬರೆವಣಿಗೆಗೆ ಯಾರೂ ಕೈಹಾಕಬಾರದು. ವಿಚಾರಪ್ರಧಾನವಾದ ಪುಸ್ತಕವಿರಲಿ ನಿರ್ಮಿತಿಪ್ರಧಾನವಾದ ಕೃತಿಯಿರಲಿ, ಯಾವುದಕ್ಕೂ ಲೇಖಕನು ಸಾಧ್ಯವಿದ್ದಷ್ಟು ಪೂರ್ವಸಿದ್ಧತೆಯನ್ನು ಮಾಡಿಕೊಳ್ಳಬೇಕು. ಈ ಪೂರ್ವಸಿದ್ಧತೆ ಲೇಖಕನ ಸರ್ವಾಂಗೀಣ ವಿಕಾಸದ ರೂಪದಲ್ಲಿರಬಹುದು, ವಿಶಿಷ್ಟ ವಿಷಯಕ್ಕೆ ಬೇಕಾದ ಸಾಮುಗ್ರಿ ಸಂಕಲನದಲ್ಲಿರಬಹುದು. ಲೇಖಕನ ವ್ಯಕ್ತಿತ್ವದ ಅಚ್ಚು ಅವನ ಲೇಖನಗಳಲ್ಲಿ ತಿಳಿದೊ, ತಿಳಿಯದೆಯೋ ಮೂಡುತ್ತಿರುತ್ತದೆ. ಈ ವ್ಯಕ್ತಿತ್ವವು ಸರ್ವಾಂಗೀಣ ವಿಕಾಸದಿಂದಲೇ ಸಾಧ್ಯ. ಇದಕ್ಕಾಗಿ ದೀರ್ಘಕಾಲದ ಪರಿಶ್ರಮ ಅವಶ್ಯ. ಪರಿಶ್ರಮವು ವ್ಯಾಸಂಗ, ವಿಚಾರಮಂಥನ, ಮನನಗಳ ರೂಪದಲ್ಲಿರುವಂತೆ ತೆರೆದ ಕಣ್ಣಿಂದ ಹತ್ತಿರ ಹೋಗಿ ದೂರ ನಿಂತು ಸುತ್ತೂಕಡೆಯಿಂದ ಜೀವನವನ್ನು ನೋಡುವುದರಲ್ಲಿರುತ್ತದೆ. ಸ್ವಂತ ಬಾಳಿನ ಎಲ್ಲ ಪರಿಗಳನ್ನೂ ಅನುಭವಿಸುವುದರಲ್ಲಿರುತ್ತದೆ. ಲೇಖಕನು

ಭೋಕ್ತನಾಗಬೇಕು, ಸಾಕ್ಷಿಯಾಗಬೇಕು. ತಾನು ಕಣ್ಣೀರಿಡಬೇಕು, ಹೆರವರ ಕಣ್ಣೀರೊರಸಬೇಕು. ಮನವನ್ನು ಘನದತ್ತ ಹೊರಳಿಸಬೇಕು, ಹೃದಯವನ್ನು ಸದಯವಾಗುವಂತೆ ಅರಳಿಸಬೇಕು. ಅನುಭವದ ಕ್ಷಿತಿಜಗಳನ್ನು ಕ್ಷಣಕ್ಷಣಕ್ಕೆ ವಿಸ್ತರಿಸಬೇಕು. ಸತ್ಯ ಶಿವ ಸುಂದರಗಳ ನಿತ್ಯ ಉಪಾಸಕನಾಗಬೇಕು. ಈ ರೀತಿ ಪಡೆಯುವ ಸಂಸ್ಕಾರಗಳಿಂದ ಅವರವರ ಯೋಗ್ಯತೆ, ಮನಃ ಪ್ರವೃತ್ತಿ, ಪರಿಸರಗಳಿಗೆ ಅನುಗುಣವಾಗಿ ಅವರವರ ವ್ಯಕ್ತಿತ್ವವು ಬೇರೆಬೇರೆಯಾಗಬಹುದು. ಆದರೆ ಅದಕ್ಕೆ ಸಂಸ್ಕೃತಿಯ ಸಂಸ್ಪರ್ಶವಿರಬೇಕು. ಹಿಂದಿನ ಲಾಕ್ಷಣಿಕರು ಇದಕ್ಕೆ ವ್ಯುತ್ಪತ್ತಿ ಎಂಬ ಪದವನ್ನು ಬಳಸಿದರು. ವ್ಯುತ್ಪತ್ತಿಯೆಂದರೆ ಬರೀ ವಿದ್ವತ್ತೆಯಲ್ಲ. ವಿದ್ವತ್ತೆ ಮತ್ತು ಜೀವನ ವಿವೇಕ ಅಂದರೆ ಸಂಸ್ಕೃತಿ. ಇದನ್ನು ಪಡೆದು ತನ್ನ ಪ್ರತಿಭೆಗೆ, ಲೇಖನ ಶಕ್ತಿಗೆ ಲೇಖಕನು ಮೆರುಗನ್ನು ಕೊಡಬೇಕು, ತೇಜದ ನೀರನ್ನುಣ್ಣಿಸಬೇಕು. ಆಧುನಿಕ ಲೇಖಕರು ತಾವು ಆಧುನಿಕರೆಂದು ತೋರಿಸುವ ಹಟದಿಂದ ಪ್ರಾಚೀನರು ತೋರಿದ ಒಳ್ಳೆಯ ದಾರಿಯನ್ನು ಬಿಡಕೂಡದು. ಕೇವಲ ಪ್ರತಿಭೆಯಿಂದ ಇಲ್ಲವೆ ಇಚ್ಛಾಶಕ್ತಿಯಿಂದ ಸಾಮಾನ್ಯವಾಗಿ ಯಾವ ಒಳ್ಳೆಯ ಕೃತಿಯೂ ಹುಟ್ಟಲಾರದು. ಅಲೌಕಿಕ ಪ್ರತಿಭಾವಂತರು ಸಹ ಪೂರ್ವಸಂಸ್ಕಾರವನ್ನು ಪಡೆದೇ ಬಂದಿರುತ್ತಾರೆ. ಇಂದು ಪ್ರಜಾಪ್ರಭುತ್ವವಿದೆ, ವೈಯಕ್ತಿಕ ಸ್ವಾತಂತ್ರ್ಯವಿದೆ. ಅಂದರೆ ತನಗೆ ತೋರಿದೊಡನೆ ನಾಲ್ಕು ಸಾಲು ಪದ್ಯ ಗೀಚಿ, ನಾಲ್ಕು ಪುಟ ಕತೆ ಬರೆದು, ಅಚ್ಚಿನಲ್ಲಿ ಅದನ್ನು ಕಂಡುಬಿಟ್ಟರೆ ತಾನು ಧನ್ಯ ಎಂದು ಲೇಖಕರು ತಿಳಿಯುವುದಾದರೆ ಇಂಥ ಪ್ರಜಾಪ್ರಭುತ್ವಕ್ಕೂ ವೈಯಕ್ತಿಕ ಸ್ವಾತಂತ್ರ್ಯಕ್ಕೂ ಶರಣು ಅನ್ನಬೇಕಾಗುತ್ತದೆ! ಯಾವ ಲೇಖಕನಿಗೂ ಕೀರ್ತಿ ಬೇಕಲ್ಲವೆ? ನೂರಾರು ಅಗ್ಗದ ನುಡಿಮುಗ್ಗಗಳನ್ನು ಹಾಕಿದ 'ಮಹಾಶೂರ' ಎಂಬ ಕೀರ್ತಿ ಅವನಿಗೆ ಹೆಚ್ಚು ಪ್ರಿಯವೋ, ಮುತ್ತಿನಂಥ ಒಂದು ಕೃತಿಯನ್ನು ನಿರ್ಮಿಸಿ ಜನಮನದಲ್ಲಿ ನೆಲಸಿದ 'ಮಹಂತ' ಎಂಬುದು ಹೆಚ್ಚು ಪ್ರಿಯವೊ? ಇದರರ್ಥ ಹೆಚ್ಚು ಬರೆಯಬಾರದೆಂದಲ್ಲ, ಹೆಚ್ಚಳವಿರುವಂತೆ ಬರೆಯಬೇಕು. ಕನ್ನಡ ಲೇಖಕರನ್ನು ಕುರಿತು ವಿಶೇಷವಾಗಿ ಕೇಳಿಕೊಳ್ಳಬಹುದಾದರೆ, ಅವರು ತಮ್ಮ ಅನುಭವ-ಸಂಪತ್ತಿಯನ್ನೂ ವಿಚಾರ ಸಂಪತ್ತಿಯನ್ನೂ ಹೆಚ್ಚಿಸಿಕೊಳ್ಳಬೇಕಲ್ಲದೆ ಸ್ವತಂತ್ರರಾಗಿ ಧೀರರಾಗಿ ಆದರೆ ಗಂಭೀರರಾಗಿ ಆಲೋಚನೆ ಮಾಡಲು ತೊಡಗಬೇಕು. ಕನ್ನಡ ನಾಡಿನ ಮುನ್ನಡೆಗೆ ಅಡ್ಡಿ ಆತಂಕವಾಗಿ ನಿಂತಿರುವ ಎಲ್ಲ ಸಮಸ್ಯೆಗಳನ್ನು ಕುರಿತು ಅವರು ಸ್ವತಂತ್ರ ವಿಚಾರ ಮಾಡಬೇಕು. ಅದನ್ನು ಸಾರುವ ಧೈರ್ಯವನ್ನು ಪಡೆಯಬೇಕು. ಅವರ ಸ್ವತಂತ್ರ ವಿಚಾರಕ್ಕೆ ಜಾಗತಿಕ ವಿಚಾರ ಪ್ರಣಾಲಿಗಳ ಹಿನ್ನೆಲೆಯಿರಬೇಕು, ಭಾರತೀಯ ಪರಂಪರೆಯ ಪೀಠಿಕೆಯಿರಬೇಕು. ಅವರ ಸ್ವತಂತ್ರ ವಿಚಾರವು ವ್ಯಕ್ತಿ-ನಿರಪೇಕ್ಷವಿರಬೇಕು, ರಾಗದ್ವೇಷದಿಂದ ದೂರವಾಗಿರಬೇಕು. ಯಾವ ಸ್ಥಾನಮಾನದ ಆಸೆಯಿಲ್ಲದೆ ಇರುವ ಇಂಥ ಸ್ವತಂತ್ರ ವಿಚಾರಿಗಳು ಕನ್ನಡ ನಾಡಿನಲ್ಲಿ ಹೆಚ್ಚಿದರೆ ಮತ್ತು ಹಿತಸಂಬಂಧಗಳೊಡನೆ ತಾಕಲಾಟಗಳು ಬಂದರೂ ಹೆದರದೆ ಹುಟ್ಟಿದ ವಿಷವನ್ನು ನುಂಗಿ ಅರಗಿಸಬಲ್ಲವರಾದರೆ ಮುಂಬರುವ ಕರ್ನಾಟಕಕ್ಕೆ ಸುಖಶಾಂತಿಗಳನ್ನು ನೀಡುವ ಅಮೃತಪುತ್ರರಾದಾರು ಅವರು! ಇಂದಿನ ಲೇಖಕನ ಪ್ರತಿಭೆ ಪರಿಸರದ ಕತ್ತುಸುರಿನಿಂದ ಕುಸಿಬಿದ್ದಿದೆ, ಲೋಭಲಾಭಗಳ ಸಂಕೋಲೆಯಿಂದ ಸೊರಗಿ ಸಣ್ಣಾಗಿದೆ. ಅನುಭವ ಸಂಪತ್ತಿ, ವಿಚಾರ ಸಂಪತ್ತಿ, ಪ್ರಸಂಗ ಬಂದರೆ ವಿಚಾರ ಸಂಘರ್ಷ ಇವುಗಳ ಪ್ರಜ್ವಲಿತ ಅಗ್ನಿಯಲ್ಲಿ ಇನ್ನು ಮುಂದೆ ಪ್ರತಿಭಾ ದೇವತೆಯ ಅವತಾರವಾಗಲಿದೆ! ಆದ್ದರಿಂದ ಅಲ್ಪಸ್ವಲ್ಪ ಪ್ರತಿಭೆಯನ್ನು ಗೃಹೀತ ಹಿಡಿದು ಹರಕು ಮುರಕಾದ ವ್ಯುತ್ಪತ್ತಿಯ ಬಲದಿಂದ ಲೇಖನಕಾರ್ಯ ಮಾಡುವವಕ್ಕಿಂತ ಕನ್ನಡ ಲೇಖಕರು ಸ್ವತಂತ್ರ

ವಿಚಾರಧನವನ್ನು ಗಳಿಸಲು ತೊಡಗಬೇಕು, ಅಂಥ ವಿಚಾರ ಕೇಂದ್ರಗಳನ್ನು ಊರೂರಲ್ಲಿ ಮಾಡಿಕೊಳ್ಳಬೇಕು. ವೈಚಾರಿಕ ನೇತೃತ್ವವೇ ಕರ್ನಾಟಕಕ್ಕೆ ಮತ್ತು ಭಾರತಕ್ಕೆ ತಾರಕಮಂತ್ರವೆಂದು ಸಾರಬೇಕು. ಈ ವಿಚಾರ-ತಪಸ್ಸಿನಿಂದ, ಅಗ್ನಿದಿವ್ಯದಿಂದ ಕನ್ನಡ ಪ್ರತಿಭೆ ಎದ್ದು ಬರುವಳೆಂಬ ನನ್ನ ನಂಬಿಗೆಯನ್ನು ನಮ್ರವಾಗಿ ತಿಳಿಸುತ್ತೇನೆ. ನನ್ನ ಈ ದಿಟ್ಟತನಕ್ಕೆ ಲೇಖಕ ಮಿತ್ರರು ಕ್ಷಮಿಸಬೇಕು.

೨. ಅನುಭವ ಮತ್ತು ವಿಚಾರಗಳ ಸಂಪತ್ತಿಯೊಂದಿಗೆ ಲೇಖಕನಿಗೆ ಭಾಷಾ ಸಂಪತ್ತಿಯೂ ಬೇಕು. ಕನ್ನಡ ಲೇಖಕನು ಭಾಷಾ ಸಂಪತ್ತಿಯನ್ನು ತನ್ನದಾಗಿಸಿಕೊಳ್ಳಲು ಹಳೆಯ ಮತ್ತು ಹೊಸ ಕನ್ನಡ ಸಾಹಿತ್ಯದಲ್ಲಿಯ ಎಲ್ಲ ಒಳ್ಳೆಯ ಕೃತಿಗಳನ್ನು, ಉತ್ತಮ ಕೃತಿಗಳನ್ನಾದರೂ ಓದಬೇಕು, ನುರಿಸಿಕೊಳ್ಳಬೇಕು. ಪೂರ್ವಕಾವ್ಯರಚನೆಗಳನ್ನು ಮೊದಲು ಕಲಿತವನಿಗಲ್ಲದೆ ನುಡಿಯಲ್ಲಿ ಜಾಣು ಮತ್ತು ಬೆಡಗು ಬರಲಾರದು ಎಂಬುದಾಗಿ ಕವಿರಾಜ ಮಾರ್ಗಕಾರನು ಹೇಳಿದ ಸೂಕ್ತಿ ನೆನೆಯತಕ್ಕುದಾಗಿದೆ. ಜೊತೆಗೆ ಬಳಕೆಯ ಮಾತಿನ ಎಲ್ಲ ಸವಿ ಸೊಗಸನ್ನೂ ಅರಿತಿರಬೇಕು, ಜನಪದ ಸಾಹಿತ್ಯವನ್ನೂ ಓದಿ ಮೆಚ್ಚಿಕೊಂಡಿರಬೇಕು. ಸಂಸ್ಕೃತ ಭಾಷೆಯ ಅಭ್ಯಾಸವೂ ಸಂಸ್ಕೃತ ವಾಙ್ಮಯದ ಅಭ್ಯಾಸವೂ ಕನ್ನಡ ಲೇಖಕರಿಗೆ ಅವಶ್ಯವೆಂಬುದನ್ನು ಎಷ್ಟು ಎತ್ತಿಹೇಳಿದರೂ ಸಾಲದು. ಕನಿಷ್ಠ ಪಕ್ಷಕ್ಕೆ, ಇಂದಿನ ಬರೆವಣಿಗೆಯಲ್ಲಿ ನಾವು ಬಳಸುತ್ತಿರುವ ಸಂಸ್ಕೃತ ಪದಗಳನ್ನು ಶುದ್ಧವಾಗಿ ಬರೆಯುವ ರೀತಿ, ಅವುಗಳ ವಿಶೇಷಾರ್ಥ ಇಷ್ಟನ್ನಾದರೂ ತಿಳಿದಿರಬೇಕು. ಅಶುದ್ಧವಾದ ಕನ್ನಡ ಮತ್ತು ಸಂಸ್ಕೃತ ಶಬ್ದ ಪ್ರಯೋಗ, ಅಶುದ್ಧವಾದ ವಾಕ್ಯರಚನೆ ಇವುಗಳಿಂದ ನಮ್ಮ ಕವಿತೆ, ಕತೆ, ಕಾದಂಬರಿಗಳು ತುಂಬಿಕೊಂಡರೆ ಬೆಳೆಯುವ ಪೀಳಿಗೆಗೆ ಅವೇ ಮಾದರಿಯಾಗಿ ನಿಲ್ಲುತ್ತವೆ. ಶುದ್ಧಾಶುದ್ಧ ವಿವೇಕ ಒಮ್ಮೊಮ್ಮೆ ಕಷ್ಟವೆಂಬುದನ್ನು ಒಪ್ಪಿಯೂ ಈ ಸಾಮಾನ್ಯ ಸೂಚನೆಯನ್ನು ಎಲ್ಲ ಅವಧಾರಣೆಯೊಂದಿಗೆ ಮಾಡಬಯಸುತ್ತೇನೆ.

೩. ಮೇಲೆ ತಿಳಿಸಿದಂತೆ ಎಲ್ಲ ಬಗೆಯ ಸಿದ್ಧತೆ ಮಾಡಿಕೊಂಡು ಸ್ಫೂರ್ತಿಯ ಸತ್ಯತೆಯ ಮನವರಿಕೆ ಮಾಡಿಕೊಂಡು ಬರೆದ ಕೃತಿ ತಾನಾಗಿ ಸಂಸ್ಕಾರಸಂಪನ್ನವಾಗಿರುತ್ತದೆ. ಅದರ ಮುಖದ ಮೇಲೆ ಮೂಡುವ ಕಳೆಯೇ ಬೇರೆ. ಇಷ್ಟಾದರೂ ಲೇಖಕರು ತಮ್ಮ ಮೊದಮೊದಲಿನ ಕೃತಿಗಳನ್ನು ಬಲ್ಲವರ ಕಣ್ಣಿಗೆ ಹಾಕಬೇಕು, ಮಿತ್ರರ ಮುಂದೆ ಓದಿ ತೋರಿಸಬೇಕು. ಅವರ ಸಲಹೆ-ಸೂಚನೆಗಳನ್ನು ಮನದಂದು ಅವಶ್ಯ ಸಂಸ್ಕರಣವನ್ನು ಮಾಡಿ ಅವನ್ನು ಅಚ್ಚಿಗೆ ಕೊಡಬೇಕು. ಎಲ್ಲ ಬಗೆಯ ಸಿದ್ಧತೆಯಾಗುವವರೆಗೆ ತಡೆಯುವುದು ಹೇಗೆ? ಸಿದ್ಧತೆ ಮುಗಿಯುವಷ್ಟರಲ್ಲಿ ಸ್ಫೂರ್ತಿ ಆರಿಹೋಗಲಾರದೆ? ಎಂದು ಕೇಳಬಹುದು. ತನ್ನ ವ್ಯುತ್ಪತ್ತಿಯನ್ನು ಬಲಪಡಿಸಬೇಕೆಂದು ಪ್ರಯತ್ನಿಸುವ ಲೇಖಕನು ಆಗಾಗ ಪದ್ಯವನ್ನೋ ಇತರ ಪ್ರಕಾರದಲ್ಲಿಯ ಬರೆವಣಿಗೆಯನ್ನೋ ಅನಿವಾರ್ಯವಾಗಿ ಮಾಡಿದರೆ ತಪ್ಪಲ್ಲ. ಪುಸ್ತಕ ರೂಪದಲ್ಲಿ ಪ್ರಕಟಿಸುವ ಸಮಯಕ್ಕಾಗಿ ಮಾತ್ರ ಅವಸರ ಸಲ್ಲದು. ಇಪ್ಪತ್ತನೆಯ ಶತಮಾನದ ಪ್ರಚಂಡ ವೇಗದಲ್ಲಿ ಈ ಸಾವಧಾನ ಪ್ರವಚನದಿಂದ ಪ್ರಯೋಜನವಿಲ್ಲ ಎಂಬುದನ್ನು ಬಲ್ಲೆ. ಅಂತೇ ಒಂದು ವಿಧಾಯಕ ಸೂಚನೆಯನ್ನು ಮಾಡಬಯಸುತ್ತೇನೆ. ಯಾವ ಕಾಲಕ್ಕೆ ತಮ್ಮ ಕೃತಿಯನ್ನು ರಚಿಸಬೇಕು, ಪ್ರಕಟಿಸಬೇಕು ಎಂಬುದನ್ನು ಲೇಖಕರು ತಮ್ಮ ವಿವೇಚನೆಯಿಂದ ನಿರ್ಧರಿಸಲಿ. ಆದರೆ ಪ್ರಕಟನೆಗೆ ಸಿದ್ಧವಾದ ಹಸ್ತಪ್ರತಿಯನ್ನು ತಿಳಿದವರಿಗೆ ತೋರಿಸಿ, ಸಂಸ್ಕಾರ

ಗೊಳಿಸಿ ಅಲ್ಲಿಂದ ಪ್ರಕಾಶನಕ್ಕೆ ತೊಡಗಲಿ. ಲೇಖಕ-ವಾಚಕ ಇಬ್ಬರ ದೃಷ್ಟಿಯಿಂದ ಇದು ಇಷ್ಟ. ಆ ಬಲ್ಲವರು ಯಾರು? ತಿಳಿದವರು ಎಲ್ಲಿ ಸಿಗುತ್ತಾರೆ? ಈ ಬಗ್ಗೆ ಯಾವ ದಂಡಕವನ್ನು ಯಾರೂ ಹಾಕಿಕೊಡಲಾರರು. ಆದರೆ ಜಿಲ್ಲಾ ಬರೆಹಗಾರರ ಬಳಗಗಳೂ ಕನ್ನಡ ಸಂಘಗಳೂ ಒಂದು ಯೋಜನೆಯನ್ನು ಮಾಡಬಹುದು. ಲೇಖಕರಿಂದ ವಂತಿಗೆಯನ್ನು ಪಡೆದು ಮೊದಲೇ ಒಪ್ಪಿಗೆಯನ್ನು ಕೊಟ್ಟಿರುವ ಕೆಲವು ತಜ್ಞ ರಸಿಕರಲ್ಲಿ ಒಬ್ಬರಿಗೆ ಯಾವೊಬ್ಬ ಲೇಖಕರ ಹಸ್ತಪ್ರತಿಯನ್ನು ಕಳಿಸಿ ಅಭಿಪ್ರಾಯ ಮತ್ತು ಸೂಚನೆಗಳನ್ನು ಪಡೆಯಬಹುದು, ಲೇಖಕರಿಂದ ಪಡೆದ ವಂತಿಗೆಯನ್ನು ಸಂಭಾವನೆಯೆಂದು ಆಯಾ ತಜ್ಞರಿಗೆ ಕೊಡಬಹುದು. ಈ ಯೋಜನೆಯ ಎಲ್ಲ ವಿವರಗಳನ್ನೂ ಇಲ್ಲಿ ಕೊಡಬೇಕಾಗಿಲ್ಲ. ಆದರೆ ಗ್ರಂಥ ಸಂಸ್ಕರಣೆಯ ಯಾವುದಾದರೊಂದು ವ್ಯವಸ್ಥೆ ಕರ್ನಾಟಕದಲ್ಲಿಯೇಕೆ ಭಾರತದಲ್ಲಿಯೆ ಆಗುವುದು ಅವಶ್ಯವಿದೆ.

೪. ಗ್ರಂಥರಚನೆಗೆ ಪೂರ್ವಸಿದ್ಧತೆಯಾಯಿತು, ಅದಕ್ಕೆ ಸಂಸ್ಕಾರವಾಗಿ ಅದು ಪ್ರಕಾಶಿತವೂ ಆಯಿತು ಎಂದು ಇಟ್ಟುಕೊಳ್ಳೋಣ. ಅದನ್ನು ಬೆಲೆ ಕೊಟ್ಟು ಕೊಳ್ಳುವವರೆಲ್ಲಿ? ಓದುವವರೆಷ್ಟು ಜನ? ಓದಿದ ಮೇಲೆ ಮೆಚ್ಚಿಗೆಯನ್ನೊ ವಿಮರ್ಶೆಯನ್ನೊ ತಿಳಿಸುವವರು ಎಲ್ಲಿದ್ದಾರೆ? ಹಿಂದಿಗಿಂತ ಇಂದು ವಾಚನಾಭಿರುಚಿ ಹೆಚ್ಚಿದೆ, ಗ್ರಂಥಕಾರರಿಗೆ ಕೆಲಮಟ್ಟಿಗೆ ಪ್ರತಿಫಲ ದೊರೆಯುತ್ತದೆ. ಇದನ್ನೆಲ್ಲ ಒಪ್ಪಿಯೂ ಕನ್ನಡಿಗರ ಜನಸಂಖ್ಯೆ, ಓದಬಲ್ಲ ಓದುಗರ ಸಂಖ್ಯೆ ಈ ಮಾನದಿಂದ ಪರಿಸ್ಥಿತಿ ಸುಧಾರಿಸಿದೆ ಎಂದು ಹೇಳಲಿಕ್ಕೆ ಬಾರದು. ಕೆಲವೊಂದು ಸಲ ಯಾವೊಂದು ಪುಸ್ತಕವನ್ನು ಕೊಳ್ಳುವವರು ಕಡಿಮೆ, ಓದುವವರು ಹೆಚ್ಚು, ರಸಜ್ಞರಂತೂ ಶೂನ್ಯ ಎಂಬ ಪರಿಸ್ಥಿತಿಯಿರುತ್ತದೆ. ಅದೂ ಕತೆ, ಕಾದಂಬರಿಯಿದ್ದರೆ ಮಾತ್ರ. ಕವಿತೆಯಿದ್ದರೆ, ಎಲ್ಲಕ್ಕೂ ಶೂನ್ಯವೇ ದೊರೆಯುವ ಪ್ರತಿಫಲ! ನಾಟಕ ಪ್ರಬಂಧಾದಿಗಳು ಇವೆರಡರ ಮಧ್ಯದಲ್ಲಿ ಬಹುಶಃ ಇರುತ್ತವೆ. ಒಟ್ಟಿನಲ್ಲಿ ಬೆಲೆ ಕೊಟ್ಟು ಪುಸ್ತಕಗಳನ್ನು ಸ್ವಂತಕ್ಕೆ ಸಂಗ್ರಹಿಸುವ ಮತ್ತು ಓದುವ ವಾಚಕವರ್ಗದ ಸಂಖ್ಯೆಯನ್ನು ಹೆಚ್ಚಿಸಲು ಪ್ರಯತ್ನಗಳು ನಡೆಯಬೇಕು. **ಇದಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ಒಂದು ಯೋಜನೆಯನ್ನು ಮಾಡಬಹುದು. ಪ್ರತಿ ಮೂರು ತಿಂಗಳಿಗೊಮ್ಮೆ ಸಾಹಿತ್ಯರೂಪದ ಪ್ರಕಾರ ವಿಂಗಡಿಸಿ ಆಯಾ ವರ್ಷದಲ್ಲಿ ಪ್ರಕಟವಾಗಿರುವ ಎಲ್ಲ ಪುಸ್ತಕಗಳ ಪಟ್ಟಿಯನ್ನು ಸಂಕ್ಷಿಪ್ತ ಪರಿಚಯದೊಡನೆ 'ಕನ್ನಡ ನುಡಿ'ಯಲ್ಲಿ ಪ್ರಕಟಿಸಬೇಕು.** ಜೊತೆಗೆ ಒಮ್ಮೆ ಕಾವ್ಯ, ಇನ್ನೊಮ್ಮೆ ಕತೆ ಕಾದಂಬರಿ, ಮುಂದೆ ನಾಟಕ, ಕೊನೆಗೆ ಪ್ರಬಂಧಾದಿ ವಾಙ್ಮಯ ಹೀಗೆ ಪ್ರತ್ಯೇಕ ಸಾಹಿತ್ಯರೂಪದಲ್ಲಿ ಹಿಂದಿನ ವರುಷದಲ್ಲಿ ಆಗಿರುವ ಪ್ರಗತಿಯನ್ನು, ಎತ್ತಿ ತೋರಿಸಬೇಕಾದ ಕೃತಿಪರಿಚಯದೊಡನೆ ವಿಮರ್ಶಕರಿಂದ ಬರೆಯಿಸಿ ಪ್ರಕಟಿಸಬೇಕು. ಬೇರೆ ಭಾಷೆಗಳಲ್ಲಿ ಇಂಥ ಕಾರ್ಯ ನಡೆದಿರುತ್ತದೆ. ಇದರಿಂದ ವಾಚನಾಭಿರುಚಿಯಿದ್ದವರು ತಮ್ಮ ಸೇರಿಕೆಯ ಪುಸ್ತಕಗಳನ್ನಾಯ್ದುಕೊಂಡು ತಂತಮ್ಮ ಯೋಗ್ಯತಾನುಸಾರವಾಗಿ ಬೆಲೆ ಕೊಟ್ಟು ಕೊಂಡು ಓದಬಹುದು, ಮನೆಮನೆಯ ವಾಚನಾಲಯಗಳನ್ನು ಸಮೃದ್ಧಗೊಳಿಸಬಹುದು. ಶಾಲೆ ಕಾಲೇಜುಗಳ ಮತ್ತು ಇತರ ಸಂಸ್ಥೆಗಳ ಗ್ರಂಥಾಲಯಗಳಿಗೂ ಇಂಥ ಪರಿಚಯ ಪಟ್ಟಿಗಳಿಂದ ಪ್ರಯೋಜನವಾಗುವದು. ಸಾಹಿತ್ಯ ಪರಿಷತ್ತಲ್ಲದೆ ಇಂಥ ಸೇವೆಯ ಅಭಿರುಚಿ ಮತ್ತು ಹವ್ಯಾಸವುಳ್ಳ ವ್ಯಕ್ತಿಗಳೂ ಇದನ್ನು ಕೈಕೊಳ್ಳಬಹುದು. ಭಿನ್ನ ಭಿನ್ನ ಪರಿಚಯ ಪಟ್ಟಿಗಳಿಂದ ಆಯ್ಕೆಗೆ ಇನ್ನೂ ಹೆಚ್ಚು ಅವಕಾಶವಿರುತ್ತದೆ.

ಸಾಹಿತ್ಯ ನಿರ್ಮಿತಿಯನ್ನೇ ಉಪಜೀವನ ಮಾರ್ಗವೆಂದು ಮಾಡಿಕೊಂಡು ಬದುಕು

ವುದು ಕನ್ನಡದ ಮಟ್ಟಿಗೆ ಸದ್ಯಕ್ಕಂತೂ ಅಪಾಯಕರ, ಅನ್ಯವಹಾರ್ಯವೆಂದೇ ತೋರುತ್ತದೆ. ಇಂದಿನ ಮುಗ್ಗಟ್ಟಿನ ಕಾಲದಲ್ಲಿ ಬರುವ ಪ್ರಾಪ್ತಿ ಬೆಳೆಯುವ ಸಂಸಾರಕ್ಕೆ ಸಾಲದು. ಒಂದೇ ಸವನೆ ಇಂಥ ಸಾಹಿತ್ಯೋಪಜೀವಿಯ ಬದುಕು ಉರಿಯ ಮೇಲಿನ ನಡೆಯಾಗುತ್ತದೆ. ಕೊನೆಗೊಮ್ಮೆ ಆ ಉರಿಗೆ ಅವನ ಬೆಲೆಯುಳ್ಳ ಬದುಕು ಆಹುತಿಯಾಗುತ್ತದೆ. ಹೊಟ್ಟೆಪಾಡಿಗಾಗಿ ಕೆಲವು ಸಲ ಬರೆಯಲೇ ಬೇಕೆಂದು ಇಂಥ ಲೇಖಕನು ಯಾಂತ್ರಿಕವಾಗಿ ಬರೆಯಬಹುದು, ಅಗ್ಗಕಗ್ಗವನ್ನು ಹೊಸೆಯಬಹುದು. ಈ ಕ್ರಮದಿಂದಲೂ ಅವನ ಬದುಕು ಸಾವಿಗಿಂತ ಕಡೆಯಾಗುತ್ತದೆ. ಯಾವ ಭಾಷೆಯಲ್ಲಿಯೇ ಸಾಹಿತ್ಯ ಸಾಧನೆಗೆ ಮತ್ತು ನಿರ್ಮಿತಿಗೆ ತಮ್ಮ ಆಯುಷ್ಯವನ್ನೇ ಧಾರೆಯೆರೆದ ಕೆಲವು ಲೇಖಕರಿರುತ್ತಾರೆ, ಇರುವುದು ಇಷ್ಟ. ಆದರೆ ಅವರ ಉಪಜೀವನವೂ ಚಿಂತೆಯ ವಿಷಯವಾಗದಂತೆ ನೋಡಿಕೊಳ್ಳುವುದು ಸಮಾಜದ ಹಾಗೂ ಸರ್ಕಾರದ ಪವಿತ್ರ ಕರ್ತವ್ಯ. ಈ ದೃಷ್ಟಿಯಿಂದ ಕನ್ನಡ ವಾಚಕರು ತಮ್ಮ ಕೌಟುಂಬಿಕ ಅರ್ಥವ್ಯವಸ್ಥೆಯಲ್ಲಿ ಸಾಹಿತ್ಯ ಸಂಗ್ರಹಕ್ಕೆಂದು ಪ್ರತ್ಯೇಕವಾಗಿ ಹಣವಿರಿಸಿ ಒಳ್ಳೆಯ ಪುಸ್ತಕಗಳನ್ನು ಹೆಚ್ಚುಹೆಚ್ಚಾಗಿ ಕೊಂಡು ಸಾಹಿತ್ಯೋಪಾಸಕರ ಉದರ ನಿರ್ವಾಹಕ್ಕೆ ನೆರವಾಗಬೇಕು. ಯಾವೊಂದು ಸಂಗ್ರಾಹ್ಯ ಪುಸ್ತಕವು ಪ್ರಕಟವಾದೊಡನೆ ಕನಿಷ್ಠ ಅದರ ಒಂದು ಸಾವಿರ ಪ್ರತಿಗಳು ಒಂದು ವರ್ಷದೊಳಗಾಗಿ ಮುಗಿಯುತ್ತವೆ ಎಂಬ ಪರಿಸ್ಥಿತಿಯುಂಟಾಗಬೇಕು. ಇನ್ನೂ ಹೆಚ್ಚಾದರೆ ಸಂತೋಷವೇ. ಕೇಂದ್ರದ ಸಾಹಿತ್ಯ ಅಕೆಡೆಮಿ, ರಾಜ್ಯಪಾತಳಿಯ ಸಾಹಿತ್ಯ ಅಕೆಡೆಮಿ, ಸರ್ಕಾರದ ಸಂಸ್ಕೃತಿ ಇಲಾಖೆ ಇವು ಶ್ರೇಷ್ಠ ಪುಸ್ತಕಗಳಿಗೆ ಬಹುಮಾನ ಕೊಟ್ಟು ಪುರಸ್ಕರಿಸುತ್ತಿರುವುದು ಪ್ರಶಂಸನೀಯವಾಗಿದೆ. ಇವುಗಳ ನಿರ್ಣಯ ಪದ್ಧತಿ ಇನ್ನಿಷ್ಟು ಚೊಕ್ಕಾಗಬೇಕು, ವ್ಯಕ್ತಿ ನಿರಪೇಕ್ಷವಾಗಬೇಕು. ಸರಕಾರದ ಬೊಕ್ಕಸದಿಂದ ಸುಸ್ಥಿತಿಯಲ್ಲಿರದ ಸಾಹಿತಿಗಳಿಗೆ ಮಾಸಾಶನ ಮತ್ತು ವರ್ಷಾಶನ ಕೊಡುವ ಪದ್ಧತಿಯೊಂದು ಪ್ರಚಾರದಲ್ಲಿದೆ. ಇದಕ್ಕಾಗಿ ಸಾಹಿತಿಗಳಿಂದಲೇ ಅರ್ಜಿಯನ್ನು ತಗೊಂಡು ಹುಣ್ಣಿನ ಮೇಲೆ ಬರೆ ಕೊಟ್ಟಂತೆ ಮಾಡಬಾರದಾಗಿ ಬಿನ್ನವಿಸುವುದು ಅವಶ್ಯ. ಕೆಲವು ಖಾಸಗಿ ಸಂಸ್ಥೆಗಳು ಗ್ರಂಥ ಪುರಸ್ಕಾರ ನಿಧಿಯನ್ನು ಮಾಡಿ ಹಸ್ತಪ್ರತಿಗಳಿಗೆ ಮತ್ತು ಪುಸ್ತಕಗಳಿಗೆ ಗೌರವಧನವನ್ನು ಕೊಡುವ ಪರಿಪಾಠವು ಕೆಲಮಟ್ಟಿಗೆ ಇದೆ. ಅದು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ನಡೆಯಬೇಕು. ವಿಶೇಷವಾಗಿ ಸಾಹಿತ್ಯದ ಬಲದಿಂದಲೇ ಬದುಕುತ್ತಿರುವ ಲೇಖಕರಿಗೆ ಇಂಥ ಪುರಸ್ಕಾರ ನಿಧಿಯಿಂದ ಧನಸಹಾಯವು ಒದಗಬೇಕು. ಸಧನರಾದ ಸಾಹಿತ್ಯ ಪ್ರೇಮಿಗಳೂ ಸಾಹಿತ್ಯಿಕರೂ ತಂತಮ್ಮ ವಿಶ್ವಸ್ತ ನಿಧಿ ಮಾಡಿಕೊಂಡು ಉದಯೋನ್ಮುಖರಾದ ಮತ್ತು ಸಿದ್ಧಹಸ್ತರಾದ ಲೇಖಕರಿಗೆ ಪುರಸ್ಕಾರ ನೀಡಬೇಕು, ಉತ್ತಮ ಸಾಹಿತ್ಯ ನಿರ್ಮಾಣಕ್ಕೆ ಉತ್ತೇಜನವೀಯಬೇಕು.

ಮೇಲ್ಕಂಡ ಗ್ರಂಥಗಳನ್ನು ಪ್ರಕಟಿಸಿ ಅವುಗಳ ಪ್ರಸಾರವನ್ನು ಮಾಡುವ ವಿಷಯದಲ್ಲಿ ಹಲವು ಪ್ರಕಾಶಕರು ಪ್ರಕಾಶನ ಸಂಸ್ಥೆಗಳನ್ನು ಮಾಡಿಕೊಂಡು ಲೇಖಕರಿಗೂ ವಾಚಕರಿಗೂ ನಡುವಿನ ಸೇತುವೆಯಂತಾಗಿ ಮೆಚ್ಚತಕ್ಕ ಕಾರ್ಯವನ್ನು ಮಾಡುತ್ತ ಬಂದಿದ್ದಾರೆ. ಆದರೆ ಕೇವಲ ಲಾಭದ ಮೇಲೆ ಕಣ್ಣಿಟ್ಟು ಸದಭಿರುಚಿಗೆ ಬಾಧಕವಾಗುವಂಥ ಅಗ್ಗದ ಬರೆವಣಿಗೆಯನ್ನು ಬರಮಾಡಿಕೊಳ್ಳುವ ಒಲವು ಹೆಚ್ಚುತ್ತಿರುವುದಾಗಿ ಕಂಡುಬಂದಿದೆ. ವಾಚಕರ ಮತ್ತು ವಿಮರ್ಶಕರ ವಿವೇಚನೆಯೇ ಒದಗಿಬರುತ್ತ ಇಂಥ ಪ್ರಕಾಶನಕ್ಕೆ ಅಂಕುಶವನ್ನಿಡಲು ಸಮರ್ಥವಾಗುತ್ತದೆ. ಸದ್ಯದಲ್ಲಿ ಸದಭಿರುಚಿಗೂ ವ್ಯವಹಾರಕ್ಕೂ ಮೇಳ ಹಾಕಬೇಕೆನ್ನುವ ಧ್ಯೇಯನಿಷ್ಠ ಪ್ರಕಾಶಕರು ತಮ್ಮ ಗುರಿಯಿಂದ ಕದಲದೆ ಮುಂದೆ ಸಾಗಬೇಕು. ಒಳ್ಳೆಯ ಕೃತಿಗಳ ಹೊಸ

ಆವೃತ್ತಿಗಳ ಮುದ್ರಣದಿಂದಲೂ ಹೆಚ್ಚು ಬೆಲೆಯ ಗ್ರಂಥಗಳನ್ನು ಕಡಿಮೆ ಬೆಲೆಗೆ ಕೊಡುವ ಯೋಜನೆಯಿಂದಲೂ ಅವರು ಗ್ರಂಥಗಳ ಪ್ರಸಾರ ಕಾರ್ಯಕ್ಕೆ ನೆರವಾಗಬೇಕು. ಗ್ರಂಥ ಭಂಡಾರಗಳು ನಾಡಿನ ಹಳ್ಳಿಪಟ್ಟಣಗಳಲ್ಲಿ ಹೆಚ್ಚುತ್ತ ಹೋಗಿ ಪ್ರಕಾಶಕರ ಸಾಹಸ ಕಾರ್ಯಕ್ಕೆ ಬೆಂಬಲವಾಗಬೇಕು. ಈ ವಿಷಯದಲ್ಲಿ ಸರಕಾರವು ಕೈಕೊಂಡ ಕಾರ್ಯಕ್ರಮಗಳು ಮತ್ತು ಕೊಡುತ್ತಿರುವ ಅನುದಾನಗಳು ಸಾರ್ಥಕವಾಗುವಂತೆ ಸಾರ್ವಜನಿಕರು ದಕ್ಷತೆ ವಹಿಸುವುದು ಆವಶ್ಯಕವಾಗಿದೆ.

೫. ಹೊಸ ಸಾಹಿತ್ಯ ಹೊಸ ಕಾಲದ ಜೀವನವನ್ನು ವಾಸ್ತವದೃಷ್ಟಿಯಿಂದ ನೋಡಿ ಚಿತ್ರಿಸುತ್ತದೆ ಎಂದು ಹೇಳುವುದು ವಾಡಿಕೆ. ಆದರೆ ಕಳೆದ ಐವತ್ತು ವರ್ಷಗಳಲ್ಲಿ ಭಾರತೀಯ ಜೀವನದಲ್ಲಿ ಎಷ್ಟು ರೋಮಾಂಚಕಾರಿಯಾದ ಅಘಟಿತ ಘಟನೆಗಳಾದುವು, ರಾಜಕೀಯ ಸಾಮಾಜಿಕ ಸ್ಥಿತ್ಯಂತರಗಳಾದುವು? ಅವುಗಳ ಪ್ರಭಾವಿಯಾದ ನಿರೂಪಣವು ಸಾಹಿತ್ಯದಲ್ಲಿ ಬಂದಿದೆಯೆ? ಸ್ವಾತಂತ್ರ್ಯದ ಆಂದೋಲನ, ಅದರಲ್ಲಿ ಲೋಕಮಾನ್ಯ ಟಿಳಕರೂ, ಮಹಾತ್ಮಾ ಗಾಂಧೀಜಿಯವರೂ, ಅಸಂಖ್ಯಾಕ ದೇಶಭಕ್ತರೂ ಮಾಡಿದ ತ್ಯಾಗ-ಸೇವೆ, ಕಣ್ಣೀರನ್ನು ಅಟ್ಟಿಸಿ ಬಿಡುವಂಥ ಯಾತನೆ, ಆಮೇಲೆ ಸ್ವಾತಂತ್ರ್ಯದ ಆಗಮನದೊಡನೆ ದೇಶವು ಇಭ್ಭಾಗವಾಗಿ ನಡೆದ ಅನನ್ವಿತ ಅತ್ಯಾಚಾರಗಳು, ಸ್ವಾತಂತ್ರ್ಯೋತ್ತರ ಕಾಲದ ಸಮಸ್ಯೆಗಳು, ಪ್ರಗತಿ ಸೂಚಕವಾದ ಪಂಚವಾರ್ಷಿಕ ಯೋಜನೆಯ ಕಾರ್ಯಗಳು ಇವನ್ನೆಲ್ಲ ಸೂಕ್ಷ್ಮಸಂವೇದನ ಕ್ಷಮನಾದ ಸಾಹಿತಿ ಕಂಡಿಲ್ಲವೆ? ಅವನ ಸಾಹಿತ್ಯದಲ್ಲಿ ಇದೆಷ್ಟು ಮೂಡಿ ಬಂದಿದೆ? ಈ ಪ್ರಶ್ನೆಗಳನ್ನು ಕೆಲವರು ಆಗಾಗ ಕೇಳುತ್ತಾರೆ. ಒಂದು ಮಹತ್ತಮವಾದ ಇತಿಹಾಸ, ಕಾವ್ಯ, ರಾಷ್ಟ್ರೀಯ ಮಹಾ ಕಾವ್ಯ (National Epic) ಹುಟ್ಟಲು ಬೇಕಾದ ಜೀವನ ಸಾಮಗ್ರಿ ಭಾರತದಲ್ಲಿ ಬೇಕಾದಷ್ಟು ಇಂದು ಕಣ್ಣ ಮುಂದಿದ್ದರೂ ಅಂಥ ಮಹಾಕಾವ್ಯವು ಮಾತ್ರ ಹುಟ್ಟಲಿಲ್ಲ ಎಂಬ ದುಃಖವನ್ನು ಒಬ್ಬ ಹಿರಿಯ ನೇತಾರರು ವ್ಯಕ್ತಪಡಿಸಿದ್ದಾರೆ. ಅವರಂತೆ ಅನೇಕ ವಿಚಾರವಂತರ, ವಿಶೇಷವಾಗಿ ಕೆಲವು ರಾಜಕೀಯ ಕಾರ್ಯಕರ್ತರ ಭಾವನೆಯಿರುವಂತೆ ತೋರುತ್ತದೆ. ನಮ್ಮ ವಿಚಾರದ ಮತ್ತು ಲೇಖನದ ಮಟ್ಟ ಕೆಳಕೆಳಗೆ ಹೋಗುತ್ತಿದೆ ಎಂದು ನಮ್ಮ ಪ್ರಧಾನ ಮಂತ್ರಿಗಳು ವಿಷಾದಪೂರ್ವಕವಾಗಿ ಒಮ್ಮೆ ಹೇಳಿದರು. ಈ ಎಲ್ಲ ಅಂಶಗಳ ಬಗ್ಗೆ ವಿಶ್ಲೇಷಣ, ವಿಚಾರಮಂಥನ ನಡೆಯಬೇಕು. ಕೆಲವು ಸಲ ಇಂಥ ಸಾಹಿತ್ಯ ನಿರ್ಮಾಣವಾಗಿದ್ದರೂ ಅದನ್ನು ಓದುವುದಕ್ಕೆ ಬಿಡುವಿಲ್ಲದೆ ಒಲವಿಲ್ಲದೆ ಹಲವರು ಸಾಮಾನ್ಯ ವಿಧಾನವನ್ನು ಮಾಡಿಬಿಡುತ್ತಾರೆ. ತಮಗೆ ಆವಶ್ಯಕವೆಂದು ತೋರಿದ ಪ್ರಚಾರಕ ಸಾಹಿತ್ಯ ದೊರೆಯದಿದ್ದರೆ ದೂರು ಮಾಡುತ್ತಾರೆ. ಇಷ್ಟೇ ಅಲ್ಲ, ಪ್ರಚಾರಕವಲ್ಲದ ಸಾಹಿತ್ಯ ನಿರುಪಯೋಗಿ ಎಂಬ ಸಿದ್ಧಾಂತವನ್ನೂ ಮಂಡಿಸುತ್ತಾರೆ. ಜೊತೆಗೆ ಕೆಲವು ಲೇಖಕರು ಸುತ್ತುಮುತ್ತಿನ ಜೀವನದ ಜಂಜಾಟದಿಂದ ಅಲಿಪ್ತವಾಗಿರುವುದೇ ಕ್ಷೇಮ ಎಂದು ಹೇಳಿ ದೂರ ಸರಿಯುತ್ತಾರೆ. ಪ್ರಚಾರಕ್ಕಾಗಿಯೇ ಎಂದು ಬರೆದ ಹಲವಾರು ಕಥೆ ಕವನಗಳು ಯಾವ ಮಟ್ಟದಲ್ಲಿರುತ್ತವೆ ಎಂಬುದನ್ನು ಬರೆದವರೂ ಬಲ್ಲರು, ಓದುವವರೂ ಬಲ್ಲರು. ಕನ್ನಡದ ಮಟ್ಟಿಗೆ ಹೇಳುವುದಾದರೆ ಸ್ವಾತಂತ್ರ್ಯ ಸಂಗ್ರಾಮವನ್ನು ಚಿತ್ರಿಸುವ ಕೆಲವು ಒಳ್ಳೆಯ ಕೃತಿಗಳು ಜನ್ಮ ತಾಳಿವೆ. ದೇಶದ ದಾರಿದ್ರ್ಯ, ಬರಗಾಲ, ಅನ್ನಸಮಸ್ಯೆ, ಇವನ್ನು ಕರುಳು ಹಿಂಡುವಂತೆ ವರ್ಣಿಸಿರುವ ಕೃತಿಗಳೂ ನಿರ್ಮಾಣವಾಗಿವೆ. ಅದಿಲ್ಲ, ಇದಿಲ್ಲ ಎಂದು ದೂರುವ ರಾಜಕೀಯ ಮಿತ್ರರು ಇವುಗಳ ಮೇಲೆ ಕಣ್ಣು ಹಾಯಿಸಬೇಕು. ಲೇಖಕನ ಮೇಲೆ ಜನಜೀವನದ ಪ್ರಭಾವವಾಗ

ಬೇಕಾಗಿರುವಂತೆ ಜನಸೇವಕರ ಮೇಲೆ ಸಾಹಿತ್ಯದ ಸಂಸ್ಕಾರವಾಗಬೇಕು, ಅವರಿಗೆ ಕನ್ನಡ ಸರಸ್ವತಿಯ ದರ್ಶನವಾಗಬೇಕು. ಇನ್ನೂ ರಾಷ್ಟ್ರೀಯ ಮಹಾಕಾವ್ಯ ಹುಟ್ಟಲಿಲ್ಲ ಎಂಬುದರ ಸತ್ಯಾಂಶವನ್ನು ಎಲ್ಲ ಭಾಷೆಗಳ ಆಧುನಿಕ ಸಾಹಿತ್ಯವನ್ನು ಅರಿತುಕೊಳ್ಳದೆ ಪರಿಕಿಸುವಂತಿಲ್ಲ. ಪರಿಕಿಸಿದ ಮೇಲೆ ಅದು ಸತ್ಯವೆಂದು ತೋರಿದರೂ ಅದರಿಂದ ದುಃಖಿಸಬೇಕಾದ್ದೇನಿದೆ? ಇಂಥ ಮಹಾಕಾವ್ಯ ನಿರ್ಮಿತಿಗೆ ಇನ್ನೂ ಮುಹೂರ್ತ ಬಂದಿಲ್ಲ ಎನ್ನಬೇಕು. 'ಬರುವುದೇನುಂಟೊಮ್ಮೆ ಬರುವ ಕಾಲಕೆ ಬಹುದು, ಬಯಕೆ ಬರುವವರ ಕಣ್ಣಸನ್ನೆ ಕಾಣೊ' ಎಂದು ಮಧುರ ಚೆನ್ನರು ಹೇಳಿದಂತೆ ಇಂದಿನ ಲೇಖಕರಲ್ಲಿ ಅದರ ಕಣ್ಣಸನ್ನೆಯಾದ ಬಯಕೆಯಿದ್ದರಾಯಿತು. ಅವರು ಸಾಕಷ್ಟು ಸಂವೇದನಾಕ್ಷಮರಾಗಿಲ್ಲ ಎಂಬ ಸಾಮಾನ್ಯ ಆರೋಪವನ್ನು ಮಾಡುವುದು ಸರಿಯಲ್ಲ. ಬಹುಶಃ ಅವರಲ್ಲಿ ಕೆಲವರು ಅತೀವ ಸಂವೇದನಾಕ್ಷಮರಾಗಿ ಕಂಡದ್ದನ್ನು ಮತ್ತೆ ನೋಡಲಾರದೆ ಬಣ್ಣಿಸಲೂ ಬಾಯಿಬಾರದೆ ಕಂಗೆಟ್ಟವರಾಗಿರಬಹುದು! ವಾಸ್ತವ ದೃಷ್ಟಿಯಿಂದ ನೋಡಿದಾಗ ಪ್ರಿಯವಾದುದರೊಂದಿಗೆ ಅಪ್ರಿಯವಾದದ್ದು ಕಂಡು ಅದನ್ನು ಹೇಳಲು ಧೈರ್ಯ ಸಾಲದೆ ಬೇರೆ ಕೆಲವರು ವಿಷವನ್ನು ನುಂಗಿ ಮೌನ ಮುನಿಯಾದ ವಿಷಕಂಠರಾಗಿರಲೂ ಬಹುದು! ಇನ್ನು ಕೆಲವರು ತಮ್ಮ ಪ್ರತಿಭೆಯನ್ನು ಪ್ರಜ್ಞೆಯಿಂದ ಪಳಗಿಸಿಕೊಂಡು ಅನುಭವ ಸಮೃದ್ಧರಾಗಿ ಚಾತಕಪಕ್ಷಿಯಂತೆ ಪ್ರಾಸಾದಿಕ ವಾಣಿಯ ದಿವ್ಯರಸಕ್ಕೆ ಕಾತರರಾಗಿ ಕಾದಿರಬಹುದು!

೬. ಹೊಸಗನ್ನಡ ಸಾಹಿತ್ಯದ ಈವರೆಗಿನ ನಿರ್ಮಿತಿಯನ್ನು ನೋಡಿದರೆ ಎಲ್ಲ ಸಾಹಿತ್ಯ ರೂಪಗಳಲ್ಲಿ ಇನ್ನೂ ಮಿಗಿಲಾದ ಆಶಯವೈವಿಧ್ಯ, ತಂತ್ರಕೌಶಲ್ಯ, ರಸಪೂರ್ಣತೆ ಅಪೇಕ್ಷಣೀಯವಾಗಿವೆ. ವಿಶೇಷವಾಗಿ ನಾಟ್ಯಸೃಷ್ಟಿ ಸಂಖ್ಯೆ ಮತ್ತು ಗುಣವತ್ತೆಯಲ್ಲಿ ಹೆಚ್ಚುವಂತೆ ನೋಡಿಕೊಳ್ಳಬೇಕಾಗಿದೆ. ನಾಟ್ಯಪ್ರತಿಭೆ ಬೇಡಿದೊಡನೆ ಎಲ್ಲಿಯಾದರೂ ಸಿಗುವ ಸರಕೇ ಎಂದು ಕೇಳುವದು ಸಹಜ. ಆದರೆ ಸುಪ್ತಗುಣವನ್ನು ಜಾಗೃತಗೊಳಿಸುವ ಉದ್ದೇಶದಿಂದ ನಾಟಕ ಲೇಖಕರ ಪ್ರಶಿಕ್ಷಣ ಸತ್ರಗಳನ್ನೂ ಪರಿಸಂವಾದಗಳನ್ನೂ ನಡಸಬೇಕು. ಜಾಗತಿಕ ನಾಟಕಗಳ ಉತ್ತಮ ಮಾದರಿಗಳನ್ನು ಓದಿ ತೋರಿಸಬೇಕು. ರಂಗಭೂಮಿಗೆ ಸಂಬಂಧಪಟ್ಟ ತಂತ್ರ ಪರಿಚಯವನ್ನು ಮಾಡಿಕೊಡಬೇಕು, ನಾಟ್ಯವ್ಯವಸಾಯಿಗಳು ಮತ್ತು ನಾಟ್ಯವಿಲಾಸಿಗಳು ಇವರಲ್ಲಿ ಅನುಭವಿಕರೊಡನೆ ಬಳಕೆ ಬೆಳಸಬೇಕು. ಕಲಾದೃಷ್ಟಿಯಿಂದ ಮೇಲ್ಮಟ್ಟದ ಮತ್ತು ಪ್ರಯೋಗದಲ್ಲಿ ಯಶಸ್ವಿಯಾಗುವ ಸ್ವತಂತ್ರ ಸಾಮಾಜಿಕ ಮತ್ತು ಐತಿಹಾಸಿಕ ನಾಟಕಗಳು ಕನ್ನಡದಲ್ಲಿ ಹೇರಳವಾಗಿ ಬೇಕಾಗಿವೆ. ತರುಣ ಲೇಖಕರು ಯೋಗ್ಯ ಸಿದ್ಧತೆಯೊಡನೆ ಈ ಕ್ಷೇತ್ರದಲ್ಲಿ ಅವತರಿಸಬೇಕು.

ನಾಟಕ ಸೃಷ್ಟಿಯಂತೆ ಚಲನಚಿತ್ರ ಸೃಷ್ಟಿಯೂ ಕನ್ನಡ ನಾಡಿನಲ್ಲಿ ಅಭಿವೃದ್ಧಿ ಹೊಂದುವುದನ್ನು ನಾವು ನೀವೆಲ್ಲ ತೀವ್ರವಾಗಿ ಬಯಸುತ್ತೇವೆ. ಕನ್ನಡ ಚಲನಚಿತ್ರ ನಿರ್ಮಾಣಕ್ಕೆ ಉತ್ತಮ ದರ್ಜೆಯ ಕಥಾ ಲೇಖಕರೂ ಗೀತಕಾರರೂ ನಟನಟಿಯರೂ ತಂತ್ರಕುಶಲರೂ ಹೆಚ್ಚು ಹೆಚ್ಚಾಗಿ ಮುಂದೆ ಬರಬೇಕು. ಅವರ ತರಬೇತಿಗಾಗಿ ವಿದ್ಯಾಲಯಗಳು ಸ್ಥಾಪಿತವಾಗಬೇಕು. ಅಪಾರ ಧನವನ್ನು ವೆಚ್ಚಮಾಡಿ ನಿರ್ಮಿತವಾದ ಅಸಂಖ್ಯ ಜನಸಮುದಾಯದ ಮೇಲೆ ಪ್ರಭಾವವನ್ನು ಬೀರುವ ಈ ಕಲೆ ಮೇಲಿನ ಮಟ್ಟದಲ್ಲಿ ಉಳಿಯುವಂತೆ ನಿರಂತರ ಪ್ರಯತ್ನಗಳಾದರೆ ಮಾತ್ರ ನಾಡಿನ ಸದಭಿರುಚಿ-ಸಂಸ್ಕೃತಿಗಳನ್ನು ನಾವು ಕಾಪಾಡಿಕೊಳ್ಳುವುದು ಸಾಧ್ಯ. ಕನ್ನಡದಲ್ಲಿ ಚಲನಚಿತ್ರಗಳು ಹೆಚ್ಚಾಗಲಿ, ಹೆಚ್ಚು ಚೆನ್ನಾಗಲಿ ಎಂದು ನಾನು ಹಾರೈಸುತ್ತೇನೆ.

೭. ಇಂದಿನ ಕಥೆ ಕಾದಂಬರಿಗಳಲ್ಲಿ ಮತ್ತು ನಾಟಕ-ಚಲನಚಿತ್ರಗಳಲ್ಲಿ ಆಕ್ಷೇಪಾರ್ಹವಾದ ಅಶ್ಲೀಲ ಸಂನಿವೇಶಗಳೂ ಸಂಭಾಷಣೆಗಳೂ ಅಧಿಕ ಪ್ರಮಾಣದಲ್ಲಿವೆಯೆಂಬ ದೂರು ಕೇಳಬರುತ್ತದೆ. ಯಾವುದಕ್ಕೆ ಅಶ್ಲೀಲವೆನ್ನಬೇಕು ಎಂಬುದು ತುಂಬ ಜಟಿಲ ಪ್ರಶ್ನೆ. ಅದರ ವಿಶ್ಲೇಷಣೆ ಈಗ ಪ್ರಸ್ತುತವಲ್ಲ. ಆದರೆ ದಾರುಣ ವಾಸ್ತವವಾದದ ಹೆಸರಿನಲ್ಲಿ ವಸ್ತುಸ್ಥಿತಿಗೆ ವಿರುದ್ಧವಾದ ಬೀಭತ್ಸ ವರ್ಣನೆಗಳನ್ನು ರುಚಿಹುಟ್ಟುವಂತೆ ಮಾಡಿ ಅಭಿರುಚಿಯನ್ನು ಕೆಳಗೆಳೆಯ ಕೂಡದು. ವಸ್ತುಸ್ಥಿತಿ ಹಾಗಿರುವುದೆಂದು ಗೃಹೀತ ಹಿಡಿದರೂ ಕೂಡ ಎತ್ತರದ ಮಟ್ಟದಲ್ಲಿ ಸೂಚ್ಯ ಕಲೆಯಿಂದ ಅದನ್ನು ಸೂಚಿಸುವುದು ಸಾಧ್ಯ ಎಂಬುದನ್ನು ಅರಿತಿರಬೇಕು. ಒಂದು ಮಾತಿನಲ್ಲಿ ಹೇಳಬಹುದಾದರೆ, ನರಕದಲ್ಲಿ ಅಭಿರುಚಿಯನ್ನಲ್ಲ ಅರುಚಿಯನ್ನು, ಹೇಯಭಾವವನ್ನು ಹುಟ್ಟಿಸುವ ಬಗೆಯಲ್ಲಿ ಅದರ ಚಿತ್ರಣವಿರಬೇಕು. ಅಶ್ಲೀಲವು ಅಪರಿಹಾರ್ಯವಾಗಿ ಬಂದರೂ ಸೂಕ್ಷ್ಮಕಲೆಯ ಕುಂಚದಿಂದ ಅದು ಸುಶ್ಲೀಲವಾಗಿ ಪರಿಣಮಿಸಬೇಕು.

೮. ಜ್ಞಾನ ವಿಜ್ಞಾನ ಸಾಹಿತ್ಯ, ವಿಚಾರ ಸಾಹಿತ್ಯ ಮತ್ತು ವಿಮರ್ಶಾ ಸಾಹಿತ್ಯ ಇವುಗಳ ಕೊರತೆಯನ್ನು ಕಳೆದ ಕೆಲವು ವರ್ಷಗಳಲ್ಲಿ ಹೋಗಲಾಡಿಸುವ ಸ್ತುತ್ಯ ಪ್ರಯತ್ನಗಳಾಗಿವೆ. ಆದರೆ ಈ ತ್ರಿವಿಧ ಸಾಹಿತ್ಯ ಎಷ್ಟು ಪ್ರಮಾಣದಲ್ಲಿ ಬೇಕೊ ಅಷ್ಟು ಲಭಿಸಿಲ್ಲ. ಈ ದಾರಿಯಲ್ಲಿ ಉತ್ಸಾಹ ಪೂರ್ಣವಾದ ಯೋಜನಾಬದ್ಧವಾದ ಪ್ರಚಂಡ ಕಾರ್ಯಕ್ಕೆ ಅವಕಾಶವಿದೆ. ವಿಶೇಷತಃ ವಿಮರ್ಶೆಯ ಬೆಳವಣಿಗೆಗೆ ಹೆಚ್ಚು ಗಮನವನ್ನು ಕೊಡುವುದು ತೀರ ಅಗತ್ಯವಾಗಿದೆ. ವಿಮರ್ಶೆಯ ವಿಮುಕ್ತ ವಾತಾವರಣದಲ್ಲಿ ವಿಮರ್ಶೆಯ ತತ್ವಗಳ ಚರ್ಚೆ ಮತ್ತು ಪ್ರಾಮಾಣಿಕವಾದ ಸಮೀಕ್ಷೆ ಇವು ಎಷ್ಟು ಉನ್ನತಮಟ್ಟದಲ್ಲಿ ನಡೆದಿರುವವೋ ಅಷ್ಟು ಆಯಾ ಭಾಷೆಯಲ್ಲಿ ಸಾಹಿತ್ಯ ನಿರ್ಮಿತಿಯ ಮಟ್ಟವೂ ಎತ್ತರವಾಗಿರಬೇಕೆಂಬ ಎಚ್ಚರವನ್ನು ಪಡೆದಿರುತ್ತದೆ; ವಾಚಕರ ಅಭಿರುಚಿಯೂ ಮೇಲಿನ ನೆಲೆಯಲ್ಲಿರುತ್ತದೆ. ಕನ್ನಡದಲ್ಲಿ ಇಂದು ಇಂಥ ವಾತಾವರಣವಿದೆಯೆ, ಚರ್ಚೆ ಸಮೀಕ್ಷೆಗಳು ನಡೆದಿರುತ್ತವೆಯೆ ಎಂಬ ಪ್ರಶ್ನೆಯನ್ನು ಕೇಳುವ ಮತ್ತು ಆತ್ಮನಿರೀಕ್ಷಣೆಯನ್ನು ಮಾಡುವ ಕಾಲ ಬಂದಿದೆ. ಇವಕ್ಕೆ ಒಟ್ಟಿನಲ್ಲಿ ನಕಾರದ ಉತ್ತರವಿದ್ದರೆ ಧೈರ್ಯದಿಂದ ಹೊಸ ಹೆಜ್ಜೆಯಿಡಬೇಕು. ಈ ಹೊಸ ಹೆಜ್ಜೆಯಿಡುವ ದಾರಿಯನ್ನು ಸರಿಯಾಗಿ ಗುರುತಿಸಬೇಕು. ಮೊದಲನೆಯದಾಗಿ, ಓದುವವರೆಲ್ಲರಿಗೂ ಅಭಿಪ್ರಾಯಗಳನ್ನು ವ್ಯಕ್ತಮಾಡುವ ಸ್ವಾತಂತ್ರ್ಯವಿದ್ದರೂ ವಿಮರ್ಶೆಯೆಂಬುದಾಗಿ ಬರೆಯುವವರು ಸಹೃದಯರೂ ಬಹುಶ್ರುತರೂ ವಿಮರ್ಶಾ ಶಾಸ್ತ್ರವನ್ನು ಬಲ್ಲವರೂ ಆದವರಿರಬೇಕು. ಎರಡನೆಯವಾಗಿ, ಸದ್ಧೇತುವಿನಿಂದ ಬರೆದ ವಿಮರ್ಶೆ ತಮಗೆ ಒಪ್ಪಿಗೆಯಾಗಲಿ ಆಗದಿರಲಿ, ಅದನ್ನು ಎಲ್ಲ ಲೇಖಕರೂ ಸ್ವಾಗತಿಸಬೇಕು. ತಳಬುಡವಿಲ್ಲದ ಹೇತ್ವಾರೋಪದಿಂದ ಅನಾವಶ್ಯಕ ಚರ್ಚೆ, ಸ್ನೇಹದಲ್ಲಿ ವಿರಸ ಹುಟ್ಟುವುದಲ್ಲದೆ ಸರಿಯಾದ ವಿಮರ್ಶೆಗೆ ವಿಘ್ನವುಂಟಾಗುತ್ತದೆ. ಯಾರ ವಿಮರ್ಶೆಯೂ ಕೊನೆಯ ಮಾತಲ್ಲ, ವಿಮರ್ಶೆಯ ವಿಮರ್ಶೆಗೂ ಅವಕಾಶವಿದೆ ಎಂಬ ಮನೋವೃತ್ತಿ ಹೆಚ್ಚಬೇಕು. ಈ ಮನೋವೃತ್ತಿಯ ಅಭಾವವಿದ್ದಲ್ಲಿ ವಿಮರ್ಶೆಯ ವಿಮುಕ್ತ ವಾತಾವರಣ ಬೆಳೆಯಲಾರದು, ವಿಮರ್ಶಕರು ಮೌನವ್ರತವನ್ನು ಆಚರಿಸುತ್ತಾರೆ. ಗ್ರಂಥಕರ್ತರಿಗೆ ಅವಶ್ಯವಾದ ಉತ್ತೇಜನ-ಮಾರ್ಗದರ್ಶನಗಳು ದೊರೆಯುವದಿಲ್ಲ. ವಿಮರ್ಶೆಯ ಶಾಸ್ತ್ರ ಮತ್ತು ಪ್ರಯೋಗ ಕುಂಠಿತವಾಗಿಬಿಡುತ್ತವೆ. ಹೊಸದಾಗಿ ಒಂದೆರಡು ಪುಸ್ತಕಗಳನ್ನು ಬರೆದು ತರುಣ ಲೇಖಕರು 'ವಿಮರ್ಶೆಯ ಕೃಪೆಗಾಗಿ' ಎಂದು ಪತ್ರಿಕೆಗಳಿಗೆ ಮತ್ತು ನುರಿತ ವಿಮರ್ಶಕರಿಗೆ ಕಳಿಸುತ್ತಾರೆ. ಪತ್ರಿಕೆಗಳಲ್ಲಿ ಸ್ವಲ್ಪ ತಡವಾಗಿಯಾದರೂ ವಿಮರ್ಶೆಯ ಹೆಸರಿನಲ್ಲಿ

ಉಪಚಾರೋಕ್ತಿಗಳು ಬರುತ್ತವೆ. ವಿಮರ್ಶಕರಿಂದ ದೊರೆಯಬೇಕಾದ ವಿಮರ್ಶೆಯ ಕೃಪೆ ಮಾತ್ರ ದೇವರ ಕೃಪೆಗಿಂತ ಅಗಾಧವಾಗಿ ಅಲಭ್ಯವಾಗುತ್ತದೆ! ಬರಬರುತ್ತ ವಿಮರ್ಶಕರ ಬೆನ್ನುಹತ್ತುವುದನ್ನೇ ಲೇಖಕರು ಬಿಟ್ಟುಬಿಡುತ್ತಾರೆ, ತಮಗೆ ತೋರಿದಂತೆ ನಿರ್ಮಿತಿಯ ದಾರಿಯಲ್ಲಿ ಮುಂದೆ ಸಾಗುತ್ತಾರೆ. ವಿಮರ್ಶೆಯ ವಿಷಯದಲ್ಲಿ ಈಗ ಉಂಟಾಗಿರುವ ಉದಾಸೀನತೆಯನ್ನು ತೆಗೆದುಹಾಕಲು ಸುಸಂಘಟಿತವಾದ ಪ್ರಯತ್ನಗಳಾಗಬೇಕು. ಅವುಗಳಲ್ಲಿ ಒಂದಾಗಿ ವಿಮರ್ಶೆಗಾಗಿಯೇ ಎಂದು ಮೀಸಲಾದ ಮಾಸಪತ್ರಿಕೆಯೊಂದಾದರೂ ಹೊರಡಬೇಕು. ವಿಮರ್ಶೆಗೆಂದು ಬಂದ ಪುಸ್ತಕಗಳ ವಿಮರ್ಶೆಯನ್ನು ನುರಿತ ವಿಮರ್ಶಕರಿಂದ ಬರೆಯಿಸಿ ಅದರಲ್ಲಿ ಪ್ರಕಟಿಸಬೇಕು. ಪ್ರತಿ ವಿಮರ್ಶೆಗೆ ನಿರ್ದಿಷ್ಟವಾದ ಪ್ರತಿಫಲವನ್ನು ಕೊಡಬೇಕು. ಈ ಪತ್ರಿಕೆ ವ್ಯವಹಾರ್ಯವಾಗಬೇಕಿದ್ದರೆ ಪುಸ್ತಕ ಪ್ರಕಾಶನದಲ್ಲಿ ಧನ ಸಂಪಾದನೆ ಮಾಡಿ ಇಂಥ ಸೇವೆಗೆಂದು ಕೆಲವು ಹಣವನ್ನು ಕಾದಿರಿಸುವ ಯೋಗ್ಯತೆಯುಳ್ಳ ಸ್ವತಂತ್ರ ವ್ಯಕ್ತಿಗಳೇ ಇದಕ್ಕೆ ಕೈಹಾಕಬೇಕು. ಸಾಹಿತ್ಯ ಸಮ್ಮೇಲನದಲ್ಲಿ ಪ್ರತಿ ವರ್ಷವೂ ಒಂದೆರಡು ಸಾಹಿತ್ಯ ರೂಪಗಳನ್ನು ಕುರಿತು ಗೋಷ್ಠಿಗಳು ಏರ್ಪಡಬೇಕೆಂಬ ಮನೀಷೆ ಬಹುಕಾಲದಿಂದ ವ್ಯಕ್ತವಾಗಿದೆ. ಆದರೆ ಇವಕ್ಕೆ ೨-೩ ತಿಂಗಳ ಸಿದ್ಧತೆ ಸಾಲದು, ಹನ್ನೆರಡು ತಿಂಗಳಾದರೂ ಬೇಕು. ಯಾವೊಂದು ಸಮ್ಮೇಲನ ಕಾಲಕ್ಕೆ ಲೇಖಕರೂ ವಿಮರ್ಶಕರೂ ಸೇರಿ ಮುಂಬರುವ ವರ್ಷದ ಗೋಷ್ಠಿಯ ರೂಪರೇಷೆಯನ್ನು ಗೊತ್ತುಪಡಿಸಿ ಅದರ ಚಾಲಕರನ್ನು ನಿರ್ಧರಿಸಿ ಕಾರ್ಯ ಪ್ರಾರಂಭ ಮಾಡಬೇಕು. ಸಮ್ಮೇಲನದ ಕಾಲಕ್ಕೆ ಎಲ್ಲ ಕನ್ನಡಿಗರಿಗೆ ಮುಕ್ತದ್ವಾರವಿದ್ದ ಕಾರ್ಯಕ್ರಮಗಳು ಎರಡು ದಿನ ನಡೆದು ಮುಗಿದಮೇಲೆ ಒಂದು ಸಂಪೂರ್ಣ ದಿನವಾದರೂ ಆಯಾ ಗೋಷ್ಠಿಗೆ ಮೀಸಲಾಗಿರಬೇಕು. ಗೋಷ್ಠಿಯ ನಿಯೋಜಿತ ಅಧ್ಯಕ್ಷರು ಆ ಸಾಹಿತ್ಯರೂಪದಲ್ಲಿ ಅಲ್ಲಿಯವರೆಗಾದ ನಿರ್ಮಿತಿಯ ಅವಲೋಕನ ಮಾಡಬೇಕು, ಕೆಲವರು ಬರೆದು ತಂದ ಪ್ರಬಂಧಗಳನ್ನು ಓದಬೇಕು, ಅವುಗಳ ಮೇಲೆ ಚರ್ಚೆ ನಡೆಯಬೇಕು. ಪ್ರಬಂಧ ವಿಷಯಗಳನ್ನು ಪೂರ್ವಭಾವಿಯಾಗಿ ಸರ್ವಂಕಷವಾಗುವಂತೆ ಪುನರುಕ್ತಿಯಾಗದಂತೆ ಆರಿಸಿ ಸಾಕಷ್ಟು ಮುಂಚಿತವಾಗಿ ಲೇಖಕರಿಗೆ ತಿಳಿಸಿರಬೇಕು. ಗೋಷ್ಠಿಯ ಫಲಶ್ರುತಿಯೆಂದು ಅಧ್ಯಕ್ಷರ ಅವಲೋಕನದೊಂದಿಗೆ ಎಲ್ಲ ಪ್ರಬಂಧಗಳನ್ನಾಗಲಿ ಅವುಗಳ ಸಾರವನ್ನಾಗಲಿ ಪುಸ್ತಕ ರೂಪದಲ್ಲಿ ಪ್ರಕಟಿಸಬೇಕು. ಸಾಹಿತ್ಯ ಸಮ್ಮೇಲನಗಳು ಇಂಥ ಗೋಷ್ಠಿಯೊಡನೆ ಜರುಗುವುದಾದರೆ ಸಾಹಿತಿಗಳೂ ಸಹೃದಯರೂ ಸಮ್ಮೇಲನಗಳಿಗೆ ಹೆಚ್ಚು ಹೆಚ್ಚಾಗಿ ಪ್ರೇಮದಿಂದಲೂ ಆಸಕ್ತಿಯಿಂದಲೂ ಬರುವರೆಂದು ನಿರೀಕ್ಷಿಸಲು ಆಸ್ಪದವುಂಟಾಗುತ್ತದೆ.

**ಕನ್ನಡಿಗರೆ, ಕನ್ನಡಿತಿಯರೆ,**

ಈವರೆಗೆ ಅನೇಕ ವಿಷಯಗಳನ್ನೆತ್ತಿಕೊಂಡು ಮನಸ್ಸು ಬಿಚ್ಚಿ ನನಗೆ ತೋರಿದ ನಾಲ್ಕು ಮಾತುಗಳನ್ನು ತಮ್ಮೆದಿರು ಹೇಳಿದ್ದೇನೆ. ಅವುಗಳಲ್ಲಿ ತಮಗೆ ಮೆಚ್ಚಿಗೆಯಾದದ್ದನ್ನು ಸ್ವೀಕರಿಸಬೇಕು. **ಕನ್ನಡ ಸಾಹಿತ್ಯದ ರಸಸ್ಪರ್ಶದಿಂದ ಕನ್ನಡಿಗರ ಭಾವೈಕ್ಯವಾಗಬೇಕು, ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳು ಅಚ್ಚುಕಟ್ಟಾದ ಬಗೆಯಲ್ಲಿ ಮುನ್ನಡೆಯಬೇಕು, ಮೇಲ್ಮೆಯನ್ನು ಪಡೆಯಬೇಕು ಎಂಬ ಉತ್ಕಟ ಭಾವನೆ ನನ್ನ ಎಲ್ಲ ಮಾತುಗಳನ್ನೂ ಪೋಣಿಸಿದ ಏಕಸೂತ್ರವಾಗಿದೆ.** ಇದನ್ನು ನೆನೆದಂತೆ ನಾನೊಂದು ಕನವರಿಕೆಯನ್ನು ಕಂಡೆ. ಅದೇನೆಂದು ಹೇಳದೆ ನನ್ನ ಜೀವಕ್ಕೆ ಸಮಾಧಾನವಿಲ್ಲ. ಅಲ್ಲಿ ನೋಡಿ, ಗೋಪುರದೊಳಗೆ ಗೋಪುರವಿರುವ

ದೊಡ್ಡ ಆವಾರವು ಕಾಣುತ್ತದೆಯೆ? ಹತ್ತಿರ ಹೋಗಿ ನೋಡಿರಿ. ಪಂಪಭಾರತದ ಎಲ್ಲ ಪಾತ್ರಗಳು ಮೊದಲ ಗೋಪುರದಲ್ಲಿ ಸುಂದರ ಸಜೀವ ಮೂರ್ತಿಗಳಾಗಿ ನಿಂತಿವೆ, ನಿಸರ್ಗ ಚಿತ್ರಗಳು ಕಲ್ಲಿನಲ್ಲಿ ಕಂಡರಣೆ ಪಡೆದಿವೆ. ಅದರ ಹಿಂದಿನ ಗೋಪುರದ ಬಳಿ ಹೋಗಿ ನೋಡಿ. ರನ್ನನ ಗದಾಯುದ್ಧವು ಮೂರ್ತಿಮತ್ತಾಗಿ ನಿಂತಿದೆ. ಅಲ್ಲಿಂದ ಗಿರಿಜಾ ಕಲ್ಯಾಣ, ಪಂಪರಾಮಾಯಣ—ಹೀಗೆ ಎಷ್ಟು ಗೋಪುರಗಳವು! ಅಚ್ಚುಮೆಚ್ಚಾದ ಪ್ರೌಢ ಕನ್ನಡ ಕೃತಿಗಳೆಲ್ಲ ಗೋಪುರದ ರೂಪ ತಾಳಿಬಿಟ್ಟಿವೆ. ಒಳ ಆವಾರದಲ್ಲಿ ನೋಡಿ, ಎಲ್ಲ ಕಡೆಗೆ ಶುಭ್ರ ನೀರಿನ ಉಕ್ಕಂದಗಳಾಗಿ ಉಕ್ಕುಕ್ಕಿ ತುಷಾರತುಷಾರವಾಗಿ ಬೀಳುವ ಕಾರಂಜಿಗಳು! ಸಮೀಪದಲ್ಲಿ ಹೋಗಿ ಕಣ್ಣಿಟ್ಟು ನೋಡಿ, ಕಿವಿದೆರೆದು ಕೇಳಿ. ಅವುಗಳಲ್ಲಿ ಶಿವಶರಣರ ವಚನಗಳ ವಾಣಿ ಕೇಳುತ್ತದೆ. ಇನ್ನೂ ಮುಂದೆ ಹೋಗಿ ನೋಡಿದರೆ ಬಿಟ್ಟುಬಿಡದೆ ಜುಳುಜುಳು ಹರಿಯುವ ಕಾಲುವೆಯೊಂದು. ಅದೆಲ್ಲಿ ಮೊದಲಾಯಿತೊ ಎಲ್ಲಿ ಮುಗಿಯುವುದೊ! ಏನು ಅದಕ್ಕೆ ಮುಗಿವೆಂಬುದೇ ಇಲ್ಲವೇನೊ. ಅದರ ಮಂಜುಳ ರಭಸದಲ್ಲಿ ಹರಿಹರನ ರಗಳೆಗಳ ಅವಿರತನಾದವು ಕೇಳಿಸುತ್ತದೆ. ಇದೇ ಆವಾರದಲ್ಲಿ ಭವ್ಯ ವಾಸ್ತುಮಂದಿರಗಳಿವೆ. ಒಂದರ ಹತ್ತಿರ ಹೋದರೆ ಕೃಷ್ಣನ ಸುತ್ತುಮುತ್ತು ನೆರೆದು ಕೈಮುಗಿದು ನಿಂತ ಪಾಂಡವರ ಚಿತ್ರ ಕಾಣಬೇಕೆ? ಮತ್ತೊಂದು ಕಡೆಗೆ ಅವೆಷ್ಟು ಕಾಳಗದ ನೋಟಗಳು! ರಥದಿಂದ ಇಳಿದು ಓಡಿಹೋಗುತ್ತಿರುವ ಆ ಉತ್ತರಕುಮಾರನ ಚಿತ್ರ ನೋಡಿ! ಓ, ಇದು ಕುಮಾರವ್ಯಾಸನ ಭಾರತ ಮಂದಿರ. ಇನ್ನೊಂದು ಕಡೆ ಅದಕ್ಕೆ ತೀರ ಹತ್ತಿರದಲ್ಲಿ ಜ್ಞಾನಮೂರ್ತಿಯಾದ ಅಲ್ಲಮಪ್ರಭುವಿನ ಲೀಲಾ ಚಿತ್ರಗಳನ್ನು ಒಳಗೊಂಡ ಚಾಮರಸನ ಪ್ರಭುಲಿಂಗ ಲೀಲೆಯ ಮಂದಿರ. ಅಕೊ ಮರೆತೆ, ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿಯ ಆ ದಿಟ್ಟ ಹೊಲತಿಯರು, ಆ ಜೋಡಿ ನಕ್ಷತ್ರಕ, ಆ ದುಷ್ಟ ವಿಶ್ವಾಮಿತ್ರ, ಪಾಪ ಹರಿಶ್ಚಂದ್ರ ಮತ್ತು ಅವನ ಪರಿವಾರ ಇದೆಲ್ಲವನ್ನೂ ಚಿತ್ರಿಸಿದ ಕಲಾಪ್ರಾಸಾದ. ಇತ್ತ ಬನ್ನಿ, ಕಲ್ಲುಕಲ್ಲಿನಲ್ಲಿ ಸಪ್ತಸ್ವರಗಳನ್ನು ನುಡಿಸುವ ಸಹಜ ಸಂಗೀತ ಮಂದಿರ. ಇಲ್ಲಿ ಕೇಳುವುದು ಹರಿದಾಸರ ಹಾಡುಗಳ ಮರುದನಿ. ಇನ್ನೂ ಮುಂದೆ ಬನ್ನಿ, ಭವ್ಯವಾದ ಅರಮನೆಯನ್ನು ಕಾಣುವಿರಲ್ಲವೆ? ತಲೆ ತಿರುಗುವಂತಾಯಿತೆ? ಇದು ಭರತೇಶ್ವರ ಚಕ್ರವರ್ತಿಯ ರಾಜಮಹಾಲು. ರತ್ನಾಕರನ ಪೂರ್ಣ ಜೀವನಸ್ವಪ್ನದ ಸಾಕಾರ ಮಂದಿರ. ಇದನ್ನು ಒಂದು ಕ್ಷಣದಲ್ಲಿ ನೋಡಿ ಮುಗಿಸಲಾರಿರಿ. ಇತ್ತ ಬಂದು ನೋಡಿದರೆ ಇನ್ನೂ ಹಲವು ತರತರದ ವಾಸ್ತುಶಿಲ್ಪದ ಮೂರ್ತಿನಿಬಿಡವಾದ ಮಂದಿರಗಳಿವೆ. ಇಷ್ಟರಲ್ಲಿ ನಮ್ಮ ನಿಮ್ಮ ಮಧ್ಯದಲ್ಲಿ ದಾರಿ ಮಾಡುತ್ತ ಬರುತ್ತಿರುವವರಾರು? ಲಂಗೋಟಿ ಹಾಕಿದ್ದಾನೆ, ಕಂಬಳಿ ಹೊತ್ತಿದ್ದಾನೆ, ಕೈಯಲ್ಲಿರುವಮೊಂದು ಕಪ್ಪರಿಗೆ. ಓ, ಇವನು ಸರ್ವಜ್ಞ! ಅವ ಹೇಗೆ ಬಂದನೀಗ? ಅವನು ಹೋಗೇ ಇರಲಿಲ್ಲ, ಬಂದ ಹೇಗೆ ಅಂದರೇನು? ನಮ್ಮೊಳಗೆ ಸುಳಿದಾಡುತ್ತಲೇ ಇದ್ದ, ಭೂಮಂಡಲ ಮುನಿದರೂ ತಾ ಮುನಿಯದೆ ಕಂಡದ್ದನ್ನು ಆಡುತ್ತಲೆ ಇದ್ದ. ಏನಿದು ಎಲ್ಲ ಕಡೆ ವಿಚಿತ್ರ ಮಂಜು! ಏನೂ ಕಾಣದಂತಾಯಿತಲ್ಲ! ಆಶ್ಚರ್ಯ, ಪರಮಾಶ್ಚರ್ಯ! ಮಂಜಿನೊಳಗಿಂದ ರವಿಕಿರಣದಂತೆ ಯಾವು ಯಾವೋ ಜ್ಯೋತಿರ್ದೇಹಗಳು ಕೆಳಗಿಳಿದು ಮೆಲ್ಲನೆ ಬರುತ್ತಲಿವೆ. ಯಾರಿರಬಹುದವರು? ಹತ್ತಿರ ಹೋಗಿ ನೋಡೋಣ. ಎಂಥ ಅಚ್ಚರಿ! ಇವನು ಆದಿಮಹಾಕವಿ ಪಂಪ, ಅವನ ಹಿಂದೆಯೆ ರನ್ನ, ನಾಗಚಂದ್ರ, ಜನ್ನ, ಇನ್ನೂ ಯಾರ್‍ಯಾರೊ! ಈಚೆ ನೋಡಿ ಅಲ್ಲಮ, ಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ, ನಿಜಗುಣ ಶಿವಯೋಗಿ ಇವರೆಲ್ಲರೂ ತಂಡತಂಡವಾಗಿ ಬರುತ್ತಿದ್ದಾರೆ. ಮತ್ತೊಂದು ದಿಸೆಯಿಂದ

ಕುಮಾರ ವ್ಯಾಸ, ಚಾಮರಸ, ಲಕ್ಷ್ಮೀಶ, ಷಡಕ್ಷರದೇವ ಮುಂತಾದವರು ಕೂಡಿ ಬರುವಂತೆ ಕಾಣುತ್ತದೆ. ಇನ್ನೊಂದು ಕಡೆಯಿಂದ ಕೈಯಲ್ಲಿ ತಂಬೂರಿ ಹಿಡಿದುಕೊಂಡು ಕಾಲಲ್ಲಿ ಗೆಜ್ಜೆ ಕಟ್ಟಿಕೊಂಡು ಪುರಂದರದಾಸ, ಕನಕದಾಸ, ವಿಜಯದಾಸ, ಜಗನ್ನಾಥದಾಸರು ಹಾಡುತ್ತ ಆಗಮಿಸುತ್ತಿದ್ದಾರೆ. ರತ್ನಾಕರ ಸಿದ್ಧನೂ ಇವರನ್ನೆಲ್ಲ ಕೂಡಲು ಸಿದ್ಧನಾದ. ಸರ್ಪಭೂಷಣನೂ ಸರ್ವಜ್ಞನೂ ಕೂಡಿಕೊಂಡ, ಶಿರೀಫ ಸಾಹೇಬನೂ ಸೇರ್ಪಡೆಯಾದ. ಇವರೆಲ್ಲರೂ ತಂತಮ್ಮ ಕೃತಿಗಳ ಪ್ರತಿಕೃತಿಗಳನ್ನು ನೋಡಿ ಬಿಲ್ಲು ಬೆರಗಾದರು. ಒಂದೇ ಹರವಾದ ಬೀದಿಯಲ್ಲಿ ಕೂಡಿಕೊಂಡು ಒಂದೇ ಮೆರವಣಿಗೆಯಾಗಿ ಬಂದರು, ಒಂದೇ ಬಾಂಧವ್ಯವಾಗಿ ಬಂದರು. ನಾವು ಅವರನ್ನು ಬಾಯ್ತೆರೆದು ನೋಡುತ್ತಿದ್ದೇವೆ, ಬರೀ ನೋಡುತ್ತಿದ್ದೇವೆ! ನಾವು ನೋಡುತ್ತಿರುವುದು ದಿಟವೊ ಸಟೆಯೊ ನಮಗೆ ತಿಳಿಯದಾಯಿತು. ಅವರು ಮುಂದೆ ಮುಂದೆ ಬಂದರು, ನಾವು ಹಿಂದೆ ಹಿಂದೆ ಸರಿದೆವು. ನಮ್ಮಲ್ಲಿ ಅನೇಕರಿಗೆ ಅವರ ಗುರುತೇ ಇಲ್ಲ. ಯಾಕಂದರೆ ನಾವು ಕನ್ನಡ ಜನವಲ್ಲವೆ? ಕನ್ನಡ ಸಾಹಿತ್ಯದ ಅತಿರಥಿ ಮಹಾರಥಿಗಳ ಪರಿಚಯ ನಮಗೆಲ್ಲಿಯದು? ಯಾರಾದರೂ ತಮ್ಮನ್ನು ಕರೆಯುವರೆ? ಆತಿಥ್ಯ ಮಾಡುವರೆ? ಎಂಬ ಆತುರದಿಂದ ಅವರೆಲ್ಲರೂ ಒಟ್ಟು ಸೇರಿ ಸಾಗುತ್ತಿದ್ದಾರೆ. ನಾವು ಬೆಪ್ಪಾಗಿ ಬರೀ ನೋಡುತ್ತಿದ್ದೇವೆ. ಕೊನೆಗೆ ಒಂದು ಬೀದಿಯ ತುದಿಗೆ ನಿಂತ ತೇಜಸ್ವಿಯಾದ ಮುದುಕಿಯೊಬ್ಬಳು ಭಕ್ತಿಯಿಂದ ಕೈಮುಗಿದು ತನ್ನ ಮನೆಗೆ ಬರಬೇಕೆಂದು ಅವರೆಲ್ಲರನ್ನು ಅಲ್ಪರಿದು ಕರೆದಳು. ಅವರೆಲ್ಲರೂ ಸೇರಿ ಅವಳ ಚಿಕ್ಕ ಮನೆಯೊಳಗೆ ಹೋದರು. ಎಷ್ಟೋ ಹೊತ್ತು ಹೊರಗೆ ಬರಲೇ ಇಲ್ಲ. ನಮ್ಮಲ್ಲಿ ಕೆಲವರು ಆ ಮುದುಕಿಯ ಮನೆ ಹೊಕ್ಕು ನೋಡಿದರು. ಅಲ್ಲಿ ಯಾರೂ ಇಲ್ಲ. ಮುದುಕಿಯೊಬ್ಬಳೇ ಏನೇನೊ ಕನ್ನಡ ಸವಿನುಡಿಯನ್ನು ಗುಣುಗುಣಿಸುತ್ತ ಸಂತಸದಿಂದ ಕೂತಿದ್ದಾಳೆ. ಅವಳನ್ನು ಕೇಳಿದರು, 'ಅವರೆಲ್ಲ ಎಲ್ಲಿ ಹೋದರು?' ಮುದುಕಿ ಹೇಳಿದಳು, 'ಅವರೆಲ್ಲ ನಲಿದಾಡುತ್ತ ಬಂದರು. ನಾ ನೀಡಿದ ಎಡೆಯನ್ನು ತಗೊಂಡರು, ತಿಂದರು. ನನ್ನ ಹರಸಲೆಂದು ನನ್ನ ತಲೆಯ ಮೇಲೆ ಕೈಯಿಟ್ಟು ಕಾಣದಾಗಿಬಿಟ್ಟರು. ನನ್ನೆದೆ ಭಾರವಾಗಿಬಿಟ್ಟಿತು! ನನ್ನೆದೆಯ ಮಂದಿರದಲ್ಲಿಯೆ ಅವರು ಬಂದು ನಿಂತರೆಂದು ನನಗೆ ತೋರಿತು. ನೀವೂ ಕರೆದಿದ್ದರೆ ನಿಮ್ಮಲ್ಲಿಯೂ ಅವರು ಬರುತ್ತಿದ್ದರು.'

ಕನ್ನಡಿಗರೆ, ಕನ್ನಡಿತಿಯರೆ, ನನ್ನ ಕನವರಿಕೆ ಮುಗಿಯಿತು. ಇನ್ನಾದರೂ ಅವರನ್ನು ನಾನು ಕಂಡ ಆ ರಸಾನುಭವ ಮಂಟಪಕ್ಕೆ ಕರೆಯೋಣ, ಅಲ್ಲಿಂದ ನಮ್ಮ ನಮ್ಮ ಮನೆಗಳಿಗೆ ಕರೆಯೋಣ, ಆತಿಥ್ಯ ಮಾಡೋಣ. ಆಮೇಲೆ ನಮ್ಮನ್ನು ಹರಸಿ ಅವರು ನಂನಮ್ಮ ಹೃದಯಗಳಲ್ಲಿ ಸೇರಿ ಅಜ್ಜ್ಯೋತ್ತಿದಂತಾಗಿ ಅಮರರಾಗಿ ನಿಲ್ಲುವರು! ಇನ್ನೇನು ಬೇಕು ಕನ್ನಡ ಜನದ ಜೀವನ ಸಾರ್ಥಕವಾಗುವದಕ್ಕೆ?

—ರಂ. ಶ್ರೀ. ಮುಗಳಿ

ದಿನಾಂಕ: ೨೮-೧೨-೧೯೬೩
ಸಿದ್ಧಗಂಗಾ ಕ್ಷೇತ್ರ, ತುಮಕೂರು.



## ವಿನಿಮಯ ಪತ್ರಿಕೆಗಳು

**Fortnightly** :—(1) British Information Service, Fortnightly Review of News and Events, Delhi. (2) Soviet Land.

**Monthly:**—1. P.E.N., Bombay. 2. Journal of Mysore State Educational Federation, Bangalore. 3. Divine Life, Rishikesh. 4. Mysore Information Bulletin, Bangalore. 5. British Book News, London. 6. Freedom First, Bombay. 7. The Indian Publisher and Book-seller, Bombay.

**ಮಾಸಪತ್ರಿಕೆ :**

(೧) ಜೀವನ-ಬೆಂಗಳೂರು. (೨) ಶರಣಸಾಹಿತ್ಯ-ಬೆಂಗಳೂರು. (೩) ಕತೆಗಾರ-ಬೆಂಗಳೂರು. (೪) ಕೊರವಂಜಿ-ಬೆಂಗಳೂರು. (೫) ಮಕ್ಕಳ ಪುಸ್ತಕ-ಬೆಂಗಳೂರು. (೬) ಮೈಸೂರು ವ್ಯವಸಾಯ ಸಂಶೋಧನ ಪತ್ರಿಕೆ-ಬೆಂಗಳೂರು. (೭) ವಿನೋದ-ಬೆಂಗಳೂರು. (೮) ಜಯಂತಿ-ಧಾರವಾಡ. (೯) ಜಯಕರ್ನಾಟಕ-ಧಾರವಾಡ. (೧೦) ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ-ಕಾಕಿನಾಡ. (೧೧) ಧನ್ವಂತರಿ-ಬಿಜಾಪುರ. (೧೨) ಅಧ್ಯಾತ್ಮಪ್ರಕಾಶ-ಹೊಳೇನರಸೀಪುರ. (೧೩) ಮೊಗವೀರ-ಬೊಂಬಾಯಿ. (೧೪) ಸದ್ಧರ್ಮ ದೀಪಿಕೆ-ಮೈಸೂರು. (೧೫) ದಿವ್ಯಜ್ಯೋತಿ-ಮೈಸೂರು. (೧೬) ಕಲ್ಯಾಣಿ-ಬಿಜಾಪುರ. (೧೭) ಪುಸ್ತಕ ಪ್ರಪಂಚ-ಮೈಸೂರು. (೧೮) ಭಾರತ ದರ್ಶನ-ಬೆಂಗಳೂರು. (೧೯) ವಿವೇಕಾಭ್ಯುದಯ-ಮಂಗಳೂರು. (೨೦) ಯುಗಪುರುಷ-ಕಿನ್ನಿಗೋಳಿ (ಉ. ಕ.). (೨೧) ಧರ್ಮಬೋಧ-ಉಡುಪಿ. (೨೨) ಅಮರವಾಣಿ-ರಾಯಚೂರು. (೨೩) ವಿಜಯಮಾಲ-ಬೆಂಗಳೂರು. (೨೪) ಪ್ರಕಾಶಿನಿ-ದ. ಕನ್ನಡ. (೨೫) ಪ್ರದೀಪ-ಧಾರವಾಡ. (೨೬) ನವಚೇತನ-ಪೇರಡಾಲ (ದ. ಕ.) (೨೭) ವೀರಮಾತಾ-ಧಾರವಾಡ. (೨೮) ಮಕ್ಕಳ ಬಾವುಟ-ಬೆಂಗಳೂರು. (೨೯) ಸೋವಿಯಟ್ ದೇಶ-ನ್ಯೂ ಡೆಲ್ಲಿ. (೩೦) ಭಾರತ ಸರ್ಕಾರದ ಪ್ರಕಾಶನ ವಿಭಾಗ-ನ್ಯೂ ಡೆಲ್ಲಿ. (೩೧) ಮಲೆನಾಡು-ಬೆಂಗಳೂರು. (೩೨) ಪಂಚಾಮೃತ-ಗದಗ. (೩೩) ತತ್ತ್ವವಾದ-ಬೆಂಗಳೂರು. (೩೪) ಪರಿಮಳ-ನಂಜನಗೂಡು. (೩೫) ಗಾಯನಗಂಗಾ-ಬೆಂಗಳೂರು. (೩೬) ಕಸ್ತೂರಿ-ಹುಬ್ಬಳ್ಳಿ. (೩೭) ಶ್ರೀ ಸುಧಾ-ಬೆಂಗಳೂರು. (೩೮) ನಿತ್ಯಾನಂದ ದರ್ಶನ-ಮುಂಬಯಿ. (೩೯) ಜ್ಯೋತಿರ್ವಾಣಿ-ಬೆಂಗಳೂರು. (೪೦) ಗುರುದೇವ-ಮೂಡಬಿದರೆ. (೪೧) ಸುಕುಮಾರ-ಶಿವಯೋಗಮಂದಿರ. (೪೨) ಸುಬೋಧ-ಬೆಂಗಳೂರು.

**Bi-Monthly:**—1. Journal of the University of Bombay, Bombay. 2. Public Affairs-G.I.P.A., Bangalore.

**Quarterly:**—1. Journal of the Mythic Society, Bangalore. 2. Journal of the Annamalai University, Annamalai Nagar. 3. Bulletin of the Deccan College Research Institute, Poona. 4. Journal of the University of Bombay, Bombay. 5. Annals of Bhandarkar Oriental Research Institute. 6. Bulletin of the School of Oriental and African Studies, London.

**ತ್ರೈಮಾಸಿಕ ಪತ್ರಿಕೆ :**

(೧) ಮೈಸೂರು ಸಕ್ಕರೆ-ಮಂಡ್ಯ. (೨) ಪ್ರಬುದ್ಧ ಕರ್ನಾಟಕ-ಮೈಸೂರು. (೩) ಕನ್ನಡ ನುಡಿ-ಬೊಂಬಾಯಿ. (೪) ಪುಸ್ತಕಮಿತ್ರ-ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ. ಮದರಾಸು.

**Half-Yearly** :—Half-Yearly Journal of the Mysore University, Mysore.

---

# ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ.ನ.ಪೈ |
|---|---|---|
| ೧. | ಕನ್ನಡದ ಬಾವುಟ (ಐದನೆಯ ಮುದ್ರಣ ೧೯೫೮) .... .... | ೨=೦೦ |
| ೨. | ಸೀತಾ ಪರಿತ್ಯಾಗ (ಜೈಮಿನಿ ಭಾರತದಿಂದ ೧೯೬೧) .... .... | ೦=೬೫ |
| ೩. | ಜೇಮ್ಸ್ ಏಬ್ರಹಾಮ್ ಗಾರ್ಫೀಲ್ಡನ ಚರಿತ್ರೆ : ಕ್ಯಾಲಿಕೋ ಪ್ರತಿ (೧೯೩೦) .... | ೧=೫೦ |
| | (ನಾಲ್ಕನೆಯ ಮುದ್ರಣ) ಸಾದಾ ಪ್ರತಿ (೧೯೩೮) .... | ೧=೦೦ |
| ೪. | ಜ್ಯೋತಿರ್ವಿನೋದಿನಿ (೧೯೩೧) .... .... .... | ೨=೦೦ |
| ೫. | ಹೂಮಾಲೆ (೧೯೪೩) .... .... .... | ೦=೬೩ |
| ೬. | ಕನ್ನಡ ನಾಡಿನ ಚರಿತ್ರೆ: ಭಾಗ ೧ (ಅಚ್ಚಿನಲ್ಲಿದೆ) .... .... .... | |
| | ,, ಭಾಗ ೨ (ಎರಡನೆಯ ಮುದ್ರಣ ೧೯೫೭) .... .... | ೨=೦೦ |
| | ,, ಭಾಗ ೩ ( ,, ೧೯೫೯) .... .... | ೧=೨೫ |
| ೭. | ಸರ್ವೋದಯ (೧೯೪೯) .... .... .... | ೦=೩೨ |
| ೮. | ಸೋಮೇಶ್ವರ ಶತಕ (ನಾಲ್ಕನೆಯ ಮುದ್ರಣ ೧೯೬೧) .... .... | ೧=೫೦ |
| ೯. | ಸಂಕಲನ (೧೯೪೯) .... .... .... | ೦=೬೩ |
| ೧೦. | ಕನ್ನಡದಲ್ಲಿ ಸುಧಾರಣೆಗಳು ೧೯೪೬ .... .... .... | ೦=೩೮ |
| ೧೧. | ಅರುಂಧತಿ (೧೯೫೧) .... .... .... | ೦=೨೫ |
| ೧೨. | ಶಿವಶರಣರ ಕೃತಿಗಳು (ಸ್ವರಪ್ರಸ್ತಾರ ಸಹಿತ ೧೯೫೨) .... .... | ೨=೦೦ |
| ೧೩. | ಹರಿದಾಸ ಸಾಹಿತ್ಯ-ಇಂಗ್ಲಿಷ್ ಉಪೋದ್ಘಾತದೊಡನೆ (೧೯೫೨) .... .... | ೧೦=೦೦ |
| ೧೪. | ,, ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ (೧೯೫೨) .... | ೮=೦೦ |
| ೧೫. | ಗಾಳಿಯಲ್ಲಿನ ಅಗೋಚರ ಶತ್ರುಗಳು (೧೯೫೪) .... .... .... | ೧=೨೫ |
| ೧೬. | ನಕ್ಷತ್ರದರ್ಶನ (೧೯೫೪) .... .... .... | ೧=೫೦ |
| ೧೭. | ಹರಿದಾಸ ಕೃತಿಮಂಜರಿ (೧೯೫೫) .... .... .... | ೧=೨೫ |
| ೧೮. | ಪ್ಲೇಟೋವಿನ ಆದರ್ಶರಾಜ್ಯ (೧೯೫೬) .... .... .... | ೧=೩೮ |
| ೧೯. | ವಾಚನ ಕಾವ್ಯಮಂಜರಿ (೧೯೫೫) .... .... .... | ೦=೧೯ |
| ೨೦. | ಚೇರಮ ಕಾವ್ಯಂ (೧೯೫೬) .... .... .... | ೨=೦೦ |
| ೨೧. | ಅನುಭವ ಮುಕುರಂ (೧೯೫೬) .... .... .... | ೦=೩೮ |
| ೨೨. | ಆಧುನಿಕ ಗದ್ಯ ಸಾಹಿತ್ಯ (ಎರಡನೆಯ ಮುದ್ರಣ ೧೯೬೧) .... .... | ೨=೫೦ |
| ೨೩. | ಗಮಕ ಕಾವ್ಯ ಮಂಜರಿ (ಎರಡನೆಯ ಮುದ್ರಣ ೧೯೬೧) .... .... | ೧=೦೦ |
| ೨೪. | ಕನ್ನಡದ ಅತ್ಯುತ್ತಮ ಸಣ್ಣ ಕತೆಗಳು (ಮೂರನೆಯ ಸಂಪುಟ ೧೯೫೮) .... | ೪=೦೦ |
| ೨೫. | ಕಾದಂಬರಿ--ಸಾಮಾನ್ಯ ಮನುಷ್ಯ (೧೯೫೭) .... .... .... | ೧=೦೦ |
| ೨೬. | ಉದ್ಭಟದೇವ ಚರಿತೆ (೧೯೫೭) .... .... .... | ೧=೫೦ |
| ೨೭. | ತ್ರಿಪುರದಹನ ಸಾಂಗತ್ಯ (೧೯೫೯) .... .... .... | ೦=೭೫ |
| ೨೮. | ಮೂರು ಸ್ಪರ್ಧಾ ನಾಟಕಗಳು (೧೯೫೯) .... .... .... | ೨=೭೫ |
| ೨೯. | ಕಾವ್ಯ ಸೌರಭ (೧೯೬೨) .... .... .... | ೨=೦೦ |
| **೩೦.** | **ಕರ್ಣಾಟಕ ಕವಿಚರಿತೆ (೧ನೆ ಭಾಗ)** .... .... .... | **೧೨=೦೦** |
| | ,, ,, **ಲೈಬ್ರರಿ ಪ್ರತಿಗಳು** .... | **೧೫=೦೦** |

**ವಿ. ಸೂ. ಪ್ರತಿಗಳು ಮುಗಿದಿವೆ:** ಪಂಪರಾಮಾಯಣ (೪ನೆಯ ಆಶ್ವಾಸ), ತೊರವೆ ರಾಮಾಯಣ (ಬಾಲಕಾಂಡ ಸಂಧಿ ೧೩-೧೬), ಹರಿದಾಸರ ಕೃತಿಗಳು (ಸ್ವರಪ್ರಸ್ತಾರ ಸಹಿತ), ಹರಿಶ್ಚಂದ್ರನ ರಾಜ್ಯ ಸಮರ್ಪಣ, ವಡ್ಡಾರಾಧನೆ, ಕುಮಾರವ್ಯಾಸ ದರ್ಶನ, ಕವಿಜಿಹ್ವಾಬಂಧನ, ಪಂಪರಾಮಾಯಣದ ನಿಘಂಟು, ಜೈಮಿನಿಭಾರತದ ಕನ್ನಡ ಗದ್ಯಾನುವಾದ (ಅಶ್ವಮೇಧಿಕ ಪರ್ವ), ಚಂದ್ರಹಾಸೋಪಾಖ್ಯಾನ, ದೂತವಾಕ್ಯ, ಪಂಪಭಾರತದ ಕಥೆ (ವಚನ), ಪಂಪಭಾರತದ ನಿಘಂಟು ಮತ್ತು ಪಂಪರಾಮಾಯಣದ ಕಥೆ (ವಚನ), ಪಂಪರಾಮಾಯಣ, ಪಂಪಭಾರತ, ಶಬ್ದಮಣಿ ದರ್ಪಣ.

ಪುಸ್ತಕ ವ್ಯಾಪಾರಿಗಳಿಗೆ ಕರ್ಣಾಟಕ ಕವಿಚರಿತೆ ವಿನಹ ಮಿಕ್ಕೆಲ್ಲ ಪುಸ್ತಕಗಳಿಗೆ ಸೇ. 25ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

ಕಾವ್ಯಗಾಯನ ಕಲಾ ಸಂಗ್ರಹ .... .... .... ೧=೨೫

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು ೧೮.

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ



ಸಂಪುಟ ೪೯ Vol. 49

ಸಂಚಿಕೆ ೧ No. 1

ಜೂನ್ JUNE

೧೯೬೪ 1964



Half-Yearly

JOURNAL OF THE KANNADA LITERARY ACADEMY

KANNADA SAHITYA PARISHAT

BANGALORE-18.

ವಾರ್ಷಿಕ ಚಂದಾ ರೂ. ೨-೫೦ ಪೈ. ★ Annual Subscription Rs. 2 50 P.

# ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

## ಕಾರ್ಯಕಾರಿ ಸಮಿತಿಯ ಸದಸ್ಯರು

೧. ಆಸ್ಥಾನವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಅಧ್ಯಕ್ಷರು, ಬೆಂಗಳೂರು.
೨. ಡಾ|| ಕೆ. ಎಂ. ಕೃಷ್ಣರಾಯರು, ಎಂ.ಎ., ಪಿಎಚ್.ಡಿ., ಗೌರವ ಕಾರ್ಯದರ್ಶಿಗಳು, ಬೆಂಗಳೂರು.
೩. ಶ್ರೀ ಎಸ್. ಶಂಕರಪ್ಪ, ಎಂ.ಎ., ಬಿ.ಟಿ., ಗೌರವ ಕಾರ್ಯದರ್ಶಿಗಳು, ಬೆಂಗಳೂರು.
೪. ಶ್ರೀ ಆರ್. ಅನಂತರಾಮನ್, ಬಿ.ಎ., ಎಲ್ಎಲ್.ಬಿ., ಗೌರವ ಕೋಶಾಧಿಕಾರಿಗಳು, ಬೆಂಗಳೂರು.
೫. ಶ್ರೀ ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ. ಅವರು, ಬೆಂಗಳೂರು.
೬. ಶ್ರೀ ಎಚ್. ಎಸ್. ರೇಣುಕಪ್ರಸಾದ್, ಬಿ.ಎ., ಬಿ.ಎಲ್. ಅವರು, ಬೆಂಗಳೂರು.
೭. ಶ್ರೀ ಟಿ. ಮಾದಯ್ಯಗೌಡ, ಬಿ.ಎ., ಎಲ್ಎಲ್.ಬಿ., ಎಂ.ಎಲ್.ಎ. ಅವರು, ರಾಮನಗರ.
೮. ಶ್ರೀಮತಿ ಬಿ. ಜಿ. ಸುಶೀಲಮ್ಮ, ಬಿ.ಎಸ್‌ಸಿ. (ಆನರ್ಸ್) ಅವರು, ಬೆಂಗಳೂರು.
೯. ಶ್ರೀ ವಿ. ಬಿ. ನಾಯಕ್, ಎಂ. ಎ., ಎಲ್ಎಲ್.ಬಿ. ಅವರು, ಬಿಜಾಪುರ.
೧೦. ಶ್ರೀ ಎಂ. ಬಿ. ಬೂದಿಹಾಳ ಮಠ ಅವರು, ಹುಬ್ಬಳ್ಳಿ.
೧೧. ಶ್ರೀ ರುದ್ರಾಪುರ ಎಸ್. ಎಂ. ದೇಸಾಯಿ ಅವರು, ಬೆಳಗಾಂವಿ.
೧೨. ಶ್ರೀ ಎನ್. ಎಸ್. ಹೆಗ್ಗಡೆ ಅವರು, ಕಾರವಾರ.
೧೩. ಶ್ರೀ ಎಂ. ವಾಸುದೇವರಾವ್, ಎಂ.ಎ., ಎಲ್.ಟಿ. ಅವರು, ಸುರತ್ಕಲ್ಲು.
೧೪. ಶ್ರೀ ಎಂ. ಎಸ್. ಅನಂತಪದ್ಮನಾಭರಾವ್ ಅವರು, ಶಿವಮೊಗ್ಗ.
೧೫. ಶ್ರೀ ಆರ್. ಜಿ. ಜೋಷಿ ಅವರು, ರಾಯಚೂರು.
೧೬. ಶ್ರೀ ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು, ಯಾದಗಿರಿ.
೧೭. ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳು, ಎಂ.ಎ., ಎಂ.ಎಲ್.ಸಿ. ಅವರು, ಬೆಂಗಳೂರು.
೧೮. ಡಾ|| ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ. ಅವರು, ಧಾರವಾಡ.
೧೯. ಡಾ|| ರಂ. ಶ್ರೀ. ಮುಗಳಿ, ಎಂ.ಎ., ಬಿ.ಟಿ., ಡಿ.ಲಿಟ್. ಅವರು, ಸಾಂಗ್ಲಿ.

## ವಿನಿಮಯ ಪತ್ರಿಕೆಗಳು

**ದಿನಪತ್ರಿಕೆ:**

(೧) ಜನವಾಣಿ-ಬೆಂಗಳೂರು. (೨) ಸಂಯುಕ್ತ ಕರ್ನಾಟಕ-ಬೆಂಗಳೂರು.

**ವಾರಪತ್ರಿಕೆ:**

(೧) ಪ್ರಜಾಮತ-ಬೆಂಗಳೂರು. (೨) ಚೇತನ-ಬೆಂಗಳೂರು. (೩) ಮೈಸೂರು ಗೆಜೆಟ್-ಬೆಂಗಳೂರು. (೪) ರಾಯಭಾರಿ-ಉಡುಪಿ. (೫) ವಿಕ್ರಮ-ಬೆಂಗಳೂರು. (೬) ಕಂಠೀರವ-ಮಂಗಳೂರು. (೭) ಪ್ರಭಾತ-ಮಂಗಳೂರು. (೮) ಕರ್ನಾಟಕ ವೈಭವ-ಬಿಜಾಪುರ. (೯) ಕರ್ಮವೀರ-ಹುಬ್ಬಳ್ಳಿ. (೧೦) ಬೆಳಕು-ಮೈಸೂರು. (೧೧) ನವಯುಗ-ಉಡುಪಿ. (೧೨) ಜನಪ್ರಗತಿ-ಬೆಂಗಳೂರು. (೧೩) ಕಾನಾಡವೃತ್ತ-ಕುಮಟ. (೧೪) ರಾಷ್ಟ್ರಮತ-ಮಂಗಳೂರು. (೧೫) ಕನ್ನಡಿಗ-ಹುಬ್ಬಳ್ಳಿ. (೧೬) ಚಲಚಿತ್ರ-ಬೆಂಗಳೂರು. (೧೭) ಪ್ರಪಂಚ-ಹುಬ್ಬಳ್ಳಿ. (೧೮) ಜನಸೇವಕ-ಅಂಕೋಲ. (೧೯) American Reporter. (೨೦) New York Times. New York. (೨೧) ಸಂದರ್ಶನ-ಬಿಜಾಪುರ. (೨೨) ಕರ್ನಾಟಕ ಬಂಧು-ಗದಗ. (೨೩) ಸಂದೇಶ-ಬೆಳಗಾಂವಿ. (೨೪) ಸತ್ಯವಾದಿ-ಮೈಸೂರು.

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

**HALF-YEARLY JOURNAL OF THE**

## KANNADA SAHITYA PARISHAT

**BANGALORE-18**




*Editor*

ASTHANAVIDWAN, PANDITARATNAM
B. SIVAMURTHI SASTRY

*Associate Editor*

DR. K. M. KRISHNA RAO, M.A., Ph.D.

ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ :: ಬೆಂಗಳೂರು–೧೮
೧೯೬೪

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ಶ್ರೀ ಕ್ರೋಧಿ–ಜೇಷ್ಠ ೧೯೬೪

ಸಂಪುಟ ೪೯ ] ಜೂನ್ ೧೯೬೪ [ಸಂಚಿಕೆ ೧




## ವಿಷಯ ಸೂಚಿಕೆ

# HALF-YEARLY JOURNAL

OF THE

## KANNADA LITERARY ACADEMY, BANGALORE

[KANNADA SAHITYA PARISHATPATRIKE]

Vol. 49] JUNE 1964 [No. 1

## CONTENTS




# ಹರಿಹರ-ರಾಘವಾಂಕರು ಸ್ಮರಿಸಿರುವ ಪೂರ್ವಕವಿಗಳು

ಲೇಖಕರು : ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು

ಮಹಾಕವಿಗಳಾದವರು ರಸವತ್ಕೃತಿಗಳನ್ನು ನಿರ್ಮಿಸುವಾಗ ತಮ್ಮ ಮನಸ್ಸಿನ ಮೇಲೆ ಪ್ರಭಾವವನ್ನು ಬೀರಿರುವ ಪ್ರಾಚೀನ ಕವಿಗಳನ್ನು ಸ್ಮರಿಸುವುದು ಒಂದು ಸತ್ಸಂಪ್ರದಾಯ. ಆದರಂತೆ ಕನ್ನಡ ಸಾಹಿತ್ಯದಲ್ಲಿ, ಪ್ರಾಯೇಣ ಜೈನ, ವೀರಶೈವ ಮತ್ತು ಬ್ರಾಹ್ಮಣ ಕವಿಗಳೆಲ್ಲರೂ ತಮ್ಮ ತಮ್ಮ ಕಾವ್ಯಗಳ ಆದಿಯಲ್ಲಿ ತಮಗೆ ಪ್ರಿಯರಾದ ಹಾಗೂ ಮಾರ್ಗದರ್ಶಕರಾದ ಪೂರ್ವಕವಿಗಳ ಹೆಸರನ್ನು ಸ್ಮರಿಸಿರುವುದನ್ನು ನಾವು ಮನಗಾಣಬಹುದು. ಇದರಿಂದ ಆ ಕವಿಗಳ ಕಾವ್ಯಗಳನ್ನು ಅಧ್ಯಯನ ಮಾಡಲು ಮತ್ತು ವಿಮರ್ಶಿಸಲು ಸಹೃದಯರಿಗೆ ಅನುಕೂಲವಾಗುತ್ತದೆ.

ಕನ್ನಡ ಸಾಹಿತ್ಯದಲ್ಲಿ ಹರಿಹರ ಮತ್ತು ರಾಘವಾಂಕ ಕವಿಗಳ ಹೆಸರುಗಳು, ಪಂಪ, ರನ್ನ, ಕುಮಾರವ್ಯಾಸ, ಲಕ್ಷ್ಮೀಶರಂತೆಯೇ ಅಗ್ರಪಂಕ್ತಿಯಲ್ಲಿ ಸ್ಮರಿಸಲು ಅರ್ಹವಾದುವು. ಇವರು ಮಹಾ ಕವಿಗಳೇ ಅಲ್ಲದೆ ಹೊಸ ಮಾರ್ಗ ಸ್ಥಾಪಕರಾದ ಕ್ರಾಂತಿಕಾರರೂ ಎನಿಸಿದ್ದಾರೆ. ರಗಳೆಯಲ್ಲಿ ಹರಿಹರನೂ, ಷಟ್ಪದಿಯಲ್ಲಿ ರಾಘವಾಂಕನೂ ಕಾವ್ಯರಚನೆ ಮಾಡಿರುವುದು ಇದಕ್ಕೆ ನಿದರ್ಶನ. ಹರೀಶ್ವರನು ಗಿರಿಜಾಕಲ್ಯಾಣ, ರಘಟಾಕಾವ್ಯ (ಶಿವಶರಣರ ೧೦೮ ರಗಳೆಗಳು) ಪಂಪಾಶತಕ, ರಕ್ಷಾಶತಕ, ಮುಡಿಗೆಯ ಅಷ್ಟಕ ಮತ್ತು ಶಿವಾಕ್ಷರಮಾಲೆಗಳನ್ನು ಬರೆದಿರುವನು. ಈ ಗ್ರಂಥಗಳಲ್ಲಿ ಕಡೆಯದು ಕಣ್ಮರೆಯಾಗಿದೆ. ಉಳಿದುವು ಬೆಳಕಿಗೆ ಬಂದಿವೆ. ಹರಿಹರನ ಶಿಷ್ಯನೂ ಸೋದರಳಿಯನೂ ಆದ ರಾಘವಾಂಕನು ಹರಿಶ್ಚಂದ್ರ ಕಾವ್ಯ, ಸಿದ್ಧರಾಮ ಚಾರಿತ್ರ, ಸೋಮನಾಥ ಚರಿತೆ, ವೀರೇಶ ಚರಿತೆ, ಶರಭ ಚಾರಿತ್ರ ಮತ್ತು ಹರಿಹರಮಹತ್ವ ಎಂಬಿಷ್ಟು ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಶರಭ ಚಾರಿತ್ರ ಮತ್ತು ಹರಿಹರಮಹತ್ವ ಕಣ್ಮರೆಯಾಗಿವೆ. ಉಳಿದುವು ಅಚ್ಚಾಗಿವೆ. ಸಿದ್ಧರಾಮ, ಹರಿಶ್ಚಂದ್ರ, ಸೋಮನಾಥ ಕಾವ್ಯಗಳು ವಾರ್ಧಕದಲ್ಲಿಯೂ, ವೀರೇಶ ಚರಿತೆ ಉದ್ದಂಡಷಟ್ಪದಿಯಲ್ಲಿಯೂ ರಚಿಸಲ್ಪಟ್ಟಿವೆ. ಹರಿಹರ - ರಾಘವಾಂಕರು ಪಂಪಾಕ್ಷೇತ್ರದ ನಿವಾಸಿಗಳು. 'ಹರೀಶ್ವರನು' ಹಂಪೆಯ ಮಹಾದೇವನ ಮಗನು, ರಾಘವಾಂಕನು ಹಂಪೆಯ ಮಾದಿರಾಜ ಮತ್ತು ರುದ್ರಾಂಬೆಯರ ಮಗನು. ಹರಿಹರ-ರಾಘವಾಂಕರ ಗುರು ಪರಂಪರೆ ಉಜ್ವಲವಾದ ಶೈವಾಗಮ ಖ್ಯಾತಿಯಿಂದ ಕೂಡಿದೆ.

ಹಂಪೆಯ ಶಂಕರ ದೇವರು,
ಹಂಪೆಯ ಮಾದಿರಾಜರು,
ಹಂಪೆಯ ಮಾಯಿದೇವರು,
ಹಂಪೆಯ ಹರಿಹರದೇವರು,
ಹಂಪೆಯ ರಾಘವಾಂಕರು. ಇದು ಆ ಪರಂಪರೆ.

'ಗಿರಿಜಾ ಕಲ್ಯಾಣ'ದಲ್ಲಿ ಹರಿಹರನು ಅನುಕ್ರಮವಾಗಿ ತನ್ನ ಗುರು ಪರಂಪರೆಯನ್ನು ಹೇಳುವಾಗ, ಶಂಕರದೇವರು, ಮಾದಿರಾಜರು, ಮಾಯಿದೇವರು, ಅನಂತರ ಹಂಪೆಯ ಹರೀಶ್ವರ ಎಂದು ಹೇಳಿಕೊಂಡಿದ್ದಾನೆ. ಹರಿಹರನು 'ಪಂಪಾಪತಿಯ ಸಾಕ್ಷಾತ್ ಸುಪುತ್ರಂ' ಎಂದು ತನ್ನನ್ನು ಕರೆದುಕೊಂಡರೆ, ರಾಘವಾಂಕನು 'ಹರಿದೇವಸುತಂ' ಎಂದು ತನ್ನನ್ನು ಕರೆದುಕೊಂಡಿದ್ದಾನೆ. ರಾಘವಾಂಕನ 'ಹರಿಶ್ಚಂದ್ರ ಕಾವ್ಯ' ಮತ್ತು 'ಸೋಮನಾಥ ಚಾರಿತ್ರ'ಗಳಲ್ಲಿ ಅನುಕ್ರಮವಾಗಿ ಶಂಕರಪ್ರಭು, ಸುಕವಿ ಮಾದಿರಾಜ, ಮಹಾದೇವ, ಹರೀಶ್ವರ, ಅನಂತರ ರಾಘವಾಂಕ ಎಂದು ನಿರೂಪಿತವಾಗಿದೆ. ಹರಿಹರನ ಗುರುವು ಮಾಯಿದೇವನೆಂದು, ಗಿರಿಜಾಕಲ್ಯಾಣದಲ್ಲಿಯೂ ಮಹಾದೇವನೆಂದು ಹರಿಶ್ಚಂದ್ರ ಕಾವ್ಯ ಮತ್ತು ಸೋಮನಾಥ ಚಾರಿತ್ರಗಳಲ್ಲಿಯೂ ಹೇಳಿದೆ. ತನ್ನ ಗುರುವಾದ ಮಾಯಿದೇವನನ್ನು ಹರಿಹರನು "ಮಾದಿರಾಜನ ಮನೋದುಗ್ಧಾಬ್ಧಿಚಂದ್ರಂ, ಶಿವಂ, ಶಾಂತಂ, ಶಾಶ್ವತಮೂರ್ತಿ, ಶೈವಸುಭಗಂ, ಸಾಕಾರ ಸರ್ವೇಶ್ವರಂ, ಸಂತೋಷಾಭರಣಂ, ಪ್ರಸನ್ನಕರಣಂ, ಪ್ರತ್ಯಕ್ಷ ಪಂಚಾನನಂ, ಶೈವ ಸಾರೋದಯಂ, ಸಂತಂ ಹಂಪೆಯ ಮಾಯಿದೇವನ್ ಎಸೆದಿರ್ಪ್ಪನ್" ಎಂದು ಮೊದಲಾಗಿ ಹೇಳಿ "ಪರಾಮಾಗಮ ಪ್ರಕರನೆಂಬುದು, ಶಿವನೆಂಬುದು, ಅಪ್ರತಿಮನೆಂಬುದು, ಸದ್ಗುರುವೆಂಬುದು ಈ ಜಗಂ" ಎಂದು ತನ್ನ ಗುರುವನ್ನು ಮನದುಂಬಿ ಬಣ್ಣಿಸಿದ್ದಾನೆ. "ಧರೆಯೊಳಗೆ ಆ ಮಾಯಿದೇವರ ವರಕರುಣಂ ಬಡೆದು ಮೆರವಂ ಉನ್ನತ ತೇಜಂ, ಗುರುಪದ ಭಕ್ತಂ, ದೇವ ಕವಿಕಳಾವಿದರರಸಂ, ಹಂಪೆಯ ಹರಿದೇವಂ" ಎಂದು ತನ್ನನ್ನು ಕುರಿತು ಹೇಳಿಕೊಂಡಿದ್ದಾನೆ. ಹೀಗೆ ಹೇಳುವಲ್ಲಿ ಹಂಪೆಯ ಮಾಯಿದೇವರು ಹರಿಹರನ ಗುರುವೆಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಆದರೆ ರಾಘವಾಂಕನು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಹಂಪೆಯ ಶಂಕರಪ್ರಭು, ಸುಕವಿ ಹಂಪೆಯ ಮಾದಿರಾಜ ಎಂಬ ಹೆಸರುಗಳನ್ನು ಹೇಳಿ ಅನಂತರ "ಹಂಪೆಯ ಮಹಾದೇವ ಗುರುರಾಯ ರಕ್ಷಿಸುಗೆ ನಮ್ಮನು" ಎಂದು ಹೇಳುತ್ತಾ 'ಆ ಮಹಾದೇವನ ಉದರದೊಳು ಜನಿಸಿ, ಸದ್ಗುಣಸ್ತೋಮವೆಲ್ಲವು ನೆರೆದು ರೂಪಾದುದೆನಿಸುವ ಮಹಾಮಹಿಮ ಹಂಪೆಯ ಹರಿಹರನ ಮೂರ್ತಿ ನೆಲೆಸಿರ್ಕೆನ್ನ ಚಿತ್ತದೊಳಗೆ' ಎಂದು ಹೇಳುತ್ತಾನೆ. ಹೀಗೆ ಹೇಳುವಲ್ಲಿ ಹರಿಹರನು ಹೇಳುವ ಮಾಯಿದೇವರು, ರಾಘವಾಂಕನು ಹೇಳುವ ಮಹಾದೇವ ಎಂಬ ಹೆಸರುಗಳು ಒಬ್ಬನದೇ ಆಗಿರಬೇಕೆಂದು ನಮಗೆ ತೋರುತ್ತದೆ. ಆದುದರಿಂದ ಆ ಮಹಾದೇವನು ಹರಿಹರನಿಗೆ ಗುರುವೂ, ತಂದೆಯೂ ಆಗಿರಬೇಕೆಂದು ನಾವು ತರ್ಕಿಸುತ್ತೇವೆ. ವೀರಶೈವ ಸಾಹಿತ್ಯದಲ್ಲಿ ಹರಿಹರನ ಗುರು ಅಥವಾ ತಂದೆಯಾದ ಮಾಯಿದೇವನಲ್ಲದೆ ಇದೇ ಹೆಸರಿನ ಮತ್ತೆ ಕೆಲವು ಮಂದಿ ಮಹನೀಯರೂ ಇದ್ದಾರೆ.

ಕೆರೆಯ ಪದ್ಮರಸರಕೂಡೆ ತ್ರಿಭುವನತಾತನು ವಾಗ್ವಾದ ಮಾಡಿದಂದು ಹಳಿಯ ಬೀಡಿನಲ್ಲಿ ಪದ್ಮರಸರ ಪಕ್ಷವಹಿಸಿ ವಾದಮಾಡಿದವರಲ್ಲಿ 'ಹುಲಿಗೆರೆಯ ಮಾಯಿದೇವ' ಎಂಬುವರೊಬ್ಬರಿದ್ದಾರೆ. (ಕರ್ಣಾಟಕ ಕವಿಚರಿತೆ, ಭಾಗ ೧. ಪುಟ ೨೪೬). ಕೆರೆಯ ಪದ್ಮರಸನ ತಂದೆಯ ಹೆಸರು ಮಾಯಿದೇವ ಎಂದು ಪದ್ಮರಾಜ ಪುರಾಣದಲ್ಲಿ ಹೇಳಿದೆ. (ಕ. ಕ. ಚ. ಭಾಗ ೧. ಪುಟ ೨೪೫). ಕನ್ನಡದಲ್ಲಿ ಷಟ್ಸ್ಥಲ ಗದ್ಯ, ಷಟ್ಸ್ಥಲ ವಚನಗಳು, ಏಕೋತ್ತರ ಶತಸ್ಥಲ, ಶತಕತ್ರಯ ಮೊದಲಾದ ಕೃತಿಗಳನ್ನೂ, ಸಂಸ್ಕೃತದಲ್ಲಿ ಅನುಭವಸೂತ್ರ, ವಿಶೇಷಾರ್ಥ ಪ್ರಕಾಶಿಕೆ, ಶತಕತ್ರಯ, ಪ್ರಭುಗೀತೆಗಳನ್ನೂ ರಚಿಸಿದ ಮಗ್ಗೆಯ ಮಾಯಿದೇವ (ಕ್ರಿ. ಶ. ೧೪೩೦) ಎಂಬ ಹೆಸರೂ ಪ್ರಸಿದ್ಧವಾಗಿದೆ. (ಕ. ಕ. ಚ. ಭಾಗ ೨. ಪುಟ ೭೦). ಪುಲಿಗೆರೆಯ

ಮಾಯಿದೇವ, ಕಲ್ಲುಕುರಿಕೆಯ ಮಾಯಿದೇವ, ಮುಗ್ಗೆಯ ಮಾಯಿದೇವ ಎಂಬ ಈ ಮೂವರಿಗಿಂತ ಹರಿಹರನ ಗುರುವಾದ ಮಾಯಿದೇವನು ಭಿನ್ನನು ಎಂದು ನಾವಿಲ್ಲಿ ತಿಳಿಯಬೇಕಾಗಿದೆ. ರಾಘವಾಂಕನು ಹರಿಶ್ಚಂದ್ರ ಕಾವ್ಯದಲ್ಲಿ "ಸುಕವಿ ಹಂಪೆಯ ಮಾದಿರಾಜ" (ಸ್ಥಲ ೧, ಪ. ೧೦) ಎಂದು ಹೇಳಿರುವುದರಿಂದ ಹರಿಹರ-ರಾಘವಾಂಕರ ಗುರುವಿನ ಗುರುವಾದ ಮಾದಿರಾಜನು ಕಾವ್ಯಗಳನ್ನು ರಚಿಸಿರಬೇಕೆಂದು ತೋರುತ್ತದೆ. ಮಾಯಿದೇವ ಎಂಬ ಹೆಸರಿನವರಂತೆಯೇ ಮಾದಿರಾಜ ಎಂಬ ಹೆಸರಿನವರೂ ವೀರಶೈವರಲ್ಲಿ ಬಹಳ ಮಂದಿಯುಂಟು.

ಬಸವೇಶ್ವರನ ತಂದೆಯ ಹೆಸರು ಬಾಗೆವಾಡಿಯ ಮಂಡಿಗೆಯ ಮಾದಿರಾಜ ಎಂದಿದೆ (ಕ. ಕ. ಚ. ಭಾಗ ೧. ಪುಟ ೧೭೪). ರಾಘವಾಂಕನ ತಂದೆ ತಾಯಿಯರು ಮಹಾದೇವ ಭಟ್ಟ, ರುದ್ರಾಣಿಯರು ಎಂದು ಸಿದ್ಧನಂಜೇಶನು ಹೇಳಿದ್ದಾನೆ (ಕ. ಕ. ಚ. ಭಾಗ ೧. ಪುಟ ೨೩೫). ಹರೀಶ್ವರನ ಗುರು ಪರಂಪರೆಯನ್ನು ಅವಲೋಕಿಸಿದರೆ ಪಂಪಾಕ್ಷೇತ್ರದಲ್ಲಿ ಹನ್ನೆರಡನೆಯ ಶತಮಾನದ ಪ್ರಾರಂಭದಲ್ಲಿಯೇ "ಆ ಶೈವಾಗಮ ಸಿದ್ಧರಪ್ಪ ಪರಮ ಶ್ರೀ ಶಂಕರಾಚಾರ್ಯರು ಕೀರ್ತಿಪತಿಗಳಾಗಿ ಕಂಗೊಳಿಸಿದ್ದಾರೆ. ಅವರ ಶಿಷ್ಯರಾದ ಶ್ರೀ ಮಾದಿರಾಜರು ಕೀರ್ತಿಭರಿತರಾಗಿ, ಪ್ರಜ್ವಲಮೂರ್ತಿಗಳಾಗಿ ಮೆರೆದಿದ್ದಾರೆ. ಇವರ ಶಿಷ್ಯರಾದ ಹಂಪೆಯ ಮಾಯಿದೇವರು ಶೈವ ಸಾರೋದಯರಾಗಿ ಪ್ರತ್ಯಕ್ಷ ಪಂಚಾನನರಾಗಿ ವಿಖ್ಯಾತರಾಗಿದ್ದಾರೆ. ಇವರ ಶಿಷ್ಯನಾಗಿ ಮಗನಾಗಿ ಹರಿಹರನೂ, ಈತನ ಶಿಷ್ಯನಾಗಿ ಸೋದರಳಿಯನಾಗಿ ರಾಘವಾಂಕನೂ ಪ್ರಸಿದ್ಧರಾಗಿದ್ದಾರೆ ಎಂದು ನಾವು ತಿಳಿಯಬಹುದು.

೧೫ ನೆಯ ೧೬ ನೆಯ ಶತಮಾನಗಳಲ್ಲಿ ಪಂಪಾಕ್ಷೇತ್ರದಲ್ಲಿಯೇ ಜಕ್ಕಣ್ಣ, ಲಕ್ಕಣ್ಣ, ಚಾಮರಸ, ಕಲ್ಲುಮಠದ ಪ್ರಭುದೇವ, ಚಂದ್ರಶೇಖರಾದಿ ಕವಿಗಳೂ, ವಿರೂಪಾಕ್ಷ ಪಂಡಿತನೂ ಆಗಿಹೋಗಿದ್ದಾರೆ ಎಂಬುದು ಇಲ್ಲಿ ಸ್ಮರಣಾರ್ಹವಾಗಿದೆ. ಇದೇ ಕಾಲದಲ್ಲಿ ಹಳೇಬೀಡಿನಲ್ಲಿದ್ದ ಕುಮಾರ ಪದ್ಮರಸನಿಗೆ ಅವನ ತಂದೆಯಾದ ಕೆರೆಯ ಪದ್ಮರಸನು ಗುರುವಾಗಿಯೂ ಜನಕನಾಗಿಯೂ ಇದ್ದುದನ್ನು ಇಲ್ಲಿ ಸ್ಮರಿಸಬಹುದು. ಪುಲಿಗೆರೆ, ಹಂಪೆ, ಹಳೆಯಬೀಡು, ಗುಬ್ಬಿ-ಗೂಳೂರು-ಗುಮ್ಮಳಾಪುರಗಳು ಹಿಂದೆ ವೀರಶೈವದ ನೆಲೆವೀಡುಗಳಾಗಿದ್ದುದಕ್ಕೆ ನಿದರ್ಶನಗಳಿವೆ.

ಹರಿಹರ-ರಾಘವಾಂಕರ ಕಾಲವಿಚಾರದಲ್ಲಿ ಸುಮಾರು ೫೦ ವರ್ಷಗಳಿಂದ ವಿದ್ವಾಂಸರಲ್ಲಿ ವಾದ-ವಿವಾದ ನಡೆದಿದೆ. ಕ್ರಿ. ಶ. ಹದಿಮೂರನೆಯ ಶತಮಾನದ ಪ್ರಾರಂಭದಲ್ಲಿ ಈ ಉಭಯ ಕವಿಗಳೂ ಬಾಳಿರಬೇಕೆಂದು ಬಹುಮಂದಿ ವಿದ್ವಾಂಸರ ಅಭಿಪ್ರಾಯವಾಗಿದೆ. ಪ್ರಾಯೇಣ ಇದೇ ಕಾಲದಲ್ಲಿ ಹೊಯ್ಸಳ ರಾಜಧಾನಿಯಾದ ಹಳೇಬೀಡಿನಲ್ಲಿ ವಿಖ್ಯಾತ ವೀರಶೈವ ಕವಿಗಳಾದ ಕೆರೆಯ ಪದ್ಮರಸ, ಕುಮಾರ ಪದ್ಮರಸರು ಇದ್ದಿರಬಹುದೆಂದೂ, ಅವರ ಕೃತಿಗಳಾದ ದೀಕ್ಷಾಬೋಧೆ, ಸಾನಂದ ಚರಿತೆ (ಸಂಸ್ಕೃತ-ಕನ್ನಡ) ರಚನೆಯಾಗಿರಬಹುದೆಂದೂ ನಾವು ತರ್ಕಿಸಬಹುದು.

ಕೆರೆಯ ಪದ್ಮರಸನು ತ್ರಿಭುವನತಾತನ ಕೂಡೆ ನಡೆಸಿದ ವಾಗ್ವಾದದಲ್ಲಿ ಕವೀಂದ್ರ ರಾಘವನು ಪದ್ಮರಸನ ಪರವಾಗಿ ವಾದಮಾಡಿದನೆಂದು ತಿಳಿಯಬರುತ್ತದೆ (ಕ. ಕ. ಚ. ಭಾಗ ೧. ಪುಟ ೨೪೬). ಕಡೆಗೆ ರಾಘವಾಂಕನ ಸಮಾಧಿ ಬೇಲೂರಿನಲ್ಲಿಯೇ ಆಗಿದೆ ಎಂಬುದು ಗಮನಾರ್ಹ. ಕೆರೆಯ ಪದ್ಮರಸನ 'ದೀಕ್ಷಾಬೋಧೆ'ಯು ರಗಳೆಯ ಛಂದದಲ್ಲಿಯೂ, ಕುಮಾರ ಪದ್ಮರಸನ 'ಸಾನಂದ ಚರಿತೆ'ಯು, ಷಟ್ಪದಿಯ ಛಂದಸ್ಸಿನಲ್ಲಿಯೂ ರಚಿತವಾಗಿರುವುದನ್ನು ನಾವಿಲ್ಲಿ ಗಮನಿಸಬಹುದು. ಪ್ರಕೃತ, ಹರಿಹರ-ರಾಘವಾಂಕರು ಸ್ಮರಿಸಿರುವ ಪೂರ್ವ

ಕವಿಗಳ ವಿಚಾರವನ್ನು ಇಲ್ಲಿ ಪರಿಶೀಲಿಸೋಣ. ಈ ಉಭಯರೂ ವೀರಶೈವ ಮತೀಯರೂ, ಬ್ರಹ್ಮಚರ್ಯದಿಂದ ಕೂಡಿದ ಪರಿಶುದ್ಧ ಜೀವನವುಳ್ಳವರೂ ಎಂಬುದನ್ನು ನಾವು ಮರೆಯ ಬಾರದು. ಹರೀಶ್ವರನು ತನ್ನ 'ಗಿರಿಜಾ ಕಲ್ಯಾಣ' ಕಾವ್ಯದಲ್ಲಿ (ಆಶ್ವಾಸ ೧-೮)

"ಘನ ಕವಿತ್ವದೊಳೆ ಸಂದ ಮಯೂರನ ರೇಖೆ,
ಕಾಳಿದಾಸನ ರಸವೃತ್ತಿ,
ಬಾಣನ ಮೃದೂಕ್ತಿ,
ಹಲಾಯುಧನ ಆಶು,
ಕೇಶಿರಾಜನ ಬಗೆ,
ಉದ್ಭಟಯ್ಯನ ಗಭೀರತೆ,
ಮಲ್ಹಣನೇಳ್ಗೆ
ಭೋಜರಾಜನ ಜಸಂ
ಎನ್ನ ಕಾವ್ಯದೊಳ್ ಸಂತತಂ ನಲವಿಂ ನೆಲೆಸಿರ್ಕೆ"

ಎಂದು ಪ್ರಾರ್ಥಿಸಿದ್ದಾನೆ. ಈ ಪೂರ್ವಕವಿಗಳಲ್ಲಿ ಕೇಶಿರಾಜ ಎಂದರೆ ಷಡಕ್ಷರ ಕಂದವನ್ನು ಬರೆದ ಕೊಂಡಗುಳಿ ಕೇಶಿರಾಜನು ಮಾತ್ರ ಕನ್ನಡ ಕವಿ. ಉಳಿದವರು ಸಂಸ್ಕೃತದ ಪ್ರಾಚೀನ ಶೈವ ಕವಿಗಳು.

ಹರಿಹರನ ವಿನೂತನ ವೀರಪಂಥವನ್ನು ಮುಂದುವರಿಸಿದ ರಾಘವಾಂಕನು ಹರಿಶ್ಚಂದ್ರ ಕಾವ್ಯದಲ್ಲಿ (೧-೧೪) "ಮನ ವಚನ ಕಾಯದೊಳಗೆ ಒಮ್ಮೆಯುಂ ಫಾಲಲೋಚನನಂ ಅಲ್ಲದೆ ಪೊಗಳದ ಉದ್ಭಟಯ್ಯನ, ಮಯೂರನ, ಕಾಳಿದಾಸನ, ಕೇಶಿರಾಜನ, ಮಲುಹಣನ, ಬಾಣನ, ವಿನುತ ಭೋಜನ, ಭಲ್ಲಟನ, ಪದವ ನೆನೆದು ಬಲಗೊಂಡು ತೊಡಗಿದೆಂ ಈ ಮಹಾಕೃತಿಯಂ, ಚತುರ ಕವಿರಾಯ ಹಂಪೆಯ ಹರೀಶ್ವರನ ವರಸುತಂ ಉಭಯಕವಿ ಕಮಲರವಿ ರಾಘವಾಂಕಂ" ಎಂದು ಹೇಳಿಕೊಂಡಿದ್ದಾನೆ. ಈ ಮೇಲೆ ಕಂಡ ಪೂರ್ವಕವಿಗಳಲ್ಲಿ ಹರಿಹರನು ಸ್ಮರಿಸಿದ ಎಂಟು ಮಂದಿ ಕವಿಗಳ ಜತೆಯಲ್ಲಿ ಭಲ್ಲಟ, ಮತ್ತು ಭಾರವಿ ಎಂಬ ಇಬ್ಬರು ಸಂಸ್ಕೃತ ಕವಿಗಳ ಹೆಸರನ್ನು ರಾಘವಾಂಕನು ಹೆಚ್ಚಾಗಿ ಸೇರಿಸಿದ್ದಾನೆ. ಅಂದರೆ ರಾಘವಾಂಕನು ಸ್ಮರಿಸಿದ ಪ್ರಾಚೀನರು ಹತ್ತು ಮಂದಿ ಮಾತ್ರ.

ಹರಿಹರನ ಶಿಷ್ಯ ಷಡಕ್ಷರದೇವನು ವೃಷಭೇಂದ್ರ ವಿಜಯದ ಕಡೆಯಲ್ಲಿ ಮಂಚಣ್ಣ, ಮಲ್ಲಿಕಾರ್ಜುನ, ಶ್ರೀಕರ ಎಂಬ ಪಂಡಿತತ್ರಯರ ಹೆಸರುಗಳ ಜತೆಯಲ್ಲಿ, ಮಲ್ಹಣ, ಉದ್ಭಟ ದೇವ, ಹಲಾಯುಧ, ಕೇಶಿರಾಜ, ಮೊದಲಾದ ಈ ಹೆಸರುಗಳನ್ನು ಸ್ಮರಿಸಿದ್ದಾನೆ ಎಂಬುದು ಗಮನಾರ್ಹ. ಈಗ ಈ ಕವಿಗಳ ಸಂಗ್ರಹವಾದ ಪರಿಚಯವನ್ನು ಇಲ್ಲಿ ನಾವು ಕಾಣಬಹುದು.

೧. **ಕೊಂಡಗುಳಿ ಕೇಶಿರಾಜ:** "ಇವನು ಷಡಕ್ಷರ ಕಂದವನ್ನು ಬರೆದಿದ್ದಾನೆ. ವಚನಗಳನ್ನೂ ಬರೆದಿರುವಂತೆ ತಿಳಿದುಬರುತ್ತದೆ. ಇವನು ವೀರಶೈವ ಕವಿ. ಕಾಲ: ಕ್ರಿ. ಶ. ೧೧೬೦. ಇವನ ವಿಷಯವಾಗಿ ಭೈರವೇಶ್ವರ ಕಾವ್ಯ ಕಥಾಸೂತ್ರರತ್ನಾಕರದಲ್ಲಿ ಕಲ್ಯಾಣದ ಪೆರ್ಮಾಡಿರಾಜನು ಈತನನ್ನು ಕರೆತರಿಸಿ ಪ್ರಧಾನಿ ಪಟ್ಟವನ್ನು ಕೊಟ್ಟು ಕೇಶಿರಾಜ ದಣಾಯಕ ನೆಂದು ಹೆಸರಿಟ್ಟನೆಂದು ಹೇಳಲಾಗಿದೆ. ಇವನು ಪ್ರತಿದಿನವೂ ಶಿವನನ್ನು ಎಂಟು ಶ್ಲೋಕಗಳಿಂದ ಸ್ತೋತ್ರಮಾಡುತ್ತಿದ್ದಂತೆ ತಿಳಿದುಬರುತ್ತದೆ. (ಕ. ಕ. ಚ. ಭಾಗ ೧. ಪುಟ ೧೬೫). ಶಿಕಾರಿಪುರದ

ನಂ. ೧೧೯, ೧೨೦ ನೇ ಶಾಸನಗಳಿಂದ ಇವನು ಭಾರದ್ವಾಜ ಗೋತ್ರದವನು, ಹೊಳಲಮರಸ-ದುರ್ಗಾದೇವಿಯರ ಮಗನು. ಬಿಜ್ಜಳರಾಯನ ಕೈಕೆಳಗೆ (೧೧೫೬-೬೭) ಬನವಸೆಯ ಒನ್ನೀರ್ಚ್ಛಾಸಿರವನ್ನು ಆಳುತ್ತಾ ಬಲಿಪುರದಲ್ಲಿದ್ದನು. ಬಿಜ್ಜಳನು ಕಾಲವಾದ ಮೇಲೆ ಅವನ ಮಗ ರಾಯಮುರಾರಿ ಸೋಯಿದೇವನ ಕಾಲದಲ್ಲಿಯೂ ಇದ್ದನು. ಇವನು ಬಹಳ ಪರಾಕ್ರಮಿ ಎಂದು ಹೇಳಿದೆ. ಇವನ ಗ್ರಂಥ 'ಷಡಕ್ಷರ ಮಂತ್ರ' ಅಥವಾ 'ಷಡಕ್ಷರ ಕಂದ' ಎಂದು ಹೇಳಿದೆ. ಇದರಲ್ಲಿ ೧೧೦ ಕಂದಗಳಿವೆ. 'ಓಂ ನಮಶ್ಶಿವಾಯೆಂಬ ಪದಂ' ಎಂದು ಕಂದಗಳು ಮುಗಿಯುತ್ತವೆ. ಇವನ ಬಂಧವು ಪ್ರೌಢವಾಗಿದೆ." ಎಂದು ಕವಿಚರಿತೆಕಾರರು ಹೇಳಿದ್ದಾರೆ (ಕ. ಕ. ಚ. ಭಾಗ೧. ಪುಟ ೧೩೬). ಇವನ ವಚನಗಳು ಬೆಳಕಿಗೆ ಬಂದಂತೆ ಕಾಣುವುದಿಲ್ಲ. ಇವನ ಕಂದಗಳು ಸುಂದರವಾಗಿಯೂ ಅಪೂರ್ವ ಶಬ್ದಗಳಿಂದ ಕೂಡಿಯೂ ಇವೆ. ಇವನ ಗ್ರಂಥದ ಪ್ರಭಾವ ಹರಿಹರನ ಗಿರಿಜಾಕಲ್ಯಾಣದ ಮೇಲೆ ಆಗಿದೆಯೆಂದು ಈ ಉಭಯ ಗ್ರಂಥಗಳ ಅಧ್ಯಯನದಿಂದ ಅರಿಯಬಹುದು. ಆದ್ದರಿಂದಲೇ ತನ್ನ ಕಾವ್ಯದಲ್ಲಿ "ಕೇಶಿರಾಜನ ಬಗೆ ನೆಲೆಸಿರ್ಕೆ" ಎಂದು ಕವಿ ಹೇಳಿದ್ದಾನೆ. ಕೇಶಿರಾಜನು ಪವಾಡಪುರುಷನೆಂದು ವೀರಶೈವ ಪುರಾಣಗಳಲ್ಲಿ ಹೇಳಿದೆ.

೨. **ಮಯೂರ ಕವಿ:** ಈತನು ಸುಪ್ರಸಿದ್ಧ ಬಾಣಭಟ್ಟನ ಸಮಕಾಲೀನನು. ಹರ್ಷಚರಿತದಲ್ಲಿ ಮಯೂರನ ಹೆಸರು ಬಂದಿದೆ. (ಜಾಂಗಲಿಕೋ ಮಯೂರಃ) ಇವನು ಶ್ರೀಹರ್ಷನ ಆಸ್ಥಾನದಲ್ಲಿದ್ದಂತೆ ತಿಳಿಯುತ್ತದೆ. ಇವನು ಸೂರ್ಯಶತಕವನ್ನು ಬರೆದಿದ್ದಾನೆ. ಅದಕ್ಕೆ ಜಯಮಂಗಳನು ವ್ಯಾಖ್ಯಾನ ಬರೆದಿದ್ದಾನೆ. ಸಂಸ್ಕೃತ ಸಾಹಿತ್ಯದಲ್ಲಿ ಮಯೂರ ಎಂಬ ಹೆಸರಿನವರು ಬಹಳ ಮಂದಿ ಇದ್ದಾರೆ. ಒಬ್ಬನು 'ಚಂದ್ರಿಕಾ' ಗ್ರಂಥಕಾರನು. ಇನ್ನೊಬ್ಬನು ವ್ಯಾಖ್ಯಾನಕಾರ ಮಯೂರಭಟ್ಟನಿದ್ದಾನೆ. ಆದರೆ ಆದಿಕವಿ ಮಯೂರನು 'ಸೂರ್ಯಶತಕ' ಮಯೂರಾಷ್ಟಕಗಳನ್ನು ಬರೆದು ಪ್ರಖ್ಯಾತನಾಗಿದ್ದಾನೆ. ಇವನು ಶ್ರೀಹರ್ಷನ ಕಾಲದವನು. ಆದ್ದರಿಂದ ೭ ನೇ ಶತಮಾನಕ್ಕೆ ಸೇರಿದವನು. ಸೂರ್ಯಶತಕದಲ್ಲಿ ೧೦೧ ವೃತ್ತಗಳಿವೆ. ಈ ಮಯೂರಶತಕವನ್ನು ಡಾ|| ಕಾರ್ಲೋಬನ್ಹೋಮರ್ - ಇಟಾಲಿಯನ್ ಭಾಷೆಗೂ, ವಿ. ಎಸ್. ಸುಬ್ಬರಾವ್ ಆಂಧ್ರಭಾಷೆಗೂ, ಪರಾಕ್ರಮಬಾಹುವಿಲ್ಲಂ ಎಂಬುವರು ಸಿಂಹಳೀ ಭಾಷೆಗೂ ಭಾಷಾಂತರ ಮಾಡಿದ್ದಾರೆ. ಇತ್ತೀಚೆಗೆ ಕೆಲವು ಕವಿಗಳು ಸೂರ್ಯಶತಕಗಳನ್ನು ಬರೆದಿದ್ದಾರೆ. ಈ ಆಧುನಿಕ ಶತಕಗಳು ಮಯೂರನ ಶತಕದ ಮುಂದೆ ಸೂರ್ಯನ ಮುಂದಿನ ಮಿಂಚುಹುಳುಗಳಂತೆ ಕಾಣಿಸಿಕೊಳ್ಳುತ್ತಿವೆ. ಸೂರ್ಯಶತಕದಿಂದ ಆನಂದವರ್ಧನ, ಕ್ಷೇಮೇಂದ್ರ, ಮಮ್ಮಟ, ವರ್ಧಮಾನ, ಗದಾಧರ, ಉಜ್ವಲದತ್ತ, ಶರಣದೇವ ಮೊದಲಾದವರು ಪದ್ಯಗಳನ್ನು ಉಲ್ಲೇಖಿಸಿದ್ದಾರೆ. ಆದ್ದರಿಂದಲೇ ಈ ಮಹಾಕವಿಯನ್ನು ಕುರಿತು ಹರಿಹರನು ('ಮಯೂರನ ರೇಖೆ') ಎಂದು ಹೇಳಿರುತ್ತಾನೆ. ಭಾರತದಲ್ಲಿ ಸೂರ್ಯನ ಆರಾಧನೆ ಹೆಚ್ಚಿದ್ದ ಕಾಲದಲ್ಲಿ ಈ ಕವಿ ಬದುಕಿದ್ದನು.

೩. **ಹಲಾಯುಧ ಕವಿ:** ಇವನು ಅಭಿಧಾನ ರತ್ನಮಾಲೆಯನ್ನು ಬರೆದಿದ್ದಾನೆ. 'ಕವಿರಹಸ್ಯ' ಎಂಬ ಮತ್ತೊಂದು ಗ್ರಂಥವನ್ನೂ ಬರೆದಂತೆ ತಿಳಿದುಬರುತ್ತದೆ. 'ಮೃತಸಂಜೀವಿನಿ' ವ್ಯಾಖ್ಯಾನವನ್ನು ಕೂಡ ಬರೆದಂತೆ ತಿಳಿಯುತ್ತದೆ. ಡಾ|| ಕೀತ್ ಅವರು ಇವನ ಕಾಲ ೧೦ ನೆಯ ಶತಮಾನ ಎಂದು ಹೇಳಿದ್ದಾರೆ. ಕವಿರಹಸ್ಯದಲ್ಲಿ ೧೭೪ ಶ್ಲೋಕಗಳಿವೆ. ಇವನು ದಕ್ಷಿಣದೇಶದ ಬ್ರಾಹ್ಮಣನೆಂದು ತಿಳಿದುಬರುತ್ತದೆ (ಸಂಸ್ಕೃತ ಕವಿಚರಿತೆ, ಭಾಗ ೨. ಪುಟ ೯೦).

ಇವನು ಉತ್ತರದೇಶದ ನವಗ್ರಾಮವೆಂಬ ಊರಿನಲ್ಲಿದ್ದವನು. ತನ್ನ ಶಿವಭಕ್ತಿಯ ಮಹಿಮೆಯಿಂದ ಎಲ್ಲರೊಡನೆ ತಾನೂ ಕೈಲಾಸಕ್ಕೆ ಹೋದ ಕಥೆ ವೀರಶೈವರಲ್ಲಿ ಪ್ರಸಿದ್ಧವಾಗಿದೆ. ಇಲ್ಲಿ ಸತ್ಯೇಂದ್ರ ಚೋಳ, ಪಾಲ ಗೂರ್ಜರರ ಕಥೆಗಳನ್ನು ನಾವು ಸ್ಮರಿಸಿಕೊಳ್ಳಬಹುದು.

೪. **ಉದ್ಭಟಯ್ಯ :** ಹರಿಹರ–ರಾಘವಾಂಕರು ಸ್ಮರಿಸಿರುವ ಉದ್ಭಟಯ್ಯನು ಸಂಸ್ಕೃತಕವಿಯಾದ ಉದ್ಭಟದೇವನು. ಇವನಿಗೆ ಉದ್ಭಟಾಚಾರ್ಯನೆಂಬ ಹೆಸರೂ ಇದೆ. ಇವನು ಬ್ರಾಹ್ಮಣ, ಕಾಶ್ಮೀರದವನು. ಇವನ ಗ್ರಂಥ ಕಾವ್ಯಾಲಂಕಾರ ಸಂಗ್ರಹ. ಇದಕ್ಕೆ 'ಪ್ರತಿಹಾರೇಂದು' ರಾಜನು ವ್ಯಾಖ್ಯಾನ ಬರೆದಿದ್ದಾನೆ. ಇವನು 'ಕುಮಾರಸಂಭವ' ಎಂಬ ಕಾವ್ಯವನ್ನು ಬರೆದಂತೆ ಪ್ರತೀತಿಯಿದೆ. ಹರಿಹರನು ಆ ಕುಮಾರಸಂಭವವನ್ನು ಓದಿರಬಹುದೆ? ಆದರೆ ಈ ಗ್ರಂಥ ಕಣ್ಮರೆಯಾಗಿದೆ. ಈ ಉದ್ಭಟನು ನಮ್ಮ ರಾಷ್ಟ್ರದ ಪ್ರಖ್ಯಾತ ಆಲಂಕಾರಿಕರಲ್ಲಿ ಒಬ್ಬನಾಗಿದ್ದಾನೆ. ಹರೀಶ್ವರನು 'ಉದ್ಭಟಯ್ಯನ ಗಭೀರತೆ' ತನ್ನ ಕಾವ್ಯದಲ್ಲಿ ನೆಲೆಸಿರಲೆಂದು ಹಂಬಲಿಸುತ್ತಾನೆ. ಬ್ರಹ್ಮಶಿವನ ಸಮಯ ಪರೀಕ್ಷೆಯಿಂದ ಇವನು ಸಾವಿರ ಗ್ರಂಥಗಳುಳ್ಳ 'ಹರಲೀಲೆ' ಎಂಬ ಕಾವ್ಯವನ್ನು ಬರೆದಂತೆ ತಿಳಿದುಬರುತ್ತದೆ. ವೀರಶೈವ ಸಾಹಿತ್ಯದಲ್ಲಿ ಸುಪ್ರಸಿದ್ಧವೆನಿಸಿರುವ ಉದ್ಭಟಕಾವ್ಯ, ಉದ್ಭಟದೇವ ಚರಿತೆಗಳಲ್ಲಿ ಅಭಿವರ್ಣಿತನಾಗಿರುವ ಉದ್ಭಟದೇವನೆಂಬ ಶರಣನಿಗೆ ಈ ಉದ್ಭಟಯ್ಯನು ಭಿನ್ನನೆಂದು ತೋರುತ್ತದೆ.

೫. **ಕವಿ ಮಲ್ಹಣ :** ಇವನು ಸಂಸ್ಕೃತದಲ್ಲಿ ಶಿವಸ್ತೋತ್ರವನ್ನು ಬರೆದಿರುವನು. ಹರೀಶ್ವರನು ಈತನನ್ನು ಕುರಿತು 'ಮಲುಹಣರಗಳೆ' ಬರೆದಿದ್ದಾನೆ. ಇವನು ಕಾಶ್ಮೀರದ ಭಾರತೀಪೀಠ ಪಟ್ಟಣದ ಸುವರ್ಣಭಟ್ಟನ ಮಗನು. ಮೊದಲು ಕಾಮುಕನಾಗಿದ್ದನು. ಕಡೆಗೆ ಮಲುಹಣಿ ಎಂಬ ವೇಶ್ಯೆಯ ಉಪದೇಶದಿಂದ ಶಿವನ ಕಡೆಗೆ ದೃಷ್ಟಿಯನ್ನು ತಿರುಗಿಸಿ ಶಿವಸ್ತೋತ್ರಗಳನ್ನು ರಚಿಸಿದನು, ಸಂಸ್ಕೃತದಲ್ಲಿ ಇವನ ಸ್ತೋತ್ರವು ಪ್ರಸಿದ್ಧವಾಗಿದೆ. 'ಕಾಂತಾಕಚಪ್ರಚಯ ಪುಷ್ಪ ಸುಗಂಧಿಗಂಧ' ಎಂದು ಇವನ ಸ್ತೋತ್ರ ಪ್ರಾರಂಭವಾಗುವುದು. ಈ ಸ್ತೋತ್ರದಲ್ಲಿ ೩೯ ವೃತ್ತಗಳಿವೆ. ಈ ಮಲುಹಣ ಸ್ತೋತ್ರಕ್ಕೆ ಸುಮಾರು ೧೩ ನೆಯ ಶತಮಾನದಲ್ಲಿದ್ದಿರಬಹುದಾದ ವಿಶ್ವಾರಾಧ್ಯನು ಸಂಸ್ಕೃತದಲ್ಲಿ ವ್ಯಾಖ್ಯಾನ ಬರೆದಿದ್ದಾನೆ. ಈ ವಿಶ್ವಾರಾಧ್ಯನು ಕೆರೆಯ ಪದ್ಮರಸನ ಮೊಮ್ಮಗನು ಹಾಗೂ ಕುಮಾರ ಪದ್ಮರಸನ ಮಗನು ಎಂದು ಲಿಂ. ಹೊಸಮಠದ ಬಸವಲಿಂಗಸ್ವಾಮಿಗಳು ಹೇಳಿದ್ದಾರೆ. (ಶಿವಪಂಚಸ್ತವ ಪೀಠಿಕೆ, ೧೯೦೮ರ ಮೈಸೂರು ಮುದ್ರಣ)

೬. **ಕವಿ ಕಾಳಿದಾಸ :** ಇವನು ಸಂಸ್ಕೃತದಲ್ಲಿ ಸುಪ್ರಸಿದ್ಧನಾದ ಕವಿ. ಐಹೊಳೆಯ ರವಿಕೀರ್ತಿಯ ಶಾಸನದಲ್ಲಿ (ರವಿಕೀರ್ತಿಃ ಕವಿತಾಶ್ರಿತ ಕಾಳಿದಾಸ ಭಾರವಿಕೀರ್ತಿಃ) ಭಾರವಿಯ ಹೆಸರಿನ ಜತೆಯಲ್ಲಿ ಈತನ ಹೆಸರೂ ಬಂದಿದೆ. ಇವನ ಕಾಲ ಸು. ೪ನೇ ಶತಮಾನ. ಕಾವ್ಯಗಳು : ರಘುವಂಶ, ಕುಮಾರಸಂಭವ, ಮೇಘದೂತ, ಋತುಸಂಹಾರ; ನಾಟಕಗಳು : ಅಭಿಜ್ಞಾನ ಶಾಕುಂತಲ, ವಿಕ್ರಮೋರ್ವಶೀಯ, ಮಾಳವಿಕಾಗ್ನಿಮಿತ್ರ.

ವೀರಶೈವ ಗ್ರಂಥಗಳಲ್ಲಿ 'ಕಾಳಿದಾಸ' ಎಂಬ ಶರಣನ ಹೆಸರಿದೆ. ಬಸವೇಶ್ವರನ ವಚನಗಳಲ್ಲಿ "ಕಾಳಿದಾಸಂಗೆ ಕಣ್ಣನಿತ್ತೆ, ಕಾಳಿದಾಸನವ ನಾನು" ಎಂಬ ಮಾತುಗಳು ಬರುತ್ತವೆ. ಇವು ಶರಣ ಕಾಳಿದಾಸನನ್ನು ಕುರಿತು ಆಡಿದ ಮಾತುಗಳು. ಪ್ರೌಢದೇವರಾಯನ ಕಾವ್ಯದಲ್ಲಿ ಶರಣ ಕಾಳಿದಾಸನ ಕಥೆ ಬಂದಿದೆ. ಸುಮಾರು ಒಂದು ಸಾವಿರ ವರ್ಷದ ಕನ್ನಡ

ಸಾಹಿತ್ಯ ಚರಿತ್ರೆಯಲ್ಲಿ ಕಾಳಿದಾಸನ ಪ್ರಭಾವ ನಮ್ಮ ಕವಿಗಳ ಮೇಲೆ ಚೆನ್ನಾಗಿ ಆಗಿದೆಯೆಂದು ನಾವು ಮನಗಾಣಬಹುದು. ಕಾಳಿದಾಸನ ರಸವೃತ್ತಿಯೂ, ಶಿವಭಕ್ತಿಯೂ ಅದ್ವಿತೀಯವಾಗಿದೆ ಯೆಂದು ಹರಿಹರನ ಅಭಿಪ್ರಾಯ. ಕಾಳಿದಾಸನ 'ಕುಮಾರ ಸಂಭವ'ವು ಹರಿಹರನ ಗಿರಿಜಾ ಕಲ್ಯಾಣಕ್ಕೆ ಸ್ಫೂರ್ತಿಯನ್ನು ಕೊಟ್ಟಿದೆಯೆನ್ನಬಹುದು.

೭. **ಕವಿ ಬಾಣಭಟ್ಟ**: ಸಂಸ್ಕೃತದಲ್ಲಿ ಕಾದಂಬರಿ ಮತ್ತು ಹರ್ಷಚರಿತಗಳನ್ನು ಬರೆದವನೇ ವಿಖ್ಯಾತನಾದ ಬಾಣಭಟ್ಟ. ಇವನ ಕಾಲ ಕ್ರಿ. ಶ. ೭ನೆಯ ಶತಮಾನ. ಶ್ರೀಹರ್ಷನ ಆಸ್ಥಾನಕವಿಯಾಗಿದ್ದನು. ಶೋಣಾನದಿಯ ಪಶ್ಚಿಮ ತೀರದಲ್ಲಿರುವ ಪ್ರೀತಿಕೂಟವು ಇವನ ಜನ್ಮಸ್ಥಳ. ರಾಜದೇವಿ, ಚಿತ್ರಭಾನುಗಳು ಇವನ ತಂದೆತಾಯಿಗಳು. ಇವನು ಬ್ರಾಹ್ಮಣ. 'ಚಂಡೀ ಶತಕ' ಬರೆದಂತೆ ತಿಳಿದುಬರುತ್ತದೆ. 'ಪಾರ್ವತೀ ಪರಿಣಯ ನಾಟಕ' ಇವನೇ ರಚಿಸಿರಬೇಕು ಎಂದು ಕೆಲವರ ವಾದ. ಬಾಣಭಟ್ಟನ ಕಾದಂಬರಿ ವಿಶ್ವಸಾಹಿತ್ಯದಲ್ಲಿ ಪರಿಗಣಿಸಲು ಅರ್ಹವಾದ ಮಹಾಕಾವ್ಯ. ಅದರಿಂದ 'ಬಾಣೋಚ್ಛಿಷ್ಟಂ ಜಗತ್ಸರ್ವಂ' ಎಂಬ ಬಿರುದು ಬಂದಿದೆ. ಮಹಾಕವಿ ನಾಗವರ್ಮನು ಈ ಕಾದಂಬರಿಯನ್ನು ಚಂಪೂವಿನಲ್ಲಿ ಕನ್ನಡ ದಲ್ಲಿ ಬರೆದಿದ್ದಾನೆ. (ಇವನ ಕಾಲ ಸು. ೯೯೦. ಕನ್ನಡ ಛಂದೋಂಬುಧಿಯನ್ನು ಇವನೇ ಬರೆದಿರುವನೆಂದು ವಿದ್ವಾಂಸರ ಅಭಿಪ್ರಾಯ.) ಇವನ ಹರ್ಷಚರಿತೆಗೆ ಕವಿ ಚೂಡಾರ್ಯ ಶಂಕರನು ವ್ಯಾಖ್ಯಾನ ಬರೆದಿದ್ದಾನೆ. ಪ್ರಾಯೇಣ ಭಾರತದ ಪ್ರಸಿದ್ಧ ಕವಿಗಳೆಲ್ಲರೂ ಬಾಣ ಭಟ್ಟನಿಗೆ ಋಣಿಗಳಾಗಿದ್ದಾರೆ. 'ಬಾಣನ ಮೃದೂಕ್ತಿ' ಹರೀಶ್ವರನ ಮನಸ್ಸಿಗೆ ಬಹಳವಾಗಿ ಹಿಡಿದಿದೆಯೆಂದು ತೋರುತ್ತದೆ.

೮. **ಕವಿ ಭೋಜರಾಜ**: "ಭೋಜರಾಜನ ಜಸಂ ಸಂತತಂ ತನ್ನ ಕಾವ್ಯದೊಳ್ ನೆಲೆಸಿರ್ಕೆ" ಎನ್ನುವನು ಕವಿ ಹರಿಹರನು. ಸಂಸ್ಕೃತದಲ್ಲಿ ಚಂಪುರಾಮಾಯಣವನ್ನು ಬರೆದವನು ಈ ಭೋಜನಾಗಿರಬೇಕು. ಇವನು ಧಾರಾನಗರದಲ್ಲಿ ಆಳುತ್ತಿದ್ದಂತೆ ಇತಿಹಾಸದಿಂದ ತಿಳಿದು ಬರುತ್ತದೆ. ಈತನು ಸಿಂಧುಲರಾಜನ ಮಗನು. ಪರಮಾರು ವಂಶದವನು. ಇವನು 'ಸರಸ್ವತೀ ಕಂಠಾಭರಣ'ವನ್ನು ಕೂಡ ಬರೆದಿದ್ದಾನೆ. ಇವನು ಕ್ರಿ. ಶ. ೧೦೧೦-೧೦೫೦ ರಾಜ್ಯಭಾರ ಮಾಡಿದನು. ಆದರೆ ವಿನ್ಸೆಂಟ್ ಸ್ಮಿತ್ (೧೦೧೮-೬೦) ರಾಜ್ಯಭಾರ ಮಾಡಿದನೆಂದು ಹೇಳುತ್ತಾರೆ (Vincent Smith's early History of India p. 395). ಈತನು ಖಗೋಳ ಜ್ಯೋತಿಷ್ಯ, ವೈದ್ಯ, ಶಿಲ್ಪ, ವ್ಯಾಕರಣ, ವೇದಾಂತ, ಮೊದಲಾದುವುಗಳನ್ನು ಕುರಿತು ಬರೆದಂತೆ ತಿಳಿಯುತ್ತದೆ. ಚಂಪು ರಾಮಾಯಣವು ಈತನದಲ್ಲವೆಂಬ ವಾದವೂ ಇದೆ. (ಸಂ. ಕ. ಚ. ಭಾಗ ೨. ಪುಟ ೧೨೯)

ಷಡಕ್ಷರಕವಿಯ ರಾಜಶೇಖರ ವಿಳಾಸದಲ್ಲಿ ಒಬ್ಬ ಭೋಜರಾಜನನ್ನು ಸ್ಮರಿಸಲಾಗಿದೆ. ಸತತಾರಾಧಿತ ಶಂಕರೀರಮಣ ಪಾದಾಂಭೋಜನಂಭೋಜನಂ (ರಾಜಶೇ. ೧-೧೮) ಹೀಗೆ ಹರಿಹರ, ರಾಘವಾಂಕ, ಷಡಕ್ಷರಕವಿಗಳಿಂದ ಸ್ಮರಿಸಲ್ಪಟ್ಟಿರುವ ಭೋಜನು ಸಂಸ್ಕೃತದ ಕವಿಯೋ ಅಥವಾ ತದ್‌ಭಿನ್ನನೋ ಎಂಬುದು ಆಲೋಚನಾರ್ಹವಾಗಿದೆ. ಸಂಸ್ಕೃತಭಾಷೆಯಲ್ಲಿ 'ವೀರಶೈವ ತತ್ತ್ವಪ್ರಕಾಶ ಮತ್ತು ಶತಸೂತ್ರರತ್ನ' ಎಂಬ ಗ್ರಂಥಗಳನ್ನು ಬರೆದ 'ಭೋಜನೃಪತಿ' ಒಬ್ಬ ಇದ್ದಾನೆ. ಇವನ ಕಾಲ ಗೊತ್ತಿಲ್ಲ. ಈತನ ಶತಸೂತ್ರರತ್ನಕ್ಕೆ ಪರ್ವತೇಶ್ವರಕೃತ ಟೀಕೆಯಿದೆ.

೧೯೧೧ರಲ್ಲಿ ಮೈಸೂರಿನಲ್ಲಿ ಕೈ|| ಎನ್. ಆರ್. ಕರಿಬಸವಶಾಸ್ತ್ರಿಗಳು ಈ ಗ್ರಂಥವನ್ನು ಪ್ರಕಟಿಸಿದ್ದಾರೆ. ತತ್ತ್ವಪ್ರಕಾಶಿಕೆಯ ಕರ್ತೃವೇ ಶತಸೂತ್ರರತ್ನದ ಕರ್ತೃ ಎಂದು ಊಹಿಸಿದ್ದಾರೆ. ಪ್ರಾಚೀನ ಹಸ್ತಪ್ರತಿಗಳಲ್ಲಿ ಈ ಗ್ರಂಥಗಳ ಕರ್ತೃ ಭೋಜದೇವನೃಪತಿ ಎಂದು ನಿರೂಪಿತವಾಗಿದೆ. ಈ ಗ್ರಂಥಗಳು ವೀರಶೈವ ಮತಧರ್ಮವನ್ನರಿಯಲು ಅನುಕೂಲವಾಗಿವೆ. 'ತತ್ವಪ್ರಕಾಶಿಕೆಗೆ' ಅಘೋರಶಿವಾಚಾರ್ಯರು ವ್ಯಾಖ್ಯಾನ ಬರೆದಿದ್ದಾರೆ. ಈ ಕವಿಯು ಎಲ್ಲಿ? ಯಾವ ರಾಜ್ಯಕ್ಕೆ ಅಧಿಪತಿಯಾಗಿದ್ದನೆಂಬುದು ಸ್ಥಿರವಾಗಿಲ್ಲ. ಯೋಗಸೂತ್ರಕ್ಕೆ ವ್ಯಾಖ್ಯಾನ ಬರೆದ ಭೋಜನೇ ಇವನೆಂಬ ತರ್ಕವೂ ಉಂಟು. ಆದುದರಿಂದ ಹರಿಹರ, ರಾಘವಾಂಕ, ಷಡಕ್ಷರದೇವ ಮೊದಲಾದ ಕವಿಗಳು ಸ್ಮರಿಸುವ ಭೋಜನು ವೀರಶೈವ ತತ್ವಪ್ರಕಾಶ ಮತ್ತು ಶತಸೂತ್ರಗಳನ್ನು ಬರೆದ ಕವಿಯಾಗಿದ್ದಿರಬಹುದು.

ರಾಘವಾಂಕನು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಹರಿಹರನು ಸ್ಮರಿಸಿದವರ ಜತೆಗೆ, ಭಲ್ಲಟ ಮತ್ತು ಭಾರವಿ ಎಂಬ ಇಬ್ಬರು ಕವಿಗಳನ್ನು ಹೆಚ್ಚಾಗಿ ಸೇರಿಸಿರುವನು.

**೯. ಭಾರವಿ ಕವಿ:** ಸಂಸ್ಕೃತದಲ್ಲಿ 'ಕಿರಾತಾರ್ಜುನೀಯ' ಎಂಬ ಸುಪ್ರಸಿದ್ಧ ಕಾವ್ಯ ಬರೆದಿದ್ದಾನೆ. 'ಉಪಮಾ ಕಾಳಿದಾಸಸ್ಯ, ಭಾರವೇ ರರ್ಥಗೌರವಂ' ಎಂದು ವಿದ್ವಾಂಸರು ಪ್ರಶಂಸಿಸಿದ್ದಾರೆ. ಪ್ರೊ. ಮಾಕ್‌ನೋಡಲ್ ಈ ಕವಿ ಆರನೇ ಶತಮಾನದವನೆಂದು ಹೇಳುತ್ತಾರೆ. ಐಹೊಳೆಯ ಶಾಸನದಲ್ಲಿ ಭಾರವಿಯ ಹೆಸರು ಬಂದಿದೆ ಎಂಬುದನ್ನು ಈ ಮೊದಲೇ ಹೇಳಿದೆ. ತಲಕಾಡಿನ ಗಂಗರಸನಾದ ದುರ್ವಿನೀತನು ಈ ಭಾರವಿಯ ಕಿರಾತಾರ್ಜುನೀಯಕ್ಕೆ ಕನ್ನಡದಲ್ಲಿ ಟೀಕಾ ಬರೆದಂತೆ ತಿಳಿದಿದೆ. ಇವನ ಕಾಲ ಕ್ರಿ. ಶ. ೪೮೨-೫೧೭. ಕರ್ಣಾಟಕ ಸಾಮ್ರಾಜ್ಯ (ಸಂಪುಟ ೧) ದಲ್ಲಿ ಈ ವಿಷಯ ಓದಬಹುದು. (ಪುಟ ೭೪)

**೧೦. ಭಲ್ಲಟ ಕವಿ:** ಈತನು ಕಾಶ್ಮೀರದೇಶದವನು. ೯ನೇ ಶತಮಾನಕ್ಕೆ ಸೇರಿದವನು. 'ಭಲ್ಲಟಶತಕ' ಎಂಬ ಗ್ರಂಥವನ್ನು ಬರೆದಿದ್ದಾನೆ. ಮಮ್ಮಟನ ಕಾವ್ಯಪ್ರಕಾಶ, ವಲ್ಲಭದೇವನ 'ಸುಭಾಷಿತಾವಳಿ' ಕ್ಷೇಮೇಂದ್ರನ ಗ್ರಂಥಗಳಲ್ಲಿ ಇವನ ಶತಕದ ಉಲ್ಲೇಖವಿದೆ. ಇವನನ್ನು ವೀರಶೈವ ಕವಿಗಳು ಬಹಳವಾಗಿ ಹೊಗಳಿದ್ದಾರೆ. ಕ್ರಿ. ಶ. ೯ನೇ ಶತಮಾನದವನೆಂದು ಹೇಳಿದೆ(ಕರ್ಣಾಟಕ ಕವಿಚರಿತೆ. ಭಾಗ ೨. ಪುಟ ೧೨೬). ಕರ್ಣಾಟಕದಲ್ಲಿ ಹನ್ನೆರಡನೇ ಶತಮಾನದಲ್ಲಿ ಬಸವೇಶ್ವರರು ಕೈಗೊಂಡ ಧರ್ಮ ಮತ್ತು ಸಾಹಿತ್ಯದ ಪರಿಣಾಮವಾಗಿ ಹರಿಹರ-ರಾಘವಾಂಕರ ಕಾವ್ಯಗಳು ನಿರ್ಮಾಣವಾದುವು. ಕ್ರಿ.ಶ. ೧೧ನೆಯ ಶತಮಾನದಲ್ಲಿಯೇ ದೇವರ ಮತ್ತು ಶಂಕರ-ದಾಸಿಮಯ್ಯ ಎಂಬ ವಚನಕಾರರು ಕಾಣಿಸಿಕೊಳ್ಳುತ್ತಾರೆ. ಆದರೆ ಸುಸ್ಥಿರವಾದ ಕೃತಿಗಳನ್ನು ರಚಿಸಿ ವೀರಶೈವ ಸಾಹಿತ್ಯಾಭ್ಯುದಯವನ್ನು ಮಾಡಿದವರು ಹರಿಹರ-ರಾಘವಾಂಕರೆನ್ನಬಹುದು. ಬಸವೇಶ್ವರನ ಧರ್ಮಕ್ರಾಂತಿಯ ಫಲವನ್ನು ಹರಿಹರನ ರಗಳೆಗಳಲ್ಲಿ ಕಾಣಬಹುದು. ರಾಘವಾಂಕನ ಸಿದ್ಧರಾಮ ಮತ್ತು ಸೋಮನಾಥ ಚಾರಿತ್ರಗಳಲ್ಲಿ ನೋಡಬಹುದು. ಕನ್ನಡದಲ್ಲಿ ಹರಿಹರ-ರಾಘವಾಂಕರಿಗೆ ಸಮಕಾಲದಲ್ಲಿ ಕೆರೆಯ ಪದ್ಮರಸ ಮತ್ತು ಕುಮಾರ ಪದ್ಮರಸಕವಿಗಳಿದ್ದರು. ಆದರೆ ಪೂರ್ವಕವಿ ಎನಿಸಿಕೊಂಡವರು ಕೊಂಡಗುಳಿ ಕೇಶಿರಾಜರೊಬ್ಬರೇ ಎಂಬುದಿಲ್ಲಿ ಗಮನಾರ್ಹ.

೧೩ನೆಯ ಶತಕದ ವೀರಶೈವಮಹಾಕವಿಗಳಾದ ಹರೀಶ್ವರ, ರಾಘವಾಂಕ, ಕೆರೆಯ ಪದ್ಮರಸ, ಕುಮಾರ ಪದ್ಮರಸ, ಹಾಗೂ ನಿಜಗುಣ ಶಿವಯೋಗಿಗಳು ತಮ್ಮ ಕಾವ್ಯಗಳ

ಪ್ರಾರಂಭದಲ್ಲಿ ಬಸವಾದಿಗಳ ಹೆಸರುಗಳನ್ನು ಸ್ಮರಿಸಿಲ್ಲವೆಂಬುದು ಇಲ್ಲಿ ಗಮನಾರ್ಹ. ಹರೀಶ್ವರನು ಬಸವೇಶ್ವರ, ಅಕ್ಕಮಹಾದೇವಿ ಕುರಿತು ರಗಳೆಗಳನ್ನು ಬರೆದಿದ್ದಾನೆ. ರಾಘವಾಂಕನು ಸಿದ್ಧ ರಾಮಪುರಾಣ ಬರೆದಿದ್ದಾನೆ. ಆದುದರಿಂದ ಇವರಿಗೆ ಬಸವಾದಿಗಳ ಪರಿಚಯ ಚೆನ್ನಾಗಿತ್ತೆನ್ನ ಬಹುದು.

ಪ್ರಾಯೇಣ ಭೀಮಕವಿಯು ಕನ್ನಡದಲ್ಲಿ ಬಸವಪುರಾಣ ಬರೆದ ಅನಂತರವೇ (ಕ್ರಿ. ಶ. ೧೩೬೯) ಗ್ರಂಥಗಳ ಪ್ರಾರಂಭದಲ್ಲಿ ಬಸವಾದಿಗಳನ್ನು ಸ್ಮರಿಸುವ ಪದ್ಧತಿ ಬಂತೆಂದು ಕಾಣುತ್ತದೆ. ಕ್ರಿ. ಶ. ೧೩೮೫ ರಲ್ಲಿದ್ದ ಪದ್ಮಣಾಂಕನು ತನ್ನ ಪದ್ಮರಾಜಪುರಾಣದಲ್ಲಿ ಗ್ರಂಥಾದಿಯಲ್ಲಿ, ಬಾಣ, ಉದ್ಭಟ, ರಾಘವಾಂಕ, ಭೋಜ, ಹರೀಶ್ವರ, ಭೀಮಕವಿ, ಮಯೂರ, ಮಲುಹಣ, ಭಾರವಿಗಳನ್ನು ಸ್ಮರಿಸಿದ್ದಾನೆ. ಆದರೆ ಇಲ್ಲಿ ಬಸವೇಶ್ವರ-ಗಂಗಾಂಬಿಕೆಯರ ಸ್ಮರಣೆಯು ಬಂದಿರುವುದು ಗಮನಾರ್ಹವಾಗಿದೆ.

ಪದ್ಮಣಾಂಕನು ಕಾವ್ಯಾದಿಯಲ್ಲಿ ಸ್ಮರಿಸಿರುವ ನೀಲಕಂಠನಾಗನಾಥಾಚಾರ್ಯ (ವೀರ ಮಾಹೇಶ್ವರಾಚಾರ ಸಂಗ್ರಹ) ಪಾಲ್ಕುರಿಕೆ ಸೋಮ (ಬಸವರಾಜೀಯ) ಲಕ್ಷ್ಮೀಧರಾಧ್ಯ (ಸಾರೋದ್ಧಾರ) ಮಲ್ಲಿಕಾರ್ಜುನಾರಾಧ್ಯ(ಶಿವಜ್ಞಾನಪ್ರದೀಪಿಕೆ) ಮಂಚಣ್ಣ, ಮಲ್ಲಿಕಾರ್ಜುನ, ಶ್ರೀಕರ ಪಂಡಿತತ್ರಯರು ಈ ಕವಿಗಳ ವಿಚಾರ ಕೂಡ ವೀರಶೈವ ಸಾಹಿತ್ಯ ಚರಿತ್ರೆ ಅರಿಯುವವರಿಗೆ ಅಗತ್ಯವಾಗಿದೆ.

ಹರಿಹರ-ರಾಘವಾಂಕರ ವಿಚಾರವಾಗಿ ಹಲವು ಮಂದಿ ಲೇಖನಗಳನ್ನು ಬರೆದಿದ್ದಾರೆ. ಅವರ ಕಾವ್ಯಗಳನ್ನು ವಿಮರ್ಶಿಸಿದ್ದಾರೆ. ಆದರೆ ಅವರು ಸ್ಮರಿಸಿದ ಪೂರ್ವಕವಿಗಳ ಬಗೆಗೆ ಇದುವರೆಗೆ ಯಾರೂ ಗಮನವಿತ್ತಂತೆ ಕಾಣುವುದಿಲ್ಲ. ಅದಕ್ಕಾಗಿಯೇ ಈ ಲೇಖನ ಬೆಳಕಿಗೆ ಬಂದಿದೆ.

---

## ಭಾಷ್ಯಾದಿಗಳ ತುಲನಾತ್ಮಕ ವಿಮರ್ಶೆಯಿಂದ

# ಶ್ರೀಕಂಠ ಶಿವಾಚಾರ್ಯರ ದೇಶ ಕಾಲ ಮತ ನಿರ್ಣಯ

ಲೇಖಕರು : ಶ್ರೀ ಟಿ. ಎನ್. ಮಲ್ಲಪ್ಪ, ಬಿ.ಎ., ಎಲ್‌ಎಲ್.ಬಿ.

(ನಿವೃತ್ತ ಹೈಕೋರ್ಟ್ ನ್ಯಾಯಾಧೀಶರು)

### ಶ್ರೀಕಂಠ ಶಿವಾಚಾರ್ಯರ ಕಾಲದ ವೀರಶೈವ ಪರಿಸ್ಥಿತಿ

ಶ್ರೀಮನ್ಮಹಾರಾಜ ಜಯಚಾಮರಾಜೇಂದ್ರ ಗ್ರಂಥಮಾಲೆಯಲ್ಲಿ ಪ್ರಕಟವಾದ, ವಿದ್ಯೇಶ್ವರ ಸಂಹಿತೆಯಿಂದ ಪ್ರಾರಂಭವಾಗಿ ವಾಯವೀಯ ಸಂಹಿತೆಯನ್ನೊಳಗೊಂಡ 'ಶ್ರೀ ವ್ಯಾಸ ಮಹರ್ಷಿ ಪ್ರಣೀತ ಶಿವಮಹಾಪುರಾಣ'ವೆಂಬ ಉದ್ಗ್ರಂಥವು ಹನ್ನೆರಡನೆಯ ಶತಮಾನದ ಹಿಂದೆ ಪ್ರಚಲಿತವಾಗಿದ್ದ ವೀರಶೈವದ ಹಿನ್ನೆಲೆಯ ಮೇಲೆ ಸಂಶೋಧಕರ ಕಣ್ಣರಳುವಷ್ಟು ಬೆಳಕನ್ನು ಬೀರುವುದು. ಮೋಕ್ಷ ಸಾಧನ ಮಾರ್ಗವು ಈ ಶಿವಮಹಾಪುರಾಣದಲ್ಲಿ ಹೇಳಿರುವುದೇ ಎಂದು ಶ್ರೀಕಂಠ ಭಾಷ್ಯದಲ್ಲಿ ಹೇಳಿದೆ. ಆದಿಮಾನವನ ಕಾಲದಲ್ಲಿ ಉಗಮವಾಗಿ, ಸೈಂಧವ ನಾಗರಿಕರಲ್ಲಿ ಕಾಣಿಸಿಕೊಂಡು, ವ್ರಾತ್ಯ ದ್ರಾವಿಡರ ಸಮ್ಮಿಲನದಲ್ಲಿ ಅಭಿವೃದ್ಧಿಯಾಗಿ, ಶ್ವೇತಾಶ್ವತರೋಪನಿಷತ್ತಿನಲ್ಲಿ ರೂಪುಗೊಂಡ ಪಶುಪತಿ ಧರ್ಮದಲ್ಲಿನ ಲಿಂಗಾರ್ಚನೆ ಲಿಂಗಧಾರಣೆಗಳು, ಈ ಪುರಾಣದಲ್ಲಿ ವೈವಿಧ್ಯತೆಯನ್ನು ಪಡೆದವು. ವೀರಶೈವರಿಗೆ ಮುಖ್ಯ ಆಧಾರವಾದ ಶ್ವೇತಾಶ್ವತರೋಪನಿಷತ್ತಿನ ಅನೇಕ ಮಂತ್ರಗಳು ಈ ಪುರಾಣದ ಅಂತ್ಯಭಾಗವಾದ ವಾಯವೀಯ ಸಂಹಿತೆಯಲ್ಲಿ ಅಂತರ್ಗತವಾಗಿರುವುವು. ಹಾಗೆಯೇ ವಾಯವೀಯ ಸಂಹಿತೆಯ ಅನೇಕ ಶ್ಲೋಕಗಳು ಸಿದ್ಧಾಂತ ಶಿಖಾಮಣಿಯಲ್ಲಿ ಕಂಡುಬರುವುವು. ವೀರಶೈವರು ಅಭಿಮಾನದಿಂದ ಆಧಾರವೆಂದು ಪರಿಗಣಿಸಿರುವ ಕ್ರಿಯಾಸಾರದಲ್ಲಿ ಶಿವಮಹಾಪುರಾಣದ ಮೊದಲನೆಯ ಭಾಗವಾದ ವಿದ್ಯೇಶ್ವರ ಸಂಹಿತೆಯ ನೂರಾರು ಶ್ಲೋಕಗಳು ಪದಶಃ ಉದ್ಧೃತವಾಗಿರುವುವು. ಮುಖ್ಯವಾಗಿ ಈ ಶ್ಲೋಕಗಳೇ ಶಿವಮಹಾಪುರಾಣವು ರಚಿತವಾದ ಕಾಲದಲ್ಲಿ ಪ್ರಚಲಿತವಾಗಿದ್ದ ಲಿಂಗಧಾರಣ ಲಿಂಗಾರ್ಚನ ಕ್ರಮದ ಮೇಲೆ ಹೆಚ್ಚು ಬೆಳಕನ್ನು ಬೀರುವುವಾಗಿವೆ. ಕ್ರಿಯಾಸಾರವು ರಚಿತವಾದ ಕಾಲದಲ್ಲಿ ಪ್ರಚಲಿತವಾಗಿಲ್ಲದ ಲಿಂಗಧಾರಣ ಲಿಂಗಾರ್ಚನೆಗಳ ವೈವಿಧ್ಯತೆಯನ್ನು ತಿಳಿಸುವ ಈ ಶ್ಲೋಕಗಳು ಕ್ರಿಯಾಸಾರದಲ್ಲಿ ಸೇರಿದುದಕ್ಕೆ ಕಾರಣವನ್ನು ಮುಂದೆ ಕೊಡಲಾಗುವುದು. ಈ ಶಿವಮಹಾಪುರಾಣದ ಮೊದನೆಯ ಭಾಗದ ಪ್ರಸ್ತಾವನೆಯಲ್ಲಿ ಹೇಳಿದಂತೆ "ಶ್ರೀಮಚ್ಛಂಕರ ಭಗವತ್ಪಾದರು ತಮ್ಮ ಸೂತ್ರಭಾಷ್ಯದಲ್ಲಿ ಈ ಪುರಾಣದ ಅನೇಕ ಶ್ಲೋಕಗಳನ್ನು ಪ್ರಮಾಣವನ್ನಾಗಿ ಉದಹರಿಸಿರುತ್ತಾರೆ"ಯಾಗಿ ಈ ಗ್ರಂಥವು ಕ್ರಿ. ಶ. ಎಂಟನೆಯ ಶತಮಾನಕ್ಕೆ ಹಿಂದೆಯೇ ರಚಿತವಾಗಿ ಆಚಾರ್ಯರಿಂದಲೇ ಆಧಾರವಾಗಿ ತೆಗೆದುಕೊಳ್ಳುವಷ್ಟು ಪ್ರಸಿದ್ಧಿಯನ್ನು ಪಡೆದಿದ್ದಿತೆಂದಾಯಿತು. ಶಿವಮಹಾಪುರಾಣದ ೧ನೇ ಭಾಗದ ಹದಿನೆಂಟನೆಯ ಅಧ್ಯಾಯದಲ್ಲಿನ ಈ ಶ್ಲೋಕಗಳು ಕ್ರಿಯಾಸಾರದ ತೃತೀಯೋಪದೇಶದಲ್ಲಿಯೂ ಇವೆ :

ರಸಲಿಂಗಂ ಬ್ರಾಹ್ಮಣಾನಾಂ ಸರ್ವಾಭೀಷ್ಟಪ್ರದಂ ಭವೇತ್ ।
ಬಾಣಲಿಂಗಂ ಕ್ಷತ್ರಿಯಾಣಾಂ ಮಹಾರಾಜ್ಯಪ್ರದಂ ಶುಭಂ ॥ ೪೮ ॥

ಸ್ವರ್ಣಲಿಂಗಂ ತು ವೈಶ್ಯಾನಾಂ ಮಹಾಧನಪತಿತ್ವ ದಂ ।
ಶಿಲಾಲಿಂಗಂ ತು ಶೂದ್ರಾಣಾಂ ಮಹಾಶುದ್ಧಿಕರಂ ಪರಂ ॥ ೪೯ ॥

ಸ್ಫಾಟಿಕಂ ಬಾಣಲಿಂಗಂ ಚ ಸರ್ವೇಷಾಂ ಸರ್ವಕಾಮದಂ ।
ಸ್ವೀಯಾಭಾವೇऽನ್ಯದೀಯಂ ತು ಪೂಜಾಯಾಂ ನ ನಿಷಿಧ್ಯತೇ ॥ ೫೦ ॥

ಸ್ತ್ರೀಣಾಂತು ಪಾರ್ಥಿವಂ ಲಿಂಗಂ ಸಭರ್ತೄಣಾಂ ವಿಶೇಷತಃ ।
ವಿಧವಾನಾಂ ಪ್ರವೃತ್ತಾನಾಂ ಸ್ಫಾಟಿಕಂ ಪರಿಕೀರ್ತಿತಂ ॥ ೫೧ ॥

ವಿಧವಾನಾಂ ನಿವೃತ್ತಾನಾಂ ರಸಲಿಂಗಂ ವಿಶಿಷ್ಯತೇ ।
ಬಾಲ್ಯೇವಾ ಯೌವನೇ ವಾಪಿ ವಾರ್ಧಕೇ ವಾಪಿ ಸುವ್ರತಾಃ ॥ ೫೨ ॥

ಶುದ್ಧಸ್ಫಾಟಿಕಲಿಂಗಂ ತು ಸ್ತ್ರೀಣಾಂ ತತ್ಸರ್ವ ಭೋಗದಂ ।
ಪ್ರವೃತ್ತಾನಾಂ ಪೀಠಪೂಜಾ ಸರ್ವಾಭೀಷ್ಟಪ್ರದಾ ಭುವಿ ॥ ೫೩ ॥

ಪಾತ್ರೇಣೈವ ಪ್ರವೃತ್ತಸ್ತು ಸರ್ವಪೂಜಾಂ ಸಮಾಚರೇತ್ ।
ಅಭಿಷೇಕಾಂತೇ ನೈವೇದ್ಯಂ ಶಾಲ್ಯನ್ನೇನ ಸಮಾಚರೇತ್ ॥ ೫೪ ॥

ಪೂಜಾಂತೇ ಸ್ಥಾಪಯೇಲ್ಲಿಂಗಂ ಸಂಪುಟೇಷು ಪೃಥಗ್ಗೃಹೇ ।
ಕರಪೂಜಾ ನಿವೃತ್ತಾನಾಂ ಸ್ವಭೋಜ್ಯಂ ತು ನಿವೇದಯೇತ್ ॥ ೫೫ ॥

ನಿವೃತ್ತಾನಾಂ ಪರಂ ಸೂಕ್ಷ್ಮಂ ಲಿಂಗಮೇವ ವಿಶಿಷ್ಯತೇ ।
ವಿಭೂತ್ಯಭ್ಯರ್ಚನಂ ಕುರ್ಯಾದ್ವಿಭೂತಿಂ ಚ ನಿವೇದಯೇತ್ ॥ ೫೬ ॥

ಪೂಜಾಂ ಕೃತ್ವಾಥ ತಲ್ಲಿಂಗಂ ಶಿರಸಾ ಧಾರಯೇತ್ ಸದಾ ।
ವಿಭೂತಿ ಸ್ತ್ರಿವಿಧಾ ಪ್ರೋಕ್ತಾ ಲೋಕವೇದಶಿವಾಗ್ನಿಭಿಃ ॥ ೫೭ ॥

ಶಿವಮಹಾಪುರಾಣದ ಈ ಶ್ಲೋಕಗಳಲ್ಲಿ ಗಮನಾರ್ಹವಾದ ಸಂಗತಿಗಳಿವು:— ದೇವಸ್ಥಾನದಲ್ಲಿರುವ ಸರ್ವರೂ ಪೂಜಾರಿಗಳ ಮೂಲಕ ಪೂಜಿಸಿಕೊಳ್ಳಬಹುದಾದ ಸ್ಥಾವರ ಲಿಂಗಗಳಿಗೆ ಬದಲು **'ಸ್ವೀಯ'** ಎಂದರೆ ತಮ್ಮದೇ ಆದ ಮತ್ತು ತಾವೇ ಪೂಜಿಸಬಹುದಾದ ಲಿಂಗಗಳ ಪೂಜೆಯು ರೂಢಿಯಲ್ಲಿದ್ದುದು ಗಮನಾರ್ಹವಾಗಿದೆ. ಹೀಗೆ ತಮ್ಮದೇ ಆದ ಲಿಂಗಗಳನ್ನು ಪೂಜಿಸುವರಲ್ಲಿ ಇಹಲೋಕ ಭೋಗಗಳಲ್ಲಿ **'ಪ್ರವೃತ್ತ'**ರಾಗಿರುವವರಿಗೂ, ಇಹಲೋಕ ಭೋಗ **'ನಿವೃತ್ತ'**ರಾದವರಿಗೂ ಮುಖ್ಯವಾದ ವ್ಯತ್ಯಾಸವು ಮಾಡಲ್ಪಟ್ಟಿದೆ. **'ನಿವೃತ್ತ'**ರಾದವರು **'ಪರಂ ಸೂಕ್ಷ್ಮಂ'** ಎನಿಸುವ ಲಿಂಗವನ್ನು ಕರದಲ್ಲಿಟ್ಟುಕೊಂಡು ಪೂಜಿಸಿ ತಾವು ಉಣ್ಣುವ ಆಹಾರವನ್ನು ಅದಕ್ಕೆ ಸಮರ್ಪಿಸಿ ಅದರ ಪ್ರಸಾದವನ್ನು ಸೇವಿಸಬೇಕು ಮತ್ತು ಪೂಜಾಂತ್ಯದಲ್ಲಿ **'ಶಿರಸಾ ಧಾರಯೇತ್ ಸದಾ'** ಎಂದರೆ ಯಾವಜ್ಜೀವವೂ ತಲೆಯಲ್ಲಿ ಧರಿಸಬೇಕು; ಮೋಕ್ಷಾರ್ಥವಾಗಿ ಪೂಜಿಸುವ ಕ್ರಮವಿದು. ಮೋಕ್ಷಾರ್ಥಿಗಳಾಗದೆ, ಇಹಲೋಕ ಭೋಗದಲ್ಲಿ ನಿವೃತ್ತರಾಗದೆ ಪ್ರವೃತ್ತರಾದವರು, ಅವರವರ ಲಿಂಗಗಳನ್ನು ಪೀಠಗಳಲ್ಲಿಟ್ಟು ಪೂಜಿಸಿ ಪೃಥಗ್ಗೃಹಗಳಲ್ಲಿ ಸಂಪುಟದಲ್ಲಿಟ್ಟಿರಬೇಕು. ಹೀಗೆ ತಮ್ಮ ತಮ್ಮ ಲಿಂಗಗಳನ್ನು ಪೂಜಿಸುವವರಲ್ಲಿ ವಿವಿಧ ಜಾತಿಯವರಿಗೆ ವಿವಿಧ ತರದ ಲಿಂಗಗಳನ್ನು ಹೇಳಿರುವುದಲ್ಲದೆ

ಸ್ತ್ರೀಯರಲ್ಲಿ ಸಧವೆಯರಿಗೂ ವಿಧವೆಯರಿಗೂ ಬೇರೆ ಬೇರೆ ಲಿಂಗಗಳನ್ನು ಹೇಳಿರುವುದರಿಂದ, ವೀರಶೈವದ ಶುದ್ಧಿಸಂಘಟನೆಯಾಗಿ, ವಚನೋಪನಿಷತ್ತಿನಲ್ಲಿಯೂ ಸಿದ್ಧಾಂತ ಶಿಖಾಮಣಿ ಯಲ್ಲಿಯೂ ಲಿಂಗಪೂಜೆಯ ವಿಷಯದಲ್ಲಿ ವರ್ಣಾಶ್ರಮ ವ್ಯತ್ಯಾಸವನ್ನೂ ಸ್ತ್ರೀ ಪುರುಷ ವ್ಯತ್ಯಾಸವನ್ನೂ ಮಾಡಬಾರದೆಂಬ ನಿಯಮವು ರೂಢಿಗೆ ಬರುವುದಕ್ಕೆ ಮೊದಲು ಇದ್ದ ಆ ಕಾಲದ ಲಿಂಗಿಗಳ ಸ್ಥಿತಿಯನ್ನು ಮೇಲಿನ ಶ್ಲೋಕಗಳಲ್ಲಿ ಕಾಣಬಹುದು.

ಬಸವೇಶ್ವರನು ಹುಟ್ಟಿದ ಕೂಡಲೇ, ಸಂಗಮೇಶ್ವರನು ಜಂಗಮವೇಶದಲ್ಲಿ ಬಂದು ಲಿಂಗವನ್ನಿತ್ತು **"ಇಷ್ಟಲಿಂಗಮಿದಕ್ಕು, ಈ ಲಿಂಗಮಂ ಸಿಂಹವಿಷ್ಟರದೊಳಿಟ್ಟರ್ಚಿಸಬೇಕು"** ಎಂದು ಅಜ್ಞಾಪಿಸಿದುದಾಗಿಯೂ, ಬಸವೇಶ್ವರನು ಕಪ್ಪಡಿಸಂಗಮಕ್ಕೆ ಹೋಗುವಾಗ ಮನೆಯ **'ಒಳಗೆ ಪೊಕ್ಕು ತನ್ನ ಲಿಂಗವಂ ಕೊಂಡು'** ಹೋದುದಾಗಿಯೂ ಸಿಂಗಿರಾಜ ಪುರಾಣದಲ್ಲಿ ಹೇಳಿದೆ. ಇದಲ್ಲದೆ ಬಸವೇಶ್ವರನಿಗೆ ಉಪನಯನವು ಸಹಾ ಆಗಿತ್ತೆಂದು ಅದರಲ್ಲಿ ಹೇಳಿದೆ. ಇದರಿಂದ ಬಸವೇಶ್ವರನು, ಮೇಲೆ ಹೇಳಿದ ರೀತಿಯಲ್ಲಿ ಪ್ರತಿಯೊಬ್ಬರೂ ಸ್ವಕೀಯವಾದ ಇಷ್ಟ ಲಿಂಗಗಳನ್ನು ಪೂಜಿಸುತ್ತಿದ್ದ ಬ್ರಾಹ್ಮಣ ಪಂಗಡದಲ್ಲಿ ಹುಟ್ಟಿರಬೇಕು; ಆದರೆ ಹರಿಹರನು ಹೇಳುವಂತೆ, ಹಿಂಸಾತ್ಮಕ ಯಜ್ಞಯಾಗಾದಿಗಳ ಕುರುಹೆಂದೂ, ಜಾತಿ ತಾರತಮ್ಯದ ಕುರುಹೆಂದೂ ಭಾವಿಸಿ ಸುಧಾರಕ ದೃಷ್ಟಿಯಿಂದ ಬಸವೇಶನು ಯಜ್ಞೋಪವೀತವನ್ನು ಹರಿದು ಬಿಸುಟಿರಬೇಕು. ಇದು ಹೇಗೇ ಇರಲಿ, ಹನ್ನೆರಡನೆಯ ಶತಮಾನದ ಹಿಂದೆ, ಮೋಕ್ಷಾಪೇಕ್ಷಿಗಳಾಗಿ ಇಹಲೋಕಭೋಗದಿಂದ ನಿವೃತ್ತರಾದವರು ಇಷ್ಟಲಿಂಗಗಳನ್ನು ಕರದಲ್ಲಿಟ್ಟು ಪೂಜೆಮಾಡಿ ತದನಂತರ ಯಾವಜ್ಜೀವವೂ ಶಿರಸ್ಸಿನಲ್ಲಿ ಧರಿಸುವ ಪದ್ಧತಿಯಿದ್ದುದೂ, ಇಹಲೋಕ ಭೋಗ ಪ್ರವೃತ್ತರಾದವರು ತಮ್ಮ ತಮ್ಮ ಲಿಂಗಗಳನ್ನು ತಾವೇ ಪೂಜಿಸಿ ದೇವರ ಮನೆಯಲ್ಲಿಟ್ಟಿರುವ ಪದ್ಧತಿಯಿದ್ದುದೂ ಶಿವಮಹಾಪುರಾಣದಿಂದ ಖಚಿತವಾಗಿ ತಿಳಿದುಬರುವ ವಿಷಯಗಳು. ಲಿಂಗಗಳನ್ನು ಸಂಪುಟದಲ್ಲಿಟ್ಟು ಪೀಠಗಳ ಮೇಲಿರಿಸಿ ಪೂಜಿಸುವುದು ಶ್ರೀ ಶಂಕರಾಚಾರ್ಯ ರಿಂದಲೇ ಪ್ರಾರಂಭಿಸಲ್ಪಟ್ಟಿರಬೇಕೆಂದು ಆಂಧ್ರವಿಜ್ಞಾನ ಸರ್ವಸ್ವ (ಸಂ. ೨ ಪುಟ ೫೮) ದಲ್ಲಿ ಹೇಳಿರುವುದು ಸರಿಯಲ್ಲ; ಏಕೆಂದರೆ ಶ್ರೀ ಶಂಕರಾಚಾರ್ಯರು ಚಂದ್ರಮೌಳೀಶ್ವರ ಲಿಂಗವನ್ನು ಹಾಗೆ ಪೂಜಿಸುತ್ತಿದ್ದುದು, ಅವರ ಕಾಲಕ್ಕೆ ಮೊದಲೇ ರಚಿತವಾಗಿದ್ದು, ಅವರೇ ಆಧಾರವಾಗಿ ತೆಗೆದುಕೊಳ್ಳುವಷ್ಟು ಅವರ ಕಾಲದಲ್ಲಿ ಪ್ರಸಿದ್ಧವಾಗಿದ್ದ ಶಿವಮಹಾಪುರಾಣದಲ್ಲಿಯೇ ವಿಧಿಸಿದಂತೆ ಲಿಂಗಗಳನ್ನು ಪೂಜಿಸುವ ಪದ್ಧತಿಗೆ ಅನುಸಾರವಾಗಿದ್ದಿತು. ತಪ್ತಲಿಂಗಧಾರಣೆಯನ್ನು ಖಂಡಿಸಿರುವ ಶ್ರೀ ಶಂಕರಾಚಾರ್ಯರು ಪಾಷಾಣ ಲಿಂಗಧಾರಣೆಯನ್ನು ಖಂಡಿಸದಿದ್ದುದಕ್ಕೆ ಅವರಿಗೆ ಆಧಾರವಾದ ಶಿವಮಹಾಪುರಾಣದಲ್ಲಿ ಮೇಲೆ ಹೇಳಿದಂತೆ ಲಿಂಗಧಾರಣೆಯು ಹೇಳಿರುವುದೇ ಕಾರಣ.

ರಾಮಾಯಣ ಕಾಲದಲ್ಲಿಯೇ ಸ್ವಕೀಯವಾದ ಲಿಂಗವನ್ನು ಹೋದಹೋದ ಕಡೆಗಳಿಗೆಲ್ಲ ತೆಗೆದುಕೊಂಡು ಹೋಗಿ ಪೂಜಿಸುವ ಪದ್ಧತಿಯು ಇದ್ದಂತೆ ಕಾಣುವುದು. ರಾವಣನು ಹೀಗೆ ಮಾಡುತ್ತಿದ್ದನೆಂಬುದು ರಾಮಾಯಣದಿಂದಲೇ ತಿಳಿದುಬರುವುದು :

ಯತ್ರ ಯತ್ರ ಚ ಯಾತಿಸ್ಮ ರಾವಣೋ ರಾಕ್ಷಸೋತ್ತಮಃ |
ಜಂಬೂನದಮಯಂ ಲಿಂಗಂ ತತ್ರ ತತ್ರ ಚ ನೀಯತೇ ||

ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲೆಯಲ್ಲಿ ಶ್ರೀ ಸುಬ್ರಹ್ಮಣ್ಯ ಶಾಸ್ತ್ರಿಗಳ ಅನುವಾದ ದೊಡನೆ ಮುದ್ರಿಸಲ್ಪಟ್ಟಿರುವ ಸ್ಕಾಂದ ಮಹಾಪುರಾಣದ ಮಹೇಶ್ವರ ಖಂಡ ವಿಭಾಗದಲ್ಲಿ

ದೇವಿಯು ಮಹಿಷಾಸುರನನ್ನು ಮರ್ಧಿಸಿದ ವರ್ಣನೆಯಿದೆ. ಮಹಿಷಾಸುರನ ಕಂಠದಲ್ಲಿ ಧರಿಸಿದ್ದ ಲಿಂಗವನ್ನು ನೋಡಿ, "**ಆದತ್ತ ಸಹಸಾ ಗೌರೀ ಲಿಂಗಂ ತಸ್ಯಗಳೇ ಸ್ಥಿತಂ**" ಎಂದರೆ ಗೌರಿಯು ಅದನ್ನು ಕೈಗೆ ತೆಗೆದುಕೊಂಡಳು. ಅದು ಕೈಗೆ ಅಂಟಿಕೊಂಡಿತು. ಗೌತಮರು "**ಪುರಾಪುರತ್ರಯಾನಾಸಾ ದೈತ್ಯೇಯ ಲಿಂಗಧಾರಕಾ। ಅಜಿತಾ ಶಂಭುನಾ ಪೂರ್ವಂ ಮುಕ್ತಲಿಂಗಾ ನಿಷೂದಿತಾಃ**" ಎಂದರೆಂದು ಹೇಳಿದೆ. ಮಹಿಷಾಸುರನೂ ತ್ರಿಪುರಾಸುರರೂ ಲಿಂಗಧಾರಿಗಳೆಂಬುದು ಇದರಿಂದ ಸ್ಪಷ್ಟ. ಪದ್ಮಪುರಾಣದ ಪಾತಾಳಖಂಡದಲ್ಲಿ "**ಮಸ್ತಕೇ ಧಾರಣಂ ಮುಖ್ಯಂ ಬ್ರಾಹ್ಮಣಾ ಚ ತಥಾಕೃತಂ**" ಎಂದು ಹೇಳಿರುವುದಲ್ಲದೆ "**ಧಾರಯಂತಿ ತಥಾ ಲಿಂಗಂ ರಾಕ್ಷಸಾಃ ಕೇಚಿದುತ್ತಮಾಃ**" ಎಂದೂ ಹೇಳಿದೆ. ಶ್ರೀಕಂಠ ಭಾಷ್ಯಕ್ಕೆ ಆಧಾರವಾಗಿರುವ ಶಿವಮಹಾಪುರಾಣದಲ್ಲಿ ಹೇಳಿದಂತೆಯೇ ಇತರ ಪುರಾಣಗಳಲ್ಲಿಯೂ ಮಸ್ತಕದಲ್ಲಿ ಲಿಂಗವನ್ನು ಧರಿಸುವುದು ಪ್ರಶಸ್ತವಾದುದೆಂದು ಹೇಳಿದೆ. 'ಪ್ರಜಾವಾಣಿ' ಯಲ್ಲಿ ತಿರುಪತಿಯ ದೇವಸ್ಥಾನ ವಿಷಯವಾಗಿ ಬರೆದ ಲೇಖನದಲ್ಲಿ, ಪ್ರೊಫೆಸರ್ ಎಸ್. ಕೆ. ರಾಮಚಂದ್ರ ರಾಯರು, ಕ್ರಿ. ಶ. ೧೧೧೦ ರ ಶಾಸನವಿರುವ ಕನ್ನಮಂಗಲದ ದೇವಸ್ಥಾನದಲ್ಲಿ ಶಂಖಚಕ್ರ ಯಜ್ಞೋಪವೀತಧಾರಿಯಾದ ತ್ರಿನೇತ್ರ ವಿಗ್ರಹದ ಕಿರೀಟದ ಕೆಳಗೆ ಲಿಂಗವಿರುವುದನ್ನು ಹೇಳಿ, ತಿರುಪತಿ ವಿಗ್ರಹದ ಕಿರೀಟದ ಕೆಳಗೆ ಲಿಂಗವಿರುವುದೇನೋ ಎಂದು ಅನುಮಾನಿಸಿದ್ದಾರೆ. ಲಿಂಗಯಜ್ಞೋಪವೀತಗಳನ್ನು ಧರಿಸಿದ ಅನೇಕ ವಿಗ್ರಹಗಳಿರುವುದು ಲಿಂಗಧಾರಣೆಯು ಅವೈದಿಕವೆಂದು ಭಾವಿಸಲ್ಪಟ್ಟಿರಲಿಲ್ಲವೆಂಬುದನ್ನು ಸೂಚಿಸುತ್ತದೆ.

ಮಹಾಭಾರತದ ಕಾಲದಿಂದಲೂ ಪಾಶುಪತ ಧರ್ಮವು ಪ್ರಚಾರದಲ್ಲಿ ಇದ್ದಿತಲ್ಲದೆ ಶ್ರೀಕೃಷ್ಣನೇ ಪಾಶುಪತ ವ್ರತವನ್ನು ಆಚರಿಸುದುದನ್ನು ಶಿವಮಹಾಪುರಾಣದಲ್ಲಿಯೇ ಹೇಳಿದೆ. ಪಾಶುಪತ ಸೂತ್ರದಲ್ಲಿ '**ಲಿಂಗಧಾರೀ**' ಎಂಬ ಸೂತ್ರವಿದೆ; ಇದರ ಕೌಂಡಿನ್ಯ ಭಾಷ್ಯದಲ್ಲಿ "**ಲೀಯನಾಲ್ಲಿಂಗನಾಚ್ಚ ಲಿಂಗಂ। ತದ್‌ಧಾರಯನ್ ಲಿಂಗಧಾರೀಭವತಿ। ದಂಡಧಾರಿ ವದಿತ್ಯರ್ಥಃ**" ಎಂದು ಹೇಳಿದೆ. ದಂಡಧಾರಿಯೆಂದರೆ ದಂಡವನ್ನು ಧರಿಸಿದವನು ಎಂದು ಹೇಗೆ ಅರ್ಥವಾಗುವುದೋ ಹಾಗೆಯೇ ಲಿಂಗಧಾರಿಯೆಂದರೆ ಲಿಂಗವನ್ನು ಧರಿಸಿದವನು ಎಂದು ಅರ್ಥಮಾಡಿಕೊಳ್ಳಬೇಕು ಎಂದು ಅಭಿಪ್ರಾಯ. ದಂಡವನ್ನು ಧರಿಸುವ ಉಪಮಾನವನ್ನು ಕೊಟ್ಟಿರುವುದರಿಂದ ದಂಡದಂತೆ ಲಿಂಗವನ್ನು ಧರಿಸುವುದೆಂದರೆ ಬಹಿರ್ಲಿಂಗ ಧಾರಣೆಯನ್ನು ಹೇಳಿದಂತೆ ಆಯಿತು. ಉಪಮಾನ ಉಪಮೇಯಗಳು ಬೇರೆ ಬೇರೆಯೇ ಆಗಬೇಕಾಗಿರುವುದರಿಂದ ಇಲ್ಲಿ ಲಿಂಗವೆಂದರೆ ಕೆಲವರು ಊಹಿಸುವಂತೆ ದಂಡವಲ್ಲ. ಅಲ್ಲದೆ '**ಲೀಯನಾತ್ ಲಿಂಗಂ**' ಎಂದು ಕೌಂಡಿನ್ಯ ಭಾಷ್ಯದಲ್ಲಿ ಹೇಳಿರುವುದು ಸೂತಸಂಹಿತೆಯಲ್ಲಿ ಶಿವಲಿಂಗ ವಿಷಯವಾಗಿ ಹೇಳುವಾಗ '**ಲೀಯನಾಲ್ಲಿಂಗಮಿತ್ಯಾಹುಃ**' ಎಂದು ಹೇಳಿರುವುದಕ್ಕೆ ಅನುಸಾರವಾಗಿದೆ. ಶಂಕರವಿಜಯದಲ್ಲಿ "**ಶಿರಸಿಪಾಷಾಣ ಲಿಂಗಂಚ ಧಾರಿಣಃ ಜಂಗಮಾಃ। ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಃ ಪಾಶುಪತಾಃ**" ಎಂದು ಹೇಳಿರುವಂತೆ ಪಾಶುಪತದಲ್ಲಿ ಲಿಂಗಧಾರಿಗಳಿದ್ದರೆಂಬುದರಲ್ಲಿ ಸಂಶಯವಿಲ್ಲ. ಹನ್ನೆರಡನೆಯ ಶತಮಾನದ ಹಿಂದೆ ಲಿಂಗಧಾರಿಗಳಿರಲಿಲ್ಲವೆಂಬ ಭಾವನೆ ಪ್ರಚಲಿತವಾಗಿರುವುದರಿಂದ ಹನ್ನೆರಡನೆಯ ಶತಮಾನಕ್ಕೆ ಬಹಳ ಹಿಂದೆ ಇದ್ದ ಶ್ರೀಕಂಠ ಶಿವಾಚಾರ್ಯರು ವೀರಶೈವರಾಗಿದ್ದರು ಎಂದು ಹೇಳಿದರೆ ಅನೇಕರಿಗೆ ಆಶ್ಚರ್ಯವಾಗುವುದು. ಆದರೆ ಶ್ರೀಶಂಕರಾಚಾರ್ಯರ ಸಮಯಾಯಿಯಾದ ಆನಂದಗಿರಿಯೂ ಶಿರಸ್ಸಿನಲ್ಲಿ ಲಿಂಗವನ್ನು ಧರಿಸಿದ ಜಂಗಮರ ವಿಷಯವನ್ನು ಹೇಳಿದ್ದಾನೆ. ಶ್ರೀಕಂಠ ಶಿವಾಚಾರ್ಯರಿಗೆ

ಆಧಾರವಾಗಿರುವ ಶಿವಮಹಾಪುರಾಣದಲ್ಲಿ ಕಂಡುಬರುವಂತೆ ಅವರಿಗಿಂತ ಹಿಂದಿನಿಂದಲೂ ಲಿಂಗಧಾರಣೆಯು ಪ್ರಚಲಿತವಾಗಿದ್ದಿತೆಂಬುದನ್ನು ಇತರ ಆಧಾರಗಳಿಂದಲೂ ಸ್ಪಷ್ಟಮಾಡಲಾಯಿತು. ಇನ್ನು ಶ್ರೀಕಂಠ ಶಿವಾಚಾರ್ಯರು ವೀರಶೈವರೇ ಎಂಬುದನ್ನು ಸಿದ್ಧಾಂತ ಮಾಡಲಾಗುವುದು.

ಶ್ರೀವೈಷ್ಣವರಲ್ಲಿ ವಡೆಗಲೆ ತೆಂಗಲೆ ಎಂಬ ಪ್ರಭೇದಗಳಿರುವವಷ್ಟೆ. ದ್ರಾವಿಡ ಪ್ರಬಂಧಗಳಿಗೆ ವೇದಗಳಷ್ಟೆ ಪ್ರಾಮುಖ್ಯವನ್ನು ಅಥವಾ ಇನ್ನೂ ಹೆಚ್ಚು ಪ್ರಾಮುಖ್ಯವನ್ನು ಕೊಡಬಹುದೆ ಎಂಬ ವಿಷಯದಲ್ಲಿ ಇವೆರಡು ಪಂಗಡಗಳಿಗೆ ಭಿನ್ನಾಭಿಪ್ರಾಯವಿದೆ. ಹೀಗೆಯೇ ವರ್ಣಾಶ್ರಮ ಧರ್ಮಗಳಿಗೆ ಪ್ರಾಮುಖ್ಯವನ್ನು ಕೊಡದ ವಚನ ವಾಙ್ಮಯಕ್ಕೆ ಪ್ರಾಶಸ್ತ್ಯವನ್ನು ವೀರಶೈವರಲ್ಲಿ ಒಂದು ಸುಧಾರಿತ ಪಂಗಡವು ಕೊಡುವುದು. ಆದರೆ ಇದನ್ನು ಮಾನ್ಯಮಾಡದೆ ವರ್ಣಾಶ್ರಮ ಧರ್ಮಕ್ಕೆ ಪ್ರಾಮುಖ್ಯವನ್ನು ಕೊಡುವ, ಲಿಂಗಯಜ್ಞೋಪವೀತಧಾರಿಗಳಾದ ಆರಾಧ್ಯ ಬ್ರಾಹ್ಮಣರೆಂದು ಕರೆದುಕೊಳ್ಳುವ ಸಾಂಪ್ರದಾಯಿಕ ಪಂಗಡವು ವೀರಶೈವರಲ್ಲಿ ಇಂದೂ ಇರುವುದು. ವೀರಶೈವ ಸಿದ್ಧಾಂತಪ್ರತಿಪಾದಕವೆಂದು ಪ್ರಸಿದ್ಧವಾದ ಶ್ರೀಕರ ಭಾಷ್ಯವನ್ನು ಬರೆದ ಶ್ರೀಪತಿ ಪಂಡಿತರೂ, ನೀಲಕಂಠ ಭಾಷ್ಯದ ಕಾರಿಕೆಯೆಂದು ಕರೆದುಕೊಂಡಿರುವ ಕ್ರಿಯಾಸಾರವನ್ನು ಬರೆದ ನೀಲಕಂಠರೂ ಈ ಆರಾಧ್ಯ ಪಂಗಡಕ್ಕೆ ಸೇರಿದ ವೀರಶೈವರು. ಶ್ರೀಕಂಠ ಭಾಷ್ಯವೆಂದೂ ನೀಲಕಂಠ ಭಾಷ್ಯವೆಂದೂ ಪ್ರಸಿದ್ಧವಾಗಿರುವ ಭಾಷ್ಯವನ್ನು ಬರೆದ ಶ್ರೀಕಂಠ ಶಿವಾಚಾರ್ಯರು ಸಹಾ ಆರಾಧ್ಯ ಬ್ರಾಹ್ಮಣ ಪಂಗಡಕ್ಕೆ ಸೇರಿದವರೆಂಬುದೂ, ಅವರ ಭಾಷ್ಯವು ವೀರಶೈವ ಭಾಷ್ಯವೇ ಎಂಬುದೂ ಅವರ ಭಾಷ್ಯವನ್ನು ಶ್ರೀಕರ ಭಾಷ್ಯದೊಡನೆಯೂ ಕ್ರಿಯಾಸಾರದೊಡನೆಯೂ ವಿಮರ್ಶಿಸುವುದರಿಂದ ತಿಳಿದುಬರುವುದು.

## ಶ್ರೀಕಂಠ ಭಾಷ್ಯವು ವೀರಶೈವ ಭಾಷ್ಯವೆ?

ಅನೇಕ ಶತಮಾನಗಳ ಹಿಂದೆಯೇ ರಚಿತವಾಗಿ ಇಂದೂ ಪ್ರಸಿದ್ಧವಾಗಿರುವ ನಾಲ್ಕೈದು ಭಾಷ್ಯಗಳಲ್ಲಿ ಶ್ರೀಕಂಠ ಭಾಷ್ಯವು ಒಂದು ಪ್ರಾಮುಖ್ಯವಾದ ಭಾಷ್ಯ. ಇದನ್ನು ಕೂಲಂಕಷವಾಗಿ ಅಭ್ಯಾಸಮಾಡಿದವರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಪ್ರಮುಖರು. ಇವರು ಬರೆದಿರುವ ಶ್ರೀಕಂಠನ ಶಿವಾದ್ವೈತವೆಂಬ ಗ್ರಂಥವು ವಿಚಾರಪೂರ್ಣವಾದ ಗ್ರಂಥವಾಗಿದೆ. ಇಂತಹ ಉದ್ದಾಮ ಪಂಡಿತರ ವಿಚಾರಕ್ಕೆ ಒಳಗಾಗಿದ್ದರೂ, ಶ್ರೀಕಂಠ ಶಿವಾಚಾರ್ಯರ ಜಾತಿ ಕುಲ ದೇಶಾದಿಗಳೊಂದೂ ತಿಳಿಯದಿರುವುದು ಶೋಚನೀಯವಾಗಿದೆ. "Very little is known of Srikantha's place, period or parentage" ಎಂದೂ "That he was a Brahmin no one can assert with certainty" ಎಂದೂ ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳ ಗ್ರಂಥದಲ್ಲಿ ಹೇಳಿದೆ. ಇವರ ಭಾಷ್ಯವಲ್ಲದೆ ನೀಲಕಂಠ ಶಿವಾಚಾರ್ಯಕೃತ ನೀಲಕಂಠ ಭಾಷ್ಯವೆಂಬ ವೀರಶೈವ ಭಾಷ್ಯವೊಂದು ಇದೆಯೆಂಬ ಸಂದೇಹ ಬಂದುದುಂಟು. ಅಂತಹ ಭಾಷ್ಯವಾವುದೂ ದೊರೆತಿಲ್ಲ; ಅಲ್ಲದೆ ಶ್ರೀಕಂಠ ಶಿವಾಚಾರ್ಯರಿಗೆ ನೀಲಕಂಠ ಶಿವಾಚಾರ್ಯರೆಂಬ ಹೆಸರು ಇದ್ದಿತೆಂಬುದರಲ್ಲಿಯೂ, ಶ್ರೀಕಂಠ ಭಾಷ್ಯವನ್ನು ನೀಲಕಂಠ ಭಾಷ್ಯವೆಂದು ಕರೆಯುತ್ತಿದ್ದರೆಂಬುದರಲ್ಲಿಯೂ ಸಂಶಯವಿಲ್ಲ. ತಮಿಳು ದೇಶದಲ್ಲಿ ಇವರನ್ನು

ನೀಲಕಂಠ ಶಿವಾಚಾರ್ಯರೆಂದು ಕರೆಯುವುದೇ ಹೆಚ್ಚು. ಮಾನ್ಯ ರಾಧಾಕೃಷ್ಣನ್‌ರವರು ಇವರನ್ನು 'ನೀಲಕಂಠ' ಎಂಬ ಹೆಸರಿನಿಂದಲೇ ಕರೆದಿರುವರು. ನಿರ್ಮಲಮಣಿಪ್ರಭಾದಲ್ಲಿ ಭಗವಾನ್ ನೀಲಕಂಠ ಆಚಾರ್ಯ ಎಂದು ಇವರನ್ನು ಕರೆಯಲಾಗಿದೆ. ಉಮಾಪತಿಯ ಪೌಷ್ಕರ ಭಾಷ್ಯದಲ್ಲಿಯೂ ಇವರು ಇದೇ ಹೆಸರಿನಿಂದ ಕರೆಯಲ್ಪಟ್ಟಿದ್ದಾರೆ; ಆದರೆ ಇವರ ಭಾಷ್ಯವನ್ನು ಶ್ರೀಕಂಠ ಭಾಷ್ಯವೆಂದೇ ಅದರಲ್ಲಿ ಕರೆಯಲಾಗಿದೆ. ಅಪ್ಪಯ್ಯ ದೀಕ್ಷಿತರು ಇವರನ್ನು ಶ್ರೀಕಂಠ ಶಿವಾಚಾರ್ಯರೆಂದೇ ಕರೆದಿರುವರು. ಈ ಭಾಷ್ಯಕಾರರಿಗೂ ಭಾಷ್ಯಕ್ಕೂ ಎರಡು ಹೆಸರುಗಳಿರುವುದು ಶ್ರೀಕರ ಭಾಷ್ಯದಿಂದಲೂ ಸ್ಪಷ್ಟವಾಗುವುದು.

ಹೀಗೆ ಶ್ರೀಕಂಠ ಶಿವಾಚಾರ್ಯರೆಂಬ ಹೆಸರಿನಿಂದಲೂ, ನೀಲಕಂಠ ಶಿವಾಚಾರ್ಯರೆಂಬ ಹೆಸರಿನಿಂದಲೂ ಪ್ರಸಿದ್ಧರಾದ ಭಾಷ್ಯಕಾರರು ವೀರಶೈವರೆಂದೇ ಪುರಾತನ ಕಾಲದಿಂದಲೂ ವೀರಶೈವ ಯತಿಗಳಿಂದ ಪರಿಭಾವಿಸಲ್ಪಟ್ಟಿರುವುದು ಅವರು ವೀರಶೈವರೇ ಎಂಬುದನ್ನು ಸೂಚಿಸುತ್ತದೆ. ಉದಾಹರಣೆಗಾಗಿ ವೀರಶೈವ ಭಾಷ್ಯವೆಂದು ಪ್ರಸಿದ್ಧವಾದ ಶ್ರೀಕರ ಭಾಷ್ಯವನ್ನು ರಚಿಸಿದ ಶ್ರೀಪತಿ ಪಂಡಿತರು **'ಅಧಿಕಂ ತು ಭೇದ ನಿರ್ದೇಶಾತ್'** ಎಂಬ ಸೂತ್ರದ ಭಾಷ್ಯದಲ್ಲಿ **"ಶೈವಾಗ್ರಗಣ್ಯ ಶ್ರೀಕಂಠ ಶಿವಾರಾಧ್ಯಕೃತ ಬ್ರಹ್ಮಮೀಮಾಂಸಾ ಭಾಷ್ಯೇ ವಿಶಿಷ್ಟಾದ್ವೈತಂ ಸ್ವಾಭಿಪ್ರೇತತ್ವೇನ ಪ್ರಸಾಧಿತಂ"** ಎಂದು ಹೇಳಿದ್ದಾರೆ. ಶ್ರೀಕರ ಭಾಷ್ಯದ ೩-೨-೮ ನೆಯ ಸೂತ್ರಭಾಷ್ಯದಲ್ಲಿ ಶ್ರೀಕಂಠರನ್ನು **'ಶಿವಾಚಾರ್ಯ'** ಎಂದು ಕರೆದಿದ್ದಾರೆ. ಭಾಷ್ಯಕಾರ ಶ್ರೀಕಂಠರನ್ನು 'ಆರಾಧ್ಯ' ಎಂದು ಶ್ರೀಪತಿಯು ಕರೆದಿರುವುದರಲ್ಲಿ ಅವರು ತಮ್ಮಂತೆ ವೀರಶೈವ ಆರಾಧ್ಯ ಪಂಗಡದವರೆಂದು ಹೇಳಿದಂತಾಯಿತು; 'ಶಿವಾಗ್ರಗಣ್ಯ' ಎಂದೂ 'ಶಿವಾಚಾರ್ಯ' ಎಂದೂ ಹೇಳಿರುವುದರಲ್ಲಿ ಸ್ವಮತದ ಆಚಾರ್ಯರೆಂಬ ದೃಷ್ಟಿಯಿಂದ ಗೌರವವನ್ನು ಸೂಚಿಸಿದಂತಾಯಿತು. ಶ್ರೀಯುತ ಹಯವದನರಾಯರು ಶ್ರೀಕರ ಭಾಷ್ಯದ ಮುನ್ನುಡಿಯಲ್ಲಿ ಇದೇ ಅಭಿಪ್ರಾಯವನ್ನು ಹೀಗೆ ಸೂಚಿಸಿದ್ದಾರೆ- "The change from Srikantha Sivaradhya to Srikantha Sivacharya should be noted. The former designation would seem to indicate his being claimed as Veerasaiva by Sripati" ಈ ವಿಷಯದಲ್ಲಿ ಶ್ರೀಯುತ ಹಯವದನ ರಾಯರು ಗಮನಿಸದಿರುವ ಮತ್ತೊಂದು ವಿಷಯವು ಶ್ರೀಕಂಠರನ್ನು ಶ್ರೀಪತಿ ಪಂಡಿತಾರಾಧ್ಯರು ತಮ್ಮ ಮತದವರೆಂದೂ, ತಮ್ಮ ಮತದ ವಿಷಯವಾಗಿ ಭಾಷ್ಯ ಬರೆದ ಆಚಾರ್ಯರೆಂದೂ ಪರಿಗಣಿಸಿದ್ದರೆಂಬುದನ್ನು ಸ್ಪಷ್ಟಪಡಿಸುತ್ತದೆ. **'ಅಂತಸ್ತದ್ಧರ್ಮೋಪದೇಶಾತ್'** ಎಂಬ ಸೂತ್ರದ ಶ್ರೀಕರ ಭಾಷ್ಯದಲ್ಲಿ ಶ್ರೀಪತಿ ಪಂಡಿತಾರಾಧ್ಯರು **"ನೀಲಕಂಠ ಭಗವತ್ಪಾದ ಭಟ್ಟ ಭಾಸ್ಕರ ಘಂಟಾನಾಥ ಜ್ಯೋತಿರ್ನಾಥಾದಿ ಪೂರ್ವಾಚಾರ್ಯೈಃ"** ಎಂದು ಮೊದಲಾಗಿ ಹೇಳಿ, ನೀಲಕಂಠರೆಂದೂ ಪ್ರಸಿದ್ಧರಾದ ಶ್ರೀಕಂಠ ಶಿವಾಚಾರ್ಯರಿಗೆ ಮಾತ್ರ 'ಭಗವತ್ಪಾದ' ಪದ ಪ್ರಯೋಗ ಮಾಡಿರುವುದರಿಂದ ಅವರನ್ನು ಸ್ವಮತಾಚಾರ್ಯರೆಂದು ಅವರು ಭಾವಿಸಿರುವುದರಲ್ಲಿ ಸಂದೇಹವೇ ಉಳಿಯುವುದಿಲ್ಲ. **"ಕಪ್ಯಾಸಂ ಪುಂಡರೀಕಮೇವಮಕ್ಷಿಣೀ"** ಎಂಬ ಛಾಂದೋಗ್ಯ ಮಂತ್ರಭಾಗದ ಅರ್ಥಕ್ಕೆ ಶ್ರೀಕಂಠ ಭಾಷ್ಯದಲ್ಲಿ ಕೊಟ್ಟಿರುವ ಆಧಾರವನ್ನೇ ಇವರೂ ಕೊಟ್ಟಿರುವುದರಿಂದ ನಿಲಕಂಠ ಭಗವತ್ಪಾದರೆಂದರೆ ಆ ಹೆಸರಿನಿಂದಲೂ ಕರೆಯಲ್ಪಡುವ ಶ್ರೀಕಂಠ ಭಾಷ್ಯ ಕರ್ತೃವಾದ ಶ್ರೀಕಂಠ ಶಿವಾಚಾರ್ಯರೆಂಬುದು ಸ್ಪಷ್ಟ. ಇದನ್ನು ಮುಂದೆ ಹೆಚ್ಚು ವಿವರ ಮಾಡಲಾಗುವುದು. ವಿಶಿಷ್ಟಾದ್ವೈತ ಪ್ರತಿಪಾದಕವಾದುದೆಂದು ಪ್ರಸಿದ್ಧವಾದ ಶೈವ

ಭಾಷ್ಯವು ಶ್ರೀಕಂಠ ಭಾಷ್ಯವಲ್ಲದೆ ಮತ್ತಾವುದೂ ಇಲ್ಲ. ಶ್ರೀಕರ ಭಾಷ್ಯದಲ್ಲಿ 'ಶ್ರೀಕಂಠ ಶಿವಾರಾಧ್ಯ ಕೃತ ಬ್ರಹ್ಮಮೀಮಾಂಸಾ ಭಾಷ್ಯೇ ವಿಶಿಷ್ಟಾದ್ವೈತಂ ಪ್ರಸಾಧಿತಂ' ಎಂದು ಹೇಳುವುದರಲ್ಲಿ ಪ್ರಸಿದ್ಧವಾದ ಶ್ರೀಕಂಠ ಭಾಷ್ಯವೇ ಅಭಿಪ್ರೇತವು.

## ಕ್ರಿಯಾಸಾರವು ಶ್ರೀಕಂಠ ಭಾಷ್ಯದ ಕಾರಿಕೆ

ಕ್ರಿಯಾಸಾರವನ್ನು ಬರೆದ ನೀಲಕಂಠರು ಶ್ರೀಕಂಠ ಶಿವಾಚಾರ್ಯರನ್ನು ತಮ್ಮಂತೆ ವೀರಶೈವರೆಂದು ತಿಳಿದಿದ್ದರಲ್ಲದೆ ತಾವು ಆ ಭಾಷ್ಯಕ್ಕೆ ಕ್ರಿಯಾಸಾರದಲ್ಲಿ ಕಾರಿಕೆಯನ್ನು ಬರೆದಿರುವುದಾಗಿ ಹೇಳಿದ್ದಾರೆ. ಭಾಷ್ಯಕಾರರನ್ನು ನೀಲಕಂಠ ಶಿವಾಚಾರ್ಯರೆಂದು ಕರೆದಿರುವರಾದರೂ ಆ ಭಾಷ್ಯವನ್ನು ವಿಶಿಷ್ಟಾದ್ವೈತ ಪ್ರತಿಪಾದಕವೆಂದು ಕರೆದಿರುವುದರಿಂದ ಆ ಭಾಷ್ಯವು ಪ್ರಸಿದ್ಧವಾದ ಶ್ರೀಕಂಠ ಭಾಷ್ಯವೆಂಬುದರಲ್ಲಿ ಸಂದೇಹವಿಲ್ಲ.

ವೀರಶೈವವನ್ನು ವಿಶಿಷ್ಟಾದ್ವೈತ ಸಿದ್ಧಾಂತವೆಂದು ಕ್ರಿಯಾಸಾರದಲ್ಲಿ ಕರೆದಿರುವುದೇ, ವಿಶಿಷ್ಟಾದ್ವೈತ ಸಿದ್ಧಾಂತವೆಂದು ಕರೆದುಕೊಳ್ಳುವ ಶ್ರೀಕಂಠ ಭಾಷ್ಯವೂ ವೀರಶೈವ ಭಾಷ್ಯವಿರಬೇಕೆಂದು ಇಂದು ವಿಚಾರಮಾಡಲು ಕಾರಣವಾಯಿತು. ಏಕೆಂದರೆ ಈ ಕ್ರಿಯಾಸಾರದಲ್ಲಿ ಹೊರತು ಮತ್ತೆಲ್ಲಿಯೂ ವೀರಶೈವ ಸಿದ್ಧಾಂತವು ವಿಶಿಷ್ಟಾದ್ವೈತ ಸಿದ್ಧಾಂತವೆಂದು ಕರೆಯಲ್ಪಟ್ಟಿಲ್ಲ. ಒಂದರೊಡನೆ ಮತ್ತೊಂದು ಸೇರಿಸುವುದನ್ನು ಸೂಚಿಸುವ ವಿಶಿಷ್ಟ ಪದದೊಡನೆ ಅದ್ವೈತ ಪದವನ್ನು ಸೇರಿಸುವುದು ಸರಿಯಲ್ಲವೆಂದೂ, ಹಾಗೆ ಮಾಡುವುದರಿಂದ 'ಶೂದ್ರ ಬ್ರಾಹ್ಮಣ' ಎಂಬ ಪದದಂತೆ ಅರ್ಥವಿಲ್ಲದ ಪದವಾಗುವುದೆಂದೂ ಶ್ರೀಕರ ಭಾಷ್ಯದಲ್ಲಿ ಹೇಳಿರುವ ಭಾಗವಿದು- **"ವಿಶಿಷ್ಟಾದ್ವೈತ ಮಿತ್ಯುಕ್ತಿ ವಿರೋಧಾತ್ . . . ಶೂದ್ರಬ್ರಾಹ್ಮಣ ಇತಿವದ್ ವಿಶಿಷ್ಟಾದ್ವೈತಮಿತಿ ಮತಮವಿದುಷಾಮೇವ ಶೋಭತೇ"** ಹೀಗೆ ಈಚೆಗೆ ವೀರಶೈವರು ತಮ್ಮ ಸಿದ್ಧಾಂತವನ್ನು ವಿಶಿಷ್ಟಾದ್ವೈತವೆಂದು ಕರೆಯಲು ಹಿಂಜರಿಯುವರು. ಹಾಗಿದ್ದರೂ ವೀರಶೈವರಿಗೆ ಮುಖ್ಯ ಆಧಾರಗಳಲ್ಲೊಂದಾದ ಕ್ರಿಯಾಸಾರದಲ್ಲಿ ವೀರಶೈವರ ಏಕೋತ್ತರ ಷಟ್‌ಸ್ಥಲ ಸಿದ್ಧಾಂತವನ್ನು ವಿಶಿಷ್ಟಾದ್ವೈತ ಸಿದ್ಧಾಂತವೆಂದು ಕರೆದಿರುವುದು ಅನಿವಾರ್ಯವಾಯಿತು; ಏಕೆಂದರೆ ಅದು ವಿಶಿಷ್ಟಾದ್ವೈತ ಸಿದ್ಧಾಂತವೆಂದು ಕರೆದುಕೊಳ್ಳುವ ಶ್ರೀಕಂಠ ಭಾಷ್ಯದ ಕಾರಿಕೆಯೇ ಆಗಿದೆ. ಶ್ರೀಕಂಠ ಭಾಷ್ಯವು ಅದರ ಇನ್ನೊಂದು ಹೆಸರಾದ ನೀಲಕಂಠ ಭಾಷ್ಯವೆಂಬ ಹೆಸರಿನಿಂದ ಕ್ರಿಯಾಸಾರದಲ್ಲಿ ಉಲ್ಲೇಖಿಸಲ್ಪಟ್ಟಿದೆ; ಅದರಲ್ಲಿ ಶ್ರೀಕಂಠ ಶಿವಾಚಾರ್ಯರು ಅವರ ಇನ್ನೊಂದು ಹೆಸರಾದ ನೀಲಕಂಠ ಶಿವಾಚಾರ್ಯರೆಂಬ ಹೆಸರಿನಿಂದ ಉಲ್ಲೇಖಿಸಲ್ಪಟ್ಟಿದ್ದಾರೆ. ಕ್ರಿಯಾಸಾರವು ಈ ಭಾಷ್ಯದ ಕಾರಿಕೆಯೆಂದು ಅದರಲ್ಲಿ ಹೇಳಿದೆ:

ನೀಲಕಂಠ ಶಿವಾಚಾರ್ಯ ನಾಮ್ನಾ ಭಾಷ್ಯಮಚೀಕರತ್
ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದನ ಮುತ್ತಮಂ ‖ ೧-೩೨ ‖

ಮಯಾಪಿ ತಸ್ಯ ತಾತ್ಪರ್ಯಂ ಶೋತೃಣಾಂ ಸುಖಬುದ್ಧಯೇ
ಕಾರಿಕಾರೂಪತಸ್ಸರ್ವಂ ಕ್ರಮೇಣೈವ ನಿಬಧ್ಯತೇ ‖ ೧-೩೩ ‖

ತಸ್ಮಾಚ್ಛಕ್ತಿ ವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಸ್ಸ್ಫುಟಂ ‖ ೯೬ ‖

ನೀಲಕಂಠ ಶಿವಾಚಾರ್ಯ ಭಾಷ್ಯಾರ್ಥಮನುಸಂದಧನ್ ।
ವೀರಶೈವೈರಭಿಮತಮಭಿಧಾಸ್ಯೇ ಶ್ರುತೇರ್ಮತಂ ‖ ೧೦೦ ‖

## ವಿಶಿಷ್ಟಾದ್ವೈತ ಪದಪ್ರಯೋಗದಿಂದ ಬರುವ ಸಂದೇಹ ಪರಿಹಾರ

ಶ್ರೀಕಂಠ ಶಿವಾಚಾರ್ಯರಿಗೆ ತಾವು ಹೇಳುವ ಶಿವಾದ್ವೈತ ಸಿದ್ಧಾಂತವನ್ನು ವಿಶಿಷ್ಟಾದ್ವೈತವೆಂದು ಕರೆಯುವುದರಲ್ಲಿ ದೋಷವೇನೂ ಕಂಡುಬರಲಿಲ್ಲ. ಆದರೆ ಶ್ರೀ ರಾಮಾನುಜರ ಶ್ರೀಭಾಷ್ಯದಲ್ಲಿ ವಿಶಿಷ್ಟಾದ್ವೈತವೆಂದು ಅವರು ಕರೆಯುವ ಸಿದ್ಧಾಂತದ ಪ್ರಕಾರ ಪರಬ್ರಹ್ಮವೂ ಅದರ ಶರೀರವೆನಿಸಿದ ಚಿದಚಿತ್ತುಗಳೂ ಅತ್ಯಂತ ವಿಲಕ್ಷಣವಾದುವು. ಏಕೆಂದರೆ '**ನಿಯಂತ್ರ ತಯಾ ಶೇಷಿತಯಾ ಚಾತ್ಯಂತ ವಿಲಕ್ಷಣಃ ಪರಮಾತ್ಮಾ**' ಎಂಬುದನ್ನು ವೇದಾಂತ ದೀಪದ ಪ್ರಾರಂಭದಲ್ಲಿಯೇ ಶ್ರೀ ರಾಮಾನುಜರು ಹೇಳಿದ್ದಾರೆ. ಆದರೆ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತದ ಪ್ರಕಾರ ಚಿದಚಿತ್ತುಗಳು ಪರಶಿವ ಬ್ರಹ್ಮದ ಶರೀರವೆನ್ನಬಹುದಾದರೂ ಅವು ಶಿವಾಭಿನ್ನವಾದ ಶಕ್ತಿಯ ಪರಿಣಾಮುಗಳು. "The world both intelligent and non-intelligent (Chit as well as achit) is the result of transformation of Chitsakti, the Lords energy which as Intelligence and Bliss is non-different from Himself" ಎಂದು ಶ್ರೀಕಂಠನ ಶಿವಾದ್ವೈತ ಗ್ರಂಥದಲ್ಲಿ ಶ್ರೀಕಂಠ ಶಿವಾಚಾರ್ಯರ ನಿಲುವನ್ನು ವಿವರಿಸಿದ್ದಾರೆ. ಮಥಿತಾರ್ಥವೇನೆಂದರೆ ಈ ಆಚಾರ್ಯರಿಬ್ಬರೂ ವಿಶಿಷ್ಟಾದ್ವೈತವೆಂದು ತಮ್ಮ ಸಿದ್ಧಾಂತಗಳನ್ನು ಕರೆದರೂ ಇಬ್ಬರ ನಿಲುವಿನಲ್ಲಿಯೂ ವ್ಯತ್ಯಾಸವಿದೆ. ಅಂತಿಮ ಸ್ಥಿತಿಯಲ್ಲಿ ಶ್ರೀ ರಾಮಾನುಜರು ದ್ವೈತವನ್ನು ಪ್ರತಿಪಾದಿಸಿದರು; ಆದರೆ ಶ್ರೀಕಂಠ ಶಿವಾಚಾರ್ಯರು ಅಂತಿಮ ಸ್ಥಿತಿಯಲ್ಲಿ ಅದ್ವೈತವನ್ನು ಪ್ರತಿಪಾದಿಸುತ್ತಾರೆ. ದ್ವೈತಾದ್ವೈತವೆಂಬುದು ಶ್ರೀಪತಿ ಪಂಡಿತರ ನಿಲುವಾದರೂ ಅವರು ಹೇಳುವುದು, ಅಂತಿಮ ಸ್ಥಿತಿಯಲ್ಲಿ ಅದ್ವೈತವೆ. ಶ್ರೀಪತಿ ಪಂಡಿತರಿಗೆ ವಿಶಿಷ್ಟ ಪದವನ್ನು ಅದ್ವೈತವೆಂಬ ಪದದೊಡನೆ ಸೇರಿಸುವುದರಲ್ಲಿ ಉಕ್ತಿವಿರೋಧವು ಕಂಡುಬಂದರೆ ಶ್ರೀಕಂಠ ಶಿವಾಚಾರ್ಯರಿಗೆ ದ್ವೈತ ಪದದೊಡನೆ ಅದ್ವೈತ ಪದವನ್ನು ಸೇರಿಸಿ ದ್ವೈತಾದ್ವೈತವನ್ನು ಹೇಳುವುದರಲ್ಲಿ ದೋಷವು ಕಂಡುಬರುತ್ತದೆ. ಆದರೆ ಮಾತುಗಳಲ್ಲೇನಿದೆ, ಅಭಿಪ್ರಾಯವು ಮುಖ್ಯ. ಶ್ರೀಕಂಠ ಶಿವಾಚಾರ್ಯರೂ ಶ್ರೀ ರಾಮಾನುಜರೂ ವಿಶಿಷ್ಟಾದ್ವೈತವೆಂಬ ಪದದಿಂದ ತಮ್ಮ ತಮ್ಮ ಸಿದ್ಧಾಂತಗಳನ್ನು ಕರೆದಿದ್ದರೂ ಮೇಲೆ ತೋರಿಸಿದಂತೆ ಅವರ ಸಿದ್ಧಾಂತಗಳಲ್ಲಿ ಒಂದು ಅದ್ವೈತದ ನಿಲುವಾದರೆ ಇನ್ನೊಂದು ಅಂತಿಮ ಸ್ಥಿತಿಯಲ್ಲಿಯೂ ದ್ವೈತವನ್ನೇ ಬೋಧಿಸುತ್ತದೆ. ಶ್ರೀಕಂಠ ಶಿವಾಚಾರ್ಯರೂ ಶ್ರೀಪತಿ ಪಂಡಿತರೂ ತಮ್ಮ ತಮ್ಮ ಸಿದ್ಧಾಂತಗಳನ್ನು ಬೇರೆ ಬೇರೆ ಹೆಸರುಗಳಿಂದ ಕರೆದರೂ, ಅವರಿಬ್ಬರ ಸಿತ್ಧಾಂತಗಳ ಪ್ರಕಾರವೂ ಶಿವಾಭಿನ್ನವಾದ ಶಕ್ತಿಯ ಪರಿಣಾಮದಿಂದಲೇ ಚಿದಚಿತ್ತುಗಳಾಗಿ ಸೃಷ್ಟಿಯಾಗುತ್ತದೆ, ಮತ್ತೆ ಅಂತ್ಯದಲ್ಲಿ ಶಿವಾಭಿನ್ನ ಶಕ್ತಿಯಾಗಿಯೇ ಆಗಿ ಅವು ಪರಿಣಮಿಸುತ್ತವೆ ಎಂಬುದು ಮೇಲೆ ಹೇಳಿದುದರಿಂದ ಸ್ಪಷ್ಟವಾಗುವುದು. ಮುಂದೆ ಶ್ರೀಕಂಠ ಭಾಷ್ಯದೊಡನೆ ಶ್ರೀಕರ ಭಾಷ್ಯವನ್ನು ತುಲನೆ ಮಾಡುವಾಗ ಇದು ಮತ್ತಷ್ಟು ಸ್ಪಷ್ಟವಾಗುವುದು. ಡಾ|| ಪಾಂಡೆಯವರು 'ಅಭಿನವ ಗುಪ್ತ' ಎಂಬ ಗ್ರಂಥದಲ್ಲಿ ಬರೆದಿರುವ ಮಾತುಗಳಿವು ಗಮನಾರ್ಹವಾಗಿವೆ:

No language is perfect. We cannot find a convenient expression for each shade of difference in our ideas in any language. We have to depend upon approximations

to convey the idea of subtle differences. We have therefore to clearly understand the implication of each word of a question regarding a philosophical problem. In fact much of the confusion we find in the writings of later commentators on ancient philosophical authorities is due to the fight over words.

ವಿಶಿಷ್ಟಾದ್ವೈತವೆಂದು ಶ್ರೀಕಂಠ ಶಿವಾಚಾರ್ಯರು ತಮ್ಮ ಸಿದ್ಧಾಂತವನ್ನು ಕರೆದುಕೊಂಡಿರುವ ಮಾತ್ರಕ್ಕೆ ಅದು ವೀರಶೈವ ಸಿದ್ಧಾಂತವಲ್ಲವೆಂದು ತೀರ್ಮಾನಿಸಲಾಗದು; ಏಕೆಂದರೆ ಕ್ರಿಯಾಸಾರದಲ್ಲಿನ ಸಿದ್ಧಾಂತವನ್ನು ಅದರಲ್ಲಿ ವಿಶಿಷ್ಟಾದ್ವೈತವೆಂದು ಕರೆದಿದ್ದರೂ ಕ್ರಿಯಾಸಾರವು ವೀರಶೈವದ ಪ್ರಮುಖ ಆಧಾರವೆಂದು ಹಿಂದಿನಿಂದಲೂ ಇಂದೂ ಪರಿಗಣಿಸಲ್ಪಟ್ಟಿದೆ. ಈ ಕ್ರಿಯಾಸಾರವು ಶ್ರೀಕಂಠ ಭಾಷ್ಯದ ಕಾರಿಕೆಯಾಗಿರುವುದೇ ಅಲ್ಲದೆ, ಶ್ರೀಕಂಠ ಭಾಷ್ಯಕ್ಕೆ ಆಧಾರವಾಗಿರುವ ಶಿವಮಹಾಪುರಾಣದ ನೂರಾರು ಶ್ಲೋಕಗಳನ್ನು ಕ್ರಿಯಾಸಾರವು ಅಕ್ಷರಶಃ ಬಳಸಿಕೊಂಡಿರುವುದರ ಕಾರಣವು, ಅದು ಆ ಭಾಷ್ಯದ ಕಾರಿಕೆಯಾಗಿರುವುದೇ ಆಗಿದೆ. ಶ್ರೀಕರ ಭಾಷ್ಯದಲ್ಲಿಯೂ ಕ್ರಿಯಾಸಾರದಲ್ಲಿಯೂ ಶ್ರೀಕಂಠ ಭಾಷ್ಯವು ವೀರಶೈವ ಭಾಷ್ಯವೆಂದು ಪರಿಗಣಿಸಲ್ಪಟ್ಟಿರುವುದಲ್ಲದೆ, ಇತರರಿಂದಲೂ ಹಾಗೆ ಪರಿಗಣಿಸಲ್ಪಟ್ಟಿದೆ. ನಿಜಗುಣ ಶಿವಯೋಗಿಗಳ "ತಾರಾವಳಿ"ಯೂ ಶ್ರೀಕಂಠ ಭಾಷ್ಯದ ಮೇಲೆ ಬರೆದ ವ್ಯಾಖ್ಯಾನವೆಂದು ತಿಳಿದು ಬಂದಿರುವುದಾಗಿ ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಹೇಳುತ್ತಾರೆ; ನಿಜಗುಣ ಶಿವಯೋಗಿಗಳೂ ಶ್ರೀಕಂಠ ಭಾಷ್ಯವನ್ನು ವೀರಶೈವ ಸಿದ್ಧಾಂತವೆಂದು ಪರಿಗಣಿಸಿರಬೇಕು. ಶ್ರೀಕಂಠ ಶಿವಾಚಾರ್ಯರ ಶಿಷ್ಯರಾದ ಹರದತ್ತಾಚಾರ್ಯರು ಬರೆದಿರುವ 'ಚತುರ್ವೇದ ತಾತ್ಪರ್ಯ ಸಂಗ್ರಹ'ದ ಮೇಲೆ 'ಗಿರೀಶ ಸೂಕ್ತಿಮಾಲಾ' ಎಂಬ ವ್ಯಾಖ್ಯಾನವನ್ನು ಬರೆದ ಶಿವಲಿಂಗ ಭೂಪತಿಯು ವೀರಶೈವನು. 'ವಿಭೂತಿ'ಯಲ್ಲಿ ಸೂರ್ಯಸಿಂಹಾಸನಾಧೀಶ್ವರ ನಿಡುಮಾಮಿಡಿ ಶ್ರೀಯವರು ಹೀಗೆ ಬರೆದಿದ್ದಾರೆ–"ನೀಲಕಂಠ ಶಿವಾಚಾರ್ಯರು: ಇವರು ಪ್ರಸಿದ್ಧ ಭಾಷ್ಯಕಾರರು. ಶಿವಾದ್ವೈತ ಸಿದ್ಧಾಂತ ಪರವಾಗಿ ಬ್ರಹ್ಮಸೂತ್ರಕ್ಕೆ ಭಾಷ್ಯ ಬರೆದಿದ್ದಾರೆ. ಇವರಿಗೆ ಶ್ರೀಕಂಠ ಶಿವಾಚಾರ್ಯರೆಂತಲೂ ಇನ್ನೊಂದು ಹೆಸರಿದೆ." ಹೀಗೆ ಬರೆದು ತಮ್ಮ ಅಭಿಪ್ರಾಯ ಸಮರ್ಥನೆಗೆ ವೆಂಕಟಲಕ್ಷ್ಮಣರಾವ್, ಎಂ.ಎ. ಮತ್ತು ಜೆ. ಎಂ. ನಲ್ಲಸಾಮಿ ಪಿಳ್ಳೆ ಮೊದಲಾದವರ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ. ಹೀಗೆ ಶ್ರೀಕಂಠ ಭಾಷ್ಯವು ವೀರಶೈವ ಭಾಷ್ಯವೆಂದು ಹಿಂದಿನಿಂದ ಇಂದಿನವರೆಗೂ ವೀರಶೈವರಿಂದ ಪರಿಗಣಿಸಲ್ಪಟ್ಟಿದೆ; ಇತರರು ಯಾರೂ ಅದನ್ನು ತಮ್ಮ ಭಾಷ್ಯವೆಂದು ಪರಿಗಣಿಸಿಲ್ಲ.

### ಶ್ರೀಕಂಠ ಭಾಷ್ಯವು ಇತರ ಶೈವದರ್ಶನಗಳ ಭಾಷ್ಯವಲ್ಲ

ಶ್ರೀಕಂಠ ಭಾಷ್ಯವನ್ನು ಶ್ರೀಕರ ಭಾಷ್ಯದೊಡನೆಯೂ ಕ್ರಿಯಾಸಾರದೊಡನೆಯೂ ಹೋಲಿಸಿ ಇವೆಲ್ಲವೂ ಒಂದೇ ಸಿದ್ಧಾಂತವನ್ನು ಪ್ರತಿಪಾದಿಸುವುವೆಂಬುದನ್ನು ತೋರಿಸುವ ಮೊದಲು, ಇತರ ಶೈವದರ್ಶನಗಳಿಗೆ ಅದು ಸಂಬಂಧಪಟ್ಟಿಲ್ಲವೆಂಬುದನ್ನು ತೋರಿಸಬೇಕಾಗುವುದು. ಲಕುಲೀಶ ಪಾಶುಪತ, ತಮಿಳರ ಶೈವದರ್ಶನ, ಕಾಶ್ಮೀರ ಶೈವದರ್ಶನಗಳು ಅಂದಿನ ಇತರ

ಶೈವದರ್ಶನಗಳು. ಲಕುಲೀಶ ಪಾಶುಪತ ಸಿದ್ಧಾಂತದ ಪ್ರಕಾರ ಪರಶಿವ ಬ್ರಹ್ಮವು ಜಗತ್ತಿಗೆ ನಿಮಿತ್ತ ಕಾರಣವೇ ಹೊರತು ಉಪಾದಾನ ಕಾರಣವಲ್ಲ. ಶ್ರೀಕಂಠ ಭಾಷ್ಯದ ೨-೨-೩೮ ನೆಯ ಸೂತ್ರದ ಭಾಷ್ಯದಲ್ಲಿ **'ಪರಮೇಶ್ವರಸ್ಯ ಜಗದುಭಯಕಾರಣತ್ವಮಿತ್ಯನವದ್ಯಂ'** ಎಂದು ಹೇಳಿ ಜಗದುಭಯಕಾರಣವನ್ನು ಸಿದ್ಧಾಂತಮಾಡಿರುವುದರಿಂದ ಶ್ರೀಕಂಠ ಶಿವಾಚಾರ್ಯರ ಮತವು ದ್ವೈತಿಗಳಾದ ಲಕುಲೀಶ ಪಾಶುಪತರ ಮತಕ್ಕೆ ಹೊಂದುವುದಿಲ್ಲ. ಶ್ರೀ ಸೂರ್ಯ ನಾರಾಯಣ ಶಾಸ್ತ್ರಿಗಳು ಅವರ ಪೂರ್ವೋಕ್ತ ಗ್ರಂಥದಲ್ಲಿ ಪಾಶುಪತ ಮತ ಎಂಬ ವಿಷಯವಾಗಿ ಹೇಳುತ್ತ "Between that system and Srikantha's there are significant points of difference" ಎಂದಿದ್ದಾರೆ. ವೀರಶೈವ ಸಿದ್ಧಾಂತ ದಂತೆಯೂ ಶ್ರೀಕಂಠ ಭಾಷ್ಯದಂತೆಯೂ ಜಗದುಭಯ ಕಾರಣವಾದ **ಶಿವಾಭಿನ್ನ**ವಾದ ಚಿಚ್ಛಕ್ತಿಯಿಂದ ಚಿತ್ ಪ್ರಪಂಚದಂತೆ ಅಚಿತ್ ಪ್ರಪಂಚವೂ ಹೊರಹೊಮ್ಮುವುದು. ಚಿಚ್ಛಕ್ತಿ ಯಿಂದ ಅಚಿತ್ ಪ್ರಪಂಚವು ಹುಟ್ಟಲಾರದೆಂಬುದೇ ತಮಿಳು ಶೈವಸಿದ್ಧಾಂತದ ನಿಲುವು ಆದುದರಿಂದ ಅವರು **ಶಿವಾಧೀನ**ವಾದ ಪರಿಗ್ರಹಶಕ್ತಿಯೇ ಜಗದುಪಾದಾನ ಕಾರಣವೆಂಬರು. ವೀರಶೈವ ಸಿದ್ಧಾಂತದಂತೆಯೂ ಶ್ರೀಕಂಠ ಸಿದ್ಧಾಂತದಂತೆಯೂ ಪರಶಿವ ಬ್ರಹ್ಮವೊಂದೇ ಅಂತಿಮ ಸತ್ಯವು. ಆದರೆ ಶೈವಸಿದ್ಧಾಂತದಂತೆ ಪತಿ, ಪಶು ಮತ್ತು ಪಾಶ ಇವೆಲ್ಲವೂ ಅಂತಿಮ ಸತ್ಯವಾದುವೆ. ಶ್ರೀಕಂಠ ಸಿದ್ಧಾಂತದಂತೆ ಜೀವನು ಅಣುವು; ಶೈವ ಸಿದ್ಧಾಂತದಂತೆ ಜೀವನು ವಿಭುವು. ಇವೇ ಮೊದಲಾದ ವ್ಯತ್ಯಾಸಗಳಿರುವುದರಿಂದ ಶ್ರೀ ಸೂರ್ಯನಾರಾಯಣ ಶಾಸ್ತ್ರಿ ಗಳೂ, ಶ್ರೀಕರ ಭಾಷ್ಯದ ಮುನ್ನುಡಿಯಲ್ಲಿ ಶ್ರೀಯುತ ಹಯವದನರಾಯರೂ ಹೇಳುವಂತೆ, ಶ್ರೀಕಂಠ ಭಾಷ್ಯವು ತಮಿಳು ಶೈವರ ಸಿದ್ಧಾಂತಕ್ಕೆ ಹೊಂದುವುದಿಲ್ಲವೆಂಬುದು ಒಪ್ಪತಕ್ಕುದಾಗಿದೆ. ಕಾಶ್ಮೀರ ಶೈವದ ಮೋಕ್ಷಸ್ವರೂಪಕ್ಕೂ ಶ್ರೀಕಂಠ ಭಾಷ್ಯದಲ್ಲಿಯೂ ಶ್ರೀಕರ ಭಾಷ್ಯದಲ್ಲಿಯೂ ಹೇಳಿರುವ ಮೋಕ್ಷಸ್ವರೂಪಕ್ಕೂ ವ್ಯತ್ಯಾಸವಿದೆ. ಅಲ್ಲದೆ ಕಾಶ್ಮೀರ ಶೈವದ ಜೀವಾಳವಾದ ಪ್ರತ್ಯಭಿಜ್ಞೆಯ ವಿಚಾರವೇ ಶ್ರೀಕಂಠ ಭಾಷ್ಯದಲ್ಲಿ ಸುಳಿಯುವುದಿಲ್ಲ. ಇತರ ಶೈವ ಸಿದ್ಧಾಂತ ಗಳಂತೆ ಕಾಶ್ಮೀರ ಶೈವದಲ್ಲಿಯೂ ಶ್ರೀಕಂಠ ಭಾಷ್ಯದಲ್ಲಿಯೂ ಮೂವತ್ತಾರು ತತ್ವಗಳ ಉಲ್ಲೇಖ ವಿರುವುದಾದರೂ, ಕಾಶ್ಮೀರಶೈವ ಗ್ರಂಥಗಳು ಶಿವಾದಿತತ್ವಗಳಲ್ಲಿ ಒಂದರಿಂದ ಒಂದು ಹೇಗೆ ಹೊರಹೊಮ್ಮುವುವೆಂಬುದನ್ನು ವಿಸ್ತಾರವಾಗಿ ವಿವೇಚಿಸುವುವಾದರೆ, ಶ್ರೀಕಂಠ ಭಾಷ್ಯದಲ್ಲಿ ಈ ವಿಚಾರದ ಸುಳಿವೇ ಇಲ್ಲ. ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳ ಗ್ರಂಥದಲ್ಲಿ ಹೇಳಿದಂತೆ– "That Srikantha recognised thirty six tattvas can apparently be known only by referring to his quotations of the Puranic text 'Saktyadica prithivyanthum sivatattva samudbhavam.' When ever this text is quoted, it will be found that the commentator is interested not in that number or nature of the catogories but in the relation between Siva and Sakti and the pervasion of the world by the first cause." ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತವು ಕಾಶ್ಮೀರ ಶೈವ ಸಿದ್ಧಾಂತವೆಂದು ಯಾರೂ ಸಲಹೆ ಸಹಾ ಮಾಡಿರುವುದಿಲ್ಲ.

## ಶ್ರೀಕಂಠ ಭಾಷ್ಯ ಶ್ರೀಕರ ಭಾಷ್ಯ ಕ್ರಿಯಾಸಾರಗಳ ಸಿದ್ಧಾಂತವು ಒಂದೆ

ಒಂದು ಸಿದ್ಧಾಂತದ ನಿಲುವನ್ನು ಮತ್ತೊಂದು ಸಿದ್ಧಾಂತದ ನಿಲುವಿನೊಡನೆ ಹೋಲಿಸುವಾಗ ಗಮನಿಸಬೇಕಾದ ವಿಷಯಗಳು ಆರು. ಆಯಾ ಸಿದ್ಧಾಂತದ ಪ್ರಕಾರ ಚರಾಚರಾತ್ಮಕ ಪ್ರಪಂಚದ ಸೃಷ್ಟಿಕರ್ತರಾರು ಎಂಬುದು ಮೊದಲನೆಯದು. ಜಗತ್ತೆಂಬ ಕಾರ್ಯಕ್ಕೆ ಆ ಕಾರಣವು ನಿಮಿತ್ತ ಕಾರಣವೋ ಉಪಾದಾನ ಕಾರಣವೋ ಅಥವಾ ಉಪಾದಾನ ನಿಮಿತ್ತೋಭಯ ಕಾರಣವೋ ಎಂಬುದು ಎರಡನೆಯದು. ಈ ಜಗತ್ತಿನಿಂದ ಬಿಡುಗಡೆ ಹೊಂದಿದಾಗ ಆಗುವ ಮೋಕ್ಷಸ್ವರೂಪವೇನು ಎಂಬುದು ಮೂರನೆಯದು. ಮೋಕ್ಷಕ್ಕೆ ಅಧಿಕಾರಿ ಯಾರೆಂಬುದು ನಾಲ್ಕನೆಯದು. ಮೋಕ್ಷವನ್ನು ಪಡೆಯಲು ಉಪಾಯವೇನು ಎಂಬುದು ಐದನೆಯದು. ಈ ವಿಷಯಗಳನ್ನು ನಿರ್ಧರಿಸಲು ವೇದವೊಂದೇ ಆಧಾರವೋ, ಆಗಮಾಧಾರಕ್ಕೂ ಎಡೆಯುಂಟೋ ಎಂಬುವ ಪ್ರಶ್ನೆಯು ಆರನೆಯದು.

ಜಗತ್ಕಾರಣವೇನೆಂಬುದು ಮೊದಲನೆಯ ವಿಷಯ. ಜಗತ್ಕಾರಣವು ಪರಶಿವಬ್ರಹ್ಮವೆಂಬುದು ಶ್ರೀಕಂಠ ಭಾಷ್ಯದಂತೆ ಶ್ರೀಕರ ಭಾಷ್ಯದಲ್ಲಿಯೂ ಒತ್ತಿ ಒತ್ತಿ ಹೇಳಿದ ಮಾತು. ಅಷ್ಟೇ ಅಲ್ಲ. ಈ ವಿಷಯದಲ್ಲಿ ಶ್ರೀಕಂಠ ಭಾಷ್ಯದ ಆಧಾರವನ್ನು ಶ್ರೀಕರ ಭಾಷ್ಯವು **ಉತ್ಪತ್ತೇರಸಂಭವಾತ್** ಎಂಬ ಸೂತ್ರದ ಭಾಷ್ಯದಲ್ಲಿ ತೆಗೆದುಕೊಂಡಿರುವ ಭಾಗವಿದು– **"ಅಂತಸ್ತದ್ಧರ್ಮೋಪದೇಶಾಧಿಕರಣೇ . . . . ನೀಲಕಂಠ ಭಾಷ್ಯೇ . . . . ಕಪ್ಯಾಸಮಿತಿಮಂತ್ರೇ ಕಮುದಕಂ ಕಿರಣೈಃ ಪಿಬತೀತಿ ಕಪಿ ಸೂರ್ಯಃ ತೇನ ಅಸಿತಂ ವಿಕಸಿತಂ ಪುಂಡರೀಕಮಿವೇತ್ಯನೇನ ತೃತೀಯಲೋಚನಸ್ಯ ಮುಕಲೀಕೃತತ್ವಮರ್ಥಾತ್ ಸಿದ್ಧಮಿತಿ ಬಹುಧಾ ನಿರೂಪಿತಂ."** ಶ್ರೀಕರ ಭಾಷ್ಯದಲ್ಲಿ ತೆಗೆದುಕೊಂಡಿರುವ ಈ ಆಧಾರವು ನೀಲಕಂಠ ಭಾಷ್ಯವೆಂದೂ ಕರೆಯಲ್ಪಡುವ ಶ್ರೀಕಂಠ ಭಾಷ್ಯದ ಅಂತಸ್ತದ್ಧರ್ಮೋಪದೇಶಾಧಿಕರಣದಲ್ಲಿ ಇರುವುದು; ಆ ಭಾಗವಿದು– **" ಕಂ ಉದಕಂ ರಶ್ಮಿಭಿಃ ಪಿಬತೀತಿ ಕಪಿರಾದಿತ್ಯಃ ; ತೇನಾಸಿತಂ ವಿಕಸಿತಂ ಪುಂಡರೀಕಂ ಯಥಾಸ್ಫುರತಿ ತಥಾ ಪರಮೇಶ್ವರಸ್ಯ ಲೋಚನದ್ವಯಂ। ತೃತೀಯಲೋಚನಂ ತು ಮುಕುಲಿತ ಸ್ವಭಾವಂ ವಿಕಸಿತ ಪುಂಡರೀಕ ಸದೃಶಂ ನ ಭವತಿ"** ಈ ಭಾಷ್ಯಗಳಲ್ಲಿ ಛಾಂದೋಗ್ಯೋಪನಿಷತ್ತಿನ **' ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ '** ಎಂಬ ಮಂತ್ರಭಾಗಕ್ಕೆ ಶಿವನ ಪರವಾಗಿ ಅರ್ಥ ಮಾಡಲಾಗಿದೆ. ಕಪಿ ಎಂಬಲ್ಲಿ ಕಂ ಎಂದರೆ ನೀರನ್ನು ಪಿ ಎಂದರೆ ಕಿರಣಗಳಿಂದ ಪಾನಮಾಡುವ ಸೂರ್ಯನೆಂದರ್ಥ. ಇವನಿಂದ ಅಸಿತವೆಂದರೆ ವಿಕಸಿತವಾಗುವುದು ಪುಂಡರೀಕ; ಇದರಂತೆ ಇರುವ (ಅಕ್ಷಿಣೀ ಎಂದರೆ) ಎರಡು ಕಣ್ಣುಗಳುಳ್ಳವನು ಶಿವನು ಎಂದು ಅರ್ಥಮಾಡಲಾಗಿದೆ. ಶಿವನ ಮೂರನೆಯ ಕಣ್ಣು ಮುಚ್ಚಿರುವುದರಿಂದ, ವಿಕಸಿತವಾಗಿರುವುವು ಎರಡೇ ಕಣ್ಣುಗಳೆಂದು ಶ್ರೀಕಂಠ ಭಾಷ್ಯದಲ್ಲಿ ಹೇಳಿದೆ. ಈ ಆಧಾರವನ್ನೇ ಶ್ರೀಕರ ಭಾಷ್ಯದಲ್ಲಿಯೂ ತೆಗೆದುಕೊಂಡಿದೆ. ಜಗತ್ಕಾರಣವು ಪರಶಿವಬ್ರಹ್ಮವೆಂದು ಸಿದ್ಧಾಂತವಾಗಿಸಲು ಮಾಡಿರುವ ಶ್ರೀಕಂಠ ಭಾಷ್ಯದ ಪ್ರಯತ್ನದ ಲಾಭವನ್ನು ಶ್ರೀಕರ ಭಾಷ್ಯವು ಪಡೆದಿದೆ; ಅಲ್ಲದೆ ಶ್ರೀಕಂಠ ಭಾಷ್ಯವನ್ನು ಶ್ರೀಕರ ಭಾಷ್ಯವು ಆಧಾರವಾಗಿ ತೆಗೆದುಕೊಂಡಿದೆ ಎಂಬುದು ಸ್ಪಷ್ಟ. ಪರಬ್ರಹ್ಮವನ್ನು ಶಿವನೆಂದೋ ನಾರಾಯಣನೆಂದೋ ಕರೆಯುವುದು ತಾತ್ವಿಕ ದೃಷ್ಟಿಯಿಂದ ಮುಖ್ಯವಲ್ಲವಾದರೂ ಶ್ರೀಕಂಠ ಭಾಷ್ಯಕ್ಕೂ ಶ್ರೀಕರ ಭಾಷ್ಯಕ್ಕೂ ಇರುವ ಹೊಂದಿಕೆಯನ್ನು ತೋರಿಸಲು ಈ ವಿಷಯವು ಅನುಕೂಲವಾಗಿರು

ವುದರಿಂದ ಮೇಲಿನ ಆಧಾರಗಳನ್ನು ಕೊಡಲಾಯಿತು. ಕ್ರಿಯಾಸಾರದಂತೆಯೂ ಪರಶಿವನೆ ಪರಬ್ರಹ್ಮವು:

ಶಿವ ಏವ ಪರಂ ತತ್ವಂ ಶಿವ ಏವ ಪರಂ ಮಹಃ ||
ಶಿವ ಏವ ಪರಂ ಜ್ಯೋತಿಃ ಶಿವ ಏವ ಪರಾತ್ಪರಃ |
ವ್ಯಾಸೋಕ್ತಂ ಯತ್ ಪರಂ ಬ್ರಹ್ಮ ಸ್ವಸೂತ್ರೇಷು ಶಿವಃ ಸ್ವಯಂ || ೧-೩೫ ||

ಎಂದು ಕ್ರಿಯಾಸಾರದಲ್ಲಿ ಹೇಳಿದೆ.

## ಪರಶಿವಬ್ರಹ್ಮವು ಜಗತ್ತಿಗೆ ಉಪಾದಾನನಿಮಿತ್ತೋಭಯಕಾರಣವೆಂಬುದರಲ್ಲಿ ಹೊಂದಿಕೆ

ಇನ್ನು ಪರಶಿವಬ್ರಹ್ಮವು ನಿಮಿತ್ತಕಾರಣವೋ, ಉಪಾದಾನ ಕಾರಣವೋ, ಅಥವಾ ಉಪಾದಾನ ನಿಮಿತ್ತೋಭಯ ಕಾರಣವೋ ಎಂಬುದು ಸಿದ್ಧಾಂತದಲ್ಲಿ ಎರಡನೆಯ ವಿಷಯ. ಪರಶಿವಬ್ರಹ್ಮವು ಉಪಾದಾನ ನಿಮಿತ್ತೋಭಯ ಕಾರಣವೆಂಬ ವೀರಶೈವರ ನಿಲುವನ್ನು ಶ್ರೀಕರ ಭಾಷ್ಯದ ಪತ್ಯಧಿಕರಣದಲ್ಲಿ ಹೀಗೆ ಸಾಧಿಸಿದೆ—**"ಶಿವಸ್ಯ ಪರಬ್ರಹ್ಮಣಃ ಜಗದುಪಾದಾನಾದಿ ಪ್ರೇರಕತ್ವೇನ ನಿಮಿತ್ತಕಾರಣ ಮಾತ್ರತ್ವಂ ನ ಸಂಭವತಿ; ಕುತಃ ಅಸಾಮಂಜಸ್ಯಾತ್, ಪರಮೇಶ್ವರಸ್ಯ ಜಗದುಭಯ ಕಾರಣತ್ವ ವಿಧಾಯಕಾನಾಂ ಯಥೋರ್ಣನಾಭಿಸ್ಸೃಜತೇ ಗೃಹ್ಯತೇ ಚ ಇತ್ಯಾದಿ ವೇದಾಂತಾನಾಂ ಸಮನ್ವಯಾಭಾವಾತ್."** ಯಥೋರ್ಣನಾಭಿಃ ಎಂದು ಪ್ರಾರಂಭವಾಗುವ ಮುಂಡಕ ಮಂತ್ರವು, ಜೇಡರ ಹುಳುವು ತನ್ನಿಂದ ಹೊರಡುವ ನೂಲಿನಿಂದ ಜಾಲವನ್ನು ಕಟ್ಟುವಂತೆ ಪರಶಿವಬ್ರಹ್ಮವು ಜಗತ್ತಿಗೆ ನಿಮಿತ್ತಕಾರಣವೂ ಉಪಾದಾನ ಕಾರಣವೂ ಆಗುವುದೆಂದು ಹೇಳುವುದೆಂಬುದು ಶ್ರೀಕರಭಾಷ್ಯದ ನಿಲುವು. ಶ್ರೀಕಂಠ ಶಿವಾಚಾರ್ಯರಾದರೂ ಶಿವಮಹಾ ಪುರಾಣಾಂತರ್ಗತ ವಾಯವೀಯ ಸಂಹಿತೆಯ ಶ್ಲೋಕಗಳನ್ನು ಉಲ್ಲೇಖಿಸಿ **"ಜಗದುಭಯ ಕಾರಣತ್ವಮಿತ್ಯನವದ್ಯಂ"** ಎಂದು ಹೇಳಿರುವುದಕ್ಕೆ ಶ್ರೀಕರ ಭಾಷ್ಯದ ನಿಲುವು ಅನುಸಾರವಾಗಿದೆ. ಕ್ರಿಯಾಸಾರದಲ್ಲಿಯ ನಿಲುವೂ ಇದೇ ಆಗಿದೆ:

ಸರ್ವಜ್ಞೇ ಸರ್ವಶಕ್ತೌ ಚ ನಿಮಿತ್ತೇ ಜಗತಸ್ತಥಾ |
ಉಪಾದಾನೇ ಚ ವೇದಾಂತವಾಕ್ಯಾನಾಂ ಸಮ್ಯಗನ್ವಯಃ || ೧-೩೬ ||

## ಶ್ರೀಕಂಠ ಶ್ರೀಕರ ಭಾಷ್ಯಗಳಿಗೂ ಕ್ರಿಯಾಸಾರಕ್ಕೂ ಶಿವಮಹಾಪುರಾಣವೇ ಮೂಲ

ಜಗತ್ಕಾರಣದಿಂದ ವಿಷಯಗಳನ್ನು ವಿವರವಾಗಿ ವಿಚಾರಮಾಡುವ ಮೊದಲು ಈ ವಿಷಯಗಳಿಗೆ ಆಧಾರವಾಗಿರುವ ಆಗಮಾಧಾರಗಳ ವಿಷಯದಲ್ಲಿ ಈ ಭಾಷ್ಯಕಾರರ ನಿಲುವೇನು ಎಂಬುದನ್ನು ವಿಚಾರಮಾಡಬೇಕಾಗಿದೆ. **"ವಯಂತು ವೇದ ಶಿವಾಗಮಯೋರ್ಭೇದಂ ನ ಪಶ್ಯಾಮಃ"** ಎಂದು ಶ್ರೀಕಂಠ ಭಾಷ್ಯ (೨-೨-೩೮) ದಲ್ಲಿ ಹೇಳಿರುವುದರಿಂದ ವೇದ ಶಿವಾಗಮಗಳಲ್ಲಿ ಅವರಿಗೆ ಭೇದವು ಕಾಣಿಸದು. **"ಪರಸ್ಪರಾವಿರುದ್ಧಾರ್ಥಾಃ ಶಿವೋಕ್ತಾ ನಿಗಮಾಗಮಃ"** ಎಂದು ಕ್ರಿಯಾಸಾರದಲ್ಲಿ ಇದೇ ರೀತಿಯ ಅರ್ಥ ಬರುವಂತೆ ಹೇಳಿರುತ್ತಾಗಿ ಅದು ಶ್ರೀಕಂಠ ಭಾಷ್ಯದ ಕಾರಿಕೆಯೆಂಬುದನ್ನು ಸ್ಪಷ್ಟಮಾಡಿಕೊಂಡಿದೆ. **ತಸ್ಮಾದ್ ವೇದಾಗಮಾರ್ಥೇಷು ಯಃ ಕುರ್ಯಾದ್ ಭೇದ ಭಾವನಾಂ। ಸ ಸಹಸ್ರಕುಲಂ ಘೋರೇ ನರಕೇ ಪತತಿಧ್ರುವಂ।** ಎಂಬ ಆಧಾರವನ್ನು ಶ್ರೀಪತಿ ಪಂಡಿತರು ಶ್ರೀಕರ ಭಾಷ್ಯದಲ್ಲಿ

(೧-೧-೩) ಕೊಟ್ಟು ವೇದಾಗಮಗಳಲ್ಲಿ ಭೇದಭಾವನೆಯನ್ನು ತೋರಿದವರು ನರಕಕ್ಕೆ ಬೀಳುವರೆಂದು ಹೆದರಿಸಿದ್ದಾರೆ. ಇವರೆಲ್ಲರೂ ವೇದೋಪನಿಷತ್ತುಗಳನ್ನು ಹೇಗೋ ಹಾಗೆಯೇ ಅನೇಕ ಶಿವಾಗಮಗಳನ್ನೂ, ಮುಖ್ಯವಾಗಿ ಶಿವಮಹಾಪುರಾಣವನ್ನೂ ಆಧಾರವಾಗಿ ತೆಗೆದು ಕೊಂಡಿದ್ದಾರೆ. ಪರಶಿವನೇ ತ್ರಿಮೂರ್ತಿಗಳಿಗೆ ಕಾರಣವಾದ ಪರಬ್ರಹ್ಮವೆಂಬುದಕ್ಕೂ, ಆ ಪರಶಿವಬ್ರಹ್ಮದಿಂದಲೇ ಶಕ್ತಿಯು ಉತ್ಪನ್ನವಾಗಿ ಚಿದಚಿತ್ ಪ್ರಪಂಚವಾಗುವುದೆಂಬುದಕ್ಕೂ ಶ್ರೀಕಂಠ ಶ್ರೀಕರ ಭಾಷ್ಯಗಳಿಗೆ ಮತ್ತು ಕ್ರಿಯಾಸಾರಕ್ಕೆ ಆಧಾರವಾದುದು ಶಿವಮಹಾಪುರಾಣ. ಶ್ರೀಕಂಠ ಭಾಷ್ಯದಲ್ಲಿ ಶ್ರೀಕಂಠ ಶಿವಾಚಾರ್ಯರು ಮೇಲೆ ಹೇಳಿದಂತೆ ಪರಶಿವಬ್ರಹ್ಮವು ಜಗದುಭಯ ಕಾರಣವೆನ್ನುವುದಕ್ಕೆ ಶಿವಮಹಾಪುರಾಣದ ವಾಯವೀಯಸಂಹಿತೆಯ ಕೆಳಗಿನ ಶ್ಲೋಕಗಳಲ್ಲಿ ಸ್ವಲ್ಪ ಭಾಗವನ್ನು ಆಧಾರವಾಗಿ ತೆಗೆದುಕೊಂಡಿದ್ದಾರೆ.

ಶಕ್ತಿಃ ಪ್ರಥಮ ಸಂಭೂತಾ ಶಾಂತ್ಯತೀತ ಪದೋತ್ತರಾ
ತತೋ ಮಾಯಾ ತತೋಽವ್ಯಕ್ತಂ ಶಿವಾಚ್ಛಕ್ತಿಮತಃ ಪ್ರಭೋಃ ॥ ೯-೩ ॥
ಶಾಂತ್ಯತೀತಪದಂ ಶಕ್ತೇಸ್ತತಃ ಶಾಂತಿಪದಂ ಕ್ರಮಾತ್ ।
ತತೋ ವಿದ್ಯಾಪದಂ ತಸ್ಮಾತ್ ಪ್ರತಿಷ್ಠಾಪದ ಸಂಭವಃ ॥ ೯-೪ ॥
ನಿವೃತ್ತಿಪದಮುತ್ಪನ್ನಂ ಪ್ರತಿಷ್ಠಾಪದತಃ ಕ್ರಮಾತ್ ।
ಏವಮುಕ್ತಾ ಸಮಾಸೇನ ಸೃಷ್ಟಿರೀಶ್ವರಚೋದಿತಾ ॥ ೯-೫ ॥
ಅನುಲೋಮ್ಯಾತ್ ತಥೈತೇಷಾಂ ಪ್ರಾತಿಲೋಮ್ಯೇನ ಸಂಹೃತಿಃ
ಅಸ್ಮಾತ್ಪಂಚಪದೋದ್ದಿಷ್ಟಾತ್ ಪರಸ್ರಷ್ಟಾ ಸಮಿಷ್ಯತೇ ॥ ೯-೬ ॥

ಶ್ರೀಕಂಠ ಭಾಷ್ಯಕ್ಕೆ ಆಧಾರವಾಗಿ ತೆಗೆದುಕೊಂಡಿರುವ ಶಿವಮಹಾಪುರಾಣದ ಈ ಭಾಗದ ಅರ್ಥಕ್ಕೆ, ವೀರಶೈವ ಯತಿವರೇಣ್ಯ ನಿಜಗುಣ ಶಿವಯೋಗಿಗಳ ಪಾರಮಾರ್ಥಿಕ ಪ್ರಕಾಶಿಕೆಯ ಭಾಗವಿದು ಅನುಸಾರವಾಗಿರುತ್ತದೆ:

> ಶಿವತತ್ವವೇ ಜಗತ್ತಿಗುಪಾದಾನಕಾರಣಮಪ್ಪುದರಿಂದ ಕಾರ್ಯಮಾದ ಸಕಲ ಜಗತ್ತು ಶಿವಾತ್ಮಕಮೆಂಬುದನರುಪಿಸಲೋಸುಗ, ಆ ಶಿವತತ್ವದಿಂದ ಸೃಷ್ಟಿಪ್ರಕಾರಮಂ ಸೂಚನಾಮಾತ್ರದಿಂ ವರ್ಣಿಪೆನದೆಂತೆಂದೊಡೆ- ಘೃತಕಾಠಿಣ್ಯ ನ್ಯಾಯದಿಂದಾಕ್ಷುಬ್ಧ ಭಾಗವಾ ಶಿವತತ್ವದಿಂ ಶಾಂತ್ಯತೀತ ಕಲೆಯೆನಿಪ ಪರಾಶಕ್ತಿ ಪುಟ್ಟುತ್ತಿಹುದು. ಬಳಿಕ ಸೃಷ್ಟಿಕೃತ್ಯಕಾರಣೆಯಾದ ಶಿವಸಮವೇತಕ್ರಿಯಾಶಕ್ತಿಯಿಂ ವಿಕರಿಸುತ್ತ ಅಂಕುರೋತ್ಪತ್ತಿಗೆ ಬೀಜಮುಬ್ಬುವಂತೆ **ಷಡಧ್ವಾತ್ಮಕಜಗತ್ತಿಗೆ** ಬ್ರಹ್ಮಸ್ವರೂಪವಹುದರಿಂ ಬ್ರಹ್ಮವಾಚ್ಯಮಾದ .ಮಹಾಮಾಯಾಸ್ವರೂಪಮಾದ ಶಾಂತ್ಯತೀತೆಯೆನಿಪ ಪರಾಶಕ್ತಿಯೇ ಕೂಡಿ ಕ್ರಮದಿಂ ಶಾಂತಿ, ವಿದ್ಯೆ, ಪ್ರತಿಷ್ಠೆ, ನಿವೃತ್ತಿ, ಪರ್ಯಾಯನಾಮವನ್ನುಳ್ಳ, ಅನಾದಿಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ. ಕ್ರಿಯಾಶಕ್ತಿ ಎಂದೈದುಪ್ರಕಾರಂ ಭಿನ್ನಮಾಗುತ್ತಿಹುದು. ಮೇಲಾಶಾಂತ್ಯತೀತ ಕಲಾದಿ ಪರಿವಿಡಿದು ಆಕಾಶ, ವಾಯು, ಅಗ್ನಿ, ಅಪ್ಪು ಪೃಥಿವಿಗಳೆಂಬ ಪಂಚಮಹಾಭೂತಂಗಳಾಗುತ್ತಿಪ್ಪವು. ಅವರಿಂದಲೇ ದೃಶ್ಯಮಾನವಾದ ಉರ್ವಿ ಪರ್ವತ ಸರಿತ್ಸಮುದ್ರಾದಿಕವು ಸ್ಥೂಲ ಶರೀರಾದಿಕವೆಲ್ಲಂ ಸಂಭವಿಸುತ್ತಿರ್ಕುಂ.

ಹೀಗೆ ಹೇಳಿದ "**ಷಡಧ್ವಾತ್ಮಕ ಜಗತ್ತಿಗೆ**" ಅಧ್ವಪತಿಯಾದ ಪರಶಿವಬ್ರಹ್ಮದ ಶಕ್ತಿಯ ಒಂದಂಶವೇ ಕಾರಣವೆಂದು ಷಡಧ್ವಜ್ಞಾನಿಗಳು ಹೇಳುತ್ತಾರೆಂದು ಹೇಳುವ ಶಿವಮಹಾಪುರಾಣದ ಕೆಳಗಿನ ಶ್ಲೋಕವು ಶ್ರೀಕಂಠ ಭಾಷ್ಯದ ೨-೧-೩೧ ನೆಯ ಸೂತ್ರದ ಭಾಷ್ಯದಲ್ಲಿಯೂ ಅದೇ ಸೂತ್ರದ ಶ್ರೀಕರ ಭಾಷ್ಯದಲ್ಲಿಯೂ ತೆಗೆದುಕೊಳ್ಳಲ್ಪಟ್ಟಿವೆ.

ವಿಶ್ವೋತ್ತರ ವಿಚಿತ್ರಮನೋರಥಸ್ಯ ಯಸ್ಯೈಕ ಶಕ್ತಿಶಕಲೇ ಸಕಲಸ್ಸಮಾಪ್ತಃ।
ಆತ್ಮಾನಮಧ್ವಪತಿ ಮಧ್ವವಿದೋವದಂತಿ ತಸ್ಮೈ ನಮಸ್ಸಕಲಲೋಕವಿಲಕ್ಷಣಾಯ।

ಶಿವಮಹಾಪುರಾಣದ ವಾಯುವೀಯಸಂಹಿತೆಯ ಪೂರ್ವಭಾಗದ ೯ನೆಯ ಅಧ್ಯಾಯದ ಶ್ಲೋಕಗಳಿವೆಲ್ಲವಲ್ಲವೆ ಆ ಪುರಾಣದ ಅನೇಕ ಶ್ಲೋಕಗಳು ಈ ಭಾಷ್ಯಗಳಿಗೂ ಕ್ರಿಯಾಸಾರಕ್ಕೂ ಆಧಾರವಾಗಿರುವುದರಿಂದಲೇ ಇವುಗಳ ಸಿದ್ಧಾಂತದಲ್ಲಿ ಏಕವಾಕ್ಯತೆಯಿರುವುದು ಕಾರಣವಾಗಿರುತ್ತದೆ.

## ಶಕ್ತಿವಿಶಿಷ್ಟಶಿವಾದ್ವೈತದ ನಿಲುವು ಶ್ರೀಕಂಠ ಶ್ರೀಕರಭಾಷ್ಯ ಕ್ರಿಯಾಸಾರಗಳಲ್ಲಿ

ಮೇಲೆ ಹೇಳಿದಂತೆ ಶ್ರೀಕಂಠ ಭಾಷ್ಯಕ್ಕೂ ಶ್ರೀಕರ ಭಾಷ್ಯಕ್ಕೂ ಆಧಾರವಾದ ಶಿವಮಹಾಪುರಾಣದಲ್ಲಿ ಶ್ವೇತಾಶ್ವತರೋಪನಿಷತ್ತಿನ ಅನೇಕ ಮಂತ್ರಗಳು ಉದ್ಧೃತವಾಗಿವೆ. ವೀರಶೈವಸಿದ್ಧಾಂತಕ್ಕೆ ಮುಖ್ಯ ಆಧಾರವಾದ ಈ ಶ್ವೇತಾಶ್ವತರ ಉಪನಿಷತ್ತಿನಲ್ಲಿನ ಯದಾತಮಃ ಎಂಬ ಮಂತ್ರದ ಹಿನ್ನೆಲೆಯು ನಾಸದೀಯ ಸೂಕ್ತದಲ್ಲಿದೆ. ಈ ಮಂತ್ರದ ಆಧಾರದ ಮೇಲೆಯೆ ಶ್ರೀಕಂಠ ಭಾಷ್ಯದಲ್ಲಿ ಶಿಕ್ತಿವಿಶಿಷ್ಟಾದ್ವೈತವಾಗಿ, ಶಿವತತ್ವವು ಜಗದುಭಯಕಾರಣವಾಗುವುದೆಂಬ ಸಿದ್ಧಾಂತವು ರೂಪಿಸಲ್ಪಟ್ಟಿದೆ. 'ಯದಾತಮಃ' ಎಂದೂ 'ಮಾಯಾಂತು ಪ್ರಕೃತಿಂ' ಎಂದೂ ಮೊದಲಾಗುವ ಮಂತ್ರಗಳು ವೀರಶೈವರಿಂದ ವಿಶೇಷವಾಗಿ ಆಧಾರವಾಗಿ ತೆಗೆದುಕೊಳ್ಳುವ ಮಂತ್ರಗಳಾಗಿವೆ. ಈ ಮಂತ್ರಗಳ ಆಧಾರವನ್ನೂ ಶ್ರೀಕಂಠ ಭಾಷ್ಯವು ತೆಗೆದುಕೊಂಡಿದೆ. ಈ ಮಂತ್ರಗಳನ್ನೊಳಗೊಂಡ "ಪರಿಣಾಮಾತ್" ಎಂಬ ಸೂತ್ರದ ಶ್ರೀಕಂಠ ಭಾಷ್ಯವಿದು ಉಲ್ಲೇಖಾರ್ಹವಾಗಿದೆ:

ಯದಾ ತಮಸ್ತನ್ನ ದಿವಾ ನ ರಾತ್ರಿರ್ನಸನ್ನಚಾಸಚ್ಛಿವ ಏವ ಕೇವಲಃ।
ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ॥

ಇತಿ। ಯಸ್ಮಿನ್ಕಾಲೇ ವಿಗತಚಂದ್ರಸೂರ್ಯಾದಿ ತೇಜಸ್ತಯಾ ದಿವಾರಾತ್ರಿವಿಭಾಗಶೂನ್ಯಂ ನಾಮ ರೂಪವಿಶೇಷರಾಹಿತ್ಯೇನ ಸ್ಥೂಲಸೂಕ್ಷ್ಮಚೇತನಾಚೇತನಸದಸದ್ವ್ಯಕ್ತಿವ್ಯವಸ್ಥಾರಹಿತಂ ಸರ್ವಮಿದಂ ತಮೋಭೂತಮವರ್ತತ, ತದಾ ಶಿವ ಏವಾದ್ವಿತೀಯಃ ಕೇವಲಃ ಸ್ವಾವಿಭಾಗಾಪನ್ನಚಿದಚಿಚ್ಛಕ್ತಿಃ ಸ್ವಪ್ರಕಾಶಃ ಪರಿಶಿಷ್ಟೋಽಭೂತ್ . . . ತಸ್ಮಾತ್ ತಾದೃಶಾತ್, ಸ್ವವಿಲೀನಸ್ವೇತರ ನಿಖಿಲ ಚಿದಚಿತ್ ಪ್ರಪಂಚಾತ್, ಅದ್ವಿತೀಯಾ ಪುರಾಣೀ ನಿತ್ಯಸಿದ್ಧಾ ತತ್ಕಾಲತಮೋಽಪನೋದಿನೀ ಮಹಾಸ್ಫುರಣರೂಪಾ ಪರಮಾ ಪ್ರಜ್ಞಾ ಜ್ಞಾನಶಕ್ತಿಃ, ಪ್ರಸೃತಾ ಪ್ರಾವರ್ತತ। ತತಃ 'ಸೋಽಕಾಮಯತ ಬಹು ಸ್ಯಾಂ' ಇತಿ ನಾಮರೂಪಾದಿ ವಿಭಾಗರಹಿತ ಸೂಕ್ಷ್ಮಚಿದಚಿದ್ವಸ್ತು ಶರೀರಕಃ ಕಾರಣಾವಸ್ಥಃ ಪರಮೇಶ್ವರಃ ಸಂವಿಭಕ್ತನಾಮರೂಪಚಿದಚಿದ್ವಸ್ತುಶರೀರಕೋ ಭವೇಯಮಿತಿ ಸಂಕಲ್ಪಮಕರೋತ್। ತತಶ್ಚ 'ಇದಂ ಸರ್ವಮಸೃಜತ ಯದಿದಂ ಕಿಂಚ' ಇತಿ ಸ್ವಶರೀರಭೂತಂ ಸೂಕ್ಷ್ಮಚಿದಚಿದ್ವಸ್ತು ಸ್ವಸ್ಮಾದ್ ವಿಭಜ್ಯ. 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್' ಇತಿ ಸ್ವತೋ ವಿಭಕ್ತೇ ಚಿದಚಿದ್ವಸ್ತುನೀ ಸ್ವಯಮಾತ್ಮತಯಾ ಪ್ರವಿಶ್ಯ 'ಸಚ್ಚತ್ಯಚ್ಚಾಭವತ್' ಇತ್ಯಾದಿನಾ ಸದಸತ್ ಪ್ರಪಂಚರೂಪೇಣ ಬಹುಧಾಪರಿಣತೋಽಭವದಿತಿ ಪುರುಷಸ್ಯ ಬಾಲತ್ವಯುವತ್ವಾದಿವತ್ ಬ್ರಹ್ಮಣೋ ಜಗಚ್ಛರೀರಿಣಃ ಕಾರಣತ್ವಂ ಕಾರ್ಯತ್ವಂ ಚ॥

ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ।
ತಸ್ಯಾವಯವಭೂತೇನ ವ್ಯಾಪ್ತಂ ಸರ್ವಮಿದಂ ಜಗತ್

ಪರಶಿವಬ್ರಹ್ಮದಿಂದ ಚಿದಚಿತ್ ಪ್ರಪಂಚವು ಹೊರಹೊಮ್ಮುವುದರಲ್ಲಿ ನಾಲ್ಕು ಹಂತವಿರುವುದನ್ನು ನೋಡಬಹುದು. ಪರಶಿವಬ್ರಹ್ಮದಲ್ಲಿ ಶಕ್ತಿಯೇ ಹೊರಹೊಮ್ಮದೆ ಸ್ವಪ್ರಕಾಶದಿಂದಿರುವ

ಸ್ಥಿತಿಯು ಹೀಗಿದೆ–"**ಶಿವಏವ, ಅದ್ವಿತೀಯಃ, ಕೇವಲಃ, ಸ್ವಾವಿಭಾಗಾಪನ್ನ ಚಿದಚಿಚ್ಛಕ್ತಿಃ ಸ್ವಪ್ರಕಾಶಃ**" ಈ ಮೊದಲ ಸ್ಥಿತಿಯು ಋಗ್ವೇದದ ನಾಸದೀಯ ಸೂಕ್ತದಲ್ಲಿ "**ಆನೀದವಾತಂ ಸ್ವಧಯಾ ತದೇಕಂ**" ಎಂದು ಹೇಳಿರುವ ಸ್ಥಿತಿಯೇ ಆಗುತ್ತದೆ. ಶಕ್ತಿಯೂ ಹೊರಹೊಮ್ಮ ದಿರುವ ಸ್ವಪ್ರಕಾಶದಿಂದ ಬೆಳಗುವ ಪರಶಿವಬ್ರಹ್ಮದಿಂದ ಶಕ್ತಿಯು ಹೊರಹೊಮ್ಮುವುದು; "**ತಸ್ಮಾತ್ ಪ್ರಜ್ಞಾ ಜ್ಞಾನಶಕ್ತಿಃ ಪ್ರಸೃತಾ ಪ್ರಾವರ್ತತ**" ಎಂದು ಈ ಎರಡನೆಯ ಸ್ಥಿತಿಯ ವಿಷಯವಾಗಿ ಹೇಳಿದೆ. ಇದರಿಂದ ನಾಮರೂಪ ವಿಭಾಗವಾಗದ ಚಿದಚಿತ್‌ಗಳಿಂದ ಪರಶಿವನು ಕೂಡಿದವನಾಗುವನು. "**ತತಃ . . . ನಾಮರೂಪಾದಿ ವಿಭಾಗರಹಿತ ಸೂಕ್ಷ್ಮಚಿದಚಿದ್ ವಸ್ತುಶರೀರಕಃ**" ಎಂದು ಈ ಮೂರನೆಯ ಸ್ಥಿತಿಯ ವಿಷಯವನ್ನು ಭಾಷ್ಯದಲ್ಲಿ ಹೇಳಿದೆ. ನಾಲ್ಕನೆಯ ಸ್ಥಿತಿಯಲ್ಲಿ ವಿಭಾಗಾರ್ಹವಾದ ಚಿದಚಿತ್ ಪ್ರಪಂಚದಿಂದ ಪರಶಿವನು ಕೂಡಿದ ವನಾಗುವನು. ಶರೀರದಲ್ಲಿ ಜೀವವಿರುವಂತೆ ಚಿದಚಿತ್ ಪ್ರಪಂಚದೊಳಗೆ ಪರಶಿವಬ್ರಹ್ಮವು "**ತದೇವಾನು ಪ್ರಾವಿಶತ್**" ಎಂದರೆ ಅನುಪ್ರವೇಶಮಾಡಿ ಆತ್ಮನಾಗಿರುವುದರಿಂದ '**ಚಿದ ಚಿದ್ ವಸ್ತುಶರೀರಕ**' ಎಂದು ಭಾಷ್ಯದಲ್ಲಿ ಹೇಳಿರುವುದರ ಅಭಿಪ್ರಾಯ. ಕೇವಲ ಅದ್ವಯವೂ ಏಕವೂ ಆದ ಪರಶಿವಬ್ರಹ್ಮದಿಂದ ಶಕ್ತಿಯು ಹೊರಹೊಮ್ಮಿ ಶಕ್ತಿಯ ವಿಕಾಸದಿಂದ ಚಿದಚಿತ್ ಪ್ರಪಂಚವಾಗುವುದೆಂಬ ಈ ಸಿದ್ಧಾಂತವು ವೀರಶೈವ ಸಿದ್ಧಾಂತವೇ ಆಗಿದೆ. ಶರೀರ ಶರೀರಿ, ವಿಶಿಷ್ಟಾದ್ವೈತ ಎಂಬ ಪದಗಳ ಉಪಯೋಗದಿಂದ ಇಲ್ಲಿ ದ್ವೈತ ಕಲ್ಪನೆಯ ಸುಳಿವೇ ಇಲ್ಲ. ಶ್ರೀ ರಾಮಾನುಜಾಚಾರ್ಯರು ಚಿದಚಿತ್ತುಗಳ ಮತ್ತು ಪರಮಾತ್ಮನ ಸಂಬಂಧವನ್ನು ಹೇಳುವಾಗ "**ಅತ್ಯಂತ ವಿಲಕ್ಷಣಃ ಪರಮಾತ್ಮಾ**" ಎಂದು ಅವವುಗಳಿಗೆ ಭೇದವನ್ನು ಹೇಳಿ, ತಮ್ಮ ಸಿದ್ಧಾಂತ ವನ್ನು ವಿಶಿಷ್ಟಾದ್ವೈತವೆಂದು ಕರೆದು ಚಿದಚಿತ್ತುಗಳ ಮತ್ತು ಪರಮಾತ್ಮನ ಸಂಬಂಧವನ್ನು ಶರೀರ ಶರೀರಿಭಾವವೆಂದು ಹೇಳಿದ ಮಾತ್ರಕ್ಕೇ ಅದೇ ಪದಗಳನ್ನು ಉಪಯೋಗಿಸುವ ಮೇಲೆ ಹೇಳಿದಂತೆ ಅದ್ವೈತವನ್ನು ಹೇಳುವ ಶ್ರೀಕಂಠರ ಸಿದ್ಧಾಂತವೂ ಶ್ರೀ ರಾಮಾನುಜರ ಸಿದ್ಧಾಂತವೂ ಒಂದೆಯಲ್ಲ; ಅವಕ್ಕೆ ಪೂರ್ವ ಪಶ್ಚಿಮದಷ್ಟು ವ್ಯತ್ಯಾಸವಿದೆ. ಏಕೆಂದರೆ ಅಂತಿಮ ಸ್ಥಿತಿಯಲ್ಲಿ ಒಂದು ಅದ್ವೈತವನ್ನು ಹೇಳಿದರೆ ಇನ್ನೊಂದು ದ್ವೈತವನ್ನು ಹೇಳುತ್ತದೆ. 'ವಿಶಿಷ್ಟಾದ್ವೈತ' ಮತ್ತು 'ಶರೀರ ಶರೀರಿ' ಎಂಬ ಪದಗಳು ಶ್ರೀ ರಾಮಾನುಜರ ಸಿದ್ಧಾಂತದಲ್ಲಿ ಉಪಯೋಗಿ ಸಲ್ಪಟ್ಟು ಆ ಸಿದ್ಧಾಂತವು ಹೆಚ್ಚು ಪ್ರಚುರವಾದ ಮೇಲೆ ಆ ಪದಗಳು ದ್ವೈತದ್ಯೋತಕವೆಂಬ ಭಾವನೆಯು ಬೆಳೆದುದರಿಂದ ಆ ಪದಗಳ ವಿಷಯದಲ್ಲಿ ಅದ್ವೈತವನ್ನು ಹೇಳುವ ವೀರಶೈವರಲ್ಲಿ ವಿರೋಧವುಂಟಾಯಿತು. ಆ ರೀತಿಯಾಗುವ ಮೊದಲು ಈ ಪದಗಳು ಶ್ರೀಕಂಠ ಭಾಷ್ಯದಲ್ಲಿ ಉಪಯೋಗಿಸಲ್ಪಟ್ಟ ಮಾತ್ರಕ್ಕೆ ಆ ಪದಗಳು ರಾಮಾನುಜೀಯ ದ್ವೈತಭಾವನೆಯನ್ನು ಆ ಭಾಷ್ಯದಲ್ಲಿ ಸೂಚಿಸುವುವೆಂದು ಭಾವಿಸುವುದು ಸರಿಯಲ್ಲ. ಆ ಪದಗಳು ಯಾವ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುವೆಂಬುದು ಮೇಲೆ ಹೇಳಿದ ಶ್ರೀಕಂಠ ಭಾಷ್ಯ ಭಾಗದಿಂದಲೇ ಸ್ಪಷ್ಟ ವಾಗುವುದು. ಏಕೆಂದರೆ ಅದರಲ್ಲಿ ಸ್ಪಷ್ಟವಾಗಿ "**ಅದ್ವಿತೀಯಃ ಕೇವಲಃ ಸ್ವಾವಿಭಾಗಾಪನ್ನ ಚಿದಚಿಚ್ಛಕ್ತಿಃ**" ಎಂದು ಪರಶಿವಬ್ರಹ್ಮವು, ಶಕ್ತಿಯು ಸಹಾ ಹೊರಹೊಮ್ಮದ ಅದ್ವಿತೀಯ ಸ್ಥಿತಿಯಲ್ಲಿರುವುದನ್ನು ವರ್ಣಿಸಿದೆ. ಅಲ್ಲದೆ ಶಕ್ತಿಯು ಹೊರಹೊಮ್ಮಿ ಚಿದಚಿತ್ ಪ್ರಪಂಚವಾಗ ವುದರಲ್ಲಿಯೂ ಅಭೇದವೇ ಆಗಿದೆಯೆಂಬ ಭಾವನೆ ಬರುವಂತೆ ಹಾಗೆ ಆಗುವುದನ್ನು ಬಾಲತ್ವ ಯೌವನಾದಿಗಳು ಒಂದೇ ದೇಹಕ್ಕೆ ಆಗುವುದರ ಹೋಲಿಕೆಯನ್ನು, "**ಬಾಲತ್ವ ಯುವತ್ವಾದಿ ವತ್**" ಎಂದು ಹೇಳಿ ಕೊಟ್ಟಿದೆ. ಒಟ್ಟಿನಲ್ಲಿ ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಹೇಳುವಂತೆ

"The world both intelligent and non-intelligent (chit as well achit) is the result of transformation of Chitsakti the Lord's energy which as Intelligence and Bliss is non-different from Himself" ಎಂಬುದು ಶ್ರೀಕಂಠ ಸಿದ್ಧಾಂತ.

ಅನೇಕ ಕಡೆಗಳಲ್ಲಿ ಶ್ರೀಕಂಠ ಭಾಷ್ಯದಲ್ಲಿಯೂ ಶ್ರೀಕರ ಭಾಷ್ಯದಲ್ಲಿಯೂ ಪರಶಿವ ಶಕ್ತಿಯು ಹೊರಹೊಮ್ಮಿ ಸೂಕ್ಷ್ಮ ಚಿದಚಿಚ್ಛಕ್ತಿಯಾಗಿದ್ದುದು ವಿಕಾಸವಾಗಿ ಸ್ಥೂಲ ಚಿದಚಿತ್ ಪ್ರಪಂಚವಾಗುವುದೆಂಬುದನ್ನು ಒಂದೇ ತೆರದ ಮಾತುಗಳಲ್ಲಿ ಒಬ್ಬರೇ ಎರಡು ಭಾಷ್ಯಗಳನ್ನೂ ಬರೆದಂತೆ ಬರೆದಿರುವುದು ಕಂಡುಬರುವುದು.

"ಅಯಮಭಿಪ್ರಾಯಃ – ಪೂರ್ವಂ ಸ್ವಾಭಿನ್ನನಾಮರೂಪ ವಿಭಾಗಾನರ್ಹಸೂಕ್ಷ್ಮ ಚಿದಚಿದ್‌ರೂಪ ಪರಶಕ್ತಿಗರ್ಭಿತೋ ಹಿ ಶಿವಃ ಕೇವಲೋಭವತಿ| ಪುನಃಸ್ವಾತ್ಮಿಕಾಂ ತಾದೃಶೀಂ ಶಕ್ತಿಂ ಪೂರ್ವದಶಾ ವಿರೋಧಿ ಸ್ಥೂಲತ್ವಯುಕ್ತನಾಮರೂಪ ವಿಭಾಗಾರ್ಹ ಚಿದಚಿದ್ ರೂಪಾಂ ಬಹಿರ್ವಿಸ್ತಾರಯತಿ| ತತ್ರ ಶಕ್ತಿಮತಃ ಶಿವಸ್ಯ ಸಂಕೋಚಾವಸ್ಥಾ ಪ್ರಲಯಃ ವಿಕಾಸಾವಸ್ಥಾ ಸೃಷ್ಟಿರಿತಿ" — **ಶ್ರೀಕಂಠ ಭಾಷ್ಯದಲ್ಲಿ ೨-೧-೧೭ ನೆಯ ಸೂತ್ರದ ಭಾಷ್ಯ.**

ಯಥೋರ್ಣನಾಭಿರ್ಜಂತುಃ ಸ್ವಕಾರ್ಯಂ ತಂತುಚಕ್ರಂ ಕಾರಣಾವಸ್ಥಾಯಾಂ ನಾಮರೂಪ ವಿಭಾಗಾನರ್ಹ ಸೂಕ್ಷ್ಮರೂಪೇಣ ಸ್ವಸ್ಮಿನ್ನಿಧಾಯ ಕಾರ್ಯಾವಸ್ಥಾಯಾಂ ನಾಮರೂಪವಿಭಾಗಾರ್ಹಸ್ಥೂಲರೂಪೇಣ ಪ್ರಕಟೀಕರೋತಿ, ತಥಾ ಪರಮೇಶ್ವರಶ್ಚಿದಚಿದಾತ್ಮಕಂ ಪ್ರಪಂಚಂ ಪ್ರಲಯಾವಸ್ಥಾಯಾಂ ಸೂಕ್ಷ್ಮರೂಪೇಣ ಸ್ವಸ್ಮಿನ್ ಸಂಸ್ಥಾಪ್ಯ, ಸೃಷ್ಟಿಕಾಲೇ ಸ್ಥೂಲಾತ್ಮಕತ್ವೇನ ಪ್ರಕಾಶಯತಿ — **ಶ್ರೀಕರ ಭಾಷ್ಯದಲ್ಲಿ ೨-೧-೧೪ ನೆಯ ಸೂತ್ರದ ಭಾಷ್ಯ.**

ಹೀಗೆ ಪ್ರಲಯದಲ್ಲಿ ಅವಿಭಾಗಾರ್ಹವಾಗಿ ಸೂಕ್ಷ್ಮರೂಪದಲ್ಲಿದ್ದ ಚಿದಚಿಚ್ಛಕ್ತಿರೂಪವಾಗುವುದನ್ನು ಒಂದೇ ರೀತಿಯಲ್ಲಿ ಒಂದೇ ತೆರದ ಮಾತಿನಲ್ಲಿ ಎರಡು ಭಾಷ್ಯಗಳಲ್ಲಿಯೂ ಹೇಳಿರುವುದಲ್ಲದೆ ಒಂದೇ ತರದ ಉದಾಹರಣೆಗಳನ್ನು ಕೊಟ್ಟಿರುವುದು ಕಂಡುಬರುವುದು. ಸೃಷ್ಟಿ ವಿಕಾಸವನ್ನು ಬಾಲತ್ವ ಯುವತ್ವಾದಿಗಳಿಗೆ ಶ್ರೀಕಂಠ ಶಿವಾಚಾರ್ಯರು ಹೋಲಿಸಿರುವುದನ್ನು ಮೇಲೆ ಹೇಳಲಾಯಿತಷ್ಟೆ. ಅದೇ ಉದಾಹರಣೆಯನ್ನು ಕೊಟ್ಟಿರುವ ಶ್ರೀಕರ ಭಾಷ್ಯದ ಭಾಗವಿದು :

ಏಕಸ್ಯೈವ ಶರೀರಸ್ಯ ಬಾಲತ್ವಯುವತ್ವ ಸ್ಥವಿರತ್ವವತ್ ಪ್ರಪಂಚಸ್ಯ ಸೂಕ್ಷ್ಮತ್ವ ಸ್ಥೂಲತ್ವ ವ್ಯವಸ್ಥಾ ಕಾಲಭೇದೇನ ನಿರ್ದಿಷ್ಟಾ. ಅತೋಽಸಚ್ಛಬ್ದಸ್ಯ ಸೂಕ್ಷ್ಮಾತ್ಮಕತ್ವಂ ತದ್ಭಿನ್ನಸತ್ವಸ್ಯ ಸ್ಥೂಲಾತ್ಮಕತ್ವಮಿತಿ ನಿರ್ದಿಷ್ಟಂ. — **೨-೧-೧ ರ ಭಾಷ್ಯ.**

ಇಬ್ಬರೂ ಕೊಟ್ಟಿರುವ ಇನ್ನೊಂದು ಉದಾಹರಣೆ ಗೂಡಾರದ ಬಟ್ಟೆಯದು. ಸಂಕುಚಿತಾವಸ್ಥೆಯಲ್ಲಿನ ಬಟ್ಟೆಯು ಬಿಚ್ಚಿದಾಗ ಗುಡಾರವಾಗುವುದನ್ನು, ಸೃಷ್ಟಿಗೆ ಮೊದಲಿನ ಸ್ಥಿತಿಯು ಸೃಷ್ಟಿಯಾದ ಮೇಲಾಗುವ ಸ್ಥಿತಿಗೆ ಹೋಲಿಸಿದೆ. ಆ ಭಾಗಗಳಿವು :

ಯಥಾಸಂಕುಚಿತಃ ಸೂಕ್ಷ್ಮರೂಪಃ ಪಟಃ ಪ್ರಸಾರಿತೋ ಮಹಾಪಟಃ ಕುಟೀರೂಪೇಣ ಕಾರ್ಯಂ ಭವತಿ, ತಥಾ ಬ್ರಹ್ಮಾಪಿ ಸಂಕುಚಿತರೂಪಂ ಕಾರಣಂ ಪ್ರಸಾರಿತರೂಪಂ ಕಾರ್ಯಂ ಭವತಿ. **—ಶ್ರೀಕಂಠ ಭಾಷ್ಯದ ಸೂತ್ರ ೨-೧-೧೯ ರ ಭಾಷ್ಯಭಾಗ.**

ಯಥಾ ಪಟಸ್ಯ ಕದಾಚಿತ್ ಸಂಕುಚಿತಾವಸ್ಥಾ ಕದಾಚಿದ್ ವಿಕಾಸಾವಸ್ಥಾ ಚ ವಿಲಕ್ಷಣಪ್ರತೀತಿ ವಿಷಯತ್ವೇನ ದೃಶ್ಯತೇ, ತದ್ವತ್ ಪರಮಶಿವಶಕ್ತಿ ಸಂಕುಚಿತಾವಸ್ಥಾ ಕಾರಣಂ, ಶಕ್ತಿಪ್ರಸಾರಿತಾವಸ್ಥಾ ಕಾರ್ಯಂ. — ೨-೧-೧೯ ನೆ ಸೂತ್ರದ ಶ್ರೀಕರ ಭಾಷ್ಯಭಾಗ.

ಕಾರ್ಯಕಾರಣಗಳಿಗೆ ಅಭೇದವನ್ನು ಹೇಳುವುದಕ್ಕೆ–ವಾಯುವು ಪ್ರಾಣಾದಿರೂಪಗಳನ್ನು ಪಡೆಯುವ, ಮಣ್ಣು ಮಡಕೆಯಾಗುವ ಉದಾಹರಣೆಗಳನ್ನು ಇಬ್ಬರೂ ಕೊಟ್ಟಿದ್ದಾರೆ. ಚೇತನ ದಿಂದ ಅಚೇತನವು ಹುಟ್ಟುವುದಕ್ಕೆ ಇಬ್ಬರೂ ನಖಗಳ ಉತ್ಪತ್ತಿಯ ಉದಾಹರಣೆಯನ್ನು ಕೊಟ್ಟಿದ್ದಾರೆ. ಒಟ್ಟಿನಲ್ಲಿ ಪರಶಿವ ಶಕ್ತಿಯ ವಿಕಾಸಾವಸ್ಥೆಯೇ ಸೃಷ್ಟಿ, ಅದರ ಸಂಕುಚಿತಾ ವಸ್ಥೆಯೇ ಪ್ರಲಯವೆಂಬುದು ಇಬ್ಬರಿಗೂ ಒಮ್ಮತವಾದ ಸಿದ್ಧಾಂತ.

ಶ್ರೀಕಂಠ ಶಿವಾಚಾರ್ಯರು ಉಪಯೋಗಿಸಿರುವ ವಿಶಿಷ್ಟಾದ್ವೈತ ಪದವಾದರೂ ವೀರಶೈವರಿಂದ ಮಾನ್ಯವಾಗಿಲ್ಲವೆಂದಲ್ಲ. ಕ್ರಿಯಾಸಾರದಲ್ಲಿ **'ವಿಶಿಷ್ಟಾದ್ವೈತಸಿದ್ಧಾಂತ ಪ್ರತಿಪಾದನಮುತ್ತಮಂ'** ಎಂದು ಹೇಳಿದೆ. ವೀರಶೈವಾನಂದ ಚಂದ್ರಿಕೆಯಲ್ಲಿ **'ಶಕ್ತಿವಿಶಿಷ್ಟ ಶಿವಾದ್ವೈತಸ್ಯಸ ಕಲದ್ವೈತವಿಲಕ್ಷಣತ್ವೇನ ಸಾಧನೀಯತಯಾ'** ಎಂದೂ **'ವಿಶಿಷ್ಟಾ ದ್ವೈತಜ್ಞಾನ ಪ್ರದಾತೃತ್ವೇನ ಸರ್ವಾಭ್ಯರ್ಹಿತತಯಾ'** ಎಂದೂ ಹೇಳಿದೆ. ವಿಶಿಷ್ಟಾದ್ವೈತ ಪದಪ್ರಯೋಗದಿಂದ ದ್ವೈತಕಲ್ಪನೆಯಾಗದೆ ಅದ್ವೈತಭಾವನೆಯುಳಿಯುವುದಾದರೆ ಆ ಪದ ಪ್ರಯೋಗದಿಂದ ಹಾನಿಯಾಗದೆಂದು ಭಾವ. ಒಟ್ಟಿನಲ್ಲಿ ಯಾವ ಪದಗಳೇ ಪ್ರಯೋಗವಾಗಿರಲಿ, ಶ್ರೀಕಂಠ ಭಾಷ್ಯದ ಸಿದ್ಧಾಂತವೂ ಶ್ರೀಕರ ಭಾಷ್ಯದ ಸಿದ್ಧಾಂತವೂ ಒಂದೆ. ಪರಶಿವಬ್ರಹ್ಮದಿಂದ ಅದ್ವಿತೀಯವಾಗಿ ಅದರಲ್ಲಿ ಹುದುಗಿದ್ದ ಶಕ್ತಿಯು ಹೊರಹೊಮ್ಮಿ ಸೂಕ್ಷ್ಮಚಿದಚಿತ್ತಾಗಿದ್ದುದು ಸ್ಥೂಲಚಿದಚಿತ್ತಾಗಿ ಚರಾಚರ ಪ್ರಪಂಚವಾಗುವುದು. ಹೀಗೆ ಪರಶಿವಬ್ರಹ್ಮವು ಜಗತ್ತಿಗೆ ನಿಮಿತ್ತಕಾರಣವಲ್ಲದೆ ಉಪಾದಾನ ಕಾರಣವೂ ಅಹುದು. ಶ್ರೀಕಂಠ ಭಾಷ್ಯದ ಕಾರಿಕೆಯೇ ಆದ ಕ್ರಿಯಾಸಾರದ ನಿಲುವಾದರೂ ಇದೇ. ಅದರಲ್ಲಿ ಹೇಳಿದಂತೆ:

> ಸರ್ವಜ್ಞೇ ಸರ್ವಶಕ್ತೌ ಚ ನಿಮಿತ್ತೇ ಜಗತಸ್ತಥಾ
> ಉಪಾದಾನೇ ಚ ವೇದಾಂತವಾಕ್ಯಾನಾಂ ಸಮ್ಯಗನ್ವಯಃ

## ಮೋಕ್ಷಸ್ವರೂಪ

ಶ್ರೀಕಂಠ ಶ್ರೀಕರ ಭಾಷ್ಯಗಳೂ, ಕ್ರಿಯಾಸಾರವೂ ಒಂದೇ ಸಿದ್ಧಾಂತವನ್ನು ಪ್ರತಿ ಪಾದಿಸುತ್ತವೆಯೆ ಎಂದು ವಿಚಾರಮಾಡುವಾಗ ಪರೀಕ್ಷಿಸಬೇಕಾದ ಮೂರನೆಯ ವಿಷಯವು ಅವುಗಳ ಸಿದ್ಧಾಂತದಂತೆ ಮೋಕ್ಷಸ್ವರೂಪವೇನೆಂಬುದು. ಇವುಗಳೆಲ್ಲದರ ಪ್ರಕಾರವೂ ಜೀವನು ಶಿವಸ್ವರೂಪವನ್ನು ಪಡೆದು, ಜಗತ್‌ಸೃಷ್ಟ್ಯಾದಿ ಕಾರ್ಯಗಳಲ್ಲಿ ಹೊರತು ಉಳಿದ ಭೋಗಾದಿ ಗಳಲ್ಲಿ ಶಿವಸಮಾನತೆಯನ್ನು ಪಡೆವುದೇ ಮೋಕ್ಷ. "**ಅಥಾತೋ ಬ್ರಹ್ಮಜಿಜ್ಞಾಸಾ**" ಎಂಬ ಸೂತ್ರದ ಶ್ರೀಕಂಠ ಭಾಷ್ಯದಲ್ಲಿ "**ನಿಖಿಲಜ್ಞಾನಾನಂದಸ್ವರೂಪಾತತ್ಸಮಾನಗುಣಸಾರಾ ಕೈವಲ್ಯಲಕ್ಷ್ಮೀಃ ಪ್ರಯೋಜನಂ ಚ ಭವತಿ**" ಎಂದು ಹೇಳಿರುವುದಕ್ಕೆ ಅನುಸಾರವಾಗಿಯೇ ಶ್ರೀಕರ ಭಾಷ್ಯದಲ್ಲಿ **ಮುಕ್ತೋಪಸೃಪ್ಯವ್ಯಪದೇಶಾತ್ (೧-೩-೨)** ಎಂಬ ಸೂತ್ರದ ಭಾಷ್ಯದಲ್ಲಿ "**ನಿರತಿಶಯಾನಂದಸ್ವರೂಪಾ ತತ್ಸಮಾನಗುಣಸಾರಾ ಕೈವಲ್ಯಲಕ್ಷ್ಮೀಪ್ರಾಪ್ತಿರೂಪ ಮುಕ್ತಿಃ**" ಎಂದು ಹೇಳಿರುವುದರಲ್ಲಿ ಶಬ್ದಸಾಮ್ಯಸಹಾ ಇದೆ. ಶ್ರೀಕರ ಭಾಷ್ಯದ ಅದೇ ಸೂತ್ರದ ಭಾಷ್ಯದಲ್ಲಿ "**ಪರಮಂ ಸಾಮ್ಯಮುಪೈತಿ ಇತ್ಯತ್ರಪರಮಶಿವೋಪಾಸಕಾನಾಂ ಶಿವ ಸಾರೂಪ್ಯಮುಪದಿಶ್ಯ**" ಎಂದು ಮೊದಲಾಗಿ ಹೇಳಿರುವುದರಲ್ಲಿ ಮೋಕ್ಷದಲ್ಲಿ ಸಾರೂಪ್ಯವೇ ಅಭಿಪ್ರಾಯವೆಂಬುದು ಸ್ಪಷ್ಟ. ಈ ನಿಲುವು ಹೆಚ್ಚು ಸ್ಪಷ್ಟವಾಗುವುದು "**ಭೋಗಮಾತ್ರ ಸಾಮ್ಯಲಿಂಗಾಚ್ಚ (೪-೪-೪೧)**" ಎಂಬ ಸೂತ್ರದ ಭಾಷ್ಯಗಳಲ್ಲಿ. ಈ ಸೂತ್ರದ ಶ್ರೀಕಂಠ

ಭಾಷ್ಯದಲ್ಲಿ "**ಮುಕ್ತಸ್ಯಬ್ರಹ್ಮಣಾ ಸಾಮ್ಯಂ ಸಕಲಕಾಮಭೋಗಮಾತ್ರಾದೇವ, ನ ಜಗತ್‌ಸೃಷ್ಟ್ಯಾದಿನಾ**" ಎಂದು ಹೇಳಿ ಮುಂದಿನ ಸೂತ್ರದ ಭಾಷ್ಯದಲ್ಲಿ "**ಉಕ್ತಂ ಬ್ರಹ್ಮಣಾ ಸಾದೃಶ್ಯಂ ಸಾಯುಜ್ಯಂ ಮುಕ್ತಾನಾಂ ಭೋಗಾದಿ ಸಾಧರ್ಮ್ಯಾತ್**" ಎಂದು ಹೇಳಿದೆ. ಇದರಂತೆ, ಸಾಯುಜ್ಯವೆಂಬ ಮೋಕ್ಷದಲ್ಲಿ, ಸೃಷ್ಟ್ಯಾದಿ ಕಾರ್ಯಗಳಲ್ಲಿ ಹೊರತು ಉಳಿದ ಭೋಗ ಗಳಲ್ಲಿ ಮಾತ್ರ ಶಿವಸಾಮ್ಯವೆಂಬುದು ಸ್ಪಷ್ಟಮಾಡಲ್ಪಟ್ಟಿದೆ. ೪-೪-೨೧ ನೆಯ ಸೂತ್ರದ ಶ್ರೀಕರ ಭಾಷ್ಯದಲ್ಲಿ "**ಭೋಗಮಾತ್ರೇ ಮುಕ್ತಸ್ಯ ಬ್ರಹ್ಮಸಾಮ್ಯ ಪ್ರತಿಪಾದನಾತ್**" ಎಂದು ಪ್ರಾರಂಭದಲ್ಲಿ ಹೇಳಿ, ಅನಂತರ '**ಮುಕ್ತಜೀವಾನಾಂ ಜಗತ್ಕಾರಣತ್ವಂ . . . ನ ಸಂಭವತಿ**' ಎಂದು ಸ್ಪಷ್ಟಮಾಡಿರುವುದೂ, ಕ್ರಿಯಾಸಾರದಲ್ಲಿ ಈ ಸೂತ್ರವಿಷಯವಾಗಿ "**ನ ಜಗದ್ ವ್ಯಾಪೃತೌ ತು ಭೋಗಮಾತ್ರೇ ತು ಕೇವಲಂ**" ಎಂದು ಹೇಳಿರುವುದೂ ಶ್ರೀಕಂಠ ಭಾಷ್ಯಾನು ಸಾರವಾಗಿದೆ. "**ಜಗದ್ವ್ಯಾಪಾರವರ್ಜಂ**" ಎಂದು ಮೊದಲಾಗುವ ಸೂತ್ರದ (೪-೪-೧೭) ಎರಡು ಭಾಷ್ಯಗಳ ನಿಲುವಿನ ಸಾಮ್ಯವು ಪದಶಃ ಒಂದೆಯೆಂಬುದು ಮತ್ತಷ್ಟು ದೃಢವಾಗುತ್ತದೆ. ಈ ಸೂತ್ರದ ಶ್ರೀಕಂಠ ಭಾಷ್ಯದಲ್ಲಿ ಹೀಗೆ ಹೇಳಿದೆ-"**ಯತೋವಾ ಇಮಾನಿ ಭೂತಾನಿ ಜಾಯಂತೇ, ದ್ಯಾವಾ ಪೃಥಿವೀ ಜನಯನ್ ದೇವ ಏಕಃ ಇತ್ಯಾದಿಷು ಶ್ರುತಂ ಜಗತ್ ಸೃಷ್ಟ್ಯಾದಿಕಂ ಪರಮೇಶ್ವರಸ್ಯ ಪ್ರಕರಣಾದವಗಮ್ಯತೇ; ಸೃಷ್ಟ್ಯಾದಿ ಪ್ರಕರಣೇಷ್ವ ಸನ್ನಿಹಿತ ಏವ ಜೀವಃ**" ಇದಕ್ಕೆ ಅನುಸಾರವಾಗಿಯೇ ಈ ಸೂತ್ರದ ಶ್ರೀಕರ ಭಾಷ್ಯದಲ್ಲಿ ಹೇಳಿರುವುದು-"**ಯತೋವಾ ಇಮಾನಿ ಭೂತಾನಿ ಜಾಯಂತೇ, ದ್ಯಾವಾ ಪೃಥಿವೀದೇವ ಏಕಃ....ಇತ್ಯಾದಿ ಶ್ರುತಿನಿರ್ದಿಷ್ಟ ಜಗಜ್ಜನ್ಮಾದಿ ಕಾರಣತ್ವಂ ಮುಕ್ತಾನಾಂ ಸಾಧಾರಣತ್ವೇ ಬ್ರಹ್ಮಲಕ್ಷಣಂ ನ ಸಂಗಚ್ಛತೇ**"-ಶ್ರೀಯುತ ಹಯವದನರಾಯರು ಶ್ರೀಕರ ಭಾಷ್ಯದ ಉಪೋದ್ಘಾತದಲ್ಲಿ Sripati speaks of Sarupya form of Brahman . . . and describes mukti in these words-**ನಿರತಿಶಯ ಸ್ವರೂಪಾನಂದ ಸಾಕ್ಷಿ ಸ್ವಪ್ರಕಾಶ ಶಿವರೂಪ ಪರಾಹಂಭಾವಾಪತ್ತಿಃ ಮುಕ್ತಿಃ**" ಎಂದು ಹೇಳಿದ್ದಾರೆ. ೪-೧-೩ ನೆಯ ಸೂತ್ರದ ಶ್ರೀಕಂಠ ಭಾಷ್ಯದಲ್ಲಿಯಾದರೂ ಹೀಗೆಯೇ ಹೇಳಿದೆ-"**ನಿರತಿಶಯ ಸ್ವರೂಪಾನಂದ ಸಾಕ್ಷಿಸ್ವಪ್ರಕಾಶ ಶಿವರೂಪ ಪರಾಹಂ ಭಾವಾಪತ್ತಿಃ ಮುಕ್ತಿಃ**" ಹೀಗೆ ಶ್ರೀಕಂಠ ಭಾಷ್ಯದಲ್ಲಿ ಹೇಳಿರುವುದಕ್ಕೆ ಅನುಸಾರವಾಗಿಯೇ ಶ್ರೀಕರ ಭಾಷ್ಯದಲ್ಲಿಯೂ ಕ್ರಿಯಾ ಸಾರದಲ್ಲಿಯೂ ಮೋಕ್ಷಸ್ವರೂಪವನ್ನು ಹೇಳಿದೆ.

## ಶ್ರೀಕಂಠ ಶಿವಾಚಾರ್ಯರು ಲಿಂಗಧಾರಿ ವೀರಶೈವ ಆರಾಧ್ಯಬ್ರಾಹ್ಮಣರು

ಶ್ರೀಕರ ಭಾಷ್ಯವೂ ಕ್ರಿಯಾಸಾರವೂ ಶ್ರೀಕಂಠ ಭಾಷ್ಯಕ್ಕೆ ಅನುಸಾರವಾಗಿವೆ ಎಂಬುದನ್ನು ವಿಮರ್ಶಿಸಲು ಅವಶ್ಯಕವಾದುದು ಮೋಕ್ಷಕ್ಕೆ ಅಧಿಕಾರಿ ಯಾರು ಎಂಬ ನಾಲ್ಕನೆಯ ವಿಷಯ. ಇದನ್ನು ನಿರ್ಧರಿಸುವಾಗ, ಶ್ರೀಕಂಠ ಶಿವಾಚಾರ್ಯರ ಕಾಲದಲ್ಲಿ ವರ್ಣಾಶ್ರಮ ತಾರತಮ್ಯವನ್ನು ವಿರೋಧಿಸುವ ಕ್ರಾಂತಿಯು ಇನ್ನೂ ನಡೆದಿರಲಿಲ್ಲವೆಂಬುದನ್ನೂ ಅವರ ಕಾಲದಲ್ಲಿ ಸ್ತ್ರೀ ಶೂದ್ರರು ದ್ವಿಜರಂತೆ ಬ್ರಹ್ಮೋಪಾಸನೆಯಿಂದ ಮೋಕ್ಷವನ್ನು ಪಡೆಯಲು ಅರ್ಹರಲ್ಲವೆಂಬುದು ಸಿದ್ಧಾಂತವಾಗಿತ್ತೆಂಬುದನ್ನೂ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ವೀರಶೈವ ದಲ್ಲಿ ಮೇಲೆ ಹೇಳಿದ ಕ್ರಾಂತಿ ನಡೆದಮೇಲೂ ಆ ಕ್ರಾಂತಿಯನ್ನೊಪ್ಪದ ವೀರಶೈವ ಆರಾಧ್ಯ ಬ್ರಾಹ್ಮಣರು ಉಳಿದುಬಂದಿರುವರೆಂಬುದನ್ನೂ ಮರೆಯಲಾಗದು. ವೀರಶೈವದ ವಿಷಯ

ದಲ್ಲಿ ಮೈಸೂರು ಗೆಜಿಟೀಯರ್ ಎರಡನೆ ಭಾಗದಲ್ಲಿ ಹೇಳಿದಂತೆ "They belong chiefly to the trading classes, though a numerically small number of them calling themselves Aradhyas are members of the Brahmin community." ಶ್ರೀಕಂಠ ಶಿವಾಚಾರ್ಯರಂತೆಯೇ ಶ್ರೀಕರ ಭಾಷ್ಯವನ್ನು ಬರೆದ ಶ್ರೀಪತಿ ಪಂಡಿತರೂ ಕ್ರಿಯಾಸಾರವನ್ನು ಬರೆದ ನೀಲಕಂಠರೂ ವೀರಶೈವ ರಲ್ಲಿ ಲಿಂಗಯಜ್ಞೋಪವೀತಗಳೆರಡನ್ನೂ ಧರಿಸುವ ಆರಾಧ್ಯ ಬ್ರಾಹ್ಮಣರು. ಆದುದರಿಂದಲೇ ಶ್ರೀಕರ ಭಾಷ್ಯದ ಪ್ರಾರಂಭದಲ್ಲಿಯೇ "**ಗರ್ಭಾಷ್ಟಮವರ್ಷಪ್ರಯುಕ್ತೋಪನಯನ ಸಂಸ್ಕಾರಸಿದ್ಧ... ಶ್ರೋತ್ರಿಯಸ್ಯೈವ... ಧರ್ಮಜಿಜ್ಞಾಸಾದರ್ಶನೇ ಸ್ವಭಾವ ನಿಯಮ ನಿಯತಪ್ರಯೋಜಕತಯಾ ಯತ್ಪೂರ್ವಭಾವಿತ್ವಂ ವಿಧೀಯತೇ**" ಎಂದೂ, ಕ್ರಿಯಾ ಸಾರದಲ್ಲಿ '**ಕೃತೋಪನಯನಸ್ಯಾಶು ವೇದಾಂತೇಷು ಪ್ರವೇಶನಾತ್**' ಎಂದು ಮೊದಲಾಗಿ ಹೇಳಿ ಉಪನಯನದ ಅವಶ್ಯಕತೆಯನ್ನು ಹೇಳಿದೆ. ಯಜ್ಞೋಪವೀತಧಾರಣೆಯು ವೇದೋಕ್ತ ವಲ್ಲವಾದರೂ ಅದು ಆಚರಣೀಯವೆ. '**ವೇದೋಕ್ತತ್ವಾಭಾವೇಽಪಿ ಯಜ್ಞೋಪವೀತ ವದಾಚರಣೀಯಂ**' ಎಂದು ಶ್ರೀಕರ ಭಾಷ್ಯದ ೨-೨-೪೨ನೆಯ ಸೂತ್ರದ ಭಾಷ್ಯದಲ್ಲಿ ಉಪಮಾನ ಕೊಡುವಾಗ, ಯಜ್ಞೋಪವೀತಧಾರಣೆಗೆ ಸ್ಮೃತ್ಯಾಧಾರವಿರುವುದರಿಂದಲೂ ವೇದ ವಿರೋಧವಲ್ಲದುದರಿಂದಲೂ ಆ ಆಚರಣೆಯು ಸರಿಯೆಂದು ಶ್ರೀಪತಿ ಪಂಡಿತಾರಾಧ್ಯರು ಸಮರ್ಥಿ ಸಿದ್ದಾರೆ. ಇವರು ಶ್ರೀಕಂಠ ಶಿವಾಚಾರ್ಯರನ್ನು ಶ್ರೀಕಂಠ ಶಿವಾರಾಧ್ಯರೆಂದು ಕರೆದು ಶ್ರೀಯುತ ಹಯವದನರಾಯರು ಹೇಳುವಂತೆ, ಅವರು ತಮ್ಮಂತೆ ಆರಾಧ್ಯಬ್ರಾಹ್ಮಣ ರೆಂಬುದನ್ನು ಹೇಳಿದ್ದಾರೆ ಎಂಬುದನ್ನು ಹಿಂದೆಯೇ ಹೇಳಲಾಗಿದೆ. ಶ್ರೀಕಂಠ ಶಿವಾಚಾರ್ಯರು '**ಶುಗಸ್ಯ**' ಎಂದು ಮೊದಲಾಗುವ ಸೂತ್ರವಿಷಯದಲ್ಲಿ '**ಶೂದ್ರಸ್ಯ ಬ್ರಹ್ಮೋಪಾಸನಂ ನಾಸ್ತಿ**' ಎಂದು ಹೇಳಿರುವಂತೆಯೇ, ಆ ಸೂತ್ರದ ಶ್ರೀಕರ ಭಾಷ್ಯದಲ್ಲಿ '**ನ ಶೂದ್ರಸ್ಯ ಬ್ರಹ್ಮ ವಿದ್ಯಾಧಿಕಾರಃ**' ಎಂದೂ, ಕ್ರಿಯಾಸಾರದಲ್ಲಿ '**ಶೂದ್ರಾದೀನಾಂ ನಾಧಿಕಾರ ಇತಿ ಸಮ್ಯಕ್ ಸುನಿಶ್ಚಿತಃ**' ಎಂದೂ ಹೇಳಿದೆ. ದ್ವಿಜರಲ್ಲವಾಗಿ ಶೂದ್ರರಿಗೆ ಮೋಕ್ಷವನ್ನು ಕೊಡುವ ಬ್ರಹ್ಮ ವಿದ್ಯೆಗೆ ಅಧಿಕಾರವಿಲ್ಲವೆಂಬುದು ಇವರೆಲ್ಲರಿಗೂ ಒಮ್ಮತವೆ.

ಶ್ರೀಕಂಠ ಶಿವಾಚಾರ್ಯರು ಲಿಂಗಧಾರಿಗಳೆ ಎಂಬುದು ಐದನೆಯ ಪ್ರಶ್ನೆಗೆ ಸೇರಿದುದು. ಮೋಕ್ಷಸಾಧನ ಮಾರ್ಗವೇನೆಂಬುದನ್ನು '**ಮೌನವದಿತರೇಷಾಮುಪ್ಯುಪದೇಶಾತ್**' ಎಂಬ ಸೂತ್ರದ ಅವರ ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ–"**ಪಾಶುಪತವ್ರತಮಥರ್ವ ಶಿರಸಿ ಶ್ರುತಂ ಪುರಾಣೇಷು ಚ ಪ್ರಸಿದ್ಧಮೇವ। ತನ್ನಿಷ್ಠಾನಾಂ ವಿದ್ಯಾಪ್ರಾಪ್ತಿರ್ಮುಕ್ತಿಶ್ಚ ಸಂಭವತಿ ನವೇತಿ ಸಂಶಯಃ**" ಅಥರ್ವ ಶಿರಸ್ಸಿನಲ್ಲಿಯೂ ಪುರಾಣವಲ್ಲಿಯೂ ಹೇಳಿರುವ ಪಾಶುಪತವ್ರತದಲ್ಲಿ ನಿಷ್ಠೆಯುಳ್ಳವರಿಗೆ ಮೋಕ್ಷವಾಗುವುದೆಂಬುದು ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತ. ಶ್ರೀಕೃಷ್ಣನು ಪುತ್ರಾರ್ಥಿಯಾಗಿ ಪಾಶುಪತವ್ರತವನ್ನಾಚರಿಸಿದುದರಿಂದ ಇಹಲೋಕ ಭೋಗಪ್ರಾಪ್ತಿಗೆ ಈ ವ್ರತವು ಸರಿಯೇ ಹೊರತು ಮೋಕ್ಷವನ್ನು ಪಡೆಯಲು ಅಲ್ಲ ಎಂಬ ಸಂಶಯವನ್ನು ಹಾಕಿಕೊಂಡು ಅದನ್ನು ಪರಿಹರಿಸಲು, ಶ್ರೀಕಂಠ ಶಿವಾಚಾರ್ಯರು ಹೀಗೆ ಹೇಳಿರುವರು–"'**ಯಾವಚ್ಛರೀರಪಾತಂ ವಾ ದ್ವಾದಶಾಬ್ದ ಮಥಾಪಿವಾ**' **ಇತ್ಯುಕ್ತೇ ರಾತ್ಯಂತಿಕ ಸಾವಧಿತ್ವೇನ ಪಾಶುಪತವ್ರತಸ್ಯ ವಿಕಲ್ಪಃ। ತತ್ರಾತ್ಯಂತಿಕ ಮತ್ಯಾಶ್ರಮ ಸಂಜ್ಞಕಮಪವರ್ಗಹೇತುಃ**" ಈ ವ್ರತವನ್ನು ಸಾಯುವವರೆಗೂ ಆಚರಿಸಿದರೆ ಮೋಕ್ಷವೂ,

ಸ್ವಲ್ಪಕಾಲ ಆಚರಿಸಿದರೆ ಇಹಲೋಕಭೋಗವೂ ಆಗುವುದು ಎಂದು ಹೇಳಿ ಅದಕ್ಕೆ ಪಾಶುಪತ ವ್ರತವನ್ನು ಹೇಳಿರುವ ಪುರಾಣದ 'ಯಾವಚ್ಛರೀರ' ಎಂದು ಮೊದಲಾಗುವ ಶ್ಲೋಕವನ್ನು ಆಧಾರವಾಗಿ ಕೊಟ್ಟಿದ್ದಾರೆ. ಪಾಶುಪತವ್ರತವನ್ನು ಹೇಳಿರುವ ಈ ಶ್ಲೋಕವು ಶಿವಮಹಾ ಪುರಾಣದಲ್ಲಿದೆ:

ವ್ರತಮೇತತ್ ಕರೋಮೀತಿ ಭವೇತ್ ಸಂಕಲ್ಪ್ಯ ದೀಕ್ಷಿತಃ|
ಯಾವಚ್ಛರೀರ ಪಾತಂ ವಾ ದ್ವಾದಶಾಬ್ದ ಮಥಾಪಿ ವಾ|
ತದರ್ಧಂ ವಾ ತದರ್ಧಂ ವಾ ಮಾಸದ್ವಾದಶಕಂತು ವಾ|
ತದರ್ಧಂ ವಾ ತದರ್ಧಂ ವಾ ಮಾಸಮೇಕಮಥಾಪಿವಾ|

ಶಿವಮಹಾಪುರಾಣದ ಅಂತ್ಯಭಾಗದಲ್ಲಿರುವ ವಾಯವೀಯ ಸಂಹಿತೆಯ ಪೂರ್ವಭಾಗದ ೩೩ ನೆಯ ಅಧ್ಯಾಯದ ೭ ಮತ್ತು ೮ ನೆಯ ಶ್ಲೋಕಗಳಿವು. ಪಾಶುಪತವ್ರತವನ್ನು ಬದುಕಿರುವ ವರೆಗಾಗಲೀ, ಹನ್ನೆರಡು ವರುಷವಾಗಲೀ, ಅಥವಾ ಅದಕ್ಕಿಂತಲೂ ಕಡಮೆಯ ಕಾಲವಾಗಲೀ ಮಾಡಬಹುದು. ೩೦ ನೆಯ ಶ್ಲೋಕದಲ್ಲಿ ಹೇಳಿದಂತೆ **'ಲಿಂಗಂ ಕನೀಯಸಂ'** ಎಂದರೆ ಸಣ್ಣಲಿಂಗವನ್ನು ೬೦ ನೆಯ ಶ್ಲೋಕದಲ್ಲಿ ಹೇಳಿದಂತೆ **'ಪ್ರತ್ಯಹಂ'** ಪ್ರತಿದಿನವೂ ಅರ್ಚಿಸ ಬೇಕು. ಅಲ್ಪಕಾಲ ಈ ವ್ರತವನ್ನು ಆಚರಿಸುವವರು ೬೧ ಶ್ಲೋಕದಲ್ಲಿ ಹೇಳಿದಂತೆ ಗುರುವಿ ಗಾಗಲೀ ದೇವಸ್ಥಾನಕ್ಕಾಗಲೀ ಲಿಂಗವನ್ನು ವ್ರತಾಚರಣೆಯಾದಮೇಲೆ ಕೊಡಬೇಕು. ಆದರೆ ಇಹಲೋಕಭೋಗನಿವೃತ್ತರಾಗಿ ಮೋಕ್ಷಕ್ಕಾಗಿ ಯಾವಜ್ಜೀವವೂ ಲಿಂಗವನ್ನು ಪೂಜಿಸುವ ನಿವೃತ್ತರ ವಿಷಯವನ್ನು ಶಿವಮಹಾಪುರಾಣದ ಮೊದಲ ಭಾಗದ ೧೮ ನೆಯ ಅಧ್ಯಾಯದ ೫೫ ನೆಯ ಶ್ಲೋಕದಲ್ಲಿ ಹೇಳಿದೆ. ಅದು ಹೀಗಿದೆ:

ಕರಪೂಜಾ ನಿವೃತ್ತಾನಾಂ ಸ್ವಭೋಜ್ಯಂತು ನಿವೇದಯೇತ್|
ನಿವೃತ್ತಾನಾಂ ಪರಂ ಸೂಕ್ಷ್ಮಂ ಲಿಂಗಮೇವ ವಿಶಿಷ್ಯತೇ|
ವಿಭೂತ್ಯರ್ಚನಂ ಕುರ್ಯಾದ್ವಿಭೂತಿಂ ಚ ನಿವೇದಯೇತ್|
ಪೂಜಾಕೃತ್ವಾಥ ತಲ್ಲಿಂಗಂ ಶಿರಸಾಧಾರಯೇತ್ ಸದಾ|

ಆದುದರಿಂದ ಇಹಲೋಕಭೋಗನಿವೃತ್ತರಾದ ಮುಮುಕ್ಷುಗಳು ಲಿಂಗವನ್ನು ಕರದಲ್ಲಿಟ್ಟು ಪೂಜಿಸಿ ಪೂಜೆಯಾದ ಮೇಲೆ ಸದಾ ಶಿರಸ್ಸಿನಲ್ಲಿ ಧರಿಸಬೇಕು. ಈ ಮಹಾಪಾಶುಪತವ್ರತಕ್ಕೆ ಬೇರೆ ಹೆಸರುಗಳಿರುವುದನ್ನು ಈ ಪುರಾಣವು ಹೀಗೆ ಹೇಳಿದೆ:

ಯಃ ಕೃತ್ವಾತ್ಯಂತಿಕೀಂ ದೀಕ್ಷಾಮಾದೇಹಾಂತಮನಾಕುಲಃ|
ವ್ರತಮೇತತ್ಪ್ರಕುರ್ವೀತ ಸತುವೈನೈಷ್ಠಿಕಃ ಸ್ಮೃತಃ|
ಸೋಽತ್ಯಾಶ್ರಮೀ ಚ ವಿಜ್ಞೇಯೋ ಮಹಾಪಾಶುಪತಸ್ತಥಾ|
ಸ ಏವ ತಪತಾಂ ಶ್ರೇಷ್ಠಃ ಸ ಏವ ಚ ಮಹಾವ್ರತೀ|

ಕಾರಣೋತ್ತರ ತಂತ್ರದ ಕ್ರಿಯಾಪಾದದಲ್ಲಿ ನೈಷ್ಠಿಕ, ಅತ್ಯಾಶ್ರಮೀ, ಮಹಾಪಾಶುಪತ ಮೊದಲಾದ ಹೆಸರುಗಳಲ್ಲದೆ ಶಿರೋವ್ರತವೆಂಬ ಹೆಸರೂ ಈ ವ್ರತಕ್ಕೆ ಇದ್ದಿತೆಂದೂ ಈ ವ್ರತ ವನ್ನಾಚರಿಸುವವನು ಲಿಂಗಧಾರಣ ದೀಕ್ಷೆಯನ್ನು ಪಡೆಯಬೇಕೆಂದೂ ಹೇಳಿದೆ:

ನಿವೇದಯಿಷ್ಯನ್ಮದ್ ಜ್ಞಾನಂ ದದ್ಯಾದಾದೌ ಶಿರೋವ್ರತಂ|
ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ|
ಇತೀದಂ ನಾಮಭಿಃ ಪುಣ್ಯೈಃ ನಿಗಮಾಂತೇಷು ಗೀಯತೇ|

ತನುತ್ರಯಗತಾನಾದಿ ಮಲತ್ರಯಮಸೌಗುರುಃ|
ದೀಕ್ಷಾತ್ರಯೇಣ ನಿರ್ದಗ್ಧ್ವಾಲಿಂಗತ್ರಯಮುಪಾದಿಶೇತ್|

ವಾತುಲಾಗಮದಲ್ಲಿಯೂ ಸಹ ಅತ್ಯಾಶ್ರಮಿಯೆಂದರೇನೆಂಬುದನ್ನು ಹೀಗೆ ಹೇಳಿದೆ:

ಬ್ರಹ್ಮಚಾರೀ ಗೃಹಸ್ಥೋವಾ ವಾನಪ್ರಸ್ಥೋ ಯತಿಸ್ತುವಾ|
ಯಸ್ತು ಲಿಂಗಾಂಗ ಸಂಯುಕ್ತ ಸ್ಸ ಏವಾತ್ಯಾಶ್ರಮೀ ಭವೇತ್ ||

ಹೀಗೆ ಮೋಕ್ಷಾರ್ಥಿಯಾಗಿ ಯಾವಜ್ಜೀವವೂ ಪಾಶುಪತವ್ರತವನ್ನಾಚರಿಸುವ ಮುಮುಕ್ಷುಗಳು ಲಿಂಗಧಾರಿಗಳಾಗಿರುವರೆಂಬ ಕಾರಣತಂತ್ರದ ಮತ್ತು ವಾತುಲಾಗಮಗಳ ಆಧಾರಗಳಂತೆಯೇ ಶಿವಮಹಾಪುರಾಣದಲ್ಲಿ ಲಿಂಗವನ್ನು **'ಶಿರಸಾಧಾರಯೇತ್‌ಸದಾ'** ಎಂದರೆ ಯಾವಜ್ಜೀವವು ಶಿರಸ್ಸಿನಲ್ಲಿ ಧರಿಸಿರಬೇಕೆಂದು ಹೇಳಿದೆ. ಆದುದರಿಂದ ಮೋಕ್ಷಸಾಧನೆಗೆ ಶಿವಮಹಾಪುರಾಣದಲ್ಲಿ ಹೇಳಿರುವ ಪಾಶುಪತವ್ರತವೇ ಅವಶ್ಯವೆಂದು ಭಾಷ್ಯದಲ್ಲಿ ಹೇಳಿರುವ ಮುಮುಕ್ಷುಗಳಾದ ಶ್ರೀಕಂಠ ಶಿವಾಚಾರ್ಯರು ಶಿರಸ್ಸಿನಲ್ಲಿ ಲಿಂಗವನ್ನು ಧರಿಸಿದ ಲಿಂಗಧಾರಿಗಳೇ ಆಗಿರಬೇಕು.

ಇಂದೂ ಯಜ್ಞೋಪವೀತಧಾರಣೆಯು ವೈದಿಕವೋ ಅಲ್ಲವೋ ಎಂಬ ಪ್ರಶ್ನೆಯು ಹೇಗೆ ಎದ್ದಿಲ್ಲವೋ ಹಾಗೆಯೇ, ಶ್ರೀಕಂಠ ಶಿವಾಚಾರ್ಯರ ಕಾಲದಲ್ಲಿ ಲಿಂಗಧಾರಣೆಯು ಅವೈದಿಕವೆಂಬ ಪ್ರಶ್ನೆಯೂ ಎದ್ದಿರಲಿಲ್ಲ. ಏಕೆಂದರೆ ಶ್ರೀ ಶಂಕರ ಶ್ರೀಕಂಠ ಶ್ರೀಪತಿಗಳಿಗೆ ಆಧಾರವಾದ ಶಿವಮಹಾಪುರಾಣದಲ್ಲಿಯೇ **'ಪೂಜಾ ಕೃತ್ವಾಥ ತಲ್ಲಿಂಗಂ ಶಿರಸಾಧಾರಯೇತ್ ಸದಾ'** ಎಂದು ಹೇಳಿದೆ. ಹನ್ನೊಂದು ಹನ್ನೆರಡನೆಯ ಶತಮಾನಗಳಲ್ಲಿ ವೀರಶೈವ ಶರಣರು ಎಲ್ಲ ಜಾತಿಯವರೂ ಸ್ತ್ರೀಯರೂ ಸಹಾ ಮೋಕ್ಷಾರ್ಥಿಗಳಾಗಿ ಲಿಂಗವನ್ನು ಧರಿಸಬಹುದೆಂದು ಕ್ರಾಂತಿಮಾಡಿದಮೇಲೆ ಸಂಪ್ರದಾಯಶರಣರಲ್ಲಿ ಲಿಂಗವನ್ನು ಧರಿಸುವ ಪದ್ಧತಿಯು ನಿಂತು ಹೋದುದಲ್ಲದೆ ಅದು ವೈದಿಕವೆ ಎಂಬ ಪ್ರಶ್ನೆಯು ಹುಟ್ಟಿತು. ಆದುದರಿಂದ, ಈ ಪ್ರಶ್ನೆ ಹುಟ್ಟುವುದಕ್ಕಿಂತಲೂ ಎಷ್ಟೋ ಶತಮಾನಗಳ ಹಿಂದೆಯೇ ಭಾಷ್ಯವನ್ನು ಬರೆದ ಶ್ರೀಕಂಠ ಶಿವಾಚಾರ್ಯರು ಲಿಂಗಧಾರಣೆಯು ವೈದಿಕವೆಂದು ಸಿದ್ಧಾಂತಮಾಡುವ ಆವಶ್ಯಕತೆ ಬರಲಿಲ್ಲ. ಶ್ರೀಕಂಠ ಭಾಷ್ಯದಲ್ಲಿರುವ ಸಿದ್ಧಾಂತಕ್ಕೂ ಕ್ರಿಯಾಸಾರದ ಹಾಗೂ ಶ್ರೀಕರ ಭಾಷ್ಯದ ಸಿದ್ಧಾಂತಕ್ಕೂ ಯಾವ ವ್ಯತ್ಯಾಸವೂ ಇಲ್ಲ; ಬಸವೇಶ್ವರನ ಕಾಲಕ್ಕಿಂತಲೂ ಒಂದೆರಡು ಶತಮಾನಗಳ ಹಿಂದೆಯೇ ಕಂಡುಬರುವ ವೀರಶೈವ ಶುದ್ಧಿಸಂಘಟನೆಗೆ ಮೊದಲಿದ್ದ ವೀರಶೈವದ ಸ್ವರೂಪವು ಶ್ರೀಕಂಠ ಭಾಷ್ಯ ಶ್ರೀಕರ ಭಾಷ್ಯಗಳಲ್ಲಿದೆ; ಕ್ರಿಯಾಸಾರವು ಶ್ರೀಕಂಠ ಭಾಷ್ಯದ ಕಾರಿಕೆಯೆ; ಶ್ರೀಕಂಠ ಶಿವಾಚಾರ್ಯರು ವೀರಶೈವ ಆರಾಧ್ಯ ಬ್ರಾಹ್ಮಣರೇ; ಈ ವಿಷಯಗಳನ್ನು ಇದುವರೆಗೆ ಸಿದ್ಧಾಂತಮಾಡಲಾಯಿತು.

## ಶ್ರೀಕಂಠ ಶಿವಾಚಾರ್ಯರ ಕಾಲ ದೇಶ ನಿರ್ಣಯ

ವಿಶಿಷ್ಟಾದ್ವೈತ ಪ್ರತಿಪಾದಕವೇ ಆದ ಶ್ರೀಕಂಠ ಶ್ರೀ ರಾಮಾನುಜ ಭಾಷ್ಯಗಳಲ್ಲಿ ಹೆಚ್ಚು ಹೋಲಿಕೆಗಳಿರುವುದು ಆಶ್ಚರ್ಯಕರವಾದುದಲ್ಲ. ಆದರೆ ಒಬ್ಬರು ಇನ್ನೊಬ್ಬರ ಭಾಷ್ಯವನ್ನು ನೋಡಿ ಬರೆದರೆಂಬ ವಾದವು ಬಹು ಹಿಂದಿನಿಂದ ಬಂದುದಾದರೂ ಅದರಲ್ಲಿ ಹುರುಳಿಲ್ಲ. ಇಬ್ಬರೂ ಆಚಾರ್ಯಪುರುಷರು, ವೇದವೇದಾಂತ ಶಾಸ್ತ್ರಕೋವಿದರು, ಪ್ರತಿಭಾವಂತರು; ಒಬ್ಬರು ಮತ್ತೊಬ್ಬರ ಭಾಷ್ಯವನ್ನು ನೋಡಿ, ಅದನ್ನು ಅನುಸರಿಸಿ ತಮ್ಮದೇ ಎನ್ನುವಂತೆ ಬರೆವ ಕೀಳುಮಟ್ಟದವರಲ್ಲ. ಆದರೂ ಇಬ್ಬರೂ ಸಮಕಾಲೀನರಾದುದರಿಂದ, ಒಬ್ಬರು ಮತ್ತೊಬ್ಬ

ರನ್ನು ಖಂಡಿಸಲಿಲ್ಲವೆಂದೂ, ಇಬ್ಬರಿಗೂ ಮೂಲವು ಒಂದೇ ಆದುದರಿಂದ ಅವರ ಭಾಷ್ಯಗಳಲ್ಲಿ ಹೋಲಿಕೆಗಳಿರುವುವೆಂದೂ ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ತೀರ್ಮಾನಿಸಿರುವುದರ ಉದ್ದೇಶವು ಒಳ್ಳೆಯದಾದರೂ, ಒಬ್ಬರು ಇನ್ನೊಬ್ಬರನ್ನು ಖಂಡಿಸದಿರುವುದಕ್ಕೆ ಅವರು ಸಮ ಕಾಲೀನರಾಗಿದ್ದುದೇ ಕಾರಣವಾಗಿರಬೇಕಾಗಿಲ್ಲ. ಅವರಿಬ್ಬರ ದೇಶ ಕಾಲಗಳು ಬೇರೆ ಬೇರೆ ಯಾಗಿದ್ದು ಒಬ್ಬರ ಭಾಷ್ಯವು ಮತ್ತೊಬ್ಬರ ಗಮನಕ್ಕೆ ಬಾರದಿರುವುದೇ ಕಾರಣವಾಗಿರಬಹುದು. ಶ್ರೀ ದಾಸಗುಪ್ತರು ಹೇಳಿದಂತೆ "Srikantha's own interpretation of the Brahmasutra is based mainly on the views propounded in the **Vayuvia Samhita** section of **Sivamahapurana**" (History of Indian Philosophy, V-72) ಶ್ರೀಕಂಠ ಭಾಷ್ಯಕ್ಕೆ ಆಧಾರ ವಾದ ಶಿವಮಹಾಪುರಾಣದ ವಾಯವೀಯ ಸಂಹಿತೆಯಲ್ಲಿ "**ನಮಃ ಪ್ರಧಾನದೇಹಾಯ, ಪ್ರಧಾನಕ್ಷೋಭಕಾರಿಣೇ। ತ್ರಯೋವಿಂಶತಿ ಭೇದೇನ ವಿಕೃತಾಯಾऽವಿಕಾರಿಣೇ॥**" ಎಂದು ಹೇಳಿರುವುದಕ್ಕೆ ಚಿದಚಿಚ್ಛಕ್ತಿರೂಪ ಪ್ರಪಂಚವೇ ದೇಹವುಳ್ಳವನಾಗಿದ್ದರೂ ಶಿವನು ಅವಿಕಾರಿಯಾಗಿದ್ದಾನೆ ಎಂದರ್ಥ; ಅದರಲ್ಲಿಯೇ "**ಯಥಾಶಿವಸ್ತಥಾದೇವಿ . . . ಚಂದ್ರ ಚಂದ್ರಿಕಯೋರಿವ**" ಎಂದು ಹೇಳಿದೆ. ಶಿವಾಭಿನ್ನ ಶಕ್ತಿಯೇ ಚರಾಚರ ಪ್ರಪಂಚವಾಗಿ ಶಿವನ ಶರೀರವಾಗಿರುವುದೆಂಬ ಶ್ರೀಕಂಠ ಭಾಷ್ಯದ ನಿಲುವಿಗೆ ಶಿವಮಹಾಪುರಾಣವೇ ಆಧಾರ ವಾಗಿದೆ. ಶ್ರೀ ಮಹಾವಿಷ್ಣು ಪರಮಾತ್ಮನಿಗೆ ಭಿನ್ನವಾಗಿರುವ ಚರಾಚರ ಪ್ರಪಂಚವು ಅವನ ಶರೀರವಾಗಿದೆಯೆಂಬ ಶ್ರೀ ರಾಮಾನುಜರ ದ್ವೈತದ ನಿಲುವಿಗೆ ಆಧಾರವೆಂದು ಹೇಳಲ್ಪಟ್ಟಿರುವ ಬೋಧಾಯನ ವೃತ್ತಿಯು ಶ್ರೀಕಂಠ ಶಿವಾಚಾರ್ಯರಿಗೆ ಆಧಾರವಲ್ಲ. ಶ್ರೀ ಶಂಕರರ ಆನಂದ ಲಹರಿಯಲ್ಲಿ "**ಶರೀರಂ ತ್ವಂ ಶಂಭೋಃ ಶಶಿಮಿಹಿರ ವಕ್ಷೋರುಹ ಯುಗಂ**" ಎಂದು ಹೇಳಿರುವುದರಲ್ಲಿ ಶಕ್ತಿಯು ಶಿವನ ಶರೀರವೆಂದು ಹೇಳಿದೆ. ಶೈವ ಶಂಕರಶ್ರೀಕಂಠರು ದ್ವೈತದ ನಿಲುವಿನಲ್ಲಿ ನಿಲ್ಲದೆ ಅದ್ವೈತ ಮಟ್ಟದಲ್ಲಿ ನಿಲ್ಲುವರು. ಆದರೆ ಶ್ರೀ ವೈಷ್ಣವ ರಾಮಾನುಜರ ನಿಲುವು ದ್ವೈತದ ನಿಲುವು. ಶ್ರೀಕಂಠ ಭಾಷ್ಯದ ನಿಲುವು ಅದ್ವೈತದಂತಹ ನಿಲುವು ಆದುದರಿಂದಲೇ ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು "On purely logical grounds Srikantha seems to occupy a position midway between those of Shankara and Ramanuja" ಎಂದಿದ್ದಾರೆ. ಶ್ರೀಕಂಠರು ಶ್ರೀ ಶಂಕರರಿಗೂ ಶ್ರೀ ರಾಮಾನುಜರಿಗೂ ಮಧ್ಯಕಾಲದವರೆಂಬ ಭಾವ ಇದರಲ್ಲಿದೆ. ಶ್ರೀಕಂಠ ಶಿವಾಚಾರ್ಯರನ್ನು ಶ್ರೀ ಶಂಕರರು ವಾದದಲ್ಲಿ ಸೋಲಿಸಿದರೆಂಬ ಐತಿಹ್ಯ ಶಂಕರಾನುಯಾಯಿಗಳಲ್ಲಿದೆ. ಆದರೆ ಹರದತ್ತ ಶಿವಾಚಾರ್ಯರು ಶ್ರೀಕಂಠ ಭಾಷ್ಯ ಸಮರ್ಥ ಗ್ರಂಥವನ್ನು ಬರೆದುದು ಅವರ ಗುರುಗಳಾದ ಶ್ರೀಕಂಠರ ನಿಲುವನ್ನು ಸಾಧಿಸು ವುದಕ್ಕಾಗಿಯೇ. ಶ್ರೀ ಶಂಕರರು ಕ್ರಿ. ಶ. ೮೨೦ರಲ್ಲಿ ಐಕ್ಯರಾದರು; ಹರದತ್ತರು ಕ್ರಿ. ಶ. ೮೭೮ರಲ್ಲಿ ಐಕ್ಯರಾದರು. ಆದ್ದರಿಂದ ಶ್ರೀಕಂಠ ಶಿವಾಚಾರ್ಯರು ಶ್ರೀ ಶಂಕರಾಚಾರ್ಯರ ಸಮಕಾಲೀನ ರಾದರೂ ಆಗಿರಬೇಕು. ಬೃಹದಾರಣ್ಯಕೋಪನಿಷತ್ತಿನ ೩-೮-೧೨ರ ಶಾಂಕರ ಭಾಷ್ಯದಲ್ಲಿ "**ಅನ್ಯೇ ಅಕ್ಷರಸ್ಯ ಶಕ್ತಿಯ ಏತಾ ಇತಿ ವದಂತಿ। ಅನಂತಶಕ್ತಿಮದಕ್ಷರ ಮಿತಿ ಚ**" ಎಂದು ಹೇಳಿರುವುದು ಶ್ರೀಕಂಠ ಭಾಷ್ಯದ ಟೀಕೆಯಂತಿದೆ. ಆಂಧ್ರ ಹಿಸ್ಟಾರಿಕಲ್ ರಿಸರ್ಚ್ ಸೊಸೈಟಿಯ ಜರ್ನಲ್ ವಾಲ್ಯುಂ ೧, ಪುಟ ೧೫೫ ರಲ್ಲಿನ ಲೇಖನದಲ್ಲಿ ಮೀಮಾಂಸಕಾಚಾರ್ಯ ಶ್ರೀ ರಾಮ

ನಾಥ ಶಾಸ್ತ್ರಿಗಳು ಹೇಳುವಂತೆ, ಪುಚ್ಛಬ್ರಹ್ಮವಾದಂತಹ ಅನೇಕ ವಿಷಯಗಳಲ್ಲಿ ಶ್ರೀಕಂಠ ಭಾಷ್ಯದಲ್ಲಿ ಹೇಳಿರುವುದನ್ನೇ ಶ್ರೀ ಶಂಕರರು ಸಂಸ್ಕರಿಸಿದಂತೆ ಕಾಣುತ್ತದೆ. ಈ ಲೇಖನದ ಅಡಿಟಿಪ್ಪಣಿಯಲ್ಲಿ ಶ್ರೀ ರಾಮಕೃಷ್ಣ ಕವಿ, M.A. ಅವರು ಹೇಳಿದಂತೆ, ನ್ಯಾಯಕುಂಡಲಿ ಕೌಮುದಿಗಳನ್ನು ರಚಿಸಿದ ಶ್ರೀಧರನಿಂದ ಉಲ್ಲೇಖಿಸಲ್ಪಟ್ಟ ಶ್ರೀಕರನಿಂದಲೂ, ಅಭಿನವಗುಪ್ತನ ಪ್ರತ್ಯಭಿಜ್ಞಾ ವಿಮರ್ಶಿಕೆಯ ಮೇಲೆ ವ್ಯಾಖ್ಯಾನವನ್ನು ಬರೆದ ಕ್ಷೇಮರಾಜನಿಂದಲೂ ಶ್ರೀಕಂಠ ಭಾಷ್ಯದ ಆಧಾರಗಳು ತೆಗೆದುಕೊಳ್ಳಲ್ಪಟ್ಟಿರುವುದರಿಂದ, ಅದು ಕ್ರಿ. ಶ. ೯೦೦ ಕ್ಕಿಂತ ಹಿಂದಿನದೆ ಹೊರತು ಶ್ರೀ ರಾಮಾನುಜರ ಕಾಲದಿಂದ ಈಚಿನದಲ್ಲ.

ಶ್ರೀಕಂಠರ ದೇಶ ವಿಷಯದಲ್ಲೂ ಇದೇ ಲೇಖನವು ಬೆಳಕನ್ನು ಬೀರುತ್ತದೆ. ಶ್ರೀಕಂಠರೆಂಬ ಶ್ರೀಕಂಠರ ಅನುಯಾಯಿಗಳು ಆಂಧ್ರದೇಶದ ಶ್ರೀಶೈಲ ಪ್ರಾಂತ್ಯದಲ್ಲಿದ್ದರೆಂದು ಆಂಧ್ರ ದೇಶದ ವರೇ ಆದ ಮೀಮಾಂಸಕಾಚಾರ್ಯ ರಾಮನಾಥ ಶಾಸ್ತ್ರಿಗಳೂ ರಾಮಕೃಷ್ಣ ಕವಿಗಳೂ ಹೇಳುತ್ತಾರಾಗಿ ಶ್ರೀಕಂಠರು ಶ್ರೀಶೈಲ ಪ್ರಾಂತ್ಯದವರೇ ಆಗಿರಬೇಕು. ಇಂದಿಗೂ ಆರಾಧ್ಯ ಬ್ರಾಹ್ಮಣರು ಆಂಧ್ರದಲ್ಲೇ ಹೆಚ್ಚಾಗಿರುವುದು.

### ಶ್ರೀಕಂಠ ಶಿವಾಚಾರ್ಯರು ಭವಭೂತಿಯೇ ಎಂಬುದರಿಂದ ಅವರ ಕಾಲನಿರ್ಣಯ

ಶ್ರೀಕಂಠ ಶಿವಾಚಾರ್ಯ, ಭವಭೂತಿ ಉಂಬೇಕ ಮಂಡನಮಿಶ್ರ, ವಿಶ್ವರೂಪ, ಸುರೇಶ್ವರಾಚಾರ್ಯ ಎಂಬ ಹೆಸರಿನವರೊಬ್ಬರೆಯೆ ಅಥವಾ ಬೇರೆಬೇರೆಯೆ ಎಂಬ ವಿಷಯವು ಶ್ರೀಕಂಠ ಶಿವಾಚಾರ್ಯರ ಕಾಲ ನಿರ್ಣಯಕ್ಕೆ ಸಹಾಯವಾಗಬಹುದಾದುದರಿಂದ ವಿಚಾರಾರ್ಹ ವಾಗಿರುವುದು. ವಿದ್ಯಾರಣ್ಯ ಕೃತ ಶಂಕರವಿಜಯದಲ್ಲಿ ಶ್ರೀ ಶಂಕರಾಚಾರ್ಯರು ಉಂಬೇಕ ನೆಂದೂ ವಿಶ್ವರೂಪನೆಂದೂ ಹೆಸರುಳ್ಳ ಮಂಡನಮಿಶ್ರನನ್ನು ವಾದದಲ್ಲಿ ಸೋಲಿಸಲು ಆತನು ಸುರೇಶ್ವರಾಚಾರ್ಯನೆಂಬ ಹೆಸರಿನಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದನೆಂದು ಹೇಳಿದೆ. ಯಾಜ್ಞವಲ್ಕ್ಯ ಸ್ಮೃತಿಯ ಮೇಲೆ ವಿಶ್ವರೂಪನು ಬರೆದ "ಬಾಲಕ್ರೀಡಾ" ಗ್ರಂಥದ ವ್ಯಾಖ್ಯಾನ ವಾದ "ಬಾಲಕ್ರೀಡಾ ವ್ಯಾಖ್ಯೆ" ಯಲ್ಲಿ ವಿಶ್ವರೂಪನು "**ಭವಭೂತಿ ಸುರೇಶಾಖ್ಯಂ ವಿಶ್ವ ರೂಪಂ ಪ್ರಣಾಮ್ಯತಂ**" ಎಂದು ವಂದಿಸಲ್ಪಟ್ಟಿದ್ದಾನೆ. ಭವಭೂತಿಯ ಗ್ರಂಥಗಳಿಂದಲೇ ಅವನಿಗೆ ಉಂಬೇಕನೆಂಬ ಹೆಸರಿದ್ದುದೂ ಶ್ರೀಕಂಠನೆಂದು ಪ್ರಸಿದ್ಧನಾಗಿದ್ದುದೂ ತಿಳಿದುಬರುತ್ತದೆ.

ಮಂಡನಮಿಶ್ರನು ಸುರೇಶ್ವರಾಚಾರ್ಯರಾದರೆ ಎಂಬ ವಿಷಯವನ್ನು ಮೊದಲು ವಿಚಾರ ಮಾಡಬಹುದು. ಈ ವಿಷಯದಲ್ಲಿ ವಿದ್ಯಾರಣ್ಯರು ಅನುಸರಿಸಿರುವ ವ್ಯಾಸಗಿರಿಯ ಗ್ರಂಥದಲ್ಲಿಯಾಗಲಿ ಇತರರು ಶ್ರೀ ಶಂಕರ ವಿಷಯವಾಗಿ ಬರೆದ ಗ್ರಂಥಗಳಲ್ಲಿಯಾಗಲೀ ಶ್ರೀ ಶಂಕರರಿಂದ ಸೋಲಿಸಲ್ಪಟ್ಟ ವಿಶ್ವರೂಪನು ಮಂಡನಮಿಶ್ರನೆಂಬ ಹೆಸರುಳ್ಳವನೆಂದು ಹೇಳಿಲ್ಲ. ಎರಡನೆಯದಾಗಿ ಮಂಡನಮಿಶ್ರನ ಗ್ರಂಥಗಳಿಂದ ಅವನಿಗೆ ವಿಶ್ವರೂಪನೆಂಬ ಹೆಸರಿದ್ದುದು ತಿಳಿದುಬರುವುದಿಲ್ಲ. ಮೂರನೆಯದಾಗಿ ಕ್ರಿ. ಶ. ೧೨೦೦ ರ ಸುಮಾರಿನಲ್ಲಿದ್ದ ಆನಂದಗಿರಿಯ ಟೀಕೆಯನ್ನೊಳಗೊಂಡ, ಆನಂದಾನುಭವ ಕೃತ "ನ್ಯಾಯರತ್ನ ದೀಪಾವಳಿ" ಯಲ್ಲಿ "**ಪ್ರಸಿದ್ಧಾಪ್ತ ವಾಕ್ಯೈರ್ವಿಶ್ವರೂಪ, ಪ್ರಭಾಕರ, ಗುರುಮಂಡನ, ವಾಚಸ್ಪತಿ, ಸುಚರಿತಮಿಶ್ರೈಃ**" ಎಂದು ಹೇಳಿರುವುದರಲ್ಲಿ ವಿಶ್ವರೂಪನೂ ಮಂಡನಮಿಶ್ರರೂ ಬೇರೆಬೇರೆಯೆಂಬುದು ಸ್ಪಷ್ಟ ಮಾಡಲ್ಪಟ್ಟಿದೆ. ಕೊನೆಯದಾಗಿ ಮಂಡನಮಿಶ್ರನ ಗಡುಚಾದ ಶೈಲಿಗೂ ಸುರೇಶ್ವರಾಚಾರ್ಯರ ಲಲಿತಶೈಲಿಗೂ ಸಂಬಂಧವಿಲ್ಲ. ಮಂಡನಮಿಶ್ರನ 'ಭಾವನಾವಿವೇಕ' ದ ಮೇಲೆ ಉಂಬೇಕನು

ವ್ಯಾಖ್ಯಾನ ಬರೆದಿದ್ದಾನೆ. ಮೇಲಿನ ಕಾರಣಗಳಿಂದ ಶ್ರೀ ಶಂಕರಾಚಾರ್ಯರಿಂದ ಸೋಲಿಸಲ್ಪಟ್ಟು ಸುರೇಶ್ವರ ಎಂಬ ಹೆಸರಿನಿಂದ ಸಂನ್ಯಾಸವನ್ನು ಸ್ವೀಕರಿಸಿದ ವಿಶ್ವರೂಪನಿಗೂ, ಮಂಡನ ಮಿಶ್ರನಿಗಾಗಲೀ ಶ್ರೀಕಂಠರಿಗಾಗಲೀ ಉಂಬೇಕನಿಗಾಗಲೀ ಯಾವ ಸಂಬಂಧವಿಲ್ಲವೆನ್ನ ಬೇಕಾಗುವುದು.

ಭವಭೂತಿಯೇ ಶ್ರೀಕಂಠ ಶಿವಾಚಾರ್ಯರಿರಬೇಕೆಂಬ ವಿಷಯದಲ್ಲಿ ಆಂಧ್ರ ಹಿಸ್ಟಾರಿಕಲ್ ಸೊಸೈಟಿಯ ತ್ರೈಮಾಸಿಕದ ಮೊದಲ ಭಾಗದ ೧೫೫ ನೆಯ ಪುಟದಲ್ಲಿನ ಮೀಮಾಂಸಕಾಚಾರ್ಯ ಶ್ರೀ ಎಸ್. ಕೆ. ರಾಮನಾಥ ಶಾಸ್ತ್ರಿಗಳ ಲೇಖನವು ಬೆಳಕನ್ನು ಬೀರುವುದು.

ಮಾಲತೀಮಾಧವ ಗ್ರಂಥದಲ್ಲಿಯೇ ಕುಮಾರಿಲನ ಶಿಷ್ಯ ಉಂಬೇಕನು ಆ ಗ್ರಂಥವನ್ನು ಬರೆದುದಾಗಿ ಗ್ರಂಥಕರ್ತನ ಹೆಸರನ್ನು ಹೇಳುವ ಸಮಾಪ್ತಿ ವಾಕ್ಯಗಳಲ್ಲಿ ಕಂಡುಬರುವುದರಿಂದ ಭವಭೂತಿಯೇ ಕುಮಾರಿಲನ ಶಿಷ್ಯ ಉಂಬೇಕನೆಂಬುದು ಸ್ಪಷ್ಟವಾಗುವುದು. ಇನ್ನು ಚಿತ್‌ಸುಖನಷ್ಟು ಹಿಂದಿನವನು ಇವನನ್ನು 'ಆಪ್ತ' ಎಂದರೆ ಬ್ರಹ್ಮಸೂತ್ರ ಭಾಷ್ಯಕಾರನೆಂದು ಕರೆದಿರುವುದರಿಂದಲೂ, ಭವಭೂತಿಗೆ 'ಶ್ರೀಕಂಠ' ಎಂಬ ಪ್ರಶಸ್ತಿಯಿದ್ದುದು ಅವನ ಗ್ರಂಥಗಳಿಂದಲೇ ತಿಳಿದುಬರುವುದರಿಂದಲೂ, ಭವಭೂತಿಯೂ ಶ್ರೀಕಂಠ ಶಿವಾಚಾರ್ಯರೂ ಒಬ್ಬರೇ ಎಂದು ನಿರ್ಧರಿಸಲು ಕಾರಣವಾಗಿದೆ. ಇವರ ಕಾಲವು ಸುಮಾರು ಕ್ರಿ. ಶ. ೬೮೦ ರಿಂದ ೭೫೦. ಮೀಮಾಂಸಕಾಚಾರ್ಯ ರಾಮನಾಥ ಶಾಸ್ತ್ರಿಗಳ ಈ ನಿರ್ಣಯವನ್ನು ಒಪ್ಪುವುದಾದರೆ ಶ್ರೀಕಂಠ ಶಿವಾಚಾರ್ಯರು ಈಗ ನಿರ್ಧರಿಸಲ್ಪಟ್ಟಿರುವ ಶ್ರೀ ಶಂಕರಾಚಾರ್ಯರ ಕಾಲಕ್ಕಿಂತ ಹಿಂದಿನವರಾಗುತ್ತಾರೆ. ಶ್ರೀಕಂಠ ಶಿವಾಚಾರ್ಯರು, ಮುಂದೆ ಸುರೇಶ್ವರಾಚಾರ್ಯರೆಂದು ಪ್ರಸಿದ್ಧರಾದ ವಿಶ್ವರೂಪರೂ ಆದರೆ, ಅವರು ಶ್ರೀ ಶಂಕರರ ಸಮಕಾಲೀನರಾಗುತ್ತಾರೆ. ಆದರೆ ಈ ವಿಷಯಗಳಲ್ಲಿ ಬಹು ಬೆಳಕನ್ನು ಬೀರಿರುವ ಶ್ರೀ ರಾಮಕೃಷ್ಣ ಕವಿ M.A. ಯವರ ಅಭಿಪ್ರಾಯದಂತೆ (J.A.H.R.S. Vol. V, Page 187) ಮಂಡನಮಿಶ್ರರ ಶೈಲಿಗೂ ವಿಶ್ವರೂಪರ ಶೈಲಿಗೂ ಉಂಬೇಕ (ಭವಭೂತಿ) ನ ಶೈಲಿಗೂ ವ್ಯತ್ಯಾಸವಿದೆ. ಹಿಂದೆ ಹೇಳಿದಂತೆ ವಿಶ್ವರೂಪನಿಗೆ ಭವಭೂತಿಯೆಂಬ ಹೆಸರಿದ್ದ ಮಾತ್ರಕ್ಕೆ ಅವನ ಗ್ರಂಥಗಳಿಂದಾಗಲೀ ಬೇರೆ ಗ್ರಂಥಗಳಿಂದಲಾಗಲೀ ಮಾಲತೀಮಾಧವವನ್ನು ಬರೆದ ಭವಭೂತಿಯೇ ವಿಶ್ವರೂಪನೆಂದು ಹೇಳಲು ಆಧಾರಗಳಿಲ್ಲ. ಭವಭೂತಿಯೇ ಶ್ರೀಕಂಠ ಶಿವಾಚಾರ್ಯರೆಂದು ಹೇಳಲು ಹೆಚ್ಚು ವಿಶ್ವಾಸಾರ್ಹವಾದ ಆಧಾರಗಳಿವೆ.

ಶ್ರೀಕಂಠ ಶಿವಾಚಾರ್ಯರು ಯಾವ ದೇಶದವರಾದರೇನು ಯಾವ ಕಾಲದವರಾದರೇನು ? ಇದು ಮುಖ್ಯವಲ್ಲ. ಅವರ ಭಾಷ್ಯವು ಪಠನಾರ್ಹವಾಗಿದೆ. ಶ್ರೀಕರ ಭಾಷ್ಯದೊಡನೆಯೂ ಕ್ರಿಯಾಸಾರದೊಡನೆಯೂ ವಿದ್ವಾಂಸರಿಂದ ಹೆಚ್ಚು ತುಲನಾತ್ಮಕ ವಿಮರ್ಶೆಗೆ ಅರ್ಹವಾಗಿದೆ.

---

# ಕ್ಷೇಮೇಂದ್ರನ ದಶಾವತಾರ ಚರಿತೆಯಲ್ಲಿ ಕಂಡುಬರುವ ರಾಮಾಯಣ ಕಥಾ(ರೂಪಾ)ಂತರ

ಲೇಖಕರು: ಟಿ. ಎಸ್. ಕೃಷ್ಣಮೂರ್ತಿ, ಎಂ.ಎ., ತುಮಕೂರು

ಸಂಸ್ಕೃತ ವಾಙ್ಮಯದಲ್ಲಿ ವಾಲ್ಮೀಕಿ ರಾಮಾಯಣವು ಆದಿಕಾವ್ಯವೆಂಬ ಖ್ಯಾತಿಯನ್ನು ಗಳಿಸಿಕೊಂಡಿದೆ. ಶ್ರೀರಾಮನ ಕಥೆಯನ್ನು ಪ್ರಪ್ರಥಮವಾಗಿ ಕಾವ್ಯರೂಪದಲ್ಲಿ ರಚಿಸಿಕೊಟ್ಟ ಕೀರ್ತಿ ವಾಲ್ಮೀಕಿಗೇ ಸೇರುವುದಾದರೂ[1] ಶ್ರೀರಾಮನ ಕಥೆ ವಾಲ್ಮೀಕಿಯ ಕಾಲಕ್ಕಾಗಲೇ ತುಂಬಾ ಜನಪ್ರಿಯವಾಗಿದ್ದು, ಲಾವಣಿ ಸಾಂಗತ್ಯ ಜಾನಪದ ಗೀತೆಗಳ ರೂಪದಲ್ಲಿ ಆ ಕಥೆಯ ಹಲವಾರು ವೃತ್ತಾಂತಗಳು ಬಿಡಿಬಿಡಿಯಾಗಿಯೋ, ಸಮಗ್ರವಾಗಿಯೋ ಪ್ರಚಾರದಲ್ಲಿದ್ದಿರಬೇಕೆಂಬುದು ಸಂಶೋಧಕರ ತೀರ್ಮಾನವಾಗಿದೆ. ಕುಶೀಲವರೆಂಬ ಹೆಸರಿನಿಂದ ಜನಪ್ರಿಯರಾಗಿದ್ದ ಗಾಯಕರು ಈ ಕಥೆಯ ವೃತ್ತಾಂತಗಳನ್ನು ಗ್ರಾಮಗ್ರಾಮಗಳಲ್ಲಿ ಸಹೃದಯ ಸಭೆಗಳಲ್ಲಿ, ಶ್ರೋತೃಗಳ ಮುಂದೆ ಗಾನಮಾಡಿ ಅವರ ಹೃನ್ಮನಗಳನ್ನು ತಣಿಸುತ್ತಿದ್ದರು. ಇವರಿಗೆ ರಾಜಾಶ್ರಯವೂ ಇದ್ದು ಬೇರೆ ಬೇರೆ ರಾಜರ ಆಶ್ರಯದಲ್ಲಿದ್ದ ಕುಶೀಲವರ ಗೋಷ್ಠಿಗಳಲ್ಲಿ ಈ ಕಥೆಗೆ ಬೇರೆ ಬೇರೆ ಹೆಸರುಗಳೂ ರೂಢಿಯಲ್ಲಿದ್ದಿರಬಹುದೆಂದು ಊಹಿಸಬಹುದಾಗಿದೆ. ಒಂದು ಗೋಷ್ಠಿಯಲ್ಲಿ 'ಸೀತಾಚರಿತೆ'ಯೆಂದು ಪ್ರಸಿದ್ಧಿ ಪಡೆದಿದ್ದರೆ ಇನ್ನೊಂದರಲ್ಲಿ ಈ ಕಥೆ 'ಪೌಲಸ್ತ್ಯವಧೆ'ಯೆಂಬ ಹೆಸರಿನಿಂದ ಬಳಕೆಯಲ್ಲಿದ್ದಿರಬಹುದು.[2] ಹೀಗೆಯೇ 'ರಘುವರ ಚರಿತೆ' 'ದಶಶಿರನ ವಧೆ' ಎಂಬ ಅಭಿಧಾನಗಳೂ ಬೇರೆ ಬೇರೆ ಗುಂಪುಗಳಲ್ಲಿ ಪ್ರಸಿದ್ಧವಾಗಿದ್ದವೋ ಏನೊ![3] ಹೀಗೆ ಇಕ್ಷ್ವಾಕುರಾಜರ ವಂಶದಲ್ಲಿ ಜನ್ಮತಾಳಿ ಪ್ರಚಾರಪಡೆದಿದ್ದ ರಾಮಕಥೆಗೆ ಮಾತ್ರ 'ರಾಮಾಯಣ'ವೆಂಬ ಹೆಸರೇ ಇದ್ದಿರಬೇಕೆಂದೂ ತಿಳಿದುಬರುತ್ತದೆ.[4] ಇನ್ನೊಂದು ಮುಖ್ಯ

---

1 ಈಗ ದೊರಕಿರುವ ವಾಲ್ಮೀಕಿ ರಾಮಾಯಣದ ರೀತ್ಯಾ ವಾಲ್ಮೀಕಿ, ಶ್ರೀರಾಮನ ಸಮಕಾಲೀನನಾಗಿದ್ದುದು ಮಾತ್ರವಲ್ಲದೆ ರಾಮಾಯಣ ಕಥೆಯಲ್ಲಿ ಒಂದು ಗಣನೀಯ ಪಾತ್ರವನ್ನೂ ಪಡೆದಿದ್ದನೆಂದು ಹೇಳಲಾಗಿದೆ. ವಾಲ್ಮೀಕಿ ರಾಮಾಯಣದ ಈ ಭಾಗಗಳನ್ನು ನೋಡಿ:

(ಅ) ಅಯೋಧ್ಯಾಕಾಂಡ: ಸರ್ಗ ೫೬; ಶ್ಲೋಕ ೧೫–೧೮.

(ಆ) ಉತ್ತರಕಾಂಡ: ಸರ್ಗ ೪೯, ೯೩–೯೭.

ಆದರೆ ಬಾಲಕಾಂಡದ ಮೊದಲನೇ ಸರ್ಗದಲ್ಲಿ ವಾಲ್ಮೀಕಿಗೆ ರಾಮ ಯಾರೆಂಬುದೇ ಗೊತ್ತಿರಲಿಲ್ಲವೆಂಬಂತೆ ಹೇಳಲ್ಪಟ್ಟಿದೆ. ಎರಡನ್ನೂ ನಂಬಲು ಸಾಧ್ಯವಿಲ್ಲವಷ್ಟೆ!

2 ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್ ।
ಪೌಲಸ್ತ್ಯವಧಮಿತ್ಯೇವ ಚಕಾರ ಚರಿತವ್ರತಃ ॥
(ವಾಲ್ಮೀಕಿ ರಾಮಾಯಣ: ಬಾಲಕಾಂಡ, ಸರ್ಗ ೪, ಶ್ಲೋಕ ೭)

3 ರಘುವರಚರಿತಂ ಮುನಿಪ್ರಣೀತಂ ದಶಶಿರಸಶ್ಚ ವಧಂ ನಿಶಾಮಯಧ್ವಂ ।
(ವಾ. ರಾ.: ಬಾ. ಕಾಂ. ಸರ್ಗ ೩. ಶ್ಲೋ. ೪೩. ಉತ್ತರಾರ್ಧ)

4 ಇಕ್ಷ್ವಾಕೂಣಾಮಿದಂ ತೇಷಾಂ ರಾಜ್ಞಾಂ ವಂಶೇ ಮಹಾತ್ಮನಾಂ ।
ಮಹದುತ್ಪನ್ನಮಾಖ್ಯಾನಂ ರಾಮಾಯಣಮಿತಿ ಶ್ರುತಮ್ ॥
(ವಾ. ರಾ.; ಬಾ. ಕಾಂ.; ಸರ್ಗ ೫, ಶ್ಲೋ. ೩)

ವಿಷಯ: ವಿವಿಧ ಕುಶೀಲವರ ಸಂಪ್ರದಾಯಗಳಲ್ಲಿ ಈ ಕಥೆ ಹೇಗೆ ವಿವಿಧ ಅಭಿಧಾನಗಳಿಂದ ಇದ್ದಿರಬಹುದೋ ಹಾಗೆಯೇ ಆಯಾ ಸಂಪ್ರದಾಯಗಳಲ್ಲಿ ಬೆಳೆದು ಬಂದ ಕಥೆಯೂ ಅಲ್ಪ ಸ್ವಲ್ಪ ವ್ಯತ್ಯಾಸಗಳಿಂದ ಇದ್ದಿರಬಹುದು. ಇಂದು ಖಚಿತವಾಗಿ ಮೂಲಸ್ರೋತವನ್ನು ಹುಡುಕುವುದು ಕಷ್ಟ. ಆದರೂ ಆಗಿನ ಕಾಲಕ್ಕೇ ತುಂಬಾ ಜನಪ್ರಿಯವಾಗಿದ್ದ ರಾಮಕಥಾ ಸಂಪ್ರದಾಯ ಇಕ್ಷ್ವಾಕು ರಾಜಮನೆತನದಲ್ಲಿ ಬೆಳದದ್ದೇ ಆಗಿರಬಹುದು; ಅದನ್ನೇ ತನ್ನ ಭವ್ಯಕಾವ್ಯಕ್ಕೆ ಆಧಾರ ವನ್ನಾಗಿ ವಾಲ್ಮೀಕಿ ಮಾಡಿಕೊಂಡಿರಬಹುದು. ಮೊದಲೇ ಲೋಕಪ್ರಿಯವಾಗಿದ್ದ ಈ ಸಂಪ್ರ ದಾಯದಲ್ಲಿನ ಕಥೆ ಪೂರ್ಣ ಪ್ರತಿಭಾವಂತನಾದ ವಾಲ್ಮೀಕಿಯ ಅದ್ವಿತೀಯ ಕಾವ್ಯಕಲೆಯಿಂದ, ರಚನಾಕೌಶಲದಿಂದ ಪುಟಗೊಂಡು ಎಲ್ಲರನ್ನೂ ಆಕರ್ಷಿಸಿ ನಿಂತಿರಬೇಕು. ಅವನಿಗಿಂತ ಹಿಂದೆ ಇದ್ದ ಅವನ ಅನಂತರ ಬಂದ ಈ ಕಥಾರೂಪಾಂತರಗಳು ವಾಲ್ಮೀಕಿಯ ಉಜ್ವಲ ಕಾವ್ಯಸೌಧದ ಮುಂದೆ ನಿಲ್ಲಲಾರದೆ ಅನಾದರಣೆಯ ಕತ್ತಲಿಗೆ ಸಿಕ್ಕಿ ಹಿಂಜರಿದಿರಬಹುದು. ಸೂರ್ಯೋದಯಕ್ಕೆ ಮುಂಚೆಯೂ ಕತ್ತಲು; ಸೂರ್ಯಾಸ್ತಮಯದ ನಂತರವೂ ಕತ್ತಲು ತಾನೆ! ಆದರೆ ಇಂದು ದೊರೆತಿರುವ ಕೆಲವು ಪ್ರಾಚೀನ ರಾಮಾಯಣ ಕಥಾಂತರಗಳನ್ನು ಸಾವಧಾನವಾಗಿ ವಿಮರ್ಶಿಸಿ ದಾಗ ರಾಮಕಥೆಯಲ್ಲಿ ಬೇರೆ ಬೇರೆ ಸಂಪ್ರದಾಯಗಳಿದ್ದುವು ಎಂಬುದು ಗೋಚರವಾಗದಿರದು. ಈ ಪ್ರಬಂಧದಲ್ಲಿ ಕ್ಷೇಮೇಂದ್ರನ 'ದಶಾವತಾರ ಚರಿತೆ' ಎಂಬ ಕಾವ್ಯದಲ್ಲಿ ಬರುವ ರಾಮಾವತಾರ ಕಥೆಯ ಸಂಗ್ರಹವನ್ನು ಕೊಡಲಾಗಿದೆ.[5] ಅನಂತರ ವಾಲ್ಮೀಕಿ ರಾಮಾಯಣದ ಕಥೆಗೂ ಈ ಕಥೆಗೂ ಯಾವ ಅಂಶಗಳಲ್ಲಿ ವ್ಯತ್ಯಾಸಗಳಿವೆಯೆಂಬುದನ್ನೂ ವಿಮರ್ಶಿಸಲಾಗಿದೆ:

[6]ಶ್ಲೋಕ ೧-೪: ಸಾಲಕಟಂಕಟ ರಾಕ್ಷಸವಂಶ: ಆ ವಂಶದಲ್ಲಿ ತಾರುಣ್ಯ ಲಾವಣ್ಯ ಪೂರ್ಣೆಯಾಗಿ ಇನ್ನೂ ಅವಿವಾಹಿತೆಯಾದ ಪುಷ್ಪೋತ್ಕಟೆ: ಒಮ್ಮೆ ಸಂಧ್ಯಾಸಮಯದಲ್ಲಿ ಅವಳು ವಿಹಾರಕ್ಕಾಗಿ ಮೇರುಪರ್ವತದ ತಪ್ಪಲಿಗೆ ಹೋಗಿರಲು ಅನಿರೀಕ್ಷಿತವಾಗಿ ಅಲ್ಲಿ ಪುಲಸ್ತ್ಯ ಪುತ್ರನೂ ಋಷಿಶ್ರೇಷ್ಠನೂ ಆದ ವಿಶ್ರವಸನನ್ನು ನೋಡಿ ಮೋಹಗೊಂಡಳು.

ಧ್ಯಾನದಿಂದ ಎಚ್ಚತ್ತ ಋಷಿಯು ಅವಳನ್ನು ಪ್ರೇಮದೃಷ್ಟಿಯಿಂದ ನೋಡಿದ ಕೂಡಲೇ ಅವಳು ಗರ್ಭವತಿಯಾದಳು.

ಶ್ಲೋಕ ೫: ಅಂದಿನಿಂದ ಆ ಋಷಿಯ ಪೂಜೆ-ಶುಶ್ರೂಷೆಯಲ್ಲಿ ಅವಳು ತೊಡಗಿರಲು ಕಾಲಕ್ರಮದಲ್ಲಿ ದಶಾನನನೇ ಮೊದಲಾದ ಮೂರು ಗಂಡುಮಕ್ಕಳನ್ನು ಪಡೆದಳು.[7]

---

5 ಕ್ಷೇಮೇಂದ್ರನ ಹೆಸರು ಸಂಸ್ಕೃತ ವಾಙ್ಮಯದಲ್ಲಿ ಶಾಶ್ವತವಾಗಿ ನಿಲ್ಲತಕ್ಕದ್ದಾಗಿದೆ. ಕ್ರಿ. ಶ. ೧೧ ನೆಯ ಶತಮಾನದಲ್ಲಿ ಕಾಶ್ಮೀರದಲ್ಲಿ ಆಳುತ್ತಿದ್ದ ಅನಂತನೆಂಬ ರಾಜನ ಆಸ್ಥಾನದಲ್ಲಿ ಕ್ಷೇಮೇಂದ್ರನು ಕವಿಯೂ, ಅಲಂಕಾರಿಕನೂ ಆಗಿದ್ದು ಖ್ಯಾತಿ ಗಳಿಸಿದ್ದಾನೆ. ಇವನು ಅಭಿನವ ಗುಪ್ತನ ಶಿಷ್ಯ. ಉದ್ಗ್ರಂಥಗಳನ್ನು ಸಂಗ್ರಹಿಸಿ ಹೇಳುವ ಕಲೆ ಕ್ಷೇಮೇಂದ್ರನ ವೈಶಿಷ್ಟ್ಯವಾಗಿದ್ದಿತು. ರಾಮಾಯಣಮಂಜರಿ, ಭಾರತಮಂಜರಿ ಮತ್ತು ಬೃಹತ್ಕಥಾಮಂಜರಿಗಳೇ ಇದಕ್ಕೆ ಸಾಕ್ಷಿ. ಅಲಂಕಾರಿಕನಾಗಿ – 'ಔಚಿತ್ಯ ವಿಚಾರ ಚರ್ಚಾ' ಎಂಬ ಕೃತಿಯನ್ನು ರಚಿಸಿದ್ದಾನೆ. ಇವನ 'ದಶಾವತಾರ ಚರಿತೆ' ಒಂದು ಕಾವ್ಯ. ಹೆಸರೇ ಸೂಚಿಸುವಂತೆ ವಿಷ್ಣುವು ತಳೆದ ಹತ್ತು ಅವತಾರಗಳ ಕಥೆಯ ಸಂಗ್ರಹ ಇದರಲ್ಲಿದೆ. ಪ್ರಕೃತ ಸಂಗ್ರಹಿಸಿರುವ ರಾಮಕಥೆ ಅದರಲ್ಲಿ ಬರುವ 'ರಾಮಾವತಾರ'ದಿಂದ ತೆಗೆದುಕೊಂಡದ್ದಾಗಿದೆ. [ಇದರಲ್ಲಿ ೨೯೪ ಶ್ಲೋಕಗಳಿವೆ.]

6 'ದಶಾವತಾರ ಚರಿತಮ್' : ಕಾವ್ಯಮಾಲಾ ೧೧, ನಿರ್ಣಯಸಾಗರ ಮುದ್ರಣಾಲಯ, ಬೊಂಬಾಯಿ. ೧೮೮೮.

7 ಕ್ರಮೇಣ ತೇನೈವ ಮುನೇಃ ಸಪರ್ಯಾ ವಿಧಾಯಿನೀ ತಸ್ಯ ತಪೋವನೇ ಸಾ ।
ಅಸೂತ ಪುತ್ರತ್ರಿತಯಂ ವಿಚಿತ್ರ ಕರ್ಮ ಪ್ರಕಾರೇಣ ವಿಭಿನ್ನರೂಪಮ್ ॥ (ದಶಾ. ರಾಮಾವತಾರಃ : ಶ್ಲೋ ೬. ೫)

ಶ್ಲೋಕ ೬-೯: ದಶಾನನ ಮತ್ತು ಅವನ ಸಹೋದರರು ಉಗ್ರತಪಸ್ಸನ್ನಾಚರಿಸಿ ಬ್ರಹ್ಮನಿಂದ ವರಗಳನ್ನು ಪಡೆದರು. ದಶಾನನನು ಮಹೇಶ್ವರನ ಆರಾಧನೆಯಲ್ಲಿ ತೊಡಗಿ ಅಗ್ನಿಯಲ್ಲಿ ತನ್ನ ಶಿರಸ್ಸನ್ನೇ ಹೋಮ ಮಾಡಿ ವರದಿಂದ ಅತುಲ ಪರಾಕ್ರಮಿಯಾಗಿ ದೇವಲೋಕವನ್ನು ಜಯಿಸಿ ಮೂರುಲೋಕಗಳಿಗೆ ಮುಳ್ಳಾದನು.[8]

ಶ್ಲೋಕ ೧೦-೨೦: ದಶಾನನ ಪ್ರತಾಪ; ದಿಗ್ವಿಜಯ, ಪುಷ್ಪಕಹರಣ.

ಶ್ಲೋಕ ೨೧-೩೪: ರಂಭಾವೃತ್ತಾಂತ; ನಡ(ಳ)ಕೂಬರನ ಶಾಪ.[9] ಈ ಶಾಪ ವಿಷಯವನ್ನು ರಾಕ್ಷಸರು ದಶಾನನನಿಗೆ ತಿಳಿಸಲು ಅವನು ದುಃಖಿತನಾಗಿ ಹೊರಟುಹೋದನು.

ಶ್ಲೋಕ ೩೫-೪೨: ಕೈಲಾಸೋದ್ವಹನ ವೃತ್ತಾಂತ: ಶಿವ-ಪಾರ್ವತಿಯರ ಆಜ್ಞೆಯನ್ನು ತಿಳಿಸಲು, ಅವರಲ್ಲಿ ಅವನಿಗಿದ್ದ ಗೌರವದಿಂದ ಅವನು ಏನು ಮಾತೂ ಆಡದೆ ಸುಮ್ಮನಿದ್ದನು.[10] ಆದರೆ ಪುಷ್ಪಕದಿಂದ ಇಳಿದು ಹೆಗಲಿನಿಂದ ಕೈಲಾಸಪರ್ವತದ ಬುಡವನ್ನೆತ್ತಿದನು.[11] ಶಿವನ ಉಂಗುಷ್ಠದಿಂದ ಅದುಮಲ್ಪಟ್ಟು ಪರ್ವತದ ಕೆಳಗೆ ಸಿಕ್ಕಿದ ಕೈಗಳ ವೇದನೆಯನ್ನು ತಾಳಲಾರದೆ ಅತ್ಯುಗ್ರವಾಗಿ ಅರಿಚಿದನು; ಆಗ **ರಾವಣ**ನೆಂಬ ಹೆಸರನ್ನು ಪಡೆದನು.[12]

ಶ್ಲೋಕ ೪೯-೬೮: ವೇದವತೀ ವೃತ್ತಾಂತ (ಶ್ಲೋಕ ೪೩-೪೮): ವೇದವತಿಯು ಪರ್ವತದ ಮೇಲೆ ಒಂದು ರಮ್ಯ ಸ್ಥಳದಲ್ಲಿ ತಪಸ್ಸನ್ನು ಆಚರಿಸುತ್ತಿದ್ದಳು. ಅವಳು ರಾವಣನಿಗೆ ತನ್ನ ಜನ್ಮ ಮತ್ತು ತಪಸ್ಸಿಗೆ ಕಾರಣವಾದ ಕಥೆಗಳನ್ನು ಹೇಳಿದಳು.[13] ರಾವಣನು ಬಲಾತ್ಕಾರದಿಂದ ಅವಳ ಸಂಗವನ್ನು ಪಡೆಯಲು ಇಚ್ಛಿಸಿ ಅವಳನ್ನು ಕೈಯಲ್ಲಿ ಹಿಡಿದರೂ ನಳ(ಡ)ಕೂಬರನ ಶಾಪವನ್ನು ನೆನೆದು ತನ್ನ ಆಸೆಯನ್ನು ಬಿಟ್ಟನು.[14] ಪರಪುರುಷಸ್ಪರ್ಶದಿಂದ ಉಂಟಾದ ಅಪಮಾನವನ್ನು ಸಹಿಸಲಾರದೆ ಅವಳು ಅಗ್ನಿಯಲ್ಲಿ ಆಹುತಿಗೊಂಡಳು. ಹಾಗೆ ಮಾಡುವ ಮುನ್ನ ತನ್ನ ಒಂದು ಇಚ್ಛೆಯನ್ನು ಪ್ರಕಟಪಡಿಸಿದಳು.[15]

ಶ್ಲೋಕ ೬೯: ದಶಾನನನು **ಅಲಕೆ**ಯನ್ನು ಮುತ್ತಿದ್ದು.

ಶ್ಲೋಕ ೭೦-೮೫: ಕಾಲನ ಮಹಿಮೆ: ಪರ್ವತ ಒಂದನ್ನು ರಾವಣನು ಹತ್ತಿ ನೋಡಲು ರಮ್ಯವಾದ ಪಟ್ಟಣ, ಗೋಪುರ, ಅಲ್ಲಿ ರಾಜ-ಮಹಾರಾಜರನ್ನು ನೋಡಿದನು. ಲಂಕೆಗೆ ಹಿಂತಿರುಗಿ ಮತ್ತೆ ಬಂದು ನೋಡಲು ಅವೆಲ್ಲಾ ಮಾಯವಾಗಿದ್ದವು.

---

8 ಮಹೇಶ್ವರಾರಾಧನ ಹೋಮವಹ್ನೌ ಛಿತ್ವಾ ದಶಾಸ್ಯಃ ಸ್ವಶಿರಾಂಸಿ ಸ್ವೃತ್ವಾ ।
ಜಂಭಾರಿಸಾಮ್ರಾಜ್ಯಜಯೀ ಜಗಾಮ ಜಗತ್ತ್ರಯೀಲುಂತನಕಂಟಕತ್ವಂ ॥ (ದಶಾ. ರಾ. : ಶ್ಲೋ. ೭)

9 ಅಕಾಮ ಕಾಂತಾರತಿಸಂಗಮಾಂತಂ ತಸ್ಯಾಸ್ತು ದುರ್ಜೀವಿತಮಿತ್ಯುವಾಚ ।
(ದಶಾ. ರಾ. ಶ್ಲೋ. ೩೨. ಉತ್ತರಾರ್ಧ)

10 ನೋವಾಚ ಕಿಂಚಿತ್ಸ ಹರಾನುರೋಧಾತ್ । (ದಶಾ. ರಾ. ಶ್ಲೋ. ೩೭. ಕೊನೆಯ ಪಾದ)

11 ಸ್ಕಂಧೇನ ಪಾತಾಲ ತಲಾಂತಮೂಲಾತ್ ಕೈಲಾಸಮುಲ್ಲಾಸಿತಮುಜ್ಜಹಾರ । (ದಶಾ. ರಾ. ಶ್ಲೋ. ೩೮)

12 ಅತ್ಯುಗ್ರ ರಾವೇಣ ದಶಾನನಸ್ಯ ಪ್ರಸಾದವಾನ್ ರಾವಣ ಇತ್ಯಭಿಖ್ಯಾಮ್ ।
(ದಶಾ. ರಾ. ಶ್ಲೋ. ೪೧. ಪೂರ್ವಾರ್ಧ)

13 ಕಚಸ್ಯ ವಾಚಸ್ಪತಿ ಸಂಭವಸ್ಯ ಸ್ವಾಧ್ಯಾಯಜಾ ವೇದವತೀ ಸುತಾಹಂ ।

14 ಸ್ಮೃತ್ವಾ ಸ ಶಾಪಂ ನಡಕೂಬರೋಕ್ತಂ ಸಂತ್ಯಕ್ತ ಕಾಂತಾಹಠಸಂಗವಾಂಛಃ ।
ನಖಕ್ಷತೋಚ್ಛಿಷ್ಟ ಕುಚಸ್ಥಲೀಂ ತಾಂ ಕೃತ್ವಾ ಜಗಾಮ ಸ್ವಪುರೀಂ ಸಕಾಮಃ ॥ (ದಶಾ. ರಾ. ಶ್ಲೋ. ೬೫)

15 ಜನ್ಮಾಽಸ್ತು ಮೇ ರಾಕ್ಷಸ ಸಂಕ್ಷಯಾಯ । (ದಶಾ. ರಾ. ಶ್ಲೋ. ೬೭. ಎರಡನೆಯ ಪಾದ)

ಶ್ಲೋಕ ೮೬–೯೬: ಒಂದು ಸಲ ರಾವಣನು ಪುಷ್ಪಕವೇರಿ ಒಂದು ಸರಸ್ಸನ್ನು ಸೇರಿದನು.

ಶ್ಲೋಕ ೯೭–೧೦೪: **ರಾವಣನಿಗೆ ಸೀತೆ ದೊರಕಿದ ವಿಚಿತ್ರ ಕಥೆ:** ಆ ಸರೋವರದ ದಡದಲ್ಲಿ ಅಮೃತಶಿಲೆಯ ಲಿಂಗವೊಂದನ್ನು ರತ್ನಪೀಠದ ಮೇಲಿಟ್ಟು ಕಮಲಪುಷ್ಪಗಳಿಂದ ಅರ್ಚಿಸಿದನು. ಅನಂತರ ಸರಸ್ಸಿನ ಮಧ್ಯದಲ್ಲಿದ್ದ ಒಂದು ಸುವರ್ಣ ಪದ್ಮಪುಷ್ಪವನ್ನು ಕೀಳಲು ಯತ್ನಿಸಿದನು. ಆಗ ಆ ಪದ್ಮದಲ್ಲಿ ಭೀತಳಾಗಿ ಅವಿತು ನಿಂತ ಮತ್ತು ಸಾಕ್ಷಾತ್ ಲಕ್ಷ್ಮಿಯೋ ಎಂಬಂತೆ ಇದ್ದ ಒಂದು ಕನ್ಯಾರತ್ನವನ್ನು ಕಂಡನು. ಆ ಕನ್ಯೆಯನ್ನು ಎತ್ತಿಕೊಂಡು ಆ ಪದ್ಮಪುಷ್ಪವನ್ನು ಚಂದ್ರಶೇಖರನ ಶಿರಸ್ಸಿನಲ್ಲಿ ಅರ್ಪಿಸಿ ವಿಸ್ಮಯಪೂರ್ಣನಾಗಿ ಪ್ರೀತಿಯಿಂದ ಆ ಕನ್ಯೆಯೊಡನೆ ತನ್ನ ರಾಜಧಾನಿಯನ್ನು ತಲುಪಿದನು. ಅನ್ಯಾದೃಶ ಲಾವಣ್ಯಪೂರ್ಣಳಾದ ಆ ಕನ್ಯೆಯನ್ನು ನೋಡಿದ ಮಂಡೋದರಿಯು ಚಕಿತಳಾದಳು. ಒಮ್ಮೆ ಆ ಕನ್ಯೆಯನ್ನು ತೊಡೆಯ ಮೇಲೆ ಕೂಡಿಸಿಕೊಂಡು ಮಂಡೋದರಿ ಮುದ್ದಿಸುತ್ತಿರಲು ನಾರದನು ಅಲ್ಲಿಗೆ ಬಂದು–'ಚಪಲೇಂದ್ರಿಯನಾದ ನಿನ್ನ ಪತಿಯ ಕಾಮಕ್ಕೆ ಮುಂದೆ ಇವಳು ಪಾತ್ರಳಾಗುತ್ತಾಳೆ' ಎಂದು ಎಚ್ಚರಿಸಿದನು. ಇದನ್ನು ಕೇಳಿ, ಮಹಾರ್ಘವಸ್ತ್ರಗಳಿಂದ ಆ ಮಗುವನ್ನು ಮುಚ್ಚಿ ಸುವರ್ಣ ಮಂಜೂಷ ಒಂದರಲ್ಲಿಟ್ಟು ಮಂಡೋದರಿಯು ಅದನ್ನು ಸಮುದ್ರದ ದಡದಲ್ಲಿ ಭೂಮಿಯಲ್ಲಿ ಅವಿತಿಟ್ಟಳು. ಕಾಲಕ್ರಮದಲ್ಲಿ ಜನಕ ಮಹಾರಾಜನು ಯಜ್ಞಭೂಮಿಯನ್ನು ಚಿನ್ನದ ನೇಗಿಲಿನಿಂದ ಉಳುತ್ತಿರಲು ಅಲ್ಲಿ ಅವನಿಗೆ ಸೀತೆಯೆಂದು ಲೋಕಪ್ರಸಿದ್ಧಳಾದ ಈ ಚಂದ್ರಮುಖಿಯು ದೊರೆತಳು.[16]

ಶ್ಲೋಕ ೧೦೫–೧೩೦: ಈ ವೇಳೆಗೆ ಅಂಗವಿಕಲಳಾದ, ಶೂರ್ಪಣಖೆ ಇದ್ದಕ್ಕಿದಂತೆ ಕಾಣಿಸಿಕೊಂಡು ರಾವಣನನ್ನು ರಾಮನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಪ್ರಚೋದಿಸುತ್ತಾಳೆ: ರಾವಣನು ಮಾರೀಚನನ್ನು ಸಂಧಿಸುತ್ತಾನೆ. ಅಲ್ಲಿ ಮಾರೀಚನು ರಾವಣನಿಗೆ ರಾಮನ

---

16 (ಅ) ಸರಸ್ತಟೇ ಟಂಕಿತರತ್ನಪೀಠೇ ಲಿಂಗಂ ವಿಧಾಯ ಸ್ಫಟಿಕಾದ್ರಿಶೃಂಗಮ್ ।
ಸ ಪುಷ್ಪಕೋಽಪಾಸ್ಪೃತದಿವ್ಯಪದ್ಮೈರರ್ಚಾಂ ಚಕಾರಾಮೃತರಶ್ಮಿಮೌಲೇಃ ॥
(ಆ) ಸ ತ್ರ್ಯಂಬಕಸ್ಯಾಂಬರಚುಂಬ್ಯಮಾನಾಂ ವಿಧಾಯ ಪೂಜಾಂ ಕಮಲೋಪಚಾರೈಃ ।
ಹ್ರದಸ್ಯ ವಿಷ್ಣೋರಿವ ಮಧ್ಯಜಾತಂ ಸಮಾದಧೇ(ದೇ) ಮೂರ್ಧ್ನಿ ನಿಪಾತುಮಬ್ಜಮ್ ॥
(ಇ) ತಸ್ಯಾಂತರೇ ಕಾಂಚನಕರ್ಣಿಕಸ್ಯ ವಿಚಿತ್ರ ರತ್ನೋಜ್ಜ್ವಲ ಪಲ್ಲವಸ್ಯ ।
ಸ ದಿವ್ಯಪದ್ಮಸ್ಯ ದದರ್ಶ ಕನ್ಯಾಂ ತದ್ಭೀತಿಲಗ್ನಾಮಿವ ಜಾತ(ತು) ಲಕ್ಷ್ಮೀಮ್ ॥
(ಈ) ಆದಾಯ ಕನ್ಯಾಂ ಕಮಲಂ ವಿಧಾಯ ತಚ್ಚಂದ್ರಚೂಡಸ್ಯ ಕಿರೀಟಕೋಟೌ ।
ಪ್ರೀತಿಂ ವಹನ್ ವಿಸ್ಮಯಗರ್ಭಗುರ್ವೀಂ ಲಂಕೇಶ್ವರಃ ಸ್ವಾಂ ನಗರೀಂ ಜಗಾಮ ॥
(ಉ) ಮಂಡೋದರೀ ತದ್ದಯಿತಾಥ ತತ್ರ ತೇನಾರ್ಪಿತಾಂ ಕಲ್ಪಿತಪುತ್ರಿಕಾಂ ತಾಮ್ ।
ಅನನ್ಯಲಾವಣ್ಯವತೀಂ ವಿಲೋಕ್ಯ ಕನ್ಯಾಮಭೂದ್ವಿಸ್ಮಯನಿಶ್ಚಲೇವ ॥
(ಊ) ಕದಾಚಿದುತ್ಸಂಗಗೃಹೀತಕನ್ಯಾಂ ತಾಂ ನಾರದೋಽಭ್ಯೇತ್ಯ ಮುನಿರ್ಜಗಾದ ।
ಪತ್ಯುಸ್ತವೇಯಂ ಚಪಲೇಂದ್ರಿಯಸ್ಯ ಕನ್ಯಾ ಭವಿಷ್ಯತ್ಯಭಿಲಾಷಭೂಮಿಃ ॥
(ಋ) ಶ್ರುತ್ವೈತದಾಚ್ಛಾದ್ಯ ಮಹಾರ್ಘಪಟ್ಟೈಃ ಸುವರ್ಣಮಂಜೂಷಧೃತಾಂ ಕುಮಾರೀಂ ।
ಮಂಡೋದರೀ ಭೂಮಿತಲಾವಖಾತೇ ತತ್ಯಾಜ ರತ್ನಾಕರ ಪಾರತೀರೇ ॥
(ೠ) ಕಾಲೇ ಪ್ರಯಾತೇ ಜನಕೇನ ರಾಜ್ಞಾ ಯಜ್ಞಾಂಗಣೇ ಹೈಮಹಲೇನ ಕೃಷ್ಟೇ ।
ಲಬ್ಧಾ ಸಮೃದ್ಧೇಂದುಮುಖೀ ಸುತಾ ಸಾ ಸೀತೇತಿ ನಾಮ್ನಾ ಭುವನೇ ಪ್ರಸಿದ್ಧಾ ॥
(ದಶಾ. ರಾ. ಶ್ಲೋ. ೯೭–೧೦೪)

ಕಥೆಯನ್ನೆಲ್ಲಾ ಅಂದರೆ ಬಾಲಕಾಂಡದಿಂದ ಅರಣ್ಯಕಾಂಡದವರೆಗೆ ನಡೆದಿರುವ ವೃತ್ತಾಂತವನ್ನೆಲ್ಲಾ ಸಂಗ್ರಹವಾಗಿ ತಿಳಿಸುತ್ತಾನೆ. [ಇದರಲ್ಲಿ ವಿಷ್ಣುವೇ ರಾಮನಾಗಿ ಜನ್ಮ ತಳೆದಿರುವನೆಂದೂ ತಿಳಿಸುತ್ತಾನೆ.]

೧೩೧-೧೫೧: ಅನಂತರ ರಾವಣನು ಮಾರೀಚನ ಸಹಾಯದಿಂದ ಸೀತೆಯನ್ನು ಅಪಹರಿಸುತ್ತಾನೆ.

೧೫೨-೧೯೪: ಇದಾದನಂತರ ರಾವಣನ ಗೂಢಚಾರ ಸುಕೇತು ಎನ್ನುವನು ಮಾರೀಚನ ವಧೆಯಿಂದ ಹಿಡಿದು ಸುಗ್ರೀವ ಸಖ್ಯ, ವಾನರಪ್ರೇಷಣೆ, ಹನುಮಂತನ ಸಮುದ್ರೋಲ್ಲಂಘನೆ, ಅಶೋಕವನಭಂಜನವೇ ಮುಂತಾದ ಲಂಕಾದಹನದವರೆಗಿನ ವಿವರಗಳನ್ನು ರಾವಣನಿಗೆ ತಿಳಿಸುತ್ತಾನೆ.

೧೯೫-೨೦೬: ಸುಕೇತು ಮತ್ತು ವಿಭೀಷಣ ಇಬ್ಬರೂ ಸೀತೆಯನ್ನು ರಾಮನಿಗೆ ಮತ್ತೆ ಅರ್ಪಿಸುವಂತೆ ರಾವಣನಿಗೆ ತಿಳಿಸುತ್ತಾರೆ. ರಾವಣನ ದುರ್ಬುದ್ಧಿಯನ್ನು ಸಹಿಸದೆ ವಿಭೀಷಣ ರಾಮನ ಶರಣು ಹೋಗುತ್ತಾನೆ.

೨೦೭-೨೧೩: ಆಮೇಲೆ ರಾವಣನು ಒಬ್ಬ ಗುಪ್ತಚಾರನ ಮೂಲಕ ವಿಭೀಷಣನನ್ನು ರಾಮನು ಲಂಕೆಯ ರಾಜನೆಂದು ಅಭಿಷೇಕ ಮಾಡಿದ ವಿಚಾರ, ಸೇತುಬಂಧನ, ರಾಮನು ತ್ರಿಕೂಟಪರ್ವತದಲ್ಲಿ ಬಿಡಾರ ಮಾಡಿರುವ ವಿಚಾರ—ಇವೆಲ್ಲವನ್ನೂ ತಿಳಿಯುತ್ತಾನೆ.

೨೧೪-೨೨೩: ನಾಗಪಾಶದಿಂದ ರಾಮ-ಲಕ್ಷ್ಮಣರ ಬಂಧನ, ಕುಂಭಕರ್ಣನನ್ನು ಎಚ್ಚರಗೊಳಿಸಿದ ವಿಚಾರ.

೨೨೪-೨೫೯: ಕುಂಭಕರ್ಣನ ಮರಣ; ರಾಮ-ರಾವಣರ ಯುದ್ಧ; ರಾವಣನ ಮರಣ; ಸೀತಾ ಅಗ್ನಿಪರೀಕ್ಷಣ; ಶ್ರೀರಾಮನ ಅಯೋಧ್ಯಾಗಮನ.

ಶ್ಲೋಕ ೨೬೦-೨೬೪: ಸೀತಾಪರಿತ್ಯಾಗ ವೃತ್ತಾಂತ: ರಾಮನಿಂದ ಆಜ್ಞಪ್ತನಾದ ಲಕ್ಷ್ಮಣನು ಸೀತೆಯನ್ನು ವಾಲ್ಮೀಕ್ಯಾಶ್ರಮದ ಸಮೀಪದಲ್ಲಿ ಬಿಡುತ್ತಾನೆ. ಕವಿ ಸೀತೆಯ ದುಃಸ್ಥಿತಿಗೆ ಮರುಗುತ್ತಾನೆ.[17]

ಶ್ಲೋಕ ೨೬೬: ಲವ-ಕುಶ ಜನ್ಮ.

ಶ್ಲೋಕ ೨೬೭: ಅವರಿಗೆ ರಾಮಾಯಣವನ್ನು ಉಪದೇಶಿಸಿದುದು.[18]

ಶ್ಲೋಕ ೨೭೦-೨೭೫: ನಾಯಿಯ ವೃತ್ತಾಂತ.

ಶ್ಲೋಕ ೨೭೬-೨೭೭: ಲವಣಾಸುರ ವೃತ್ತಾಂತ.

---

17 ಬಾಲ್ಯೇ ಭೂಮಿತಲೇಽರ್ಪಿತಾ ತದನು ಚ ಕ್ಲಿಷ್ಟಾ ವನೇ ಭೀಷಣೇ
ಪೌಲಸ್ತ್ಯೇನ ಹೃತಾ ಭಯಕ್ಷತಧೃತಿ ರ್ಬ(ತೀರು)ದ್ಧಾಥ ಲಂಕಾವನೇ ।
ಲಬ್ಧಾ ಶುದ್ಧ್ಯನಲೇ ಚ್ಯುತಾ ಪುನರಪಿ ತ್ಯಕ್ತಾ ಸತೀ ಜಾನಕೀ
ಸಂಸಾರೇ ಸತತಾಶ್ರುಪಾತಿನಿ ನೃಣಾಂ ಧಿಕ್ ನಿತ್ಯ ದುಃಖ ಸ್ಥಿತಿಮ್ ॥ (ದಶಾ. ರಾ. ಶ್ಲೋ. ೨೬೪)

18 ಪೂರ್ವಂ ಭವಿಷ್ಯಚ್ಚರಿತಂ ನಿಬದ್ಧಂ ರಾಮಾಯಣಂ ಕರ್ಣರಸಾಯನಂತಾ । (ದಶಾ. ರಾ. ಶ್ಲೋ. ೨೬೭)

ಶ್ಲೋಕ ೨೭೮–೨೮೪: ಶಂಬೂಕ ಅಥವಾ ಶೂದ್ರತಪಸ್ವೀ ವೃತ್ತಾಂತ.[19] ನಾರದ ವಾಕ್ಯ[20]–ರಾಮನಿಂದ ಶಿರಚ್ಛೇದನ ಮಾಡಲ್ಪಟ್ಟ ಶಂಬೂಕನು ವಿಮಾನದಲ್ಲಿ ಸ್ವರ್ಗಕ್ಕೆ ತೆರಳುವುದು.

ಶ್ಲೋಕ ೨೮೬–೨೮೮: ರಾಮಾಶ್ವಮೇಧ ವೃತ್ತಾಂತ: ಸೀತಾ ಸ್ವರ್ಣ ಪ್ರತಿಮೆ.[21] ರಾಮನು ರಾಮಾಯಣ ಕೇಳಿ ಲವ–ಕುಶರನ್ನು ತನ್ನ ಪುತ್ರರೆಂದು ಅರಿತಿದ್ದು: ವಾಲ್ಮೀಕಿಗೆ ಆಹ್ವಾನ ಕೊಟ್ಟಿದ್ದು.

ಶ್ಲೋಕ ೨೮೯–೨೯೨: ವಾಲ್ಮೀಕಿ ಶಿಷ್ಯರೊಂದಿಗೆ ಸೀತೆಯ ಆಗಮನ.[22] ಸೀತಾದೇವಿ ಮಹಾಜನಗಳ ಮಧ್ಯೆ ತನ್ನ ಪಾತಿವ್ರತ್ಯವನ್ನು ಪ್ರತಿಷ್ಠಾಪಿಸಿದುದು. ನಂತರ ಭೂದೇವಿಯ ಮಡಿಲಿನಲ್ಲಿ ಅದೃಶ್ಯಳಾದುದು. ಶ್ರೀರಾಮನು ಪುತ್ರರಲ್ಲಿ ಪ್ರೀತಿ ತೋರಿಸುತ್ತಾ ಜೀವನ ಸಾಗಿಸಿದುದು.

ಶ್ಲೋಕ ೨೯೩: ತಮ್ಮಂದಿರೊಡನೆ ಶ್ರೀರಾಮನ ಮಹಾಪ್ರಸ್ಥಾನ.[23]

* * * *

ಕ್ಷೇಮೇಂದ್ರನು ರಚಿಸಿರುವ ಈ ರಾಮಾಯಣ ಕಥೆಗೂ ವಾಲ್ಮೀಕಿ ರಚಿಸಿರುವ ರಾಮಾಯಣ ಕಥೆಗೂ ಪ್ರಧಾನವಾಗಿ ಈ ಅಂಶಗಳಲ್ಲಿ ವ್ಯತ್ಯಾಸಗಳಿವೆ:

೧. ವಾಲ್ಮೀಕಿಯು ರಾಮಾಯಣವನ್ನು ರಾಮನನ್ನೇ ಪ್ರಧಾನವಾಗಿ ಮಾಡಿಕೊಂಡು ರಚಿಸಿದ್ದರೆ ಕ್ಷೇಮೇಂದ್ರನು ರಾವಣನನ್ನು ಪ್ರಧಾನವಾಗಿ ಮಾಡಿಕೊಂಡಂತಿದೆ.[24] ಆದುದರಿಂದಲೇ ಕ್ಷೇಮೇಂದ್ರನ ರಾಮಾವತಾರ ಕಥೆಯಲ್ಲಿ ರಾವಣನ ದಿಗ್ವಿಜಯವೂ, ಅವನು ಸೀತೆಯನ್ನು ಅಪಹರಿಸುವ ಮುನ್ನ ನಡೆದ ಅವನ ಜನ್ಮಾದಿ ಕಥೆಗಳೂ, ಅವನಿಗೆ ದೊರೆತ ಶಾಪಾದಿಗಳೂ ಹೆಚ್ಚಿನ ಪ್ರಾಧಾನ್ಯ ಗಳಿಸಿವೆ. ಅಷ್ಟೇ ಏಕೆ! ಕಥೆ ಪ್ರಾರಂಭವಾಗುವುದೇ ರಾವಣನ ಜನ್ಮಾದಿ ವೃತ್ತಾಂತದಿಂದ. ರಾಮನ ಜನ್ಮಾದಿ ವೃತ್ತಾಂತಗಳೂ, ಬಾಲ, ಅಯೋಧ್ಯಾ ಅರಣ್ಯಕಾಂಡಗಳ ಕಥೆಗಳೂ ಮಾರೀಚನ ಮುಖಾಂತರ ಸಂಕ್ಷೇಪವಾಗಿ ಹೇಳಲ್ಪಟ್ಟಿವೆ. ಉಳಿದ ಬಹು ವಿಷಯಗಳೂ ಗುಪ್ತಚಾರನಿಂದ ಸಂಗ್ರಹಿಸಲ್ಪಟ್ಟಿದೆ.

---

19 'ಸುತಮಷ್ಟವರ್ಷಂ' (ದಶಾ. ರಾ. ಶ್ಲೋ. ೨೭೮ ಮೊದಲನೆ ಪಾದ)

20 ಶೂದ್ರಸ್ತಪಸ್ತೀವ್ರತರಂ ಕರೋತಿ ಶಂಬೂಕ ನಾಮಾ ದಿಶಿ ದಕ್ಷಿಣಸ್ಯಾಂ ।
ಸ ಏವ ವರ್ಣಾಶ್ರಮ ಧರ್ಮಲೋಪಃ ಪ್ರತ್ಯಕ್ಷಯೋ ಕಾರಣಮುಗ್ರ ಜಾತೇಃ ॥
(ದಶಾ. ರಾ. ಶ್ಲೋ. ೨೮೪ ಮೊದಲನೆ ಪಾದ)

21 ಹೈಮೀಕೃತಾ ತಸ್ಯ ಸುವರ್ಣಕಾರೈರಭಿನ್ನರೂಪಾ ರಘುರಾಜಪತ್ನೀ ।
ಅಭೂತ್ಪರಿತ್ಯಾಗ ಘನಾವಮಾನ ಮನ್ಯುವ್ರತಾ ಮೌನವತೀವ ಸೀತಾ ॥ (ದಶಾ. ರಾ. ಶ್ಲೋ. ೨೮೬)

22 ವಾಲ್ಮೀಕಿ ಶಿಷ್ಯೈರಥ ರಾಮಪತ್ನೀ ತಾಂ ಪ್ರಾಪಿತಾ ಯಜ್ಞಭುವಂ ಕ್ಷಣೇನ ।
ಲಜ್ಜಾವತೀ ರಾಜಸಹಸ್ರಮಧ್ಯೇ ಮನ್ಯುಸ್ರಗಲ್ಭಾಂ ಗಿರಮುಜ್ಜಹಾರ ॥ (ದಶಾ. ರಾ. ಶ್ಲೋ. ೨೮೯)

23 ಅಥಾಶ್ವಮೇಧೇ ವಿಧಿಭಾಜಿಪೂರ್ಣೇ ಕಾಲೇನ ಸಾಕ್ಷಾದ್ದ್ವಿಜನೇ ಸಮೇತ್ಯ ।
ಸಂಸ್ಮಾರಿತೋ ಸ್ವೈಷ್ಣವಧಾಮ ರಾಮಃ ಸಹಾನುಜೈರ್ದಿವ್ಯಪದಂ ಪ್ರಪೇದೇ ॥ (ದಶಾ. ರಾ. ಶ್ಲೋ. ೨೯೩)

24 ಜೈನ ರಾಮಾಯಣಗಳಲ್ಲಿ ಇದು ಸಾಧಾರಣವಾಗಿದೆ. ಪಉಮಚರಿಯ, ಪಂಪ ರಾಮಾಯಣ ಮುಂತಾದುವುಗಳನ್ನು ನೋಡಿ.

೨. ರಾವಣನ ಜನ್ಮ, ವಿವಾಹ ಮತ್ತು ಅವನ ದಿಗ್ವಿಜಯ ವರ್ಣನೆ ವಾಲ್ಮೀಕಿಯಲ್ಲಿ ಇನ್ನೂ ವಿಸ್ತಾರವಾಗಿದೆ. ಕ್ಷೇಮೇಂದ್ರನು ಕೆಲವು ವೃತ್ತಾಂತಗಳನ್ನು ಬಿಟ್ಟಿದ್ದಾನೆ.[25]

೩. ವಾಲ್ಮೀಕಿ ಹೇಳಿರುವ ಸೀತಾಜನ್ಮ ವೃತ್ತಾಂತಕ್ಕೂ ಕ್ಷೇಮೇಂದ್ರನು ಕೊಟ್ಟಿರುವ ಸೀತಾಜನ್ಮ ವೃತ್ತಾಂತಕ್ಕೂ ತುಂಬಾ ವ್ಯತ್ಯಾಸವಿದೆ.[26a] ವಾಲ್ಮೀಕಿಯು **ನಾಲ್ಕು ಸಲ** ಸೀತೆಯ ಜನ್ಮಕ್ಕೆ ಸಂಬಂಧಿಸಿದ ವಿವರವನ್ನು ಕೊಟ್ಟಿದ್ದಾನೆ.[26] ಅಲ್ಲಿ 'ಲಾಂಗಲಾದುತ್ಥಿತಾ' (ನೇಗಿಲಿನಿಂದ ಹೊರಕ್ಕೆ ತರಲ್ಪಟ್ಟವಳು) 'ಭೂತಲಾದುತ್ಥಿತಾ' (ಭೂಮಿಯಿಂದ ಹೊರಬಂದವಳು), 'ಅಯೋನಿಜಾ', 'ಜನಕಸ್ಯ ಕುಲೇ ಜಾತಾ', ಎಂಬ ಮಾತುಗಳು ಬಂದಿವೆ.

೪. ಕೆಲವು ಸಣ್ಣ ವ್ಯತ್ಯಾಸಗಳು:

(ಅ) ವೇದವತೀ ವೃತ್ತಾಂತದಲ್ಲಿ ವಾಲ್ಮೀಕಿಯು ವೇದವತಿಯ ಬಾಯಿನಲ್ಲಿ ರಾವಣನನ್ನು ಕುರಿತು 'ತಸ್ಮಾತ್ತವ ವಧಾರ್ಥಂ ಸಮುತ್ಪತ್ಸ್ಯೇ ಹ್ಯಹಂ ಪುನಃ'[27] (ನಿನ್ನ ವಧೆಗಾಗಿ ಮತ್ತೆ ಜನ್ಮ ತಾಳುವೆ) 'ತಸ್ಮಾತ್ತ್ವಯೋನಿಜಾ ಸಾಧ್ವೀ ಭವೇಯಂ ಧರ್ಮಿಣಃ ಸುತಾ'[28]

---

25 ವಾಲ್ಮೀಕಿ ಹೇಳಿರುವ ರಾವಣಾದಿಗಳ ವಿವಾಹ, ಮರುತ್ತವಿಜಯ, ಅನರಣ್ಯಶಾಪ, ಯಮ-ರಾವಣಯುದ್ಧ, ಬಲಿದರ್ಶನ, ಇಂದ್ರಪರಾಜಯ, ಕಾರ್ತವೀರ್ಯಾರ್ಜುನ ಜಯ – ಇವೇ ಮುಂತಾದವುಗಳು ಇಲ್ಲಿಲ್ಲ.

26 a ಕ್ಷೇಮೇಂದ್ರನೇ ಸಂಗ್ರಹಿಸಿರುವ ಪಶ್ಚಿಮೋತ್ತರೀಯ ರಾಮಾಯಣ ಪಾಠದ ಪ್ರಕಾರ ಸೀತಾ ಜನ್ಮ ಕಥೆ ಈ ರೀತಿ ಇದೆ:—

"ಜನಕ ರಾಜನಿಗೆ ಸಂತಾನವಿರಲಿಲ್ಲ. ಒಂದು ದಿನ ಯಜ್ಞಭೂಮಿಯನ್ನು ನೇಗಿಲಿನಿಂದ ಉಳುತ್ತಿರಲು ಅಂತರಿಕ್ಷದಲ್ಲಿ ಲಾವಣ್ಯಮಯಿಯಾದ ಅಪ್ಸರೆ ಮೇನಕೆಯನ್ನು ನೋಡಿದನು. ಅವಳಲ್ಲಿ ಸಂತಾನ ಪಡೆಯುವ ಅಭೀಪ್ಸೆ ಅವನಿಗೆ ಉಂಟಾಯಿತು. ಆ ತಕ್ಷಣವಲ್ಲೇ ಅವಳಿಂದ ಅವನಿಗೆ ಮೇನಕೆಯನ್ನೇ ಸೌಂದರ್ಯದಲ್ಲಿ ಹೋಲುವ ಒಂದು ಕನ್ಯಾರತ್ನ ಜನಿಸುವುದೆಂಬ ಆಕಾಶವಾಣಿ ಕೇಳಿಬರಲು ಅವನಿಗೆ ವಿಶ್ವಾಸ ಮೂಡಿತು. ತದನಂತರವೇ ಭೂಮಿಯಿಂದ ಮೇಲೆ ಬಂದ ಸೀತೆಯನ್ನು ನೋಡಿದನು. ಆ ಕೂಡಲೇ "ಮೇನಕೆಯಿಂದ ಜನಿಸಿದ ಇವಳು ನಿನ್ನ ಮಾನಸಪುತ್ರಿ" ಎಂಬ ಆಕಾಶವಾಣಿ ಕೇಳಿಬಂತು.

—(ರಾಮಾಯಣ ಮಂಜರಿ—ಕ್ಷೇಮೇಂದ್ರ [೩೪೪–೩೪೬])

26 ನೋಡಿ: (ಅ) ಬಾಲಕಾಂಡ, ಸರ್ಗ ೬೬, ಶ್ಲೋಕ ೧೩–೧೫.
(ಆ) ಅಯೋಧ್ಯಾ. ಸರ್ಗ ೧೧೮. ಶ್ಲೋ. ೨೭–೩೨.
(ಇ) ಸುಂದರ. ಸರ್ಗ ೧೬. ಶ್ಲೋ. ೧೫–೧೬.
(ಈ) ಯುದ್ಧ. ಸರ್ಗ ೧೧೯. ಶ್ಲೋ. ೧೫.
ವಾಲ್ಮೀಕಿ ರಾಮಾಯಣ (ಲಾ ಜರ್ನಲ್ ಪ್ರೆಸ್, ಮದರಾಸ್)
ವ್ಯಾಖ್ಯಾನಕಾರ ಗೋವಿಂದರಾಜನೂ ಈ ಕಥೆಯನ್ನು ತಿಳಿಸಿದ್ದಾನೆ. ಇವನ ರೀತ್ಯಾ ವೇದವತಿಯೇ ಕಮಲದಲ್ಲಿ ಪುನರ್ಜನ್ಮ ತಳೆದಳೆಂದೂ ರಾವಣನು ಕಮಲಪುಷ್ಪದ ಮೇಲೆ ಕುಳಿತಿದ್ದ ಅವಳನ್ನು ನೋಡಿ ಸ್ವಗೃಹಕ್ಕೆ ಒಯ್ಯಲು ಲಕ್ಷಣಜ್ಞನಾದ ಅವನ ಮಂತ್ರಿಯು ಅವಳು ಅವನಿಗೆ ಮೃತ್ಯುವಾಗುವಳೆಂದು ನುಡಿದನೆಂದೂ ಆ ಕಾರಣದಿಂದ ರಾವಣನು ಅವಳನ್ನು ಸಮುದ್ರಕ್ಕೆ ಎಸೆದನೆಂದೂ ಅವಳು ಸಮುದ್ರದಿಂದ ಭೂಮಿಯನ್ನು ಸೇರಿ ಜನಕನ ನೇಗಿಲಿನಿಂದ ಬಂದಳೆಂದೂ ಹೇಳಿದೆ.
(ಉತ್ತರಕಾಂಡ: ಸರ್ಗ ೧೭. ಶ್ಲೋಕ ೩೪ರ ನಂತರ ಬರುವ ಪ್ರಕ್ಷಿಪ್ತ ಭಾಗ: ರಾಮಾಯಣ: ಗುಜರಾತಿ ಪ್ರಿಂಟಿಂಗ್ ಪ್ರೆಸ್, ೧೯೨೦.)

27 ವಾಲ್ಮೀಕಿ ರಾಮಾಯಣ, ಉತ್ತರಕಾಂಡ: ಸರ್ಗ ೧೭. ಶ್ಲೋಕ ೩೨.

28 ,, ,, ,, ೩೪.

(ಅದಕ್ಕಾಗಿ ಅಯೋನಿಜೆಯಾಗಿ ಧರ್ಮಿಷ್ಠನ ಪುತ್ರಿಯಾಗಿ ಜನಿಸಿ ಸಾಧ್ವಿಯೆನಿಸುವೆ) ಎಂಬ ಮಾತನ್ನು ಹೇಳಿಸಿದ್ದಾನೆ. ಕ್ಷೇಮೇಂದ್ರನಲ್ಲಿ 'ಜನ್ಮಾಸ್ತು ಮೇ ರಾಕ್ಷಸ ಸಂಕ್ಷಯಾಯ' (ರಾಕ್ಷಸರ ಹನನಕ್ಕಾಗಿ ನನಗೆ ಮತ್ತೆ ಜನ್ಮ ಲಭಿಸಲಿ) ಎಂದಿಷ್ಟು ಮಾತ್ರವಿದೆ. ಎರಡನೆಯ ಮಾತು ಹೇಳದಿರುವುದಕ್ಕಾಗಿ ಕಾರಣ ಸ್ಪಷ್ಟವಾಗಿಯೇ ಇದೆ. ಕ್ಷೇಮೇಂದ್ರನು ಕೊಟ್ಟಿರುವ ಸೀತಾ ಜನ್ಮವೃತ್ತಾಂತವೇ ಬೇರೆಯಷ್ಟೆ. (ಅಡಿ ಟಿಪ್ಪಣಿ 26 a ಮತ್ತು 26 ನೋಡಿ.)

(ಆ) ವಾಲ್ಮೀಕಿಯ ಕಾವ್ಯದಲ್ಲಿ ವಾಲ್ಮೀಕಿಯೇ ಸೀತೆಯೊಡನೆ ರಾಮಯಜ್ಞಶಾಲೆಗೆ ಬಂದನೆಂದೂ ಸೀತಾ ಪಾತಿವ್ರತ್ಯಕ್ಕೆ ಭರವಸೆ ಕೊಟ್ಟನೆಂದೂ ಹೇಳಿದೆ.[29] ಆದರೆ 'ಸಹ ಶಿಷ್ಯೈಃ' – ಶಿಷ್ಯರೊಡನೆ ಸೀತೆಯನ್ನು ವಾಲ್ಮೀಕಿ ಕಳುಹಿಸಿದನೆಂದು ಕ್ಷೇಮೇಂದ್ರನು ಹೇಳಿದ್ದಾನೆ.

(ಇ) ಶೂದ್ರತಪಸ್ವಿ ವೃತ್ತಾಂತದಲ್ಲಿ ಸತ್ತ ಬ್ರಾಹ್ಮಣ ಪುತ್ರನ ವಯಸ್ಸು ವಾಲ್ಮೀಕಿಯ ರೀತ್ಯಾ ೫೦೦೦ ವರ್ಷಗಳು.[30] ವ್ಯಾಖ್ಯಾನಕಾರರು ಬಹು ಕಷ್ಟಪಟ್ಟು ವರ್ಷವೆಂದರೆ ದಿನವೆಂದು ವ್ಯಾಖ್ಯಾನ ಮಾಡಲಿಚ್ಛಿಸಿದ್ದಾರೆ. ಕ್ಷೇಮೇಂದ್ರನು 'ಸುತಮಷ್ಟವರ್ಷಂ' – ಎಂಟು ವರ್ಷದ ಮಗನೆಂದು ತಿಳಿಸಿದ್ದಾನೆ. ಕ್ಷೇಮೇಂದ್ರನು ರಾಮಾಯಣ ಕಥೆಯನ್ನು ತನ್ನ ಮೂರು ಕೃತಿಗಳಲ್ಲಿ ಹೇಳಿದ್ದಾನೆ; ರಾಮಾಯಣಮಂಜರಿ, ಬೃಹತ್ಕಥಾಮಂಜರಿ[31] ಮತ್ತು ಪ್ರಸ್ತುತ ದಶಾವತಾರ ಚರಿತೆ. ಇದರಲ್ಲಿ ಬೃಹತ್ಕಥಾಮಂಜರಿಯಲ್ಲಿ ಬಂದಿರುವ ರಾಮಾಖ್ಯಾಯಿಕೆ ಕೇವಲ ೨೦ ಶ್ಲೋಕಗಳ ಪರಿಮಿತಿ ಉಳ್ಳದ್ದು. ಅದರಲ್ಲಿ ವಾಲ್ಮೀಕ್ಯಾಶ್ರಮದ ಸಮೀಪದಲ್ಲಿ ಸೀತೆಯನ್ನು ರಾಮಾಜ್ಞೆಯಂತೆ ಲಕ್ಷ್ಮಣನು ಪರಿತ್ಯಜಿಸಿದಾಗ ಅಲ್ಲಿನ ಋಷಿಗಳು ಅವಳು ಕಳಂಕೆಯೆಂದು ಭಾವಿಸಿ 'ಜಲಪರೀಕ್ಷೆ'ಯೊಂದನ್ನು ನಡೆಸಿದರೆಂದು ಹೇಳಿದೆ.[32] ಆ ಭಾಗ ಅದೇ ಕವಿಯ ಪ್ರಕೃತ ಗ್ರಂಥದಲ್ಲಿಲ್ಲ.

---

29 ವಾಲ್ಮೀಕಿ ರಾಮಾಯಣ, ಉತ್ತರಕಾಂಡ : ಶ್ಲೋಕ ೧೫ ಮುಂದೆ :

ತತೋ ಮಧ್ಯೇ ಜನೌಘಸ್ಯ ಪ್ರವಿಶ್ಯ ಮುನಿಪುಂಗವಃ ।
ಸೀತಾ ಸಹಾಯೋ ವಾಲ್ಮೀಕಿರಿತಿ ಹೋವಾಚ ರಾಘವಮ್ ॥ ಇತ್ಯಾದಿ (ಮುಂದೆ ನೋಡಿ)

30 ಅಪ್ರಾಪ್ತಯೌವನಂ ಬಾಲಂ ಪಂಚವರ್ಷಸಹಸ್ರಕಮ್ |
(ವಾ. ರಾ. ಉತ್ತರಕಾಂಡ : ಸರ್ಗ ೭೩. ಶ್ಲೋಕ ೫)
ವ್ಯಾಖ್ಯಾನಕಾರರ ಮಾತು : 'ವರ್ಷ ಶಬ್ದೋಽತ್ರ ದಿನಪರಃ | ಸಹಸ್ರಸಂವತ್ಸರಂ ಸತ್ರಮಾಸತ' ಇತಿವತ್ (ತಿಲಕ)

31 ಬೃಹತ್ಕಥಾಮಂಜರಿ (ಕಾವ್ಯಮಾಲಾ ೬೯, ನಿರ್ಣಯಸಾಗರ, ಬೊಂಬಾಯಿ, ೧೯೦೧) ೧೫ : ಅಲಂಕಾರವತಿ ಲಂಬಕದಲ್ಲಿ ಬರುವ ರಾಮಾಖ್ಯಾಯಿಕೆ, ಶ್ಲೋಕ ೩೧-೫೧.

32 ಟಿಟ್ಟಿಭೋಽಬ್ಧಿ ತಟೇ ...... ಬೃಹತ್ಕಥಾಮಂಜರೀ : ಅಲಂಕಾರವತೀಲಂಬಕ ರಾಮಾಖ್ಯಾಯಿಕಾ :
ಶ್ಲೋಕ ೪೫, ಪುಟ ೫೧೬.

ಈ ವಿಚಿತ್ರ ವೃತ್ತಾಂತ: ಸೀತಾದೇವಿಯನ್ನು ಋಷಿಗಳು ಟಿಟ್ಟಿಭ ಅಥವಾ ಟೀಟಿಬಾ ಸರೋವರದ ನೀರಿನ ಮೇಲೆ ನಡೆಯುವಂತೆ ಮಾಡಿದುದು ಕಥಾಸರಿತ್ಸಾಗರದ ಮದಿರಾವತೀ ಕಥೆಯಲ್ಲಿ ಬರುವ ರಾಮಾಖ್ಯಾಯಿಕೆಯಲ್ಲೂ ಬಂದಿದೆ (ಶ್ಲೋಕ ೬೫-೮೫). ಅಂದರೆ ಈ ವೃತ್ತಾಂತ ಇವೆರಡಕ್ಕೂ ಮೂಲವೆನಿಸಿದ್ದ ಗುಣಾಢ್ಯನ ಬೃಹತ್ಕಥೆಯಲ್ಲಿದ್ದಿತೋ ಏನೋ! ಪೈಶಾಚಿ ಭಾಷೆಯಲ್ಲಿ ಗುಣಾಢ್ಯನು ಬರೆದಿದ್ದ ಬೃಹತ್ಕಥೆ ಈಗ ಸಿಕ್ಕಿಲ್ಲ.

(ಈ) ಕಡೆಯದಾಗಿ ಮತ್ತು ಮುಖ್ಯವಾಗಿ ವಾಲ್ಮೀಕಿಯು ರಾಮನನ್ನು ಅವತಾರವೆಂದು ಭಾವಿಸಿದಂತೆ ಕಂಡುಬರುವುದಿಲ್ಲ. (ಹಾಗೆ ಅವತಾರವೆಂದು ಹೇಳುವ ಭಾಗಗಳು ಪ್ರಕ್ಷಿಪ್ತ ಭಾಗಗಳೆಂದು ವಿದ್ವಾಂಸರ ಮತ) ಆದರೆ ಕ್ಷೇಮೇಂದ್ರನು ತನ್ನ ಕೃತಿಗೇ 'ದಶಾವತಾರ ಚರಿತೆ' ಎಂದು ಹೆಸರಿಟ್ಟಿರುವುದರಿಂದ ಅವನ ದೃಷ್ಟಿ ರಾಮನನ್ನು ಅವತಾರವೆಂದು ಪರಿಗಣಿಸಿರುವುದೇ ಆಗಿದೆ. ಅಲ್ಲದೆ ಮಾರೀಚನೇ ವಿಷ್ಣುವೇ ರಾಮನಾಗಿ ಜನ್ಮಪಡೆದು ಬಂದಿರುವನೆಂದು ರಾವಣನಿಗೆ ಸ್ಪಷ್ಟಪಡಿಸುತ್ತಾನೆ.



---

ಆದಿಕಾವ್ಯವೆನಿಸಿರುವ ರಾಮಾಯಣವನ್ನು ಶ್ರದ್ಧೆಯಿಂದ ಓದುವ ಜನರಿಗೆ ಈ ವಿಚಾರಪೂರ್ಣವಾದ ಲೇಖನದಲ್ಲಿ ತುಂಬಾ ಆಹಾರವಿದೆ.

—ಸಂಪಾದಕ

# ಗ್ರಂಥಾವಲೋಕನ

**ಮಧುಪುರ: ಸಂಪಾದಕರು: ಶ್ರೀ ಕೆ. ವೆಂಕಟಕೃಷ್ಣಯ್ಯ; ಗೀತಾ ಪ್ರಕಾಶನ, ಕಾಸರಗೋಡು; ಪುಟ: ಡೆಮ್ಮಿ ಅಷ್ಟಪತ್ರ ೨೩೫; ಬೆಲೆ: ೫-೫೦.**

ಮಧೂರು-ಮದವೂರು-ಮದೂರು ಕಾಸರಗೋಡು ತಾಲ್ಲೋಕಿನಲ್ಲಿ ಒಂದು ಊರು. ಅಲ್ಲಿನ ವಿಘ್ನೇಶ್ವರ ದೇವಾಲಯದಿಂದಲೂ, ಯಕ್ಷಗಾನ ಕೃತಿಗಳಲ್ಲಿ ಬರುವ ಆ ಊರಿನ ದೇವತೆಯ ಹೆಸರಿನಿಂದಲೂ ಈ ಊರು ಪ್ರಸಿದ್ಧವಾಗಿದೆ. ಮಧುಪುರ ಎಂಬ ಈ ಊರಿನ ಹೆಸರಿನಲ್ಲಿ ಕಾಸರಗೋಡಿನ ಕನ್ನಡ ಬಾಂಧವರು ಕರ್ಣಾಟಕದ ಆ ಭಾಗದ ಸಾಂಸ್ಕೃತಿಕ ಸಂಪತ್ತನ್ನು, ಅರಿತವರು ಬರೆದ ಹಲವು ಲೇಖನಗಳ ಮೂಲೆಯಿಂದ ಇಲ್ಲಿ ಬಣ್ಣಿಸಿದ್ದಾರೆ.

ಇಲ್ಲಿ ಕುಂಬಳೆ ಸೀಮೆಯ ಪುಣ್ಯಕ್ಷೇತ್ರಗಳ ಪರಿಚಯವಿದೆ. ಸಾಹಿತ್ಯ ಬೆಳೆವಣಿಗೆಯ ಚಿತ್ರವಿದೆ. ಸಾಹಿತಿಗಳ ಪರಿಚಯದೊಂದಿಗೆ ಇಲ್ಲಿನ ಪ್ರಮುಖ ಕಲೆಯಾದ ಯಕ್ಷಗಾನದ ವೈಭವದ ಚಿತ್ರವೂ ಇದೆ.

ಕನ್ನಡ ಸಂಸ್ಕೃತಿಯ ಆಡುಂಬೊಲವಾದ ಕಾಸರಗೋಡು ಕೇರಳದಲ್ಲಿ ಸೇರಿಕೊಂಡ ರಾಜಕೀಯದ 'ಅನ್ಯಾಯ', ಆದರಿಂದಾಗಿರುವ ದುಃಖವನ್ನು ಇಲ್ಲಿ ತೋಡಿಕೊಳ್ಳಲಾಗಿದೆ. ಜೊತೆಗೇ ಈ 'ತಪ್ಪು' ಸರಿಹೋಗಿ ಕಾಸರಗೋಡು ಕರ್ಣಾಟಕದೊಳಕ್ಕೆ ಮೈಸೂರಿನಲ್ಲಿ ರಾಜಕೀಯವಾಗಿಯೂ ಸೇರಬೇಕು ಎಂಬಾಸೆಯನ್ನು, ಬರುತ್ತದೆ ಎಂಬ ಭರವಸೆಯನ್ನು 'ಮಧುಪುರ'ದಲ್ಲಿ ಕಾಣಬಹುದು.

ಪುಣ್ಯಸ್ಥಳಗಳು, ಸಾಹಿತ್ಯ, ಸಂಸ್ಕೃತಿ ಮತ್ತು ಕಲೆ ಎಂದು ಮೂರು ಭಾಗಗಳಾಗಿ ವಿಂಗಡಿಸಿರುವ ನಲವತ್ತುಮೂರು ಲೇಖನಗಳನ್ನು ಆ ಸಂಬಂಧದ ಎಂಭತ್ತಾರು ಚಿತ್ರಗಳನ್ನು ಒಳಗೊಂಡು ಈ ಹೊತ್ತಗೆ ಸುಂದರವಾಗಿ ಹೊರಬಿದ್ದಿದೆ.

ಕಾಸರಗೋಡು ಪ್ರಕೃತಿ ಸಂಪತ್ತಿನೊಂದಿಗೆ ಕಲಾವೈಭವವನ್ನೂ ಪಡೆದಿದೆ. ಅಲ್ಲಿ ಬಹುಮಂದಿ ವಿದ್ಯಾವಂತರಿದ್ದಾರೆ. ಒಳ್ಳೆಯ ಸಂಸ್ಕೃತಿ ಅಲ್ಲಿ ನೆಲೆಸಿದೆ. ಪೆರ್ಡಾಲದ ಮಹಾಜನ ಸಂಸ್ಕೃತ ಕಾಲೇಜು ಇಲ್ಲಿನ ಬಹುಜನರನ್ನು ಪಂಡಿತರನ್ನಾಗಿ ಮಾಡಿ ನಾಡಿಗೆ ಕಾಣಿಕೆಯಿತ್ತು ಇತ್ತೀಚೆಗೆ ತನ್ನ ಸುವರ್ಣಮಹೋತ್ಸವವನ್ನು ನೆರವೇರಿಸಿದೆ. ಕಾಸರಗೋಡಿನ ಸಂಸ್ಕೃತಿಯನ್ನು ಉಳಿಸಿ ಬೆಳೆಸಿದ ಅನೇಕ ಮಹನೀಯರ ಪರಿಚಯವನ್ನು "ಮಧುಪುರ" ಮಾಡಿಕೊಡುತ್ತದೆ.

ಮಧುಪುರ, ಅಡೂರು, ಕಾವು, ಕೂಡಲು, ಕಣ್ವಪುರ, ಅನಂತಪುರ ಮೊದಲಾದ ಪುಣ್ಯಕ್ಷೇತ್ರಗಳನ್ನು ಇಲ್ಲಿ ಚೆನ್ನಾಗಿ ವರ್ಣಿಸಲಾಗಿದೆ. ತುಳುನಾಡಿನ ಭೂತಪೂಜೆ, ಯಕ್ಷಗಾನದ ಶಾಸ್ತ್ರೀಯತೆ, ಯಕ್ಷಗಾನ ತಾಳಮದ್ದಳೆಗಳನ್ನು ಕುರಿತು ಒಳ್ಳೆಯ ಲೇಖನಗಳಿವೆ.

ಅಡಿಕೆ ವ್ಯವಸಾಯದೊಂದಿಗೆ ತುಳು ಭಾಷೆಯ ವರ್ಣಮಾಲೆಯ ಮೇಲೂ ಇಲ್ಲಿ ಲೇಖನವುಂಟು.

ಪ್ರಸಿದ್ಧ ಯಕ್ಷಗಾನ ಕವಿ ಕುಂಬಳೆಯ ಪಾರ್ತಿಸುಬ್ಬನನ್ನು ಕುರಿತು ಇಲ್ಲಿ ವಿಮರ್ಶಾತ್ಮಕವಾದ ಲೇಖನಗಳು ಮೂರುನಾಲ್ಕಿವೆ. ದಿವಂಗತ ಗೋವಿಂದಪೈಗಳ ಎರಡು ಮಾತು

ಗಳಿಂದ ಪ್ರಾರಂಭವಾದ ಈ ಚರ್ಚೆ, ಕುಕ್ಕಿಲ್ಲ ಕೃಷ್ಣಭಟ್ಟರ "ಶ್ರೀ ಕೋಟ ಶಿವರಾಮ ಕಾರಂತರ ಸುಬ್ಬನ ಸಮಸ್ಯೆ" ಎಂಬ ದೀರ್ಘ ಲೇಖನದಲ್ಲಿ ಮುಂದುವರಿದು "ಕವಿಯ ನೆನಹಿನ ಕಿರುಗಾಣಿಕೆ" ಎಂಬ ಕಯ್ಯಾರ ಕಿಞ್ಞಣ್ಣರೈ ಅವರ ಕಾಣಿಕೆಯಲ್ಲಿ ಕೊನೆಗಂಡಿದೆ.

ಭಾರತ ಸರ್ಕಾರದ ಸಾಹಿತ್ಯ ಅಕಾಡಮಿಯಿಂದ ಪುರಸ್ಕೃತವಾದ ಶ್ರೀ ಕಾರಂತರ "ಯಕ್ಷಗಾನ ಬಯಲಾಟ" ಎಂಬ ಗ್ರಂಥ ತೆಂಕು ತಿಟ್ಟಿನ ಯಕ್ಷಗಾನ ವಿಧಾನಕ್ಕೂ, ಈ ಭಾಗದ ಯಕ್ಷಗಾನದ ಪ್ರಮುಖ ಕವಿ ಕುಂಬಳೆಯ ಪಾರ್ತಿ ಸುಬ್ಬನಿಗೂ "ಹೇಗೆ ಎಷ್ಟು ಅನ್ಯಾಯ ಬಗೆದಿದೆ, ಅಡ್ಡಮಾರ್ಗ ಹಿಡಿದಿದೆ" ಎಂಬುದನ್ನು ಶ್ರೀ ಕೃಷ್ಣಭಟ್ಟರೂ, ರೈ ಅವರೂ ತುಂಬ ವ್ಯಸನದಿಂದ "ಮಧುಪುರ"ದಲ್ಲಿ ಚರ್ಚಿಸಿದ್ದಾರೆ. ಓದಿ ತಿಳಿಯಬೇಕಾದ ವಿಚಾರ ಇಲ್ಲಿದೆ.

ಹೀಗೆ ಕಾಸರಗೋಡಿನ ವಿಚಾರ ಪರಿಪ್ಲುತವಾದ "ಮಧುಪುರ" ಸುಂದರವಾಗಿದೆ, ಉಪಯುಕ್ತವಾಗಿದೆ, ಸಂಗ್ರಹಯೋಗ್ಯವೂ ಆಗಿದೆ. ತಮ್ಮ ತಮ್ಮವರ ಪರಿಚಯವನ್ನು ಕನ್ನಡ ಲೋಕಕ್ಕೆ ಇಷ್ಟು ಚೆನ್ನಾಗಿಯೂ ಹೆಮ್ಮೆಯಿಂದಲೂ ಮಾಡಿಕೊಟ್ಟಿರುವ ಕಾಸರಗೋಡಿನ ಕನ್ನಡ ಬಾಂಧವರಿಗೆ ಕನ್ನಡಿಗರ ಹಾರ್ದಿಕ ಅಭಿವಂದನೆಗಳು ಸಲ್ಲಬೇಕು.

**ಕಾಸರಗೋಡು ಸಮಾಚಾರ:** ಸಂಪಾದಕರು: ಶ್ರೀ ವೈ. ಮಹಾಲಿಂಗ ಭಟ್; ಪ್ರಕಾಶಕರು: ಶ್ರೀ ಎಸ್. ಕೃಷ್ಣಭಟ್, ಸಿರಿಗನ್ನಡ ಪ್ರೆಸ್, ಕಾಸರಗೋಡು - ದಕ್ಷಿಣ ಕನ್ನಡ; ಪುಟ: ಡೆಮ್ಮಿ ಅಷ್ಟಪತ್ರ ೨೦೦; ಬೆಲೆ: ಒಂದೂವರೆ ರೂಪಾಯಿ.

"ಕರ್ಣಾಟಕ ಸಂಸ್ಕೃತಿ ಪೂರ್ಣವಾಗಿ ತುಂಬಿರುವ, ಶೇಕಡ ತೊಂಬತ್ತರಷ್ಟು ಕನ್ನಡಿಗರೇ ಇರುವ ಕಾಸರಗೋಡು ಪ್ರಾಂತವನ್ನು ಕೇರಳದಲ್ಲಿ ಸೇರಿಸಿದ್ದು ಸರಿಯಲ್ಲ" ಎಂಬ ಅಭಿಪ್ರಾಯವನ್ನು ಅಂಕಿ ಅಂಶಗಳ ಸಹಾಯದಿಂದ ತುಂಬ ಕಳಕಳಿಯಿಂದ ಚಿತ್ರಿಸಿರುವ ಪುಸ್ತಕ ವಿದು. ಈ ಸಂಬಂಧವಾಗಿ ಬಂದ ಬರೆವಣಿಗೆಯ ಬಹುಭಾಗವನ್ನು ಒಂದೆಡೆ ಸಂಗ್ರಹಿಸಿ ಈ ಪುಸ್ತಕವನ್ನು ಪ್ರಕಟಿಸಲಾಗಿದೆ.

ರಾಷ್ಟ್ರಕವಿ ಗೋವಿಂದಪೈ ಅವರ "ಆಳುವಿಕೆಯೊ ಹೋಳುವಿಕೆಯೊ"; ಶ್ರೀ ಬಿ. ರಾಮ ನಾಯಕ ಅವರ "ಸೆರಗನು ಹರಿದೊಗೆದರಯ್ಯ"; ಶ್ರೀ ಕೃಷ್ಣಕುಮಾರ ಕಲ್ಲೂರ ಅವರ "ಕಾಸರಗೋಡು-ಚಂದಗಡಗಳ ಸಮಸ್ಯೆ"; ಶ್ರೀ ಕೆ. ಎಸ್. ಶರ್ಮ ಅವರ "ವಿಶಾಲ ಕರ್ಣಾಟಕ ದಲ್ಲಿ ಕಾಸರಗೋಡು ಏಕಿರಬೇಕು?" ಶ್ರೀ ಕಳ್ಳಿಗೆ ಮಹಾಬಲ ಭಂಡಾರಿ ಅವರ "ಕಾಸರಗೋಡು ಕನ್ನಡಿಗರ ಚಳವಳದ ಸಿಂಹಾವಲೋಕನ"; ಶ್ರೀ ಬಿ. ಶ್ರೀಧರ ಕಕ್ಕಿಲ್ಲಾಯ ಅವರ "ಕಾಸರ ಗೋಡು ಕರ್ಣಾಟಕದ ಕನ್ಯಾಕುಮಾರಿ"; ಶ್ರೀ ಕಯ್ಯಾರ ಕಿಞ್ಞಣ್ಣರೈ ಅವರ "ಕನ್ನಡ ತಾಯಿ ವರದೆಯಾಗಿದ್ದವಳು ಶಾಪದೆಯೆ?" ಮೊದಲಾದ ಇಲ್ಲಿನ ಲೇಖನಗಳು ಕಾಸರಗೋಡಿನ ಸ್ಥಿತಿಯ ಸ್ಪಷ್ಟಚಿತ್ರವನ್ನು ನಮ್ಮೆದುರಿಗೆ ನಿಲ್ಲಿಸುವುದು. ಆ ಸಮಸ್ಯೆಯನ್ನು ಚೆನ್ನಾಗಿ ಅರಿತುಕೊಳ್ಳಲು ಸಹಾಯ ಮಾಡುವುದು. ಕನ್ನಡಿಗರು ಇದನ್ನು ಅರಿತುಕೊಳ್ಳುವುದು ಅಗತ್ಯವಾಗಿಯೂ ಇರುವುದು.

ಕಾಸರಗೋಡನ್ನು ಕರ್ಣಾಟಕಕ್ಕೆ ಸೇರಿಸುವುದಕ್ಕಾಗಿ ಇದುವರೆಗೆ ಆ ಪ್ರಾಂತದವರು ಏನೇನು ಪ್ರಯತ್ನಗಳನ್ನು ಮಾಡಿರುವರೆಂಬ ಮಾಹಿತಿಯೂ ಈ ಪುಸ್ತಕದಲ್ಲಿ ಒಂದೆಡೆ ದೊರೆಯುವುದು.

**ಕನ್ನಡಕ್ಕೆ ಶ್ರೀ ಪುರಂದರದಾಸರು ನೀಡಿದ ಕೊಡುಗೆ:** ಲೇಖಕರು: ಶ್ರೀ ಜಿ. ಡಿ. ನಾಡಕರ್ಣಿ, ಎಂ.ಎ.; ಪ್ರಕಾಶಕರು: ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ; ಪುಟ: ಫೂಲ್ಸ್‌ಕೇಪ್ ಅಷ್ಟಪತ್ರ ೫೨; ಬೆಲೆ: ೨೫ ಪೈ.

೧೯೬೪ಕ್ಕೆ ಸಂದ ನಾಲ್ಕುನೂರು ವರ್ಷಗಳ ಉತ್ಸವ ಸಂಬಂಧದಲ್ಲಿ ಶ್ರೀ ಪುರಂದರದಾಸರನ್ನು ಕುರಿತು ಅನೇಕ ಪುಸ್ತಕಗಳು, ಲೇಖನಗಳು, ಲೇಖನಮಾಲೆಗಳು ಹೊರಬಿದ್ದುದು ಸಹಜವೆ. ಇದೂ ಆ ಸಂಬಂಧವಾದ ಒಂದು ಸಣ್ಣ ಪುಸ್ತಕ.

ಕರ್ನಾಟಕ ವಿಶ್ವವಿದ್ಯಾನಿಲಯದ ವ್ಯಾಸಂಗ ವಿಸ್ತರಣ ಸಮಿತಿಯ ಆಶ್ರಯದಲ್ಲಿ ಕುಷ್ಟಗಿಯಲ್ಲಿ ಲೇಖಕರಿತ್ತ ಉಪನ್ಯಾಸದ ವಿಸ್ತೃತರೂಪ ಈ ಪುಸ್ತಕ – ದಾಸರ ಅಲ್ಪಪರಿಚಯ ಮಾತ್ರ ಇಲ್ಲಿನ ಪ್ರಯತ್ನ ಎಂದು ಲೇಖಕರು ತಿಳಿಸಿದ್ದಾರೆ.

ಸಣ್ಣ ಆಕಾರದ ಇಲ್ಲಿನ ಐವತ್ತೆರಡು ಪುಟಗಳು ನಾಲ್ಕು ಭಾಗಗಳಾಗಿ ವಿಂಗಡವಾಗಿದೆ. ಶ್ರೀ ಪುರಂದರದಾಸರ ಭಕ್ತಿ ಮತ್ತು ವೈರಾಗ್ಯ; ಶ್ರೀ ಪುರಂದರದಾಸರ ಸಮಾಜದರ್ಶನ ಮತ್ತು ಬೋಧೆ; ಶ್ರೀ ಪುರಂದರದಾಸರ ಕೀರ್ತನೆಗಳಲ್ಲಿಯ ಸೊಗಸು ಮತ್ತು ಶ್ರೀ ಪುರಂದರದಾಸರ ವ್ಯಕ್ತಿತ್ವ – ಹೀಗೆ ಈ ನಾಲ್ಕು ವಿಷಯಗಳನ್ನು ಹಿಡಿದು ಸಂಕ್ಷೇಪವಾಗಿ ಇಲ್ಲಿ ವಿವರಿಸಲಾಗಿದೆ. ಪುರಂದರದಾಸರ ಒಂದು ಭಾವಚಿತ್ರವೂ ಇಲ್ಲಿದೆ.

ಪುರಂದರದಾಸರ ಜೀವನ ಚರಿತ್ರೆಯ ಬಗೆಗೆ ಸಂಶೋಧನೆ ಆಗಬೇಕು ಎಂದು ಎಲ್ಲರೂ ಹೇಳಿರುವಂತೆ ಇಲ್ಲಿಯೂ ಹೇಳಲಾಗಿದೆ. ಆದರೆ ಪ್ರಚಲಿತವಾಗಿರುವ ಕತೆಯನ್ನೇ ಇಲ್ಲಿಯೂ ಕೊಡಲಾಗಿದೆ. ಜೊತೆಗೆ ದಾಸರ ಕೆಲವು ಕೃತಿಗಳನ್ನು ಆಯ್ದುಕೊಟ್ಟು ಅವುಗಳಲ್ಲಿ ದಾಸರು ತಾವೇ ತಮ್ಮ ಪೂರ್ವ ಕತೆಯನ್ನು ಹೇಳಿಕೊಂಡಿದ್ದಾರೆಂದು ಸೂಚಿಸಲಾಗಿದೆ. ಅವರ ಭಕ್ತಿ ಮತ್ತು ವೈರಾಗ್ಯಗಳಿಗೆ ಅವರ ಕೃತಿಗಳಿಂದಲೇ ಹಲವು ದೃಷ್ಟಾಂತಗಳನ್ನು ಆಯ್ದು ಸಮರ್ಥಿಸಿದ್ದಾರೆ. ಭಕ್ತಿಯ ಹಲವು ವಿಧಗಳಲ್ಲಿ ಕೆಲವಕ್ಕೆ ಉದಾಹರಣೆಗಳನ್ನೂ ಆರಿಸಿಕೊಟ್ಟಿದ್ದಾರೆ.

ಪುರಂದರದಾಸರ ಸಮಾಜಪ್ರಜ್ಞೆ ಬಹುಮುಖ್ಯವಾದ ವಿಷಯ. ಲೋಕವನ್ನು ನಿರ್ಲಿಪ್ತವಾಗಿ ಕಂಡು ಅಲ್ಲಿನ ಸ್ಥಿತಿಗತಿಗಳನ್ನು, ಏರುಪೇರುಗಳನ್ನು, ಡಂಭಾಚಾರವನ್ನು ದಾಸರು ಸೂಕ್ಷ್ಮದೃಷ್ಟಿಯಿಂದ ಅವಲೋಕಿಸಿ ತಮ್ಮ ಕೃತಿಗಳಲ್ಲಿ ಬಣ್ಣಿಸಿದ್ದಾರೆ. ಇಲ್ಲಿ ಹಾಸ್ಯ, ಮರುಕ, ಅನುಕಂಪ, ವಿಷಾದ ಎಲ್ಲ ಇದ್ದು ನೀತಿಬೋಧಕವೂ ಎಚ್ಚರಿಕೆಯ ನುಡಿಯೂ ಅವಾಗಿವೆ. ಅಂತಹವುಗಳಲ್ಲಿ ಕೆಲವನ್ನು ಆಯ್ದು ಲೇಖಕರು ಇಲ್ಲಿ ಉದ್ಧರಿಸಿದ್ದಾರೆ. ಉದಯಮ್ವೈರಾಗ್ಯ, ನಗೆಯು ಬರುತಿದೆ, ಕದವ ಮುಚ್ಚಿದಳಿದಕೊ, ಜಾಲಿಯ ಮರದಂತೆ, ಹೊಲೆಯನಾರು, ಧರ್ಮಕ್ಕೆ ಕೈಬಾರದೀಕಾಲ, ಕಾಗದ ಬಂದಿದೆ ಕಮಲನಾಭನ, ಕಲ್ಲುಸಕ್ಕರೆ ಕೊಳ್ಳಿರೊ ಇತ್ಯಾದಿ. ಲೋಕದಲ್ಲಿ ಹೇಗಿರಬೇಕು ಎಂಬುದನ್ನು ಬೋಧಿಸುವ ಈಸಬೇಕು ಇದ್ದು ಜೈಸಬೇಕು, ಎಚ್ಚರಿಕೆ ಎಚ್ಚರಿಕೆ ಮನವೆ, ಸುಮ್ಮನೆ ವೈಷ್ಣವನೆಂಬಿರಿ, ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ ಇತ್ಯಾದಿ ಕೃತಿಗಳನ್ನು ಉದ್ಧರಿಸಿ ಅವರ ಲೋಕ ಬೋಧೆಯ ಮಹತ್ವವನ್ನು ಶ್ರುತಪಡಿಸಿದ್ದಾರೆ.

ಪುರಂದರದಾಸರ ಕೀರ್ತನೆಗಳಲ್ಲಿಯ ಸೊಗಸು ಎಂಬ ಅಧ್ಯಾಯ ಕೊಂಚ ಬಡವಾಗಿಯೇ ಇದೆ. ಈ ಭಾಗದಲ್ಲಿ ಉದ್ಧರಿಸಲಾಗಿರುವ ಕೃತಿಗಳು ಕೇವಲ ಐದು ಮಾತ್ರ. ದಾಸರ ಕೀರ್ತನೆಗಳ ಸೊಗಸಿಗೆ ದೃಷ್ಟಾಂತವಾಗಿ ಅನೇಕ ದೃಷ್ಟಿಗಳಿಂದ ಅನೇಕ ಕೃತಿಗಳನ್ನು

ಉದ್ಧರಿಸಬಹುದು – ಪ್ರಕಟವಾಗಿರುವ ಸಾವಿರದ ಇನ್ನೂರು ಕೃತಿಗಳಿಂದಲೇ. ಬಹುಮುಖ ವಾದ ಪುರಂದರದಾಸರ ವ್ಯಕ್ತಿತ್ವವನ್ನು ಭಕ್ತ, ಅನುಭಾವಿ, ಕವಿ, ಗಾಯಕ, ಸಮಾಜ ಸುಧಾರಕ ವಿಶ್ವಪ್ರೇಮಿ ಸಂಸ್ಕೃತಿ ಸಂವರ್ಧಕ ಎಂದು ಸೂಚಿಸಿ ಮೆಚ್ಚಲಾಗಿದೆ.

ಸುಮಾರು ಒಂದು ಗಂಟೆ ಕಾಲ ಮಾಡಿರಬಹುದಾದ ಉಪನ್ಯಾಸದ ವಿಸ್ತೃತ ರೂಪ ಅಂಗೈ ಅಗಲದ ಐವತ್ತೆರಡು ಪುಟಗಳ ಈ ಪುಸ್ತಕ ಎಂದಮೇಲೆ, ಇಲ್ಲಿ ಇನ್ನೂ ಹೆಚ್ಚು ವಿಷಯ ನಿರೂಪಣೆಯನ್ನು ನಿರೀಕ್ಷಿಸುವುದು ಸರಿಯಲ್ಲ ಎಂಬುದು ನಿಜ. ಪುರಂದರದಾಸರ ವಿಚಾರದಲ್ಲಿ ಹೇಳಬೇಕಾದುದು–ಹೇಳಬಹುದಾದುದು ಇನ್ನೂ ತುಂಬ ಇದ್ದರೂ ಮುಖ್ಯವಾದುವುಗಳಲ್ಲಿ ನಾಲ್ಕು ವಿಚಾರಗಳನ್ನೆತ್ತಿಕೊಂಡು ಯಥೋಚಿತವಾಗಿ ಲೇಖಕರು ಇಲ್ಲಿ ವಿವರಿಸಿದ್ದಾರೆ. ದಾಸರ ಸಾಮಾನ್ಯ ವ್ಯಕ್ತಿಚಿತ್ರಣ ಈ ಪುಸ್ತಕದಿಂದ ಆಗುವುದು, ಮುಂದೆ ಇನ್ನೂ ಹೆಚ್ಚು ತಿಳಿದು ಕೊಳ್ಳಬೇಕೆಂಬ ಅಪೇಕ್ಷೆ ಅಂಕುರಿಸುವುದು ಸಾಧ್ಯ. ಆದ್ದರಿಂದಲೇ ಈ ಪುಟ್ಟ ಪುಸ್ತಕದ ಉದ್ದೇಶವೂ ಸಾರ್ಥಕ.

**ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ತ್ವನಿಷ್ಠೆ: ಲೇಖಕರು: ಶ್ರೀ ಬಿ. ವಿ. ಮಲ್ಲಾಪುರ, ಎಂ.ಎ.; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ; ಪುಟಗಳು: ಫೂಲ್ಸ್‌ಕೇಪ್ ಅಷ್ಟಪತ್ರ ೬೪; ಬೆಲೆ: ೨೫ ಪೈಸೆಗಳು.**

ಕನ್ನಡದ ಪೂರ್ವ ಪ್ರಮುಖ ಕವಿಗಳಲ್ಲಿ ರಾಘವಾಂಕ ಒಬ್ಬ. ಕನ್ನಡದ ಸ್ವತಂತ್ರ ಛಂದಸ್ಸಿನಲ್ಲಿ, ಮುಂದೆ ಬಂದವರು ಒಲಿದು ಅನುಸರಿಸುವಂತೆ, ಕಾವ್ಯರಚನೆ ಮಾಡಿದ ಕವಿಶ್ರೇಷ್ಠ. ರಾಘವಾಂಕ ಸೃಜಿಸಿದ ಹರಿಶ್ಚಂದ್ರನ ಸಿದ್ಧರಾಮಯ್ಯನ ಚರಿತ್ರೆಗಳು ಗಮನಾರ್ಹ ವಾದುವು. ನಿಷ್ಠೆಗಾಗಿ ಜೀವನದಲ್ಲಿ ಕಷ್ಟಪಟ್ಟು ಭಗವಂತನ ಒಲವನ್ನು ಸಂಪಾದಿಸಿ ಆದರ್ಶ ವ್ಯಕ್ತಿಯಾದ ಹರಿಶ್ಚಂದ್ರ, ಲೋಕಸೇವಾನಿರತನಾದ ಶಿವಶರಣ–ವಚನಕಾರ ಸಿದ್ಧರಾಮ ಇವರ ಚರಿತ್ರೆಗಳನ್ನು ಮನೋಹರವಾಗಿ ಚಿತ್ರಿಸಿರುವ ವೈಶಿಷ್ಟ್ಯ ರಾಘವಾಂಕನದು.

ರಾಘವಾಂಕನ ನಾಲ್ಕು ಕೃತಿಗಳಾದ ಹರಿಶ್ಚಂದ್ರ ಕಾವ್ಯ, ಸಿದ್ಧರಾಮ ಚಾರಿತ್ರ, ಸೋಮನಾಥ ಚರಿತೆ ಮತ್ತು ವೀರೇಶ ಚರಿತೆಗಳಲ್ಲಿ ಬರುವ ಪ್ರಮುಖ ಪಾತ್ರಗಳಾದ ಹರಿಶ್ಚಂದ್ರ, ಚಂದ್ರಮತಿ, ವಿಶ್ವಾಮಿತ್ರ, ವಶಿಷ್ಠ, ಮಂತ್ರಿ ಸತ್ಯಕೀರ್ತಿ; ಸಿದ್ಧರಾಮ, ಪ್ರಭುದೇವ; ಆದಯ್ಯ, ಪದ್ಮಾವತಿ; ದಾಕ್ಷಾಯಣಿ ಈ ಪಾತ್ರಗಳ ತತ್ತ್ವನಿಷ್ಠೆಯನ್ನು ಈ ಪುಟ್ಟ ಪುಸ್ತಕದಲ್ಲಿ ವಿವೇಚಿಸ ಲಾಗಿದೆ. ಇದಕ್ಕೆ ಹಿನ್ನೆಲೆಯಾಗಿ ಸಂಕ್ಷೇಪದಿಂದ ರಾಘವಾಂಕನ ಕಾಲ, ಗ್ರಂಥಗಳು–ವೈಶಿಷ್ಟ್ಯದ ಬಗೆಗೆ ಕೆಲವು ಮಾತುಗಳನ್ನು ಅಚ್ಚುಕಟ್ಟಾಗಿ ಹೇಳಿದ್ದಾರೆ.

ಬಂಕಾಪುರದಲ್ಲಿ ಮಾಡಿದ ಉಪನ್ಯಾಸದ ವಿಸ್ತೃತ ರೂಪ ಈ ಪುಸ್ತಕವಾದರೂ ಹೆಚ್ಚಾಗಿ ಉಪನ್ಯಾಸ ರೂಪದಲ್ಲೇ ಇದೆ.

ಪುಟ ೭–೧೦ ರಲ್ಲಿ ವಿಶ್ವಾಮಿತ್ರನ ತತ್ತ್ವನಿಷ್ಠೆಯನ್ನು ವಿವರಿಸಲು ಲೇಖಕರು ಪ್ರಯತ್ನಿ ಸಿರುವರಾದರೂ, ರಾಘವಾಂಕನ ವಿಶ್ವಾಮಿತ್ರ ಪಾತ್ರದ ನಡೆವಳಿಕೆಯನ್ನು ತತ್ತ್ವನಿಷ್ಠೆ ಎಂದು ಕರೆಯಬಹುದೆ ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶವುಂಟು. ವಿಶ್ವಾಮಿತ್ರ ಹರಿಶ್ಚಂದ್ರನನ್ನು ಪರೀಕ್ಷಿಸ ಹೊರಟು ತುಂಬ ಪೀಡಿಸಿದುದಕ್ಕೆ ಮೂರು ಕಾರಣಗಳನ್ನಿತ್ತು ಅದರಲ್ಲಿ ಮೂರನೆಯದೇ ಹೆಚ್ಚು ಕಾರಣ–"ಅಖಿಳ ಜೀವಾವಳಿಯಲ್ಲಿ ಭಾವಿಪಡೆ ಕುಂದನಲ್ಲದೆ ಲೇಸ ಕಾಣದಿಹ ಭಾವ"ವೆಂದು ಹೇಳಿ ಅದನ್ನೊಂದು ತತ್ತ್ವ ಎಂದು ಸೂಚಿಸಿರುವುದು

ಸಮಂಜಸವಾಗಲಾರದು. ಇದು ಆತನ ವಕ್ರಸ್ವಭಾವವೆನ್ನ (ದೋಷದೃಕ್) ಬಹುದಷ್ಟೆ. ತತ್ತ್ವದ ಸ್ಥಾನಮಾನಕ್ಕೂ ಈ ಸ್ವಭಾವಕ್ಕೂ ತುಂಬ ವ್ಯತ್ಯಾಸವಿದೆ. ಜೀವಿಯು ಪರಿಪೂರ್ಣ ನಲ್ಲ ಎಂಬುದು ತತ್ತ್ವ ನಿಜ. ಹಾಗೆಂದು ಪರರನ್ನು ಪೀಡಿಸಿ ಕುಂದನ್ನು ಕಂಡುಹಿಡಿಯುವುದು ಹಿರಿತನವಲ್ಲ. ರಾಘವಾಂಕನ ದೃಷ್ಟಿ ಇಲ್ಲಿ ವಿಶ್ವಾಮಿತ್ರನ ತತ್ತ್ವನಿಷ್ಠೆಯ ಕಡೆಗಿಂತ ಹರಿಶ್ಚಂದ್ರನ ಸತ್ಯನಿಷ್ಠೆಯ ಕಡೆಗೇ ಇರುವುದನ್ನು ನಾವು ಗಮನಿಸಬೇಕು. ಹರಿಶ್ಚಂದ್ರ ಕಾವ್ಯದ ವಿಶ್ವಾಮಿತ್ರ ನಲ್ಲಿ ಹಾಗೆ ನೋಡಿದರೆ, ಅಂತಹ ಹಿರಿಯ ತತ್ತ್ವನಿಷ್ಠೆಯೇನೂ ಕಂಡುಬಾರದು. ಅಂತೆಯೇ ವಶಿಷ್ಠ ಮುನಿಯ ಪಾತ್ರದಲ್ಲೂ ತತ್ತ್ವನಿಷ್ಠೆಯನ್ನು ಹುಡುಕಹೊರಟು ಇಲ್ಲಿ ಅದೊಂದನ್ನೂ ಕಂಡುಹಿಡಿಯಲಾಗಿದೆ. ಅದೂ ಊಹೆಯೆಂದೇ ಹೇಳಬೇಕಾಗಿದೆ.

ಹರಿಶ್ಚಂದ್ರ - ಚಂದ್ರಮತಿಯರ ಸತ್ಯನಿಷ್ಠೆ - ಪ್ರತಿನಿಷ್ಠೆಗಳು ಲೋಕಪ್ರಸಿದ್ಧವಾದುವು. ಅವರ ಪಾತ್ರಚಿತ್ರಣ ಇಲ್ಲಿ ಚೆನ್ನಾಗಿ ಮೂಡಿ ಬಂದಿದೆ. ಇಲ್ಲಿನ ಕರುಣರಸ ಪ್ರತಿಪಾದನೆ ಒಂದು ವೈಶಿಷ್ಟ್ಯವೇ ಎನ್ನಬಹುದು. ಹರಿಶ್ಚಂದ್ರನ ಪ್ರಜಾವಾತ್ಸಲ್ಯ, ಗುರುಭಕ್ತಿ, ಸತ್ಯನಿಷ್ಠೆ, ಪತ್ನೀ ಪುತ್ರ ಪ್ರೇಮ, ತ್ಯಾಗ, ಅಭಿಮಾನ, ಹೆಮ್ಮೆ, ಪರಾಕ್ರಮ, ಆತ್ಮವಿಶ್ವಾಸ, ದೈವಭಕ್ತಿ, ಕರ್ತವ್ಯ ಪರಿಪಾಲನ ದೃಷ್ಟಿ ಮುಂತಾದುವನ್ನು ಇಲ್ಲಿ ಎತ್ತಿತೋರಿಸಲಾಗಿದೆ.

ಸಿದ್ಧರಾಮನ "ಸಾಕಾರನಿಷ್ಠೆ ಭೂತಂಗಳೊಳನುಕಂಪೆ"ಯನ್ನು ಸಿದ್ಧರಾಮನ ನಿರ್ಲಿಪ್ತ ನಿಷ್ಠೆಯನ್ನು ಚೆನ್ನಾಗಿ ಬಣ್ಣಿಸಲಾಗಿದೆ. ಸಿದ್ಧರಾಮನ ಜೀವನವೇ ನಿಷ್ಠಾವಂತ ಜೀವನ ಎಂಬುದನ್ನು ಹಲವು ಉದಾಹರಣೆಗಳಿಂದ ಸಮರ್ಥಿಸಲಾಗಿದೆ. ಪ್ರಭುದೇವರ ಆತ್ಮೋನ್ನತಿಯ ತತ್ತ್ವವನ್ನು ಸಂಕ್ಷೇಪವಾಗಿ ಬಣ್ಣಿಸಿರುವುದು ಸಮಂಜಸವಾಗಿದೆ.

ಆದಯ್ಯನ ಪಾತ್ರನಿರೂಪಣೆ ಇಲ್ಲಿ ಚೆನ್ನಾಗಿ ಬಂದಿದೆ. ಆದಯ್ಯ ಮಾಡಿದ ಕೆಲಸ ದೊಡ್ಡ ತತ್ತ್ವನಿಷ್ಠೆ ಎಂದು ಒಪ್ಪುವುದು ಕಷ್ಟವಾದರೂ ಅದೊಂದು ಹುಚ್ಚು ಹಟ, ದುಡುಕು ಸ್ವಭಾವದಿಂದ ಪ್ರೇರಿತ ಎಂಬುದು ನಿಜ. ಆದರೆ ಆ ಹಟವನ್ನು ನಿಷ್ಠೆಯಿಂದ ನಡೆಸಿಕೊಳ್ಳು ತ್ತಾನೆ ಆದಯ್ಯ-ಶಿವ ಸೋಮನಾಥನ ಸಹಾಯದಿಂದ. "ದೇಹವುಳ್ಳಲ್ಲಿ ಪುಣ್ಯಮಂ ಪಡೆವುದೆ ಲೇಸು. ಇದೆನ್ನ ಸಿದ್ಧಾಂತಂ"-ಭವಾನಿಯರಸನಿಗಾಗಿ ದೇಹವಿಡುವೆ ಎಂಬ ಆದಯ್ಯನ ನಿಷ್ಠೆ ಮೆಚ್ಚತಕ್ಕುದಾಗಿದೆ.

ವೀರೇಶ ಚರಿತೆಯ ವೀರಭದ್ರನ ತತ್ತ್ವನಿಷ್ಠೆಯನ್ನು ವರ್ಣಿಸುವುದರಲ್ಲಿ ವೀರರಸ ಪ್ರತಿಪಾದನೆಯಿದೆಯೇ ಹೊರತು ತತ್ತ್ವನಿಷ್ಠೆಯ ಅಂಶ ಒಂದು ವಾಕ್ಯದಲ್ಲಿ ಮುಗಿದಿದೆ. ಸತೀ ದೇವಿಯ ಶಿವನಿಷ್ಠೆಯ ಚಿತ್ರ ಚೆನ್ನಾಗಿ ಬಂದಿದೆ. ಮನೋರಂಜಕ ಕಥೆಗಳ ಮೂಲಕ ಹಿರಿಯ ನಿತ್ಯತತ್ತ್ವಗಳನ್ನು ಪ್ರಚಾರ ಮಾಡುವುದು ಈ ಕಾವ್ಯಗಳಲ್ಲಿ ಕಂಡುಬಂದಿದೆ ಎಂಬ ಪ್ರತಿಪಾದನೆ ಗಮನಾರ್ಹವಾದುದು.

ಉಪನ್ಯಾಸಕ್ಕೆ ಆರಿಸಿಕೊಂಡಿರುವ ವಿಷಯ ಒಳ್ಳೆಯದು. ಅದರ ಪ್ರತಿಪಾದನೆಯೂ ಅಷ್ಟೇ ಚೆನ್ನು. ಈ ಕಿರು ಹೊತ್ತಗೆಯಿಂದ ಹಿರಿಯ ತತ್ತ್ವಗಳ ತಿಳಿವಳಿಕೆಯೂ, ಆ ತತ್ತ್ವ ಗಳನ್ನು ನಿಷ್ಠೆಯಿಂದ ನಡೆಸಿ ಸಾಧಿಸಿ ಪುನೀತರಾದ ಹಿರಿಯ ವ್ಯಕ್ತಿಗಳ ಪರಿಚಯವೂ ಇದರಿಂದ ಆಗುವುದಲ್ಲದೆ, ಇವುಗಳನ್ನು ಕಥಾತ್ಮಕವಾಗಿ ಕಲಾತ್ಮಕವಾಗಿ ಬಣ್ಣಿಸಿದ ಕನ್ನಡ ಕವಿ ರಾಘವಾಂಕನ ವಿಚಾರದಲ್ಲಿ ಆಸಕ್ತಿ ಪ್ರೀತಿಗಳೂ ಈ ಪುಸ್ತಕದಿಂದ ಉಂಟಾಗುತ್ತವೆ. ಇದ ಕ್ಕಿಂತಲೂ ಇನ್ನೇನು ಬೇಕು?

—ಕೆ. ಎಂ. ಕೃ.

೧. **ಆಂಧ್ರ ಕಥಾ ಮಂಜೂಷ:** ಸಂಪಾದಕರು: ಸ್ವಾಮಿ ಶಿವಶಂಕರಶಾಸ್ತ್ರೀ ಅವರು; ಅನುವಾದಕರು: ಕೋ. ಚೆನ್ನಬಸಪ್ಪನವರು; ಪ್ರಕಾಶಕರು: ಸಾಹಿತ್ಯ ಅಕಾಡೆಮಿ, ಹೊಸ ದಿಲ್ಲಿ; ಸೈಜು: ಕ್ರೌನ್ ೧/೮; ಪುಟ: ೩೬೦; ಬೆಲೆ: ೪-೫೦.

ಈ ಗ್ರಂಥವನ್ನು ಕೇಂದ್ರ ಸಾಹಿತ್ಯ ಅಕಾಡೆಮಿಯವರು ಪ್ರಕಟಿಸಿದ್ದಾರೆ. ಇದರಲ್ಲಿ ಆಂಧ್ರ ಸಾಹಿತ್ಯದಲ್ಲಿ ವಿಖ್ಯಾತರಾದ ಹದಿನಾರು ಮಂದಿ ಬರೆದ ಕಥೆಗಳನ್ನು ಸಂಗ್ರಹಿಸಲಾಗಿದೆ. ಸರ್ವಶ್ರೀ ೧. ಬಲಿವಾಡ ಕಾಂತಾರಾವು-ಈ ಲೋಕ, ೨. ಕೊಡವಟಿಗಂಟಿ ಕುಟುಂಬರಾವು-ಅಕ್ಕನ ಮದುವೆ, ೩. ತ್ರಿಪುರನೇನಿ ಗೋಪೀಚಂದ್-ಸಂಪಿಗೆ ಹೂ, ೪. ಚಿಂತಾ ದೀಕ್ಷಿತುಲು-ಶಿಲಾ ಪ್ರತಿಮೆ, ೫. ನೋರಿ ನರಸಿಂಹಶಾಸ್ತ್ರಿ-ಮರುಭೂಮಿ, ೬. ಮುಕ್ಕಪಾಟಿ ನರಸಿಂಹಶಾಸ್ತ್ರಿ-ಆಖೈರ್ ಮಾತು, ೭. ಮುನಿಮಾಣಿಕ್ಯಂ ನರಸಿಂಹರಾವು-ಫಸ್ಟ್ ಕೇಸು, ೮. ಅಂದೇ ನಾರಾಯಣ ಸ್ವಾಮಿ-ಪುತ್ರಸಂತಾನ, ೯. ಕೊಮ್ಮೂರಿ ಪದ್ಮಾವತೀ ದೇವಿ-ಬಕುಳ ಹೂದಂಡೆ, ೧೦. ಅಡವಿ ಬಾಪಿರಾಜು-ಮಳೆ, ೧೧. ಬುಚ್ಚಿಬಾಬು-ದೇಶ ಸನಗಿತ್ತ ಸಂದೇಶ, ೧೨. ಮಲ್ಲಾದಿ ರಾಮಕೃಷ್ಣ ಶಾಸ್ತ್ರಿ-ನು-ವು-ರು-ಗಳು, ೧೩. ಕೊಮ್ಮೂರಿ ವೇಣುಗೋಪಾಲರಾವು-ಮನೆ ಕೊಂಡನು, ೧೪. ವೇಲೂರಿ ಶಿವರಾಮಶಾಸ್ತ್ರಿ-ಡಿಪ್ರೆಶ್ಯ ಚಂಬು, ೧೫. ಪಂತುಲ ಶ್ರೀರಾಮಶಾಸ್ತ್ರಿ - ಬಾಧ್ಯತೆ, ೧೬. ಇಲ್ಲಿಂದಲ ಸರಸ್ವತೀದೇವಿ-ಸಂತೈಕೆಯಿಲ್ಲ.

ಮೇಲೆ ಕಂಡ ಹದಿನಾರು ಕಥಾ ಲೇಖಕರಲ್ಲಿ ೧೪ ಮಂದಿ ಪುರುಷರು ೨ ಸ್ತ್ರೀಯರು. ಪೀಠಿಕೆಯಲ್ಲಿ ಸಂಪಾದಕರು "ಆಂಧ್ರ ಪ್ರದೇಶದಲ್ಲಿ ಉತ್ತಮ ಕಥೆಗಳನ್ನು ಬರೆಯಬಲ್ಲ ಸ್ತ್ರೀಯರು, ಪುರುಷರು ನೂರಾರು ಸಂಖ್ಯೆಯಲ್ಲಿದ್ದಾರೆ. ಇವರಲ್ಲಿ ಕೆಲವರು ವಿವಿಧ ಬಹುಮಾನಗಳನ್ನು ಪಡೆದಿದ್ದಾರೆ. ಅಖಿಲ ಆಂಧ್ರ ಖ್ಯಾತಿ, ಅಖಿಲ ಭಾರತ ಖ್ಯಾತಿಯನ್ನು ಪಡೆದವರೂ ಇದ್ದಾರೆ. ಆದರೂ ಕಥಾ ಸಂಕಲನದಲ್ಲಿ ಕೆಲವರ ಕೃತಿಗಳನ್ನು ಮಾತ್ರವೇ ಆರಿಸಿದೆ" ಎಂದು ಹೇಳಿದ್ದಾರೆ. (ಪೀಠಿಕೆ-೪)

ಈ ಆಂಧ್ರ ಸಾಹಿತ್ಯ ಕಥಾ ಸಂಗ್ರಹವನ್ನು ಓದಿದರೆ ತೆಲುಗು ವಾಙ್ಮಯವು ಹುಲುಸಾಗಿ ಬೆಳೆದಿದೆ ಎಂದು ಅರಿಯಬಹುದು.

ಇಂಗ್ಲಿಷ್ ಭಾಷೆಯಿಂದ ಸ್ಫೂರ್ತಿಗೊಂಡ ಭಾರತೀಯ ಭಾಷಾ ಸಾಹಿತ್ಯಗಳೆಲ್ಲದರಲ್ಲಿಯೂ ಇಪ್ಪತ್ತನೇ ಶತಮಾನದಲ್ಲಿ, ಕಥೆ, ಕಾದಂಬರಿ, ಭಾವಗೀತೆ, ವಿಮರ್ಶೆ, ನಾಟಕ, ಹರಟೆ, ಮೊದಲಾದುವು ವಿಪುಲವಾಗಿ ಬೆಳೆದಿವೆ. ಈ ಪರಿಸ್ಥಿತಿಯು ಆಂಧ್ರ ಕರ್ಣಾಟಕ ಸಾಹಿತ್ಯದಲ್ಲಿ ಸಮಸಮವಾಗಿ ಬೆಳೆದಿದೆಯೆನ್ನಬಹುದು.

ಕನ್ನಡದಲ್ಲಿ ಕೂಡ ಕಥಾ ಸಾಹಿತ್ಯವು ಹುಲುಸಾಗಿ ಬೆಳೆದಿದೆ. ಗಣ್ಯ ಸಾಹಿತಿಗಳಾದ ಮಾಸ್ತಿ, ಪಂಜೆ, ಆನಂದಕಂದ, ಆನಂದ, ದೇವುಡು, ಸಿ. ಕೆ. ವಿ, ಮೊದಲಾದವರು ಈ ದೆಸೆಯಲ್ಲಿ ಉತ್ತಮ ಸೇವೆ ಸಲ್ಲಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು "ಉತ್ತಮ ಸಣ್ಣ ಕಥೆಗಳ ಸಂಗ್ರಹ"ವೊಂದನ್ನು ಪ್ರಕಟಿಸಿ ಸಾಹಿತಿಗಳಿಗೆ ಹುರುಪನ್ನು ಉಂಟುಮಾಡಿದೆ.

ಭಾರತೀಯ ಭಾಷಾ ಸಾಹಿತ್ಯವನ್ನು ಅರಿತವರಿಗೆ ಈ ಕಲೆಗಾರಿಕೆ ನಮ್ಮ ಜನರಲ್ಲಿ ವೇದಕಾಲದಿಂದ ಬೆಳೆದುಬಂದಿದೆಯೆಂಬುದು ಗೊತ್ತಿದೆ. ರಾಮಾಯಣ, ಮಹಾಭಾರತ, ಭಾಗವತ, ಉಪನಿಷತ್ತು, ಬೌದ್ಧ ಜಾತಕ, ಬೃಹತ್ಕಥೆ, ಪಂಚತಂತ್ರ ಮೊದಲಾದುವುಗಳಲ್ಲಿ

ಕೂಡ ಕಥೆಗಳು ಕಾಣಿಸಿಕೊಂಡಿರುವುದನ್ನು ನಾವು ತಿಳಿದಿದ್ದೇವೆ. ಆದರೆ ಈ ನೂತನ ಸಾಹಿತ್ಯದ ಕಥೆಗಳು ಒಂದು ಬಗೆಯ ವಿಶಿಷ್ಟ ತಂತ್ರದಿಂದ ಕೂಡಿವೆ ಎಂಬುದು ಗಮನಾರ್ಹವಾಗಿದೆ.

ಪ್ರಕೃತ ಗ್ರಂಥದಿಂದ ಕನ್ನಡಿಗರು ತೆಲುಗು ಸಣ್ಣಕಥೆಗಳ ಮಾದರಿಯನ್ನು ಅರಿದು ಆನಂದಿಸಲು ಅನುಕೂಲವಾಗಿದೆ. ಪೀಠಿಕೆಯಲ್ಲಿ ಸಂಪಾದಕರು ಸಣ್ಣಕಥೆಗಳಿಗೆ ಸಂಬಂಧ ಪಟ್ಟ ಹಲವು ಉಪಯುಕ್ತ ಸಂಗತಿಗಳನ್ನು ತಿಳಿಸಿದ್ದಾರೆ. ಪುಸ್ತಕವು ವಾಚನಾರ್ಹವಾಗಿದೆ. ಕಾಗದ, ಮುದ್ರಣ, ರಕ್ಷಾಪತ್ರ ಎಲ್ಲವೂ ತೃಪ್ತಿಕರವಾಗಿದೆ. ಸಂಪಾದಕರೂ ಅನುವಾದಕರೂ ಪ್ರಕಾಶಕರೂ ವಂದನಾರ್ಹರು.

**೨. ದ್ಯಾವರು ಒದ್ದರೆ:** ಬರೆದವರು: ಶ್ರೀ ಸಂಪಿಗೆ ಸುಬ್ಬಣ್ಣನವರು; ಪ್ರಕಾಶಕರು: ಎೞ. ಆರ್. ಕಾಲೋನಿ, ಬೆಂಗಳೂರು-೧೯; ಸೈಜು: ಕ್ರೌನ್ ೧/೮; ಪುಟ: ೧೮೩; ಬೆಲೆ: ೨-೫೦.

ಇದು ಒಂದು ಸಾಮಾಜಿಕ ಕಾದಂಬರಿ. ಲೇಖಕರ ಚೊಚ್ಚಲು ಕೃತಿಯಿದು. "ಲಂಚಾಮೃತವನ್ನು ಸವಿದು ಕೊಬ್ಬಿದ ಅಧಿಕಾರಿಗಳ ಸ್ವಚ್ಛಂದ ವರ್ತನೆ, ವಿನಾಶಕಾರಿ ಪ್ರವೃತ್ತಿಯನ್ನು ನಿರ್ಮೂಲನ ಮಾಡಲು ದೇವರೇ ಭೂಮಿಗಿಳಿದು ಬರಬೇಕಾಯಿತು" ಎಂಬುದು ಕಾದಂಬರಿ ಹುಟ್ಟಲು ಕಾರಣವೆನ್ನಲಾಗಿದೆ.

ಈ ಕಾದಂಬರಿ ಲೇಖಕರು 'ತಾಯಿನಾಡು' ಪತ್ರಿಕೆಯ ಉಪಸಂಪಾದಕರಾಗಿ ಪತ್ರಿಕಾ ಪ್ರಪಂಚಕ್ಕೂ ಸೇವೆ ಸಲ್ಲಿಸುತ್ತಿದ್ದಾರೆ. ಈಗ ಸಾಹಿತ್ಯ ಸೇವೆಯನ್ನೂ ಪ್ರಾರಂಭಿಸಿದ್ದಾರೆ. ಲಕ್ಕವಳ್ಳಿ ಜಲಾಶಯದಲ್ಲಿ ನಡೆದ ಒಂದು ಲಂಚದ ಘಟನಾವಳಿ ಕಾದಂಬರಿಗೆ ವಸ್ತುವಾಗಿದೆ.

ಪುಸ್ತುಕ, ನಂತರ, (ಪೀಠಿಕೆ) ಒಟ್ಟಿ (ಪುಟ ೨) ಬುದ್ದಿ (ಪುಟ ೧೩) ಅಲ್ಯಾ (ಪುಟ ೧೬) ಆಳಾಗೋಗ್ಲಿ (ಪುಟ ೯೩) ಇತ್ಯಾದಿ ಅಶುದ್ಧ ಪ್ರಯೋಗಗಳು ಮುಂದಿನ ಮುದ್ರಣದಲ್ಲಿ ನಿವಾರಣೆ ಯಾಗಲಿ. ಆಡುವ ಭಾಷೆಯನ್ನು ಬಳಸಿದರೂ ಅಶುದ್ಧ ಶಬ್ದಗಳನ್ನು ಉಪಯೋಗಿಸುವುದು ಸಾಧುವಲ್ಲ. ಕಾದಂಬರಿ ಅಶ್ಲೀಲವಾಗಿಲ್ಲ ವಿಚಾರಪ್ರಚೋದಕವಾಗಿದೆ. ಕಾರಣ ವಾಚನಾರ್ಹ ವಾಗಿದೆ. ಕಾಗದ, ಮುದ್ರಣ ಸಾಮಾನ್ಯ. ಮುಖಪತ್ರ ಸುಂದರವಾಗಿದೆ.

**೩. ರತ್ನಹಾರ:** ಲೇಖಕರು: ಸ್ವಾಮಿ ಮಹಾಮನೆ, ಮೈಸೂರು; ಸೈಜು: ಕ್ರೌನ್ ೧/೮; ಪುಟ: ೮೦; ಬೆಲೆ: ೨ ರೂ.

ಇದು ನಾಟಕಗಳ ಸಂಗ್ರಹ. ಶಿವಶರಣ ತತ್ವಪ್ರತಿಪಾದಕವಾದ ಮೂರು ವಚನ ರೂಪಗಳು ಇಲ್ಲಿವೆ. ೧. ಮಾದರ ಚೆನ್ನ, ೨. ರತ್ನಹಾರ, ೩. ಗುರುಕರುಣ ಎಂಬಿವೇ ಆ ಮೂರು ನಾಟಕಗಳು.

ಮೊದಲನೇ ನಾಟಕ 'ಮಾದರ ಚೆನ್ನ' ಕೇಂದ್ರ ಸರ್ಕಾರದಿಂದ ಬಹುಮಾನ ಪಡೆದಿದೆ. ಆಕಾಶವಾಣಿಯಲ್ಲಿ (ಬೆಂಗಳೂರು) ಪ್ರಕಟವಾಗಿದೆ. ೧೧ನೆಯ ಶತಮಾನದಲ್ಲಿ ಕಂಚಿಯಲ್ಲಿ ಚೋಳರಾಜ ರಾಜೇಂದ್ರನಲ್ಲಿ ಸೇವಕನಾಗಿದ್ದ ಚನ್ನಯ್ಯನೆಂಬ ಶರಣಕಥೆ ಈ ನಾಟಕದಲ್ಲಿದೆ. ಬಸವೇಶ್ವರ ವಚನಗಳಲ್ಲಿ, ಬಸವಪುರಾಣಗಳಲ್ಲಿ ಈತನ ಹೆಸರು ಮೇಲಿಂದ ಮೇಲೆ ಬಂದಿದೆ. ಹರೀಶ್ವರನು ಈತನನ್ನು ಕುರಿತು 'ಚೆನ್ನಯ್ಯನ ರಗಳೆ' ಎಂಬ ಒಂದು ಗ್ರಂಥವನ್ನು ಬರೆದು 'ದೇವನೊಲಿದಾತನೇ ಕುಲಜನು' ಎಂದು ಹೇಳಿದ್ದಾನೆ. ಏಕಾಂಬ್ರನಾಥನು ಇವನ ಭಕ್ತಿಗೆ ಮೆಚ್ಚಿ ಜಂಗಮನಾಗಿ ಬಂದು ಇವನ ಮನೆಯಲ್ಲಿ ಅಂಬಲಿ ಕುಡಿದಂತೆ ಕಥೆಯಿದೆ. ಈತನ ಚರಿತ್ರೆ ತಮಿಳುನಾಡು-ಕನ್ನಡನಾಡು-ಆಂಧ್ರ ದೇಶಗಳಲ್ಲಿ ಪ್ರಸಿದ್ಧವಾಗಿದೆ. ಇಂತಹ ಮಹಾ ಶರಣನ ಕಥೆಯನ್ನೊಳಗೊಂಡುದು 'ಮಾದರ ಚೆನ್ನ' ನಾಟಕ.

ಬಸವಣ್ಣನವರು ಕಲ್ಯಾಣದಲ್ಲಿ ಮಾದರ ಚನ್ನನ ಕಥೆಯನ್ನು ಶರಣರಿಗೆ ಹೇಳಿದಂತೆ ಇಲ್ಲಿ ನಿರೂಪಿತವಾಗಿದೆ. 'ಜಾತಿಗಿಂತ ನೀತಿ ಹೆಚ್ಚು, ಹಣಕ್ಕಿಂತ ಗುಣ ಅಧಿಕ' ಎಂಬುದನ್ನು ನಿರೂಪಿಸುವುದೇ ನಾಟಕದ ಉದ್ದೇಶವಾಗಿದೆ. ಇದು ಭಾರತದ ಎಲ್ಲ ಭಾಷೆಗಳಿಗೂ ಭಾಷಾಂತರ ವಾಗುವುದು ಸಂತೋಷಪ್ರದ. ಅರವತ್ತು (ಪುಟ ೪) ನಮೋನ್ನಮೋ, ಪಾರ್ವತೀಪತೇ (ಪುಟ ೧೮) ಇಂತಹ ಅಶುದ್ಧ ಪದಗಳು ಮುಂದಿನ ಮುದ್ರಣದಲ್ಲಿ ಸರಿಪಡಲಿ.

ರತ್ನಹಾರ: ಈ ಸಂಗ್ರಹದ ಎರಡನೆಯ ನಾಟಕ. ಬಿಜ್ಜಳರಾಜನು ಕೊಂಡೆಯರ ಮಾತು ಕೇಳಿ ಬಸವಣ್ಣನವರನ್ನು ಕಲ್ಯಾಣ ಬಿಟ್ಟು ಹೊರಡಿಸುವನು. ಬಸವಾದಿಗಳು ಕಲ್ಯಾಣ ಬಿಟ್ಟು ಹೊರಟು ಊರ ಹೊರಗೆ ಬಿಡಾರ ಮಾಡಿದ್ದಾಗ ಒಂದು ಹುತ್ತದಲ್ಲಿ ರತ್ನಹಾರ ವೊಂದು ಸಿಗುವುದು. ಅದನ್ನು ಕಲ್ಯಾಣದಲ್ಲಿ ಮಾರಾಟ ಮಾಡಿ ಹಣ ತಂದು ದಾಸೋಹ ಮಾಡುವರು. ರಾಜನಿಗೆ ಇದು ಗೊತ್ತಾಗಿ ಬಸವನನ್ನು ಮತ್ತೆ ಕರೆದು ಪರೀಕ್ಷಿಸುವನು. ರತ್ನಹಾರವು ತನ್ನದೆಂದು ಭ್ರಮಿಸುವನು. ಪರೀಕ್ಷಿಸಹೋಗುವನು. ಹಾರವು ಹಾವಾಗುವುದು. ರಾಜನು ಅಂಜುವನು. ಬಸವನ ಹಸ್ತಸ್ಪರ್ಶದಿಂದ ಅದು ರತ್ನಹಾರವಾಗುವುದು. ರಾಜನು ತನ್ನ ಅಜ್ಞಾನಕ್ಕೆ ಮರುಗಿ ಮರಳಿ ಬಸವನನ್ನು ಮಹಾಮಂತ್ರಿ ಮಾಡುವನು. ಬಸವನನ್ನು ಮಹಾಮಂತ್ರಿಯಾಗಿರಿಸುವನು ಎಂಬುದು ಈ ನಾಟಕದ ಕಥಾವಸ್ತು. ಇದರಲ್ಲಿ ಶರಣಾರ್ತಿ (ಪುಟ ೨೨) ಥಲ (ಪುಟ ೨೬) ಶೃತಿ (ಪುಟ ೨೮) ತತ್ವ (ಪುಟ ೨೯) ಎಂಥಹ (ಪುಟ ೪೨) ಇತ್ಯಾದಿ ಅಶುದ್ಧ ಪ್ರಯೋಗಗಳಿವೆ. ಮುಂದಿನ ಮುದ್ರಣದಲ್ಲಿ ಇವನ್ನು ಶುದ್ಧಗೊಳಿಸು ವುದೊಳ್ಳಿತು.

'ಗುರುಕರುಣ' ಎಂಬುದು ಈ ಸಂಗ್ರಹದ ಮೂರನೇ ನಾಟಕ. ಇದರಲ್ಲಿ ಸೊನ್ನಲಿಗೆಯ ಮಹಾಯೋಗಿ ಸಿದ್ಧರಾಮನಿಗೆ, ಅಲ್ಲಮಪ್ರಭುದೇವರು ಕಲ್ಯಾಣದ ಅನುಭವ ಮಂಟಪದಲ್ಲಿ ಚೆನ್ನಬಸವೇಶ್ವರನಿಂದ ಲಿಂಗಧಾರಣ ಮಾಡಿಸಿದ ಕಥೆ ನಿರೂಪಿತವಾಗಿದೆ.

ಈ ನಾಟಕ ಶೂನ್ಯಸಂಪಾದನೆಯಲ್ಲಿ ಬರುವ ಸಿದ್ಧರಾಮನ ಕಥೆಯ ಸಾರಸಂಗ್ರಹ ವಾಗಿದೆ. ಇದರಲ್ಲಿ ಷಷ್ಠಿ, ಕರ್ಡಿ (ಪುಟ ೫೧) ಪುತ್ಥಳಿ (ಪುಟ ೫೮) ಇತ್ಯಾದಿ ಅಪಪ್ರಯೋಗಗಳಿವೆ. ಮುಂದೆ ಸರಿಪಡಿಸಲಿ.

ಈ ಮೂರೂ ನಾಟಕಗಳು ಓದಲು ಅರ್ಹವಾಗಿ ಓದುಹಬ್ಬಗಳಾಗಿವೆಯೇ ಹೊರತು ರಂಗಭೂಮಿಯ ಮೇಲೆ ಆಡಲು ಅರ್ಹವಾದ ನೋಡುಹಬ್ಬಗಳಲ್ಲವೆಂದು ನಮ್ಮ ಅಭಿಪ್ರಾಯ. ಕೈಲಾಸಂ ಶೈಲಿಯಲ್ಲಿ ಇವರು ಕೆಲವು ನಾಟಕಗಳನ್ನು ಬರೆದಿದ್ದಾರೆ. ಆ ಕೈವಾಡವನ್ನು ಈ ನಾಟಕಗಳಲ್ಲಿಯೂ ನೋಡಬಹುದು. ಲೇಖಕರ ಪ್ರಯತ್ನ ಶ್ಲಾಘ್ಯ. ನಾಟಕಗಳು ವಾಚನಾರ್ಹವಾಗಿವೆ.

೪. **ಗುರುರಾಜ ಚರಿತೆ:** ಬರೆದವರು: ಶ್ರೀಮತಿ ಕೆ. ಜಿ. ಸುಶೀಲಮ್ಮನವರು, ಬೆಂಗಳೂರು-೪; ಪ್ರಕಾಶಕರು: ತಳುಕಿನ ವೆಂಕಣ್ಣಯ್ಯ ಗ್ರಂಥಮಾಲೆ, ಮೈಸೂರು; ಸೈಜು: ಕ್ರ್ಯಾ ೧/೮; ಪುಟ: ೯೭; ಬೆಲೆ: ೧-೫೦.

ಸುಪ್ರಸಿದ್ಧ ಸಾಹಿತಿಗಳೂ ಕವಿಗಳೂ ಆದ ಬೆಂಗಳೂರಿನ ಶ್ರೀ ಕೆ. ಗೋಪಾಲಕೃಷ್ಣ ರಾಯರ ಧರ್ಮಪತ್ನಿ ಶ್ರೀಮತಿ ಕೆ. ಜಿ. ಸುಶೀಲಮ್ಮನವರು ಈ ಗ್ರಂಥವನ್ನು ಬರೆದಿದ್ದಾರೆ.

ಮಾಧ್ವಸಾಂಪ್ರದಾಯದಲ್ಲಿ ವಿಖ್ಯಾತರಾಗಿರುವ ಮಂತ್ರಾಲಯದ ಮಹಾಂತರು ಶ್ರೀ ರಾಘವೇಂದ್ರ ಸ್ವಾಮಿಗಳ ಚರಿತ್ರೆಯನ್ನು ಪದ್ಯರೂಪದಲ್ಲಿ ಸಂಗ್ರಹಿಸಲಾಗಿದೆ. ಶ್ರೀಮತಿ ಯವರ ಈ ಗ್ರಂಥಕ್ಕೆ ಶ್ರೀ ಗಮಕಿ ರಾಘವೇಂದ್ರರಾಯರು ಬರೆದಿರುವ "ಶ್ರೀ ರಾಘವೇಂದ್ರ ಗುರು ಕೀರ್ತನಮಾಲಾ" ಸ್ಫೂರ್ತಿಕೊಟ್ಟಿದೆ ಎಂದು ಗ್ರಂಥಕಾರರು ಹೇಳಿದ್ದಾರೆ. (ಪೀಠಿಕೆ, ಪುಟ ೧೯)

ಪ್ರಕೃತ ಗ್ರಂಥವು ಆರ್ಯಾಗೀತೆಗಳಲ್ಲಿ ರಚಿಸಲ್ಪಟ್ಟಿದೆ. ಒಟ್ಟು ೨೬೦ ಗೀತೆಗಳಿವೆ. ಕಡೆಯಲ್ಲಿ ಶ್ರೀ ರಾಯರನ್ನು ಕುರಿತು ೧೨ ಹಾಡುಗಳಿವೆ. ಕಡೆಯಲ್ಲಿ ಅನುಬಂಧವಿದ್ದು ಗುರುರಾಜರು ಬರೆದ ಗ್ರಂಥಗಳ ಪಟ್ಟಿ, ಗೀತೆಗಳು, ರಾಘವೇಂದ್ರ ಮಠಕ್ಕೆ ಮೈಸೂರರಸರು ಕೊಟ್ಟ ಶಾಸನ ಎಂಬಿಷ್ಟಿವೆ.

ಈ ಗ್ರಂಥವು ಸರಳವಾದ ಭಾಷೆಯಲ್ಲಿ, ಸುಂದರ ಶೈಲಿಯಲ್ಲಿ ನಿರೂಪಿತವಾಗಿದೆ. ಮುಖ್ಯವಾಗಿ ಇದೊಂದು ಭಕ್ತಿಗೀತೆಯೆನಿಸಿದೆ. ಕಾಗದ, ಮುದ್ರಣ, ರಕ್ಷಾಪತ್ರ ಚೆನ್ನಾಗಿದೆ.

ಸ್ತ್ರೀ ಲೇಖಕರು ನಾಡಿನಲ್ಲಿ ಕಡಿಮೆಯಾಗಿರುವ ಕಾಲದಲ್ಲಿ ಈ ಗ್ರಂಥವು ಸೋದರಿ ಯೊಬ್ಬರಿಂದ ವಿರಚಿತವಾಗಿರುವುದು ಗಮನಾರ್ಹವಾಗಿದೆ.

**೫. ವಿಷಗಾಳಿ:** ಬರೆದವರು: ಶ್ರೀ ಮಾ. ಭೀ. ಶೇಷಗಿರಿರಾವ್, ಬೆಂಗಳೂರು-೨; ಸೈಜು: ಕ್ರೌನ್ ೧/೮; ಪುಟ: ೧೬೮; ಬೆಲೆ: ೨-೨೫.

ಇದೊಂದು ಸಾಮಾಜಿಕ ಕಾದಂಬರಿ. "ನಮ್ಮ ಸಮಾಜವನ್ನು ದುಃಖ ದುಗುಡಗಳ ಕಡೆ ಬೆರಳುಮಾಡಿ ತೋರಿಸುವ ಉದ್ದೇಶದಿಂದ ಬರೆಯಲ್ಪಟ್ಟ ಕಾದಂಬರಿ ವಿಷಗಾಳಿ" ಎಂದು ಗ್ರಂಥಕಾರರು ಹೇಳಿದ್ದಾರೆ. ಸುಸಂಸ್ಕೃತಳಾದ 'ಸುಧಾ' ಎಂಬ ತರುಣಿ ಜನನಿಂದೆಯ ವಿಷದ ಗಾಳಿಗೆ ತುತ್ತಾದ ಕಥೆ ಇಲ್ಲಿ ನಿರೂಪಿತವಾಗಿದೆ.

ಭಾಷಾದೋಷಗಳು ಬಹಳವಾಗಿವೆ. ತತ್ವ, ಸಮರ್ಪಣೆ, ಹಠ (ಪುಟ ೨೦) ಗೌರಿಶಂಕರ (ಪುಟ ೨೨) ಶೇಕರ (ಪುಟ ೨೩) ಥಾಳಿ (ಪುಟ ೨೩) ಯೋಗಾನಂದೀಶ (ಪುಟ ೨೫) ನಾಲಿಗೆ (ಪುಟ ೩೩) ಅಂಥಹ (ಪುಟ ೧೪೭) ಭೋಧನೆ (ಪುಟ ೧೪೭) ಮನಸ್ತಾಪ (ಪುಟ ೧೫೦) ಕಾದಂಬರಿಯಲ್ಲಿ ಈ ವ್ಯಾಕರಣದೋಷಗಳು ಬಹಳವಾಗಿವೆ. ಕರ್ತೃ-ಕ್ರಿಯೆಗಳ ಸಮನ್ವಯ ವಿಲ್ಲ. ಜೇವಾರ್ಸಿಯ ಬಾಯಿಗೆ, ಏನೋ ನಸ್ಮಗನೆ (ಪುಟ ೩೩) ವ್ಯಭಿಚಾರ (ಪುಟ ೯೩). ಮುಂದಿನ ಮುದ್ರಣದಲ್ಲಿ ಈ ದೋಷಗಳನ್ನು ಸರಿಪಡಿಸಲೆಂದು ನಮ್ಮ ಸಲಹೆ. ರಸಿಕರು ಒಮ್ಮೆ ಓದಿನೋಡಲಿ ಎಂಬುದು ನಮ್ಮ ಹೆಬ್ಬಯಕೆಯಾಗಿದೆ.

—ಶೂಲಪಾಣಿ

# ಸಂಪಾದಕೀಯ

## ೧. ಕನ್ನಡ ಶಬ್ದಕೋಶ ಮತ್ತು ಕನ್ನಡ ವಿಶ್ವಕೋಶ

ಕನ್ನಡ ಭಾಷೆ ಮತ್ತು ಸಾಹಿತ್ಯವು ಭಾರತದ ಹದಿನಾಲ್ಕು ರಾಷ್ಟ್ರಭಾಷೆಗಳಲ್ಲಿ ಪರಿಗಣಿಸಲ್ಪಟ್ಟಿದೆ. ಪ್ರಾಚೀನತೆ ಮತ್ತು ಪ್ರೌಢಿಮೆಗಳಲ್ಲಿ ಕನ್ನಡವು ಸಂಸ್ಕೃತ ಮತ್ತು ತಮಿಳನ್ನು ಬಿಟ್ಟರೆ ಮೂರನೆಯದಾಗಿದೆ. ಕನ್ನಡವು ಗಂಗ, ಕದಂಬ, ಚಾಳುಕ್ಯ, ರಾಷ್ಟ್ರಕೂಟ, ಯಾದವ, ಹೊಯ್ಸಳ, ವಿಜಯನಗರ, ಕೆಳದಿ, ಮೈಸೂರು ಮೊದಲಾದ ರಾಜ್ಯ, ಸಾಮ್ರಾಜ್ಯಗಳ ರಾಜಭಾಷೆಯಾಗಿ ಕಂಗೊಳಿಸಿದೆ. ಕನ್ನಡ ಸಾಹಿತ್ಯವು ೧೫೦೦ ವರ್ಷಗಳಿಂದ ಕ್ರಮಕ್ರಮವಾಗಿ ಅಭಿವೃದ್ಧಿಯನ್ನು ಹೊಂದುತ್ತಾ ಬಂದಿದೆ. ನೃಪತುಂಗ, ಪಂಪ, ರನ್ನ, ಪೊನ್ನ, ಜನ್ನ, ಹರಿಹರ, ರಾಘವಾಂಕ, ಚಾಮರಸ, ಷಡಕ್ಷರದೇವ, ನಿಜಗುಣ ಶಿವಯೋಗಿ, ಪುರಂದರದಾಸರು, ಕನಕದಾಸರು, ಕುಮಾರವ್ಯಾಸ, ಲಕ್ಷ್ಮೀಶ, ಸರ್ವಜ್ಞ, ಪಾರ್ತಿಸುಬ್ಬ, ಮುದ್ದಣ ಮತ್ತು ಬಸವಪ್ಪಶಾಸ್ತ್ರಿಗಳು ಮೊದಲಾದ ಮಹಾಕವಿಗಳು ಕನ್ನಡ ಸಾಹಿತ್ಯವನ್ನು ಬಹಳವಾಗಿ ಕಳೆಗೊಳಿಸಿದ್ದಾರೆ. ನವೀನ ಸಾಹಿತ್ಯವೂ ಕೂಡ ಕನ್ನಡದಲ್ಲಿ ಹುಲುಸಾಗಿ ಬೆಳೆಯುತ್ತಿದೆ. ಪ್ರಖ್ಯಾತರಾದ ಕವಿಗಳೂ, ಕಾದಂಬರೀಕಾರರೂ, ವಿಮರ್ಶಕರೂ, ಲೇಖಕರೂ ಕನ್ನಡ ನಾಡಿನಲ್ಲಿ ಕಂಗೊಳಿಸುತ್ತಿದ್ದಾರೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಿಘಂಟು, ವ್ಯಾಕರಣ, ಛಂದಸ್ಸು ಮತ್ತು ಅಲಂಕಾರ ಗ್ರಂಥಗಳು ತಕ್ಕಮಟ್ಟಿಗೆ ಗಣ್ಯತೆಯನ್ನು ಪಡೆದಿವೆ.

ಈಗ ಕನ್ನಡ ರಾಜ್ಯೋದಯವಾದ ಮೇಲೆ ಮೈಸೂರು ಸರಕಾರದವರು ಪರಿಸ್ಥಿತಿಗೆ ಅನುಗುಣವಾಗಿ ಕನ್ನಡವನ್ನು ರಾಜ್ಯಭಾಷೆಯನ್ನಾಗಿ ಘೋಷಿಸಿದ್ದಾರೆ. ಬೆಂಗಳೂರು ನಗರ ಸಭೆಯಂತಹ ಮಹಾ ಸ್ಥಳೀಯ ಸಂಸ್ಥೆಗಳು ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಿವೆ. ಇಂತಹ ಪರಿಸ್ಥಿತಿಯಲ್ಲಿ ಕನ್ನಡಕ್ಕೆ ಒಂದು ಅಧಿಕೃತವಾದ ಶಬ್ದಕೋಶವಿರುವುದು ಅಗತ್ಯವಾಗಿದೆಯಲ್ಲವೆ?

ಇದುವರೆಗೆ ಕನ್ನಡ ಅಭ್ಯಾಸಿಗಳ ಅನುಕೂಲಕ್ಕಾಗಿ ಕರ್ಣಾಟಕ ಶಬ್ದಮಂಜರಿ, ಕರ್ಣಾಟಕ ಕಲ್ಪದ್ರುಮ, ಕಿಟ್ಟೆಲ್‌ರವರ ಕೋಶ ಮೊದಲಾದ ನಿಘಂಟುಗಳಿವೆ. ಆದರೂ ಗಣ್ಯ ವಿದ್ವಾಂಸರಿಂದ ಸಂಪಾದಿಸಲ್ಪಟ್ಟು ನಾಡಿಗೆಲ್ಲಾ ಅನ್ವಯಿಸುವ ಉತ್ತಮ ಶಬ್ದಕೋಶ ಅಗತ್ಯವೆಂಬುದನ್ನರಿತು ಕನ್ನಡ ಸಾಹಿತ್ಯ ಪರಿಷತ್ತು ತಾರೀಖು ೧-೧-೧೯೩೦ ರಂದು ಕನ್ನಡ ಶಬ್ದಕೋಶ ರಚನೆಯನ್ನು ಪ್ರಾರಂಭಿಸಿತು. ಆ ಕಾರ್ಯವು ಮುಂದುವರಿದು ಈಗ ಕನ್ನಡ ಶಬ್ದಕೋಶವು ಅಚ್ಚಾಗಲು ಪ್ರಾರಂಭವಾಗಿದೆಯೆಂದು ತಿಳಿಸಲು ನಮಗೆ ಸಂತೋಷವಾಗಿದೆ.

ಸುಪ್ರಸಿದ್ಧ ವಿದ್ವಾಂಸರಾದ ಪ್ರೊ|| ತೀ. ನಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ರಚನೆಯಾಗಿರುವ ಸಂಪಾದಕ ಸಮಿತಿ ಈ ಕೋಶವನ್ನು ಅತಿಶ್ರಮದಿಂದ ಸಿದ್ಧಗೊಳಿಸುತ್ತಿದೆ. ಈ ಕೋಶ ರಚನೆಗಾಗಿ ಮೈಸೂರು ಸರಕಾರದವರು ಹದಿನೈದು ಲಕ್ಷ ರೂಪಾಯಿಗಳನ್ನು ಮಂಜೂರು

ಮಾಡಿದ್ದಾರೆ. ಇದರ ಸಂಪಾದನೆ ಮತ್ತು ಮಾರಾಟದ ಹೊಣೆಗಾರಿಕೆ ಪರಿಷತ್ತಿಗೂ, ಪ್ರಕಟಣೆಯ ಅಧಿಕಾರ ಸರಕಾರಕ್ಕೂ ಇರುವಂತೆ ಕರಾರಾಗಿದೆ.

ಡೆಮ್ಮಿ ನಾಲ್ಕನೇ ಒಂದು ಆಕಾರದ ೫೦೦೦ ಪುಟಗಳುಳ್ಳ ಕನ್ನಡ ಕೋಶದ ೧೦,೦೦೦ ಪ್ರತಿಗಳು ಅಚ್ಚಾಗುತ್ತಿವೆ. ಈ ಕೋಶದ ಬೆಲೆ ಒಂದು ನೂರು ರೂಪಾಯಿಗಳೆಂದು ಸರಕಾರವು ನಿರ್ಧರಿಸಿದೆ. ಈ ಕೋಶವು ಸಿದ್ಧವಾದ ಮೇಲೆ ಭಾರತೀಯ ಭಾಷಾ ನಿಘಂಟುಗಳಲ್ಲಿ ಈ ಕನ್ನಡ ಶಬ್ದಕೋಶಕ್ಕೆ ಒಂದು ಉನ್ನತ ಸ್ಥಾನ ಲಭ್ಯವಾಗುವುದೆಂದು ವಿದ್ವಾಂಸರು ತರ್ಕಿಸಿದ್ದಾರೆ. ಅತ್ಯಂತ ಶಾಸ್ತ್ರೀಯ ದೃಷ್ಟಿಯಿಂದ ಇದನ್ನು ಸಿದ್ಧಗೊಳಿಸಲಾಗುತ್ತಿದೆ.

ಇದೇ ಸಂದರ್ಭದಲ್ಲಿ ಮದರಾಸು ವಿಶ್ವವಿದ್ಯಾನಿಲಯದವರು ಡಾ|| ಕಿಟ್ಟೆಲ್ ಅವರ ಕನ್ನಡ ಕೋಶವನ್ನು ಮತ್ತೆ ಸಂಪಾದಿಸಿ ಅಚ್ಚುಮಾಡುತ್ತಿದ್ದಾರೆ ಎಂಬುದನ್ನು ಕನ್ನಡಿಗರಿಗೆ ತಿಳಿಸಲು ಸಂತೋಷವಾಗುತ್ತದೆ. ಕನ್ನಡ ನಾಡುನುಡಿಗಳ ಅಭಿಮಾನಿಗಳು ಈ ಕೋಶವನ್ನು ಸಂಗ್ರಹಿಸಲು ತ್ವರೆಗೊಳ್ಳುವರೆಂದು ನಾವು ನಂಬುತ್ತೇವೆ.

ಕನ್ನಡ ಜನಕ್ಕೆ ಅತಿ ಅಗತ್ಯವಾದ 'ಕನ್ನಡ ವಿಶ್ವಕೋಶ' (Encylopedia of Kannada) ಮೈಸೂರು ಸರಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆಯ ಪರವಾಗಿ ಸಿದ್ಧವಾಗುತ್ತಿದೆ. ಇದು ಪೂರ್ಣಗೊಳ್ಳಲು ೨೫,೦೦,೦೦೦ ರೂಪಾಯಿ ಖರ್ಚಾಗಬಹುದೆಂದು ಅಂದಾಜು ಮಾಡಲಾಗಿದೆ. ಇದರ ಮುದ್ರಣ ಕಾರ್ಯ ಕೂಡ ಕ್ಷಿಪ್ರದಲ್ಲಿಯೇ ಪ್ರಾರಂಭವಾಗಲಿದೆ. ನಾಡಿನ ವಿದ್ಯಾಭಿಮಾನಿಗಳು ಹಲವರು ಇದಕ್ಕೆ ಶ್ರಮವಹಿಸುತ್ತಿದ್ದಾರೆ. ಸಾಹಿತ್ಯ ಮತ್ತು ಸಂಸ್ಕೃತಿಯ ಅಭಿವೃದ್ಧಿ ಇಲಾಖೆಯ ಮುಖ್ಯಾಧಿಕಾರಿಗಳಾದ ಶ್ರೀ ಕೆ. ಎಸ್. ಧರಣೇಂದ್ರಯ್ಯನವರು ಇದಕ್ಕಾಗಿ ಉತ್ಸಾಹದಿಂದ ಶ್ರಮಿಸುತ್ತಿದ್ದಾರೆಂದು ಹೇಳಲು ಹರ್ಷಿಸುತ್ತೇವೆ.

ಕನ್ನಡ ವಿಶ್ವಕೋಶವು ೧೯೫೬ ರಿಂದ ಮೊದಲಾಗಿದೆ. ಇದಕ್ಕಾಗಿ ಸರ್ಕಾರದವರು ಒಂದು ಗಣ್ಯ ಸಂಪಾದಕ ಮಂಡಲಿ ರಚಿಸಿದ್ದಾರೆ. ಈ ಕೋಶವು ೧೦೦೦ ಪುಟಗಳ ೧೦ ಸಂಪುಟಗಳಾಗುತ್ತದೆ. ಕನ್ನಡ ಶಬ್ದಕೋಶವು ೧೨೫೦ ಪುಟಗಳ ೪ ಸಂಪುಟಗಳಾಗುತ್ತದೆ. ೧೯೬೬ಕ್ಕೆ ಈ ವಿಶ್ವಕೋಶ ಮುಗಿಯಬೇಕಾಗಿದೆ. ಇದರ ಬೆಲೆ ೨೫೦ ರೂ. ಆಗಬಹುದು. ಇದಕ್ಕಾಗಿ ೩೨ ಉಪಸಮಿತಿಗಳಾಗಿವೆ. ತಜ್ಞರು ಈ ಸಮಿತಿಯಲ್ಲಿದ್ದಾರೆ. ಇದರಲ್ಲಿ ೧೦೦ ವರ್ಣಚಿತ್ರಗಳೂ ಇತರ ಚಿತ್ರಗಳೂ ಇರುತ್ತವೆ. ಡೆಮ್ಮಿ ೧/೪ ಆಕಾರದಲ್ಲಿ ಅಚ್ಚಾಗಲಿದೆ. ಕನ್ನಡ ಶಬ್ದಕೋಶ ಮತ್ತು ವಿಶ್ವಕೋಶಗಳ ರಚನೆಗೆ ಆಗಲಿರುವ ೧೫ + ೨೫ = ೪೦ ಲಕ್ಷ ರೂ.ಗಳಲ್ಲಿ ಅರ್ಧ ಹಣವನ್ನು ಕೇಂದ್ರ ಸರ್ಕಾರವೂ ಉಳಿದರ್ಧವನ್ನು ರಾಜ್ಯ ಸರ್ಕಾರವೂ ಕೊಡಲಿವೆ. ಈ ಕನ್ನಡ ಕೋಶ-ವಿಶ್ವಕೋಶಗಳು ಕನ್ನಡ ಸಾಹಿತ್ಯಕ್ಕೆ ಹೆಚ್ಚಿನ ಶಕ್ತಿಯನ್ನು ಕೊಡಲಿವೆಯೆನ್ನಬಹುದು.

## ೨. ಕರ್ನಾಟಕದಲ್ಲಿ ಪ್ರಾದೇಶಿಕ ಶಬ್ದಗಳು

ವಿಶ್ವದ ರಾಷ್ಟ್ರಗಳಲ್ಲಿ ಭರತಖಂಡಕ್ಕೆ ಒಂದು ವೈಶಿಷ್ಟ್ಯವಿರುವಂತೆ ಭಾರತ ರಾಷ್ಟ್ರದಲ್ಲಿ ಕರ್ನಾಟಕಕ್ಕೂ ಒಂದು ಹೆಚ್ಚುಗಾರಿಕೆ ಇದೆ. ಕನ್ನಡ ಭಾಷೆಯು ಪ್ರಾಚೀನವೂ, ಸುಪ್ರೌಢವೂ ಆದಂತೆ ಅತ್ಯಂತ ವಿಖ್ಯಾತವೂ, ವಿಶಾಲ ಬಾಂಧವ್ಯವುಳ್ಳದೂ ಆಗಿದೆ. ಕೊಡಗ, ಬಡಗ,

ತೊದ, ತುಳು ಮೊದಲಾದ ಭಾಷೆಗಳು ಒಂದು ವಿಧದಲ್ಲಿ ಕನ್ನಡದ ಉಪಭಾಷೆಗಳಂತಿವೆ ಎಂಬುದು ಗಮನಾರ್ಹವಾಗಿದೆ. ಕನ್ನಡ ಸರಸ್ವತಿ ಸಕಲಗುಣಸಂಪನ್ನೆಯೆನಿಸಿದ್ದಾಳೆ.

ಬಹಳ ಕಾಲದಿಂದ ಕರ್ಣಾಟಕದಲ್ಲಿ ಬಳಕೆಯಲ್ಲಿರುವ ಶಬ್ದಗಳು, ಪ್ರಾದೇಶಿಕವಾಗಿ ಭಿನ್ನಭಿನ್ನವಾಗಿರುವುದನ್ನು ನಾವರಿಯಬಹುದು. ಇದಕ್ಕೆ ಕನ್ನಡ ನಾಡು ಹಲವು ಕಾಲ ಬೇರೆ ಬೇರೆ ಸರ್ಕಾರಗಳ ಕೈಲಿದ್ದುದು ಕಾರಣವೆಂದು ತೋರುತ್ತದೆ. 'ಎಳನೀರು' ಎಂದು ಮೈಸೂರಿನಲ್ಲಿ ಕರೆದರೆ ಅದನ್ನು ಗೋಕರ್ಣದಲ್ಲಿ 'ಸೀಯಾಳ' ಎಂದೂ, ಕೊಡಗಿನಲ್ಲಿ 'ಪೊಂಡ' ಎಂದೂ ಕರೆಯುತ್ತಾರೆ. 'ಸೊಳ್ಳೆ' ಎಂಬ ಪ್ರಾಣಿಗೆ ಕನ್ನಡ ನಾಡಿನ ಬೇರೆ ಬೇರೆ ಭಾಗಗಳಲ್ಲಿ, ಚುಕ್ಕಾಡಿ, ಗುಂಗಾಡಿ, ದ್ವಾಮಿ, ನುಸಿ ಎಂದು ಜನರು ಬಗೆಬಗೆಯಾಗಿ ಕರೆಯುತ್ತಾರೆ. 'ಕಷ್ಟ' ಎಂಬ ಶಬ್ದವು ಶ್ರಮ, ಕ್ಷೌರ ಮಾಡಿಸಿಕೊಳ್ಳುವುದು ಎಂಬರ್ಥದಲ್ಲಿ ಬೇರೆ ಬೇರೆ ಕಡೆ ರೂಢಿಯಲ್ಲಿದೆ. 'ದೊಡ್ಡಿ' ಎಂಬ ಪದವು, ಸೌದೆ ಅಂಗಡಿ, ದನಗಳ ಕೊಟ್ಟಿಗೆ, ಒಂದು ಜಾತಿ ಅಕ್ಕಿ, ಮತ್ತು ದೊಡ್ಡಮ್ಮ ಎಂಬರ್ಥಗಳಲ್ಲಿ ಬೇರೆ ಬೇರೆ ಕಡೆ ಬಳಕೆಯಲ್ಲಿದೆ. ಯಕ್ಷಗಾನವನ್ನು ಕೆಲವು ಕಡೆ ಬಯಲಾಟ, ದೊಡ್ಡಾಟ, ಬಯಲು ನಾಟಕ, ಭಾಗವತರಾಟ, ಭಾಗವತರ ಮೇಳ ಎಂದು ಕರೆಯುತ್ತಾರೆ. 'ಕಜ್ಜಾಯ' ಎಂಬ ತಿನಿಸನ್ನು ಉತ್ತರದ ಕಡೆ 'ಧಪಾಟಿ'ಯೆನ್ನುತ್ತಾರೆ. ಗೋಧಿ ರೊಟ್ಟಿಗೆ 'ಚಪಾತಿ' ಎಂಬ ಹೆಸರಿದೆ. ರಾಗಿಮುದ್ದೆಯನ್ನು ಕೆಲವು ಕಡೆ 'ಪಕ್ವಾನ್ನ' ಎಂದು ಕರೆಯುತ್ತಾರೆ. 'ತಿಂಡಿ' ಎಂಬ ಶಬ್ದ ಮೈಸೂರಿನಲ್ಲಿ 'ತಿನಿಸು' ಎಂದೂ, ಕಲ್ಬುರ್ಗಿಯಲ್ಲಿ 'ನೈನವೆ' ಎಂದೂ, ಮತ್ತೆ ಕೆಲವು ಕಡೆ 'ಕಾಮವಿಕಾರ' ಎಂದೂ ವ್ಯವಹರಿಸಲ್ಪಟ್ಟಿದೆ. 'ಕತ್ತಾಳೆ' ಎಂದು ಮೈಸೂರಿನಲ್ಲಿ ಹೇಳುವ ಗಿಡಕ್ಕೆ, ಕರೇಬಾಳೆ, ಕರೇಕೇದಿಕೆ, ಭೂತಾಳೆ, ರಕ್ಕಸಬಾಳೆ, ದಡ್ಡೋಳಿ ಎಂದು ಬೇರೆ ಬೇರೆ ಕಡೆ ಕರೆಯುತ್ತಾರೆ. ಬೇಲಿ ಗಿಡವನ್ನು ಚದುರಂಗ, ಲಾಂಟಾನ, ಕಸೂತಿ, ಪಾದರಿ ಎಂದು ಬೇರೆ ಕಡೆ ಕರೆಯುತ್ತಾರೆ. 'ಪೊದಗಳ್ಳಿ'ಯನ್ನು ಕೆಲವೆಡೆ 'ಪಾಪಾಸ್‌ಕಳ್ಳಿ'ಯೆನ್ನುತ್ತಾರೆ. ಕಾಸರಗೋಡಿನ ಅಪ್ಪ (ಅಪೂಪ) ಮೈಸೂರಿನವರಿಗೆ ಅರ್ಥವಾಗುವುದಿಲ್ಲ. ಹೊಂಬಾಳೆಯನ್ನು ಕೆಲವು ಕಡೆ, ಸಿಂಗಾರಿ, ಹಿಂಗಾರಿ ಎನ್ನುತ್ತಾರೆ. ಮಂಗಳೂರಿನ 'ಅಬ್ಬಲಿಗೆ ಹೂ' ಬೆಂಗಳೂರಿನಲ್ಲಿ ಕನಕಾಂಬರ ಎನಿಸಿಕೊಂಡಿದೆ. ಅರ್ಚಕರನ್ನು ಕೆಲವು ಕಡೆ, ಅಡಿಗಳು, ತಮ್ಮಡಿಗಳು, ಪೂಜಾರಿಗಳು ಎನ್ನುತ್ತಾರೆ. ಗೋರಿಕಾಯಿಯನ್ನು ಅಕ್ಕಲಕೋಟೆಯಲ್ಲಿ 'ಜವಳಿಕಾಯಿ' ಅನ್ನುತ್ತಾರೆ. ಆಲದ ಮರಕ್ಕೆ ಕೆಲವೆಡೆ 'ತೊಂಡೇಮರ' ಎಂಬ ಹೆಸರಿದೆ. ನೀರು ಎಂಬ ಪದಕ್ಕೆ ತೇರದಾಳದಲ್ಲಿ 'ಸಿತಾಳ' ಎನ್ನುತ್ತಾರೆ. ಜೇಡಿಮಣ್ಣನ್ನು ಕೆಲವೆಡೆಗಳಲ್ಲಿ 'ರೇವೆಮಣ್ಣು' ಎನ್ನುತ್ತಾರೆ. ಮೈಸೂರಿನ 'ಅತ್ತೆ' ಧಾರವಾಡದಲ್ಲಿ 'ಅತ್ತಿ' ಆಗುತ್ತಾಳೆ. ಬಿಜಾಪುರದ ತಂಗೆ. ಬೆಂಗಳೂರಿನಲ್ಲಿ ತಂಗಿಯಾಗುತ್ತಾಳೆ. ಹೈದರಾಬಾದಿನ ಕನ್ನಡ ಜಿಲ್ಲೆಗಳಲ್ಲಿ (ಬೀದರ್, ಗುಲ್ಬರ್ಗ, ರಾಯಚೂರ್) ಉರ್ದು ಶಬ್ದಗಳು ಕನ್ನಡದಲ್ಲಿ ಬಹಳವಾಗಿ ಬಳಕೆಯಲ್ಲಿವೆ. ಬೊಂಬಾಯಿ ಕರ್ಣಾಟಕದ ನಾಲ್ಕು ಜಿಲ್ಲೆಗಳಲ್ಲಿ (ಬೆಳಗಾಂವಿ, ಧಾರವಾಡ, ಬಿಜಾಪುರ ಮತ್ತು ಉತ್ತರ ಕನ್ನಡ) ಮರಾಠಿ ಶಬ್ದಗಳು ಬಹಳವಾಗಿವೆ. ಮೈಸೂರು ಪ್ರದೇಶದಲ್ಲಿ ಇಂಗ್ಲಿಷ್ ಶಬ್ದಗಳು ಅಧಿಕವಾಗಿ ಬಳಕೆಯಲ್ಲಿವೆ. ಒಟ್ಟಿನಲ್ಲಿ ಇಂದಿನ ವಿಶಾಲ ಮೈಸೂರು ಅಥವಾ ಕರ್ಣಾಟಕ ರಾಜ್ಯದಲ್ಲಿ ಯಾವ ಪ್ರದೇಶದಲ್ಲಿಯೂ ಕನ್ನಡವು ಶುದ್ಧವಾಗಿಯೂ ಏಕಮುಖವಾಗಿಯೂ ಬಳಕೆಯಲ್ಲಿಲ್ಲ. ಮೈಸೂರು ಸರಕಾರದ ಶಿಕ್ಷಣ ಶಾಖೆಯವರು ಪ್ರಾಥಮಿಕ ಪಠ್ಯಪುಸ್ತಕಗಳಲ್ಲಿ ಭಾಷೆಯ ಏಕೀಕರಣಕ್ಕಾಗಿ ಪ್ರಯತ್ನಿಸುತ್ತಿರುವುದು ಸ್ತುತ್ಯವಾಗಿದೆ. ಕರ್ಣಾಟಕದ ಲೇಖಕರು, ಪತ್ರಿಕಾಕರ್ತರು, ವಿದ್ವಾಂಸರು ಈ ವಿಷಯವನ್ನು

ಪರಿಶೀಲಿಸಿ ಭಾಷೆಯ ಏಕೀಕರಣಕ್ಕಾಗಿ ಪ್ರಯತ್ನಿಸುವುದು ಅಗತ್ಯವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತು ಕನ್ನಡದ ಪ್ರಾದೇಶಿಕ ಶಬ್ದಗಳ ಒಂದು ಕೋಶವನ್ನು ರಚಿಸಲು ಪರಿಸ್ಥಿತಿ ಇಂದು ಅನುಕೂಲವಾಗಿದೆ. ಈ ಕಾರ್ಯ ಅತಿ ಆಗತ್ಯವಾಗಿ ಆಗಬೇಕಾಗಿದೆ. ಸುಮಾರು ೫೦ ವರ್ಷಗಳಿಂದ ಪರಿಷತ್ತಿನ ಹಿರಿಯರು ನಾಡಿನ ಮತ್ತು ನುಡಿಯ ಏಕೀಕರಣಕ್ಕಾಗಿ ಪ್ರಯತ್ನಿಸುತ್ತಿದ್ದಾರೆಂಬುದು ಸರ್ವಶ್ರುತವಾಗಿದೆ.

### ೩. ಮೈಸೂರು ರಾಜ್ಯದಲ್ಲಿ ಕಲಾವಿದರ ಮತ್ತು ಕಲೆಗಳ ಸಂರಕ್ಷಣೆ

ಮೈಸೂರು ಸರಕಾರದವರು, ಸಾಹಿತ್ಯ, ಸಂಗೀತ ಮತ್ತು ಲಲಿತ ಕಲೆಗಳ ಅಕೆಡೆಮಿಯ ಮೂಲಕವಾಗಿ ಕಲೆಯ ಮತ್ತು ಕಲೆಗಾರರ ಸಂರಕ್ಷಣೆಗಾಗಿ ತಕ್ಕಮಟ್ಟಿಗೆ ಪ್ರಯತ್ನಿಸುತ್ತಿದ್ದಾರೆ. ವಿಖ್ಯಾತ ವಿದ್ವಾಂಸರು ಮತ್ತು ಕಲೆಗಾರರನ್ನು ಸನ್ಮಾನಿಸುವುದು, ವಯಸ್ಕರೂ, ನಿಶ್ಯಕ್ತರೂ ಆದ ಕಲೆಗಾರರಿಗೆ ವಿಶ್ರಾಂತಿವೇತನ ನೀಡುವುದು, ಉತ್ತಮ ಕಲೆಗಾರರಿಗೆ ಬಹುಮಾನ ನೀಡುವುದು ಇತ್ಯಾದಿ ಕಾರ್ಯಗಳನ್ನು ಸರಕಾರ ಮಾಡುತ್ತಿರುವುದು ನಿಜಕ್ಕೂ ಸ್ತುತ್ಯವಾಗಿದೆ. ಈ ಬಗ್ಗೆ ಕೇಂದ್ರ ಸರಕಾರದವರು ಹೆಚ್ಚಿನ ಸಹಾಯವನ್ನು ರಾಜ್ಯಕ್ಕೆ ನೀಡುತ್ತಿರುವುದು ಶ್ಲಾಘ್ಯವಾಗಿದೆ. ಸರಕಾರವು ಈ ಕಾರ್ಯದಲ್ಲಿ ದಿಗ್ವಿಜಯವನ್ನು ಪಡೆಯಬೇಕಾದರೆ ನಾವು ಮುಂದೆ ಸೂಚಿಸಿರುವ ಸಲಹೆಗಳನ್ನು ಕಾರ್ಯರೂಪಕ್ಕೆ ತರುವುದು ಅಗತ್ಯವಾಗಿದೆ.

(೧) ಮೈಸೂರಿನಲ್ಲಿ ಒಂದು ಸಂಗೀತ ನಾಟಕ ಕಾಲೇಜನ್ನು ಕೂಡಲೇ ಪ್ರಾರಂಭಿಸಬೇಕು. ಅಲ್ಲಿ ಸಂಗೀತ, ನಾಟಕ, ನೃತ್ಯ, ಶಿಲ್ಪ, ಚಿತ್ರ, ಗಮಕ, ಕೀರ್ತನ ಮೊದಲಾದ ಕಲೆಗಳನ್ನು ಮತ್ತು ಕರ್ನಾಟಕದಲ್ಲಿ ಬಳಕೆಯಲ್ಲಿರುವ ಕರಡಿಮಜಲು, ಖಣಿ ಮಜಲು, ರಿಂಗಣ ಗುಣಿತ, ಮುಖವೀಣೆ, ಕಂಸಾಳೆ, ಕೋಲಾಟ, ಧ್ವಜಕುಣಿತ, ಕರಗದ ಕುಣಿತ, ಭೃಂಗಿನೃತ್ಯ, ಚದುರಂಗ, ಮೊದಲಾದ ಆಟಪಾಟಗಳನ್ನು ಪ್ರೋತ್ಸಾಹಿಸಿ ಆ ಕಲೆಗಾರರನ್ನು ಸಂರಕ್ಷಿಸುವುದು.

(೨) ಬೆಂಗಳೂರಿನಲ್ಲಿ ಒಂದು ಚಲನಚಿತ್ರ ತಯಾರಿಕಾ ಮಂದಿರ (ಸಿನಿಮಾ ಸ್ಟುಡಿಯೊ) ಆದಷ್ಟು ಬೇಗ ಆಗುವಂತೆ ಮಾಡಿ ಚಲನಚಿತ್ರ ಕಲಾವಿದರಿಗೆ ಮತ್ತು ಚಿತ್ರ ತಯಾರಿಕರಿಗೆ ನೆರವಾಗುವುದು. ನಮ್ಮ ಕಲಾವಿದರಿಗೆ ಬೊಂಬಾಯಿ, ಮದರಾಸು ಮೊದಲಾದ ಕಡೆಗೆ ಹೋಗಿ ಬರುವ ಕಷ್ಟ ಕಾರ್ಪಣ್ಯಗಳನ್ನು ತಪ್ಪಿಸುವುದು.

(೩) ಶಾಸನ ಪರಿಷತ್ತಿನಲ್ಲಿ ಸಾಹಿತ್ಯ, ಸಂಗೀತ, ನಾಟಕ, ನೃತ್ಯ, ವೈದ್ಯ, ವಿಜ್ಞಾನ, ಪತ್ರಿಕಾವೃತ್ತಿ ಮೊದಲಾದ ಲೋಕಸೇವಾ ಕಾರ್ಯಗಳನ್ನು ಕೈಗೊಂಡವರಿಗೆ ಪ್ರಾತಿನಿಧ್ಯವನ್ನು ಕೊಡುವ ಸತ್ಸಂಪ್ರದಾಯವನ್ನು ಪ್ರಾರಂಭಿಸಬೇಕು. ಈ ದೆಸೆಯಲ್ಲಿ ಕೇಂದ್ರ ಸರಕಾರದವರು ರಾಜ್ಯ ಸಭೆಗೆ ಭಾರತದ ಪ್ರಖ್ಯಾತರಾದ ಎಂಟು ಮಂದಿ ಕಲಾವಿದರನ್ನು ನಾಮಕರಣ ಮಾಡುತ್ತಿರುವ ವಿಷಯವನ್ನು ಇಲ್ಲಿ ನಮ್ಮ ಸರ್ಕಾರವು ಸ್ಮರಣೆಯಲ್ಲಿಟ್ಟುಕೊಳ್ಳಬಹುದು.

(೪) ಎರಡೂವರೆ ಕೋಟಿ ಕನ್ನಡಿಗರ ಮಾತೃಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿಗೆ ವರ್ಷಕ್ಕೆ ೭,೫೦೦ ರೂ.ನಂತೆ ಸರಕಾರ ಕೊಡುತ್ತಿರುವ ಸಹಾಯದ್ರವ್ಯ ಎಷ್ಟುಮಾತ್ರಕ್ಕೂ ಸಾಲುವುದಿಲ್ಲ. ಈ ಸಹಾಯಧನವನ್ನು ಸರಕಾರದವರು ವರ್ಷಕ್ಕೆ ಒಂದು ಲಕ್ಷ ರೂ.ಗಳಿಗೇರಿಸಿ ಪರಿಷತ್ತಿನಿಂದ ಹೆಚ್ಚಿನ ಸೇವೆಯನ್ನು ರಾಷ್ಟ್ರಕ್ಕೆ ಮಾಡಿಸಬಹುದು. ಭಾರತದ ಬೇರೆ ರಾಜ್ಯಗಳಲ್ಲಿ

ಆಯಾ ಸರಕಾರಗಳು ಆಯಾ ದೇಶಭಾಷೆಗಳ ಸಾಹಿತ್ಯ ಸಂಸ್ಥೆಗಳಿಗೆ ಕೊಡುವಷ್ಟಾದರೂ ಸಹಾಯವನ್ನು ನಮ್ಮ ಸರಕಾರದವರು ಸಾಹಿತ್ಯ ಪರಿಷತ್ತಿಗೆ ಕೊಡಬೇಕು.

(೫) ಉತ್ತಮ ಗ್ರಂಥಕಾರರಿಗೆ ಪ್ರತಿ ವರ್ಷವೂ ಸನ್ಮಾನವೀಯುವ ಉತ್ತಮ ಪದ್ಧತಿಯನ್ನು ಮುಂದುವರಿಸುವುದು.

ಈ ಮೇಲೆ ಹೇಳಿದಂತೆ ಸರಕಾರವು ಉದಾರವಾಗಿ ವರ್ತಿಸಿದಲ್ಲಿ, ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳು, ಕನ್ನಡ ಜನಜೀವನವು ಚೆನ್ನಾಗಿ ಬಳೆದು ಬಾಳುವುದರಲ್ಲಿ ಯಾವ ಅಭ್ಯಂತರವೂ ಇಲ್ಲ.

## ೪. ಕರ್ಣಾಟಕದ ಶಿಲಾ ಮತ್ತು ತಾಮ್ರಶಾಸನಗಳು

ಪ್ರಾಚೀನವೂ ಸುಪ್ರೌಢವೂ ಆದ ಕನ್ನಡ ನಾಡಿನಲ್ಲಿ ಸುಮಾರು ಎರಡು ಸಾವಿರ ವರ್ಷಗಳಿಂದ ವೈಭವದಿಂದ ಆಳಿ ಬಾಳಿದ ರಾಜಮಹಾರಾಜರುಗಳ ಕಾಲದಲ್ಲಿ ಅಪರಿಮಿತವಾದ ಶಿಲಾ ಮತ್ತು ತಾಮ್ರ ಶಾಸನಗಳು ರಚನೆಯಾಗಿವೆ. ತಲಕಾಡು, ಬನವಾಸಿ, ಬಳ್ಳಿಗಾಮಿ, ಮಾಳಖೇಡ, ಕಲ್ಯಾಣ, ಹಂಪೆ, ವಿಜಯನಗರ, ಹಳೇಬೀಡು, ಕೆಳದಿ, ಸ್ವಾದಿ, ಮೊದಲಾದ ಪ್ರಾಚೀನ ರಾಜಧಾನಿಗಳಲ್ಲಿ ಶಿಲಾ ತಾಮ್ರ ಶಾಸನಗಳು ಅಪರಿಮಿತವಾಗಿ ಕಾಣಿಸಿಕೊಂಡಿವೆ. ಭುವನಗಿರಿ ದುರ್ಗದ ಒಂದು ಮಠದಲ್ಲಿ ೯೪ ತಾಮ್ರ ಶಾಸನಗಳಿರುವುದನ್ನು ನಾವು ಪ್ರತ್ಯಕ್ಷವಾಗಿ ಕಂಡಿದ್ದೇವೆ. ಶಿಲಾಶಾಸನಗಳೇ ಅಲ್ಲದೆ, ವೀರಗಲ್ಲುಗಳು, ನಿಷದಿಗಲ್ಲುಗಳು, ಮಹಾಸತಿಗಲ್ಲುಗಳು ಕೂಡ ನಮ್ಮ ನಾಡಿನ ತುಂಬ ಕಂಗೊಳಿಸುತ್ತಿವೆ. ಸುಮಾರು ೫೦,೦೦೦ ಶಿಲಾಶಾಸನಗಳು, ಸಾವಿರಾರು ತಾಮ್ರಶಾಸನಗಳು ನಮ್ಮ ನಾಡಿನಲ್ಲಿವೆ ಎಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಇವುಗಳಲ್ಲಿ ಅರ್ಧಕ್ಕಿಂತ ಹೆಚ್ಚು ಪ್ರಕಟವಾಗಿಲ್ಲ.

ಲಂಡನ್ನಿನಲ್ಲಿರುವ ಇಂಡಿಯಾ ಲೈಬ್ರರಿಯಲ್ಲಿ, ಗೋವೆಯ ಮುಖ್ಯಪಟ್ಟಣ ಪಂಜಿಂನಲ್ಲಿರುವ ಸರಕಾರಿ ಕಾರ್ಯಾಲಯದಲ್ಲಿ ಕನ್ನಡ ನಾಡಿಗೆ ಸಂಬಂಧಪಟ್ಟ ಹಲವು ಶಾಸನಗಳಿವೆ ಮತ್ತು ಕಾಗದಪತ್ರಗಳಿವೆ. ಇವನ್ನೆಲ್ಲಾ ಸಂಗ್ರಹಿಸಿ ಪ್ರಕಟಿಸಿದರೆ ಅಮೂಲ್ಯವಾದ ಇತಿಹಾಸ ಸಂಪತ್ತು ಬೆಳಕಿಗೆ ಬರುತ್ತದೆ. ಈ ಮಹತ್ಕಾರ್ಯವನ್ನು ಸರಕಾರದವರೂ ವಿಶ್ವವಿದ್ಯಾನಿಲಯ ಮತ್ತು ಪರಿಷತ್ತಿನಂಥ ಮಹಾ ಸಂಸ್ಥೆಯವರೂ ನಡೆಸಲು ಸಾಧ್ಯವಿದೆ. ಮಹಾಜನರೂ ಸರ್ಕಾರದವರೂ ಈ ಮಹತ್ವದ ವಿಷಯವನ್ನು ಗಮನಿಸುವರೆ?



# ಪ್ರಾಚ್ಯಲೇಖನ ಸೂಚಿ

**SIXTH MUSIC CONFERENCE SOUVENIR (Mysore)**

December 1963

ಶ್ರೀ ಪುರಂದರದಾಸರ ವ್ಯಕ್ತಿತ್ವ—ಕೆ. ಎಂ. ಕೃಷ್ಣರಾವ್.

ಕಾವ್ಯವಾಚನ ಮತ್ತು ಅದರ ವ್ಯಾಪ್ತಿ—ಕೆ. ಟಿ. ರಾಮಸ್ವಾಮಯ್ಯಂಗಾರ್.

Kanaka Dasa—*Rajasree.*

**ಪರಿಮಳ-ಪುರಂದರಾಂಕ**

ಜನವರಿ ೧೯೬೪

ತತ್ತ್ವಜ್ಞಾನಿ ಪುರಂದರದಾಸರು—ಕೆ. ಎಂ. ಕೃಷ್ಣರಾವ್.

ಶ್ರೀ ಪುರಂದರದಾಸರು-ಅವರ ಮಹೋಪಕಾರ—ವಿದ್ಯಾರತ್ನಂ ಆರ್. ಎಸ್. ಪಂಚಮುಖಿ

ಪುರಂದರೋಪನಿಷತ್ತು—ಬಿ. ಕೇಶವದಾಸರು.

The Right approach to Purandara's poetry—*G. B. Joshi.*

**ಶ್ರೀ ಪುರಂದರೋತ್ಸವ (ಬೆಂಗಳೂರು)**

ಮಾರ್ಚ್ ೧೯೬೪

ಪುರಂದರವಿಠಲನ ಸಮಕಾಲಿಕರು—ಕೆ. ವೆಂಕಟರಾಯಾಚಾರ್ಯ.

ಶ್ರೀ ಪುರಂದರದಾಸರು—ಎಂ. ವಿ. ಸೀತಾರಾಮಯ್ಯ.

ವೈಷ್ಣವ ದಾಸರ ಕೀರ್ತನೆಗಳು—ನಾಸ್ತಿ ವೆಂಕಟೇಶ ಅಯ್ಯಂಗಾರ್.

ಶ್ರೀ ಪುರಂದರದಾಸರು ಮತ್ತು ಅವರ ಸಾಹಿತ್ಯ—ಬಿ. ಶಿವಮೂರ್ತಿ ಶಾಸ್ತ್ರೀ.

**ಕೈಲಾಸ (ಬೆಂಗಳೂರು)**

ಫೆಬ್ರುವರಿ ೧೯೬೪

ನಗೆಯು ಬರುತಿದೆ—ಕೆ. ಎಂ. ಕೃಷ್ಣರಾವ್.

**ಕನ್ನಡ ನುಡಿ (ಬೆಂಗಳೂರು)**

ಬೆಳ್ಳಿ ಸಂಚಿಕೆ ೧೯೬೪

ಸ್ವಾತಂತ್ರ್ಯಪೂರ್ವದ ಕನ್ನಡ ರಾಜಕೀಯ ಸಾಹಿತ್ಯ—ತಿರುಮಲೆ ತಾತಾಚಾರ್ಯ ಶರ್ಮ.

ಸ್ವಾತಂತ್ರ್ಯಪೂರ್ವ ಕನ್ನಡ ಕಾದಂಬರಿ—ಎಲ್. ಎಸ್. ಶೇಷಗಿರಿರಾವ್.

ಸಣ್ಣ ಕಥೆಗಳ ಬೆಳವಣಿಗೆ—ಎಂ. ವಿ. ಸೀತಾರಾಮಯ್ಯ.

ಕನ್ನಡ ವಿಮರ್ಶೆಯ ಬೆಳವಣಿಗೆ—ರಂ. ಶ್ರೀ. ಮುಗಳಿ.

ಸ್ವಾತಂತ್ರ್ಯದ ನಂತರ ಕನ್ನಡ ವಿಮರ್ಶಾ ಸಾಹಿತ್ಯ—ಸ. ಸ. ಮಾಳವಾಡ.

ಅನುವಾದ ಸಾಹಿತ್ಯ—ಎಂ. ಮರಿಯಪ್ಪಭಟ್.

ದಾಸಸಾಹಿತ್ಯವನ್ನು ಕುರಿತು ಬಂದ ಕೃತಿಗಳು—ಕೆ. ಎಂ. ಕೃಷ್ಣರಾವ್.

ಕನ್ನಡ ಕಾವ್ಯದ ಬೆಳವಣಿಗೆ—ಕಂ. ಸು. ವೆಂಕಟಾದ್ರಿ ಶರ್ಮಾ.

ಕನ್ನಡ ಪ್ರಬಂಧ ಸಾಹಿತ್ಯ—ಹಂಪನಾ.

FIFTH ALL INDIA MADHVA PHILOSOPHICAL CONFERENCE SOUVENIR

Jan. 1964

The Role of Purandaradas as spiritual guide and social reformer—*R. Krishna Murthy*.

ಶ್ರೀ ಕನಕದಾಸ—ಸುಬೋಧ ರಾಮರಾವ್.

ಶ್ರೀ ಗೋಪಾಲದಾಸರು—ಕೆ. ಎಂ. ಕೃಷ್ಣರಾವ್.

**ಸುವರ್ಣ ಸಂಪುಟ** (ಸಿದ್ಧಗಂಗೆ) ೧೯೬೩

(೪೪ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಂಕ)

ತುಮಕೂರು ಜಿಲ್ಲೆಯ ಸಾಹಿತ್ಯವೈಭವ—ಬಿ. ಶಿವಮೂರ್ತಿ ಶಾಸ್ತ್ರೀ.

ಆಚಾರ್ಯ ಶ್ರೀಯವರ ಅಮರ ಸಂದೇಶ—ಕೆ. ವೆಂಕಟರಾಮಪ್ಪ.

ದೇವರಾಯನ ದುರ್ಗದ ದಾಸರು—ಕೆ. ಎಂ. ಕೃಷ್ಣರಾವ್.

ಕನ್ನಡ ಸಾಹಿತ್ಯದಲ್ಲಿ ಧರ್ಮ—ಜಿ. ಎಸ್. ಪರಶಿವಮೂರ್ತಿ.

ಕನ್ನಡದಲ್ಲಿ ಏನಿದೆ ಏನಿಲ್ಲ?—ಸಿ. ಪಿ. ಕೃಷ್ಣಕುಮಾರ್.

ಹರಿದಾಸ ಸಾಹಿತ್ಯ ಮತ್ತು ಶ್ರೀ ಪುರಂದರದಾಸರು—ಸುಬೋಧ ಎಂ. ರಾಮರಾವ್.

ಕನ್ನಡಮ್ಮನ ಶಬ್ದ ಅಲಂಕಾರ ಶೈಲಿ—ಸಿ. ವಿ. ವೆಂಕಟಾಚಲಯ್ಯ.

ಸರ್ವಭಾಷಾಮಯೀ ಸಿರಿಭೂವಲಯ—ಕೆ. ಅನಂತಸುಬ್ಬರಾವ್.

**ಜೀವನ**

ಜನವರಿ ೧೯೬೪

ಸಮರ್ಪಣದ ಸಂಪಸ್ಮೂರ್ತಿ—ಆರ್. ಜಿ. ಕುಲಕರ್ಣಿ.

ಪುರಂದರದಾಸರ ಉಪದೇಶ—ಎಚ್. ಸಿ. ಕಪಿನೀಪತಿಭಟ್ಟ.

ಪುರಂದರದಾಸರ ಹಾಸ್ಯಮನೋವೃತ್ತಿ—ಕೋ. ಸಂಪದ್ಗಿರಿರಾಯರು.

ಕರ್ನಾಟಕ ಸಂಗೀತಕ್ಕೆ ಪುರಂದರದಾಸರ ಕೊಡುಗೆ—ರಾಜಲಕ್ಷ್ಮಿ ಶ್ರೀನಿವಾಸನ್.

ದಾಸಚರಿತ ಸಂಶೋಧನ—ಮಾಸ್ತಿ ವೆಂಕಟೇಶ ಅಯ್ಯಂಗಾರ್.

ಜುಲೈ ೧೯೬೪

ಕಾಲಿದಾಸನ ಅಮರಸಂದೇಶ—ಉಡುಪಿ ವೆಂಕಟಕೃಷ್ಣರಾವ್.

ಅಗಸ್ಟ್ ೧೯೬೪

ಶಬ್ದ ಮತ್ತು ಅದರ ಅರ್ಥವ್ಯಾಪ್ತಿ—ಜಿ. ವೆಂಕಟಸುಬ್ಬಯ್ಯ.

ಮಕ್ಕಳ ಸಾಹಿತ್ಯ—ಕೋಟ ಶಿವರಾಮ ಕಾರಂತರು.

ಸಣ್ಣ ಕತೆಗಳ ಲೇಖಕನಾಗಿ ನನ್ನ ಅನುಭವಗಳು—ಮಾಸ್ತಿ ವೆಂಕಟೇಶ ಅಯ್ಯಂಗಾರ್.

**ಸುಬೋಧ**

ಜನವರಿ ೧೯೬೪

ಪುರಂದರ ಗುರು—ಜಿ. ವರದರಾಜರಾವ್.

ಪುರಂದರದಾಸರ ಪವಾಡಗಳು—ಕೆ. ಎಂ. ಕೃಷ್ಣರಾವ್.

ಜರ್ಮನ್ ಭಾಷೆಯಲ್ಲಿ ದಾಸರ ಪದಗಳು—ಶ್ರೀನಿವಾಸ ಹಾವನೂರ

ಹೀಗೂ ಆದೀತು—ಮಾಸ್ತಿ ವೆಂಕಟೇಶ ಅಯ್ಯಂಗಾರ್.

ಸಂಗೀತ ಪಿತಾಮಹ—ಸಂಧ್ಯಾವಂದನಂ ಶ್ರೀನಿವಾಸರಾವ್.

ದಾಸರೂ ಕರ್ನಾಟಕ ಸಂಗೀತವೂ—ಎಸ್. ಕೆ. ರಾಮಚಂದ್ರರಾವ್.

ಮಾರ್ಚ್ ೧೯೬೪
ಪುರಂದರದಾಸರ ಭಕ್ತಿಪಾರಮ್ಯ—ಆರ್. ಎಸ್. ಪದಕಿ.

ಏಪ್ರಿಲ್ ೧೯೬೪
ಪುರಂದರದಾಸರ ಸಂಗೀತ ಪಾರಮ್ಯ—ಎಚ್. ಯೋಗಾನರಸಿಂಹಂ.

## ಶರಣ ಸಾಹಿತ್ಯ

ಫೆಬ್ರುವರಿ ೧೯೬೪
ಮಲುಹಣ–ಮಲುಹಣೆಯರು—ಶಿವಲಿಂಕ.
ತೋಂಟದ ಸಿದ್ಧಲಿಂಗೇಶ್ವರ—ಬಿ. ಶಿವಮೂರ್ತಿ ಶಾಸ್ತ್ರೀ.
ಕನ್ನಡ ಮಹಿಳೆಯರು— ,,

ಮಾರ್ಚ್ ೧೯೬೪
ಕನ್ನಡ–ತೆಲುಗು ಬಾಂಧವ್ಯ—ಕೆ. ಸುಬ್ಬರಾಮಪ್ಪ.
ವೀರಶೈವ ಶರಣರು—ಎಸ್. ಬಸವಾರಾಧ್ಯ.
ಪುರಂದರದಾಸರ ಸಾಹಿತ್ಯ—ಬಿ. ಶಿವಮೂರ್ತಿ ಶಾಸ್ತ್ರೀ.

ಏಪ್ರಿಲ್ ೧೯೬೪
ಬಸವೇಶ–ಬಿಜ್ಜಳ ಚರಿತೆ—ಟಿ. ಎಸ್. ಮಲ್ಲಪ್ಪ.

ಮೇ–ಜೂನ್ ೧೯೬೪
ಕರ್ನಾಟಕದ ಗಡಿಗಳು—ಬಿ. ಶಿವಮೂರ್ತಿ ಶಾಸ್ತ್ರೀ.
ಡಾ॥ ಫ. ಗು. ಹಳಕಟ್ಟಿ— ,,

ಜುಲೈ ೧೯೬೪
ಬಿದನೂರಿನ ಕಥೆಗಳು—ಶ್ರೀನಿವಾಸ ಉಡುಪ.

ಆಗಸ್ಟ್ ೧೯೬೪
ಶಬರಶಂಕರವಿಳಾಸ—ಬಿ. ಶಿವಮೂರ್ತಿ ಶಾಸ್ತ್ರೀ.

## ಪ್ರಬುದ್ಧ ಕರ್ನಾಟಕ

ಸಂಚಿಕೆ ೧೭೫ (೧೯೬೩)
ಗುಜರಾತೀ ಸಾಹಿತ್ಯ ಚರಿತ್ರೆ—ಎಸ್. ಅನಂತರಂಗಾಚಾರ್.
ಕರ್ನಾಟದ ಕಿಡಿಗಳು—ಡಿ. ಎಲ್. ನರಸಿಂಹಾಚಾರ್.
ರಸೋಲ್ಲಾಸ—ಗೌರೀಶ ಕಾಯ್ಕಿಣಿ.

ಸಂಚಿಕೆ ೧೭೬
ಮಾನಸೋಲ್ಲಾಸದಲ್ಲಿ ಛಂದಸ್ಸು—ಡಿ. ಎಲ್. ನರಸಿಂಹಾಚಾರ್.
ಚಂದ್ರಹಾಸ (ನಾಟಕ)—ಕುವೆಂಪು.

ಸಂಚಿಕೆ ೧೭೭
ಮೈಸೂರು ಕನ್ನಡದ ಸಾಮಾಜಿಕ ಭಾಷಾ ಪ್ರಭೇದಗಳು—ಅನು: ಬಿ. ವಿ. ವೀರಭದ್ರಪ್ಪ.
ಕನ್ನಡ ಸಾಹಿತ್ಯದಲ್ಲಿ ನಿಘಂಟುಗಳು—ಶಾಂತಯ್ಯ ಕೆಂಪಯ್ಯ ಮಠ.

ಸಂಚಿಕೆ ೧೭೮
ಸಾಹಿತಿ, ಕಲಾ ವಿಮರ್ಶಕ ವಿವೇಕಾನಂದರು—ಸಿ. ಪಿ. ಕೆ.
ಸ್ವಾಮಿ ವಿವೇಕಾನಂದರ ಮನೋಧರ್ಮ—ಉ. ಕಾ. ಸುಬ್ಬರಾಯಾಚಾರ್.

ಸಂಚಿಕೆ ೧೭೯
ಉಗಾಭೋಗಗಳು ಮತ್ತು ವಚನಗಳು—ಎಂ. ಚಿದಾನಂದಮೂರ್ತಿ.
ಹರಿದಾಸರ ಪರಂಪರೆ—ಕಪಟರಾಳಕೃಷ್ಣ.
ಹರಿಹರನ ಪುಷ್ಪರಗಳೆ—ಸುಜನಾ.
ಮಹಾಕಾವ್ಯ—ಉ. ಕಾ. ಸುಬ್ಬರಾಯಾಚಾರ್.

ಪ್ರಕಾಶಿನಿ (ಉಡುಪಿ)
ಜನವರಿ-ಜೂನ್ ೧೯೬೪
ಭಕ್ತ ಕನಕದಾಸ—ಅಡ್ಡೆ ವೇದವ್ಯಾಸಾಚಾರ್ಯ.

ಜಯಕರ್ಣಾಟಕ
ಜನವರಿ ೧೯೬೪
ಅನುಭವ ಸಾಹಿತ್ಯದ ರುಚಿ—ಎ. ಕೆ. ರಾಮೇಶ್ವರ.
ಜೂನ್ ೧೯೬೪
ಕ್ರಾಂತಿಕಾರ ಕವಿ ಹರಿಹರ—ಜಿ. ಆರ್. ಬ್ಯಾಕೋಡ.

ಜಾಗೃತ ಕರ್ನಾಟಕ
ಏಪ್ರಿಲ್ ೧೯೬೪
ಇತಿಹಾಸ ಪ್ರಸಿದ್ಧ ಕ್ಷೇತ್ರ ಬನವಾಸಿ—ಆರ್. ಎಸ್. ಪಂಚಮುಖಿ.
ಕನ್ನಡ ಮಹಿಳೆಯರು—ಡಾ|| ಪಿ. ಬಿ. ದೇಸಾಯಿ.
ಮೇ ೧೯೬೪
ಕನ್ನಡ ಕಲೆಯ ಹಿರಿಮೆ—ಆರ್. ಎಸ್. ಪಂಚಮುಖಿ.

ಜಯಂತಿ
ಏಪ್ರಿಲ್ ೧೯೬೪
ಕನ್ನಡ ಕಾವ್ಯದ ರೂಪಭೇದಗಳು—ಸಿಂಪಿ ಲಿಂಗಣ್ಣ.
ಸೆಪ್ಟೆಂಬರ್ ೧೯೬೪
ನಂಬಿಯಣ್ಣನ ರಗಳೆ—ಶಾಂತಯ್ಯ ಕೆಂಪಯ್ಯ ಮಠ.

THE INDIAN P. E. N.
Jan. 1964
The English language and its contribution
to Modern Indian languages—*Smt. Tilottama Daswani.*
March 1964
Some basic Principles of translation—*Smt. Lila Ray.*
July 1964
Sri Masti Venkatesa Iyengar—*Editor.*

ಆಂಧ್ರ ಸಾಹಿತ್ಯ ಪರಿಷತ್ಪತ್ರಿಕ
ಸಂಪುಟ ೫೨
ಕಾಳಿದಾಸ ಮಹಾಕವಿ-ಶ್ರುತವಿಜ್ಞಾನಮು—ಖಂಡಪಲ್ಲಿ ಸೂರ್ಯನಾರಾಯಣ ಶಾಸ್ತ್ರಿ.
ಆಂಧ್ರ ಕಾವ್ಯಮುಲು-ಅವತಾರಿಕ—ಅಯ್ಯಾಗಾರಿ ನರಸಿಂಹಮೂರ್ತಿ.
ಮೇಘಸಂದೇಶ ಸಮೀಕ್ಷ—ಪ್ರಬ್ಬಾ ವಾಸುದೇವ ಪರಬ್ರಹ್ಮ ಶಾಸ್ತ್ರಿಗಾರು.

---

## ವಿನಿಮಯ ಪತ್ರಿಕೆಗಳು

**Fortnightly** :—(1) British Information Service, Fortnightly Review of News and Events, Delhi. (2) Soviet Land.

**Monthly**:—1. P.E.N., Bombay. 2. Journal of Mysore State Educational Federation, Bangalore. 3. Divine Life, Rishikesh. 4. Mysore Information Bulletin, Bangalore. 5. British Book News, London. 6. Freedom First, Bombay. 7. The Indian Publisher and Book-seller, Bombay.

**ಮಾಸಪತ್ರಿಕೆ :**

(೧) ಜೀವನ-ಬೆಂಗಳೂರು. (೨) ಶರಣಸಾಹಿತ್ಯ-ಬೆಂಗಳೂರು. (೩) ಕತೆಗಾರ-ಬೆಂಗಳೂರು. (೪) ಕೊರವಂಜಿ-ಬೆಂಗಳೂರು. (೫) ಮಕ್ಕಳ ಪುಸ್ತಕ-ಬೆಂಗಳೂರು. (೬) ಮೈಸೂರು ವ್ಯವಸಾಯ ಸಂಶೋಧನ ಪತ್ರಿಕೆ-ಬೆಂಗಳೂರು. (೭) ವಿನೋದ-ಬೆಂಗಳೂರು. (೮) ಜಯಂತಿ-ಧಾರವಾಡ. (೯) ಜಯಕರ್ನಾಟಕ-ಧಾರವಾಡ. (೧೦) ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ-ಕಾಕಿನಾಡ. (೧೧) ಧನ್ವಂತರಿ-ಬಿಜಾಪುರ. (೧೨) ಆಧ್ಯಾತ್ಮಪ್ರಕಾಶ-ಹೊಳೇನರಸೀಪುರ. (೧೩) ಮೊಗವೀರ-ಬೊಂಬಾಯಿ. (೧೪) ಸದ್ಧರ್ಮ ದೀಪಿಕೆ-ಮೈಸೂರು. (೧೫) ದಿವ್ಯಜ್ಯೋತಿ-ಮೈಸೂರು. (೧೬) ಕಲ್ಯಾಣಿ-ಬಿಜಾಪುರ. (೧೭) ಪುಸ್ತಕ ಪ್ರಪಂಚ-ಮೈಸೂರು. (೧೮) ಭಾರತ ದರ್ಶನ-ಬೆಂಗಳೂರು. (೧೯) ವಿವೇಕಾಭ್ಯುದಯ-ಮಂಗಳೂರು. (೨೦) ಯುಗಪುರುಷ-ಕಿನ್ನಿಗೋಳಿ (ಉ. ಕ.). (೨೧) ಧರ್ಮಬೋಧ-ಉಡುಪಿ. (೨೨) 'ಅಮರವಾಣಿ-ರಾಯಚೂರು. (೨೩) ವಿಜಯಮಾಲ-ಬೆಂಗಳೂರು. (೨೪) ಪ್ರಕಾಶಿನಿ-ದ. ಕನ್ನಡ. (೨೫) ಪ್ರದೀಪ-ಧಾರವಾಡ. (೨೬) ನವಚೇತನ-ಪೇರಡಾಲ (ದ. ಕ.) (೨೭) ವೀರಮಾತಾ-ಧಾರವಾಡ. (೨೮) ಮಕ್ಕಳ ಬಾವುಟ-ಬೆಂಗಳೂರು. (೨೯) ಸೋವಿಯಟ್ ದೇಶ-ನ್ಯೂ ಡೆಲ್ಲಿ. (೩೦) ಭಾರತ ಸರ್ಕಾರದ ಪ್ರಕಾಶನ ವಿಭಾಗ-ನ್ಯೂ ಡೆಲ್ಲಿ. (೩೧) ಮಲೆನಾಡು-ಬೆಂಗಳೂರು. (೩೨) ಪಂಚಾಮೃತ-ಗದಗ. (೩೩) ತತ್ವವಾದ-ಬೆಂಗಳೂರು. (೩೪) ಪರಿಮಳ-ನಂಜನಗೂಡು. (೩೫) ಗಾಯನಗಂಗಾ-ಬೆಂಗಳೂರು. (೩೬) ಕಸ್ತೂರಿ-ಹುಬ್ಬಳ್ಳಿ. (೩೭) ಶ್ರೀ ಸುಧಾ-ಬೆಂಗಳೂರು. (೩೮) ನಿತ್ಯಾನಂದ ದರ್ಶನ-ಮುಂಬಯಿ. (೩೯) ಜ್ಯೋತಿರ್ವಾಣಿ-ಬೆಂಗಳೂರು. (೪೦) ಗುರುದೇವ-ಮೂಡಬಿದರೆ. (೪೧) ಸುಕುಮಾರ-ಶಿವಯೋಗಮಂದಿರ. (೪೨) ಸುಬೋಧ-ಬೆಂಗಳೂರು.

**Bi-Monthly**:—1. Journal of the University of Bombay, Bombay. 2. Public Affairs-G.I.P.A., Bangalore.

**Quarterly**:—1. Journal of the Mythic Society, Bangalore. 2. Journal of the Annamalai University, Annamalai Nagar. 3. Bulletin of the Deccan College Research Institute, Poona. 4. Journal of the University of Bombay, Bombay. 5. Annals of Bhandarkar Oriental Research Institute. 6. Bulletin of the School of Oriental and African Studies, London.

**ತ್ರೈಮಾಸಿಕ ಪತ್ರಿಕೆ :**

(೧) ಮೈಸೂರು ಸಕ್ಕರೆ-ಮಂಡ್ಯ. (೨) ಪ್ರಬುದ್ಧ ಕರ್ನಾಟಕ-ಮೈಸೂರು. (೩) ಕನ್ನಡ ಗುಡಿ-ಬೊಂಬಾಯಿ. (೪) ಪುಸ್ತಕಮಿತ್ರ-ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ, ಮದರಾಸು.

**Half-Yearly** :—Half-Yearly Journal of the Mysore University, Mysore.

# ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ. ಪೈ |
|---|---|---|
| ೧. | ಕನ್ನಡದ ಬಾವುಟ (ಐದನೆಯ ಮುದ್ರಣ ೧೯೫೮) .... .... | ೨=೦೦ |
| ೨. | ಸೀತಾ ಪರಿತ್ಯಾಗ (ಜೈಮಿನಿ ಭಾರತದಿಂದ ೧೯೬೧) .... .... | ೦=೬೫ |
| ೩. | ಜೇಮ್ಸ್ ಏಬ್ರಹಾಮ್ ಗಾರ್‌ಫೀಲ್ಡನ ಚರಿತ್ರೆ : ಕ್ಯಾಲಿಕೋ ಪ್ರತಿ (೧೯೩೦) .... | ೧=೫೦ |
| | (ನಾಲ್ಕನೆಯ ಮುದ್ರಣ) ಸಾದಾ ಪ್ರತಿ (೧೯೩೮) .... | ೧=೦೦ |
| ೪. | ಜ್ಯೋತಿರ್ವಿನೋದಿನಿ (೧೯೩೧) .... .... .... | ೨=೦೦ |
| ೫. | ಹೂಮಾಲೆ (೧೯೪೩) .... .... .... | ೦=೬೩ |
| ೬. | ಕನ್ನಡ ನಾಡಿನ ಚರಿತ್ರೆ: ಭಾಗ ೧ (ಅಚ್ಚಿನಲ್ಲಿದೆ) .... .... .... | |
| | ,, ಭಾಗ ೨ (ಎರಡನೆಯ ಮುದ್ರಣ ೧೯೫೭) .... .... | ೨=೦೦ |
| | ,, ಭಾಗ ೩ ( ,, ೧೯೫೯) .... .... | ೧=೨೫ |
| ೭. | ಸರ್ವೋದಯ (೧೯೪೯) .... .... .... | ೦=೩೨ |
| ೮. | ಸೋಮೇಶ್ವರ ಶತಕ (ನಾಲ್ಕನೆಯ ಮುದ್ರಣ ೧೯೬೧) .... .... | ೧=೫೦ |
| ೯. | ಸಂಕಲನ (೧೯೪೯) .... .... .... | ೦=೬೩ |
| ೧೦. | ಕನ್ನಡದಲ್ಲಿ ಸುಧಾರಣೆಗಳು ೧೯೪೬ .... .... .... | ೦=೩೮ |
| ೧೧. | ಅರುಂಧತಿ (೧೯೫೧) .... .... .... | ೦=೨೫ |
| ೧೨. | ಶಿವಶರಣರ ಕೃತಿಗಳು (ಸ್ವರಪ್ರಸ್ತಾರ ಸಹಿತ ೧೯೫೨) .... .... | ೨=೦೦ |
| ೧೩. | ಹರಿದಾಸ ಸಾಹಿತ್ಯ-ಇಂಗ್ಲಿಷ್ ಉಪೋದ್ಘಾತದೊಡನೆ (೧೯೫೨) .... .... | ೧೦=೦೦ |
| ೧೪. | ,, ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ (೧೯೫–) .... | ೮=೦೦ |
| ೧೫. | ಗಾಳಿಯಲ್ಲಿನ ಅಗೋಚರ ಶತ್ರುಗಳು (೧೯೫೪) .... .... .... | ೧=೨೫ |
| ೧೬. | ನಕ್ಷತ್ರದರ್ಶನ (೧೯೫೪) .... .... .... | ೧=೫೦ |
| ೧೭. | ಹರಿದಾಸ ಕೃತಿಮಂಜರಿ (೧೯೫೫) .... .... .... | ೧=೨೫ |
| ೧೮. | ಪ್ಲೇಟೋವಿನ ಆದರ್ಶರಾಜ್ಯ (೧೯೫೬) .... .... .... | ೧=೩೮ |
| ೧೯. | ವಾಚನ ಕಾವ್ಯ ಮಂಜರಿ (೧೯೫೫) .... .... .... | ೦=೧೯ |
| ೨೦. | ಚೇರಮ ಕಾವ್ಯಂ (೧೯೫೬) .... .... .... | ೨=೦೦ |
| ೨೧. | ಅನುಭವ ಮುಕುರಂ (೧೯೫೬) .... .... .... | ೦=೩೮ |
| ೨೨. | ಆಧುನಿಕ ಗದ್ಯ ಸಾಹಿತ್ಯ (ಎರಡನೆಯ ಮುದ್ರಣ ೧೯೬೧) .... .... | ೨=೫೦ |
| ೨೩. | ಗಮಕ ಕಾವ್ಯ ಮಂಜರಿ (ಎರಡನೆಯ ಮುದ್ರಣ ೧೯೬೧) .... .... | ೧=೦೦ |
| ೨೪. | ಕನ್ನಡದ ಅತ್ಯುತ್ತಮ ಸಣ್ಣ ಕತೆಗಳು (ಮೂರನೆಯ ಸಂಪುಟ ೧೯೫೮) .... | ೪=೦೦ |
| ೨೫. | ಕಾದಂಬರಿ-ಸಾಮಾನ್ಯ ಮನುಷ್ಯ (೧೯೫೭) .... .... .... | ೧=೦೦ |
| ೨೬. | ಉದ್ಭಟದೇವ ಚರಿತೆ (೧೯೫೭) .... .... .... | ೧=೫೦ |
| ೨೭. | ತ್ರಿಪುರದಹನ ಸಾಂಗತ್ಯ (೧೯೫೯) .... .... .... | ೦=೭೫ |
| ೨೮. | ಮೂರು ಸ್ಪರ್ಧಾ ನಾಟಕಗಳು (೧೯೫೯) .... .... .... | ೨=೭೫ |
| ೨೯. | ಕಾವ್ಯ ಸೌರಭ (೧೯೬೨) .... .... .... | ೨=೦೦ |
| **೩೦.** | **ಕರ್ಣಾಟಕ ಕವಿಚರಿತೆ (೧ನೆ ಭಾಗ)** .... .... .... | **೧೨=೦೦** |
| | ,, ,, **ಲೈಬ್ರರಿ ಪ್ರತಿಗಳು** .... | **೧೫=೦೦** |

**ವಿ. ಸೂ. ಪ್ರತಿಗಳು ಮುಗಿದಿವೆ:** ಪಂಪರಾಮಾಯಣ (೪ನೆಯ ಆಶ್ವಾಸ), ತೊರವೆ ರಾಮಾಯಣ (ಬಾಲಕಾಂಡ ಸಂಧಿ ೧೩-೧೬), ಹರಿದಾಸರ ಕೃತಿಗಳು (ಸ್ವರಪ್ರಸ್ತಾರ ಸಹಿತ), ಹರಿಶ್ಚಂದ್ರನ ರಾಜ್ಯ ಸಮರ್ಪಣ, ವಡ್ಡಾರಾಧನೆ, ಕುಮಾರವ್ಯಾಸ ದರ್ಶನ, ಕವಿಜಿಹ್ವಾಬಂಧನ, ಪಂಪರಾಮಾಯಣದ ನಿಘಂಟು, ಜೈಮಿನಿಭಾರತದ ಕನ್ನಡ ಗದ್ಯಾನುವಾದ (ಅಶ್ವಮೇಧಿಕ ಪರ್ವ), ಚಂದ್ರಹಾಸೋಪಾಖ್ಯಾನ, ದೂತವಾಕ್ಯ, ಪಂಪಭಾರತದ ಕಥೆ (ವಚನ), ಪಂಪಭಾರತದ ನಿಘಂಟು ಮತ್ತು ಪಂಪರಾಮಾಯಣದ ಕಥೆ (ವಚನ), ಪಂಪರಾಮಾಯಣ, ಪಂಪಭಾರತ, ಶಬ್ದಮಣಿ ದರ್ಪಣ.

ಪುಸ್ತಕ ವ್ಯಾಪಾರಿಗಳಿಗೆ ಕರ್ಣಾಟಕ ಕವಿಚರಿತೆ ವಿನಹ ಮಿಕ್ಕೆಲ್ಲ ಪುಸ್ತಕಗಳಿಗೆ ಸೇ. 25ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

ಕಾವ್ಯಗಾಯನ ಕಲಾ ಸಂಗ್ರಹ .... .... .... ೧=೨೫

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು-೧೮.

# ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

## ಕಾರ್ಯಕಾರಿ ಸಮಿತಿಯ ಸದಸ್ಯರು

೧. ಪ್ರೊ|| ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ. ಬೆಂಗಳೂರು

೨. ಶ್ರೀ ಬಿ. ಎನ್. ಶಾಸ್ತ್ರಿ, ಎಂ.ಎ., ಬೆಂಗಳೂರು

೩. ಶ್ರೀ ಎ. ಸಿ. ಬೈರಪ್ಪ, ಬಿ.ಎ., ಎಲ್‌ಎಲ್.ಬಿ., ಬೆಂಗಳೂರು

೪. ಶ್ರೀ ಅ. ನ. ಕೃಷ್ಣರಾವ್, ಬೆಂಗಳೂರು

೫. ಶ್ರೀ ಕಡೆಂಗೋಡ್ಲು ಶಂಕರಭಟ್ಟ, ಪೆರುವಾಯ್ (ದ. ಕ.)

೬. ಪ್ರೊ|| ಡಿ. ಜವರೇಗೌಡ, ಎಂ.ಎ., ಮೈಸೂರು

೭. ಶ್ರೀ ಕೆ. ಎಸ್. ಧರಣೇಂದ್ರಯ್ಯ, ಎಂ.ಎ., ಬಿ.ಟಿ., ಬೆಂಗಳೂರು

೮. ಶ್ರೀ ಕೃಷ್ಣಮೂರ್ತಿ ಪುರಾಣಿಕ, ಗೋಕಾಕ್

೯. ಶ್ರೀ ಅನ್ನದಾನಯ್ಯ ಪುರಾಣಿಕ, ಬಿ.ಕಾಂ., ಎಲ್‌ಎಲ್.ಬಿ., ಬೆಂಗಳೂರು

೧೦. ಶ್ರೀ ಎನ್. ಎಸ್. ಹೆಗ್ಗಡೆ, ಕುಂದರಗಿ (ಉ. ಕ.)

೧೧. ಶ್ರೀ ಪ. ಸು. ಭಟ್ಟ, ಎಂ.ಎ., ಬೆಂಗಳೂರು

೧೨. ಡಾ|| ಎಸ್. ರಾಮಕೃಷ್ಣ, ರಾಯಚೂರು

೧೩. ಶ್ರೀ ವೆಂಕಟೇಶ ಸಾಂಗಲಿ, ಬೆಂಗಳೂರು

೧೪. ಶ್ರೀ ಸೂರ್ಯನಾರಾಯಣ ಚಡಗ, ಬೆಂಗಳೂರು

೧೫. ಶ್ರೀ ವಿ. ರಘುರಾಮ ಶೆಟ್ಟಿ, ಬೆಂಗಳೂರು

೧೬. ಶ್ರೀಮತಿ ಬನಶಂಕರಮ್ಮ, ಬಿ.ಎಸ್‌ಸಿ., ಬಿ.ಇಡಿ., ಬೆಂಗಳೂರು

೧೭. ಶ್ರೀ ನೆ. ಸು. ಕೃಷ್ಣಮೂರ್ತಿ, ಎಂ.ಎ., ಬೆಂಗಳೂರು

೧೮. ಶ್ರೀ ಗ. ಸ. ಹಾಲಪ್ಪ, ಎಂ.ಎ., ಧಾರವಾಡ

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

HALF-YEARLY JOURNAL OF THE

# KANNADA SAHITYA PARISHAT

BANGALORE-18




ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ :: ಬೆಂಗಳೂರು-೧೮

೧೯೬೪

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ಸಂಪಾದಕ ಮಂಡಲಿ

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

## ಶ್ರೀಕ್ರೋಧಿ - ಮಾರ್ಗಶಿರ

ಸಂಪುಟ: ೪೯ | ಡಿಸೆಂಬರ್ ೧೯೬೪ | ಸಂಚಿಕೆ: ೨

ವಿಷಯ ಸೂಚಿಕೆ

# HALF-YEARLY JOURNAL

OF THE

## KANNADA LITERARY ACADEMY, BANGALORE

KANNADA SAHITYA PARISHATPATRIKE

Vol : 49 DECEMBER 1964 No : 2

CONTENTS

# ಹುಸಿಗಣ ವೃತ್ತಾಂತ*

## ಲೇಖಕರು : ಕೆ. ಶಿವರಾಮ ಐತಾಳ

ಹುಸಿಗಣವೆಂದರೇನು ? ಡಾ|| ಡಿ. ಎಸ್. ಕರ್ಕಿ ಅವರು ಹೇಳುವ ವಿಚಾರ ಇಷ್ಟು :

"೩, ೫, ೩, ೫- ಈ ಪ್ರಕಾರ ಮಾತ್ರೆಗಳು ನಿಯತವಾಗಿ ಹೊರಡುವ ಮಂದಾನಿಲ ಲಯವನ್ನು [1] ಮುಂದಿನ ಚರಣಗಳಲ್ಲಿ ಕಾಣಬಹುದು.

| ನಿಮ್ಮ | ರಟ್ಟೆ ಹೊಟ್ಟೆಮಾಡಿ ಕುಟ್ಟೆಗಟ್ಟೆ ನೀವು ಕಣದ ಒಳಗೆ ಮರದಾ<br>
| ಮೈ | ಕಟ್ಟೆಗಿಟ್ಟ ಭಾಳ ದಿಟ್ಟ ಸಿಟ್ಟು ನಿಮ್ಮ ಉಗ್ರ ಎಷ್ಟ ಉರದಾ<br>
| ಉರಿ | ಗಣ್ಣ ಸಣ್ಣಮೈಬಣ್ಣ ಸಣ್ಣತುಟಿ ಕ್ವಾರಿಮೀಸಿ ಕೊರೆದಾ<br>
| ಮೂಗ | ತಿಳಿಪ ಹೊಳಪ ನಿಮ್ಮ ರೂಪದೀಪ ಮುಂದ ಚಂದ್ರಜ್ಯೋತಿ ಉರದಾ

—ವೀರಭದ್ರನ ಲಾವಣಿ,

ಪ್ರತಿ ಚರಣ ಮೊದಲಲ್ಲಿ | |- ಈ ಗುರುತಿನಲ್ಲಿ ತೋರಿಸಿದ ಶಬ್ದವು ಹುಸಿಯನ್ನು ಸೂಚಿಸುತ್ತದೆ. ಹುಸಿಯಿಂದ ಲಯವು ಹೆಚ್ಚಿನ ಶೋಭೆಯನ್ನು ಪಡೆಯುತ್ತದೆ."[2]

ಇದಕ್ಕಿಂತ ಹೆಚ್ಚಾಗಿ ಹುಸಿಗಣದ ಸಂಬಂಧದಲ್ಲಿ ಹೇಳಿಲ್ಲ. ಡಾ|| ಕರ್ಕಿ ಅವರು ಹೆಣ್ಣುಮಕ್ಕಳ ಹಾಡೊಂದನ್ನು "ಭೋಗದ ದೀರ್ಘ ಚರಣಗಳಿಂದ ರಚಿಸಿಕೊಂಡ ಮಟ್ಟಿಗೆ" ಉದಾಹರಣೆಯಾಗಿ ಕೊಟ್ಟಿದ್ದಾರೆ. ಅದನ್ನು ವೀಕ್ಷಿಸಬಹುದು.

"ಭತ್ತ ಭತ್ತ ತಂಡ್ಲೆಕುಟ್ಟಿ ಎಲ್ಲ ಲಾಽಲೇ-ನಾವು<br>
ಬತ್ತದ್ ಸೀಮ್ಯೋರಲ್ಲ ಕಾಣೆ ಪದ್ಮ ಲಾಲೇ"

ಇದರ ಬಗ್ಗೆ ವ್ಯಾಖ್ಯಾನ ಹೀಗೆ ಹರಿದಿದೆ. "ಹೆಂಗಸರ ಹಾಡುಗಳು ರಾಗಪ್ರಧಾನ ವಾದವುಗಳು. ಅವುಗಳಲ್ಲಿ ತಾಳವಿಲ್ಲವೆಂದಲ್ಲ. ಆದರೆ ಅವುಗಳಲ್ಲಿ ತಾಳಕ್ಕೆ ಪ್ರಾಧಾನ್ಯವಿಲ್ಲ, ಅವರು ಹಾಡುವಾಗ ತಾಳವಾದ್ಯ ವಿಶೇಷವನ್ನು ಉಪಯೋಗಿಸದೆ ಹಾಡುವ ಸಂಗತಿಯನ್ನು ಗಮನಿಸಬೇಕು. ರಾಗದ ಎಳೆತದಿಂದಲೇ ಅವರ ಹಾಡಿನ ಸೊಗಸು ಸೂಸುತ್ತದೆ.[3] ಅಂದರೆ

---

* ಮಾನಸಗಂಗೋತ್ರಿಯ ಒಂದು ವರ್ಷದ ಹಾಗೂ ಸೀನಿಯರ್ ಎಂ. ಎ (ಕನ್ನಡ) ವಿದ್ಯಾರ್ಥಿಗಳ ಸೆಮಿನಾರ್‌ನಲ್ಲಿ ಓದಿದ ಪ್ರಬಂಧ. ಶ್ರೀರಂಗ ನಾಯಕ್ ಅವರು ಅಧ್ಯಕ್ಷತೆ ವಹಿಸಿದ್ದರು. ಪೂಜ್ಯ ಗುರುಗಳಾದ ಆಚಾರ್ಯ ತೀ. ನಂ. ಶ್ರೀಕಂಠಯ್ಯನವರೂ ಚರ್ಚೆಯಲ್ಲಿ ಭಾಗವಹಿಸಿದ್ದರು. ಚರ್ಚೆಯಲ್ಲಿ ವ್ಯಕ್ತವಾದ ಅಭಿಪ್ರಾಯ ಭೇದಗಳನ್ನು ಇಲ್ಲಿ ಕಾಣಿಸಿಲ್ಲ.

1. ೩-೫ ರ ಲಯವಾದರೂ ನಿಯತವಾಗಿ ಹೊರಟದ್ದಲ್ಲವೆನ್ನಬಹುದು. ಇಲ್ಲಿ ವಿಶೇಷವಿದೆ.<br>
ರಟ್ಟೆ ಹೊಟ್ಟೆ ಮಾಡಿ ಕುಟ್ಟೆಗಟ್ಟೆ ನೀವು<br>
೩ ೩ ೩ ೩ ೨
2. ಕನ್ನಡ ಛಂದೋವಿಕಾಸ ಡಾ|| ಡಿ. ಎಸ್. ಕರ್ಕಿ. ಪು. ೨೪೫-೬
3. ಕ. ಛಂ.ವಿ. ಪು. ೨೪೪. ಉದಾಹೃತ ಗದ್ಯ : ನಾಡಪದಗಳು. ಪು. ೫೬.

ಹೆಂಗಸರ ಹಾಡುಗಳಲ್ಲಿ ತಾಳವಿದೆ; ಅದು ತಪ್ಪಿ ಹಿಂದುಮುಂದಾಗಿ ಹೋದರೂ, ಅಸ್ತವ್ಯಸ್ತವಾದರೂ ಅಭ್ಯಂತರವಿಲ್ಲ. ರಾಗವಾಗಿ ಹಾಡಿದರೆ ಸರಿ ಎಂದು ಅರ್ಥವಾಗುವುದಾದರೆ ಅದನ್ನು ಒಪ್ಪಲೇಬೇಕಾದುದಿಲ್ಲ. ವಾದ್ಯವಿಶೇಷವನ್ನು ಉಪಯೋಗಿಸಿದರೆ ಮಾತ್ರವೇ ಹಾಡು ತಾಳಬದ್ಧವಾಗಿದೆ ಎಂದು, ಅಥವಾ ಇಂಥ ಲಯಕ್ಕೆ ಸೇರಿದೆ ಎಂದು ಹೇಳುವಂತಿಲ್ಲ. ಪಕ್ಕವಾದ್ಯಗಳು ಇದ್ದೂ ತಾಳ ತಪ್ಪಬಹುದು. ಯಾವ ವಾದ್ಯಗಳಿಲ್ಲದೆಯೇ ತಾಳಬದ್ಧವಾಗಿ ಹಾಡಬಹುದು ಅಸ್ತವ್ಯಸ್ತ ಆಘಾತಗಳಿಂದ ಜಾತಿನಿಷ್ಪನ್ನವಾಗುವುದಿಲ್ಲ. 'ಸಂಗತಿ' ಇದೆ ಎನ್ನುವುದು ಗಮನಕ್ಕೆ ಬಾರದೆ ಹಾಡಿದ ಸಂಗತಿ ಹೇಗೆ ಗಮ್ಯವಾಗುತ್ತದೆ? ಈ ಮೇಲಿನ ಉದಾಹೃತ ಹಾಡಿನಲ್ಲಿ ಲಯವನ್ನು ಹೀಗೆ ಕಾಣಬಹುದು:

ಭತ್ತ | ಭತ್ತ | ತಂಡ್ಲೆ | ಕುಟ್ಟಿ | ಎಲ್ಲ | ಲಾಽ | ಲೇ — ನಾವು
ಬತ್ತದ್ | ಸೀಮ್ಯೋ | ರಲ್ಲ | ಕಾಣೆ | ಪದ್ಮ | ಲ್ಯಾಽ | ಲೇ—

ಇದು ಎಂಟು ಬ್ರಹ್ಮಗಣಗಳಿಂದ ಘಟಿತವಾದ ಅಂಶಲಯಬಂಧ.[4] ಮೊದಲ ಪಂಕ್ತಿಯ ಅಂತ್ಯದ 'ನಾವು' ಎನ್ನುವುದು ಹುಸಿಗಣ. ಅದನ್ನು ಹೀಗೆ ಬರೆಯಬಹುದು—

ಭತ್ತ ಭತ್ತ ತಂಡ್ಲೆ ಕುಟ್ಟಿ ಎಲ್ಲಲಾಽ ಲೇ—
ನಾವು] ಬತ್ತದ್ ಸೀಮ್ಯೋರಲ್ಲ ಕಾಣೆ ಪದ್ಮ ಲ್ಯಾಽಲೇ.

ಹುಸಿಗಣದ ಸಂಬಂಧದಲ್ಲಿ ಇದ್ದುದರಲ್ಲಿ ಇನ್ನಷ್ಟು ಬೆಳಕನ್ನು ಬೀರಿರುವರೆಂದರೆ ಆಚಾರ್ಯ ತೀ. ನಂ. ಶ್ರೀಕಂಠಯ್ಯನವರು — ಇವರು ಹೀಗೆ ವಿವರಿಸಿದ್ದಾರೆ:[5]

"ಚರಣದ ಮೊದಲಲ್ಲೇ ತಾಳವೂ ಮೊದಲಾಗಿ ಮುಂದುವರಿಯುವುದೇ ಪದ್ಯದ ರೂಢಿ. ಆದರೆ, ಈ ಉದಾಹರಣೆಗಳನ್ನು ನೋಡಿ:

ಅ] ನಾಥೆ ಇವ | ಳಿನ್ನೊಬ್ಬ
ಳೀಜನ್ಮ | ರೋಸಿ
ವೇಧೆಯನು ತಾಳದೆಯೆ
ಮುಳುಗಿದಳು ಹೊಳೆಗೆ.

ಮೊದಲನೆಯ ಚರಣದಲ್ಲಿ "ಅ" ಎಂಬ ಲಘು ಬಿಡಿಯಾಗಿ ನಿಂತು, ಅಲ್ಲಿಂದ ಮುಂದೆ ೫ ಮಾತ್ರೆಯ ಎರಡು ಗಣಗಳು ಬಂದಿವೆ. ಹೀಗೆ ತಾಳಕ್ಕೆ ಮೊದಲೇ ಅಕ್ಷರ ಬಂದಿರುವುದು ಹಾರುವ ಅಥವಾ ಓಡುವ ಪಂದ್ಯಗಳಲ್ಲಿ ನೇಮಿಸಿದ ಗೆರೆಗಿಂತ ಕೆಲವು ಹೆಜ್ಜೆ ಹಿಂದಿನಿಂದ

4. ಪ್ರಥಮ ದ್ವಿತೀಯ ಪಾದಗಳ ಆರು ಏಳನೇ ಬ್ರಹ್ಮಗಣಗಳು ಏಕಾಕ್ಷ ಗಣಗಳಾಗಿರುವುದು ಗಮನಾರ್ಹ. ಎರಡನೇ ಪಾದದ ಅಂತ್ಯಾಕ್ಷರದವರೆಗೆ ಎರಡು ಗಣಗಳಷ್ಟು. ಎಂಟು ಬ್ರಹ್ಮ ಗಣಗಳನ್ನು ನಾಲ್ಕು ರುದ್ರಗಣಗಳೆಂದೂ ಇಟ್ಟುಕೊಳ್ಳಬಹುದು. ಹೀಗೆ ಭಾವಿಸಿದಾಗಲೇ 'ನಾವು'-ಹುಸಿಯೆನಿಸುತ್ತದೆ. ಇಲ್ಲದಿದ್ದರೆ 'ನಾವು' ಎಂಬುದು ಪ್ರಧಾನಾಘಾತ ಪಡೆಯುತ್ತದೆ; ಹುಸಿಯೆನಿಸದು. ರುದ್ರಗಣಗಳೆನ್ನುವಾಗ ರುದ್ರದ ಸ್ಥಾನದಲ್ಲಿ ವಿಷ್ಣು ಬಂದಿದೆ ಎಂದೆನ್ನಬೇಕು. ಸಂಯುಕ್ತಗಣದೊಳಗೆ ಹುಸಿ ಅಡಕವಾಗುವುದನ್ನು ಮುಂದೆ ನೋಡಬಹುದು.

5. ಸಮಾಲೋಕನ. (ಹೊಸ ಛಂದಸ್ಸಿನ ಲಯಗಳು) ಪು. ೧೯೨-೮, ೧೯೫೪.

ಸ್ಪರ್ಧಾಳು ಓಡಿಬಂದು ವೇಗವನ್ನು ಬೆಳೆಸಿಕೊಳ್ಳುವಂತೆ ಚರಣಕ್ಕೆ ಇದರಿಂದ ಹೊಸಬಲ ಬರುತ್ತದೆ. ಮೇಲಿನ ಉದಾಹರಣೆಯಲ್ಲಿ ಹೀಗೆ ತಾಳವನ್ನು ಎತ್ತಿಕೊಡುವ ಅಕ್ಷರ ಲಘು; ತ್ವರಿತವಾಗಿ ಅದನ್ನು ಉಚ್ಚರಿಸಬಹುದು.[6] ಆದರ ಮುಂದಿನ ಅಕ್ಷರ ಗುರು; ಆದ್ದರಿಂದ ಸ್ವರಾಘಾತವೂ ತಾಳವೂ ಅಲ್ಲಿ ಒಡಬೆರೆಯುತ್ತವೆ.

ಚ] ಳುಕ್ಯ ರಾಷ್ಟ್ರ ಕೂಟರೆಲ್ಲಿ
ಗಂಗರಾ ಕದಂಬರೆಲ್ಲಿ .... (೩ ಮಾತ್ರೆಯ ಗಣ)
ಕು] ಮಾರ ವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು (೪ ಮಾತ್ರೆಯ ಗಣ)"

('ಕುಮಾರವ್ಯಾಸನು....' ಎಂಬ "ಉದಾಹರಣೆಯಲ್ಲಿ, ಕೆಲವರು ಮೊದಲಲ್ಲಿ ವಿಷಮ ಗಣವನ್ನು ತಂದು 'ವ್ಯಾ' ಎಂಬ ಒತ್ತಕ್ಷರವನ್ನು ಶಿಥಿಲಮಾಡಿ,

ಕುಮಾರ | ವ್ಯಾಸನು ಹಾಡಿದನೆಂದರೆ

ಎಂಬಂತೆ ಓದುತ್ತಾರೆ. ಆದರೆ ಗತ್ತುಗಾಂಭೀರ್ಯಗಳನ್ನು ಉಳಿಸಿಕೊಳ್ಳಲು ಮೊದಲನೆಯ ಮಾರ್ಗವೇ ಉತ್ತಮವೆಂದು ತೋರುತ್ತದೆ.

೪ ಮಾತ್ರೆಯ ಗಣದ ಧಾಟಿಯಲ್ಲಿ ಮೊದಲ ತಾಳಕ್ಕೆ ಹಿಂದೆ ಎರಡು ಲಘುಗಳನ್ನು ನಿಲ್ಲಿಸಿಯೂ ಸೊಗಸನ್ನು ತಂದಿರುವುದುಂಟು:

ಹಗ] ಲೆಲ್ಲಾ | ಕಳೆಯಿತು | ಸೂರ್ಯನು | ಮುಳುಗೆ
ಖಗ] ಹಾರಿತು | ಗೂಡಿನ | ಒಳಗೆ
ಜಗ] ವೆಲ್ಲಾ ಬೆಳಗಿತು ದೀಪವು ಬೆಳಗೆ
ಗಗ] ನಾಂಗಣದಲ್ಲಿ ಉಡು ತೊಳಗೆ

ಈ ಚರಣಗಳನ್ನು, "ಹಗಲೆ | ಲ್ಲಾಕಳೆ | ಯಿತುಸೂ | ರ್ಯನುಮುಳು | ಗೆ" .... ಎಂಬಂತೆ ವಿಭಾಗಿಸುವುದು ಅಸಾಧ್ಯವಲ್ಲ.[7] ಆದರೆ ಮೊದಲನೆಯ ರೀತಿಯಲ್ಲೇ ಇಂಪು ಹೆಚ್ಚು.

ಮೇಲಿನ ಉದಾಹರಣೆಗಳಲ್ಲೆಲ್ಲಾ ತಾಳ ಮೊದಲಾಗುವ ಕಡೆ ಗುರು ನಿಯತವಾಗಿ ಬಂದಿರುವುದನ್ನು ಗಮನಿಸಬೇಕು. ಹೀಗಿಲ್ಲದಿದ್ದರೆ ಲಯ ಕೆಡುತ್ತದೆ.

---

6. ಅದನ್ನು ತ್ವರಿತವಾಗಿ ಉಚ್ಚರಿಸಬೇಕಾಗಿಲ್ಲ. ಉಚ್ಚರಿಸುವಂತೂ ಇಲ್ಲ. ತ್ವರಿತೋಚ್ಚಾರಣೆ ಇಲ್ಲಿ ಅನಾವಶ್ಯಕ, ಅನಪೇಕ್ಷಿತ. ಗಣಮೌಲ್ಯಕ್ಕಿಂತ ಅಕ್ಷರಮೌಲ್ಯ ಅಧಿಕವಾದರೆ ಅದನ್ನು ಗಣಮೌಲ್ಯಕ್ಕೆ ಸಮಾನಗೊಳಿಸಬೇಕಾದಾಗ ತ್ವರಿತಕ್ರಿಯೆ ಅನಿವಾರ್ಯವಾಗುತ್ತದೆ. ಆದರೆ, ಹುಸಿಯಲ್ಲಿ ಈ ಸಮಸ್ಯೆಯಿಲ್ಲ. ಸಂಭವನೀಯವಾದರೂ ಅದು ಹುಸಿಗಣದ ಮೌಲ್ಯಕ್ಕೆ ಸಂಬಂಧಪಟ್ಟಾಗ ಮಾತ್ರವೆನ್ನಬಹುದು.

7. ಇದು ಆವರ್ತಸಿದ್ಧಿಯ ಪ್ರಕಾರ ಸರ್ವಥಾ ಸಾಧ್ಯವೇ ಇಲ್ಲ. ಏಕೆಂದರೆ ಪಾದದ ಮಾನ ನಾಲ್ಕು ಗಣಗಳು. ಆದರೆ ಈ ವಿಭಜನೆಯಿಂದ ನಾಲ್ಕು ಗಣಗಳ ಅನಂತರ ಬರುವ "ಗೆ" ಎಂಬ ಅಕ್ಷರ ಇನ್ನೊಂದು ಗಣದ ಆವಿರ್ಭಾವವನ್ನು ನಿರೀಕ್ಷಿಸುತ್ತದೆ. ಈ ಅಧಿಕಗಣಕ್ಕೆ ಅವಕಾಶವಿಲ್ಲ. ಆವರ್ತಸಿದ್ಧಿ ಛಂದಸ್ಸಿನ ಮೂಲಭೂತತತ್ತ್ವಗಳಲ್ಲಿ ಒಂದು. ಅದನ್ನು ಇಲ್ಲಿ ಮೂಲಭೂತವಾಗಿ ತಳ್ಳಿಹಾಕಿದ್ದಾರೆ.

ನೆ] ನೆಯಲಾರೆ! | ಕಿರಿಯದೋ | ಣಿಯುತೆರೆಗ | ಳಗ್ರದಲಿ |....[8]

ಇಲ್ಲಿ ಚರಣದ ಎರಡನೆಯ ಅಕ್ಷರ ಲಘುವಾಗಿರುವುದರಿಂದ, ಅದರಲ್ಲೂ ಪದದ ಎರಡನೆಯ ಲಘುವಾಗಿರುವುದರಿಂದ, ಏನು ಮಾಡಿದರೂ, ತಾಳ ಅಲ್ಲಿ ಬೀಳುವುದಿಲ್ಲ........"

ಇವುಗಳಿಂದ ಸದ್ಯಕ್ಕೆ ಈ ತೀರ್ಮಾನಗಳು ಸಿದ್ಧಿಸುತ್ತವೆ :

೧. ಹುಸಿಯಿಂದ ಲಯವು ಹೆಚ್ಚಿನ ಶೋಭೆಯನ್ನು ಪಡೆಯುತ್ತದೆ. ಚರಣಕ್ಕೆ ಇದರಿಂದ ಹೊಸ ಬಲ ಬರುತ್ತದೆ.

೨. ಹುಸಿ ಎಲ್ಲ ಜಾತಿಯ ಗಣಗಳಲ್ಲೂ ಬರಬಹುದು.

೩. ಹುಸಿಯ ಅನಂತರ ತಾಳ ಮೊದಲಾಗುವ, ಬೀಳುವ ಕಡೆ, ಅಂದರೆ ಗಣದ ಆದಿಯಲ್ಲಿ ಗುರು ನಿಯತವಾಗಿ ಬಂದಿರುವುದು ಗಮನಾರ್ಹ. ಹೀಗಿಲ್ಲದಿದ್ದರೆ ಲಯ ಕೆಡುತ್ತದೆ. ಅರ್ಥಾತ್ ಗಣಾದಿ ᑌᑌ, ᑌ–ಆಗಬಾರದು.

ಈ ಮೂರು ತೀರ್ಮಾನಗಳಲ್ಲಿ ಹುಸಿಯಿಂದ ಲಯಕ್ಕೆ (ಒಂದು ಬಗೆಯ) ಶೋಭೆ ಯುಂಟಾಗುವುದೆಂಬುದನ್ನು, ಹುಸಿ ಎಲ್ಲ ಜಾತಿಗಳ ಗಣಗಳಲ್ಲಿ ಬರಬಹುದೆಂಬುದನ್ನೂ ಒಪ್ಪಿ ಕೊಳ್ಳಬಹುದು. ಮೂರನೆಯ ತೀರ್ಮಾನ ಸಂಶಯಾಸ್ಪದ. ಹುಸಿಯ ಅನಂತರ ತಾಳವು ಆರಂಭವಾಗುವ ಅಕ್ಷರ ನಿಯತವಾಗಿ ಗುರುವಾಗಿಯೇ ಬರಬೇಕೆ? ಹಾಗೆ ಬರದಿದ್ದರೆ ನಿಜವಾಗಿ ಲಯ ಕೆಡುತ್ತದೆಯೇ? ಎಂಬುದು. ಹುಸಿಯ ಮುಂದಿನ ಗಣದಲ್ಲಿ ಪ್ರಧಾನಾಘಾತ ಪಡೆ ಯುವ ಪ್ರಥಮಾಕ್ಷರ ಗುರುವಾಗಲೇ ಬೇಕಾದರೆ ಪಾದ ಪ್ರಥಮಗಣದ ಪ್ರಥಮಾಕ್ಷರ ಗುರು ವಾಗಲೇಬೇಕೆಂದಿದೆಯೆ? ಪಾದದ ಮೊದಲ ಗಣ ಅದಕ್ಕೆ ಹುಸಿಯ ಬೆಂಬಲ ಇರಲಿ, ಇಲ್ಲದಿರಲಿ ಮೊದಲ ಗಣವೆ. ಹೀಗಿರುವಾಗ ಆ ಪ್ರಥಮಗಣದ ತಾಳಬೀಳುವ ಪ್ರಥಮಾಕ್ಷರ ಹುಸಿಯಿಲ್ಲದೆ ಇರುವಾಗ ಒಂದು ಗುರುವಾಗದೆ ಎರಡು ಲಘುಗಳಾಗಬಹುದು.

ಸಿರಿಗೌರಿಯಂತೆ ಬಂದರು ತಾಯಿ ಹಸೆಮಣೆಗೆ
ಸೆರಗಿನಲಿ ಕಣ್ಣೀರನೊರಸಿ
ಸುಖದೊಳಗೆ ನಿಮ್ಮ ನೆನೆದರು ತಾಯಿಗುಣವಂತೆ
ದೀಪದಲಿ ಬಿಡುಗಣ್ಣನಿಲಿಸಿ[8]

ಇಲ್ಲೆಲ್ಲ ಕೊನೆಯ ಪಾದವೊಂದರ ವಿನಾ ಮೊದಲ ಮೂರು ಪಾದಗಳಲ್ಲಿಯೂ ಲಘ್ವಕ್ಷರ ಆಘಾತ ಪಡೆಯುತ್ತಿವೆಯೇ ಹೊರತು ಆ ಮುಂದಿನವಲ್ಲ. ಹಾಗೆಯೇ ಮಧ್ಯಗುರು ಆರಂಭವಾಗುವೆಡೆ

---

೭. ಇದರ ಆಕರ ನನಗೆ ಸಿಕ್ಕಿಲ್ಲ. ಉದ್ಧರಿಸಿದವರಿಂದ ದೊರಕಿಲ್ಲ. ಕೆಲ ವೇಳೆ ಒಂದು ಪಾದ, ಹಲವೇಳೆ ಪಾದದ ಒಂದುಭಾಗ ಪೂರ್ಣಬಂಧದ ಲಯವನ್ನು ನಿರ್ದೇಶಿಸುವಲ್ಲಿ ಅಸಮರ್ಥ ವಾಗುತ್ತದೆ. ಇದನ್ನು ಲೇಖಕರ ಮೇಲಿನ ವಿಶ್ವಾಸದಿಂದ ಐದು ಮಾತ್ರೆಗಳ ಲಯವೆಂದೇ ಇಟ್ಟುಕೊಂಡರೂ ಸಿದ್ಧಾಂತಕ್ಕೆ ಬಾಧೆಯುಂಟು. ಹೇಗೇ ಇರಲಿ, ಸ್ಪಷ್ಟನೆಯ ಸಲುವಾಗಿ ಪೂರ್ಣಬಂಧವನ್ನು ನೋಡಬೇಕಾದ ಅಗತ್ಯ ಓದುಗರಿಗೆ ಹಲವೇಳೆ ಒದಗುವುದು ಸಹಜ. ಆದರೆ ಆಕರವನ್ನೂ ಹುಡುಕುವ ಕಷ್ಟವನ್ನು, ಪರೀಕ್ಷೆಯನ್ನು ಒಡ್ಡುವುದರ ಸಾರ್ಥಕ್ಯವಿಲ್ಲ. ಏಕೆಂದರೆ ಎಲ್ಲರೂ ಓದಿರುವುದನ್ನು ಎಲ್ಲರೂ ಓದಿರುವುದಿಲ್ಲ.

8. ಮೈಸೂರು ಮಲ್ಲಿಗೆ. ಕೆ. ಎಸ್. ನರಸಿಂಹಸ್ವಾಮಿ. (ಬಳೆಗಾರನ ಹಾಡು)

ಗಳಲ್ಲೂ ಕೂಡ. ತನ್ನ ಹಿಂದೆ ಹುಸಿಯನ್ನುಳ್ಳ ಪಾದದ ಪ್ರಥಮಗಣಕ್ಕೂ, ಹುಸಿಯಿಲ್ಲದ ಪಾದದ ಪ್ರಥಮಗಣಕ್ಕೂ ಇರುವ ವ್ಯತ್ಯಾಸವೆಂದರೆ 'ಹುಸಿ ಇಲ್ಲ, ಇದೆ' ಎಂಬುದಷ್ಟೇ. ಪಾದಪ್ರಥಮಗಣ ಹುಸಿಯಿಂದ ಅಬಾಧಿತವಾಗಿರುತ್ತದೆ.

ಹುಸಿಯ ಇತಿವೃತ್ತವನ್ನು ತಿಳಿಯಬೇಕಾದರೆ ಹುಸಿ ಗಣಕ್ಕೆ ಸಂಬಂಧಿಸಿದಂತೆ ಇರುವ ಛಂದಸ್ಸಿನ ಕೆಲವು ನಿರ್ಣಾಯಕ ಅಂಶಗಳನ್ನು ಗಮನಿಸಬೇಕಾಗುತ್ತದೆ. ಲಯ ಪ್ರವೃತ್ತಿಯಲ್ಲಿ ಆವರ್ತವಿಧಿ, ಪ್ಲುತಕ್ರಿಯೆ, ಯತಿಸ್ಥಾನ, ಗತಿಪರಿವೃತ್ತಿಯವಿಧಾನ–ಇವುಗಳನ್ನು ಪ್ರತ್ಯೇಕವಾಗಿ, ವಿವರವಾಗಿ ವಿಚಾರ ಮಾಡುವುದು ಅಗತ್ಯವಾಗಿದೆ. ಇಲ್ಲಿ, ಹುಸಿಗಣಕ್ಕೆ ಸಂಬಂಧಿಸಿದಂತೆ ಸೂಚ್ಯವಾಗಿ ಸಂಕ್ಷೇಪವಾಗಿ ಅವುಗಳನ್ನು ವಿಚಾರ ಮಾಡಬಹುದು.

ಶುದ್ಧಛಂದಸ್ಸಿನ ಜಾತಿಬದ್ಧಬಂಧಗಳಲ್ಲಿ ಪಾದಮೌಲ್ಯಗಳ ಸಮೀಕರಣವೇ ಆವರ್ತ ಕ್ರಿಯೆಯಾಗಿರುತ್ತದೆ. ಷಟ್ಪದಿಗಳನ್ನು ಉದಾಹರಣೆಗೆ ತೆಗೆದುಕೊಂಡರೆ ಅದರ ಮೊದಲೆರಡು ಪಾದಗಳ ಒಟ್ಟು ಮೌಲ್ಯಕ್ಕೆ ಮೂರನೇ ಪಾದದ ಮೌಲ್ಯ ಸಮನಾಗುತ್ತದೆ. ಮೂರು ಆರನೇ ಪಾದಗಳ ಲಕ್ಷಣ ಉಳಿದ ಪಾದಗಳಲ್ಲಿ ಒಂದರ ಒಂದುವರೆಯಷ್ಟು ಮೇಲೊಂದು ಗುರು ಎಂಬುದು ರೂಢಿಯಾದರೂ ಆ ಮೀಸಲುಗುರು ಉಳಿದರ್ಧವನ್ನು ಆಕ್ರಮಿಸುತ್ತದೆ. ಈ "ಅರ್ಧ" ನಿರ್ದಿಷ್ಟವಾಗಿ ಎಷ್ಟು ಎನ್ನುವುದು ಸನ್ನಿವೇಶದಿಂದ ಖಚಿತವಾಗುತ್ತದೆ. ಕುಸುಮ ಷಟ್ಪದಿಯಲ್ಲಿ ಈ ಅಂತ್ಯಗುರುವಿನ ಅಥವಾ ಮೀಸಲು ಗುರುವಿನ ಕಾಲಮೌಲ್ಯ ಅಥವಾ ಅದು ಪಡೆಯುವ "ಅರ್ಧ" ಎನಿಸಿಕೊಳ್ಳುವ ಪ್ರಮಾಣ ಒಂದು ಗಣದಷ್ಟು. ಏಕೆಂದರೆ ಈ ಷಟ್ಪದಿಯ ಕಿರಿಚರಣಗಳ ಅರ್ಧ ಒಂದು ಗಣ.

ಬಿಸಿಲಿಗಂ | ಗಾಳಿಗಂ | ನಸುಬಾಡೆ | ತನುಲತಿಕೆ |
ಕುಸುಮಕೋ | ಮಳೆಹೊದೆದ | ಹೂವಿನಂ | ತೆ— |
ಕುಸುಮಶರ | ನೊಡನೆರತಿ | ಯೊಸೆದು ಬ | ರ್ಪಂತೆರಂ |
ಜಿಸಿರಾಮ | ನೊಡನೆ ಜಾ | ನಕಿನಡೆದ | ಳು — |9

ವಾರ್ಧಕ ಷಟ್ಪದಿ ಕುಸುಮದ ಎರಡರಷ್ಟು :

ಕಲಿಯುಗದ ವಿಪ್ರರಾಚಾರಮಂ ಬಿಡುವಂತೆ
ಹಲವು ಮಾತೇನಿನ್ನು ಸೀತೆಯಂ ಬಿಟ್ಟೆನೆನೆ
ಬಲುಗರಮಿದೆತ್ತಣದೊ ಕಾರುಣ್ಯನಿಧಿಗೆನುತೆ
ನಡನಡುಗಿ | ಭೀತಿಯಿಂ | ದೆ ...| |10

ಇಲ್ಲಿನ ಅಂತ್ಯಗುರುವಿನ ಬೆಲೆ ಎರಡುಗಣಗಳಷ್ಟು. ಮೀಸಲುಗುರು ಬಂದಲ್ಲೆಲ್ಲ ಆ ಜಾತಿಯ ಒಂದು ಗಣದ ಬೆಲೆ ಎನ್ನುವುದು ಎಲ್ಲ ನೆಲೆಗಳಲ್ಲೂ ಸರಿಹೋಗುವುದಿಲ್ಲ.[11] ಭಾವಗೀತೆಗಳಲ್ಲೂ

9. ಕುಮುದೇಂದು ರಾಮಾಯಣ. ೬–೭೩. ಕರ್ಕಿಅವರೂ ಉದಾಹರಿಸಿದ್ದಾರೆ: ಕ. ಛಂ. ವಿ. ಪು. ೧೯೬.

10. ಕನ್ನಡ ಜೈಮಿನಿ ಭಾರತ. ಲಕ್ಷ್ಮೀಶ. ೧೮–೫೧. ಮೈಸೂರು ಸರ್ಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆಯ ಪ್ರಕಟಣೆ. ೧೯೫೬. ಇಲ್ಲಿ ಉದಾಹರಿಸುವಾಗ ಸಮತೋಲನದ ಸ್ಪಷ್ಟತೆಗಾಗಿ ಚತುಷ್ಪದಿಯನ್ನಾಗಿಸಿದೆ.

11. ಕೆಲವೇಳೆ ಒಂದು ಗಣವನ್ನೂ ತೆಗೆದುಕೊಳ್ಳದೆ ಹೋಗಬಹುದು ಆ ದೀರ್ಘಾಕ್ಷರ. ಮೀಸಲು ಗುರುವಿನ ಮುಂದೆ ಹುಸಿ ಬಂದಾಗ ತಾನು ಪಡೆಯಬೇಕಾದ ಮೌಲ್ಯದಲ್ಲಿ ಹುಸಿಯ ಮೌಲ್ಯ ಬಿಟ್ಟುಕೊಡುವುದನ್ನು ಮುಂದೆ ಗಮನಿಸಬಹುದು.

ನವ್ಯಕಾವ್ಯಗಳ ಹೊರತು ಎಲ್ಲ ಪದ್ಯಗಳಲ್ಲೂ, ಅಂಶಲಯದಲ್ಲೂ, ಅಷ್ಟೇಕೆ ಭಾರತೀಯ ಸಂಗೀತದಲ್ಲಿ ಮಾತ್ರವಲ್ಲ-ಪಾಶ್ಚಾತ್ಯ ಸಂಗೀತ ಛಂದಸ್ಸುಗಳಲ್ಲೂ ಹೀಗೆಯೇ ಆವರ್ತ ನಿರ್ಧಾರ ನಡೆಯುಬೇಕು. ಇದಕ್ಕೆ ಪಾದಾವರ್ತ ಎಂದು ಕರೆಯಬಹುದು. ಈ ಆವರ್ತ ಪೂರಣಕ್ರಿಯೆ. ಪಾದದ ಅಂತ್ಯದ ಶೇಷಾಂಶದಲ್ಲಿ ಅದಕ್ಕೆ ಅಕ್ಷರದ ಬೆಂಬಲವಿರಲಿ, ಇಲ್ಲದಿರಲಿ ನಡೆಯುತ್ತದೆ. ಹಾಗೆ ನಡೆಯುವಾಗ ಅಲ್ಲಿ ವಿಲಂಬಯತಿ ಇರುತ್ತದೆ.

ಮಾತ್ರೆಗಳ ಆವರ್ತದಿಂದ ಗಣ ಸಿದ್ಧಿಸುತ್ತದೆ. ಆ ಗಣಗಳ ಆವರ್ತದಿಂದಲೆ ಪಾದ ಸಿದ್ಧಿ. ಗಣಗಳ ಆವೃತ್ತಿಯು ಒಂದು ಮೊತ್ತ ಪುನಃ ಆವೃತ್ತಗೊಳ್ಳುವುದೇ ಪಾದಸಮೀಕರಣ ಗಣಾವೃತ್ತಿಯಲ್ಲೂ ಮಧ್ಯೆ ಕಡಮೆ ಬಿದ್ದರೆ ಕಾಲಮೌಲ್ಯ ಸಮೀಕರಣವಾಗಬೇಕು.

ಎಂದೆನ್ನ ಕೇಳಲೇ | ಕೆ— | ಎನ್ನರಸ
ಸುಮ್ಮನಿರಿ ಎಂದಳಾ | ಕೆ—|—|12

ಇಲ್ಲಿನ ಮೊದಲ ಪಾದದಲ್ಲಿನ ಮೂರನೆ ಗಣದಲ್ಲಿ 'ಕೆ' ಎಂಬುದರ ಬೆಲೆ ಒಂದು ಗಣದಷ್ಟು. ಇದು ಗಣಪೂರಣಕ್ರಿಯೆ. ಇಲ್ಲಿ ವಿಲಂಬಯತಿ ಪ್ರಯುಕ್ತವಾಗಿದೆ, ಪ್ಲುತವೂ ಸಮಾವೇಶಗೊಂಡಿದೆ. ಗಣಪೂರಣಕ್ಕೆ ಇಲ್ಲಿ ಅಕ್ಷರದ ನೆರವಿರುವುದರಿಂದ ವಿಲಂಬಗಣವೆನ್ನಬಹುದು. ಎರಡನೇ ಪಾದದಲ್ಲಿನ 'ಕೆ' ಅಕ್ಷರದ ಬೆಲೆ ಎರಡು ಗಣಗಳಷ್ಟು.

ಈಗ ಮೊದಲ ಪಾದದ ಮೊದಲಗಣದ ಹಿಂದಕ್ಕೆ ಇರುವಂಥ ಹುಸಿಯನ್ನು ಲಕ್ಷಿಸೋಣ.[13]

೧. ಅ] ನಾಥೆ ಇವ | ಳಿನ್ನೊಬ್ಬ
ಳೀಜನ್ಮ | ರೋಸಿ

೨. ಹಗ] ಲೆಲ್ಲಾ | ಕಳೆಯಿತು | ಸೂರ್ಯನು | ಮುಳುಗೆ

೩. ಯಾ] ರಣ್ಣ ನೀ ಬಿಡು | ಗಣ್ಣನೇ ಎದೆ
ಗೆಳೆಯ ಕುಳಿತಿಹೆ | ತಣ್ಣನೇ14

೪. ಪುರ] ಸೆ ನಿಕಲಜಬ್ | ಪ್ರಾಂತ ಕೆ ಪಥ | ಪರ್ ಚಲಾವಹ್ | ಶೀಘ್ರಹೀ |15

೫. ಇಕ್] ದಿನ್ ರಘುನಾಯಕ್ | ಸೀಯ ಸಹಾಯಕ್ | ರತಿನಾಯಕ್ |
ಅನುಸಾರೀ |16

೬. ಮುನಿ] ಸಪಜು ದೀನ್ಹೀ | ಅತಿಬಲಕೀನ್ಹಾ | ಪರಮ ಅನುಗ್ರಹ | ಮೈ ಮಾನ್ |17

೭. ಉತ್ಪ್ಲುತ | ಮೇಕಹಸ್ತಚರ | ಣಂದ್ವಿತೀಯಕರ | ರೇಚಿತಂಸುವಿನ | ತಂ18

---

12. ಸಮಾಲೋಕನದಲ್ಲಿ ಉದಾಹೃತ. ಪು. ೨೧೦.
13. ಮೊದಲಿನವೆರಡು ಉದಾಹರಣೆಗಳು ಸಮಾಲೋಕನದಲ್ಲಿವೆ. ಪು. ೧೯೭.
14. ಚೈತ್ಯಾಲಯ: ದ. ರಾ. ಬೇಂದ್ರೆ. ಪು. ೨೪.
15. ಹಿಂದೀ ಛಂದಪ್ರಕಾಶ: ರಘುನಂದನಶಾಸ್ತ್ರೀ. ಪು. ೬೧. ಹರಿಗೀತಿಕಾ (ಮಾತ್ರಾ) ಛಂದಸ್ಸು ಪಾದಕ್ಕೆ ೨೮ ಮಾತ್ರೆ. ೧೬, ೧೨ಕ್ಕೆ ಯತಿ. ಆನಂದಕುಮಾರ ಪ್ರಯೋಗ.
16. ಅದೇ. ಪು. ೬೨. ಮರಹಟಾಛಂದ. ೨೯ ಮಾತ್ರೆ. ೧೦, ೮, ೧೧ಕ್ಕೆ ಯತಿ. ಕೇಶವಪ್ರಯೋಗ.
17. ಅದೇ ಪು. ೬೪. ತ್ರಿಭಂಗಿಛಂದಸ್ಸು. ೧೦, ೮, ೮, ೬ಕ್ಕೆ ಯತಿ. ತುಲಸೀಪ್ರಯೋಗ.
18. ಮಪ್ರಕವೃತ್ತ. ೨೨ ಅಕ್ಷರ. ೧೦, ೮, ೪ಕ್ಕೆ ಯತಿ. ಭ. ನಾಟ್ಯ. Vol II ೧೫-೧೩೫. ಇದರ ಆದಿಗುರು ಎರಡು ಲಘುಗಳಾದರೆ ಅಶ್ವಲಲಿತವೃತ್ತವೆನಿಸುತ್ತದೆ.

ಈ ಉದಾಹರಣೆಗಳಲ್ಲೆಲ್ಲ ಪಾದ ಆರಂಭವಾಗುವುದಕ್ಕೆ ಮೊದಲು ಹುಸಿಗಣ ಬಂದಿರುವುದು ಸ್ವಯಂವೇದ್ಯವಾಗಿದೆ. ಇಲ್ಲೆಲ್ಲ ಹುಸಿಯು ತಾಳದ ಹಿಂದಕ್ಕಿರುತ್ತದೆ. ಆವರ್ತದ ಯಾವುದೇ ಗಣಕ್ಕೆ ಸೇರದೆ ಹೊರಗುಳಿದಿರುತ್ತದೆ. ಆವರ್ತ ಆರಂಭವಾಗುವುದೇ ಹುಸಿಯ ಅನಂತರ. **ಪದ್ಯದ ಪ್ರಥಮ ಪಾದದ ಪ್ರಥಮಗಣದ ಹಿಂದಿರುವ ಹುಸಿಯು ತಾಳಕ್ಕೆ ಒಳಪಡುವುದಿಲ್ಲ.. ಇದಕ್ಕೆ ಆವರ್ತಪೂರ್ವಹುಸಿಗಣವೆನ್ನಬಹುದು.**

ಹುಸಿ (ಪುಸಿ) ಎಂಬುದು ಕನ್ನಡಶಬ್ದ. ಆವರ್ತದಲ್ಲಿ ಸ್ಥಾನವಿಲ್ಲದುದಕ್ಕೇ ಇದಕ್ಕೆ ಹುಸಿ ಎಂದು ಹೆಸರಾಗಿರಬೇಕು. ಇದೇ ಒಂದು ಗಣದಂತೆ ತೋರುತ್ತದೆ. ಆದರೆ ಆವರ್ತದಲ್ಲಿ ಬರುವ ಪ್ರಧಾನಗಣದಂತೆ ಒಂದು ಗಣವಲ್ಲ. ಅಪೂರ್ಣವಾದ, ಪ್ರಧಾನಾಘಾತಕ್ಕೆ ಸಿಕ್ಕದ ಅಪೂರ್ಣಗಣ. ಆದುದರಿಂದ ಇದು ಹುಸಿ. ಕುಶಾಲುತೋಪು ಎನ್ನಲು ಹುಸಿಗುಂಡು ಎನ್ನುವುದನ್ನು ಕೇಳಿದ್ದೇವೆ. ಪಟಾಕಿ ಶಬ್ದಮಾಡದೆ ಪುಸಕ್ಕನೆ ಆರಿಹೋದರೆ ಹುಸಿಯಾಯಿತು ಎನ್ನುವುದುಂಟು. ಒಂದು ವಸ್ತು ವಸ್ತುತಃ ಉದ್ದಿಷ್ಟವಾಗಿರುವ ಗುರಿಯನ್ನು ಸಾಧಿಸದಿದ್ದರೆ ಹುಸಿ ಎನ್ನುವುದು. ವಾಸ್ತವ್ಯವನ್ನು ಅಲ್ಲಗಳೆದಾಗ ಅದು ಹುಸಿ. ಅಂತೆಯೇ 'ಗಣ', ಉಪ ಗಣಗಳ ಉದ್ದೇಶ ಹುಸಿಯಿಂದ ಸಾಧಿತವಾಗದಿರುವುದರಿಂದ, ಗತಿ ನಿರ್ದೇಶಕವಾದ ಆಘಾತ ವನ್ನು ಇದು ವ್ಯಕ್ತಪಡಿಸದ ಕಾರಣ ಇದು ಹುಸಿ, ಇದಾದನಂತರ ಆಘಾತ ಒದಗಿ ತಾಳ ದೊಡನೆ ಲಯದ ಪ್ರವಾಹದಲ್ಲಿ ಲೀನರಾಗುತ್ತೇವೆ.

ಒಂದು ಪದ್ಯವನ್ನು ಓದಬೇಕೆಂದು ಹೊರಟಾಗ ಪ್ರಥಮ ಪಾದದಿಂದ ಆರಂಭಿಸುವೆವಷ್ಟೆ. ಪ್ರವೃತ್ತಿಯಲ್ಲಿ ಗತಿಶೀಲವಾಗಿ ನಿವೃತ್ತಿಯಲ್ಲಿ ಅವಸಾನವಾಗುವ ಛಂದೋ ಪ್ರಕ್ರಿಯೆ ಗಳನ್ನೂ ಅದು ಹೇಗೆ ಅರ್ಷೇಯವಾದ ಸೃಷ್ಟಿತತ್ತ್ವಗಳ ವಿಕಾಸದ ಉಪಕ್ರಮಕ್ಕೆ ಹೊಂದಿ ಕೊಂಡಿದೆ ಎಂಬುದನ್ನೂ ಬೇರೆಡೆಯೇ ವಿಚಾರಮಾಡಬೇಕು. ಸಂಕಲ್ಪ ಪ್ರವೃತ್ತಿಗಳ ನಡುವಣ ಪ್ರಯತ್ನಾವಸ್ಥೆಯಲ್ಲಿ, ಗತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು, ಅದರ ಗುಣಾಂಶಗ ಳನ್ನು ಮೈಗೂಡಿಸಿಕೊಂಡು ಹುಸಿ ಉದ್ಭವವಾಗುತ್ತದೆ ಎಂಬುದಷ್ಟನ್ನು ಮಾತ್ರ ಇಲ್ಲಿ ಹೇಳ ಬಹುದಾಗಿದೆ. ಪ್ರಥಮ ಪಾದದ ಆದಿಯಲ್ಲೆ ಹುಸಿಗಣ ನಮಗೆ ಸಿಕ್ಕುವುದರಿಂದ ಅದರ ಬಗ್ಗೆ ಮೊದಲು ಆಸಕ್ತಿ ಕುತೂಹಲ ವಹಿಸುವುದು ಸ್ವಾಭಾವಿಕ. ಹೀಗೆ ಹುಟ್ಟಿದ ಆಸಕ್ತಿಯಿಂದ ಆ ಹುಸಿಗಣ ತಾಳದ ಹೊರಗೆ ಇರುವುದು ಕಂಡು ಬಂದು ಅದಕ್ಕೆ ಆವರ್ತದ ಗಣದ ಅಸ್ತಿತ್ವ ವಿಲ್ಲದಿರುವುದರಿಂದ ಆ ಜಾತಿಯ ಗಣಗಳಿಗೆಲ್ಲ 'ಹುಸಿ' ಎಂಬ ಹೆಸರು ರೂಢವಾಗಿ ಬಂದಿರ ಬೇಕು. ಏಕೆಂದರೆ ಎಲ್ಲ ಹುಸಿಗಣಗಳೂ ವಾಸ್ತವಾರ್ಥದಲ್ಲಿ ಹುಸಿಗಣವಲ್ಲ. ನಿಜವಾಗಿ ಹುಸಿಗಣ ಎಂಬ ಶಬ್ದ ತನಗಿರುವ ಅರ್ಥದಲ್ಲಿ ಪ್ರಥಮಪಾದದ ಆದಿಯಲ್ಲಿ ಬರುವ ಹುಸಿಗಷ್ಟೆ ಪ್ರಯುಕ್ತವಾಗಿದೆ. ಅದು ಬಿಟ್ಟು ಮತ್ತೆಲ್ಲೇ ಬಂದರೂ ಅದು ತಾಳಕ್ಕೆ ಒಳಪಡುತ್ತನೆ, ಆವರ್ತದ ಬಂಧದೊಳಗೆ ಸೇರಿರುತ್ತದೆ.

ಪ್ರಥಮ ಪಾದದ ಪ್ರಥಮಗಣದ ಪ್ರಥಮ ಆಘಾತದಿಂದ ಕೊನೆಯ ಪಾದದ ಸಮೀಕೃತ ಆವರ್ತದ ಅಂತ್ಯಗಣದ ಮುಂದಿನ ಆಘಾತದವರೆಗೆ ವ್ಯಾಪಕವಾಗುವ ಗ್ರಾಹ್ಯ ಕಾಲದ ನಡುವೆ ಹುಸಿಗಣಬರಲಿ, ಪರಿವೃತ್ತಿಯಿರಲಿ-ಎಲ್ಲವೂ ತಾಳಕ್ಕೆ ಒಳಪಡುತ್ತದೆ, ಒಂದಲ್ಲ ಒಂದು ಗಣದ ಭಾಗವಾಗಿರುತ್ತದೆ. ವಿರಾಮವೂ ಕೂಡ ಗಣನೀಯವಾಗಿರುತ್ತದೆ. ಯಾವ ಗಣಕ್ಕೂ ಸೇರದಂತೆ ಆವರ್ತದೊಳಗೆ ಹುಸಿಗಣ ಕಲ್ಪಿತವಾಗಲು ಸಾಧ್ಯವಿಲ್ಲ. ಹಾಗೊಂದು

ವೇಳೆ ಕಲ್ಪಿಸಿದರೆ ಆವರ್ತದೋಷವಾಗುತ್ತದೆ. ಮೂಲತಳಹದಿಯೇ ಇಲ್ಲವಾಗುತ್ತದೆ. ಆದುದರಿಂದ ಹುಸಿಕಲ್ಪನೆಗೆ ಆವರ್ತ ವಿವಕ್ಷೆ ಅತ್ಯಗತ್ಯ. ಉದಾಹರಣೆಯೊಂದರ ಮೂಲಕ ಇದನ್ನು ಸ್ಪಷ್ಟಪಡಿಸಬಹುದು.

ಲಿಂಗಭಂಗಿಯಲಿ | ಅಭಂಗವಾಗಿದೆ |
ಶಿವ] ರುದ್ರದ ನವಲವ | ತಾರ
ರಾಧೆಯ ಭಾಧೆಯ ವೇಧವು ಹತ್ತಲು
ಪ್ರೇಮಿಯು ತಾ ಸೋಗಿನ ಜಾರ19

ಮೇಲಿನ ಪ್ರಸ್ತಾರದಲ್ಲಿ 'ಶಿವ' ಎಂಬುದನ್ನು ಹುಸಿಯಾಗಿ ತೋರಲಾಗಿದೆ. ಪ್ರಥಮ ಪಾದವನ್ನು ಮರೆತು ಬಿಡುವುದಾದರೆ ಈ ಪ್ರಸ್ತಾರ ಸಹಜವಾಗಿಯೇ ಕಾಣುತ್ತದೆ. ಏಕೆಂದರೆ ಹುಸಿಯ ಮುಂದೆ 'ರುದ್ರದ ನವಲವ|ತಾರ" ಎಂದು ಲಯಬದ್ಧವಾಗಿ ಹೇಳಬಹುದಾಗಿದೆ. ಆದರೆ ಹುಸಿ ಕಲ್ಪನೆಗೆ ಅದರ ಹಿಂದಿನ ಗಣದಲ್ಲಿ ಸ್ಥಾನವಿದೆಯೇ ಎಂದು ನೋಡಿಕೊಳ್ಳುವುದು ಅಗತ್ಯ. ಈ ದೃಷ್ಟಿಯಿಂದ ಈ ಉದಾಹರಣೆ ಮುಖ್ಯವಾಗಿದೆ. ಹುಸಿಕಲ್ಪನೆಯಲ್ಲಿ ಹೀಗೆ ದಾರಿತಪ್ಪಿದ ಉದಾಹರಣೆಗಳೂ ಛಂದೋವಿವೇಚನೆಯಲ್ಲಿ ಉಂಟು.

ಇದನ್ನು ಎಂಟು ಮಾತ್ರೆಗಳ ಲಯವೆಂದು ಇಟ್ಟುಕೊಳ್ಳುವುದಾದರೆ ಪ್ರಥಮ ಪಾದದಲ್ಲಿ ಎರಡು ಗಣಗಳು ಬಂದಿರುವುದು ಸ್ವಯಂವೇದ್ಯವಾಗಿದೆ. ಯಾವುದೇ ಒಂದು ಪ್ರಧಾನ ಗಣ ಮುಕ್ತಾಯವಾದೊಡನೆಯೇ ಅದರ ಮುಂದೆ ಅಕ್ಷರಗಳಿರಲಿ, ಇಲ್ಲದಿರಲಿ, ಆಘಾತ ಬೀಳುತ್ತದೆ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಇಲ್ಲಿ ಎರಡನೆಯ ಗಣ ಮುಗಿದ ಕೂಡಲೇ ಮುಂದಿನ ಅಕ್ಷರದ ಮೇಲೆ ಪ್ರಧಾನಾಘಾತ ಬೀಳುತ್ತದೆ. 'ಶಿವ' ಎನ್ನುವಲ್ಲಿ ಪ್ರಥಮಾಕ್ಷರದ ಮೇಲೆಯೇ ಪ್ರಧಾನಾಘಾತ ಬಿದ್ದು ಹುಸಿಯಾಗದೆ ಗಣವಾಗಿ ಬಿಡುತ್ತದೆ. ಒಂದು ವೇಳೆ ಹುಸಿಯಾಗಲೆಂದೇ ಹಟತೊಟ್ಟರೂ ಅದರ ಮುಂದೆ ಪ್ರಧಾನಾಘಾತ ಬಿದ್ದು ಪ್ರಧಾನಗಣವೇರ್ಪಡುತ್ತದೆ. ಎರಡು ಪ್ರಧಾನ ಗಣಗಳ ನಡುವೆ ಅವಕಾಶವಿಲ್ಲದೆ ಏಕಮಾತ್ರ ಹುಸಿ ನಿಲ್ಲಲಾರದು.

ಬೆವತಿತ್ತು | ಮೈಯೆಂದು | ಕಣ್ಣನೆ | ತ್ತಿದೆ ಮೇಲೆ
ಅದೊ, ಅಲ್ಲಿ ಮುಖದಾಕಾರ ಮೋಡಮೂಡಿದೆ ಒಂದು
ತಲೆಗೆದರಿ | ಕೊಂಡಿದೆ | ಟಗರುಗೂ | ದಲು, ರೀತಿ
ಶುದ್ಧರಾ | ಣಿಗನಂತೆ | ಭಾನುಕಾ | ಳೆಗ ಬಯಲು20

ಇದು ಐದು ಮಾತ್ರೆಗಳ ಲಯಕ್ಕೆ ಸೇರಿದುದು. ಎರಡನೇ ಪಾದದ ಹೊರತಾಗಿ ಉಳಿದ ಮೂರು ಪಾದಗಳೂ ಸರಿಯಾಗಿವೆ. ಎರಡನೇ ಪಾದ ಸರಿಹೊಂದುವುದಿಲ್ಲ. 'ಅದೊ' ಎಂಬುದು ಹೆಚ್ಚಾಗಿದೆ. ಅದನ್ನು ಬಿಟ್ಟು ಓದಿದರೆ ಸರಿ ಹೋಗುತ್ತದೆ. ಆದರೆ, ಓದದೆ ಬಿಡಲೆಂದು ಕವಿ ಸೇರಿಸಿದುದಲ್ಲ. ಆದುದರಿಂದ ಅದನ್ನು ಹುಸಿ ಮಾಡಿಕೊಂಡರೆ ಹೇಗೆ ಎಂಬ ವಿಚಾರ ಓದುವಾಗ ಬರುತ್ತದೆ.

---

19. ಮುಗಿಲಮಲ್ಲಿಗೆ: ದ. ರಾ. ಬೇಂದ್ರೆ. (ಕನ್ನಡ ಕವನ.) ಪು. ೩೮.

20. ಸೂರ್ಯಪಾನ: ದ. ರಾ. ಬೇಂದ್ರೆ. (ಮೋಡ) ಪು. ೧೧೦.

ಅದೊ] ಅಲ್ಲಿಮುಖ | ದಾಕಾರ । ಮೋಡವೂ | ಡಿದೆ ಒಂದು |

ಮೊದಲನೆಯ ಪಾದದಲ್ಲಿ ನಾಲ್ಕು ಗಣಗಳು ಪೂರ್ಣವಿದ್ದು 'ಅದೊ' ಎಂಬುದರ ಪ್ರಥಮಾಕ್ಷರದ ಮೇಲೆ ಪ್ರಧಾನಾಘಾತ ಬಿದ್ದು ಗಣದಸ್ವರೂಪ ಪಡೆಯುತ್ತದೆ. ಹುಸಿ ಆಗದು. ಗಣವಾಗಿಸಿದರೆ "ಅದೊ ಅಲ್ಲಿ | ಮುಖದಾ...." ಎಂಬ ಗಣಸ್ವರೂಪಗತಿಯಲ್ಲಿ ಒದಗುವುದಿಲ್ಲ. 'ಅದೊ' ಎಂಬುದಕ್ಕೆ ಒಂದು ಗಣದ ಬೆಲೆಯನ್ನೆ ಕೊಟ್ಟರೆ ೫ ಗಣಗಳಾಗಿ ಸಮತೋಲ ತಪ್ಪಿ ಆವರ್ತದೋಷವಾಗುತ್ತದೆ. ಕವಿಕರ್ಮ ಬರೆದುದಾಗಿ ಓದುಗ ಅನುಭವಿಸಲೇಬೇಕು. ಹಿಂದಿನ ಗಣದಲ್ಲಿ ಅವಕಾಶವನ್ನೂ ಪಾದ ಸಮೀಕರಣವನ್ನೂ ಗಮನದಲ್ಲಿಟ್ಟುಕೊಂಡು ಹುಸಿ ಕಲ್ಪನೆ ಮಾಡಬೇಕೆಂಬಷ್ಟನ್ನು ಇಲ್ಲಿ ಗಮನಿಸಬೇಕಾಗಿದೆ.

ಹುಸಿಗಣ ತನ್ನ ಹಿಂದೆ ದೃಷ್ಟಿಯಿಟ್ಟುಕೊಳ್ಳಬೇಕಾದುದು ಅಗತ್ಯಮಾತ್ರವಲ್ಲದೆ ಅದಕ್ಕೆ ಮುನ್ನೋಟವೂ ಇರಬೇಕು. ಈ ಉದಾಹರಣೆ ಅದನ್ನು ಸ್ಪಷ್ಟಪಡಿಸುತ್ತದೆ.

ಇಟುಕು ಮನೆಯ ವಾಮನನು ಬೆಳೆದ ಹೇ | ಗೋವಿಶ್ವಯೋ | ಗಿsss |
ಈ ಪ್ರಪಂಚದೊಡನೊಡನೆ ಸಾಗಿವಿ | ಶ್ವಾಕಾರನಾ | ಗಿsss |[21]

ಇಲ್ಲಿ ಪ್ರಥಮ ಪಾದದ ಅಂತ್ಯಾಕ್ಷರ 'ಗಿ' ಎಂಬುದ ಎಂಟು ಮಾತ್ರೆಗಳನ್ನು ತೆಗೆದುಕೊಳ್ಳುತ್ತದೆ. ಆದುದರಿಂದ ದ್ವಿತೀಯ ಪಾದದ ಪ್ರಥಮಾಕ್ಷರವಾದ 'ಈ' ಎಂಬುದು ಹುಸಿಯಾಗುವುದಾದರೆ ಅದರ ಮುಂದಿನ ಗತಿಯು ಅಬಾಧಿತವಾಗಬೇಕು. ಇಲ್ಲಿ ಹಾಗಾಗುವುದಿಲ್ಲ. 'ಈ' ಎಂಬುದನ್ನು ಹುಸಿಯಾಗಿಟ್ಟುಕೊಂಡರೆ ಮುಂದೆ ಗಣಪ್ರತೀತಿಯೊದಗುವುದಿಲ್ಲ; ಗತಿದೋಷ ಉಂಟಾಗುತ್ತದೆ. ಸಹಜ ಹುಸಿ ಬಂದಲ್ಲೆಲ್ಲ ಗತಿನಿರೋಧವೊದಗುವುದಿಲ್ಲ. ಇಲ್ಲಿ 'ಈ' ಹುಸಿಯಾಗದು.

ಬರುವೆ ಎನುತಿವೆ | ಪರಂಜ್ಯೋತಿ ಸಾ | ಕ್ಷಾತ್ಕರಿಸಿಕೊಂ | ಡu....|
ಆ ಅದೃಷ್ಟನಿ | ಷ್ಕರುಣ ಶಕ್ತಿಗಳ । ನಿದಿರು ಎದುರು ಗೊಂ | ಡು 22

ಇಲ್ಲಿ ಎರಡನೆಯ ಪಾದಾದಿ 'ಆ' ಹುಸಿಯಾದರೆ ಆ ಮುಂದಿನ ಗತಿಯಿಂದ ಅರ್ಥ ವ್ಯಕ್ತಿ ಕೆಡುತ್ತದೆ.

ಆ] ಅದೃಷ್ಟನಿಷ್ಕರು | ಣಶಕ್ತಿಗಳನಿದಿ | ರುಎದುರುಗೊಂಡು |....|

ಹೀಗೆ ಅರ್ಥ ವ್ಯಕ್ತಿಯನ್ನೂ ಗಮನಿಸಬೇಕಾಗುತ್ತದೆ, ಇಲ್ಲವೆ ಪರಿವೃತ್ತಿಯನ್ನು, ಯತಿಯನ್ನು ಸಮರ್ಥವಾಗಿ ಅನುಸರಿಸಬೇಕು. ಮಿಗಿಲಾಗಿ ಹುಸಿಯಿಲ್ಲದಿದ್ದರೆ ಎರಡು ಪಾದಗಳ ಅಂತ್ಯಗಳೂ ಒಂದೇ ತೆರನಾಗಿದ್ದು ಇದೇ ಸ್ವೀಕಾರಾರ್ಹವೆನಿಸುತ್ತದೆ. ಬಂಧದೊಳಗಿನ ಹುಸಿಗಣಗಳು ಹೇಗೆ ಆವರ್ತಬದ್ಧವಾಗಿರುತ್ತವೆ ಎಂಬುದನ್ನು ನೋಡಿದ್ದೇವೆ. ಒಟ್ಟಿನಲ್ಲಿ ಪದ್ಯದ ಪ್ರಥಮಪಾದದ ಪ್ರಥಮಗಣಕ್ಕೆ ಹಿಂದಿರುವ ಹುಸಿಯೊಂದರ ಹೊರತಾಗಿ ಪದ್ಯದ ಅಂತ್ಯದವರೆಗೂ ಬರುವ ಹುಸಿಗಣಗಳೆಲ್ಲವೂ ತಾಳಕ್ಕೆ ಒಳಪಡುತ್ತದೆ; ತನ್ನ ಹಿಂದಿನ ಗಣದ ಅಂತ್ಯಾಂಶವಾಗಿರುತ್ತವೆ ಎನ್ನಬಹುದು.

---

21. ಚೈತ್ರಾಲಯ: ದ. ರಾ. ಬೇಂದ್ರೆ (ವ್ಯೈ) ಪು. ೧೬.
22. ಚೈತ್ರಾಲಯ: ದ. ರಾ. ಬೇಂದ್ರೆ. (ಮಾನವ ಚೌಧಿಕಪ್ರಾಣಿ) ಪು. ೨೩.

ಇಕ್] ದಿನ್ ರಘುನಾಯಕ್ | ಸೀಯು ಸಹಾಯಕ್ | ರತಿನಾಯಕ್ ಆನು | ಸಾರೀ
ಶುಭ] ಗೋದಾವರಿತಟ | ವಿಮಲಪಂಚವಟಿ | ಜೈಟೀಹುತೆ ಮು | ರಾರೀ 23

ಇಲ್ಲಿ ಪ್ರಥಮ ಪಾದಾದಿಯ ಇಕ್ ಎನ್ನುವುದು ಆವರ್ತಪೂರ್ವ ಹುಸಿ. ಇದು ತಾಳಕ್ಕೆ ಒಡಂಬಡುವುದಿಲ್ಲ; ಆವರ್ತಕ್ಕೆ ಸೇರಿದ್ದಲ್ಲ. ಇದೇ ಪಾದದ ಅಂತ್ಯದ ಸಾರೀ ಒಟ್ಟಿನಲ್ಲಿ ಎಂಟು ಮಾತ್ರೆಗಳನ್ನು ಪಡೆಯಬೇಕು. ಎರಡನೆಯ ಪಾದಾದಿಯ ಶುಭ ಎಂಬ ಹುಸಿಗಣ ತನ್ನ ಆಸ್ತಿತ್ವಕ್ಕೆ, ಹಿಂದಿನ ಗಣದ ಅಂತ್ಯದಲ್ಲಿ ಸೇರುತ್ತದೆ. ಶುಭ ಎಂಬುದನ್ನು ಸಾರೀ ಎಂಬ ವಿಲಂಬ ಗಣದ ಅವಕಾಶದಲ್ಲೆ ಹೇಳುತ್ತೇವೆ. ಆದುದರಿಂದ ಸಾರೀ ಶುಭ ಎಂಬುದರ ಒಟ್ಟು ಬೆಲೆ ೮ ಮಾತ್ರೆಗಳು. ಸಾರೀ ಎಂಬ ಗಣದ ಆದ್ಯಕ್ಷರ ಎರಡು ಮಾತ್ರೆಗಳನ್ನೂ, ಶುಭ ಎಂಬ ಗಣದ ಅಂತ್ಯಾಕ್ಷರಗಳು ಎರಡು ಮಾತ್ರೆಗಳನ್ನೂ, ಈ ಮಧ್ಯದ ರೀ ಎಂಬುದು ಉಳಿದ ನಾಲ್ಕು ಮಾತ್ರೆಗಳನ್ನೂ ತೆಗೆದುಕೊಳ್ಳುತ್ತದೆ. ಯಾವಗಣಕ್ಕೂ ಸೇರದೆ ಹುಸಿಯ ಅಸ್ತಿತ್ವವಿಲ್ಲ.

ಉತ್ಪ್ಲುತ] ಮೇಕ ಹಸ್ತಚರಣಂ ದ್ವಿತೀಯಕರ ರೇಚಿತಂ ಸುವಿನ | ತಂss
ವಂಶಮ್ಮು] ದಂಗ ವಾದ್ಯ ಮಧುರಂ ವಿಚಿತ್ರಕರಣಾನುಗಂ ಬಹುವಿ |ಧಮ್ss
ಮುದ್ರ್ಕ] ಮೇತದದ್ರ ಸುಭಗೇ ವಿದಗ್ಧ ಗತಿ ಚೇಷ್ಟಿತೈಃ ಸುಲಲಿ | ತೈಃss
ರ್ನೃತ್ಯಸಿ] ವಿಭ್ರಮಾಕುಲ ಪದಂ ವಿವಿಕ್ತ ರಸಭಾವಿತಂ ಶಶಿಮು । ಖೀss24

ಇಲ್ಲಿ ಪ್ರತಿಪಾದಗಳಲ್ಲೂ ಆರಂಭದ ನಾಲ್ಕು ಮಾತ್ರೆಗಳನ್ನೂ ಹುಸಿಯಾಗಿಟ್ಟುಕೊಳ್ಳಬಹುದು. ಹುಸಿಯನ್ನಿಟ್ಟುಕೊಂಡಾಗ ಎಂಟು ಮಾತ್ರೆಗಳ ಲಯ ಸಿಗುತ್ತದೆ. ಕೊನೆಯ ಗುರುವಿಗೆ ಮೀಸಲಾದ ಎಂಟು ಮಾತ್ರೆಗಳ ವಿಲಂಬಗಣದ ಅವಕಾಶದಲ್ಲಿ ಅನಂತರದ ಹುಸಿ ಒಳಗೊಳ್ಳುತ್ತದೆ. ಅಂದರೆ ಅಂತ್ಯಾಕ್ಷರಗಳ ಬೆಲೆ ನಾಲ್ಕು ಮಾತ್ರೆಗಳಾಯಿತು.

ಪಾದಗಳ ಆದಿಯಲ್ಲಿ ಬರತಕ್ಕ ಹುಸಿಗಣಗಳನ್ನು ನೋಡಿದ್ದೇವೆ. ಇಷ್ಟು ಮಾತ್ರವಲ್ಲದೆ ಹುಸಿಗಣ ಪಾದಮಧ್ಯದಲ್ಲೂ, ಪಾದಾಂತ್ಯದಲ್ಲೂ ಬರಬಹುದು. ಪ್ರಥಮಪಾದದ ಪ್ರಥಮಗಣದ ಹಿಂದಿನ ಹುಸಿಯೊಂದಲ್ಲದೆ ಉಳಿದೆಡೆಗಳಲ್ಲಿ ಪ್ರಾಸಸ್ಥಾನದಲ್ಲಿ ಬರಲಿ ಅಥವಾ ಬೇರೆಲ್ಲೇ ಬರಲಿ ತಾಳಕ್ಕೆ ಒಳಪಡುವುದರ ಜೊತೆಗೆ ತನ್ನ ಹಿಂದೆ ವಿಲಂಬಯತಿಯನ್ನೂ, ತನ್ನ ಮುಂದಿನ ಗತಿಯ ವಿವಕ್ಷೆಯನ್ನೂ ಹೊಂದಿರುತ್ತದೆ ಬಂಧದ ಕೊನೆಯಪಾದದ ಅಂತ್ಯದಲ್ಲಿ ಮಾತ್ರ ಹುಸಿಬರದು.

೧. ಮರುಗಿ ಆಗೆಚ್ಚೆತ್ತಿರಿ—ಮ
ತ್ತೊರಗಿ ಮುಸುಕನು ಹೊತ್ತಿರಿ25

೨. ಮನ್ಮಥನ ರೂಪನಿನ | ಗೆ...ಅ | ರ್ಜುನರಾಯ
ಚಂದ್ರನ ಕಳೆಯು ನಿನ | ಗೆ—26

೩. ನಾರಾಯಣ ಎನ್ನಿ | ರೊ.. ಶ್ರೀ] ನರಹರಿ
ಪಾರಾಯಣ ಮಾಡಿ | ರೋ—
ಕಾಶಿಗೆ ಹೋಗಲೇ | ಕೆ...ಕಾ | ವಡಿವೊತ್ತು

---

23. ಹದಿನಾರನೆಯ ಪಾದಸೂಚಿ ನೋಡಿ.
24. ಹದಿನೆಂಟನೆಯ ಪಾದ ಸೂಚಿನೋಡಿ.
25. ಸಮಾಲೋಕನದಲ್ಲಿ ಉದಾಹೃತ ಪು. ೨೧. ಇದನ್ನು ಹೀಗೂ ಬರೆಯಬಹುದು,
26. ಅರ್ಜುನ ಜೋಗಿ ಹಾಡು. ಪು. ೩೬.

ಬೇಸತ್ತು ತಿರುಗಲೇ | ಕೆ—
ಸ್ನಾನವ ಮಾಡಲೇ | ಕೆ....ಮಾ | ನವರಿಗೆ
ಮೌನ ಮಂತ್ರಗಳೇ | ಕೆ—[27]
ಮರುಗಿ ಅಗೆಚ್ಚೆತ್ತಿ | ರೀ ...
ಮು] ತ್ತೊರಗಿ ಮುಸುಕನು ಹೊತ್ತಿರಿ.

೪. ಆಡಿದರೆ ಸ್ಥಿರ | ವಪ್ಪ....ಅ |
ಬದ್ಧಗಳಾಡಲು | ಒಪ್ಪ—
ಬೇಡಿದ ವರಗಳ | ನಿಪ್ಪ .. ನಮ್ಮ |
ಮೂಡಲಗಿರಿ ತಿ | ಮ್ಮಪ್ಪ —
ದಾಸರ ಕಂಡರೆ । ಪ್ರಾಣ .... ತಾ ¦
ಧರೆಯೊಳಗಧಿಕಪ್ರ | ವೀಣ—
ತಿರುಪತಿ ವೆಂಕಟ | ರಮಣ ...ನಿನ |
ಗ್ಯಾತಕೆ ಬಾರದೊ | ಕರುಣ [28]
೫. ಉದರವೈ | ರಾಗ್ಯವಿ | ದು .. ನಮ್ಮ |
ಪದುಮನಾಭನಲ್ಲಿ ಲೇಶಭಕುತಿಯಿಲ್ಲ.[29]
೬. ಬಂದದ್ದೆಲ್ಲ | ಬರಲಿ . ಗೋ |
ವಿಂದನ ದಯವೊಂ | ದಿರಲಿ—[30]

ಇಲ್ಲೆಲ್ಲ ಹುಸಿಯ ಹಿಂದೆ ವಿಲಂಬವಾಗುವಂಥ ಪ್ಲುತಕಾರ್ಯ ನಡೆದಿರುವುದು ಕಂಡುಬರುತ್ತದೆ. ಈ ಪ್ಲುತದ ಮುಂದೆ ಗಣದ ಅಂತ್ಯಘಟಕವಾಗಿ ಹುಸಿ ನಿಯೋಜಿತವಾಗಿರುತ್ತದೆ. ಗಣ ಸಂಖ್ಯೆಯ ನಿಯತಿಗೆ ಬದ್ಧವಾಗಿರುತ್ತದೆ. 'ಅ | ರ್ಜುನರಾಯ' ಎಂಬಲ್ಲಿನಂತೆ ಹುಸಿ ತನ್ನ ಮುಂದಿನ ಪ್ರಧಾನ ಗಣದ ಸಂಬಂಧವನ್ನು ನಿಕಟವಾಗಿಟ್ಟುಕೊಳ್ಳಬಹುದು. ಇಲ್ಲಿ ಅರ್ಥ ದೃಷ್ಟಿಯಿಂದ ಅಭೇದ್ಯವಾಗಿರುತ್ತದೆ. ಹೀಗೆಯೇ "ನಮ್ಮ | ಮೂಡಲಗಿರಿ" ಎಂಬಲ್ಲಿನಂತೆ ವಿಭಿನ್ನ ಪದಗಳಾಗಿದ್ದು ವಿಭಾಜ್ಯವಾಗಬಹುದು ಇದು ಅರ್ಥದೃಷ್ಟಿಯಿಂದ ಮಾತ್ರಗಮನಾರ್ಹ. ಹುಸಿಗೆ ಹಿಂದೆ ಪ್ಲುತವೂ, ಗಣದ ಅಂತ್ಯಸ್ಥಾನವೂ, ಗಣಸಂಖ್ಯಾನಿಯತಿಯೂ ಇರಬೇಕೆಂಬ ಈ ಹಿನ್ನಲೆಯಲ್ಲಿ ಈ ಕೆಳಗೂ ಕವನ ಭಾಗವನ್ನು ಪರಿಶೀಲಿಸಬಹುದು. ಆಚಾರ್ಯ ತೀ.ನಂ. ಶ್ರೀ ಅವರು ಹೀಗೆ ಕಲ್ಪಿಸಿದ್ದಾರೆ.

ಹಗ] ಲೆಲ್ಲಾ ಕಳೆಯಿತು | ಸೂರ್ಯನು | ಮುಳುಗೆ |
ಖಗ] ಹಾರಿತು | ಗೂಡಿನ | ಒಳಗೆ
ಜಗ] ವೆಲ್ಲಾ | ಬೆಳಗಿತು | ದೀಪವು | ಬೆಳಗೆ
ಗಗ] ನಾಂಗಣ | ದಲಿ ಉಡು | ತೊಳಗೆ

---

27. ಶ್ರೀ ಪುರಂದರದಾಸರ ಕೃತಿಗಳು. ಪು. ೨೫, ೨೬.

28, 29, 30, ಅದೇ-ಕ್ರಮುಮವಾಗಿ ಪು. ೧೬೬, ೧೬೭ ; ೧೦೧ ; ೭೨.
ಅಂಶಲಯದಲ್ಲಿ ಮಾತ್ರಾನಿರ್ಧಾರ ಸಂಗತಿಯನ್ನು ಹೊಂದಿಕೊಂಡಿರುತ್ತದೆ. ಉದಾ :-" ಕಾಶಿಗೆ ಹೋಗಲೇ । ಕೆ-ಕಾ । ಪಡಿಪ್ರೊತ್ತು," ಇಲ್ಲಿ ಇದನ್ನು ಐದು ಮಾತ್ರೆಗಳ ಲಯದಲ್ಲಿ ಓದಿದರೆ 'ಕೆ'-ಅಕ್ಷರವ ಜೆಲೆ ೩ ಮಾತ್ರೆಗಳು, ಆರು ಮಾತ್ರೆಗಳ ಲಯದಲ್ಲಾದರೆ ೪ ಮಾತ್ರೆಗಳು, ೭ ಮಾತ್ರೆ ಗಳ ಲಯದಲ್ಲಾದರೆ ೫ ಮಾತ್ರಗಳಾಗುತ್ತದೆ.

31. ಸಮಾಲೋಕನ. ಪು. ೧೯೭, ೧೯೮.

ಮೊದಲನೆಯ ಪಾದದಲ್ಲಿನ ಆರಂಭದ ಹುಸಿ ಆವರ್ತ ಪೂರ್ವ ಹುಸಿ; ತಾಳಕ್ಕೆ ಸೇರುವುದಿಲ್ಲ: ಅದರಿಂದ ಆವರ್ತ ದೋಷವಾಗಲಿ, ಗತಿನಿರೋಧವಾಗಲಿ ಉಂಟಾಗುವುದಿಲ್ಲ. ಇದೇ ಪಾದದ ಕೊನೆಯ ಅಕ್ಷರ ಗುರುವಾಗುವುದರಿಂದ ನಾಲ್ಕು ಮಾತ್ರೆಯದೇ ಆಗಿ ಒಟ್ಟು ಪ್ರಥಮಪಾದಕ್ಕೆ ನಾಲ್ಕು ಗಣಗಳು ಸಿದ್ಧಿಸುತ್ತದೆ.[32] ನಾಲ್ಕು ಗಣಗಳಷ್ಟೆ ಆ ಪಾದದ ಪರಿಮಿತಿ; ಅಲ್ಲಿಗೆ ಒಂದು ಆವರ್ತ ಮುಗಿಯಿತು. ಎರಡನೆಯ ಪಾದಕ್ಕೆ ಇನ್ನೊಂದು ಆವರ್ತ, ಮೊದಲಿನ ಪಾದ ಮೌಲ್ಯದ ಪುನರಾಗಮನ ಆರಂಭವಾಗುತ್ತದೆ. ಒಂದು ಆವರ್ತ ಮುಗಿದು ಇನ್ನೊಂದು ಆರಂಭವಾಗಬೇಕಾದರೆ ಮಧ್ಯೆ ವಿಳಂಬ ಸಲ್ಲದು; ಪರಿಭಾವನಾ ವಿಚ್ಛೇದವಂತೂ ಒದಗಲೇ ಕೂಡದು. ಸನ್ನಿಧಿ ಅಥವಾ ಆಸತ್ತಿ ಗಣಗಳಲ್ಲಿಂತೋ ಆವರ್ತಗಳಿಗೂ ಆವಶ್ಯಕ. ಒಂದು ಗಣ ಮುಗಿದುಕೂಡಲೆ ಮುಂದಿನ ಆಘಾತ ಹೇಗೆ ಅಕ್ಷರವಿರಲಿ ಇಲ್ಲದಿರಲಿ ಬೀಳುತ್ತದೋ ಹಾಗೆಯೇ ಪಾದಪ್ರಥಮಾಘಾತವೂ ಬೀಳುತ್ತದೆ. ಹೀಗಾಗಿ ಎರಡನೆಯ ಪಾದಾದಿ 'ಖಗ' ಎಂಬುದರ ಪ್ರಥಮಾಕ್ಷರದ ಮೇಲೆ ಪ್ರಧಾನಗಣಾಘಾತವೂ, ಪಾದಪ್ರಥಮಾಘಾತವೂ, ಗಣ ಪರಿವೃತ್ತಿ ನಡೆದು ಉಪಗಣ ಸಿದ್ಧವಾಗಿರುವುದರಿಂದ ಉಪಗಣಾಘಾತವೂ ಬೀಳುತ್ತದೆ. ಒಟ್ಟಿಗೆ ಒಟ್ಟನಲ್ಲಿ ತಾಳವನ್ನು ಪಡೆದು ಗಣದ ಆರಂಭವಾಗಿ ಹುಸಿಯೆನ್ನಿಸುವುದಿಲ್ಲ. ಹುಸಿಯನ್ನಾಗಿಟ್ಟುಕೊಳ್ಳಬೇಕಾದರೆ 'ಖಗ' ಎನ್ನುವುದು ಪ್ಲುತದ ಮುಂದೆ, ಗಣದ ಅಂತ್ಯಾಂಶವಾಗಿ ಬರಬೇಕು. ಇಲ್ಲಿ ಮೊದಲಪಾದದ ಕೊನೆಯ ಗಣದ ಆಘಾತವಾದ ಮೇಲೆ ಅದು ಪ್ಲುತದಲ್ಲಿ ಮುಂದುವರಿದು ಕೊನೆಯಲ್ಲಿ ಹುಸಿಯನ್ನು ಒಳಗೊಂಡಿರಬೇಕು. 'ಮುಳುಗೆ' ಎಂದು ಅಂತ್ಯಾಕ್ಷರ ಗುರುವಾಗಿಸಿದರೆ 'ಖಗ'ಕ್ಕೆ ಗಣಾರಂಭದ ಸ್ಥಾನ ಲಭಿಸುವುದರಿಂದ 'ಮುಳುಗೆSS' ಎಂದು ಪ್ಲುತವಾಗಿಸಬೇಕು. ಆಗ ಇನ್ನೊಂದು ಗಣಕ್ಕೆ ಮುಂದುವರಿದು ಒಟ್ಟು ಎರಡು ಗಣಗಳಾಗುತ್ತವೆ:" ಮುS|SSSS|" ಎಂದು. ಈ ಎರಡನೆಯ, ಕಲ್ಪಿತಗಣದ ಅಂತ್ಯಾಂಶವಾಗಿ 'ಖಗ' ಸೇರಿದರೆ ಹುಸಿಯಾಗುತ್ತದೆ: "ಮುಳುಗೆS|SSಖಗ|' ಎಂದು. ಇಲ್ಲಿ ಪ್ರಥಮ ಪಾದಕ್ಕೆ ಐದು ಗುಣಗಳು ಏರ್ಪಟ್ಟು ಸಮತೋಲನ ತಪ್ಪಿ ಆವರ್ತದೋಷವಾಗುತ್ತದೆ. ಅದನ್ನು ಸರಿಗೊಳಿಸಬೇಕಾದರೆ ಹೀಗೆ ಮಾಡಬೇಕು:

ಹಗ] ಲೆಲ್ಲಾ | ಕಳೆಯಿತು | ಸೂರ್ಯನು | ಮುಳುಗೆS|
SSಖಗ] ಹಾರಿತು | ಗೂಡಿನ | ಒಳಗೆS |

ಇಲ್ಲಿ ದ್ವಿತೀಯ ಪಾದದ ಅಂತ್ಯಾಕ್ಷರದ ಬೆಲೆ ಹಿಂದಿನದಕ್ಕಿಂತ ಒಂದು ಗಣದಷ್ಟು ಕಡಮೆ ಪಡೆಯುತ್ತದೆ. ಪುನಃ ಮೂರನೇ ಪಾದಾದಿ ಹುಸಿ ಕಲ್ಪನೆಗೂ ಇದೇ ಕಷ್ಟ ಒದಗುತ್ತದೆ. ಆದರೆ, ಹುಸಿ ಕಲ್ಪಿಸಲೇಬೇಕೆಂಬ ಕಷ್ಟದ ನಿರ್ಬಂಧವೇನಿದೆ? ಗಣ ಪರಿವೃತ್ತಿಯನ್ನು ಹುಸಿಯನ್ನಾಗಿ ಭ್ರಮಿಸಲಾಗಿದೆಯಷ್ಟೆ. ಈ ಭ್ರಮಣ ಸಹಜವೂ ಹೌದು. ಮುಂದೆ ಅದನ್ನೇ ನೋಡುತ್ತೇವೆ ವಿವರವಾಗಿ. ಎರಡನೆಯ ಪಾದವಲ್ಲಿ ಹುಸಿ ಕಲ್ಪಿಸದಿರುವುದು ಸರಿ. ಆಗ ಅಂತ್ಯಾಕ್ಷರದ ಮುಂದೆ ವಿಲಂಬ ಒದಗಿ ಮೂರನೆಯ ಪಾದಾದಿಯ ಹುಸಿಗೆ ಅವಕಾಶವನ್ನು ಒದಗಿಸಿ ಕೊಡುವುದರಿಂದ ಮೂರನೆಯ ಪಾದಾದಿಯ 'ಜಗ' ಹುಸಿಯಾಗುತ್ತದೆ. ಇದೂ ಅನಿವಾರ್ಯ ಹುಸಿ. ಆದರೆ ನಾಲ್ಕನೆಯ ಪಾದಾದಿಯ 'ಖಗ' ಹುಸಿಯಾಗುವುದರಲ್ಲಿ ಹಿಂದೆ

---

32. ಪ್ರಥಮ ಪಾದಾದಿಯ ಹುಸಿ ಅನಿವಾರ್ಯ ಹುಸಿ.

ಹೇಳಿದ ಸಮಸ್ಯೆಯೇ ಎದುರಾಗುತ್ತದೆ. ಅದೇ ತೀರ್ಮಾನವನ್ನು ಇಟ್ಟುಕೊಳ್ಳ ಬೇಕಾಗುತ್ತದೆ.

ಹುಸಿಗಣಗಳಲ್ಲಿ ಎರಡು ವಿಧಗಳನ್ನು ಗಮನಿಸಬೇಕು. ಎಲ್ಲಿ ಹುಸಿಗಣವನ್ನು ಕಲ್ಪಿಸದಿದ್ದರೆ ಲಯ ಕೂಡಿ ಬರುವುದಿಲ್ಲವೋ ಅಲ್ಲಿ ಅನಿವಾರ್ಯವಾಗಿ ಹುಸಿಗಣವನ್ನು ಕಲ್ಪಿಸ ಲೇಬೇಕಾಗುತ್ತದೆ. ಇದಕ್ಕೆ **ಅನಿವಾರ್ಯ ಹುಸಿಗಣ**ವೆನ್ನಬಹುದು. ಇನ್ನು ಕೆಲವುಕಡೆ ಬೇಕಾದರೆ ಹುಸಿಗಣಗಳನ್ನು ಕಲ್ಪಿಸಬಹುದು, ಬೇಡವೆನಿಸಿದರೆ ಬಿಡಬಹುದು. ಇದರಿಂದ ಲಯಕ್ಕೆ ಹಾನಿಯೇನೂ ಇಲ್ಲ. ಇಂಥವಕ್ಕೆ ಐಚ್ಛಿಕ ಹುಸಿಗಣಗಳೆಂದು ಕರೆಯಬಹುದು. ಇಂಥ ಕಡೆಗಳಲ್ಲಿ ಹುಸಿಕಲ್ಪಿಸಿದರೆ ಅಥವಾ ಬಿಟ್ಟರೆ–ಈ ಎರಡೂ ಸಂದರ್ಭಗಳಲ್ಲಿ ಅರ್ಥದ ಮೇಲೆ ಬೀರುವ ಪ್ರಭಾವವೇನು ಎನ್ನುವುದನ್ನು, ಎಷ್ಟರಮಟ್ಟಿಗೆ ಎನ್ನುವುದನ್ನು ಪ್ರತ್ಯೇಕ ವಾಗಿಯೇ, ವಿವರವಾಗಿ ವಿವೇಚಿಸಬೇಕಾಗಿದೆ. ಇಲ್ಲಿ ಕೊಟ್ಟಿರುವ ಕನಿಷ್ಠ ಉದಾಹರಣೆಗಳು ಗರಿಷ್ಠ ಪ್ರಯೋಗಗಳಿಗೆ ದಿಕ್ಸೂಚಿಯಷ್ಟೆ. ಈ ಕೆಳಗಿನವು ಐಚ್ಛಿಕ ಹುಸಿಗೆ ಉದಾಹರಣೆಗಳು. ಇಲ್ಲಿ ಹುಸಿ ಬೇಕಾದರೆ ಇಟ್ಟುಕೊಳ್ಳಬಹುದು ಬೇಡವಾದರೆ ಬಿಡಬಹುದು.

೧. ಹಸಿ] ಹಾಲು ಕೂಡ ಬಿಸಿ ಎಂದು ಬಂದ ತಾ ಬಾಲಕೃಷ್ಣನಾಗಿ
ಕೆನೆ] ಕೆನೆಯು ಎಂದು ಮುಖಚಾಚಿನಿಂದ ಆ ತಾಯಿಕೆನ್ನೆಗಾಗಿ[33]

೨. ಸುಳಿಗೆಗಾರರದ ಕೇಳಲಿಲ್ಲ; ಎದೆ ಕರಗಲಿಲ್ಲ;
ಇ] ಇಟ್ಟಿರುವ ದೊಡ್ಡಿ ಕಟ್ಟಿರುವ ಬೇಲಿಗಳು ನಸುವು ಅಲುಗಲಿಲ್ಲ.[34]

೩. ಒಂದೆ ಕೊರಲಿನಲಿ ಕೂಗಿರಣ್ಣ ʻ ಓ
ಸುಳಿಗೆಯಾಗ ಸಾಕು
ಇದೊ] ಅಣ್ಣ ತಮ್ಮ; ಇದೊ ಅಕ್ಕತಂಗಿ; ಸಮ
ಭಾವ ಬೆಳೆಯಬೇಕು[35]

೪. ಈ] ನರಕಸಾಕು; ಆ ನರಕಬೇಕು ಅದ
ಕಾಗಿದುಡಿಯಬೇಕು
ಇಂ] ದಲ್ಲ ನಾಳೆ ಅದು ಬಂದೇ ಬರುವುದದ
ಕಾಗಿ ದುಡಿಯಬೇಕು.[36]

೫. ಪೂರ್ವ ಪ್ರಕೃತಿಯಾ ಮನೆಯು ಬೀಳುತಿದೆ ಕೊಚ್ಚಿಕೆಳಗೆ ಕುಸಿದು
ದು] ರ್ದಮ್ಯ ನಂತೆ ಅಕ್ಷುಬ್ಧ ಶಾಂತ ಇಹನಾತ ಮಿಂಚಮುಸೆದು.[37]

೬. ಪಾ] ತಾಳ ಖಾತದಜಾನದಲ್ಲು ಹೊತ್ತಿರಲಿ ದಿವ್ಯದೀಪ್ತಿ
ನರಕಯಾತನೆಯ ಜೀವದಲ್ಲಿ ತಾನಿರದೆ ದೇವಶಕ್ತಿ

---

33. ಸೂರ್ಯಪಾನ (ಗೋವತ್ಸಲೀಲೆ): ದ. ರಾ. ಬೇಂದ್ರೆ. ಪು ೩೫.
34. ಕಟ್ಟುವೆವು ನಾವು (ಸುಳಿಗೆಯೊಂಬಯಾಗ) ಗೋಪಾಲಕೃಷ್ಣ ಅಡಿಗ. ಪು ೨೦.
35. ಅದೇ ಪು. ೨೧. ದ್ವಿತೀಯ ಪಾದಾಂತ ವಿಲಂಬಕ್ಕೆ ಚತುರ್ಥ ಪಾದಾಂತ್ಯ ಪರ್ಯಾಯವಾಗ ಬೇಕಾದರೆ ತೃತೀಯ ಪಾದಾದಿಯಲ್ಲಿ ಹುಸಿ ಕಲ್ಪಿಸಬೇಕು. ಈ ಅಚ್ಚು ಕಟ್ಟಿನ ದೃಷ್ಟಿಯೂ ಕೆಲವೆಡೆ ನಿರ್ಧಾರಕಗಳಾಗಬಹುದು. ೫, ೬ನೇ ಉದಾಹರಣೆಗಳಲ್ಲೂ ಪರಿಶೀಲಿಸಿ ಹುಸಿ ಕಲ್ಪಿಸಿರುವ ಅಗತ್ಯ ಅತ್ಯವಶ್ಯತೆಯನ್ನು
36. ಅದೇ. ಪು. ೨೧
37. ಚೈತ್ಯಾಲಯ (ಅತಿಥಿ): ದ. ರಾ. ಬೇಂದ್ರೆ. ಪು. ೧೫.

ಮೂರುಕಾಲಕೂ ಮೀರಿ ದುಃಖಿಸದ ಸುಖವು ಭೂಮಿಗೆಂದೆ
ಅ] ಕ್ಷುಬ್ದವಾದ ಹದಗೆಡದ ಶಾಂತಿ ಮನವಗೆ ಬೇಡಬಂದೆ[38]

ಇಲ್ಲೆಲ್ಲ ಹಾಡುವವರ ಅಭಿರುಚಿಗೆ ತಕ್ಕಂತೆ ಹುಸಿಗಣವನ್ನು ಕಲ್ಪಿಸಿಕೊಳ್ಳಬಹುದಾಗಿದೆ; ಇಲ್ಲವೆ ಬಿಡಬಹುದಾಗಿದೆ. ಈ ಕೆಳಗೂ ಪ್ರಯೋಗದ ವಿಶೇಷವನ್ನು ನೋಡಿ—

ಎಲ್ಲ ಚೆಲುವಿಗೂ ಎಲ್ಲ ನಲುವಿಗೂ ನೀನಾಮವೆಯಾ | ಗಿರೆ—
ಈ] ಕುರುಡು ಜೀವ, ಮರುಳಾಗಿ ನಿನಗೆ, ನಿನ್ನತ್ತಲೆ ತಾಬಾ | ಗಿರೆ—
ಏನೆ ಮುಟ್ಟದರು ತಟ್ಟದರು ನಿನ್ನ ತುಟಿ ಮುದ್ದಿನ ಭಾ | ವನಾ—[39]
ಮೈ] ಪುಲಕಪುಲಕ ಅದು ಹರ್ಷಜನಕ, ಜೀವಾತ್ಮಗೆ ಅಮೃಜೀ | ವನಾ—

ಇಲ್ಲಿ ಮೊದಲ ಹಾಗೂ ಮೂರನೆಯ ಪಾದಗಳ ಅಂತ್ಯದಲ್ಲಿ '∪—' ವಿಲಂಬ ಗಣವಾಗಿ ಬಂದಿರುವುದು ಗಮನಾರ್ಹ. ಅದು ಎಂಟು ಮಾತ್ರೆಗಳನ್ನು ತೆಗೆದುಕೊಳ್ಳುತ್ತದೆ. ಅಂತ್ಯದಲ್ಲಿ ಈ ಬಗೆಯ ಗಣ ಬರುವ ಪ್ರಯೋಗ ಮಾತ್ರಾಲಯದಲ್ಲಿ ನಿಷ್ಣಾತನಾದ ಜಯದೇವನಲ್ಲೇ ಬರುತ್ತದೆ. ಗೀತಗೋವಿಂದ ಕಾವ್ಯದಿಂದ ತಾವು ಪ್ರಭಾವ ಹೊಂದಿರುವುದನ್ನು ಶ್ರೀ ಬೇಂದ್ರೆಯವರೇ ಒಂದೆಡೆ ಹೇಳಿದ್ದಾರೆ. ಅಕ್ಷರ ವೃತ್ತಗಳಲ್ಲೂ '∪—' ಅಂತ್ಯವಿಲ್ಲದಿಲ್ಲ.

ರತಿಗೃಹಜಘನೇ ವಿಪುಲಾಪಘನೇ ಮನಸಿಜ ಕನಕಾ | ಸನೇ
ಮಣಿಮಯರಸನಂ ತೋರಣಸನಂ ವಿಕಿರತಿ ಕೃತವಾ | ಸನೇ[40]

ಕನ್ನಡದ ಪ್ರಯೋಗದಲ್ಲಿ ಎರಡು ನಾಲ್ಕನೇ ಪಾದಗಳ ಅಂತ್ಯದಲ್ಲಿ '∪—' ರೂಪವೇ ಒದಗಬೇಕಾದರೆ ಹುಸಿಯನ್ನಿಟ್ಟುಕೊಳ್ಳಬೇಕು. ಇಲ್ಲದಿದ್ದರೆ 'ಭಾವನಾ' 'ಜೀವನಾ' ಎಂಬ ರೂಪಗಳೊದಗಿ '∪—' ಗಣದ ಸ್ವಾರಸ್ಯ ಇಲ್ಲವಾಗುತ್ತದೆ. ಹುಸಿ ಕಲ್ಪನೆಯಲ್ಲಿ ಪರಿಣಾಮದ ವಿವಕ್ಷೆಯೂ ಇರಬೇಕಾಗುತ್ತದೆ.

ಅನಿವಾರ್ಯ ಹುಸಿಗೆ ಕೆಲವು ಉದಾಹರಣೆಗಳನ್ನು ನೋಡಬಹುದು.

೧. ಅ] ನಾಥೆ ಇವಳಿನ್ನೊಬ್ಬ
ಳೀಜನ್ಮ ರೋಸಿ.[41]

೨. ಹಗ] ಲೆಲ್ಲಾ ಕಳೆಯಿತು ಸೂರ್ಯನು ಮುಳುಗೀ[42]

೩. ಸುವ್ವೀ ಸುವ್ವಲಾಲಿ ಸುವ್ವಲಾ | ಲೀ—
ಈರವ್ವ ಮಲಕವ್ವ ಸುವ್ವಲಾ | ಲೀ—
ಅವರು] ನೀರಿಗೆ ಹೋದಾರೆ ಸುವ್ವಲಾ | ಲೀ—
ಅವಳು] ಈರವ್ವ ಬಂದಾಳೆ ಸುವ್ವಲಾ | ಲೀ[43]

೪. ಆರುಜನ ಗೆಣತೀರು ಸುವ್ವಲಾಲಿ—
ಅವರು] ಉಯ್ಯಾಲೆ ನಾಡುತಾರೆ ಸುವ್ವಲಾಲಿ[44]

---

38. ಅದೇ (ಅಗ್ನಿರಾಜ) ಪು. ೮.
39, ಮುಗಿಲಮಲ್ಲಿಗೆ (ಮಹಾಲಕ್ಷ್ಮಿ) ದ. ರಾ. ಬೇಂದ್ರೆ. ಪು. ೭
40. ಗೀತ ಗೋವಿಂದ ಕಾವ್ಯಮ್. ನಿರ್ಣಯಸಾಗರ ಪ್ರೆಸ್. ೧೯೪೯. ೯ನೇ ಸಂಸ್ಕರಣ. ೭-೫. ಪು. ೧೨೬.
41, 42. ಹದಿಮೂರನೇ ಪಾದಸೂಚಿ ನೋಡಿ.
43. ಜಾನಪದ ಕಥನ ಗೀತೆಗಳು: ಕ. ರಾ. ಕೃ. ಪು ೫೭
44, ಅದೇ. ಪು. ೨೩೨

೫. ಚಂದನ ಚರ್ಚಿತ ನೀಲಕಲೇವರ ಪೀತವಸನವನಮಾಲೀ
ಕೇಲಿಚಲನ್ಮಣೀ ಕುಂಡಲಮಂಡಿತ ಗಂಡಯುಗಸ್ಮಿತಶಾಲೀ
ಹರಿೀಹ | ಮುಗ್ಧವ | ಧೂನಿಕ | ರೇ—
ವಿ] ಲಾಸಿನಿ ವಿಲಸತಿ ಕೇಲಿಪ | ರೇ—[45]

ಶ್ರೀ ದ. ರಾ. ಬೇಂದ್ರೆಯವರ ಕವನಗಳಲ್ಲಿ ಈ ಹುಸಿಯ ವಿಲಾಸ ವೈಭವ ಬಹು ಶೋಭಿಸುತ್ತಿದೆ. ಎರಡು ಪ್ರಯೋಗಗಳು ಸಾಕು.

೧, ಭಕ್ತನಲ್ಲ ರಾ | ಗಿ—ವಿ | ರಾಗಿs
ಭಗವಂತನಭೋ | ಗಿ—ಅ | ಹೋ ಹೋ
ಮಹಾವಿಶ್ವಯೋ | ಗೀ—
ಅಂತರಂಗವನೆ ನಾಟ್ಯ ರಂಗವನು ಮಾಡಿದ ನಟ ಜೋಗಿ
ಸಮತೂಕದ ತುದಿಯಲ್ಲಿ ತೂಗಿ ಕೋ ನೀ ಪ್ರೇಕ್ಷಕನಾಗಿ
ಆಹಾರಸಿಕ ಜಾ | ಣಾ—ಎಲ್ಲಿಯು | ಹುಸಿದುಃಖವಕಾಣಾ[46]

೨. ಅಹ] ಹಹಾ ಬಂತು ಬಂತು ಶ್ರಾ| ವಣಾ ಜಗದಜೀ | ವನಾಕರುಳ ಹೂ
ವಣಾ ಹೊರಳಿ ಬಂ | ತೂss
ಹಸಿ] ರಾಗಿ ಪಸರಿಸಿಂ | ತು—
ಇದು] ನೆಲದ ಗರ್ಭದಾ | ಹೊನ್ನು
ನೀಲಿನೀ | ರನ್ನು ಕುಡಿದು ಹಸಿ | ರನ್ನು
ಉಗುಳಿತಿಂ | ತುsss
ಜಗ] ನೋಡತಾದ ನಿಂ | ತು—
ಶ್ರಾ] ವಣಕ ತಪ್ಪಿತs | ಗ್ಯಾನಾ ಎಲ್ಲಿದೋ | ಧ್ಯಾನಾ ಹುಚ್ಚ ಆ | ಗ್ಯಾನ
ಮದೋನ್ಮ | ತ್ತಾ—
ಅಂ] ಬಿಕಾ ತನಯುದ | ತ್ತಾ—[47]

ಈ ಮೇಲಿನ ಪ್ರಯೋಗಗಳಲ್ಲಿ ಗಮನಿಸಿದಂತೆ ಹುಸಿಗಣದ ಮುಂದೆ ಒಂದು ಗುರು, ಲಘುಗಳ, ಇಲ್ಲವೇ ಲಗ (೧-) ಬರಬಹುದು. ಗುರುವೇ ನಿಯತವಾಗಿ ಬರಬೇಕೆಂಬುದೇನೂ ಇಲ್ಲ. ಆದುದರಿಂದ ಹುಸಿಗಣವು ತನ್ನ ಮುಂದಿರುವ ಒಟ್ಟು ಗತಿಯನ್ನು ಲಕ್ಷಿಸುತ್ತದೆಯೇ ವಿನಾ ತನಗೆ ಎದುರಾಗುವ ಲಘುಗುರುಗಳಿಂದ ಬಾಧಿತವಾಗುವುದಿಲ್ಲ.

---

45. ಗೀತಗೋವಿಂದ ಕಾವ್ಯ ಪರ್' ಪು ೪-೨. ಈ ಉದಾಹರಣೆಗಳ ಜೊತೆಗೆ "ನಿಮ್ಮ ರಟ್ಟೆ ಹೊಟ್ಟೆ ಮಾಡಿ..", 'ಛತ್ತ ಛತ್ತ—" "ಪುರ್‌ಸೆಸಿಕಲ್ ಜಬ್—", "ಮುನಿಸಪಜ—" ಮತ್ತು "ಮರುಗಿ ಆಗೆಚ್ಚತ್ತಿರಿ—" ಮೊದಲಾದ ಆರು ಉದಾಹರಣೆಗಳನ್ನು ನೋಡಬಹುದು "ಇಕ್ ದಿನ್ ರಘುನಾಯಕ—" ಎಂಬ ಉದಾಹರಣೆಯಲ್ಲಿ ಐಚ್ಛಿಕ ಹುಸಿ ಎಂಬುದನ್ನು ಗಮನಿಸಿ.

46. ಸೂರ್ಯಪಾನ (ಭಕ್ತನಲ್ಲ ರಾಗಿs ವಿರಾಗಿs) ದ. ರಾ. ಬೇಂದ್ರೆ ಪು. ೩೮.

47. ಸೂರ್ಯಪಾನ (ಪ್ರತಿಪರ್ವದಂತೆ ಬಂತು ಶ್ರಾವಣಾ) ದ. ರಾ. ಬೇಂದ್ರೆ. ಪು. ೧೧೩-೫, ಇಲ್ಲಿ 'ಅಹ', 'ಇದು', 'ಶ್ರಾ'-ಇವು ಐಚ್ಛಿಕ ಗಣಗಳು. ಉಳಿದವು ಅನಿವಾರ್ಯ ಹುಸಿಗಣಗಳು. ಮೊದಲಿನವು ಅಚ್ಚುಕಟ್ಟಿನ ದೃಷ್ಟಿಯಿಂದ ಹುಸಿಯಾಗಿರುವುದೇ ಸರಿ.

ಕೆಲವು ಪ್ರಯೋಗಗಳಲ್ಲಿ ಹುಸಿಗಣದಂತೆ ತೋರಿಯೂ ಹುಸಿಯಾಗಿಲ್ಲದಿರುವುದುಂಟು. ಇವಕ್ಕೆ ಹುಸಿಗಣಭ್ರಮಣವೆನ್ನಬಹುದು. ಇವು ವಸ್ತುತಃ ಹುಸಿಯಲ್ಲ; ಇಂಥೆಡೆಗಳಲ್ಲೆಲ್ಲ ಗಣಪರಿವೃತ್ತಿ ಸಾಮಾನ್ಯವಾಗಿ ನಡೆದಿರುತ್ತದೆ.

೧. ಅದಜ ಪೂಜವೊಬಲ ವಿಶಾಳ ಕನಕ ಕೃತಕ ಗಿರಿಗ | ಳಿಂ
ಫ] ಳಪ್ರಕೀರ್ಣ ತರುಗಳಿಂ

ಇಲ್ಲಿ 'ಫ' ಹುಸಿಯಲ್ಲ; ಹುಸಿಯಂತೆ ತೋರುತ್ತದಷ್ಟೆ. ಏಕೆಂದರೆ 'ಫ' ಹಿಂದಿನ ಗಣಕ್ಕೆ ಸೇರಿದಾಗ 'ಳಿಂಫ' ಎಂಬ ಗಣರೂಪವೇ ಒದಗುತ್ತದೆ. 'ಫ' ಕಾರದ ಹಿಂದೆ ಪ್ಲುತವಿಲ್ಲ; ವಿಲಂಬವಿಲ್ಲ. 'ಳಿಂ' ಎಂಬುದೇ ಗಣಕಾಲಕ್ಕೆ ವಿಲಂಬಗೊಂಡರೂ ಮುಂದಿನ ಗಣಾಘಾತ 'ಫ' ಕಾರಕ್ಕೆ ಬೀಳುವುದರಿಂದ ಹುಸಿಯಾಗದು; ಜೊತೆಗೆ ಆವರ್ತ ದೋಷವೂ,ಗತಿನಿರೊಧವೂ ಉಂಟಾಗುತ್ತದೆ. 'ಳಿಂ' ಎಂಬ ಅಕ್ಷರಕ್ಕೆ ೫ ಮಾತ್ರೆಗಳ ಬೆಲೆಕೊಟ್ಟ ೬ ನೆಯ ಮಾತ್ರೆಯ ಸ್ಥಾನದಲ್ಲಿ 'ಫ' ಕಾರಕ್ಕೆ ಅವಕಾಶ ವಿತ್ತಾಗ ಮಾತ್ರ 'ಫ' ಹುಸಿಯಾದರೂ ಗಣಸಂಖ್ಯೆ ವ್ಯತ್ಯಯವಾಗಿ ಸಮತೋಲ ತಪ್ಪಿ ಆವರ್ತ ದೋಷವೊದಗುತ್ತದೆ. ಇಲ್ಲಿ ನಡೆದಿರುವುದು ಗಣಪರಿವೃತ್ತಿ, ಅಷ್ಟೆ. ಅದನ್ನು ಹೀಗೆ ತೋರಬಹುದು. ಆರು ಮಾತ್ರೆಗಳ ಲಯವೆಂದು ಇಟ್ಟುಕೊಳ್ಳೋಣ.

೧. ಅದಜ ಪೂಜವೊ | ಬಲವಿಶಾಳ | ಕನಕಕೃತಕ | ಗಿರಿಗಳಿಂ ಫ |
ಳ ಪ್ರಕೀರ್ಣ ತರುಗಳಿಂs |[48]

ನಾಲ್ಕನೆಯ ಗಣದಲ್ಲಿ ೬ ಮಾತ್ರೆಗಳಿಗೆ ೫-೧ ರಂತೆ ಯತಿ ಬಂದಿವೆ, ವಿಭಜಿತವಾಗಿದೆ ಎನ್ನಬಹುದು. ಇದೇ ಯತಿಪ್ರಕಾರ ಎರಡು, ಐದನೇ ಗಣಗಳಲ್ಲೂ ಬಂದಿವೆ. ಹೀಗಲ್ಲದೆ ಪರಿವೃತ್ತಿಯನ್ನೆಲ್ಲ ಹುಸಿ ಎನ್ನುವುದಾದರೆ 'ಫ' ಹೇಗೆ, ಎಷ್ಟರಮಟ್ಟಿಗೆ ಹುಸಿ ಎನ್ನಲು ಸಾಧ್ಯವೋ ಹಾಗೆ, ಅಷ್ಟರ ಮಟ್ಟಿಗೆ ಎರಡನೇ ಗಣದ 'ವಿ' ಐದನೇ ಗಣದ 'ಪ್ರ'ಗಳೂ ಕೂಡ ಹುಸಿಎನ್ನಬೇಕಾದೀತು. ಇದು ಅವ್ಯವಹಾರ. ಆದುದರಿಂದ ಈ ಸೂಕ್ಷ್ಮ ವ್ಯತ್ಯಾಸವನ್ನು, ಮಿಗಿಲಾಗಿ ಪ್ರಧಾನವಾಗಿ ಇರುವ ಹುಸಿಗಣದ ವಿಶೇಷವನ್ನು ಎಚ್ಚರಿಕೆಯಿಂದ ಗಮನಿಸಬೇಕು. ಇಲ್ಲದಿದ್ದರೆ ಗಣಪರಿವೃತ್ತಿಗಳೆಲ್ಲವೂ ಹುಸಿಯಾಗಿ ಬಿಡಬಹುದು! ಹಾಗಾಗುವುದಿಲ್ಲ; ಆಗಲೂ ಬಾರದು. ಹುಸಿಯ ಹಿಂದೆ ಗುರುವಿಗಿಂತ ಹೆಚ್ಚಿನ ವಿಲಂಬ ಅಗತ್ಯ.

೨. ಹಗ]ಲೆಲ್ಲಾ | ಕಳೆಯಿತು | ಸೂರ್ಯನು | ಮುಳುಗೆ |
ಖಗ ಹಾ | ರಿತು ಗೂ | ಡಿನ ಒಳ | ಗೆ[49]

ಇಲ್ಲೂ 'ಖಗ' ಹುಸಿಯಾಗದು. ಹುಸಿಯಂತೆ ತೋರಲು ಪರಿವೃತ್ತಿಯೇ ಕಾರಣ. ನಾಲ್ಕು ಮಾತ್ರೆಗಳ ಮೂರು ಗಣಗಳಿಗೆ ೨-೪; ೪-೨ ರ ಪರಿವೃತ್ತಿ ಬಂದಿದೆ ಅಷ್ಟೆ.

೩. ಯಾರಣ್ಣ ನೀ ಬಿಡುಗಣ್ಣನೇ
ಎದೆಗೆಳೆಯ ಕುಳಿತಿಹೆ ತಣ್ಣನೇ[50]

---

48. ಪಂಪಭಾರತ. ೧-೫೮.
49. ಸಮಾಲೋಕದಲ್ಲಿ ಉದಾಹೃತ. ಇಲ್ಲಿ 'ಖಗ' ವನ್ನು ಹುಸಿಯೆಂದು ಹೇಳಿದೆ.
50. ಚೈತ್ಯಾಲಯ (ಸಾಕ್ಷಿ ಮತ್ತು ಚಕ್ರ) : ದ. ರಾ. ಬೇಂದ್ರೆ ಪು. ೨೫.

ಇಲ್ಲಿ ಆರಂಭದ "ಯಾ" ಐಚ್ಛಿಕ ಹುಸಿ. ದ್ವಿತೀಯ ಪಾದಾದಿಯ 'ಎದೆ' ಹುಸಿಯಂತೆ ತೋರಿದರೂ ಹುಸಿಯಲ್ಲ. ಏಕೆಂದರೆ ಅದರ ಹಿಂದೆ ಪ್ಲುತವಿಲ್ಲದೆ ಗಣವೇ ಆಗುತ್ತದೆ. ಎರಡು ವಿಧಗಳಲ್ಲಿ ತೋರಬಹುದು. ಮೊದಲನೆಯ ವಿಭಜನೆ ಸಹಜ. ಅಲ್ಲೂ, 'ಎದೆ' ಹುಸಿಯಲ್ಲ.

(ಅ) ಯಾ] ರಣ್ಣನೀ ಬಿಡು | ಗಣ್ಣನೇ ಎದೆ | ಗೆಳೆಯ ಕುಳಿತಿಹೆ | ತಣ್ಣನೇ—|
(ಆ) ಯಾರಣ್ಣ ನೀ | ಬಿಡುಗಣ್ಣನೇ | ಎದೆಗೆಳೆಯ ಕುಳಿ | ತಿಹೆ ತಣ್ಣನೇ |

೪. ಕನ್ನಡ ನಾಡಿನ | ಕನ್ನಡ ಜನರಿಗೆ | ಕನ್ನಡ ಭಾಷೆಯು |
ಮರೆತೋಯ್ತು ವರ |
ಕನ್ನಡ ಇಂಗ್ಲಿಷ್ | ಬೆರೆದೋಯ್ತು ಘನ | ಹೊನ್ನಿನ ದೇಶವು |
ಮಣ್ಣಾಯ್ತು—|
ತಿನ್ನಲು ಮನೆಯೊಳು | ಸೊನ್ನೆಗಳಾದರು | ಉನ್ನತ ಶೋಕಿಯು |
ಬಲವಾಯ್ತು—|[51]

ಇಲ್ಲೂ ಕೂಡ 'ವರ', 'ಘನ' ಎಂಬವು ಹುಸಿಯಲ್ಲ ಗಣಪರಿವೃತ್ತಿಯ ಒಂದು ಬಗೆ.

ಸಾಮಾನ್ಯವಾಗಿ ಹುಸಿಗಣವು ಒಂದು ಪಾದದ ಅಂತ್ಯದಲ್ಲಿ ಪ್ಲುತದ ಅನಂತರ ಅಥವಾ ವಿಲಂಬಯತಿಯ ಮುಂದೆ ಆ ಗಣದ ಅಂತ್ಯಾಂಶವಾಗಿ ಬರುವುದಿದ್ದು ಆ ಗಣಾಂಶವನ್ನು ಪ್ರತಿನಿಧಿಸುವ ಶಬ್ದವು ತನ್ನ ಮುಂದಿನ ಅಂದರೆ ಅನಂತರದ ಪಾದದ ಪ್ರಥಮಗಣದ ಶಬ್ದಕ್ಕೆ ಅರ್ಥ ಹೊಂದುವಂತೆ ಜೋಡಿಸಲ್ಪಡುವ ರೂಢಿಯೇ ಈ ಭ್ರಮೆಗೆ ಕಾರಣವಾಗಿರಬಹುದು. ಆವರ್ತ ಬದ್ಧ ಹುಸಿಗಣಗಳು ಬರುವಾಗಲೆಲ್ಲ ಗಣವೊಂದು ಆರಂಭವಾಗಿ, ನಿಂತು, ಇಲ್ಲವೆ ಸ್ವರ ವಿಲಂಬವಾಗಿ ಮತ್ತೆ ಅಕ್ಷರ ಗ್ರಹಣಗೈದು ಮುಂದಿನಗಣದ ಆಘಾತವನ್ನು ತಲುಪುತ್ತದೆ.

ಸಂಯುಕ್ತ ಗಣಗಳು ಬಂಧದಲ್ಲಿ ಪ್ರಯುಕ್ತವಾದಾಗ ಅದರ ಒಂದು ಭಾಗವೇ ಹುಸಿಗಣವಾಗಬಹುದು. ಉದಾಹರಣೆಗೆ ೮ ಮಾತ್ರೆಗಳ ಗಣ ಎರಡು ನಾಲ್ಕು ಮಾತ್ರೆಗಳಿಂದ ಆದುದು. ಅದರಲ್ಲಿ ಒಳವಿಭಜನೆ ಸಾಧ್ಯವಷ್ಟೆ. ಆ ವಿಭಜಿತ ಭಾಗಗಳಲ್ಲಿ ಅಂತ್ಯಾಂಶ ಹುಸಿಯಾಗಬಹುದು.

(ಅ) |—ss—ᴗ ᴗ|
(ಆ) |—s—ᴗ ᴗ ᴗ |
(ಇ) |— —s —ᴗ |
ಈ —| s — ᴗ — ᴗ |

ಹೀಗೆಲ್ಲ ಹುಸಿ ಉಂಟಾಗಬಲ್ಲುದು. ಒಟ್ಟಿನಲ್ಲಿ ಹುಸಿಗೆ ಪ್ರಧಾನಾಘಾತ ಬೀಳಬಾರದು.

ಮುಖ್ಯಾಂಶಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು :-

೧. ಪದ್ಯದ ಪ್ರಥಮಪಾದದ ಪ್ರಥಮಗಣದ ಹಿಂದಿರುವ ಹುಸಿಯು ತಾಳಕ್ಕೆ ಸೇರುವುದಿಲ್ಲ. ಇದಕ್ಕೆ ಆವರ್ತ ಪೂರ್ವ ಹುಸಿಎನ್ನಬಹುದು. ಕೀರ್ತನೆಗಳಲ್ಲಿ ಪಲ್ಲವಿಯನ್ನು ಪುನರುಚ್ಚರಿಸುವಂತೆ ಪುನಃ ಹೇಳಿದರೆ ಅದೂ ಆವರ್ತ ಬದ್ಧವಾಗುತ್ತದೆ.

---

51. ಲಾವಣಿ ಜಯಭೇರಿ (ಸಪರಿಶಿ ಲಾವಣಿ): ಲಾವಣಿ ವಿದ್ವಾನ್ ತುರಾಬಿರುದಾರ್ ಬಿ. ನೀಲಕಂಠಯ್ಯ, ಪು. ೩.

೨. ಆವರ್ತ ಪೂರ್ವ ಹುಸಿಯೊಂದಲ್ಲದೆ ಅನಂತರ ಬರುವುವೆಲ್ಲ ತಾಳಕ್ಕೆ ಒಳಪಟ್ಟಿರುತ್ತವೆ. ಆದುದರಿಂದ ಇವನ್ನು ಆವರ್ತಬದ್ಧ ಹುಸಿಗಣಗಳೆನ್ನಬಹುದು.

೩. ಆವರ್ತ ಬದ್ಧ ಹುಸಿಗಣಗಳು ಆವರ್ತ ಹಾಗೂ ಗತಿಯದೋಷಕ್ಕೆ ಕಾರಣವಾಗಬಾರದು.

೪. ಆವರ್ತ ಬದ್ಧ ಹುಸಿ ಪಾದದ ಪರಿಧಿಯಲ್ಲಿ ಎಲ್ಲೇ ಬಂದರೂ ಅದು ತನ್ನ ಹಿಂದಿನ ಗಣಕ್ಕೆ ಸೇರಿರುತ್ತದೆ.

೫. ಆವರ್ತಬದ್ಧ ಹುಸಿಗಣದ ಹಿಂದೆ ಪ್ಲುತ ಹಾಗೂ ವಿಲಂಬಯತಿ ಇರುತ್ತದೆ.

೬. ಆವರ್ತಬದ್ಧ ಹುಸಿ ಪ್ರಧಾನ ಆಘಾತವನ್ನು ಪಡೆಯದ, ಗಣದ ಅಂತ್ಯಾಂಶ ವಾಗಿರುತ್ತದೆ.

೭. ಎಲ್ಲಿ ಹುಸಿ ಕಲ್ಪಿಸದಿದ್ದರೆ ಲಯ ಕೂಡಿ ಬರುವುದಿಲ್ಲವೋ ಅಲ್ಲಿ ಕಲ್ಪಿಸಲೇ ಬೇಕಾದ ಹುಸಿಗಣಗಳಿಗೆ ಅನಿವಾರ್ಯ ಹುಸಿಎನ್ನಬಹುದು.

೮. ಹುಸಿಗಣಗಳನ್ನು ಬೇಕಾದರೆ ಕಲ್ಪಿಸುವ, ಬೇಡವಾದರೆ ಬಿಡುವ ಅವಕಾಶವಿದ್ದು ಅಂಥ ಕಡೆಗಳಲ್ಲಿ ಕಲ್ಪಿಸುವ ಹುಸಿಗಣಗಳಿಗೆ ಐಚ್ಛಿಕ ಹುಸಿಎನ್ನಬಹುದು.

೯. ಐಚ್ಛಿಕ ಹುಸಿಯನ್ನು ಕಲ್ಪಿಸುವಾಗ ಪರಿಣಾಮದ ವಿವಕ್ಷೆ ಇದ್ದರೆ ಚೆನ್ನ.

೧೦. ಹುಸಿಗಣ ತನ್ನ ಮುಂದಿರುವ ಗತಿಯನ್ನು ಲಕ್ಷಿಸುತ್ತದೆಯೇ ವಿನಾ ತನ್ನ ಮುಂದಿನ ಲಘುಗುರುಗಳ ಸ್ವರೂಪವನ್ನಲ್ಲ. ಹುಸಿಯಿಂದ ಗತಿಬಾಧಿತವಾಗಬಾರದು. ಒಂದು ವೇಳೆ ಹುಸಿಯಿಲ್ಲದಿದ್ದರೆ ಗತಿಯಲ್ಲಿ ಸಾಗುವಂತೆ ಹುಸಿಇರುವಾಗಲೂ ಗಣಗಳಿರಬೇಕು.

೧೧. ಗಣಪರಿವೃತ್ತಿಯು ಒಂದು ಬಗೆ ಹುಸಿಗಣದಂತೆ ತೋರಿಬಂದರೆ ಹುಸಿಗಣ ಭ್ರಮಣವೆನ್ನಬಹುದು. ಇವು ಹುಸಿಯಲ್ಲ.

೧೨. ಸಂಯುಕ್ತಗಣದ ಗತಿಯಲ್ಲಿ ವಿಲಂಬದ ಮುಂದೆ ಹುಸಿಗಣ ಬರಬಹುದು. ಇದು ಸಂಯುಕ್ತಗಣಕ್ಕೆ ಪರ್ಯಾಯವಾಗಿರುವ ಪರಿವೃತ್ತಿಗಳಲ್ಲಿ ಒಂದು ಭಾಗವಾಗಿ ರಬಹುದು.

೧೩. ಆವರ್ತ ಬದ್ಧ ಹಾಗೂ ಪೂರ್ವ ಹುಸಿಗಳು ಸಂಬಂಧಪಟ್ಟ ಪದ್ಯ ಯಾವ ಜಾತಿಗೆ ಸೇರಿದುದೋ ಆ ಜಾತಿಯ ಗಣದ ಅಥವಾ ಪರಿವೃತ್ತಿಯ ಒಂದು ಅಂಶವಾಗಿರುತ್ತದೆ.

೧೪. ಪ್ರಧಾನ ಲಯದ ಅಂತರ್ಯದಲ್ಲಿ ಪರಿವೃತ್ತಿಯಿಂದ ಉಂಟಾಗುವ ಅನ್ಯಲಯದ ಗಣಗಳಲ್ಲೂ ಹುಸಿಬರಬಹುದು. ಎಂದರೆ ೪ ಮಾತ್ರೆಗಳ ಲಯದ ಬಂಧದಲ್ಲಿ ಮೂರು ಗಣಗಳಿಗೆ ಪರ್ಯಾಯವಾಗಿ ಬರುವ ೬ ಮಾತ್ರೆಗಳ ಎರಡು ಪರಿವೃತ್ತ ಗಣಗಳಲ್ಲಿ ಅದಕ್ಕೆ ತಕ್ಕಂತೆ ಹುಸಿಬರಬಹುದು.

## ಪರಿಶಿಷ್ಟ

ಆಂಗ್ಲ ಛಂದಸ್ಸಿನಲ್ಲಿ ಹುಸಿಯೇ ವಿಶೇಷವೆಂದು ತೋರುತ್ತದೆ.*

When] Spring | with dewy | fingers | Cold
Re] turns to | deck their | hallowed | mould
She] there shall | dress a | sweeter | sod
Then] Fancy's | feet have | ever | trod.

ಇಲ್ಲಿ ಆರಂಭದವು ಹುಸಿಗಣಗಳು. ಅಂತ್ಯದವು ಮೀಸಲು ಗುರು. ಕಾಲನಿರ್ಧಾರ ಸೂತ್ರ ಹೀಗೆ:—

(ಅ) ಗಣದ ಕಾಲ ಪ್ರಧಾನಾಘಾತದಿಂದ ಪ್ಲುತಾಕ್ಷರದವರೆಗಿನ ಅಕ್ಷರಗಳ ಬೆಲೆ
ಪ್ಲುತಾಕ್ಷರದ ಕಾಲ ಹುಸಿಗಣದ ಕಾಲ.

---

* ಈ ಪ್ರಯೋಗ ಡಾ॥ ಡಿ. ಎಸ್. ಕರ್ಕಿ ಅವರಿಂದ ಉದಾಹೃತ. ಕ. ಛಂ. ವಿ. ಪು ೪೦

# ಭಾಷಾವಿಜ್ಞಾನದ ಪಾರಿಭಾಷಿಕ ಪದಗಳು

ಲೇಖಕರು : ಹಂಪ. ನಾಗರಾಜಯ್ಯ

ಇಂದು ಭಾಷಾ ವಿಜ್ಞಾನದ (Linguistics) ಪ್ರಮುಖ ವಿಭಾಗಗಳಾದ ವ್ಯಾಕರಣ (Grammar), ಧ್ವನಿವಿಜ್ಞಾನ (Phonetics), ಪದಶಾಸ್ತ್ರ (Morphology), ಶಬ್ದಾರ್ಥಶಾಸ್ತ್ರ (Semantics) - ಮೊದಲಾದ ಹಲವು ಪ್ರತ್ಯೇಕ ಕ್ಷೇತ್ರಗಳಲ್ಲಿ ಅಗಾಧವಾದ ಪ್ರಗತಿ ಸಾಧಿತವಾಗಿದೆ. ಭಾಷಾ ವಿಜ್ಞಾನದ ಬೆಳವಣಿಗೆಯನ್ನು ನಿರೂಪಿಸುವ ಹತ್ತಾರು, ನೂರಾರು ಗ್ರಂಥಗಳು ಫ್ರೆಂಚ್, ಜರ್ಮನ್, ಇಂಗ್ಲಿಷ್, ರಷ್ಯನ್-ಮೊದಲಾದ ಪಾಶ್ಚಾತ್ಯ ಭಾಷೆಗಳಲ್ಲಿ ರಚಿತವಾಗಿವೆ. ಭಾರತೀಯ ಭಾಷೆಗಳಲ್ಲೂ ಈಗೀಗ ಪ್ರಾರಂಭದ ಪ್ರಯತ್ನಗಳು ನಡೆಯುತ್ತಿವೆ; ಹಿಂದಿ ಭಾಷೆಯಲ್ಲಿ ಮೂರು ನಾಲ್ಕು ಒಳ್ಳೆಯ ಹೊತ್ತಗೆಗಳು ಹೊರಬಂದಿವೆ; ಕನ್ನಡದಲ್ಲಿ ಇನ್ನು ಮುಂದಾದರೂ ಬರಬೇಕಾಗಿದೆ, ಬರುವ ಮುನ್ಸೂಚನೆಗಳು ಕಾಣುತ್ತಿವೆ.

ದೇಶೀಯ ಭಾಷೆಗಳಲ್ಲಿ ಭಾಷಾವಿಜ್ಞಾನದ ವಿವರಣೆ ನೀಡಲು ಕೆಲವು ಅಡ್ಡಿಗಳೂ, ಇವೆ. ನಮ್ಮ ಕನ್ನಡ ಭಾಷೆಯನ್ನೇ ದೃಷ್ಟಿಯಲ್ಲಿ ಇಟ್ಟುಕೊಂಡು ಹೇಳುವುದಾದರೆ, ಇಂಗ್ಲಿಷ್ ಗ್ರಂಥಗಳಲ್ಲಿಯೇ ಅಡಕವಾಗಿರುವ ಈ ಶಾಸ್ತ್ರದ ವಿಷಯಗಳನ್ನು ಅರ್ಥಮಾಡಿಕೊಳ್ಳಲೂ ಅಥವಾ ಅನುವಾದ ಮಾಡಲೂ ಬಹುಮಟ್ಟಿಗೆ ದೊಡ್ಡ ತೊಡಕಾಗಿ ಕಾಣಿಸುವುದು ಶಾಸ್ತ್ರ ಗ್ರಂಥಗಳಲ್ಲಿ ಮೇಲಿಂದಮೇಲೆ ಬರುವ ಭಾಷಾವಿಜ್ಞಾನದ ವಿವಿಧ ಶಾಖೆಗಳಿಗೆ ಸಂಬಂಧಪಟ್ಟ ಪಾರಿಭಾಷಿಕ ಪದಪುಂಜಗಳು. ಅಂಥಪದಗಳ ಅನುವಾದ - ಪದಕೋಶವನ್ನು ಸಿದ್ಧಪಡಿಸುವ ನಮ್ರ ಪ್ರಯತ್ನವೇ ಈ ಲೇಖನ. ಇಲ್ಲಿ ಸುಮಾರು ಏಳುನೂರು ಪದಗಳಿಗಿಂತಲೂ ಹೆಚ್ಚಿನ ಪದಗಳನ್ನು ಅಳವಡಿಸಿದೆ, ಇಂಗ್ಲಿಷಿನಿಂದ ಅನುವಾದಿಸಿವೆ. ವ್ಯಾಕರಣ ಹಾಗು ಸ್ವನಮೀಮಾಂಸೆ (Phonology), ಧ್ವನಿಯ ಉಚ್ಚಾರಣಾಂಗಗಳಿಗೆ ಕನ್ನಡ ಪದಗಳನ್ನೇ ಕೊಡದೆ ಆದಷ್ಟೂ ಸಂಸ್ಕೃತ ಪದಪುಂಜಗಳನ್ನೇ ಬಳಸಿದೆ. ಬಿ. ಎಂ. ಶ್ರೀ ಯವರಿಂದ ತೀ. ನಂ. ಶ್ರೀ ಯವರ ವರೆಗೆ ಎಲ್ಲ ಹಿರಿಯರ ಲೇಖನಗಳನ್ನೂ, ಇಂಗ್ಲಿಷ್ ಕನ್ನಡ, ಸಂಸ್ಕೃತ, ಹಿಂದಿ-ಭಾಷೆಗಳ ಕೋಶಗಳನ್ನು ಪರಿಶೀಲಿಸಿ ಈ ಪಟ್ಟಿಯನ್ನು ಸಿದ್ಧಪಡಿಸಿದೆ. ಪಾರಿಭಾಷಿಕ ಪದಗಳನ್ನು ಇಂಗ್ಲಿಷ್ ವರ್ಣಮಾಲೆಯ ಅಕಾರಾದಿಯಾಗಿ ಕೊಟ್ಟಿದೆ. ಭಾಷಾ ಶಾಸ್ತ್ರದ ವ್ಯಾಸಂಗದಲ್ಲಿ ನಿರತರಾದ ಕನ್ನಡ ಅಭ್ಯಾಸಿಗಳಿಗೆ ಈ ಕೋಶ ಅನುಕೂಲವಾದೀತೆಂದು ಭಾವಿಸಿದ್ದೇನೆ.

## A

Abbreviation of consonant ವ್ಯಂಜನ ಸಂಕ್ಷೇಪ
Abbreviation of vowel ಸ್ವರ ಸಂಕ್ಷೇಪ
Abessive case ವಿಹೀನಾರ್ಥೀ ಕಾರಕ
Ablative case ಅಪಾದಾನ ಕಾರಕ: ಪಂಚಮೀ ವಿಭಕ್ತಿ

Ablative of agent ಕರ್ತೃವಾಚಕ ಅಪಾದಾನ
Ablaut ಸ್ವರಾನುಕ್ರಮ : ಸ್ವರವ್ಯತ್ಯಯ
Abnormal consonant ಅಪವಾದ ವ್ಯಂಜನ
Abnormal vowel ಅಪವಾದ ಸ್ವರ
Abstract Noun ಭಾವವಾಚಕ ನಾಮಪದ
Abstract Term ಅಮೂರ್ತ ಶಬ್ದ
Absolute ablative ನಿರಪೇಕ್ಷ ಅಪಾದಾನ
Absolute case ನಿರಪೇಕ್ಷ ಕಾರಕ
Accent, ಆಘಾತ, ಒತ್ತು
Accudative form ಕರ್ಮಸಂಪ್ರದಾನರೂಪ
Accusative case ದ್ವಿತೀಯಾ ವಿಭಕ್ತಿ : ಕರ್ಮಕಾರಕ
Acoustic ಶ್ರವಣ
Acoustics ಶ್ರುತಿಶಾಸ್ತ್ರ
Acousticist ಶ್ರುತಿಶಾಸ್ತ್ರೀ
Acoustic phonetics ಶ್ರವಣಸಂಬಂಧಿ ಧ್ವನಿಶಾಸ್ತ್ರ : ಶ್ರಾವಣಿಕ ಧ್ವನಿವಿಜ್ಞಾನ
Acrophony ಭಾವ-ಧ್ವನಿ ಲೇಖನ
Active verb ಕರ್ತರಿ ಕ್ರಿಯಾಪದ : ಸಕರ್ತೃಕ ಧಾತು
Active case ಕರ್ತೃಕಾರಕ
Acute accent (High pitch accent) ಉದಾತ್ತ ಸ್ವರಾಘಾತ
Adam's apple ಕಂಠಮಣಿ : ಗೋವಾಳಿ
Additive clause ಉಪವಾಕ್ಯ
Adhessive case ನೈಕಟ್ಯಸೂಚಕ ಕಾರಕ
Adjectives ಗುಣವಾಚಕಗಳು, ವಿಶೇಷಣಗಳು
Adjectival clause ವಿಶೇಷಣ ಉಪವಾಕ್ಯ
Adjunct word ಗುಣವಾಚಕ ಶಬ್ದ ; ಅನುಬಂಧಶಬ್ದ
Adnominal ಸಾಂಜ್ಞಿಕ
Advent ಆಗಮ
Adverb ಕ್ರಿಯಾವಿಶೇಷಣ
Adverbial adjunct ಕ್ರಿಯಾ ವಿಶೇಷಾತ್ಮಕ ಅನುಬಂಧ
Adverbial case ಕ್ರಿಯಾ ವಿಶೇಷಾತ್ಮಕ ಕಾರಕ
Adverbial clauseಕ್ರಿಯಾ ವಿಶೇಷಾತ್ಮಕ ಉಪವಾಕ್ಯ
Affirmative adverb ಸ್ವೀಕಾರಾತ್ಮಕ ಕ್ರಿಯಾ ವಿಶೇಷಣ
Affirmative form of gerund ಧಾತು ಸಾಧಿತ ಸಂಜ್ಞೆ
Afflrmative form (of verb) ನಿಶ್ಚಯ ರೂಪ
Affix ಪ್ರತ್ಯಯ-ಪೂರ್ವಪ್ರತ್ಯಯ
Affixed Languages: ಪ್ರತ್ಯಯ ಪ್ರಧಾನ ಭಾಷೆಗಳು
Aflricates ಸ್ಪೃಷ್ಟೋಷ್ಮಗಳು : ಅನುಘರ್ಷ
Affrication ಘರ್ಷಣ
Affricative aspirate ಸ್ಪರ್ಶ ಸಂಘರ್ಷೀ ಮಹಾಪ್ರಾಣ
Agential case ಕರ್ತೃಕಾರಕ

Agglomerating ಪ್ರತ್ಯಯ ಪ್ರಧಾನ
Agglutination ಸಂಶ್ಲೇಷ: ಸಂಯೋಗ
Agglutinated ಅಭಿಶ್ಲಿಷ್ಟ
Agglutinative infix ಮಧ್ಯಪ್ರತ್ಯಯ ಪ್ರಧಾನ
Agglutinative Languages ಅಂಟು ಭಾಷೆಗಳು: ಸಂಯೋಗ ಪ್ರಧಾನ ಭಾಷೆಗಳು
Agglutinative prefix ಪೂರ್ವಯೋಗಾತ್ಮಕ ಪ್ರಧಾನ; ಅನುಸರ್ಗ ಪ್ರಧಾನ
Allative case ಓರಸೂಚಕ ಕಾರಕ
Allomorphs ಸಮಪದಗಳು
Allophones ಧ್ವನಿ ಭೇದಗಳು : ಸಹಸ್ವನ: ಭಿನ್ನ ಧ್ವನಿಗಳು (Gk)
Allochrome ಸಮಮಾತ್ರಾ
Allograph ಸಂವರ್ಣ: ಸಂಲಿಪಿ
Allotone ಸಮತಾನ
Alphabetic quasi ಅರ್ಧವರ್ಣ ಮಾಲೀಯ
Altered word ವಿಕೃತ ಪದ
Alveola ವರ್ತ್ಸ
Alveolar ವರ್ತ್ಸ್ಯ
Alveolo-palatal ವರ್ತ್ಸ ತಾಲವ್ಯ
Amalgamating ಪ್ರಾತ್ಯಾಯಿಕ: ಪೂರ್ಣ ಸಂಯೋಗಿ
Amalgamating Language: ಸಂಮಿಶ್ರಣಾತ್ಮಕ ಭಾಷೆ
Ambiguous ಸಂದಿಗ್ಧ
Amelioration ಅರ್ಥೋನ್ನತಿ
Anagram ವರ್ಣಾಂತರಿತ ಶಬ್ದ ಅಥವಾ ವಾಕ್ಯ
Analogy ರೂಪಸಾಮ್ಯ : ಸಾದೃಶ್ಯ
Analogue ಸಮರೂಪಿ ಶಬ್ದ
Analytic Languages ವಿಶ್ಲೇಷ ಭಾಷೆಗಳು : ವಿಯೋಗ (ವಿಯೋಗಾತ್ಮಕ) ಭಾಷೆಗಳು
Anamoly ಅನಿಯಮತೆ
Anaphora ಪುನರಾವೃತ್ತಿ
Anaptyxis ಸ್ವರಭಕ್ತಿ : ಸ್ವರಾಗಮ
Anterior syllable ಪೂರ್ವವರ್ತೀ ಅಕ್ಷರ
Antonym ವಿಲೋಮ
Aorist ಸಾಮಾನ್ಯ ಭೂತ
Aorist causative ಪ್ರೇರಣಾರ್ಥಕ ಸಾಮಾನ್ಯ ಭೂತ
Aphesis ಆದಿವರ್ಣಲೋಪ : ಕೃಂತನ
Aphoeresis ಪದಾದಿಸ್ವರ ಲೋಪ
Apocope ಅಂತ್ಯಾಕ್ಷರ ಲೋಪ : ಛೇದನ
Apodosis ಪರಿಣಾಮಿ ಉಪವಾಕ್ಯ
Apophony ಸ್ವರವಿಕಾರ: ಅಪಶ್ರುತಿ
Applied phonetics ಪ್ರಾಯೋಗಿಕ ಧ್ವನಿವಿಜ್ಞಾನ
Appellative noun ನಪುಂಸಕ ನಾಮವಾಚಿ
Archiphoneme ಮೂಲ ಧ್ವನಿಮಾ

Argot ಗುಪ್ತ ಭಾಷೆ
Article ಉಪ ಪದ
Articulation ಉಚ್ಚಾರಣೆ
Articulatory phonetics ಉಚ್ಚಾರಣಾ ಧ್ವನಿಶಾಸ್ತ್ರ
Artificial Languages ಕೃತ್ರಿಮ ಭಾಷೆಗಳು : ಕೃತಕ—: ಅಸಹಜ—
Aspiratesಮಹಾಪ್ರಾಣ ವರ್ಣಗಳು
Aspirated plosives ಮಹಾಪ್ರಾಣ ಸ್ಪರ್ಶಗಳು
Assibilation ಊಷ್ಮೀಕರಣ
Assimilation ಸ್ವರೈಕ್ಯ : ಸಂಧಿಕಾರ್ಯ : ಸಾರೂಪ್ಯತೆ
Asterisk ನಕ್ಷತ್ರ ಚಿಹ್ನೆ
Asyndeton ದ್ವಂದ್ವ ಸಮಾಸ
Attributive adjective ಗುಣವಾಚಕ ವಿಶೇಷಣ
Attributive adverb ಗುಣವಾಚಕ ಕ್ರಿಯಾ ವಿಶೇಷಣ
Audible sounds ಶ್ರವ್ಯ ಧ್ವನಿಗಳು
Auditory ಗ್ರಹಣ
Augment ಔಪವಿಭಕ್ತಿಕ ಆಗಮ
Average articulation ಸರಾಸರಿ ಉಚ್ಚಾರಣೆ
Auxilary verb ಸಹಾಯಕ ಅಥವಾ ಸಹಕಾರೀ ಕ್ರಿಯೆ

B

Back close vowel ಪಶ್ಚ ಸಂವೃತ ಸ್ವರ
Back formation ಪಶ್ಚಗಾಮಿನಾ ರಚನೆ
Back of the tongue ಪಶ್ಚ ಜಿಹ್ವಾ
Back guttaral ಜಿಹ್ವಾ ಮೂಲೀಯ
Back open vowel ಪಶ್ಚ ವಿವೃತ ಸ್ವರ
Back vowels ಕಂಠ್ಯ ಸ್ವರಗಳು : ಪಶ್ಚ ಸ್ವರಗಳು
Base ಪ್ರಕೃತಿ : ಧಾತು : ಮೂಲ : ಪ್ರಾತಿಪದಿಕ
Biasor prejudiced words ಪೂರ್ವಾಭಿಪ್ರಾಯ ಪ್ರೇರಿತ ಪದಗಳು
Bilabial ಉಭಯೋಷ್ಠ್ಯ : ದ್ವಯೋಷ್ಠ್ಯ
Bilabic-dental ಉಭಯೋಷ್ಠ ದಂತ್ಯ
Bilingual ದ್ವಿಭಾಷಾ ಭಾಷಿ
Biolinguistics ಜೈವಿಕ ಭಾಷಾ ವಿಜ್ಞಾನ
Blade alveolars ಜಿಹ್ವಾಫಲಕದ ವರ್ಣಗಳು
Blade of the tongue ಜಿಹ್ವಾಫಲಕ
Blocked syllable ಬದ್ಧಾಕ್ಷರ : ವ್ಯಂಜನಾಂತ ಅಕ್ಷರ
Bound-form ಬದ್ಧರೂಪ : ಸಾಪೇಕ್ಷರೂಪ
Bound morpheme ಅಪೇಕ್ಷ ರೂಪ
Bridge letter ಸೇತುವರ್ಣ
Bridge phoneme ಸೇತು ಧ್ವನಿಮಾ
Bridge vowel ಸೇತುಸ್ವರ
Buccal ಮೌಖಿಕ ; ಮುಖ ಸಂಬಂಧೀ

## C

Cacography ದುಷ್ಪ್ರಯೋಗ : ದೂಷಿತ ಭಾಷೆ
Cacuminal ಮೂರ್ಧನ್ಯ
Cant ಸಂಕೇತ ಭಾಷೆ
Cardinal consonants ಪ್ರಮುಖ ವ್ಯಂಜನಗಳು
Cardinal vowels ಮಾನ ಸ್ವರಗಳು
Carian case ವಿಹೀನಾರ್ಥೀ ಕಾರಕ
Cartilage ಮೃದ್ವಸ್ಥಿ : ಮೆಲ್ಲೆಲುಬು
Case ವಿಭಕ್ತಿ : ಕಾರಕ
Causal conjunction ಕಾರಣವಾಚಕ; ಸಮುಚ್ಚಯ ಬೋಧಕ ಅವ್ಯಯ
Causal verb ಪ್ರೇರಕ ಕ್ರಿಯಾಪದ
Census ಜನಗಣತಿ : ಪ್ರಜಾಗಣತಿ : ಖಾನೇಷುಮಾರಿ
Central vowels ಮಧ್ಯ ಸ್ವರಗಳು
Cerebral ಮೂರ್ಧನ್ಯ cerebralisation ಮೂರ್ಧನ್ಯೀಕರಣ
Chromatic accentuation ರಂಜಿತ ಸ್ವರಾಂಕನ
Circumflex accent ಸ್ವರಿತಾಘಾತ (Level pitch accent)
Clause ಉಪವಾಕ್ಯ
Clicks ತೀಕ್ಷ್ಣ ಶಬ್ದಗಳು : ಅಂತರ್ಮುಖೀ ದ್ವಿಸ್ಪರ್ಶಗಳು
Close (closed) ಸಂವೃತ
Closed vowels ಸಂವೃತ ಸ್ವರಗಳು
Closed syllable ಬದ್ಧಾಕ್ಷರ
Coalescence ಏಕೀಭಾವ
Co-articulation ಸಹೋಚ್ಚಾರಣೆ
Coda ಪರಗಹ್ವರ
Cognate words ಜ್ಞಾತಿಪದಗಳು; ಸೋದರ ಶಬ್ದಗಳು
Collateral clause ಉಪವಾಕ್ಯ
Colloquial form ಸಂಭಾಷಣಾರೂಪ, ಬಳಕೆಯ ರೂಪ
Combination ಸಂಯೋಜನೆ
Commitative case ಸಹ ಅರ್ಥೀಯ ಕಾರಕ
Common noun ರೂಢನಾಮ
Comparative Grammar ತೌಲನಿಕ (ತುಲನಾತ್ಮಕ) ವ್ಯಾಕರಣ
Comparative Philology ತೌಲನಿಕ ಭಾಷಾ ಶಾಸ್ತ್ರ
Compound word ಸಮಾಸಪದ: ಸಂಯುಕ್ತ ಪದ
Conformative ಸಮರ್ಥಕ : ಪುಷ್ಟಿಕಾರೀ
Conjugation ಕ್ರಿಯಾರೂಪ
Conjunct consonant ಸಂಯುಕ್ತ ವ್ಯಂಜನ
Conjunction ಸಂಯೋಜಕ : ಸಂಬಂಧಕಾನ್ವಯ : ಸಮುಚ್ಚಯಾನ್ವಯ
Conjunctive adverb ಸಂಯೋಜಕ ಕ್ರಿಯಾ ವಿಶೇಷಣ
Conjunctive participle ಪೂರ್ವಕಾಲಿಕ ಕೃದಂತ
Consistent ಸಮಂಜಸ

Consistency ಸಾಮಂಜಸ್ಯ
Consonantal anaptyxis ವ್ಯಂಜನಾಗಮ
Consonant cluster ವ್ಯಂಜನ ಗುಚ್ಛ
Consonants ವ್ಯಂಜನಗಳು ; ಒತ್ತುಗಳು (ಶ್ರೀ) ; ಮೆಯ್-(ತಮಿಳು)
Consonantal epenthesis ವ್ಯಂಜನೀಯ ಅಪಿನಿಹಿತಿ
Contracted word ಸಂಕ್ಷಿಪ್ತ ಪದ
Contamination ಮಿಶ್ರಣ : ಸಂಪರ್ಕ ವಿಕಾರ
Contraction in Meaning ಅರ್ಥ ಸಂಕೋಚ
Contrast ವೈದೃಶ್ಯ
Crude form ಪ್ರಕೃತಿ
Crude form of verb ಧಾತು
Cultivated Language ಸಂಸ್ಕಾರಭಾಷೆ
Current words ಸಾಮಾನ್ಯಪದಗಳು

## D

Dative case ಚತುರ್ಥೀ ವಿಭಕ್ತಿ
Deduction ಅಪವಾಹ
Definite article ನಿರ್ದೇಶಕ ಗುಣವಾಚಿ
Declensions ಸುಬಂತಗಳು : ವಿಭಕ್ತಿ ರೂಪಗಳು
Deep vowel ಪಶ್ಚಸ್ವರ
Deictic roots ನಿರ್ದೇಶಕ ಪ್ರಕೃತಿಗಳು
Definite article ನಿಶ್ಚಯಾರ್ಥೀ ಉಪಪದ
Demonstrative ನಿದರ್ಶಕ : ನಿರ್ದೇಶಕ : ಸಂಕೇತವಾಚಕ
Demonstrative adjective ಸಂಕೇತವಾಚಕ ವಿಶೇಷಣ
Denom root ನಾಮಧಾತು
Dental ದಂತ್ಯ
Dental labio ದಂತೌಷ್ಠ್ಯ ; ದಂತೌಷ್ಠ
Derivative forms ನಿಷ್ಪನ್ನ ರೂಪಗಳು
Derivative words ವ್ಯುತ್ಪನ್ನ ಶಬ್ದಗಳು : ನಿಷ್ಪನ್ನ ಪದಗಳು
Deterioration in Meaning ಅರ್ಥದಲ್ಲಿ ಅವನತಿ
Deteriorative suffix ಅಪಕರ್ಷಾರ್ಥೀ ಪ್ರತ್ಯಯ
Devocalization ಅಘೋಷೀಕರಣ
Descriptive Grammar ವರ್ಣನಾತ್ಮಕ ವ್ಯಾಕರಣ
Diachronic Grammar ಐತಿಹಾಸಿಕ ವ್ಯಾಕರಣ
Diachronic phonetics ಚಾರಿತ್ರಿಕ ಧ್ವನಿವಿಜ್ಞಾನ
Dialect ಉಪಭಾಷೆ
Dialectal forms ಪ್ರಾದೇಶಿಕ ಶಬ್ದರೂಪ
Dialect area ಉಪಭಾಷಾಕ್ಷೇತ್ರ
Dialect atlas ಉಪಭಾಷಾ ಭೂಪಟ
Dialect Geography ಉಪಭಾಷಾ ಭೂಗೋಳ

Dialect reality ಔಪಭಾಷಿಕ ಸತ್ಯತೆ
Dialectology ಉಪಭಾಷಾ ವಿಜ್ಞಾನ
Dialectal divergence ಉಪಭಾಷಾ ವಿಭೇದ
Dialect Survey ಉಪಭಾಷಾ ವೀಕ್ಷಣೆ
Dialectal usage ಪ್ರಾಂತ ಪ್ರಯೋಗ
Diction ಶೈಲಿ
Diminutive suffix ಅಲ್ಪಾರ್ಥೀ ಪ್ರತ್ಯಯ
Diphthongs ಸಂಧ್ಯಕ್ಷರಗಳು : ಸಂಯುಕ್ತ ಸ್ವರಗಳು
Dissimilation ಅಸಮತೆ, ವೈದೃಶ್ಯ ; ವಿಷಮತೆ
Dissonance ಧ್ವನಿವೈಷಮ್ಯ
Dorsum of the tongue ಜಿಹ್ವೆಯ ಹಿಂಭಾಗ : ಅಂತಜಿಹ್ವೆ
Double consonants ಒತ್ತಕ್ಷರಗಳು
Doublets ಯಮಳ ಶಬ್ದಗಳು
Drift ಅಪಸರಣ
Drone ಗುಂಜಾರವ

## E

Eardrum ಕರ್ಣಪಟಹ
Eclipsis : Ecthlipsis ಅನುನಾಸಿಕೋಚ್ಚಾರದಿಂದಾಗುವ ಧ್ವನಿವ್ಯತ್ಯಾಸ, ವ್ಯಂಜನಲೋಪ
Economy of Effort ಮಿತವ್ಯಯಾಸಕ್ತಿ
Emphasis ಅವಧಾರಣೆ
Empirical ಪ್ರಯೋಗಾಶ್ರಿತ
Enclinitic affix ಅವ್ಯಯಾತ್ಮಕ ಪ್ರತ್ಯಯ
Enclitic affix ಪೂರ್ವ ಪ್ರತ್ಯಯ
Epicene ಉಭಯಲಿಂಗಿ : ದ್ವಿಲಿಂಗಿ
Epiglottis ಉಪಜಿಹ್ವಾ
Epigrams ನಾಟು ನುಡಿಗಳು
Equative case ಸಮಾನಾರ್ಥೀ ವಿಭಕ್ತಿ
Equivalent terms ಸಮಾನಾರ್ಥಕ ಪದಗಳು
Ergative case ಅಪ್ರತ್ಯಕ್ಷಕ ಕರ್ತೃಕಾರಕ
Ethnology ಮಾನವಕುಲಶಾಸ್ತ್ರ
Etymon ಶಬ್ದಮೂಲ
Etymology ವ್ಯುತ್ಪತ್ತಿಶಾಸ್ತ್ರ
Euphemism ಭಾಷಾ ಗೌರವ ;-ಮರ್ಯಾದೆ : ಗಾಂಭೀರ್ಯ : ಚಾರುವಾಚಕ
Euphony : Euphonic combination ಸಂಧಿ : ಧ್ವನಿ ಮಾಧುರ್ಯ
Even tone ಸಮಸ್ವರ
Exclusive pronoun ವ್ಯಾವರ್ತಕ ಸರ್ವನಾಮ : ಅಸಮಾವೇಶಕ—
Exhale ನಿಃಶ್ವಾಸ
Experimental phonetics ಪ್ರಯೋಗಶಾಲಾ ಭಾಷಾವಿಜ್ಞಾನ
Explative ನಿಯಮಪೂರಕ

Explosive ಸ್ಫೋಟಾತ್ಮಕ ಸ್ಪರ್ಶ
Extension in Maning ಅರ್ಥವಿಸ್ತಾರ
External hiatus ಬಾಹ್ಯಸ್ವರವಿಚ್ಛೇದ
Extinct Languages ಅಳಿದುಹೋದ ಭಾಷೆಗಳು : ಅದೃಶ್ಯ—

## F

Facative caseಪರಿವರ್ತಾರ್ಥೀ ಕಾರಕ
False association ತಪ್ಪು ಸಾಹಚರ್ಯ
Falsetto ಕೀರಲು ಧ್ವನಿ
Faucal ಕಂಠ್ಯ
Faucescal ತಾಲುಚಾಪೀಯ
Figurative Language ಆಲಂಕಾರಿಕ ಭಾಷೆ
First person ಉತ್ತಮ ಪುರುಷ
First future ಅನದ್ಯತನ ಭವಿಷ್ಯ
Flap ಈಷತ್ ಸ್ಪರ್ಶ : ಉತ್ಕ್ಷೇಪ
Flappedಉತ್ಕ್ಷಿಪ್ತ : ತಾಡಿತ
Flat ಸರಳ
Flection ರೂಪಾಂತರ
Flexional Languages ಆಂತರಿಕ ವ್ಯತ್ಯಾಸೀ ಭಾಷೆಗಳು : ರೂಪಾಂತರಯುಕ್ತ ಭಾಷೆಗಳು
Formal form ಔಪಚಾರಿಕ ರೂಪ
Formative ರಚನಾತ್ಮಕ
Formative affix ರಚನಾತ್ಮಕ ಪ್ರತ್ಯಯ
Food passage ಅನ್ನನಾಳ : ಆಹಾರನಾಳ
Free form ಸ್ವತಂತ್ರರೂಪ: ಮುಕ್ತರೂಪ : ನಿರಪೇಕ್ಷರೂಪ
Frequency ಆವೃತ್ತಿ
Fricative ಘರ್ಷ
Fricatives ಊಷ್ಮಗಳು
Fricationless continuant ಘರ್ಷರಹಿತ ನಿರಂತರ
Front of the tongue ಪೂರ್ವಜಿಹ್ವಾ ; ಜಿಹ್ವಾಗ್ರ
Front vowels ಪೂರ್ವ ಸ್ವರಗಳು : ತಾಲವ್ಯ ಸ್ವರಗಳು: ಅಗ್ರಸ್ವರಗಳು
Future imperative ಭವಿಷ್ಯ ಆಜ್ಞಾರ್ಥ
Future Tense ಭವಿಷ್ಯದ್ಕಾಲ

## G

Geminate consonants ವ್ಯಂಜನಯುಗ್ಮ : ಜೋಡಿ ವ್ಯಂಜನಗಳು
Gemination ದ್ವಿತ್ವ ವ್ಯಂಜನ
Gender ಲಿಂಗ
Gender noun ಲಿಂಗಾರ್ಥೀ ಸಂಜ್ಞೆ
Generic term ಸಾಮಾನ್ಯ ಶಬ್ದ

Genitive case ಷಷ್ಠೀ ವಿಭಕ್ತಿ : ಸಂಬಂಧಕಾರಕ
Genitive post position ಸಂಬಂಧ ವಾಚಕ ಪರಸರ್ಗ
Geographical linguistics ಭೌಗೋಳಿಕ ಭಾಷಾವಿಜ್ಞಾನ
Gerund ಕ್ರಿಯಾನಾಮ
Gingival ವರ್ತ್ಸ್ಯ
Glide ಧ್ವನಿಜಾರು ; ಶ್ರುತಿ
Glottis ಶ್ವಾಸದ್ವಾರ : ಕಂಠದ್ವಾರ
Glottal chord ಸ್ವರತಂತ್ರೀ
Glottal plosive ಕಾಕಲ್ಯ ಸ್ಪರ್ಶ
Glottal spirant ಕಾಕಲ್ಯ ಘರ್ಷ
Glottology ಭಾಷಾಶಾಸ್ತ್ರ
Glottal closure ಶ್ವಾಸನಾಳದ್ವಾರ ಮುಚ್ಚಿರುವುದು : ಅಲಿಜಿಹ್ವೀಯ ಸಂವೃತಿ
Graphemes ಅಕ್ಷರಗಳು : ವರ್ಣಗಳು
Graphemics ಲಿಪಿವಿಜ್ಞಾನ
Grave accent : Lowpitch accent : ಅನುದಾತ್ತ ಸ್ವರಾಘಾತ
Governed word ನಿಯಂತ್ರಿತ ಪದ
Gullet ಆಹಾರ ನಾಳ
Gutturals ಕಂಠ್ಯ ಧ್ವನಿಗಳು
Gutturo-Labials ಕಂಠ್ಯೌಷ್ಠ
Gutturo-palatal ಕಂಠತಾಲವ್ಯ

## H

Half bound form ಅರ್ಧಬದ್ಧ ರೂಪ
Half close ಈಷತ್ ಸಂವೃತ : ಅರ್ಧಸಂವೃತ
Half open ಈಷತ್ ವಿವೃತ : ಅರ್ಧವಿವೃತ
Half plosive ಈಷತ್ ಸ್ಪರ್ಶ
Haplology ಏಕವರ್ಣಲೋಪ : ಸಮಧ್ವನಿ ಲೋಪ
Hard consonant ಅಘೋಷ ವ್ಯಂಜನ
Hard palate ಕಠಿನ ತಾಲು
Harmony ಸಾಂಗತ್ಯ : ಸಾಮರಸ್ಯ : ಅನುರೂಪತೆ
Harmonic sequence of vowels ಸ್ವರಸಾಮ್ಯವಿಧಿ : ಸ್ವರಸಾಮಂಜಸ್ಯ
Heteroclite ಅಪವಾದ
Heteronomous sound change ಪರಿಸ್ಥಿತಿಜನ್ಯ ಧ್ವನಿಪರಿವರ್ತನೆ
Hiatus ವಿಸಂಧಿ : ವಿವೃತ್ತಿ
High back vowels ಉಚ್ಚಪಶ್ಚ ಸ್ವರಗಳು
Holophrase ಏಕಶಬ್ದೀಯ ವಾಕ್ಯ
Homonym ಭಿನ್ನಾರ್ಥಕಸಮಾನ ರೂಪಗಳು : ಸನಾಮಕ ; ಸಮಾನಾಕಾರಪದ
Homophone ಸಮಧ್ವನಿ
Hybrid ಅರಿಸಮಾಸ : ಮಿಶ್ರ

Hybridization ಮಿಶ್ರಣ
Hybrid word ಸಂಕರ ಶಬ್ದ : ಕಲಬೆರಕೆ ಪದ
Hypothetical clause ಪ್ರತಿಬಂಧಿಕ ಉಪವಾಕ್ಯ
Hypothetical Language ಕಾಲ್ಪನಿಕ ಭಾಷೆ
High Pitch Level ತಾರಕ ಸ್ವರ
Hieroglyphich writing ಚಿತ್ರಲಿಪಿ
Historical Grammar ಐತಿಹಾಸಿಕ ವ್ಯಾಕರಣ
Historical Phonetics ಐತಿಹಾಸಿಕ ಧ್ವನಿವಿಜ್ಞಾನ

## I

Ideogram ಭಾವಲಿಪಿ : ಚಿತ್ರಲಿಪಿ
Idiolect ವ್ಯಕ್ತಿಭಾಷೆ
Idiomatic ದೇಶೀಯ
Idiocyncracy ವ್ಯಕ್ತಿವೈಶಿಷ್ಟ್ಯ : ವೈಶಿಷ್ಟ್ಯ
Illative ಕಾರಣಾರ್ಥಕ; ಪ್ರವೇಶಾರ್ಥಿಕ
Imitative ಅನುಕಾರಿ
Imi!ator ಅನುಕರ್ತೃ
Imitation ಅನುಕರಣ : ಅನುಕೃತಿ
Immediate constituent ನಿಕಟತಮ ಅವಯವ
Imperative mood ವಿಧ್ಯರ್ಥಕ ; ವಿಧಿರೂಪ; ಆಜ್ಞಾರ್ಥ
Imperative verb causative ಪ್ರೇರಣಾರ್ಥಕ : ಆಜ್ಞಾಸೂಚಕ ಕ್ರಿಯೆ
Incapsulation ಸಮಾಸ
Inclusive pronoun ಅಭಿವ್ಯಾಪಕ ಸರ್ವನಾಮ : ಸಮಾವೇಶಕ ಸರ್ವನಾಮ
Incorporative Languages : ಅಂತರ್ಗಮಕ ಭಾಷೆಗಳು : ಯೋಗಾತ್ಮಕ
ಸಂಶ್ಲೇಷಾತ್ಮಕ—
Indeclinablesಅವ್ಯಯಗಳು : ಅವಿಕಾರಿಗಳು
Indefinite pronoun ಅನಿರ್ದೇಶಕ ಸರ್ವನಾಮ : ಅನಿಶ್ಚಯ ವಾಚಕ ಸರ್ವನಾಮ
Indicative ಸಂಭವಾರ್ಥಕ
Indicative mood ನಿಶ್ಚಯಾರ್ಥ ನಿರ್ದೇಶಕ ಕ್ರಿಯಾರ್ಥ
Induction ಅನುವಾಹ
Infinitive ಭಾವರೂಪ : ತುಮುಂತ
Infix ಆಗಮ : ಅಂತಃಪ್ರತ್ಯಯ : ಮಧ್ಯವಿನ್ಯಸ್ತ ಪ್ರತ್ಯಯ
Inflection ವಿಭಕ್ತಿ : ರೂಪಾಂತರಣ
Inflexional ವಿಭಕ್ತಿ ಪ್ರಧಾನ
Inflectional Language ಶ್ಲಿಷ್ಟಯೋಗಾತ್ಮಕ ಭಾಷೆ : ವಿಭಕ್ತಿ ಪ್ರಧಾನ ಭಾಷೆ
Inhaled breath ಎಳೆದುಕೊಂಡ ಉಸಿರು : ಉಚ್ಛ್ವಾಸ
Inorganic Languages ಅಜೈವ ಭಾಷೆಗಳು : ನಿಪಾತ ಪ್ರಧಾನ ಭಾಷೆಗಳು
Inflexion ಪ್ರತ್ಯಯ
Inflexional ಪ್ರಾತ್ಯಾಯಿಕ
Inflected Forms ಆಖ್ಯಾತ ರೂಪಗಳು

Inflected word ನಾಮಪದ
Informant ಭಾಷಾ ನಿವೇದಕ
Instrument ಉಪಕರಣ
Instrumental case ತೃತೀಯಾ ವಿಭಕ್ತಿ
Instrumental Phonetics ಯಾಂತ್ರಿಕ ಧ್ವನಿವಿಜ್ಞಾನ
Internal hiatus ಆಂತರಿಕ ಸ್ವರವಿಚ್ಛೇದ
International Phonetic Alphabet ಅಂತರಾಷ್ಟ್ರೀಯ ಧ್ವನಿಲಿಪಿ (I.P.A)
International Phonetic Script ಅಂತರಾಷ್ಟ್ರೀಯ ಧ್ವನ್ಯಾತ್ಮಕ ಲಿಪಿ
Interjection ಸಂಬಂಧಕಾವ್ಯಯ
Intransitive ಅಕರ್ಮಕ
Intorragative ಪ್ರಶ್ನಾರ್ಥಕ
Isoglass ಶಬ್ದರೇಖೆ
Isophone ಧ್ವನಿರೇಖೆ
Isosyntagmic line ವಾಕ್ಯರೇಖೆ
Isotope ಸಮಸ್ಥಾನೀ
Isolating Languages ವಿಭಕ್ತ ಭಾಷೆಗಳು ; ಸ್ಥಾಪದ —:ನಿಯೋಗಾತ್ಮಕ—

J

Jung grammatiker ನವವೈಯಾಕರಣ
Juncture ಸಂಧಿಸ್ಥಾನ: ಯೋಜಕ
Juxtaposition Language ಸಾನ್ನಿಧ್ಯ ಭಾಷೆ

K

Kinemics ಇಂಗಿತಾಭಿವ್ಯಕ್ತಿ ಶಾಸ್ತ್ರ
Knotted cord ಗ್ರಂಥಿತರಜ್ಜು

L

Labials ಓಷ್ಠ್ಯ ವರ್ಣಗಳು
Labialisation ಓಷ್ಠೀಕರಣ
Labio-dental ದಂತ್ಯೋಷ್ಠ್ಯ
Labio-fricative ಓಷ್ಠ್ಯ ಸಂಘರ್ಷಿ
Labio-velar ಕಂಠೌಷ್ಠ್ಯ
Labio-velarised ಕಂಠ್ಯೋಷ್ಠೀಕೃತ
Laboratory Phonetics ಪ್ರಾಯೋಗಿಕ ಭಾಷಾವಿಜ್ಞಾನ
Language (<Fr. Langage) ಭಾಷೆ: ನುಡಿ
Langue [(Fr)=(Eng.)Tongue] ನ.ಬ, ನಚನ. ಮಾತು
Lapses ವರ್ಣವ್ಯತ್ಯಯ
Laryngoscope ಧ್ವನಿನಾಳದರ್ಶಕ
Larynx ಕೃಕ: ಧ್ವನಿಪೆಟ್ಟಿಗೆ: ಗಂಟಲು: ಸ್ವರಯಂತ್ರ ; ಧ್ವನಿತಂತುಗಳಿರುವ ಗಂಟಲಕುಹರ
Laterals ಪಾರ್ಶ್ವಿಕಗಳು

Lateral area ಪಾರ್ಶ್ವವರ್ತೀ ಕ್ಷೇತ್ರ
Latent shwa ಸುಪ್ತಶ್ವ
Lax (Lenis) ಶಿಥಿಲ
Lax-vowels ಶ್ಲಥ ಸ್ವರಗಳು
Lenition ವ್ಯಂಜನ ಪರಿವರ್ತನ
Letters ವರ್ಣಗಳು
Level ಸಮತಲ
Lexical Meaning ನಿಘಂಟಿನ ಅರ್ಥ
Lexicography ನಿಘಂಟು ರಚನಾಶಾಸ್ತ್ರ
Liaison ಸಂಧಿ
Linguals ಮೂರ್ಧನ್ಯ ವರ್ಣಗಳು
Lingua Franca ರಾಷ್ಟ್ರ ಭಾಷೆ
Linguistic area ಭಾಷಾ ಕ್ಷೇತ್ರ
Linguistic atlas ಭಾಷಾ ಭೂಪಟ
Linguistician ಭಾಷಾವಿಜ್ಞಾನಿ
Linguistic ontogeny ವ್ಯಕ್ತಿ ಭಾಷಾವಿಕಾಸ
Linguistics ಭಾಷಾವಿಜ್ಞಾನ
Linguistic stocks ಭಾಷಾ ಮೂಲಗಳು
Linguistic Geography ಭಾಷಾ ಭೂವಿವರಣೆ
Linguistic norm ಪ್ರಮಾಣ ಭಾಷೆ
Lips ಓಷ್ಠ್ಯಗಳು : ತುಟಿಗಳು
Lip-retraction ವಿಸ್ತೃತೋಷ್ಠ್ಯ (ತುಟಿ ಅಗಲಿಸುವುದು)
Liquid Sound ಕೋಮಲಸ್ವರ
Local dialects ಸ್ಥಳೀಯ ಅಥವಾ ಸ್ಥಾನೀಯ ಉಪಭಾಷೆಗಳು
Locative case ಸಪ್ತಮೀ ವಿಭಕ್ತಿ : ಅಧಿಕರಣ ಕಾರಕ
Logogram ಶಬ್ದ ಸಂಕೇತ
Low-back vowel ನಿಮ್ನ ಪಶ್ಚಸ್ವರ
Low-pitch vowel ನಿಮ್ನಸ್ವರ
Loss ವರ್ಣಲೋಪ : ಲೋಪ
Low pitch level ಮಂದರಸ್ವರ

## M

Malapropism ಪಾಂಡಿತ್ಯ ಪ್ರವೃತ್ತಿ
Marginal Sounds ಪರಿಸರದ ಧ್ವನಿಗಳು
Media ಮೃದುವರ್ಣ
Medium ಸಾಧನ
Merger of Phonemes : ಧ್ವನ್ಯೈಕ್ಯ : ಸ್ವನೈಕ್ಯ
Metathesis ಅಕ್ಷರ ಪಲ್ಲಟ, ವ್ಯತ್ಯಸ್ತತ್ವ, ವರ್ಣ ವಿಪರ್ಯಯ
Middle pitch level ಮಧ್ಯಮ ಸ್ವರ
Mimetic word ಅನುಕರಣಾತ್ಮಕ ಶಬ್ದ

Mobile shwa ಚಲನಶ್ವ : ಚಲಶ್ವ
Mongrel word ಮಿಶ್ರಶಬ್ದ, ಮಿಶ್ರಪದ
Modes ಕ್ರಿಯಾರೀತಿ
Monoglot ಏಕಭಾಷೀ : Monophone ಏಕಧ್ವನೀಯ ಶಬ್ದ
Monosyllable ಏಕಾಕ್ಷರ
Monysyllabic language ಏಕಾಕ್ಷರೀ ಭಾಷೆ
Monosyllabic word ಏಕಾಕ್ಷರ ಪದ : ಏಕಾಕ್ಷರ ಶಬ್ದ
Mood ಕ್ರಿಯಾರೂಪ
Morph ಪದ : ಧ್ವನಿಲೇಖದಲ್ಲಿ ತೋರಿಸಿರುವ ಪದ :
ಉದಾ : / S'el / = Sell ;
Morpheme ಶಬ್ದರೂಪ ಅಥವಾ ದೃಷ್ಟಿಯಿಂದ ಅವಿಭಾಜ್ಯ ಪದ ಆಕೃತಿಮಾ
ಇದು (Gk) ಗ್ರೀಕ್ ಭಾಷೆಯ Morphe ಎಂಬುದರಿಂದ ಬಂದಿದೆ
Morphemics ಶಬ್ದರೂಪ ವಿಜ್ಞಾನ
Murmur ಗೊಣಗು
Mutation ಪರಿವರ್ತನೆ
Mutes ಮೂಕ ವ್ಯಂಜನಗಳು

## N

Nasals ಅನುನಾಸಿಕಗಳು
Nasal cavity ನಾಸಾಕುಹರ
Nasal chamber ನಾಸಿಕ ಕೊಠಡಿ
Nasal twang ಸ್ವರಾನುನಾಸಿಕ್ಯ
Negative conjugation ನಿಷೇಧಾತ್ಮಕ ಕ್ರಿಯಾರೂಪ
Negative mood ಅಭಾವಾರ್ಥಕ, ನಿಷೇಧಾರ್ಥಕ
Neutral vowel ತಟಸ್ಥ ಸ್ವರ
Noa word ವರ್ಜಿತ ಶಬ್ದ
Nominative case ಪ್ರಥಮಾ ವಿಭಕ್ತಿ : ಕರ್ತೃಕಾರಕ
Nominal root ಪ್ರಾತಿಪದಿಕಾರ್ಥ
Nonce word ವಿಶಿಷ್ಟ ಶಬ್ದ
Non-front vowel ಪೂರ್ವೇತರ ಸ್ವರ
Non-pulmonic Sounds ಶ್ವಾಸಕೋಶರಹಿತ ಧ್ವನಿಗಳು
Non-speech Sound ಅವಾಚ್ಯ ಧ್ವನಿ
Nose ನಾಸಿಕ : ಮೂಗು
Noun ನಾಮಪದ
Noun root ನಾಮಧಾತು
Noun of Quality ನಾಮವಿಶೇಷಣ
Number ವಚನ
Nursery word ಬಾಲಭಾಷೆ: ಬಾಲಶಬ್ದ : ಕಿಶೋರವಾಣಿ

## O

Obelus ಕಠಾರಿ ಚಿಹ್ನೆ
Object ಕರ್ಮ
Objective case ದ್ವಿತೀಯಾ ವಿಭಕ್ತಿ : ಕರ್ಮಕಾರಕ
Oblative case ಪಂಚಮಿಾ ವಿಭಕ್ತಿ
Oblique case ದ್ವಿತೀಯಾ ವಿಭಕ್ತಿ : ವಿಕಾರೀಕಾರಕ : ವಿಕೃತಕಾರಕ
[ಪ್ರಥಮಾ ಅಥವಾ ಸಂಬೋಧನಾ ವಿಭಕ್ತಿ ಬಿಟ್ಟು ಬೇರೆ ವಿಭಕ್ತಿ]
Obloquy ನಿಂದಾನುಡಿ
Obsolete ಗತಪ್ರಯೋಗ
Occlusive ಸ್ಪರ್ಶ
Onomatopoeia ಅನುಕರಣ ಶಬ್ದ
Onomatopoetic ಕ್ರಿಯಾನುಕರಣಾವ್ಯಯ
Open vowel ವಿವೃತ ಸ್ವರ
Optophone ದೃಷ್ಟಿ ಧ್ವನಿಯಂತ್ರ
Oral cavity ಮುಖಕುಹರ
Organs of speech ಧ್ವನ್ಯಂಗಗಳು : ಉಚ್ಚಾರಣಾ ಅವಯವಗಳು
Organic Languages ಜೈವಭಾಷೆಗಳು : ಪ್ರಕೃತಿ-ಪ್ರತ್ಯಯ ಪ್ರಧಾನ—
Orientalistಪೌರಸ್ತ್ಯ ಭಾಷಾಪಂಡಿತ
Orthography ಅಕ್ಷರಶಾಸ್ತ್ರ, ವರ್ಣಶಾಸ್ತ್ರ : ವರ್ಣವಿನ್ಯಾಸ ವಿಜ್ಞಾನ
Orthology ಅರ್ಥವಿಜ್ಞಾನ
Oxytone ಅಂತ್ಯಾಘಾತ ಶಬ್ದ

## P

Palatals ತಾಲವ್ಯ ವರ್ಣಗಳು : ತಾಲವ್ಯಗಳು
Palatalisation ತಾಲವ್ಯೀಕರಣ
Paleography ಲಿಪಿಶಾಸ್ತ್ರ
Parole (=speech) ಉಕ್ತಿ, ಮಾತು, ವ್ಯಕ್ತಿ ಭಾಷೆ
Paragogic vowel ಅಂತ್ಯಯೋಗಿಕ ಸ್ವರ
Paraplasm ರೂಪಪ್ರತಿಸ್ಥಾಪನೆ
Paronym ಸಮಾನೋಚ್ಚರಿತ ಶಬ್ದ
Particles ನಿಪಾತಗಳು
Participle ಕೃದಂತ
Participle Noun ಕೃನ್ನಾಮ
Participle Relative ಕೃದ್ವಾಚಿ
Participle Verbal ಕ್ರಿಯಾನ್ಯೂನ
Passive Participleಕರ್ಮಣಿ ಭೂತಕಾಲಿಕ ಕೃದಂತ
Passive Verb ಕರ್ಮಣಿ ಕ್ರಿಯಾಪದ
Passive Voice ಕರ್ಮಣಿ ಪ್ರಯೋಗ; ಕರ್ಮವಾಚ್ಯ

Past Participle ಭೂತಕಾಲಿಕ ಕೃದಂತ
Patois ಉಪಭಾಷೆ
Pejorative suffix ನಿಂದಾತ್ಮಕ ಪ್ರತ್ಯಯ ; ಅರ್ಥಾಪಕರ್ಷಕ—
Penultimate letter ಉಪಧೆ
Perissology ಅನಾವಶ್ಯಕ ಪ್ರಯೋಗ
Person ಪುರುಷ
Personal termination ಪುರುಷ ಪ್ರತ್ಯಯ
Pharayngeal Sounds ಗಂಟಲ ಕುಹರದ ಧ್ವನಿಗಳು : ಉಪಾಲಿಜಿಹ್ವಾ ವರ್ಣಗಳು
Pharynx ಗಲಕುಹರ: ಉಪಾಲಿಜಿಹ್ವಾ
Philology ಭಾಷಾಶಾಸ್ತ್ರ : ಶಬ್ದವ್ಯುತ್ಪತ್ತಿ ಶಾಸ್ತ್ರ (ರಾ. ಸ)
Phonation ಧ್ವನಿ: ಉಚ್ಚಾರಣೆ
Phonematics ಸ್ವನಾಂಶ ರಚನಾಶಾಸ್ತ್ರ
Phoneme ಧ್ವನಿಮಾ (ತೀ. ನಂ. ಶ್ರೀ) ಸ್ವನಿಮಾ
Phonemes ಧ್ವನಿಮಾಗಳು ; ಸ್ವನಿಮಾಗಳು : ಧ್ವನಿಗ್ರಾಮ (ಹಿಂದಿ)
Phonemic change ಧ್ವನಿಮಾವ್ಯತ್ಯಾಸ
Phonemic merger ಎರಡು ಧ್ವನಿಮಾಗಳು ಒಂದೇ ಧ್ವನಿಮಾ ಆಗುವುದು : ಧ್ವನ್ಯೈಕ್ಯ
Phonology ಧ್ವನಿಶಾಸ್ತ್ರ, ಶಬ್ದಶಾಸ್ತ್ರ : ವರ್ಣಶಾಸ್ತ್ರ ; ಸ್ವನವಿನ್ಯಾಸಾಂಶ
Phonemics ವರ್ಣಶಾಸ್ತ್ರ, ವರ್ಣವಿಜ್ಞಾನ : ವರ್ಣಪರಿಚ್ಛೇದ ; ಧ್ವನಿಮಾ ವಿಜ್ಞಾನ
Phonemic transcription ಧ್ವನಿಮಾ ಲೇಖನ
Phonemic notation ಧ್ವನಿಚಿಹ್ನೆ
Phones ಧ್ವನಿಗಳು : ಉಲಿಗಳು : ಸ್ವನಗಳು (<Gk)
Phonendoscope ಅಂತರ್ಧ್ವನಿವರ್ಧಕ
Phonetic change ಧ್ವನಿವ್ಯತ್ಯಾಸ ; ಧ್ವನಿಮಾರ್ಪಾಟು (ಶ್ರೀ) ಉಚ್ಚಾರಣಾ ವಿಕಾರ
Phonetic correspondence ಧ್ವನಿಸಾದೃಶ್ಯ : ಶಬ್ದಸಾದೃಶ್ಯ
Phonetic decay ಧ್ವನಿವಿಕಾರ
Phonetic harmony ಧ್ವನಿ ಸಾಂಗತ್ಯ : ಧ್ವನಿಸಮಾನತೆ : ಧ್ವನ್ಯಾನುರೂಪತೆ
Phonetic laws ಧ್ವನಿ ನಿಯಮಗಳು
Phonetic Principles ಧ್ವನಿ ತತ್ವಗಳು
Phonetics ವರ್ಣಶಾಸ್ತ್ರ : ಶಿಕ್ಷಾಶಾಸ್ತ್ರ : ಧ್ವನಿಶಾಸ್ತ್ರ, ಧ್ವನಿವಿಜ್ಞಾನ
Phonetic Script ಧ್ವನಿಲೇಖ: ಧ್ವನ್ಯಾತ್ಮಕ ಲಿಪಿ
Phonetic tendency ಧ್ವನ್ಯಾತ್ಮಕ ಪ್ರವೃತ್ತಿ
Phonoscope ಧ್ವನಿಕಂಪನ ದರ್ಶಕ
Phonics ಧ್ವನಿವಿಚಾರ
Physiological Phonetics ಶಾರೀರಕ ಧ್ವನಿವಿಜ್ಞಾನ
Physiology ಶರೀರ ವಿಜ್ಞಾನ
Pitch ಸ್ವರ: ತಾರತ್ವ { High Pitch ಉದಾತ್ತ / Low Pitch ಅನುದಾತ್ತ }
Place of articulation ಧ್ವನಿಯ ಉತ್ಪತ್ತಿಸ್ಥಾನ
Plosives ಸ್ಪರ್ಶಗಳು
Plurilingual ಬಹುಭಾಷಿ

Point of articulation ಉಚ್ಚಾರಣಾಸ್ಥಾನ
Polyglot ಬಹುಭಾಷಿ
Polyglotism ಭಿನ್ನ ಭಾಷಾಪದ ಕೂಟ–ದ್ವಿರುಕ್ತಿಯು ಒಳಭೇದ ; ಯುಮಳ ಶಬ್ದಗಳು
Polysynthetic Languages ಬಹುಪ್ರತ್ಯಯ ಭಾಷೆಗಳು–ವಿಕಾರೀ ಭಾಷೆಗಳು : ಬಹು ಸಂಲಗ್ನ ಭಾಷೆಗಳು–ಅಂತರ್ಗಮಕ–; ಬಹು ಸಂಶ್ಲೇಷಣಾತ್ಮಕ–ಬಹು ಸಂಶ್ಲೇಷಾತ್ಮಕ–
Polysyllabic ಬಹ್ವಕ್ಷರಾತ್ಮಕ : ಅನೇಕಾಕ್ಷರೀ :
Postfix ಪ್ರತ್ಯಯ
Post Position ವಿಭಕ್ತ್ಯರ್ಥಕಾವ್ಯಯ
Post position of Ablative ಅಪಾದಾನಿಯ ಪರಸರ್ಗ
Post-velar ಪರಕಂಠ್ಯ
Potential mood ವಿಧ್ಯರ್ಥಕ
Predicate ಆಖ್ಯಾತ
Predicative adjective ವಿಧೇಯಾತ್ಮಕ ವಿಶೇಷಣ
Preterite ಭೂತಕಾಲ ; ಅತೀತ
Preterite Participle ಭೂತಕಾಲಿಕ ಕೃದಂತ
Prefix ಉಪಸರ್ಗ : ಪೂರ್ವ ಪ್ರತ್ಯಯ
Preposition ಉಪಸರ್ಗ
Pronominal ಸರ್ವನಾಮದಂಥ : ಸಾರ್ವನಾಮಿಕ
Pronominal adjective ಸಾರ್ವನಾಮಿಕ ವಿಶೇಷಣ
Pronoun ಸರ್ವನಾಮ—Intorrogative—ಪ್ರಶ್ನಾರ್ಥಕ
—Personal —ಪುರುಷಾರ್ಥಕ
—Relative —ಸಂಬಂಧಾರ್ಥಕ
—Possessive —ಷಷ್ಠೀವಿಭಕ್ತಿಯ
—Demonstrative ನಿರ್ದೇಶಕ
—Distributive—ವ್ಯಕ್ತಿವಾಚಕ
—Indefinite —-ಅನಿರ್ದೇಶಕ
Prosthesis (∾ Prothesis) ಸ್ವರ ಪ್ರಾರಂಭ : ವರ್ಣಾಗಮ
Proto-Dravidian ಪೂರ್ವದ್ರಾವಿಡ : ಪ್ರಥಮ ದ್ರಾವಿಡ
Proto Dravidian form ಪೂರ್ವದ್ರಾವಿಡ ರೂಪ

## Q

Quadrisyllable ಚತುರಾಕ್ಷರೀ ಪದ

## R

Radical vowel ಮೂಲಸ್ವರ
Reaction ಪ್ರತಿಕ್ರಿಯೆ
Reciprocal assimilation ಅನ್ಯೋನ್ಯ ಸಮೀಕರಣ
Reflexive ಆತ್ಮಾರ್ಥಕ
Reflex meaning ಸ್ವೀಯಾರ್ಥ
Reflexive verb ಸ್ವಾರ್ಥ : ಆತ್ಮನೇಪದ

Regional dialects ಪ್ರಾದೇಶಿಕ ಉಪಭಾಷೆಗಳು
Relative ಸಂಬಂಧ ವಾಚಕ, ಸಂಬಂಧ ಸೂಚಕ
Relic form ಅವಶಿಷ್ಟರೂಪ
Residual form ಅವಶಿಷ್ಟರೂಪ
Resonance chamber ಅನುಕರಣನ ಕಾರಕ ಕೊಠಡಿ : ಪ್ರತಿಧ್ವನನ ಕೋಷ್ಠ
Respiration ನಿಶ್ವಾಸೋಚ್ಛ್ವಾಸ: ಉಸಿರಾಟ
Response ಪ್ರತಿವರ್ತನ
Retroflex ಮೂರ್ಧನ್ಯ
Retroflex consonants ಮೂರ್ಧನ್ಯ ವ್ಯಂಜನಗಳು
Retroflexatiou ಮೂರ್ಧನ್ಯೀಕರಣ
Retroflex-flap ಮೂರ್ಧನ್ಯರೇಫ
Rhematology } ಅರ್ಥವಿಜ್ಞಾನ
Rhematics }
Rill fricative ಉತ್ಥಿತ ಪಾರ್ಶ್ವ ಸಂಘರ್ಷೀ
Rolled ಲೋಡಿತ; ಲುಂಠಿತ
Root of the tongue ಜಿಹ್ವಾಮೂಲ
Rounded ಓಷ್ಠೀಕೃತ
Rural Dialect ಗ್ರಾಮೀಣ ಉಪಭಾಷೆ

## S

Science of Language ಭಾಷಾ ವಿಜ್ಞಾನ
Second person ಮಧ್ಯಮಪುರುಷ
Semantics ಶಬ್ದಾರ್ಥಶಾಸ್ತ್ರ ; ಶಬ್ದಾರ್ಥ ನಿರ್ವಚನಶಾಸ್ತ್ರ (< Gk Semaino =to mean
Semasiology ಶಬ್ದಾರ್ಥಶಾಸ್ತ್ರ
Semi-letters ಅಯೋಗ ವಾಹಗಳು
Semiotics ಶಬ್ದಾರ್ಥಶಾಸ್ತ್ರ
Semi-vowels ಅರ್ಧ ಸ್ವರಗಳು
Sesmiology ಅರ್ಥವಿಜ್ಞಾನ
Sharp ಪರುಷ
Shwa ಅಸ್ಪಷ್ಟಸ್ವರ (< Hebrew)
Short vowel ಹ್ರಸ್ವ ಸ್ವರ
Sibilants ಊಷ್ಮ ವರ್ಣಗಳು
Sibilancy ಊಷ್ಮಧ್ವನಿ
Singular number ಏಕವಚನ
Slang ಗ್ರಾಮ್ಯ : ಅಸಂಸ್ಕಾರಿ ಭಾಷೆ
Slurred ಶಿಥಿಲೋಚ್ಚಾರ
Soft consonants ಘೋಷ ವ್ಯಂಜನಗಳು
Soft Palate ಮೃದುತಾಲು
Sonants ಸರಳ ವರ್ಣಗಳು : ಘೋಷ ವರ್ಣಗಳು

Sounds ಧ್ವನಿಗಳು : ಉಲಿಗಳು
Sound continuem ಧ್ವನಿ ಪ್ರವಾಹ
Sound laws ಧ್ವನಿ ನಿಯಮಗಳು
Speech Sound ವಾಚ್ಯಧ್ವನಿ
Speech tract ಶಬ್ದೋತ್ಪತ್ತಿಸ್ಥಾನ: ಶಬ್ದೋತ್ಪತ್ತಿ ಆವರಣ
Spirants ಊಷ್ಮಗಳು : ಸಂಘರ್ಷೀ ವರ್ಣಗಳು
Stem ಶಬ್ದ : ಪ್ರಕೃತಿ
Stops ಸ್ಪರ್ಶಗಳು ; ಮೂಕ ವ್ಯಂಜನಗಳು ; ಶ್ವಾಸನಿರೋಧದಿಂದ ಉಚ್ಚರಿಸುವ ಕ, ತ, ಪ —ಇ. ಇ. ವ್ಯಂಜನಗಳು
Strong phoneme ಸಬಲಶಬ್ದ : ಸಬಲ ಧ್ವನಿಮಾ
Subject ಕರ್ತೃ :ಆಖ್ಯೆ
Substantive ನಾಮಪದ
Suffix ಪ್ರತ್ಯಯ: ಉತ್ತರ ಪ್ರತ್ಯಯ: ಅನುಸರ್ಗ (ತೀ.ನಂ. ಶ್ರೀ)
Surds ಪರುಷ : ಅಘೋಷ
Syllabation ಸ್ವರಾಗಮ
Syllables ಅಕ್ಷರಗಳು ಕಾಗುಣಿತಾಕ್ಷರಗಳು : ಉಚ್ಚಾರಣಾಂಶಗಳು
Synchronic Grammar ಪರಿಮಿತ ವ್ಯಾಕರಣ : ಸಂಕಾಲಿಕ ವ್ಯಾಕರಣ
Syncopation ಪದಮಧ್ಯ ವರ್ಣಲೋಪ : ಸ್ವರಲೋಪ: ವರ್ಣಲೋಪ
Synonym ಸಮಾನಾರ್ಥಕ ಭಿನ್ನರೂಪಗಳು ; ಪರ್ಯಾಯಪದ
Synthetic Languages ಸಂಶ್ಲೇಷ ಭಾಷೆಗಳು : ಪ್ರಾತ್ಯಾಯಿಕ—ಸಂಯೋಗಾತ್ಮಕ—: ಸಂಯೋಗಿ ಭಾಷೆಗಳು
Syntax ವಾಕ್ಯವಿಜ್ಞಾನ : ವಾಕ್ಯಶಾಸ್ತ್ರ : ಪ್ರಯೋಗಶಾಸ್ತ್ರ ; ವಾಕ್ಯ ಪರಿಚ್ಛೇದ

## T

Taboo ವರ್ಜಿತ ಶಬ್ದ : ನಿಷಿದ್ಧ ಶಬ್ದ
Tautology ದ್ವಿರುಕ್ತಿ : ಪುನರುಕ್ತಿ
Taxeme ಲಘುತಮರೂಪ
Technique ತಂತ್ರ
Teeth ದಂತ, ದಂತಪಂಕ್ತಿ : ಹಲ್ಲಿನಸಾಲು
Teeth ridge ದಂತ ಮೂಲ : ವರ್ತ್ಸ
Tendency ಪ್ರವಣತೆ
Tense ಕಾಲ
Tense vowels ಗಾಢಸ್ವರಗಳು
Tension ಗಾಢತೆ
Tenuis ಅಲ್ಪಪ್ರಾಣ ವರ್ಣ
Terminal contours ಧ್ವನಿಯ ಪರಿಮಿತ ಚಿಹ್ನೆ (ಬಾಣದ ಗುರುತು)
The articles ನಿರ್ದೇಶ ವಾಚಕ
Thematic stem ಸವಿಕರಣ ಪ್ರಾತಿಪದಿಕ
Third person ಪ್ರಥಮ ಪುರುಷ
Thought and Languageಭಾವ ಮತ್ತು ಭಾಷೆ

Toneme ತಾನಗ್ರಾಮ : ಸ್ವನಿಮಾ
Tonic accentuation ತಾನ ಸ್ವರಾಂಕನ : ಕಾಕು ಸ್ವರಾಂಕನ
Tongue ಜಿಹ್ವೆ : ನಾಲಗೆ
Transcription ಉಚ್ಚಾರಣೆಯನ್ನು ಬರವಣಿಗೆಯಲ್ಲಿ ಸಾಕಷ್ಟು ತೋರಿಸುವುದು :
ಧ್ವನಿಲೇಖನ
Transitive verb ಸಕರ್ಮಕ ಕ್ರಿಯಾಪದ
Translation ಭಾಷಾಂತರ : ಅನುವಾದ
Transliteration ಲಿಪ್ಯಂತರ : ಬರಿಯ ಲಿಪಿವ್ಯತ್ಯಾಸ
Trills ಕಂಪಿತಗಳು
Trilled fricative ಕಂಪನಯುಕ್ತ ಸಂಘರ್ಷ

## U

Umlaut ಅಭಿಶ್ರುತಿ
Unaspirated letters ಅಲ್ಪ ಪ್ರಾಣವರ್ಣಗಳು
Unaspirates ಪರುಷಗಳು : ಅಘೋಷಗಳು
Uninflected word ಅವ್ಯಯ
Unrounded ನಿರೋಷ್ಠ್ಯೀಕೃತ : ಅವೃತ್ತಾಕಾರ
Unrounding ಅವೃತ್ತೀಕರಣ
Unvoiced consonant ಅಘೋಷ ವ್ಯಂಜನ
Uvula ಅಲಿಜಿಹ್ವಾ : ಕಿರುನಾಲಗೆ
Uvular ಅಲಿಜಿಹ್ವೀಯ

## V

Variety of Speech ಉಕ್ತಿಭೇದ
Velar ಕಂಠ್ಯ : ಮೃದುತಾಲವ್ಯ : ಮೆತು ಅಂಗುಳು
Velar vowel ಪಶ್ಚಸ್ವರ : ಕಂಠಸ್ವರ
Velar plosive ಸ್ಪರ್ಶ
Velum ಮೃದುತಾಲು : ಕೋಮಲತಾಲು : ಸ್ನಿಗ್ಧತಾಲು : ತಾಲುಪೃಷ
Velarisation ಕಂಠ್ಯೀಕರಣ
Ventriloguism ದೂರಧ್ವನ್ಯನುಕರಣ
Verb ಕ್ರಿಯಾಪದ
Verbal adjective ಕೃದ್ವಾಚಿ
Verbal form ಆತ್ಮನೇ ಪದ
Verbal inflecxion ಕ್ರಿಯಾವಿಭಕ್ತಿ
Verbal noun (=Gerund) ಕ್ರಿಯಾನಾಮ
Vibration ಸ್ಪಂದನ
Vibrato ಸ್ವರಕಂಪನ (< Italian)
Vocal cavity ಮುಖದ್ವಾರ
Vocal chords ನಾದತಂತುಗಳು : ಧ್ವನಿತಂತಗಳು : ಘೋಷತಂತುಗಳು
Vocality ಮೃದುತ್ವ

Vocal organ ಉಚ್ಚಾರಣಾ ಅವ್ಯಯ
Vocative case ಸಂಬೋಧನಾ ವಿಭಕ್ತಿ
Voice ಘೋಷ: ನಾದ
Voice box ಧ್ವನಿಪೆಟ್ಟಿಗೆ
Voiced ನಾದತೆ: ಸರಳ: ಘೋಷ
Voiced plosives ಘೋಷ ಸ್ಪರ್ಶಗಳು
Voiced Sound ಘೋಷಧ್ವನಿ
Voiceless ಅಘೋಷ: ಶ್ವಾಸತೆ: ವಲ್ಲಿನಮ್-ತಮಿಳು
Voiceless Sound ಅಘೋಷಧ್ವನಿ
Vowels, ಸ್ವರಗಳು: ಉಸಿರುಗಳು (ಶ್ರೀ) ಉಯಿರ್-ತಮಿಳು
Vowel affinity ಸ್ವರಾನುರೂಪ್ಯತೆ
Vowel fracture ಸ್ವರಭಂಗ
Vowel harmony ಸ್ವರಸಾಮ್ಯ
Vowel Triangle ಸ್ವರತ್ರಿಕೋಣ
Vowel Quadrangle ಸ್ವರಚತುಷ್ಕೋಣ; ಸ್ವರಚತುರ್ಭುಜ
Vox nihili ಅಶುದ್ಧಿಜನ್ಯ ಶಬ್ದ

## W

Weak Phoneme ನಿರ್ಬಲ ಸ್ವನಿಮಾ
Wind pipe ವಾಯುನಾಳ: ಶ್ವಾಸನಾಳ
Whisper ಪಿಸುಮಾತು: ಕಿವಿಮಾತು: ಅಸ್ಪಷ್ಟಧ್ವನಿ
Whistle ಸಿಳ್ಳುಹಾಕುವುದು, ಸೀಟಿ ಊದುವುದು
Word ಶಬ್ದ: ಪದ
Wordo stylistics ಶಬ್ದೀಯಶೈಲಿಶಾಸ್ತ್ರ
World-auxilary ಕೃತ್ರಿಮ ವಿಶ್ವಭಾಷಾ

## Z

Zero-ending ಶೂನ್ಯಪ್ರತ್ಯಯ
Zero-feature ಶೂನ್ಯರೂಪ
Zero-morpheme ಶೂನ್ಯಶಬ್ದ

[ಕವನ ಸಂಕಲನದ ಒಂದು ಸಮಾಲೋಚನೆ]

# ದ್ಯಾವಾ ಪೃಥಿವೀ

## (೧) "ನೀರದ"

### ಲೇಖಕರು : ಗೌರೀಶ ಕಾಯ್ಕಿಣಿ

"ನಭಕ್ಕೆ ಏನಿದೆ ನೆಲದಲಿ ಆಸೆ?
ನೆಲಕಿದೆ ಆರದ ಶುಷ್ಕ ಪಿಪಾಸೆ?"
—ಬೇಂದ್ರೆ

ನೆಲ ಮುಗಿಲುಗಳನ್ನು ಮೂರು ಮೆಟ್ಟುಗಳಲ್ಲಿ ಆಳೆಯಲು ಪಾದವೆತ್ತಿದ ವಾಮನ ಪವಾಡ ಪುರುಷ! ಆದರೆ ಎತ್ತರದ ಆಳಿಗೆ ನಿಲುಕಬಹುದಾದಹಣ್ಣಿಗೆ ಎಟುಕಲು ಕೈಎತ್ತಿನಿಂತ ವಾಮನ? ಅವನೊಬ್ಬ ವಿನೋದ ಮೂರ್ತಿ! ದೂಷಕನೂ ಎನಿಸಬಹುದಾದ ವಿದೂಷಕ! ಕವಿವಿನಾಯಕರ ಈ ಕವನ ಸಂಗ್ರಹವನ್ನು ಸಮಾಲೋಚಿಸಲು ಅದರ ಕಾವ್ಯರಸಾಯನದ ಅನ್ವೇಷಣಮಾಡಲು ದುಡುಕುವ ನನ್ನ ಭೂಮಿಕೆ ಎರಡನೆಯ ವಾಮನನಾದೀತೇ? ಎಂಬ ಭಯ ಬಚ್ಚಿಟ್ಟುಕೊಂಡೇ ಈ ಸಾಹಸಕ್ಕೆ ಹೊರಟಿದ್ದೇನೆ. ಏಕೆಂದರೆ ಇಲ್ಲಿ ಈ ಎರಡನೆಯ ವಾಮನ ಮೊದಲನೆಯ ವಾಮನನ ಕೃತಿ ಚಮತ್ಕೃತಿಯ ಬೆಲೆಕಟ್ಟಲು ಹೊರಟಂತಿದೆ. ಆರಂಭದಲ್ಲಿಯೇ ಕವಿವರ್ಯ ಬೇಂದ್ರೆಯವರು ಕವಿವಿನಾಯಕರನ್ನು ತ್ರಿವಿಕ್ರಮನೆಂದು ಕರೆದಿದ್ದಾರೆ. "ಹಿಂದೊಮ್ಮೆ ಆಕಾಶ ಗಂಗೆಯಲ್ಲಿ ಹರಿದಾಡಿದ ಅವರ ಮನಸ್ಸು ಇಂದು ನೆಲಬಾನುಗಳನ್ನು ತನ್ನ ದೃಷ್ಟಿಕೋನದಲ್ಲಿ ಒಳಗೊಳ್ಳಬೇಕೆಂದು ಹವಣಿಸುತ್ತಿದೆ" ಎಂದಿವಾರೆ ಮುನ್ನುಡಿಯಲ್ಲಿ.

ಕವಿಯ ಈ ದೃಷ್ಟಿ ಅದು ಸಾಧಿಸಿದ ಕೋನ ಯಾವುದು? ಮುನ್ನುಡಿಕಾರರು ಅದನ್ನು ಎತ್ತಿ ಹೇಳಿಸ್ದಾರೆ. ಅದು ಪ್ರತಿಮಾದೃಷ್ಟಿ—ರೂಪಕ ಸಾಕ್ಷಾತ್ಕಾರ. ಈ ಚಿತ್ರದ ಚಿತ್ರಕ ಶಕ್ತಿಯ ವಿನ್ಯಾಸ ಹತ್ತು ಕವನಗಳಿಗಾಗಿ ಅರಳಿ "ನೀರದ" ಸೃಷ್ಟಿಯನ್ನು ರೂಪಿಸಿದೆ. ಕವಿಯ ಅಂತಃಪ್ರಜ್ಞೆಗೆ ಬಹುಮುಖದ ರನ್ನಗನ್ನಡಿಹಿಡಿದ ಅವರ ಕಲ್ಪನಾವೈಚಿತ್ರ್ಯದ ಪರಂಪರೆಗಳನ್ನು ಬಿಚ್ಚಿಬಿಡಿಸಿ ನೋಡಿದಹೊರತು ಈ ಕಾವ್ಯದ ಸತ್ವ ಸೊಗಯಿಸದು. ನಮ್ಮ ಈ ಸಮಾಲೋಚನೆ ಹಿಡಿಯಬೇಕಾದ ಸೂತ್ರವನ್ನು ಶ್ರೀ ಬೇಂದ್ರೆಯವರೇ ಸೂಚಿಸಿದ್ದಾರೆ. "ನಾವು ಇಲ್ಲಿನ ಕಲ್ಪನಾ ಧಾರೆಯ ಸಹಾಯದಿಂದಲೇ ಭಾವದ ಬೆನ್ನೇರಿ ಕವಿ ತೆರೆದ ಲೋಕಗಳಲ್ಲಿ ಸಂಚರಿಸಬೇಕಾಗಿದೆ." ಲೋಕ ಕವಿತೆರೆದರೂ ಸಂಚಾರದ ವ್ಯಾಪಾರ ನಮ್ಮದಾಗಬೇಕು. "ಈ ಕುಶಲಕರ್ಮ ಮಾಡಿ ಸುವಲ್ಲಿ ಕಾವ್ಯಯುಕ್ತಿ ಅರ್ಧ ಕೆಲಸ ಮಾಡಿದೆ. ಉಳಿದರ್ಧವನ್ನು ರಸಿಕರು ಮಾಡಬೇಕು."— ಈ ಕವಿಯ ಕಾವ್ಯಗುರುಗಳು ಎನ್ನುತ್ತಾರೆ. ರಸಿಕರ ಮೇಲಿನ ಕಾರ್ಯಾರ್ಥಕ್ಕೆ ಪೂರ್ವಭಾವಿ

ಯಾಗಿ ಕವಿ ಯೋಜಿಸಿದ ಕಾವ್ಯಯುಕ್ತಿ ಎಂತು, ಏನು ಎಂಬುದನ್ನು ಅರಿತುಕೊಳ್ಳುವ ಯತ್ನವೇ ಈ ರಸಪರಿಚಯ, ಇಲ್ಲವೇ ಸಮಾಲೋಚನೆ. ಇದರ ಸಾಫಲ್ಯ ರಸಿಕನು ಮುಂದೆ ಮಾಡ ಬೇಕಾದ ಆಲೋಚನೆ.

## ವಿನಾಯಕರ ಕಾವ್ಯ ವ್ಯಾಸಂಗದ ಅಗತ್ಯ

[ವಿನಾಯಕರು ೧೫–೨೦ ವರ್ಷಗಳ ಆಚೆಗೆ ತಮ್ಮ "ಕಲೋಪಾಸಕ" ಕವನ ಪ್ರಕಟಿಸಿದರು. ಅದರ ಜತೆಗೆ ಅವರೊಂದು ವಿಮರ್ಶಕ ಪ್ರಶ್ನಾವಲಿಯನ್ನು ಜೋಡಿಸಿದ್ದರು. ಆ ಪ್ರಶ್ನಾವಲಿಗೆ ಉತ್ತರಗಳನ್ನು ಕಲೆಹಾಕಿ ಆ ಮೂಲಕ ಹೊಸಗನ್ನಡ ಕಾವ್ಯಮಾರ್ಗದ ಹೊಸತೊಂದು ಮೂಲ್ಯಮಾಪನ ಅವರು ಮಾಡುವವರಿದ್ದರು. ಆದರೆ ಬೆಂಕಿಗೆ ಹೊಗೆ ಮುಚ್ಚಿಕೊಂಡಿರುವಂತೆ ನಮ್ಮ ಕನ್ನಡ ಸಾಹಿತ್ಯ ಸೇವೆಯ "ಸರ್ವಾರಂಭ" ಗಳಿಗೂ ಆವರಿಸಿ ನಿಂತಿರುವ ಔದಾಸೀನ್ಯದ "ಔದಾರ್ಯದ ಉರುಳಿನಲ್ಲಿ" ಆ ವಿಮರ್ಶಾ ವ್ಯಾಕರಣದ ಉಸಿರೂ ಹತ್ತಿಸಲ್ಪಟ್ಟು ಆಧುನಿಕ ಕನ್ನಡಕಾರ್ಯ ವಿಮರ್ಶೆಯ ಚರಿತ್ರೆಯಲ್ಲಿ ಎಷ್ಟೋ ಪುಟಗಳು ಬರೆಯದೇ ಬಿಟ್ಟುಹೋದವು.

ವಿನಾಯಕರ ಕಾವ್ಯದ ವಿಶೇಷ ವ್ಯಾಸಂಗ ಆಧುನಿಕ ಮತ್ತು ಅತ್ಯಾಧುನಿಕ ಕನ್ನಡಕಾವ್ಯ ಚರಿತ್ರೆಯ ದೃಷ್ಟಿಯಿಂದ ಅಗತ್ಯವಾಗಿದೆ. "ಶ್ರೀ" ಯವರ "ಇಂಗ್ಲೀಷ ಗೀತ" ಗಳು ತೆರೆದ "ನವ್ಯ" ಪರ್ವವನ್ನೇ ವಿನಾಯಕರು "ಸಮುದ್ರ ಗೀತ" ಗಳನ್ನು ಹೊಸತೊಂದು ಶ್ರುತಿಗೆ ಹಾಡಿ ಮುಂದಿನ ಹೆಚ್ಚಿನ ಹೊಚ್ಚಹೊಸ ನವ್ಯತೆಯ ಪರ್ವಣಿಗೆ ಒಯ್ದು ಮುಟ್ಟಿಸಿದರು. ಆಕ್ಸಫರ್ಡದಲ್ಲಿ ಆಂಗ್ಲ ಸಾಹಿತ್ಯದ ಜೀವ ನೆಲೆಯಲ್ಲಿ ಆಕಂಠಪಾನ ಮಾಡಿಬಂದ ಈ ಕವಿಯಷ್ಟು ಆಳವಾಗಿ ವಿಶಾಲವಾಗಿ ಆಂಗ್ಲ ಕವಿಗಳ ಪಾಶ್ಚಾತ್ಯ ಕಾವ್ಯ ಸಂಪ್ರದಾಯಗಳ ಅಭ್ಯಾಸ ಮತ್ತು ಆಧುನಿಕ ಕಾವ್ಯಪ್ರಜ್ಞೆಯ ಅನುಭವ ಕನ್ನಡದ ಇನ್ನಾವ ಆಧುನಿಕ ಕವಿಯೂ ಮಾಡಿಕೊಂಡಿರಲಾರ. ಮಾಡಿಕೊಂಡುದರ ಆರ್ತವನ್ನು ತನ್ನ ಅಚ್ಚಗನ್ನಡದ ರಸಘಟ್ಟಿಯಲ್ಲಿ ಇವರಂತೆ ವಿಪುಲವಾಗಿ ವಿವಿಧವಾಗಿ ತೋಡಿಕೊಂಡಿರಲಾರ. ನಮ್ಮ ಎಷ್ಟೋ ಕನ್ನಡ ಕವಿಗಳಿಗೆ ಇಂಥಾ ವ್ಯಾಸಂಗ, ವಿದ್ವತ್ತೆ ಮತ್ತು ಬಹುಶ್ರುತತ್ವ ಕಡಿಮೆಯೇ. ಎಷ್ಟೋ ಕವಿಗಳು ತಮ್ಮದಲ್ಲದೆ ಬೇರೆ ಕವಿಗಳ ಕವನಗಳನ್ನು ಓದುವ ವಾಡಿಕೆಯನ್ನೂ ಇಟ್ಟುಕೊಂಡಿಲ್ಲ. ಕನ್ನಡ ನವ್ಯಕಾವ್ಯದ ಕುರಿತು ಯಾವ ಅಭಿಪ್ರಾಯವೂ ಮಾಡದ ಮುಗ್ಧಜೀವಿಗಳೂ ನಮ್ಮ ಕವಿಗಳಲ್ಲಿ ಇದ್ದಾರೆ. ಶ್ರೀ ಅಡಿಗರ ಕವನದ ಒಂದು ಪಂಕ್ತಿಯನ್ನು ಓದದ ಸಾಧುಜೀವಿಗಳೂ ನಮ್ಮ ಈ ಕುರಿತ ಸಲ್ಲಾಪವನ್ನು ಕನಿಕರದಿಂದಲೋ ಕುತೂಹಲದಿಂದಲೋ ಕೇಳುತ್ತಾ ಕುಳಿತದ್ದು ನಾವು ಅಷ್ಟೇ ಕುತೂಹಲ ಕನಿಕರಗಳಿಂದ ಕಂಡದ್ದುಂಟು! "ಕುರಿತೋದದೆಯೂ" ಕಾವ್ಯಪ್ರಬೋಧದಲ್ಲಿ ಪರಿಣತಮತಿಯಾಗುವುದು ನಮ್ಮ ಕವಿರಾಜ ಮಾರ್ಗದ ನಡೆದುಬಂದ ದಾರಿ! ಆದರೆ ಆ ದಾರಿಯಲ್ಲಿಯೂ ಕನ್ನಡ ಕಾವ್ಯ ದೃಷ್ಟಿಗೆ ವಿಸ್ತರಿಸುವ ಹೊಸದೊಂದು ಕ್ಷಿತಿಜ, ಕಲ್ಪನಾಪಕ್ಷಿಗೆ ಸ್ವಚ್ಛಂದವಾಗಿ ಸಂಚರಿಸಲು ಹೊಸದೊಂದು ಆಕಾಶ ಈ ಪಂಡಿತ ಕವಿಯೂ ಕಾವ್ಯ ಪಂಡಿತರೂ ಕಲ್ಪಿಸಿಕೊಟ್ಟರು. ವಸ್ತು; ಛಂದಸ್ಸು, ಪ್ರತಿಮೆ, ಶೈಲಿ, ತತ್ವರತೆ, ತಂತ್ರ ಇವೆಲ್ಲ ಕ್ಷೇತ್ರಗಳಲ್ಲಿಯೂ ತಮ್ಮ ಪ್ರತಿಭೆಯ "ಓಘದಮೋಘ ಪ್ರಯೋಗಶಾಲೆ" ಯನ್ನೆ ತೆರೆದು ಒಂದು ರೀತಿ "ರೊಮ್ಯಾಂಟಿಕ" ಕಾವ್ಯ ಸಂಪ್ರದಾಯಕ್ಕೆ ರಕ್ತ ದಾನವಿತ್ತು "ವಿಮರ್ಶಕ ವೈದ್ಯ" ರಾದರು. ನವ್ಯ ಕಾವ್ಯದಲ್ಲಿಯೂ ಶುದ್ಧ, ವಿಶಿಷ್ಟ ವೀರ, ಆದಿ, ಇತ್ಯಾದಿ ಪ್ರಕಾರ ಪ್ರಯೋಗ, ಪ್ರಭೇದಗಳಿರಬಹುದು, "ನವ್ಯ" ಎಂಬ

ಪದವೇ ಒಂದು ಪ್ರತ್ಯೇಕ ಸಂಪ್ರದಾಯದ ಬಿರುದಾಗಿರಬಹುದು, ಸೊತ್ತಾಗಿರಬಹುದು. 'ನವ್ಯ' ದ ವ್ಯಾಖ್ಯೆ ತಮತಮಗೆ ತಕ್ಕುದಾಗಿ ತೋರಿದಂತೆ ಕೆಲವೊಮ್ಮೆ ತೀರ ವಿರುದ್ಧ ಅಥವಾ ವಿಪರೀತ ಬಗೆಯ ಕಾವ್ಯ ರೀತಿಗಳೂ ಅದೇ ಸಂಜ್ಞೆಯಿಂದ ವ್ಯವಹರಿಸುತ್ತಿರಬಹುದು.

ಆದರೆ ಸ್ಥೂಲವಾಗೆ ಕಾಲಾನುಕ್ರಮದಲ್ಲಿ ಇತಿಹಾಸಿಕ ದೃಷ್ಟಿಯಿಂದ ಹೇಳುವದಾದರೆ ದಿವಂಗತ ಪೇಜಾವರ ಸದಾಶಿವರಾಯರು ವೈಯಕ್ತಿಕ ಪ್ರಜ್ಞೆಯಲ್ಲಿ ಸಾಧಿಸಿದ ಹೊಸ ಕಾವ್ಯದ ಕ್ರಾಂತಿಯನ್ನು ಆಧುನಿಕ ಕನ್ನಡದ ಸಾಹಿತ್ತಿಕ ಪ್ರಜ್ಞೆಯಲ್ಲಿ ಸಾಧಿಸುವ ಕಹಳೆ ಊದಿದ ಅಗ್ರೇಸರ—aggressor ಅಲ್ಲ ಮತ್ತೆ ! ಕವಿ ವಿನಾಯಕ, ಈ ದೃಷ್ಟಿಯಿಂದಲೂ "ಸಮುದ್ರಗೀತ" ಗಳಿಂದೀಚೆಯ ಇವರ ಕೃತಿಗಳ ವಿಮರ್ಶೆಗೆ ಒಂದು ಚಾರಿತ್ರಿಕ ಮಹತ್ವವಿದೆ.

ಇಂಥ ವಿಮರ್ಶೆಯ ಆರಂಭವೇ ಕವಿಯ "ಪ್ರತಿಮಾದೃಷ್ಟಿ" ಯಿಂದ "ನೀರದ" ಅಥವಾ ಮೋಡಗಳನ್ನು ನಿಮಿತ್ತವಾಗಿಟ್ಟುಕೊಂಡು ಕವಿಯು ನಿರ್ಮಿಸಿದ ಪ್ರತಿಮಾ ಪ್ರಪಂಚವೂ ಆ ಪ್ರಪಂಚದ ಆತ್ಮವಾಗಿ ಮಿಡಿಯುವ ಅವರ ದಾರ್ಶನಿಕತೆಯೂ, ಆ ದರ್ಶನದ ಅಂತಃಸತ್ವವಾಗಿ ಸ್ಫುರಿಸುವ ಕವಿಯ ಶ್ರದ್ಧೆಯೂ. ಈ ಮೂರೂ ಪಾಕಗೊಂಡು ಹರಿದ ಕಾವ್ಯ ರಸಾಯನವೂ ಯಾವಹದ ಯಾವಹಿತ ಪಡೆದಿದೆಯೆಂಬುದನ್ನು ಇಲ್ಲಿ ನೋಡೋಣ.]

## ಸಂಕಲನಕ್ಕೆ ಒಂದು ಸಾಕಲ್ಯ ಬಂದಿದೆಯೇ ?

ಕವಿ ನೆಲದಮೇಲೆ ನಿಂತು ಚಿತ್ರವಿಚಿತ್ರವಾದ ಮೋಡಗಳ ರೂಪ ಮತ್ತು ವರ್ಣಗಳ ವೈಖರಿಯನ್ನು ಅಂದವಾಗಿ ನೋಡಿದ್ದಾನೆ. ನೋಟದ ಅಂದಕ್ಕೆ ನುಡಿಯ ಅಂದವನ್ನು ಜೋಡಿಯಾಗಿ ಇಟ್ಟಿದ್ದಾನೆ. ಆದರೆ ಇಲ್ಲಿ ನಾವು ಮುಖ್ಯವಾಗಿ ನೆನಪಿಸತಕ್ಕ ಮಾತೆಂದರೆ ಕವಿ ನಿಜವಾಗಿಯೂ ಪ್ರಕೃತಿವರ್ಣನಾ ಕೋವಿದನಲ್ಲ, "ನಿಸರ್ಗಕವಿ" ಗಳ ಜಾತಿಯವನಲ್ಲ. ನಿಸರ್ಗದ ನಿತಾಂತ ರಮಣೀಯವಾದ ಸೌಂದರ್ಯದ ನಿಬಿಡವೂ, ನಿಚ್ಚಳವೂ ಆದ ಶಬ್ದಚಿತ್ರಗಳನ್ನು ರೇಖಿಸಿ ರಂಜಿಸಿ ನೋಡುವವರೆಲ್ಲ ನಿರ್ನಿಮೇಷವಾಗಿ ನಲಿಯುವಂತೆ ನೀಳವಾಗಿ ನಿಲ್ಲಿಸುವ ವರ್ಣಕ ವರಕವಿ ನಮ್ಮಲ್ಲಿ "ಕುವೆಂಪು" ಒಬ್ಬರೇ ! ಆ ಮಟ್ಟ ಆ ಮಾಟ ನಾವು 'ನೀರದ' ದಲ್ಲಿ ಹುಡುಕುವದು ತಪ್ಪಾದೀತು. ಈ ಕವನಗಳ ಜಾತಿ ತಾತ್ವಿಕ, ಧ್ವನಿ ದಾರ್ಶನಿಕ, ವರ್ಣನೆಯ ವೈಖರಿ ವಿಶೇಷವಾಗಿ ಬೌದ್ಧಿಕ, "ನೀರದ" ಸಂಕಲನದಲ್ಲಿ ಕವಿ ಹಾಡುವ ಧಾಟಿಯೇ Metaphysical ರೂಪರಸ ಗಂಧಗಳನ್ನು ಹೃದಯ ಸ್ಪರ್ಶಿಯಾಗಿ ಶಬ್ದಗಳಲ್ಲಿ ಸೆರೆಹಿಡಿಯುವ "ಮಾಯದಬಲೆ" ಬೀಸುವ "ಮಾಯದಬಲೆ" ವಿನಾಯಕರ ಪ್ರತಿಭೆಯಲ್ಲ! ಹೀಗೆಂದ ಮಾತ್ರಕ್ಕೆ ಇದೊಂದು ದೋಷವೆಂದಾಗಲಿ ಲೋಪವೆಂದಾಗಲಿ ತಿಳಿಯಬೇಕಾಗಿಯೂ ಇಲ್ಲ. ಕಾಮರೂಪಿಯಾದ ಮೋಡದ ವಿವಿಧ ವಿನ್ಯಾಸಗಳ ವರ್ಣಿತಾಭಂಗ, ಅವುಗಳಲ್ಲಿ ಓಕುಳಿಯಾಡುವ ನೆಳಲು ಬೆಳಕುಗಳ ದೀಪ್ತಿ ಅವುಗಳ ವಿರಲವೂ ತರಲವೂ ಆದ ಒಂದು ಶೋಭೆ—ಇವೇ ಕವಿಗೆ ಮುಖ್ಯ ವರ್ಣ್ಯ ವಸ್ತುವಲ್ಲ. ಮೋಡಗಳನ್ನು ಮೋಡಗಳಾಗಿ ಕವಿ ಕಾಣುವುದು ಕೆಲಮಟ್ಟಿಗೇ-ಮೊದಲನೇ ಕವನದ ಕೆಲವು ಪಂಕ್ತಿಗಳಲ್ಲಿ ಮಾತ್ರ-ಆ ಮುಂದೆ ಅಂಥಾ ಸ್ವಭಾವೋಕ್ತಿ ಎಲ್ಲೂ ಕಾಣಿಸಿಕೊಳ್ಳುವುದಿಲ್ಲ. ಕವಿಯ ಊಹನೆ ಉತ್ಪ್ರೇಕ್ಷೆಗಳ ಇಂದ್ರಜಾಲವನ್ನೇ ಹೆಣೆದು—ಒಂದೆಡೆ ನೀರೂ' ಸೌಂದರ್ಯದ ಸತ್ಯಕ್ಕೆ ಹಿರಣ್ಮಯ ಪಾತ್ರೆಯನ್ನೇ ಮುಖವಾಡವಾಗಿ "ಕೀಲಿಸಿ" ದಂತಿದ್ದರೆ ಇನ್ನೊಂದೆಡೆಗೆ "ಭಾವಾಂತರನ್ಯಾಸ" (ಈ ಪದ ಪ್ರಯೋಗದ ಹೊಣೆ ಕೇವಲ ನನ್ನದು !)

ವನ್ನು ಸಾಧಿಸಿ ನೀರದವನ್ನೇ ತನ್ನ ತಾತ್ವಿಕ ಸಂದೇಶದ ಮೌನವೀಣೆ ಮಿಡಿಸುವ ನಾರದನನ್ನು ಮಾಡಿ—ವಾಹನವನ್ನೊ ರೂಪಕವನ್ನೋ ಮಾಡಿ ತೋರಿಸಿದಂತಿದೆ. ಪ್ರಥಮ ಕವನದಿಂದ ಮುಂದೆ "ಮೋಡ ಒಂದು ವೃತ್ತಿ" ಯಾಗಿಬಿಡುತ್ತದೆ. "ಇದು ಮಾನವೀಯ ವ್ಯಕ್ತಿತ್ವದ ರೂಪಕವೂ ಆಗಿದೆ". "ಮರ್ತ್ಯಲೋಕದ ಪ್ರತೀಕವಾದ ಮೋಡಗಳ ನಾಡಿದು" ಮೋಡದ ಉಗಿ ಮೋಡವೆಲ್ಲ ಕಾರ್ಬೊನ್ನಿನ ಹೊಗೆ ತುಂಬದೆ ಇಲ್ಲ, ಚಿನ್ಮಯವು ಮೃಣ್ಮಯವಾಗದೆ ಇಲ್ಲ. ಕವಿ ಪ್ರತಿಭೆಯ "ಊರ್ಣನಾಭ" ಇದೇ ಜಾಡನ್ನು ತನ್ನ ಸುತ್ತು ನೆಯ್ಯುತ್ತ ನಡೆಯುತ್ತದೆ; ಮತ್ತು "ನೀರದ" ವು ಸ್ಫುಟವಾಗಿ ರೂಪಕವಲ್ಲದಲ್ಲಿ, ಪ್ರತೀಕವಾಗದಲ್ಲಿ, ಪ್ರತಿಮಾ ಮಾಲೆಗಳ "ಹೂಕರಂಡಕ" ಗಳನ್ನು ತೂಗಿಸುವ ಒಂದು ನಿಮಿತ್ತವಾಗುತ್ತದೆ.

ಇದರ ಫಲವಾಗಿ ಹತ್ತೂ ಕವನಗಳು ಒಂದೇ ಮನೋಗತದ ಹತ್ತು ಮುಖಗಳಾಗಿ ತೋರುವದಿಲ್ಲ. ಹಾಗೆ ನೋಡಿದರೆ ತೋರಬೇಕಾಗಿಯೂ ಇದ್ದಿಲ್ಲ. ಆದರೆ ಒಂದು ಹೆಸರು ಪಡೆದ ಒಂದು ವಸ್ತುವನ್ನೆ ಅಳವಡಿಸಿಕೊಂಡ ಸಂಕಲನದ ಒಳಕಟ್ಟು ಕೇವಲ ನೈಮಿತ್ತಿಕವಾಗ ಬಾರದು. ಕವಿಯ ಚಿತ್ತವೃತ್ತಿಗಳು ಬೇರೆ ಬೇರೆಯಾಗಬಹುದು. ಆದರೆ ಅವುಗಳ ಭಿತ್ತಿ ಒಂದೇ ಇರುವದೆಂಬ ಅರಿವು ರಸಿಕನಿಗೆ ಆಗಬೇಕು. ರೂಪಕ ಸಾಕ್ಷಾತ್ಕಾರದ ಲಕ್ಷಣ ಕವಿ ವರ್ಯ ಬೇಂದ್ರೆ ಅನ್ನುವಂತೆ "ಕಲ್ಪನಾ ಚಿತ್ರಗಳು ತಮ್ಮ ವೈವಿಧ್ಯದಿಂದ ಒಡೆದು ಚಲ್ಲಾಪಿಲ್ಲಿ ಯಾಗದೆ ಒಂದು ಪಿಂಡವನ್ನು ಪಡೆದಂತೆ ರೂಪಗೊಳ್ಳುವುದು" ಈ "ಸಪಿಂಡೀಕರಣ" (ಸಾಧ್ವರ್ಥ ದಲ್ಲಿ) ಇಲ್ಲಿ ಸಾಧ್ಯವಾಗಿದೆಯೋ ? ಅದಕ್ಕಾಗಿ ಕವಿ ಜಾಗ್ರತೆಯಿಂದ ಜತನ ಮಾಡಿದ್ದು ಕಂಡು ಬರುತ್ತದೆ, "Soluitur am berlands" ಪದ್ಧತಿಯಂತೆ, ಕೆಲವೊಂದು ಪದಗಳ ಹಾಗೂ ಪ್ರತಿಮೆಗಳ ಪುನರಾವೃತ್ತಿ ಕವನಾಂತರಗಳಲ್ಲಿಯೂ ಸಾಗಿಸಿದ ಸುತತ್ಯ ಅವುಗಳ ಸುತ್ತಲೂ ಕಿರಣಿಸಿದ ಒಂದು ಪೈಶಾಚಿಕ ವಿಭ್ರಮದ ಪ್ರಭಾವಲಯದ ಸಮುಧಾತು "ನೀರದ-ನಾರದ" ಎಂಬ ದ್ವಂದ್ವ ತತ್ವದ ಪುನರುಕ್ತಿ—ಇವೆಲ್ಲ ಈ ಪ್ರತಿಮಾಪುಂಜದ ಸಪಿಂಡೀಕರಣದ ಕಾವ್ಯ ಯುಕ್ತಿಗಳು. ಆದರೂ ಒಟ್ಟಾರೆ "ನೀರದ"ವೆಂಬ ಖಂಡಕಾವ್ಯದ ಸಂದೇಶದ ಏಕಮುಖತೆ ಕವಿಗೆ ಉದ್ದಿಷ್ಟವಿದ್ದ ಹಾಗೂ ರಸಿಕರಿಗೆ ಇಷ್ಟವಿದ್ದ ಹದಕ್ಕೆ ಹೆಡಸಾಗಿ ಬಂದಿಲ್ಲ.

ಉದಾಹರಣೆಗೆ ೫-೬ ಕವನಗಳು ತಮ್ಮಮಟ್ಟಿಗೆ ಸರ್ವಾಂಗ ಸುಂದರವಾಗಿವೆ. ಅರ್ಥ ನಿಬಿಡವಾಗಿವೆ. ದಾರ್ಶನಿಕವಾಗಿವೆ. ಸಮಾಲಂಕೃತವಾಗಿವೆ. ಆದರೆ ಮೋಡಗಳ ವಾಚ್ಯ, ಇಲ್ಲವೆ ಸೂಚ್ಯಭಾವದೊಂದಿಗೆ ಇವುಗಳ ಸಮನ್ವಯವಿರಲಿ ದೂರಾನ್ವಯವೂ ಇಲ್ಲ. ಅದೇ ರೀತಿ ೧೦ನೇ ಕವನದ್ದು. ಅಲ್ಲಿ "ನೀರದದೊಲು" ಎಂದು ಎರಡುಸಲ ಹೇಳಿ ಕವಿಯೇ ಮೋಡದ ಮಂಜು ಮುಸುಕು ಹರಿದೊಗೆದು ನೇರವಾದ ತತ್ವದ ಮಾತನ್ನೆ ಆಡಿದ್ದಾನೆ. ೫-೬ ಕವನಗಳು ಶುದ್ಧ ಚೈತನ್ಯ ಚೈತ್ಯ ತತ್ವದ ಆಪ್ವಾನ ಮತ್ತು ಆವಾಹನಗಳಿಗೆ ಮಿಾಸಲು, ಇದು "ಓ ನೀರದ ಬಾ" "ನಿನ್ನ ಜತೆಗೆ ನಿಂತೆ ನೀರದ" ಎಂದು ಮುದ್ರಿಕೆ ಇಟ್ಟಮಾತ್ರಕ್ಕೆ ಮೋಡಗಳಿಂದ ಸ್ಫುರಣ ಇಲ್ಲವೇ ಸ್ಮರಣ ಪಡೆದಂತಿಲ್ಲ. "ಘನಮನ ಪ್ರಜ್ಞೆ" ಯನ್ನು ಪಡೆದು ಭೂಲೋಕವನ್ನೆ ದೇವ ಲೋಕವನ್ನಾಗಿಸಲು "ನಿತ್ಯಚೇತನ" ಪುರುಷನಾಗಿ "ನೀರದದೊಲು" ವರ್ಷಿಸಲು ಕವಿ ತನ್ನ ಪ್ರತ್ಯಗಾತ್ಮ (?) ವನ್ನೆ ಪ್ರಾರ್ಥಿಸುವ ಈ ಕವನ ನೀರದದ ಕುರಿತಾದದ್ದಲ್ಲ, ನಿಜವಾಗಿ ೫-೬ ಮತ್ತು ೧೦ ಈ ಕವನಗಳ ತ್ರಿಪುಟೀಕರಣದಲ್ಲಿ ಶ್ರೀ ಅರವಿಂದರ ಪೂರ್ಣಯೋಗದ ಒಂದು ಅಣು ಬಿಂಬವೇ ಅಂತರ್ಗೋಲ ಕನ್ನಡಿಯ ಪ್ರತಿಬಿಂಬದಂತೆ ರೂಪಿತವಾಗಿದೆ. ಆ ಮೂರೂ ಒಂದು

ಪ್ರತ್ಯೇಕ ಸಂಕಲನವಾಗುವಂತೆ ಧ್ವನಿವೈಕಲ್ಯವನ್ನು ಪಡೆದಿವೆ. 'ನೀರದ' ಸಂಕಲನದ ನಡುವೆ ಈ ಮೂರು ಕವನಗಳ ಭಾವೋಪಪತ್ತಿಗೆ ಅವಕಾಶವಿರುವುದಿಲ್ಲ.

## "Soluitur Ambrelands" ತಂತ್ರದ ಅವಲಂಬನೆ

"ಇಕ್ಷ್ವಾಯಣದ ದೊಡ್ಡರೂಪಕ ಕಥೆಯನ್ನು ಬಿಟ್ಟರೆ 'ನೀರದ' ಸಂಕಲನದಲ್ಲಿ ಅಲ್ಲಲ್ಲಿ ಬಂದ ಪ್ರತಿಮೆಗಳ ಸಂಖ್ಯೆ ೨೦-೨೫ ತುಂಬುತ್ತದೆ. ಹಿಂದೆ ಹೇಳಿದಂತೆ ಸಂಕಲನದ ಸೂತ್ರ ಬಂಧಕ್ಕಾಗಿ ಅವುಗಳಲ್ಲಿ ಹಲವಾರು ಕವನದಿಂದ ಕವನಕ್ಕೆ ಹಾಯಿದ ಅವುಗಳ ಸಾರ್ಥಕತೆಯನ್ನು ಸಾರವತ್ತಾಗಿ ಮಾಡಲಾಗಿದೆ. ಚಿತ್ರಕಾರನು ಕೆಲವೇ ಬಣ್ಣಗಳನ್ನು ಎಲ್ಲಾ ಆಕೃತಿ ರೂಪಗಳಲ್ಲಿ ಆಡಿಸಿ ಕೂಡಿಸಿ ಚಿತ್ರಕ್ಕೆ ಒಂದು ಘನತೆ ತರುತ್ತಾನೆ—ಕಸೂತಿಗಾರ ಕುಸುರುಗೆಲಸದಲ್ಲಿಯೂ ಕೆಲವೊಂದು ಅಚ್ಚಿನ ಆಕೃತಿಗಳು ಹಾಸಿನ ಉದ್ದಕ್ಕೂ ಹೆಣೆದುಹೋಗುತ್ತಾನೆ. ಅದೇ ತಂತ್ರ ಕವನಕಲೆಗೂ ಒಪ್ಪುತ್ತದೆ. ಕವಿ ಈ ತಂತ್ರವನ್ನು ಸಾಕೂತವಾಗಿ ಉಪಯೋಗಿಸಿದ್ದಾನೆ. ೧) ಬಂದ ಪ್ರತಿಮೆಗಳಲ್ಲಿ ಕೆಲವು ಬಿಡಿಯಾಗಿ ತಾನೇತಾನಾಗಿ ನಿಂತವು, ೨) ಕೆಲವು ಬೇರೊಂದು ಮಾಣ್ಕೆಯಲ್ಲಿ ಮತ್ತೆ ಎತ್ತಿಕೊಂಡು ಮುಂದುವರಿಸಲಾದವು. ೩) ಇನ್ನೂ ಕೆಲವು ಕಲ್ಪನಾರೂಪಣ ಕ್ರಿಯೆಯಲ್ಲಿ ಹೆಚ್ಚು ಸಕ್ರಿಯವಾಗಿ ಭಾಗವಹಿಸಿ ಕೃತಾರ್ಥವಾದವು. ಒಂದನೆಯದರ ಮಾದರಿ ದಾಳಿಯಿಟ್ಟ ದುರ್ಗದ ಬೇಡರ ಪಡೆ. ಕುಂಬಾರನ ತಿಗರಿಯಮೇಲುದಿಸುವ ಕೊಡಪಾನದ ಕೋಟೆ. ಎರಡನೆಯದರ ಮಾದರಿ ಹುಂಬಗುಳಿಗುರುಬ ತರುಬುವ ಬಾಂಬೋಲದ ಉಣ್ಣೆ ಕುರಿಮರಿ. ಇದೇ ಕುರಿಮರಿಯ ಪ್ರತಿಮೆ ಬೇರೆ ಬಣ್ಣಗೊಂಡು ಕುಲೋದ್ಧಾರಕ ಯೇಸುವಿನ ಕಂಕುಳಿಗೆತ್ತಿದ ಹಾಲು ಬಿಳಿ ಕುರಿಮರಿಯಾಗಿ ಮತ್ತೆ ಮೂಡಿದೆ. ಒಂದು ಇನ್ನೊಂದನ್ನು ಜ್ಞಾಪಿಸಿಕೊಟ್ಟಾಗ ಸಂದರ್ಭ, ಭಾವ, ಮತ್ತು ಚಿತ್ರಮಯ ಶೀವಿಯ ಅನ್ಯೋನ್ಯ ಭಿನ್ನತೆಯ ಅಂತರ್ವಿರೋಧದಿಂದಲೇ ಒಂದು ಹೊಸ ದೀಪ್ತಿಯುಂಟಾಗಿ ಅದು ಮನೋಜ್ಞವೂ ಹೃದ್ಯವೂ ಅನಿಸುತ್ತದೆ. ಇನ್ನು ಮೂರನೆಯದರ ಮಾದರಿ ದುರ್ಗಾದೇವಿಯ ಸಿಂಹ, ವೀಣಾಪಾಣಿಯ ಮಯೂರ, ಕೂರ್ಮವರಾಹ ವ್ಯಾಘ್ರ, ಅಷ್ಟಾವಕ್ರ, ತಿಮಿಂಗಿಲು, ಘಟಸರ್ಪ ಇತ್ಯಾದಿ ಈ ಪ್ರತಿಮೆಗಳನ್ನು ನಿರೂಪಣಕ್ಕೆ ಹೆಚ್ಚು ಘನಿಷ್ಟವಾಗಿ ಹೊದಿಸಲಾಗಿವೆ. ಮುಂದಿನ ಎರಡು ಕವನಗಳಲ್ಲಿಯೂ ಈ ಪ್ರತಿಮೋಕ್ತ ಪ್ರಾಣಿಗಳನ್ನು ಅವುಗಳ ಪ್ರಕೃತಿಧರ್ಮಕ್ಕೆ ತಕ್ಕಂತೆ ವ್ಯವಹರಿಸಿಕೊಳ್ಳಲಾಗಿದೆ.

ಎರಡನೆಯ ಮಾದರಿಯ ಇನ್ನೊಂದು ಉದಾಹರಣೆ ಮೋಡವನ್ನು ಮರದ ಎಲೆಯಾಗಿ ಫಲವಾಗಿ ಕಲ್ಪಿಸಿದ್ದು. ಮೊದಲಿಗೆ ಉದಧಿಯುದ್ದಕ್ಕೆ ಮುಗಿಲುದ್ದಕೂ ಬೆಳೆದ ಮರದ ಉದುರಿದ ಎಲೆ ಮೋಡವಾಗಿದೆ. ಮುಂದೆ ಸೂರ್ಯೋದಯ ಸೂರ್ಯಾಸ್ತಗಳ ವೃಕ್ಷಕ್ಕೆ ಅದು ಪಯೋಧರ ಫಲವಾಗಿದೆ. ಕುರಿಮರಿಯ ಪ್ರತಿಮಾನದಂತೆ ಇಲ್ಲಿಯೂ ಸಾಮ್ಯವಿದೆ, ಭೇದವಿದೆ. ಉಕ್ತಿ ಚಮತ್ಕೃತಿ ಇದೆ. ಆದರೂ ಆ ಪ್ರತಿಮೆಯ ಹೃದ್ಯತೆ ಈ ಪ್ರತಿಮೆಗೆ ಬಂದಿಲ್ಲ. ಅಲ್ಲಿ ಗಾಳಿ ಗುರುಬನ ಹುಂಬತನಕ್ಕೆ ಕುಲೋದ್ಧಾರ ಏಸುವಿನ ಕರುಣೆ ಸಮ್ಮುಖವಾಗಿ ನಿಂತು ಉಣ್ಣೆ ಗುರಿಮರಿ ಹಾಲ ಬಿಳಿಗುರಿಮರಿಯಾಗಿ ಕಲ್ಪನಾಭೇದಕ್ಕೆ ಧ್ವನಿಪುಷ್ಟಿಯ ಸಂಪತ್ತು ತುಂಬುತ್ತದೆ. ಆದರೆ ಇಲ್ಲಿ ಈ ಎಲೆಮರ ಫಲಗಳ ಪ್ರತಿಮೆ ಶುದ್ಧ (ಶುಷ್ಕ?) "ವಿದಗ್ಧಭಣಿತ ಭಂಗಿಮೆ" ಅರ್ಥದ ಇಲ್ಲವೆ ಭಾವದ ರತ್ನಕ್ಕೆ ಬೈಲುಗಳನ್ನು ಕೆತ್ತಿದಷ್ಟು ಅವುಗಳಿಂದ ಸೂಸುವ ಕಿರಣಚ್ಛವಿ

ಹೆಚ್ಚು. ಅಂಥ ವರ್ಣನಾ ವೈವಿಧ್ಯ ಬರೆ ವಾಗ್ವೈಚಿತ್ರ್ಯವಲ್ಲ ಅಲಂಕರಣ ಆಭರಣವಾಗದೆ ಮಧುರಾಕೃತಿಗೆ ಮಂಡನವಾಗುವರೀತಿ ಅದು. ಮ್ಯಾಥ್ಯೂ, ಅರ್ನೊಲ್ಡ್ ಪ್ಲೇವಕವಿಯ ಕುರಿತು ಬರೆದ ಮಾತು ಇಲ್ಲಿ ನೆನಪಾಗುತ್ತದೆ—"A sentiment may be changed by being put into a pointed and oratorical form, yet may still be very effective in that form, but a description, the moment it takes its eyes off that which it is to describe and begins to think of Ornamenting itself, is worthless."

"ನೀರದ" ಸಂಕಲನದ ಏಕಸೂತ್ರತೆಗೆ ನೆರವಾಗಲು ಕವಿ ಯೋಜಿಸಿದ ಇನ್ನೊಂದು ಕ್ಲಪ್ತಿ "ನೀರದ-ನಾರದಸೂತ್ರ" ೨-೩-೪ ಮತ್ತು ೧೦ನೆ ಕವನಗಳಲ್ಲಿ ಈ ನೀರದ ನಾರದರ ಉಲ್ಲೇಖ ಬಂದಿದೆ. ನೀರದ "ಚಿತ್ರರಂಜನೆ" ಯೊಂದಿಗೆ ನಾರದನಂತೆ ದಿವ್ಯ ಸಂದೇಶವನ್ನು ನೀಡುವದೆಂದು ಮುನ್ನುಡಿಯಲ್ಲಿ ಹೇಳಲಾಗಿದೆ. ಆದರೆ ಕವಿಬಳಸಿದ ರೀತಿಯಲ್ಲಿ ತುಸು ವ್ಯತ್ಯಾಸವಿದೆ. ಕವಿ ನೀರದವೇ ನಾರದನೆಂದೂ ನೀರದ ಸೃಷ್ಟಿಯನ್ನು ಆಳಲು ನಾರದ ದೃಷ್ಟಿ ಬೇಕೆಂದು ಹೇಳುವ ನಲ್ಲದೆ ನೀರದನಂತೆ ವರ್ಷಿಸುತ್ತ ನಾರದನಂತೆ ಹರ್ಷಿಸುತ್ತ ಘನಮನ ಪ್ರಜ್ಞೆ ಭೂಲೋಕವನ್ನೇ ದೇವಲೋಕವಾಗಿ ಮಾಡಬೇಕೆನ್ನುತ್ತಾನೆ. ಈ ನೀರದ-ನಾರದ ಸೂತ್ರವಾದರೂ ಏನು? ಊರ್ಧ್ವತೆ, ಚಲನ, ಧಾರಣ, ಅವತರಣ,—ಇದನುಳಿದೆಲ್ಲವು ಕಾಮು. ಕಾಲಹರಣ."

## ನಾರದ-ನೀರದ ಸೂತ್ರ ?

ಇವೆಲ್ಲ ಉಕ್ತಿ ಯುಕ್ತಿಗಳಿಂದಲೂ "ನೀರದ" ಒಂದು ಅಖಂಡ ಸಂದೇಶವನ್ನು ಸಾರುವು ದಿಲ್ಲ. ಹೆಚ್ಚುಕಡಿಮೆ ಒಂದೇ ವಿಷಯವನ್ನು ಅಳವಡಿಸಿಕೊಂಡ ಹತ್ತು ಕವನಗಳನ್ನು ಒಂದೆಡೆಗೆ ಪೋಣಿಸಿ ಆ ಮೂಲಕ ಸಿದ್ಧವಾದ ರೂಪಕ "ಚಿತ್ರಶಾಲೆ" ತನ್ನ ವಿಲಾಸ ವೈಚಿತ್ರ್ಯ ದಿಂದ "ಭಾವೋದ್ದೀಪನ ಸಮರ್ಥ" ವಾಗಿದ್ದರೂ ಒಂದು ಸಮಗ್ರತೆಯ "ಕೇಂದ್ರೀಕರಣ" (Focus) ಇಲ್ಲದ್ದರಿಂದ ರಸಾವೇಶಕವಾಗಿಲ್ಲ. ನಿಮಿತ್ತ ಭೇದದಿಂದಲೂ ಒಂದೇರಸ ಮೂಡ ಬಹುದು ಒಂದೇ ನಿಮಿತ್ತದಿಂದಲೂ ರಸಭೇದಗಳು ಉಂಟಾಗಬಹುದು. ಮುಖ್ಯ ಬೇಕು ಕೇಂದ್ರೀಕರಣ. "ಆ ಒಳಗಿರ್ಪೊಂದು ನೆವಂ" ನೀರದ-ನಾರದ ಸೂತ್ರವಾಗಿದೆಯೇ? ಅದೇ ಒಂದು ಬಗೆಯಾಗಿ ಲೇಪಿಸಿದಂತೆ "ಡಬ್" ಮಾಡಿದಂತೆ ಅನಿಸುತ್ತದೆ— ಹೇಗೆಂಬುದನ್ನು ನೋಡಿರಿ ಈ ನೀರದ-ನಾರದ ಕಲ್ಪನೆ ಮೊದಲು ಮೂಡುವುದು. ೨ನೆ ಕವನದ ತುತ್ತ ತುದಿಯಲ್ಲಿ ನೀರದಕ್ಕೆ ಅನ್ವಯಿಸಿದ ಕೆಲವು ವಿಶೇಷಣಗಳು "ಗಗನವಿಹಾರಿ-ತ್ರಿಲೋಕ ಸಂಚಾರಿ" ಕವಿಗೆ ನೀರದ-ನಾರದರ ಸಾಮ್ಯವನ್ನು ಒಮ್ಮೆಲೆ ಸೂಚಿಸಿದಂತಿದೆ. ಈ ಲಕ್ಷಣ ಸಾದೃಶ್ಯದೊಂದಿಗೆ ನೀರದ-ನಾರದರ ಶಾಬ್ದಿಕ ಸಾರೂಪ್ಯ ಕವಿಯ ಊಹೆಗೆ ಹೊಳೆದಿರಲೂ ಬಹುದು. ಈ ಶಾಬ್ದಿಕ ಸಾಮ್ಯವನ್ನು ನಾನೂ ಒಂದೊಮ್ಮೆ ಒಂದು ಕವನದಲ್ಲಿ ಬಳಸಿ ದ್ದುಂಟು. ಕೋಗಿಲೆಯ ಕುರಿತು—

"ಗಾನಗಗನದಲ್ಲಿ ನೀನೇನೀರದ!
ನಲಿದು ಉಲಿದು ಬಾ ನಾದದ ನಾರದ!" ಎಂದು.

ಬರೆದದ್ದುಂಟು. (ಒಂದು ಬಾಸುಲಿಗಾಗಿ ರಚಿಸಿದ ಹಾಡಿನಲ್ಲಿ!)

ನಿಜವಾಗಿಯೂ ನೀರದ-ನಾರದ ಇವೆರಡು ಕಲ್ಪನೆಗಳಲ್ಲಿ ಜೀವಾಳದ ಜತೆ ಇರುವುದೋ ಇಲ್ಲವೊ ಅದು ಪ್ರತ್ಯೇಕ. ಇವೆರಡರ ಜತೆ ಈ ಸಂಕಲನದಲ್ಲಿ ಕೂಡಿಸಿದ್ದು ಆ ಪಾತತಃ ಇಲ್ಲವೇ ಆಗಂತಕವಾಗಿ ಎಂದೆನಿಸುವಂತಿದೆ. ೨ನೇ ಕವನದ ತುದಿಗೆ ನೀರದವೇ ನಾರದವೆಂದದ್ದು. ಯೌಗಿಕವಾಗಿ ನಿಜವಿದೆ. (ನೀರ, ನಾರ, ಎರಡೂ ನೀರೇ!) ಆದರೆ ಕಾವ್ಯ ಸತ್ಯವಾಗಿ ಈ ಸಾಮಂಜಸ್ಯ ಸಹಜವಾಗಿಲ್ಲ. ಅದೇ ೩ನೇ ಕವನದ ಉತ್ಕೃಷ್ಟವಾದ ಉತ್ಪ್ರೇಕ್ಷಾ ಸರಣಿಯ ಕೊನೆಗೆ ಕವಿಗೆ ಮತ್ತೆ ಈ ದ್ವಂದ್ವ ಸೂಚಿತವಾಗಿದೆ. ಆದರೆ ಇಲ್ಲಿ ಈ ದ್ವಂದ್ವ ತುಸು ವಿರೋಧಿ ಯಾಗಿದೆ. ಒಮ್ಮೆಲೆ ಕವಿ "ಇಂತಿದೆ ಭೂಮಿ. ಇಂತಿದೆ ವ್ಯೋಮ ಇಂತಿದೆ ನೀರಿನ ಸೃಷ್ಟಿ" ಎಂದು ಉದ್ಗರಿಸುತ್ತಾನೆ—(ಇಲ್ಲಿ ಭೂಮಿಯು "ಇಂತಿರವು" ಎಂತು ಬಂತು?) ಆದರೆ ಇಲ್ಲಿ ನೀರದವೇ ನಾರದವಾಗಿಲ್ಲ. ಈ ಭೂಮಿ ವ್ಯೋಮಗಳನ್ನು ಆಳೆಯಲು ನಾರದನ ಉಜ್ವಲ ದೃಷ್ಟಿ ಬೇಕೆಂದೂ ಕವಿ ಉದ್ಗರಿಸುತ್ತಾನೆ—ಆದರೂ ಇಲ್ಲಿಯೂ ನೀರದ-ನಾರದರ ಪ್ರತಿಮೆ ಕವನದ ಕೊನೆಗೆ ಒಂದು ತಾಯತದಂತೆ ತೂಗಾಡುತ್ತದೆ! ಇನ್ನು ೪ನೆಯ ಕವನದಲ್ಲಿ ಇನ್ನೂ ಒಂದು ಸೋಜಿಗವಾಗಿದೆ. ಹಿಂದಿನ ಕವನಾಂತ್ಯ ಕ್ರಮವನ್ನು ಅವಲೋಕಿಸಿದರೆ ಇಲ್ಲಿಯೂ ಈ ಕವನ "ಇದೇ ನೀರದ-ನಾರದ ಸೂತ್ರ" ಎಂಬ ಪದ್ಯದೊಂದಿಗೆ ಮುಗಿಯಬೇಕು. "ಇಲ್ಲಿದೆ ನೀರದ ಮೂಲತತ್ವ ದುಗಮ"—ಎಂದು ಪಾರಮಾರ್ಥಿಕತೆಗೆ ಹೊರಟ ಕವಿ ನೀರದ-ನಾರದ ಪ್ರತಿಮೆ ಮತ್ತೆ ಪದಕದಂತೆ ಇಲ್ಲಿ ಪೋಣಿಸಿಟ್ಟ—ಅಂದರೆ ಮುಂದೆ ಚಿನ್ನಭದ ಕುರಿತು ಬಂದ ಚಿನ್ನದಂಥ ಪದ್ಯಗಳು ನಂತರ ಪ್ರೇರಿತವಾದವೆನ್ನಬೇಕೇ? ಏಕೆಂದರೆ ಈ ಪದ್ಯಗಳ ಆರಂಭಕ್ಕೆ ಹಿಂದಿನ ಭಾವದ ಸರಣಿ ವಿಚ್ಛಿತ್ತಿಗೊಂಡಿದೆ. ಇಷ್ಟೇ ಅಲ್ಲ ಇವೆಲ್ಲ ಅಖಂಡ ಒಂದೇ ಕವನ ವೆಂದು ಒಪ್ಪಿದರೂ, ನಡುವಿನ ನೀರದ-ನಾರದ ಸೂತ್ರದ ಮತ್ತು ತತ್ವದ ಎರಡು ಪದ್ಯಗಳು ಮುತ್ತಿನ ಹಾರದಲ್ಲಿ ಎರಡು ಹವಳ ಕೋವಂತೆ ಅನಿಸುತ್ತವೆ. ಅವೆರಡರ ನಡುವೆಯೂ ಮತ್ತೆ "ಪಯೋದರಫಲ" ದ ಪ್ರತಿಮೆ ಮೆಣಸಿನಂತೆ ಪವಣಿಸಿಬಿಟ್ಟಿದೆ! ಈ ಮುಂದೆ ನೀರದ-ನಾರದ ಪ್ರತಿಮೆ ಸಂಕಲನದ ಕೊನೆಯವರೆಗೂ ಕಣ್ಮರೆಯಾಗಿದೆ.

ಕಲ್ಪನಾಧಾರೆ ಮತ್ತು ಕಾವ್ಯಯುಕ್ತಿಯ ಅನುಸರಣ ಮಾಡುತ್ತಿರುವಾಗ ಇಲ್ಲಿ ಒಂದು ಮಾತು ತಿಳಿಯಾಗುವುದು ಹಿತ. ಕಾವ್ಯದ ಬುಗ್ಗೆ ಉಕ್ಕಿ ಹರಿದಂತೆ ಕಂಡರೂ ಅದು ಉಕ್ಕಿದತ್ತ ಹರಿಯುವುದಿಲ್ಲ. ಅದು ಕೇವಲ (ವರ್ಡ್ಸ್ವರ್ಥನ ವಾಣಿಯಲ್ಲಿ ಹೇಳುವುದೆಂದರೆ) ''spontaneous over flow'' ಅಲ್ಲ ಅದನ್ನು ''recapitulated in tranquility'' ಮಾಡಿ ದಾಗಲೇ ಕಾವ್ಯ ಅವತರಿಸುತ್ತದೆ. ಸ್ಫೂರ್ತಿಯ ''first time rapture'' ಮಾತಿನಲ್ಲಿ ''recapture'' ಆಗುವಾಗ ಹಲವುಸಲ ಕೂತಪಟ್ಟಿಗೋ ನಿಂತಮುಟ್ಟಿಗೋ ಅನೇಕ ಪಂಕ್ತಿಗಳು ನೀಳವಾಗಿ ಬರೆದುಹೋಗಬಹುದು. ಆದರೆ ಕವಿಯ ಕರ್ಮಕೌಶಲ್ಯಕೃತಿಯ ಆಕೃತಿಯ ಮೇಲೆ ಮತ್ತೆ ಮತ್ತೆ ಕುಂಚವನ್ನು ಆಡಿಸುತ್ತಲೇ ಇರುವುದನ್ನು ನಾವು ಹೆಚ್ಚು ಕಾಣಬಹುದು. ಅಲ್ಲಲ್ಲಿ ಕೆಲವಂಶ ಹೊಸದಾಗಿ ಸೇರಿಸಿದ್ದು ಒಂದು ಉದ್ದಿಷ್ಟ ಪರಿಣಾಮಕ್ಕಾಗಿ ಹೊಸದಾಗಿ ಬರೆ ದದ್ದೂ ಇರಬಲ್ಲದು. ಆದರೆ ಏಕೇ. ಹೇಗೇ ಬರೆದರೂ ಒಟ್ಟುಕೃತಿ ಅಖಂಡವಾಗಿ ಏಕರಸ ವಾಗಿ ಪರಿಣಮಿಸಬೇಕು. ತೋರಿಕೆಯ ಅಸಂಗತಿ ವಿಸಂಗತಿಗಳ ಒಳವೈಗೂ ತತ್ವಾರ್ಥದ ಏಕೀಭಾವದ ಒಂದು ಅನುಸ್ಯೂತಿ ಹಬ್ಬಿರಬೇಕು, ಅಂಟಿರಬೇಕು. ಕೊನೆಗೂ ಎಲ್ಲವೂ ಒಂದೇ ಸತ್ಯವೆಂಬ ಕೈವಲ್ಯ ಕಲ್ಪನೆ ಇಲ್ಲಿ ಕೆಲಸಕ್ಕೆಬಾರದು. ಈ ಕವಿಗೆ ಈ ಸುಸಂಗತಿಯ ಮತ್ತು ಮರ್ಮಸಾಮಂಜಸ್ಯದ ಕಲ್ಪನೆ ತುಂಬ ಇದೆ. ಒಮ್ಮೆ ಬಂದ ಪ್ರತಿಮೆಗಳನ್ನು ಮುಂದೆ

ಮತ್ತೆ ಬಳಸಿಕೊಳ್ಳುವುದರಲ್ಲಿ ಅದು ಪ್ರಕಟವಾಗಿದೆ. ಆದರೆ ಹೀಗೆ ಒಳಹೊಂದಿಕೆ ಇಲ್ಲದೆ ಹೊಲಿಗೆ ತಪ್ಪಿದಂತೆ ಕೂಡಿಬಂದ ೪ನೇ ಕವನವಲ್ಲಿಯ "ಚಿನ್ನಭದ" ಸಾಲಿನಿಂದ ೬ನೇ ಕವನದಲ್ಲಿ "ದ್ವೇಷದಕಾಬೋನನ್ನ" ದ ಸಾಲಿನಿಂದ ಮುಂದೆ ಹರಿದ ಕಾವ್ಯಧಾರೆ ಮೂಲದ ಪ್ರವಾಹಕ್ಕೆ ಬೇರೆ ನೀರಾಗಿ ಕಾಣುತ್ತದೆ. ಇದರಿಂದ ಆಳವಾದ ರಸಾನುಭೂತಿಗೆ ವ್ಯವಧಾನ ಉಂಟಾಗುತ್ತದೆ. ಇಲ್ಲಿ ಕಾವ್ಯಗುಣಕ್ಕೆ ಚ್ಯುತಿ ಇಲ್ಲ. ರಸಪ್ರೇಕ್ಷಕ್ಕೆ ಕ್ಷಿತಿ ಇಲ್ಲ. ಆದರೂ ಅನುಭೂತಿಗೆ ವಿಚ್ಛಿತ್ತಿ ಬರುತ್ತದೆ. ಇದೇ ಹದವಿಲ್ಲದ ಹಿತವಲ್ಲದ ಹೊಂದಿಕೆ ೨ನೇ ಕವನದಲ್ಲಿ "ಅಲೆದಾಡುವ ಅಂತರ ಬೆಂತರಗಳ" ಸಾಲಿನಿಂದ ಕಾವ್ಯಖಂಡ ಆರಂಭವಾಗುವಲ್ಲಿಯೂ ಕಂಡುಬಂದಿದೆ. ಇಂಥಾ ಹೊಂದಿಕೆಯಲ್ಲಿ juxtapositionನ ಸಮವಾಯುವೂ ಇಲ್ಲ; antithesisನ ಸಮತೂಕವೂ ಇಲ್ಲ.

ಶ್ರೀ ಬೇಂದ್ರೆಯವರು ಈ ಪ್ರತಿಮಾಸೃಷ್ಟಿಯನ್ನು ಒಂದು ಅಪೂರ್ಣ ಚಿತ್ರಪಟವೆಂದಿರುವರು. ಚಿತ್ರಪಟದಲ್ಲಿ ಉತ್ತಮ ಛಾಯಾಗ್ರಹಣವಷ್ಟೇ ಅಲ್ಲ. ಅದಕ್ಕೂ ಹೆಚ್ಚಿನ ಮಹತ್ವ ಚಿತ್ರಗಳ ಸಂಗ್ರಹ ಸಂಕಲನಕ್ಕೆ (editing) ಇರುತ್ತದೆ. ಸಂಕಲನದ ಅಸಾಮಂಜಸ್ಯದಿಂದ ಚಿತ್ರಪಟವಿರಸಕ್ಕೆ ಇಳಿಯುಬಹುದು. ಈ ಕಲ್ಪನಾ ಚಿತ್ರಪಟಕ್ಕೂ ಈ ತತ್ವ ಅನ್ವಯಿಸಬಹುದೇ?

## ಇಕ್ಷ್ವಾಯಣದಲ್ಲಿ ಕೆಲವು ವಿಸಂಗತಿ

ಈ ಸಂಕಲನದ ಕೇಂದ್ರ ಪ್ರತಿಮೆ ಇಕ್ಷ್ವಾಯಣದ ಕಥಾರೂಪಕ. ಶೆಲ್ಲಿ ಕವಿ ತನ್ನೊಂದು ಪತ್ರದಲ್ಲಿ ತನ್ನದೊಂದು ಕವನದ ಕುರಿತು ದೃಷ್ಟಾಂತವಾಗಿ ಮಾಡಿದ ಒಂದು ಗೀತಾ ಪೌರಾಣಿಕ ಕಥೆಯ ಬೀಜವನ್ನು ವಿನಾಯಕರ ಸ್ವಜನಶೀಲ ಪ್ರತಿಭೆ ಒಂದು ಪ್ರಭಾವಿಯಾದ ರೂಪಕವನ್ನಾಗಿ ಒಡಮೂಡಿಸಿದೆ. ಮೂಲ ಕಥಾಂಶಗಳ ಪುನರ್ನವೀಕರಣ ಭಾರತೀಯತೆಗೆ ಚೆನ್ನಾಗಿ ಹೊಂದಿಕೊಂಡಿವೆ. ರೂಪಕ ಕಥೆಗೆ ಇರಬೇಕಾದ ಸರಳತೆ, ಸೂಚ್ಯತೆ ಅಂಗೋಪಾಂಗಗಳ ತತ್ಪ್ರೋಚಿತ ಪರಿಷ್ಕಾರ ಇವೆಲ್ಲ ಒಳ್ಳೆ ಹೃದ್ಯವಾಗಿ ಇಲ್ಲಿ ಕೈಗೂಡಿವೆ. ಮೈಗೂಡಿವೆ. ಕವಿಯ ದಾರ್ಶನಿಕ ಪ್ರಜ್ಞೆಯು ತನ್ನದೇ ಆಗಿ ನಿರೂಪಿಸಿದ ದ್ಯಾವಾಪೃಥಿವಿಯ ವಿರಾಟ್ ದರ್ಶನವೂ ಅನ್ಯಾದೃಶವಾಗಿದೆ. ಆದರೆ ಇಲ್ಲಿಯೂ ಒಂದೆರಡು ಮೌಲಿಕ ವಿಸಂಗತಿಗಳು ತಲೆದೋರಿ ಸಂಕಲನದ ಸ್ವಾರಸ್ಯಕ್ಕೆ ಕೇಂದ್ರೀಕರಣಕ್ಕೆ ಕೆಲಮಟ್ಟಿಗೆ ಭಂಗತಂದಿದೆ.

ಆ ವಿಸಂಗತಿಗಳು ಯಾವುವು? ಮೂಲತಃ ಈ ಕಥಾರೂಪಕ ನೀರದ ಎರಡು ಕಲ್ಪನೆಗಳನ್ನು ಒಳಗೊಂಡಿದೆ ಮತ್ತು ಈ ಕಲ್ಪನೆಗಳು ಜಾತ್ಯ ವಿರೋಧಿಯಾಗಿವೆ. ಆದ್ದರಿಂದ ರೂಪಕದ ಸ್ವಾದ್ಯಮಾನತೆಗೆ ವಿಕಲ್ಪ ಉಂಟಾಗುವಂತೆ ಒಂದು ಸಂಕರ ಸಿದ್ಧವಾಗಿದೆ. ೨ನೇ ಪದ್ಯದ ಅಂತ್ಯದಲ್ಲಿ ನವನೀರದ ಹುಟ್ಟಿಬರುತ್ತದೆ. ಅದು ನವಮಾನವನ ಪ್ರತೀಕ. ಅದೇ ಈ ೮ನೇ ಕವನದಲ್ಲಿ ಇಕ್ಷು ಅಂದರೆ ಇಕ್ಷು ಈ ನವನೀರದ—ನವಮಾನವನ ಪ್ರತೀಕ. ಪ್ರತೀಕದ ಪ್ರತೀಕ, ಇದಕ್ಕೆ ಅನುಕೂಲವಾಗಿ ಇಕ್ಷುವಿಗೂ ವಿಕಸನ ಪಥಧ್ಯೇಯ ಅವನೂ ದೇವಮಾನವ ನವಸಂತತಿ ಇಷ್ಟೇ ಅವನಿನ್ನೂ ಅಪೂರ್ಣ ಅಂತಃಚಕ್ಷು ತೆರೆದಿದೆ. ಆದರೆ ಹಣೆಗಣ್ಣು ಇನ್ನೂ ಅರೆ ಬಿಚ್ಚಿದೆ. "ಪರಾಪ್ರಕೃತಿಯ ರೂಪವನ್ನು ಗ್ರಹಿಸಬಲ್ಲ ಶಕ್ತಿ ಇಕ್ಷುವಿನ ಕಣ್ಣಿಗಿಲ್ಲ. ಅದರಿಂದ ವಿಕೃತಿ ಏಳುತ್ತದೆ."—ಎಂಬ ಕಥಾ ಬೀಜದ ಸೂತ್ರಸಾರವಾಗಿ ಕವಿ ಹೇಳಿದ್ದಾರೆ. ಆದರೆ ಮುಂದೆ

ಇಕ್ಷುವಿನ ಕಣ್ಣುಕಟ್ಟಿದ ಆ ವಿಕೃತಿಯು ಪ್ರತೀಕವೂ "ನೀರದ ನೀರೆ" ಯೇ ಹೀಗೆ "ನೀರದ" ಒಂದೇ ಸಂದರ್ಭದಲ್ಲಿ ಅತ್ತ ಸದಭಿವ್ಯತಿಯಾಗಿಯೂ ಇದಿರುಬದಿರಾಗಿ ನಿಂತು ರೂಪಕದ ಏಕಾಂತಿಕ ಪರಿಣಾಮಕ್ಕೆ ಹಾನಿಯುಂಟುಮಾಡುವಂತಾಗಿದೆ. ಈ ಉಭಯ ಸಂಕಟದಿಂದ ಬಿಡುಗಡೆಯೇ ದುಸ್ತರವಾಗಿದೆ. ಏಕೆಂದರೆ ಕವಿ ನವನೀರದನ ಕಥೆ ಕಥಾನಾಯಕ ಇಕ್ಷುವಿನಲ್ಲಿ ಮುಂದುವರಿಸದಿದ್ದರೂ ಈ ತೊಡಕು ತಪ್ಪುತ್ತಿದ್ದಿರಲಿಲ್ಲ. ಏಕೆಂದರೆ ಹಿಂದಿನ ಕವನದ ಕೊನೆಗೆ ಒಂದು ಸತ್ಪ್ರತೀಕವಾಗಿ ಬಂದ ನೀರದ ಈ ಕವನದಲ್ಲಿ ಶೂನ್ಯತೆ ಮಾಯೆ ಮತ್ತು ಬಂಜೆ ಬಸುರಿನ ಪ್ರತೀಕವಾಗಿ ಬಿಡುವುದು ರಸದೃಷ್ಟಿಗೆ ಅಪ್ರಶಸ್ತವೇ ಸರಿ—ನಾಟಕದಲ್ಲಿ ಮುಖ್ಯ ಪಾತ್ರವೇ ನಡೆಯುತಿದ್ದಂತೆ ನಡೆಸುತಿದ್ದಂತೆ ತನ್ನ ನಿಲುವು (bearing) ಬೇರೆ ಮಾಡಿದಂತೆ!

ಒಂದೇ ಪ್ರತಿಮೆ ಭಾವ ಸಂದರ್ಭದಂತೆ ಅರ್ಥಗಾಂಭೀರ್ಯದಲ್ಲಿ ಬೇರೆಯಾಗಬಹುದು. ಆದರೆ ಈ ಬೇರ್ಪಾಟ ಜಾತಿಯುದಲ್ಲ, ಮಾತ್ರೆಯುದು, ಅದು ಒಂದು ಪ್ರತೀಕವಾದಾಗ ಸ್ಫಟಿಕ ಸ್ಫುಟವಾದ ವ್ಯಕ್ತಿತ್ವ ಪಡೆಯುತ್ತದೆ. ಮುಂದೆ ತಂದಾಗೆಲ್ಲ ಆ ವ್ಯಕ್ತಿತ್ವ ವೈಶಿಷ್ಟ್ಯವೇ ವ್ಯಕ್ತ ವಾಗುತ್ತಾ ಹೋಗುತ್ತದೆ. ಕವಿಯ ನಿರಂಕುಶತೆಗೆ ಇಲ್ಲಿ ಆತಂಕ—ಅವನ ಮಾನಸ ಪುತ್ರವಾದ ಪ್ರತೀಕ ತನ್ನದೇ ಆದ ತಂತ್ರದಿಂದ ನಡೆಯುತ್ತದೆ—"ಅನನ್ಯ ಪರತಂತ್ರ" ವಾದ ಕವಿಚ್ಛೆಯು "ನಿಯತಿಕೃತ ನಿಯಮರಹಿತ" ವಾದ ಈ ಪ್ರತೀಕದ ಸ್ವಾಯತ್ತತೆಗೆ ಅಪಚಾರ ಸಲ್ಲದು. ಪ್ರತೀಕದ ನಿರ್ಮಿತಿಯುಮಟ್ಟಿಗೇ ಕವಿ ಸ್ವತಂತ್ರ. ಮುಂದೆ ಆ ಪ್ರತೀಕ ಬೇರೊಂದು ಸಂದರ್ಭದ ಸಂದೇಶದ ಅಥವಾ ವಿಧಾನದ ಬಲಾತ್ಕಾರಕ್ಕೆ ಸಹಸಾಬಗ್ಗದು.

ಇಕ್ಷಾಯಣದ ರೂಪದಲ್ಲಿ ಇಂಥಾ ಬಲಾತ್ಕಾರ ನಡೆದಂತಿದೆ. ಪ್ರತೀಕಾತ್ಮತೆಯೊಂದಿಗೇ ಇಕ್ಷುವಿನ ಕಥೆ ಒಂದು ಪ್ರತ್ಯಗಾತ್ಮತೆಯನ್ನು ಪಡೆಯಿತು. ಅದಕ್ಕೆ ತನ್ನದೇ ಆದ ಧ್ವನಿವಾಹನ ಅರ್ಥವ್ಯಂಜಕ ಶಕ್ತಿಯ ಆವಾಹನ ಉಂಟಾಯಿತು. ಶಲ್ಲಿ ತನ್ನಪತ್ರದಲ್ಲಿ ಉಲ್ಲೇಖಿಸಿದಾಗ ಈ ರೂಪಕ ಕಥೆಗೆ ಇದ್ದ ಆಶಯ ವ್ಯಂಜನೆ ಬೇರೆ ಆದರೆ ಅದೂ ಅಲ್ಲಿ ತನ್ನನುಮಟ್ಟಿಗೆ ಖಚಿತವೂ ನಿಶಿತವೂ ಆಗಿದೆ. ಕವಿ ವಿನಾಯಕರು ಇದೇ ರೂಪಕವನ್ನು ಇನ್ನೂ ಸಮರ್ಥವಾಗಿ ಸಮೃದ್ಧ ವಾಗಿ ಅಳವಡಿಸಿಕೊಂಡಿದ್ದಾರೆ ನಿಜ. ಆದರೆ ಅಲ್ಲಿಯೂ ಒಂದು ವಿಶಿಷ್ಟ ಅರ್ಥಭಾರಣೆಯಿಂದ ಅದನ್ನು ಬಳಲಿಸಿದಂತೆ ಇದೆ.

ಆ ಬಳಲಿಕೆ ಹೀಗೆ. ಒಂದೆಡೆಗೆ "ನೀರದ" ದ ಪ್ರತಿಮೆಸಾಧಕನ ಕೃತಪ್ರಜ್ಞೆಗೂ ಅವನ ಸಿದ್ಧಿಗೆ ಅಡ್ಡಒಡ್ಡಿದ ಮಾಯಾವಿಕೃತಿಗೂ ಕೂಡಿಯೇ ಪ್ರತೀಕವಾಗಿಸಲ್ಪಟ್ಟು ರಸಾಭಾಸಕ್ಕೆ ಇಂಬಾಗಿದ್ದರೆ ಇನ್ನೊಂದೆಡೆಗೆ ಈ ಕಥಾ ಸಂದರ್ಭದಿಂದ ನೀರದ ನೀರೆಯೊಂದಿಗೆ ನೆಳಲಿನ ನಾಡಿ ನಲ್ಲಿ ಬಾಳಿದ ಇಕ್ಷುವಿನ ವಿಚಿತ್ರ ಸಂತತಿಯ ಮೂಲಕ ಅನೇಕಾನೇಕ ಸ್ಫುಟವಾದ ನಿಷ್ಕರ್ಷ ಗಳನ್ನು ಹೊರಡಿಸಿತು. ಪ್ರತೀಕದ ವ್ಯಂಜನಾಶಕ್ತಿಗೆ ಮಿತಿ ಹಾಕಿದಂತಾಗಿದೆ, ಮಾಯಾ ಶಚಿ ಯೆಂಬ ಶೂನ್ಯತೆಯೊಡನೆ ಇಕ್ಷು ಬಾಳಿದ ಬಾಳುವೆಯ ಅನಪೇಕ್ಷಿತ ಫಲಪ್ರಾಪ್ತಿ—ಲೋಕ ವಿಲಕ್ಷಣ ಸಂತಾನ—"ಅಶ್ವಮಧ್ಯ" ಸಂತತಿ. ಆ ಸಂತತಿ ಯಾವದು ಎಂತಹುದು ಎಂಬುದನೆಲ್ಲ ವಿವರಿಸಹೊರಟಾಗ ದಾರ್ಶನಿಕನು ಪುರಾಣಿಕನಾಗುತ್ತಾನೆ. ಪ್ರತೀಕವು ಒಂದು ವಿಶದವಾದ ರೂಪಕ ಕಥೆ (allegory) ಎನಿಸಿಬಿಡುತ್ತದೆ. ಆ ಸಂತತಿಯ ಪರಿವಿಡಿಯಲ್ಲಿ ಶಾಕ್ತರಿಂದ ಮೊದ ಲಾಗಿ ಬಡ "ನವಮಾನವತಾವಾದಿ" ಗಳವರೆಗೂ ಬಂದಿದ್ದಾರೆ. ಡಾಂಟೆ ಕವಿ ತನ್ನ ವೈರಿಗಳ ನೆಲ್ಲ "ಡಿವ್ಹಾಯಿನ್‌ಕೊಮಿಡಿ" ಯಲ್ಲಿಯ ನರಕದ ಸೀಮೆಗೆ ಸೇರಿಸಿ ಬಣ್ಣಿಸಿದ್ದನಂತೆ. ಕವಿ ವಿನಾ

ಯಕರಿಗೆ ಅಂಥಾ ವೈರಿಗಳು ಯಾರೂ ಇಲ್ಲ. ಕವಿ ದ್ವೇಷಿದೂಷನ ಪ್ರವೃತ್ತಿಯವರೂ ಅಲ್ಲ. ಹೀಗಿದ್ದೂ "ಅಶ್ವಮಧ್ಯ ಸಂತತಿ" ಯ ಪರಿವಿಡಿಸಿ ಇಷ್ಟು ಬೆಳೆದದ್ದು ಮತ್ತು ಬೆಳೆದೂ ಇಷ್ಟಕ್ಕೆ ತಡೆದದ್ದು ಒಂದು ಸಣ್ಣ ಸೋಜಿಗ!

ನಿಜವಾಗಿಯೂ ಕವಿ "ನೀರದ" ಸಂಕಲನದಿಂದ ಹೊರತಾಗಿ "ಇಕ್ಷ್ವಾಯಣ" ವನ್ನು ಒಂದು ಬಿಡಿ ಕೃತಿಯಾಗಿ ರಚಿಸಬಹುದಿತ್ತು—ಶ್ರೀ ಅಂಬಿಕಾತನಯದತ್ತರ "ಮೂರ್ತಿ" ಯಂತೆ? ಮಾನವನಮನಸ್ಸಿನ ಬಂಧಮೋಕ್ಷದ ಸಮಸ್ಯೆಗೆ ಕನ್ನಡಿಹಿಡಿದ ಈ ಕಥಾರೂಪತಿ ನೆಲದಮೇಲಿನ ಸಮಸ್ಯೆಯನ್ನೆ ಬಿಂಬಿಸುವದೆಂಬ ಮಾತು ಮುನ್ನುಡಿಕಾರರ ಮನೋಗತವನ್ನು ಮೀರಿದ ಮರ್ಮವನ್ನು ಮೂಡಿಸುತ್ತದೆ.

ಹೀಗೆ ಪ್ರತೀಕತ್ವಕ್ಕೆ ಅಪಚಾರವಾಗಬಹುದಾದ ಇನ್ನೊಂದು ಉಲ್ಲೇಖ ಇಂದ್ರನ ಕುರಿತು ಕವಿಯ ಅಭಿಪ್ರಾಯದಂತೆ ಇಂದ್ರದೇವ ಕರುಣಿ ಧೀರೋದಾತ್ತ ಸಂಕಲ್ಪದ ಪ್ರತೀಕ. ಆದರೆ ಅದೇ ಇಂದ್ರನ ಕುರಿತು ಇಕ್ಷ್ವಾಯಣದಲ್ಲಿ:—"ಹಿಂದತಿಂದ್ರನೆಸಗಿದ ಪಾಪದ ಫಲವೋ!" ಎಂದು ಒಂದು ಶಂಕಾವಿಕಲ್ಪವೆತ್ತಿದ್ದು ಅಸಮಂಜಸ ಬಣ್ಣದ ಗೊಂಬೆಯ ಮಣ್ಣಿನ ಪಾದ ಹೊರಗೆಡುಹಿದಂತೆ ಇದೆ! ಅದೇ ರೀತಿ ಇಂದ್ರಶಚಿಯನ್ನು "ಮಮ" ಮಡದಿಯೆಂದು ಕರೆಯುವದೂ ಎಷ್ಟು ಉಚಿತವೋ! ಆ ಕಾವ್ಯಪಂಕ್ತಿಯಲ್ಲಿ ಈ "ಮಮ" ಶಬ್ದಕೋನದ್ದು ಕರ್ಕರವೆನಿಸುವದಲ್ಲದೆ ಲೋಕಮಾತೆಯನ್ನು ಮಡದಿಯೆಂಬ ಮಮಕಾರದಿಂದ ಇಂದ್ರ ನೋಡುವದೂ ಕುಶಲವಲ್ಲ. ಪೌರಾಣಿಕವಾಗಿಯೂ ಇಂದ್ರಶಚಿಗೆ Ex-officio ಯಜಮಾನ! ಹನ್ನೆರಡು ವರ್ಷಗಳಿಗೊಮ್ಮೆ ಇಂದ್ರ ಬದಲಾಗುತ್ತಾನೆ. ನೂರು ಯಜ್ಞಮಾಡಿದ ಭಾಗ್ಯಶಾಲಿ ಇಂದ್ರನಾಗುತ್ತಾನೆ. ಇಂದ್ರ ಬೇರೆಯಾಗುತ್ತಿದ್ದರೂ ಶಚಿ ಒಬ್ಬಳೇ! ನಿಮಿತ್ತ ಭಿನ್ನವಾದರೂ ಉಪಾದಾನ ಒಂದೇ, ಅಧಿಷ್ಠಾನ ಒಂದೇ!

ಇಕ್ಷುವಿನ ಪತನಕ್ಕೆ ಈ ದೃಷ್ಟಿಯಿಂದ ಇಂದ್ರನೇ ನೈತಿಕವಾಗಿ ಹೊಣೆಗಾರ! ಲೋಕದ ಮಾತೆಯನ್ನು ಮಡದಿಯಾಗಿ ನೋಡುವ "ಶೃಂಗಾರಾನ್ವಿತ" ದೃಷ್ಟಿ ಇಂದ್ರನ ಮಾತಿನಿಂದಲೇ ಇಕ್ಷುವಿಗೆ ಹೊಳೆದಿರಬೇಕು. ಇಲ್ಲವಾದರೆ "ನೊಲವಿ ನೋಂತ" "ಮೂಲದ ನಿಸ್ಪೃಹ" ನಾದ ಇಕ್ಷು "ನಾ ಪುರುಷ ನೀನೇ ಶಕ್ತಿ" ಎಂದು ಸಹಸಾ ದುಡುಕುತ್ತಿರಲಿಲ್ಲ. ಆದಿಶಕ್ತಿಯ ಬದಲು ಶಚಿ. ಶಚಿಯ ಬದಲು "ನೀರದನೀರೆ" ಮೋಡದ ಮಾಯಾಮೋಹಿಸಿ—ಹೀಗೆ ವಂಚನೆಯಿಂದ ವಂಚನೆಗೆ ಒಯ್ದು ತೊಳಲಾಡಿಸಿದ ಇಕ್ಷುವಿನ ಪ್ರತೀಕ "ಪರಾ ಪ್ರಕೃತಿಯನ್ನು ನೋಡಲಾರದೆ ಉಂಟಾಗುವ ವಿಕೃತಿ" ಯ ಪ್ರಜ್ಞೆಗೆ ಹೇಗೆ ಅಭಿಜ್ಞಾನವಾದೀತು.?

## ಕವಿಯ ದ್ರಾಷ್ಟಾಂತಿಕ ಸಿದ್ಧಾಂತಗಳು ಒಂದು ಹೇತ್ವಾಭಾಸ

[ಕವಿ ದ್ರಾಷ್ಟಾಂತಿಕವಾಗಿ ಈ ರೂಪಕ ಕಥೆಯಿಂದ ಹೊರಡಿಸಿದ ಎಲ್ಲ ಸಿದ್ಧಾಂತಗಳು ಸಹೃದಯನಿಗೆ ಸಮ್ಮತವಾಗುವಂತಿಲ್ಲ—ಸಿಗಬೇಕೆಂತಲೂ ಇಲ್ಲ. ಆದರೂ ಪ್ರತೀಕದ ಮೂಲ ಸಂದೇಶಕ್ಕೇ ಅಧಿಷ್ಠಾನವಾದ ತತ್ವದ ಕುರಿತೆ ಸಹೃದಯನಲ್ಲಿ ವ್ಯಾಘಾತ ಉಂಟಾಗಬಾರದು. ಇಕ್ಷು "ಮಾತೆಯೇ ವಧು" ವೆಂದು ಪ್ರಮಾದಮಾಡಿ ಪಶ್ಚಾತ್ತಾಪದ ಪುನೀತಾತ್ಮನಾಗುತ್ತಾನೆ. ಆದರೆ ಪ್ರಕೃತಿ ಪರಾಪ್ರಕೃತಿಗಳ ಪರಿಭಾಷೆಯಲ್ಲಿ ವ್ಯವಹರಿಸುವ ಈ ಪಾರಮಾರ್ಥಿಕ ಸತ್ತ್ವೆಯಲ್ಲಿ

ಒಂದು ಸಂಗತಿ ನಾವು ಒಪ್ಪಲೇಬೇಕು. ಪ್ರಕೃತಿ, ಸೃಷ್ಟಿ, ನಿಸರ್ಗವೆಂದೆಲ್ಲ ಹೆಸರಿಟ್ಟ ಈ ಭೌತಿಕ ವಿಶ್ವದ ಶಕ್ತಿಕ್ಷೋಭೆ-ಶುಭಾಶುಭ ಭೋಗಗಳನ್ನು ಅನುಭವಿಸಲು ಹೊರಟ ಮಾನವ—ಆತಕೃತ ಪ್ರಜ್ಞನಿರಲಿ, ಸ್ಥಿತಪ್ರಜ್ಞನಿರಲಿ ಆ ಅನುಭವ ಉಪಯೋಗದ್ದೋ ಉಪಭೋಗದ್ದೋ ಅಥವಾ ಉಪಾಸನೆಯದೋ ಯಾವದೇ ಆಗಿರಲಿ-ಒಂದು ರೀತಿ ಮಾತೆಯನ್ನೆ ವಧುವಾಗಿಸಿದಂತೆ "ಈಡಿಫಸ್ ಕಾಂಪ್ಲೆಕ್ಸ್" ಒಂದು ಮನೋವಿಕೃತಿಯ ವಾಮಾಚಾರಿಯಾದ ವಿಕಲ್ಪವೆಂದು ಬದಿಗೆ ಒತ್ತಿದರೂ ಸಾಮಾನ್ಯ ಜೀವನದಲ್ಲಿ ಕೂಡಾ ವರನಾಗುವ ಹುಡುಗ ತನ್ನ ವಧುವಾಗುವವಳಲ್ಲಿ ತನಗೆ ತಿಳಿಯದಂತೆ ತನ್ನ ತಾಯಿಯ ಛಾಯೆಯನ್ನೇ ಕಾಣಲು ತವಕಿಸುತ್ತಾನೆ. ಏಕೆಂದರೆ ಹೆಣ್ಣು ನೈಮಿತ್ತಿಕವಾಗಿ ತಾತ್ಕಾಲಿಕವಾಗಿ·ದಯಿತೆ. ಆದರೆ ನಿತ್ಯವಾಗಿ ಸಾರ್ವಕಾಲಿಕವಾಗಿ ಮಾತೆ. "ಪತಿಂ ಏಕದಶಂಕೃಧಿ"—"ನಿನ್ನ ಗಂಡನನ್ನೆ ಹನ್ನೊಂದನೆಯ ಮಗನಾಗಿ ನೋಡು" ಎಂದು ಆಶೀರ್ವದಿಸುವ ಮದುವೆಯ ಮಂತ್ರವೂ ಇದೇ ಇಂಗಿತಕ್ಕೆ ದ್ಯೋತಕ ಆದೀತೆ? ಪುರುಷ ಪ್ರಕೃತಿಗಳು ಸನಾತನ ಸಮಾಂತರವೆಂದು ಒಪ್ಪುವ ಮಾತು ಬಿಟ್ಟರೆ ಅವರೀರ್ವರ ಅನ್ಯೋನ್ಯ ಸಂಬಂಧಅ ನಿವಾರ್ಯವಾಗಿ "ಪುರುಷ" ನಿಗೆ ಪತಿತನನ್ನಾಗಿಯೇ ಮಾಡುತ್ತಾನೆ—ತಾನಿಕದ ಭಾಷೆಯಲ್ಲಿ! "ಪುರುಷ" ಮಾತೃಗಾಮಿಯೋ ದುಹಿತೃಗಾಮಿಯೋ ಆಗದೆ ಉಳಿಯಲಾರ. ಪ್ರಜಾಪತಿ ಬ್ರಹ್ಮನ ಕಥೆಯೂ, ಶಿವಮೋಹಿನಿಯವರ ಕಥೆಯೂ ಇದೇ ತತ್ವದ ರೂಪಕಗಳು. ಅಂದರೆ ಮಾತೆಯನ್ನು ವಧುವೆಂದೆನೆಂಬ ಇಕ್ಷ್ವಾಯಣ ಕಥಾ ಪ್ರತೀಕದ ಆತ್ಮಗ್ಲಾನಿ ಒಂದು ಯಥಾರ್ಥ ವ್ಯಂಜನೆಯೆನಿಸದು.

ಇಂತಹದೇ ಇನ್ನೊಂದು ಹೇತ್ವಾಭಾಸ—"ಅಶ್ವಮಧ್ಯ ಸಂತತಿ" ಯ ಇತ್ಯರ್ಥದಲ್ಲಿ ಆಗಿದೆ. ಈ ಸಂತತಿಯೆಂದರೆ "ಅರ್ಥನೆಳಲು ಇನ್ನು ಅರ್ಥ ತಿಳಿಲದಾಗಿ" ಅರ್ಥಮರ್ಥ ಪ್ರಜ್ಞೆಯಲ್ಲಿ ಪಳಗಿದವರು "ಇದೆಲ್ಲಾ ಸರಿಯಾಗಿದೆ. ಸೊಗಸಾಗಿದೆ. ಆದರೆ ಮುಂದೆ ಈ ಅರ್ಥಮರ್ಥ ಪ್ರಜ್ಞೆಯ ವ್ಯಾಖ್ಯಾನ ಮಾಡುತ್ತ "ಅನುಭವದರ್ಥತೆ ತತ್ವದರ್ಥವನ್ನು ಕೀಲಿಸಿದವರು. ಅನುಭವದಾವರಣಕೆ ತತ್ವ ಹೊಂದಿಸಿದವರು"—ಎಂದೆಲ್ಲ ವರ್ಣನೆ ಬಂದಿದೆ. ಇದು ಸಮರ್ಪಕವೇ? ಭವ ಮತ್ತು **ಅನು**ಭವ-ಇವೆರಡು ಪದಗಳನ್ನು ಆಲೋಚಿಸುವಾಗಲೆ ನಮಗೆ ಗೋಚರವಾಗುತ್ತದೆ,—ಜಗತ್ತಿನಲ್ಲಿ, ಯಾವದೇ ತತ್ವ, ವಾದ, ಸಿದ್ಧಾಂತ ಇಲ್ಲವೆ ದರ್ಶನ ಶುದ್ಧ ತಾತ್ವಿಕವಾಗಿರುವುದಿಲ್ಲ. "ತತ್+ವ" ವೆಂದರೇ ವಸ್ತುಜನ್ಯ ವಸ್ತುನಿಷ್ಠ ವಿಚಾರ, ಶುದ್ಧತಾತ್ವಿಕತೆ ಒಂದು mental observation ಮನಃಕಲ್ಪನೆ. ಸತ್ ಮತ್ತು ಭಾವ, ದ್ರವ್ಯ ಮತ್ತು ಗುಣ. ಅಸ್ತಿತ್ವ ಮತ್ತು ಜ್ಞಾಪ್ತಿತ್ವ existance ಮತ್ತು significance, real ಮತ್ತು ideal fact idia ಇವು ಅನ್ಯೋನ್ಯಾಶ್ರಯಗಳು ಒಂದನ್ನು ಬಿಟ್ಟು ಒಂದರ ಬಳಕೆ ಎಣಿಕೆ ಬರಿ ಭಾಷಾ ಸೌಕರ್ಯ. ನಮ್ಮ ಪ್ರಾಚೀನ "ಪದಾರ್ಥ" ಶಬ್ದವೇ ಇದಕ್ಕೆ ಸಾಕ್ಷಿ. ಅನುಭವದಿಂದ ಸ್ಫೂರ್ತವಾದ ಅರೆಬೆರೆತ ವಿಚಾರ ಪ್ರಣಾಲಿಯಾಗಿಯೇ ಪ್ರತಿಯೊಂದು ತತ್ವ ಸಿದ್ಧಾಂತವಿರುತ್ತದೆ. ಆದರ್ಶಕ್ಕೂ ಅದರ ಯಥಾಶಕ್ತಿಯ ಆಚರಣೆಗೂ ideal ಮತ್ತು approximation ಗಳಲ್ಲಿ ಒಂದು ಅಂತರವಿದ್ದೇ ಇರುತ್ತದೆ. ಆ ಅಂತರವೇ ವಿಕಸಿತಪಥದ ನಿತ್ಯ ವಿಸ್ತರಿಸುವ ಕ್ಷಿತಿಜ. ಜಡ, ಚೇತನ, ಪಶು, ಮಾನವ ಈ ಎಲ್ಲ ಸೃಷ್ಟಿಯ ಅವಸ್ಥೆಗಳಲ್ಲಿಯೂ ಈ "ಅರ್ಥಮರ್ಥ ಪ್ರಜ್ಞೆ" ಅನಿವಾರ್ಯ, ತತ್ವತಃ ಅಪರಿಹಾರ್ಯ. ದ್ವಂದ್ವಾತೀತವಾಗುವದೆಂದರೆ ನಿರ್ದ್ವಂದ್ವವಲ್ಲ. ಅದ್ವೈತವೆಂದರೆ ಅದ್ವಿತೀಯತೆಯಲ್ಲ; ಉದಾತ್ತೀಕರಣವೆಂದರೆ ಇದ್ದುದರ ನಿರಾಕರಣೆಯಲ್ಲ. ಸಾಯುಜ್ಯದಲ್ಲಿಯೂ, ಸಾರೂಪ್ಯ, ಸಾಮೀಪ್ಯ, ಸಾಲೋಕ್ಯಗಳು ಸಮವಾಗಿಯೇ ಇರುತ್ತವೆ.

ಅಂದರೆ ಯಾವ ಪಾತಾಳಿಯಲ್ಲಿ ನಿಂತು ನೋಡಿದರೂ ಪರಬ್ರಹ್ಮದೀಚೆಗೆ ಎಲ್ಲ ಸತ್ಯ ಎಲ್ಲ ಸತ್ತೆ ಎಲ್ಲ ಸಾಧ್ಯ. ಅನುಭವ ತತ್ವಗಳ ಕಲಬೆರಕೆ. ಇನ್ನು ಈ ಬೆರಕೆಯ ಎರಕ ಸಂಮಿಶ್ರಣವೋ ಸಮನ್ವಯವೋ, ಸಾಮರಸ್ಯವೋ ಅದು ಆಯಾ ಪಾತಾಳೆಯ "ಗುಣಕರ್ಮ ವಿಭಾಗ" ಅವಸ್ಥಾಪರಿಪಾಕ. ಸಂಕಲ್ಪ ಮತ್ತು ಸಿದ್ಧಿ ಇವುಗಳ ಅಭ್ಯಂತರಕ್ಕೆ ಅರ್ಥಸಾಧಕ ಕವಳಿಸುವುದು ಸಹಜ. ಕಲ್ಪಿಸಿದ್ದೇನು? ಶಿಲ್ಪಿಸಿದ್ದೇನು?—ಎಂದು ಕವಿಕಲಾವಿದ ಕವಳಿಸುವುದೂ ಅಷ್ಟೇ ಸಹಜ. 'ಇಕ್ಷು' ಕಥೆಯ ಮೂಲ ಉಲ್ಲೇಖದಲ್ಲಿ ಶೆಲ್ಲನೂ ಇದನ್ನೇ ಹೇಳುತ್ತಾನೆ. ಆತ್ಮ ಸಂಮ್ಮೋಹಿತನೂ ಸಂಮ್ಮೋಹಿತಾತ್ಮನೂ ಆದ ಕವಿ ತನ್ನ ಕೃತಿಗೆ ತಾನೇ ಎರಗಿ ಧನ್ಯನಾಗಬಹುದು. ಏಕೆಂದರೆ ಕಿನ್ನರರನ್ನು ಕಂಡು ಬೆಂಬತ್ತಿ ಕಷ್ಟಪಟ್ಟರೂ ಮುಂದೆ ಮಹಾಶ್ವೇತೆಯನ್ನೋ ಕಾದಂಬರಿಯನ್ನೋ ಪಡೆಯುವ ಅದೃಷ್ಟವಂತನೂ ಆತ ಆಗಬಹುದು! ಆದರೆ "ವರ್ಣತೆಯ ವಿಕಸನ ಪಥದಲ್ಲಿ" ನಡೆಯುವ ಕವಿಕಲೋಪಾಸಕನು ತನ್ನ ಪಯಣದಲ್ಲಿ ಕಂಡದ್ದೇನು, ಕೈಗೊಂಡದ್ದೇನು, ಎಂದು ಹೆಜ್ಜೆಹೆಜ್ಜೆಗೂ ಹೆಜ್ಜೇನು ಹುಡುಕುವವನಂತೆ ತಲ್ಲಣಿಸುವನು. ಈ ದೃಷ್ಟಿಯಿಂದ ಎಲ್ಲ ಮಾನವರೂ "ಅಶ್ವಮಾಥ್ವ ಸಂತತಿ" ಯೇ!

ಮತ್ತು ಈ ದೃಷ್ಟಿಗೆ ಕವಿಕೊಟ್ಟ ಆ ವಿಚಿತ್ರ ಸಂತಾನದ ಅವಿಸ್ತೃತ ವ್ಯಾಖ್ಯಾನ ಅಪ್ರಸ್ತುತವೆನಿಸುತ್ತದೆ.

ಇನ್ನು ಆ ಶಚಿದೇವಿ ಹೇಗೆ ಸುಳಿದಾಳು? ಅವಳ ಚೆಲುವಿಗೆ ಎಲ್ಲಿ ಲೋಪ? ಅದು "ಶುಚಿರರೂಪ, ಶುಚಿರೂಪ, ಮಧುರರೂಪ" ಕವಿ ಮಾರ್ಮಿಕವಾಗಿಯೇ ಈ ಪದಗಳನ್ನು ಪ್ರಯೋಗಿಸಿರಬೇಕು. ಶುಚಿರ, ಶುಚಿಮಧುರ Light, purity ಮತ್ತು sweetness ಸೌಂದರ್ಯ ಪಾವಿತ್ರ್ಯ ಮತ್ತು ಮಾಧುರ್ಯ ಮಾನವ ಸಂಸ್ಕೃತಿಯ ಮೂರು ಮುಖ್ಯ ಮೂಲ್ಯಗಳಿವು. ಅವುಗಳ ಇದಿರು ಕಣ್ಣೊಳಗಿನ ಕಣ್ಣು ತೆರೆದ, ಹೃದ್ದೇಶದ ಅನಿಮಿಷ ನೇತ್ರನಾದ ಇಕ್ಷು ಮೋಹವಶನಾಗುವುದು ಹೇಗೆ? ಮೋಹಕ್ಕೆ ಮುಳುವಾಗುವ ರೂಪ ಶುಚಿ ಹೇಗೆ?

ಇನ್ನೂ ಒಂದು ತೊಡಕು. ಈ ನೀರದ ನೀರೆಯ ಸ್ವರೂಪವೇನು? ಇಂದ್ರನ ಕಾಮರೂಪವಾದ ನೀರದ ಒಂದು ಶೂನ್ಯವೇ? ಮಾಯೆಯೆ? ಅಥವಾ ಅದೊಂದು ಚಿದ್ಭಾವವೇ? ನೆನಿಸಿದ ರೂಪವ ತಳೆವುದು ನೀರದ.

"ನಾನ್‌ಬಂದೊಲು ಜೇಡಿ" ಎಂದಿದಾನೆ ಕವಿ. ಮಾಯೆಯೆಂದರೇನು? ಅದೊಂದು ಈಶ್ವರೀ ಶಕ್ತಿ. "ಮಮಮಾಯಾದುರತ್ಯಯಾ" ಅದೊಂದು ಅಭಾವವೇ? ಆಭಾಸವೇ? "Illusion is the first appearance of truth" ಎಂದಿಪಾರೆ ರವೀಂದ್ರರು ತಮ್ಮ "ಚಿತ್ರಾ" ರೂಪದಲ್ಲಿ. ಅರ್ಜುನನನ್ನು ವರಿಸಿಕೊಳ್ಳಲು ಚಿತ್ರಾಂಗದೆ ಎರವಲವಾಗಿ ಪಡೆದ ಸೌಂದರ್ಯ ಅವಳ ಸಾತ್ವಿಕ ಸತ್ಯಕ್ಕೆ ಒಯ್ಯುವ ಒಂದು ಕೈ ದೀಪ. ಅದೇ ಸತ್ಯವನ್ನು ಆವರಿಸಿದ ಹಿರಣ್ಮಯ ಪಾತ್ರ "ಬಂಜೇ ಮೋಡ" ವೆಂದ ಕವಿಯೇ ಅಭ್ಯಾಸಿಕೆಯಲ್ಲಿ ಕೊಟ್ಟ ಖಲೀಲ್ ಗಿಬ್ರಾನ್‌ನ ಅವತರಣಿಕೆ ಏನು ಹೇಳುತ್ತದೆ? "Life and all that lives is concived to the might and not in the crystal"—ಅಂದರೆ ಮೇಲೆ ಸಾಪೇಕ್ಷ, ಸವಿಕಲ್ಪವಾದದ್ದು. ಮಾಯೆ ಇರಬಹುದು. ಆದರೆ ಮಾಯೆ ಎಂಬುದು ಮಿಥ್ಯೆಯಲ್ಲ, ಶೂನ್ಯವಲ್ಲ, ಬೇರು ಕಿತ್ತವಾದ ಹೊಟ್ಟಲ್ಲ. ಭಾಷೆ ಭಾವವನ್ನು, ಭಾವರಸವನ್ನು, ರಸಸೌಂದರ್ಯವನ್ನು, ಸೌಂದರ್ಯ

ಸತ್ಯವನ್ನು ಮುಚ್ಚುವ ಹಿರಣ್ಮಯ ಪಾತ್ರ. ರವುಜ ಕವಿಯು ಆತ್ಮ ಪರಮಾತ್ಮ ಸಾಯುಜ್ಯ ವನ್ನು ಬಣ್ಣಿಸಿದ ಈ ಪಂಕ್ತಿಗಳು ಇಲ್ಲಿಯೂ ಅರ್ಥವತ್ತಾಗಿ ಅನ್ವಯಿಸುತ್ತದೆ.

"When'ver the might which stands 'twdyt God and these Defeates to a pure transparency."

ಅಂದರೆ ಆ ಮಂಜು ಆ ಮೋಡ ಪರಾಪ್ರತೀಯನ್ನು ಕಾಣಲಾರದ ಒಂದು ವಿಕೃತಿಯಲ್ಲ. ಅದನ್ನು ಕಾಣದೇ ತಿಳಿಯಾಗಬೇಕಾದ ನಿಚ್ಚಳವಾಗಬೇಕಾದ ಒಂದು ಸ್ವತಃಸಿದ್ಧ ಮಾಧ್ಯಮ!

ಇವಿಷ್ಟು ವ್ಯವಧಾನಗಳನ್ನು ಬಿಟ್ಟರೆ ಇಕ್ಷ್ವಾಯಣವಾಗಲಿ ಇತರ ಪ್ರತಿಮಾಸೃಷ್ಟಿಯಾಗಿಲಿ ಕವಿ ವಿನಾಯಕ ರಸಮುಜ್ಜ್ವಲ ಪ್ರತಿಭೆಯ ಯಥಾರ್ಥ ಪರಿಚಯವನ್ನು ಕೊಡುವಂತಹ ದಾಗಿದೆ. ಈ ಕವಿಯ ವಿಶಿಷ್ಟಗುಣ ಅಂತರಂಗಕ್ಕಿಂತ ಅಂತರಿಕ್ಷದ ಸೌಂದರ್ಯವನ್ನು ರಸವತ್ತಾಗಿ ಬಣ್ಣಿಸುವದಾಗಿದೆ. ಕವಿಯ ಕಲ್ಪನಾ ವಿಲಾಸಕ್ಕೆ ಒಂದು ವಿಚಾರ ಪರತೆಯ ಬೌದ್ಧಿಕ ಒಳಮೈ ಇದ್ದೇ ಇರುತ್ತದೆ. ಕವಿಯ ಈ ದಾರ್ಶನಿಕತೆ ಕಡಲತೀರದ ಮಳಲು ತುಸು ಅಗಿದಲ್ಲೆಲ್ಲ ನೀರು ಚಿಮ್ಮಿ ಬರುವಂತೆ ಪ್ರತಿಮೆ, ಉಪಮೆ, ವಕ್ರೋಕ್ತಿ—ಎಲ್ಲ ವಾಗ್ವಿಲಾಸದಲ್ಲಿಯೂ "ರತ್ನಚ್ಛಾಯಾ ವ್ಯತಿಕರ" ವಾಗಿ ಸುಳಿದಾಡುತ್ತದೆ. ಮಹೋಪಮೆ ಮಹಾ ಛಂದಸ್ಸುಗಳೆಂಬ ಖಟಾಟೋಪ ಹಟಾಲಾಪವಿಲ್ಲದೆ ಕಾವ್ಯದಲ್ಲಿ ಮಹೋನ್ನತಿ ಈ ಕವಿ ಲೀಲೆಯಿಂದ ಸಾಧಿಸಬಲ್ಲ. ಕವಿ ಬಣ್ಣಿಸಿದ ಆಕಾಶ ಗಂಗೆಯಂತೆ "ಅಲ್ಪದರೊಳೂ ಭೂಮ ವರಳ್ವ ಸರಣಿ" ಈ ಕವಿಯಶೈಲಿ. ಈ ಸರಣಿಯ ಉತ್ತಮ ನಿದರ್ಶನೆ ಇಕ್ಷುವಿಗೆ ಇಂದ್ರ ಕಾಣಿಸಿದ ವಿರಾಡ್ದರ್ಶನದ ಭವ್ಯರಮ್ಯ ಚಿತ್ರ—ನೆಯ ಕವನದಲ್ಲಿ.

## ವಿನಾಯಕೀ ಶೈಲಿಯ ಬಗೆ

ಈ ಶೈಲಿಯ ಬಗೆ ಎಂತಹುದು ? ವಿನಾಯಕರ ಪ್ರತಿಭೆ ಒಂದು ಕಲ್ಪನೆಯ ಸುಳುವಿನಿಂದ ಸುಳಿಸುಳಿಯಾಗಿ ಮುಂದಿನದಕ್ಕೆ ಹೆಚ್ಚಿನದಕ್ಕೆ ಸಾಗುತ್ತದೆ ಅಮೃತ ಬಳ್ಳಿಯಂತೆ. ಒಂದೆರಡು ಉದಾಹರಣೆ ನೋಡಿರಿ. ಇಕ್ಷುವಿನ ವಿಚಿತ್ರ ಸಂತಾನವನ್ನು ಕವಿ ಒಮ್ಮೆ ನೀರದ ರಾಜ್ಯದ "ಚಕ್ರವರ್ತಿ" ಯೆಂದು ಕರೆದ. ಈ "ಚಕ್ರವರ್ತಿ" ಶಬ್ದದೊಂದಿಗೆ ಕವಿಕಲ್ಪನೆ ಚಿನ್ನಾಟವಾಡಿತು. ಅದರಿಂದ ಕರ್ಮಚಕ್ರ ಧರ್ಮಚಕ್ರಗಳ ಚಿತ್ರ ಮೂಡಿತು. ಆದರಿಂದ ಜೀಕು ತೊಟ್ಟಿಲಾಟದ ಕಸರತ್ತಿನ ಸಮುಚಿತವಾದ ಪ್ರತಿಮೆ ಸಿದ್ಧವಾಯಿತು. ಆದರಿಂದ "ಯಂತ್ರಾರೂಢ" ವೆಂಬ ಸುಪ್ರಸಿದ್ಧ ಗೀತೋಕ್ತರೂಪಕ ಜ್ಞಾಪಕವಾಯಿತು. ಆ ಮಾತ್ರೆಯಲ್ಲಿ ಅರ್ಥಗೌರವ ಭಾವಗಾಂಭೀರ್ಯ ಉಕ್ಕಿತು! ಹಾಗೆಯೇ ಕುಂಬಾರನ ತಿಗರಿಯ ಮೇಲೆ ಉದಿಸಿದ ಕೊಡ ಪಾನದ ಕೋಟಿ—ಆ ಕೊಡ ತುಂಬುವ ತತ್ವವೇನು ? ಎಂದು ಒಮ್ಮೆಲೇ ದಾರ್ಶನಿಕವಾಗಿ ತಿರುಗುವ ಕಲ್ಪಕತೆ ನಿಜವಾಗಿ ವೈನಾಯಕೀ ವೈಖರಿ. ಆ ತತ್ವದ ಮಾತು ಬಾಷ್ಪದಂತೆ ಊರ್ಧ್ವ ಮುಖವಾಗಿ ನೀರದ ಮೂಲತತ್ವಗಳ ಆವಿಷ್ಕಾರಕ್ಕೆ ಇಂಬಾಗುತ್ತವೆ. ಆ ಮೂಲಕ ಗಗನಪುಷ್ಪ ಸೂರ್ಯೋದಯ ಸೂರ್ಯಾಸ್ತಗಳೆಂಬ ವೃಕ್ಷ, ಅದರಲ್ಲಿ ಮಾಗುವ ಪಯೋಧರ ಫಲ ಅದರಿಂದ ಅವತರಿಸಿದ ರಸಗಂಗೆ ಹೀಗೆ ಒಂದು ಚಿತ್ರಮಾಲಿಯೇ ಮೈತಾಳುತ್ತದೆ. ಅದೇ ರೀತಿ ವಿರಾಟ್ ದರ್ಶನ ಮಾಯವಾದಾಗ ನಸುಕು ಹರಿದಂತೆ ಕವಿ ವರ್ಣಿಸುತ್ತಾ ಆ ಚಿತ್ರವನ್ನು ಇಕ್ಷುವಿನ ಭಾವಭಂಗಿಯನ್ನು ಈ ರೀತಿ ಬಣ್ಣಿಸಿ ಕಳೆಗೊಳ್ಳುವಂತೆ ಪೂರ್ಣಗೊಳಿಸುತ್ತಾನೆ.

"ಕೈಮುಗಿದನಿಕ್ಷು ತಾನುತ್ಪಲವು ಮುಗಿಯುವಂತೆ
ಕಣ್ತೆರೆದ–ತಂಗೊಳದಿ ತಾವರೆಗಳರಳುವಂತೆ"

(ಇಲ್ಲಿ ಇಕ್ಷುವಿನ ಕ್ಷೋಭವಳಿದು ಶಾಂತವಾದ "ಮಾನಸ ಸರೋವರವೂ ಒಂದು ತಂಗೊಳವೇ!) ಹಿಂದೊಮ್ಮೆ ಕನ್ನಡ ತಾಯಿಯ ಕುರಿತು ಈ ಕವಿ ಹಾಡಿದ್ದರು. "ನಿನ್ನ ನಗೆಯೇ ಬೆಳ್ಳಿ ನಿನ್ನ ಮೊಗ ಚಂದ್ರಮನು, ನಿನ್ನ ಮಗ ಸೂರ್ಯನಿರಲಿ" ಈ ಮಾದರಿಯಲ್ಲಿ ಒಂದು ಕಲ್ಪನೆಯ ಕುಡಿಬಳ್ಳಿಯಾಗಿ ಅರಳಿಸಿ ಒಂದು ಚಿತ್ರಸಾಂಗತ್ಯ ರಚಿಸುವದು ವಿನಾಯಕರ "ವಾಗ್ವಿಶೇಷ." ಇದೇ ಶೈಲಿಯು ಇನ್ನೂ ಸಾಂದ್ರವಾಗಿ ಬರುವದು. ಅವರು ನಿರ್ಮಿಸಿದ ಪ್ರತಿಮಾಮಾಲೆಯಲ್ಲಿ ೨೦-೨೫ ಪ್ರತಿಮೆಗಳು ಈ "ನೀರದ' ದಲ್ಲಿಯೇ ಬಂದಿದೆ. ಇವಲ್ಲದೆ ಅನೇಕಾನೇಕ ಅಣುರೂಪಕಗಳು ನೀಹಾರಿಕಾಹಾರಗಳ ಸ್ವರ್ಣ ಛಾಯೆಯನ್ನು ಕವನಗಳುದ್ದಕ್ಕೂ ಹಬ್ಬಿಸಿವೆ. ಎಲ್ಲ ಪ್ರತಿಮೆಗಳೂ ಪ್ರತೀಕವಾಗಿ ಬಂದಿಲ್ಲ ಬರಬೇಕಾಗಿಯೂ ಇಲ್ಲ ಸಾರಸಾಂದ್ರವಾಗಿ ಒಡಮೂಡಿದ ಕೆಲವು ಪ್ರತಿಮೆಗಳನ್ನು ನೋಡಿರಿ.—

"ಮಲೆನಾಡಿನ ದಟ್ಟಡವಿಯ ಒಡಲಿನಲಿ
ಮತ್ತಗಜಸಮೂಹ"

"ದಾಳಿಯಿಟ್ಟು ದುರ್ಗದ ಬುಜರಿನಮೇಲೆ
ಕೊತ್ವಾಳದಳತೆಯ ತೊತ್ತುಳಿಯುವ ಗುಲಗಂಜಿ-
ಗಣ್ಣಿನ ಬೇಡರಪಡೆ ಅಹ!"

"ಅಣುಸ್ಫೋಟದೊಲು ವ್ಯೂಹರಚನೆಯಲಿ
'ಸಿಡಿಲು' ಸಿಡಿಯುವಾ ಸೆಳೆಮಿಂಚೊಗುಮಿಗುವಾ
ಮೇಘದೋಘದಮೋಘ ಪ್ರಯೋಗಶಾಲೆ"

"ಸೌಂದರ್ಯದ ನಿರ್ಜರ–ಶಿಶು ಮೇಲೊರಗಿ
ತೇಲಿದಾಲದೆಲೆ ಓಡ"

"ದುರ್ಗಾಮಾತೆಯ ವಾಹನದೊಲು ಮೆರೆದು
ಆಯಾಲವ ಕೊಡವಿ
ಮುನ್ನಡೆದಿಹುದೀ ಪಂಚಾನನ ಮೇಘ
ಮರಿಗಳ ಮೈದಡವಿ"

("ಆಯಾಲವ ಕೊಡವಿ" ಮತ್ತು "ಮರಿಗಳ ಮೈದಡವಿ" ಇವೆರಡು ಸಾಲುಗಳ ಅರ್ಥವಿಗ್ರಹದಿಂದ ಧ್ವನಿತವಾಗುವ ಭಾವದೀಪ್ತಿ, ಉದ್ದಾಮಬದ್ಧತೆಯೊಂದಿಗೂ ಜತೆಯಾಗಿ ಹೋಗುವ ಮುದ್ದುವಾತ್ಸಲ್ಯ—ಇದುವೆ ಜೀವನ!)

"ವೀಣಾಪಾಣಿಯು ಧ್ಯಾನಮಗ್ನಳಾಗಿರಲು
ಅವಳ ಮೇಘಮಯೂರ
ಸೋಗೆಗರಿಗಳನ್ನು ಮೂಗುತುಂಬ ಹರವಿ"

(ಒಂದು ರೂಢಪರಿಚಯದ ಕಲ್ಪನಾಚಿತ್ರ ಇಲ್ಲಿ ಹೊಸ ಮೆರುಗು ಪಡೆದಿದೆ. ಶಾರದೆ ಶರತ್ಕಾಲದ ಅಧಿಷ್ಠಾತ್ರಿ. ವರ್ಷಾಕಾಲದಲ್ಲಿ ಆಕೆ ಧ್ಯಾನ ಮಗ್ನಳೆ! ಮಯೂರ ಮೇಘಕ್ಕಾಗಿ

ಬಾಯ್ಬಿಡುವ ಜೀವಿ. ಆದರೆ ಇಲ್ಲಿ ಮೇಘವೇ ಮಯೂರ! ಮತ್ತು ಸರಸ್ವತಿಯು ಈ ವಾಹನ ಸ್ವೈರವಾಗಿ ದೂರ ಹೊರಟಿದೆ!)

"ತನ್ನವಯವಗಳನೊಳಗೆಳೆಯುತ ಕೂರ್ಮ
ಈಸುಗಾಲಿನಿಂದ
ಬರಬಹುದೊಂದಿನ ಮುಕ್ತಬಾಳಿನಿಂದ"

(ಕವಿಗೆ ಕೂರ್ಮವೆಂದೊಡನೆ ಅನಾಸಕ್ತ ಜೀವನ್ಮುಕ್ತನ ಚಿತ್ರ ತೋರುತ್ತದೆ "ಕೂರ್ಮೋಽಂಗಾನೀವ" ಎಂಬ ಗೀತೆಗೀರ್ವಾಣೋಪಮೆ ಇಣುಕುತ್ತದೆ!) ಈ ಚಿತ್ರ ನೋಡಿ—

"ಬೆದರುಗಂಗಳಿಂದೀಕ್ಷಿಸುವಾ ಸಾರಂಗ
ಕೋಡಿನ ಕೊಂಬೆಗಳಲಂಕಾರವೆತ್ತಿ
ನೋಡಿದೆಗಗನದ ವಿಸ್ತೃತಕಾನನದಿ
ಬಂದನೆ ವ್ಯಾಧನು ಬೆಂಬತ್ತಿ?"

(ಕಂಗೊಳಿಸುವ ಸಂಜೆಮುಂದೆ
ಕಂಗೆಡಿಸುವ ಮಂಜುಹಿಂದೆ

ಅತ್ತಲಿಂದೆ ಬೇಟೆಗಾರ ಬರುವ ನಾನು ಒಲ್ಲೆ—ಶ್ರೀ ಬೇಂದ್ರೆ)

ಇನ್ನು ಈ ಚಿತ್ರ ನೋಡಿ—

"ಬಂದಿತು ಮುಗಿಲ್ಗಡಲಿನ ಅಷ್ಟಾವಕ್ರ
ಎಂಟುಗಾಲಿನೇಡಿ
ಚಾಚಿತು ತನ್ನಯ ತಂತುಪಾಶಗಳನು
ಹೊಸನಾತವ ಬೇಡಿ"

("ಹೊಸನಾತವ ಬೇಡಿ" ಎಂಥ ಅರ್ಥ ನಿಬಿಡಪಂಕ್ತಿ!)

"ಪಡುವಣದಡವಿಯ ರಾಜಕಾರಣಪಟು
ಬಂದಿತಾಶೃಗಾಲ"

(ನಮ್ಮಲ್ಲಿ ರಾಜಕಾರಣವೆಂಬ ಪಟುತ್ವ ಬಂದಿದ್ದೇ ಪಡುವಣದಿಂದ! ಅದೂ ಎಂತಹುದು? ನರಿಯನೀತಿ ಅಡವಿಯ ನ್ಯಾಯ!)

"ಏಳುಮೆಟ್ಟುಗಳ ಹಾರಿಬರುವ ವ್ಯಾಘ್ರ
ಕಗ್ಗೊಲೆಯ ಆಟ
ರಕ್ತರಂಜಿತ ವ್ಯೋಮಯಾನ ಒಂದೆ
ಅದು ಬೇಡುವ ನೋಟ"

(ಈ ಪದ್ಯದ ಗತಿಯೇ ಹುಲಿಯು ಗುಪ್ಪಿನ ರಭಸವನ್ನು ಸೂಚಿಸುತ್ತದೆ. ಶಬ್ದಸರಣಿಯೂ, ಶ್ವಾಪದದ ಕರ್ಕಶವನ್ನೇ ಕನ್ನಡಿಸುತ್ತದೆ. ಬೈಗುಬೆಳಗಿನ ಕೆಂಪುಕಳೆಗೆ ಎಂಥ ಕ್ರೂರ ಬಣ್ಣ!)

ಮುಂದಿನ ಈ ಪದಗಳ ಮರ್ಮಸ್ಪರ್ಶಿಯಾದ ಪ್ರತ್ಯುಕ್ತಿ (antithesis) ಗಮನಾರ್ಹವಿದೆ.

"ಗಂಧರ್ವರ ಗಾನದಹೊಳೆ ಹರಿದಿರೆ
ಕೊಳ್ಳಿದೆವ್ವಗಳ ಕುಣಿತ
ಅಪ್ಸರಿಯರ ನೃತ್ಯದ ನೂಪುರಕೆ
ಬ್ರಹ್ಮರಾಕ್ಷಸರ ಭಣಿತ
ಬೆಳುದಿಂಗಳ ಹಾಲ್ಗಡಲದು ಮೆರೆಯಲು
ದುರ್ದಿನಗಳ ಕವಿನೆಳಲು
ವರ್ಷಾಕಾಲದ ಧಾರೆಯಬೆನ್ನಿಗೆ
ಉರಿಯುವ ಬೆಂಗಾಡಿನ ಮಳಲು!"

ಇವೆರಡೂ ಪದ್ಯಗಳು ವೃತ್ತಾಬದ್ಧಾವಿದ್ದ ಮಾತ್ರಕ್ಕೆ ನವ್ಯ ಕಾವ್ಯವೆನಿಸವೇ?

ನಾಲ್ಕನೆಯ ಕವನದಲ್ಲಿಯ "ಚಿನ್ನಭ" ದ ನಾವು ಆರೋಪಿಸುವ ಲಕ್ಷಣಗಳ ಕುರಿತ ೧೬ ಸಾಲುಗಳ ಷೋಡಶಕಲೆಗಳನ್ನು ಓದಿಯೇ ಸವಿಯಬೇಕು. ಭಾವಬಂಧುರ ವಿಶೇಷಣ ವಿಶಿಷ್ಟ ಪದ ಪಂಕ್ತಿಗಳನ್ನು ಕೋದುವ ಕೋವಿದ ಕವಿ ವಿನಾಯಕರು. ಇದೇ ಊಹಾ ವೈಖರಿ ೬ನೇ ಕವನದಲ್ಲಿ "ಕಲ್ಲಿದ್ದಲಿಯ ಹೊಗೆ" ಯಿಂದ ಮುಂದೆ "ಕಾರ್ಬೋನ್ನಿನ ಹೊಗೆ" ಮುಗಿಲುಮುಟ್ಟುವ ನಾಕದ ವರ್ಣನೆಯ ೧೬ ಸಾಲುಗಳಲ್ಲ, ೫ನೇ ಕವನದ ಎಲ್ಲಾ ಪಂಕ್ತಿಗಳಲ್ಲಿ ೭ನೇ ಕವನದ "ಇಂದ್ರಾಯುಧವೆಂತೆಸೆಯಿತು" ಎಂಬ ವಿವರಣೆಯಲ್ಲಿ ಹಾಗೆಯೇ ಸಮಗ್ರ ೧೦ನೇ ಕವನದಲ್ಲಿ ಪ್ರಕಟವಾಗಿದೆ.

ಇನ್ನು ಕವಿ ವಿನಾಯಕರ ವಾಕ್‌ಸರಣಿಯ ಚಿತ್ರ ನಿರ್ಭರತೆಯ ಪರಿಚಯ ಮಾಡಿ ಕೊಳ್ಳಿರಿ:—

"ಮೌನವಿದೆ; ಗಾನವೆಲ್ಲಿ? ತಂತಿಯಿದೆ; ತಾನವೆಲ್ಲಿ?
ಸಾಕ್ಷಿಯಿದೆ; ಸೃಷ್ಟಿಯೆಲ್ಲಿ? ಸುರಸ ವೃಷ್ಟಿಯೆಲ್ಲಿ?"

"ಎಲ್ಲ ಬೇಕು, ಬಣ್ಣ ಬೇಕು ಕಣ್ಣದೊಂದೆಸಲ್ಲದು
ಬರಿಗಣ್ಣಾಗಿರುವಪ್ರಾಣ ಕೃತಿಯನೆಂದುಬಲ್ಲದು?"

"ಆನಂದವು ಕೊನರುತಿರಲಿ ಅಮೃತಬಳ್ಳಿಯಂತೆ"
ಅನಾದ್ಯನಂತ ಕಾಲದಲ್ಲಿ ಬರಿ ಬಾಷ್ಪೀಭವನ
ಶೂನ್ಯಾಲಯ ಬರಿಮಂಜಿನ ತವರಿದಯ್ಯಭುವನ

"ಕ್ರೂರ ಹೃದಯಕವಿವ ಮಸಣವಟ್ಟೆಯ ಹೊಗೆಯು"

"ಸರ್ವಾರ್ಪಣಭಾವ ದೀಪ್ತವಿಹ ಕರ್ಪೂರ"

"ಎಳೆಬಾಳೆಹೂಗಂಪಿನ ಸ್ವಪ್ನಸೌರಭ"

"ಬಾಳ ಪ್ರಣತಿನಂದಾದೀಪ" (ಇಲ್ಲಿಯ "ಪ್ರಣತಿಯ" ಸಾರ್ಥಕವಾದ ಶ್ಲೇಷತಿಳಿಯಿತೇ?)

ಈ ಸೊಲ್ಲಿನ ಸೊಬಗನ್ನು ಸವಿಯಿರಿ:—

"ಮಾಂತ್ರಿಕನ ರತ್ನಗಂಬಳಿಯಂತೆ ಸರಿಯುವದು
ಮೆಲ್ಲಮೆಲ್ಲನೆ ಇವಳಹಂಸತಲ್ಪ

ಇವಳನಂತಾನಂತದೊಂದು ವಿದ್ಯುಲ್ಲತೆಯ
ಕುಸುಮವರಳಲುಬೇಕು ಒಂದು ಕಲ್ಪ"

## ಕವಿಯ ಕಲಾಜಾಗೃತ ಕಸಬುಗಾರಿಕೆ

ಎಷ್ಟು ಸಾಲುಗಳನ್ನು ಉದ್ಧರಿಸಿದರೂ ಸಾಲದು ೯ನೇ ಕವನದ ವಿರಾಟ್‌ದರ್ಶನ ಒಂದೇ ಸಾಕು ಈ ಕವಿಯ ಶಕ್ತಿ ಸುಭಗತೆಯ ಸಾಕ್ಷಿಯಾಗಿ. ಕೈಲಾಸ ಶಿಖರದಿಂದೇಳ್ವ ಕರೆಗೆ ಮುಡಿವಾದ ಈ ಮಿಶ್ರರೂಪದಲ್ಲಿ ಮರ್ತ್ಯ ಪ್ರಜ್ಞೆಯಸೀಮೆ ಒಳಗಣ್ಣು ಹೊರಗಣ್ಣು ಬೆರೆತು ನೋಡಿದ ನೋಟ! ಆ ಕೈಲಾಸ ಶಿಖರ ಏಕಾಂತದ ಉನ್ಮನಾವಸ್ಥೆಯ ತುರೀಯ ತುದಿ! ಈ ಕವನ ಓದುವಾಗ ಕವಿಯ ಅಸ್ಖಲಿತ ನಿರರ್ಗಳ ವಾಗ್ವೈಖರಿಯ ಕುರಿತು ಒಂದು ಮಾತೆತ್ತಬೇಕೆಂದೆನಿಸುತ್ತದೆ. ವರಕವಿ ಕುವೆಂಪು ಅವರ ಓಜೋಗುಣ ಮತ್ತು ವಿವಿಧ ವರ್ಣನಂದನೆಯ (ಟೆಕ್ನಿಕಲರ್) ವೈಭವ ಇದಕ್ಕೆ ಇಲ್ಲ. ಆದರೆ ಕುವೆಂಪು ಶೈಲಿಯ ದುರಂತವೇ ಅವರ ಅಪ್ರತಿಮ ಶಕ್ತಿಯಲ್ಲಿದೆ. ಜಿ. ಕೆ. ಚೆಸ್ಟರಟನ್ ಟೆನಿಸನ್ನರನ ಕುರಿತು ಆಡಿದ್ದು ಕುವೆಂಪು ಅವರಿಗೇ ಅನ್ವಯಿಸುವಂತಿದೆ. "He cannot think up the might of his own towering style" ಅವರ ವ್ಯಂಜನಶಕ್ತಿಯ ಎತ್ತರಕ್ಕೆ ಅವರ ವಿಚಾರಶಕ್ತಿ ಕೆಲಸ ಮಾಡುವುದಿಲ್ಲ. ಅನಿಸಿದ್ದನ್ನು ಆಡಿ ತೋರಿಸಲಾರದ ಕವಿಗೆ ವಿಪರೀತವಾದ ಯೋಗ್ಯತೆ ಕುವೆಂಪು ಅವರದು. ಆದರೆ ಕವಿವಿನಾಯಕರಲ್ಲಿ ಈ ಕೊರತೆ ಇಂಥಾ ವಿಪರೀತ ಯೋಗ್ಯತೆ ಇಲ್ಲ. ಕೇವಲ ಪದಪ್ರಯೋಗದ ಆಯ್ಕೆಯಲ್ಲಿಯೇ ಒಂದು ಐಂದ್ರಜಾಲಿಕ ಭಾಗ್ಯ ಇಲ್ಲವೇ ಸಿದ್ಧಿ ಈ ಕವಿಗೆ ಇಲ್ಲ. ಮೂಲತಃ ಕಂಠ ಮಾಧುರ್ಯ ವಿಶೇಷವಿಲ್ಲದ ಗಾಯಕ, ಅಭ್ಯಾಸಬಲದಿಂದ ಶಾರೀರ ಸಾಧನೆ ಮಾಡಿಕೊಂಡಂತೆ ಇವರ ಕಾವ್ಯಶೈಲಿ. ಕೆಲವೊಮ್ಮೆ ಬ್ರೌನಿಂಗ್ ಕವಿಯಂತೆ ಅಶಕ್ಯಪ್ರಾಯವಾದ ಪ್ರಾಸಬಂಧವನ್ನು ಪಳಗಿಸುವ ಹಠೋಟಿಯ ಹಟವೂ ಇವರಿಗಿದೆ. ಮಾಂತ್ರಿಕತೆಯುಳ್ಳ ಕವಿಯ ಕಾವ್ಯ ಸಂಪತ್ತಿಗೆ ಒಂದು ಕೀಲಶಬ್ದ ಆಚೆ ಈಚೆ ಆದರೆ ಅದರ ಕಮನೀಯತೆಯ ಕಮಾನೇ ಕುಸಿದು ಬೀಳುತ್ತದೆ. ಆದರೆ ವಿನಾಯಕರ ಕಾವ್ಯ ಸೌಂದರ್ಯ ಇದರ ಶೋಭೆ ಶಬ್ದಕ್ಕಿಂತಲೂ ಒಂದು ಭಾವ ಒಂದು ಕಲ್ಪನೆಯನ್ನೇ ಹೊಂದಿ ಅರಳುತ್ತದೆ—ಈ ಕವಿಗೆ ಈ ಅರ್ಥದಲ್ಲಿ ರೂಪಕ ಸಾಕ್ಷಾತ್ಕಾರವಾಗಿದೆ. ಈ ಸಾಕ್ಷಾತ್ಕಾರದ ಕಡೆ ಅವರ "ಕಲೋಪಾಸಕ" ದಲ್ಲಿಯೇ ಹಿಂದೆ ಬಂದಿದೆ. ಆಗೊಮ್ಮೆ ಕನಸಿನಲ್ಲಿ ಅವರ ಪ್ರತಿಭಚಕ್ಷುವಿಗೆ ಹೀಗೆ ದರ್ಶನವಾಯಿತು.

"Imagination is the body of thought
His for you to found its harness out"

ಛಂದೋಬದ್ಧವಾಗಿಯೆ ಕಾಣಿಸಿಕೊಂಡ ಈ ಸಂದೇಶ ವಿನಾಯಕರ ಕಾವ್ಯಶೈಲಿಯು ಮಿಡಿಯುವ ಶೃತಿ. ಇವರ ವಿಚಾರಕ್ಕೆ ಕಲ್ಪನೆಯೇ ದೇಹ, ಈ ದೇಹವನ್ನು ಚಂದ್ರಾಪೀಡನ ಇಂದ್ರಾಯುಧದಂತೆ ತನ್ನ ವೈಹಾಳಿಯ ವಾಹನವಾಗಿಸಿಕೊಳ್ಳಲು ಬೇಕಾದ ಪಟ್ಟಿನ ಪಲ್ಲಣ (harness) ಅವರೀಗ ಕಂಡುಕೊಂಡಿದ್ದಾರೆ. ಕನ್ನಡದ ಅತ್ಯಂತ ಕಲಾಜಾಗೃತ ಕವಿಗಳಲ್ಲಿ ವಿನಾಯಕರು ಒಬ್ಬರು. ಬೇಂದ್ರೆಯವರ ಭಾಷಾಭಾಮಿನಿ ಹೇಗೆ ನಿಂತರೂ ನಿಂತನಿಲುವೆಲ್ಲ "ತ್ರಿಭಂಗಿ" ಯೇ. ಆದರೆ ವಿನಾಯಕರಿಗೆ ಭಾಷೆಗಿಂತ ಆಶಯ ಮಿಗಿಲು. ಎಷ್ಟೇ ನಯ, ನುಣುಪು, ಬಣ್ಣ ಬೆಡಗುಗಳ ಹದ ಪಡೆದಿದ್ದರೂ ಉಕ್ಕಿನ ಅಲುಗಿನಮೊನೆ ಮಿರುಗು ಅದಕ್ಕೆಲ್ಲಿ?

ಅವರ ಕಲೆಯ ಜಾಗೃತ ಕಸಬುಗಾರಿಕೆಯ ಒಂದೆರಡು ಮಾದರಿ ಇಲ್ಲಿ ನೋಡೋಣವೇ? ಮೊದಲಿನ ಕವನದ ಕೊನೆಗೇ "ಮಧ್ಯ ಸಮುದ್ರದ ನೀಲ ನಿರಾಳದ ಮೇಲೆ ಉಡ್ಡಾಣಿಸಿದ ವೈಮಾನಿಕ" ನ ಚಿತ್ರ ರೇಖಿಸದೆ ಇದು ಮುಂದಿನ "ಬಾಳಗೀತ" ಸಂಕಲನ ಪತಾಕೆ. ಹಾಗೆಯೇ ಮೋಡಗಳನ್ನು ಬೇಡರಪಡೆಗೆ ಹೋಲಿಸಿದಾಗ "ಗುಲುಗಂಜಿ ಕಣ್ಣಿ" ನ ಉಲ್ಲೇಖ ತೀರ ನಿಕೂತವಾಗಿಯೇ ಆಗಿದೆ. ಆ ಉಲ್ಲೇಖವಿಲ್ಲದಿದ್ದರೆ ಆ ಪ್ರತಿಮೆಗೆ ಜೀವಕಳೆಯೇ ಬರುತ್ತಿರಲಿಲ್ಲ. ("ವಾತಾಯ, ಕಪಿಲಾ, ವಿದ್ಯುತ್") ಗುಲಗಂಜಿಗಣ್ಣಿನ ಮೋಡವೇ ಬಿರುಗಾಳಿಯ ದಾಳಿಗೆ ಇದುರಾಳಿ.

ಶೆಲ್ಲಿಕವಿಯ ಜಗತ್ಪ್ರಸಿದ್ಧ ಮೇಘ ಗೀತದಲ್ಲಿ ಮೇಘ ಹಾಡಿಕೊಳ್ಳುತ್ತದೆ. "I change but I cannot die" ತಮ್ಮ ೨ನೆ ಕವನದಲ್ಲಿ ವಿನಾಯಕರು "ನೃಜಪರಿವರ್ತನೆ ಮರಣವಾಯೆ" ಎಂಬ ತತ್ವವನ್ನು ಜನತೆಗೆ ಸುವನ ಶಲ್ಲಿಕವಿಯೇ ನವನೀರದನಾಗಿ ಹೊಸಹುಟ್ಟು ಪಡೆದಿದ್ದಾನೆಂದು ಉತ್ಪ್ರೇಕ್ಷಿಸುವಾಗ ಶಲ್ಲಯ ಆ ಅಮರ ಪಂಕ್ತಿಯ ನೆನಪಾಗುತ್ತದೆ ಜಲಸಮಾಧಿಯೂ ಜ್ಞಾಪಕಕ್ಕೆ ಬರುತ್ತದೆ. ಜಲಗರ್ಭದಿಂದೆದ್ದ ನವನೀರದ ಶೆಲ್ಲಿಯ ಮೋಡದ "a child from the womb a ghost from the tomb" ಇವೆರಡು ಪ್ರತಿಮೆಗಳ ಎರಕವಾದ ನೆರಳಿನಲ್ಲಿ ಶಲ್ಲಿಯದೇ ಪುನರಾವತಾರವೆಂದಾಗ ಒಂದು ಮಾರ್ಮಿಕ ಔಚಿತ್ಯದ ಮೂಲಕ ಸಹೃದಯನಿಗೆ ಜುಮ್ಮೆನಿಸುವಂತಿದೆ. ೬ನೆ ಕವನದ ವಸ್ತುವಾದರೂ ಏನು? ಮಳೆಬಿದ್ದ ನಂತರವೂ ಹೊಸಮೋಡ ಒಂದು ಎದ್ದುಬಂದದ್ದು. ಆದರೆ ಕವಿಯರೂಪಕ ಪ್ರತಿಭೆ ಅದನ್ನು ವೃತ್ರಹಂತ, ವಜ್ರಾಯುಧನ ರಣಚೆಂಡೆಯಾಗಿ ಅಬ್ಬಿರಿಸಿಬಿಟ್ಟಿದೆ. ಭವಭೂತಿ ಬಳಸುವ "ಕೌತುಕರಸ" ವೆಂಬ ಪದವು ಇಂಥಾ ಕವನಗಳ ಭಾವೋದ್ದೀಪನಕ್ಕೇ ಅನ್ವಯಿಸಬಹುದಲ್ಲವೇ?

ಕವಿಯ ಪ್ರತಿಮೆ ಪ್ರತೀಕವಾಗುವ ಒಂದುಪರಿ ಇಲ್ಲಿ ಗಮನಿಸಬಹುದು. "ಇಕ್ಷುನಿಂತನು ಬದಿಗೆ ಪಾಂಡವ ವಿರಾಟನಡಿಗೆ" ಎಂದು ಒಂದು ಸೊಲ್ಲು ಬಂದಿದೆ. ೯ನೆ ಕವನದ ಎರಡನೆಯ ಹಂತದಲ್ಲಿ ಪಾಂಡವ ವಿರಾಟನಡಿಗೆ ನಿಂತನೆಂದು ಹೇಳುವುದರಲ್ಲಿ ಒಂದು ಭಾವದ ಅಧ್ಯಾಹಾರ ಇನ್ನೊಂದರ ಅಧ್ಯಾರೋಪವಾಗಿದೆ. ವಿರಾಟ್ ದರ್ಶನದ ಹೊತ್ತಿಗೆ "ಆಶ್ಚರ್ಯವತ್" ನೋಡುತ್ತ ಅರ್ಜುನ ಬದಿಗೆನಿಂತ ಕೃಷ್ಣನ ಅಡಿಗೆನಿಂತ. ಇಲ್ಲಿ ಇಕ್ಷುವೂ ಅರ್ಜುನನಂತೆ ಮೋಹಸಂಮೂಢಚೇತ-ಸಂಶಯಾತ್ಮ ಇದು ಅಧ್ಯಾಹೃತವಾದ ಅರ್ಥಛಾಯೆ ಇನ್ನೂ ಒಂದು ಅರ್ಥದ ಛಾಯೆ ಈ ಪ್ರತಿಮೆಯನ್ನು ಆವರಿಸಿದೆ. ಅದೇ ಅರ್ಜುನ "ಪಾಂಡವ" ಇನ್ನೊಬ್ಬ ವಿರಾಟನಡಿಗೆ ನಿಂತಿದ್ದ ಅಜ್ಞಾತ ವಾಸದಲ್ಲಿ "ಅಗ್ಗದ" ಪಾಂಡುತನಯರು ಬಡವಿರಾಟನ ಅರಮನೆಯ ಊಳಿಗಕ್ಕೆ ತಮ್ಮ ತನವನ್ನು ಮರೆಯಿಸಿ ಉಳಿದರು. ಈ ಅರ್ಥದ ಅಧ್ಯಾರೋಪ ತುಂಬ ಸೂಚಕ ಪ್ರಪಂಚದಲ್ಲಿ ವ್ಯಕ್ತಿವ್ಯಕ್ತಿಯೂ ಹೀಗೆ ವಿರಾಟನಡಿಗೆ ನಿಂತ ಪಾಂಡವನೇ—ಪ್ರಾಜ್ಞನಾದರೆ ಅರ್ಜುನನಂತೆ ಇಲ್ಲವಾದರೆ ಬೃಹನ್ನಳೆಯಂತೆ! ಪ್ರತಿವ್ಯಕ್ತಿಗೂ ಆಧುನಿಕ ಪ್ರಜ್ಞೆಯೊಂದು ಅಜ್ಞಾತ ವಾಸವೇ. ತನ್ನಲ್ಲಿ ತಾನು ಏನೇ ಆಗಿದ್ದರೂ ಲೋಕದಲ್ಲಿ ವ್ಯಕ್ತಿ ಬಾಳುವುದು ಒಂದು ಪಾತ್ರಧಾರಿ ಯಾಗೆ—ಅದೂ ಸ್ವೇಚ್ಛೆಯಿಂದಲ್ಲ. ಸ್ವಸಂತೋಷಕ್ಕಾಗಿಯೂ ಅಲ್ಲ ಪರಿಸ್ಥಿತಿ, ಆವಶ್ಯಕತೆ, ಪರೇಚ್ಛೆ ಇಲ್ಲವೇ ಪ್ರಾರಬ್ಧವೆಂಬ ಒಂದು ಅಥವಾ ಹೆಚ್ಚು ಬಲಾತ್ಕಾರಗಳಿಗೆ ಬಲಿಯಾಗಿ ಆಧುನಿಕ ಪ್ರಜ್ಞೆಯ ಮಾನವ ಪ್ರತೀಕ ಇಕ್ಷು. ಇನ್ನು ವಿರಾಟನ್ಯಾರು? ಅವನೆದುರು ಪ್ರಚಂಡವಾಗಿ ಹಬ್ಬಿದ "ಭೂದೇವಿ ಪಡೆದ ವಿಸ್ತಾರಗಳು" ಸೃಷ್ಟಿಯ ವಿಶಾಲ

ಪ್ರಚಂಡ ಶಕ್ತಿಯ ಆ ಸಾಕ್ಷಾತ್ಕಾರ ಒಂದು ವಿರಾಡ್ರೂಪ. ಆದರೆ ಕೊನೆಗೂ ಆ ಶಕ್ತಿಯ ಸಾರ್ಥಕತೆ ಅದನ್ನು ಮನಗಂಡು ಮೆಟ್ಟಿ ಮೀರಿ ಮೇಲಾಳಿ ನಿಲ್ಲುವ ಮಾನುಷ ಪ್ರಜ್ಞೆಯ ಪೌರುಷ ಬೃಹನ್ನಡೆಯಾಗಿ ಹಳಿಸಲ್ಪಡುವ ಧನಂಜಯನೇ—ಅಲ್ಲವೂ, ಅಸಹಾಯವೂ ಆಗಿ ಕಾಣುವ ಮಾನುಷ ಪ್ರತಿಭೆಯೇ—ಈ ವಿರಾಟ್ ವಿಶ್ವದ "ಬಡವಿರಾಟ" ನನ್ನು ಸೋಲಿಸದೆ ಗೆಲ್ಲುವದು ಪಾಂಡವನಂಶ ಇಕ್ಷು, ಇಕ್ಷುವಿನಂತೆ ನವಮಾನವ, ಈ ವಿಶ್ವರೂಪದ ವಿರಾಟನೆದುರಿಗೆ ಆತ್ಮ ವಿರೋಧಿಯಾಗಿ ಅಸಹಾಯನಂತೆ ಅಲ್ಪನಾಗಿ ಅಜ್ಞಾಕಾರಿಯಾಗಿ ವ್ಯವಹರಿಸುವಂತೆ ಕಂಡರೂ ಕೊನೆಗೆ ಅವನ ಅಧಿಕಾರವೇ ಅಲ್ಲಿ ತತ್ವತಃ ವರ್ಚಸ್ವಿ! ಆತನೇ ತಾನು ತಗ್ಗಿ ತಲೆಮೆಟ್ಟಿ ತಾಂಡವಾಡುವ ತೇಜಸ್ವಿ! stooping-to conquer— ಹೀಗಿದೆ ಪಾಂಡವ--ವಿರಾಟರ ಪ್ರತಿಮೆ ಮಾನವ ಪ್ರಕೃತಿಗಳ ನಿತ್ಯಪ್ರತೀಕ. ಈ ಪ್ರತೀಕವನ್ನು ಹಿಂಜಿ ತಿಳಿದಷ್ಟೂ ಇದರ ಉದ್ದೇಶ ಗಹನ, ನಿರ್ದೇಶ ವಿಶಾಲ!]

## ಸಂಕಲನದ ಸಂದೇಶ ಮತ್ತು ಕವಿಯ ನವ್ಯಪ್ರಜ್ಞೆ

ಇಂತಿದೆ "ನೀರದ" ಸಂಕಲನದಲ್ಲಿಯ ಕವನಗಳ ಅಲ್ಪ ಪರಿಚಯ. "ಕಲ್ಪನಾಧಾರೆಯ ಸಹಾಯದಿಂದಲೇ ಭಾವದ ಬೆನ್ನೇರಿ ಕವಿತೆರೆದ ಲೋಕಗಳಲ್ಲಿ ಸಂಚರಿಸುವದು" ಹೇಗೆಂಬುದನ್ನು ಆದಷ್ಟು ಸಂಕ್ಷೇಪವಾಗಿ ಇಷ್ಟೆಲ್ಲಾ ವಿಸ್ತಾರವಾಗಿ! ಕಾಣಿಸಿದ್ದಾಯಿತು. ಈ ಸಂಕಲನದ ಈ ಕವನಗಳ ಸಂದೇಶವೇನು? ನೀರದವು ನಮ್ಮ ಉದ್ಧಾರದ ಅಭೀಷ್ಟೆಯನ್ನು ವ್ಯಕ್ತಗೊಳಿಸುತ್ತದೆ"—ಎಂದಿದ್ದಾರೆ ಕವಿವರ್ಯ ಬೇಂದ್ರೆ. "ಜೀವನ ಒಂದೇ ಜೀವಿತದೆದುರಿನಗುರಿ" "ನೈಜವು ಪರಿವರ್ತನೆ ಮರಣವು ಮಾಯೆ" ನಮ್ಮದೂ ನೀರದದಂತೆ "ಉಗಿಮೋಡದ ಪಯಣ". ಉಗಿ ಮಾಡದ ಶೂನ್ಯತೆಯೊಂದಿಗೆ ಬಾಳುವೆ" ಇದುಸ್ಥಿತಿ ಇದಕ್ಕೆಗತಿ ಏನು? ಪ್ರೀತಿ ಸಂತತಧಾರೆಯಾಗಿಧರೆಗೆ ಸುರಿಯಲು ನವನೀರದ ನವ್ಯವಿಕಸನದ ದಾರಿಯಲಿ ನವಮಾನವ ಸಂಸಾರದ ವಿಸ್ತಾರದಧ್ರುವಪತಾಕೆಯಾಗಿ ಲೀಲೆಗಾಗಿ ವಿಕಸನವೆಂಬರಿವನಾಂತು ಬಂದು "ಭುವನದೈಸಿರಿಯನುನೂಂಕದೆ ಸ್ವಗತತೃಪ್ತಿಲೀಲೆ"ಯಲ್ಲಿ "ಏಕಮೇವ ದರ್ಶನದ ದೃಷ್ಟಿದೋಷ ಸೋತಂತೆ" ವಿಶ್ವದದಿವ್ಯತೆಯ ಕಂಡು "ಮುಗ್ಧ ಬಾಳನಂದಬಾಳಿ" "ನವಮಾನವ ದೇವನೆಂದು" ನವವಿಶ್ವದ ನಾಂದಿಬೀರಿ ಅರುಣೋದಯಗೊಂಡಿತು—ಎಂದು ಕವಿ ಮತ್ತೆ ಮತ್ತೆ ಉದಯರಾಗ ಹಾಡುತ್ತಾನೆ! ಮಳೆಗರೆಯುವ ಮುಗಿಲು ದೇವರ ಕರುಣಾವತಾರ ಮೇಲೇಳುವ ಮೋಡ ಪ್ರಪಂಚ ಪೂರ್ಣವಿಕಾಸಕ್ಕಾಗಿ ಕ್ರಿಯಾಪರನಾಗುವ ನವಮಾನವ! ಕವಿಗೆ ಮಾನವನ ವೈಯಕ್ತಿಕ ಉದ್ಧಾರ ಸಾಲದು. ಭೂಲೋಕವನ್ನೆ ದೇವಲೋಕವಾಗಿಸಲು ವಿಶ್ವದಲ್ಲಿ ಸ್ವರ್ಣಯುಗ ನೆಲಸಲು ಕವಿ ಹಂಬಲಿಸುತ್ತಾನೆ—"ಊರ್ಧ್ವಮುಖ ಚಲನ ಧಾರಣ ಅವತರಣ" ಇದೇ ನೀರದದ ಸಂದೇಶ ಇಲ್ಲಿ "ಅವತಾರ" ಮತ್ತು "ಉದ್ಧಾರ" ಇವೆರಡೂ ಮಾನವನ ಸಹಾಯಕತೆಯ ಫಲ ಮತ್ತು ದ್ಯೋತಕ. ಆದರೆ ಕವಿ "ಅಸಹಾಯಕತೆಯೆಲ್ಲ ಬೆಂದುಬೂದಿಯಾಗಿ ಬೀಳಲಿ" ಎನ್ನುತ್ತಾನೆ.

ಈ ಕವಿಯನ್ನು ಆಧುನಿಕ ಪ್ರಜ್ಞೆಯಪಾಡು ಹಾಡುವ ಯಾವ ನವ್ಯಕವಿಗೂ ಕೆರಳಿಸುವ ಸಂಗತಿ ಈ ಅಸಾಯಕತೆ "ಅನಾದ್ಯನಂತ ಕಾಲದಲ್ಲಿ ಬರೀ ಬಾಷ್ಪೀ ಭವನ" ಇಲ್ಲಿ ಕೊನರದಂಥ ನೋವು ಫಲಿಸದಂಥ ಯಾತನೆ ಇಲ್ಲಿ "ನಿತ್ಯ ಕೊಳೆಯುತಿಹುದು ಹಸಿದಜೀವ ಚೇತನೆ" Romantic ಸಂಪ್ರದಾಯದಲ್ಲಿ ಪಾಕಗೊಂಡು ಮೊಗವಡೆದ ಕವಿಯ ಮನಸ್ಸು ಅಸಹಾಯಕತೆಗೆ

ಸಿಡಿಮಿಡಿಯಾಗಿ ಉನ್ಮನ ಪ್ರಜ್ಞೆಯನ್ನು ಅರಿಸುತ್ತ ಹೊರಟಿತು. ಮೂವತ್ತರ ದಶಕದಲ್ಲಿಯ "New signature" ಕವಿಗಳ ಗುಂಪಿನಂತೆ ಕವಿ ವಿನಾಯಕರಿಗೂ ಈ ಯುಗಮಾನವು ವಿಚಲಿತಶ್ರದ್ಧೆಯ ವ್ಯಾಕುಲ ಅಂತಃಕರಣದ (troubled concience) ಮತ್ತು ಹೊರತೋರಿಕೆಗೆ ಭದ್ರವಾಗಿ ಕಂಡರೂ ತಳದಲ್ಲಿ ಸಾಮಾಜಿಕ ಜೀವನವನ್ನು ಹ್ರಾಸದತ್ತ ಒಯ್ಯುವ ಕುರುಡು ಸೆಳವಿನ ಒಂದು ಅಸಹಾಯ ಅವಸ್ಥೆಯಾಗಿ ಕಂಡಿತು. ಒಂದೆಡೆಗೆ ಆಧುನಿಕ ವೈಜ್ಞಾನಿಕ "ವಿಶ್ವವಿಜಯ" ದ ಸಾಮರ್ಥ್ಯ, ಸದ್ಭಾವನೆ, ಸೌಂದರ್ಯಗಳ ಆಕರ್ಷಣೆ, ಒಡಕು, ಸೊಟ್ಟ, ಸಿಡುಕು, ದೈನ್ಯ, ದಯನೀತಿ—ಹತಾಶೆ, ಹುತಾತ್ಮತೆ ಈ ಇಬ್ಬಗೆಯ ಒತ್ತಡದ ಇಕ್ಕಟ್ಟಿನಲ್ಲಿ ಆಧುನಿಕ ಕವಿಯ ಮನಸ್ಸು ರೊಮ್ಯಾಂಟಿಕ ರೂಹುಗಾರಿಕೆಯ ಚರ್ವಿತವರ್ಣದಲ್ಲಿ ಹೊಸರುಚಿ ಹೊಸಸ್ವಾದತರ ಬಯಸಿತು. ಇಂಗ್ಲಂಡದಲ್ಲಿ **ಸ್ಟೀಫನ ಸ್ಪೆಂಡರ**ನಂತೆ ಕವಿ ವಿನಾಯಕರು ತಮ್ಮ "ಸಮುದ್ರಗೀತ" ಗಳಲ್ಲಿಯೂ ಆಧುನಿಕ ಯಂತ್ರ ಯುಗದ ಪವಾಡದಿಂದ ಕಾವ್ಯ ಸ್ಫೂರ್ತಿ ಪಡೆದರು. ಹಳೆಯ ಪ್ರತಿಕ್ರಿಯೆಯನ್ನೆ ಹೊಸ ಪ್ರಚೋದನೆಗೆ ಫಲಿಸುವಂತೆ ಮಾಡಲು ತೊಡಗಿದರು. ಇದೇ ಶಕ್ತಿಯ ಸಂಶೋಧನೆ, ಆರಾಧನೆ, ಅವರನ್ನು ಅರವಿಂದರ ಪೂರ್ಣಯೋಗದತ್ತ ಒಯ್ಯಿತು. ಇಲ್ಲಿಗೆ ಒಂದು ರೀತಿ ವಿನಾಯಕರ ಕಾವ್ಯದ ಭಾಗ್ಯ ಚಿತ್ರದ ಒಂದು ಸುತ್ತು ತಿರುಗಿತು.

ಆರಂಭದ ರೀತಿಯನ್ನು ಬಿಟ್ಟರೆ, ಕವಿವಿನಾಯಕರಿಗೆ ಸ್ಪೆಂಡರ ಕವಿಗಿಂತ **ಸಿ.ಡೆ. ಲೆವ್ಹಿಸ್**ನ ಮಾದರಿಯವರೆನ್ನಬಹುದು. ಕೆಲಮಟ್ಟಿಗೆ ಲೆವ್ಹಿಸನದಂತೆ ವಿನಾಯಕರ ಕಾವ್ಯವೂ Victory of tradition over experiments, ಪ್ರಾಯೋಗಿಕ ಅವಸ್ಥೆಯ ಮೇಲೆ ಸಂಪ್ರದಾಯಿಕತೆಯ ವಿಜಯವೆನ್ನಬಹುದು. ಅಂದರೆ ಕವಿಯ ನವ್ಯಪ್ರಯೋಗ ಪ್ರವೃತ್ತಿ ಲೋಪವಾಯಿತೆಂದಲ್ಲ. ಅವರ ಮೇಲೆ ಅರವಿಂದರ ಮಾರ್ಗವಾಗಿ ಬಂದ ಪ್ರಾಚೀನ ದಾರ್ಶನಿಕತೆಯ ಸಮನ್ವಯಯೋಗದ-ಅಧ್ಯಾರೋಪವಾಯಿತು. ಆದರೂ ಈ ಕವಿ ಮೂಲತಃ ಅನುಭಾವಿಯಲ್ಲ. ಇವರಲ್ಲಿ ಆರ್ತತೆಗಿಂತ ಬೌದ್ಧಿಕತೆ ಹೆಚ್ಚು. ಅರವಿಂದರು ತಲ್ಪಿದಲ್ಲಿಗೆ ಇವರು ಹೊರಟವರು. "ಗುರುವಿನ ಗುಲಾಮ" ರಾಗಬಲ್ಲವರಲ್ಲ. ತನ್ನ ಸಂಪನ್ನ ವ್ಯಕ್ತಿತ್ವದ ಸಂಪೂರ್ಣ ಶರಣಾಗತಿ ಯಾವಮೂರ್ತಿಯ ಇದುರಿಗೂ ಇವರು ಮಾಡುವವರಲ್ಲ. ಗೂಢಗುಂಜನದಲ್ಲ ಅಂತರ್ಮುಖಿಯಾಗಿ "ಇದ್ದದ್ದು ಮರೆಯೋಣ ಇಲ್ಲದ್ದು ತೆರೆಯೋಣ ಹಾಲ್ಜೇನು ಸುರಿಯೋಣ" ಎಂದು ಇವರು ಕುಣಿದಾಡುವುದಿಲ್ಲ. ಒಂದು ವ್ಯಕ್ತಿಗತ ಆದರ್ಶ ಇಲ್ಲವೇ ಆನಂದಲೋಕವನ್ನು ಕಟ್ಟಿಕೊಳ್ಳುವುದಕ್ಕಿಂತ ಸಾಮುದಾಯಿಕವಾಗಿ ಅಂಥ ಲೋಕ ಕಟ್ಟುವ ಕನಸು ಈ ವಿನಾಯಕರು ಕಾಣುತ್ತಾರೆ. ಆ ಕಣಸು ತಮ್ಮ ತತ್ವನಿರ್ಭರ ಕವನ ಬಂಧದಲ್ಲಿ ಕಟ್ಟುತ್ತಾರೆ. ಒಬ್ಬ ವಿಮರ್ಶಕನು, ಸಿ.ಡೆ. ಲೆವ್ಹಿಸನನ್ನು ವರ್ಣಿಸಲು ಆಡಿದ ಮಾತುಗಳು ನೀರದವನ್ನು ಕುರಿತು ಹಾಡುವ ಈ ನಾರದನಿಗೂ ಅನ್ವಯಿಸುತ್ತವೆ—He is the poet of our modern ambivalence. He is a private poet whose private visions gives clarty to his public view ; a publicpoet whose public view enlarges his private visions."

# ಸಂಪಾದಕೀಯ

ಬಹಳ ಹಿಂದೆಯೇ ಹೊರಬರಬೇಕಾಗಿದ್ದ ಪರಿಷತ್ಪತ್ರಿಕೆಯ ಈ ಸಂಚಿಕೆ ಇದೀಗ ಪ್ರಕಟವಾಗುತ್ತಿದೆ. ಅನೇಕ ಕಾರಣಗಳಿಂದಾಗಿ ಈ ವಿಲಂಬ ಅನಿವಾರ್ಯವಾಯಿತು. ಆ ಕಾರಣಗಳನ್ನು ವಿವರಿಸಹೋಗುವ ಅನಗತ್ಯ ಕಾರ್ಯಕ್ಕೆ ತೊಡಗದೆ ತಡವಾದುದಕ್ಕೆ ಸಹೃದಯರು ಕ್ಷಮಿಸಬೇಕೆಂದು ಬೇಡುತ್ತೇವೆ.

ಸದ್ಯದ ಸಂಚಿಕೆಯಲ್ಲದೆ ಈ ಡಿಸೆಂಬರಿನೊಳಗೆ ಬರಬೇಕಾಗಿದ್ದ ಎರಡು ಸಂಚಿಕೆಗಳನ್ನೂ ಒಂದುಗೂಡಿಸಿ ಮತ್ತೊಂದು ಸಂಚಿಕೆಯಾಗಿ ಹೊರತರಲು ನಿಶ್ಚಯಿಸಲಾಗಿದೆ. ಅದನ್ನು ಆದಷ್ಟು ಶೀಘ್ರವಾಗಿ ತರಲು ಅಗತ್ಯವಾದ ಪ್ರಯತ್ನಗಳನ್ನು ಕೈಗೊಳ್ಳಲಾಗಿದೆ.

ಪರಿಷತ್ಪತ್ರಿಕೆಯಿಂದ ತಾವು ಏನನ್ನು ನಿರೀಕ್ಷಿಸುವರೆಂಬುದನ್ನು ವಾಚಕರು ಬರೆದು ತಿಳಿಸಬೇಕಾಗಿ ಕೇಳಿಕೊಳ್ಳಲಾಗಿತ್ತು. ಆ ಬಗ್ಗೆ ಕೆಲವರು ಬಹಳ ಉಪಯುಕ್ತವಾದ ಸಲಹೆಗಳನ್ನು ಕಳಿಸಿದ್ದಾರೆ. ಅವರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು. ಆ ಸಲಹೆಗಳನ್ನು ಗಮನದಲ್ಲಿಟ್ಟು ಪರಿಷತ್ಪತ್ರಿಕೆಯ ಮಟ್ಟ, ಘನತೆಗಳನ್ನು ಇನ್ನಷ್ಟು ಸುಧಾರಿಸಲು ಸಾಧ್ಯವಾದ ಎಲ್ಲ ಪ್ರಯತ್ನಗಳನ್ನೂ ಮಾಡುವುದಾಗಿ ಭರವಸೆ ಕೊಡುತ್ತೇವೆ.

ಪರಿಷತ್ಪತ್ರಿಕೆಗೆ ಲೇಖನಗಳನ್ನು ಕಳಿಸುವ ಲೇಖಕರಲ್ಲಿ ಒಂದು ನಮ್ರ ವಿನಂತಿ. ಕೇವಲ ವಿದ್ವತ್ಪೂರ್ಣವಾದ ಸಂಶೋಧನಾತ್ಮಕ ಲೇಖನಗಳಿಗೆ ಈ ಪತ್ರಿಕೆ ಮೀಸಲಾಗಿರುವುದರಿಂದ ದಯವಿಟ್ಟು ಅಂಥ ಲೇಖನಗಳನ್ನೇ ಕಳಿಸಿಕೊಡಬೇಕು. ಹೊಸಗನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಿಗೆ ಸಂಬಂಧಿಸಿದ ಲೇಖನಗಳನ್ನೂ ಈ ಸಲದಿಂದ ಪ್ರಕಟಿಸಲಾಗುವುದು.

---

# ವಿನಿಮಯ ಪತ್ರಿಕೆಗಳು

**ದಿನಪತ್ರಿಕೆ :**

(೧) ಜನವಾಣಿ-ಬೆಂಗಳೂರು. (೨) ಸಂಯುಕ್ತ ಕರ್ನಾಟಕ-ಬೆಂಗಳೂರು.

**ವಾರಪತ್ರಿಕೆ :**

(೧) ಪ್ರಜಾಮತ-ಬೆಂಗಳೂರು. (೨) ಮೈಸೂರು ಗೆಜೆಟ್-ಬೆಂಗಳೂರು. (೩) ರಾಯಭಾರಿ-ಉಡುಪಿ. (೪) ವಿಕ್ರಮ-ಬೆಂಗಳೂರು. (೫) ಕಂಠೀರವ-ಮಂಗಳೂರು. (೬) ಪ್ರಭಾತ-ಮಂಗಳೂರು. (೭) ಕರ್ನಾಟಕ ವೈಭವ-ಬಿಜಾಪುರ. (೮) ಕರ್ಮವೀರ-ಹುಬ್ಬಳ್ಳಿ. (೯) ಬೆಳಕು-ಮೈಸೂರು. (೧೦) ನವಯುಗ-ಉಡುಪಿ. (೧೧) ಜನಪ್ರಗತಿ-ಬೆಂಗಳೂರು. (೧೨) ಕಾನಡಾವೃತ್ತ-ಕುಮಟ. (೧೩) ರಾಷ್ಟ್ರಮತ-ಮಂಗಳೂರು. (೧೪) ಕನ್ನಡಿಗ-ಹುಬ್ಬಳ್ಳಿ. (೧೫) ಪ್ರಪಂಚ-ಹುಬ್ಬಳ್ಳಿ. (೧೬) ಜನಸೇವಕ-ಅಂಕೋಲ. (೧೭) American Reporter-New Delhi. (೧೮) ಸಂದರ್ಶನ-ಬಿಜಾಪುರ. (೧೯) ಸಂದೇಶ-ಬೆಳಗಾಂವಿ. (೨೦) ಸತ್ಯವಾದಿ-ಮೈಸೂರು.

**ಮಾಸಪತ್ರಿಕೆ :**

(೧) ಅಧ್ಯಾತ್ಮಪ್ರಕಾಶ-ಹೊಳೇನರಸೀಪುರ. (೨) ಅಮರವಾಣಿ-ಯಾದಗಿರಿ. (೩) ಕಸ್ತೂರಿ-ಹುಬ್ಬಳ್ಳಿ. (೪) ಕತೆಗಾರ-ಬೆಂಗಳೂರು. (೫) ಕೊರವಂಜಿ-ಬೆಂಗಳೂರು. (೬) ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ-ಕಾಕಿನಾಡ. (೭) ಗುರುದೇವ-ಮೂಡಬಿದರೆ. (೮) ಜೀವನ-ಬೆಂಗಳೂರು. (೯) ಜಯ ಕರ್ನಾಟಕ-ಧಾರವಾಡ. (೧೦) ಜ್ಯೋತಿರ್ವಾಣಿ-ಬೆಂಗಳೂರು. (೧೧) ಜಯಂತಿ-ಧಾರವಾಡ. (೧೨) ಧನ್ವಂತರಿ-ಬಿಜಾಪುರ. (೧೩) ದಿವ್ಯಜ್ಯೋತಿ-ಮೈಸೂರು. (೧೪) ಪುಸ್ತಕ ಪ್ರಪಂಚ-ಮೈಸೂರು. (೧೫) ಧರ್ಮಬೋಧ-ಉಡುಪಿ. (೧೬) ಪ್ರಕಾಶಿನಿ-(ದ. ಕ.) (೧೭) ಪ್ರದೀಪ-ಧಾರವಾಡ. (೧೮) ಪರಿಮಳ-ನಂಜನಗೂಡು. (೧೯) ಮೈಸೂರು ವ್ಯವಸಾಯ ಸಂಶೋಧನ ಪತ್ರಿಕೆ-ಬೆಂಗಳೂರು. (೨೦) ಮೊಗವೀರ-ಬೊಂಬಾಯಿ. (೨೧) ಭಾರತ ಸರ್ಕಾರದ ಪ್ರಕಾಶನಭಾಗ-ನ್ಯೂ ಡೆಲ್ಲಿ. (೨೨) ಮಲೆನಾಡು-ಬೆಂಗಳೂರು. (೨೩) ಪಂಚಾಮೃತ-ಗದಗ. (೨೪) ಗಾಯನಗಂಗ-ಬೆಂಗಳೂರು. (೨೫) ತತ್ವವಾದ-ಬೆಂಗಳೂರು. (೨೬) ವಿನೋದ-ಬೆಂಗಳೂರು. (೨೭) ಶರಣಸಾಹಿತ್ಯ-ಬೆಂಗಳೂರು. (೨೮) ಸದ್ಧರ್ಮ ದೀಪಿಕೆ-ಮೈಸೂರು. (೨೯) ವಿವೇಕಾಭ್ಯುದಯ-ಮಂಗಳೂರು. (೩೦) ಯುಗಪುರುಷ-ಕಿನ್ನಿಗೋಳಿ. (೩೧) ಶ್ರೀ ಸುಧಾ-ಬೆಂಗಳೂರು. (೩೨) ಸುಬೋಧ-ಬೆಂಗಳೂರು. (೩೩) ಸೋವಿಯತ್ ದೇಶ-ಮದರಾಸು.

**ತ್ರೈಮಾಸಿಕ ಪತ್ರಿಕೆ :**

(೧) ಮೈಸೂರು ಸಕ್ಕರೆ-ಮಂಡ್ಯ. (೨) ಪ್ರಬುದ್ಧ ಕರ್ನಾಟಕ-ಮೈಸೂರು. ಪುಸ್ತಕಮಿತ್ರ-ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ, ಮದರಾಸು.

**Fortnightly** :—(1) British Information Service, Fortnightly Review of News and Events, Delhi.

**Monthly**:—1. P.E.N., Bombay. 2. Journal of Mysore State Educational Federation, Bangalore. 3. Mysore Information Bulletin, Bangalore. 4. British Book News, London. 5. The Indian Publisher and Book-seller, Bombay.

**By-Monthly**:—1. Journal of the University of Bombay, Bomby. 2. Public Affairs-Gokhale Institute Bangalore.

**Quarterly**:—1. Journal of the Mythic Society, Bangalore. 2. Journal of the Annamalai University, Annamalai Nagar. 3. Bulletin of the Deccan College Research Institute, Poona. 5. Annals of Bhandarkar Oriental Research Institute. 6. Bulletin of the School of Oriental and African Studies, London.

**Half-Yearly** :—Half-Yearly Journal of the Mysore University, Mysore.

# ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ. ಪೈ |
|---|---|---|
| ೧. | ಕನ್ನಡದ ಬಾವುಟ (ಐದನೆಯ ಮುದ್ರಣ ೧೯೫೮) | ೨=೦೦ |
| ೨. | ಸೀತಾ ಪರಿತ್ಯಾಗ (ಜೈಮಿನಿ ಭಾರತದಿಂದ ೧೯೬೧) | ೦=೬೫ |
| ೩. | ಜೇಮ್ಸ್ ಏಬ್ರಹಾಮ್ ಗಾರ್ಫೀಲ್ಡನ ಚರಿತ್ರೆ : ಕ್ಯಾಲಿಕೋ ಪ್ರತಿ (೧೯೩೦) | ೧=೫೦ |
| | (ನಾಲ್ಕನೆಯ ಮುದ್ರಣ) ಸಾದಾ ಪ್ರತಿ (೧೯೩೮) | ೧=೦೦ |
| ೪. | ಜ್ಯೋತಿರ್ವಿನೋದಿನಿ (೧೯೩೧) | ೨=೦೦ |
| ೫. | ಹೂಮಾಲೆ (೧೯೪೩) | ೦=೬೩ |
| ೬. | ಕನ್ನಡ ನಾಡಿನ ಚರಿತ್ರೆ: ಭಾಗ ೧ (ಅಚ್ಚಿನಲ್ಲಿದೆ) | |
| | ,, ಭಾಗ ೨ (ಎರಡನೆಯ ಮುದ್ರಣ ೧೯೫೭) | ೨=೦೦ |
| | ,, ಭಾಗ ೩ ( ,, ೧೯೫೯) | ೧=೨೫ |
| ೭. | ಸರ್ವೋದಯ (೧೯೪೯) | ೦=೩೨ |
| ೮. | ಸಂಕಲನ (೧೯೪೯) | ೦=೬೩ |
| ೯. | ಕನ್ನಡದಲ್ಲಿ ಸುಧಾರಣೆಗಳು ೧೯೪೬ | ೦=೩೮ |
| ೧೦. | ಅರುಂಧತಿ (೧೯೫೧) | ೦=೨೫ |
| ೧೧. | ಶಿವಶರಣರ ಕೃತಿಗಳು (ಸ್ವರಪ್ರಸ್ತಾರ ಸಹಿತ ೧೯೫೨) | ೨=೦೦ |
| ೧೨. | ಹರಿದಾಸ ಸಾಹಿತ್ಯ-ಇಂಗ್ಲಿಷ್ ಉಪೋದ್ಘಾತದೊಡನೆ (೧೯೫೨) | ೧೦=೦೦ |
| ೧೩. | ,, ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ (೧೯೫೨) | ೮=೦೦ |
| ೧೪. | ಗಾಳಿಯಲ್ಲಿನ ಅಗೋಚರ ಶತ್ರುಗಳು (೧೯೫೪) | ೧=೨೫ |
| ೧೫. | ನಕ್ಷತ್ರದರ್ಶನ (೧೯೫೪) | ೧=೫೦ |
| ೧೬. | ಹರಿದಾಸ ಕೃತಿಮಂಜರಿ (೧೯೫೫) | ೧=೨೫ |
| ೧೭. | ಪ್ಲೇಟೋವಿನ ಆದರ್ಶರಾಜ್ಯ (೧೯೫೬) | ೧=೩೮ |
| ೧೮. | ವಾಚನ ಕಾವ್ಯಮಂಜರಿ (೧೯೫೫) | ೦=೧೯ |
| ೧೯. | ಚೇರಮ ಕಾವ್ಯಂ (೧೯೫೬) | ೨=೦೦ |
| ೨೦. | ಅನುಭವ ಮುಕುರಂ (೧೯೫೬) | ೦=೩೮ |
| ೨೧. | ಆಧುನಿಕ ಗದ್ಯ ಸಾಹಿತ್ಯ (ಎರಡನೆಯ ಮುದ್ರಣ ೧೯೬೧) | ೨=೫೦ |
| ೨೨. | ಕನ್ನಡದ ಅತ್ಯುತ್ತಮ ಸಣ್ಣ ಕತೆಗಳು (ಮೂರನೆಯ ಸಂಪುಟ ೧೯೫೮) | ೪=೦೦ |
| ೨೩. | ಕಾದಂಬರಿ-ಸಾಮಾನ್ಯ ಮನುಷ್ಯ (೧೯೫೭) | ೧=೦೦ |
| ೨೪. | ಉದ್ಭಟದೇವ ಚರಿತೆ (೧೯೫೭) | ೧=೫೦ |
| ೨೫. | ತ್ರಿಪುರದಹನ ಸಾಂಗತ್ಯ (೧೯೫೯) | ೦=೭೫ |
| ೨೬. | ಮೂರು ಸ್ಪರ್ಧಾ ನಾಟಕಗಳು (೧೯೫೯) | ೨=೭೫ |
| ೨೭. | ಕಾವ್ಯ ಸೌರಭ (೧೯೬೨) | ೨=೦೦ |
| **೨೮.** | **ಕರ್ಣಾಟಕ ಕವಿಚರಿತೆ (೧ನೆ ಭಾಗ)** | **೧೨=೦೦** |
| | **,, ,, ಲೈಬ್ರರಿ ಪ್ರತಿಗಳು** | **೧೫=೦೦** |
| ೨೯. | ಕಾವ್ಯಗಾಯನ ಕಲಾ ಸಂಗ್ರಹ | ೧=೨೫ |

ವಿ. ಸೂ. ಪ್ರತಿಗಳು ಮುಗಿದಿವೆ: ಪಂಪರಾಮಾಯಣ (೪ನೆಯ ಆಶ್ವಾಸ), ತೊರವೆ ರಾಮಾಯಣ (ಬಾಲಕಾಂಡ ಸಂಧಿ ೧೩-೧೬), ಹರಿದಾಸರ ಕೃತಿಗಳು (ಸ್ವರಪ್ರಸ್ತಾರ ಸಹಿತ), ಹರಿಶ್ಚಂದ್ರನ ರಾಜ್ಯ ಸಮರ್ಪಣ, ವಡ್ಡಾರಾಧನೆ, ಕುಮಾರವ್ಯಾಸ ದರ್ಶನ, ಕವಿಜಿಹ್ವಾಬಂಧನ, ಪಂಪರಾಮಾಯಣದ ನಿಘಂಟು, ಜೈಮಿನಿಭಾರತದ ಕನ್ನಡ ಗದ್ಯಾನುವಾದ (ಅಶ್ವಮೇಧಿಕ ಪರ್ವ), ಚಂದ್ರಹಾಸೋಪಾಖ್ಯಾನ, ದೂತವಾಕ್ಯ, ಪಂಪಭಾರತದ ಕಥೆ (ವಚನ), ಪಂಪಭಾರತದ ನಿಘಂಟು ಮತ್ತು ಪಂಪರಾಮಾಯಣದ ಕಥೆ (ವಚನ), ಪಂಪರಾಮಾಯಣ, ಪಂಪಭಾರತ, ಶಬ್ದಮಣಿ ದರ್ಪಣ.

ಪುಸ್ತಕ ವ್ಯಾಪಾರಿಗಳಿಗೆ ಕರ್ಣಾಟಕ ಕವಿಚರಿತೆ ವಿನಾ ಮಿಕ್ಕೆಲ್ಲ ಪುಸ್ತಕಗಳಿಗೆ ಶೇ. 25ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

---

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ





ಸಂಪುಟ ೫೦

ಸಂಚಿಕೆ ೧-೨

ಜೂನ್ - ಡಿಸೆಂಬರ್

೧೯೬೫





*Vol. 50*

*No. 1-2*

**JUNE-DECEMBER**

*1965*


Half-Yearly

JOURNAL OF THE KANNADA LITERARY ACADEMY

KANNADA SAHITYA PARISHAT

BANGALORE-18


ವಾರ್ಷಿಕ ಚಂದಾ ರೂ. ೨-೫೦ ◆ Annual Subscription Rs. 2-50

# ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

## ಕಾರ್ಯಕಾರಿ ಸಮಿತಿಯ ಸದಸ್ಯರು

೧. ಪ್ರೊ|| ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.
೨. ಶ್ರೀ ಬಿ. ಎಸ್. ಶಾಸ್ತ್ರಿ, ಎಂ.ಎ.
೩. ಶ್ರೀ ಎ. ಸಿ. ಭೈರಪ್ಪ, ಬಿ.ಎ., ಎಲ್ಎಲ್.ಬಿ.
೪. ಶ್ರೀ ಅ. ನ. ಕೃಷ್ಣರಾವ್
೫. ಶ್ರೀ ಕಡೆಂಗೋಡ್ಲು ಶಂಕರಭಟ್ಟ
೬. ಪ್ರೊ|| ಡಿ. ಜವರೇಗೌಡ, ಎಂ.ಎ.
೭. ಶ್ರೀ ಕೆ. ಎಸ್. ಧರಣೇಂದ್ರಯ್ಯ, ಎಂ.ಎ., ಬಿ.ಟಿ.
೮. ಶ್ರೀ ಕೃಷ್ಣಮೂರ್ತಿ ಪುರಾಣಿಕ, ಬಿ.ಎ.,ಬಿ.ಟಿ.,
೯. ಶ್ರೀ ಅನ್ನದಾನಯ್ಯ ಪುರಾಣಿಕ, ಬಿ.ಕಾಂ., ಎಲ್ಎಲ್.ಬಿ.
೧೦. ಶ್ರೀ ಎನ್. ಎಸ್. ಹೆಗ್ಗಡೆ
೧೧. ಶ್ರೀ ಪ. ಸು. ಭಟ್ಟ, ಎಂ.ಎ.
೧೨. ಡಾ|| ಎಸ್. ರಾಮಕೃಷ್ಣ
೧೩. ಶ್ರೀ ವೆಂಕಟೇಶ ಸಾಂಗಲಿ
೧೪. ಶ್ರೀ ಸೂರ್ಯನಾರಾಯಣ ಚಡಗ
೧೫. ಶ್ರೀ ವಿ. ರಘುರಾಮ ಶೆಟ್ಟಿ
೧೬. ಶ್ರೀಮತಿ ಕೆ. ಟಿ. ಬನಶಂಕರಮ್ಮ, ಬಿ.ಎಸ್‌ಸಿ., ಬಿ.ಇಡಿ.
೧೭. ಶ್ರೀ ನೆ. ಸು. ಕೃಷ್ಣಮೂರ್ತಿ, ಎಂ.ಎ.
೧೮. ಶ್ರೀ ಗ. ಸ. ಹಾಲಪ್ಪ, ಎಂ.ಎ.

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

HALF-YEARLY JOURNAL OF THE

# KANNADA SAHITYA PARISHAT

BANGALORE-18





ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ :: ಬೆಂಗಳೂರು-೧೮

೧೯೬೫

ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ    ಹಂಪ. ನಾಗರಾಜಯ್ಯ

ಸಂಪಾದಕರು

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಬೆಂಗಳೂರು-೧೮

೧೯೭೭

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

## ಶ್ರೀ ವಿಶ್ವಾವಸು

ಸಂಪುಟ: ೫೦ ಜೂನ್–ಡಿಸೆಂಬರ್ ೧೯೬೫ ಸಂಚಿಕೆ: ೧–೨

ವಿಷಯ ಸೂಚಿಕೆ

HALF-YEARLY JOURNAL

OF THE

Kannada Literary Academy, Bangalore

KANNADA SAHITYA PARISHATPATRIKE

Vol : 50 JUNE–DECEMBER 1965 No : 1–2

## ಡಾಕ್ಟರ್ ಫಕೀರಪ್ಪ ಗುರುಬಸವಪ್ಪ ಹಳಕಟ್ಟಿಯವರ

# ಸಾಹಿತ್ಯ ಸೇವೆ

**ಲೇಖಕರು: ಮ. ಮಲ್ಲಪ್ಪ**

ಡಾಕ್ಟರ್ ಫಕೀರಪ್ಪ ಗುರುಬಸವಪ್ಪ ಹಳಕಟ್ಟಿಯವರು ಇಪ್ಪತ್ತನೆ ಶತಮಾನದ ವಚನ ವಾಙ್ಮಯ ತಪಸ್ವಿ. ಇವರ ಜನ್ಮಸ್ಥಳವು ಧಾರವಾಡನಗರ. ಇವರ ತಂದೆ ಗುರುಬಸವಪ್ಪನವರು ಸಾಹಿತ್ಯ ಪ್ರೇಮಿಗಳು. ಮಗನಿಗೆ ಸಾಹಿತ್ಯದ ಅದರಲ್ಲಿಯೂ ವಚನ ಸಾಹಿತ್ಯದ ಹುಚ್ಚು ಹಿಡಿಸಿದವರು ಈ ಜನಕರೇ ಆಗಿದ್ದಾರೆ. ಬಿ.ಎ. ಮತ್ತು ಎಲ್.ಎಲ್.ಬಿ. ಪದವೀಧರರೂ ಆಗಿ ಜೀವನದ ಹೊಸ್ತಿಲನ್ನು ಮೆಟ್ಟಿ, ಬಿಜಾಪುರದಲ್ಲಿ ನಿಂತು ಸೇವಾರಂಗದಲ್ಲಿ ಸಿಪಾಯಿಗಳಾಗಿ ಸಾಗಿದರು. ತತ್ಫಲವಾಗಿ ಹತ್ತಾರು ಸಂಸ್ಥೆಗಳಲ್ಲಿ ಅವಕಾಶ ದೊರೆತು ಕಾರ್ಯಮಾಡುವಂತಾದರು. ಬಿಜಾಪುರವು ನಾಗರಿಕ ನಗರವಾಗುವಂತೆ ಸೇವೆಯನ್ನು ಸಲ್ಲಿಸಿದ ಪರಿಣಾಮವಾಗಿ ಅಲ್ಲಿ ಶಿಕ್ಷಣ ಸಂಸ್ಥೆ, ಧಾರ್ಮಿಕ ಸಂಸ್ಥೆ, ಮತ್ತು ಸಹಕಾರ ಸಂಸ್ಥೆ—ಈ ಪರಿಯ ಹತ್ತಾರು ಸಂಘ ಸಂಸ್ಥೆಗಳು ಉದಯವಾಗಿ ಜನತೆಗೆ ಉಪಕಾರವನ್ನು ಎಸಗುವಂತಾದವು. ವಿದ್ಯೆಯು ಮುಗಿದನಂತರ ಇವರಿದ್ದಲ್ಲಿಗೆ ಇವರನ್ನು ಹುಡುಕಿಕೊಂಡು ಬಂದು ಇವರ ಆಸರೆಯನ್ನು ಸರ್ಕಾರಿ ನೌಕರಿಯು ಪಡೆಯುತ್ತಿತ್ತು. ಆದರೆ ಇವರು ಅದಕ್ಕೆ ತಿಲಾಂಜಲಿಯನ್ನಿತ್ತು ಸಾರ್ವಜನಿಕರ ಸೇವೆಗಾಗಿ ತಮ್ಮ ಜೀವನವನ್ನು ಮುಡುಪಿಟ್ಟರು. ತತ್ಫಲವಾಗಿ ಅಂದಿನ ಆಂಗ್ಲೇಯ ಸರ್ಕಾರವು ಇವರಿಗೆ ರಾವ್ ಬಹದ್ದೂರ್, ರಾವ್ ಸಾಹೇಬ್ ಪ್ರಶಸ್ತಿಗಳನ್ನು ನೀಡಿತು. ಅಖಂಡ ಕರ್ನಾಟಕ ಏಕೀಕರಣ ಸಮರದಲ್ಲಿ ಸ್ಥಿರಚಿತ್ತರಾಗಿ ಹೋರಾಡಿದರು. ಭಾರತಕ್ಕೆ ಸೇವೆಯನ್ನು ಸಮರ್ಪಿಸುವ ವ್ಯಾಜಾಂತರದಿಂದ ಬಂಗಾಲ ಕಷ್ಟಪರಿಹಾರಕ್ಕೆ ಸಂಸ್ಥೆಯನ್ನು ಸ್ಥಾಪಿಸಿ ಕೆಲಸಮಾಡಿದರು. "ಸಂಯಮ ಜೀವನವನ್ನು ನಡೆಯಿಸುತ್ತ ಲೌಕಿಕ ವ್ಯಾಪಾರದಲ್ಲಿ ನಿರತರಾಗಿ ವಕೀಲಿ ವೃತ್ತಿಯ ಹೊರೆಯನ್ನು ಹೊತ್ತಿದ್ದರೂ ಸೇವಾಪುರುಷ ಪುಂಗವರಾಗಿ ಇವರು ಕಾರ್ಯಮಾಡಿದರು."[೧] ಸೇವೆಯಲ್ಲಿ ಸಾಹಿತ್ಯ ಸೇವೆಗೆ ಇವರು ಆದ್ಯ ಹಾಗೂ ಪ್ರಧಾನ ಗಮನವನ್ನು ಕೊಟ್ಟರು. ಜೀವನ ಅಶಾಶ್ವತ ಸಾಹಿತ್ಯವು ಶಾಶ್ವತ ಈ ತತ್ತ್ವವನ್ನರಿತ ಇವರು ಸಾಹಿತ್ಯ ಸೇವೆಯನ್ನೇ ಸರ್ವಸ್ವವೆಂದು ನೆರೆನಂಬಿ ಸಾಗಿದರು. ಕವಿತಾಂಗನೆಯು ಕೈಹಿಡಿಯಬೇಕಾದರೆ ಪೂರ್ವ ಪುಣ್ಯವಿರಬೇಕು. ಕವಿತಾ ಪ್ರಾಪ್ತಿಯ ಭಾಗ್ಯವಿಲ್ಲದೆ ಅದು ದೊರಕದು.

"ಆರಾರೇರರ್ ಶಾಸ್ತ್ರ |
ಶ್ರೀ ರೋಹಣ ಗಿರಿಯನಲ್ಲಿ ನವಕವಿತಾಚಿಂ |
ತಾರತ್ನಂದೊರೆಗುಮೆಮಾ |
ರಾರಿಯ ಕೃಪೆಯಿಲ್ಲದಂಗೆ ಧರಣೀ ತಲದೊಳ್ ||"

ಅಂತೆಯೇ ಸಾಹಿತಿಯ ಸ್ಥಾನವು ಸಿಗುವುದೂ ಮಹಾಭಾಗ್ಯ, ಮಾನವ ಜನ್ಮ ದೊಡ್ಡದು, ಸಾಹಿತಿಯ ಜೀವನವು ಲಭ್ಯವಾಗುವುದು ದೊಡ್ಡದರಲ್ಲಿ ದೊಡ್ಡದು. ಆ ಜೀವನವು ಚಿರಂತನವಾಗಿ ನಿಲ್ಲುವಂತಾಗುತ್ತದೆ.

ಇವರಿಗೆ ಕನ್ನಡ, ಸಂಸ್ಕೃತ, ಮರಾಠಿ, ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಒಳ್ಳೆಯ ಪಾಂಡಿತ್ಯವಿತ್ತು. ಸಾಹಿತ್ಯ ನಿರ್ಮಾಣಕ್ಕೆ ಪಾಂಡಿತ್ಯವೂ ಒಂದು ಬಗೆಯ ಸಲಕರಣೆ ಸಾಮಗ್ರಿಯು. ಪಾಂಡಿತ್ಯ ಪ್ರತಿಭೆಯಿದ್ದರೂ ಅರಿವಿನ ದಾನದತ್ತ ನಿಚ್ಚಳ ನಿಷ್ಠೆಯಿದ್ದಿತು. "ಜ್ಞಾನ ಪ್ರಚಾರವೇ ಅತ್ಯುತ್ತಮ ದಾನ."೩ ಈ ಕಾರ್ಯಕ್ಕೆ ಪತ್ರಿಕೆಯನ್ನೇ ಪ್ರಧಾನ ಸಾಧನವನ್ನಾಗಿ ಹಳಕಟ್ಟಿಯವರು ಕೈಗೊಂಡರು. ನವ ಕರ್ನಾಟಕ ಸಾಪ್ತಾಹಿಕದ ಜೊತೆಗೆ ಶಿವಾನುಭವ ಪತ್ರಿಕೆಯನ್ನೂ ಈ ಕಾರ್ಯಕ್ಕೆ ಸಾಧನವನ್ನಾಗಿ ಮಾಡಿಕೊಂಡರು. ೧೯೨೬ರಲ್ಲಿ ಶಿವಾನುಭವ ಪತ್ರಿಕೆ ಪ್ರಾರಂಭವಾಯಿತು. ಪತ್ರಿಕಾವೃತ್ತಿಯು ಪುಷ್ಪಶಯ್ಯೆಯ ಭೋಗವಲ್ಲ; ಶರಶಯ್ಯೆಯ ಕಾಳಕಿರುಕುಳ. ಈ ಬಗೆಯಲ್ಲಿಯೂ ಬಿಡದೆ ಇವರು ಸುಮಾರು ನಾಲ್ಕು ದಶಕಗಳು ಈ ಪತ್ರಿಕೆಯನ್ನು ನಡೆಯಿಸಿಕೊಂಡು ಬಂದಿರುವುದು ಒಂದು ವಿಶೇಷ ಸಂಗತಿಯಾಗಿರುತ್ತದೆ. ಈ ಅವಿಚ್ಛಿನ್ನ ಸೇವೆಯಿಂದ ಸಮಾಜ, ಸಾಹಿತ್ಯ ಪುಷ್ಟವಾಗುವಂತಾಯಿತು. ಕೇವಲ ಕಟ್ಟುಕತೆ ಕಾದಂಬರಿಗಳ ಪತ್ರಿಕೆಯೆಂದರೆ ಅವುಗಳ ವ್ಯಾಪಾರವು ಬಿಸಿಬಿಸಿ ಪುರಿಯ ವ್ಯಾಪಾರದಂತೆ ಆಗಿ ತಟ್ಟನೆ ಕೈಗೆ ಹಣವು ಬರುವುದಲ್ಲದೆ ಲಾಭವೂ ಕೂಡ ದೊರಕುತ್ತದೆ. ಧಾರ್ಮಿಕ ವಿಚಾರದ ಪತ್ರಿಕೆಯೆಂದರೆ ಜನತೆಯು ಹಿಂದೆ ಮುಂದೆ ನೋಡುವುದು ಸಾಮಾನ್ಯ ಸಂಗತಿಯಾಗಿರುತ್ತದೆ. ಈ ಬಗೆಯ ಬಿಕ್ಕಟ್ಟಿನಲ್ಲಿಯೂ ಇವರು ಹಿಂದಕ್ಕೆ ಹೆಜ್ಜೆ ಹಾಕದೆ ಧಾರ್ಮಿಕ ಪತ್ರಿಕೆಯೊಂದನ್ನು ನಡೆಯಿಸಿಕೊಂಡು ಬಂದುದು ಸಾಹಸ ಕಾರ್ಯವಾಗಿರುತ್ತದೆ. ೧-೨-೧೯೨೬ ರಲ್ಲಿ ಪ್ರಾರಂಭವಾದ ಈ ಪತ್ರಿಕೆಯು ಮೊದಮೊದಲು ತ್ರೈಮಾಸಿಕವಾಗಿ ಪ್ರಕಟವಾಗಿ, ಅನಂತರ ಮಾಸಿಕವಾಗಿ ಮುಂದುವರಿಯಿತು. ಇದರಲ್ಲಿ ಅನುಭವಿಗಳೂ, ಪರಿಣತರೂ ಆದ ಪಂಡಿತರ ಬರೆಹಗಳು ಬರುವಂತೆ ಇವರು ಕಾರ್ಯಮಾಡಿದರು. ಬೆನಗಲ್ ರಾಮರಾವ್, ಜೀರಗೆ ಬಸವಲಿಂಗಪ್ಪ, ಬಸವಲಿಂಗಯ್ಯ, ದೇಸಾಯಿ, ಬಿ. ಶಿವಮೂರ್ತಿಶಾಸ್ತ್ರಿ, ಹಾಲಭಾವಿ, ಮಾಳವಾಡ, ವೈ. ನಾಗೇಶಶಾಸ್ತ್ರಿ, ನವಕಲ್ಯಾಣ ಮಠದ ಕುಮಾರಸ್ವಾಮೀಜಿ, ಶ್ರೀ ಚೆನ್ನಬಸವರಾಜ ದೇಶಿಕೇಂದ್ರಸ್ವಾಮಿ—ಮೊದಲಾದವರಿಂದ ಉತ್ತಮ ಲೇಖನಗಳು ಬಂದಿವೆ. ಪತ್ರಿಕಾಪ್ರಕಟಣಕಾರ್ಯವು ಅತ್ಯಂತ ಕಷ್ಟಕರವಾದ ಕೆಲಸವಾದರೂ ಶಂಕರನು ವಿಷವನ್ನು ನುಂಗಿದಂತೆ ಆ ಶ್ರಮವನ್ನೇ ಕಬಳಿಸಿ ಕಾರ್ಯಮಾಡಿದ ಸೇವಾ ವಿಷಕಂಠರು ಹಳಕಟ್ಟಿಯವರು. "ನಾವು ಈ ಪ್ರಕಾರ ಇಪ್ಪತ್ತೊಂಬತ್ತು ವರ್ಷಗಳವರೆಗೆ ಎಡೆಬಿಡದೆ ಪ್ರಯತ್ನಮಾಡಿದ್ದರ ಪರಿಣಾಮವು ಈಚೆಗೆ ದೃಗ್ಗೋಚರವಾಗುತ್ತಿದೆ. ಈ ವರೆಗೆ ನಮ್ಮ ಸಮಾಜದಲ್ಲಿ ವಿದ್ಯಾವಂತರೂ, ಸ್ವಾಮಿಗಳೂ, ವ್ಯಾಪಾರಸ್ಥರೂ ಕೆಲವು ಅಪವಾದಗಳನ್ನು ಬಿಟ್ಟು ನಮಗೆ ಎಷ್ಟು ಮಾತ್ರವೂ ಸಹಾನುಭೂತಿ ತೋರಿಸಿರುವುದಿಲ್ಲ" ಎಂದು ಇವರು ೧೯೫೫ ರ ಜನವರಿ ಸಂಚಿಕೆಯ ಆತ್ಮನಿವೇದನದಲ್ಲಿ ಅಳಲನ್ನು ತೋಡಿಕೊಂಡಿರುವುದು ಇವರ ಕಷ್ಟದ ಪರಿಯನ್ನು ಸೂಚಿಸುತ್ತದೆ. ಅಮೆರಿಕ, ಇಂಗ್ಲೆಂಡ್ ಇಲ್ಲಿನ ಕೆಲವು ಸಾಹಿತಿಗಳು ಸಾಹಿತ್ಯ ನಿರ್ಮಾಣ ಕಾರ್ಯವನ್ನು ಕೈಗೊಂಡ ಫಲವಾಗಿ ಸಾಲದ ಸಾಗರದಲ್ಲಿ ಸಮಾಧಿಯಾಗುವಂತಾದರೂ ಹಳಕಟ್ಟಿಯವರಾದರೋ ಸ್ವಂತ ಮನೆಯನ್ನು ಮಾರಿ ಆ ಧನದಿಂದ ಅಚ್ಚುಕೂಟ ಯಂತ್ರವನ್ನು ಕೊಂಡು ಆ ಬಾಡಿಗೆ ಮನೆಯಲ್ಲಿಯೇ ಜೀವನವನ್ನು ಅಂತಿಮಗೊಳಿಸಿದರು. ಈ ಮಧ್ಯೆ ಅನೇಕ

ಬಗೆಯ ನಷ್ಟಗಳು ತಗುಲಿದವು. ಕೈಗೆಬಂದ ವಿದ್ಯಾವಂತ ಗಳಿಕೆಯ ಪುತ್ರ ಕೈಜಾರಿ ಹೋಗುವಂತಾಯಿತು; ಧರ್ಮಪತ್ನಿಯು ರೋಗರುಜಿನವನ್ನೇ ಉಣಿಸು ತಿನಿಸನ್ನಾಗಿ ಅನುಭವಿಸಿದಳು. ಇಷ್ಟಾದರೂ ಇವೆಲ್ಲಕ್ಕ್ಕೆ ಅಂಜದೆ ಅಳುಕದೆ ಸಾಗಿ ಎಲ್ಲವೂ ಈಶೇಚ್ಛೆ ಎಂದು ಸಾಗಿದರು. "ಶಿವಭಕ್ತನಾಗಿ ತನ್ನ ಹಿಡಿದಿಹೆನೆಂದು ಹೋದರೆ ನುಗ್ಗು ಮಾಡುವ, ನುಸಿಯ ಮಾಡುವ, ಮುಗ್ಗು ಮಾಡುವ. ಮುಸಿಯ ಮಾಡುವ, ಕೂಡಲಸಂಗಮದೇವರ ನೆರೆನಂಬಿದನಾದರೆ, ಕಡೆಗೆ ತನ್ನಂತೆ ಮಾಡುವ."[೩] ಈ ಶಿವಾನುಭವ ಪತ್ರಿಕೆಯ ಪ್ರಕಟಣೆಯ ಫಲವಾಗಿ ಶಿವಶರಣರ ಬಗ್ಗೆ ಸ್ಫುಟವಾದ ಸಂಗತಿಗಳು ದೊರಕುವಂತಾದುದಲ್ಲದೆ ನಿಚ್ಚಳ ಜ್ಞಾನವು ಶಿವಶರಣರ ಬಗ್ಗೆ ದೊರಕುವಂತಾಯಿತು. ಈ ಪತ್ರಿಕೆಯ ಲೇಖನಗಳಲ್ಲಿ ಸಾತ್ವಿಕ ತೇಜಸ್ಸು ಮಿನುಗುತ್ತದೆ; ವಿಚಾರಗಳಲ್ಲಿ ಸಮತೋಲನವಿದೆ. ಶೈಲಿಯಲ್ಲಿ ಸರಳತೆ ಸತ್ವಗಳಿವೆ. ಸಂಶೋಧನೆಯ ದೃಷ್ಟಿ, ಸತ್ಯಾನ್ವೇಷಣ ಬುದ್ಧಿ, ನಿಷ್ಪಕ್ಷಪಾತ ವಿಮರ್ಶೆ—ಈ ಸಂಪಾದಕರಲ್ಲಿ ಎದ್ದು ಕಾಣುತ್ತಿದ್ದುದರಿಂದಲೇ ಇವರ ಸಾಹಿತ್ಯವು ಸ್ಥಿರ ಸಾಹಿತ್ಯವಾಗಿ ಉಳಿಯುವಂತಿದೆ. "ಶಿವಾನುಭವ ಪತ್ರಿಕೆಯಂತಹ ಸಾಹಿತ್ಯ ಚಟುವಟಿಕೆಯಿಂದ ಈಗಿನ ವಿಜ್ಞಾನ ಯುಗದಲ್ಲಿ ಧರ್ಮ ನೀತಿಗಳು ಉಳಿದಿವೆ. ಬೀಜರೂಪದಲ್ಲಾದರೂ ನಮ್ಮ ಹಿರಿಯರ ಸಂಪತ್ತಾದ ಶಿವಾನುಭವವು ಸ್ಥಿರವಾಗಿ ನಿಲ್ಲುವಂತೆ ಈ ಪತ್ರಿಕೆಯು ಮಾಡಿರುತ್ತದೆ. ಈ ಪತ್ರಿಕೆಯ ಸಂಪಾದಕರೂ ಸ್ಥಾಪಕರೂ ಆದ ರಾವ್ ಬಹದ್ದೂರ್ ಫ. ಗು. ಹಳಕಟ್ಟಿಯವರ ನಿಷ್ಕಾಮಂತ ಸಾಹಿತ್ಯ ಸೇವಕರು."[೪] ಸಂಬಂಧ ಸಮನ್ವಯ ವಿಚಾರವು ಈ ಪತ್ರಿಕೆಯಲ್ಲಿ ಪ್ರಕಟವಾಗುತ್ತಿತ್ತು. ಬಸವೇಶ್ವರ ಚರಿತ್ರೆಗೂ, ಕಲಚೂರ್ಯ ರಾಜವಂಶಕ್ಕೂ ನಿಕಟ ಸಂಬಂಧವಿರುವ ಕಾರಣ ಅದಕ್ಕೆ ಸಂಬಂಧಿಸಿದಂತೆ ಶ್ರೀ ಪಾಂಡುರಂಗ ದೇಸಾಯಿಯವರ 'ಕರ್ನಾಟಕದ ಕಲಚುರಿಗಳು' ಎಂಬ ಲೇಖನಕ್ಕೆ ಪತ್ರಿಕೆಯಲ್ಲಿ ಎಡೆಕೊಟ್ಟು ಕಾರ್ಯ ಮಾಡಿದರು. ಕಪಿಲ ಸಿದ್ಧಮಲ್ಲಿಕಾರ್ಜುನನ ಬಗ್ಗೆ ಕದಂಬ ರಾಜರ ಶಿಲಾಶಾಸನಗಳ ವಿಚಾರವಾಗಿ ಬಹು ಶ್ರಮವಹಿಸಿ ಕಾರ್ಯಮಾಡಿದ್ದಾರೆ. ಎಪಿಗ್ರಾಫಿಕಾ ಕರ್ನಾಟಕದಲ್ಲಿ ಇದು ಬಂದಿದೆ. ಈ ವಿಚಾರದಲ್ಲಿ ವಿವೇಚನೆಯನ್ನು ಹಳಕಟ್ಟಿಯವರು ಕೊಟ್ಟಿರುವುದು ಸ್ತುತ್ಯಾರ್ಹವಾಗಿದೆ. "ಸಮಾಜದ ಸುವರ್ಣದರ್ಪಣ ಸಾಹಿತ್ಯ" ಎಂಬುದು ಈ ಪತ್ರಿಕೆಯಿಂದಲೂ ಸ್ಪಷ್ಟವಾಗುತ್ತದೆ. ವಚನಶಾಸ್ತ್ರ ಪ್ರಚಾರದ ಬಗ್ಗೆ ಇವರು ಮಾಡಿದ ಅವಿರತ ಶ್ರಮದ ಕಾರ್ಯವು ಅಮೋಘವಾಗಿದೆ. ಇಪ್ಪತ್ತನೆ ಶತಮಾನದ ವೀರಶೈವ ಸಮಾಜ ಜೀವನದ ಸಂಗತಿ ಸಾರದ ಸೂಚಕ ಪತ್ರವಾಗಿ ಶಿವಾನುಭವ ಪತ್ರಿಕೆಯು ನಿಂತಿದೆ ಎಂದರೆ ತಪ್ಪೇನಾಗಲಾರದು.

೧೯೦೪ರಲ್ಲಿ ಇವರು ವಕೀಲಿ ವೃತ್ತಿಯನ್ನು ಕೈಗೊಂಡು ತೀವ್ರಗತಿಯಿಂದ ಗ್ರಂಥಗಳ ಸಂಶೋಧನೆಯಲ್ಲಿ ನಿಮಗ್ನರಾದರು. ಅನೇಕ ಕೋರಿ ಕಾಗದದ ಮತ್ತು ತಾಡವಾಲೆಗಳ ಗ್ರಂಥಗಳನ್ನು ಬಿಜಾಪುರ ಜಿಲ್ಲೆಯಲ್ಲಿ ಮತ್ತಿತರ ಕಡೆಗಳಲ್ಲಿ ಪತ್ತೆಮಾಡಿ ದೊರಕಿಸಿಕೊಳ್ಳಲು ಇವರು ಪ್ರಯತ್ನಿಸಿದರು. ಈ ಸಂಶೋಧನೆಯು ೧೯೨೦ರ ವರೆಗೆ ನಡೆದು ಸರಿಸುಮಾರು ಒಂದು ಸಾವಿರ ಗ್ರಂಥಗಳನ್ನು ಸಂಗ್ರಹಿಸಲು ಪ್ರಯತ್ನಿಸಿದರು. ಇವುಗಳಲ್ಲಿ ಹಲವನ್ನು ಅವುಗಳ ದಾಸ್ತಾನುಗಾರರಿಂದ ಹಣ ಕೊಟ್ಟು ಪಡೆದರು. ಈ ಬಗೆಯ ಸಂಗ್ರಹ ಸಂಶೋಧನೆಯಲ್ಲಿ ತೊಡಗಿದ್ದಾಗ ವಚನ ಶಾಸ್ತ್ರವು ಇವರನ್ನು ಆಕರ್ಷಿಸಿತ್ತು. ಇವರ ಮಾಧ್ಯಮಿಕ ಶಾಲಾ ವ್ಯಾಸಂಗದ ವೇಳೆಯಲ್ಲಿಯೇ ಇವರಲ್ಲಿ ಧಾರ್ಮಿಕ ಜ್ಞಾನವನ್ನು ಗಳಿಸುವ ಒಲವು ಕಾಣಿಸಿಕೊಂಡಿತ್ತು. ಬರುಬರುತ್ತ ಇದು ಅಂಕುರಿಸಿ ಬೆಳೆಯುವಂತಾಯಿತು. ಕ್ರಮೇಣ

ವಚನಶಾಸ್ತ್ರವೇ ಘನತರವಾದ ಸಾಹಿತ್ಯ ಎಂಬ ಭಾವನೆಯು ಬಲಿತು ಆ ವಿಚಾರದಲ್ಲಿ ಇವರು ಕಾರ್ಯಮಾಡುವಂತಾಯಿತು. "ಕನ್ನಡೇತರರು ಬಂದು ಕನ್ನಡಿಗರನ್ನು ನಿಮ್ಮ ಸಾಹಿತ್ಯದಲ್ಲಿ ವಿಶೇಷವೇನಿದೆ ಎಂದು ಕೇಳಿದಾಗ ವಚನ ಶಾಸ್ತ್ರವನ್ನು ಎತ್ತಿ ತೋರಿಸಿ. ಕನ್ನಡದಲ್ಲಿನ ಸಾರ ಭೂತವಾದ ವಿಶೇಷ ವಿಚಾರವು ವಚನ ಶಾಸ್ತ್ರವು. ಇದರಲ್ಲಿ ಒಂದು ವಿಶೇಷವಾದ ಮಾನು ಷಾನುಭವ, ಮಾನುಷ ಪರಿಶ್ರಮ ಮತ್ತು ಮಾನುಷ ಹಿತಚಿಂತನೆಯು ಕಂಡುಬರುತ್ತದೆ."[೫] "ಕನ್ನಡದ ಅನುಭವ ಸಾಹಿತ್ಯವು ವಚನ ಸಾಹಿತ್ಯ."[೬] "ಸ್ವಯಂವರಕ್ಕೆ ಸಿದ್ಧಳಾದ ಅರಸು ಮಗಳಂತೆ ನಾನಾ ಚಿನ್ನರನ್ನದ ವಸ್ತ್ರಾಲಂಕಾರ ಭೂಷಿತಳಾಗದಿದ್ದರೂ ವಚನ ವಧು ಋಷಿ ಕನ್ಯೆ ತನ್ನ ನಿರ್ವ್ಯಾಜ, ನೈಸರ್ಗಿಕ ಚೆಲುವಿನಿಂದಲೂ ವನಸುಲಭವಾದ ಹೂ ಚಿಗುರು ಗಳಿಂದಲೂ ಶೋಭಿಸುತ್ತಿರುವಳು"[೭] ಆರ್ಯರಿಗೆ ಉಪನಿಷತ್ತು ಎಂತೋ ಕನ್ನಡಿಗರಿಗೆ ಅಂತೇ ವಚನ ಸಾಹಿತ್ಯ." ಕಿರಿದರಲ್ಲಿ ಹಿರಿದಾದ ಅರ್ಥವಿರುವ ನುಡಿಗಟ್ಟುಗಳು ಇದರಲ್ಲಿವೆ. ಇದರಲ್ಲಿ ವಿಧವಿಧ ಭಾವಗಳನ್ನೂ, ವಿಷಯುಗಳನ್ನೂ, ಕರುಳುತಟ್ಟಿ ಹೃದಯ ಮುಟ್ಟಿ ಮೆದುಳು ಮೆಟ್ಟಿ ಮನಮೆಚ್ಚುವಂತೆ ಮಾಡುವ ನವೀನ ಶೈಲಿಯನ್ನು ತೊಡರಿಲ್ಲದೆ ನೋಡಬಲ್ಲೆವು."[೮] "ಈ ವಚನಗಳು ಕನ್ನಡ ಸಾಹಿತ್ಯದಲ್ಲಿ ಪೂಜ್ಯ ಸ್ಥಾನವನ್ನು ಪಡೆಯಲು ಅರ್ಹವಾಗಿವೆ. ಇವು ಗೂಢವಾದ ವೇದಾಂತ ವಿಷಯುಗಳನ್ನು ಸುಲಭ ಮಾತುಗಳಿಂದ ಬಿಗಿಯಾದ ಶೈಲಿಯಲ್ಲಿ ಮನ ಮುಟ್ಟುವಂತೆ ಬೋಧಿಸುತ್ತವೆ."[೯] ಈ ಬಗೆಯ ಘನತೆವೆತ್ತ ಸಾಹಿತ್ಯ ಪ್ರಕಟಣೆಗೆ ಶಿವಾನು ಭವ ಪತ್ರಿಕೆಯಲ್ಲಿ ಪಟ್ಟಸೀಠವನ್ನು ಕೊಟ್ಟು ಕಾರ್ಯಮಾಡಿದ ಮಹನೀಯರು ಹಳಕಟ್ಟಿಯವರು. ಪತ್ರಿಕೆಯ ಪ್ರಕಟಣೆಯನ್ನೇ ಪುಸ್ತಕ ರೂಪದಲ್ಲಿ ತಂದರು. ಧಾರ್ಮಿಕ ಅವನತಿ ಉಂಟಾಗುವ ಪರಿಸ್ಥಿತಿಯನ್ನು ದೂರಮಾಡಬೇಕೆಂದು ಶಿವಶರಣರ ವಾಙ್ಮಯವನ್ನು ಪ್ರಸಾರ ಪಡಿಸುವುದು ಶಿವಾನುಭವ ಸಂಘಟನೆಗೆ ಚೈತನ್ಯಕಾರಿಯಾಗಿರುವುದನ್ನು ತಿಳಿದು ಕೈಗೊಂಡರು. ಈ ಗ್ರಂಥ ಪ್ರಕಟಣೆಗೆ, ವೀರಶೈವ ಧರ್ಮಗ್ರಂಥ ಪ್ರಸಾರಕ್ಕೆ ಸಂಘವು ಮೊದಮೊದಲು ಕಾರಣವಾಯಿತು. "ವೀರಶೈವ ಧರ್ಮಗ್ರಂಥಗಳ ಸಂಶೋಧನ ಮತ್ತು ಪ್ರಸಾರದ ಬಗ್ಗೆ ಈ ಸಂಸ್ಥೆಯು ರಾ| ಸಾ| ಹಳಕಟ್ಟಿಯವರ ಪ್ರೋತ್ಸಾಹದಿಂದ ಬಿಜಾಪುರದಲ್ಲಿ ೨೩-೧೧-೧೯೨೭ರಲ್ಲಿ ಸ್ಥಾಪಿಸಲ್ಪಟ್ಟಿತು. ಸಂಘವು ಆ ವರ್ಷ ಆಗಮ ಮೊದಲಾದ ಪುರಾತನ ಗ್ರಂಥಗಳನ್ನು ಅಚ್ಚುಹಾಕುವುದು, ಶಿಲಾ ಲೇಖನಗಳ ಸಂಗ್ರಹ, ಧರ್ಮ ಗ್ರಂಥಾಲಯ ಸ್ಥಾಪನೆ ಮೊದಲಾದ ಕಾರ್ಯಗಳನ್ನು ಕೈಗೊಂಡಿತು ಹಾಗೂ ವೀರಶೈವಾಗಮ ಮತ್ತು ವಚನ ಶಾಸ್ತ್ರದಲ್ಲಿ ಅತ್ಯಂತ ಮಹತ್ತರ ಗ್ರಂಥ ಗಳನ್ನೂ ಆಗಲೇ ಸಂಗ್ರಹಿಸಿರುತ್ತಾರೆ. ಅಸಂಖ್ಯಾತ ಶಿಲಾ ಲೇಖನಗಳ ಸಂಗ್ರಹ ಮಾಡಿರು ತ್ತಾರೆ. ರಾ| ಸಾ| ಫ. ಗು. ಹಳಕಟ್ಟಿಯವರು ಈ ಸಂಸ್ಥೆಯ ಅಧ್ಯಕ್ಷರಾಗಿರುತ್ತಾರೆ."[೧೦] ಇಷ್ಟಲ್ಲದೆ ಹಳಕಟ್ಟಿಯವರು ಮೂಲಗ್ರಂಥ, ಟೀಕಾಗ್ರಂಥ, ಸ್ವತಂತ್ರಗ್ರಂಥ, ಪಠ್ಯಪುಸ್ತಕ, ಗದ್ಯಗ್ರಂಥ, ಐತಿಹಾಸಿಕ ಗ್ರಂಥ, ಪದ್ಯಗ್ರಂಥ, ಧಾರ್ಮಿಕ ಪುರುಷರ ಚರಿತ್ರೆ—ಇಷ್ಟೆಲ್ಲ ವನ್ನೊಳಗೊಂಡ ೧೭೫ ಗ್ರಂಥಗಳನ್ನು ಬೆಳಕಿಗೆ ತಂದು ಮುಂದೆ ಇವುಗಳನ್ನು ಬಳಸಿಕೊಂಡು ಲೇಖನಗಳನ್ನೂ ಕೃತಿಗಳನ್ನೂ ರಚಿಸಿದ ಅನೇಕರಿಗೆ ಮೂಲಭೂತವಾದ ಸಾಮಗ್ರಿಯನ್ನೊದ ಗಿಸಿದರು.

ಅಮುಗಿ ದೇವಯ್ಯನ ವಚನಗಳು, ಅರುವಿನಮಾರಿ ತಂದೆಯ ವಚನಗಳು, ಅವಸರದ ರೇಚಣ್ಣನ ವಚನಗಳು. ಅಂಬಿಗರ ಚೌಡಯ್ಯನ ವಚನಗಳು, ಆದಯ್ಯನ ವಚನಗಳು, ಉರಿಲಿಂಗದೇವನ ವಚನಗಳು, ಉರಿಲಿಂಗಪೆದ್ದಿಯ ವಚನಗಳು, ಏಲಕೇಶಕೇತಯ್ಯನ ವಚನ

ಗಳು, ಒಕ್ಕಲಿಗರ ಮುದ್ದಣ್ಣನ ವಚನಗಳು, ಓಂಕಾರ ನಿಜಲಿಂಗನ ವಚನಗಳು, ಕಲಿಕೇತ ಬ್ರಹ್ಮಯ್ಯನ ವಚನಗಳು, ಕಂಭದ ಮಾರಯ್ಯನ ವಚನಗಳು, ಕೋಲಶಾಂತಯ್ಯನ ವಚನಗಳು, ಕಾಲಜ್ಞಾನದ ವಚನಗಳು, ಕಾಳವ್ವೆಯ ವಚನಗಳು, ಕೀಲಾರದ ಭೀಮಣ್ಣನ ವಚನಗಳು, ಕೂಗಿನ ಮಾರಿತಂದೆಯ ವಚನಗಳು, ಗಜೇಶ ಮಸಣಯ್ಯನ ವಚನಗಳು, ಗಟ್ಟಿವಾಳಯ್ಯನ ವಚನಗಳು, ಗಣದಾಸಿ ವೀರಣ್ಣನ ವಚನಗಳು, ಗಾಣದ ಕನ್ನಪ್ಪನ ವಚನಗಳು, ಗುಮ್ಮಳಾಪುರದ ಸಿದ್ಧಲಿಂಗೇಶ್ವರನ ವಚನಗಳು, ಗೋರಕ್ಷನ ವಚನಗಳು, ಘನಲಿಂಗನ ವಚನಗಳು, ಚೆನ್ನಬಸವೇಶ್ವರರ ವಚನಗಳು, ಚಂದಿಮರಸರ ವಚನಗಳು, ಚಿಕ್ಕಣ್ಣನವರ ವಚನಗಳು, ಜಾತಿಭೇದವಿರಸನ ವಚನಗಳು, ತುರುಗಾಹಿ ರಾಮಣ್ಣನ ವಚನಗಳು, ದಸರಯ್ಯನ ವಚನಗಳು, ದಾಸೋಹದ ಸಂಗಣ್ಣನ ವಚನಗಳು, ದೇವರ ದಾಸಿಮಯ್ಯನ ವಚನಗಳು, ನಗೆಮಾರಿತಂದೆಯ ವಚನಗಳು, ನಿಜಗುಣನ ವಚನಗಳು, ಪ್ರಭುದೇವರ ವಚನಗಳು, ಪ್ರಸಾದಿ ಭೋಗಣ್ಣನ ವಚನಗಳು, ಬಹುರೂಪಿ ಚೌಡಯ್ಯನ ವಚನಗಳು, ಬಿಳ್ಳೇಶ ಮಲ್ಲಯ್ಯನ ವಚನಗಳು, ಬಾಹೂರು ಬೊಮ್ಮಯ್ಯನ ವಚನಗಳು, ಬಿಟ್ಟಿವಾಚಯ್ಯನ ವಚನಗಳು, ಭಂಡಾರಿಯ ವಚನಗಳು, ಮಡಿವಾಳ ಮಾಚಿದೇವರ ವಚನಗಳು, ಮಧುವರಸನ ವಚನಗಳು, ಮನುಮುನಿ ಗೊಮ್ಮಟದೇವಯ್ಯನ ವಚನಗಳು, ಮರುಳ ಶಂಕರದೇವರ ವಚನಗಳು, ಮಹಾದೇವಿಯಕ್ಕನ ವಚನಗಳು, ಮಾದಾರ ಚೆನ್ನಯ್ಯನ ವಚನಗಳು, ಮಾರೇಶ್ವರೊಡೆಯರ ವಚನಗಳು, ಮೆರೆಮಿಂಡ ದೇವನ ವಚನಗಳು, ರಕ್ಕಸ ಬೊಮ್ಮಣ್ಣನ ವಚನಗಳು, ತಿಮ್ಮಬ್ಬೆಯ ವಚನಗಳು, ಲಿಂಗಮ್ಮನ ವಚನಗಳು, ವೀರ ಗೊಲ್ಲಾಳನ ವಚನಗಳು, ಶಿವಲೆಂಕ ಮಂಚಣ್ಣನ ವಚನಗಳು, ಸಕಳೇಶ ಮಾದರಸಯ್ಯನ ವಚನಗಳು, ಸಗರ ಬೊಮ್ಮಯ್ಯನ ವಚನಗಳು, ಸತ್ಯಕ್ಕನ ವಚನಗಳು, ಸಂಗನ ಬಸವೇಶ್ವರನ ವಚನಗಳು, ಸಿದ್ಧರಾಮೇಶ್ವರನ ವಚನಗಳು, ಸುಂಕದ ಬಸವಣ್ಣನ ವಚನಗಳು, ಸೊಡ್ಡಳ ಬಾಚರಸನ ವಚನಗಳು, ಹಡಪದಪ್ಪಣ್ಣನ ವಚನಗಳು, ಹಡಪದ ರೇಚಣ್ಣನ ವಚನಗಳು, ಹಾವಿನ ಹಾಳಕಲ್ಲಿ ದೇವನ ವಚನಗಳು, ಹೆಂಡದ ಮಾರಯ್ಯನ ವಚನಗಳು – ಇಷ್ಟು ವಚನಕಾರರ ಕೃತಿಗಳನ್ನು ಬೆಳಕಿಗೆ ತಂದು ಹಳಕಟ್ಟಿಯವರು ಕನ್ನಡಿಗರಿಗೆ ಮಹದುಪಕಾರ ಮಾಡಿದ್ದಾರೆ. "ಹನ್ನೆರಡನೆ ಹದಿಮೂರನೆ ಶತಮಾನಗಳಲ್ಲಿ ದಕ್ಷಿಣ ದೇಶದಲ್ಲಿ ಶಿವಶರಣರ ಒಂದು ಮಹತ್ವದ ಆಂದೋಲನವು ಉಂಟಾಯಿತು. ಆಗ ಈ ಗ್ರಂಥಕಾರರೆಲ್ಲರೂ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ಇವರಲ್ಲಿ ಅನೇಕರು ಸ್ತ್ರೀಯರೂ ಇದ್ದಾರೆ. ಈ ಗ್ರಂಥಗಳ ಭಾಷೆಯು ಬಹು ಸುಂದರವಾದುದು. ಇವುಗಳಲ್ಲಿ ಚಿಕ್ಕ ಉಕ್ತಿಗಳಿದ್ದರೂ ಅವುಗಳಲ್ಲಿ ಅರ್ಥಪೂರ್ಣವಾದವುಗಳು. ಈ ಗ್ರಂಥಗಳ ಮೇಲಿಂದ ವೀರಶೈವ ಸಾಹಿತ್ಯವು ಹಿಂದಿನಕಾಲದಲ್ಲಿ ಎಷ್ಟು ಉನ್ನತ ಸ್ಥಾನವನ್ನು ಹೊಂದಿತ್ತೆಂಬುದು ತಿಳಿದು ಬರದೆ ಇರಲಾರದು."೧೧ ಮೂಲಗ್ರಂಥಗಳನ್ನು ಸಂಪಾದಿಸುವುದು ಬಹು ಸುಲಭವಾಗಿದ್ದರೂ ಅವುಗಳನ್ನು ಹೊರತರುವುದು ಬಹು ಸುಲಭವಲ್ಲ. ಮಧ್ಯೆ ಎಲ್ಲಿಯಾದರೂ ಏನಾದರೂ ವಿಷಯವು ಹಾರಿಹೋಗಿದ್ದರೆ ಅದನ್ನು ಬಹಳ ಎಚ್ಚರಿಕೆಯಿಂದ ಪೂರೈಸಬೇಕಾಗುತ್ತದೆ. ಈ ಕಾರ್ಯವನ್ನು ಸಹನಾಶೀಲರೂ, ಕುಶಾಗ್ರಮತಿಗಳೂ ಮಾತ್ರ ಮಾಡಬಲ್ಲರು. ಅಂತಹ ಅನುಪಮ ಅಸದಳ ಕಾರ್ಯವು ಹಳಕಟ್ಟಿಯವರಿಂದ ನಡೆದಿದೆ. ಗ್ರಂಥಕ್ಕೆ ಸರಿಹೋಗುವ ಭೂಮಿಕೆಗಳನ್ನೂ ಸಹ ಕೊಟ್ಟು ಗ್ರಂಥದ ಗೌರವವನ್ನೂ ಸಹ ಇಳಿಸದಂತೆ ಸಾಹಸ ಕೆಲಸ ಮಾಡಿದ್ದಾರೆ. ಈ ಗ್ರಂಥಗಳನ್ನು ನೋಡಿದ ನಾವು ನಿತ್ಯ ತತ್ವಗಳನ್ನು

ಅರಿತವರಾಗಿ ದಿವ್ಯಜೀವನವನ್ನು ನಾವು ಅಳವಡಿಸಿಕೊಂಡವರಾಗುತ್ತೇವೆ. "ಸಾಹಿತ್ಯವು ಜ್ಞಾನಸಥೇನುವಿನ ಕೆಚ್ಚಲು; ಸಾಹಿತ್ಯದ ಮೇಲ್ಮೆಯಿಂದ ಜನಜೀವನದ ಮೇಲ್ಮೆಯುಂಟಾಗುತ್ತದೆ"[೧೨] ಹಳಕಟ್ಟಿಯರು ಸಂಪಾದಿಸಿದ ವಚನ ಗ್ರಂಥಗಳನ್ನು ಅರಗಿಸಿಕೊಂಡ ಕನ್ನಡಿಗರು ಘನಸಾಹಿತ್ಯವನ್ನು ಪಡೆದಿರುವುದಕ್ಕಾಗಿ ಹೆಮ್ಮೆಪಡುವಂತಾಗುತ್ತದೆ. "ಸ್ಫೂರ್ತಿ ದರ್ಶನ, ಕ್ರಿಯಾಕಾರಕ ಅಂತರ್ದರ್ಶನ, ಆತ್ಮಸ್ಪಂದನ– ಈ ಕೂಡಲ ಸಂಗಮವೇ ಮಹಾಸಾಹಿತ್ಯದ ಹೆಗ್ಗುರುತು"[೧೩] ಈ ಬಗೆಯ ಘನ ಆಸ್ತಿಯನ್ನು ಕನ್ನಡಿಗರು ಅಳಿಸಿಕೊಳ್ಳದೆ ಉಳಿಸಿಕೊಳ್ಳಲಿ ಎಂಬ ಉದಾರಾಶಯದಿಂದ ಕಾರ್ಯಮಾಡಿದ ಹಳಕಟ್ಟಿಯವರ ಸಾಹಿತ್ಯ ಸೇವೆಯು ಪ್ರಶಂಸನೀಯವಾಗಿದೆ.

ಮಹದೇವಿಯಕ್ಕ, ಅಂಬಿಗರ ಚೌಡಯ್ಯ, ದೇವರ ದಾಸಿಮಯ್ಯ, ಸಕಳೇಶ ಮಾದರಸ, ಉರಿಲಿಂಗಪೆದ್ದಿ ಮತ್ತು ಮಡಿವಾಳ ಮಾಚಿದೇವರು–ಇವರ ವಚನಗಳು ಸ್ವತಂತ್ರ ಗ್ರಂಥಗಳಾಗಿ ದೊರಕಲಿಲ್ಲ. ಇವು ಸ್ವತಂತ್ರ ಗ್ರಂಥಗಳಂತೆ ಹೊರಬರುವಂತಾದವು. ದೇವರ ದಾಸಿಮಯ್ಯ, ಅಂಬಿಗರ ಚೌಡಯ್ಯ, ಬಸವೇಶ್ವರ, ಮಹದೇವಿಯಕ್ಕ ಮತ್ತು ಉರಿಲಿಂಗಪೆದ್ದಿ–ಇವರ ವಚನಗಳಿಗೆ ಅರ್ಥವನ್ನು ಬರೆದರು. ಶೂನ್ಯ ಸಂಪಾದನೆಯು ಪೂರ್ತಿಯಾಗಿ ಮುದ್ರಣವಾದುದಲ್ಲದೆ ಪ್ರತಿಯೊಂದು ಸಂಪಾದನೆಗೂ ಅರ್ಥವನ್ನು ಬರೆದು ಮೂರು ಸಂಪಾದನೆಗಳನ್ನು ಹೊರತಂದರು. ಅಲ್ಲಲ್ಲಿನ ಶಿವಾನುಭವ ಸಂಘಗಳೂ, ಅಕ್ಕನ ಬಳಗಗಳೂ ಜನರಿಗೆ ಸುಲಭವಾಗಿ ಧರ್ಮ ಪ್ರಚಾರಮಾಡಲು ಅನುಕೂಲವಾಗುವಂತೆ ಪರಮಾತ್ಮನ ವಚನಗಳು, ಭಕ್ತಿಯ ವಚನಗಳು, ದೇವರ ದಾಸಿಮಯ್ಯನ ವಚನಗಳು ಸಂಗೀತದ ವಚನಗಳು ಮತ್ತು ಹೊಸಪದ್ಧತಿಯ ಬಸವೇಶ್ವರರ ವಚನಗಳು ಇವುಗಳನ್ನು ರಚಿಸಿದರು. ಹೊಸ ಪದ್ಧತಿಯು ಬಸವೇಶ್ವರರ ವಚನಗಳ ಗ್ರಂಥದಲ್ಲಿ ವಾಚಕರ ಮನಸ್ಸಿನ ಮೇಲೆ ಸತ್ಪರಿಣಾಮ ಉಂಟಾಗುವಂತೆ ಹೊಸ ಮಾದರಿಯಲ್ಲಿ ಶಿರೋನಾಮೆಗಳು ಹಾಕಲ್ಪಟ್ಟು ನೂರೊಂದು ಪಾಠಗಳಲ್ಲಿ ಕ್ರಮಗೊಳಿಸಲಾಗಿದೆ. ವಚನಶಾಸ್ತ್ರಸಾರವು ನಾಲ್ಕು ಭಾಗಗಳಾಗಿ ಪ್ರಕಟವಾಗಿದೆ. ಇವು ವೀರಶೈವ ತತ್ತ್ವಜ್ಞಾನದ ಭಂಡಾರಗಳಾಗಿವೆ. ಇವುಗಳಲ್ಲಿ ಧರ್ಮದ ಸ್ವರೂಪ ಮತ್ತು ವಿಶಿಷ್ಟತನವು ಎದ್ದು ಕಾಣುತ್ತವೆ. ಇವುಗಳನ್ನು ಸರಿಯಾಗಿ ಅಭ್ಯಾಸ ಮಾಡಿದರೆ ವೀರಶೈವಧರ್ಮದ ಜ್ಞಾನವು ಸಹಜವಾಗಿ ಸಿಗುವುದರಲ್ಲಿ ಯಾವ ಸಂಶಯವೂ ಇಲ್ಲ. ಈ ನಾಲ್ಕು ಭಾಗಗಳಲ್ಲಿ ಎಲ್ಲ ಶರಣರ ವಚನಗಳನ್ನೂ ಕ್ರೋಡೀಕರಿಸಿ ಯೋಗ್ಯ ರೀತಿಯಿಂದ ಷಟ್ಸ್ಥಲಗಳಿಗೆ ಹೊಂದಿಕೆಯಾಗುವಂತೆ ಉತ್ತಮೋತ್ತಮ ಶಿರೋನಾಮೆಗಳು ಹಾಕಲ್ಪಟ್ಟು ಸಕಲ ವಿಚಾರಗಳನ್ನೊಳಗೊಳ್ಳುವಂತೆ ಕ್ರಮಗೊಳಿಸಲಾಗಿದೆ. ವಿಷಯಗಳಿಗನುಸಾರವಾಗಿ ಶಿವಶರಣರ ವಚನಗಳು ಸುಸಂಬದ್ಧವಾಗಿ ಕ್ರಮಗೊಳಿಸಲ್ಪಟ್ಟಿದ್ದನ್ನು ನೋಡಿದರೆ ಸಂಪಾದಕರ ಮಹಾನ್‌ಬುದ್ಧಿ ಪ್ರತಿಭೆಯು ವ್ಯಕ್ತವಾಗುತ್ತದೆ.

ಶಿವಾನುಭವದ ಷಟ್‌ಸ್ಥಲಗಳ ನೂರೊಂದು ಸ್ಥಲಗಳ ಸಕೀಲುಗಳು, ಉದ್ಧರಣೆ ಮೊದಲಾದವುಗಳ ಆಳವಾದ ಜ್ಞಾನವು ಇವರಲ್ಲಿ ಎಷ್ಟರ ಮಟ್ಟಿಗೆ ಇದ್ದಿತೆಂಬುದು ಸ್ಪಷ್ಟವಾಗುತ್ತದೆ. ವೀರಶೈವ ಸಮಾಜಕ್ಕೆ ಇವು ಇವರಿಂದ ಕಾಣಿಕೆಯಾಗಿ ಕೊಡಲ್ಪಟ್ಟ ಅನರ್ಘ್ಯ ರತ್ನಗಳಾಗಿ ರಾರಾಜಿಸಿವೆ. ಇವು ವೀರಶೈವ ಸಿದ್ಧಾಂತದ ಜ್ಞಾನಾಮೃತವನ್ನೊಳಗೊಂಡ ಅವಿನಾಶಿಯಾದ ಅಮೃತಕುಂಭಗಳು. ಧರ್ಮಜಿಜ್ಞಾಸುಗಳು ತಮ್ಮ ಜ್ಞಾನ ದಾಹದ ಹಸಿವಿನ ಪೂರೈಕೆಯನ್ನು ಈ ಮೂಲಕವಾಗಿ ಪಡೆಯಬಹುದಾಗಿದೆ.

ವಚನಕಾರರ ಆದ್ಯ ಪ್ರವರ್ತಕನು ದೇವರ ದಾಸಿಮಯ್ಯ. ಈತನು ಆಚಾರ್ಯರಿಗೆ ಶಿಷ್ಯನಾಗಿದ್ದು ಶ್ರೀಶೈಲಪೀಠದ ಸೇವೆಯನ್ನು ಶ್ರದ್ಧೆಯಿಂದ ಸಲ್ಲಿಸಿರುವಂತೆಯೇ ಪ್ರಮಥ ಶ್ರೇಷ್ಠನಾಗಿ ವಚನಗಳನ್ನು ರಚಿಸಿ ಶರಣರಿಗೆ ಅಭಿವಂದ್ಯನಾಗಿದ್ದಾನೆ; ಅಗ್ರಗಣ್ಯನಾಗಿದ್ದಾನೆ. ಭಕ್ತಿ ಜ್ಞಾನ ವೈರಾಗ್ಯಗಳ ತ್ರಿವೇಣಿ ಸಂಗಮಸ್ಥಿರನಾದ ಈತನ ವಚನಗಳು ಸತ್ಯಾಂಶಗಳ ಸೂಚೀಪತ್ರವಾಗಿದೆ. "ಕನ್ನಡ ವಚನಶಾಸ್ತ್ರ ಹಾಗೂ ವೀರಶೈವ ಧರ್ಮಗ್ರಂಥ ಇವುಗಳಲ್ಲಿ ದಾರಿದರ್ಶಕ ದೀಪವೊಂದು ದೇವರ ದಾಸಿಮಯ್ಯನವರ ವಚನಗಳು"[೧೪] "ದೇವರ ದಾಸಿಮಯ್ಯನ ವಚನಗಳು ಪ್ರಾಚೀನತೆಯಿಂದಲೇ ಅಲ್ಲದೆ ಹಿತಮಿತ ಮೃದು ಮಧುರ ಉದಾತ್ತ ಉಜ್ವಲ ಗುಣಗಳಿಂದ ನಾಡಿನ ಸಾಹಿತಿಗಳ ಮತ್ತು ಕಲಾ ಪ್ರೇಮಿಗಳ ಮನಸ್ಸನ್ನು ಅಪಹರಿಸಿದೆ"[೧೫] ಈ ಬಗೆಯ ಸಾಹಿತ್ಯ ರತ್ನಗಳ ಅನೇಕತೆಯನ್ನು ಅರಿತು ಹಳಕಟ್ಟಿಯವರು ಯಥೋಚಿತ ಕಾರ್ಯವನ್ನು ಮಾಡಿ ಧನ್ಯಜೀವಿಗಳಾಗಿದ್ದಾರೆ. ದೇವರ ದಾಸಿಮಯ್ಯನ ಸಾಹಿತ್ಯವನ್ನು ಪ್ರಕಟಿಸಿದುದರ ಜೊತೆಗೆ ಈತನ ಜೀವನಚರಿತ್ರೆಯನ್ನೂ ಬರೆದಿದ್ದಾರೆ. ದೇವರದಾಸಿಮಾರ್ಯ ಕಥೆಯು ಕುತೂಹಲಕಾರಿಯಾಗಿ, ರಸಸೇಚಿತವಾಗಿ ಇವರಿಂದ ಬರೆಯಲ್ಪಟ್ಟಿದೆ. ವಚನ ಶಾಸ್ತ್ರ ಜಗತ್ತಿನ ಕ್ರಾಂತಿಕಾರ ಋಷಿ ಬಸವಣ್ಣನು ವಿಶ್ವಜೀವಿ. "ಪಂಡಿತರ ಸೊತ್ತಾಗಿದ್ದ ಸಾಹಿತ್ಯವನ್ನು ಸಾಮಾನ್ಯ ಜನರ ಸೊತ್ತನ್ನಾಗಿ ಮಾಡಿದ ಮಹಾಭಾಗ್ಯವು ಬಸವಣ್ಣನವರಿಗೆ ಸೇರಿದೆ. ಅವರ ವಾಣಿ ಅಶಿಕ್ಷಿತ ಜನಾಂಗದ ಕೈದೀಪವಾಗಿ ಸ್ಪಷ್ಟವಾಗಿ ಮತ್ತು ಸುಲಭವಾಗಿ ಹೃದಯಕ್ಕೆ ತಟ್ಟಿ, ಆತ್ಮದ ಅನುಭವವು ಸಹಜವಾಗಿ ಸೇರುವ ಸತ್ವ ಸಾಹಿತ್ಯವಾಗಿದೆ."[೧೬] ಬಸವಣ್ಣನವರ ವಚನಗಳು ಜೀವನದ ಕುಲುಮೆಯಿಂದ ಬಂದು ಟಂಕಸಾಲೆಯ ನಾಣ್ಯಗಳಾಗಿವೆ. ಜನವನ್ನು ಸುಧಾರಿಸಲು ಸಾಧನವಾಗುವಂತೆ ಬಸವಣ್ಣನವರ ಇಂಥ ವಚನಗಳನ್ನು ಹಳಕಟ್ಟಿಯವರು ಪ್ರಕಟಿಸಿದರು. ಬಸವಣ್ಣನವರ ಜೀವನ ವಿಚಾರವನ್ನು ಇತಿಹಾಸದ ಒರೆಗಲ್ಲಿಗೆ ಹಚ್ಚಿ ಅದನ್ನು ಜೀವನ ಚರಿತ್ರೆಯನ್ನಾಗಿ ತಂದರು. ಬಸವಣ್ಣನವರ ತತ್ವಗಳು ಜನತೆಗೆ ಚಿರಪರಿಚಿತವಾಗಲೆಂದು ಅವರ ತತ್ವಗಳ ವಿಚಾರವಾಗಿ ಶಿವಾನುಭವ ಪತ್ರಿಕೆಯಲ್ಲಿ ಅನೇಕ ವಿದ್ವಾಂಸರಿಂದ ಬರಹಗಳನ್ನು ಬರೆದು ಪ್ರಕಟಿಸಿದರು. ಅವುಗಳಲ್ಲಿ ಕೆಲವು ಮಾತ್ರ ಗ್ರಂಥರೂಪವಾಗಿ ಬರಲು ಹಳಕಟ್ಟಿಯವರು ಅವಕಾಶವನ್ನು ಕಲ್ಪಿಸಿಕೊಟ್ಟರು. ಸಿದ್ಧರಾಮಪ್ಪ ಪಾವಟೆ, ವೀರಪ್ಪ ಬಿಳಿಅಂಗಡಿ, ವೀರಪ್ಪ ಯಗಟಿ, ಫಕೀರಪ್ಪ ಗುರುಬಸಪ್ಪ ಹಳಕಟ್ಟಿ ಇತ್ಯಾದಿಯವರ ಲೇಖನಗಳ ಸಂಗ್ರಹವೇ "ಶ್ರೀ ಬಸವೇಶ್ವರನ ತತ್ವಗಳು" ಆಗಿ ಪ್ರಕಟವಾಗಿದೆ. "ಬಸವಣ್ಣನವರ ಸಂದೇಶಗಳು ಇಂದಿಗೂ, ಎಂದೆಂದಿಗೂ ಅವಶ್ಯಕವಾಗಿವೆ"[೧೭] ಆದಕಾರಣ ಬಸವಣ್ಣನವರ ಬಗ್ಗೆ ಅರಿವು ಅವಶ್ಯಕವಾಗಿರುವ ಸಮಯದಲ್ಲಿ ಬಂದ ಈ ಹೊತ್ತಗೆಯು ಸ್ವೀಕಾರಯೋಗ್ಯವಾಗಿದೆ. ಇದರಲ್ಲಿ ಬಸವಣ್ಣನವರ ನೈತಿಕ ಮತ್ತು ಸಾಮಾಜಿಕ ವಿಚಾರಗಳು, ಅವರ ಸಾಹಿತ್ಯ ಮತ್ತು ಕ್ರಾಂತಿಕಾರಿಕಾರ್ಯ ಇವೇ ಮೊದಲಾದ ವಿಚಾರಗಳು ವಿವರಿಸಲ್ಪಟ್ಟಿವೆ.

ಅನುಭವ ಮಂಟಪದ ಅಧ್ಯಕ್ಷನು ಅಲ್ಲಮಪ್ರಭುವು. ಈತನ ವಾಣಿಯು ಮಾಯಾನಿರಸನವನ್ನು ಸ್ಪಷ್ಟಪಡಿಸುತ್ತದೆ. "ಪ್ರಭುವಿನ ವಚನಗಳಲ್ಲಿ ತೂಕವಿದೆ, ಸತ್ಯವಿದೆ, ಬಿಗಿಯಿದೆ, ಸಾಧನೆಯಿದೆ. ಕನ್ನಡ ಸಾಹಿತ್ಯದಲ್ಲಿ ಅಲ್ಲಮನ ವಚನಕ್ಕೆ ಅಗ್ರಸ್ಥಾನವಿದೆ."[೧೮] ಈ ಬಗೆಯ ವಚನಗಳನ್ನು ಹೊರತಂದು ಮಹದುಪಕಾರ ಮಾಡಿದ ಹಳಕಟ್ಟಿಯವರು ವಚನಕಾರ್ತಿಯರತ್ತ ದೃಷ್ಟಿಯನ್ನು ತಿರುಗಿಸದೆ ಇರಲಿಲ್ಲ. ಗಂಡಸಿನಂತೆ ಹೆಂಗಸೂ ಕೂಡ ಒಬ್ಬ ಜೀವಿಯು ಎಂದು

ಅರಿತು, ಸಮಾಜದಲ್ಲಿ ಸ್ತ್ರೀಯರಿಗೂ ಸ್ಥಾನವನ್ನು ಶಿವಶರಣರು ಕಲ್ಪಿಸಿಕೊಟ್ಟ ಕಾರಣವೇ ಅನೇಕ ವಚನಕಾರ್ತಿಯರು ಜನಿಸುವಂತಾಯಿತು. ಇವರಲ್ಲಿ ಅಕ್ಕಮಹಾದೇವಿಯು ಅಗ್ರ ಗಣ್ಯೆ. "ಕನ್ನಡ ಸಾಹಿತ್ಯದ ಪುರಾತನ ಲೇಖಕಿಯರಲ್ಲಿ ತೇಜಸ್ವಿನಿಯು ಅಕ್ಕಮಹಾದೇವಿ; ಬಸವನ ಮಹಾಕಾರ್ಯದಲ್ಲಿ ದೀಕ್ಷೆ ವಹಿಸಿದ ಅಕ್ಕಮಹಾದೇವಿ ಕನ್ನಡಪ್ರೇಮಿ, ಉಜ್ವಲ ಭಕ್ತಳು: ಸಮಾಜ ಸೇವಕಿ."[೧೯] "ಅಕ್ಕನವರ ವಚನಗಳು ಕಾವ್ಯಮಯವಾಗಿವೆ. ಪುಟ್ಟ ಪುಟ್ಟ ಪದಗಳಲ್ಲಿ ಗೂಢಾರ್ಥವನ್ನು ಅಡಕಮಾಡಿಕೊಂಡು ಹೃದಯದ ಚಲುವನ್ನು ಹೊರಗೆಡಹು ವಂತಹ ವಚನಗಳು ಇವರದು."[೨೦] ಈ ಬಗೆಯ ವಚನಗಳನ್ನು ಕ್ರಮಬದ್ಧವಾಗಿ ಜೋಡಿಸಿ ಕೂಡಿಸಿ ಕನ್ನಡಿಗರಿಗೆ ಕೊಟ್ಟರು. ವಚನಗಳ ಸಾರವು ವಾಚಕರಿಗೆ ಮೈಗೂಡಲು ಅವಕಾಶ ವಾಗುವಂತೆ ಈ ವಚನಗಳಿಗೆ ಟೀಕೆಯನ್ನು ಬರೆದರು.

ಶೂನ್ಯ ಸಂಪಾದನೆಯನ್ನು ಪೂರ್ತಿ ಪ್ರಕಟಿಸಿದುದಲ್ಲದೆ ಮೂರು ಸಂಪಾದನೆಗಳಿಗೆ ಟೀಕೆ ಯನ್ನೂ ಬರೆದು ಪ್ರಕಟಿಸಿದರು. ಶೂನ್ಯ ಸಂಪಾದನೆಯು ವೀರಶೈವ ಧರ್ಮ ಪ್ರಸ್ಥಾನತ್ರಯ ಗಳಲ್ಲಿ ಒಂದಾಗಿದೆ. ಥಾಮಸ್ ಎ. ಕೆಂಪೀಫ್, ಮಾರ್ಕಸ್ ಅರೇಲಿಯಸ್, ಪ್ಲೇಟೋ - ಇವರ ಕೃತಿಗಳ ತಿರುಳಿಗೆ ಇದು ಪೊಯ್‌ಕ್ರೈಯ್ ಆಗಿ ರೂಪುದಾಳಿದೆ. ಇದು ವಚನಕಾರರ ಅನುಭವ ಜೀವನದ ಪ್ರತಿಕೃತಿಯಾಗಿ ಮೈಗೂಡಿಕೊಂಡಿದೆ. ಇಂತಹ ಬೃಹತ್ ಕೃತಿಯು ಕನ್ನಡಿಗರ ಕೈಗೆ ದೊರಕುವಂತೆ ಮಾಡಿದ ಹಳಕಟ್ಟಿಯವರ ಸಾಹಸವು ಮೆಚ್ಚುವಂಥದು.

ಬಸವಣ್ಣನವರ ಕಾಲದಲ್ಲಿ ವಚನ ಸಾಹಿತ್ಯವು ಒಳ್ಳೆಯ ಪ್ರಗತಿಯನ್ನು ಪಡೆದು ವೀರ ಶೈವ ಸಮಾಜವನ್ನು ಅತ್ಯುನ್ನತ ಸ್ಥಿತಿಗೊಯ್ಯಲು ಕಾರಣಭೂತವಾಗಿ ಮುಂದೆ ಅನೇಕ ವರ್ಷ ಗಳವರೆಗೆ ನಶಿಸಿಹೋಯಿತು. ಅನೇಕ ಮಠಮಾನ್ಯಗಳ ಸಂದಿಗೊಂದಿಗಳಲ್ಲಿ ಬಿದ್ದು ಹುಪ್ಪಟೆ ಗಳಿಗೆ ತುತ್ತಾಗುತ್ತಲಿತ್ತು. ಈ ವಚನ ಸಾಹಿತ್ಯದ ಘನತೆಯನ್ನು ಜನತೆಯು ಅರಿಯದಿದ್ದಿತು. ಈ ಕೊರತೆಯನ್ನು ಕಳೆದು ಕಾರ್ಯ ಮಾಡಿದುದು ಇತಿಹಾಸದಲ್ಲಿ ಕಾಣಬರುತ್ತದೆ. ಮೂಲೆ ಗುಂಪಾಗಿದ್ದ ವಚನ ಸಾಹಿತ್ಯವನ್ನು ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಉದಯಿ ಸಿದ ಅನೇಕ ವೀರಶೈವ ಪಂಡಿತರು ಸಂಶೋಧನೆ ಮಾಡಿ ಸಂಗ್ರಹಿಸಿದರು. ಇದರ ಹಿರಿಯ ಮುಂದಾಳು ಎಡೆಯೂರು ತೋಂಟದ ಸಿದ್ಧಲಿಂಗ ಯತಿಗಳು. ಅನಂತರ ಈ ಶತಮಾನದಲ್ಲಿ ಪುನರುತ್ಥಾಪನ ಕಾರ್ಯವನ್ನು ನವನೂತನೋತ್ತೇಜಕವಾಗಿ ಮಾಡಿದ ಮಹನೀಯರು ಹಳಕಟ್ಟಿ ಯವರು. ಬಸವಣ್ಣನ ಬಗೆ, ಎಡೆಯೂರು ತೋಂಟದ ಸಿದ್ಧಲಿಂಗಯತಿಯಗತಿ, ಹಳಕಟ್ಟಿ ಯವರ ಎಂಬ ಹಾದಿತ್ರಯಗಳಲ್ಲಿ ವಚನ ಸಾಹಿತ್ಯವನ್ನು ನಾವು ನೋಡುತ್ತೇವೆ. ಹಿಂದಿನ ಎರಡು ಸಮಯದಲ್ಲಿ ವಚನ ಸಾಹಿತ್ಯವು ಅಷ್ಟೊಂದು ಸುಸಂಬದ್ಧವಾಗಿ ಸಾಗಿದುದು ಕಾಣ ಬರುತ್ತಿಲ್ಲ. ಈ ಇಪ್ಪತ್ತನೆ ಶತಮಾನದಲ್ಲಿ ಹಳಕಟ್ಟಿಯವರ ಪ್ರಾಮಾಣಿಕತೆ, ನಿಷ್ಠೆಗಳಿಂದ ಈ ಸಾಹಿತ್ಯಕ್ಕೆ ಹೊಸ ಸ್ವರೂಪವು ಪ್ರಾಪ್ತವಾದದ್ದು. ಆದ ಕಾರಣವೇ 'ವಚನ ಶಾಸ್ತ್ರಪ್ರವೀಣ, ವಚನ ಶಾಸ್ತ್ರ ಪ್ರಪಿತಾಮಹ' ಪ್ರಶಸ್ತಿಗಳನ್ನು ಪಡೆದು ಇವರು ಕರ್ನಾಟಕದಲ್ಲಿ ಖ್ಯಾತಿಗೊಂಡಿ ದ್ದಾರೆ. ವಚನ ಶಾಸ್ತ್ರಕ್ಕೆ ಅಂತರಾಷ್ಟ್ರೀಯ ವೈಜ್ಞಾನಿಕ ದೃಷ್ಟಿಯು ದೊರಕುವಂತೆ ದುಡಿದು ಮನಸಾರೆ ಕೆಲಸಮಾಡಿದ ಕಾರಣವೇ ಹಳಕಟ್ಟಿಯವರು ಘನಶೀಲರಾಗಿ ನಮ್ಮೆಲ್ಲರ ಸ್ಮೃತಿ ಯಲ್ಲಿ ನೆಲಸಿದ್ದಾರೆ.

ಮೊಗ್ಗೆಯ ಮಾಯಿದೇವರಿಂದ ಸಂಸ್ಕೃತದಲ್ಲಿ ರಚಿಸಲ್ಪಟ್ಟ ಶಿವಾನುಭವ ಸೂತ್ರಸಾರ ವೆಂಬ ಗ್ರಂಥವು ಕನ್ನಡದಲ್ಲಿ ಟೀಕೆಯ ಸಹಿತ ಪ್ರಕಟಿಸಿ ನೂರೊಂದು ಸ್ಥಲಗಳನ್ನೊಳಗೊಂಡ

ಟೀಕಾತ್ಮಕವಾದ ಸಿದ್ಧಲಿಂಗ ಏಕೋತ್ತರ ಶತಸ್ಥಲವೆಂಬ ಗ್ರಂಥವನ್ನು ಹೊರಡಿಸಿದ್ದಾರೆ. ಹರಿಹರದೇವನ ನೂರಿಪ್ಪತ್ತುನಾಲ್ಕು ರಗಳೆಗಳನ್ನು ಎಂಟು ಭಾಗಗಳಲ್ಲಿ ಹೊರತಂದಿದ್ದಾರೆ. ವೀರಶೈವರ ಆದಿಕವಿ, ಅಗ್ರೇಸರಕವಿ, ಕನ್ನಡದ ಮಹಾಕವಿಯು ಹರಿಹರನು. ಈ ಕವಿಯ ಒಂದೊಂದು ರಗಳೆಯೇ ಮುಂದೆ ಒಂದೊಂದು ಮಹಾಕಾವ್ಯವಾಗಿ ಕವಿಗಳಿಂದ ಹೊರಬಂದಿರುವುದೇ ಈ ಕವಿಯ ಹಿರಿಮೆಗೆ ಸಾಕ್ಷಿಯಾಗಿದೆ. "ಸಾಹಿತ್ಯ ದೃಷ್ಟಿಯಿಂದ ಈ ರಗಳೆಗಳು ಅನೇಕ ಚಂಪೂ ಗ್ರಂಥಗಳಿಗಿಂತಲೂ ಹೆಚ್ಚು ಆದರಣೀಯವೂ, ಗೌರವಾರ್ಹವೂ ಆಗಿವೆ." ೨೧ "ಶಿವಭಕ್ತರ ವೀರವೃತ್ತಿಯನ್ನೂ, ಆತ್ಮಾರ್ಪಣವನ್ನೂ, ಜಗದ್ಕಲ್ಯಾಣದ ಉದ್ದೇಶವನ್ನೂ ರಗಳೆಗಳಲ್ಲಿ ಕಾಣುತ್ತೇವೆ." ೨೨ ಈ ಬಗೆಯ ವೃತ್ತಿಗಳನ್ನು ಹದಗೆಡದಂತೆ ಹೊರತರುವುದು ಕವಿಹೃದಯ ಪ್ರವೇಶ ಪ್ರವೀಣರಂತಹವರಿಗೆ ಮಾತ್ರ ಸಾಧ್ಯವಾಗುತ್ತದೆಯೇ ಹೊರತು ಬೇರೆಯವರಿಗೆ ಸಾಧ್ಯವಾಗದು. ಈ ಕೆಲಸವನ್ನು ಹಳಕಟ್ಟಿಯವರು ಇಲ್ಲಿ ಚೆನ್ನಾಗಿ ನಿರ್ವಹಿಸಿದ್ದಾರೆ. ಇದಲ್ಲದೆ ಸ್ವಾದಿ ಸಂಸ್ಥಾನಾಧಿಪತಿಯಾದ ಸದಾಶಿವ ರಾಜನ ಸದಾಶಿವ ನೀತಿಯನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಗುರು ಅಷ್ಟಾವರಣಾದಿ ವಿಚಾರಗಳು ಬಂದಿವೆ. ಗುರುವಿನ ಗರಿಮೆಯು ಗುರುತರವಾಗಿದೆ. ಯೋಗಿ ವೇಮಣ್ಣನ ವಚನಗಳನ್ನು ಹಳಕಟ್ಟಿಯವರು ಕನ್ನಡಕ್ಕೆ ತಂದು ಮಹದುಪಕಾರ ಮಾಡಿದ್ದಾರೆ.

ಶಿವಶರಣರ ಸಾಹಿತ್ಯಿಕ ಮತ್ತು ಸಾಮಾಜಿಕ ವಿಚಾರಗಳ ಪ್ರಕಟಣೆಯ ದೃಷ್ಟಿಯಲ್ಲಿ ವಚನಶಾಸ್ತ್ರ ಸಾರವು ಮಹತಿಯನ್ನು ಪಡೆದಿದ್ದರೂ ಇದನ್ನೇ ಅವಲಂಬಿಸಿ ಸಂಶೋಧಿಸಿ ಹೊರತಂದ ಷಟ್ಸ್ಥಲ ಸಿದ್ಧಾಂತದ ಸೂತ್ರ—ಈ ವಚನ ಶಾಸ್ತ್ರವನ್ನು ಅರಿಯಲು ಸಹಾಯಕವಾಗುವಂತೆ ಹಳಕಟ್ಟಿಯವರು 'ಶಿವಾನುಭವ ಶಬ್ದಕೋಶ' ಗ್ರಂಥವನ್ನು ಪ್ರಕಟಿಸಿದರು. ಶಿವಾನುಭವ ಅಭ್ಯಾಸಿಗಳಿಗೆ ಇದು ಕೈದೀಪದಂತಿದೆ. ಶಿವಾನುಭವ ಶಾಸ್ತ್ರದಲ್ಲಿ ಉಪಯೋಗಿಸಲ್ಪಡುವ ಶಬ್ದಗಳ ಅರ್ಥವನ್ನು ಸಂಕ್ಷಿಪ್ತವಾಗಿ ಬರೆಯುವುದೇ ನಮ್ಮ ಉದ್ದೇಶವಾಗಿರುತ್ತದೆ ಎಂದು ಈ ಗ್ರಂಥದ ಗುರಿಯನ್ನು ವಿವರಿಸಿದ್ದಾರೆ. ಶಿವಶರಣರ ಶಿವಾನುಭವ ತತ್ವಗಳ ವಿಚಾರವಾಗಿ ಆಗಾಗ್ಗೆ ಬುದ್ಧಿವಂತ ವಿದ್ವಾಂಸರಿಂದ ಲೇಖನಗಳು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದವು. ಅಂಥವುಗಳಲ್ಲಿ ಉಪಯುಕ್ತವಾದ ಅನೇಕ ಬರಹಗಳನ್ನು ಸಂಕಲಿಸಿದ ಫಲವೇ ಶಿವಾನುಭವದ ಸತ್ಯಮಾರ್ಗ ಕೃತಿಯಾಗಿದೆ. ಬಂಥನಾಳ ಶಿವಯೋಗಿ, ವಿದ್ಯಾವಾಚಸ್ಪತಿ ಶ್ರೀ ಶಂಭುಲಿಂಗಸ್ವಾಮಿ, ಬೆಂಗಳೂರಿನ ಸರ್ಪಭೂಷಣ ಮಠದ ಶ್ರೀ ಮಹಾದೇವಸ್ವಾಮಿ, ಕಲ್ಯಾಣಪ್ಪ ಜ್ಯಾಳಿ, ಫ. ಗು. ಹಳಕಟ್ಟಿ ಇವರ ಮಹತ್ವಪೂರಿತ ಲೇಖನಗಳು ಇದರಲ್ಲಿ ಬಂದಿವೆ. ಶಿವಶರಣರ ತಾತ್ವಿಕ ವಿಚಾರಗಳನ್ನು ತಿಳಿಯಲು ಇದು ಬಹಳ ಉಪಯುಕ್ತವಾದ ಗ್ರಂಥವಾಗಿದೆ.

ವೀರಶೈವ ವಿಚಾರವನ್ನು ಐತಿಹಾಸಿಕ ದೃಷ್ಟಿಯಿಂದ ನೋಡಿ ಕಾರ್ಯಮಾಡುವ ಧುರೀಣರು ಹಳಕಟ್ಟಿಯವರು. ವೀರಶೈವರ ಚಾರಿತ್ರಿಕ ಪರಂಪರೆಯನ್ನು ಗೊತ್ತುಹಚ್ಚಲು ಬಹಳವಾಗಿ ಶ್ರಮವಹಿಸಿ ಕೆಲಸಮಾಡಿದರು. ವೀರಶೈವರಲ್ಲಿ ಅನೇಕ ಅರಸರು ಮತ್ತು ರಾಜಕಾರಣ ಧುರೀಣರು ಆಗಿ ಹೋಗಿದ್ದ ಅವರ ಕಾಲದ ಉಜ್ವಲ ಇತಿಹಾಸವು ಉಪಲಬ್ಧವಿದ್ದಿಲ್ಲ. ಈ ಕೊರತೆಯನ್ನು ನಿವಾರಿಸಲು ಶಾಸನ, ಗ್ರಂಥ ಮತ್ತು ಓಲೆಗರಿ—ಇವುಗಳ ಸಂಗ್ರಹ ಸಂಪಾದನೆಗಾಗಿ ನಿರಂತರ ಯತ್ನಮಾಡಿದ ಹಳಕಟ್ಟಿಯವರಿಂದ ವೀರಶೈವ ಇತಿಹಾಸಕ್ಕೆ ಬಹುವಾಗಿ ಅನುಕೂಲವಾಯಿತು.

ಜೀವನ ಚರಿತ್ರೆಯು ಇತಿಹಾಸದ ಪಾಣಿಪೀಠವು. "ಪ್ರಾಚೀನರ ನಡೆನುಡಿಯು ಜೀವನ ಚರಿತ್ರೆಯಲ್ಲಿ ಅಚ್ಚೊತ್ತಿದೆ. ಅದರಿಂದ ಲಭಿಸುವ ನವನೀತವು ನಮ್ಮ ಬಾಳನ್ನು ಮೆದು ಮಾಡುತ್ತದೆ. ಮನುಷ್ಯನ ದೇಹಕ್ಕೆ ಬಲವರ್ಧಕ ರಸಾಯನವು ನೀಡುವ ಸವಿಯನ್ನು ಮಹನೀಯರ ಇಲ್ಲವೇ ವಿಭೂತಿಗಳ ಹಿತನುಡಿಗಳು ಜನತೆಗೆ ನೀಡಿ ಅದನ್ನು ಪುಷ್ಟಿಗೊಳಿಸುವುವು. ಮಹಾತ್ಮರ ಜೀವನ ಚರಿತ್ರೆಗಳು ನಮ್ಮ ಬಾಳನ್ನು ಪುನೀತಗೊಳಿಸಿ ಪಾವನವಮಾಡುತ್ತವೆ."೨೩ ಇದನ್ನು ಮನಗಂಡ ಹಳಕಟ್ಟಿಯವರು ಶಿವಶರಣರ ಚರಿತ್ರೆಗಳನ್ನು ನಾಲ್ಕು ಭಾಗಗಳಾಗಿಯೂ, ಮಠಾಧೀಶರ ಚರಿತ್ರೆಯನ್ನೂ, ಬಸವಣ್ಣನವರಿಂದ ಹದಿನೇಳನೆ ಶತಮಾನದವರೆಗಿನ ಶ್ರೀಮನ್ನಿರಂಜನಾಧೀಶ್ವರರ ಚರಿತ್ರೆಯುಳ್ಳ ನಿರಂಜನವಂಶ ರತ್ನಾಕರವನ್ನೂ ಬರೆದಿದ್ದಾರೆ. ಅಮರಗಣಾಧೀಶ್ವರರ ಚರಿತ್ರೆಗಳು, ಡೆಪ್ಯೂಟಿ ಚೆನ್ನಬಸವಪ್ಪ, ಅಸ್ಪೃಶ್ಯರ ಶಿವಶರಣರ ಚರಿತ್ರೆಗಳು, ಜಂಗಮರ ಚರಿತ್ರೆ, ಉಳವಿಯ ಹೋರಾಟ, ನಾಗಲಾಂಬಿಕೆಯ ಚರಿತ್ರೆ ಮೊದಲಾದವರ ಜೀವನ ಚರಿತ್ರೆಗಳನ್ನು ಬರೆದು ಪ್ರಸಿದ್ಧಪಡಿಸಿದ್ದಾರೆ. ವೀರಶೈವ ಸಮಾಜದಲ್ಲಿ ೮೦೦ ವರ್ಷಗಳ ಹಿಂದೆ ಅನೇಕ ಮಹಾಪುರುಷರೂ, ಚಾರಿತ್ರಿಕ ವ್ಯಕ್ತಿಗಳೂ ಆಗಿ ಹೋಗಿದ್ದಾರೆ. ಅವರ ಚರಿತ್ರೆಗಳು ಬಹಳ ಮಹತ್ವಪೂರಿತವಾಗಿವೆ; ಆದರೆ ನಮ್ಮ ದೇಶದಲ್ಲಿ ಇತಿಹಾಸವನ್ನು ಬರೆದಿಡುವ ಪದ್ಧತಿಯು ಇರುವುದಿಲ್ಲ. ಧಾರ್ಮಿಕ ಮಹಾಪುರುಷರಂತೂ ತಾವು ಮಾಡಿದ ಕಾರ್ಯಗಳ ನಿರೂಪಣೆಯನ್ನು ಮಾಡಲು ಮನಸ್ಸೇ ಕೊಡುವುದಿಲ್ಲ. ಈ ಕಾರಣದಿಂದ ನಮ್ಮ ದೇಶದಲ್ಲಿ ಚರಿತ್ರೆಗಳು ಅಪೂರ್ಣವಾಗಿಯೇ ಉಳಿದಿರುತ್ತವೆ. ವೀರಶೈವರಲ್ಲಿ ಬಸವ, ಅಲ್ಲಮ ಪ್ರಭು, ಚನ್ನಬಸವ, ರೇವಣಸಿದ್ಧ, ಸಿದ್ಧರಾಮ, ಪಂಡಿತಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ ಇವರು ಮಹಾಪುರುಷರಾಗಿದ್ದಾರೆ. ಇವರ ಬಗ್ಗೆ ಉಪಲಬ್ಧವಿರುವ ದಂತಕಥೆಗಳಲ್ಲಿ ಚರಿತ್ರಾಂಶಗಳು ದೊರಕವು. ಅವುಗಳ ಬಗ್ಗೆ ಶಿಲಾಶಾಸನ, ಸ್ಮಾರಕ ಮತ್ತು ಕುರುಹುಗಳು ಇವುಗಳನ್ನು ಅವಲಂಬಿಸಿ ನಿಜವಾದ ಸಂಗತಿಗಳನ್ನು ಕಂಡುಹಿಡಿದು ಪುರಾಣಪುರುಷರನ್ನು ಐತಿಹಾಸಿಕ ಪುರುಷರನ್ನಾಗಿ ಮಾಡಿರುವುದೂ ಒಂದು ವಿಶೇಷವಾಗಿದೆ. ವೀರಶೈವ ಗ್ರಂಥ ಸಂಶೋಧನೆಯನ್ನು ಸಾಗಿಸಿದಂತೆಲ್ಲಾ ಹೊಸ ಹೊಸ ಶಿವಶರಣರ ಹೆಸರುಗಳು ಕಂಡುಬಂದು ಅವರ ಚರಿತ್ರೆಯನ್ನು ಸಂಗ್ರಹಿಸಿ ಕಾವ್ಯಮಾಡಿದುದರ ಪರಿಣಾಮವಾಗಿಯೇ ಐದು ಭಾಗವಾಗಿ ಶಿವಶರಣರ ಚರಿತ್ರೆಗಳು ದೊರಕುವಂತಾಗಿದೆ. ಈ ನಿರಂಜನ ವಂಶರತ್ನಾಕರ ಗ್ರಂಥವು ಸಾಹಿತ್ಯ ಸಂಶೋಧಕರಿಗೆ ಕೈದೀಪವಾಗಿ ನೆರವು ನೀಡುವಂತಿದೆ. ಇಲ್ಲಿನ ಸರಳ ಸರಣಿಯು ಹಳಕಟ್ಟಿಯವರ ಸರಳ ವ್ಯಕ್ತಿತ್ವದ ಸಂಕೇತವಾಗಿದೆಯೆನ್ನಬಹುದು. ಸಾರಂಗ ಮಠಾಧೀಶ್ವರರು ಎಂಬ ಗ್ರಂಥವು ಬಹು ಕುತೂಹಲಕಾರಿಯಾದ ಕೃತಿಯಾಗಿವೆ. ಶಿವಶರಣರ ಅಹಿಂಸಾ ಮಾರ್ಗ ಎಂಬ ಗ್ರಂಥದಲ್ಲಿ ದೇವರ ದಾಸಿಮಯ್ಯ, ಬಸವೇಶ್ವರ, ಮರುಳಸಿದ್ಧ, ಮಹಾದೇವಿಯಕ್ಕ, ಸಕಲೇಶ ಮಾದರಸ, ಕಿನ್ನರಿ ಬ್ರಹ್ಮಯ್ಯ, ಹಲಾಯುಧ, ದಸರಯ್ಯ, ಚನ್ನಬಸವೇಶ್ವರ, ಸಿದ್ಧರಾಮೇಶ್ವರ—ಇವರ ಅಹಿಂಸಾ ಬೋಧೆಯನ್ನು ಹಳಕಟ್ಟಿಯವರು ಸಮಗ್ರವಾಗಿ, ಹೃದ್ಯವಾಗಿ ಚಿತ್ರಿಸಿದ್ದಾರೆ. ಮಾನವ ಜೀವನದಲ್ಲಿ ನೈತಿಕ, ಬೌದ್ಧಿಕ, ವ್ಯಾವಹಾರಿಕ ಪ್ರಗತಿಗೆ ಪ್ರಧಾನ ಸ್ಥಾನ ಕೊಡುವ ವಿಚಾರವನ್ನು ಪ್ರೋಷಿಸಿ ಮುಂದಿನ ಜನಾಂಗವಾದ ವಿದ್ಯಾರ್ಥಿಗಳಿಗೆ ಆ ಬಗ್ಗೆ ತಕ್ಕ ತಿಳಿವಳಿಕೆ ಒದಗಿಸುವ ದೃಷ್ಟಿಯಿಂದ ಪ್ರಗತಿಮಾರ್ಗ ಜೀವನ ಎಂಬ ಗ್ರಂಥವನ್ನು ಹಳಕಟ್ಟಿಯವರು ಕೊಟ್ಟಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತು ಕರ್ನಾಟಕದ ಏಕೈಕ ಪ್ರತಿನಿಧಿ ಸಂಸ್ಥೆ. ಇದರ ಸಂಗಡ

ಹಳಕಟ್ಟಿಯವರ ಸಂಬಂಧವು ಅತಿ ನಿಕಟವೂ, ದೀರ್ಘಕಾಲದ್ದೂ ಆಗಿರುತ್ತದೆ. ಪ್ರತಿವರುಷವೂ ಜರುಗುವ ಸಾಹಿತ್ಯ ಸಮ್ಮೇಳನಗಳಲ್ಲಿ ಭಾಗವಹಿಸಿ ಅಲ್ಲಿ ವಿಚಾರಪರಿಪ್ಲುತವಾದ ಉಪನ್ಯಾಸಗಳನ್ನು ಮಾಡಿದ್ದಾರೆ. ಚಿಕ್ಕಮಗಳೂರಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ವಚನಸಾಹಿತ್ಯದ ಮೇಲೆ ಇವರು ಮಾಡಿದ ಭಾಷಣವು ಶ್ರೋತೃಗಳನ್ನು ಮುಗ್ಧಗೊಳಿಸಿದುದು ಇವರ ಪಾಂಡಿತ್ಯದ ಕುರುಹಾಗಿರುತ್ತದೆ. ಇವರನ್ನು ೧೯೨೬ರಲ್ಲಿ ಬಳ್ಳಾರಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಗೌರವಿಸಿದುದು ಇವರ ಸಾಹಿತ್ಯಸೇವೆಗೆ ನಾಡಿನ ಮೆಚ್ಚುಗೆಯ ಪ್ರತೀಕವಾಗಿರುತ್ತದೆ. ಇವರ ಸಾಹಿತ್ಯ ಸೇವೆಯನ್ನು ಮನಸಾರೆ ಮೆಚ್ಚಿಕೊಂಡ ಕರ್ನಾಟಕ ವಿಶ್ವವಿದ್ಯಾನಿಲಯವು ಇವರಿಗೆ ಡಾಕ್ಟರೇಟ್ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ದಿನಾಂಕ ೨೯-೧೦-೫೦ರಂದು ಇವರಿಗೆ ಸನ್ಮಾನಿಸುವ ಸಮಾರಂಭವನ್ನು ಏರ್ಪಡಿಸಿತು. ಅಂದು ಶ್ರೋತೃವೃಂದವು ಸುಮಾರು ಆರೇಳು ಸಾವಿರ ಮಂದಿಯಿದ್ದಿತು. ಗಂಧದ ಕರಂಡಕದಲ್ಲಿ ಮಾನಪತ್ರವನ್ನು ಇವರಿಗೆ ನೀಡಿದುದರ ಜೊತೆಗೆ ಶಾಲು ಗೌರವವೂ ಸಮರ್ಪಿತವಾಯಿತು. ಹೀಗೆ ತಮ್ಮ ಸಂತತ ಸಾಹಿತ್ಯಸೇವೆಯಿಂದ ಡೆಪ್ಯೂಟಿ ಚನ್ನಬಸವಪ್ಪ, ವೆಂಕಟರಂಗೋ ಕಟ್ಟಿ, ರಾ. ನರಸಿಂಹಾಚಾರ್ಯ, ಆಲೂರ ವೆಂಕಟರಾವ್, ಎಂ. ಶಾಮರಾವ್, ಮಂಜೇಶ್ವರ ಗೋವಿಂದಪೈ, ಡ್ಯಾನಿಯೆಲ್ ಚೆನ್ನಪ್ಪ ಉತ್ತಂಗಿ, ಶಿ. ಶಿ. ಬಸವನಾಳ, ಬೆಳ್ಳಾರು ಮೈಲಾರ ಶ್ರೀಕಂಠಯ್ಯ, ಪಂಜೆ ಮಂಗೇಶರಾವ್, ತಳುಕಿನ ವೆಂಕಣ್ಣಯ್ಯ—ಇವರ ಪಂಕ್ತಿಯಲ್ಲಿ ಸೇರಲು ಡಾ|| ಹಳಕಟ್ಟಿಯವರು ಅರ್ಹರಾಗಿದ್ದಾರೆ.

ಕರ್ಮಜ್ಞಾನ ಸಂಗಮದಲ್ಲಿ ಸಾಗಿದ ಸಾಹಸಶೀಲರು ಹಳಕಟ್ಟಿಯವರು. ಲೌಕಿಕ ಪಾರಮಾರ್ಥಿಕವನ್ನು ನಾಣ್ಯದ ಎರಡು ಮೈಗಳನ್ನಾಗಿರಿಸಿಕೊಂಡು ಸಾಧನೆಮಾಡಿದ ಮಹನೀಯರು. ಕರ್ತವ್ಯನಿಷ್ಠೆ, ಧ್ಯೇಯದಲ್ಲಿ ದೃಢವಿಶ್ವಾಸ, ಅಚಲವಾದ ಸತ್ಯಪ್ರಿಯತೆ, ಸೌಜನ್ಯ ಮತ್ತು ಸಾತ್ವಿಕತೆಗಳು ಇವರ ಘನ ವ್ಯಕ್ತಿತ್ವದ ಕೆಲ ವೈಶಿಷ್ಟ್ಯಗಳಾಗಿವೆ. ದೈವಭಕ್ತಿ, ಧರ್ಮಶ್ರದ್ಧೆ, ಸಾಹಿತ್ಯಪ್ರೇಮ, ದೇಶಾಭಿಮಾನ, ಆತ್ಮಸಂಯಮ, ಸ್ನೇಹಪರತೆ, ಸತತೋದ್ಯೋಗ, ಕಾಯಕನಿಷ್ಠೆ ಮೊದಲಾದ ಸದ್ಗುಣಗಳಿಂದ ಭರಿತರಾಗಿ ಜನ ಜನಾರ್ಧನಪ್ರಿಯರಾಗಿದ್ದಾರೆ. ಇವರ ಸನ್ಮಾನ ನಿಧಿಗಾಗಿ ಬಂದ ಧನವನ್ನು ತನ್ನ ಸ್ವಂತ ಖರ್ಚಿಗಾಗಿ ವಿನಿಯೋಗಿಸಿಕೊಳ್ಳದೆ ಗ್ರಂಥ ಪ್ರಕಟಣೆಗೆ ಉಪಯೋಗಿಸಿದ ಇವರ ನಿರ್ವಂಚನೆ, ನಿಷ್ಕಪಟ ಸೇವಾಮನೋಧರ್ಮ, ಭಾಷಾಭಿಮಾನ ಎದ್ದು ಕಾಣುತ್ತವೆ.

ಪ್ರಾಚೀನ ಸಾಹಿತ್ಯಪೋಷಣೆ ಒಂದು ಮಹತ್ತರವಾದ ಕಾರ್ಯ. ಶರಣರ ಸಾಹಿತ್ಯವು ನಮ್ಮ ಇಂದ್ರಿಯಗಳನ್ನು ಕೆರಳಿಸಿ ಗಾರುಗೊಳಿಸುವುದಂತಹುದಲ್ಲ. ವಾಚಕರನ್ನು ಆತ್ಮಾನಂದಿಗಳಾಗಿ ವಿಹರಿಸುವಂತೆ ಅವಕಾಶವನ್ನು ಕಲ್ಪಿಸಿಕೊಡುವಂಥದು. ಆತ್ಮಾನಂದವಿಲ್ಲದ ಅರಿವು ಅನರ್ಥಕಾರಿ. "ಶ್ವಾನಜ್ಞಾನ, ಗಜಜ್ಞಾನ, ಕುಕ್ಕುಟಜ್ಞಾನವೆಂಬ ಜ್ಞಾನತ್ರಯಂಗಳೇನಾದವು? ಕೂಡಲ ಸಂಗಮದೇವಾ ನಿಮ್ಮನರಿಯದ ಜ್ಞಾನ ಜ್ಞಾನವಲ್ಲ ಅಜ್ಞಾನ." ೨೪ ಸುಜ್ಞಾನವನ್ನು ಕೊಡುವ ಸಾಹಿತ್ಯಪ್ರಸಾರ, ಪ್ರಕಟಣೆಗೆ ಕೈಹಾಕಿದ ಹಳಕಟ್ಟಿಯವರು ನಿಜವಾಗಿಯೂ ನಿತ್ಯಜೀವಿಗಳಾಗಿದ್ದಾರೆ. ಇವರ ಸಾಹಿತ್ಯ ಸಂಪರ್ಕವು ನಮ್ಮನ್ನು ನೆಮ್ಮದಿಯಾಗಿರಿಸುತ್ತದೆ. ಮನವನ್ನು ದೇಗುಲವನ್ನಾಗಿ, ಕೊಟ್ಟಿಗೆಯನ್ನು ಕೂಳು ಕೊಡಿಗೆಯನ್ನಾಗಿ, ಜಡತ್ವದ ಹಾಳು ಮಂದಿರವನ್ನು ಆರೋಗ್ಯ ಮಂದಿರವನ್ನಾಗಿ ಮಾಡುವುದು. ಇಂಥ ನಿರ್ಮಲ ಸಾಹಿತ್ಯವನ್ನು ನಮಗೆ ನೀಡಿ ಡಾ|| ಹಳಕಟ್ಟಿಯವರು ಮಹಾಂತರಾಗಿದ್ದಾರೆ. ಅದನ್ನು ಉಳಿಸಿಕೊಳ್ಳುವ

ಭಾರವು ನಮ್ಮ ಮೇಲೆ ಬಿದ್ದಿದೆ. ಅದನ್ನು ಮರೆತು ಮಾನವರಾಗದೆ ಅರಿತು ಶಿವಶರಣರಾಗಿ ಬಾಳೋಣ.

## ಸಂಖ್ಯಾ ವಿವರ

೧. ವಚನಶಾಸ್ತ್ರ ಪ್ರಪಿತಾಮಹ:—ಮು. ಮಲ್ಲಪ್ಪ, ಹಲಗೂರು
ಶಿವಾನುಭವ ಸಂ. ೨೮. ಸಂ. ೬, ೭, ಪುಟ ೨೩೩
೨, ಸ್ವಾಮಿ ಶಿವಾನಂದ ಸರಸ್ವತಿ
೩. ಬಸವೇಶ್ವರರ ವಚನಗಳು
೪. S. R. ಪಾಟೀಲ್, B.A., LL.B.
೫. ಡಿ. ವಿ. ಗುಂಡಪ್ಪ
೬. ಪ್ರೊಫೆಸರ್ R. D. ರಾನಡೆ, M.A.
೭. ವಚನಶಾಸ್ತ್ರ ರಹಸ್ಯ—ರಂಗನಾಥ ರಾಮಚಂದ್ರ ದಿವಾಕರ, M.A., LL.B.
೮. ವಚನಸಾಹಿತ್ಯ—ಮು. ಮಲ್ಲಪ್ಪ, ಜ್ಞಾನಮಂದಿರ, ಹುಲಗೂರು
ಶಿವಾನುಭವ, ಸಂ. ೨೦, ಸಂ. ೪, ಪುಟ ೬೨.
೯. ಕವಿಚರಿತೆ—ರಾ. ನರಸಿಂಹಾಚಾರ್ಯ, M.A., M.R. A.S.
೧೦. ವೀರಶೈವ ಕರದರ್ಪಣ, ಪುಟ ೧೨, T. N. ಚನ್ನಪ್ಪ
೧೧. ಶಿವಶರಣ ವಾಙ್ಮಯದ ಪ್ರಕಟಣೆ
ಶಿವಾನುಭವ, ಸಂ. ೨೯, ಸಂ. ೧, ಪುಟ ೫೧೩.
೧೨. ಕುವೆಂಪು
೧೩. ಅರವಿಂದ ಮಹರ್ಷಿ
೧೪. ಬಿ. ನಂಜುಂಡಪ್ಪನವರ ಬರಹ—ಮು. ಮಲ್ಲಪ್ಪ, ಹಲಗೂರು
ಶಿವಾನುಭವ, ಸಂ. ೩೧, ಸಂ. ೧೨, ಪುಟ ೬೬೪.
೧೫. ದೀನಬಂಧು H. ಸಿದ್ದಯ್ಯ
೧೬. ಬಸವಪ್ರಭೆ—ಮು. ಮಲ್ಲಪ್ಪ, ಜ್ಞಾನಮಂದಿರ, ಹಲಗೂರು
ಶಿವಾನುಭವ, ಸಂ. ೨೯– ಸಂ. ೧, ಪುಟ ೨೩.
೧೭. ರಾಮಲಿಂಗರೆಡ್ಡಿ, M.A.
೧೮. ಅಲ್ಲಮಪ್ರಭು ದೇವರು—ಜ್ಞಾನೋಪಾಸಕ, ಹಲಗೂರು
ಶಿವಾನುಭವ, ಸಂ. ೨೧, ಸಂ. ೧, ಪುಟ ೧೩೮.
೧೯. ಬೆಳ್ಳೂರು ಮೈಲಾರ ಶ್ರೀಕಂಠಯ್ಯ
೨೦. ಅಕ್ಕನ ಸಾಹಿತ್ಯದ ಸೊಬಗು—ಮು. ಮಲ್ಲಪ್ಪ, ಹಲಗೂರು
ಶಿವಾನುಭವ, ಸಂ. ೯೯, ಸಂ. ೩, ಪುಟ ೧೩೨.
೨೧. ಬಸವರಾಜದೇವರ ರಗಳೆ—ಪೀಠಿಕೆ, ಪುಟ XXIX, ತ. ಸು. ವೆಂಕಣ್ಣಯ್ಯ, M.A.
೨೨. ಜೀವದ ಜೀವಾಳ, ಪುಟ ೩೫, ಮು. ಮಲ್ಲಪ್ಪ
೨೩. ಜೀವನ ಚರಿತ್ರೆ—ಮು. ಮಲ್ಲಪ್ಪ, ಹಲಗೂರು
ಶಿವಾನುಭವ, ಸಂ. ೨೩, ಪುಟ ೭೭.
೨೪. ಬಸವೇಶ್ವರರ ವಚನಗಳು

---

## ಗ್ರಂಥಸಂಪಾದನಾ ದೃಷ್ಟಿಯಿಂದ

# ಅಕ್ಕಮಹದೇವಿಯ ಎರಡು ವಚನಗಳು

ಲೇಖಕರು: ಎಂ. ಚಂದ್ರಶೇಖರ್

ಕನ್ನಡ ಸಾಹಿತ್ಯದ ೧೨ನೇ ಶತಮಾನದಲ್ಲಿನ ವೀರಶೈವ ವಚನಕಾರರಲ್ಲಿ ಅಕ್ಕಮಹಾದೇವಿಗೆ ಮಿಗಿಲಾದ ಸ್ಥಾನವಿದೆ. ಅವಳ ವಚನಗಳಲ್ಲಿ ಕಾಣುವ ತೀವ್ರಾನುಭವ ಅಸಾಧಾರಣವಾದದ್ದು. ಅವಳ ವಚನಗಳನ್ನು-ಬೇರೆ ಕೆಲವು ವಚನಕಾರರದಂತೆ-ಒಂದೇ ವಚನ ಸಂಗ್ರಹದಲ್ಲಿ ಕಾಣಲು ಸಾಧ್ಯವಿಲ್ಲ. ಇದುವರೆಗಿನ ಅಚ್ಚಾದ ಅಕ್ಕಮಹಾದೇವಿ ವಚನಗಳೆಲ್ಲ ಬೇರೆ ಬೇರೆ ವಚನ ಸಂಗ್ರಹಗಳಿಂದ—ಓಲೆ ಗ್ರಂಥಗಳಿಂದ—ಆರಿಸಿದವು. ಅವುಗಳನ್ನೆಲ್ಲ ಸಂಗ್ರಾಹಕರು ಒಟ್ಟಿಗೆ ಸೇರಿಸಿ ಅಚ್ಚು ಹಾಕಿದ್ದಾರೆ. ಹೀಗೆ ಬೇರೆ ಬೇರೆ ಓಲೆ ಗ್ರಂಥಗಳಿಂದ ಆರಿಸಿ ಒಂದೆಡೆಗೆ ಸೇರಿಸುವಾಗ ಆಕೆಯ ವಚನಗಳು ಅನೇಕ ರೀತಿಯ ಬದಲಾವಣೆಯನ್ನು, ಮಾರ್ಪಾಟುಗಳನ್ನು ಪಡೆದಿರುವುದನ್ನು ಗುರುತಿಸಬಹುದು. ಕೆಲವು ಸಾರಿ ಒಂದೇ ವಚನವು ಅನೇಕ ಸಂಗ್ರಾಹಕರ ಕೈಯ್ಯಲ್ಲಿ ಸಿಕ್ಕು ಅನೇಕ ರೀತಿಯ ಮಾರ್ಪಾಡುಗಳನ್ನು ಪಡೆದಿರುವುದನ್ನು ಕಾಣಬಹುದು.

ಅಂಥ ಬದಲಾವಣೆ ಹೊಂದಿರುವ ಎರಡು ವಚನಗಳನ್ನು ಇಲ್ಲಿ ಪರಿಶೀಲಿಸೋಣ:

ದಿವಂಗತ ಡಾ|| ಹಳಕಟ್ಟಿ ಅವರು [1] ಅಚ್ಚು ಹಾಕಿಸಿರುವ ಅಕ್ಕಮಹದೇವಿಯ ವಚನಗಳ ಸಂಗ್ರಹದಲ್ಲಿ ಬರುವ ಒಂದು ವಚನ:

" ಇಂದ್ರನೀಲದ ಗಿರಿಯನೇರಿಕೊಂಡು
ಚಂದ್ರಕಾಂತದ ಶಿಲೆಯ*ನಪ್ಪಿಕೊಂಡು
ಕೊಂಬ ಬಾರಿಸುತ್ತ ಶಿವನೆ ನಿಮ್ಮ ನೆನೆವುತ್ತ
ಎಂದಿಪ್ಪೆನೊ, ಅಂಗಭಂಗ ಮನಭಂಗವಳಿದು
ನಿಮ್ಮನೆಂದಿಗೆ ನೆನೆವೆನಯ್ಯ ಚೆನ್ನಮಲ್ಲಿಕಾರ್ಜುನ|"

ಡಾ|| ಹಳಕಟ್ಟಿಯವರು ತಮ್ಮ ಆ ಸಂಗ್ರಹದಲ್ಲಿ " ತಮಗೆ ದೊರೆತ ೧೨ ವಚನ ಸಂಗ್ರಹಗಳೊಳಗಿನ ವಚನಗಳನ್ನು ಬೇರೆ ಬೇರೆ ತೆಗೆದು ಅವುಗಳನ್ನು ಈ ಗ್ರಂಥದಲ್ಲಿ ಸೇರ್ಪಡೆ ಮಾಡಿದ್ದಾಗಿದೆ" [2] ಎಂದಿದ್ದಾರೆ. ಅದೇ ಗ್ರಂಥ ಪುನಃ ಅನೇಕ ಆವೃತ್ತಿಗಳನ್ನು ಕಂಡಿದ್ದರೂ ಮೊದಲನೆಯ ಮುದ್ರಿತ ಪ್ರತಿ ಯಾವ ಬದಲಾವಣೆಯನ್ನೂ ಹೊಂದಿಲ್ಲ.

---

(೧) ಮಹಾದೇವಿಯಕ್ಕನವರ ವಚನಗಳು ೧ನೇ ಮುದ್ರಣ ೧೯೨೭ ಮತ್ತು ೨ನೇ ಮುದ್ರಣ ೧೯೩೦ ಮತ್ತು ಅನಂತರದ ಮುದ್ರಣಗಳೂ ಇವೆ.

(೨) ಮಹಾದೇವಿಯಕ್ಕನ ವಚನಗಳು ೧ನೇ ಆವೃತ್ತಿ, ಪ್ರಸ್ತಾವನೆ.

ಇದೇ ವಚನವನ್ನು ಬೇರೆ ಬೇರೆ ವಚನ ಸಂಗ್ರಹಗಳ ಓಲೆ ಗ್ರಂಥಗಳಲ್ಲಿಯೂ ನಾವು ಕಾಣಬಹುದು.

ಪ್ರೊ|| ಡಿ. ಎಲ್. ಎನ್. ಅವರ ಹತ್ತಿರವಿರುವ 'ವಚನಸಾರ'[೩] ಎಂಬ ಓಲೆ ಗ್ರಂಥದಲ್ಲಿ ಈ ವಚನ ಈ ರೀತಿಯಲ್ಲಿದೆ:

" ಇಂದ್ರನೀಲದ ಗಿರಿಗಳನೇರಿಕೊಂಡು
ಚಂದ್ರಶಿಲೆಗಳ ಮೆಟ್ಟಿಕೊಂಡು
ಕೊಂಬ ಬಾರಿಸುತ ಹರನೇ
ಎನ್ನ ಕುಂಭ ಕುಚದ ಮೇಲೆ
ನಿನ್ನವೆಂದಪ್ಪಿಕೊಬೆನಯ್ಯ
ಅಂಗ ಭಂಗ ಮನಭಂಗವಳಿದು
ನಿಮ್ಮನೆಂದಿಗೊಮ್ಮೆ ನೆರೆವೆನು ಚೆನ್ನಮಲ್ಲಿಕಾರ್ಜುನಾ | ೪ "

ವಚನಸಾರದಲ್ಲಿ ಅಕ್ಕಮಹದೇವಿಯ ವಚನಗಳು ಸುಮಾರು ೨೫-೩೦ ವಚನಗಳಿವೆ. ಅವೆಲ್ಲ ಒಂದೇ ಕಡೆ ಇಲ್ಲ. ಅಲ್ಲಲ್ಲಿ, ಬೇರೆ ವಚನಕಾರರ ವಚನಗಳ ಮಧ್ಯೆ ಬರುತ್ತವೆ.

ನನ್ನಲ್ಲಿರುವ ಬಹಳ ತ್ರುಟಿತವಾಗಿರುವ 'ವಚನಾರ್ಥ ಟೀಕೆ'[೫] ಎಂಬ ಒಂದು ಓಲೆ ಗ್ರಂಥದಲ್ಲಿಯೂ ಈ ವಚನವಿದೆ. ವಚನದಲ್ಲಿ ಮುಖ್ಯವಾದ ಯಾವ ವ್ಯತ್ಯಾಸಗಳೂ ಇಲ್ಲ. ವಚನದ ಕೊನೆಯಲ್ಲಿ ಬರುವ ಅಂಕಿತ 'ಚೆನ್ನಮಲ್ಲಿಕಾರ್ಜುನ' ಎಂಬುದಕ್ಕೆ ಬದಲಾಗಿ 'ಚೆನ್ನನ ಮಲ್ಲಿಕಾರ್ಜುನಾ' ಎಂದಿದೆ. ಕೇವಲ ಪ್ರತಿಕಾರನ ಕೈತಪ್ಪಿನ ದೋಷದಿಂದಾಗಿ ಒಂದು 'ನ' ವರ್ಣವು ಹೆಚ್ಚಾಗಿ ಬಿದ್ದಿವೆ. ಇಷ್ಟನ್ನು ಬಿಟ್ಟರೆ ಅರ್ಥವ್ಯತ್ಯಾಸವಾಗುವಂತಹ ಯಾವ ಬದಲಾವಣೆಯೂ ಇಲ್ಲ.

ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ನಾನು ನೋಡಿದ ಸುಮಾರು ೧೨ ಓಲೆ ಪ್ರತಿಗಳಲ್ಲಿ ಅಕ್ಕಮಹಾದೇವಿಯ ಬೇರೆ ವಚನಗಳು ಇದ್ದರೂ ಈ ವಚನವು ಸಿಗಲಿಲ್ಲ.[೬]

ಆದರೆ ಮದರಾಸಿನ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನಲ್ಲಿದ್ದ[೭] ಎರಡು ಓಲೆ ಗ್ರಂಥಗಳಲ್ಲೂ ಈ ವಚನ ಕಂಡುಬರುತ್ತದೆ. ಆ ಓಲೆ ಗ್ರಂಥಗಳಲ್ಲಿರುವ ವಚನ ಹೀಗಿದೆ:—

" ಇಂದ್ರನೀಲದ ಗಿರಿಗಳನೇರಿಕೊಂಡು
ಚಂದ್ರಕಾಂತದ ಶಿಲೆಗಳ ಮೆಟ್ಟಿಕೊಂಡು
ಬ ಬಾರಿಸುತಹರನೇ ಎನ್ನ
ಕುಂಭ ಮ್ಮವೆಂದರೀ ಕೊಂಬೆ

---

(೩) 'ವಚನಸಾರ' ದ ಕಾಲ ೧೬೬೧ ಇರಬೇಕೆಂದು ತೀ. ನಂ. ಶ್ರೀ ಹೇಳುತ್ತಾರೆ. 'ಕಾವ್ಯಸಮೀಕ್ಷೆ' ಪು. ೧೨೭ರ ಅಡಿ ಟಿಪ್ಪಣಿ.

(೪) 'ವಚನಸಾರ' ಓಲೆಗ್ರಂಥ. ವಚನ ಸಂಖ್ಯೆ ೨೬೧.

(೫) 'ವಚನಾರ್ಥ ಟೀಕೆ' ವಚನಗಳ ಸಂಗ್ರಹದ ಓಲೆ ಗ್ರಂಥವಚನದ ಸಂಖ್ಯೆ: ೯೮.

(೬) ಉಳಿದ ವಚನಗಳಿರುವ—ಅಕ್ಕಮಹದೇವಿಯವೂ—ಓಲೆ ಗ್ರಂಥಗಳನ್ನು ನೋಡಲಾಗಲಿಲ್ಲ.

(೭) ಈಗ ಮದರಾಸಿನಲ್ಲಿದ್ದ ಓಲೆ ಗ್ರಂಥಗಳನ್ನೆಲ್ಲ ಕನ್ನಡದ ಎರಡು ವಿಶ್ವವಿದ್ಯಾನಿಲಯಗಳಿಗೂ ಕಳಿಸಿರುವುದಾಗಿ ತಿಳಿದುಬಂದಿದೆ.

ನಯ್ಯ ಅಂಗ ಲಿಂಗ ಮನ ಭಂಗವಳಿದು
ನಿಮ್ಮ ಗೊಮ್ಮೆ ನೆರೆದೆನು ಚೆನ್ನ
ಮಲ್ಲಿಕಾರ್ಜುನಾ | ”

ಎಂದಿದೆ. ವಚನದ ಕೊನೆಯ ಭಾಗದಲ್ಲಿ ಕೆಲವು ಅಕ್ಷರಗಳು ಇರುವ ಓಲೆಯ ಭಾಗ ಹಾಳಾಗಿ ಹೋಗಿದೆ. ಅದೇ ಮದರಾಸು ವಿಶ್ವವಿದ್ಯಾನಿಲಯದ 'Descriptive Catalogue of Kannada manuscripts Vol. IV'ರಲ್ಲಿ ಈ ವಚನವನ್ನು ಓಲೆ ಪ್ರತಿಗಳಲ್ಲಿದ್ದಂತೆಯೇ ಉದ್ಧರಿಸಿದ್ದಾರೆ. ಇಲ್ಲಿ ಎಷ್ಟು ಅಕ್ಷರಗಳು–ವರ್ಣಗಳು-ಹೋಗಿರಬಹುದು ಎಂಬುದನ್ನೂ ಗುರುತಿಸಲು ಸಹಾಯವಾಗುವಂತಿದೆ.

“ ಇಂದ್ರನೀಲದ ಗಿರಿಗಳನೇರಿಕೊಂಡು
ಚಂದ್ರಕಾಂತದ ಶಿಲೆಗಳ ಮೆಟ್ಟಿಕೊಂಡು
●ಂಬ ಬಾರಿಸುತ ಹರನೇ ಎನ್ನ
ಕುಂಭ ● ● ● ಮೇಲೆ
● ವೆಂದರಿ ● ಕೊಂಬೆನಯ್ಯ
ಅಂಗ ಲಿಂಗ ಮನ ಭಂಗವಳಿದು ನಿಮ್ಮ
● ● ●ಗೊಮ್ಮೆ ನೆರೆದೆನು ಚೆನ್ನಮಲ್ಲಿಕಾರ್ಜುನಾ ” ೮

ಇಲ್ಲಿ ಲಿಪಿಗಳು ಪಾತವಾಗಿರುವ ಕಡೆಗಳಲ್ಲಿ ದಪ್ಪ ಚುಕ್ಕಿಗಳನ್ನು ತೋರಿಸಿ ಅಕ್ಷರಗಳ ಸಂಖ್ಯೆಗಳನ್ನು ನಿರ್ದೇಶಿಸಿದ್ದಾರೆ. ಎಷ್ಟೆಷ್ಟು ಅಕ್ಷರಗಳು ಲೋಪವಾಗಿರುವುವೋ ಅಷ್ಟಷ್ಟು ದಪ್ಪ ಚುಕ್ಕಿಗಳನ್ನು ಕೊಟ್ಟಿದ್ದಾರೆ.

ಮೈಸೂರು ಅರಮನೆಯ ಸರಸ್ವತೀ ಭಂಡಾರದಲ್ಲಿ ಇಟ್ಟಿರುವ ಒಂದು ಓಲೆ ಪ್ರತಿಯಲ್ಲೂ ಸಹ ಈ ವಚನವಿರದಿರುವುದು ಗಮನಾರ್ಹ ಸಂಗತಿ. ಸರಸ್ವತೀ ಭಂಡಾರದ ಓಲೆ ಪ್ರತಿ ಕೆಲವಲ್ಲಿ ಅಕ್ಕಮಹಾದೇವಿಯ ಬೇರೆ ವಚನಗಳು ಕೆಲವು ಸಿಗುತ್ತವೆ. ಆದರೆ ಈ ವಚನ ಸಿಗುವುದಿಲ್ಲ.

ಶಿವಮೊಗ್ಗ ಜಿಲ್ಲೆಯ ಓರೇಮಳಲಿ ಗ್ರಾಮದ ವೇ|| ರುದ್ರಯ್ಯನವರಲ್ಲಿರುವ ಒಂದು ಓಲೆ ಗ್ರಂಥದಲ್ಲಿ ವಚನಕಾರರ ವಚನಗಳಿದ್ದು ಅವುಗಳ ಮಧ್ಯೆ ಅಕ್ಕಮಹಾದೇವಿಯ ಈ ವಚನವೂ ಇದೆ.[೯] ವಚನವಿರುವ ಗರಿಯ ಕೊನೆಯ ಭಾಗವು ಮುರಿದುಹೋಗಿ ವಚನದ ಕೊನೆಯ ಸ್ವಲ್ಪ ಭಾಗ ನಷ್ಟವಾಗಿ ಹೋಗಿದೆ. ವಚನ ಹೀಗಿದೆ:

“ ಇಂದ್ರನೀಲದ ಗಿರಿಗಳ ಗಿರಿಗಳನೇರಿಕೊಂಡು ಚಂದ್ರ . . .
ಎನ್ನ ಕುಂಭಕುಚದ ಮೇಲೆ ನಿನ್ನನಪ್ಪಿಕೊಂಬೆ . . . ” ೧೦

ಉಳಿದ ವಚನದ ಭಾಗ ಲೋಪವಾಗಿ ಹೋಗಿದೆ. ಅಂಕಿತವೂ ಇಲ್ಲವಾಗಿದೆ. ಓಲೆ ಪ್ರತಿ ಬಹಳ ಶಿಥಿಲಗೊಂಡು ಜೀರ್ಣಾವಸ್ಥೆಯಲ್ಲಿದೆ.

---

(೮) ಮದರಾಸಿನ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ 'ವಚನ ಸಂಗ್ರಹ' ವಚನಗಳ ಸಂಖ್ಯೆ ೭೦೨ ಮತ್ತೊಂದು ಓಲೆ ಗ್ರಂಥದಲ್ಲಿ ಬರುವ ವಚನ ಸಂಖ್ಯೆ ೫೭೪.

(೯) 'ಪುರಾತನ ವಚನ ಸಂಗ್ರಹ' ಪ್ರತಿ ಬಹಳ ಜೀರ್ಣಾವಸ್ಥೆಯಲ್ಲಿದೆ. ಬಸವಣ್ಣ, ಅಲ್ಲಮ, ಮಡಿವಾಳ, ಚೆನ್ನಬಸವಣ್ಣ ಮುಂತಾದವರ ವಚನಗಳ ಮಧ್ಯೆ ಅಕ್ಕಮಹಾದೇವಿ ವಚನಗಳಿವೆ.

(೧೦) ವಚನದ ಸಂಖ್ಯೆ ೧೧೫. ಪ್ರತಿ ವಚನಕ್ಕೂ ಗದ್ಯದ ಟೀಕೆ ಇದೆ.

ಹೀಗೆ ಅಕ್ಕಮಹಾದೇವಿಯ ಈ ಒಂದೇ ಒಂದು ವಚನವು ನಾನು ನೋಡಿದ ಐದು ಕಡೆಗಳಲ್ಲೂ ಐದು ರೂಪ ತಾಳಿ, ಬೇರೆ ಬೇರೆ ಪಾಠಾಂತರಗಳನ್ನು ಹೊಂದಿರುವುದನ್ನು ಸುಲಭವಾಗಿ ಗುರುತಿಸಬಹುದು.

ನಾನು ನೋಡಿದ ಓಲೆ ಪ್ರತಿಗಳನ್ನೆಲ್ಲ ಐದು ಗುಂಪುಗಳನ್ನಾಗಿ ವಿಭಾಗಿಸಿ ನೋಡಬಹುದು:

ಡಾ|| ಹಳಕಟ್ಟಿಯವರ 'ಸಂಗ್ರಹ' ವನ್ನು H ಎಂದೂ ಕರೆಯೋಣ.

ಪ್ರೊ|| ಡಿ. ಎಲ್. ಎನ್. ರವರ 'ಸಂಗ್ರಹ' ವನ್ನು N ಎಂದೂ ಕರೆಯೋಣ.

ಹಿರೇ ಮಳಲಿ ರುದ್ರಯ್ಯನವರ 'ಸಂಗ್ರಹ' ವನ್ನು R ಎಂದೂ ಕರೆಯೋಣ.

ನನ್ನಲ್ಲಿ ಪ್ರತಿಯ 'ಸಂಗ್ರಹ' ವನ್ನು C ಎಂದೂ ಕರೆಯೋಣ.

ಮದರಾಸಿನ ಪ್ರತಿಗಳ 'ಸಂಗ್ರಹ' ವನ್ನು M ಎಂದೂ ಕರೆಯೋಣ.

N ಪ್ರತಿಯಲ್ಲಿರುವ ವಚನ ಮತ್ತು C ಪ್ರತಿಯಲ್ಲಿರುವ ವಚನಗಳಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲ ಪರಸ್ಪರ ಹೋಲುತ್ತವೆ. ಪ್ರತಿಕಾರ ಕೈತಪ್ಪಿನ ದೋಷವು ಗುರುತಿಸಿ ಸರಿಪಡಿಸಿಕೊಳ್ಳುವಂಥದ್ದು. M ಪ್ರತಿಗಳೂ N ಪ್ರತಿಯನ್ನೇ ಪೋಷಿಸಿ ಸಮರ್ಥಿಸುತ್ತವೆ. ಈ ಪ್ರತಿಗಳಲ್ಲಿ ಸಿಗದಿರುವ ಭಾಗಗಳನ್ನು N ಪ್ರತಿಯ ಸಹಾಯದಿಂದ ಓದಿಕೊಳ್ಳಬಹುದು. ಆದರೆ H ಪ್ರತಿಯೊಂದು ಮಾತ್ರ ಯಾವ ರೀತಿಯಲ್ಲಿಯೂ ಉಳಿದ N M C R ಪ್ರತಿಗಳಿಂದ ವ್ಯತ್ಯಾಸವಾಗಿಯೇ ನಿಲ್ಲುತ್ತದೆ. ಒಟ್ಟಿನಲ್ಲಿ N M C ಪ್ರತಿಗಳೂ R ಪ್ರತಿಯೂ ಒಂದು ಕಡೆಗೂ ಆದರೆ H ಪ್ರತಿಯೊಂದೇ (ಹಳಕಟ್ಟಿಯವರು ಆರಿಸಿದ ೧೨ ಓಲೆ ಗ್ರಂಥಗಳು) ಒಂದು ಕಡೆಗೂ ಸ್ಪಷ್ಟವಾಗಿ ನಿಲ್ಲುತ್ತವೆ. ಈಗ ಈ ಒಂದೇ ವಚನವನ್ನು N M C R H ಪ್ರತಿಗಳಲ್ಲಿ ನೋಡಿದೆವು. ಆದರೆ ಈ ಒಂದು ವಚನ ಆಧಾರದ ಮೇಲೆ ಓಲೆ ಪ್ರತಿಗಳ ಸಂಪ್ರದಾಯವನ್ನೋ ವಂಶವೃಕ್ಷವನ್ನೋ ಕಂಡು ಹಿಡಿಯಲು ಸಾಧ್ಯವೆ ನೋಡಬೇಕು. ಈ ಒಂದು ವಚನ ಆಗಿರುವ ಬದಲಾವಣೆಗಳನ್ನು ನೋಡಿ ಹೀಗೆ ರೇಖಾಚಿತ್ರದ ಮೂಲಕ ಓಲೆ ಪ್ರತಿಗಳು ಬೇರೆ ಬೇರೆ ಸಂಪ್ರದಾಯಕ್ಕೆ ಸೇರಿರಬೇಕೆಂದು ಗುರುತಿಸಬಹುದೆನಿಸುತ್ತದೆ. ಪೂರ್ಣ ವಚನದ ವಿವರಕ್ಕೆ ಹೋದರೆ ಬೇರೆ ಬೇರೆ ಸಂಪ್ರದಾಯಗಳನ್ನು ಗುರುತಿಸಬಹುದು. ಸ್ಥೂಲವಾಗಿ ಈ ವಚನವೊಂದರ ಅಭ್ಯಾಸದಿಂದ ಹೀಗೆ ಓಲೆ ಪ್ರತಿಗಳ ಸಂಪ್ರದಾಯವನ್ನು ಗುರುತಿಸಬಹುದು V ಎಂದರೆ ವಚನ ಎಂದಿಟ್ಟುಕೊಂಡರೆ




H = ೧೨ ಓಲೆ ಗ್ರಂಥಗಳು: ಹಳಕಟ್ಟಿ ಸಂಗ್ರಹ
M = ಮದರಾಸಿನ ೨ ಓಲೆ ಗ್ರಂಥಗಳು
M = Descriptive Catalouge of Kannada manuscript
N = ಡಿ. ಎಲ್. ಎನ್. ಪ್ರತಿ
C = ನನ್ನಲ್ಲಿರುವ ಪ್ರತಿ
R = ಹಿರೇಮಳಲಿ ರುದ್ರಯ್ಯನವರ ಪ್ರತಿ

ಇದೇ ವಚನವನ್ನು ಪುನಃ ಸೂಕ್ಷ್ಮವಾಗಿ ನೋಡಿದರೆ ಎರಡು ಮುಖ್ಯಾಂಶಗಳನ್ನು ಗಮನಿಸಬಹುದು. ವಚನದ ಕೊನೆಯ ಭಾಗದಲ್ಲಿ ಬರುವ:

ಚಂದ್ರಕಾಂತದ ಶಿಲೆಯ*ನಪ್ಪಿಕೊಂಡು . . . ಎಂಬ ಅಚ್ಚಾಗಿರುವ H ಪ್ರತಿಯಲ್ಲಿಯೂ ಉಳಿದ ಪ್ರತಿಗಳಾದ M N C ಗಳಲ್ಲಿಯೂ ಆ ಭಾಗ ಬೇರೆಯಾಗಿಯೇ ಇದೆ: "... ಹರನೇ

ಎನ್ನ ಕುಂಭ ಕುಚದ ಮೇಲೆ ನಿನ್ನವೆಂದಪ್ಪಿಕೊಂಬೆನಯ್ಯಾ ಎಂದಿದೆ" H ಪ್ರತಿಯಲ್ಲಿ ವಚ್ತನದ ಉತ್ತರಾರ್ಧ ಸಂಪೂರ್ಣವಾಗಿ ಬಿಟ್ಟುಹೋಗಿದೆ. ಕಾರಣ ಏನೆಂಬುದನ್ನು ಊಹಿಸಲಶಕ್ಯವೆನಿಸುತ್ತದೆ. ಡಾ|| ಹಳಕಟ್ಟಿಯವರು ತಮ್ಮ ಪ್ರಸ್ತಾವನೆಯಲ್ಲಿ ಹೇಳುವಂತೆ ಅವರು ಯಾವ ೧೨ ಪ್ರತಿಗಳಿಂದ ಅಕ್ಕಮಹಾದೇವಿಯ ವಚನಗಳನ್ನು ಆರಿಸಿದರು, ಆ ಪ್ರತಿಗಳೆಲ್ಲಿವೆ ಈಗಲೂ ಸಾಧ್ಯವಾದರೆ ಮೂಲವನ್ನೇ ಮತ್ತೊಮ್ಮೆ ನೋಡುವಂತಾಗಲು ಸಾಧ್ಯವೆ ಮುಂತಾದ ಹಲವಾರು ಸಂಶಯಗಳನ್ನು ಹಾಗೆಯೆ ಬಿಟ್ಟಿದ್ದಾರೆ. ಅವರು ಆರಿಸಿದ ಒಂದೊಂದು ವಚನಕ್ಕೂ ಆಕರಗಳನ್ನು ಸ್ಪಷ್ಟವಾಗಿ ನಿರ್ದೇಶಿಸಿದ್ದರೆ ಬಹಳ ಸಹಾಯವಾಗುತ್ತಿತ್ತು.

ಅದೇ ವಚನದ ಅದೇ ಭಾಗ R ಪ್ರತಿಯಲ್ಲಿರುವ "... ಎನ್ನ ಕುಂಭಕುಚದ ಮೇಲೆ ನಿನ್ನನಪ್ಪಿಕೊಂಬೆ..." ಎಂದು ಓದುತ್ತದೆ.

ಇಲ್ಲಿ – ಈ – ವಚನದ ಈ ಭಾಗದಲ್ಲಿ – R ಪ್ರತಿಯೊಂದೇ ಬೇರೆಯಾಗಿ ನಿಲ್ಲುತ್ತದೆ, M N C ಪ್ರತಿಗಳು ಬೇರೆಯಾಗುತ್ತವೆ. ಈಗ H ಪ್ರತಿಯನ್ನು ಬೇರೆ ಸಂಪ್ರದಾಯದ್ದೆಂದು ಗಣಿಸಿ ಬೇರೆಯಿಡಬಹುದೆಂದು ಕಾಣುತ್ತದೆ, M N C R ಗಳಲ್ಲೇ ಸಂಪ್ರದಾಯವನ್ನು ಗುರುತಿಸುವುದಾದರೆ— ಈ ವಚನದ ಅಭ್ಯಾಸದಿಂದ—ಆ ಸಂಪ್ರದಾಯವನ್ನು ಹೀಗೆ ಗುರುತಿಸಬಹುದು.




ಈಗ H N M C R ಗಳ ಮೂಲಕ ಪ್ರತಿಗಳು ಅನುಸರಿಸಿರಬಹುದಾದ ಜಾಡನ್ನು ಹೀಗೆ ಗುರುತಿಸಬಹುದು :




ಹೀಗೆ ವಚನದಲ್ಲಿರುವ ವ್ಯತ್ಯಾಸಗಳಿಂದ ಆ – ಆ ಓಲೆಗಳನ್ನು ಪ್ರತಿಮಾಡಲು ಯಾವ ಯಾವ ಸಂಪ್ರದಾಯದ ಪ್ರತಿಗಳು ಸಿಕ್ಕಿರಬೇಕೆಂಬುದನ್ನು ಹೇಳಬಹುದೆ ನೋಡಬೇಕು.

ಇಲ್ಲಿ N M C ಮತ್ತು R ಪ್ರತಿಗಳಲ್ಲಿರುವ ವ್ಯತ್ಯಾಸದಿಂದ ಅವು ಬೇರೆ ಬೇರೆ ಸಂಪ್ರದಾಯಕ್ಕೆ ಸೇರಿದವು ಎನ್ನಬಹುದೆ ಅಥವಾ ಓಲೆ ಪ್ರತಿಕಾರರ ಕೈತಪ್ಪಿನ ದೋಷವೆನ್ನಬಹುದೆ. ಇಲ್ಲಿ R ಪ್ರತಿಯಲ್ಲಿ ಬರುವ ನಿನ್ನನಪ್ಪಿ ಎಂಬ ಭಾಗ ನಿನ್ನವೆಂದಪ್ಪಿ ಎಂದು ಬರುವ M N C ಗಳಲ್ಲಿನ ಅರ್ಥಕ್ಕಿಂತ R ನ ಅರ್ಥಭಾವ ತೀವ್ರತೆಯನ್ನು ಅರ್ಥಪುಷ್ಟಿಯನ್ನು ಕೊಡುತ್ತದೆಯಲ್ಲವೆ ?

ಈಗ ನಮಗೆ ದೊರೆತ ಪ್ರತಿಗಳ ಸಹಾಯದಿಂದ ಒಂದೇ ಒಂದು ವಚನದ ಅಭ್ಯಾಸದಿಂದ H N M C R ಪ್ರತಿಗಳನ್ನು ಬೇರೆ ಬೇರೆ ಮಾಡಲು ಸಾಧ್ಯವಾಯಿತು.

ಹೀಗೆ ಗ್ರಂಥಸಂಪಾದನಾ ಶಾಸ್ತ್ರದಲ್ಲಿ-ಓಲೆ ಪ್ರತಿಗಳ ಮೂಲವನ್ನು ಹುಡುಕುವ ಕಾರ್ಯದಲ್ಲಿ ಇಂಥ ಅನೇಕ ಅಂಶಗಳು ಸಹಾಯಕ್ಕೆ ಬರುತ್ತವೆ ಎಂಬುದನ್ನು ಗಮನಿಸಬೇಕು. ವಂಶವೃಕ್ಷದ

ಅಭ್ಯಾಸಕ್ಕೆ ತೊಡಗಿದಾಗ ಬರೀ ಒಂದು ವಚನದ ಅಭ್ಯಾಸಮಾತ್ರದಿಂದಲೇ ಓಲೆಗಳ ಸಂಪ್ರದಾಯವನ್ನಾಗಲೀ, ವಂಶವೃಕ್ಷವನ್ನಾಗಲೀ ನಿರ್ಣಯಿಸಲಸಾಧ್ಯ. ಓಲೆಯ ಗ್ರಂಥದ ಕಾಲ ಓಲೆಯ ಬಾಹ್ಯ ಆಂತರಿಕ ಸ್ವರೂಪ, ಲಿಪಿಗಳ ಸ್ವರೂಪ ಓಲೆಯಲ್ಲಿರುವ ಸಾಹಿತ್ಯವೆಲ್ಲದರ-ರೂಪ, ಪದ, ಪದಪುಂಜ, ಮುಂತಾದವುಗಳ ಆಳ ಅಭ್ಯಾಸ ಅಗತ್ಯ-ವ್ಯಾಕರಣಾಂಶ ಮುಖ್ಯವಾದದ್ದು. ಅವೆಲ್ಲಕ್ಕಿಂತ ಸಂಪಾದಕನ ತಾಳ್ಮೆ ಜಾಗರೂಕತೆ ಹೀಗೆ ಅನೇಕ ಅಂಶಗಳ ಜೊತೆಗೆ ಹೀಗೆ ಒಂದೊಂದೇ ವಚನಗಳ ಅಧ್ಯಯನದಿಂದಲೂ ಓಲೆಗಳ ವಂಶವೃಕ್ಷ-ಸಂಪ್ರದಾಯಗಳನ್ನು ಕಂಡುಹಿಡಿಯುವುದರಲ್ಲಿ ಸಹಾಯಕವಾಗುತ್ತದೆ. ಈಗ ಅಕ್ಕಮಹಾದೇವಿಯ ಮತ್ತೊಂದು ವಚನವನ್ನು ನೋಡೋಣ :

" ಊರ ಸಿರಿಗೆ ಅಸಗ ತಡಬಡಗೊಂಬಂತೆ
ಹೊನ್ನೆನ್ನದು ಹೆಣ್ಣೆನ್ನದೆಂದು
ನೆನನೆನೆದು ನಿಮ್ಮನಱಿಯದ ಕಾರಣ
ಕೆಮ್ಮನೆ ಕೆಟ್ಟೆನಯ್ಯ ಚೆನ್ನಮಲ್ಲಿಕಾರ್ಜುನಾ "

ಮೈಸೂರು ಅರಮನೆಯ ಸರಸ್ವತೀ ಭಂಡಾರದಲ್ಲಿ ೧೩೩೪ ಮತ್ತು ೧೧೬ನೇ ನಂಬರಿನ ಓಲೆ ಸಂಗ್ರಹಗಳಲ್ಲಿ ಬರುತ್ತದೆ ಮತ್ತು " ಚೆನ್ನಬಸವ ದೇವರು ನಿರೂಪಿಸಿದ ಆಚರಣೆಯ ವಚನಗಳು " ಎಂಬ ಸಂಗ್ರಹದ ವಚನಗಳಲ್ಲಿಯೂ ೧೪ನೆಯ ವಚನವಾಗಿ ಉದ್ಧೃತವಾಗಿ ಮೇಲೆ ನಿರೂಪಿಸಿದಂತಿದೆ.

ಆದರೆ ಡಾ|| ಹಳಕಟ್ಟಿಯವರ ಸಂಗ್ರಹದಲ್ಲಿ ಇದೇ ವಚನವು—

" ಊರ ಸೀರೆಗೆ ಅಗಸ ತಡಬಡಗೊಂಬಂತೆ
ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದಂದು*
ನೆನನೆನದು ನಿಮ್ಮನಱಿಯದ ಕಾರಣ
ಕೆಮ್ಮನೆ ಕೆಟ್ಟೆನಯ್ಯ ಚೆನ್ನಮಲ್ಲಿಕಾರ್ಜುನಾ "

ಎಂದಿದೆ.

ಶಿವಮೊಗ್ಗ ಜಿಲ್ಲೆ ಹಿರೇಮಳಲಿ ರುದ್ರಯ್ಯನವರ ಪ್ರತಿಯಲ್ಲಿ —

" ಊರ ಸಿರಿಗೆ ಅಸಗ ತಡಬಡಗೊಂಬಂತೆ
ಹೊನ್ನೆನ್ನದು ಮಣ್ಣೆನ್ನದೆಂದು ನೆನೆನೆನೆದು . . . . . ಯ್ಯ "

ಎಂದೂ ವಚನಪೂರ್ತಿ ಯಥಾರೀತಿಯಲ್ಲಿ ಓದುತ್ತದೆ.

ಹಿರೇಮಳಲಿ ಪ್ರತಿಯಲ್ಲಿ ಸರಸ್ವತೀ ಭಂಡಾರದ ಪ್ರತಿಗಳಲ್ಲಿರುವಂತೆ ಹೆಣ್ಣೆನ್ನದು ಎಂಬ ಅಂಶ ಇಲ್ಲ. ಬರೀ ಹೊನ್ನೆನ್ನದು ಮಣ್ಣೆನ್ನದು ಎಂದಿದೆ. ಮುಂದೆ ಪ್ರತಿಮಾಡಿದವರು ಹೊನ್ನು ಮಣ್ಣಿನ ಜೊತೆಗೆ ಹೆಣ್ಣನ್ನು ಸೇರಿಸಿ ' ಹೊನ್ನು ಮಣ್ಣು ಹೆಣ್ಣು ' ಎಂದು ಮಾಡಿರಬಹುದು. ಪ್ರೊ. ತೀ. ನಂ. ಶ್ರೀ ಯವರು ಸೂಚಿಸುವಂತೆ[೧೧] ಹೆಣ್ಣೇ ಆದ ಅಕ್ಕಮಹದೇವಿ ಹೆಣ್ಣೆಂದಿರಲಾರಳು. ಮುಂದಿನ ಪ್ರತಿಕಾರರ ಕೈತಪ್ಪು ಮನಸ್ಸಿನ ಮರವೆಯಿಂದ ತಪ್ಪಿನ ಪರಿಣಾಮವಾಗಿ ಹೊನ್ನು ಮಣ್ಣಿನ ಜೊತೆಗೆ ಹೆಣ್ಣನ್ನು ಕಾಣುತ್ತೇವೆ.

* ಮಹದೇವಿಯಕ್ಕನ ವಚನಗಳು. ವಚನ ೬. ಪುಟ ೩.

(೧೧) ಕಾವ್ಯಸಮೀಕ್ಷೆ. ಪುಟ ೧೨೪ ಅಡಿ ಟಿಪ್ಪಣಿಯನ್ನು ನೋಡಿ.

ಇಲ್ಲಿನ ಅಗಸ*-ಅಸಗ ರೂಪಗಳನ್ನು ಗಮನಿಸಿದರೆ ಅಸಗ ಹಿಂದಿನ ರೂಪವನ್ನು ತೋರಿಸುತ್ತದೆ. ಈ ಪ್ರಾಚೀನ ರೂಪವಾದ ಅಸಗ ಸರಸ್ವತೀ ಭಂಡಾರದ ೧೩೩೪ನೇ ಓಲೆಯಲ್ಲೂ ಇದೆ. ಬಹಳ ಕಡೆ ಅಗಸ ಎಂಬ ಅರ್ವಾಚೀನ ರೂಪವೂ ಸಿಗುತ್ತದೆ. ಆದ್ದರಿಂದ ಒಂದು ಓಲೆ ಗ್ರಂಥದ ಪ್ರಾಚೀನತೆ ಕಂಡುಹಿಡಿಯಲು ಇಂಥ ಅನೇಕ ಸಾಕ್ಷ್ಯಾಧಾರಗಳು ಬೇಕು.

ಹಳಕಟ್ಟಿಯವರ ಗ್ರಂಥದಲ್ಲಿ 'ಊರ ಸೀರೆಗೆ' ಎಂದಿದೆ. ಇಲ್ಲಿ ಅಗಸ ರೂಪವನ್ನು ನೋಡಿ ಸಿರಿಗೆ ಎಂಬುದನ್ನು ಸೀರೆ ಮಾಡಿದರೋ ಪ್ರತಿಕಾರರದ್ದೋ ತಪ್ಪೋ ತಿಳಿಯದು. ಏಕೆಂದರೆ ಹಳಕಟ್ಟಿಯವರು ಅಜ್ಞಾತವಾದ ೧೨ ಗ್ರಂಥಗಳಿಂದ ಸಂಗ್ರಹಿಸಿದ ವಚನಗಳಿವು.

ಹೀಗೆ ಒಂದೊಂದು ಪದದ ಪ್ರಾಚೀನತೆಯ ದೃಷ್ಟಿಯಿಂದಲೂ ಆಯಾ ಓಲೆ ಪ್ರತಿಯ ಪ್ರಾಚೀನತೆಯನ್ನು ಕಂಡುಹಿಡಿಯಬಹುದು.

ಪ್ರಾಚೀನ ರೂಪಗಳು ಅರ್ವಾಚೀನ ರೂಪಗಳು ಸಿಕ್ಕು ಕನ್ನಡ ಮಾರ್ಪಾಡಾಗುತ್ತಿದ್ದ- ಹಳಗನ್ನಡದಿಂದ ಹೊಸಗನ್ನಡಕ್ಕೆ- ಎಂದು ತಿಳಿಯಬಹುದಲ್ಲವೆ ?

ಓಲೆ ಪ್ರತಿಗಳಲ್ಲಿ ಇತ್ತೀಚಿನ ಪ್ರತಿಗಳು ಯಾವುವು ಪ್ರಾಚೀನ ಪ್ರತಿಗಳು ಯಾವುವೆಂಬುದನ್ನು ಹೀಗೆ ಅಭ್ಯಾಸ ನಡೆಸಿದರೆ ಸ್ಥಾಪಿಸಬಹುದೆನಿಸುತ್ತೆ.

ಹೀಗೆ ಒಂದೊಂದು ವಚನವನ್ನೂ ಎಲ್ಲ ಪ್ರತಿಗಳ ಸಹಾಯದಿಂದ ಅಭ್ಯಾಸಮಾಡಿದಾಗ ಮತ್ತು ವಚನಗಳಲ್ಲಿ ಬರುವ ಪ್ರಾಚೀನ ರೂಪಗಳ ಅಭ್ಯಾಸ ನಡೆಸಿದಾಗ-ಅಕ್ಕಮಹದೇವಿಯ ವಚನಗಳನ್ನು ಸಂಶೋಧಿಸಿ ವಚನ ವಚನಕ್ಕೂ ಆಕರಕೊಟ್ಟು, ಒಂದೊಂದು ವಚನಕ್ಕೂ ವ್ಯತ್ಯಾಸ ನೋಡಿ ಎಲ್ಲ ಪ್ರತಿಗಳ ಪರಿಶೋಧನೆ ನಡೆಸಿ ಅಕ್ಕಮಹದೇವಿಯ ಶುದ್ಧ ಶಾಸ್ತ್ರಬದ್ಧವಾದ ವಚನ ಸಂಗ್ರಹವನ್ನು ಕೊಡಬೇಕು.

* ಮೈಸೂರು ವಿಶ್ವವಿದ್ಯಾಲಯದ ಸಂಶೋಧನಾಲಯದ K ೭೫ 'ಆಚರಣೆಯ ವಚನಗಳು' ಇಲ್ಲಿ 'ಅಸಗ' ರೂಪ ಸಿಗುತ್ತೆ. ಆದರೆ 'ಹೆಣ್ಣೆನ್ನದು' ಎಂಬ ಮಾತೂ ಬರುತ್ತೆ. ಹೀಗೆ 'ಹೆಣ್ಣೆನ್ನದು' ರೂಪ ಬರುವ-ಬಾರದ ಸಂಗ್ರಹಗಳನ್ನು ಬೇರೆ ಬೇರೆ ಮಾಡಿಟ್ಟು ಅಭ್ಯಾಸಮಾಡಿದಾಗ ಯಾವುದು ಪ್ರಾಚೀನ, ಇತ್ತೀಚಿನದು ಯಾವುದು ಎಂಬುದನ್ನು ಕಂಡುಹಿಡಿಯಲು ಸಾಧ್ಯವೆಂದು ಕಾಣುತ್ತದೆ.

# ಪದ್ಯರಚನೆಯ ರಹಸ್ಯ

## ಲೇಖಕರು : ಟಿ. ಕೇಶವಭಟ್ಟ

ಪದ್ಯವನ್ನು ಓಂದಿನವರು ಪದ್ಯಕಾವ್ಯವೆಂಬ ಅರ್ಥದಲ್ಲಿ ಪ್ರಯೋಗಿಸಿರುವಂತೆ ತೋರುತ್ತದೆ. ಅದರ ಬಾಹ್ಯಾಂತಃ ಸ್ವರೂಪ, ಪ್ರಯೋಜನ, ರಚನೆಗೆ ಕಾರಣ-ಮುಂತಾದ ಅಂಶಗಳನ್ನು ಕವಿರಾಜ ಮಾರ್ಗವು ಹೀಗೆ ಸ್ಪಷ್ಟೀಕರಿಸಿದೆ—

"ಪದ್ಯಂ ಸಮಸ್ತ ಜನತಾ
ಹೃದ್ಯಂ ಪದ-ವಿದಿತ-ಪಾದ-ನಿಯಮ-ನಿವೇದ್ಯಂ ॥
ವಿದ್ಯಾಪಾರ ಪರಾಯಣ
ಮಾದ್ಯಂ ಸದ್ವೃತ್ತಿ ವೃತ್ತ ಜಾತ್ಯಾಯತ್ತಂ ॥"

ಸಮಸ್ತ ಜನರಿಗೂ ಹೃದ್ಯವೆನಿಸುವುದು ಪದ್ಯವೆಂದು ಇಲ್ಲಿ ಅದರ ಪರಿಣಾಮವನ್ನು ಅಥವಾ ಪ್ರಯೋಜನವನ್ನು ಮೊದಲಾಗಿ ತಿಳಿಸಿದಂತಾಗಿದೆ; ಪದ್ಯವು ನಾದಾತ್ಮಕವಾಗಿಯೂ ಸಾಹಿತ್ಯಾತ್ಮಕ ವಾಗಿಯೂ ಇರುವುದರಿಂದ ಪಂಡಿತ-ಪಾಮರರೆಲ್ಲರಿಗೂ ಹೃದ್ಯವೆನಿಸಬಲ್ಲುದು. ಪದಗಳಿಂದ ಪ್ರಸಿದ್ಧವಾದ ಪಾದಗಳ ನಿಯಮದಿಂದ ಗ್ರಾಹ್ಯವಾಗುವಂಥದು-ಹೀಗೆಂದದು ಪದ್ಯದ ಬಾಹ್ಯ ಸ್ವರೂಪ ವಿವರಣೆ. ಅದು ವಿದ್ಯೆಯ ಪಾದ-ಪರಾಯಣತೆಯನ್ನುಳ್ಳುದು-ಅಂದರೆ, ಪರಿಪೂರ್ಣ ವಿದ್ಯೆಯ ಪರಿಣಾಮದಿಂದ ಹೊಮ್ಮುವಂಥದು-ಹೀಗೆಂದುದು ಪದ್ಯರಚನೆಗೆ ಕಾರಣವನ್ನು ತಿಳಿಸಿ ದಂತಾಗುವುದು. ಪದ್ಯವನ್ನು 'ಆದ್ಯಂ' ಎಂದುದು ಪ್ರಾಚೀನತೆಯ ಸೂಚನೆ; ಸಾಹಿತ್ಯದ ಪ್ರಾರಂಭ ರೂಪವು ಪದ್ಯಾತ್ಮಕವೆಂದೇ ಸಂಶೋಧಕರ ಅಭಿಪ್ರಾಯವಿದೆ. ಈ ರಸವಿಶೇಷ ಅಭಿಪ್ರಾಯವನ್ನಿದು ಪುಷ್ಟೀಕರಿಸಿದೆ. ಸದ್ವೃತ್ತಿಯಿಂದ ಅಂದರೆ, ಪ್ರತಿಪಾದಕ ಸಂದರ್ಭ ವಿಶೇಷಗಳಿಂದ ಕೂಡಿರುವುದು. ವೃತ್ತ-ಜಾತಿ, ಅರ್ಥಾತ್ ಅಕ್ಷರಗಣ-ಮಾತ್ರಾ ಗಣನಿಬದ್ಧ ವಾದ ರಚನೆಗಳಿಂದ ಕೂಡಿದುದು-ಹೀಗೆ ಈ ಕಂದ ಪದ್ಯದಲ್ಲಿ ಪದ್ಯಕಾವ್ಯಲಕ್ಷಣಗಳಾದ ಅರ್ಥ, ಅಲಂಕಾರ, ರಸಾತ್ಮಕತೆ, ಛಂದೋಯುಕ್ತತೆ - ಮುಂತಾದವನ್ನು ನಿರೂಪಣೆ ಮಾಡಲಾಗಿದೆ.

ಪದ್ಯರಚನೆಯಲ್ಲಿ ಪ್ರಾಸಬದ್ಧತೆಯನ್ನು ಉತ್ತಮ ಕವಿತಾ ಶಕ್ತಿಯ ಲಕ್ಷಣವೆಂದು ಕನ್ನಡ ಕವಿಲಾಕ್ಷಣಿಕರು ಮಾನ್ಯ ಮಾಡಿದ್ದಾರೆ. "ಕನ್ನಡಕ್ಕೆ ಸತತಂ ಪ್ರಾಸಂ" ಎಂದು ಕವಿರಾಜ ಮಾರ್ಗಕಾರನೂ "ಉಸಿರಟ್ಟಿದ ತನುವವೋಲ್ ಭಾವಿಸಲು ಪ್ರಾಸಿಲ್ಲದಿರ್ಪ ಪದ ಪದ್ಯಂಗಳ್" ಎಂದು ಕವಿ ಜಿಹ್ವಾಬಂಧನಕಾರನೂ "ಪ್ರಾಸಿಲ್ಲದಕ್ಕರವ ತಾಸು ಹಾಡಿದರೇನು? ಸಾಸಿವೆ ಸುಣ್ಣ ಹದ ಮಾಡಿ ಕಣ್ಣಿಂಗೆ ಪೂಸಿಕೊಂಡಂತೆ" ಎಂದು ಸರ್ವಜ್ಞನೂ ಹೇಳಿ, ಅದರ ಹಿರಿಮೆಯನ್ನು ಘೋಷಿಸಿದ್ದಾರೆ. ಆಂಗ್ಲ ವಿದ್ವಾಂಸರೂ ಪ್ರಾಸಕ್ಕೆ ಮಹತ್ವವಿತ್ತಿದ್ದಾರೆ:

When a poet rhymes well, he has mastered his medium thoroughly (Arthur Melville clark-studies in Literary Modes, page 176).

ಪದ್ಯಗಳನ್ನು ರಚನಾದೃಷ್ಟಿಯಿಂದ ಮೂರು ವಿಧವಾಗಿ ಪರಿಗಣಿಸಬಹುದು; ೧) ಸ್ವತಂತ್ರ, ೨) ಅನುಕರಣ, ೩) ಅನುವಾದ.

ಕವಿ ತನ್ನ ಸಂಸ್ಕಾರಾನುಗುಣವಾಗಿ ಭಾವಿಸಿದ ವಿಚಾರಗಳನ್ನು ಸ್ವಪ್ರತಿಭೆಯಿಂದ ತನ್ನ ಪರಿಣತಿಗನುಗುಣವಾದ ಪದ್ಯದಲ್ಲಿ ಪ್ರಕಟಪಡಿಸಿದಾಗ ಅದು ಸ್ವತಂತ್ರಪದ್ಯವೆನಿಸುವುದು. ಇತರ ಕವಿಗಳ ವಿಚಾರದಿಂದ ಪ್ರೇರಿತನಾಗಿ ಆ ವಿಚಾರಗಳನ್ನೊಳಕೊಳ್ಳಲು, ತನ್ನಲ್ಲಿ ಮೂಡಿದ ನವೀನ ವಿಚಾರಗಳನ್ನು ಕೂಡಿಸಿ ಪದ್ಯ ರಚಿಸಿದಾಗ, ಅದು ಅನುಕರಣವೆನಿಸುವುದು. ಅನ್ಯಕವಿಗಳ ಗದ್ಯ ಪದ್ಯಗಳನ್ನು ಯಥಾರೀತಿ ತನ್ನ ಪದ್ಯಕ್ಕೆ ರೂಪಾಂತರಿಸಿದಾಗ ಅದು ಅನುವಾದವೆನಿಸುವುದು. ಸ್ವತಂತ್ರಕವಿಗಳು ಲೋಕಪ್ರಸಿದ್ಧವಾದ ಅಥವಾ ಪೂರ್ವಕವಿ ಪ್ರಣೀತವಾದ ಕಥಾವಸ್ತುವನ್ನಾಯ್ದು, ಕಾವ್ಯಕ್ಕೆ ಕಳೆಬರುವಂತೆ ಕಥೆ, ಪಾತ್ರ, ನಿರೂಪಣಾಕ್ರಮಗಳನ್ನು ತಮ್ಮ ಪ್ರತಿಭೆಯ ಮೂಸೆಯಲ್ಲಿಟ್ಟು, ಮಾರ್ಪಡಿಸಿ ಪದ್ಯರಚನೆ ಮಾಡಿದರು. ಇಂಥವರ ಪದ್ಯಗಳಲ್ಲಿಯೂ ತಮ್ಮ ಪೂರ್ವ ಕಾವ್ಯಾಭ್ಯಾಸದ ಪರಿಣಾಮವಾಗಿ ಅನ್ಯರ ಕೆಲವು ಪದ-ಅರ್ಥ-ಭಾವಗಳು ಬಂದಿವೆ. ಕಾವ್ಯ ಸಮಾಧಿಯಲ್ಲಿರುವ ಕವಿಗೆ ತನ್ನ ರಚನೆಯ ಮುಂದೋಟದಲ್ಲಿ ತನಗೆ ತಿಳಿಯದಂತೆಯೆ ಪೂರ್ವ ಕವಿಗಳ ವಾಕ್ಪ್ರಯೋಗಗಳು ಬರಲು ಸಾಧ್ಯವಿದೆ. ಇದನ್ನೇ ರಾಘವಾಂಕಕವಿ "ಪರೋಕ್ತಿಗಳ ಅರ್ಥಮುಂ ಕಳುವುದು ಅಧಮುತನ" ವೆಂದವನೇ "ಬಗೆವೆರಸಿ ಸಂದಷ್ಟವಾದಡೆ ಅರಿಯೆಂ" ಎಂದು ಕೊಂಡಿದ್ದಾನೆ. ರಸಾವೇಶಪಡೆಯಲ್ಲಿ ತಾನಾಗಿ ಅನ್ಯರ ಪ್ರಯೋಗಗಳು ಬರಲು ಸಾಧ್ಯವೆಂದೊಪ್ಪಿದ್ದಾನೆ.

ಕನ್ನಡದಲ್ಲಿ ಅನುವಾದಕವಿಗಳು ಹಲವರಿದ್ದಾರೆ. ನಾಗವರ್ಮನ ಕಾದಂಬರಿ, ಚಾಂಡರಸನ ದಶಕುಮಾರ ಚರಿತೆ, ಸಿಂಗರಾರ್ಯನ ಮಿತ್ರವಿಂದಾ ಗೋವಿಂದ ನಾಟಕ-ಇತ್ಯಾದಿಗಳು ಅನುವಾದಗಳೆನಿಸಿವೆ. ಪೊನ್ನ-ರನ್ನ-ಅಭಿನವಪಂಪಾದಿಗಳ ಕಾವ್ಯ ಪದ್ಯಗಳಲ್ಲಿ ಸ್ವತಂತ್ರವೆನಿಸುವ ಅಂಶಗಳು ಹೆಚ್ಚಾಗಿದ್ದರೂ ಅಲ್ಲಲ್ಲಿ ಅನುಕರಣ-ಅನುವಾದಗಳೆರಡೂ ಗೋಚರಿಸುತ್ತವೆ. ಪ್ರತಿಭಾನ್ವಿತ ಕವಿ ಮಾಡಿದ ಅನುವಾದಪದ್ಯವು ಸ್ವತಂತ್ರವೆನಿಸುವಷ್ಟು ಭಾವಪೂರ್ಣವಾಗಿ ಉಕ್ತಿವೈಚಿತ್ರ್ಯವು ತುಂಬುತ್ತದೆ. ಪೂರ್ವ ಕವಿಗಳ ಕಾವ್ಯ ಪದ್ಯಗಳಲ್ಲಿ ಇಂತಹ ಅನುವಾದಕ್ಕೆ ಉದಾಹರಣೆಗಳು ದೊರೆಯುತ್ತವೆ. ಸದ್ಯಃ ಸ್ವೀಕೀಯವಾದ ಎರಡು ಅನುವಾದಗಳ ಉದಾಹರಣವನ್ನಿಲ್ಲಿ ಕೊಡಬಹುದು. ಮೊದಲನೆಯದು ಸಂಸ್ಕೃತ ವೃತ್ತವೊಂದರ ಅನುವಾದ.

ಶಾ : ವಿಕ್ರೀಡಿತ ||

"ಶ್ಲೇಷೇ ಕಾಚನ ಶಬ್ದಗುಂಫವಿಷಯೇ ಕೇಚಿದ್ರಸೇ ಚಾಪರೇऽ
ಲಂಕಾರೇ ಕತಿಚಿತ್ ಸದರ್ಥ ವಿಷಯೇ ಚಾನ್ಯೇ ಕಥಾವರ್ಣನೇ ||
ಆಃ ಸರ್ವತ್ರಗಭೀರ ಧೀರ ಕವಿತಾ ವಿಂಧ್ಯಾಟವೀ ಚಾತುರೀ
ಸಂಚಾರೀ ಕವಿಕುಂಭಿ ಕುಂಭ ಭಿದುರೋ ಬಾಣಸ್ತು ಪಂಚಾನನಃ ||"

ಇದರ ಕನ್ನಡದ ಅನುವಾದ-ಮತ್ತೇಭವಿಕ್ರೀಡಿತದಲ್ಲಿ-

"ಕೆಲಬರ್ ಶ್ಲೇಷದೆ, ಶಬ್ದಗುಂಫದೆ, ರಸಶ್ರೀಯೊಳ್, ಕಥಾವರ್ಣನಾ
ವಳಿಯೊಳ್, ಚಾರು ಸದರ್ಥದೊಳ್, ಪಿರಿದಲಂಕಾರಂಗಳಲ್ಲೆಯ್ದಲೇಂ |
ಸಲೆ ಸರ್ವತ್ರ ಗಭೀರಧೀರ ಕವಿತಾ ವಿಂಧ್ಯಾವಿಹಾರೀ ಕವೀಂ
ದ್ರಲಲಾಮ ದ್ವಿಪಕುಂಭ ಭೇದಕನೆ ಬಾಣಂ ತಾನೆ ಪಂಚಾನನಂ ||"

ಇಲ್ಲಿ ವೃತ್ತವನ್ನು ಇನ್ನೊಂದು ವೃತ್ತಕ್ಕೆ ತಿರುಗಿಸಲಾಗಿದೆ. ವಚನವೊಂದನ್ನು ವೃತ್ತಕ್ಕೆ ಮಾರ್ಪಡಿಸಿದ ಉದಾಹರಣೆ ಈ ಕೆಳಗಿನದು—

ವಚನ ||

> " ಕಳಬೇಡ, ಕೊಲಬೇಡ ಹುಸಿಯ ನುಡಿಯಲು ಬೇಡ
> ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ,
> ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ
> ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
> ಇದೇ ನಮ್ಮ ಕೂಡಲಸಂಗಮದೇವನನೊಲಿಸುವ ಪರಿ । "

ವೃತ್ತ|| (ಮ. ವಿ.)

> "ಕಳವಂ ಮಾಡದಿರೆಂದಿಗಂ ಕೊಲದಿರಾ ಮಿಥ್ಯೋಕ್ತಿ ನೀನಾಡದಿರ್
> ಮುಳಿಸಂ ಬೀರದಿರನ್ಯರೊಳ್ ಸಹನೆಯಿಂದಿರ್, ತನ್ನ ಕೊಂಡಾಡದಿರ್,
> ಪಳಿಯಲ್ವೇಡಿತರರ್ಕಳನ್ನಿದುವೆ ಅಂತರ್ಬಾಹ್ಯ ಸಂಶುದ್ಧಿ ಮೇಣ್
> ತಿಳಿ ನೀಂ ಕೂಡಲ ಸಂಗದೇವನನೊಲಿಪ್ಪಾಪಾಂಗಿದೆಂದೆಂಬುದಂ || "

## ಪದ್ಯರಚನೆಯ ಅಭ್ಯಾಸ

ಕವಿತೆಗೆ (ಪದ್ಯರಚನೆಗೆ) ಕಾರಣಗಳು ಪ್ರತಿಭೆ, ಕಾವ್ಯಪರಿಚಯ ವಿದ್ವತ್ಸೇವೆ,ಅಭ್ಯಾಸ-ಎಂಬೀ ನಾಲ್ಕೆಂದು ಪರಿಗಣಿತವಾಗಿವೆ. ಇವುಗಳಲ್ಲಿ ಅಭ್ಯಾಸವೂ ಇತರವುಗಳಷ್ಟೇ ಮುಖ್ಯ. "ಆಲಸ್ಯ ಮನುಳಿದೆಸಪುದ್ಯೋಗಮಭ್ಯಾಸಕರ್ಮಂ "-ಆಲಸ್ಯಗೊಳ್ಳದೆ ರಚನೆಯಲ್ಲಿ ಪ್ರವೃತ್ತವಾಗುವುದೇ ಅಭ್ಯಾಸವೆನಿಸುವುದು. ಹೀಗಿದ್ದರೂ ಪದ್ಯರಚನೆಗೆ ಅಭ್ಯಾಸ ಮಾಡಲು ದಾರಿಯಾವುದು ? ಎಂಬ ಪ್ರಶ್ನೆ ಹಾಗೆಯೇ ಉಳಿಯುವುದು. ಯಾವುದಾದರೊಂದು ಕಥೆ, ವಸ್ತು, ಸನ್ನಿವೇಶ, ವಿಷಯಗಳ ಕುರಿತು ಮನಸ್ಸಿಗೆ ಹೊಳೆದುದನ್ನು ಯಾವುದಾದರೊಂದು ಛಂದೋರೂಪದಲ್ಲಿ ಬರೆಯತೊಡಗುವುದೇ ಅಭ್ಯಾಸ. ಒಂದು ಪ್ರಸಿದ್ಧ ಕಥೆಯನ್ನು ಪದ್ಯದಲ್ಲಿ ಬರೆಯುವುದು, ಒಂದು ದೃಶ್ಯವನ್ನು ಪದ್ಯದಲ್ಲಿ ವಿವರಿಸುವುದು-ಇವೆಲ್ಲ ಅಭ್ಯಾಸರೂಪಗಳು, ಒಂದು ರೂಪದಲ್ಲಿರುವ ಪದ್ಯವನ್ನು ಇನ್ನೊಂದು ರೂಪಕ್ಕೆ ಪರಿವರ್ತಿಸುವುದೂ ಅಭ್ಯಾಸವೆನಿಸುವುದು, ಇಂತಹ ಸಾಧನೆಯ ರಹಸ್ಯವನ್ನು ತಿಳಿಸುವುದಕ್ಕಾಗಿ ಕೆಲವು ಉದಾಹರಣೆಗಳನ್ನಿಲ್ಲಿ ಕೊಡಬಹುದು. ಕರ್ಣಾಟಕದಲ್ಲೆಲ್ಲ ಪ್ರಸಿದ್ಧವಾಗಿರುವ ' ಗೋವಿನ ಹಾಡಿ 'ನ ಮೊದಲನೆಯ ಪದವನ್ನು ಇಲ್ಲಿ ಆರಿಸಿಕೊಂಡಿದೆ. ಅದೊಂದನ್ನೆ ಬೇರೆ ಬೇರೆ ಛಂದಸ್ಸಿನ ಅಚ್ಚಿನಲ್ಲೆರೆದ ಪದ್ಯಗಳಾಗಿ ಕೆಳಗೆ ಕಾಣಿಸಲಾಗಿದೆ.

ಮೂಲ ಪದ್ಯವಿದು—

> " ಧರಣಿ ಮಂಡಲ ಮಧ್ಯದೊಳಗೆ
> ಮೆರೆಯುತಿಹ ಕರ್ಣಾಟ ದೇಶದಿ
> ಇರುವ ಕಾಳಿಂಗನೆಂಬ ಗೊಲ್ಲನ
> ಪರಿಯ ನಾನಿಂತು ಹೇಳುವೆ || "

ಈ ಪದ್ಯ ಜಾರಿಗೆ " ಗೋವಿನ ಕಥೆಯ ಮಟ್ಟು" ಎಂಬ ಹೆಸರು ಬಂದುಬಿಟ್ಟಿದೆ. ಇದು ಭಾಮಿನಿಷಟ್ಪದಿಯ ಗತಿಯನ್ನುಳ್ಳುದಾಗಿ ಮೂರು ನಾಲ್ಕು ಮಾತ್ರೆಗಳ ಗಣಗಳಿಂದ ಕೂಡಿದೆ.

ಅಲ್ಲಲ್ಲಿ ಲಘು ಗುರು ಪಲ್ಲಟವೂ ಇದರಲ್ಲಿದೆ. ಈ ಪದ್ಯವನ್ನು ತ್ರಿಪದಿರೂಪಕ್ಕೆ ಪರಿವರ್ತಿಸಿ ಕೆಳಗೆ ಕೊಡಲಾಗಿದೆ. ಆಗ ಇದು ಮಾತ್ರಾಗಣನಿಯಮವನ್ನು ಬಿಟ್ಟು ಅಂಶಗಣಬದ್ಧವೆನಿಸುವುದು—

ತ್ರಿಪದಿ ॥

"ಧರಣಿಯ ಮಧ್ಯದಿ | ಮೆರೆವ ಕರ್ಣಾಟದಿ
ಇರುವೋರ್ವ ಗೊಲ್ಲ ಕಾಳಿಂಗ–ನೆಂಬನ
ಪರಿಯ ನಾನಿಂತು–ಪೇಳುವೆ ॥"

ತ್ರಿಪದಿಯ ಮೊದಲ ಏಳು ಗಣಗಳನ್ನು ಪುನರುಕ್ತಗೊಳಿಸಿ ನಾಲ್ಕು ಪಾದಗಳಾಗಿ ಮಾಡಿದಾಗ ಸಾಂಗತ್ಯವಾಗುವುದನ್ನಿಲ್ಲಿ ಕಾಣಬಹುದು. ಇದರ ಆರನೆ ಗಣ ಬ್ರಹ್ಮ, ಏಳನೆಯದು ವಿಷ್ಣು—

ಸಾಂಗತ್ಯ ॥

"ವಸುಮತೀ ವಲಯ ಮಧ್ಯದಿ ಕರ್ಣಾಟಕ |
ವೆಸೆವುದಲ್ಲೊಬ್ಬ ಕಾಳಿಂಗ
ಪೆಸರಾಂತ ಗೊಲ್ಲನಿರ್ದಪನಾತನ ಪರಿ
ಯೊಸೆದು ಪೇಳುವೆನು ನಾನಿಂತು ॥"

ತ್ರಿಪದಿ–ಸಾಂಗತ್ಯಗಳು ವಿಷ್ಣು–ಬ್ರಹ್ಮಗಣಗಳಿಂದಾಗುತ್ತವೆ. ವಿಷ್ಣು ಗಣವು ಒಂದು ಅಂಶಾಧಿಕವಾದಾಗ ರುದ್ರಗಣವಾಗುವುದು. ರುದ್ರಗಣಗಳಿಂದ "ಯಾಲಪದ" ಎಂಬ ಪದ್ಯವಾಗುವುದು. ಇದರಲ್ಲಿ ಒಂದು ಉಪಪಾದವೂ ಇರುತ್ತದೆ. ಇದು "ಏಳೆ" ಎಂಬ ಪದ್ಯದ ಮಾರ್ಪಟ್ಟ ರೂಪವಾಗಿ ತೋರುವುದು.

ಯಾಲಪದ ॥

"ಮೇದಿನೀ ಮಂಡಲ ಮಧ್ಯ
ವಾದ ಕರ್ಣಾಟ ದೇಶದೊ
ಳಾದನು ಕಾಳಿಂಗ ಗೊಲ್ಲನು ॥
ನಾನವನ ಪರಿಯ |
ಮೋದದಿಂದಲಿಂತು ಪೇಳ್ವೆನು ॥"

ಸರಳಾರ ॥

ಹೆಂಗಸರ ಶೋಭಾನೆಗಳ ಮಟ್ಟಿನಲ್ಲಿ "ಸರಳಾರ" ಎಂಬುದೊಂದು. ಇದು ಅಂಶಗಣದಿಂದ ರಚಿತವಾಗುತ್ತದೆ. ಅದಕ್ಕೆ ಉದಾಹರಣೆಯಿದು—

"ಭೂಮೀವಲಯ ಮಧ್ಯದೊಳೊಪ್ಪಿರುವಭಿ
ರಾಮ ಕರ್ಣಾಟಕ ದೇಶದಲೀ ॥
ಧಾಮವೆಸಗಿಹನು ಕಾಳಿಂಗನೆಂದೆಂಬ
ನಾಮದೊಳೋರ್ವನು ಗೋವಳನು ॥
ಒರೆಯುವೆನವನ ಪರಿಯನಿಂತು ಬಹು |
ಸುರುಚಿರವೆನಿಸುವ ಚರಿತವನು ॥ ೧ ॥"

ಅಂಶಚ್ಛಂದದ ಪದ್ಯಗಳಾಗಿ ಮಾರ್ಪಡಿಸಿದ ಉದಾಹರಣಗಳಿವು. ಇದೇ ಉದಾಹೃತ ಪದ್ಯವನ್ನು ಜಾತಿಚ್ಛಂದಕ್ಕೆ ಪರಿವರ್ತಿಸಿದ ಕೆಲವು ಉದಾಹರಣಗಳನ್ನು ಮುಂದೆ ಕೊಡಲಾಗಿದೆ.

ದ್ವಿಪದಿ ||

ಜಾತಿಚ್ಛಂದದಲ್ಲಿ ಬರೇ ಚಿಕ್ಕದು ದ್ವಿಪದಿ. ಒಂದೊಂದು ಪಾದದಲ್ಲಿ ಐದು ಮಾತ್ರೆಯ ಮೂರು ಗಣಗಳಿದ್ದು ಕೊನೆಗೊಂದು ತ್ರಿಮಾತ್ರಾ ಗಣವಿರುತ್ತದೆ.

> " ಒರೆವೆ ತಿರೆನಡುವೆ ಕರ್ಣಾಟದೊಳು ನೆಲಸಿ
> ಇರುವ ಕಾಳಿಂಗಗೊಲ್ಲನ ಪರಿಯ ನೆನಸಿ || "

ಹೀಗೆ ಇಲ್ಲಿ ಸಾಹಿತ್ಯವನ್ನು ದ್ವಿಪದಿಗೆ ಸಂಕ್ಷೇಪಿಸುವಾಗ " ಧರಣಿ ಮಂಡಲ ಮಧ್ಯದೊಳಗೆ " ಎಂಬುದನ್ನು " ತಿರೆನಡುವೆ " ಎನ್ನಬೇಕಾಗಿ ಬಂದಿದೆ.

ಚೌಪದಿ ||

ದ್ವಿಪದಿಯನ್ನು ದ್ವಿಗುಣಿತಗೊಳಿಸಿದಾಗ ಚೌಪದಿಯಾಗುವುದು. ಆಧುನಿಕರು ಪದ್ಯರಚನೆಯಲ್ಲಿ ದ್ವಿತೀಯಾಕ್ಷರ ಪ್ರಾಸದ ನಿಯಮೋಲ್ಲಂಘನವನ್ನು ಗುಣವಾಗಿ ಗಣಿಸುತ್ತಾರೆ. ಈ ನಿಯಮವು ಸಾಂಪ್ರದಾಯಿಕ ರಚನಾಕ್ರಮಕ್ಕೆ ವಿದ್ರೋಹವೆನಿಸುವುದಾದರೂ ಅಸಹಜವಾಗಿ ಶಬ್ದಗಳನ್ನು ತುರುಕಿ ತುಂಬಿಸಿ ಕಟ್ಟುವ, ಅವ್ಯುತ್ಪನ್ನ ಕವಿಗಳ ಪ್ರಾಸಬದ್ಧ ಪದ್ಯಗಳಿಗಿಂತ ಲೇಸು. ದ್ವಿತೀಯ ಪ್ರಾಸರಹಿತವಾದರೂ ಅಂತ್ಯ ಪ್ರಾಸವಿರುವ ಚೌಪದಿಯಿದು—

> " ಮೇದಿನಿಯ ಚಾರುವಲಯದ ಮಧ್ಯದಲ್ಲಿ
> ರಾಜಿಸುವ ಕರ್ಣಾಟ ದೇಶವಿಹುದಲ್ಲಿ
> ವಾಸಿಸುವನೋರ್ವನವ ಕಾಳಿಂಗ ಗೊಲ್ಲ
> ಪೇಳಲುದ್ಯೋಗಿಸಿದೆನವನ ಪರಿಯೆಲ್ಲ || "

ದ್ವಿತೀಯಾಕ್ಷರ ಪ್ರಾಸ-ಅಂತ್ಯ ಪ್ರಾಸಸಹಿತ ಚೌಪದಿ—

> " ನೀರಜಭವಾಂಡ ವಲಯದ ಮಧ್ಯದಲ್ಲಿ
> ಚಾರುತರ ದೇಶವಿದೆ ಕರ್ಣಾಟವಲ್ಲಿ
> ತೋರುವ ನಿವಾಸಿ ಕಾಳಿಂಗ ಗೋವಳನು
> ಸಾರ ವಿವರವನೊರೆವೆನಿಂತಾನವನನು || "

ಪ್ರಾಸಬದ್ಧ ವೀರಚೌಪದಿಯಿದು—

> " ಧರಣಿ ಮಂಡಲ ಮಧ್ಯದಲ್ಲಿ ಶೋಭಿಯು ತಾಳಿ
> ಮೆರೆವ ಕರ್ಣಾಟಾಖ್ಯ ದೇಶದಲ್ಲಿ
> ಇರುವ ಕಾಳಿಂಗನೆಂದೆಂಬ ಗೋವಳನವನ
> ಪರಿಯುವೆಲ್ಲವನಿಂತು ಪೇಳ್ವೆನಿಲ್ಲಿ || "

ಇದೇ ಪದ್ಯದ ಮೊದಲನೆಯ ಮತ್ತು ಮೂರನೆಯ ಪಾದಗಳನ್ನು ನಡುವೆ ವಿಚ್ಛೇದಿಸಿದರೆ ಆರು ಪಾದಗಳಾಗಿ ಕುಸುಮಷಟ್ಪದಿಯಾಗುತ್ತದೆ.

ಭಾಮಿನಿ ಷಟ್ಪದಿ.

ಈ ಪದ್ಯವನ್ನು ಭಾಮಿನಿ ಷಟ್ಪದಿಗೆ ತಿರುಗಿಸುವಾಗ ಹಲವು ವಿಶೇಷಣ ವಿಶಿಷ್ಟ ಶಬ್ದಗಳನ್ನು ಅಮದುಗೊಳಿಸಿ ಪಾದಗಳನ್ನು ತುಂಬಬೇಕಾಗುವುದನ್ನಿಲ್ಲಿ ಕಾಣಬಹುದು—

"ವಾರಿನಿಧಿಯ ತರಂಗ ತಾಟಿತ
ಧಾರಿಣೀವಲಯದೊಳಗೈವ
ತ್ತಾರು ದೇಶಂಗಳಲಿ ಮೇಲ್ಮೆಯ ತಾಳಿ ರಾಜಿಪುದು"
ಚಾರು ಕರ್ಣಾಟಾಖ್ಯವದರಲಿ
ಸಾರಗುಣಿ ಕಾಳಿಂಗ ಗೊಲ್ಲನು
ದಾರವೆನಿಸುವ ಪರಿಯನೆಲ್ಲವನಿಂತು ಪೇಳುವೆನು ॥"

ವಾರ್ಧಿಕ ಷಟ್ಪದಿ.

ಷಟ್ಪದಿಗಳಲ್ಲಿ ವಾರ್ಧಿಕವು ದೊಡ್ಡದು. ಚಿಕ್ಕದಾಗಿರುವ ಮೂಲ ಪದ್ಯವೊಂದನ್ನು ವಾರ್ಧಿಕದಲ್ಲಿ ಅವತರಣಗೊಳಿಸುವುದೆಂದರೆ ಕಷ್ಟವಿದೆ. ಇದಕ್ಕೆ ಶಬ್ದವಿಸ್ತಾರದ ಅವಶ್ಯಕತೆಯಿದೆ. ಹೀಗಿದ್ದರೂ ಅನಾವಶ್ಯಕವೆನಿಸಬಹುದಾದ ಪದಗಳನ್ನು ಪ್ರಯೋಗಿಸದೆ ರಚಿಸುವುದರಲ್ಲೇ ಇರುವುದು ಜಾಣ್ಮೆ—

"ವರ್ಣಿಸುವೆ ನಾನಿಂತು ಪುಣ್ಯಕಥೆಯೊಂದನುರು
ಪೂರ್ಣಚಿತ್ತದೊಳಮನುರಾಗಯುತ ಮತಿ ಸಮಾ
ಕೀರ್ಣರಾಲಿಸುಗೆ ವಸುಧಾಮಂಡಲದಿ ಮೆರೆವ ಛಪ್ಪನ್ನದೇಶಗಳೊಳು ॥
ಕರ್ಣಾಟಕಾಖ್ಯದೇಶಂ ಸತ್ಯಸಂದೇಶ
ಪೂರ್ಣ ವದ್ಭಕ್ತಿಕೋಶಂ ಮೆರೆವುದಿಲ್ಲಿ ಸುಗು
ಣಾರ್ಣವಂ ಕಾಳಿಂಗನೆಂಬ ಗೋವಳನಿರ್ಪನವನ ಪರಿಯಂ ಪೇಳ್ವೆನು ॥"

ಅಂಶಗಣ ಮಾತ್ರಾಗಣ ಪ್ರಯುಕ್ತ ಪದ್ಯಗಳಿಗಿಂತ ರಚನೆಗೆ ಕಠಿಣವೆನಿಸುವವು ಗಣಚ್ಛಂದದ ಆರ್ಯಾಜಾತಿಯ ಪದ್ಯಗಳು. ಅವುಗಳಲ್ಲಿ ಕಂದ ಪದ್ಯವನ್ನಿಲ್ಲಿ ಕೊಡಲಾಗಿದೆ—

ಕಂದ ॥

"ಧರಣಿಯ ಮಂಡಲ ಮಧ್ಯದೆ
ಮೆರೆವಾ ಕರ್ಣಾಟ ದೇಶದಲ್ಲಿಯೆ ಗೊಲ್ಲ
ರ್ಗರೆಯಂ ಕಾಳಿಂಗಾಭಿದ
ನಿರುತಿರ್ಪಂ ಪೇಳ್ವೆನಿಂತವಾತನ ಪರಿಯಂ ॥"

ಇದಕ್ಕಿಂತಲೂ ಕಠಿಣಕರ ರಚನೆ ಸಮವೃತ್ತ ಪದ್ಯಗಳು, ವರ್ಣಗಣ ಘಟಕವಾದವು. ಒಂದೆರಡು ಉದಾಹರಣೆಗಳಿವು—

ಮತ್ತೇಭ ವಿಕ್ರೀಡಿತ ವೃತ್ತ ॥

"ಪೃಥಿವೀ ಮಂಡಲ ಮಂಡನಾಯಿತಮೆನಿಪ್ಪಾ ಮಧ್ಯಭೂಭಾಗ ಸಂ
ಸ್ಥಿತ ಕರ್ಣಾಟಕ ದೇಶದಾಮನೆಗಂ ತದ್ದೇಶದೊಳ್ ಕೀರ್ತಿಸಂ
ಶ್ರಿತಸದ್ಧರ್ಮಸ್ಥಿದನೋರ್ವ ಗೊಲ್ಲನೊಡನಂ ಕಾಳಿಂಗನೆಂಬಂ ಸಮಾ
ಸ್ನತ ಚಾರಿತ್ರಯುತ ತದೀಯ ಚರಿತಂ ನಾನಿಂತಿದಂ ಪೇಳ್ವೆಂ ॥"

ಉತ್ಪಲಮಾಲಾವೃತ್ತ ||

"ರಾಜಿಪ ಮೇದಿನೀವಲಯ ಮಧ್ಯದೆ ನಾಯಕರತ್ನದಂತೆ ರಾ
ರಾಜಿಪ ದೇಶವೊಪ್ಪುವುದು ಕನ್ನಡವಲ್ಲಿರುತಿರ್ದಪಂ ಯಶೋ |
ಭಾಜನನಾ ಕಳಿಂಗವೆಸರಿಂದವೆ ಗೊಲ್ಲದೊರ್ವ ನಾತನೊಳ್
ಸಾಜವೆನಿಪ್ಪವೋಲೊರೆವೆನಿಂತು ತದೀಯ ಚರಿತ್ರವೆಲ್ಲವಂ ||

ಗೋವಿನ ಹಾಡಿನ ಉದಾಹೃತ ಪದ್ಯವನ್ನು ವರ್ಣಗಣಬದ್ಧವಾದ ವೃತ್ತಗಳಿಗೆ ಅಳವಡಿಸುವಾಗ, ಅಂಕಿತ ನಾಮಗಳಾದ 'ಕಾಳಿಂಗ' 'ಕರ್ಣಾಟ' ಎಂಬ ಶಬ್ದಗಳನ್ನು ಛಂದೋನುಗುಣವಾಗಿ ಯಾವೆಡೆಗೆ ಒಡ್ಡಬೇಕೆಂಬ ಕಲ್ಪನೆ ಪದ್ಯರಚನಾಪ್ರಾರಂಭದಲ್ಲೇ ಇರಬೇಕಾಗುತ್ತದೆ. ಅದಿಲ್ಲವಾದರೆ, ಆ ನಬ್ದಗಳು ವೃತ್ತಕ್ಕೆ ಹೊಂದವು; ಹೊಂದಿದರೂ ವಿರೂಪಗೊಳ್ಳುವ ಪ್ರಮೇಯವಿದೆ. ಮತ್ತೇಭ ವಿಕ್ರೀಡಿತಕ್ಕೆ ಆ ಅಂಕಿತ ನಾಮಗಳು ಹೊಂದುವಂತೆ ಉತ್ಪಲ ಮಾಲೆಗೆ-ಚಂಪಕಮಾಲೆಗೆ ಹೊಂದಿಕೆಯಾಗವು. 'ಕಾಳಿಂಗ' ಎಂಬುದು ಮೇಲಿನ ಉತ್ಪಲ ಮಾಲೆಯಲ್ಲಿ "ಕಳಿಂಗ" ಎಂದಾಗಬೇಕಾಯಿತು. ಕರ್ಣಾಟ ಎಂಬುದು "ಕನ್ನಡ" ಆಗಬೇಕಾಯಿತು. ಅಲ್ಲಿ ಹೀಗಾಗುವುದು ಅನಿವಾರ್ಯ ಪ್ರಯತ್ನಪಟ್ಟು "ಕರ್ಣಾಟಕ" ಎಂಬ ಪದವನ್ನಿಟ್ಟುಕೊಂಡು, ಇದರ ಟಕಾರವನ್ನು ದ್ವಿತೀಯ ಪ್ರಾಸಾಕ್ಷರದೆಡೆಯಲ್ಲಿ ನಿಲ್ಲಿಸಿ, ಪದ್ಯ ರಚಿಸಲು ಸಾಧ್ಯವಾಗಬಹುದು, ಆಗ "ಕಾಳಿಂಗ" ಎಂಬ ಶಬ್ದ ರೂಪವು ಒಡ್ಡಲಾರದು. 'ಕಾಳಿಂಗ' ಎಂಬಲ್ಲಿನ 'ಳಿಂಗ' ಎಂದು ಪಾದಾದಿಯಾಗಿ ಮಾಡಿದರೆ 'ಕರ್ಣಾಟ' ಎಂಬುದು ಒಡ್ಡಲಾರದು. ಆದುದರಿಂದ ಉತ್ಪಲ ಮಾಲೆ-ಚಂಪಕಮಾಲೆಗಳ ರಚನೆಯಲ್ಲಿ ಈ ಎರಡು ಶಬ್ದಗಳಲ್ಲಿ ಒಂದು ಮಾತ್ರ ಇದ್ದ ರೂಪದಲ್ಲಿ ಸೇರ್ಪಡೆಯಾದೀತು. ಅದಕ್ಕೆ ಉದಾಹರಣೆಯಿದು—

ಉತ್ಪಲಮಾಲೆ ||

"ತುಂಗತರಂಗ ವಾರ್ಧಿ ಪರಿವೇಷ್ಟಿತ ಭೂವಲಯಕ್ಕೆ ಮಧ್ಯಭಾ
ಗಂ ಗುಣಭಾಸಿ ಕನ್ನಡದ ದೇಶವೆ ರಾಜಿಸುತಿರ್ಪವಲ್ಲಿ ಕಾ
ಳಿಂಗನೆನಿಪ್ಪ ಗೊಲ್ಲನಿರು ಕೀರ್ತಿಗೆ ಜಲ್ಲಹನಾವ ಚಾರು ವೃ
ತ್ತಂಗಳನೆಲ್ಲಮಿಲ್ಲಿಯೊರೆವಂ ಅವಧಾನಿಸಿ ಕೇಳ್ಗೆ ಸಜ್ಜನರ್ ||"

ಛಂದೋಬದ್ಧವಾಗಿ ಪದ್ಯರಚನೆ ಮಾಡುವ ರಹಸ್ಯದ ಅಂಶವಿದು. ರಚನಾಭ್ಯಾಸದಲ್ಲಿ ಮುಂದುವರಿದಂತೆಲ್ಲ ಇಂತಹ ನವರಹಸ್ಯಗಳು ತಾವಾಗಿ ತೋರ್ತಾಗುವವು. ಪದ್ಯರಚನೆಗೆ ಅಭ್ಯಾಸವೇ ಪ್ರಮುಖಸೋಪಾನ. ಅಂತಹ ಅಭ್ಯಾಸ ಯೋಗದ ದಿಗ್ದರ್ಶನವಿದು.

"ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ" ಎಂಬ ಗೀತೋಕ್ತಿ ಪದ್ಯರಚನಾಭ್ಯಾಸಿಗೂ ಅನ್ವಯವಾಗುವುದು.

---

## ಬೆಳ್ಳಾವೆ ವೆಂಕಟನಾರಣಪ್ಪನವರ

# ದತ್ತಿ ಭಾಷಣ ೧೯೬೬

### ಲೇಖಕರು : ಡಾ. ಎಂ. ಶಿವರಾಂ

ಕೀರ್ತಿಶೇಷ ಬೆಳ್ಳಾವೆ ವೆಂಕಟನಾರಾಯಣಪ್ಪನವರ ಹೆಸರಿನಲ್ಲಿ ಏರ್ಪಡಿಸಿರುವ ಈ ದತ್ತಿ ಭಾಷಣವನ್ನು ಮಾಡಲು ಅವಕಾಶ ಕೊಟ್ಟ ನಿಮಗೆ ಋಣಿ. ಹೈಸ್ಕೂಲಿನಲ್ಲಿ ನಾನು ಓದುತ್ತಿದ್ದಾಗ, ಸೆಂಟ್ರಲ್ ಕಾಲೇಜಿನಲ್ಲಿ ಅವರು ಫಿಸಿಕ್ಸ್ ಪ್ರೊಫೆಸರ್ ಆಗಿದ್ದರು. ನಾಡನುಡಿಯಲ್ಲಿ ವಿಜ್ಞಾನದ ವಿಷಯಗಳನ್ನು ಜನತೆಗೆ ಕಲಿಸಬೇಕು ಎಂದು ಅವರ ಹಂಬಲ. ದ್ರಷ್ಟಾರರಾದ ಅವರಿಗೆ ಇವರ ಅಗತ್ಯ ಕಂಡುಬಂದಿತ್ತು. ವಿಜ್ಞಾನ ಎಂಬ ಪತ್ರಿಕೆಯನ್ನೂ ಆರಂಭಿಸಿದರು. ದ್ರಷ್ಟಾರರ ಜತೆಗೂ ಜನತೆ ನಡೆದರೆ, ದ್ರಷ್ಟಾರರು ಎನ್ನುವ ಹೆಸರೇ ಅಳಿದು ಹೋಗುತ್ತದೆ. ಜನತೆ ಹಿಂದೆ ಬಿತ್ತು ; ಪತ್ರಿಕೆ ಕಣ್ಣು ಮುಚ್ಚಿಕೊಂಡಿತು.

ಈಗ ಜನತೆಗೆ ವಿಜ್ಞಾನ ಪರಿಚಯ ಬೇಕು, ಅಂದಿನಿಂದ ೫೦ ವರ್ಷಗಳಾದುವು ಎಂದೆನ್ನಿಸಬಹುದು. ಇದು ದಿಟವೋ ಸುಳ್ಳೋ ಭಗವಂತನೇ ಬಲ್ಲ.

ಆದರೂ ಆ ಹಿರಿಯ ದ್ರಷ್ಟಾರರ ನಾಮಸ್ಮರಣೆ ಮಾಡಿ ಈ ಭಾಷಣವನ್ನು ಮಾಡುವುದು, ಆತನಿಗೆ ಸಾಷ್ಟಾಂಗವೆರಗಿದಂತೆ. ಅಂತಹ ಪೂಜಾದೃಷ್ಟಿಯಿಂದ ಮನೋದೈಹಿಕ ಬೇನೆಗಳ ವಿಷಯ ಮಾತನಾಡುತ್ತೇನೆ.

## ಮನೋದೈಹಿಕ ಬೇನೆಗಳು

ದೇಹಕ್ಕೆ ಯಾವ ಬೇನೆ ಬಡಿದರೂ, ಅದು ಸ್ವಲ್ಪ ಮಟ್ಟಿಗೆ ಮನಸ್ಸಿನ ಮೇಲೆ ಕೂಡ ಪರಿಣಾಮವನ್ನುಂಟುಮಾಡುತ್ತದೆ. ವಿಷಮ ಶೀತ ಜ್ವರ ಬಂದವನು ಸನ್ನಿ ಏರಿ ಬಡಬಡಿಸುತ್ತಾನೆ. ದೇಹಕ್ಕೆ ಹತ್ತಿದ ವಿಷಮ ಶೀತ ಜ್ವರ ಮನಸ್ಸನ್ನೂ ಕಾಡುತ್ತದೆ. ಅದೇ ರೀತಿ ಮನಸ್ಸಿಗೆ ಆತಂಕ ಒದಗಿದಾಗ ದೇಹಕ್ಕೂ ಜಡ್ಡು ಬಡಿಯುತ್ತದೆ. ಅಂದಮೇಲೆ ಮನೋದೈಹಿಕ ಬೇನೆ ಎಂದು ಬೇರೆ ಯಾವ ಗುಂಪಿದೆ? ಅದರ ಲಕ್ಷಣಗಳೇನು? ಎಂಬುದನ್ನು ಮೊದಲು ತಿಳಿಯಬೇಕಾದ್ದು ಅಗತ್ಯ.

ಬಲು ಕಾಲದ ಹಿಂದೆ ಕಾಡು ಮೃಗಗಳೊಡನಿದ್ದು ಅನಂತರ ಜೀವನ ಪ್ರಗತಿಯಲ್ಲಿ ಮುಂದುವರಿದು ಮಾನವನು ಇಂದಿನ ಹಂತವನ್ನು ಮುಟ್ಟಿದ್ದಾನೆ. ಈ ಪ್ರಗತಿಗೆ ಮುಖ್ಯ ಕಾರಣ ಅವನ ಮನಸ್ಸಿನ ಮುನ್ನಡೆಯುವಿಕೆ. ಕಾಡುಮೃಗಗಳಿಗೆ ಯಾವ ಯಾವ ಬೇನೆಗಳು ಬರುತ್ತವೆಯೋ, ಅವು ಮನುಷ್ಯನಿಗೂ ಬಂದರೆ, ಅಂತಹ ಬೇನೆಗಳನ್ನು ದೈಹಿಕ ಬೇನೆ ಎನ್ನಬೇಕು. ಮಿಕ್ಕ ಎಲ್ಲ ಬೇನೆಗಳೂ ಮನಸ್ಸಿನಿಂದ ಉಂಟಾದ ಬೇನೆಗಳು, ಎಂದು ಸ್ಥೂಲವಾಗಿ ಹೇಳಬಹುದು.

ಮನಸ್ಸಿನ ದುಗುಡ, ಆತಂಕ, ಅವ್ಯಕ್ತ ಒಳಮನಸ್ಸಿನ ಆಸೆ, ಇತ್ಯಾದಿಗಳೆಲ್ಲವೂ ಬೇನೆಗೆ ಕಾರಣವಾಗಬಹುದು. ಹಾಗಾದಾಗ, ಅದರ ಪ್ರತಿಕ್ರಿಯೆಯು ೧) ಮನಸ್ಸಿನ ಮೇಲೆ ಆಗಬಹುದು. ಆಗ ರೋಗಿಯು ಹುಚ್ಚೋ, ಬೆಪ್ಪೋ, ಶಿವಲೀಲೆಯ ತರಹವೋ ನಡೆದುಕೊಳ್ಳುತ್ತಾನೆ. ಇವು ಮಾನಸಿಕ ಬೇನೆಗಳು. ತನ್ನ ಮನಸ್ಸಿನೊಡನೆ ಇದ್ದ ಹೊರ ಪ್ರಪಂಚದ ಸಂಪರ್ಕವನ್ನೂ ರೋಗಿಯು ಕಳೆದುಕೊಂಡು, ಈ ರೀತಿ ಆಗುತ್ತಾನೆ. ಅಥವಾ ೨) ತನ್ನ ದೇಹದ ಒಳಗಿನ ಅಂಗಾಂಗಗಳಲ್ಲಿ ಎಲ್ಲಿಯಾದರೂ ಕಾಣಿಸಿಕೊಳ್ಳಬಹುದು. ಇದೇ ಮನೋದೈಹಿಕ ಬೇನೆಗಳು.

ಉದಾಹರಣೆಗೆ: ಒಬ್ಬ ಮನುಷ್ಯನಿಗೆ ಹಸಿವಾಯಿತು ಎನ್ನಿ. ಆಗ ಆತನ ಹೊಟ್ಟೆಯಲ್ಲಿ ಯಾವುದೋ ಒಂದು ರೀತಿಯ ಸಂಕಟವೋ, ಖಾಲಿಯಾದ ಅನುಭವವೋ ಉಂಟಾಗುತ್ತದೆ. ಅದನ್ನೇ ಹಸಿವು ಎಂದು ಕರೆಯುತ್ತಾನೆ. ಅವನ ಮನಸ್ಸಿನಲ್ಲಿ ಕಿರಿಕಿರಿಯೂ ಉಂಟಾಗುತ್ತದೆ. ಬೇರೆ ಯಾವ ಕೆಲಸ ಮಾಡುವುದಕ್ಕೂ ಅವನಿಗೆ ಸಾಧ್ಯವಿರುವುದಿಲ್ಲ. ಏನಾದರೂ ತಿಂದೆ ಅನ್ನಿ. ಆಗ ಹೊಟ್ಟೆಯೂ ಸಮಾಧಾನ ಹೊಂದುತ್ತದೆ. ಮನಸ್ಸಿಗೂ ನೆಮ್ಮದಿ ದೊರಕುತ್ತದೆ. ದೇಹದಲ್ಲಿ ಈ ಕಾರ್ಯಕ್ರಮವು ಹೇಗೆ ನಡಸಲ್ಪಡುತ್ತದೆ?

ಮಾಂಸಖಂಡಗಳು ದೇಹದಲ್ಲಿ ಕೆಲಸ ಮಾಡಬೇಕಾದರೆ, ಅವಕ್ಕೆ ಶಕ್ತಿ ಒದಗುತ್ತಿರಬೇಕು. ಆಹಾರದಲ್ಲಿನ ಸಕ್ಕರೆ ಹಿಟ್ಟು ಇಂತಹ ಪದಾರ್ಥಗಳು ಪಚನವಾದಾಗ ಶಕ್ತಿಯು ಒದಗುತ್ತದೆ. ಈ ಶಕ್ತಿಯನ್ನು ಮಾಂಸ ಖಂಡಗಳು ಉಪಯೋಗಿಸಿಕೊಳ್ಳುತ್ತವೆ. ಈ ಶಕ್ತಿಯು ಮಾಂಸ ಖಂಡಗಳಿಗೆ ದೊರಕದೆ ಇದ್ದಾಗ ಮಾಂಸ ಖಂಡಗಳು ಕೆಲಸ ಮಾಡಲಾರವು. ಆಗ ಅವುಗಳಿಂದ ಮೆದುಳಿಗೆ ಸುದ್ದಿ ಮುಟ್ಟುತ್ತದೆ. ಹಸಿವಿನ ಕೇಂದ್ರ ಎಂಬ ಮೆದುಳಿನಲ್ಲಿರುವ ಕೇಂದ್ರಗಳಿಗೆ ಈ ಸುದ್ದಿ ಬಂದಾಗ, ಅವು ಎಚ್ಚರಗೊಳ್ಳುತ್ತವೆ. ಅನಂತರ ತಮ್ಮ ಕಾರ್ಯವನ್ನು ಶುರು ಮಾಡುತ್ತವೆ. ಒಂದು, ಮೆದುಳಿನ ಬುಡದಲ್ಲಿರುವ ತಲಾಮಸ್ ಎನ್ನುವ ಭಾಗಕ್ಕೆ ಸುದ್ದಿ ಕಳಿಸುತ್ತದೆ. ಅಲ್ಲಿಂದ ಮುಂದೆ ೧) ಸ್ವಯಂ ಪ್ರೇರಿತ ನರಗಳ ಮೂಲಕ, ಹೊಟ್ಟೆಯನ್ನು ಉದ್ರೇಕಿಸುತ್ತದೆ. ಆಗ ಹೊಟ್ಟೆಯಲ್ಲಿ ಅಮ್ಲ ದ್ರವ ಮತ್ತಿತರ ರಸ ವಿಶೇಷಗಳು ಉತ್ಪನ್ನವಾಗಿ ಹೊಟ್ಟೆ ತಾಳ ಹಾಕಲಿಕ್ಕೆ ಆರಂಭವಾಗುತ್ತದೆ. ಈ ಹಂತದಲ್ಲೇ ಮನುಷ್ಯನಿಗೆ ಹಸಿವಾಗಿದೆ ಎಂದು ತಿಳಿದು ಬರುವುದು. ಈ ತನಕ ನಡೆದ ಕಾರ್ಯಗಳೆಲ್ಲಾ ಅವನ ಅರಿವಿಗೆ ಬರದೆ ಸ್ವಯಂಚಾಲಕವಾಗಿ ನಡೆದಿರುತ್ತದೆ. ೨) ನಿರ್ನಾಳ ಗಂಥಿಗಳೂ ಈ ಸುದ್ದಿ ತಿಳಿದು ಅವೂ ಕೆರಳಿ ಆಹಾರವನ್ನು ಪಚನ ಮಾಡುವ ಕೆಲವು ದ್ರವ ವಿಶೇಷಗಳನ್ನು ಉತ್ಪನ್ನಿಸುತ್ತವೆ. ಈ ಕೆಲಸವೂ ಮನುಷ್ಯನ ಅರಿವಿಗೆ ಬರದೆ, ದೇಹದಲ್ಲಿ ನಡೆಯುವ ಕಾರ್ಯ.

ಇದು ಸಾಮಾನ್ಯವಾಗಿ ನಡೆಯುವ ವಿಧಾನ. ಆದರೆ ಮನುಷ್ಯನ ಮನಸ್ಸಿನಲ್ಲಿ ಕೊರಗೋ ದುಗುಡವೋ ಸೇರಿಕೊಂಡಿದೆ ಎನ್ನಿ. ಆಗ ಈ ಕೊರಗು. ಈ ದುಗುಡ, ಅವನ ತಲಾಮಿಸ್ಸಿಗೆ ಸುದ್ದಿ ಮುಟ್ಟಿಸುತ್ತದೆ. ಆಗ ತಲಾಮಸ್, ಹಸಿವನ್ನು ನೀಗಿಸಿಕೊಳ್ಳುವ ದೇಹದ ಕಾರ್ಯಕ್ರಮಗಳಿಗೆ ಅವಕಾಶ ಕೊಡುವುದಿಲ್ಲ. ಅಥವಾ ಹಸಿವಾಗದೆ ಇದ್ದಾಗಲೂ, ಹಸಿವಿನ ಕೇಂದ್ರವನ್ನು ಉದ್ರೇಕಿಸಬಹುದು. ಅಂದರೆ ಪರಿಣಾಮ ಏನು? ದೇಹದಲ್ಲಿ ದಿಟ್ಟವಾಗಲೂ ಆಹಾರದ ನೆರವು ಬೇಕಾಗಿದ್ದರೂ. ಮನಸ್ಸು ಕೊರಗಿನಿಂದಲೋ ದುಗುಡದಿಂದಲೋ ತುಂಬಿದ್ದರೆ ಊಟಕ್ಕಾಗಿ ಪ್ರಯತ್ನವನ್ನೂ ಮಾಡದೆ ಇರಬಹುದು. ಅಥವಾ, ದೇಹದಲ್ಲಿ ಸಾಕಷ್ಟು ಆಹಾರವು ಇದ್ದರೂ, ಹಸಿವು ಆಗುತ್ತಲೇ ಇರಬಹುದು.

ಇದರ ನಿದರ್ಶನವನ್ನೂ ತೀವ್ರ ಮಾನಸಿಕ ಬೇನೆಯುವರಲ್ಲಿ ಕಾಣಬಹುದು. ಕೆಲವರು ಮಾನಸಿಕ ರೋಗಿಗಳು ಏನೂ ತಿನ್ನವೆ ಕೃಶಾಂಗಿಗಳಾಗುತ್ತಾರೆ. ಮತ್ತೆ ಕೆಲವರು ಮೇಲೆ ಮೇಲೆ ತಿಂದು ತೋಳಗಳ ಹಾಗೆ ಆಗಿ ಬಿಡುತ್ತಾರೆ.

ಮನಸ್ಸಿನ ಕೊರಗು ಅಥವಾ ದುಗುಡವು ಅತಿ ತೀವ್ರವಾಗಿರದೆ ಇದ್ದರೆ, ಆಗ ಹಸಿವಿನ ಕೇಂದ್ರವು ಉದ್ರೇಕಗೊಳ್ಳುತ್ತದೆ. ದೇಹಕ್ಕೆ ಅಗತ್ಯವಿರಲಿ ಇಲ್ಲದಿರಲಿ, ಹಸಿವೇನೋ ಆಗುತ್ತಿರುತ್ತದೆ. ಅಂದರೆ ಹೊಟ್ಟೆಯಲ್ಲಿ ದ್ರವಗಳು ಉತ್ಪನ್ನವಾಗುತ್ತಲೇ ಇರುತ್ತವೆ. ಕೆಲವು ದಿವಸ ಹೀಗಾದರೆ ಹೊಟ್ಟೆಯ ದ್ರವಗಳು ಹೊಟ್ಟೆಯ ಒಳಪೊರೆಯನ್ನೇ ಸುಟ್ಟು ಹುಣ್ಣು ಮಾಡಬಹುದು. ಹೊಟ್ಟೆಉರಿ, ಹುಳಿತೇಗು, ಕಮರುತೇಗು, ಹುಳಿಹುಳಿ ವಾಂತಿ, ಆಹಾರ ಪಚನವಾಗದೆ ಹೊಟ್ಟೆ ಉಬ್ಬರಿಸಿ ಕೊಳ್ಳುವುದು ಇತ್ಯಾದಿ ಚಿಹ್ನೆಗಳೆಲ್ಲಾ ಕಾಣಿಸಿಕೊಳ್ಳುತ್ತವೆ.

ಈ ಬೇನೆಗೆ ಸೂಕ್ತ ಔಷಧಿಗಳನ್ನು ಕೊಟ್ಟರೆ ತಾತ್ಕಾಲಿಕ ಶಮನವಾಗುತ್ತದೆ. ದಿಟ. ಆದರೆ ಆಳಮನಸ್ಸಿನ ಕೊರಗೋ, ಅವ್ಯಕ್ತ ದುಗುಡವೋ ಇರುವ ತನಕ, ಬೇನೆ ಮರುಕಳಿಸುತ್ತಲೇ ಇರುತ್ತದೆ.

ಆಳಮನಸ್ಸಿನ ಕೊರಗುಗಳು ಯಾವ ತೆರನಾದದ್ದು? ಆಳಮನಸ್ಸಿನ ದುಗುಡವು ಯಾವ ಯಾವ ರೀತಿಯವು?

ಬೆಳೆದ ಮಗಳಿಗೆ ತೊನ್ನು ಬಡಿದರೆ, ಆ ಬೇನೆಯನ್ನು ಸರಿ ಮಾಡಲೂ ಆಗದೆ, ಅನುಭವಿಸಲು ಒಲ್ಲದ ತಂದೆಗೆ ಕೊರಗು ಬಂದೇ ಬರುತ್ತದೆ. ಆತನೂ ಈ ಬೇನೆಗೆ ತುತ್ತಾಗಬಹುದು. ಸಿರಿವಂತ ಜಂಭದ ಮನೆಯ ಬಡ ಅಳಿಯ, ವಿದ್ಯಾವಂತರಾಗಿದ್ದರೂ ಆಡಲೂ ಆರದೆ ಅನುಭವಿಸಲೂ ಆಗದೆ, ಈ ಬೇನೆ ಬರಬಹುದು. ದುರಹಂಕಾರಿ ಹಾಗೂ ಕೆಲಸ ಚೆನ್ನಾಗಿ ಬರದ ಅಧಿಕಾರಿಯ ಕೈಕೆಳಗೆ ಕೆಲಸ ಮಾಡುವ ನೌಕರನಿಗೂ ಬರಬಹುದು. ಅತಿ ಆಸೆ ಪಡುವ ಉತ್ಸಾಹಿಗೂ ಈ ಬೇನೆ ತಾಕಬಹುದು. ಆಳ ಮನಸ್ಸಿನ ಕೊರಗಿಗೆ, ದುಗುಡಕ್ಕೆ ಮಿತಿ ಉಂಟೇ ನಾಗರಿಕ ಸ್ಪರ್ಧಾ ಜೀವನದಲ್ಲಿ?

ಹೊಟ್ಟೆಯ ನಿದರ್ಶನವನ್ನು ತೆಗೆದುಕೊಂಡು ಮನೋದೈಹಿಕ ಬೇನೆಗಳ ವಿವರಗಳನ್ನು ತಿಳಿದುಕೊಂಡೆವು.

ಆದರೆ ಹಸಿವಿನ ಕೇಂದ್ರದ ಬದಲು ಮಿಕ್ಕ ಯಾವುದಾದರೂ ಮೆದುಳು ಬುಡದ ಕೇಂದ್ರದ ಮೇಲೆ ಆಳ ಮನಸ್ಸಿನ ಕೊರಗು ಪ್ರಭಾವ ಬೀರಿದರೆ, ಆಗ ಆ ಅಂಗಗಳ ಕೆಲಸ ಅಸ್ತವ್ಯಸ್ತವಾಗುತ್ತದೆ.

ಹಲವಾರು ರೀತಿಯ ತಲೆನೋವು, ಹಿಂತಲೆ ಭಾರ, ಮೆಡಶಿರದ ಬಿಗಿತ, ಎದೆ ಡವ ಡವ ಹೊಡೆದು ಕೊಳ್ಳುವುದು, ಉಬ್ಬಸ ಬರುವುದು ಅತಿಸಾರ, ಉದರ ಶೂಲೆಗಳು,–ಒಂದೇ ಎರಡೇ! ಮನೋದೈಹಿಕ ಬೇನೆಗಳ ಸ್ವರೂಪ ಸಹಸ್ರಮುಖಿಯದು.

ಇಂತಹ ಬೇನೆಗಳಿಗೆ ಚಿಕಿತ್ಸೆ ಹೇಗೆ?

೧) ತಾತ್ಕಾಲಿಕ ಪರಿಹಾರ ಕೊಡುವ ಔಷಧಿಗಳನ್ನು ಸೇವಿಸುವುದರಿಂದ ತಾತ್ಕಾಲಿಕ ಶಮನವಾಗುತ್ತದೆ.

ಆದರೆ ಪೂರ್ಣವಾಗಿ ಗುಣಪಡಿಸಲು ಮೂಲ ಕಾರಣವಾದ ಆಳ ಮನಸ್ಸಿನ ಕೊರಗು ಅಥವಾ ದುಗುಡವನ್ನು ಕಂಡುಹಿಡಿಯಬೇಕು. ಈ ಮಾರ್ಗವನ್ನೇ Phycho analysis ಎಂದು ಕರೆಯುತ್ತಾರೆ. ಅವ್ಯಕ್ತ ದುಗುಡವು ವ್ಯಕ್ತವಾದಾಗ ಪರಿಹಾರವೂ ಆಗುತ್ತದೆ.

ಅಥವಾ ಮನಸ್ಸಿನಲ್ಲಿ ಸಮಾಧಾನವನ್ನು ತಂದುಕೊಳ್ಳಬೇಕು. ಇದು ಎರಡು ತರಹ ಮಾರ್ಗಗಳಿಂದ ಸಾಧ್ಯ.

ಮೂಢ ನಂಬಿಕೆಗಳನ್ನು ದೃಢವಾಗಿ ನಂಬಿದ್ದರೂ ಆಯಿತು ಅಥವಾ ವಿಚಾರ ಮಾಡಿ, ಮನಸ್ಸನ್ನು ಹದಮಾಡಿಕೊಂಡರೂ ಆಯಿತು. ಮತಧರ್ಮ ಇತ್ಯಾದಿಗಳು ನಂಬಿಕೆಯನ್ನು ದೃಢ ಪಡಿಸಿ ಗುಣಮಾಡಬಲ್ಲವು Psycho analysis: ಇದು ವೈದ್ಯರು ಏರ್ಪಡಿಸುವ ಒಂದು ವಿಧಾನದ ಚಿಕಿತ್ಸೆ. ಆದರೆ ಬಲು ಕಾಲದಿಂದಲೂ ಕ್ರಿಶ್ಚಿಯನ್ನರಲ್ಲಿ ಕನ್‌ಫೆಷನಲ್ ಅಂತ ಒಂದು ವಿಧಿ ಇದೆ. ತಮ್ಮ ತಮ್ಮ ಪುರೋಹಿತನ ಬಳಿ, ಹೋಗಿ ತಮ್ಮ ಮನಸ್ಸಿಗೆ ತೋಚಿದ ಅಪರಾಧಗಳೆಲ್ಲವನ್ನೂ ತಪ್ಪೊಪ್ಪಿಕೊಳ್ಳುವುದು. ಗುಪ್ತವಾದುದು ಈ ವಿಧಿ, ಅಂದರೆ ಧೈರ್ಯವಾಗಿ ನಿರ್ಲಜ್ಜೆಯಿಂದ ಹಂಬಲನ್ನೆಲ್ಲಾ ತಪ್ಪುಗಳನ್ನೆಲ್ಲಾ ಒಪ್ಪಿಸಬಹುದು.

ನಮ್ಮಲ್ಲಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವ ಹಳೆಯ ಪದ್ಧತಿಯೂ ತಪ್ಪೊಪ್ಪುವಿಕೆಯೇ? ದಾನ ಧರ್ಮಾದಿಗಳನ್ನು ಏರ್ಪಡಿಸುವುದು ದೀನ ದುರ್ಬಲರನ್ನು ಕಂಡು ಅನುಕಂಪದಿಂದ ಮಾಡಿದುದೂ ಆಗಬಹುದು. ಅಥವಾ ಬಹು ಪಾಲು, ತಾನು ಮಾಡಿದ ಅನ್ಯಾಯ ಅನಾಚಾರಗಳನ್ನು ಪರಿಹರಿಸಲೋಸುಗ, ಮನಸ್ಸಿನಲ್ಲಿ ಸಮಾಧಾನವನ್ನು ಸಾಧಿಸಲೋಸುಗ ಮಾಡುವ ಧರ್ಮಗಳೇ.

ಹೇಗೇ ಇರಲಿ, ಇಂತಹ ಕಾರ್ಯಗಳಿಂದ, ಮನಸ್ಸಿನ ದುಗುಡವನ್ನು. ಕೊರಗನ್ನು ಕಳೆದು ಕೊಳ್ಳಬಹುದು. ಸತ್ತ ಮಮತಾಜಳ ಹೆಸರಿನಲ್ಲಿ ತಾಜಮಹಲನ್ನು ಕಟ್ಟಿದರೆ, ಮಮತಾಜಳೇನೂ ಎದ್ದು ಬರುವುದಿಲ್ಲ. ಆದರೆ ಷಹಜಹಾನನಿಗೆ ಮನಸ್ಸಿನಲ್ಲಿ ಕೊರಗು ಕಡಿಮೆಯಾಗಿರಲೇಬೇಕು.

ಮನೋದೈಹಿಕ ಬೇನೆಗಳ ಶಾಶ್ವತ ಚಿಕಿತ್ಸೆಗೆ ಮನಸ್ಸನ್ನು ಹದಮಾಡಿಕೊಳ್ಳುವುದು ಅಗತ್ಯ: ಹಾಗೆ ಮಾಡಿಕೊಳ್ಳಲು ನಮ್ಮ ಕಂದಾಚಾರ ಪದ್ಧತಿಗಳು ಎಂದು ಕರೆಯಲ್ಪಡುವ ಪದ್ಧತಿಗಳೂ, ವಿಧಿಗಳೂ ವೈಜ್ಞಾನಿಕವಾಗಿ ಸಹಾಯಕಾರಿಯಾದುವು.

---

# ಭಾರತೀಯ ಗ್ರಂಥಸಂಪಾದನ ಪರಿಚಯ

## ಮುನ್ನುಡಿ

**ಮೂಲ ಲೇಖಕರು: ಡಾ. ಎಸ್. ಎಂ. ಕತ್ರೆ**

**ಅನುವಾದಕರು: ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ**

ಗ್ರಂಥಸಂಪಾದನೆಯು ಸ್ವಾಭಾವಿಕವಾಗಿಯೇ ಗ್ರಂಥಗಳಿಗೆ ಸಂಬಂಧಿಸಿದ್ದಾಗಿದೆ. ಪಾಠ ನಿರ್ಣಯದ ವಿಷಯದಲ್ಲಿ ತೋರುವ ವ್ಯವಸ್ಥಿತವೂ ಕೌಶಲ್ಯಪೂರ್ಣವೂ ಆದ ವಿವೇಚನೆಯೆಂದು ಇದನ್ನು ಸೂತ್ರಿಸಬಹುದು. ಸಂಶೋಧಕನು ಬಹುಮಟ್ಟಿಗೆ ಬಲ್ಲ ಭಾಷೆಯೊಂದರಲ್ಲಿ, ತಿಳಿಯು ವಂತೆ ಅಥವಾ ತಿಳಿಯಲು ಸಾಧ್ಯವಿರುವಂತೆ ಅರ್ಥವತ್ತಾಗಿ ರಚಿತವಾಗಿರುವ ಯಾವ ಲೇಖನವನ್ನಾದರೂ 'ಗ್ರಂಥ'ವೆನ್ನಬಹುದು[1]. ಆದುದರಿಂದ ಗ್ರಂಥಸಂಪಾದಕನನ್ನು ಮುತ್ತುವ ಸಮಸ್ಯೆಗಳ ಸ್ವರೂಪವನ್ನು ಸ್ಪಷ್ಟಪಡಿಸಬೇಕಾದಲ್ಲಿ, ಭಾರತದಲ್ಲಿ ಮುದ್ರಣಕಾರ್ಯ ಪ್ರಾರಂಭವಾಗುವವರೆಗೆ ಪರಂಪರಾಗತವಾಗಿ ಸಾಗಿ ಬಂದ ಜ್ಞಾನವಹನಕಾರ್ಯದ ಚರಿತ್ರೆಯ ಮುಖ್ಯರೇಖೆಗಳಿಂದ ಆರಂಭಿಸುವುದು ಉಚಿತವಾಗುತ್ತದೆ.

ಮೇಲಿನ ಸೂತ್ರದ ಪ್ರಕಾರ ಗ್ರಂಥವೆಂದರೆ ಲೇಖನವೆಂಬ ಅರ್ಥ ಬರುತ್ತದೆ. ಆದ್ದರಿಂದ ನಮ್ಮ ಈ ಅಧ್ಯಯನಕ್ಕೆ ಲೇಖನಕಲೆಯ ತಿಳಿವಳಿಕೆ ಅಗತ್ಯ. ಸಾಹಿತ್ಯಿಕ ಪ್ರಮಾಣಗಳು, ಅದರಲ್ಲಿಯೂ ಗ್ರೀಕ್ ಮೂಲದಿಂದ ದೊರೆತ ಸಾಕ್ಷ್ಯಗಳು ಕಡಮೆಯೆಂದರೆ ೫ನೆಯ ಶತಮಾನ ಕ್ಕಾಗಲೇ ನಮ್ಮಲ್ಲಿ ಬರವಣಿಗೆ ಬಳಕೆಯಲ್ಲಿತ್ತೆಂಬುದನ್ನು ತೋರಿಸುತ್ತವೆ. ಆದರೂ ನಮಗೆ ದೊರೆತಿರುವ ಪ್ರಾಚೀನ ಲಿಖಿತ ದಾಖಲೆಗಳು ಕ್ರಿ. ಪೂ. ೩ನೇ ಶತಮಾನಕ್ಕಿಂತ ಹಿಂದಿನವಾಗು ವುದಿಲ್ಲ. ಹೀಗಾಗಿ ಹರಪ್ಪಾ ಮತ್ತು ಮೊಹೆಂಜೊದಾರೊ ಸಂಸ್ಕೃತಿಯ ಶೋಧನೆಯಾಗುವವ ರೆಗೆ ಭಾರತದಲ್ಲಿ ಲೇಖನಕಲೆ ಬಹಳ ಪ್ರಾಚೀನವೆನಿಸಿಕೊಂಡಿರಲಿಲ್ಲ. ಈವರೆಗೂ ಹರಪ್ಪಾದಲ್ಲಿ ಯಾಗಲೀ ಶಾಸನಗಳೇನೂ ಮೊಹೆಂಜೊದಾರೊವಿನಲ್ಲಿಯಾಗಲೀ ದೊರೆತಿರದಿದ್ದರೂ ಕೊರೆದ ಬರೆಹಗಳಿರುವ ಮುದ್ರೆಗಳು ಮತ್ತು ಮಡಕೆಯ ಚೂರುಗಳು ಹೇರಳ ಸಂಖ್ಯೆಯಲ್ಲಿ ಸಿಕ್ಕಿವೆ. ಆದರೆ ಆ ಬರೆಹಗಳನ್ನು ಈ ವರೆಗೂ ಯಶಸ್ವಿಯಾಗಿ, ಸಮರ್ಪಕವಾಗಿ ಓದಲಾಗಿಲ್ಲ. ಈ ಲೇಖನ ಗಳು ತುಂಬ ಚಿಕ್ಕವು. ಕೊರೆದ ಬರೆಹವಿರುವ ತಾಮ್ರಪಟ್ಟಗಳೂ ಸಿಕ್ಕಿವೆ. ಗಾಜಿನಂತೆ ನಯಗೊಳಿಸಿರುವ ಮಣ್ಣಿನ ಬಳೆಗಳ ಮೇಲೆ ಅಕ್ಷರಗಳನ್ನು ಕೆತ್ತಲಾಗಿದೆ[2]. ಈ ಸಾಕ್ಷ್ಯಗಳನ್ನು ಆಧಾರವಾಗಿಟ್ಟುಕೊಂಡು ಸರ್ ಜಾನ್ ಮಾರ್ಷಲ್‌ರವರು "ಜೇಡಿ ಮಣ್ಣಿನ ಬಿಲ್ಲೆಗಳಂತಹ ವಸ್ತುಗಳು ಸಿಗದಿರುವುದನ್ನು ನೋಡಿದರೆ ಸಿಂಧೂ ಲಿಪಿಕಾರರು ಜೇಡಿಮಣ್ಣಿನ ಬದಲಾಗಿ

---

1. ಪೋಸ್ಟ್ ಗೇಟ್: 'Comparion to Lation Studies', ಪು ೬೫೧.
2. ಮಾರ್ಷಲ್: 'Mohento Daro', ೧.೪೦.

ಹೆಚ್ಚು ಬಾಳಿಕೆ ಬರದ ಭೂರ್ಜವೃಕ್ಷದ ತೊಗಟೆ, ತಾಳಪತ್ರ, ಚರ್ಮಕಾಗದ (Parchment), ಮರ ಅಥವಾ ಹತ್ತಿಯ ಬಟ್ಟೆ ಇತ್ಯಾದಿಗಳನ್ನು ಬಳಸಿದ್ದು ಕಾಲಾಂತರದಲ್ಲಿ ಅವೆಲ್ಲವೂ ನಾಶವಾಗಿ ಹೋಗಿರಬೇಕು ಎಂದು ಅಭಿಪ್ರಾಯಪಡುತ್ತಾರೆ.[1]

ಮೆಕಾಯ್ ಅವರು ಸಿಂಧೂ ನಾಗರಿಕತೆಯನ್ನು ಕುರಿತ ತಮ್ಮ ಸ್ವಾರಸ್ಯಪೂರ್ಣವಾದ ಕೃತಿಯಲ್ಲಿ ಸರ್ ಜಾನ್ ಮಾರ್ಷಲ್‌ರವರನ್ನೇ ಅನುಸರಿಸಿ ಹೀಗೆ ಹೇಳುತ್ತಾರೆ: "ಭೂಮಿಯ ಮೇಲು-ಪದರಗಳಲ್ಲಿ ದೊರೆತದ್ದು ಅಥವಾ ಕೆಳಪದರಗಳಲ್ಲಿ ಸಿಕ್ಕಿದ್ದು ಎಂಬ ಭೇದವಿಲ್ಲದೆ ಈ ಎರಡು ಪಟ್ಟಣಗಳಲ್ಲಿ ಸಿಕ್ಕಿರುವ ವಸ್ತುಗಳಿಲ್ಲದರ ಮೇಲಿರುವ ಲಿಪಿಯೂ ಒಂದೇ ಆಗಿದೆ. ಇದರಿಂದ ಭಿನ್ನವಾದ ಅಥವಾ ಹೆಚ್ಚು ಮೋಡಿಯಾದ ಲಿಪಿರೂಪವೊಂದನ್ನು ಸಾಧಾರಣ ಸಂದರ್ಭಗಳಿಗೆ ಬಳಸಿರಬಹುದು. ಆದರೆ ಇದನ್ನು ಸಮರ್ಥಿಸುವ ಸಾಕ್ಷಿಗಳಾವುವೂ ದೊರೆತಿಲ್ಲ. ದೀರ್ಘಲೇಖನಗಳು ಯಾವುವೂ ಸಿಗದಿರುವುದನ್ನು ನೋಡಿದರೆ ಚರ್ಮ, ಮರ ಬಹುಶಃ ಪತ್ರಗಳನ್ನೂ ಬರಹಕ್ಕೆ ಬಳಸುತ್ತಿದ್ದು ಅವೆಲ್ಲವೂ ತೇವವಾದ ಉಪ್ಪು ಮಣ್ಣಿನಲ್ಲಿ ಸೇರಿ ಬಹು ಹಿಂದೆಯೇ ಹಾಳಾಗಿ ಹೋಗಿರಬೇಕು.[2] ಆಯಾ ಕೃತಿಯಲ್ಲಿದ್ದು ಒಂದು ತುದಿಯಲ್ಲಿ ರಂಧ್ರಸಹಿತವಾದ ಚಾಚುಕಿವಿ (Perforated lug) ಇರುವ ತೆಳ್ಳನೆಯ ಮಡಕೆಯ ಚೂರುಗಳು ಶಾಸನಫಲಕಗಳನ್ನು ಬರೆಯಲು ಉದ್ದೇಶಿಸಿದವು ಆಗಿರಬಹುದು. ಇವುಗಳ ಗಾತ್ರ ಚಿಕ್ಕದಾಗಿದ್ದು ನಾಲ್ಕರಿಂದ ಏಳು ಇಂಚುಗಳವರೆಗೆ ಉದ್ದವಾಗಿವೆ. ಭಾರತದಲ್ಲಿ ಈಗಲ್ಲೂ ಬಳಕೆಯಲ್ಲಿರುವ ಮರದ ಜಿಲ್ಲಿಗಳಂತೆ ಇವುಗಳ ಮೇಲೂ ಲೇಖನವನ್ನು ಅಳಿಸಲು ಬರುವಂಥ ನುಣ್ಣನೆಯ ದ್ರವ್ಯವೊಂದನ್ನು ಖಂಡಿತವಾಗಿ ಬಳಿದಿರಬೇಕು.[3] ಮಡಕೆಯ ಚೂರುಗಳು ಮೊಹೆಂಜೊದಾರೊವಿನಲ್ಲಿ ಅಷ್ಟಾಗಿ ಸಿಗುವುದಿಲ್ಲ; ಹರಪ್ಪಾದಲ್ಲಿ ಹೆಚ್ಚು ಸಂಖ್ಯೆಯಲ್ಲಿ ದೊರೆಯುತ್ತವೆ. ಅಲ್ಲಿ ಸಿಕ್ಕಿರುವ ಇಂಥ ಬರೆಹಗಳು ಜಾಡಿಯ ಕತ್ತಿನ ಭಾಗದಲ್ಲಿ ಬರೆದುವಾಗಿವೆ. ಈ ಬರೆಹಗಳು ತಾಯಿತಿಗಳ ಮೇಲಿನ ಲಿಪಿಯನ್ನು ಹೋಲುತ್ತವೆ. ಆಶ್ಚರ್ಯದ ವಿಷಯವೆಂದರೆ ದೀರ್ಘಲೇಖನವಿರುವ ಮಡಕೆಯ ಚೂರು ಒಂದಾದರೂ ಸಿಕ್ಕಿಲ್ಲ. ಒಂದು ವೇಳೆ ಅಂಥವು ಇದ್ದರೂ ಲೇಖನಕ್ಕೆ ಬಳಸಿದ ಮಸಿಯು ಬೇಗ ಮಾಸಿಹೋಗುವಂಥದಾಗಿದ್ದು ಕಾಲಾನುಕ್ರಮದಲ್ಲಿ ಆ ಬರೆಹ ತೊಡೆದುಹೋಗಿರಬೇಕು.[4] ಆದರೆ ಒಂದು ಮಗ್ಗುಲಲ್ಲಿ ದೋಣಿಯ ಚಿತ್ರವಿದ್ದು ಮತ್ತೊಂದು ಮಗ್ಗುಲಲ್ಲಿ ಚಿತ್ರಲಿಪಿಯ ಎರಡು ಅಕ್ಷರಗಳಿರುವ ಒಂದು ಮಡಕೆಯ ಚೂರು ಸಿಕ್ಕಿದೆ."[5] "ಪ್ರಾಣಿಯಾಕಾರದ ಜಾಡಿಯ ಕೇವಲ ಒಂದೇ ಒಂದು ನಿದರ್ಶನ ಬೆಳಕಿಗೆ ಬಂದಿದೆ. ಇದು ಹೊಟ್ಟೆಯ ಮೇಲೆ ಮಲಗಿ ತಲೆಯೆತ್ತಿಕೊಂಡಿರುವ ಟಗರಿನ ಆಕಾರದಲ್ಲಿದ್ದು ಬೆನ್ನಿನಲ್ಲಿ ಆಳವಾದ ಹೊಂಡವಿದೆ. ಇದನ್ನು ಮಸಿಬಾವಿಯಾಗಿ ಬಳಸಿರಬಹುದು."[6] ಎಂದೂ ಮೆಕಾಯ್ ತಿಳಿಸುತ್ತಾರೆ. ಸಿಂಧೂಲಿಪಿಯ ಅಥವಾ

1. ಅದೇ., ಪು. 35.
2. Indus Civilisation, ಪು. 13.
3. ಅದೇ., ಪು. 139.
4. ಅದೇ., ಪು. 155.
5. ಅದೇ., ಪು. 155.
6. ಅದೇ., ಪು. 157.

ಸಿಂಧೂಲಿಪಿಕಾರರು ಬಳಸಿರಬಹುದಾದ ಲೇಖನ ಸಾಮಗ್ರಿಗಳ ಸ್ಪಷ್ಟ ತಿಳಿವಳಿಕೆ ನಮಗಿಲ್ಲ ವಾದರೂ ಆ ಕಾಲದಲ್ಲಿ ಬರವಣಿಗೆ ಇದ್ದುದು ನಿಸ್ಸಂಶಯವೆಂಬ ವಿಷಯ ಮಾತ್ರ ಈ ಚರ್ಚೆ ಯಿಂದ ಸ್ಪಷ್ಟವಾಗಿದೆ.

ಮೊಹೆಂಜೊದಾರೋಗೆ ಸಂಬಂಧಿಸಿಯೂ ಸರ್ಕಾರಿ ವರದಿಯಿಂದ ಆಶ್ಚರ್ಯಕರವಾದ ರೀತಿಯಲ್ಲಿ ಸಣಿಚಿಕೊಂಡಿರುವ ಮತ್ತೊಂದು ಅಂಶವೆಂದರೆ ಬೆಳ್ಳಿಯ ಚೂರೊಂದರ ಸಂಶೋಧನೆ. ಡಿ ಕೆ. ೧೩೪೧ (ಎನ್. ಎಸ್.) ೯. ನಂಬರು ಇರುವ ಈ ಬೆಳ್ಳಿಯ ತುಂಡು ರಾವ ಬಹಾದ್ದೂರ್ ಕೆ. ಎನ್. ದೀಕ್ಷಿತರಿಗೆ ೧೯೨೬ನೇ ಇಸವಿ ಜನವರಿ ಒಂದನೆಯ ತಾರೀಖು ಸಿಕ್ಕಿತು. ಇದರ ಎರಡು ಬದಿಗಳಲ್ಲಿಯೂ ಪ್ರಾಚೀನ ಲಿಪಿ ಇದ್ದುದನ್ನು ಅವರು ಗಮನಿಸಿದ್ದಾರೆ.[1] ಈ ಬೆಳ್ಳಿಯ ಚೂರು ಭಾರತದ ಅತ್ಯಂತ ಪ್ರಾಚೀನ ಲಿಪಿ ಅಥವಾ ಲೇಖನ. ಇದು ಲಿಪಿಶಾಸ್ತ್ರದ ಮೇಲೆ ಭೂಲರ್ ಬರೆದಿರುವ ಮಹಾಗ್ರಂಥವನ್ನು ಮುಂದೆ ಪರಿಷ್ಕರಿಸುವ ಲಿಪಿಶಾಸ್ತ್ರಜ್ಞನ ಕೆಲಸದಲ್ಲಿ ಉಪಯೋಗವಾಗುವ ಅಂಶವಾಗಿದೆ.[2]

ವಸ್ತುಸ್ಥಿತಿ ಹೀಗಿರುವಾಗ ಸಿಂಧೂ ನಾಗರಿಕತೆಯ ನಂತರದ ಭಾರತೀಯ ಸಾಹಿತ್ಯದಲ್ಲಿ ಬರವಣಿಗೆಯ ನಿರ್ದಿಷ್ಟ ಪ್ರಸ್ತಾಪವೇ ಇಲ್ಲದೆ ಹೋದದ್ದು ಹೇಗೆ? ಈ ಸಮಸ್ಯೆ ನೂರೆಂಟು ಕ್ಲೇಶಗಳಿಂದ ಕೂಡಿದೆ. ಏಕೆಂದರೆ ಆಧುನಿಕ ಹಿಂದುವೂ ಸಹ ವೇದಗಳು, ಶಾಸ್ತ್ರಗಳು ಕೇವಲ ಗುರುಮುಖದಲ್ಲಿ ನೆಲೆಸಿವೆಯೆಂದು ಭಾವಿಸುತ್ತಾನೆ. ಅವನ ಲಿಖಿತ ಗ್ರಂಥಕ್ಕಿಂತ ಗುರುಮುಖದಿಂದ ಬರುವ ಶಬ್ದಕ್ಕೇ ಹೆಚ್ಚು ಬೆಲೆ. ಅಷ್ಟೇ ಅಲ್ಲ, ಅವುಗಳನ್ನು ಹಸ್ತ ಪ್ರತಿಗಳಿಂದಲೋ ಪುಸ್ತಕಗಳಿಂದಲೋ ಕಲಿಯದೆ ಗುರುಮುಖೇನ ಅಭ್ಯಾಸ ಮಾಡಬೇಕೆಂಬುದೇ ಹಿಂದುವಿನ ಅಭಿಪ್ರಾಯ. ಇಂದಿಗೂ ಹಿಂದುಗಳು ಗೌರವಿಸುವುದು ಸ್ಮೃತಿಗತ ಮಾಡಿಕೊಂಡಿರುವ 'ಮುಖಸ್ಥ ವಿದ್ಯೆ'ಯನ್ನೇ. ಭೂಲರ್ ಹೇಳುವಂತೆ ಆಧುನಿಕ ಕವಿಗಳೂ ಸಹ ಜನ ತಮ್ಮ ಕೃತಿ ಗಳನ್ನು ಓದಬೇಕೆಂದು ಬಯಸದೆ ಅವು ಬಲ್ಲಿದರ ಕಂಠಾಭರಣಗಳಾಗಬೇಕೆಂದು (ಸತಾಂ ಕಂಠ ಭೂಷಣಾ) ಆಶಿಸುತ್ತಾರೆ.[3] ಭೂಲರ್‌ರವರ ಮಾತಿನಲ್ಲಿ ಹೇಳುವುದಾದರೆ "ನಮ್ಮ ಗಮನಕ್ಕೆ ಬಂದಂತೆ ತೀರ ಹಿಂದಿನಿಂದಲೂ ಇದೇ ಪರಿಸ್ಥಿತಿಯೇ ಇದೆ." ಆದರೆ "ಹಿಂದೂ ಶಾಸ್ತ್ರ ಮತ್ತು ಕಾವ್ಯಗಳ ಕಾಲದಲ್ಲಿ ಇನ್ನೂ ಲೇಖನವಿದ್ಯೆಯೇ ತಿಳಿದಿರದಿದ್ದುದೂ ಮತ್ತು ಋಗ್ವೇದದಲ್ಲಿ ಕಾಣಬಹುದಾದ ಕಂಠಪಾಠಕ್ರಮವು ಲಿಪಿ ಬಳಕೆಗೆ ಬರುವ ಹೊತ್ತಿಗೆ ಪೂರ್ಣವಾಗಿ ಬೆಳೆದಿದ್ದುದೂ ಇದಕ್ಕೆ ಮೂಲ ಕಾರಣವೆಂದು ಭೂಲರ್ ಹೇಳುವುದನ್ನು ಮಾತ್ರ ನಾವು ಒಪ್ಪಲಾಗುವುದಿಲ್ಲ.[4] ಏಕೆಂದರೆ ಮೇಲೆ ಹೇಳಿದ ಕಾಲಕ್ಕಿಂತ ಮುಂಚೆಯೇ ಲಿಪಿ ಇದ್ದಿತೆಂಬುದು ಮೊಹೆಂಜೊದಾರೊ ಮತ್ತು ಹರಪ್ಪಾಗಳಲ್ಲಿ ಸಿಕ್ಕ ಮುದ್ರೆ ಮುತ್ತು ತಾಯಿತಿಗಳಿಂದ ಸಿದ್ಧವಾಗಿದೆ. ಆದರೆ ಸಿಂಧೂ ಕಣಿವೆಯ ಚಿತ್ರಲಿಪಿಯ ಕಾಲಕ್ಕೂ ಬ್ರಾಹ್ಮೀ ಅಥವಾ ಖರೋಷ್ಠೀ ಮಾದರಿಯ ಮೌರ್ಯಲಿಪಿಯ ಕಾಲಕ್ಕೂ ನಡುವಿನ ಕಾಲವು ಭಾರತೀಯ ಚರಿತ್ರೆಯಲ್ಲಿ ಕತ್ತಲೆಯಿಂದ ತುಂಬಿದೆ. ಇವುಗಳನ್ನು ಒಂದುಗೂಡಿಸಲು ಮಾಡಿದ ಪ್ರಯತ್ನಗಳಿಗೆ ಕೊರತೆ ಇಲ್ಲದಿದ್ದರೂ

1. ಈ ವಿಷಯ ತಿಳಿಸಿದುದಕ್ಕೆ ಡಿ. ಡಿ. ಕೋಸಾಂಬಿಯವರಿಗೆ ನಾನು ಋಣಿಯಾಗಿದ್ದೇನೆ.
2. Indische Palaeographie, Strassbury, 1896
3. ಅದೇ, ಪು. 4
4. ಅದೇ

ಆದರಿಂದ ಸದ್ಯಕ್ಕೆ ಉಪಯೋಗವೇನೂ ಆಗಿಲ್ಲ. ಪ್ರೊಫೆಸರ್ ಲ್ಯಾಂಗ್ಡನ್‌ಅವರು ಪ್ರಾಚೀನ ಬ್ರಾಹ್ಮೀಲಿಪಿಯು ಸಿಂಧೂಲಿಪಿಯಿಂದ ಹುಟ್ಟಿದ್ದೆಂದು ತೋರಿಸುವ ಪ್ರಯತ್ನ ಮಾಡಿದ್ದಾರೆ. ಆದರೆ ಹೊಸ ಸಂಶೋಧನೆಗಳು ಈ ಪ್ರತ್ಯೇಕ ಕಾಲಗಳನ್ನು ಸೇರಿಸುವವರೆಗೆ ಮತ್ತು ಸಿಂಧೂ ಲಿಪಿಯ ತೊಡಕು ಪರಿಹಾರವಾಗಿ ಈ ಕತ್ತಲ ಕಾಲದ ಮೇಲೆ ಬೆಳಕು ಬೀಳುವವರೆಗೆ ಅಂಥ ಸಿದ್ಧಾಂತಗಳೆಲ್ಲವೂ ಕೇವಲ ಊಹಾಕ್ಷೇತ್ರದಲ್ಲಿಯೇ ಉಳಿಯುತ್ತವೆ.

ಬರವಣಿಗೆಯು ಬಳಕೆಯಲ್ಲಿತ್ತೆಂಬುದಕ್ಕೆ ಬ್ರಾಹ್ಮಣ, ಬೌದ್ಧ ಜೈನ ಸಾಹಿತ್ಯಗಳಲ್ಲಿ ಆಧಾರಗಳು ದೊರೆಯುತ್ತವೆ. ಆದರೆ ಈ ಗ್ರಂಥಗಳ ಕಾಲವನ್ನು ಖಚಿತವಾಗಿ ನಿರ್ಧರಿಸುವುದು ಸಾಧ್ಯವಿಲ್ಲವಾದುದರಿಂದ ನಿಶ್ಚಿತ ಕಾಲದ ಪಾಶ್ಚಾತ್ಯ ಮೂಲಗಳಿಂದ ತಿಳಿದು ಬರುವ ಪ್ರಮಾಣಗಳಿಗೆ ಹೆಚ್ಚಿನ ಪ್ರಾಮುಖ್ಯ ಕೊಡಬೇಕಾಗುತ್ತದೆ. ಕ್ರಿ.ಪೂ. ೪ನೆಯ ಶತಮಾನದ ಕೊನೆಯ ಭಾಗಕ್ಕೆ ಸಂಬಂಧಿಸುವ ನೇರ್‌ಖೊಸ್ (Nearchos) ನ ಹೇಳಿಕೆಯ ಪ್ರಕಾರ ಹಿಂದುಗಳು ಚೆನ್ನಾಗಿ ಬಡಿದು ಮಾಡಿದ ಬಟ್ಟೆಯ ಮೇಲೆ ಅಕ್ಷರಗಳನ್ನು ಬರೆಯುತ್ತಿದ್ದರು. ಮರದ ಒಳಗಿನ ಮೃದು ತೊಗಟೆಯನ್ನು ಇದೇ ಕೆಲಸಕ್ಕೆ ಬಳಸಲಾಗುತ್ತಿತ್ತೆಂಬುದನ್ನು ಕ್ಯು. ಕರ್ಟಿಯಸ್‌ನ ಹೇಳಿಕೆಯಿಂದ ತಿಳಿಯುತ್ತದೆ. ಅಷ್ಟೇ ಅಲ್ಲ, ಸುಪ್ರಸಿದ್ಧವಾದ ಭೂರ್ಜಪತ್ರದ (Birch bark) ಪ್ರಾಚೀನ ಬಳಕೆಯನ್ನು ಇದು ಸೂಚಿಸುತ್ತದೆ.[1] ಭಾರತದಲ್ಲಿ ಕ್ರಿ. ಪೂ. ೩೨೭-೨೬ರಲ್ಲಿಯೇ ಎರಡು ದೇಶೀಯ ವಸ್ತುಗಳನ್ನು ಬರೆಹಕ್ಕೆ ಬಳಸುವ ರೂಢಿಯಿತ್ತೆಂಬುದನ್ನು ಈ ಹೇಳಿಕೆಗಳು ಸೂಚಿಸುತ್ತವೆ. ಇದರಂತೆಯೇ (ಹರಪ್ಪಾ, ಮೊಹೆಂಜೊದಾರೊಗಳಲ್ಲಿ ದೊರೆತವನ್ನು ಬಿಟ್ಟು ಉಳಿದ) ಪ್ರಾಚೀನ ಭಾರತೀಯ ಶಾಸನಗಳ ಲಿಪಿಪರೀಕ್ಷೆಗಳಿಂದ ಹೊರಪಟ್ಟಿರುವ ಫಲಿತಾಂಶಗಳು ಈ ಸಾಹಿತ್ಯಿಕ ಆಧಾರಗಳಿಗೆ ಹೊಂದುತ್ತವೆ. ಇದು ಕ್ರಿ.ಪೂ. ೫ನೆಯ ಶತಮಾನದಲ್ಲಿ, ಅಥವಾ ನಾವು ತಿಳಿದಿರುವಂತೆ ಅದಕ್ಕೂ ಮುಂಚೆಯೇ, ಬರೆಹವು ಬಹಳ ಕಡೆ ಉಪಯೋಗದಲ್ಲಿತ್ತೆಂಬುದಕ್ಕೆ ಸಾಕ್ಷಿಯಾಗಿದೆ.

ಸಿಂಧೂ ನಾಗರಿಕತೆಯಿಂದ ಹಿಡಿದು ಬ್ರಾಹ್ಮೀ ಮತ್ತು ಖರೋಷ್ಠಿಗಳ ಕಡೆಕಡೆಯ ರೂಪಗಳ ವರೆಗಿನ ಕಾಲ ಬರವಣಿಗೆಯ ವಿಕಾಸದ ಕಾಲ. ಈ ಕಾಲದಲ್ಲಿ ದೊರೆತ ಲಿಪಿರೂಪಗಳ ಬೆಳವಣಿಗೆಯ ಅಭ್ಯಾಸ ಭಾರತೀಯ ಲಿಪಿಶಾಸ್ತ್ರವನ್ನು ಕುರಿತ ಪ್ರತ್ಯೇಕ ನಿಬಂಧದ ಒಂದು ಭಾಗವೇ ಆಗುತ್ತದೆ. ಆದರೆ ಸಿಂಧೂಲಿಪಿ ಅರ್ಥವಾದಲ್ಲದೆ ಈ ಕೆಲಸ ಸಾಧ್ಯವಿಲ್ಲ. ಈ ಕಾಲಾವಧಿಯ ನಂತರ ದೊರೆತ ಲೇಖನಗಳ ವಿಷಯಕ್ಕೆ ಭೂಲರ್ ಬರೆದಿರುವ ಶ್ರೇಷ್ಠ ಪ್ರಬಂಧ ಇಂದಿಗೂ ಅಭ್ಯಾಸಯೋಗ್ಯವಾಗಿದೆ.

ಭಾರತೀಯರು ಬಳಸಿದ ಲೇಖ್ಯವಸ್ತುಗಳಲ್ಲಿ ಈ ಕೆಳಗಿನವುಗಳನ್ನು ಉಲ್ಲೇಖಿಸಬಹುದು.

(a) ಹಿಮಾಲಯ ಪ್ರಾಂತದಲ್ಲಿ ಹೇರಳ ಪ್ರಮಾಣದಲ್ಲಿ ಬೆಳೆಯುವ 'ಭೂರ್ಜ'ವೃಕ್ಷದ ಒಳತೊಗಟೆ. ಅಲೆಗ್ಸಾಂಡರನ ಆಕ್ರಮಣದ ಕಾಲದಲ್ಲಿ ಲೇಖ್ಯವಸ್ತುವಾಗಿ ಬಳಕೆಯಲ್ಲಿತ್ತೆಂದು ಕರ್ಟಿಯಸ್ ಹೇಳಿದ ವಸ್ತು ಇದೇ ಆಗಿದ್ದು ಕ್ರಮೇಣ ಉತ್ತರದೇಶದ ಬೌದ್ಧ ಮತ್ತು ಬ್ರಾಹ್ಮಣ ಸಾಹಿತ್ಯಗಳಲ್ಲಿ ಮೇಲಿನ ಹೆಸರನ್ನು ಪಡೆದಿರಬೇಕು. ಈ ತೊಗಟೆಯ ಮೇಲೆ ಲಿಖಿತವಾಗಿದ್ದು, ಇದುವರೆಗೆ ದೊರೆತವುಗಳಲ್ಲಿ ಅತ್ಯಂತ ಪ್ರಾಚೀನವಾಗಿರುವ ಲೇಖನಗಳೆಂದರೆ ಖೋಟಾನ್‌ನಲ್ಲಿ ದೊರೆತ, ಖರೋಷ್ಠೀ ಲಿಪಿಯ ಧಮ್ಮಪದ ಮತ್ತು ಮೇಸನ್ ಅಫ್ಘಾನಿ

1. ಅದೇ, ಪು. 6

ಸ್ಥಾನದ ಸ್ತೂಪಗಳಲ್ಲಿ ಪತ್ತೆ ಮಾಡಿದ ತಿರುಚುಗಳು ದಾರ ಬಿಗಿದಿರುವ ಈ ತಿರುಚುಗಳಲ್ಲಿ ಬರೆಹವಿದೆ. ಇವುಗಳಾದ ಮೇಲೆ ಗಾಡ್‌ಫ್ರೀ (Godfrey) ಎಂಬಾತ ಸಂಗ್ರಹಿಸಿದ ವಸ್ತುಗಳು ಮತ್ತು ಬವರ್ ಹಸ್ತಪ್ರತಿ (Bower Manuscript) ಗಳನ್ನು ಗಮನಿಸಬೇಕು. ಬವರ್ ಹಸ್ತಪ್ರತಿಯ ಹಾಳೆಗಳನ್ನು ತಾಳಪತ್ರಗಳ ಗಾತ್ರಕ್ಕೆ ಸರಿಯಾಗಿ ಕತ್ತರಿಸಲಾಗಿದೆ. ಅಲ್ಲದೆ ತಾಳಪತ್ರಗಳಲ್ಲಿರುವಂತೆ ಇವುಗಳ ಮಧ್ಯೆಯೂ ರಂಧ್ರವಿದ್ದು ದಾರ ಪೋಣಿಸಿ ಜೋಡಿಸಿ ಡಲು ಅನುಕೂಲವಾಗಿದೆ. ಕಾಲದ ದೃಷ್ಟಿಯಿಂದ ಇವುಗಳಿಗೆ ಈಚಿನವು ಎಂದರೆ ಬಕ್ಷಾಲಿ (Bakhshali Manuscript) ಹಸ್ತಪ್ರತಿ. ಇದಕ್ಕಿಂತ ಸಾಕಷ್ಟು ನಂತರದ ಹಸ್ತಪ್ರತಿ ಗಳೆಂದರೆ ಪೂನಾ, ಲಾಹೋರ್, ಕಲ್ಕತ್ತಾ, ಲಂಡನ್, ಆಕ್ಸ್‌ಫರ್ಡ್, ವಿಯನ್ನಾ ಮತ್ತು ಬರ್ಲಿನ್ ನಗರಗಳ ಗ್ರಂಥಾಗಾರಗಳಲ್ಲಿರುವ ಭೂರ್ಜಪತ್ರದ ಹಸ್ತಪ್ರತಿಗಳು. ಇವುಗಳಲ್ಲಿ ಬಹುಶಃ ಯಾವುದೂ ೧೫ನೆಯ ಶತಮಾನಕ್ಕಿಂತ ಹಿಂದಿನದಲ್ಲ.

(b) ನೇರ್‌ಖೋಸ್ ಉಲ್ಲೇಖಿಸಿರುವ ಹತ್ತಿಬಟ್ಟೆಯ ವಿಷಯವಾಗಿ ಕೆಲವು ಛಂದೋಬದ್ಧ ವಾದ (metrical) ಸ್ಮೃತಿಗಳಲ್ಲಿಯೂ ಮತ್ತು ಶಾತವಾಹನರ ಕಾಲದ ಹಲವು ಶಾಸನಗಳಲ್ಲಿಯೂ ಪ್ರಸ್ತಾಪಗಳಿವೆ. ಆ ಪ್ರಕಾರ ಇದನ್ನು ಸರ್ಕಾರೀ ಮತ್ತು ಖಾಸಗಿ ಲೇಖನಗಳನ್ನು ಬರೆಯಲು ಬಳಸುತ್ತಿದ್ದರು, ಇದನ್ನು ಪಟ, ಪಟಿಕಾ, ಕಾರ್ಪಾಸಿಕಪಟ ಎಂದು ಕರೆಯುತ್ತಿದ್ದರು, Burnell ಮತ್ತು Rice ರ ಪ್ರಕಾರ ಕರ್ನಾಟಕದ ವರ್ತಕರು ಈಗಲೂ ಕಡತ ಎಂಬ ಬಟ್ಟೆ ಯನ್ನು ಬರೆಹಕ್ಕೆ ಬಳಸುತ್ತಾರೆ. ಇದಕ್ಕೆ ಹುಣಿಸೆ ಬೀಜದ ಚರಿಯನ್ನು ಲೇಪಿಸಿ ನಂತರ ಇದ್ದಿಲಿನ ಪುಡಿ ಬಳಿದು ಕಪ್ಪು ಬಣ್ಣಕ್ಕೆ ತಿರುಗಿಸಿರುತ್ತಾರೆ. ಸೀಮೆ ಸುಣ್ಣದಿಂದಲೋ ಅಥವಾ ಸಾಬೂನು ಗಲ್ಲಿನ ಕಡ್ಡಿಯಿಂದಲೋ (steatite pencil) ಅಕ್ಷರಗಳನ್ನು ಬರೆದಿದ್ದು ಬರೆಹವು ಬಿಳುಪಾಗಿ ಅಥವಾ ಕಪ್ಪಾಗಿ ಇರುತ್ತದೆ.

ಭೂಲರ್‌ಗೆ ಜೇಸಲ್‌ಮೀರ್ ಎಂಬ ಊರಿನಲ್ಲಿ ಮಸಿಯಿಂದ ಬರೆದ ಜೈನ ಸೂತ್ರಗಳ ಪಟ್ಟಿ ಯಿರುವ ಒಂದು ರೇಷ್ಮೆಕಟ್ಟು ಸಿಕ್ಕಿತು. ಅದರಂತೆ ಪೇಟರ್‌ಸನ್ (Petterson) ಎಂಬ ವಿದ್ವಾಂಸ ನಿಗೆ ಅಣಹಿಲ್‌ವಾಡ ಪಟಾನ್‌ನಲ್ಲಿ ಒಂದು ಹಸ್ತಲೇಖನ ದೊರಕಿತು. ಈ ಲೇಖನ ಬಟ್ಟೆಯ ಮೇಲಿದೆ; ವಿಕ್ರಮ ಸಂವತ್ಸರ ೧೪೧೮ (೧೩೫೧-೫೨)ರಲ್ಲಿ ಇದು ರಚಿತವಾಗಿದೆ. ಸ್ಟೈನ್ (Stein: ಎಂಬ ವಿದ್ವಾಂಸನಿಗೆ ಯಾಮೇನ್ (Yamen) ಅವಶೇಷಗಳಲ್ಲಿ ಖರೋಷ್ಠೀ ಬರೆಹವಿರುವ ಒಂದು ಬಿಳಿಯ ರೇಷ್ಮೆವಸ್ತ್ರದ ತುಂಡೂ ಮತ್ತು ಮಿರಾನಿನ (Miran) ಪ್ರಾಚೀನ ದೇವಾಲಯಗಳಲ್ಲಿ ಬಣ್ಣದ ರೇಷ್ಮೆವಸ್ತ್ರದ ಮೂರು ದೊಡ್ಡ ತುಂಡುಗಳೂ ದೊರೆತಿವೆ. ಇವುಗಳ ಮೇಲೆ ಖರೋಷ್ಠೀ ಲೇಖನಗಳಿವೆ. ಇವುಗಳಲ್ಲದೆ ಸ್ಟೈನ್‌ಕಿ 'ಜೆಡ್‌ಗೇಟ್' (Jadegate) ನಲ್ಲಿ ಮತ್ತೊಂದು ಖರೋಷ್ಠೀ ಲೇಖನ ಸಿಕ್ಕಿದೆ. ಇದೇ ವಿದ್ವಾಂಸನಿಗೆ ಲೈಮ್ಸ್‌ನ ಗ್ರೇಟ್ ಮ್ಯಾಗ್‌ಜೈನ್‌ನಲ್ಲಿ ರೇಷ್ಮೆ ಬಟ್ಟೆಯ ಒಂದು ಚಿಕ್ಕ ತುಂಡು ದೊರೆತಿದ್ದು ಅದರ ಮೇಲೆ ಭಾರತೀಯ ಬ್ರಾಹ್ಮೀ ಅಕ್ಷರ ಗಳಲ್ಲಿ ಬರೆದ ಉದ್ದನೆಯ ಸಾಲೊಂದಿದೆ. ಈ ಅಕ್ಷರಗಳ ಮಾದರಿ ಇಂಡೋ ಸಿಥಿಯನ್ನರ ಅಥವಾ ಕುಶಾನರ ಕಾಲಕ್ಕೆ ಸಂಬಂಧಿಸಿದ್ದು.

(c) ವಿನಯ ಪಿಟಕ ಮತ್ತು ಜಾತಕಗಳಲ್ಲಿ ಮರದ ಹಲಗೆಗಳ ಪ್ರಸ್ತಾಪವಿದೆ. ಪಶ್ಚಿಮ ಕ್ಷತ್ರಪ ನಹಪಾನನ ಶಾಸನವೊಂದು ಪೌರಮಂಡಿರದಲ್ಲಿ ಸಾಲದ ಒಪ್ಪಂದಗಳನ್ನು ನಮೂದಿಸಿರು ತಿದ್ದ ಫಲಕಗಳ ವಿಷಯವನ್ನು ತಿಳಿಸುತ್ತದೆ. ಬರ್ಮಾ ದೇಶದಲ್ಲಿ ಮೆರುಗೆಣ್ಣೆ (ವಾರ್ನೀಸು) ಬಳಿದ

ಇಂಥ ಫಲಕಗಳು ಸಾಮಾನ್ಯ. ಅಸ್ಸಾಂನಲ್ಲಿ ದೊರೆತ ಇಂಥ ಭಾರತೀಯ ಹಸ್ತ ಲೇಖನವೊಂದು ಆಕ್ಸಫರ್ಡಿನ ಬಾಡ್ಲಿಯನ್ ಗ್ರಂಥ ಭಂಡಾರ (Bodleian Library) ದಲ್ಲಿದೆ.

(d) ತಾಳಪತ್ರಗಳು ಲೇಖ್ಯ ಸಾಮಗ್ರಿಗಳಾಗಿದ್ದುವೆಂಬುದನ್ನು ಹ್ಯೂ ಅನ್ ಚಾಂಗ್ (Hsuanchung) (ಕಿ.ಶ. ೭ನೇ ಶತಮಾನ) ಪ್ರಸ್ತಾಪಿಸುತ್ತಾನೆ. ಆದರೆ ತಾಳಪತ್ರಗಳ ಉಪಯೋಗ ಇನ್ನೂ ಮುಂಚೆಯಿಂದಲೇ ಇತ್ತು.

ಹೊರಿಯೂಜಿ (Horiuzi) ತಾಳಪತ್ರಗಳ ಹಸ್ತಪ್ರತಿ ಆರನೆಯ ಶತಮಾನದಷ್ಟು ಹಿಂದಿನದು. ಕಾಷ್‌ಗರ್‌ನಲ್ಲಿ ದೊರೆತ ಗಾಡ್ ಫ್ರೇ ಸಂಗ್ರಹದ ಕೆಲವು ತುಂಡು ಲೇಖನಗಳನ್ನು ಲಿಪಿಯ ಆಧಾರದ ಮೇಲೆ ನಾಲ್ಕನೆಯ ಶತಮಾನಕ್ಕೆ ಸೇರಿದವುಗಳೆಂದೂ ಬವರ್ ಹಸ್ತಪ್ರತಿಗಿಂತ ಹಳೆಯದೆಂದೂ ತೀರ್ಮಾನಿಸಲಾಗಿದೆ. ಬವರ್ ಹಸ್ತಪ್ರತಿಯ ಭೂರ್ಜಪತ್ರದ ಹಾಳೆಗಳನ್ನು ತಾಳಪತ್ರಗಳ ಅಳತೆಗೆ ಸರಿಯಾಗಿ ಕತ್ತರಿಸಲಾಗಿದೆ. ಇದರಂತೆಯೇ ಕ್ರಿ.ಶ. ಒಂದನೆಯ ಶತಮಾನಕ್ಕಿಂತ ಈಚಿನದಲ್ಲದ ತಕ್ಷಶಿಲೆಯ ತಾಮ್ರದ ದಾನ ಶಾಸನವೊಂದನ್ನು ತಾಳಪತ್ರದ ಗಾತ್ರಕ್ಕೆ ಕತ್ತರಿಸಲಾಗಿದೆ. ಇವನ್ನು ನೋಡಿದರೆ ಅಷ್ಟು ಹಿಂದಿನ ಕಾಲಕ್ಕಾಗಲೇ ತಾಳಪತ್ರಗಳ ತವರಾದ ದಖನ್ನಿನಿಂದ ನೂರಾರು ಮೈಲಿ ದೂರದಲ್ಲಿರುವ ಪಂಜಾಬಿನಲ್ಲಿ ತಾಳಪತ್ರಗಳು ಉಪಯೋಗದಲ್ಲಿದ್ದುವೆಂದು ಹೇಳಬಹುದು. ಅವುಗಳ ಉದ್ದ ಒಂದರಿಂದ ಮೂರು ಅಡಿಗಳವರೆಗೂ ಅಗಲವು ಒಂದೂಕಾಲು ಇಂಚಿನಿಂದ ನಾಲ್ಕು ಇಂಚುಗಳವರೆಗೂ ಇದೆ.

ಭಾರತದ ತಾಳಪತ್ರದ ಹಸ್ತಪ್ರತಿಗಳನ್ನು ಕೋರಿಫಾ ಅಂಬ್ರಾಕ್ಯುಲಿಫೆರಾ (Corypha Umbraculifera) ಅಥವಾ ಬೊರಾಸಸ್ ಫ್ಲಾಬೆಲ್ಲಿಫೆರಾ (Borassus flabellifera) ಗಳಿಂದ ಮಾಡಲಾಗಿದೆ. ಇವುಗಳಲ್ಲಿ ಮೊದಲನೆಯದಕ್ಕೆ ಭಾರತವೇ ಮೂಲಸ್ಥಳವಾದರೂ ಕಡೆಯದು ಬಹುಶಃ ಆಫ್ರಿಕಾದಿಂದ ಬಂದುದಾಗಿರಬೇಕು. ಈ ಎರಡು ಮರಗಳ ಎಲೆಗಳೂ ಉದ್ದವಾಗಿದ್ದು ಮಧ್ಯೆ ಕಡ್ಡಿಯಿದ್ದು ತುದಿ ಚೂಪಾಗುತ್ತ ಹೋಗಿರುತ್ತವೆ. ಹಾರ್ನೆಲ್ (Hoernle) ಪ್ರಸಿದ್ಧವಾದ ತಾಳಪತ್ರ ಹಸ್ತಪ್ರತಿಗಳನ್ನು ಕೂಲಂಕಷವಾಗಿ ಪರೀಕ್ಷಿಸಿ ಪ್ರಾಚೀನ ತಾಳಪತ್ರ ಹಸ್ತಪ್ರತಿಗಳೆಲ್ಲವೂ ಕೋರಿಫಾದ ಎಲೆಗಳಿಂದ ತಯಾರಾದುವೆಂಬ ತೀರ್ಮಾನಕ್ಕೆ ಬಂದನು.

ಉತ್ತರ, ಪೂರ್ವ, ಮಧ್ಯ ಮತ್ತು ಪಶ್ಚಿಮ ಭಾರತಗಳಲ್ಲೆಲ್ಲಾ ಮಸಿಯಿಂದ ಬರೆಯುತ್ತಿದ್ದರೆಂಬುದನ್ನು ಹೊರಿಯಾಜಿ ಹಸ್ತಪ್ರತಿಗಳಿಂದ ಮೊದಲುಗೊಂಡು ಎಲ್ಲ ಹಸ್ತಪ್ರತಿಗಳೂ ಸಮರ್ಥಿಸುತ್ತವೆ. ದ್ರಾವಿಡ ಜಿಲ್ಲೆಗಳು (Dravidian districts) ಮತ್ತು ಒರಿಸ್ಸಾದಲ್ಲಿ ಹಿಂದೆಯೂ ಮತ್ತು ಈಗಲೂ ಅಕ್ಷರಗಳನ್ನು ಕಂಟದಿಂದ ಕೊರೆದು ಮೇಲೆ ದೀಪದ ಕಾಡಿಗೆ ಅಥವಾ ಇದ್ದಿಲಿನ ಹುಡಿಯನ್ನು ಬಳಿದು ಕಪ್ಪಗೆ ಕಾಣುವಂತೆ ಮಾಡುತ್ತಿದ್ದರು. ಎಲ್ಲಾ ತಾಳಪತ್ರ ಹಸ್ತಪ್ರತಿಗಳಿಗೂ ಮಧ್ಯದಲ್ಲಿ ಅಥವಾ ಅಪರೂಪವಾಗಿ, ಕಾಷ್‌ಗರ್‌ನಲ್ಲಿ ದೊರೆತ ಮಾದರಿಗಳಲ್ಲಿರುವಂತೆ, ಎಡಭಾಗದಲ್ಲಿ ಒಂದು ರಂಧ್ರವಿರುತ್ತದೆ. ಇವುಗಳ ಮೂಲಕ ಹಾಳೆಗಳನ್ನು ಜೋಡಿಸಲು ದಾರ (ಸೂತ್ರ ಅಥವಾ ಶರಯಂತ್ರಕ) ಗಳನ್ನು ಪೋಣಿಸಲಾಗುತ್ತಿತ್ತು.

(e) ಸುಬಂಧು ಕವಿಯ ವಾಸವದತ್ತಾ ಕೃತಿಯಲ್ಲಿ ಬರುವ ಒಂದು ಉಲ್ಲೇಖದ ಆಧಾರದಿಂದ ಚರ್ಮಗಳನ್ನು ಬರೆಯಲು ಬಳಸಲಾಗುತ್ತಿತ್ತೆಂದು ಊಹಿಸಲಾಗಿದೆ. ಆದರೆ ಧಾರ್ಮಿಕ ದೃಷ್ಟಿಗೆ ಅದು ಅಪವಿತ್ರವೆಂಬುದನ್ನು ಗಣಿಸಿದಾಗ, ಹಿಂದೂ ಬರವಣಿಗೆಗಳಿಗೆ ಸಂಬಂಧಿಸಿದಂತೆ ಈ ಊಹೆ ಸ್ವಲ್ಪ ಅಸಾಧುವಾಗಿ ಕಾಣುತ್ತವೆ. ಯೂರೋಪ್ ದೇಶದ ಸಂಗ್ರಹ ವಸ್ತುಗಳಲ್ಲಿ ಕಾಷ್

ಗರ್‌ನಲ್ಲಿ ದೊರೆತ ಕೆಲವು ಚರ್ಮದ ತುಂಡುಗಳಿದ್ದು ಅವುಗಳ ಮೇಲೆ ಭಾರತೀಯ ಲಿಪಿ ಇದೆಯೆಂದು ಹೇಳಲಾಗಿದೆ. ಚೀನಾ ತುರ್ಕಿ ಸ್ತಾನದಲ್ಲಿ ತಾವು ನಡೆಸಿದ ಸಂಶೋಧನೆಗಳಿಂದಾಗಿ ತಾವು ಚರಿತ್ರೆಯಲ್ಲಿ ಹೊಸ ಅಧ್ಯಾಯವೊಂದನ್ನು ರಚಿಸಿದ (ಈಗ ಸರ್ ಆರೆಲ್) ಸ್ಟೈನ್ ರವರು ನೀಯಾದಲ್ಲಿ ಚರ್ಮದ ಮೇಲೆ ಬರೆದಿರುವ ಸುಮಾರು ಎರಡು **ಡಜನ್** ಖರೋಷ್ಠೀ ಲೇಖನಗಳನ್ನು ಪತ್ತೆ ಮಾಡಿದರು. ಆ ಬರೆಹಗಳೆಲ್ಲ ಅಧಿಕೃತ ಲೇಖನಗಳೆಂಬುದು ಸ್ಪಷ್ಟವಾಗಿದ್ದು ಬಹಳ ಲೇಖನಗಳಲ್ಲಿ ಕಾಲವನ್ನೂ ತಿಳಿಸಿದೆ. ಭಾರತದ ನಾಗರಿಕತೆಯಿದ್ದು ಬೌದ್ಧರು ವಾಸಿಸುತ್ತಿರುವ ಪ್ರದೇಶದಲ್ಲಿ ಇಂಥ ಲೇಖ್ಯ ವಸ್ತುವಿರಬಹುದೆಂದು ಯಾರೂ ಊಹಿಸಲಾರರು ಈ ಸಂಬಂಧದಲ್ಲಿ ವಿನ್ಸೆಂಟ್ .ಸ್ಮಿತ್ (J. R. A. S. (1902. 282) ಗೆ ಬರೆದ ತನ್ನ ಚಿಕ್ಕ ಲೇಖನದಲ್ಲಿ) ಸ್ಟ್ರಾಬೋವಿನ ಹೇಳಿಕೆಯೊಂದನ್ನು ಪ್ರಸ್ತಾಪಿಸುತ್ತಾನೆ. ಕ್ರಿ. ಶ. ೧೪ರಲ್ಲಿ ಕಾಲವಾದ ಅಗಸ್ಟಸ್ ಸೀಜರನಿಗೆ ಚರ್ಮ ಕಾಗದದ ಮೇಲೆ ಬರೆದು ಕಳಿಸಿದ್ದ ಭಾರತೀಯ ಸರ್ಕಾರೀ ದಾಖಲೆಯೊಂದನ್ನು ಸ್ಟ್ರಾಬೊ (XV, 72, 73, ಮ್ಯಾಕ್‌ಗ್ರಿಂಡಲ್‌ರ ಭಾಷಾಂತರ: ಸ್ಟ್ರಾಬೊ ವರ್ಣಿಸಿದ ಪ್ರಾಚೀನ ಭಾರತ. ಪು. ೭೧) ಗಮನಿಸಿದ್ದಾನೆ. ಹೀಗೆ ಧಾರ್ಮಿಕ ದೃಷ್ಟಿಯಿಂದ ಅಶುದ್ಧವೆಂದು ಪರಿಗಣಿತವಾಗಿದ್ದರೂ ಪ್ರಾಚೀನ ಭಾರತೀಯ ಲೇಖನಗಳಿಗೆ ಚರ್ಮ ಅಥವಾ ಚರ್ಮ ಕಾಗದಗಳನ್ನು ಬಳಸುತ್ತಿರಲಿಲ್ಲವೆಂದು ಹೇಳುವಂತಿಲ್ಲ.

(f) ಭಾರತೀಯ ಸಾಹಿತ್ಯದಲ್ಲಿ ಲೋಹಗಳ ಪ್ರಸ್ತಾಪವಿರುವುದು ಮಾತ್ರವಲ್ಲ. ಅನೇಕ ಮುಖ್ಯ ದಾನಶಾಸನಗಳೇ ಲೋಹಫಲಕಗಳ ಮೇಲೆಯೇ ರಚಿತವಾಗಿವೆ. ಬಂಗಾರ ಮತ್ತು ಬೆಳ್ಳಿಯ ಹಲಗೆಗಳನ್ನು ಲೇಖನಕ್ಕೆ ಬಳಸಲಾಗಿದೆ. ತಕ್ಷಶಿಲೆಯ ಬಳಿಯ ಗಾಂಗೂ ಎಂಬ ಪ್ರದೇಶದಲ್ಲಿರುವ ಸ್ತೂಪಗಳಲ್ಲಿ ಮತ್ತು ಭಟ್ಟಿಪ್ರೋಲು ಎಂಬ ಸ್ಥಳದಲ್ಲಿ ಹರಕೆ ಶಾಸನಗಳ ಅನೇಕ ಮಾದರಿಗಳು ದೊರೆತಿವೆ. ಇವುಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ದೊರೆತವೆಂದರೆ ತಾಮ್ರ ಫಲಕಗಳು ('ತಾಮ್ರಪಟ', 'ತಾಮ್ರ ಶಾಸನ' ಮತ್ತು ತಾಮ್ರ—ಈ ಎಲ್ಲ ಹೆಸರುಗಳೂ ಇವೆ) ದೀರ್ಘಕಾಲ ಇರಬೇಕಾಗಿದ್ದ ಅನೇಕ ರೀತಿಯ ದಾಖಲೆಗಳಿಗೆ, ವಿಶೇಷವಾಗಿ ದಾನ ಶಾಸನಗಳಿಗೆ, ಇವುಗಳನ್ನು ಬಳಸಿದೆ. ಫಾಹಿಯಾನನು (ಕ್ರಿ ಶ ೪೦೦) ಬುದ್ಧನ ಕಾಲದಿಂದಲೂ ದತ್ತವಾಗಿ ಬಂದ ಕೆಲವು ತಾಮ್ರ ಫಲಕಗಳ ಬಗ್ಗೆ ಪ್ರಸ್ತಾಪಿಸಿದ್ದಾನೆ. ಮೌರ್ಯರ ಕಾಲದಲ್ಲಿ ಸರ್ಕಾರೀ ನಿರ್ಣಯಗಳನ್ನು ತಾಮ್ರದ ಮೇಲೆ ಕೊರೆಯುತ್ತಿದ್ದರೆಂದು ಸೋಘೌರ ಫಲಕವು ತಿಳಿಸುತ್ತದೆ. ಅಕ್ಷರಗಳು ಮತ್ತು ಅವುಗಳ ಮೇಲಿನ ಲಾಂಛನಗಳನ್ನು ಕಂಟ ಅಥವಾ ಜೂಪಾದ ಮರಗಡ್ಡಿಯಿಂದ ಕೊರೆದ ಮರಳಚ್ಚಿನಲ್ಲಿ ಎರಕ ಹೊಯ್ದು ಈ ಶಾಸನವನ್ನು ತಯಾರಿಸಲಾಗಿದೆ. ಆದ್ದರಿಂದ ಅಕ್ಷರ ಲಾಂಛನಗಳೆರಡೂ ಫಲಕದ ಮೇಲೆ ಸ್ಫುಟವಾಗಿ ಎದ್ದು ಕಾಣುತ್ತವೆ. ಉಳಿದ ತಾಮ್ರ ಪಟಗಳೆಲ್ಲವೂ ಸುತ್ತಿಗೆಯಿಂದ ಬಡಿದು ಮಾಡಿದಂಥವು. ಅವುಗಳಲ್ಲಿ ಕೆಲವುಗಳ ಮೇಲೆ ಸುತ್ತಿಗೆಯ ಬಡಿತಗಳೂ ಸಹ ಎದ್ದು ಕಾಣುತ್ತವೆ. ಇವುಗಳು ಬೇರೆ ಬೇರೆ ದಪ್ಪ ಮತ್ತು ಅಳತೆಯವಾಗಿವೆ. ಕೆಲವು ಶಾಸನಗಳು ಎರಡಾಗಿ ಮಡಿಸಲು ಸಾಧ್ಯವಿರುವ. ಕೆಲವೇ ಔನ್ಸು ತೂಕದ ತೆಳ್ಳನೆಯ ತಗಡುಗಳ ಮೇಲಿವೆ. ಇನ್ನು ಕೆಲವು ವಿಪರೀತ ದೊಡ್ಡವಾಗಿದ್ದು ಎಂಟು ಇಲ್ಲವೆ ಒಂಬತ್ತು ಪೌಂಡು ಅಥವಾ ಇನ್ನೂ ಹೆಚ್ಚು ಭಾರದ್ದಾಗಿವೆ. ಈ ತಾಮ್ರ ಫಲಕಗಳ ಅಳತೆಯು ಸ್ವಲ್ಪಮಟ್ಟಿಗೆ ಅವು ರಚಿತವಾದ ಪ್ರದೇಶಗಳಲ್ಲಿ ಬಳಕೆಯಲ್ಲಿದ್ದ ಲೇಖನ ಸಾಧನಗಳಮೇಲೆ, ಸ್ವಲ್ಪಮಟ್ಟಿಗೆ ಬರೆಯಬೇಕಾದ ಶಾಸನದ ಉದ್ದ, ಲೇಖಕನ ಕೈ ಬರೆಹದ ರೀತಿ—ಇತ್ಯಾದಿಗಳ ಮೇಲೆ ನಿರ್ಣೀತವಾಗುತ್ತದೆ. ಅಕ್ಕಸಾಲಿಗರು ಸಾಮಾನ್ಯವಾಗಿ ತಮಗೆ ಕೊಟ್ಟ ಮೂಲವನ್ನು ತದ್ವತ್ತಾಗಿ ಅನುಕರಿಸಿ ಪ್ರತಿಮಾಡುತ್ತಿದ್ದರು.

ಆದ್ದರಿಂದ ಶಾಸನಗಳು ತಾಳಪತ್ರದ ಮೇಲಿದ್ದರೆ ತಾಮ್ರ ಫಲಕಗಳೂ ಅವುಗಳಂತೆಯೇ ಅಗಲದಲ್ಲಿ ಕಿರಿದಾಗಿ ಮತ್ತು ಉದ್ದವಾಗಿ ಇರುತ್ತಿದ್ದವು. ಶಾಸನಗಳು ಭೂರ್ಜಪತ್ರದ ಮೇಲಿದ್ದರೆ ಫಲಕಗಳು ಹೆಚ್ಚು ಅಗಲವಾಗಿರುತ್ತಿದ್ದುವಲ್ಲದೆ ಬಹುವೇಳೆ ಚೌಕಾಕೃತಿಗೆ ಸಮೀಪವಾಗಿರುತ್ತಿದ್ದುವು. ಚಿಕ್ಕ ಫಲಕಗಳು ದಕ್ಷಿಣ ಭಾರತಕ್ಕೂ, ದೊಡ್ಡ ಫಲಕಗಳು ಅಲ್ಲಿಂದ ಉತ್ತರದ ಪ್ರದೇಶಗಳಿಗೂ ವಿಶಿಷ್ಟವಾದುವಾಗಿವೆ. ಒಂದಕ್ಕಿಂತ ಹೆಚ್ಚು ಫಲಕಗಳು ಅಗತ್ಯವಾದಾಗ ಫಲಕಗಳಲ್ಲಿರುವ ದುಂಡನೆಯ ರಂಧ್ರಗಳಲ್ಲಿ ಪೋಣಿಸಿದ ತಾಮ್ರದ ಉಂಗುರಗಳಿಂದ ಆ ಫಲಕಗಳನ್ನು ಒಟ್ಟಾಗಿ ಬಂಧಿಸುತ್ತಿದ್ದರು. ದಕ್ಷಿಣದಲ್ಲಿ ಒಂದೇ ಉಂಗುರವಿರುವುದು ಕಂಡುಬರುತ್ತದೆ. ಅನೇಕ ತಾಮ್ರ ವಿಗ್ರಹಗಳ ಕೆಳಭಾಗದಲ್ಲಿ ಹರಕೆ ಶಾಸನಗಳಿವೆ.

(g) ಕೃತಕ ರೀತಿಯಲ್ಲಿ ನಯಗೊಳಿಸಿದ ಅಗ್ನಿಶಿಲೆಯ (basalt) ಇಲ್ಲವೆ ಜ್ವಾಲಾಮುಖಿ ಶಿಲೆಯ (Trap) ವೃತ್ತಾಕಾರದ ಕಲ್ಲುಗಳು, ಕಲಾಪೂರ್ಣವಾಗಿ ಕಡೆದಿರುವ ಮರಳುಗಲ್ಲಿನ ಕಂಬಗಳು ಅಥವಾ ಸ್ಫಟಿಕದ ಪಟ್ಟಕ (prism) ಗಳು—ಹೀಗೆ ಅನೇಕ ಬಗೆಯ ಕಲ್ಲುಗಳು ಬಹು ಹಿಂದಿನಿಂದ ಲೇಖನಕಾರ್ಯಕ್ಕೆ ಬಳಕೆಯಾಗಿವೆ. ಆ ಲೇಖನಗಳಲ್ಲಿ ಅಧಿಕೃತ ಬರೆಹಗಳಿಂದ ಹಿಡಿದು ಕಾವ್ಯಕೃತಿಗಳವರೆಗೆ ಎಲ್ಲ ಬಗೆ ಬರೆಹಗಳೂ ಇವೆ. ಚಾಹಮಾನ ದೊರೆಯಾದ ನಾಲ್ಕನೆಯ ವಿಗ್ರಹದೇವನೂ ಅವನ ಆಸ್ಥಾನ ಕವಿಯಾದ ಸೋಮದೇವನೂ ರಚಿಸಿದ ನಾಟಕಗಳ ದೀರ್ಘಭಾಗಗಳು ಅಜ್ಮೀರದಲ್ಲಿ ಸಿಕ್ಕಿವೆ. ಹಾಗೆಯೇ ಅನೇಕ ಸರ್ಗಗಳ ಜೈನ ಸ್ಥಳ ಪುರಾಣವೊಂದು ಬಿಜ್ಯೊಲ್ಲಿಯಲ್ಲಿದೆ.

(h) ಬೌದ್ಧಸೂತ್ರಗಳನ್ನು ಕೊರೆದಿರುವ ಇಟ್ಟಿಗೆಗಳು ವಾಯುವ್ಯ ಪ್ರಾಂತ್ಯಗಳಲ್ಲಿ ದೊರೆತಿವೆ. ಒಣಗಿಸುವ ಮುಂಚೆ ಹಸಿಮಣ್ಣಿನ ಮೇಲೆಯೇ ಅಕ್ಷರಗಳನ್ನು ಕೊರೆದಿರುವುದು ಸ್ಪಷ್ಟವಾಗಿದೆ.

(i) ಕಾಗದದ ಹಸ್ತಪ್ರತಿಗಳು ಸಾಮಾನ್ಯವಾಗಿ ಕ್ರಿ. ಶ. ೧೩ನೆಯ ಶತಮಾನಕ್ಕಿಂತಲೂ ಹೆಚ್ಚು ಪ್ರಾಚೀನವಾಗಿರುವುದಿಲ್ಲ. ಜಿಪ್ಸಮ್ಮನ್ನು ಲೇಪಿಸಿರುವ ವಿಶಿಷ್ಟರೀತಿಯ ಕಾಗದವೊಂದರ ಮೇಲೆ ಬರೆದಿರುವ ಪ್ರಾಚೀನ ಹಸ್ತಪ್ರತಿಗಳು ಕಾಷ್‌ಗರ್‌ನಲ್ಲಿ ದೊರೆತಿವೆ. ಇವುಗಳಲ್ಲಿ ಯಾವುದಾದರೂ ಭಾರತದಿಂದ ಬಂದಿರಬಹುದೇ ಎಂಬುದು ಸಂದೇಹಾಸ್ಪದವಾದ ವಿಷಯ. ಅವುಗಳೆಲ್ಲ ಮಧ್ಯ ಏಷ್ಯಾದಲ್ಲಿ ರಚಿತವಾದುವೆಂದು ಹಾರ್ನೆಲ್‌ನ ಅಭಿಪ್ರಾಯವಾಗಿತ್ತು. ಕಾಗದದ ಹಸ್ತಪ್ರತಿಗಳ ವಿಷಯದಲ್ಲಿ ಮಾಡಬೇಕಾದ ಸಂಶೋಧನೆ ಇನ್ನೂ ಬಹಳವಿದೆ. ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಕೇಂದ್ರಗಳಿಂದ ನಮಗೆ ದೊರೆತ ಈ ಕಾಗದ ಹಸ್ತಪ್ರತಿಗಳ ಸಾಮಗ್ರಿಯ ಅಭ್ಯಾಸದ ಬಗ್ಗೆ ವ್ಯವಸ್ಥಿತವಾದ ಇಲ್ಲವೆ ಸಂತತವಾದ ಪ್ರಯತ್ನ ಈವರೆಗೂ ನಡೆದಿಲ್ಲ. ಈ ದಿಕ್ಕಿನಲ್ಲಿ ಅಭ್ಯಾಸ ನಡೆಸಿದ್ದಾದರೆ ಹಸ್ತಪ್ರತಿಯೊಂದರ ಕಾಲವನ್ನು ಒಪ್ಪಬಹುದಾದ ಮಿತಿಗಳಲ್ಲಿ ಗೊತ್ತುಮಾಡುವುದು ನಮಗೆ ಸಾಧ್ಯವಾಗಬಹುದು. ಅದರ ರಚನೆ, ರೂಪ, ಅಳತೆ ಮತ್ತು, ಒಂದು ವೇಳೆ ಇದ್ದ ಪಕ್ಷದಲ್ಲಿ ಜಲಚಿಹ್ನೆ (water marks) ಗಳ ಅಧ್ಯಯನದಿಂದ ಹಸ್ತಪ್ರತಿಗಳನ್ನು ರಚಿಸಿರುವ ಕಾಗದ ತನ್ನ ಕಾಲವರ್ಗೀಕರಣಕ್ಕೆ ಅವಕಾಶಕೊಡಬಹುದು. ಮತ್ತು ಹಸ್ತಪ್ರತಿಯ ಕಾಲನಿರ್ಣಯಕ್ಕೆ ಪ್ರಾಚೀನ ಲಿಪಿ ಶಾಸ್ತ್ರದ ಜೊತೆಗೆ ಇದೂ ಒಂದು ಪ್ರತ್ಯೇಕ ಪ್ರಮಾಣವಾಗಬಹುದು. ಒಂದು ಅರ್ಥದಲ್ಲಿ ಇದು ಐತಿಹಾಸಿಕ ಪ್ರಾಚೀನ ಲಿಪಿಶಾಸ್ತ್ರದ (Historical palaeography) ತೀರ್ಮಾನಗಳನ್ನು ಪರೀಕ್ಷಿಸುವ ಸಾಧನವಾಗಬಲ್ಲದು.

ಬಹು ಪ್ರಾಚೀನ ಕಾಲದಿಂದಲೂ ಮಸಿಯನ್ನು ಬರೆಹಕ್ಕೆ ಬಳಸುತ್ತಿದ್ದರೆಂದು ತೋರುತ್ತದೆ. ಹೊಟ್ಟೆಯ ಮೇಲೆ ಮಲಗಿ ತಲೆಯೆತ್ತಿದಂತಿರುವ ಬೆನ್ನಿನಲ್ಲಿ ಆಳವಾದ ಹೊಂಡವಿರುವ ಪ್ರಾಣಿರೂಪದ ಜಾಡಿಯೊಂದು ಮೊಹೆಂಜೊದಾರೊವಿನಲ್ಲಿ ಸಿಕ್ಕಿದೆ. ಅದು ಮಸಿಭಾವಿಯ ಮಾದರಿಯಿರಬಹುದೆಂದು ಮೆಕಾಯ್ ಮತ್ತು ಇತರರು ಊಹಿಸಿದ್ದಾರೆ. ಹೆಚ್ಚು ತಿಳಿದ ಕಾಲಕ್ಕೆ ಬಂದರೆ ನೇರ್ಚೋಸ್ ಮತ್ತು ಕ್ಯು. ಕರ್ಟಿಯಸ್‌ರ ಹೇಳಿಕೆಗಳು ಕ್ರಿ. ಪೂ. ೪ನೆಯ ಶತಮಾನಕ್ಕಾಗಲೇ ಭಾರತದಲ್ಲಿ ಮಸಿ ಉಪಯೋಗವಾಗಿರಬಹುದಾದ ಸಂಭಾವ್ಯತೆಯನ್ನು ಹೆಚ್ಚಿಸುತ್ತವೆ. ಕಡಮೆಯೆಂದರೆ ಕ್ರಿ. ಶ. ೧ನೆಯ ಶತಮಾನಕ್ಕಾಗಲೇ ಅದಕ್ಕಿದ್ದ ಜನಪ್ರಿಯತೆ ಖೋಟಾನಿನ ಖರೋಷ್ಠೀ ಲೇಖನಗಳಿಂದ ಸಿದ್ಧವಾಗುತ್ತದೆ. ಆದರೆ ಈವರೆಗೆ ತಿಳಿದಿರುವುದರಲ್ಲಿ ಅತಿ ಪ್ರಾಚೀನವದ ಮಸಿ ಬರೆಹವೆಂದರೆ ಅಂಧೇರ್‌ನ ಸ್ತೂಪದ ಅಸ್ಥಿಭರಣಿಯ ಮೇಲಿರುವ ಲೇಖನ. ಅದು ಕ್ರಿಸ್ತಪೂರ್ವ ೨ನೆಯ ಶತಮಾನಕ್ಕಿಂತ ಈಚಿನದಲ್ಲವೆಂಬುದು ಖಂಡಿತ. ಅಜಂತಾ ಗುಹೆಗಳಲ್ಲಿ ಈಗಲೂ ವರ್ಣರಚಿತವಾದ ಲೇಖನಗಳು ದೊರೆಯುತ್ತಿವೆ. ಕೆಲಕಾಲಾನಂತರ ಜೈನರು ತಮ್ಮ ಹಸ್ತಪ್ರತಿಗಳಿಗೆ ಬಣ್ಣದ ಮಸಿಯನ್ನು ವಿಶೇಷವಾಗಿ ಬಳಸಿದರು. ಪ್ರಾಚೀನ ಕಾಲದಲ್ಲಿಯೇ ಸೀಮೆ ಸುಣ್ಣದ ಜೊತೆ ಕೆಂಪು ಸೀಸ ಅಥವಾ ಹಿಂಗುಲವನ್ನು ಮಸಿಗೆ ಬದಲಾಗಿ ಬಳಸುತ್ತಿದ್ದರು.

ಬರೆಯುವ ಸಾಧನಕ್ಕೆ ಸಾಮಾನ್ಯವಾದ ಹೆಸರು ಲೇಖನಿ. ಇದು ಕಂಟ, ಸೀಸಗಡ್ಡಿ, (pencils ?) ಕುಂಚಗಳು, ಲಾಳದ ಕಡ್ಡಿ (Reed) ಮತ್ತು ಮರಗಡ್ಡಿ (wooden pens) ಗಳನ್ನು ಒಳಗೊಳ್ಳುತ್ತದೆ. ಕ್ರಿ. ಪೂ. ೪ನೆಯ ಶತಮಾನಕ್ಕಾಗಲೇ ಲೇಖಕ ವೃತ್ತಿಯವನನ್ನು ಲಿಪಿಕಾರ ಅಥವಾ ಲಿಬಿಕಾರ ಎಂದು ಕರೆದಿದೆ. ಕ್ರಿ. ಶ. ೭ ಮತ್ತು ೮ನೆಯ ಶತಮಾನಗಳಲ್ಲಿ ಅವರನ್ನು ದಿವಿರಪತಿ ಎಂದು ನಿರ್ದೇಶಿಸಲಾಗಿದೆ. ಹನ್ನೊಂದನೆಯ ಶತಮಾನದೀಚೆಗೆ ಅವನನ್ನು ಕಾಯಸ್ಥ ಎಂದೂ ಕರೆದಿದೆ. ಆದರೆ ಈ ಕಾಯಸ್ಥ ಪದ ಕ್ರಿಸ್ತಶಕ ೭೩೮-೭೩೯ರ ಕಣಸ್ವ ಶಾಸನದಲ್ಲಿ ಮೊದಲ ಸಲ ಕಾಣಿಸಿಕೊಂಡಿದ್ದು ಅಲ್ಲಿ ಜಾತಿನಾಮವಾಗಿ ಬಂದಿದೆ. ಕರಣ(ಕ), ಅಥವಾ ಅಪರೂಪವಾಗಿ ಕರಣಿನ್, ಶಾಸನಿಕ ಮತ್ತು ಧರ್ಮಲ್ಲೇಖಿನ್—ಇವು ಶಾಸನ ಲೇಖಕರ ಇತರ ವೃತ್ತಿನಾಮ (designation)ಗಳು. ಅಂದವಾದ ಬರವಣಿಗೆಯ ದೃಷ್ಟಿಯಿಂದ ಭಾರತೀಯ ಹಸ್ತಪ್ರತಿಗಳು ಅಷ್ಟು ಮಹತ್ವದವಲ್ಲ.

ಸಾಲುಗಳು, ಪದಜೋಡಣೆ, ವಿರಾಮ ಚಿಹ್ನೆ ಮತ್ತು ಇತರ ವಿವರಗಳಿಗೆ ಸಂಬಂಧಿಸಿದಂತೆ ಶಾಸನಗಳ ಹಾಗೂ ಹಸ್ತಪ್ರತಿಗಳ ಹೊರಸ್ವರೂಪವನ್ನು ಈ ಘಟ್ಟದಲ್ಲಿ ತಿಳಿಯುವುದು ಅಗತ್ಯ.

ನುಣುಪುಗಲ್ಲುಗಳ ಮೇಲೆ ಕೊರೆದ ಅತಿ ಪ್ರಾಚೀನ ಶಾಸ್ತ್ರಗಳಲ್ಲಿಯೇ ಲಿಪಿಕಾರರು (inscribers) ನೇರವಾದ ಸಾಲುಗಳನ್ನು ರಚಿಸಲು ಮತ್ತು ಮಾತೃಕೆಯ ಮೇಲ್ಭಾಗದ ಕೊನೆಗಳು ಸಮಾನ ಎತ್ತರದವಾಗಿರುವಂತೆ ಮಾಡಲು ಪ್ರಯತ್ನಿಸಿದ್ದಾರೆ. ಅಶೋಕನ ರೂವಾರಿಗಳ (masons) ಈ ಪ್ರಯತ್ನ ಕೆಲವು ಅನುಗತ (consecutive) ಪದಗಳಿಂದ ಮುಂದಕ್ಕೆ ಯಶಸ್ವಿಯಾಗಿಲ್ಲ. ಆದರೆ ಅದೇ ಕಾಲಕ್ಕೆ ಸೇರಿದ ಘೋಸುಂದೀ ಶಾಸನದಂಥ ಇತರ ಶಾಸನಗಳಲ್ಲಿ ಆಮೇಲಿನ ಮತ್ತು ಇನ್ನಷ್ಟು ಉಪಯುಕ್ತವಾದ ಕ್ರಮವನ್ನು ಹೆಚ್ಚು ಎಚ್ಚರಿಕೆಯಿಂದ ಅನುಸರಿಸಲಾಗಿದೆ. ಈ ಕ್ರಮದ ಪ್ರಕಾರ ಸ್ವರಚಿಹ್ನೆಗಳು, ಮೇಲುಭಾಗದಲ್ಲಿ (superscribed) ಬರೆದ 'ರ' ಮತ್ತು ಅಂಥ ಇತರ ಅನುಬಂಧಗಳು ಮೇಲಿನ ಸಾಲನ್ನು

ದಾಟಬಹುದು. ಹಸ್ತಪ್ರತಿಯ ಸಾಲುಗಳು ಎಲ್ಲೆಡೆಯೂ ತುಂಬ ನೇರವಾಗಿವೆ. ಖೋಟಾನಿನ ಪ್ರಾಕೃತ ಧಮ್ಮಪದ ಅಥವಾ ಟರ್ಫಾನ್‌ನಲ್ಲಿ ಸಿಕ್ಕಿದ ಬೌದ್ಧ ನಾಟಕಗಳ ತುಂಡುಗಳಂಥ ಅತಿ ಪ್ರಾಚೀನ ಮಾದರಿಗಳಿಗೂ ಇದು ಅನ್ವಯಿಸುತ್ತದೆ. ಬಹುಶಃ ಸಮತುದಿಗಳ ನೆರವಿನಿಂದ ಸಾಲುಗಳು ಇಷ್ಟು ನೇರವಾಗಿವೆಯೆಂದು ತೋರುತ್ತದೆ. ಪ್ರಾಚೀನ ತಾಳಪತ್ರದ ಹಸ್ತಪ್ರತಿಗಳಲ್ಲಿ ಮತ್ತು ನಂತರದ ಕಾಗದದ ಹಸ್ತಪ್ರತಿಗಳಲ್ಲಿಯೂ ಸಾಲಿನ ಕೊನೆಯಲ್ಲಿ ಎರಡು ಲಂಬವಾದ ಗುರುತುಗಳನ್ನು ಅಥವಾ ಲಂಬ ರೇಖೆಗಳನ್ನು ಹಾಳೆಗಳ ಅಗಲಕ್ಕೂ ಬಳೆದಿರುತ್ತದೆ. ಹಸ್ತಪ್ರತಿಗಳಲ್ಲಿ ಯಾವಾಗಲೂ ಸಾಲುಗಳ ಮೇಲಿನಿಂದ ಕೆಳಕ್ಕೆ ಸಮತಳವಾಗಿ ಹರಿಯುತ್ತವೆ. ಒಂದು ಪದ್ಯದ, ಪದಾರ್ಥದ ಅಥವಾ ಪದ್ಯದ ಯಾವುದೇ ವಿಭಾಗದ ಒಂದು ಸಾಲಿನ ಕೊನೆಯವರೆಗೂ ಪದಗಳನ್ನು ಎಡೆಬಿಡದಂತೆ ಬರೆಯುವುದು ಸಾಮಾನ್ಯವಾದ ಪದ್ಧತಿ. ಜೊತೆಗೆ ಕೆಲವು ಪ್ರಾಚೀನ ಶಾಸನಗಳಲ್ಲಿ ಬಿಡಿ ಪದಗಳನ್ನು ಅಥವಾ ಪದಪುಂಜಗಳನ್ನು ಅರ್ಥ ದೃಷ್ಟಿಯಿಂದಲೋ ಇಲ್ಲವೆ ಲಿಪಿಕಾರನ ಓದುವ ರೀತಿಯಿಂದಾಗಿಯೋ ಪ್ರತ್ಯೇಕಿಸಿ ಬರೆದಿರುವ ನಿದರ್ಶನಗಳನ್ನು ಕಾಣುತ್ತೇವೆ. ಹೀಗೆ ಖೋಟಾನಿನ ಧಮ್ಮಪದದ ಪ್ರತಿಯೊಂದು ಸಾಲೂ ಪದ್ಯ ಅಥವಾ ಪದ್ಯಾರ್ಧಗಳಿಂದ ಕೂಡಿದೆ. ಬವರ್ ಹಸ್ತಪ್ರತಿಯಂಥ ಇತರ ಪ್ರಾಚೀನ ಹಸ್ತಪ್ರತಿಗಳಲ್ಲಿ ಯಾವ ನಿರ್ದಿಷ್ಟಕ್ರಮವೂ ಇಲ್ಲದೆ ಬಿಡಿಪದಗಳನ್ನು ಅಥವಾ ಪದಪುಂಜಗಳನ್ನು ಬಿಡಿಸಿ ಬರೆದಿರುವುದನ್ನು ಕಾಣಬಹುದು.

ಖರೋಷ್ಠೀ ಶಾಸನಗಳಲ್ಲಿ ವಿರಾಮ ಚಿಹ್ನೆಗಳಿಲ್ಲ. ಆದರೆ ಪ್ರಾಕೃತ ಧಮ್ಮಪದದಲ್ಲಿ ಬಹುಸಲ ಅಲಕ್ಷ್ಯದಿಂದ ಬರೆದದ್ದೆಂಬಂತೆ ತೋರುವ, ಈಗಿನ ಸೊನ್ನೆಯನ್ನು ಹೋಲುವ ವೃತ್ತಾಕೃತಿಯ ಗುರುತೊಂದು ಪ್ರತಿ ಪದ್ಯಾಂತದಲ್ಲಿಯೂ ಕಾಣುತ್ತದೆ. ಅನೇಕ ಶಾಸನಗಳ ಕೊನೆಯಲ್ಲಿಯೂ ಕಂಡುಬರುವ ಚಿಹ್ನೆಯೊಂದು ಪ್ರತಿ 'ವಗ್ಗ' ದ ಕೊನೆಯಲ್ಲಿಯೂ ಇದೆ. ಬ್ರಾಹ್ಮೀಲಿಪಿಯಲ್ಲಿ ಮಾತ್ರ ಬಹಳ ಪ್ರಾಚೀನ ಕಾಲದಿಂದಲೂ ಹೆಚ್ಚು ಸಂಖ್ಯೆಯ ವಿರಾಮ ಚಿಹ್ನೆಗಳಿವೆ. ಬ್ಯೂಲರ್ ಎಂಟು ಚಿಹ್ನೆಗಳನ್ನು ಲೆಕ್ಕಹಾಕಿದ್ದಾರೆ. ಪದಪುಂಜಗಳನ್ನು ಬಿಡಿಸಿ ಬರೆಯಲು ಇಲ್ಲವೆ ಪದ್ಯವನ್ನು ಗದ್ಯದಿಂದ ಬೇರ್ಪಡಿಸಲು, ವಾಕ್ಯಗಳ ಮುಕ್ತಾಯವನ್ನು ಸೂಚಿಸಲು ಮತ್ತು ಲೇಖನಗಳ ಸಮಾಪ್ತಿಯನ್ನು ತೋರಿಸಲು ಕ್ರಮವಾಗಿ ಏಕದಂಡ, ದ್ವಿದಂಡ ಮತ್ತು ತ್ರಿದಂಡಗಳು ಅಥವಾ ಲಂಬರೇಖೆಗಳು; ಎರಡು ಮತ್ತು ಮೂರು ಸಮತಲ ರೇಖೆಗಳು, ಎರಡು ಲಂಬರೇಖೆಗಳ ನಂತರ ಒಂದು ಸಮತಲರೇಖೆ, ನಡುವೆ ಒಂದು ರೇಖೆ ಇರುವ ಅಥವಾ ಇಲ್ಲದಿರುವ ಖಂಡಚಂದ್ರದಂಥ ಗುರುತು. ಭಾರತೀಯ ವಿರಾಮ ಚಿಹ್ನೆಗಳಿಗೆ ಸಂಬಂಧಿಸಿ ಶಾಸನಗಳು ತಿಳಿಸುವ ವಿಷಯಗಳನ್ನು ಹೀಗೆ ಸಂಗ್ರಹಿಸಬಹುದು. ಪ್ರಾಚೀನ ಕಾಲದಿಂದ ನಮ್ಮ ಶಕೆಯ ಆರಂಭದವರೆಗೂ ಡೊಂಕಾದ ಇಲ್ಲವೆ ನೇರವಾಗಿರುವ ಏಕರೇಖೆಗಳು ಮಾತ್ರ ಉಪಯೋಗವಾಗಿವೆ. ಆದರೆ ಅವುಗಳ ಉಪಯೋಗ ಅಪರೂಪ. ನಮ್ಮ ಶಕೆಯ ಆರಂಭದ ನಂತರ ಹೆಚ್ಚು ಜಟಿಲವಾದ ಚಿಹ್ನೆಗಳನ್ನು ಕಾಣುತ್ತೇವೆ. ಆದರೆ ೫ನೇ ಶತಮಾನದವರೆಗೂ ಅವುಗಳ ಉಪಯೋಗ ಅನಿಯತವಾಗಿದೆ. ಅಲ್ಲಿಂದ ಮುಂದಕ್ಕೆ, ವಿಶೇಷವಾಗಿ ಶಿಲಾಪ್ರಶಸ್ತಿಗಳಲ್ಲಿ, ಹೆಚ್ಚು ವಿರಾಮ ಚಿಹ್ನೆಗಳು ಇನ್ನಷ್ಟು ನಿಯತ ರೀತಿಯಲ್ಲಿ ಬಳಕೆಯಾಗಿರುವುದನ್ನು ಕಾಣುತ್ತೇವೆ. ಕ್ರಿ. ಶ. ೪೭೩–೭೪ರ ಮಂಡಸರ್ ಪ್ರಶಸ್ತಿಯು ಪದ್ಯಾರ್ಧದ ನಂತರ ಒಂದು ಗೆರೆಯನ್ನೂ ಪದ್ಯದ ಕಡೆಯಲ್ಲಿ ಎರಡು ಗೆರೆಗಳನ್ನೂ ಹಾಕುವ ಕ್ರಮವು ಇನ್ನೂ ಪ್ರಚಲಿತವಾಗಿದ್ದುದನ್ನು ಸಮರ್ಥಿಸುತ್ತದೆ. ಆದರೆ ಎಂಟನೆಯ ಶತಮಾನದವರೆಗೂ

ಯಾವ ವಿರಾಮ ಚಿಹ್ನೆಯೂ ಇಲ್ಲದ ಅನೇಕ ತಾಮ್ರಪಟ್ಟಗಳು ಮತ್ತು ಶಿಲಾಶಾಸನಗಳು, ವಿಶೇಷವಾಗಿ ದಕ್ಷಿಣದಲ್ಲಿ ಸಿಗುತ್ತವೆ.

ಮಾನವನ ಇತರ ಕ್ರಿಯೆಗಳಂತೆ ಲೇಖನಕಾರ್ಯವೂ ಸಹ ಪೂರ್ಣ ನಿರ್ದುಷ್ಟವಲ್ಲವಾದುದರಿಂದ ಶಾಸನಗಳನ್ನು ಕೊರೆಯುವಾಗ ಅಥವಾ ಭೂರ್ಜಪತ್ರ, ತಾಳಪತ್ರ ಇಲ್ಲವೆ ಕಾಗದದ ಮೇಲೆ ಬರೆಯುವಾಗ ತಪ್ಪುಗಳು ಆಗಿಯೇ ತೀರುತ್ತವೆ. ಈ ತಪ್ಪುಗಳನ್ನು ಸ್ಥೂಲವಾಗಿ ಎರಡು ವರ್ಗಗಳಾಗಿ ವಿಂಗಡಿಸಬಹುದು. (ಅ) ತಪ್ಪು ಶಬ್ದಗಳು ಅಥವಾ ಲೇಖನ ಭಾಗಗಳು (ಆ) ಅಚಾತುರ್ಯದಿಂದಾದ ಶಬ್ದ, ಅಕ್ಷರ ಅಲ್ಲವೆ ವಾಕ್ಯಾಂಶಗಳ ಲೋಪ. ಅಶೋಕನ ಶಾಸನಗಳಂಥ ಪ್ರಾಚೀನ ಶಾಸನಗಳಲ್ಲಿ ತಪ್ಪಾದ ಲೇಖನ ಭಾಗಗಳನ್ನು ಗೆರೆಯಿಂದ ಹೊಡೆದು ಹಾಕಿದೆ. ಆ ನಂತರದ ಕಾಲದಲ್ಲಿ ಲೇಖನ ದೋಷಗಳನ್ನು ಸೂಚಿಸಲು ಸಾಲಿನ ಮೇಲೆ ಅಥವಾ ಕೆಳಗೆ ಚಿಕ್ಕೆ ಅಥವಾ ಚಿಕ್ಕ ಗೆರೆಗಳನ್ನು ಉಪಯೋಗಿಸಲಾಗಿದೆ. ಹಸ್ತಪ್ರತಿಗಳಲ್ಲಿಯೂ ಈ ಸಂಜ್ಞೆಗಳನ್ನೇ ಬಳಸಲಾಗಿದೆಯಾದರೂ ಕಾಲಾನಂತರ ಅಳಿಸಬೇಕಾದುದನ್ನು ಅರಿಸಿನದ ಪುಡಿ ಅಥವಾ ಹಳದಿಯ ವರ್ಣದ್ರವ್ಯದಿಂದ ತೊಡೆದಿದೆ. ಅಶೋಕನ ಮತ್ತು ಇತರ ಹಳೆಯ ಶಾಸನಗಳಲ್ಲಿ ತಪ್ಪಿನಿಂದಾಗಿ ಬಿಟ್ಟುಹೋದ ಅಕ್ಷರ ಅಥವಾ ಪದಗಳನ್ನು, ಅವು ಎಲ್ಲಿ ಸೇರಬೇಕೆಂಬ ನಿರ್ದಿಷ್ಟ ಸೂಚನೆಯೇನೂ ಇಲ್ಲದೆ, ಸಾಲಿನ ಮೇಲ್ಭಾಗದಲ್ಲಿ ಅಥವಾ ಕೆಳಗೆ ಸೇರಿಸಲಾಗಿದೆ. ಅವುಗಳನ್ನು ಅಕ್ಷರಗಳ ನಡುವೆ ಇರುವ ಜಾಗದಲ್ಲಿ ಸೇರಿಸಿರುವುದೂ ಉಂಟು. ಆಮೇಲಿನ ಶಾಸನಗಳಲ್ಲಿ ಮತ್ತು ಹಸ್ತಪ್ರತಿಗಳಲ್ಲಿ ಬಿಟ್ಟುಹೋಗಿರುವ ಜಾಗವನ್ನು ನಾವು ಕಾಕಪಾದ, ಹಂಸಪಾದ ಎಂದು ಕರೆಯುವ ಚಿಕ್ಕದಾದ ನೇರಗೆರೆ ಅಥವಾ ಬಾಗಿದ ದಾಟುಗೆರೆ (cross) ಗಳಿಂದ ಸೂಚಿಸಲಾಗಿದೆ. ಸೇರಿಸಬೇಕಾದುದನ್ನು ಪತ್ರದ ಅಂಚಿನಲ್ಲಾಗಲಿ ಇಲ್ಲವೆ ಸಾಲುಗಳ ನಡುವೆಯಾಗಲೀ ಕೊಟ್ಟಿದೆ. ಕೆಲವು ಸಲ ದಾಟುಗೆರೆಗೆ ಬದಲಾಗಿ ಸ್ವಸ್ತಿಕ ಚಿಹ್ನೆಯನ್ನು ಹಾಕಿರುವುದುಂಟು. ದಕ್ಷಿಣ ಭಾರತದ ಹಸ್ತಪ್ರತಿಗಳಲ್ಲಿ ಉದ್ದೇಶಪೂರ್ವಕ ಲೋಪಗಳನ್ನು (intentional omissions) ಗುರುತಿಸಲು ದಾಟುಗೆರೆಯನ್ನು ಬಳಸಿದೆ. ಉಳಿದಕಡೆ ಉದ್ದೇಶಪೂರ್ವ ಲೋಪಗಳನ್ನು ಅಥವಾ ಮೂಲಪ್ರತಿ ಇಲ್ಲವೆ ಮಾತೃಕೆಗಳ ದೋಷದಿಂದಾದ ಲೋಪಗಳನ್ನು ಸಾಲಿನ ಮೇಲೆ ಚುಕ್ಕಿಗಳನ್ನಿಟ್ಟು ಇಲ್ಲವೆ ಸಾಲಿನ ಮೇಲ್ಭಾಗದಲ್ಲಿ ಚಿಕ್ಕ ಗೆರೆಗಳನ್ನೆಳೆದು ಗುರುತಿಸಿರುತ್ತದೆ. ಕೆಲವು ಹಸ್ತಪ್ರತಿಗಳಲ್ಲಿ ಆ ಜಾಗವನ್ನು ಖಾಲಿ ಬಿಟ್ಟಿರುತ್ತದೆ. 'ಅ' ಸ್ವರದ ಲೋಪವನ್ನು ಸೂಚಿಸುವ ಅವಗ್ರಹ ಚಿಹ್ನೆಯ ಉಪಯೋಗವು ರಾಷ್ಟ್ರಕೂಟರಾಜನ ಕ್ರಿ. ಶ. ೮೩೪-೩೫ನೇ ಇಸವಿಯ ಬರೋಡ ತಾಮ್ರಪಟ್ಟದಲ್ಲಿ ಕಂಡುಬಂದಿದೆ. ಸ್ಪಷ್ಟವಾಗಿ ಕಾಣದ ಭಾಗಗಳನ್ನು ಗುರುತಿಸಲು 'ಕುಂಡಲ' ಅಥವಾ ಉಂಗುರ ಮತ್ತು ಸ್ವಸ್ತಿಕಗಳನ್ನು ಬಳಸಲಾಗಿದೆ.

ಸಂಕ್ಷೇಪಗಳು (Abbreviations) ಕ್ರಿ.ಶ. ೧೫೦ರ ಪಶ್ಚಿಮ ಭಾರತದ ಕೆಲವು ಶಾಸನಗಳಲ್ಲಿ ಎಂದರೆ ಸಿರಿಪುಲುಮೊಯ್, ನಾಸಿಕ್ ನಂ. ೧೫, ಮತ್ತು ಸಕಸೇನ ಮಾಥರೀಪುತ್ರ ಅಥವಾ ಸಿರಿಸೇನ, ಕನ್ಹೇರಿ ನಂ. ೧೪—ಈ ಶಾಸನಗಳಲ್ಲಿವೆ. ವಾಯುವ್ಯ ಭಾಗದಲ್ಲಿ ಕುಶಾನರ ಕಾಲದಿಂದಲೂ ಅವು ಸಾಮಾನ್ಯವಾಗಿವೆ. ಎಲ್ಲಕ್ಕಿಂತ ಸಾಮಾನ್ಯವಾದುದೆಂದರೆ ವರ್ಷಋತು, ಮಾಸ-ಮತ್ತು ದಿನಗಳನ್ನಲ್ಲದೆ ಪಕ್ಷವನ್ನೂ ಸಹ ಸೂಚಿಸುವ ಸಂಕ್ಷೇಪಗಳುಂಟು. ೬ನೆಯ ಶತಮಾನದಿಂದಲೂ ಪಶ್ಚಿಮ ಭಾರತದ ಶಾಸನಗಳು ಒಮ್ಮೊಮ್ಮೆ ಇತರ ಪದಗಳಿಗೆ ಸಂಕ್ಷೇಪಗಳನ್ನು ನೀಡುತ್ತಿವೆ. ಉದಾ: 'ದೂತಕ' ಕ್ಕೆ 'ದೂ' ಹನ್ನೊಂದನೆಯ ಶತಮಾನ

ದಿಂದೀಚೆಗೆ ಬಿರುದುಗಳು (Tittes) ಮತ್ತು ಪಂಗಡಗಳು, ಜಾತಿಗಳು ಇತ್ಯಾದಿಗಳ ಸಂಕ್ಷೇಪ ಗಳು ತೀರ ಸಾಮಾನ್ಯವಾಗುತ್ತಿವೆ. ಇದು ಹಸ್ತಪ್ರತಿಗಳ ವಿಷಯಕ್ಕೂ ಅನ್ವಯವಾಗುತ್ತಿದೆ. ಖರೋಷ್ಠಿ ಧಮ್ಮಪದದಲ್ಲಿಯೂ ಅವುಗಳನ್ನು ಗಮನಿಸಬಹುದು. ಅಲ್ಲಿ 'ಗಾಥಾ' ಶಬ್ದಕ್ಕೆ 'ಗಾ' ಎಂಬ ಸಂಕ್ಷೇಪವಿದೆ. ಹಸ್ತಪ್ರತಿಯ ಪುಟಸಂಖ್ಯೆಗೆ (Pagination) ಏಕಮಾನವು ಪತ್ರವೇ ಹೊರತು ಪುಟವಲ್ಲ. ಹಾಳೆ ಅಥವಾ ಪತ್ರಸಂಖ್ಯೆಯನ್ನು ದಕ್ಷಿಣದಲ್ಲಿ ಪೃಷ್ಠ ಅಥವಾ ಪ್ರಥಮ ಪುಟದ ಮೇಲೂ ಇತರ ಕಡೆ ಎರಡನೆಯ ಪುಟದ ಮೇಲೂ ಗುರುತಿಸಿರುತ್ತದೆ. ಉತ್ತರ ಭಾರತದ (ಗುಪ್ತ) ಬ್ರಾಹ್ಮೀ ಅಕ್ಷರಗಳಲ್ಲಿ ರಚಿತವಾಗಿದ್ದು ಮಧ್ಯ ಏಷ್ಯಾದಲ್ಲಿ ಮಕಾರ್ಟ್ನಿ ಸಂಗ್ರಹಗಳಲ್ಲಿ ದೊರೆತ ಕೆಲವು ಭೂರ್ಜ ಪತ್ರಗಳಲ್ಲಿ ಮೊದಲ ಪುಟದ ಮೇಲೆ ಸಂಖ್ಯೆಯಿದ್ದು, ಆ ಆಧಾರದ ಮೇಲೆ ಅವು ದಕ್ಷಿಣ ಭಾರತದವೆಂದು ಭೂಲರ್ ನಿರ್ಧರಿಸಿದನು. ಹಾರ್ನೆಲ್ ಮಾತ್ರ ಉತ್ತರ ಭಾರತದ ಅಕ್ಷರಗಳು ಆ ಪತ್ರಿಗಳಿಗೆ ದಕ್ಷಿಣ ಭಾರತದೊಡನಿರುವ ಸಂಬಂಧವನ್ನು ಅಲ್ಲಗಳೆಯುತ್ತವೆಂದೂ, ಮಕಾರ್ಟ್ನಿ ಹಸ್ತಪ್ರತಿಗಳಿಗೆ ಸೇರಿದ್ದು ಮಧ್ಯ ಏಷ್ಯಾದ ಬ್ರಾಹ್ಮಿಯಲ್ಲಿ ರಚಿತವಾದ ಕಾಗದದ ಹಸ್ತಪ್ರತಿಗಳಲ್ಲಿನ ನಿದರ್ಶನಗಳು ಮಧ್ಯ ಏಷ್ಯಾದಲ್ಲಿ ಈ ರೀತಿಯ ರೂಢಿ ಸ್ವತಂತ್ರವಾಗಿಯೇ ಇದ್ದಿರಬೇಕೆಂದು ಪ್ರತಿಪಾದಿಸಲು ಸಹಾಯಕವಾಗಿವೆ ಯೆಂದೂ ಅಭಿಪ್ರಾಯಪಟ್ಟನು.

ದಾರ ಪೋಣಿಸಿದ ಭೂರ್ಜಪತ್ರ ಮತ್ತು ತಾಳೆಪತ್ರಗಳ ಮೇಲೆ ಪತ್ರಗಳ ಅಳತೆಗೆ ಕತ್ತರಿಸಿದ ಮರದ ರಕ್ಷೆಗಳನ್ನು ಇಡಲಾಗುತ್ತಿತ್ತು. ಈಗಲೂ, ಕಾಗದದ ಹಸ್ತಪ್ರತಿಗಳ ಬಗ್ಗೆಯೂ ಈ ಪದ್ಧತಿ ಇದೆ. ದಕ್ಷಿಣಭಾರತದಲ್ಲಿ ಮರದ ರಕ್ಷೆಗಳಲ್ಲಿ ರಂಧ್ರ ಕೊರೆದು ಅವುಗಳಲ್ಲಿ ಉದ್ದವಾದ ದಾರವನ್ನು ಪೋಣಿಸಿ ರಕ್ಷೆಗಳ ಸುತ್ತ ಸುತ್ತಿ ಗಂಟು ಹಾಕಿರುತ್ತದೆ. ತುಂಬ ಹಿಂದೆಯೇ ಈ ಕ್ರಮ ಸಾಮಾನ್ಯವಾಗಿತ್ತಲ್ಲದೆ ಪಶ್ಚಿಮ ಮತ್ತು ಉತ್ತರ ಭಾರತದ ತಾಳೆ ಪ್ರತಿಗಳ ವಿಷಯಕ್ಕೆ ಅನುಸರಿಸಲಾಗಿತ್ತು. ನೇಪಾಳದಲ್ಲಿ ಹಸ್ತಪ್ರತಿಗಳ ಅದರಲ್ಲಿಯೂ ಬಹು ಬೆಲೆಯುಳ್ಳ ಹಸ್ತ ಪ್ರತಿಗಳ ರಕ್ಷೆಗಳನ್ನು ಉಬ್ಬಚ್ಚು ಇರುವ ಲೋಹದ ಹಲಗೆಗಳಿಂದ (embossed metal) ಮಾಡಿ ರುತ್ತಿತ್ತು. ಆ ರೀತಿ ಸಿದ್ಧವಾದ ಹಸ್ತಪ್ರತಿಗಳನ್ನು ಬಣ್ಣದ ಬಟ್ಟೆಗಳಲ್ಲಿ ಮತ್ತು ಕಸೂತಿ ಮಾಡಿದ ವಸ್ತ್ರಗಳಲ್ಲಿಯೂ ಕೂಡ ಸುತ್ತಿಡಲಾಗುತ್ತಿತ್ತು. ಮುಸಲ್ಮಾನ ಸಂಪ್ರದಾಯದಂತೆ ಕಾಶ್ಮೀರದಲ್ಲಿ ಹಸ್ತಪ್ರತಿಗಳಿಗೆ ಹೆಚ್ಚಾಗಿ ಚರ್ಮರಕ್ಷೆಗಳನ್ನು ತೊಡಿಸಿರುತ್ತದೆ.

ಅಂಥ ಹಸ್ತಪ್ರತಿಗಳನ್ನು ಸಾಮಾನ್ಯವಾಗಿ ದೇವಸ್ಥಾನ, ಕಾಲೇಜು, ಮಠ, ರಾಜಾಸ್ಥಾನ ಗಳಿಗೆ ಸೇರಿದ ಪುಸ್ತಕ ಭಂಡಾರಗಳಲ್ಲಿ ಅಥವಾ ಅನೇಕ ಖಾಸಗಿ ವ್ಯಕ್ತಿಗಳ ಮನೆಗಳಲ್ಲಿ ಕಾಪಾಡ ಲಾಗುತ್ತಿತ್ತು. ಪುಸ್ತಕ ಭಂಡಾರಕ್ಕೆ ಇದ್ದ ಪ್ರಾಚೀನವಾದ ಹೆಸರು ಭಾರತೀಭಾಂಡಾಗಾರ ಅಥವಾ ಸರಸ್ವತೀ ಭಾಂಡಾಗಾರ. ಬಾಣಕವಿ (ಸು.ಕ್ರಿ.ಶ. ೬೨೦) ಒಬ್ಬ ವಾಚಕನನ್ನು ನೇಮಿಸಿ ಕೊಂಡಿದ್ದನೆಂದು ತಿಳಿದು ಬರುತ್ತದೆ. ಆದ್ದರಿಂದ ಅವನ ಬಳಿ ಗಣನಾರ್ಹವಾದ ಪುಸ್ತಕಭಂಡಾರ ವಿದ್ದಿರಬೇಕು. ಮಧ್ಯಯುಗದ ಪ್ರಸಿದ್ಧವಾದ ರಾಜಭಂಡಾರವೆಂದರೆ ೧೧ನೆಯ ಶತಮಾನದಲ್ಲಿ ಧಾರಾ ನಗರದ ರಾಜನಾಗಿದ್ದ ಭೋಜನದು. ಸುಮಾರು ಕ್ರಿ. ಶ. ೧೧೪೦ರಲ್ಲಿ ಮಾಳವವನ್ನು ಗೆದ್ದಮೇಲೆ ಸಿದ್ಧರಾಜ ಜಯಸಿಂಹನು ಅದನ್ನು ಅಣಹಿಲ್‌ವಾಡಕ್ಕೆ ಸಾಗಿಸಿದನು. ಅಲ್ಲಿ ಚಾಳು ಕ್ಯರ ಆಸ್ಥಾನ-ಪುಸ್ತಕ ಭಂಡಾರದೊಂದಿಗೆ ಅದು ಸೇರಿ ಹೋಗಿರಬೇಕು. ಕೆಲವು ಶತಮಾನ ಗಳಲ್ಲಿಯೇ ಈ ಭಂಡಾರಗಳಲ್ಲಿ ವಿಪುಲ ಪ್ರಮಾಣದಲ್ಲಿ ಪುಸ್ತಕ ಸಂಗ್ರಹವಾಯಿತು. ಹೀಗೆ ಭೂಲರ್‌ಗೆ ಕ್ಯಾಂಬೇಯ ಎರಡು ಜೈನ ಪುಸ್ತಕ ಭಂಡಾರಗಳಲ್ಲಿ ೩೦,೦೦೦ ಹಸ್ತಪ್ರತಿಗಳೂ

ಮತ್ತು ತಂಜಾವೂರಿನ ಅರಮನೆ ಪುಸ್ತಕಭಂಡಾರದಲ್ಲಿ ೧೨೦೦೦ಕ್ಕೂ ಹೆಚ್ಚು ಗ್ರಂಥಗಳೂ ಕಂಡುಬಂದವು. ವಿದ್ಯಾಧರನು ನೈಷಧೀಯ ಕಾವ್ಯಕ್ಕೆ ರಚಿಸಿರುವ ಪ್ರಥಮ ವ್ಯಾಖ್ಯಾನಕ್ಕೆ ಆಧಾರವಾದ ಆ ಕಾವ್ಯದ ಪ್ರತಿಯನ್ನೂ, ಯಶೋಧರನ ಜಯಮಂಗಲ ಟೀಕೆಗೆ ಆಧಾರವಾದ ಕಾಮಸೂತ್ರದ ಹಸ್ತಪ್ರತಿಯನ್ನೂ ಚಾಳುಕ್ಯ ವಿಶಾಲ ದೇವನ (ಕ್ರಿ.ಶ. ೧೨೪೨-೬೨) ಪುಸ್ತಕ ಭಂಡಾರವು ಒದಗಿಸಿತೆಂದು ಹೇಳಲಾಗಿದೆ. ಬಾನ್ (Bonn) ವಿಶ್ವವಿದ್ಯಾನಿಲಯದ ಗ್ರಂಥಾಗಾರದಲ್ಲಿರುವ ರಾಮಾಯಣದ ಒಂದು ಹಸ್ತಪ್ರತಿ ವಿಶಾಲದೇವನ ಸಂಗ್ರಹದ ಮಾತೃಕೆಯೊಂದರಿಂದ ಬಂದದ್ದು. ಹೀಗೆ ಕಡೆಯೆಂದರೆ ಕ್ರಿ.ಶ. ಏಳನೆಯ ಶತಮಾನದಿಂದೀಚೆಗೆ ಹಸ್ತಪ್ರತಿಗಳು ಮತ್ತು ಅವುಗಳಿರುವ ಪುಸ್ತಕ ಭಂಡಾರಗಳು ಅಸ್ತಿತ್ವದಲ್ಲಿದ್ದುದಕ್ಕೆ ಕೆಲ ಆಧಾರಗಳಿವೆ. ಆದರೆ ಇದಕ್ಕಿಂತಲೂ ಪ್ರಾಚೀನವಾದ ಭಾರತೀಯ ಹಸ್ತಪ್ರತಿಗಳು ಭಾರತದ ಹೊರಗೆ ಪತ್ತೆಯಾದ ಸಂಗ್ರಹಗಳಲ್ಲಿವೆ.

ಈ ರೀತಿಯಲ್ಲಿ ಸಿಂಧೂಕಣಿವೆಯ ನಾಗರಿಕತೆಯ ಕಾಲದಿಂದಲೂ ಲೇಖನಕಲೆಯು ಭಾರತದಲ್ಲಿ ತಿಳಿದಿತ್ತು. ಆ ಕಾಲದ ತಾಯಿತಿಗಳಲ್ಲಿ ಮತ್ತು ಕ್ರಿ.ಪೂ. ನಾಲ್ಕನೆಯ ಶತಮಾನಕ್ಕೆ ಸಂಬಂಧಿಸಿದ ಶಾಸನ ರೂಪದ ಲೇಖನಗಳಲ್ಲಿ ಬರೆಹದ ಸುಳಿವು ಕಾಣಿಸಿಕೊಂಡಿತ್ತು. ಇಷ್ಟಾದರೂ ಲಿಖಿತ ಗ್ರಂಥಗಳು ಅಸ್ತಿತ್ವದಲ್ಲಿದ್ದುದಕ್ಕೆ ಪ್ರಮಾಣಗಳಿಲ್ಲ. ವೇದಾಭ್ಯಾಸಕ್ಕೆ ಸಂಬಂಧಿಸಿದ ಕಂಠಪಾಠಕ್ರಮದ ಪ್ರಾಚೀನತೆ ನಿಶ್ಚಿತವಾಗಿ ಬಹು ಹಿರಿದು. ಒಂದು ವೇಳೆ ಗ್ರಂಥಗಳು ಅಸ್ತಿತ್ವದಲ್ಲಿದ್ದರೂ ಕಂಠಪಾಠದ ಮೂಲಕ ಸಾಗುತ್ತಿದ್ದ ಜ್ಞಾನವಹನ ಕಾರ್ಯಕ್ಕೆ ಹೋಲಿಸಿದರೆ ಗ್ರಂಥಗಳ ಮೂಲಕ ನಡೆಯುತ್ತಿದ್ದ ಕಾರ್ಯ ಅಷ್ಟು ಮುಖ್ಯವಾಗಿರಲಿಲ್ಲವೆಂದು ತೋರುತ್ತದೆ. ಪಾಣಿನಿಯ ಅಷ್ಟಾಧ್ಯಾಯಿಯ ಮೇಲೆ ಬಹುಶಃ ಬರೆಹದಲ್ಲಿಯೇ ರಚಿಸಿರಬಹುದಾದ ಮಹಾವ್ಯಾಖ್ಯಾನದ ಕರ್ತೃವಾದ ಪತಂಜಲಿಯೂ ಸಹ ಬರೆಹದ ಬಗ್ಗೆ ಏನನ್ನೂ ಹೇಳಿಲ್ಲ. ಪತಂಜಲಿ ಬರೆದಿರುವ ಮಹಾವ್ಯಾಖ್ಯಾನವು ಬಹುಶಃ ಬರೆಹದಲ್ಲಿಯೇ ರಚಿತವಾಗಿದ್ದಿರಬೇಕು. ಆದರೆ ಅವನೂ ಕೂಡ ಬರೆಹದ ಬಗ್ಗೆ ಏನನ್ನೂ ಹೇಳಿಲ್ಲ. ಅಷ್ಟೇ ಅಲ್ಲ, 'ದಿಶ್' ಧಾತು 'ಉಚ್ಚಾರಣಾ ಕ್ರಿಯೆ'ಯೆಂದು ವಿವರಿಸುತ್ತಾನೆ. ಲಿಖಿತಾಕ್ಷರಗಳ ಗೊಡವೆಗೇ ಹೋಗದೆ ಕೇವಲ ಉಚ್ಚರಿತ ಧ್ವನಿಗಳೊಡನೆ ಮಾತ್ರ ವ್ಯವಹರಿಸುವ ಪಾಣಿನೀಯ ಪರಂಪರೆಯು ವಾಚಿಕ (oral) ವೆಂದೂ ಹೇಳುತ್ತಾನೆ. "ಪ್ರತಿಜ್ಞಾನುನಾಸಿಕ್ಯಾಃ ಪಾಣಿನೀಯಾಃ" ಎಂಬ ಈ ಶಾಲೆಯ ಸಿದ್ಧಾಂತ ಇದಕ್ಕೆ ಉತ್ತಮವಾದ ನಿದರ್ಶನ. ಕಾಲಾನಂತರ ಬರವಣಿಗೆ ಹೆಚ್ಚು ಸಾಮಾನ್ಯವಾದ ಮೇಲೂ ಮುಖ್ಯಕೃತಿಗಳನ್ನು ಕಂಠಪಾಠ ಮಾಡುತ್ತಿದ್ದಷ್ಟು ಬರೆದಿಡುತ್ತಿರಲಿಲ್ಲ. ಮಧ್ಯಯುಗದಲ್ಲಿ ಕಾಶಿಯ ಪಂಡಿತನೊಬ್ಬನು ನಾಡಿಯ (Nadia) ಕ್ಕೆ ಹೋಗಿ ನವ್ಯನ್ಯಾಯಪಂಥದ ಪ್ರಸಿದ್ಧ ಶಾಸ್ತ್ರ ಕೃತಿಯ ಪೂರ್ಣಪಾಠವನ್ನು ತನ್ನ ಅಗಾಧ ಸ್ಮೃತಿಶಕ್ತಿಯಲ್ಲಿ ಧರಿಸಿ ಹಿಂದಿರುಗಿದ ಕಥೆಯೊಂದು ನಮ್ಮಲ್ಲಿದೆ.

ಬಹು ಸಂಪ್ರದಾಯಬದ್ಧವೂ, ಪಾರಂಪರ್ಯವೂ ಆದ ಈ ಪಠನ ಪದ್ಧತಿಯಿಂದಾಗಿ (Method of oral Transmission) ಹಿಂದೂಗಳ ಧಾರ್ಮಿಕ ಸಾಹಿತ್ಯ ಲೌಕಿಕ ಸಾಹಿತ್ಯಕ್ಕಿಂತ ಹೆಚ್ಚು ಪರಿಶುದ್ಧ ಮಟ್ಟದಲ್ಲಿ ಉಳಿದು ಬಂದಿತು. ನಾವು ಮುದ್ರಿತ ಪ್ರತಿಗಳಲ್ಲಿ ಓದುವ ಋಗ್ವೇದದ ಋಕ್ಕುಗಳು ಕಳೆದ ಮೂರು ಸಾವಿರ ವರ್ಷಗಳ ಉದ್ದಕ್ಕೂ ಅದೇ ಪದ, ಉಚ್ಚಾರಾಂಶ, ಸ್ವರದ ಒತ್ತುಗಳ ಸಹಿತ ಬಹುಮಟ್ಟಿಗೆ ಯಾವ ವ್ಯತ್ಯಾಸಕ್ಕೂ ಒಳಗಾಗದೆ ಇದ್ದಂತೆಯೇ ಉಳಿದು ಬಂದಿದೆ. ಆದರೆ ಲೌಕಿಕ ಮತ್ತು ಜನಪ್ರಿಯ ಸಾಹಿತ್ಯಗಳ ವಿಷಯವೇ ಬೇರೆಯಾಯಿತು. ಪ್ರತಿಯೊಬ್ಬ ಉಪಾಧ್ಯಾಯ ಇಲ್ಲವೆ ವಾಚಕನೂ ತನ್ನಿಷ್ಟಬಂದಂತೆ ಅವುಗಳನ್ನು ಬದಲಿಸುವುದಕ್ಕೆ ಮತ್ತು ಸುಧಾರಿಸುವುದಕ್ಕೆ, ಬಿಡುವುದಕ್ಕೆ ಮತ್ತು ಸೇರಿಸುವುದಕ್ಕೆ ಅಧಿಕಾರವಿದೆಯೆಂದು ಭಾವಿಸಿದ್ದ

ರಿಂದ ಗ್ರಂಥಗಳು ನಿಜವಾಗಿ ಅನೇಕ ವಿರೂಪಗಳಿಗೆ ಪ್ಯೆಗೊಟ್ಟುವು. ಗ್ರಂಥಗಳನ್ನು ಅವುಗಳ ಪ್ರಾಚೀನ ಅಥವಾ ಮೂಲರೂಪಕ್ಕೆ ತಿದ್ದಲೆಳಸಿದಾಗ ಗ್ರಂಥ ಸಂಪಾದಕನ ಶಾಸ್ತ್ರ ಇಂಥಲ್ಲಿ ಕಷ್ಟ ಕರವಾದ ಮತ್ತು ಕೆಲಸಲ ಅಸಾಧ್ಯವಾದ ಕೆಲಸವನ್ನು ಎದುರಿಸಬೇಕಾಗುತ್ತದೆ. ಇದಲ್ಲದೆ ಮೂಲ ಸಂಪ್ರದಾಯ ನಡುವೆ ನಿಂತುಹೋಗಿ ಕೆಲಕಾಲದ ಮೇಲೆ ಮೂಲ ಆಗಮವು ಪರಸ್ಪರ ಸಂಬಂಧ ಅಥವಾ ವಿರೋಧವುಳ್ಳ ಭಾಗಗಳಾಗಿ ಒಡೆದು, ಜೈನಸೂತ್ರಗಳ ರೀತಿಯಲ್ಲಿ, ಈ ಪ್ರತ್ಯೇಕ ಭಾಗಗಳ ಪುನರುಜ್ಜೀವನ ಕಾರ್ಯ ನಡೆಯುಬಹುದಾದ ಸಾಧ್ಯತೆಯೂ ಇದ್ದಿತು.

ಪಠನ ಪದ್ಧತಿ (oral Transmission)ಯಿಂದ ಲೇಖನ ಪದ್ಧತಿಗೆ (written Transmission) ಆದ ಈ ಪರಿವರ್ತನೆ ಕ್ರಮ ಕ್ರಮೇಣ ನಡೆದಿರಬೇಕು. ಕಂಠಪಾಠ ಮಾಡಬೇಕಾದ ಗ್ರಂಥಗಳ ಸಮೂಹ ದೊಡ್ಡದಾಗಿ, ಸಂಬಂಧಿಸಿದ ಎಲ್ಲ ವಿಭಾಗಗಳ ಮೇಲೆ ಪ್ರಭುತ್ವಗಳಿಸಿದ್ದ ಅರ್ಹವ್ಯಕ್ತಿಗಳ ಸಂಖ್ಯೆ ಗ್ರಂಥಗಳ ಹರಹಿನ ಪ್ರಮಾಣಕ್ಕನುಸಾರವಾಗಿ ಕಡಮೆಯಾಗುತ್ತಾ ಹೋಗಿರಬೇಕು. ಇದರಿಂದ ಕೆಲವು ನಿರ್ದಿಷ್ಟ ಸಾಲುಗಳ ಕಂಠಪಾಠಪದ್ಧತಿಗೆ ಅವಕಾಶವಾಗಿರ ಬೇಕು. ಬೌದ್ಧ ಮತ್ತು ಜೈನ ಸಾಹಿತ್ಯಗಳ ಸಂಬಂಧದಲ್ಲಿ ಇಂಥ ಕ್ರಮವಿದ್ದುದು ನಮಗೆ ಗೊತ್ತಿದೆ. ಅವುಗಳ ಸೂತ್ರಗಳನ್ನು ಅಭ್ಯಾಸ ಮಾಡುವ ಕೆಲಸವನ್ನು ಕೆಲವು ನಿರ್ದಿಷ್ಟ ಸಮಿತಿ ಗಳಿಗೆ ವಹಿಸಿರುತ್ತಿತ್ತು. ಅವು ಹೀಗೆ ಕಂಠಪಾಠವಾಗಿ ಬಂದ ಬಿಡಿ ಸಾಲುಗಳನ್ನು ಒಟ್ಟಿಗೆ ಸೇರಿಸಿ ಪಠನ ಪದ್ಧತಿಯ ಬೇರೆ ಬೇರೆ ಶಾಲೆಗಳಿಗೆ ತಿಳಿದಿದ್ದ ಪಾಠಭಾಗಗಳನ್ನು ಒಂದೆಡೆ ಕ್ರೋಡೀ ಕರಿಸಬೇಕಾಗಿತ್ತು. ಬೌದ್ಧ ಮತ್ತು ಜೈನ ಧಾರ್ಮಿಕ ಕೃತಿಗಳನ್ನು ಜೋಡಿಸಲು ಏರ್ಪಟ್ಟಿದ್ದ ಅನೇಕ ಸಮಿತಿಗಳು ನಮಗೆ ತಿಳಿದಿವೆ. ಆದರೆ ಉಳಿದ ಕೃತಿಗಳ ಸಂಬಂಧದಲ್ಲಿ ನಡೆದ ಅಂಥ ಘಟನೆಗಳನ್ನು ಗುರುತಿಸಿಡುವ ಅದೃಷ್ಟ ಸಾಹಿತ್ಯ ಚರಿತ್ರೆಗೆ ಲಭಿಸಿಲ್ಲ. ನಮಗೆ ಗೊತ್ತಿರುವ ಅಂಥ ಕೆಲವು ಘಟನೆಗಳಲ್ಲಿಯೂ ಚೆದರಿಹೋಗಿದ್ದ ಭಾಗಗಳನ್ನು ಯಾವ ಕ್ರಮ ಹಿಡಿದು ಸಮಗ್ರ ಕೃತಿ ಯಾಗಿ ಜೋಡಿಸುತ್ತಿದ್ದರೆಂಬ ಬಗ್ಗೆ ಖಚಿತವಾಗಿ ಏನೂ ಗೊತ್ತಿಲ್ಲ. ಉದಾಹರಣೆಗೆ, ಅವುಗಳನ್ನು ಬರೆಹಕ್ಕೆ ತಿರುಗಿಸಿಬಿಡುತ್ತಿದ್ದರೋ ಅಥವಾ ಕೇಂದ್ರ ಶಾಲೆಯೊಂದು ಪುನಃ ಅವುಗಳ ಕಂಠಪಾಠ ಸಾಗಿಸುತ್ತಿತ್ತೋ ತಿಳಿಯದು.

ಪ್ರಾಚೀನವಾದ ಪಠನಪದ್ಧತಿಗೆ ತಡೆಯೊದಗುವ ಸಂಭಾವ್ಯತೆ ಇದ್ದಂತೆಯೇ ಇದಕ್ಕಿಂತ ತೀವ್ರ ಅಪಾಯಕರವಾದ ತಡೆಗಳು ಒದಗುವ ಸಾಧ್ಯತೆ ಲಿಖಿತ ಗ್ರಂಥಗಳಿಗೆ ಇನ್ನಷ್ಟು ಹೆಚ್ಚಾಗಿಯೇ ಇತ್ತು. ಪ್ರಾಚೀನ ಮತ್ತು ಮಧ್ಯಭಾರತಗಳಲ್ಲಿ ಬಳಸುತ್ತಿದ್ದ ಲೇಖನ ಸಾಮಗ್ರಿಗಳ ಸ್ವರೂಪವೆಂಥದೆಂಬುದನ್ನು ನಾವು ಬಲ್ಲೆವು. ಅಲ್ಲದೆ ನಮಗೆ ಲಭಿಸಿರುವ ಹಸ್ತ ಪ್ರತಿಗಳಲ್ಲಿ ಹೆಚ್ಚುಸಂಖ್ಯೆಯವು ಹತ್ತನೆಯ ಶತಮಾನಕ್ಕಿಂತ ಹಿಂದಿನವಲ್ಲವೆಂಬುದರಿಂದಲೂ ಹೆಚ್ಚಿನ ಗ್ರಂಥಗಳು ಖಂಡಿತವಾಗಿ ಹದಿಮೂರನೆಯ ಶತಮಾನಕ್ಕಿಂತ ಈಚಿನವೆಂಬುದರಿಂದಲೂ ಲಿಖಿತ ದಾಖಲೆಗಳ ಶಿಥಿಲ ಪ್ರಕೃತಿಯನ್ನು ನಾವು ಸುಲಭವಾಗಿ ತಿಳಿಯಬಹುದು. ಹೀಗೆ ನಮ್ಮ ಪವಿತ್ರ ಗ್ರಂಥಗಳ ಬಹುಭಾಗದಂತೆ ಅಥವಾ ಕಾವ್ಯಪೌರಾಣಿಕ ಸಾಮಗ್ರಿಗಳಂತೆ ಪಠನ ಪದ್ಧತಿಯ ಮೂಲಕ ಉಳಿದುಬರುವ ಭಾಗವಿಲ್ಲದ ಗ್ರಂಥಗಳ ಅಸ್ತಿತ್ವ ಹಸ್ತಪ್ರತಿಗಳ ಸಂಗ್ರಹ ಮತ್ತು ಅವುಗಳ ಪ್ರತಿರಚನೆಯ ಕಾರ್ಯದ ಮಿತಿಗೆ ಒಳಪಟ್ಟಿತು. ಈ ಪ್ರತಿರಚನೆಯ ಕೆಲಸ ಎಷ್ಟು ಮುಖ್ಯವಾದುದಾಗಿತ್ತೆಂದರೆ ನಂತರದ ಪುರಾಣಗಳಲ್ಲಿ, ಬೌದ್ಧ ಮಹಾಯಾನ ಗ್ರಂಥ ಗಳಲ್ಲಿ ಮತ್ತು ಪ್ರಾಚೀನ ಕಾವ್ಯಗಳಿಗೆ ಸೇರಿದ ಈಚಿನ ಪ್ರಕ್ಷಿಪ್ತ ಭಾಗಗಳಲ್ಲಿ ಪ್ರತಿರಚನೆಯನ್ನೂ ಮತ್ತು ಹಸ್ತಪ್ರತಿಗಳ ದಾನವನ್ನೂ ಬಹು ಗುಣಪೂರ್ಣವಾದ ಧಾರ್ಮಿಕ ಕಾರ್ಯವೆಂದು

ಹೊಗಳಲಾಗಿವೆ. ಲಭ್ಯಗ್ರಂಥಗಳ ಹಸ್ತಪ್ರತಿ ತುಂಬ ಪ್ರಾಚೀನವಾಗಿರುವುದು ಬಹು ಅಪರೂಪ ಅಲ್ಲದೆ ಉಳಿದುಬಂದಿರುವ ಸಾವಿರಾರು ಗ್ರಂಥಗಳು ಮೂಲಪ್ರತಿಗಳಾಗಿರದೆ ಮೂಲಪ್ರತಿಗಳಿಂದ ಹುಟ್ಟಿಬಂದ ಪರಂಪರಾಗತ ಪ್ರತಿಗಳಲ್ಲಿ ಯಾವ ಪ್ರತಿಯಾದರೂ ಆಗಿರಲು ಸಾಧ್ಯ. ಇಷ್ಟರಿಂದಲೇ ಈ ಕಾರ್ಯದ ಮಹತ್ವವೆಷ್ಟೆಂಬುದನ್ನು ಅಳೆಯಬಹುದು. ಲಭ್ಯವಾಗಿರುವ ಹಸ್ತಪ್ರತಿಗಳ ಮೂಲಕ ಮಹಾ ಪರಂಪರೆಯೊಂದು ನಮಗೆ ಉಳಿದುಬಂದಿದೆ. ಇದಕ್ಕೆ ಪ್ರಾಚೀನ ಮತ್ತು ಮಧ್ಯಯುಗದ ಭಾರತೀಯ ಲಿಪಿಕಾರರ ನಿರಂತರವಾದ ಪ್ರತಿರಚನಾ ಕಾರ್ಯವೇ ಕಾರಣವಾದುದರಿಂದ ನಾವು ಅವರಿಗೆ ಋಣಿಗಳಾಗಿದ್ದೇವೆ. ಕಳೆದ ಎರಡು ಸಾವಿರ ವರ್ಷಗಳ ಕಾಲ ಭಾರತದಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳನ್ನು ಬಿಡಿಸಿ ತೋರುವುದು ಸಾಧ್ಯವಿದ್ದಿದ್ದರೆ ಅನೇಕ ಕಾರಣಗಳಿಂದಾಗಿ ಇಂದು ಅಲಭ್ಯವಾಗಿ ಹೋಗಿರುವ ಗ್ರಂಥಗಳ ಸಂಖ್ಯೆಯನ್ನು ಕಂಡು ನಾವು ತಲ್ಲಣಿಸಿಬಿಡಬಹುದು. ಲಭ್ಯಕೃತಿಗಳಲ್ಲಿ ಆಗಾಗ ಕೆಲವು ಪ್ರಸಿದ್ಧ ಕೃತಿಕಾರರ ಗ್ರಂಥಗಳ ಪ್ರಸ್ತಾಪಗಳು ಬರುತ್ತವೆ. ಆದರೆ ಅವು ಈವರೆಗೂ ಪತ್ತೆಯಾಗಿಲ್ಲ. ಹಾಗೆಯೇ ಅನ್ಯಕೃತಿಗಳಿಂದ ಆಯ್ದ ಉದ್ಧರಣಗಳು ಕೆಲವುಸಲ ಆ ಕೃತಿಗಳ ಲಭ್ಯ ಹಸ್ತಪ್ರತಿಗಳಲ್ಲಿ ಸಿಗುವುದಿಲ್ಲ.

ಶಾಸನಗಳು ತಾಮ್ರದ ದಾನಫಲಕಗಳು, ಆ ಲೇಖ್ಯಗಳನ್ನುಳ್ಳ ನಾಣ್ಯಗಳು ಅಥವಾ ಬರೆಹ ಕೊರೆದ ಇತರ ವಸ್ತುಗಳ ಸಂಬಂಧದಲ್ಲಿ ವ್ಯವಹರಿಸುವಾಗ ಮೂಲ ಲೇಖನಗಳ ಪ್ರಮಾಣ ಪ್ರತಿಗಳನ್ನು ಗಮನಿಸಬೇಕು. ಅವುಗಳಲ್ಲಿ ತಪ್ಪುಗಳೇನಾದರೂ ಇದ್ದಲ್ಲಿ ಶಾಸನ ಕರ್ತೃವಿನ ನೇತೃತ್ವದಲ್ಲಿ ಇಲ್ಲವೆ ಅವನಿಂದ ಅಧಿಕಾರ ಪಡೆದ ನಿಯೋಗದ ಮೇಲ್ವಿಚಾರಣೆಯಲ್ಲಿ ಅಧಿಕೃತವಾಗಿ ಕೆಲಸಮಾಡುತ್ತಿರುವ ರೂವಾರಿಗಳ ತಪ್ಪುಕೆಲಸದಿಂದಾಗಿ ಆಗಿರುತ್ತದೆ. ಲೇಖ್ಯ ಸಾಮಗ್ರಿ ಬಹುಕಾಲ ಬಾಳನಂಥದಾಗಿರುವುದರಿಂದ ಇಲ್ಲಿ ಪ್ರತಿರಚನೆಯ ಅಗತ್ಯವೇ ಒದಗುವುದಿಲ್ಲ. ಆದ್ದರಿಂದ ಈ ಶಾಸನಗಳಿಗೆ ಲಿಪಿಕಾರನ ಮಾರ್ಗದರ್ಶನಕ್ಕಾಗಿ ಭೂರ್ಜಪತ್ರ ಅಥವಾ ತಾಳಪತ್ರದ ಮೇಲೆ ರಚಿಸಿರುವ ಮೂಲಲೇಖನದ ಬೆಲೆಯುಂಟು. ಹಸ್ತಪ್ರತಿಗಳ ವಿಷಯ ಹೀಗಲ್ಲ. ಹಸ್ತಪ್ರತಿಯೊಂದರ ಹೆಚ್ಚು ನಕಲುಗಳನ್ನು ತೆಗೆಯಲು ಕಳೆದ ಕೆಲವು ಶತಮಾನಗಳಲ್ಲಿ ತಾಂತ್ರಿಕ ವಿಧಾನಗಳನ್ನು ಅನುಸರಿಸಲಾಯಿತು. ಇಂಥ ಸಹಾಯವೇನೂ ಇಲ್ಲದಿದ್ದ ಕಾಲದಲ್ಲಿ ಹಸ್ತಪ್ರತಿಯ ಪ್ರತಿಯೊಂದು ಉಚ್ಚಾರಾಂಶ, ಶಬ್ದಗಳನ್ನೂ ಕೈಯಿಂದ ಬರೆಯಬೇಕಾಗಿತ್ತು. ಇದು ಸ್ವಾಭಾವಿಕವಾಗಿಯೇ ತುಂಬ ನಿಧಾನವಾದ ಹಾಗೂ ಬೇಸರ ತರುವ ವಿಧಾನ. ಆದರೆ ಲೌಕಿಕವಾದ ಇಲ್ಲವೆ ಧಾರ್ಮಿಕವಾದ ಕಾರಣಗಳಿಂದಾಗಿ ಈ ಕೆಲಸ ನಡೆಯಿತು. ಅಗತ್ಯವನ್ನು ಪೂರೈಸುವ ಮಟ್ಟಿಗೂ ನಡೆಯಿತು. ಹೀಗೆ ಪ್ರತಿಯ ಇಲ್ಲವೆ ಪ್ರತಿಕಾರನೊಡನಿರುವ ಮಾತೃಕೆಯ ಸಹಾಯದಿಂದ ಒಂದು ಕೃತಿಯ ಪ್ರತಿಗಳನ್ನು ಅಗತ್ಯವಿದ್ದಷ್ಟು ತಯಾರಿಸಲಾಗುತ್ತಿತ್ತು. ಇದರಿಂದಾಗಿ ಈ ಎಲ್ಲ ಪ್ರತಿಗಳಿಗೆ ಹಸ್ತಪ್ರತಿ ಎಂಬ ಹೆಸರು ಬಂತು. ಇವುಗಳ ಲೇಖ್ಯವಸ್ತು, ಮೇಲೆ ನೋಡಿದಂತೆ, ಭೂರ್ಜಪತ್ರವೋ ತಾಳಪತ್ರವೋ ಇಲ್ಲವೆ ಕಾಗದವೋ ಆಗಿರುತ್ತಿತ್ತು. ಹಳೆಯದಾಗಿ ಜೀರ್ಣವಾಗಿ ಬಿಟ್ಟಿರುವ ಪ್ರತಿಯನ್ನು ನಕಲು ಮಾಡುವುದಕ್ಕೆ ಆ ಪ್ರತಿಗೆ ಇದ್ದ ಪ್ರಾಮುಖ್ಯವೇ ಪ್ರಚೋದನೆಯಾಗಿರುತ್ತಿತ್ತು. ಈ ಪ್ರತಿಗಳು ಪುಸ್ತಕ ಭಂಡಾರಗಳಲ್ಲಿ ಸಂಗ್ರಹಗೊಳ್ಳುವುದಕ್ಕೆ ಮುಂಚೆ ಇವು ಯಾರ ವಶದಲ್ಲಿದ್ದುವೋ ಅವರೇ ಪ್ರತಿಗಳನ್ನು ರಚಿಸುತ್ತಿದ್ದಿರಬೇಕು. ಆ ನಂತರ ಗ್ರಂಥ ಭಂಡಾರಗಳ ಒಡೆಯರ ನಿರ್ದೇಶನವನ್ನನುಸರಿಸಿ ಅವು ರಚಿತವಾಗುತ್ತಿದ್ದುವೆಂದು ತೋರುತ್ತದೆ.

ಕೃತಿಗಳು ನಾಶವಾಗದಂತೆ ರಕ್ಷಿಸಿಕೊಳ್ಳಬೇಕಾದಲ್ಲಿ ಕಾಲಕಾಲಕ್ಕೆ ನಡೆಯುತ್ತಿದ್ದ ಪ್ರತಿ ನಿರ್ಮಾಣಕಾರ್ಯ ಅಗತ್ಯವಾಗಿತ್ತು. ಇದರಿಂದ ಕ್ರಮೇಣ ಜೀರ್ಣವಾದ ಮಾತೃಕೆಯ ಸ್ಥಾನವನ್ನು ಹೊಸ ಪ್ರತಿಯೊಂದು ತುಂಬುತ್ತಿತ್ತು. ಕೃತಿಯನ್ನು ಕಾಪಾಡಿಕೊಳ್ಳಲು ಅದರ ಅನೇಕ ಪ್ರತಿಗಳನ್ನು ಮಾಡಿಟ್ಟುಕೊಳ್ಳುವಂತೆ ಕವಿಗೆ ಕಟ್ಟಳೆ ಮಾಡುವ ಸ್ವಾರಸ್ಯಕರವಾದ ಭಾಗವೊಂದು ರಾಜಶೇಖರನ ಕಾವ್ಯಮೀಮಾಂಸೆಯಲ್ಲಿ ಬರುತ್ತದೆ.[16] ಇಂಥ ವಿಚಾರಗಳಿಂದ ಪ್ರೇರಣೆಗೊಂಡು ಕೆಲವರು ಕೃತಿಕಾರರೇ ತಮ್ಮ ಜೀವಿತಕಾಲದಲ್ಲಿ ಒಂದಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ತಮ್ಮ ಕೃತಿಗಳ ನಕಲುಗಳನ್ನು ಮಾಡಿಸಿರಬಹುದು. ಮೇಲಾಗಿ ಒಬ್ಬ ಕವಿಯ ಕೃತಿಯು ಪ್ರಸಿದ್ಧವಾಯಿತೆಂದರೆ ಭಾರತದ ಅನೇಕ ಭಾಗಗಳಿಂದ, ವಿದ್ಯೆಗೆ ಆಶ್ರಯವಿತ್ತ ರಾಜರಿಂದಲೋ, ವಿದ್ಯಾಪ್ರೇಮಿಗಳಿಂದಲೋ ಅದರ ಪ್ರತಿಗಳಿಗೆ ಬೇಡಿಕೆಗಳು ಬರುತ್ತಿದ್ದುವು. ಈ ಪ್ರತಿನಿರ್ಮಾಣಕಾರ್ಯದಲ್ಲಿ ಮೂಲಕೃತಿಯನ್ನೇ ಅನೇಕ ಸಲ ಪ್ರತಿ ಮಾಡಬಹುದು, ಇಲ್ಲವೆ ಹೀಗೆ ಸಿದ್ಧವಾದ ಯಾವುದೋ ಒಂದು ಪ್ರತಿಯು ಹೊಸ ನಕಲುಗಳನ್ನು ಮಾಡಲು ಆಧಾರದ ಮಾತೃಕೆಯಾಗಿ ಪರಿಣಮಿಸಬಹುದು. ಮೂಲಕೃತಿಯೇ ಲಭ್ಯವಿದ್ದ ಕಾಲದಲ್ಲಿಯೂ ಈ ಕೆಲಸ ಅನಿರ್ದಿಷ್ಟವಾಗಿ ಮುಂದುವರಿಯಬಹುದು. ಏಕೆಂದರೆ ಆ ಕಾಲದಲ್ಲಿ ಪ್ರಯಾಣ ತುಂಬ ನಿಧಾನವಾಗುತ್ತಿತ್ತಲ್ಲದೆ ಬಹು ಸಲ ದಾರುಣವಾದ ಅನುಭವವಾಗಿಯೂ ಪರಿಣಮಿಸುತ್ತಿತ್ತು. ಹೀಗಾಗಿ ಮೂಲವನ್ನೇ ಉಪಯೋಗಿಸಿಕೊಳ್ಳಬೇಕೆಂಬ ಅಪೇಕ್ಷೆ ಇದ್ದರೂ ಅದನ್ನು ಪಡೆಯಲು ಬೇಕಾದ ಅನುಕೂಲಗಳು ಸುಲಭಸಾಧ್ಯವಾಗಿರಲಿಲ್ಲ.

ಗ್ರಂಥಸಂಬಂಧವಾದ ಕೆಲಸದಲ್ಲಿ ತೊಡಗಿದ್ದಾಗ ನಾವು ಎರಡು ರೀತಿಯ ಸಾಧ್ಯತೆಗಳನ್ನು ಲಕ್ಷಿಸಬೇಕಾಗುತ್ತದೆ. ಪ್ರಾಚೀನ ಭಾರತೀಯ ಸಾಹಿತ್ಯದ ರೀತಿಯಲ್ಲಿ, ಬಿಡಿ ಲೇಖಕರಿಗಿಂತ ಹೆಚ್ಚಾಗಿ ನಿರ್ದಿಷ್ಟ ಶಾಲೆಗಳಿಂದ ರಚಿತವಾಗಿ, ಬಾಯಿಂದ ಬಾಯಿಗೆ ಹರಿದು ಬಂದ ರಚನೆಗಳಿರುತ್ತವೆ. ಇವು ಪ್ರತ್ಯೇಕ ವಿದ್ಯಾಕೇಂದ್ರ ಇಲ್ಲವೆ ಸಂಸ್ಕೃತಿ ಕೇಂದ್ರಗಳಲ್ಲಿ ಬೇರೆ ಬೇರೆ ಕಾಲದಲ್ಲಿ ಬರೆಹಕ್ಕೆ ತಿರುಗಿರಬೇಕು. ವೈದಿಕ ಸಾಹಿತ್ಯದಂತೆ ಬಹಳ ಪವಿತ್ರವೆನಿಸಿದ್ದು ಕಿಂಚಿತ್ತು ನ್ಯೂನತೆಗೂ ಮೈಗೊಡದಂಥ ಗ್ರಂಥಗಳಾಗಿದ್ದಾಗ ಲಿಖಿತಗ್ರಂಥಕ್ಕೂ ಕಂಠಸ್ಥ ಕೃತಿಗೂ ಹೆಚ್ಚು ವ್ಯತ್ಯಾಸವಿರುವುದಿಲ್ಲ. ಅಲ್ಲದೆ ಗ್ರಂಥ ಸಂಪ್ರದಾಯದಲ್ಲಿ ಏಕತೆ ಇರುತ್ತದೆ. ಆದರೆ ಕೃತಿಗಳು ಅಂಥ ಪರಿಗಣನೆಗಳಿಗೆ ಹೊರತಾಗಿದ್ದಾಗ ಮೇಲೆ ಹೇಳಿದ ರೀತಿಯ ನಿರ್ದಿಷ್ಟ ಕೃತಿಯೊಂದರ ಲಿಖಿತಪಾಠದಲ್ಲಿ ಏಕತೆ ಇರುವುದಿಲ್ಲ. ಪ್ರತಿಯೊಂದು ಕೇಂದ್ರಕ್ಕೂ ತನ್ನದೇ ಆದ ಸ್ಥಳೀಯ ಪಾಠವೊಂದು ಇರಬಹುದಾಗಿತ್ತು. ಈ ಸ್ಥಳೀಯ ಪಾಠ ಮುಂದೆ ಕೈಯಿಂದ ಕೈಗೆ ದಾಟುವಾಗ ಸಾಮಾನ್ಯವಾಗಿ ಲಿಖಿತ ಗ್ರಂಥವೊಂದನ್ನು ರೂಪುಗೆಡಿಸುವಂಥ ಸಂತತ ಪ್ರತಿರಚನೆ, ಪರಿಶೀಲನೆ ಮೊದಲಾದ ಎಲ್ಲ ಬಗೆಯ ವ್ಯತ್ಯಯಗಳನ್ನೂ ಹಾದುಹೋಗಬೇಕಾಗುತ್ತಿತ್ತು. ಎಂಥ ಪ್ರಸಂಗದಲ್ಲಿಯೂ ಯಾವ ಒಂದು ನಿರ್ದಿಷ್ಟಪ್ರತಿಯನ್ನೂ ಕೃತಿಯ ಮೂಲಪಾಠವೆಂದು ನಾವು ಹೇಳುವುದು ಸಾಧ್ಯವಿಲ್ಲ. ಕಂಠಸ್ಥವಾಗಿ ಉಳಿದು ಬಂದ ಕೃತಿಯೊಂದರ ಪ್ರಥಮಪ್ರತಿಯ ಬಗ್ಗೆಯೂ ಆ ಮಾತು ಹೇಳುವಂತಿಲ್ಲ. ಏಕೆಂದರೆ ಕೃತಿಯ ಪ್ರಥಮ ರಚನೆಗೂ ಮತ್ತು ಅದರ ಪ್ರಥಮ ಲಿಖಿತರೂಪಕ್ಕೂ ನಡುವೆ, ಒಟ್ಟು ಗ್ರಂಥದಲ್ಲಿ ತಮ್ಮ ವೈಶಿಷ್ಟ್ಯವೇನನ್ನೋ ಬಿಟ್ಟುಹೋದ, ಪಾಠಕರ, ವಿದ್ವಾಂಸರ ಮತ್ತು ಪರಿಷ್ಕರಣಕಾರರ ಅನೇಕ ಸಂತತಿಗಳೇ ಆಗಿ ಹೋಗಿರುತ್ತವೆ. ಆದರೆ ಏಕ ಕರ್ತೃಕ ಗ್ರಂಥದ ವಿಷಯ ಹೀಗಲ್ಲ. ಅದೂ ಕೂಡ ಕಂಠಸ್ಥವಾಗಿ ಬಾಯಿಂದ ಬಾಯಿಗೆ ದಾಟಿ ಬಂದಿದ್ದರೂ ಕೃತಿಕಾರನ ಪ್ರಥಮ

ರಚನೆಗೂ ಕೃತಿಯ ಪ್ರಥಮ ಲಿಖಿತರೂಪಕ್ಕೂ ಇರುವ ಅಂತರ ಅಷ್ಟು ಹೆಚ್ಚಾಗಿರುವುದಿಲ್ಲ; ಅದಕ್ಕೆ ಸ್ಥಳೀಯ ಪಾಠಗಳು ಏರ್ಪಡುವ ಸಾಧ್ಯತೆ ಕೂಡ ತುಂಬ ಕಡಿಮೆ. ಒಂದು ನಿರ್ದಿಷ್ಟ ಶಾಲೆಯಿಂದ ರೂಪುಗೊಂಡ ಕೃತಿಯಲ್ಲಿರುವ ವೈಷಮ್ಯಗಳಿಗೆ ಪ್ರತಿಯಾಗಿ ಏಕ ಕರ್ತೃಕ ಗ್ರಂಥದಲ್ಲಿ ಹೆಚ್ಚಿನ ಸಂಬದ್ಧತೆ ಇರುತ್ತದೆ. ಇನ್ನು ಎರಡನೆಯ ಸಾಧ್ಯತೆಯೆಂದರೆ ಗ್ರಂಥ ಕರ್ತನೇ ಅದನ್ನು ಬರಹಕ್ಕಿಳಿಸುವುದು. ಇದನ್ನು ಅವನು ಸ್ವತಃ ಮಾಡಬಹುದು ಇಲ್ಲವೆ ಮತ್ತೊಬ್ಬರಿಂದ ಮಾಡಿಸಿ ತಾನೇ ಅದನ್ನು ಪರಿಶೀಲಿಸಿ ತಿದ್ದಬಹುದು. ಹೀಗೆ ಗ್ರಂಥಕರ್ತನೇ ಸ್ವತಃ ಅಥವಾ ಅವನ ಮೇಲ್ವಿಚಾರಣೆಯಲ್ಲಿ ಬೇರೊಬ್ಬರು ಬರೆದು ಅವನೇ ತಿದ್ದಿದ ಮೂಲ ಪ್ರತಿಯನ್ನು ಕರ್ತೃವಿನ 'ಸ್ವಹಸ್ತಾಕ್ಷರ ಪ್ರತಿ' (Autograph) ಎನ್ನುತ್ತೇವೆ. ಒಂದು ಗ್ರಂಥಕ್ಕೆ ಸಂಬಂಧಿಸಿದಂತೆ ಈ ಸ್ವಹಸ್ತಾಕ್ಷರ ಪ್ರತಿಯೇ ಕಟ್ಟಕಡೆಯ ಪ್ರಮಾಣ. ಹೀಗೆ ಒಟ್ಟು ಎರಡು ರೀತಿಯ ಗ್ರಂಥಗಳಿವೆ. ಸ್ವಹಸ್ತಾಕ್ಷರಪ್ರತಿಯೆಂಬುದೇ ಇಲ್ಲದ ಗ್ರಂಥ ಮತ್ತು ಸದ್ಯಕ್ಕೆ ಲಭ್ಯವಿರಲಿ, ಇಲ್ಲದಿರಲಿ ಸ್ವಹಸ್ತಾಕ್ಷರ ಪ್ರತಿಯನ್ನುಳ್ಳ ಗ್ರಂಥ. ಮೊದಲನೆಯದರಲ್ಲಿ ಕಂಠಸ್ಥವಾಗಿ ಬಂದ ರಚನೆಗೂ ಅದರ ಪ್ರಥಮ ಲಿಖಿತ ಮಾತೃಕೆಗೂ (Exemplar) ಇರುವ ಅಂತರ ಮತ್ತು ಎರಡನೆಯದರಲ್ಲಿ ಸ್ವಹಸ್ತಾಕ್ಷರ ಪ್ರತಿಗೂ ಮತ್ತು ನಮಗೆ ದೊರೆತ ಅದರ ಪ್ರಾಚೀನತಮ ಮಾತೃಕೆಗೂ ಇರುವ ಅಂತರ—ಇವುಗಳಿಗನುಗುಣವಾಗಿ ಈ ಎರಡು ಜಾತಿಯ ಗ್ರಂಥಗಳಿಂದ ಉದ್ಭವಿಸುವ ಸಮಸ್ಯೆಗಳೂ ಬೇರೆಯಾಗುತ್ತವೆ.



# ಶ್ರೀ ಪು. ತಿ. ನರಸಿಂಹಾಚಾರ್ಯರ

# "ಅಹಲ್ಯೆ"

## ಲೇಖಕರು : "ಕೈಪು" ಲಕ್ಷ್ಮೀನರಸಿಂಹಶಾಸ್ತ್ರೀ

ರಾಮಾಯಣ ಮಹಾಭಾರತಗಳು ಹಿಂದಿನಿಂದಲೂ ಕಾಳಿದಾಸ ಭಾಸರಂತಹ ಸಂಸ್ಕೃತ ಕವಿಗಳಿಗೆ ಮಾತ್ರವಲ್ಲದೆ ವಿಶ್ವದ ಕವಿಗಳಿಗೆ ಆಕರಗಳಾಗಿವೆ. ಕನ್ನಡ ವಾಙ್ಮಯದಲ್ಲಿಯೂ ಪಂಪನಿಂದ ಇಂದಿನವರೆಗಿನ ಸಾಹಿತ್ಯ ಕೃತಿಗಳಲ್ಲಿ ಇವುಗಳ ಕಥಾ ಸಾಮಗ್ರಿಯನ್ನು ವಸ್ತುವಾಗಿ ಪಡೆದು ರಚಿತವಾದ ಸ್ವತಂತ್ರ ಕೃತಿಗಳು ಎಷ್ಟೋ ಇವೆ. ರಾಮಾಯಣವೆಂದರೆ ರಾಮರಾವಣರ ಕಾಳಗ, ಮಹಾಭಾರತವೆಂದರೆ ಕುರು ಪಾಂಡವರ ಚರಿತ್ರೆ—ಎಂಬುದು ಸ್ಥೂಲವಾದರೂ, ಈ ಕಾವ್ಯಗಳಲ್ಲಿ ಕವಿಯ ಸೂಕ್ಷ್ಮದೃಷ್ಟಿಯಲ್ಲಿ ಮಿಂಚಿ ಮರೆಯಾಗಿರುವ ಉಪಾಖ್ಯಾನಗಳು ಕಾಲಕ್ರಮೇಣ ವಿಕಸಿಸಿ ಪೂರ್ಣ ಜೀವವನ್ನು ಪಡೆದು, ಅನೇಕ ಕಾವ್ಯನಾಟಕಾದಿ ಗ್ರಂಥಗಳ ಅವತಾರಕ್ಕೆ ಕಾರಣವಾಗಿವೆ. ಪ್ರೊ. ತೀ. ನಂ. ಶ್ರೀಯವರು ಹೇಳುವಂತೆ ಇವು ಕೊರೆ ಜೀಳದ ಗಣಿಗಳೇ ಸರಿ. ರಾಮಾಯಣದ ಉಪಾಖ್ಯಾನಗಳಲ್ಲಿ ಅಹಲ್ಯಾ ವೃತ್ತಾಂತವೂ ಒಂದು. 'ಕವಿ ಪುರೋಹಿತ'ರಾದ ಪು.ತಿ. ನರಸಿಂಹಾಚಾರ್ಯರು ರಾಮಾಯಣದಲ್ಲಿ ವಾಲ್ಮೀಕಿಯ ದೃಷ್ಟಿಯಲ್ಲಿ ಹಾಯ್ದ ಈ ನೆರಳಿಗೆ ಬೆಳಕನ್ನೂ ಜೀವವನ್ನೂ ಹೊಯ್ದು, ಕನ್ನಡಿಗರ ಕಣ್ಮನಗಳನ್ನು ಸೆಳೆಯುವಂತೆ 'ಗೀತರೂಪಕ'ವೆಂಬ ನಾಟಕ ಪ್ರಭೇದದಿಂದ ಕನ್ನಡ ತಾಯಿಯ ಅಡಿದಾವರೆಗಳನ್ನು ಅಲಂಕರಿಸಿದ್ದಾರೆ.

ವಾಲ್ಮೀಕಿ ರಾಮಾಯಣದಲ್ಲಿ ಬಾಲಕಾಂಡದ ೪೮ ಮತ್ತು ೪೯ನೇ ಸರ್ಗಗಳಲ್ಲಿ ಅಹಲ್ಯಾ ವೃತ್ತಾಂತವು ಕಾಣಿಸಿಕೊಂಡಿದೆ. ಯಾಗ ರಕ್ಷಣೆಗಾಗಿ ವಿಶ್ವಾಮಿತ್ರನನ್ನು ಹಿಂಬಾಲಿಸಿದ ರಾಮಲಕ್ಷ್ಮಣರು ಯಾಗ ಪೂರ್ತಿಯಾದ ನಂತರ ಮಿಥಿಲಾ ಪಟ್ಟಣಕ್ಕೆ ಪ್ರಯಾಣ ಮಾಡುವರಷ್ಟೆ! ಮಾರ್ಗ ಮಧ್ಯದಲ್ಲಿ ನಿರ್ಜನವಾದ ಆಶ್ರಮವನ್ನು ಕಂಡು ಕುತೂಹಲದಿಂದ ರಾಮನು ಪ್ರಶ್ನಿಸಿದಾಗ, ವಿಶ್ವಾಮಿತ್ರನು ಗೌತಮ ಮತ್ತು ಅಹಲ್ಯೆಯರ ವೃತ್ತಾಂತವನ್ನು ವಿವರಿಸುತ್ತಾನೆ. ವಾಲ್ಮೀಕಿ ರಾಮಾಯಣದಲ್ಲಿ ಈ ವೃತ್ತಾಂತದ ವಿವರಣೆಯಲ್ಲಿನ ಮುಖ್ಯಾಂಶಗಳು ಹೀಗಿವೆ :—

ಅಹಲ್ಯಾ ಪತಿಯಾದ ಗೌತಮನು ಘೋರ ತಪೋನಿರತನಾಗಿರಲು—

> ತಸ್ಯಾಂತರಂ ವಿದಿತ್ವಾಚ ಸಹಸ್ರಾಕ್ಷಃ ಶಚೀಪತಿಃ ।
> ಮುನಿವೇಷ ಧರೋ ಭೂತ್ವಾ ಅಹಲ್ಯಾಮಿದಮಬ್ರವೀತ್ ॥ (೪೮-೧೭)
>
> ಋತುಕಾಲಂ ಸಮೀಕ್ಷಂತೇ ನಾರ್ಥಿನಃ ಸುಸಮಾಹಿತೇ ।
> ಸಂಗಮಂ ತ್ವಹಮಿಚ್ಛಾಮಿ ತ್ವಯಾ ಸಹ ಸುಮಧ್ಯಮೇ ॥ (೪೮-೧೮)
>
> ಮುನಿವೇಷಂ ಸಹಸ್ರಾಕ್ಷಂ ವಿಜ್ಞಾಯ ರಘುನಂದನ ।
> ಮತಿಂ ಚಕಾರ ದುರ್ಮೇಧಾ ದೇವರಾಜ ಕುತೂಹಲಾತ್ ॥ (೪೮-೧೯)

ಅಥಾಬ್ರವೀತ್ ಸುರಶ್ರೇಷ್ಠಂ ಕೃತಾರ್ಥೇನಾಂತರಾತ್ಮನಾ।
ಕೃತಾರ್ಥೋಽಸ್ಮಿ ಸುರಶ್ರೇಷ್ಠ ಗಚ್ಛ ಶೀಘ್ರಮಿತಃ ಪ್ರಭೋ॥ (೪೮-೨೦)
(ಗೀತಾ ಪ್ರೆಸ್-ಸಂಸ್ಕರಣ)

ಇಂದ್ರನು ಗೌತಮನಿಗೆ ಅಂಜುತ್ತಾ ಹೊರಬರುತ್ತಿರಲು, ಮುನಿಯಾದ ಗೌತಮನು ಎದುರಾಗುತ್ತಾನೆ. ಇಂದ್ರನ ದುಷ್ಕೃತ್ಯಕ್ಕೆ ರೋಷಗೊಂಡು ಗೌತಮನು ಶಪಿಸುತ್ತಾನೆ.

ಮಮರೂಪಂ ಸಮಾಸ್ಥಾಯ ಕೃತವಾನಸಿ ದುರ್ಮತೇ।
ಅಕರ್ತವ್ಯಮಿದಂ ಯಸ್ಮಾತ್ ವಿಫಲಸ್ತ್ವಂ ಭವಿಷ್ಯಸಿ॥ (೪೮-೨೭)

ಗೌತಮೇನೈವ ಮುಕ್ತಸ್ಯ ಸರೋಷೇಣ ಮಹಾತ್ಮನಾ।
ಪೇತತು ರ್ವೃಷಣೌ ಭೂಮೌ ಸಹಸ್ರಾಕ್ಷಸ್ಯ ತತ್ಕ್ಷಣಾತ್॥ (೪೮-೨೮)

ತಥಾ ಶಪ್ತ್ವಾ ಚ ವೈ ಶಕ್ರಂ ಭಾರ್ಯಾಮಪಿ ಚ ಶಪ್ತವಾನ್।
ಇಹವರ್ಷ ಸಹಸ್ರಾಣಿ ಬಹೂನಿ ನಿವಸಿಷ್ಯಸಿ॥ (೪೮-೨೯)

ವಾತಭಕ್ಷಾ ನಿರಾಹಾರಾ ತಪ್ಯಂತೀ ಭಸ್ಮಶಾಯಿನೀ।
ಅದೃಶ್ಯಾ ಸರ್ವಭೂತಾನಾಂ ಆಶ್ರಮೇಽಸ್ಮಿನ್ ವಸಿಷ್ಯಸಿ॥ (೪೮-೩೦)

ಯದಾ ಭವೇತ್ ವನಂ ಘೋರಂ ರಾಮೋ ದಶರಥಾತ್ಮಜಃ।
ಆಗಮಿಷ್ಯತಿ ದುರ್ಧರ್ಷಸ್ತದಾ ಪೂತಾ ಭವಿಷ್ಯಸಿ॥ (೪೮-೩೧)

ತಸ್ಯಾತಿಥ್ಯೇನ ದುರ್ವೃತ್ತೇ ಲೋಭಮೋಹ ವಿವರ್ಜಿತಾ।
ಮತ್ಸಕಾಶಂ ಮುದಾಯುಕ್ತಾ ಸ್ವಂ ವಪುರ್ಧಾರಯಿಷ್ಯಸಿ॥ (೪೮-೩೨)
(ಗೀತಾಪ್ರೆಸ್ ಸಂಸ್ಕರಣ)

ನಂತರ ಗೌತಮನು ಹಿಮವಚ್ಛಿಖರದಲ್ಲಿ ತಪೋನಿರತನಾಗುತ್ತಾನೆ. ಮುಂದೆ ಇಂದ್ರನಿಗೆ ಪಿತೃದೇವತೆಗಳ ಪ್ರಯತ್ನದಿಂದ ಮೇಷವೃಷಣತ್ವವು ಪ್ರಾಪ್ತವಾಗುವುದು. ಈ ವೃತ್ತಾಂತವನ್ನು ವಿಶ್ವಾಮಿತ್ರನು ರಾಮನಿಗೆ ತಿಳಿಸಿದ ನಂತರ ಆಶ್ರಮವನ್ನು ಪ್ರವೇಶಿಸುತ್ತಾರೆ. ಸುರಲೋಕ ಸುಂದರಿಯಾದ ಅಹಲ್ಯೆಯು ಗೌತಮ ಶಾಪ ಕಾರಣದಿಂದ ಇವರಿಗೆ ಕಾಣಬರಲಿಲ್ಲ—

ಸಾಹಿ ಗೌತಮವಾಕ್ಯೇನ ದುರ್ನಿರೀಕ್ಷ್ಯಾ ಬಭೂವಹ।
ತ್ರಯಾಣಾಮಪಿ ಲೋಕಾನಾಂ ಯಾವದ್ರಾಮಸ್ಯ ದರ್ಶನಂ।
ಶಾಪಸ್ಯಾಂತ ಮುಪಾಗಮ್ಯ ತೇಷಾಂ ದರ್ಶನಮಾಗತಾ॥ (೪೯-೧೬)

ರಾಘವೌ ಹಿ ತದಾ ತಸ್ಯಾಃ ಪಾದಂ ಜಗೃಹತುಸ್ತದಾ।
ಸ್ಮರಂತೀ ಗೌತಮ ವಚಃ ಪ್ರತಿಜಗ್ರಾಹ ಸಾ ಹಿ ತೌ॥ (೪೯-೧೭)
(ಗೀತಾಪ್ರೆಸ್ ಸಂಸ್ಕರಣ)

ಸುರರೆಲ್ಲರೂ ಅಹಲ್ಯೆಯನ್ನು ಶ್ಲಾಘಿಸುತ್ತಾರೆ—

ಸಾಧು ಸಾಧ್ವಿತಿ ದೇವಾಸ್ತಾಮಹಲ್ಯಾಂ ಸಮಪೂಜಯನ್।
ತಪೋಬಲ ವಿಶುದ್ಧಾಂಗೀಂ ಗೌತಮಸ್ಯ ವಶಾನುಗಾಂ॥ (೪೯-೨೦)

ಗೌತಮೋಽಪಿ ಮಹಾತೇಜಾ ಅಹಲ್ಯಾಸಹಿತಃ ಸುಖೀ।
ರಾಮಂ ಸಂಪೂಜ್ಯ ವಿಧಿವತ್ ತಪಸ್ತೇಪೇ ಮಹಾತಪಾಃ॥ (೪೯-೨೧)
(ಗೀತಾಪ್ರೆಸ್ ಸಂಸ್ಕರಣ)



ಗೌತಮನ ಸತಿಯಾದ ಅಹಲ್ಯೆಯು, ಪತಿಯು ತಪೋನಿರತನಾಗಿರುವ ಸಮಯದಲ್ಲಿ ದೇವರಾಜನಾದ ಇಂದ್ರನಲ್ಲಿ ಕಾಮಾಸಕ್ತಳಾಗುವುದು; ಗೌತಮನ ತಪೋಭಂಗಕ್ಕಾಗಿ ಬಂದ ಇಂದ್ರನೂ ಅಹಲ್ಯೆಯಲ್ಲಿ ಮೋಹಗೊಳ್ಳುವುದು; ಇಂದ್ರನನ್ನು ಗೌತಮನು ವಿಫಲನಾಗೆಂದು ಶಪಿಸುವುದು; ಪತ್ನಿಯನ್ನು ಕುರಿತು "ಅದೃಶ್ಯಳಾಗಿದ್ದು, ಕೇವಲ ಗಾಳಿಯನ್ನೇ ಆಹಾರವಾಗಿ ಪಡೆಯುತ್ತಾ ರಾಮನ ದರ್ಶನದಿಂದ ಸ್ವಸ್ವರೂಪವನ್ನು ಪಡೆದು, ಪರಿಶುದ್ಧಳಾಗಿ ಮತ್ತೆ ನನ್ನನ್ನು ಸೇರುವೆ" ಯೆಂದು ಶಪಿಸುವುದು; ಅಂತೆಯೇ ಶಾಪ ವಿಮುಕ್ತಳಾದ ಅಹಲ್ಯೆಯು ಗೌತಮನನ್ನು ಸೇರುವುದು —ಇಷ್ಟು, ವಾಲ್ಮೀಕಿ ರಾಮಾಯಣದಲ್ಲಿ ವಿವರಿಸಲ್ಪಟ್ಟಿದೆ.

ಕನ್ನಡ ಕವಿಗಣದಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿರುವ ಶ್ರೀಯುತ ಪು.ತಿ. ನರಸಿಂಹಾಚಾರ್ಯರ ಕನ್ನಡ ಗೀತರೂಪಕವಾದ "ಅಹಲ್ಯೆ"ಯಲ್ಲಿನ ಕಥಾಸೂತ್ರವೂ ಇಂತೆಯೇ ಇದೆ. ಆದರೆ ಕೇವಲ ಅಕ್ಷರದಂತೆ ಮಿಂಚಿ ಓದುಗರ ಕುತೂಹಲವನ್ನು ಕೆರಳಿಸುವ ಉಪಾಖ್ಯಾನದಲ್ಲಿನ ಪಾತ್ರಗಳಿಗೆ ಜೀವವನ್ನು ತುಂಬಿ, ಲಕ್ಷದ ಬೆಲೆಯನ್ನು ನಿರೂಪಿಸುವ ಈ ಕೃತಿಯು, ಕೇವಲ ನಿರೂಪಣೆಯ ದೃಷ್ಟಿಯಿಂದ ಮಾತ್ರವಲ್ಲದೆ ಬಂಧದ ವೈಶಿಷ್ಟ್ಯದಿಂದಲೂ ಉತ್ತಮ ಗೀತರೂಪಕವಾಗಿ ಮೂಡಿ ಬಂದಿದೆ. ಅದರ ಸೌಂದರ್ಯವನ್ನು ತಿಳಿಯಲು ಕೃತಿಯ ಅಧ್ಯಯನವೇ ಸೂಕ್ತ. ಇಲ್ಲಿ ಕೇವಲ ಕೃತಿಯಲ್ಲಿನ ಕೆಲವು ಸಂಕೇತಗಳ ಬಗ್ಗೆ ಮಾತ್ರ ಆಲೋಚಿಸುವುದು ಮುಖ್ಯ ಉದ್ದೇಶ್ಯವಾಗಿದೆ.

**ಕುತೂಹಲ?**

ಸಮಗ್ರವಾಗಿ ಕೃತಿಯನ್ನೋದಿ ಮೆಲಕು ಹಾಕಿದಾಗ ಕುತೂಹಲವನ್ನು ಕೆರಳಿಸುವ ಕೆಲವು ಪ್ರಶ್ನೆಗಳು ಬಗೆಯಲ್ಲಿ ಮೂಡುತ್ತವೆ. ಪತನದ ಹಾದಿಯನ್ನು ತುಳಿದ ಅಹಲ್ಯೆಯು ಸಹಾನುಭೂತಿಗೆ ಅರ್ಹಳೇ? ಅವಳ ಪತನಕ್ಕೆ ಕಾರಣರು ಗೌತಮನೇ ಇಂದ್ರನೇ ಅಥವಾ ಅವಳೇನೇ? ಪತನದ ಹಾದಿಯಲ್ಲಿದ್ದ ಇಂದ್ರ ಮತ್ತು ಅಹಲ್ಯೆಯರನ್ನು ಶಪಿಸಿದ ಗೌತಮನು ನಂತರ ಪಶ್ಚಾತ್ತಾಪ ಪಡುವುದರ ಔಚಿತ್ಯವೇನು? ಅಧಾರ್ಮಿಕವಾದ ಇಂದ್ರ ಮತ್ತು ಅಹಲ್ಯೆಯರ ವರ್ತನೆಗಳಿಗೆ ಇಂಬು ಗೊಡುವಂತೆ ಪ್ರವೇಶಿಸುವ ಮದನನ ಪಾತ್ರವೇನು? ಈ ಪ್ರಶ್ನೆಗಳಿಗೆ ಸಾಂಕೇತಿಕವಾದ ಉತ್ತರವನ್ನು ಪ್ರಸ್ತುತ ಗೀತರೂಪಕದ ದೃಷ್ಟಿಯಿಂದ ಯೋಚಿಸಬೇಕಾಗಿದೆ.

**ನಾಂದಿಯ ಸಂಕೇತ:—**

ರೂಪಕದ ಮೊದಲ ದೃಶ್ಯದ ನಾಂದೀ ಪದ್ಯದಲ್ಲೇ 'ಹುಲು ಬಯಕೆ ಬಾ ಎನಲು ಓ ಎಂದು ಬಾರದಿರು'—ಎನ್ನುತ್ತಾ, ಐಹಿಕ ಜೀವನದಲ್ಲಿ ಹೊಂಚುವ ಮಾಯಾ ಸೈನ್ಯದ ಅದೃಷ್ಟ ಸಿಪಾಯಿಗೆ ಬೇಡಿಕೆಯನ್ನು ಸಲ್ಲಿಸುವುದರ ಮೂಲಕ ಎಚ್ಚರಿಕೆಯನ್ನು ಸಾರಲಾಗಿದೆ. 'ಕೋಲಿಗೆ ನಿಮಿಷ, ಕುಂಬಾರನಿಗೆ ವರುಷ' ಎಂಬ ಗಾದೆಯಂತೆ ಮಾನವರನ್ನು ವಂಚಿಸಲು ಹೊಂಚುವ ಹುಲುಬಯಕೆಗಳು, ಎಚ್ಚರದಪ್ಪಿದ ಮರುಕ್ಷಣದಲ್ಲೇ ಅಪ್ಪಳಿಸಲು ಸಿದ್ಧವಾಗಿರುತ್ತದೆ, ಒಡೆದ ಹಾಲು ಸರಿ ಹೋಗುವುದೆಂತು? ಚೂರಾದ ಮಡಕೆ ಕೂಡುವುದೆಂತು? ಪತನವಾದ ಬಾಳು ಉದ್ಧಾರವಾಗುವುದೆಂತು? ಹೆಣ್ಣಿನ ಬಾಳಿಗಂತೂ ಈ ಸಮಸ್ಯೆ ಮಹತ್ತರವಾದುದಾಗಿದೆ. ಈ ಸಮಸ್ಯೆಯ ಪರಿಹಾರ ಕಷ್ಟಸಾಧ್ಯವಾದರೂ ಅಸಾಧ್ಯವಲ್ಲವೆಂದು ಪವಾಡಸದೃಶವಾದ ಪರಿಹಾರಗಳನ್ನು ನಮ್ಮ ಹಲವು ಪುರಾಣಗಳು ಸಾಧಿಸುತ್ತವೆ. ಬೆಂಕಿಯಲ್ಲಿ ಪೂತಳಾದ ಸೀತೆಯನ್ನು ರಾಮನು ಪರಿಗ್ರಹಿಸಿದನು ಅಣ್ಣನಿಂದ ಅಪಹೃತಳಾಗಿದ್ದ ಪತ್ನಿಯನ್ನು ಸುಗ್ರೀವನು ಕೂಡಿದನು; ಪಂಚ ಪಾಂಡವರ ಪತ್ನಿ

ಯಾಗಿ ದ್ರೌಪದಿಯು ಬಾಳಿದಳು; ಕಾಮಾರಿಯಾದ ಪಶುಪತಿಯನ್ನು ಪಾರ್ವತಿಯು ತನ್ನ ತಪಶ್ಶಕ್ತಿಯಿಂದ ಅನುರಕ್ತನನ್ನಾಗಿ ಮಾಡಿಕೊಂಡಳು. ಆದರೆ ಅಹಲ್ಯೆಯು ಸಮಸ್ಯೆ ಮತ್ತೂ ಕಠಿಣವಾದುದು. ಧರ್ಮಾಧರ್ಮಗಳ ಅರಿವಿದ್ದರೂ ಕಾಮಪ್ರೇಮಗಳ ಹೋರಾಟದಲ್ಲಿ ಸೋತು ಪತನದ ಹಾದಿಯನ್ನು ತುಳಿದ ಅಹಲ್ಯೆ ಸಹಸ್ರ ವರ್ಷಗಳ ಉಗ್ರತಪದಿಂದ ಪೂತಳಾಗಿ, 'ಪುಟವಿಟ್ಟ ಚಿನ್ನದಂತೆ' ದೀಪ್ತಿಗೊಂಡು ಗೌತಮನ ಕರುಣೆಗೇ ಪಾತ್ರಳಾಗುತ್ತಾಳೆ. ಮಾತ್ರವಲ್ಲ, ಪತಿಯು ಹಿಂದೆ ಹೇಳಿದ್ದಂತೆಯೇ ಪರಿಶುದ್ಧ ಹೃದಯಳಾಗಿ ಆ ಮುನಿಯ ಪುನಃ ಪರಿಗ್ರಹಣಕ್ಕೆ ಅರ್ಹಳಾಗುವುದನ್ನು ಕಾಣುತ್ತೇವೆ. ಒಡೆದ ಬಾಳಿನ ಈ ನವಾವತಾರಕ್ಕೆ ನಾವು ಹರ್ಷಿಸಬೇಕಾಗುತ್ತದೆ. ಆದರೆ 'ಇರುಳುಕಂಡ ಬಾವಿಗೆ ಹಗಲೇ ಧುಮುಕಿದರು' ಎನ್ನುವಂತೆ, ಅಹಲ್ಯೆಯು ಅರಿವಿದ್ದೂ ಅಪಕೃತ್ಯಕ್ಕೆ ಪಕ್ಕಾದಳಲ್ಲಾ!—ಎಂಬ ದುಗುಡ ಬಾಧಿಸುತ್ತದೆ. ತಪಸ್ಸಿನಿಂದ ಅವಳು ಪುನೀತಳಾದಳು ಅಥವಾ ತನ್ನ ಅಪರಾಧಕ್ಕೆ ಅವಳು ಶಿಕ್ಷೆಯನ್ನನುಭವಿಸಿ ಋಣಮುಕ್ತಳಾದಳು—ಎಂಬ ಚಿತ್ರಕ್ಕಿಂತಲೂ ಆ ದುಗುಡದ ಚಿತ್ರ ಚೆನ್ನಾಗಿ ಅಂಟಿರುತ್ತದೆ. ಅವಳು ಪುನೀತಳಾದ ಕಾರಣ ಪತನದ ಚಿತ್ರ ಗ್ರಾಹ್ಯವಲ್ಲವೆನ್ನುವುದಾದರೆ ಲೋಕದ ಆದರ್ಶಕ್ಕೆ ಕಳಂಕವನ್ನೊಡ್ಡಿದಂತಾದೀತು; ಪುನೀತಳಾದರೂ ಪತಿತೆಯಾಗಿದ್ದುದೇ ಗ್ರಾಹ್ಯವೆಂದು ನಿಶ್ಚಯಿಸುವುದಾದರೆ ಅವಳ ಬಗ್ಗೆ ಇರುವ ಸಹಾನುಭೂತಿಗೆ ಅರ್ಥವಿಲ್ಲದಂತಾದೀತು! ಅಷ್ಟೇ ಅಲ್ಲ; ಅವಳ ಅನಂತಕಾಲದ ತಪಸ್ಸಿನ ಕೀರ್ತಿ ಅವಳನ್ನು ಉದ್ಧಾರ ಮಾಡಿದ ಪತಿತಪಾವನನಾದ ರಾಮನಿಗೇ ಸಲ್ಲಬೇಕಾಗುತ್ತದೆ. ಆಗ ಅಹಲ್ಯೆಯ ದೃಷ್ಟಿಯಿಂದ ಅವಳ ಚರಿತ್ರೆಗೆ ಲೋಕ ಸಾಮಾನ್ಯದ ಗೌರವ ಇಲ್ಲದಂತಾಗುತ್ತದೆ. ಇದ್ದರೂ ಔಪಚಾರಿಕವೇ ಸರಿ. ಜನಜಂಗುಳಿಯಿಂದ ದೂರವಾಗಿ, ವನಾಂತರದಲ್ಲಿ, ಸಿದ್ಧಮುನಿಯೆನಿಸಿದ ಗೌತಮನಿಗೆ ಯೋಗ್ಯಳಾದ ಸತಿಯೆನಿಸಿ, ಅಹಲ್ಯೆಯು ಇಂತಾದುದು ಸರಿಯೇ? ಸರಿಯೆಂದಾಗ ಲೋಕಸಾಮಾನ್ಯವನ್ನು ಇಂತಹ ಅಡ್ಡದಾರಿಯಿಂದ ಬಹಿಷ್ಕರಿಸುವ ಹಿಂದೂಧರ್ಮದ ಗತಿಯೇನು? ಇದು ಸರಿಯ? ಸರಿಯೆ—ಎಂದು ಪ್ರಶ್ನಿಸುವುದಕ್ಕೆ ಉತ್ತರವಾಗಿ, ಹುಲುಬಯಕೆಯು ಅದಕ್ಕಿಂತಲೂ ಬಲವತ್ತರವಾದುದು—ಎಂದು ಹೇಳಿ, 'ಅನಿವಾರ್ಯ' ಪರಿಸ್ಥಿತಿಯಿಂದ "ಬಲವಾನಿಂದ್ರಿಯ ಗ್ರಾಮೋ ವಿದ್ವಾಂಸಮಪಿಕರ್ಷತಿ" ಎಂದು ಸಮಾಧಾನಪಡುತ್ತಾ ಕೈಕೊಡವಿಕೊಳ್ಳಬೇಕಾಗಬಹುದು.

## ಇಂದ್ರನೇ? ಕಾಮನೇ? ಗೌತಮನೇ?

'ಅಹಲ್ಯೆ'ಯ ಕಥಾವಸ್ತುವಿನಲ್ಲಿ ಧರ್ಮದ ದೃಷ್ಟಿಯಿಂದ ಜೀವನದ ಮಹದಂಶದ ಹೋರಾಟ ಚಿತ್ರಿತವಾಗಿದೆ. ಈ ಹೋರಾಟದಲ್ಲಿ ಗೋಚರಿಸುವ ಮುಖ್ಯ ಪಾತ್ರಗಳೆಂದರೆ ಇಂದ್ರ, ಮನ್ಮಥ, ಗೌತಮ ಮತ್ತು ಅಹಲ್ಯೆ. ಗೌತಮ ಮತ್ತು ಅಹಲ್ಯೆಯರ ದಾಂಪತ್ಯದಲ್ಲಿ ಸಹಜೀವನದ ವ್ಯಾಖ್ಯಾನ ಮಾಡುವಂತೆ ಸಾಧನಿಯ ಪಾತ್ರ ಕಾಣಿಸಿಕೊಂಡಿದೆ. ರಂಭೆಯ ಪಾತ್ರ ದಿವಕ್ಕೂ ಧರೆಗೂ ಒಂದು ವಿಧವಾದ ಸಂಬಂಧ. ಉಳಿದ ಪಾತ್ರಗಳೆಂದರೆ ಶತಾನಂದ ಮತ್ತು ಒಡನಾಡಿ ಹಾಗೂ ದೃಶ್ಯಗಳಲ್ಲಿ ಮೇಳಗಾನ ಮಾಡುವ ಊರ್ಧ್ವಲೋಕದ ಸುಂದರಿಯರು. ಪ್ರಸ್ತುತ ಗೀತರೂಪಕದ ದೃಷ್ಟಿಯಿಂದ ಇಂದ್ರನ ಹಾಗೂ ಇತರ ಪಾತ್ರಗಳ ಪರಿಚಯ ಅಗತ್ಯ.

ಇಂದ್ರನ ಪಾತ್ರವು ರಂಗಮಂಟಪದ ಮೇಲೆ ಪ್ರಥಮಾಂಕದ ೭ನೇ ದೃಶ್ಯದ ಕೊನೆಯವರೆವಿಗೆ ಮಾತ್ರ ಕಾಣಿಸಿಕೊಂಡು ಮಾಯವಾಗುತ್ತದೆ. ಆದರೂ ಅಹಲ್ಯಾ ಶಾಪವಿಮೋಚನೆಯವರೆವಿಗೂ ಈ ಪಾತ್ರದ ಹರವು ಮೂಡುವಂತೆ ಕೃತಿಕಾರರು ವೈಶಿಷ್ಟ್ಯವನ್ನು ತೋರಿದ್ದಾರೆ. (ಪ್ರಾಯಶಃ

ವಾಲ್ಮೀಕಿಯ ಇಂದ್ರನ ಕೃತಜ್ಞತೆ ಇಲ್ಲಿ ಇಲ್ಲವೇನೋ!) ಇಂದ್ರನ ವೈಭವದ ವರ್ಣನೆಗೆ ೧ನೇ ದೃಶ್ಯದಲ್ಲಿನ ಸುರರ ಮತ್ತು ಸುರಸುಂದರಿಯರ ನಾಟ್ಯಗೀತವು ಮೇಳೈಸಿ ಬಂದಿದೆ—

"ನಿರ್ಜರರಾವೆಮಗೀತರ ಭೀತಿ,
ಸತತ ಬಿನದವೇ ನಮ್ಮಯರೀತಿ . . ."

"ಬಯಕೆಗಳೆಮ್ಮನು ಬಾಧಿಪುವೆಂತು
ಸುರತರುವಡಿಯೊಳು ನಾವಿರಲಿಂತು . . ."

"ಜಯ ಜಯ ವಾಸವ! ಜಯದೇವೇಂದ್ರ!
ಜಯ ವಿಭವ ಪ್ರಿಯ! ಜಯ ಅಮರೇಂದ್ರ!"

—ಎಂದು ಹಾಡುವ ಈ ವೃಂದಗಾನದಲ್ಲಿ ಸ್ವರ್ಗ-ಭೂಮಿಗಳ ಸಂಬಂಧ ಮೂಡಿ, 'ಧರೆಗಾಗಿ ನಾಕ, ಧರೆಯಿಂದ ನಾಕ' ಎಂಬ ಭಾವ ತೋರಿಬಂದಿದೆ. ಇಂದ್ರನಿಗೆ ಭೂದೇವಿಯ ಮೇಲೆ ಅಪಾರ ಗೌರವ. ಮಾಗಿಗೆ ವಸಂತನನ್ನೂ, ಬೇಸಿಗೆಗೆ ಮುಗಿಲನ್ನು ಕಳುಹಿ ಸಂತಸಗೊಳಿಸುವವನು ಆತ.

ಆದರೂ ಆತನಿಗೆ ಒಡೆತನದ ಹುಚ್ಚು ಹೆಚ್ಚು. ತನ್ನ ಪದವಿಗೇರಬಯಸುವವರೆಲ್ಲರೂ ಆತನ ಆಗ್ರಹಕ್ಕೆ ಪಾತ್ರರು. ವಿಶ್ವಾಮಿತ್ರನ ತಪೋಭಂಗಕ್ಕೆಂದು ಮೇನಕೆಯನ್ನು ಒಮ್ಮೆ ಕಳುಹಿಸಿದ್ದ. ಅಶ್ವಮೇಧ ಯಾಗಗಳಲ್ಲಂತೂ ಆತನು ಎಷ್ಟುಬಾರಿ ಅಶ್ವಾಪಹರಣ ಮಾಡಿರುವನೋ! ನಮ್ಮ ಪುರಾಣಗ್ರಂಥಗಳಲ್ಲಿ ಇದಕ್ಕೆ ಉದಾಹರಣೆಗಳು ಹೇರಳವಾಗಿವೆ. ಅವನ ಇಚ್ಛೆಯನ್ನು ಅರಿತು ವರ್ತಿಸಲು ಸಾಧನವಾಗಿ ರಂಭೆ, ಊರ್ವಶಿ, ಮೇನಕೆ, ಮನ್ಮಥ—ಮೊದಲಾದ ಅದ್ಭುತ ಪರಿವಾರವಿದೆ. ಒಡೆಯನ ರಕ್ಷಣೆಯೇ ಅವರ ಸತತ ಕರ್ತವ್ಯ. ಈಗ ಮಿಥಿಲೆಯ ಉಪವನದಲ್ಲೂ ಅಂತೆಯೇ ಗೌತಮನು ತಪೋನಿರತನಾಗಿದ್ದಾನೆ. ಅವನ ಬಗ್ಗೆ ಇಂದ್ರನ ಗಮನ ಎಂತಿರುವುದೋ, ಇನ್ನೂ ಹೇಳುವುದು ಕಷ್ಟ. ಆದರೂ "ಯೋಗಿ ಜನದ ಹುರುಳನರಿವುದಲಾ ಒಡೆಯರಾಣೆ"—ಎಂದು ರಂಭೆಯು ತಾನೇ ಬಂದು, ಈ ಮುನಿಯಿಂದ ಭಂಗಪಟ್ಟಿದ್ದಾಳೆ. ಆ ಸಮಯಕ್ಕೆ ಸರಿಯಾಗಿ ಮೇಘವಾಹಕನಾದ ಪುಷ್ಕರನೊಡನೆ ಇಂದ್ರನು ಅದೇ ವನಕ್ಕೆ ಬಂದಿದ್ದಾನೆ. ಅಲ್ಲಿನ ಶಾಂತವಾದ ಆಶ್ರಮವನ್ನು ಕಂಡು,

"ಆರಾಶ್ರಮ? ತವಸಿಗರಾರೇ ಬಗೆಯುವರಿವರು?"

—ಎಂದು ಪ್ರಶ್ನಿಸುತ್ತಾನೆ. ಪುಷ್ಕರನು ಅದಕ್ಕೆ ಉತ್ತರ ನೀಡುತ್ತಿರುವಷ್ಟರಲ್ಲೇ—"ಪೋಲಿವರುಂಟೆ ಈ ಬಾನ ಹೆಣ್ಣ" ಎನ್ನುತ್ತಾ ಗೌತಮನಿಂದ ಭಂಗಪಟ್ಟ ರಂಭೆಯ ಆರ್ತನಾದ! ಶಾಂತತೆಗೆ ಸೋತಿದ್ದ ಇಂದ್ರನ ಮನಸ್ಸು ಉದ್ರೇಕಗೊಂಡು "ತಪೋನೃತ್ತರಾರು" ಎನ್ನುವಷ್ಟು ಕೆರಳುತ್ತದೆ. ರಂಭೆಗೆ ಉಂಟಾಗಿರುವ ಭಂಗವು ಇಂದ್ರನ ಗೌರವಕ್ಕೇ ಒಂದು ಪ್ರಶ್ನೆ!

ಇಂದ್ರನಿಗೆ ಗೌತಮನ ಬಗ್ಗೆ ಅದುವರೆಗೆ ದ್ವೇಷವಿಲ್ಲ. ರಂಭೆಯನ್ನು "ಶಾಂತರಲಾ ಈ ಮಂದಿ! ಏನಗೈದೆ ನೀನು?" ಎಂದೇ ಪ್ರಶ್ನಿಸುತ್ತಾನೆ. ಆದರೆ ರಂಭೆಯ ಉತ್ತರ ಅವನನ್ನು ಪರಾಕಾಷ್ಟಕ್ಕೆ ಮುಟ್ಟಿಸುತ್ತದೆ ಆ ಉತ್ತರ:—

"ನಿಮ್ಮೊಡೆತನಕೆಡರ ತರುವ ಬಲದ ಸಿದ್ಧಿಗಾಗಿ
ಅತ್ಯುಗ್ರ ತಪವಕೊಂಡು ಇರುತಿಹನೀ ಜೋಗಿ!"

ಸರಿ, ಮನ್ಮಥನನ್ನು ಬರಮಾಡಲು ಆದೇಶವನ್ನು ಕಳುಹಿಸಿ, ತಾನು ಆಶ್ರಮದೆಡೆಗೆ ನಡೆಯುತ್ತಾನೆ—ಸುಂದರಿಯಾದ ಅಹಲ್ಯೆಗೆ ತನ್ನನ್ನು ಅರ್ಪಿಸಿಕೊಳ್ಳುವುದಕ್ಕಲ್ಲ—

"ಗೌತಮನ ವಿರಸತೆಯು ಹವಣ ನಾ ಕಂಡು
ಉಚಿತವೆಸಗುವೆನೆಂದು ಬಲವ ನೆರೆಗೊಂಡು"

—ಎಂಬ ಹಟದಿಂದ! ಗೌತಮನು ಗೃಹಸ್ಥನಲ್ಲವೇ? ಸುರಸುಂದರಿಯಾದ ರಂಭೆಯನ್ನೂ ತಿರಸ್ಕರಿಸಬೇಕಾದರೆ ಅವನ ತಪಸ್ಸಿನ ಸಿದ್ಧಿಯೆಷ್ಟಿರಬೇಕು! ಇವನು 'ಒತ್ತಾಯದ' ತಪಸ್ವಿಯೋ ಅಥವಾ ಸಿದ್ಧನೋ ನೋಡಿ ತೀರುವೆನೆಂಬುದೇ ಇಂದ್ರನ ಹಟ. ಆದರೆ 'ನಾಯಕಿಯೊಡನೆ ನಾಯಕನ ಸಂಗಮವನ್ನು ಸಾಧಿಸಲು ಹೊರಟು ತಾನೇ ಪ್ರಣಯಕ್ಕೆ ಪಕ್ಕಾದ ದೂತಿ' ಯಂತೆ ಆಗಬಹುದಾದುದನ್ನು ಇಂದ್ರ ನಿರೀಕ್ಷಿಸಿರಲಿಲ್ಲವೇನೋ!

ಇಲ್ಲಿಂದ ಮುಂದೆ ಪೂರ್ವಾಂಕದ ಮೂರನೆಯ ದೃಶ್ಯದಲ್ಲಿ ಕಾಮನು ಕಾಣಿಸಿಕೊಳ್ಳುತ್ತಾನೆ. ಈ ಕಬ್ಬುವಿಲ್ಲನಿಗೆ ಸಮನಾದ ಶೂರರಿಲ್ಲ. ಅದಕ್ಕೆ ತಕ್ಕಂತೆ ಒಮ್ಮೊಮ್ಮೆ 'ಜಂಭದ ಕೋಳಿ' ಯಾಗುವುದೂ ಉಂಟು. "ಹೊಗಳಿಕೆಗೆ ಬೋಳಾದೆಯೋ ಹೇನಿಗೆ ಬೋಳಾದೆಯೋ" ಎಂಬ ಗಾದೆ ಇವನಿಗೆ ಅನ್ವಯಿಸುತ್ತದೆ. ಶುನಕನನ್ನು ಕನಕದ ಸಿಂಹಾಸನಕ್ಕೇರಿಸಿದರೂ ಹೀನ ಚಪಲವೆಲ್ಲಿ ಹೋದೀತು! ಒಂದೆ ಶಿವನಿಂದ ಉಂಟಾದ ಪರಿಭವವೂ ಅವನಿಗೆ ತೃಣಸಮಾನ.

"ಹೆ.ಮ್ಮೆರೆದುದೊ ಕಂದರ್ಪನ ದರ್ಪ
ಶಿವನೂ ಕಂಡನೊ ಎನ್ನಿಸು ಕೂರ್ಪ!"

—ಎಂಬ ಗರ್ವ ಅವನಿಗೆ. ಕೆಳಕ್ಕೆ ಬಿದ್ದರೂ ಮೀಸೆ ಮಣ್ಣಾಗಲಿಲ್ಲ! ಹಲವು ಕಾಲದಿಂದ ತನ್ನ ಬಿಲ್ಬಲ್ಮೆ ಪ್ರದರ್ಶಿಸಲು ಅವಕಾಶ ಸರಿಯಾಗಿ ದೊರೆತಿಲ್ಲ. ಸ್ವರ್ಗದವರ ನಡತೆ ಅವನ ಮೂಗಿಗೆ ನೇರವಾಗಿಲ್ಲ. ಸುಧೆ ಕುಡಿದರೂ ಮತ್ತರಾಗದೆ, ಎವೆಯಿಕ್ಕದೆ, ತುಷ್ಟೇಂದ್ರಿಯರಾದ ಬಿಡುಗಣ್ಣರ ಮುಂದೆ ಅವನ ಅಂಬುಗಳು ವ್ಯರ್ಥವೆನಿಸಿವೆ. ಇಂತಹ ನೀರಸವಾದ ಸ್ವರ್ಗಪ್ರಾಪ್ತಿಗಾಗಿ ಭೂಲೋಕದ ಮಾನವರು ಎಷ್ಟು ಪ್ರಯಾಸ ವಹಿಸುತ್ತಾರಲ್ಲಾ-ಎಂಬ ನಗು ಅವನಿಗೆ! ಆದರೂ ಇಂತಹ ವನವಾಸಿಗಳಾದ ಮಾನವರಿಗೂ ಇಂದ್ರನು ಭಯಪಟ್ಟು ತನ್ನ ಸಹಾಯವನ್ನಪೇಕ್ಷಿಸುವುದು ಮತ್ತೂ ಆಶ್ಚರ್ಯ. ಏನಾದರಿರಲಿ, ಭಯ ಒದಗಿದಾಗಲಾದರೂ ಇಂದ್ರನು ತನಗೆ ಮಾನ್ಯತೆ ನೀಡುವುದೊಂದು ಆನಂದ! ಗೌತಮನನ್ನು ಗೆಲ್ಲುವ ಇಂದ್ರನ ಅಭಿಪ್ರಾಯ ಕಾಮನಿಗೆ ಎಷ್ಟೂ ಅಸಾಧ್ಯವಲ್ಲ—

"ಫೂ! ಎನಗೀ ಬಡ ಮುನಿ ಏತರವ?
ಕ್ಷಣದೊಳೇ ಕಣಾ ಕಾಮಜಿತನವ!"

ಆದರೂ ಮನ್ಮಥ ಸ್ವಲ್ಪ ಅಂತರ್ಮುಖಿಯಾಗುತ್ತಾನೆ—

"ಬರಿ ಹಗೆ ಸಲ್ಲದು ನನ್ನೊಳು ಇವಗೆ
ಸುಮ್ಮನೆ ಬಲಿಗೊಡೆನಿಂದ್ರನ ಕೆಳೆಗೆ"

ಗೌತಮನ ಅಂತಸ್ಸತ್ವವನ್ನರಿಯದೆ ಪ್ರವೇಶಿಸುವುದು ಸರಿಯಲ್ಲ. ಅವನು ತೃಪಿತೇಂದ್ರಿಯನೇ ಅಥವಾ ತೃಷ್ಣೇಂದ್ರಿಯನೇ-ಎಂದು ತಿಳಿಯುವುದು ಮುಖ್ಯ. ಇವನು ಜಿತೇಂದ್ರಿಯನೇ ಅಥವಾ ಹೃದಯದಲ್ಲಿನ ಸುಪ್ತವಾದ ಆಸೆಗಳನ್ನು ಈ ವನಾಂತರದಲ್ಲಿ ಒತ್ತಿ ಹಿಡಿದು, ಮನಸ್ಸನ್ನು

ಬಲಾತ್ಕಾರದಿಂದ ಬಂಧಿಸಿ, ಇಂದ್ರನಿಗೆ ಕೇಡಾಗುವ ಸಿದ್ಧಿಗಾಗಿ ತಪಸ್ಸು ಮಾಡುತ್ತಿರುವನೇ? ಅದೇ ನಿಜವಾದರೆ ದುರುಳನೇ ಸರಿ! ಆದ್ದರಿಂದ ಅವನ ಅಂತಸ್ಸತ್ವವನ್ನಳೆಯುವುದು ಪ್ರಥಮ ಕರ್ತವ್ಯ—

ಇಂದೀ ಜನ ಜೀವನವನು ಹೊಕ್ಕು
ಕಟ್ಟು ಕಟ್ಟಳೆಗಳೆಲ್ಲವನೊಕ್ಕು
ಎದೆಗವಿಯಾಸೆಗಳೆಲ್ಲವ ಹಿರಿದು
ತೃಷಿತೇಂದ್ರಿಯಗಳ ಮುಂದವನೆಸೆದು
ಅಂತಃ ಸತ್ವವ ನಾನಿಂದಳೆವೆ
ಈ ಬಾಳೊಳು ಬಿದಿಯಿಚ್ಛೆಯನರಿವೆ ॥  (ಪುಟ ೧೧)

ಅಷ್ಟೇ ಹೊರತು, ಬಲಾತ್ಕಾರವಾಗಿ ಜಿತೇಂದ್ರಿಯನನ್ನು ಅವನು ಕೆಣಕಬಯಸಲಾರ.

ಈ ಸಮಯಕ್ಕೆ ಅಹಲ್ಯೆಯು ತನ್ನ ಕಂಕುಳಸಿರಿಯಾದ ಶತಾನಂದನೊಡನೆ ಸಂಭಾಷಿಸುತ್ತಿರುವುದನ್ನು ಇಂದ್ರನು ಹೊಂಚಿ ಕೇಳುತ್ತಿರುತ್ತಾನೆ. ಮನ್ಮಥನು ತನ್ನ ಬರವನ್ನು ಸೂಚಿಸಲು ಧನುಷ್ಟಂಕಾರ ಮಾಡುತ್ತಾನೆ.

ಮನ್ಮಥನ ಧನುಷ್ಟಂಕಾರದ ಪ್ರಭಾವ ಸಾಮಾನ್ಯವಲ್ಲ. ಇಂದ್ರನೇ ಹೇಳುವಂತೆ "ಸ್ವಸ್ಥರ ಮತಿಗಿದು ಅಶನಿ-ಎಂಬುದು ದಿಟ!" ಅದಕ್ಕೆ ಭೂಗುಣವೂ ಅಷ್ಟೇ ಎರವಲು. ಆದ್ದರಿಂದಲೇ ಭೂಮಿ ಸೋಂಕಿದ ಇಂದ್ರನ ಚಿತ್ತದ ಸ್ಥಿತಿಯೇ ಬದಲಾದಂತಿದೆ. ಇನ್ನು ಚಂಚಲ ಮನಸ್ಕರಾದ ಮಾನವರು ಏನಾಗಕೂಡದು! ಅಹಲ್ಯೆಯನ್ನು ದೂರದಿಂದ ಕಂಡ ಇಂದ್ರನು—

"ಆಹ!

ಅವನಿದ್ದ ತಾಣದೊಳೆ ಅವನೆ ಹೆಣ್ಣಾದಂತೆ
ಕಣ್ಣಿಗಚ್ಚರಿಯಾಗಿ ತೋರುವಿವಳಾರು"  (ಪುಟ ೧೩)

—ಎನ್ನುತ್ತಾನೆ. ಆದರೂ ಮನಸ್ಸಿನ ಶೀಘ್ರಗತಿಯ ಅಶ್ವಕ್ಕೆ ಕಡಿವಾಣ ಹಾಕಿ ಹಿಡಿಯ ಬಯಸುವ ಇಂದ್ರನ ಪ್ರಯತ್ನ ಇಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ.

"ಪರಸತಿಕುತೂಹಲವು ಛೀ ನನಗೆ ತರವಲ್ಲ
ನಾಪೋಪೆನತ್ತೆಡೆಗೆ ಒಲವನರಸಿ"  (ಪುಟ ೧೩)

ಭೂಮಿಯ ಸಹಜಗುಣವೋ ಅಥವಾ ಕಾಮನ ಬಿಲ್ಲಿನ ಬಲ್ಮೆಯೋ, ಅಥವಾ ಎರಡೂ ಸೇರಿತೋ! ಅಂತೂ ಇಂದ್ರನ ಪ್ರಯತ್ನ ವಿಫಲವೇ ಸರಿ. ಅಹಲ್ಯೆ ಮತ್ತು ಮಾಧವಿಯರ ಸಂಭಾಷಣೆಯಲ್ಲಿ ಅಹಲ್ಯೆಯ ಬಾಯಿಂದಲೇ ತನ್ನ ಪ್ರಶಂಸೆಯನ್ನು ಕೇಳುತ್ತಾನೆ. ಅದುವರೆವಿಗೆ ಮರೆಯಿಂದ ಈಂಟಿದ ಸೌಂದರ್ಯಸುಧೆಯಿಂದ ಮತ್ತನಾದ ಇಂದ್ರ ಮುಂದೆ ಆಸಕ್ತಿವಹಿಸುತ್ತಾನೆ.

ಅಂತೂ ಅಹಲ್ಯೆಯ ಪಾಲಿನ ದುರ್ದಿನವು ಇಂದ್ರನ ಪಾಲಿನ ಸುದಿನವಾಗಿ ಪರಿಣಮಿಸುವ ಸಮಯ ಸನ್ನಿಹಿತವಾಗುತ್ತದೆ. ಪ್ರಥಮ ಯೌವನದ ಆಸೆ ಆಕಾಂಕ್ಷೆಗಳಿಂದ ಹೃದಯದ ಆವೇಗವನ್ನು ತಡೆಯಲಾರದ ಗೃಹಿಣಿ ಆ ಸುಂದರಿ-ಅಹಲ್ಯೆ. ಹೆಣ್ಣು ಹೃದಯ, ತಾರುಣ್ಯ, ನವಾನುಭವದ ದಾಂಪತ್ಯ-ಈ ಮುಪ್ಪುರಿಗೊಂಡ ಹೃದಯ ಆಕೆಯದು. ಒಂದು ಹೆಜ್ಜೆಗೆ ಆಸೆಯ ಉನ್ನತ

ಮೆಟ್ಟಿಲನ್ನೇರಿದರೆ, ಮರು ಕ್ಷಣದಲ್ಲೇ ಭಯದ ತುದಿ ಮೆಟ್ಟಿಲಿಗೆ ಹೆಜ್ಜೆಯಿಳಿಯುತ್ತದೆ. ಏನೋ ಸಾಧಿಸಹೊರಟಿರುವ ಪತಿಯ ಬಗ್ಗೆ ಸರ್ವಶಕ್ತನಾದ ಇಂದ್ರನು ಕೋಪಗೊಂಡರೆ ಗತಿಯೇನು? ಅದಕ್ಕಾಗಿ ಅವನನ್ನು ಪೂಜಿಸಿ ಮೆಚ್ಚಿಸಿಕೊಂಡು ಪತಿಗೆ ಅನಿಷ್ಟ ಸಂಭವಿಸದಂತೆ ಕಾಪಾಡಿಕೊಳ್ಳ ಬೇಕಾದುದು ತನ್ನ ಧರ್ಮ. ಮಾಧವಿಯೊಡನೆ ಈ ಬಗ್ಗೆ ತಿಳಿಸುತ್ತಾಳೆ. ಆದರೆ ಇಂದ್ರನು ಈ ಅಭಿಪ್ರಾಯವನ್ನು ತನಗೆ ಅನುಕೂಲವಾಗಿಯೇ ಪರಿಗಣಿಸಿದನೇನೋ! ಅಹಲ್ಯೆಯ ಮನೋ ದೌರ್ಬಲ್ಯವು ಅವನ ಕಾಮದ ಪ್ರಾಬಲ್ಯಕ್ಕೆ ನೆರವಾಗುತ್ತದೆ. ಕಾಕತಾಳನ್ಯಾಯದಿಂದ ದೊರ ಕುವ ಸಾಫಲ್ಯವನ್ನು ಇಂದ್ರನು ಏಕೆ ಕೈ ಬಿಟ್ಟಾನು!

ಒಂದು ಅಭಿಪ್ರಾಯದ ಪ್ರಕಾರ ಇಂದ್ರ ಮತ್ತು ಅಹಲ್ಯೆಯರ ಮಧ್ಯೆ ಕಾಣಿಸಿಕೊಳ್ಳುವ ಮನ್ಮಥನು ನಿರ್ಲಿಪ್ತನಾಗಿ ನಾಯಕ ನಾಯಕಿ (ಅಥವಾ ಕಾಮಿಗಳ)ಯರ ಮಧ್ಯೆ ದೌತ್ಯವನ್ನು ವಹಿಸಿದಂತೆ ಕಾಣಿಸಬಹುದು. ಆದರೆ ಇದು ಪೂರ್ಣ ಸತ್ಯವೆಂದು ಹೇಳಲಾಗದು. ಕೇವಲ ಗೌತಮನ ಹುರುಳನ್ನರಿತು, ಅವನಿಂದ ಇಂದ್ರನಿಗೆ ಉಂಟಾಗಿರುವ ಭಯವನ್ನು ಪರಿಹರಿಸಲು ನೇರವಾಗಿ ಬಂದವನು ಕಾಮ! ಹಿಂದೆ ಸಕಲ ದೇವತೆಗಳ ನೆರವೂ ತನಗಿದ್ದಾಗ ಶಿವನ ತಪೋ ಭಂಗಕ್ಕೆ ಹೊರಟು ಪಡೆದ ಪರಿಭವ ಅವನಿಗೆ ಸ್ಮರಣೆಯಲ್ಲಿದೆ. ಗೌತಮನನ್ನು ಭಂಗಮಾಡು ವುದು ಧರ್ಮಸಮ್ಮತವಾಗಿದ್ದು, ತನ್ನ ಉಪಕಾರವನ್ನು ಇಂದ್ರ ಸ್ಮರಿಸುವುದಾದರೆ ಅಷ್ಟೇ ತೃಪ್ತಿ ಸಾಕು. ಆಟದ ಗೆಲುವಿನ ಪಾರಿತೋಷಕ ಕ್ರೀಡಾಗಾರದ ಅಧ್ಯಕ್ಷನೇ ಸ್ವೀಕರಿಸಲಿ; ತಾನು ಆ ಗೆಲುವಿಗಾಗಿ ನ್ಯಾಯದಿಂದ ಶ್ರಮಿಸುವ ಕ್ರೀಡಾಪಟು ಮಾತ್ರ.

"ಏನ ನೋಡುತ ನಿಂತೆ ವಾಸವ? ಇಂತು ಬೆರಗಿನ ನೋಟದಿ?"

—ಎಂದು ಪ್ರಶ್ನಿಸಿದ ಕಾಮನಿಗೆ ಕಾಮೋನ್ಮತ್ತನಾದ ಇಂದ್ರನ ಉತ್ತರ—"ನನ್ನನೇ ನೆನೆದಿದ್ದ ಮುಗುದೆಗೆ ಸಿಂತೆನ್ನೈ ಮನನೀಗುತ!"-ಎಂದು. ಇಂದ್ರನು ಏನಾಗಿದ್ದಾನೆಂದು ಅರಿಯದ ಮನ್ಮಥ ಮುಗ್ಧನೇ ಸರಿ. ಅವನ ದೃಷ್ಟಿ ಇಂದ್ರ ಮತ್ತು ಅಹಲ್ಯೆಯರನ್ನು ಕೂಡಿಸಿ, ಪತನದ ಹಾದಿಗೆಳೆಯುವ ಕಡೆಗಿಲ್ಲ—"ಬಿಡು ಬಿಡೀತನ ಭಯವ ವಾಸವ!" ಎಂದು ಸಂತೈಸುವುದೇ ಅವನ ಗುರಿ. ಆದರೆ ಇಂದ್ರನು "ಮನನೀಗಿ"ಕೊಂಡಿರುವುದು ಅವನಿಗೆ ಗೊತ್ತೇ ಇರುವಂತಿಲ್ಲ. ಅದನ್ನೇ ಇಂದ್ರನಿಗೆ ಹೇಳುತ್ತಾನೆ-"ಜಿತೇಂದ್ರಿಯನೆಂದು ತಾನೇ ವಂಚಿಸಿಕೊಳ್ಳುತ್ತಿರುವ ಈ ಗೌತಮನು ರಂಭೆಯನ್ನು ತಿರಸ್ಕರಿಸಲು ಯಾವ ನೀತಿ ಹಿಡಿದನೋ ಅದೇ ನೀತಿಯಿಂದ ಇವನ ಸೋಲನ್ನು ಕೆಲವೇ ಕ್ಷಣಗಳಲ್ಲಿ ನೀನು ಕಾಣುವಂತೆ ಮಾಡುತ್ತೇನೆ" "ಇವನ ಸತಿಯಿಂದಿವನ ಗೆಲ್ಲುವೆ ನೋಡು ನನ್ನೀ ಮಾಟವ!"-ಎನ್ನುತ್ತಾನೆ. ಮನ್ಮಥನು ಹೇಳಿದ ಅಭಿಪ್ರಾಯವೇನೋ! ಆದರೆ ಇಂದ್ರನು ಅರ್ಥಮಾಡಿಕೊಂಡ ರೀತಿಯೇ ಬೇರೆ!

ಕಾಮನ ಉದ್ದೇಶ್ಯವೇನೆಂದು ತಿಳಿಯಲು ಗೀತರೂಪಕದಲ್ಲಿನ ಈ ನುಡಿಗಳು ಪರ್ಯಾಪ್ತ ವೆನಿಸುತ್ತವೆ-

"ತಪೋಲುಬ್ಧಗೆ ನೇಮಬದ್ಧಗೆ ಸರಸ ಕಾಮವಿರುದ್ಧಗೆ,
ತೋರಿ ನಾಸಿಂದೊಲುಮೆ ಹುರುಳನು ಸೆಳೆವ ರಾಗದ ಹಾದಿಗೆ" (ಪುಟ-೨೩)

"ಹೆರರಂಗನೆಯೇಂ ಪರರಂಗನೆಯೇಂ
ಮೋಹದಿ ಕೆಡೆವೊಡೆ ಈ ನೆವ ತಡೆಯೇಂ?" (ಪುಟ-೨೩)

ಅವಳು ರಂಭೆಯಾಗಲೀ ಅಥವಾ ಅಹಲ್ಯೆಯಾಗಲೀ ತನಗೆ ಬೇಕಿಲ್ಲ. ಗೌತಮನ ಸುಪ್ತ ಬಯಕೆ ಹೊರಬೀಳಬೇಕಾದುದೇ ಮುಖ್ಯ.

"ಮುನಿಯೊಳು ಹುದುಗಿಹುದೈ ಸತಿಯಾಸಕ್ತಿ
ಮಾಗಿಯೊಳಿರುವೊಲು ಮಧುರಾಸಕ್ತಿ."

"ತಮ್ಮನು ತಾವೇ ವಂಚಿಸುತಿಹರಂ
ವಂಚಿಸಲಲ್ಲವೆ ಇಹುದೀ ಚದುರಂ?
ನೀತಿಯನೆವದೊಳು ಒಲವಂ ಗೆದ್ದಂ
ನೀತಿಯನೆವದೊಳೆ ಒಲವಿಗೆ ಬಿದ್ದಂ" (ಪುಟ-೨೪)

ಇದೊಂದು ಹುಲುಬಯಕೆ! ಅದನ್ನು ಆದರಿಸಿದ ಮೇಲೆ ಛದ್ಮವೇಷ ಸಲ್ಲದು—ಇದು ಕಾಮನ ಸಿದ್ಧಾಂತ. ಈ ದೃಷ್ಟಿಯಿಂದ ಕಾಮನು ಸ್ವಲ್ಪಮಟ್ಟಿಗೆ ಪ್ರಸ್ತುತದ ಅಪಾದನೆಗೆ ಹೊಣೆಯಾಗುತ್ತಾನೆಂಬುದು ನಿಜವಿರಬಹುದು. ಆದರೆ ಸಂಕಲ್ಪದಿಂದ ಅವನು ಛದ್ಮಕಾಮಿಗಳ ಗುಟ್ಟನ್ನು ಬಯಲಿಗೆಳೆಯಬಲ್ಲನೇ ಹೊರತು ಇಂದ್ರನ ಅಧರ್ಮ್ಯಕರವಾದ ಭೋಗ ವಿಲಾಸಾದಿಗಳನ್ನು ಸಾಧಿಸಿ ಕೊಡುವ ಪುಂಡು ಭಂಟನಲ್ಲ. ಆದ್ದರಿಂದ ಅಹಲ್ಯೆಯ ಪತನಕ್ಕೆ ಅವನೇ ಹೊಣೆಯೆಂದು ಹೇಳುವುದಾದರೆ ಅವನು ಇಂದ್ರನ ಪುಂಡುಭಂಟನೆಂದೇ ಹೇಳಿದಹಾಗಾಗುತ್ತದೆ. ಆದರೆ ಹಿಂದೆ ಶಿವನಲ್ಲಿಗೆ ಅಂತಹ ಕೃತ್ಯಕ್ಕಾಗಿ ಹೋಗಿರಲಿಲ್ಲವೇ—ಎನ್ನಬಹುದೇನೋ. ಅದಕ್ಕೆ ಉತ್ತರವಿಷ್ಟು. ಅದು ಲೋಕ ಕಲ್ಯಾಣ. ಅವನು ಆಡಿದ ಆಟ ಪುಂಡಾಟವಲ್ಲ. ಲೋಕಹಿತಕ್ಕಾಗಿ ಆತ್ಮಾರ್ಪಣ ಹಾಗೂ ಇಲ್ಲಿನ ಪ್ರಶ್ನೆಯಲ್ಲಿ ಗೌತಮನೆಲ್ಲಿ; ಶಿವನೆಲ್ಲಿ! "ಆದರಾಕತೆ ಬೇರೆ, ಇಂದದಲ್ತು" ಎಂದು ಅವನು ಇಂದ್ರನಿಗೆ ಹೇಳುವ ಅರ್ಥ ಇದೇ ಇರಬಹುದು? ಶಿವನು ಅಂದು ನಿಷ್ಕಳಂಕ-ನಿರಂಜನ-ಸಿದ್ಧಬ್ರಹ್ಮಚಾರಿ. ಗೌತಮನು ತಪೋಲುಬ್ಧನಾಗಿ ಒತ್ತಾಯದ ಬ್ರಹ್ಮಚರ್ಯದಿಂದಿರುವ ಗೃಹಸ್ಥ. ಇದರಿಂದ ಅವನ ಉದ್ದೇಶ್ಯ ಸ್ಪಷ್ಟವಾಗಿದೆ. ಕಾಮನು ಬಾಣವನ್ನೆಚ್ಚ ಮೇಲೆ "ಬಂದ ಕಜ್ಜವಾಯ್ತು ಶಕ್ರ ಬಾಸಿಗೇರ್ವಬಾ" ಎನ್ನುತ್ತಾನೆ. ಆದರೆ ಲಜ್ಜೆಯನ್ನು ತೊರೆದ ಇಂದ್ರ—

"ಏನಾಯ್ತು, ಏನಗೈದೆ, ಗುರಿಯು ಮಾತೆ ಕುರುಡಗೆ?
ತಾಕಿತಿಲ್ಲಿ, ನೆಟ್ಟಿತಿಲ್ಲಿ ಸೋತೆನಿಂದು ಚೆಲುವೆಗೆ!"

—ಎನ್ನುತ್ತಾನೆ. ಸುರಸುಂದರಿಯರ ಸೇವೆಗಳನ್ನು ಕೈಕೊಳ್ಳುವ ಸುರೇಂದ್ರನ ನಾಚಿಕೆಗೆಟ್ಟ ಈ ಆಸುರೀ ಪ್ರವೃತ್ತಿಯನ್ನು ಮನ್ಮಥ ನಿರೀಕ್ಷಿಸಿರಲಿಲ್ಲ. ಬೇಡ ಬೇಡವೆಂಬ ಕಾಮನ ಉಪದೇಶಕ್ಕೆ ಇಂದ್ರನ ಉತ್ತರವೇನು?

"ನನ್ನ ನಾಚಿಪಂತೆ ನುಡಿವೆ"
"ಗುರುಗಳೊರೆವಂತೊರೆವೆ ಮನ್ಮಥ ಸಾಕು ನಿನ್ನುಪದೇಶವು"
"ಧರ್ಮ ಕರ್ಮದ ಮಾತೆಗೆ ತೆಗೆ ಇವನು ಅರಿತವಗೇಕಿದು?"
"ಪೂರ್ಣಗೊಳಿಸೀ ಬಯಕೆಯ!"

ಈ ಸಂದರ್ಭದಲ್ಲಿ ಮನ್ಮಥನು ಏನು ಮಾಡಬೇಕಾಗಿತ್ತು? ಇನ್ನು ಯಾವರೀತಿಯಿಂದ ಇಂದ್ರನನ್ನು ಹಿಂತಿರುಗಿಸಬಲ್ಲನು? ಅವನ ತೀರ್ಮಾನವಿಷ್ಟು:—

"ತಾಪಸಗೆ ಸತಿಮೋಹ-ಸತಿಗೆ ವಿಭವದ ಮೋಹ
ಸಕಲ ವಿಭವೇಶ್ವರನೊ ರೂಪಕಾಮ!"

ಕಾಮಕ್ಕೆ ಕಣ್ಣಿಲ್ಲವೆಂದು ಸ್ಪಷ್ಟವಾಯಿತು. ಪುಷ್ಪಗಳ ಸಮೀಪದಲ್ಲಿ ಬೆಂಕಿಯಿದ್ದರೆ ಹೊತ್ತಿಕೊಳ್ಳುವುದು ವಿಧಿ ನಿಯಮವಷ್ಟೆ! ಅದರಿಂದ ಉಂಟಾಗುವ ಫಲಕ್ಕೆ ಕಾಮನು ಹೊಣೆಯಲ್ಲ. ಅವರವರು ತಮ್ಮ ತಮ್ಮ ಪ್ರಕೃತಿಯಂತೆ ನಡೆದುಕೊಳ್ಳಲಿ. ಆದರೂ “ಪ್ರೇರಣೆಯನರಿತು ನಡೆ ಜೆಚ್ಚರದಿ ಬಂಧು!” ಎಂದು ಇಂದ್ರನಿಗೆ ಎಚ್ಚರಿಕೆಯನ್ನಿತ್ತು ಕಾಮನು ಹೊರಟುಹೋಗುತ್ತಾನೆ.

ಈ ವೃತ್ತಾಂತದಲ್ಲಿ ಕಾಮನ ಪ್ರಶ್ನೆ ಮಾನವೀಯತೆಗೆ ಒಂದು ಸವಾಲು. ಅಹಲ್ಯೆಯ ಪತನಕ್ಕೆ ಕಾಮನೇ ಕಾರಣನೇ? ಈ ಪ್ರಶ್ನೆಗೆ ಉತ್ತರವಾಗಿ ಕಾಮನಂತೂ ಸ್ವಯಂ ಪ್ರೇರಿತನಾಗಿ ಕಾರ್ಯರಂಗಕ್ಕೆ ಬಂದವನಲ್ಲವೆಂದು ನೆನಪಿರಬೇಕು. ಅವನೇ ಕಾರಣನೆಂಬ ಅನ್ಯಾಯದ ಹೊರೆಯನ್ನು ತಟ್ಟನೆ ಅವನ ತಲೆಗೆ ಏರಿಸುವ ಪ್ರಮಾದ ಇದರಿಂದ ತಪ್ಪಬಹುದು. ಅವನು ಇಂದ್ರನ ಭಯವನ್ನು ಹೋಗಲಾಡಿಸಲು ಅವನ ಕರೆಯನ್ನು ತನ್ನ ಗೌರವದಂತೆ ಭಾವಿಸಿ ನೆರವಿಗೆ ಬಂದವನು ಮಾತ್ರ. ಸಮಯಾಸಮಯಗಳ ಪ್ರಶ್ನೆ ಎದುರಾಗಬಹುದು. ಆದರೆ ಕರ್ತವ್ಯನಿಷ್ಠೆ ಅವನ ಧ್ಯೇಯವೆಂದು ತಿಳಿಯಲು ಅವಕಾಶವಿದೆ. ಏನಾದರಿರಲಿ, ಅಂತೂ ಕಾಮನಿಂದ ಕಥಾಸೂತ್ರವು ಕಳೆಗೇರಿತೆಂಬುದನ್ನು ಮಾತ್ರ ಒಪ್ಪಲೇಬೇಕು.

ಉಳಿದ ಪ್ರಶ್ನೆ ಇಂದ್ರನದು. ಅವನು ಸ್ವರ್ಗಾಧಿಪತಿ. ಸ್ವರ್ಗದವರೆಲ್ಲಾ ನಿರ್ಜರರು, ಸುಮನಸರು, ಅಮರ್ತ್ಯರು. ಅವನ ವಿಹಾರಕ್ಕೆ ನಂದನ ವನವಿದೆ, ಚಿಂತಿಸಿದ ಇಷ್ಟಾರ್ಥಗಳನ್ನು ಕೊಡುವ ಚಿಂತಾಮಣಿ ಮೊದಲಾದುವು. ಅಮರರು ತುಷ್ಟೇಂದ್ರಿಯರೆಂದು ಕಾಮನೇ ಹೇಳಿದ್ದಾನೆ. ಲೋಕಗಳ ಕ್ಷೇಮವೇ ತನ್ನ ಕ್ಷೇಮವೆಂದು ಬಗೆಯುವ ಉದಾರಿ ಇಂದ್ರ.

ಇಂತಹ ಇಂದ್ರನು ಅಹಲ್ಯೆ....ಗೌತಮರ ದಾಂಪತ್ಯ ಜೀವನದಲ್ಲಿ ಸಮಸ್ಯೆಯಾಗಿದ್ದಾನೆ. ಪ್ರಪಂಚದಲ್ಲಿ ‘ಸಂಸಾರ ಗುಟ್ಟು’ ಎಂಬ ಗಾದೆ ಇದೆ. ‘ಸರಿಯಾದ ಸಂಸಾರವನ್ನು ಕಂಡು ಕಣ್ಣಿನಲ್ಲಿ ಮೆಣಸಿನ ಪುಡಿ’ ಹೊಯ್ದುಕೊಂಡ ಅಪವಾದಕ್ಕೆ ಇಂದ್ರನು ಹೊಣೆಯಾಗಲೇಬೇಕೇ ಎಂಬುದೇ ಚಿಂತನೆಯ ವಿಷಯವಾಗಿದೆ. ಇಂದ್ರನೂ ಈ ಭಾರವನ್ನು ಹೊರಬೇಕೇ ಅಥವಾ ಇಂದ್ರನೊಬ್ಬನೇ ಹೊರಬೇಕೇ—ಎಂಬುದೂ ಸಮಸ್ಯೆಯೇ ಹೌದು.

ಗೀತರೂಪಕದಲ್ಲಿ ಇಂದ್ರನ ಪಾತ್ರದ ದೃಷ್ಟಿಯಿಂದ ಯೋಚಿಸುವುದಾದರೆ ಅವನಲ್ಲಿ ಕೆಲವು ಸ್ವಾಭಿಮಾನದ ಚಿಹ್ನೆಗಳು ದುರ್ಗುಣಗಳಂತೆ ತೋರಿಬರುವುದು ನಿಜ. ಅವುಗಳಲ್ಲಿ ಮೊದಲನೆಯದು ತನ್ನ ಪದವಿಯನ್ನು ಕಾಪಾಡಿಕೊಳ್ಳುವ ಹಂಬಲ. ಅದಕ್ಕಾಗಿ ತನ್ನ ಸಾಮರ್ಥ್ಯಕ್ಕೆ ನಿಲುಕುವಷ್ಟು ಏನೇ ಮಾಡಲಿಕ್ಕೂ ಸಿದ್ಧನಾಗಿರುತ್ತಾನೆ. ಎರಡನೆಯದೆಂದರೆ ತನ್ನ ಮತ್ತು ತನ್ನವರ ಪರಿಭವವನ್ನು ಸಹಿಸಲಾರದ ಪ್ರವೃತ್ತಿ. ಇದಕ್ಕೆ ರಂಭೆಯೇ ಉದಾಹರಣೆ.

ಇಂದ್ರನ ಮನಃಪ್ರವೃತ್ತಿಗಳು ಪರಿವರ್ತನೆ ಹೊಂದುತ್ತಾ ಹಲವು ಘಟ್ಟಗಳಲ್ಲಿ ಹಾದುಹೋಗಿ ಪರಿಣಾಮಗೊಳ್ಳುತ್ತವೆ. ಪುಷ್ಕರನೊಡನೆ ಭೂಮಿಗೆ ಬಂದಾಗ ಇಂದ್ರನ ಸಾತ್ವಿಕ ಪ್ರವೃತ್ತಿಯು ವ್ಯಕ್ತವಾಗಿದೆ. ಮಿಥಿಲೆಯ ಬನ ಮತ್ತು ಗೌತಮನ ಆಶ್ರಮ-ಸಂದರ್ಶನಗಳಲ್ಲಿ ಇದು ಸ್ಪಷ್ಟವಾಗಿದೆ. ಎರಡನೆಯ ಘಟ್ಟದಲ್ಲಿ ರಂಭೆಯ ಪರಿಭವವನ್ನು ಕೇಳಿದ ಇಂದ್ರನ ಪ್ರವೃತ್ತಿಯು ಕ್ರಮೇಣ ರಾಜಸಿಕ ಮಟ್ಟಕ್ಕೆ ಜಾರುವುದು ಕಂಡುಬರುತ್ತದೆ. “ಈ ತಪೋನ್ಮತ್ತರಾರು? . . . ಯೋಗಿ ಜಿಪುಟರಾಗಿಪರುಷೆ, ಮುರುಟಿ ಬಿದ್ದ ನಮ್ಮ ಮಾನವೋ?”—ಎನ್ನುವ ನುಡಿಗಳಲ್ಲಿ ಅವನ ಅಧಿಕಾರದಾಹ ಸ್ಪಷ್ಟವಾಗಿದೆ. ಗೌತಮನ ಹಿರಿಮೆ ಪರೀಕ್ಷೆಗೆ ಹೊರಡುವವರೆವಿಗೂ ಈ ಪ್ರವೃತ್ತಿಯು ಹರಡಿದೆ. ಮುಂದೆ ತಾಮಸಿಕ ಪ್ರವೃತ್ತಿಯು ಘಟ್ಟ ಸುಳಿಯುತ್ತದೆ. ಈ ಘಟ್ಟದ ಆದಿಯೇ ಕಾಮನ ಪ್ರೋಪಿಲ್ ದನಿ ಮತ್ತು ಅಹಲ್ಯೆಯ ಸುಳಿವು!

> " ಇದೆ ಇದುವೇ ಪೂವಿಲ್ ದನಿ
> ಸ್ವಸ್ಥರ ಮತಿಗಿದು ಅಶನಿ ಎಂಬುದು ದಿಟ !
> ಚಿರಪರಿಚಿತ ಇದು !
> ಆದರು ಮನ ಮಥಿಸುತ ವಶ್ಯೇಂದ್ರಿಯನೆನ್ನಾತ್ಮದೆ
> ಕಾತರತೆಯ ಹುಟ್ಟಿಸುತಿದೆ ಶಿರಸೋಕಿದ ಕತಕೆ ! "

ಮರ್ತ್ಯರ ಬಾಳು ಗಹನವಾದ ಅರಣ್ಯ ಕಾಮನ ಬಾಣದ ಸಾಫಲ್ಯಕ್ಕೆ ಇದು ಉತ್ತಮ ಕೇಂದ್ರ. ಭೂಮಿಯ ಪ್ರಭಾವ ಇಂದ್ರನಿಗೂ ತಪ್ಪಿದ್ದಲ್ಲ. ಅಹಲ್ಯೆಯನ್ನು ಕಂಡ ಇಂದ್ರ " ಈಕೆಗೆಣೆ ಕಾಣೆ ಮೂಲೋಕದಿ ! " ಎಂದು ವರ್ಣಿಸತೊಡಗುತ್ತಾನೆ. ಹಿಂದೆಯೇ ಪರಸತಿ ಕುತೂಹಲ(!)ವು ತರವೇ—ಎಂದು ವಿವೇಚಿಸಿಕೊಳ್ಳುತ್ತಾನೆ. ಆದರೆ ಇವೆಲ್ಲಾ ಬರಿಯ ಡೊಂಬರ ಡಂಭವಾಗುತ್ತದೆ. ಶತಾನಂದ ಮತ್ತು ಅಹಲ್ಯೆಯ ಹಾಗೂ ಅಹಲ್ಯೆ ಮತ್ತು ಮಾಧವಿಯರ ಸಂಭಾಷಣೆ ಹಾಗೂ ತನ್ನ ಪೂಜೆಗಾಗಿ ಹೊರಟ ಅಹಲ್ಯೆಯನ್ನು ಕಂಡು ಭ್ರಾಂತನಾಗುತ್ತಾನೆ.

ಮನ್ಮಥನೊಡನೆ ಇಂದ್ರನು ಅಹಲ್ಯೆಯನ್ನು ಸೃಜಿಸಿದ ಬ್ರಹ್ಮನ ಕೌಶಲ್ಯವನ್ನು ಶ್ಲಾಘಿಸತೊಡಗುತ್ತಾನೆ. ಆ ಶ್ಲಾಘನೆಯಾದರೂ ಸಾಧಾರಣವಲ್ಲ—

> " ದಿತಿಯಮಕ್ಕಳನಂದು ವಂಚಿಸಲಾದ ಮೋಹಿನಿಯಂದದಿ
> ಬನದಿ ಸುಳಿದೀ ಹೆಣ್ಣು ಮಾಟಕೆ, ಅದೆ ಮನವುಳಿವಂದದಿ "—

ಈ ವೇಳೆಗೆ ಇಂದ್ರನು ತಾನು ಬಂದ ಕರ್ತವ್ಯವನ್ನೇ ಮರೆತಿದ್ದಾನೆ. ಮದನನು ಎಚ್ಚರಿಸಿದಾಗ " ದಿಟ, ಮದನ, ಮರೆತಿದ್ದ ನಾನಿದ " ಎಂದು ತನ್ನನ್ನು ಮರೆಮಾಚುತ್ತಾನೆ. ಇದರಿಂದ ತಾನು ಬಂದ ಕಾರ್ಯ ಗೌತಮನನ್ನು ಭಂಗಪಡಿಸುವುದೇ ಹೊರತು ಅಹಲ್ಯೆಯ ಶೀಲಕ್ಕೆ ಕಂಟಕನಾಗುವುದಲ್ಲ—ಎಂದು ವ್ಯಕ್ತವಾಗಬಹುದೆ? ಅಷ್ಟೇ ಅಲ್ಲ ; ಮನ್ಮಥನೊಡನೆ—

> " ಧರ್ಮಕಾದವಳಿವಳು, ಇವಳಿಂ ಮುನಿಯ ಕೆಡಿಸುವೆನೆಂಬೆ ನೀ !
> ಏನು ಸಂಚದು, ನಿನ್ನ ಕಜ್ಜಕೆ ಅಪ್ಪಳೆಂತೀ ಭಾಮಿನಿ ! "

—ಎಂದು ಇಂದ್ರನು ಪ್ರಶ್ನಿಸುವಾಗ, ಈ ಅಘಟಿತ ಘಟನೆಗೆ ಮನ್ಮಥನನ್ನೇ ಹೊಣೆ ಮಾಡಿದಂತೆ ತೋರಿಬರುವುದೇನೋ ಹೌದು. ಆದರೆ ಇದರಿಂದ ತನ್ನ ಆಶೆಯನ್ನು ಬೇರೊಂದು ರೂಪದಲ್ಲಿ ಮದನನ ಬಾಯಿಂದಲೇ ಹೊರಡಿಸುವ ಉದ್ದೇಶ್ಯವೂ ಆಗಿಲ್ಲವೇ? ಹೌದು. ಆ ಆಸೆ ಪೂರ್ವ ನಿಶ್ಚಿತವಂತೂ ಅಲ್ಲ. ಹಾಗಿದ್ದರೆ ಆ ವಿಷಯವನ್ನೇ ತಿಳಿಸುತ್ತಾ ಇಂದ್ರನು ಮನ್ಮಥನ ಸಹಾಯ ಬೇಡಬಹುದಾಗಿತ್ತು. ಅವರ ಸಕಲ ಪ್ರಯತ್ನಗಳೂ ಗೌತಮನೆಡೆಗೆ ಜಾರುವುದಕ್ಕಿಂತಲೂ ಅಹಲ್ಯೆಯೆಡೆಗೇ ಜಾರಬಹುದಾಗಿತ್ತು.

ಗೌತಮನ ತಪೋಮಹತ್ವವನ್ನು ರಂಭೆಯು ಮೊದಲೇ ವರದಿ ಮಾಡಿದ್ದಾಳೆ. ಅದೇ ಇಂದ್ರನ ಭಯವೂ ಸಹ. ಅದಕ್ಕಾಗಿಯೇ ಇಂದ್ರನು ತನ್ನ ಚಾಪಲ್ಯವನ್ನು ಸ್ಪಷ್ಟವಾಗಿ ಮೊದಮೊದಲೇ ಹೇಳಲಾರದೆ " ಬಲು ಠಕ್ಕಿನವಂ ಸೈ ಸೀ ಕಂತು ! " ಎಂದು ಕಾಮನ ಬೆನ್ನು ಚಪ್ಪರಿಸುತ್ತಿರುತ್ತಾನೆ. ಆದರೂ ಗೌತಮನ ಬಗ್ಗೆ ತನ್ನ ಸಫಲತೆಯನ್ನು ಇಂದ್ರನು ಪ್ರಶಂಸಿಸುತ್ತಿರುವನೆಂದೇ ಕಾಮನ ಭಾವ.

ಅಹಲ್ಯೆಯು ಅಗ್ನಿ ಪೂಜೆ ಮುಗಿಸಿ ಗೌತಮನೆಡೆಗೆ ಬಂದಾಗ ಕಾಮ-ಇಂದ್ರರೂ ಹಿಂಬಾಲಿಸುತ್ತಾರೆ. ಕಾಮನ ಬಾಣವು ಗೌತಮನಿಗೂ ಅವನ ಪಾರ್ಶ್ವದಲ್ಲಿದ್ದ ಇಂದ್ರನಿಗೂ ನಾಟಿವೆ. ಭೂ ಸ್ಪರ್ಶದಿಂದಲೂ, ಅಹಲ್ಯಾ ದರ್ಶನದಿಂದಲೂ ಇಂದ್ರನಲ್ಲಿ ಅಂಕುರಿಸಿದ ಕಾಮವಾಸನೆ ಪುಟದು

ನಿಲ್ಲುತ್ತದೆ. ಬಂದ ಕೆಲಸವಾಯಿತೆಂದು ತಿಳಿದ ಮನ್ಮಥನು ಇಂದ್ರನನ್ನು ಪ್ರಯಾಣಗೊಳಿಸುವನಷ್ಟೆ. ಅನುಪೇವಿಗೂ ಮರೆಮಾಡಿಕೊಂಡಿದ್ದ ತನ್ನ ಭೋಗಾಸಕ್ತಿಯನ್ನು ಇಂದ್ರನು ಹೇಳಲೇಬೇಕಾಗುತ್ತದೆ. ಇಲ್ಲಿ ನೀರಸವಾದ ಕಾಮನ ಉಪದೇಶ ಬೇಕಿಲ್ಲ—ಅವನಿಗೆ. ಸ್ವರ್ಗದ ತನ್ನ ಸಕಲ ಸುಖಗಳು ಹೋದರೂ ಚಿಂತೆಯಿಲ್ಲ; 'ಸಕಲ ಹೃದಯದ ಸೂತ್ರಧಾರನೆ ಸತಿಯನೆನ್ನವಳೆನ್ನಿಸೈ'—ಎಂದು ಅಂಗಲಾಚುತ್ತಾನೆ.

'ಸತಿ ಮೊದಲೆ ಬೆಚ್ಚಮೊಲು ಪತಿರೂಪವಾಂತು' ಇಂದ್ರನು ಅಹಲ್ಯೆಯಲ್ಲಿಗೆ ಬರುತ್ತಾನೆ. 'ಪ್ರೇರಣೆಯನರಿತು ನಡೆ'—ಎಂದು ಹೇಳಿದ ಕಾಮನ ತುದಿನುಡಿಗಾಗಿ, ಎಚ್ಚರಿಕೆಯಿಂದ ಅಹಲ್ಯೆಯ ಹೃದಯ ಕಾಮನೆಯ ಸುತ್ತಲೂ ಭೋಗದಾಸೆಯನ್ನು ಕೆರಳಿಸುವಂತೆ ಮಾತುಗಳನ್ನು ಜೋಡಿಸುತ್ತಾನೆ. ಅಹಲ್ಯೆಯ ಪ್ರತಿಶಂಕೆಗೂ, ಅವಳ ಆಸೆಯನ್ನೇ ಸಾಕ್ಷಿಮಾಡಿ, ಅವಳ ಮುಂದೆ ಕನ್ನಡಿಯಿಡುತ್ತಾ, ತನ್ನನ್ನು ಅವಳ ಮೂಗಿಗೆ ನೇರವಾಗಿ ನಿಲ್ಲಿಸುತ್ತಾನೆ. ಲೋಕಮರ್ಯಾದೆಯ ಪ್ರಶ್ನೆ ಇಲ್ಲಿ ವ್ಯರ್ಥ. ಅವಳ ಮನೋದೌರ್ಬಲ್ಯದಿಂದ ಹುಟ್ಟಿಬರುವ ಆಶಂಕೆಗಳಿಗೆ ಇಂದ್ರನು ನೀಡುವ ಸಮಾಧಾನಗಳು ತತ್ಕಾಲೋಚಿತವಾದ ಉನ್ಮತ್ತಭಾವಗಳಿಂದ ಕೂಡಿದ ಕಾಮವ್ಯಾಖ್ಯಾನದಂತಿದೆ—

"ಒಲಿದವಗೆ ಹಿರಿದೊಲವು, ಅದಕು ಘನವಿಲ್ಲೆ!"—(ಪುಟ ೫೨)

"ನನ್ನ ನಾನರಿತಿಹೆನು, ನಿನ್ನ ನೀನರಿಯೆ
ರೂಢಿಗೀತೆರನುಡಿವೆ, ಎಲೆ ಮುಗುದೆ ಅರಿಯೆ" (ಪುಟ ೫೩)
"ಮರುಳ ಗೌತಮನೆಂತು ನಿನ್ನ ಸಮನಹನು?" (ಪುಟ ೫೩)

ಗೌತಮನ ಉಪೇಕ್ಷೆ ಹಾಗೂ ಅಹಲ್ಯೆಯ ಸಹಜ ಆಕಾಂಕ್ಷೆಗಳು ಇಂದ್ರನ ಪ್ರಬಲ ಸಾಧನಗಳು. ಅಷ್ಟೇ ಅಲ್ಲ—

"ಸತಿತನವನೆಂತಳಿವೆ, ಭೀರು, ಒಲಿದೆನಗೆ
ಮೊದಲಿಳೆಯ ಮಡದಿಯರು ಸಲುವರಮರರಿಗೆ!" (೫೪)

—ಈ ನುಡಿಯಿಂದ ಪರಿಸ್ಥಿತಿಯ ಪರಾಕಾಷ್ಠತೆ ಅರ್ಥವಾಗುತ್ತದೆ.

ಅಂತೂ ಚಾಪಲ್ಯ ತೀರಿತು. ಅಹಲ್ಯೆಯ ತೃಷೆ ಇಂಗಿತೇನೋ! ಆದರೂ ಪರಿಣಾಮ ಭೂತಾಕಾರವಾಯಿತು. "ಹಾ ಪ್ರಮಾದ, ಹೋ ಗೌತಮ! ಬಿದ್ದಳೀ ಅಬಲೆ, ಏ ಗತಿ?" ಎಂದು ಹೌಹಾರುತ್ತಾನೆ ಇಂದ್ರ! ಹೃದಯದಲ್ಲಿ ಆಸೆಗಳನ್ನು ತಡೆದು ತಾಳಲಾರದೆ ಪರಿತಪಿಸುತ್ತಿದ್ದ ಅಹಲ್ಯೆಗೆ ತೃಪ್ತಿಯನ್ನು ನೀಡಿದ ಇಂದ್ರ ತಾನು ತಪ್ಪಿಗೆ ಹೆಜ್ಜೆ ಕೂಡಿಸಿದ್ದೇನೋ ದಿಟ. ಬಂದ ಕಾರ್ಯವೇ ಬೇರೆ; ಆದುದೇ ಬೇರೆ. ಹೀಗಾಗುವುದೆಂದು ಅವನು ನಿರೀಕ್ಷಿಸಿರಲಿಲ್ಲ.

ಈಗ ಇಂದ್ರನ ವಿವೇಚನೆ ಜಾಗೃತವಾಗುತ್ತದೆ. ಹಲವು ಕ್ಷಣಗಳ ಭೂಸ್ಪರ್ಶದಿಂದ ತುಷ್ಟೇಂದ್ರಿಯನಾದ ತಾನೇ ಚಾಪಲ್ಯಕ್ಕೀಡಾದ ಮೇಲೆ ಭೂಲೋಕವಾಸಿಗಳ ಬಗ್ಗೆ ಹೇಳುವುದೇನಿದೆ? ಅಹಲ್ಯೆಯ ಬಗ್ಗೆ ಅನ್ಯಾಯವಾಡುವುದೇನಿದೆ ಎನ್ನಿಸಿತು ಇಂದ್ರನಿಗೆ! ಆಹಾ! ತೃಪ್ತಳಾದ ಅಹಲ್ಯೆ ಇಂದ್ರನನ್ನು ಎಚ್ಚರಿಸಿ "ಹೋಗು, ಹೋಗು, ಅದುದಾಯಿತು. ಅದಕ್ಕೆ ನೀನೋ ನಾನೋ ಅಥವಾ ಯಾರು ಹೊಣೆಯೋ! ಆದರೆ ಗೌತಮನ ದೃಷ್ಟಿಗೆ ಬಿದ್ದರೆ ಇಬ್ಬರೂ ಅನ್ಯಾಯವಾಗುತ್ತೇನೆ"—ಎಂದಳಲ್ಲಾ! ವಿಧಿಯ ಲೀಲೆಯಿಂದ ಬಯಕೆಯ ಕರಾಳ ಪಂಜರದಲ್ಲಿ ಸಿಲುಕಿದ್ದ ಅಹಲ್ಯೆ ಮತ್ತೆ ಏನು ಹೇಳಬೇಕಾಗಿತ್ತು. ಇಂದ್ರನು ಇದಕ್ಕೆ

ಹೋಕೆಯೇ? ಆದರೆ ತನ್ನ ಋಣವಂತೂ ತೀರಿಲ್ಲವೆಂಬುದು ನಿಜ. ಈಗ ಗೌತಮನನ್ನು ಎದುರಿಸುವುದಂತೂ ಸಾಧ್ಯವಿಲ್ಲ; ಅದು ಸಾಧುವೂ ಅಲ್ಲ. ಅಹಲ್ಯೆಯನ್ನು ರಕ್ಷಿಸಲು ಎದೆ ತಟ್ಟಿ ನಿಲ್ಲುವ ಹಕ್ಕಾದರೂ ತನಗಿಲ್ಲ. ಜಾರಚೋರನೆಂದು ತಾನೇ ಬಿರುದಿನ ಪಟ್ಟಿಯನ್ನು ಕಟ್ಟಿಕೊಂಡಂತಾಗುತ್ತದೆ. ಆಯಿತು, ಅಸಹಾಯ ಸ್ಥಿತಿಯಲ್ಲಿರುವಾಗಲೇ ಗೌತಮನು ತನ್ನನ್ನು ಶಪಿಸಿದ. ಸ್ವರ್ಗದವರ ಆನಂದಕ್ಕೆ ತಣ್ಣೀರನ್ನು ಎರಚಿದಂತಾಯಿತು.

ಗೀತರೂಪಕದಲ್ಲಿರುವ ಸೂಚನೆಯ ಪ್ರಕಾರ ಇಂದ್ರನಲ್ಲಿ ಮುಂದೆ ಭೋಗಲಾಲಸೆಗಳ ಅಭಾವ ವ್ಯಕ್ತವಾಗುತ್ತದೆ. ಇತ್ತ ವಾಲ್ಮೀಕಿ ರಾಮಾಯಣದಲ್ಲಿರುವಂತೆ ಪಿತೃದೇವತೆಗಳ ಪ್ರಯತ್ನ ಹಾಗೂ ಮೇಷವೃಷಣತ್ವ ಪ್ರಾಪ್ತಿಯು ಇಲ್ಲಿಗೆ ಅನವಶ್ಯಕವೆಂದೇ ತೋರಿಬರು ವುದೇನೋ! ಅದಕ್ಕಾಗಿಯೇ ಆ ಗೋಜಿಗೆ ಹೋಗದೆ ಭೂಮಿಯ ಅತೃಪ್ತಿಯೊಡನೆ ಇಂದ್ರನ ಮತ್ತು ಅಮರರ ಅತೃಪ್ತಿಯನ್ನು ಸೂಚಿಸಿ ಕಥಾಸೂತ್ರ ಮುಂದುವರೆದಿದೆ. ಇಂದ್ರನಿಗೆ ಮುನಿಯು 'ವಿಫಲನಾ' ಗೆಂದು ಮಾತ್ರ ಶಪಿಸುತ್ತಾನೆ. ಅಹಲ್ಯೆಯ ಶಾಪಕ್ಕೆ ವಿಮುಕ್ತಿಯ ಅವಧಿಯನ್ನು ಸೂಚಿಸಿದ ಗೌತಮನು ಇಂದ್ರನ ಶಾಪ ಪರಿಹಾರಕ್ಕೆ ಅವಧಿಯನ್ನೇನೂ ಸೂಚಿಸಿಲ್ಲ. ಆ ದೃಷ್ಟಿಯಿಂದ ವಾಲ್ಮೀಕಿಯ ಇಂದ್ರನೇ ಸರಿ. ಆದರೆ ವಾಲ್ಮೀಕಿ ರಾಮಾಯಣ ದಲ್ಲಿ ಮುಂದೆ ಇಂದ್ರನ ವೃತ್ತಾಂತ ಮುಂದುವರೆದಿದೆ. ಹಾಗೂ "ಪೇತತುರ್ವೃಷಣೌ ಭೂಮೌ"—ಎಂಬುದು ಇಂದ್ರನಿಗೆ ಸಂಬಂಧಿಸುವುದರಿಂದ 'ಅಹಲ್ಯೆ' ಯ ವೃತ್ತಾಂತಕ್ಕೆ ಇದು ಅನಗತ್ಯವಾಗಿರಬಹುದು. ಇದು ಗೋಪ್ಯವೇ ಸರಿ. ಇಂದ್ರನ ಅಸಂತೋಷ ಸೂಚನೆ ಯಲ್ಲಿ ಇದನ್ನು ಅಧ್ಯಾಹಾರಮಾಡಿಕೊಳ್ಳಬಹುದೆನಿಸುತ್ತದೆ. ಹಾಗೂ ಅಹಲ್ಯಾ ಶಾಪ ವಿಮೋಚನೆಯ ನಂತರ ಅಮರರ ಆನಂದ ಗೀತದಲ್ಲಿ ಅಂತ್ಯವಾಗುವ ಗೀತರೂಪಕದ ಅಂತರ್ಯವು ಗಮನಾರ್ಹ. ಪ್ರಾಯಶಃ ಇಂದ್ರನು ಈ ವೇಳೆಗೆ ವೈಯಕ್ತಿಕವಾದ ಅತೃಪ್ತಿಯಿಂದಲೂ ಪಾರಾಗಿರಬಹುದು?

ಅಥವಾ ಇದರಿಂದ ಇನ್ನೊಂದು ಭಾವವೂ ಹೊರಬಿದ್ದೀತೇ? ಬಾರಿಬಾರಿಗೂ ಅಮರೇಂದ್ರನ ಕುರಿತ ಚಿಂತೆಯಲ್ಲಿ, ಅಹಲ್ಯೆಯು ಅನುಭವಿಸುತ್ತಿರುವ ಶಿಕ್ಷೆಯ ಬಗ್ಗೆ ಸಹಾನು ಭೂತಿ ಕಂಡುಬರುತ್ತದೆ. ಶಾಪನಿವಾರಣಾಪರ್ಯಂತವೂ ಅವನ ತೊಳಲಾಟ ಅಷ್ಟಿಷ್ಟಲ್ಲ! ಅಹಲ್ಯೆಯ ಬಾಳ ಪತನದಲ್ಲಿ ಇಂದ್ರನೇ ಕಾರಣನೋ; ಅವಳ ಸ್ವಯಂಕೃತಾಪರಾಧವೋ; ಅಥವಾ ಮರ್ತ್ಯರ ಬಾಳಿನಲ್ಲಿ ವಿಧಿಯ ಅನಿವಾರ್ಯವಾದ ಕೈವಾಡವೋ—ಅಂತೂ ಇಂದ್ರನೂ ಶಿಕ್ಷೆಯನ್ನೂ ವ್ಯಥೆಯನ್ನೂ ಅನುಭವಿಸುತ್ತಾನೆ; ಸ್ವರ್ಗವೆಲ್ಲಾ ನಿರಾಶೆಯಿಂದ ತೊನೆದಾಡು ತ್ತದೆಂಬುದು ಗ್ರಾಹ್ಯ.

ಉಳಿದಿರುವುದು ಅಹಲ್ಯೆ ಮತ್ತು ಗೌತಮರ ಪಾತ್ರಗಳು. ಸ್ವರ್ಗ-ಮರ್ತ್ಯಗಳಿಗೆ ಸಂಬಂಧಿಸಿದ ಈ ಕಥಾವೃಕ್ಷದಲ್ಲಿ ಸಗ್ಗದೊಡೆಯನಾದ ಇಂದ್ರನು ತುದಿಯಾದರೆ ಗೌತಮನು ಬುಡವಾಗುತ್ತಾನೆ. ಬುಡದಿಂದ ಶಿಖರದವರೆಗೆ ವ್ಯಾಪಿಸಿರುವವರೆಂದರೆ ಅಹಲ್ಯೆ ಮತ್ತು ಮನ್ಮಥ ಹಾಗೂ ಧರ್ಮ ಮತ್ತು ಬಯಕೆ. ಗೌತಮನ ಪಾತ್ರವು ರೂಪಕದ ವಿಸ್ತಾರದಲ್ಲಿ ಗೌಣವಾಗಿ ಕಂಡುಬಂದರೂ, ಬಾಳಿನಲ್ಲಿ ದಾಂಪತ್ಯಜೀವನಕ್ಕೆ ಸಂಬಂಧಿಸಿದ ಹೋರಾಟದ ದೃಷ್ಟಿಯಿಂದ ಈ ಪಾತ್ರಕ್ಕೆ ಮಹತ್ವ ನೀಡಬೇಕು. ಗೌತಮನು ಸಾಮಾನ್ಯನಲ್ಲ. ತರುಣ ತಪಸ್ವಿ, ಹಟವಾದಿ. ತನ್ನ ತಪಶ್ಶಕ್ತಿಯಿಂದ ರಂಭೆಯಂತಹ ಅಪ್ಸರೆಯನ್ನೂ (ವಿಶ್ವಾಮಿತ್ರ

ನಿಗೂ ಅಸಾಧ್ಯವೆಂದು ಸಾಕ್ಷೀಭೂತವಾಗಿರುವ ಅಸಾಮಾನ್ಯ ಸಾಧನೆಯಿದು) ಪರಿಭವಕ್ಕೀಡು ಮಾಡಿದವನು! ಇಂದ್ರನೇ ಸ್ವತಃ ಬಂದರೂ ಚಲಿಸದಂತಹ ಸ್ಥೈರ್ಯವುಳ್ಳವನು. ತುಷ್ಟೇಂದ್ರಿಯನಾದ ಇಂದ್ರನೂ ಕೂಡ ತೃಷೆಗೊಳ್ಳುವಷ್ಟರ ಸುಂದರಿಯಾದ ಅಹಲ್ಯೆಯನ್ನು ತಪಶ್ಶಕ್ತಿಯಿಂದ ಪತ್ನಿಯನ್ನಾಗಿ ಪಡೆದವನು. (ಈ ವಿಷಯಕ್ಕೆ ಅಧ್ಯಾತ್ಮರಾಮಾಯಣ ನೋಡಿ) ಅಷ್ಟೇ ಅಲ್ಲ; ರಂಭೆಯೇ ಇಂದ್ರನಿಗೆ ಹೇಳಿದ ಪ್ರಕಾರ—

"ಮೂಲೋಕವನಳಿಸಬಲ್ಲ ಮುನಿದೊಡೆ ಈ ಜೋಗಿ
ಮೂಲೋಕವಗಳಿಸಬಲ್ಲ ಬಗೆದೊಡೆ ಈ ಜೋಗಿ (ಪುಟ-೯)

ಪುಷ್ಕರನು ಹೇಳುವಂತೆ "ಜಿತಕಾಮಂ, ದೇವಪ್ರಿಯನೀ ಸರಸ ತ್ಯಾಗಿ" (ಪುಟ-೬). ರಂಭೆಯಂತಹವಳನ್ನು ಹೊರದೂಡಲು ಅವನ ಒಂದು ಹುಂಕಾರ ಸಾಕು. ಮಾಧವಿಯು ಹೇಳುವಂತೆ—

"ಈ ಬಲಮಿರೆ ಆ ಮನುಜನ ಬಯಕೆಯು ಬಾಧಿಸದು
ಸ್ವರ್ಗದೊಳಾಗದ ಭೋಗದ ಸುಖವಾ ತಣಿವಹುದು!" (ಪುಟ-೧೯)

ಗೌತಮನ ಬಳಿಯಿರುವವರಾದರೋ ಮೈತ್ರೇಯ, ಕೌಶಿಕ, ವಟುಗಳು! ಮೈತ್ರೇಯ ಹೇಳುವಂತೆ—

"ಈ ತಪಬಲಮಿರೆ, ಅಮರಾವತಿ ದೊರೆ
ತಲೆಬಾಗಿಪನೆಮ್ಮೀಜಕ್ಕೆ!" (ಪುಟ-೩೦)

ಇಂತಹ ಮಹಾಮುನಿ ಗೌತಮ. ಇಂದ್ರನಿಗೂ ಮಿಗಿಲಾದ ಶಕ್ತಿಸಾಧನೆಗಾಗಿ ತಪಸ್ಸನ್ನು ಆಚರಿಸುತ್ತಾನೆ- ಈತ. ಆದರೆ ಲೌಕಿಕ ಧರ್ಮಕ್ಕೆ ಅದರಲ್ಲೂ ಗೃಹಸ್ಥಾಶ್ರಮದ ಧರ್ಮಕ್ಕೆ ತುಸು ವಿರುದ್ಧವಾಗಿ ಕರ್ತವ್ಯಲೋಪವನ್ನು ಸೂಚಿಸುವಂತಹ ವ್ಯವಹಾರದಲ್ಲಿ ತೊಡಗಿದ್ದಾನೆ. ಆತನ ಪತ್ನಿ ಹೊಸ ಹರೆಯದ ಚದುರೆಯಾದ ಅಹಲ್ಯೆ. ಆಕೆಯ ಬಗ್ಗೆ ಪತಿಯಾಗಿ ತಾನು ಮಾಡಬೇಕಾದ ಕರ್ತವ್ಯಗಳನ್ನು ಬದಿಗೊತ್ತಿದ್ದಾನೆ. ಅಷ್ಟೇ ಅಲ್ಲ; ತನ್ನ ಅಂತಸ್ಸತ್ವವನ್ನೇ ವಂಚಿಸಿಕೊಂಡು ಬಲಾತ್ಕಾರದಿಂದ ವಿರಸವನ್ನೆಸಗುತ್ತಿದ್ದಾನೆ. ಈ ಅಭಿಪ್ರಾಯಗಳು ಕಾಮನ ವಾಣಿಯಲ್ಲೇ ವ್ಯಕ್ತವಾಗುತ್ತಿವೆ. ಅವನು ತಪೋಲುಬ್ಧ, ನೇಮಬದ್ಧ, ಸರಸಕಾಮ ವಿರುದ್ಧನು. ಕಾಮನು ಗೌತಮನಿಗೆ ನೀಡುವ ಎಚ್ಚರಿಕೆಯಲ್ಲೂ ಈ ಧ್ವನಿ ಮೂಡಿಬಂದಿದೆ—

"ಮರಳು ತವಸಿ ಗೌತಮಾ!
ಇನ್ನಾದರೆಚ್ಚರು!
ನಿನ್ನ ಹೃದಯಧರ್ಮವರಿತು ಇನ್ನಾದರೆಚ್ಚರು!" (ಪುಟ-೩೨)
"ಹುಸಿಯು ಬಾಳನೆನ್ನೆವರಂ ಬಾಳ್ವೆ?
ನಿನಗೆ ಇದು ವೆ ತರಂ?" (ಪುಟ-೩೨)

"ಅಸ್ವತಂತ್ರ ಗೌತಮಾ . . . ಪ್ರೇಮ ಕೃಪಣ ಗೌತಮಾ . . .
ಜಂಬಗಾರ ಗೌತಮಾ . . . ಪ್ರಕೃತಿಗಿದಿರೆ ಮರುಳ ತವಸಿ?"

—ಇಲ್ಲೆಲ್ಲಾ ಆ ಧ್ವನಿಯನ್ನೇ ಕಾಣಬಹುದು.

"ಎಸಿತು ದೂರಕೆ ಸೆಳೆದು ನಿಂತಿಹೆಯೋ ನನ್ನ ಮನವನ್ನ" ಎಂದು ವಿರಹವೇದನೆಯಿಂದ ಬಳಲುವ ಅಹಲ್ಯೆಯ ಪಾತ್ರದಿಂದಲೂ ಗೌತಮನ ದಾಂಪತ್ಯ ಜೀವನದಲ್ಲಿರುವ ಅತೃಪ್ತಿಗೆ

ಅವನು ಎಷ್ಟರಮಟ್ಟಿಗೆ ಕಾರಣನೆಂಬುದನ್ನು ಕಾಣಬಹುದು. ಒಟ್ಟಿನಲ್ಲಿ ಗೌತಮನು ತಪಸ್ಸಿಗಾಗಿ ಒತ್ತಾಯದಿಂದ ಪ್ರೇಮಕೃಪಣನಾಗಿ ಸತಿಯನ್ನು ಅತೃಪ್ತಿಗೀಡುಮಾಡಿದ್ದಲ್ಲದೆ ಇಂದ್ರ ಮತ್ತು ಅಹಲ್ಯೆಯರಿಗೆ ಶಾಪವನ್ನು ನೀಡಿ ತನ್ನ ತಪಶ್ಶಕ್ತಿಯಲ್ಲಿ ವೆಚ್ಚಮಾಡಿದ್ದೂ ಸಾಲದೆ, ಪಶ್ಚಾತ್ತಾಪಕ್ಕೀಡಾಗುತ್ತಾನೆ.

ಗೌತಮನು ತಪೋಲುಬ್ಧನಾಗಿ ಧ್ಯಾನಕ್ಕೆ ಕುಳಿತು ಎಷ್ಟೋ ಕಾಲ ಕಳೆದಿದೆ. ಒಂಟಿ ಜೀವನದಿಂದ ಬೇಸರಹೊಂದಿ ಬೇಸರಹೊಂದಿ ವಿರಹದ ದಿನಗಳನ್ನು ಎಣಿಸಿ ಬಳಲುತ್ತಿರುವ ಅಹಲ್ಯೆ ತನ್ನ ಅಳಲನ್ನು ತೋಡಿಕೊಳ್ಳುತ್ತಲೇ ಇದ್ದಾಳೆ. ಆದರೂ ಗೌತಮನಿಗೆ ಅರಿವಾಗಲಿಲ್ಲ. ಇಂದ್ರನ ನೆರವಿಗೆಂದು ಬಂದ ಕಾಮನು ಅವನ ಮೇಲೆ ಅಂಬನ್ನು ಹೂಡಿದ್ದೇನೋ ನಿಜ. ಗೌತಮನು ಧ್ಯಾನದಿಂದ ಎಚ್ಚರಗೊಂಡಮೇಲೆ ಇದು ಸ್ಮರನ ಸಂಚೇ ಇರಬಹುದೇ?—ಎಂದು ಆಳವಾಗಿ ಯೋಚಿಸುತ್ತಾನೆ. ಆಗ ಅವನಿಗೆ ಬಾಳಿನ ಮರ್ಮ ತಿಳಿಯುತ್ತದೆ. ಹಲವಾರು ಕಾಲದಿಂದ ತಪೋನಿರತನಾದ ತಾನು ತನ್ನ ಪತ್ನಿಯ ಬಾಳನ್ನು ಸಂತಸಗೊಳಿಸಿದ್ದು ಎಷ್ಟರ ಮಟ್ಟಿಗೆ?—

"ರೂಢಿಯೊಳು ಮರೆತೆ! ಬಾಳ ಹಿನ್ನೆಲೆಗಿಟ್ಟೆ,  
ನನ್ನ ಧರ್ಮದ ಗುಡಿಯ ಬೆಳಕಿಗೇ ಮುಸುಕಿಟ್ಟು  
ತಪವೆಂದೆ, ಜಪವೆಂದೆ, ರಾಗವನು ಹಿಂಗಿಸಿದೆ;  
ಒಲಿದಗೊಲವೊಳೆ ಮುಕ್ತಿ ಎಂಬುದರಿಯದೆ ಹೋದೆ!" (ಪುಟ-೪೫)

ಈ ಉಕ್ತಿಗಳಿಂದ ಗೌತಮನ ಹೃದಯದಲ್ಲಿ ಆಸೆಗಳು ಸುಪ್ತವಾಗಿದ್ದುವೆಂದು ತಾನೇ ವ್ಯಕ್ತವಾಗುತ್ತಿದೆ? ವ್ಯರ್ಥವಾಗಿ ಸ್ಮರನಮೇಲೆ ಆಪಾದನೆಯನ್ನು ಗೌತಮನು ಹೊರಿಸಲಾರ—

"ಆಗರಿತೆ ನಾ ಸೊಲ್ಲ ಸ್ಮರನ ಸಂಚಲ್ಲೆಂದು,  
ನನ್ನೊಳಗೆ ನುಡಿಯುತಿಹ ಹುರುಳ ನುಡಿ ಇಂತೆಂದು,  
ತಪವಗಳಿಸುವ ಲೋಭವೀ ನುಡಿಯ ಮರೆಸಿತ್ತು,  
ಇಂದುವರೆಗೆನ್ನಸುವು ಕಾಳದೊಳು ಮುಳುಗಿತ್ತು,  
ಈಗೆನಗೆ ಬೆಳಕಾಯ್ತು, ಕಾಳ ಕಾಲ್ಗೆಟ್ಟಿತು" (ಪುಟ-೪೫)

ಹೀಗಿರುವಾಗ ಸ್ಮರನಿಗೆ ಆಪಾದನೆಯೇಕೆ? ಅಥವಾ ಅವನ ಬಾಣದ ಪ್ರಭಾವದಿಂದ ಗೌತಮನು ಭ್ರಾಂತನಾಗಿ ಈರೀತಿ ನುಡಿದನೆನ್ನಬಹುದೇ? ಅಂತಾದರೆ ಕಾಮನನ್ನೇಕೆ ಶಪಿಸಲಿಲ್ಲ? ಅಥವಾ ಆ ಶಿವನಂತೆ ಮತ್ತೊಮ್ಮೆ ಸುಟ್ಟು ಭಸ್ಮ ಮಾಡಬಾರದಾಗಿತ್ತೇ? 'ಆದರಾಕತೆ ಬೇರೆ ಇಂದದಲ್ತು'-ಎಂದು ಕಾಮನೇ ಹೇಳಿದ್ದಾನೆ. ಅಂದು ಶಿವನು ಪತ್ನಿಯಿಲ್ಲದವನು, ಗೌತಮನು ಗೃಹಸ್ಥ.

ಬ್ರಹ್ಮನನ್ನೂ ಮೀರುವ ಶಕ್ತಿ ಗೌತಮನಿಗೆ ಪ್ರಾಪ್ತವಾಗುವ ಕಾಲ ಸನ್ನಿಹಿತವಾಗಿದೆ. ಈ ಮಾತನ್ನು ಮೈತ್ರೇಯನು ಎಚ್ಚರಿಸಿದರೂ ಗೌತಮನಿಗೆ ಬೇಕಿಲ್ಲ. ತನ್ನ ಸತಿಯು ನೂರಾಸೆಗಳಿಗೀಡಾಗಿ ಬಳಲುತ್ತಿರುವಾಗ ತನ್ನ ತಪವು ಲೋಕಕಲ್ಯಾಣಕ್ಕೆಂತಾಗುವುದು? ನದಿಯು ಸಮುದ್ರವನ್ನು ಕುರಿತು ಓಡುವುದೇತಕ್ಕಾಗಿ? ಗಿಡವು ಪೂತು ಫಲಿಸುವುದೇತಕ್ಕಾಗಿ? ಜೀವವು ಮತ್ತೊಂದು ಜೀವವನ್ನು ಅರಸುವುದೂ ಅದಕ್ಕಾಗಿಯೇ! ಇದು ಪ್ರೇಮದ ರಹಸ್ಯ. ದಾಂಪತ್ಯ ಧರ್ಮ. ಪ್ರಕೃತಿಗಿದಿರೆದ್ದು ಹೋರಾಡುತ್ತಾ ಲುಬ್ಧನಂತೆ ಇರುವುದು ಧರ್ಮಬಾಹಿರ.

ಧರ್ಮರಕ್ಷಣೆಗಾಗಿ ತನ್ನ ತಪಶ್ಶಕ್ತಿಯನ್ನೆಲ್ಲಾ ವೆಚ್ಚಮಾಡುವುದಕ್ಕೂ ಗೌತಮನು ಸಿದ್ಧನಾಗಿದ್ದಾನೆ. ಏಕೆಂದರೆ—

"ಲೋಭಕುಂಟು ಪರಿಮಿತಿ
ಬಳಿಕ ತ್ಯಾಗ ಪ್ರೇಮಮಿತಿ" (ಪುಟ-೪೬)
"ಪ್ರೇಮತಂತು ಬದ್ಧನಾದೆ . . ."
"ಲೋಭ ಮುಕ್ತ, ತ್ಯಾಗಾಸಕ್ತ . . ."
"ಇಂದು ನಾ ಪ್ರಿಯಾನುರಕ್ತನಾದೆ"

—ಎನ್ನುತ್ತಾ ಗೌತಮನು ನಟ್ಟಿರುಳಿನ ಸೌಖ್ಯವನ್ನು ಮೆಲಕುತ್ತಾ ಶೀಘ್ರವಾಗಿಯೇ ಆಶ್ರಮವನ್ನು ಪ್ರವೇಶಿಸುತ್ತಾನೆ. ಈಗ ಅವನದು ನಿಷ್ಕಳಂಕವಾದ ಪ್ರೇಮ. ಮೋಡದ ತೆರೆ ಹರಿದು ಬೆಳಕು ಪ್ರವೇಶಿಸಿದೆ. ಕರ್ತವ್ಯಪಾಲನೆಯ ಕಡೆಗೆ ದೃಷ್ಟಿ ನೆಟ್ಟಿದೆ. ತನ್ನ ಧರ್ಮಪತ್ನಿ, ಕುಲಕಾಂತೆ, ಸುಂದರಿ, ಜವ್ವನಿ, ತನ್ನ ವಂಶಜರಿಗೆ ತಾಯಿಯಾಗಲಿರುವ ತನ್ನ ಧರ್ಮದ ಗುಡಿಯವಳು! ಆದರೆ ಆಶ್ರಮವನ್ನು ಪ್ರವೇಶಿಸಿ ಗೌತಮನು ಕಂಡುದೇನು?

ಮಾಸದ ಹಾಸಿಗೆ, ಒಂಟಿಯಾದ ಹಸುಳೆ, ಸಹಧರ್ಮಿಣಿಯಿಲ್ಲದ ಶೂನ್ಯಗೃಹ—ಅದೂ ನಟ್ಟಿರುಳಿನಲ್ಲಿ! ಆದರೂ ಬಾಳಿಗೆ ಹೆಜ್ಜೆ ಕೂಡಿಸಿರುವ ಅವಳ ಬಗ್ಗೆ ಗೌತಮನಿಗೆ ಸಂದೇಹವಿಲ್ಲ—

"ಮಚ್ಚಿಂತೆಯೊಳೀ ವಿರಹಿಣಿ ನಿದ್ದಿಸದಿರಬಹುದು!"
"ಮನೆ ಹೊರಗಣ ಮೊದಲೊಲುಮೆಯ ಬಳ್ಳಿಯ ಚಪ್ಪರದಿ
ಇರುಳಳಿವಳೊ ಸಹಧರ್ಮಿಣಿ ಸವಿನೆನಪಿನ ನೆವದಿ?" (ಪುಟ-೬೦)

ಅಳುತ್ತಿರುವ ಹಸುಳೆಗೆ ಆಶ್ವಾಸನೆ ನೀಡಿ, ಪತ್ನಿಯನ್ನು ಲಲ್ಲೈಸಿ ಕರೆತರುವುದಕ್ಕಾಗಿ ಬಳ್ಳಿಯ ಚಪ್ಪರದೆಡೆಗೆ ನಡೆಯುತ್ತಾನೆ. ಗೌತಮನ ನಿರ್ಮಲಪ್ರೇಮದ ಸತ್ಯಸಾಕ್ಷಿ ದೊರೆಯಬೇಕಾದರೆ ಈ ಸಂದರ್ಭ ಅಷ್ಟು ಸಾಲದು; ಅದು ದೊರೆಯುವುದು ಇನ್ನೂ ಬಹು ಮುಂದಕ್ಕೆ! ಕೊಡು-ಎನ್ನುವುದು ಕಾಮ; ಕೊಳ್-ಎನ್ನುವುದು ಪ್ರೇಮ—ಎಂಬ ಸತ್ಯವನ್ನು ಕಾಣುವುದು ಇನ್ನೂ ಮುಂದಕ್ಕೆ. ಇಲ್ಲಿ ಗೌತಮನ ಪ್ರವೃತ್ತಿಯ ಚಿತ್ರ ಮಾತ್ರ ದೊರೆಯುತ್ತದೆ. ಗೌತಮನು ಹಸುಳೆಗೆ ನೀಡಿದ ಆಶ್ವಾಸನೆ ವ್ಯರ್ಥವಾಯಿತು. "ಇನ್ನಗಲಿಕೆ ಇಲ್ಲದವೊಲು ತಹೆ ತಾಯಿಯ ಮುದದೆ"—ಎಂದು ಹೇಳಿದಾಗಿನ ತಾಳ್ಮೆ ಮತ್ತೆ ಆ ಮುನಿಗೆ ಉಳಿಯಲಿಲ್ಲ.

ಇಂದ್ರ ಮತ್ತು ಅಹಲ್ಯೆಯರನ್ನು ಒಂದೆಡೆ ಕಂಡ ಗೌತಮನ ಹೃದಯದಲ್ಲಿ ಮತ್ತೆ ಕಾಮನ ಪ್ರಭಾವದ ಸುಳಿ ಎದ್ದಿತೇನೋ! ಅದೂ ಒಳ್ಳೆಯದೇ. ವಾಲ್ಮೀಕಿಯ ಶೋಕವೇ ಶ್ಲೋಕವಾದಂತೆ ಗೌತಮನ ಕಾಮವೇ ಶಾಪವಾಯಿತೋ! ಶಾಪದಿಂದ ತಾಪವಂತೂ ಸಂಭವಿಸಿತು. ವ್ರತಗೆಟ್ಟಿದ್ದು ಸಾಲದೆ ಪತ್ನಿಯಿಲ್ಲದ ಜೀವನವನ್ನು ಸಾಗಿಸಬೇಕಾಗುತ್ತದೆ ಗೌತಮನಿಗೆ! 'ಮುನಿಕಾಮವಾಯಿತೀ ಶಾಪತಾಪಕ್ಕೆ'. ಅಂತೂ ಶಾಪತಾಪದಲ್ಲಿ ಗೌತಮನ ಕಾಮ ಸುಟ್ಟು ಭಸ್ಮವಾಯಿತೆನ್ನುವ!

ಗೌತಮನು ತನ್ನಲ್ಲಿ ಅಂತರ್ಮುಖಿಯಾಗಿ ತನ್ನನ್ನು ಅರಿಯುವುದು ಈ ನಂತರವಲ್ಲಿ. ಪಶ್ಚಾತ್ತಾಪದಲ್ಲಿ ಬೆಂದ ಕಾಮದ ಪರ್ಯವಸಾನ ಪ್ರೇಮವಾಗಿ ಪರಿಣಮಿಸುವುದು ಈ ಮುಂದೆ. ಬಾಳಿನಲ್ಲಿ ಬೆಂದು ಬೇಸರಹೊಂದಿ ಆಕ್ರಂದ ಮಾಡುವ ಗೌತಮನು—

"ಏಗೈವೆ ನೇಗೈವೆ ನೇ ಗೈವೆ ನೀಗ . . .
ರಾಗಕ್ಕೆ ಈಡಾಗಿ ಮೋಹವಶನಾಗಿ
ಕೆಟ್ಟೆನೋ ಕೆಟ್ಟೆನೋ ಆತುಮವ ನೀಗಿ" (ಪುಟ-೭೪)

"ತನ್ನನೆ ತಾ ಗೆಲ್ಲದವಂ ಇಕೊ ಈ ಹುಸಿ ತವಸಿ" ಎಂದು ನಿಂದಿಸಿಕೊಳ್ಳುತ್ತಾನೆ. ಇಂದ್ರ ಮತ್ತು ಅಹಲ್ಯೆಯರನ್ನು ಅರಿಯಲು ಹೋದ ಗೌತಮನು ತನ್ನ ತಾನೇ ಅರಿತಿಲ್ಲ ವೆಂಬುದು ದಿಟವಾಯಿತು. "ಮರುಗುವೆ ನಾನೀ ಹೆಣ್ಣಿಗೆ!" ಈ ಅನುಕಂಪ ಮಟ್ಟಿಗೆ ದ್ರಾಕ್ಷಿಯ ಹಣ್ಣುಗಳು ಎಟುಕದೆ ಹಿಂತಿರುಗಿದ ನರಿಯ ಗಾಂಭೀರ್ಯಕ್ಕೆ ತಕ್ಕಂತಿದೆ. ಭಗವಂತನು ಕಣ್ಣು ಬಿಡುವುದಕ್ಕೂ ಭಕ್ತನು ಕಣ್ಣು ಮುಚ್ಚುವುದಕ್ಕೂ ಸರಿಹೋಯಿತು. 'ವಿಧಿನಿಯಮವ ಮೀರಿದರಾರ್' ಎಂಬುದು ಮಾತ್ರ ಸತ್ಯ.

"ಬಾಳ್ ಬಾಳಿಗು ಏನಂತರ? . . .
ಇದ್ದೆವು ಸನಿಯೊದೊಳೇ
ಒಬ್ಬರ ಹಂಬಲನೊಬ್ಬರು ತುಸವೂ ತಿಳಿಯದಲೇ!"

ಗೌತಮನು ಹಸುಳೆಯಾದ ಶತಾನಂದನನ್ನು ಮೈತ್ರೇಯ ಹಾಗೂ ಮಾಧವಿಯರಿ ಗೊಪ್ಪಿಸಿ ತಾನು ಆತ್ಮವಿಸಂಬೋಧಿಯಾದ ಹಿಮಗಿರಿಯ ಏಕಾಂತದ ಗವಿಯ ಶಿಶಿರ ಸಮಾಧಿಗೆ ನಡೆಯುತ್ತಾನೆ. ಗೌತಮನಿಗೆ ಈಗ ಇದಕ್ಕಿಂತಲೂ ಉತ್ತಮ ಮಾರ್ಗವಿಲ್ಲ.

ಇಲ್ಲಿಂದ ಮುಂದೆ ಮಧ್ಯಮಾಂಕದ ಪ್ರಾರಂಭ. ಗೌತಮನ ಬಾಳಿಗೂ ಇದು ಮಧ್ಯ ಮಾಂಕವೇ ಸರಿ. ಭೂಲೋಕದಲ್ಲೂ ಅತೃಪ್ತಿ; ಸ್ವರ್ಗದಲ್ಲೂ ಅಷ್ಟೇ. ಅಹಲ್ಯೆಯ ಶಾಪವು ಅಂತ್ಯಗೊಳ್ಳಬೇಕು, ಸ್ವರ್ಗ ತೃಪ್ತವಾಗಬೇಕು. ಆ ವೇಳೆಗೆ ಗೌತಮನ ಸಾಧನೆಯೂ ಒಂದು ಹಂತಕ್ಕೆ ಬರಬೇಕು. ತಪೋ ಮಗ್ನನಾಗಿರುವ ಗೌತಮನು ಅಲ್ಲಿನ ಸಿದ್ಧರ ಪಾಲಿಗೆ ಅಂದು ತಪೋಮಗ್ನನಾಗಿದ್ದ ಶಿವನಂತೆಯೇ ಒಂದು ಒಗಟಾಗಿದ್ದಾನೆ. "ಎಂದರಿವಾನುವನಾತ್ಮ ವಿಬೋಧಿ" ಎಂಬುದೇ ಎಲ್ಲರ ಬಾಯಲ್ಲೂ. ಗವಿಯನ್ನು ಹೊಕ್ಕವನು ಮತ್ತೆ ಹೊರಗಾದರೂ ಬರಲಿಲ್ಲವೆಂದು ಹಿಮವಂತನಿಗೂ ಚಿಂತೆ ಹತ್ತಿದೆ. .ಗೌತಮನ ಸ್ಥಿತಿಯಾದರೂ ಏನು?

"ಭವಿಗಳಿಗಾಯಿತು ಇವನನುಕಂಪಂ
ಸತಿಯಳಲಿಗೆ ಎದೆಯೊಳು ಪ್ರಕಂಪಂ"
"ಎಂತಾಯಿತೊ ಈ ದುಷ್ಕೃತಿ
ಎಂತಹುದೋ ಮಮನಿಷ್ಕೃತಿ
ಎಂದಳಲುವ ಕಾಂತೆಯಳಲ
ಹೊಳಲಿಗಾಯ್ತು ಮುನಿಯ ಮತಿ!" (ಪುಟ-೭೯)

ಇನ್ನೂ ಗೌತಮನ ಹೃದಯದಲ್ಲಿ ದ್ವಂದ್ವಯುದ್ಧ ಮುಗಿದಿಲ್ಲ. ಸತಿಯೊಡನಿದ್ದ ತನ್ನ ಗತಜೀವನದ ಸವಿಗಳನ್ನು ಮೆಲುಕುತ್ತಾ ಮರುಕ್ಷಣದಲ್ಲೇ 'ತಾನಾರು ಇವಳಾರು'—ಎಂದು ಆತ್ಮದ ಚಿಂತೆಗೆ ತೊಡಗುತ್ತಾನೆ. ಸೃಷ್ಟಿಯ ತತ್ವ ಅವನಿಗಿನ್ನೂ ಪೂರ್ಣವಾಗಿ ತಿಳಿದಿಲ್ಲ. ಅದಕ್ಕಾಗಿಯೇ ಹಲಕಾಲದ ನಂತರ ಒಂದು ದರ್ಶನ ಪ್ರಾಪ್ತವಾಯಿತು. ಸೃಷ್ಟಿ ತತ್ವದ ಧ್ವನಿಯು ಗೌತಮನನ್ನು ಎಚ್ಚರಗೊಳಿಸಿತು. ಆ ಸೃಷ್ಟಿ ತತ್ವವೇನು?

"ಪ್ರೇಮಶೃತಿ ಜೀವಸ್ವರಮೇಳನದಿಂ ಶಿವಗೀತಂ
ನಡೆವುದಲಾ ನಿರಂತರಂ ವಿಧಿ ಚಿರ ಹರ್ಷೋದ್ಭೂತಂ" (ಪುಟ-೮೧)

ಇದೇ ಸೃಷ್ಟಿಯ ತತ್ತ್ವ. ತನ್ನದು – ತಾನು ಎಂಬುದು ಹರಿಯಬೇಕಾದರೆ ಇದು ಅವಶ್ಯಕ. ಆದರೆ ಇದನ್ನು ಕಂಡು ಗೌತಮನು ಬೆಚ್ಚಿಬೀಳುತ್ತಾನೆ. ಅನಾಸಕ್ತನೂ ವೀತರಾಗನೂ ಆದ ತಾನು ಮತ್ತೆ ಭವಿಯಾಗಿ ಬಾಳಬೇಕೇ?

ಅರುಣ ಕಾಲದ ಹೊಂಬೆಳಕಿನ ಸುಂದರ ಸುಪ್ರಭಾತದಲ್ಲಿ ಪ್ರಕೃತಿಯು ಸೊಬಗನ್ನೀಂಟುತ್ತಾ, ತನ್ನನ್ನು ಎಚ್ಚರಿಸಿದ ಆ ನವಸೃಷ್ಟಿಯನ್ನು ತುಲನೆ ಮಾಡತೊಡಗುತ್ತಾನೆ. ನದಿ, ನಿರ್ಝರ, ಪಕ್ಷಿಗಳ ಕಲರವ, ಸಸ್ಯಗಳ ಮರ್ಮರ–ಎಲ್ಲದರಲ್ಲೂ ಅದನ್ನು ಕಾಣುತ್ತಾ ದಾರ್ಶನಿಕನಂತೆ ಬೆರಗುಗೊಳ್ಳುತ್ತಾನೆ—

"ತನಗೆ ತಾನೆ ಸಾಕೆನ್ನುವ ಎನ್ನೊಳಿದ್ದ ಎಲೆ ತರುವೇ,
ಕೆಂಪಳಿರಿನ ಸಿಂಗರವಾಂತಾವ ಬಾಳ ನೀನೆರೆವೆ?"

"ಇಂದುವರೆಗು ಸೃಷ್ಟಿಯಿತ್ತು ಆತ್ಮವಿಶ್ರಾಂತಿಯೊಳು
ತನ್ನಷ್ಟಕೆ ತಾನು ಪೂರ್ಣನೆಂಬ ವಿಭ್ರಾಂತಿಯೊಳು!" (ಪುಟ–೮೫)

ಪೂರ್ಣತೆಯೆಲ್ಲಿ? ಬಾಳುವೆಯ ಕಲ್ಯಾಣವೆಲ್ಲಿ? ಇದನ್ನು ತಿಳುಹಿಸಲು ಮನ್ಮಥನಿಗೆ ಇದಕ್ಕಿಂತಲೂ ಉತ್ತಮ ಸಮಯ ದೊರಕಲಾರದು. ರಾಗ–ತ್ಯಾಗಗಳನ್ನು ಬದ್ಧವೈರಿಗಳೆಂದು ಭಾವಿಸಿದ್ದ ಗೌತಮನಿಗೆ ಬಾಳುವೆಯಲ್ಲಿ ಇವುಗಳ ಸ್ಥಾನವೇನೆಂಬುದನ್ನು ಮನವಮುಟ್ಟುವಂತೆ ವಿವರಿಸುತ್ತಾನೆ–

ಪ್ರೇಮಶ್ರುತಿ ರತಿ ವಿರತಿಯೆ ತಾನಂ
ವ್ಯಷ್ಟಿ ಸಮಷ್ಟಿ ಸ್ವರ ಸೃಷ್ಟಿಯೆಗಾನಂ
ರಾಗದ ಹಂಬಲವೂ ಇರವೇ–ಅಂತೆಯೆ
ತ್ಯಾಗದ ಹಂಬಲವೂ ಇರವೇ.
ರಾಗದಿ ತುಸನಡೆ ತ್ಯಾಗದಿ ತುಸನಡೆ (ಪುಟ–೮೭)

ತನಗೆ ಭವದ ಹಂಗಿಲ್ಲ; ತಾನು ಕಾಮಪ್ರೇಮಗಳೆರಡನ್ನೂ ಕಳೆದಿದ್ದೇನೆ–ಎಂದ ಗೌತಮನ ವಾದವನ್ನು ಮನ್ಮಥನು ಖಂಡಿಸುತ್ತಾನೆ—

"ಜೀವನಧರ್ಮವೆ ಪ್ರೇಮವಪ್ಪೊಡೆ
ಅದನುಳಿದೆಲ್ಲಿದೆ ನಿನ್ನಿರವಿಗೆ ಎಡೆ?"

"ಬೀಜದೆ ಹುದುಗಿಹ ಮರದಾಸೆಯೊಲು,
ಹರಿಯುವ ನೀರಿನ ಕಡಲಾಸೆಯೊಲು,
ಎಲ್ಲ ಬಾಳೊಳೂ ಹುದುಗಿದೆ ಪ್ರೇಮ!" (ಪುಟ–೮೮)

'ನೀನು ವಿಶ್ವಾತ್ಮವನ್ನರಿತ ಜ್ಞಾನಿಯಾಗಿರುವೆಯಾದರೆ ಸಕ್ತಿ ಜಿಹಾಸೆಗಳ ಎಲ್ಲೆಯನ್ನು ಪ್ರೇಮದ ಸಾಧನೆಯಿಂದ ಒತ್ತು' ಎನ್ನುತ್ತಾನೆ ಮನ್ಮಥ. ಈ ಭಾಗವು ಗೀತರೂಪಕದಲ್ಲಿ ರಮ್ಯವಾಗಿ ಮೂಡಿ ಬಂದಿದೆ. ಯಾವುದೋ ಅವ್ಯಕ್ತದ ಮಡಿಲಿನಲ್ಲಿ ಅಪಾರ ಸೌಖ್ಯವನ್ನನುಭವಿಸುತ್ತಾ ತನ್ನ ಸುರಿತು ಸೃಷ್ಟಿಯಲ್ಲಿ ಏಕಾಕಾರವಾಗಿರುವ ತತ್ತ್ವವನ್ನು ಗೌತಮನು ಸಂದರ್ಶಿಸುತ್ತಿರಬಹುದೆನ್ನುವಂತೆ ಇಲ್ಲಿ ಭಾಸವಾಗುತ್ತದೆ.

ಈಗ ಗೌತಮನು ಸಿದ್ಧನಾಗಿದ್ದಾನೆ; ಪ್ರಬುದ್ಧನಾಗಿದ್ದಾನೆ; ಜಿತಕಾಮನೂ, ಜಿತಮನ್ಯುವೂ ಆಗಿದ್ದಾನೆ—

"ಲೋಕಕರ್ತನ ದಿವ್ಯ ಲೀಲಾ ವಿಭೂತಿಯೊಳು
ಕಾಶಲದಿ ಹೊಂದಿ ನಡೆವರಿಗಾಗಲಿ
ನಲ್ಮೆಯೊಂದನೆ ಕಾಂಬ ಕುಶಲದೃಷ್ಟಿ
ನೋವು ನಲವೆನ್ನದಾ ಪೂರ್ಣತುಷ್ಟಿ!" (ಪುಟ-೯೧)

ಗೌತನುನು ಆಶ್ರಮಕ್ಕೆ ಹಿಂತಿರುಗುವುದಕ್ಕೂ, ಲೋಕಶರಣ್ಯರಾದ ರಾಮಲಕ್ಷ್ಮಣಕೌಶಿಕರ ಮುಂದೆ ಅಹಲ್ಯೆಯು ನಿಂತಿರುವುದಕ್ಕೂ ಸರಿಹೋಗುತ್ತದೆ. ಅಳಲನ್ನು ತೋಡಿಕೊಂಡು ಕ್ಷಮೆಯನ್ನು ಬೇಡುವ ಸತಿಯನ್ನು ಕುರಿತು—

"ಕ್ಷಮಿಸುವರಾರ್? ಆರ್ ಕ್ಷಮೆಗೆ? ದುಗುಡವ ಬಿಡು ಕಾಂತೆ,
ಭವಿತವ್ಯತೆಗೇಕೀವ್ಯಥೆ, ಪರಿತಾಪಶ್ರಾಂತೆ! (ಪುಟ-೧೧೧)

—ಎಂದು ಪ್ರವೇಶಿಸುವ ಗೌತಮನ ಸಾತ್ವಿಕ ಪ್ರವೃತ್ತಿ ರೂಪಕದ ಉತ್ತರಾಂಕದ ನಾಲ್ಕನೆಯ ದೃಶ್ಯದಲ್ಲಿ ಕಂಡುಬರುತ್ತದೆ. "ತನ್ನರಿವನು ತಾ ಪಡೆಯುವ ಚೇತನಕೀ ಕ್ರಾಂತಿ ಸಾಜಮೆ ಸರಿ"—ಎಂಬ ಗೌತಮನ ಮಾತು ಸಂದರ್ಭೋಚಿತವಾಯಿತೇನೋ! ಒಂದೆಡೆ ಅನುಭವಿಯಾದ ವಿಶ್ವಾಮಿತ್ರನು ಮಿತ್ರನ ಶ್ರೇಯಸ್ಸಿಗಾಗಿಯೇ ರಾಮಲಕ್ಷ್ಮಣರನ್ನು ಕರೆತಂದಿದ್ದಾನೆ; ಮತ್ತೊಂದೆಡೆ ಆಶ್ರಮವಾಸಿಗಳು ಈ ಸಂದರ್ಭಕ್ಕಾಗಿ ಹಾತೊರೆಯುತ್ತಿದ್ದಾರೆ; ಮತ್ತೊಂದೆಡೆ ಸುರಲೋಕ ವಾಸಿಗಳು ತವಕಗೊಂಡು ಪ್ರತೀಕ್ಷಿಸುತ್ತಿದ್ದಾರೆ; ಅಹಲ್ಯೆಯೂ ಸಹ ನವಾವತಾರವನ್ನು ತಳೆದಿದ್ದಾಳೆ. ಗೌತಮನು ಅಹಲ್ಯೆಯನ್ನು ಪರಿಗ್ರಹಿಸುವಷ್ಟು ಮಾತ್ರದಿಂದಲೇ ಎಲ್ಲರಿಗೂ ತೃಪ್ತಿಯಾಗಲಾರದು. ಸಹಸ್ರ ವರ್ಷಗಳ ನೋವಿನಿಂದ ತೊಳಲಿ ಬಳಲಿ ಪುಟಗೊಂಡ ಅಪರಂಜಿಯಾಗಿರುವ ಅಹಲ್ಯೆಯ ದೀರ್ಘ ತಪ್ಪಿಗೆ ತಕ್ಕ ಸಮಾಧಾನವನ್ನು ನೀಡಿ ಸಂತೈಸುವ ಭಾರ ಈಗ ಗೌತಮನದು. ಆ ಸಂತಸ ವನ್ನು ಗೌತಮನು ಈ ಎರಡೇ ವಾಕ್ಯಗಳಿಂದ ನೀಡುವುದು ಎಲ್ಲರಿಗೂ 'ಸೈ' ಎನ್ನಿಸುತ್ತದೆ.

ಪಾತ್ರದ ದೃಷ್ಟಿಯಿಂದ ಗೌತಮನು ಮಾನವ ಮಾತ್ರರಿಗೆ ಒಂದು ಸನಾಲು ಪತಿತಳೆನಿಸಿದ್ದ ಅಹಲ್ಯೆಯನ್ನು ಮತ್ತೆ ಪರಿಗ್ರಹಿಸುವವನು ಸಿದ್ಧನಾದ ಗೌತಮ. ಕಿರಿನೋಟದಿಂದ ಹೇಳುವು ದಾದರೆ ಇಂತಹ ಸಂದರ್ಭದಲ್ಲಿ ಅಭಿಮಾನಿಗಳಾದ ಮಾನವ ಮಾತ್ರರು ಏನು ಮಾಡುತ್ತಿದ್ದರೆಂಬ ಪ್ರಶ್ನೆಗೆ ಚಿತ್ರ ವಿಚಿತ್ರವಾದ ಉತ್ತರಗಳನ್ನು ಊಹಿಸಬೇಕಾಗುತ್ತದೆ. ತನ್ನನ್ನೂ ಮತ್ತು ಇತರರ ಒಳಹೊರಗುಗಳನ್ನೂ ತಿಳಿಸುವ ಶಕ್ತಿಯುಳ್ಳ ಗೌತಮನಂಥವರು ಮಾತ್ರ ಇಂತಹ ಪವಾಡವನ್ನು ಲೋಕದಲ್ಲಿ ಸ್ಥಾಪಿಸಲು ಸಮರ್ಥರೆನ್ನಬೇಕಾಗುತ್ತದೆ.

**ಅಹಲ್ಯೆ :—**

ಅಹಲ್ಯೆಯು ಗೌತಮನ ಧರ್ಮಪತ್ನಿ. ಮಾನವ ಲೋಕಕ್ಕೆ ಸಹಜವಾದ ನೂರಾರು ಆಸೆ ಗಳನ್ನು ಹೊತ್ತು, ವನಾಂತರದಲ್ಲಿ ಮುನಿಯೊಡನೆ ತನ್ನ ಬಾಳನ್ನು ಹಸನು ಮಾಡಿಕೊಳ್ಳಲು ಬಯ ಸಿದ ತರುಣಿ ಈಕೆ. ಅಗ್ನಿ ಪರೀಕ್ಷೆಯಲ್ಲಿ ಉತ್ತೀರ್ಣಳಾಗಿ ರಾಮನನ್ನು ಸೇರಿದ ಸೀತೆಯಂತೆ, ಹಲವು ಕಾಲ ಪರೀಕ್ಷೆಗೀಡಾಗಿ ತಪಸ್ಸಿನಿಂದ ಪೂತಳಾಗಿ ಗೌತಮನಿಗೆ ತಕ್ಕವಳೆನಿಸಿಕೊಂಡವಳು. ಹಿಂದೆಯೇ ಸೂಚಿಸಿರುವಂತೆ ಮುನಿ ಪತ್ನಿಯಾಗಿ ಧರ್ಮಾಧರ್ಮಗಳ ಜ್ಞಾನವುಳ್ಳ ಅಹಲ್ಯೆಯು ಜೀವನ ದಲ್ಲಿ ಧರ್ಮಪಥದಿಂದ ಭ್ರಷ್ಟಳಾಗಿ ಗೌತಮನ ಶಾಪಕ್ಕೆ ತುತ್ತಾದಳು. ಇದರಲ್ಲಿ ಅವಳು ಸ್ವಪ್ರಯತ್ನ ದಿಂದ ಮಾಡಿದ ಅಪರಾಧವೇನು? ತನ್ನ ಕರುಣಾಕ್ರಂದದಿಂದ ಗೌತಮ-ವಿಶ್ವಾಮಿತ್ರರಂತಹ ಮಹಾ

ವ್ಯಕ್ತಿಗಳ ಅನುಕಂಪಕ್ಕೆ ಹೇಗೆ ಅರ್ಹಳಾದಳು? ಓದುಗರ ಸಹಾನುಭೂತಿಗೆ ಅಹಲ್ಯೆಯು ಅರ್ಹಳೇ?—ಎಂಬುದೇ ಪ್ರಶ್ನೆ.

ಈ ಒಂದೆರಡು ಪ್ರಶ್ನೆಗಳ ಹಿಂದೆಯೇ ಒಂದಕ್ಕೊಂದರಂತೆ ಪ್ರಶ್ನೆಗಳ ಮಾಲೆಯೇ ಎದುರು ನಿಲ್ಲುತ್ತದೆ. ಹೊಸ ಹರೆಯದಲ್ಲಿ ಕೇವಲ ಒಂದೇ ಸಂತಾನದ ತಾಯಿಯಾದ ಅವಳು ಕೆಲವು ಕಾಲದವರೆಗೆ ದಾಂಪತ್ಯ ಸುಖದಿಂದ ವಂಚಿತಳಾಗಬೇಕಾಯಿತು. ತನ್ನ ಹೃದಯದ ಆಸೆ ಆಕಾಂಕ್ಷೆಗಳು ತಪೋಲುಬ್ಧನಾದ ತನ್ನ ನಲ್ಲನಿಗೆ ಅರ್ಥವಾಗುವಂತಿಲ್ಲ. ರಂಭೆಯು ಕಾಣಿಸಿಕೊಳ್ಳಬೇಕಾದ ಆವಶ್ಯಕತೆಗೂ ಗೌತಮನ ತಪಸ್ಸೇ ಕಾರಣ. ಇಂದ್ರನ ಹಟಕ್ಕೂ ಅವನ ತಪಸ್ಸೇ ಕಾರಣ,

ತನ್ನ ಇಚ್ಛೆಯಿಂದಲೇ ಅಹಲ್ಯೆಯು ಪರಪುರುಷನಾದ ಇಂದ್ರನ ಸಂಗವನ್ನು ಯಾಚಿಸಿದವಳಲ್ಲ. ಅಂದರೆ ಪತಿಯನ್ನು ವಂಚಿಸಿ, ತನ್ನ ಸತೀತ್ವವನ್ನು ಕಳೆದುಕೊಳ್ಳಲು ಅವಳು ಪ್ರಯತ್ನಪಟ್ಟವಳಲ್ಲ. ಅವಳ ಸೌಂದರ್ಯವೇ ಇಂದ್ರನ ಕಣ್ಣನ್ನು ಕೋರೈಸಿತು. ದೇಹಧಾರಿಯಾಗಿ ಆಸೆಗಳನ್ನು ತುಂಬಿಕೊಂಡ ಮಾನವಕಾಂತೆ ಅಹಲ್ಯೆ. ಅವಳ ಆಸೆಗಳನ್ನು ಪೂರೈಸಲು ಅಗ್ನಿ ಸಾಕ್ಷಿಯಾಗಿ ಕೈಹಿಡಿದ ಪತಿಯಿದ್ದಾನೆ. ಆದರೆ ಅವನು ತಪೋಲುಬ್ಧ, ಪ್ರೇಮಕೃಪಣ! ಬಯಕೆಯು ಆವಳನ್ನು ವಂಚಿಸಿತು. ಒಂದೆಡೆ ಪತಿಯ ಅನಾಸಕ್ತಿ; ಇಂದ್ರನ ಆಸಕ್ತಿ; ಕಾಮನ ಸತತ ಪ್ರಯತ್ನ, ಹೃದಯದ ಹಂಬಲ; ಬಯಕೆಯ ಕರೆ—ಒಂದೇ ಎರಡೇ? ತೆರೆ ತೆರೆಯಾಗಿ ಅಹಲ್ಯೆಯನ್ನು ನುಂಗಲು ಮಾಯಾ ಸೈನ್ಯವೇ ದಾಳಿ ಮಾಡಿತು. ಅಹಲ್ಯೆಯ ಹಂಬಲವು ತಪ್ಪೆ? ಗೌತಮನು ತಪೋ ಸಾಧನೆಯಲ್ಲಿ ತೊಡಗಿದುದು ತಪ್ಪೇ? ಗೌತಮನ ತಪೋಭಂಗಕ್ಕೆಂದು ಬಂದಾಗ, ತನ್ನನ್ನೇ ಪ್ರಶಂಸಿಸಿ, ಅನ್ಯಮನಸ್ಕನಾಗಿದ್ದ ತನ್ನನ್ನು ಸೆಳೆದು ಬಯಕೆಗಳನ್ನು ವ್ಯಕ್ತಪಡಿಸಿದ ಅಹಲ್ಯೆಯನ್ನು ತಣಿಸಿ, ಅವಳೊಡನೆ ತಾನೂ ಶಾಪಭಾಗಿಯಾದ ಇಂದ್ರನದು ತಪ್ಪೇ? ದಾಂಪತ್ಯ ಜೀವನದಲ್ಲಿರುತ್ತಾ ತನ್ನನ್ನು ತಾನೇ ವಂಚಿಸಿಕೊಂಡು ಸೃಷ್ಟಿಯ ತತ್ವವನ್ನರಿಯದ ತಪೋಲುಬ್ಧನಾದ ಗೌತಮನನ್ನು ಎಚ್ಚರಿಸಿ, ಅವನನ್ನು ಕರ್ತವ್ಯಾಭಿಮುಖನನ್ನಾಗಿ ಮಾಡಲು ಪ್ರಯತ್ನಿಸಿದ ಮನ್ಮಥನದು ತಪ್ಪೇ? ಇಂತಹ ಇಕ್ಕಟ್ಟಿನಲ್ಲಿ ಗೌತಮನೇ ಹೇಳುವಂತೆ 'ವಿಧಿನಿಯಮವ ಮೀರಿದರಾರ್?' ಎಂದಷ್ಟು ಹೇಳಬೇಕಾಗುತ್ತದೆ. ಆದರೆ ಶಾಪಬದ್ಧಳಾಗಿ ಹಲವಾರು ವರ್ಷಗಳ ದೀರ್ಘಕಾಲ ಘೋರ ತಾಪದಲ್ಲಿ ಕೊರಗುತ್ತಿದ್ದ ಅಹಲ್ಯೆಯನ್ನು ರಕ್ಷಿಸಿದವರು ಇಂದ್ರನಲ್ಲ; ಗೌತಮನಲ್ಲ; ಮನ್ಮಥನೂ ಅಲ್ಲ! ಈ ಸಂದರ್ಭದಲ್ಲಿ ಆ ಸತಿಯ ಕರುಣಾಕ್ರಂದನ ಎಲ್ಲರ ಹೃದಯಗಳನ್ನೂ ಮರುಕಗೊಳಿಸುತ್ತದೆ.

ಪೂರ್ವಾಂಕದಲ್ಲಿ ರಂಭೆಯು ಇಂದ್ರನಿಗೆ ನೀಡಿದ ವಿವರಣೆಯಲ್ಲಿ ಅಹಲ್ಯೆಯ ಕರುಣಾಮೂರ್ತಿಯ ಚಿತ್ರವು ಮಾನಸದ ಜವನಿಕೆಯ ಮೇಲೆ ಮೂಡುತ್ತದೆ—

"ಹೆಣ್ಣು ಈಕೆ ನನ್ನ ನಲ್ಲ, ಕೋಪಕಾಳಲ್ಲ
ಅಂತಳಲ್ಲ, ಪಾಪ ಬಿಡಿರೆ, ಶಾಪಕೀಡಲ್ಲ!" (ಪುಟ ೯)

ತಪೋಭಂಗ ಮಾಡಬಂದ ರಂಭೆಗೆ ಗೌತಮನು ಶಾಪಕೊಡಲು ಎತ್ತಿದ ಕೈಯನ್ನು ತನ್ನ ಒಲುಮೆಯ ಹಸ್ತದಿಂದ ನಿವಾರಿಸಿದವಳು ಅಹಲ್ಯೆ. ಈ ನಿವಾರಣೆಗೆ ಕಾರಣವುಂಟು. ಮೊದಲನೆಯದು ಅಹಲ್ಯೆಯ ಹೃದಯದ ಸೌಕುಮಾರ್ಯ. ಎರಡನೆಯದಾಗಿ ಇಂದ್ರನ ಆಶ್ರಿತಳಾದ ರಂಭೆಯ ಪರಿಭವದಿಂದ ಇಂದ್ರನೊಡನೆ ಹೋರಾಡಬೇಕಾದೀತೆಂಬ ಭಯ. ಕೇವಲ ಗುಡುಗಿಗೆ ಬೆದರಿದ ಅಹಲ್ಯೆಯು ಮಾಧವಿಯೊಡನೆ—

"ತಿರೆಗಿದು ಸಲ್ಲದು, ಸ್ವರ್ಗದ ಸಂಚಿದು ;
ದಿಟ ಎದೆಗೆಟ್ಟಹೆ ನಾ ಗೆಳತಿ" (ಪುಟ ೧೭)

"ಅಮರಾವತಿಪತಿ ಕೆರಳಿದೊಡೇ ಗತಿ
ರಂಭೆಗಿಲ್ಲಾದ ಅವಮತಿಗೆ ?" (ಪುಟ ೧೮)

ಅಹಲ್ಯೆಗೆ ತನ್ನ ಪತಿಯ ತಪೋಬಲದ ನೆಚ್ಚಿಕೆಯಿಲ್ಲ. ಅವಳ ಹಂಬಲಕ್ಕೂ ಪತಿಯ ತಪಸ್ಸಿಗೂ ಸಂಬಂಧವೇ ಇಲ್ಲ. "ಈ ತಪವನು ತಾ ಕೊಳ್ಳದೆ ಎನ್ನೈಯ ಎಡೆಯೊಳಗೆ ಅವರಿದ್ದೊಡೆ ?" —ಎಂಬುದೇ ಅವಳ ಹಂಬಲ. ತಪಸ್ಸಿನ ಪ್ರಭಾವವನ್ನು ಮಾಧವಿ ವರ್ಣಿಸಿದರೂ "ಇದರಿಂದೆನಗೇನಹೇದೇ ಮುನಿಗೀ ಮಹಿಮೆ ಬರೆ?"—ಎನ್ನುತ್ತಾಳೆ. ತಪೋಬಲದಿಂದ ಇಂದ್ರನು ಇಂದ್ರಾಣಿಯನ್ನು ತೃಪ್ತಿಪಡಿಸುವುದಕ್ಕಿಂತಲೂ ಹೆಚ್ಚಾಗಿ ಪತಿಯು ತಣಿಸುವನೆಂಬ ಮಾತು ಅಹಲ್ಯೆಗೆ ಹಾಸ್ಯಕ್ಕೆ ಸಮಾನ. ಸ್ವರ್ಗಾಧಿಪನಾದ ಇಂದ್ರನ ಶಕ್ತಿಗೂ, ಭೂಮಿಯ ಮೇಲಿರುವ ಸಮುಗೂ ಸಾಟಿಯೇ—ಎಂದು ಅವಳ ವಾದ. ಪತಿಯಲ್ಲಿ ಅವಳಿಗೆ ಅಪನಂಬಿಕೆಯಿಲ್ಲ ; ಆದರೆ ಇಂದ್ರನಂತೂ ಹಿರಿಯನೇ ಸರಿ. ಆದ್ದರಿಂದಲೇ ಅವನಿಂದ ತಮಗೆ ವಿಪತ್ತು ಒದಗದಂತೆ ಇಂದ್ರನನ್ನು ಪೂಜಿಸಲು ನಿರ್ಧರಿಸುತ್ತಾಳೆ. ಈ ವೇಳೆಗಾಗಲೇ ಇಂದ್ರನು ಮರೆಯಲ್ಲಿ ನಿಂತು ಈ ಮಾತುಗಳನ್ನೆಲ್ಲಾ ಕೇಳಿದ್ದಾನೆ. ಅಹಲ್ಯೆಯ ರೂಪವೇ ಅವನ ಕಣ್ಣನ್ನು ಕೋರೈಸಿತ್ತು ; ನುಡಿಗಳಿಂದ ಮತ್ತೂ ಮತ್ತನಾಗಿದ್ದಾನೆ.

ಅಹಲ್ಯೆಯು ರಾತ್ರಿಯ ಅಂಧಕಾರದಲ್ಲಿ ಅಗ್ನಿ ಪೂಜೆಗಾಗಿ ಪತಿಯೆಡೆಗೆ ಬರುತ್ತಾಳೆ, ಆಗಲೂ ಅವಳಿಗೆ ತನ್ನ ಹಂಬಲದ ಚಿಂತೆಯೇ ! ಎಂದೆಂದಿಗೆ ಪತಿಯ ವ್ಯರ್ಥವಾದ ತಪಸ್ಸು ಕೊನೆಗೊಂಡೀತು ; ಎಂದೆಂದಿಗೆ ಪತಿಯೊಡನೆ ನಿಶ್ಶಂಕೆಯಿಂದ ನಲ್ಮೆಯ ಸುಗ್ಗಿ ಸವಿದೇನು—ಎಂಬ ಯೋಚನೆಯೇ ಅವಳಿಗೆ. ಭಯಂಕರ ರಾತ್ರಿಯಲ್ಲಿ ಪತಿಯ ಬಳಿ ಎಚ್ಚತ್ತಿರುವ ವಟುವನ್ನು ಕಂಡು ಅವಳಿಗೆ ಆಶ್ಚರ್ಯ ! 'ರಕ್ಷೆಯದಾವುದು ನಿಮ್ಮನು ಕಾವುದು'—ಎಂದು ಪ್ರಶ್ನಿಸುತ್ತಾಳೆ. ವಟು-ಮೈತ್ರೇಯರು ತಪೋಬಲದ ಬಗ್ಗೆ ಮಾಡಿದ ವ್ಯಾಖ್ಯಾನ ಅವಳ ಪಾಲಿಗೆ ಪೊಳ್ಳು ವಾದ—
"ಪತಿಯೀ ಮನವನು ಮರಳಿಸುವನುವನು ಕಾಣಿರಿ ಅಣ್ಣಾ ನೀವಿಂದು"—ಎಂದು ತನ್ನ ಮುಗ್ಧತೆಯನ್ನು ವ್ಯಕ್ತಪಡಿಸುತ್ತಾಳೆ. ಗೌತಮನ ಮುಂದೆ ಅವಳು ಹಾಡುವ ವಿರಹಗೀತೆಯಂತೂ ಅವಳ ಹೃದಯದ ನೂರೆಂಟು ಆಸೆಗಳನ್ನೂ ಬಿಚ್ಚಿಡುವ ವೇದನೆಯ ರಾಶಿ—

"ಎನಿತು ದೂರಕೆ ಸರಿದು ನಿಂತಿಹೆಯೋ ನನ್ನ ಮನದನ್ನ,
ಹೇ ಸತ್ವ ಸಂಪನ್ನ !
. . . ಎಂಥ ಮರವೆಯೊ ಇನಿಯ ಇನಿತೊಂದು ಹಂಬಲನು ಬಿಟ್ಟೆ,
ನನ್ನ ಒಂಟಿಯೊಳಗಿಟ್ಟೆ" (ಪುಟ ೩೮)

ನಿರೀಕ್ಷಣೆಯಲ್ಲಿದ್ದ ಕಾಮನಿಗೆ ಗೌತಮನ ಆಳವನ್ನಳೆಯಲು ಇದಕ್ಕಿಂತಲೂ ಉತ್ತಮವಾದ ಸಮಯ ದೊರಕುತ್ತಿರಲಿಲ್ಲವೇನೋ ! ಹರಿಹರನ ಗಿರಿಜಾ ಕಲ್ಯಾಣದಲ್ಲಿನ ಕುಮಾರಿ ಹೈಮವತಿಯು ಶಿವಾರ್ಚನೆ ಮಾಡುತ್ತಾ ತನ್ನ ರಾಗವನ್ನು ತೋಡಿಕೊಂಡ ಸಂದರ್ಭ ಅವನಿಗೆ ಅನುಕೂಲವಾದಂತೆ ಇಲ್ಲಿಯೂ ಅನುಕೂಲವಾಯಿತು. ಅಂಬನ್ನು ಹೂಡಿಯೇ ಬಿಟ್ಟನು. ಆದರೆ ಆ ಅಂಬು ಗೌತಮನನ್ನು ಮಾತ್ರವಲ್ಲ ; ಅವನ ಪಾರ್ಶ್ವದಲ್ಲಿದ್ದ ಇಂದ್ರನನ್ನೂ ಸೋಂಕಿತು.

ಗೌತಮನ ಈ ನೋಂಪಿಯು ಕೊನೆಗಾಣುವುದೆಂದೋ ಅಹಲ್ಯೆಯ ಬಗೆಗೂ ನಿಲುಕದ ವಿಷಯ. ಸುರರು ಬೇರೆ ಆಪತ್ತುಗಳನ್ನೊಡ್ಡಿ ತನ್ನ ಆಸೆಗಳಿಗೆ ತಣ್ಣೀರೆರೆಯಲು ಪ್ರಯತ್ನಿಸುತ್ತಿ

ದ್ದಾರೆ. ಇಂದ್ರನೇ ಹಗೆ ಬಗೆದವೋಲೆ ಎಡುಸುಂಟೇ? ಪತಿಗೆ ಎದುರಿಸುವ ಶಕ್ತಿಯಿದೆಯೆಂದು ಅವಳು ಊಹಿಸಲಾರಳು. ಆ ದಿನ ರಂಭೆಯ ಪರಿಭವವಾಗಿದೆ. ಇರುಳಾದರೋ ಘೋರವಾದ ಮುಗಿಲುಗಳಿಂದ ಕೂಡಿ ಭೀಕರಾಂಧಕಾರವನ್ನೆಸಗಿದೆ. ಅಹಲ್ಯೆಯ ಬಾಳಿನಲ್ಲೂ ಕತ್ತಲೆಯಾವರಿಸಿದೆ. ಆ ಕತ್ತಲೆಯಲ್ಲಿ ಬಯಕೆಯ ಭೂತ ತನ್ನನ್ನು ಕಾಡುತ್ತಿದೆ. ಹಸುಳೆಯ ಪ್ರಶ್ನೆಗಳಿಗೆ ಉತ್ತರ ನೀಡುತ್ತಾ ತನ್ನ ವೇದನೆ ಮತ್ತೂ ಹೆಚ್ಚುತ್ತಿದೆ. ಅವಳ ಹೃದಯದಲ್ಲಿ ಭಯವು ಮನೆಮಾಡಿದೆ.

ಇದ್ದಕ್ಕಿದ್ದಂತೆ ಮುಗಿಲು ಹರಿದು ಚಂದಿರ ಬೆಳಗಿದನು; ಚುಕ್ಕಿಗಳು ಥಳಥಳಿಸಿದುವು; ಮಲಯದ ಶೀತಲ ಮಂದಾನಿಲ ಹರಿಯತೊಡಗಿತು. ಇತ್ತ ಎಚ್ಚೆತ್ತ ಗೌತಮನು ಆಶ್ರಮಕ್ಕೆ ಹೊರಡಲು ಸಿದ್ಧನಾಗುತ್ತಿದ್ದಾನೆ. ಮೈತ್ರೇಯನಿಗಾದರೋ "ನಮ್ಮ ತಪವನು ಕೆಡಿಸೆ ಸುರರು ಹೂಡಿದ ಹೂಟ"—ಎನಿಸಿದೆ. ಇಲ್ಲಿ ಅಹಲ್ಯೆಯು ತನ್ನ ಹಸುಳೆಗೆ ಅದೇ ಸುರರ ಕಥೆಯನ್ನು ಹೇಳತೊಡಗಿದ್ದಾಳೆ—

"ದಿವವೆಂಬರಾನಾಡ;...ಇಂದ್ರನೆಂಬರಸು
ವೈಭವದೊಳಾಳುತಿಹನಿಂದ್ರಾಣಿವೆರಸು
ಅವಳ ಪುಣ್ಯವೆ ಪುಣ್ಯ....ಮೂಜಗದ ಕನಸು
ಆಯಿತಾ ಭಾಗ್ಯವತಿಗಿರವಿನೊಳೆ ನನಸು।" (ಪುಟ ೪೯)

ಈ ವರ್ಣನೆ ಅಹಲ್ಯೆಯ ಸುಪ್ತನಾದ ಬಯಕೆಯ ಚಿತ್ರ. ಅವಳ ವಿರಹವೇದನೆಯನ್ನು ವ್ಯಕ್ತಪಡಿಸಲು ಇದೇ ಸಾಕು.

ಇಳೆಯು ದಿವಕೆ ಜೋಡಿಯಾದಂತೆ ತಂಗಾಳಿ ಬೀಸಿತು! ದೂರದಲ್ಲಿ "ತೀರ ನಡೆವ ಸುರನಂತೆ ಹೊಸ ತೆರದಿ" ಬರುವ ಗೌತಮನನ್ನು ಕಂಡಳು. ತನ್ನ ಬಯಕೆಯನ್ನೀಡೇರಿಸಲು ಬಂದ ಪತಿಯ ಬಗ್ಗೆ ಅಹಲ್ಯೆಯ ಔತ್ಸುಕ್ಯ ಅಷ್ಟಿಷ್ಟಲ್ಲ—

"ಸ್ವಾಗತ ನನ್ನಿನಿಯ, ನೋಂಪಿ ಕೊನೆಗಂಡಿತೇ,
ಮನೆಯಾಸೆ ಮರಳಿತೇ, ನನ್ನಾಸೆ ಫಲಿಸಿತೇನು?" (ಪುಟ ೫೦)

ಅವನಾದರೋ 'ಕಲಕಂಠಿ, ಪ್ರಿಯೆ, ಪೂರ್ಣೇಂದು ವದನೆ' ಎಂದು ಕರೆಯುತ್ತಾನೆ. ಆದರೆ ಅವನು ಗೌತಮನಲ್ಲ! 'ಸತಿ ಮೊದಲೆ ಬೆಚ್ಚದೊಲು ಪತಿರೂಪವಾಂತು', ಭಯ-ಧರ್ಮ-ನಾಚಿಕೆಗಳನ್ನು ತೊರೆದು, ಛದ್ಮವೇಷಧಾರಿಯಾಗಿ ಬಂದಿರುವ ಇಂದ್ರ!

'ಊಹು, ಅಲ್ಲ, ಅಣ್ಣಯ್ಯ . . . ಎಲೆ ದುರುಳ ನೀನಾರು? ಈ ಕಪಟವೇಕೆ?'—ಎನ್ನುತ್ತಾಳೆ ಹಿಂಜರಿದ ಅಹಲ್ಯೆ! ಇಂದ್ರನು ತನ್ನ ಪರಿಚಯನೀಡಿ, ಅವಳ ಮರ್ಮಹೃದಯವನ್ನು ಚುಚ್ಚಿ ನುಡಿದಾಗ ಅಹಲ್ಯೆಗೆ ಮತ್ತೂ ಸಂಕಟ "ನನ್ನ ಮರ್ಮವ ಹಿಡಿದು ಇಂತು ನುಡಿಯ ಬೇಡೈ' ಎಂದು ಹೇಳುತ್ತಾ, ಹಿಂತಿರುಗುವಂತೆ ಪ್ರಾರ್ಥಿಸುತ್ತಾಳೆ. ಕಾರ್ಯಸಾಧಕನಾಗಿ ಬಂದ ಇಂದ್ರನು ಹಿಮ್ಮೆಟ್ಟುವುದಿಲ್ಲ. ಸ್ವರ್ಗದ, ಮಂದಾರದ, ನಂದನದ ಆಸೆಗಳನ್ನೆಲ್ಲಾ ಅವಳ ಮುಂದೆ ತೂರಿ ಉರಿಯುವ ಅಗ್ನಿಗೆ ಆಜ್ಯ ಹೊಯ್ಯುತ್ತಾನೆ. 'ಮಂಗವು ಮಾಣಿಕ್ಯವನ್ನು ಬಿಸುಡುವಂತೆ ಬಂದ ಭಾಗ್ಯವನ್ನು ಹೊರದೂಡುವುದು ಸರಿಯಲ್ಲ; ಭೂಮಿಯ ಕಾಂತೆಯರು ಅಮರರಿಗೆ ಒಲಿದರೆ ಸತೀತ್ವಕ್ಕೆ ಕುಂದುಂಟಾಗುವುದಿಲ್ಲ'—ಎನ್ನುತ್ತಾನೆ ಇಂದ್ರ! ಬಯಕೆಯ ಸುಳಿಗೆ ಸಿಕ್ಕಿ, ವಿವೇಕ ಸೋತ ಅಹಲ್ಯೆಗೆ ಇಂದ್ರನು ಬೀರಿದ ಈ ಜಾಲ ಸಫಲವಾಗುವುದು ಅನಿವಾರ್ಯವಾಯಿತು. ಆದರೂ

ಅಹಲ್ಯೆಯು ಇಂದ್ರನನ್ನು ಹೊರದೂಡುತ್ತಾಳೆ. ಅವಳು ಮುಗ್ಧ ಕಾಂತೆಯಾದರೂ ಧರ್ಮಾಧರ್ಮಗಳ ಅರಿವಿದೆ. ಆದರೆ ಮರುಕ್ಷಣದಲ್ಲೇ ಹೃದಯದಲ್ಲಿ ಆಂದೋಳನ ಪ್ರಾರಂಭವಾಗುತ್ತದೆ. ಬಯಕೆಯ ಜ್ವಾಲಾಮುಖಿ ಸಿಡಿಯುತ್ತದೆ. ಈ ಹೊಡೆತಕ್ಕೆ ವಿವೇಚನೆ ಉರುಳಿಬೀಳುತ್ತದೆ. ಕೊನೆಗೆ ಸೋತ ಅಹಲ್ಯೆ—

“ ಬಾ ಸೊಗವೆ, ಬಾ ರಾಗವೆ, ಬಾ ಸಫಲಗೊಳ್ಳು . . .
. . . ನಿನ್ನವಳಾಂ, ಇನ್ನಿಲ್ಲಾಂ, ಇಂದಳಿದಳಹಲ್ಯೆ
ಬಾಳ್ ಮಿಗುವೀ ಅನುರಾಗಕೆ ಇಗೊ ಮಿಾಸಲಹಲ್ಯೆ ” (ಪುಟ ೫೭)

—ಎಂದು ಒಪ್ಪಿಸಿಬಿಡುತ್ತಾಳೆ.

ಆದದ್ದಾಯಿತು. ತನ್ನನ್ನೇ ನುಂಗಲಿರುವ ಬಯಕೆಗೆ ತನ್ನನ್ನೇ ಅರ್ಪಿಸಿಕೊಂಡಳು. ಇಂದ್ರನೂ ಪಾಲ್ಗೊಂಡಿದ್ದಾಯಿತು—

“ ಧನ್ಯಳೆನಿಸಿದೆ ದೇವ, ಒಲುಮೆ ವರವಿತ್ತು
ಪೋ ಇಂದ್ರ ಸೊಗ ಬೆಳೆಸಲಹುದದುವೆ ಕುತ್ತು ! ” (ಪುಟ ೬೧)

“ ಪತಿಯರಿತು ಮುನಿ ಮುನಿವ ಮುನ್ನ, ಪೋ ಇಂದ್ರ !
ಆಲಿಸಿಗೊ ! ಪೋ ನೀರ ! ” (ಪುಟ ೬೨)

ಇಲ್ಲಿಯ ಮೂಡುವ ಧ್ವನಿಯೆಂತಹುದು ? ಒಲುಮೆಯೊಂದು ವರ, ಅದರಿಂದ ಧನ್ಯತೆ (!) ಇದು ಚೆಲುವೆಯ ಮುಗ್ಧತೆಯೇ ಅಥವಾ ಕುರುಡು ಮೋಹವೇ? ಪತಿಯ ಕಣ್ಣಿಗೆ ಬೀಳದಂತೆ ಹೊರಟುಹೋಗುವಂತೆ ಅಹಲ್ಯೆ ಪ್ರಾರ್ಥಿಸಿದಳು. ಆದರೆ ಧನ್ಯಳ ಕಣ್ಣಿಗೆ ಬೀಳದಂತಾಗುವುದು ಎಂತು ?—ಆ ದೃಷ್ಟಿಯಲ್ಲಂತೂ ಅವಳು ಪತಿತೆಯೇ ಸರಿ; ಆದರೂ ಗೌತಮನ ಕೋಪವಂತೂ ಅವಳ ಪಾಲಿಗೆ ಮತ್ತೂ ಭಯಂಕರ. ಪ್ರಾಯಶಃ ತಾನು ಮಾಡಿದ್ದು ತಪ್ಪೆಂದು ಅವಳು ಇಂದ್ರನ ಎದುರಿನಲ್ಲಿ ಮತ್ತೆ ಹೇಳಿದಂತಿಲ್ಲ. ಎಡಗಣ್ಣು ಮಾಡಿದ ತಪ್ಪನ್ನು ಬಲಗಣ್ಣಿನಿಂದ ಮುಚ್ಚಿಡುವಂತೆ, ಎಡಕೆನ್ನೆಯ ಚುಂಬನವು ಬಲಗೆನ್ನೆಗೆ ಅರಿವಾಗದಂತೆ ಅಹಲ್ಯೆಯು ಭಾವಿಸಿರಬಹುದು ! ಪತಿಯ ಕಣ್ಣಿಗೆ ಪರದೆಯೆಳೆದು, ಪರಪುರುಷನನ್ನು ತಕ್ಕೈಸಿದ ಸತಿಯು, ಸಂತೋಷದಿಂದಲೇ—ಆದರೆ ಆ ಕಾಮಿಯನ್ನು ಕಳುಹಿಸಿ ಮತ್ತೆ ಪರದೆಯನ್ನು ತೆರೆಯಲು ಪ್ರಯತ್ನಿಸಿದಳೇನೋ !

ಪೂರ್ವಾಂಕದ ಏಳನೆಯ ದೃಶ್ಯದಲ್ಲಿ ಮರೆಯಾಗುವ ಅಹಲ್ಯೆಯನ್ನು ಮತ್ತೆ ಕಾಣುವುದು ಉತ್ತರಾಂಕದ ನಾಲ್ಕನೆಯ ದೃಶ್ಯದಲ್ಲಿ !

ಪರ್ಣಶಾಲೆಯೂ ಜೀರ್ಣವಾಗಿದೆ, ಮತ್ತೊಂದು ಯುಗವೇ ಪ್ರಾರಂಭವಾಗಿವೆಯೆನ್ನುವಷ್ಟು ಕಾಲ ಕಳೆದಿದೆ. ಆದರೆ ಆ ದೀರ್ಘ ಕಾಲದಲ್ಲಿ ಅಹಲ್ಯೆ ಮಾಡಿದ ತಪಸ್ಸು ಎಂತಹುದು ; ಅವಳಿಗಾಗಿ ಮರುಗುವ ಲೋಕಗಳೆಂತಹುವು ?—ಎಂಬುದನ್ನು ಮಾತ್ರ ನಾವು ಅರೆಕ್ಷಣವೂ ಮರೆಯದಂತೆ ಅಹಲ್ಯೆಯ ಕ್ರಂದನ ಹೃದಯದಲ್ಲಿ ಮೊಳಗುತ್ತಿರುತ್ತದೆ.

ರಾಗಕ್ಕೆ ಮನಸೋತು ಕಾಮದ ಜ್ವಾಲೆಗೆ ಸಿಕ್ಕಿದ ಅಹಲ್ಯೆಯ ಬಗ್ಗೆ ಗೌತಮನಿಗೂ ಕರುಣೆ ಮೂಡುತ್ತದೆ—

‘ ಮರುಗುವೆ ನಾನೀ ಹೆಣ್ಣಿಗೆ ! ’
‘ ಒಲದಳು ದೇವತೆಗೆ ರಾಗ ಭ್ರಾಂತಿಯೊಳು,
ಅಳಿದಳು ನನ್ನಯ ಮೂಢತೆಗೆ! ’

ಹೌದು, ಪತಿಯಾಗಿ ತನ್ನ ಕರ್ತವ್ಯವನ್ನು ನಿರ್ವಹಿಸಿದ ಗೌತಮನು ತಪಸ್ಸಿನಿಂದ ಸಾಧಿಸಿದ್ದೇನು? ಸನಿಹದಲ್ಲಿದ್ದೂ ಅವಳ ಮನವನ್ನು ಅರಿಯಲಾರದೆ ಹೋದನು. ಸ್ತ್ರೀಯ ಬಾಳಿಗೆ ಅಸ್ವಾತಂತ್ರ್ಯವನ್ನು ಸ್ಥಾಪಿಸಿದ ಗೌತಮನು 'ಅಹಲ್ಯೆ ತನ್ನವಳು, ತನಗಾಗಿ ಮಾತ್ರ ಅವಳ ಬಾಳು' ಎಂದು ಅಪ್ರಬುದ್ಧನಾಗಿ ಶಪಿಸಿದ್ದಕ್ಕಾಗಿ ಏನೆನ್ನಬೇಕು? ಸ್ತ್ರೀಗೂ ಒಂದು ವ್ಯಕ್ತಿತ್ವವಿದೆ, ಅವಳಿಗೂ ಆಸೆ ಆಕಾಂಕ್ಷೆಗಳಿವೆ. ಅವನ್ನು ಪಡೆಯಲು ಧರ್ಮಪಥದಲ್ಲಿ ತನ್ನ ಬಾಳಿಗೆ ಹೆಜ್ಜೆಗೂಡಿಸಿ ಬಂದ ಬಾಲೆ ಅವಳು—ಎಂಬುದನ್ನು ಅವನು ಆಗ ಯೋಚಿಸಲಿಲ್ಲ. ಅವನು ಸಂಪೂರ್ಣ ವಿರಕ್ತನೂ ಅಲ್ಲ; ಪತ್ನಿಯ ಅದೃಶ್ಯದ ನಂತರ ಅವನಿಗೆ ಬಾಳೇ ಬೇಸರವೆನಿಸುತ್ತದೆ.

ಸ್ವರ್ಗದಲ್ಲಿ ಸುಖವಿಲ್ಲ; ಆನಂದವಿಲ್ಲ. ನಂದನವೂ ಸಹ ಕಳೆಗುಂದಿದೆ. ತನ್ನ ತಪ್ಪಿಗೆ ಹೆಜ್ಜೆಗೂಡಿಸಿದ ಅಹಲ್ಯೆಯ ಬಗ್ಗೆ ಇಂದ್ರನಿಗೂ ಮರುಕ ಹುಟ್ಟಿದೆ. ಪ್ರೇಮ ಸುಪ್ತವಾದ ಜಗದಲ್ಲಿ ನೋದವೆಂತು? ಒಲವು ಅಳಿದ ಮೇಲೆ ಜೀವಿಗಳು ಒಬ್ಬರೊಬ್ಬರ ಒಳಗನರಿಯದೆ ವಿರಸತೆಯಲ್ಲಿ ತೊಳಲುತ್ತಿದ್ದಾರೆ. ಇದನ್ನು ಅಪ್ಸರೆಯರೇ ಹೇಳಬೇಕು!

ಗೌತಮನಿಲ್ಲದ ಆಶ್ರಮ ಶೂನ್ಯವಾಗಿ ಮಸಣದಂತಾಗಿದೆ; ಶಾಂತಿಯ ನಾಡು ಗೋಳಿನ ಬೀಡಾಗಿದೆ. ಇದನ್ನು ಮೈತ್ರೇಯಿ ಕೌಶಿಕರೇ ಹೇಳಬೇಕು. ಹಿಮವತ್ಪರ್ವತದಲ್ಲಿ ತಪೋಮಗ್ನನಾದ ಗೌತಮನಿಗೂ ಶಾಂತಿಯಿಲ್ಲ. ಅಲ್ಲಿಯೂ ಅವನ ಕಣ್ಗಳ ಮುಂದೆ ಅದೇ ಅಹಲ್ಯೆಯ ದೈನ್ಯಮೂರ್ತಿ; ಆರ್ತಳ ಮೊರೆಯ ಮೊಳಗು. "ಈ ದುಷ್ಕೃತಿಯೆಂತಾಯಿತೊ, ಮಮ ನಿಷ್ಕೃತಿ ಎಂತಹುದೋ," ಎಂದು ಅಹಲ್ಯೆಯು ಅಳುತ್ತಿರುವುದು ಅವನಿಗೆ ಕೇಳಿಬರುತ್ತಿದೆ. "ಹೆರರ ನೆಚ್ಚಿ ಬಾಳ ಬಯಕೆ ತೀರಿತೆಂದ ಮುಗುದೆ" ಯ ಬಗ್ಗೆ ಅವನ ಅನುಕಂಪ ಅಷ್ಟಿಷ್ಟಲ್ಲ. 'ಪ್ರೇಮಶ್ರುತಿ ಜೀವಸ್ವರ ಮೇಳನದಿಂ ಶಿವಗೀತಂ' ಎಂಬುದನ್ನು ಅರಿಯದೆ, 'ತನ್ನಷ್ಟಕೆ ತಾನು ಪೂರ್ಣವೆಂಬ ವಿಭ್ರಾಂತಿಯೊಳ್' ಸತಿಯನ್ನು ಶಪಿಸಿದ ತನ್ನ ಮೂರ್ಖತೆಗೆ ತನ್ನನ್ನೇ ಹಳಿದುಕೊಳ್ಳುತ್ತಾನೆ.

ಉತ್ತರಾಂಕದ ಮೂರನೆಯ ದೃಶ್ಯದಲ್ಲಿ ಅಹಲ್ಯೆಯ ಮೊರೆಯನ್ನು ಕೇಳಿ ಮನ ಕರಗುತ್ತದೆ. ಕಾಮುಕಜೀವನ ವಿಭ್ರಮಕ್ಕೆ ಸಿಕ್ಕಿ, ಹುಲು ಬಯಕೆಯ ತುಸ ರಾಗಕ್ಕೆ ತನ್ನನ್ನೇ ಮಾರಿಕೊಂಡ ಮುಗುದೆಯ ಬಾಳಿನ ಗೋಳು ಎಲ್ಲರಲ್ಲೂ ಕನಿಕರ ಮೂಡಿಸುವಂತಿದೆ. ಅವಳ ಕಣ್ಣೀರು ಶೋಕ ಸಾಗರ. ತನ್ನಿಂದಾದ ಅಪರಾಧಕ್ಕೆ ಅವಳು ಯಾರನ್ನೂ ನಿಂದಿಸಲಾರಳು. ಆಸರೆಯಿಲ್ಲದ ಅನಾಥೆಯಾಗಿ ಆ ಅಭಾಗಿನಿ ದೇವ–ಮಾನವರ ಹೃದಯಗಳನ್ನು ಕರಗಿಸುತ್ತಾಳೆ. ಕಲ್ಮರಗಳೂ ಸಹ ಅವಳ ಆರ್ತನಾದಕ್ಕೆ ಸ್ತಬ್ಧಗೊಳ್ಳಬೇಕು. ಅವಳ ಸ್ಥಿತಿಯಾದರೂ ಎಂತಹುದು? ಸತ್ತಂತಿಲ್ಲ; ಬದುಕಿದಂತಿಲ್ಲ. ಅವಳಿರುವೆಡೆ ರವಿ ಬೆಳಗದು, ಧರೆ ಧರಿಸದು, ಎಲರೂ ಸೋಂಕದು! ಹೂವೆಂದು ಬಗೆದದ್ದೇ ಅವಳ ಪಾಲಿಗೆ ಹಾವಾಯಿತು. ಕಾಪಾಡುವುದೆಂದು ಬಗೆದಿದ್ದ ಅದುವೇ ಅವಳನ್ನು ಕೊಂದಿತು

> "ಕೆಟ್ಟೆನಲಾ ಕೆಟ್ಟೆನಲಾ ಒಲವೇ ಒಲವೇ
> ಸುಟ್ಟೆಯಲಾ ಸುಟ್ಟೆಯಲಾ ನಲವೇ ನಲವೇ" (ಪುಟ ೧೦೨)
>
> "ವಿಶ್ವಕೆ ನಾನೇಕಾಕಿನಿ, ಅಯ್ಯೋ ಶಾಕಿನಿ,
> ಅಸತಿ, ಅನಾತ್ಮೆ, ಭ್ರಷ್ಟೆ ಹೇಸಿಕೆ ಎಲ್ಲರ ಮನಕು" (ಪುಟ ೧೦೩)
>
> "[illegible] ?" (ಪುಟ ೧೦೪)
>
> "ಕೊನೆ ಎಂದಿಗೆ ಈ ಶಾಪಕೆ, ಕೊನೆ ಎಂದಿಗೆ ಈ ತಾಪಕೆ,
> ಸೊಗವನೆನಲು ಇನ್ನೆಂದಿಗೆ ಗೌತಮ ಕಾಂತೆ?" (ಪುಟ ೧೦೫)

ಅಹಲ್ಯೆಯ ದುರ್ಗತಿಯನ್ನು ವರ್ಣಿಸಲು ಇದಕ್ಕಿಂತಲೂ ಬೇಕಿಲ್ಲ. ಅರಣಿಯೊಳಗಿನ ಅಗ್ನಿಯಂತೆ ಎಲ್ಲರ ಬಾಳಿನಲ್ಲೂ ಪ್ರೇಮ ಹುದುಗಿರುತ್ತದೆ. ಮಾನವರ ಪರಿಯಾದರೋ ದುರ್ಗ್ರಾಹ್ಯ. ಹೆಜ್ಜೆ ಹೆಜ್ಜೆಗೂ ಬಾಳನ್ನು ವಂಚಿಸಲು ವಿಭ್ರಮಗಳು ಹೊಂಚುತ್ತಿರುವ ಈ ಲೋಕದಲ್ಲಿಯೇ ಬಾಳು ಸಾಗಿಸಬಂದವಳು ಅಹಲ್ಯೆ. ಬಾಳಿನಲ್ಲಿ ಎಡವದೆ ಪಾರು ಕಂಡವರು ಈ ಲೋಕದಲ್ಲಿ ಅತಿ ವಿರಳ. ಆದರೆ ಅಲ್ಪ ಕ್ಷಣಗಳ ಅಪರಾಧಕ್ಕಾಗಿ ಅನಂತಕಾಲದ ಪ್ರಾಯಶ್ಚಿತ್ತವನ್ನನುಭವಿಸುತ್ತಿರುವ ಈ ಸತಿಯ ಬಗ್ಗೆ ಕರುಣೆ ಮೂಡದ ಹೃದಯವನ್ನು ವಜ್ರವೆನ್ನದೆ ಗತ್ಯಂತರವಿಲ್ಲ.

ಅಹಲ್ಯೆಯ ಉದ್ಧರಣವನ್ನು ಲೋಕಗಳು ಬಯಸುತ್ತಿವೆ. ಇಂದ್ರನು ಹಾತೊರೆಯುತ್ತಿದ್ದಾನೆ. ಗೌತಮನು ಸತ್ಯವನ್ನು ಮನಗಂಡಿದ್ದಾನೆ. ಎತ್ತಲೋ ಮಿಥಿಲೆಗೆ ಹೋಗಬೇಕಾದ ರಾಮಲಕ್ಷ್ಮಣರನ್ನು ವಿಶ್ವಾಮಿತ್ರನೂ ಕರೆತಂದಿದ್ದಾನೆ. ಕೌಶಿಕ ಮೈತ್ರೇಯರಾದರೋ 'ಪ್ರಿಯ ದರ್ಶನವಾದೀ ಜಗ ಪ್ರಿಯದರ್ಶನಕಾಗದಿಹುದೆ?' ಎಂದು ಕುತೂಹಲದಿಂದ ನಿರೀಕ್ಷಿಸುತ್ತಿದ್ದಾರೆ.

ಸ್ನಾನನಿಯಮಾದಿಗಳಿಗೂ, ತಪೋ ಹೋಮ ಯಜ್ಞಾದಿಗಳಿಗೂ ಯೋಗ್ಯಸ್ಥಾನವಾಗಿದ್ದು, ತೃಣಕಾಷ್ಠಸಮೃದ್ಧವಾಗಿದ್ದರೂ, ವಿಪ್ರನಿಷಿದ್ಧವೂ ಆಗಿರುವ ಆಶ್ರಮಪ್ರದೇಶವನ್ನು ಕಂಡು ರಾಮನಿಗೆ ಕುತೂಹಲವುಂಟಾಗುತ್ತದೆ ಆ ಪ್ರದೇಶದ ಬಡತನವೇ ರಾಮನಿಗೆ ಅಹಲ್ಯೆಯ ಮೊರೆಯನ್ನು ಸೂಚಿಸುತ್ತದೆ—

" ಈ ಹಳುವಿನ ಮರೆಗಾರೋ ಪೊರೆ ಪೊರೆ ಶರಣೆಂದು
ಮೌನದೊಳಿನ್ನೆರೆವಂತಿದೆ ನನ್ನಯ ಕಿವಿಗಿಂದು" (ಪುಟ ೧೦೧)

ರಾಮನು ಅತ್ತ ತೆರಳುತ್ತಾನೆ. (ಗೀತರೂಪಕದಲ್ಲಿ ಈ ರೀತಿಯ ಚಿತ್ರಣದ ಕೌಶಲ ಮೆಚ್ಚುವಂತಿದೆ) ಇದು ರಾಕ್ಷಸ ಮಾಯೆಯೆಂದು ಹಂಬಲಿಸುವ ಲಕ್ಷ್ಮಣನಿಗೆ ವಿಶ್ವಾಮಿತ್ರನು ಹೇಳುವ ಎರಡೇ ವಾಕ್ಯಗಳು ಆ ಮುನಿಯ ಕರಗಿದ ಹೃದಯದೊಡನೆ ಎಲ್ಲರ ಹೃದಯಗಳನ್ನೂ ಕರಗಿಸುತ್ತವೆ—

" ನನ್ನ ಸಖ ಗೌತಮನ ಪುಣ್ಯಮಯಿ ಸತಿ ಈಕೆ
ಕೃತಕರ್ಮ ನಿಷ್ಕೃತಿಗೆ ಪರಿತಪಿಪಳಿಂತು!" (ಪುಟ ೧೦೫)

ಅಷ್ಟೇ ಅಲ್ಲ—

" ನಡೆ ರಾಮ! ಸ್ನಾತಾಂತರಂಗದಿಂ
ದಾರ್ತರುತ್ತರಣಕ್ಕೆ ತಕ್ಕನಾದೆ
ತೇಜೋಭಿರಾಮನೇ—ನಡೆ, ವೇಳೆಯೊದಗಿಹುದು
ಧೂತಕಲ್ಮಷೆ ತನ್ನ ಬಾಳನ್ನೈದೆ" (ಪುಟ ೧೦೫)

ಅಹಲ್ಯೆಯು ಈಗ ರಾಮನ ದರ್ಶನದಿಂದ ಪ್ರೀತಳಾಗಿ, ಹಿಂದಿನದೆಲ್ಲವನ್ನೂ ಗತಜನ್ಮದ ಘಟನೆಗಳಂತೆ ಮರೆತು ನಿಂತಿದ್ದಾಳೆ—'ಜನ್ಮಾಂತರ ವಾರ್ತೆಯಿದು-ಎನಿಸುವ ನವಜನ್ಮವಿದು!' ಅವಳ ತೇಜೋಮಯವಾದ ಮಂಗಳಮೂರ್ತಿಯನ್ನು ನೋಡುತ್ತಲೇ ಪತಿತಪಾವನ ರಾಮನೂ ಸಹ 'ಹೇ ಮಂಗಳೆ ಶರಣಾವೆಂ' ಎನ್ನುತ್ತಾನೆ. "ತ್ರಿಜಗದ್ವಂದಿತೆ ನಾಮಪಾವನೆ, ಇಂದಹಲ್ಯೆ ಗೌತಮಜಾಯೆ" ಎಂದು ವಿಶ್ವಾಮಿತ್ರನೂ ಘೋಷಿಸುತ್ತಾನೆ. ಆದರೂ ಅಹಲ್ಯೆಯು ಇಷ್ಟರಿಂದಲೇ ಧನ್ಯಳಲ್ಲ. ಈ ಘೋಷಣೆ-ಪ್ರಶಂಸೆಗಳು ಅವಳ ಪೂರ್ವಜೀವನದ ಗೋಳನ್ನು ನೆನಪು ಮಾಡುವಂತಹುವು!

"ಯಾಚಿಪೆ ಕ್ಷಮೆಯಂ ಸರ್ವಭೂತಗಳೆ
ಓ ವನದೇವತೆ ಓ ಎಲ್ಲರೇ" (ಪುಟ ೧೧೧)

ಈ ಕ್ಷಮಾಯಾಚನೆಯಿಂದ ತಾನು ಮುಟ್ಟಿ ಮೈಲಿಗೆಯಾಗಿದ್ದ ಸರ್ವಭೂತಗಳೂ, ವನದೇವತೆಯೂ, ಎಲರೂ ಪರಿಶುದ್ಧವಾಯಿತು. ಆಗಲೇ ಹರ್ಷಚಿತ್ತನಾದ ಗೌತಮನು ಎದುರು ನಿಲ್ಲುತ್ತಾನೆ—

"ಕುಸಿಯಿತಂದು ಪೊಲ್ಲಮೆ ಹೊರೆ
ಕುಸಿವುದಿಂದು ನಲ್ಮೆಯ ಹೊರೆ"

—ಎಂದು ತನ್ನನ್ನು ಪತಿಗೆ ಒಪ್ಪಿಸಿಕೊಂಡು ಧನ್ಯಳಾಗುತ್ತಾಳೆ ಅಹಲ್ಯೆ. ಈಗ ಎಲ್ಲವೂ ಪೂರ್ಣವಾಯಿತು. ಗೌತಮನೂ ಪೂರ್ಣ, ಅಹಲ್ಯೆಯೂ ಪೂರ್ಣ!

"ಸತಿಯು ಪೂರ್ಣ ಪತಿಯು ಪೂರ್ಣ
ಜೋಡಿಯೊಂದಿ ಪೂರ್ಣ;
ಆತ್ಮರತಿಗೆ ಆತ್ಮವಾಯ್ತು
ಕಾಮುವಾಯ್ತು ತೀರ್ಣ" (ಪುಟ ೧೧೪)

ಮೈತ್ರೇಯಿ–ಮಾಧವಿ–ಕೌಶಿಕಾದಿಗಳೂ ಹರ್ಷಿಸುತ್ತಾರೆ. ರಾಮಾದಿಗಳಿಗೆ ಪೂಜಾ ಸತ್ಕಾರಗಳೂ ಆದುವು. ಸ್ವರ್ಗವೂ ತಣಿಯಿತು. ಅಪ್ಸರೆಯರೂ ನರ್ತಿಸಿದರು. ಗೀತರೂಪಕವೂ ಪೂರ್ಣವಾಯಿತು.

## ಕಾರಣರಾರು?

ಈಗ ಅಹಲ್ಯೆಯ ಪ್ರಶ್ನೆಗೆ ಉತ್ತರವೇನು? ಅವಳ ಪತನಕ್ಕೆ ಗೌತಮನೂ ಕಾರಣನು; ಅಹಲ್ಯೆಯು ಸ್ವಯಂ ಕೃತಾಪರಾಧವೂ ಕಿಂಚಿತ್ತಿದೆ. ಆದರೆ ಉದ್ದೇಶ್ಯಪೂರ್ವಕವಾಗಿ ಯಾರೂ ತಪ್ಪು ಮಾಡಿದವರಲ್ಲ. ಮಾನವಮಾತ್ರರಿಗೆ ಸಹಜವಾದ ಬಯಕೆಗಳು ಅಹಲ್ಯೆಯಲ್ಲಿದ್ದುವು; ಗೌತಮನಲ್ಲೂ ಇದ್ದುವು; ಭೂಮಿಗೆ ಬಂದ ಇಂದ್ರನಲ್ಲೂ ವಿಧಿಯ ಪ್ರೇರಣೆಯಿಂದ ಜಾಗ್ರತವಾದುವು. ಮನ್ಮಥನೂ ಕಾರಣನೇ ಹೌದು. ಆದರೆ ಅವನು ತನ್ನ ಕರ್ತವ್ಯದ ಕಡೆಗೆ ಮಾತ್ರ ಗಮನವಿತ್ತವನು. ಅದರ ಫಲವು ಇಂತೆಯೇ ಆಗಿರಬೇಕೆಂದು ನಿಶ್ಚಯಿಸಿದವನಲ್ಲ. ವಿಧಿಲೀಲೆಗೆ ಎಲ್ಲವರೂ ಒಳಸಟ್ಟವರು. ಈ ಸಂದರ್ಭದಲ್ಲಿ ಜನ್ನ ಕವಿಯ ಯಶೋಧರ ಚರಿತೆಯಲ್ಲಿನ ಒಂದು ವಾಕ್ಯವನ್ನು ಸ್ಮರಿಸಬಹುದು—

"ಮನಸಿಜನ ಮಾಯೆ ವಿಧಿವಿಳ
ಸನದ ನೆರಂಬಡೆಯೆ ಕೊಂದು ಕೂಗದೆ ನರರಂ?"

ಕಾಮನೇ ಸರ್ವಶಕ್ತನಾಗಿದ್ದ ಪಕ್ಷದಲ್ಲಿ ಶಿವನ ಹಣೆಗಣ್ಣ ಬೆಂಕಿಯಲ್ಲಿ ಅವನು ಭಸ್ಮವಾಗಬೇಕಾಗಿರಲಿಲ್ಲ. ಇಂದ್ರನೇ ಸರ್ವಶಕ್ತನಾಗಿದ್ದಲ್ಲಿ ಹಾಗೂ ಸ್ವತಃ ತಾನೇ ಅಹಲ್ಯೆಯನ್ನು ಬಯಸಿ ಬಂದ ಪಕ್ಷದಲ್ಲಿ ಗೌತಮನ ಬಗ್ಗೆ ಚಿಂತಿಸಬೇಕಾದ ಅಗತ್ಯವಿರಲಿಲ್ಲ. ಅಹಲ್ಯೆಯೇ ಇಂದ್ರನನ್ನು ಬಯಸಿದ್ದ ಪಕ್ಷದಲ್ಲಿ ಇಂದ್ರನಿಗೆ ಹೆದರಿ ಪೂಜಿಸುವ ಹಾಗೂ ಪತಿವಿರಹದಲ್ಲಿ ಬೇಯುವ ಅವಶ್ಯಕತೆಯಿರಲಿಲ್ಲ. ಇವನ್ನೆಲ್ಲಾ ಯೋಚಿಸಿದರೆ ತಾಳ್ಮೆಗೆಟ್ಟ ಬಯಕೆಗಳೊಡನೆ ವಿಧಿಯ ಪ್ರೇರಣೆಯಿಂದ ಎಲ್ಲವೂ ಜತೆಗೂಡಿ ಅವಳನ್ನು ದುರ್ಗತಿಗೆ ಗುರಿಮಾಡಿತೆಂದೇ ಊಹಿಸಬೇಕಾಗುತ್ತದೆ.

## ಪಾತ್ರಗಳ ಭವ್ಯ ಸೃಷ್ಟಿ

'ಅಹಲ್ಯೆ' ಒಂದು ಗೀತರೂಪಕ. ಹೆಸರೇ ಸೂಚಿಸುವಂತೆ ಇದು ಅಹಲ್ಯೆಯ ಬಾಳನ್ನು ಚಿತ್ರಿಸಲು ರಚಿಸಿದ ಕೃತಿ. ಇದರಲ್ಲಿ ಅಹಲ್ಯೆಯೇ ಕಥಾನಾಯಕಿ. ಗೌತಮ, ಇಂದ್ರ ಹಾಗೂ ಮನ್ಮಥನ ಪಾತ್ರಗಳು ಪ್ರಧಾನ.

ಅಹಲ್ಯೆಯ ಮಗನಾದ ಶತಾನಂದನ ಪಾತ್ರವು ಅಹಲ್ಯೆಯ ಮುಗ್ಧತೆಯನ್ನು ಚಿತ್ರಿಸಲು ತುಂಬಾ ಸಹಾಯ ಮಾಡಿದೆ. ತಾಯಿ ಮಕ್ಕಳ ಸಂಭಾಷಣೆಗಳು ಕಥೆಯನ್ನು ಮುಂದುವರಿಸು ವುದಕ್ಕಿಂತಲೂ ಹೆಚ್ಚಾಗಿ ಕಥಾಸೂತ್ರದ ಗುರಿಯನ್ನು ಸಾಧಿಸಲು ನೆರವಾಗಿವೆ. ಮರೀಚಿಯು ಮಾಧವಿಯ ಮಗ ಹಾಗೂ ಶತಾನಂದನ ಒಡನಾಡಿ. ಮಾಧವಿಯ ಪಾತ್ರವು ಅಹಲ್ಯೆಯ ಪಾತ್ರ ಚಿತ್ರಣಕ್ಕೆ ನೆರವಾಗಿದೆ-ಮಾತ್ರವಲ್ಲ; ಅವಶ್ಯಕವೂ ಆದ ಪಾತ್ರವೆನಿಸಿದೆ. ಮುಗ್ಧಳೂ ಭೀರುವೂ ಕೋಮಲೆಯೂ ಆದ ಅಹಲ್ಯೆಯ ಪ್ರಶ್ನೆ ಹಾಗೂ ಶಂಕೆಗಳಿಗೆ ಅವಳು ನೀಡುವ ಸಮಾಧಾನಗಳಲ್ಲಿ ಅನುಭವವನ್ನು ಪಡೆದ ಪ್ರೌಢಯುವತಿಯ ಮೆರಗು ತುಂಬಿದೆ. ಇಂದ್ರನ ವಿವೇಕವನ್ನು ಎತ್ತಿ ನುಡಿವ ಕಾಮನ ಪಾತ್ರದಂತೆ ಅವಳ ಪಾತ್ರವೂ ಸಮತೂಕನಾದುದಾಗಿದೆ. ಕೌಶಿಕ, ಮೈತ್ರೇಯ ಹಾಗೂ ವಟುವಿನ ಪಾತ್ರಗಳು ಗೌತಮನ ಪಾತ್ರ ಪೋಷಣೆಗೂ, ಸನ್ನಿವೇಶಗಳ ಸೃಷ್ಟಿಗೂ ನೆರವಾ ಗಿವೆ. ಸ್ವರ್ಗದ ಸಕಲ ವರ್ತಮಾನವನ್ನೂ ಚಿತ್ರಿಸುವಲ್ಲಿ ಸುರರ, ಸುರಸುಂದರಿಯರ ಹಾಗೂ ಅಪ್ಸರೆ ಯರ ನೃತ್ಯಗಳೂ ಮತ್ತು ಸಂಭಾಷಣಾ ಗೀತೆಗಳೂ ಸಂಪ್ರದಾಯ ಬದ್ಧವಾಗಿರುವುದು ಮಾತ್ರ ವಲ್ಲದೆ ಉಚಿತವೂ ಮಧುರವೂ ಆಗಿವೆ.

ರಂಭೆಯ ಪಾತ್ರದಿಂದಲೇ ಕಥಾಸೂತ್ರವು ಹಿಡಿತಕ್ಕೆ ಸಿಕ್ಕುವುದರಿಂದ ಆ ಪಾತ್ರಕ್ಕೆ ವೈಶಿಷ್ಟ್ಯವುಂಟಾಗಿದೆ. ಕೆಲವೇ ನುಡಿಗಳಲ್ಲಿ ಗೌತಮನ ಹಾಗೂ ಅಹಲ್ಯೆಯ ಸ್ವಭಾವ ಚಿತ್ರ ಗಳನ್ನು (ಓದುಗರ) ಮನಃಪಟಲದ ಮೇಲೆ ಅಂಕಿತಮಾಡಲು ರೂಪಕದ ಪ್ರಾರಂಭದಲ್ಲಿ ರಂಭೆಯ ಪಾತ್ರವು ಮಿಂಚಿನಂತೆ ಹೊಳೆಯುತ್ತದೆ.

ವಿಶ್ವಾಮಿತ್ರನ ಪಾತ್ರದ ವೈಶಿಷ್ಟ್ಯವನ್ನು ಹಿಂದೆಯೇ ವಿವರಿಸಿದೆ. ಸ್ವತಃ ಅನುಭವಿಯಾಗಿ ಬಾಳಿನ ಮರ್ಮವನ್ನು ಅರಿತವನಿವನು. ಕ್ಷತ್ರಿಯನಾಗಿದ್ದು ರಾಜ್ಯಪಾಲನೆಯೂ ಅವನಿಗೆ ತಿಳಿದಿದೆ; ಬ್ರಹ್ಮಜ್ಞಾನಿಯಾಗಿ ಧರ್ಮಾಧರ್ಮಗಳ ಪೂರ್ಣ ಪರಿಜ್ಞಾನವಿದೆ; ಮರ್ತ್ಯರ ಬಾಳಿನ ದುರ್ಗ್ರಾಹ್ಯ ಚಿತ್ರವೂ ಅವನಿಗೆ ಮೇನಕೆಯ ಪ್ರಸಂಗದಿಂದ ಅರಿವಾಗಿದೆ. ಕರುಣೆ, ಶ್ರದ್ಧೆ, ಔದಾರ್ಯ, ಜ್ಞಾನಗಳಿಂದ ಪರಿಪೂರ್ಣನಾದ ವಿಶ್ವಾಮಿತ್ರನ ಪಾತ್ರವು ರಂಗದ ಮೇಲೆ ಅಲ್ಪ ಕಾಲವೇ ಮೆರೆಯುವುದಾದರೂ ಅದರ ಪ್ರಭಾವ ಇಡೀ ಅಹಲ್ಯೆಯ ಬಾಳಿನ ಚಿತ್ರವನ್ನೇ ಶೋಭಾಯಮಾನಪಡಿಸಿದೆ. ರಾಮಲಕ್ಷ್ಮಣರ ಪಾತ್ರಗಳು ಸಹಜವಾಗಿ ಹೊರಹೊಮ್ಮಿವೆ. ಮಾನವರೂಪವನ್ನೆತ್ತಿ ತ್ರೇತಾಯುಗವನ್ನೇ ಪುನೀತಮಾಡಿದ ಅವತಾರಮೂರ್ತಿ ಶ್ರೀರಾಮ. ಗುರುವಾದ ವಿಶ್ವಾಮಿತ್ರನನ್ನು ಹಿಂಬಾಲಿಸಿ ಲೋಕಕ್ಕೆ ಅತ್ಯಾಶ್ಚರ್ಯಕರವಾದ ಪವಾಡವನ್ನು ತೋರಿದರೂ, ಗುರುಭಕ್ತಿಯೇ ಶ್ರೇಷ್ಠ ಸಾಧನವೆಂದು ಸಾರುವ ರಾಮನ ಪಾತ್ರವು ಆದರ್ಶ ವೆನಿಸಿದೆ. ಅಣ್ಣನನ್ನೂ ಗುರುವನ್ನೂ ಸಮವಾಗಿ ಭಾವಿಸಿ ಸೇವಿಸುವ ಲಕ್ಷ್ಮಣನ ಪಾತ್ರವೂ ಅಷ್ಟೇ ರಮ್ಯ.

ಗೀತರೂಪಕದ ಚೆಲುವಿಗೆ ಭಂಗವನ್ನುಂಟುಮಾಡುವ ಪಾತ್ರಗಳಾವುವೂ ಇಲ್ಲಿಲ್ಲ. ಇರುವ ಪಾತ್ರಗಳಂತೂ ಕಥಾಸೂತ್ರದ ಗುರಿಯನ್ನು ಸಾಧಿಸುವುದರಲ್ಲಿ ಒಂದಿಲ್ಲ ಒಂದು ಹೊಣೆಯನ್ನು

ಹೊತ್ತು ಕಾರ್ಯಗಳನ್ನು ನಿರ್ವಹಿಸಿವೆ. ಪ್ರತಿ ಪಾತ್ರವೂ ತನ್ನ ಇರುವಿಕೆಯನ್ನು ತೋರ್ಪಡಿಸುವ ಸಲುವಾಗಿ ಮಾತ್ರ ಪ್ರವೇಶಗೊಳ್ಳದೆ ಯಾವುದಾದರೊಂದು ವೈಶಿಷ್ಟ್ಯವನ್ನು ತೋರ್ಪಡಿಸಿ ತನ್ನ ಅವಶ್ಯಕತೆಯನ್ನು ಸಾರಿದೆ. ಪ್ರಧಾನ ಪಾತ್ರಗಳಂತೂ ತಮ್ಮ ಗುರಿಸಾಧಿಸುವಲ್ಲಿ ಪೂರ್ಣವಾದ ಕೈವಾಡವನ್ನು ಪಡೆದಿವೆಯೆಂದು ಹೇಳಲೇಬೇಕು.

**ಶಿಲೆಯು ನಾರಿಯಾದುದು.**

ವಾಲ್ಮೀಕಿ ಮಹರ್ಷಿಯ ಸಂಸ್ಕೃತ ರಾಮಾಯಣದಲ್ಲಿ ಕಂಡುಬರುವ ಅಹಲ್ಯಾ ವೃತ್ತಾಂತವನ್ನು ಈ ಮೊದಲೇ ಸೂಚಿಸಿದೆ. ಬಹುಮಟ್ಟಿಗೆ 'ಅಹಲ್ಯೆ' ಗೀತರೂಪಕದ ಕಥಾಸೂತ್ರವೂ ಅದೇ ಆಗಿದೆ. ಆದರೆ ವಾಲ್ಮೀಕಿಯಿಂದ ಈಚಿನ ಕೆಲವು ರಾಮಾಯಣಗಳಲ್ಲಿ ಹಾಗೂ ಪುರಾಣಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳು (ಅಹಲ್ಯಾ ವೃತ್ತಾಂತದ ಬಗ್ಗೆ) ಕಂಡುಬರುತ್ತವೆ. ಅಧ್ಯಾತ್ಮ ರಾಮಾಯಣವು ಇದಕ್ಕೊಂದು ಉದಾಹರಣೆ. ಅದರ ಪ್ರಕಾರ ವಾಲ್ಮೀಕಿ ರಾಮಾಯಣದಿಂದ ಭಿನ್ನವಾದ ಕೆಲವು ಮುಖ್ಯಾಂಶಗಳು ಇಂತಿವೆ:—

ಗೌತಮನಿಗೆ ಅಹಲ್ಯೆಯು ಬ್ರಹ್ಮನಿಂದ ಕೊಡಲ್ಪಟ್ಟವಳು. ಇಂದ್ರನು ಗೌತಮನಿಲ್ಲದ ವೇಳೆಯಲ್ಲಿ ಅವನ ವೇಷವನ್ನು ಧರಿಸಿ ಅಹಲ್ಯೆಯನ್ನು ಭಂಗಪಡಿಸಿದನು. ಗೌತಮನು ಇಂದ್ರನನ್ನು ಈ ರೀತಿ ಶಪಿಸಿದನು:—

"ಯೋನಿಲಂಪಟ ದುಷ್ಟಾತ್ಮನ್ ಸಹಸ್ರ ಭಗವಾನ್ ಭವ"

ಅಹಲ್ಯೆಗೆ ಕೊಟ್ಟ ಶಾಪ ಇಂತಿದೆ:—

"ದುಷ್ಟೇ ತ್ವಂ ತಿಷ್ಠ ದುರ್ವೃತ್ತೇ ಶಿಲಾಯಾಮಾಶ್ರಮೇ ಮಮ |
ನಿರಾಹಾರಾ ದಿವಾರಾತ್ರಂ ತಪಃ ಪರಮಮಾಶ್ರಿತಾ ||

ಶಾಪನಿವಾರಣೆ ಇಂತಾಗಬೇಕು:—

"ರಾಮೋ ದಾಶರಥಿ ಶ್ರೀಮಾನ್ ಆಗಮಿಷ್ಯತಿ ಸಾನುಜಃ |
ಯದಾ ತದಾಶ್ರಮಶಿಲಾಂ ಪಾದಾಭ್ಯಾಮಾಕ್ರಮಿಷ್ಯತಿ ||
ತತ್ಸೈವ ಧೂತ ಪಾಪಾತ್ವಂ ರಾಮಂ ಸಂಪೂಜ್ಯ ಭಕ್ತಿತಃ |
ಪರಿಕ್ರಮ್ಯ ನಮಸ್ಕೃತ್ಯ ಸ್ತುತ್ವಾ ಶಾಪಾದ್ವಿಮೋಕ್ಷ್ಯಸೇ ||"

ಇಷ್ಟು ವೃತ್ತಾಂತವನ್ನೂ ವಿಶ್ವಾಮಿತ್ರನು ರಾಮನಿಗೆ ತಿಳಿಸಿ ಅನಂತರ ಶಿಲೆಯ ಸ್ಪರ್ಶಕ್ಕಾಗಿ ಕರೆದೊಯ್ಯುತ್ತಾನೆ. ಅಹಲ್ಯೆಯು ಪೂರ್ವರೂಪವನ್ನು ಪಡೆದು, ರಾಮನನ್ನು ಅರ್ಚಿಸಿ, ದೀರ್ಘವಾದ ಸ್ತೋತ್ರವನ್ನೂ ಮಾಡುತ್ತಾಳೆ. ಈ ವಿಧಾನವು ಅಧ್ಯಾತ್ಮ ರಾಮಾಯಣದ ಬಾಲಕಾಂಡದ ಪಂಚಮ ಸರ್ಗದಲ್ಲಿ ಹೇಳಲ್ಪಟ್ಟಿದೆ.

ಈ ಮೇಲಿನ ಕಥಾ ವಿಧಾನದ ಪ್ರಕಾರ ನಮ್ಮ ಗಮನವು ಮುಖ್ಯವಾಗಿ ಎರಡು ಅಂಕಗಳ ಮೇಲೆ ಹರಿಯುತ್ತದೆ. ಮೊದಲನೆಯದಾಗಿ ಇಂದ್ರನು ಗೌತಮನ ವೇಷದಿಂದ ಅಹಲ್ಯೆಯನ್ನು ಭಂಗಪಡಿಸುವುದು. ಪ್ರಾಯಶಃ ಈ ಕ್ರಮದಿಂದ ಅಹಲ್ಯೆಗೆ ತಪ್ಪಿನ ಹೊರೆ ಇರುತ್ತಿರಲಿಲ್ಲ ವೇನೋ! ನಂತರ ಗೌತಮನ ಶಾಪದ ರೀತ್ಯಾ ಇಂದ್ರನಿಗೆ ಸಹಸ್ರ ಭಗತ್ವಪ್ರಾಪ್ತಿ. ಎರಡನೆಯದಾಗಿ ಅಹಲ್ಯೆಯು ಶಿಲೆಯಾದುದು. ಈ ಅಂಶಗಳ ಹೊರತು ಉಳಿದ ಕಥಾವಿಧಾನವೆಲ್ಲಾ ಬಹುಮಟ್ಟಿಗೆ ವಾಲ್ಮೀಕಿ ರಾಮಾಯಣದ ಅನುಸರಣೆಯೇ ಆಗಿದೆ. ಸಂಪೂರ್ಣ ತಪ್ಪಿಗೆ

ಇಂದ್ರನು ಮಾತ್ರ ಕಾರಣನಾಗಿ ಉಳಿದುದು ಈ ಕಥೆಯ ಪ್ರಕಾರ ಗೌಣ. ಅಹಲ್ಯೆಯು ಶಿಲೆಯಾಗಿದ್ದರೆ ಅವಳ ಕರುಣಕ್ರಂದನದ ಚಿತ್ರಣಕ್ಕೆ ಸಾಕಷ್ಟು ಯೋಗ್ಯವಾದ ಅವಕಾಶ ಸಿಕ್ಕದೆ, 'ಕಲ್ಲು ಹೇಳಿತು' ಎಂದು ಅದ್ಭುತವಾಗಿ ಚಿತ್ರಿಸಬೇಕಾಗುತ್ತಿತ್ತೇ? ಇಂದ್ರನಿಗೆ ಸಹಸ್ರ ಭಗತ್ವಪ್ರಾಪ್ತಿಗಿಂತಲೂ ನಿರಿಂದ್ರಿಯತ್ವಪ್ರಾಪ್ತಿ ಗೌತಮನ ಶಾಪಕ್ಕೆ ಯೋಗ್ಯವಾದ ಗೌರವವನ್ನೊದಗಿಸಿಕೊಟ್ಟಿದೆಯೇ?—ಎಂಬ ವಿಷಯಗಳು ನಿಧಾನವಾಗಿ ಯೋಚಿಸಬೇಕಾದುವುಗಳು. ಪ್ರಾಯಶಃ ಆಗಿನ ಸಮಸ್ಯೆಗಳ ಸ್ವರೂಪವೇ ಬದಲಾಗುತ್ತಿತ್ತೇನೋ! ಆದರೆ ವಾಲ್ಮೀಕಿಯ ರಾಮಾಯಣವು ಆದಿ ರಾಮಾಯಣವೆಂದು ಗೌರವಿಸುವ ದೃಷ್ಟಿಯಿಂದ, ಅಲ್ಲಿಂದೀಚೆಗೆ ಈ ಉಪಾಖ್ಯಾನದ ವಿಷಯವಾಗಿ ಮಾರ್ಪಡಾಗಿರುವುದನ್ನು ಮಾತ್ರ ಇಲ್ಲಿ ಸೂಚಿಸಿದೆ.

**ಮತ್ತೊಂದು ಬದಲಾವಣೆ:—**

ಬಹುಮಟ್ಟಿಗೆ ಶಿಲೆಯು ನಾರಿಯಾದ ಪ್ರಸಂಗವನ್ನೇ ರಾಮನ ಕೀರ್ತಿಗಾನದಲ್ಲಿ ಸೂಚಿಸುವುದು ಅನೇಕರಲ್ಲಿ ಕಂಡುಬರುತ್ತದೆ. ಆದರೆ ಇಂದ್ರನೇ ಸಂಪೂರ್ಣ ದೋಷಿಯೆಂದು ನಿರ್ಧರಿಸುವಂತೆ ಮತ್ತೊಂದು ಹೆಚ್ಚಿನ ಬದಲಾವಣೆಯನ್ನು ವಿದ್ವಾಂಸರೊಬ್ಬರು ಸೂಚಿಸಿದರು. ಆದರ ಪ್ರಕಾರ ಗೌತಮನ ನಿರಂತರ ತಪಸ್ಸು ಗೌಣ. ಸುಂದರಿಯಾದ ಅಹಲ್ಯೆಯಲ್ಲಿ ಬಹುಕಾಲದಿಂದ ಅನುರಕ್ತನಾಗಿದ್ದ ಇಂದ್ರನು ಸಮಯವನ್ನು ಕಾಯುತ್ತಿರುತ್ತಾನೆ. ಪ್ರತಿದಿನವೂ ಕೋಳಿ ಕೂಗುವ ಸಮಯಕ್ಕೆ ನಸುಕಿನಲ್ಲೇ ಗೌತಮನು ಹಾಸಿಗೆಯನ್ನು ಬಿಟ್ಟು ಸ್ನಾನಸಂಧ್ಯಾದಿಗಳಿಗಾಗಿ ನದಿಗೆ ತೆರಳುವ ಪರಿಪಾಠವನ್ನು ಇಟ್ಟಿದ್ದನು. ಒಂದು ನಡುರಾತ್ರಿ ಇಂದ್ರನು ಕೋಳಿಯ ರೂಪನ್ನು ಧರಿಸಿ ಕೂಗಿದನು. ನಸುಕಾಯಿತೆಂಬ ಭ್ರಾಂತಿಯಿಂದ ಗೌತಮನು ಕತ್ತಲಿನಲ್ಲೇ ನದಿಗೆ ತೆರಳಿದನು. ಆಗ ಗೌತಮನ ವೇಷವನ್ನು ಧರಿಸಿ ಬಂದ ಇಂದ್ರನು ಅಹಲ್ಯೆಯನ್ನು ಭಂಗಪಡಿಸಿದನು. ಸ್ನಾನಾದಿಗಳೆಲ್ಲವೂ ಮುಗಿದರೂ ಬೆಳಕಾಗದಿರುವುದನ್ನು ಕಂಡ ಗೌತಮನು ಸಂದೇಹದಿಂದ ಆಶ್ರಮಕ್ಕೆ ಹಿಂತಿರುಗಿ, ಅಹಲ್ಯೆಯನ್ನೂ ಇಂದ್ರನನ್ನೂ ಶಪಿಸಿದನೆಂದು ಈ ಹೆಚ್ಚಿನ ಬದಲಾವಣೆಯ ಪ್ರಕಾರ ಸೂಚಿಸಲಾಗಿದೆ. ಆದರೆ ಆಧಾರಪೂರ್ವಕವಾದ ಬದಲಾವಣೆಯೇ?—ಎಂಬುದು ವಿಚಾರಣೀಯ.

**ಗೀತರೂಪಕದ ವೈಶಿಷ್ಟ್ಯ:—**

ಹಿಂದೆಯೇ ವಿವರಿಸಿರುವಂತೆ ಶ್ರೀ ಪು. ತಿ. ನರಸಿಂಹಾಚಾರ್ಯರ ಗೀತರೂಪಕ 'ಅಹಲ್ಯೆ' ವಾಲ್ಮೀಕಿ ರಾಮಾಯಣದ ಅಹಲ್ಯಾ ವೃತ್ತಾಂತವನ್ನು ಆಧಾರಮಾಡಿಕೊಂಡು ರಚಿಸಲ್ಪಟ್ಟಿದೆಯೆಂಬುದು ಸ್ಪಷ್ಟವಾಗಿದೆ. ಪ್ರಾಯಶಃ ಕಥಾಸೂತ್ರದಲ್ಲಿ ಸ್ವಾತಂತ್ರ್ಯದಿಂದ ಹೆಚ್ಚಿನ ಮಾರ್ಪಾಟುಗಳನ್ನು ಮಾಡಲು ಅವರು ಬಯಸಲಿಲ್ಲ. ಆದರೂ ಅಣುವನ್ನು ಮಹತ್ತಾಗಿ ಮಾಡಬೇಕಾದ ಈ ಸಂದರ್ಭದಲ್ಲಿ ಯೋಗ್ಯವಾದ ಸನ್ನಿವೇಶವನ್ನು ಸ್ಥಾಪಿಸಲು, ಹಾಗೂ ಗೀತರೂಪಕದ ರಚನಾ ಸಂಪ್ರದಾಯವನ್ನು ಸ್ಥಿರಗೊಳಿಸಲು ಮಾಡಿರುವ ಪ್ರಯತ್ನದಲ್ಲಿ ವಾಲ್ಮೀಕಿ ರಾಮಾಯಣದಲ್ಲಿ ಉಪಾಖ್ಯಾನದ ರೀತ್ಯಾ ಕಂಡುಬರದ ಕೆಲವು ಪಾತ್ರಗಳನ್ನು ಅವರು ಪ್ರವೇಶ ಮಾಡಿದ್ದಾರೆ. ಒಂದು ರೀತಿಯಲ್ಲಿ ಅದು ಅನಿವಾರ್ಯ ಹಾಗೂ ಯೋಗ್ಯವೂ ಆಗಿದೆ. ಅಂತಹ ಪಾತ್ರಗಳೆಂದರೆ ಮುಖ್ಯವಾಗಿ ಅಹಲ್ಯೆ, ಗೌತಮ, ಇಂದ್ರ—ಈ ಪಾತ್ರಗಳನ್ನು ಬಿಟ್ಟು ಉಳಿದ ಎಲ್ಲಾ ಪಾತ್ರಗಳು. ಇದರ ಹೊರತು ಮಾರ್ಪಾಟು ಮಾಡಿದೆಯೆನ್ನಲಾಗದಂತಹ ಕೌಶಲ

ವನ್ನು ಬೀರಿರುವುದು ಅಲ್ಲಲ್ಲಿ ಕಂಡುಬರುತ್ತದೆ. ಅವುಗಳನ್ನು ಕುರಿತು ಒಂದಿಷ್ಟು ಯೋಚಿಸು ವುದು ಅಪ್ರಕೃತವಾಗಲಾರದು.

ಕಥಾಸೂತ್ರದ ಹಿಡಿತಕ್ಕಾಗಿ ರಂಭೆಯ ಪಾತ್ರ ವೈಶಿಷ್ಟ್ಯವನ್ನು ಪಡೆದಿದೆ. ಸ್ವರ್ಗದ ವೈಭವಗಳನ್ನು ಚಿತ್ರಿಸಿ ಇಂದ್ರನಿಗೆ ಭೂಮಿಯ ಬಗ್ಗೆ ಇರುವ ಅಭಿಮಾನವೂ ಚಿತ್ರಿಸಲ್ಪಟ್ಟಿದೆ. ಹೌದು, ಮಾನವರ ಬಗ್ಗೆ ಇಂದ್ರನ ಅಭಿಮಾನ ಯೋಗ್ಯವೇ ಸರಿ. ವೃತ್ರಾಸುರನ ಸಂಹಾರ ಕಾಲದಲ್ಲಿ ದಧೀಚಿಯಂತಹ ತ್ಯಾಗಿಯು ಇಂದ್ರನಿಗೆ ಸಹಕಾರ ನೀಡಿದ್ದು ಇದೇ ಮಾನವ ಲೋಕದಲ್ಲೇ! ಅದಕ್ಕಾಗಿಯೇ ಈ ಅಭಿಮಾನವಿರಬಹುದು.

ವಾಲ್ಮೀಕಿ ರಾಮಾಯಣದ ರೀತ್ಯಾ ಇಂದ್ರನು ಅಹಲ್ಯೆಯಲ್ಲಿಗೆ ತಾನಾಗಿ ಬರುತ್ತಾನೆ. ಇಲ್ಲಿ ಸನ್ನಿವೇಶದಿಂದ ಅವನು ಅಹಲ್ಯೆಯನ್ನು ಕಂಡು ಮೋಹಗೊಳ್ಳುತ್ತಾನೆ. ವಾಲ್ಮೀಕಿ ರಾಮಾಯಣದ ಗೌರವವನ್ನು ರಕ್ಷಿಸಲೋ ಎಂಬಂತೆ ಇಲ್ಲಿ ಮದನನ ಪಾತ್ರವು ಮುಖ್ಯವೂ ಆದರೆ ಹಿಡಿತಕ್ಕೆ ಸಿಕ್ಕದುದೂ ಆಗಿ 'ಪದ್ಮಪತ್ರಮಿವಾಂಭಸಾ' ಎಂಬಂತಿದೆ. ಇಂದ್ರನು ಗೌತಮನ ಮೇಲೆ ಹಟವನ್ನು ಸಾಧಿಸಲು ಬಂದು ಬಯಕೆಯ ಪಂಜರಕ್ಕೆ ಬೀಳುತ್ತಾನೆ. ವಾಲ್ಮೀಕಿಯ ಇಂದ್ರನು ತನ್ನ ತಪ್ಪಿನಲ್ಲಿ ಅನಿವಾರ್ಯವಾಗಿ ಹೆಜ್ಜೆ ನೀಡಿದ ಅಹಲ್ಯೆಯನ್ನು ಮತ್ತೆ ಪ್ರಾಯಶಃ ಸ್ಮರಿಸದೆ, ತನ್ನ ಶಾಪವಿಮೋಚನೆಗಾಗಿ ಚಿಂತಿಸಿ; ಸ್ವಾರ್ಥಸಾಧಕನೂ ಕೃತಜ್ಞನೂ ಆದಂತೆ ಕಂಡುಬರುತ್ತಾನೆ. ಆದರೆ ಇಲ್ಲಿ ಅವನ ವಿವೇಕಕ್ಕೆ ಸ್ವಲ್ಪ ಬೆಲೆಯಿದೆ. ಆದರೂ ಲಜ್ಜೆಯನ್ನು ತೊರೆದು 'ಪೂರ್ಣಗೊಳಿಸೀ ಬಯಕೆಯ' ಎಂದು ಕಾಮನನ್ನು ಪ್ರಾರ್ಥಿಸುವುದೂ ಹಾಗೂ 'ಮರುಳ ಗೌತಮನೆಂತು ನಿನ್ನ ಸಮನಹನು?' 'ಮೊದಲಿಳೆಯ ಮುಡದಿಯರು ಸಲುವರಮರರಿಗೆ!' ಎಂದು ಅಹಲ್ಯೆಗೆ ಸ್ವರ್ಗ ಭೋಗಗಳ ಆಸೆಯ ಜಾಲವನ್ನು ಬೀರುವುದೂ ಅವನ ಪಾತ್ರಕ್ಕೆ ಸ್ವಾರ್ಥತೆ ಮತ್ತು ಕಾಮಾಂಧತೆಯ ಆರೋಪಗಳನ್ನು ಅಂಟಿಸಬೇಕಾಗುತ್ತದೆ.

ಇನ್ನು ವಾಲ್ಮೀಕಿ ರಾಮಾಯಣದಲ್ಲಿ ಸಮಸ್ಯೆಯೆನಿಸುವಂತೆ ಮಿಂಚಿ ಮರೆಯಾಗಿ, ಗೀತ ರೂಪಕದಲ್ಲಿ ಸಹೃದಯರ ಸಹಾನುಭೂತಿಯನ್ನು ಸೂರೆಗೊಳ್ಳುವ ಅಹಲ್ಯೆಯ ಪಾತ್ರ. ಅವಳು ಒಂದು ಸಂತಾನದ ತಾಯಿ. ಆದರೂ ಹೊಸ ಹರೆಯ. ಲೋಕವನ್ನು ಸಂಪ್ರದಾಯ ರೀತ್ಯಾ ಧರ್ಮಕ್ಕನುಸಾರವಾಗಿ ಅರಿತವಳು. ಆದರೆ ಅನುಭವದ ಮೆಟ್ಟಿಲು ಅವಳ ಬಾಳಿಗೆ ಇನ್ನೂ ಅನಂತ. ಆದರೂ ಹೊಣೆಯ ಪರಿಜ್ಞಾನವಿದೆ. ಈ ರೀತಿಯಲ್ಲಿ ಪಾತ್ರದ ಚಿತ್ರಣಕ್ಕೆ ಕುತೂಹಲದ ಪ್ರಶ್ನೆಗಳನ್ನು ಹಾಕುವ ಶತಾನಂದನ ಪಾತ್ರ ಹಾಗೂ ನುರಿತ ನುಡಿಗಳನ್ನಾಡುವ ಮಾಧವಿಯ ಪಾತ್ರಗಳನ್ನು ಕೃತಿಕಾರರು ಬಳಸಿರುವುದು ಅವರ ಕೌಶಲದ ಹಿರಿಮೆಗೆ ಸಾಕ್ಷಿಯಾಗಿದೆ. 'ಸತಿ ಮೊದಲೆ ಬೆಚ್ಚಿದೊಲು ಪತಿರೂಪವಾಂತು' ಬಂದ ಇಂದ್ರನನ್ನು ಪತಿಯೆಂಬ ಭ್ರಾಂತಿಯಿಂದ ಸತ್ಕರಿಸ ಹೋಗಿ, ಶಂಕೆಯಿಂದ ಆಡುವ ಸಂಭಾಷಣೆಗಳಂತೂ ಅವಳ ಮನೋಭಾವಗಳ ಏರಿಳಿತಗಳನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಆದರೂ ಇಂದ್ರನೊಡನೆ ಆದ ಲಾಲಸೆಯ ತೃಪ್ತಿಯ ನಂತರ, ಅವಳು ಇಂದ್ರನ ಹಾಗೂ ತನ್ನ ರಕ್ಷಣೆಯ ಕಡೆಗೆ ಹೆಚ್ಚು ಗಮನ ನೀಡುತ್ತಾಳೆ. ತಾತ್ಕಾಲಿಕ ಪರಿಸ್ಥಿತಿಯನ್ನನುಸರಿಸಿ ಈ ಯೋಚನೆ ಯುಕ್ತವೆನಿಸಬಹುದಾದರೂ. ಲಾಲಸೆಯ ಪ್ರಾಬಲ್ಯದಿಂದ ಸೋತ ವಿವೇಕವು ಲಾಲಸೆಯ ಶಮನದ ನಂತರದಲ್ಲಿ ತಕ್ಷಣವೇ ಜಾಗೃತವಾಗಬೇಕಾದುದು ಅಸಂಭವವೇನಲ್ಲ. ತಕ್ಷಣದಲ್ಲಿ ಇಂದ್ರನಾಗಲೀ ಅಹಲ್ಯೆ

ಯಾಗಲೀ ಪಶ್ಚಾತ್ತಾಪಗಳಿಗೆ ಗುರಿಯಾಗದಿರುವುದು ಆ ಪಾತ್ರಗಳ ಘನತೆಯ ದೃಷ್ಟಿಯಿಂದ ತೃಪ್ತಿಯಲ್ಲವೇನೋ ಎನಿಸುತ್ತದೆ. ಆದರೆ ವಾಲ್ಮೀಕಿ ರಾಮಾಯಣದ ರೀತ್ಯಾ ಈ ಸೂಚನೆ ಹೊಸದೇ ಆಗುತ್ತದೆ.

ಅಹಲ್ಯೆಯ ಕರುಣ ಕ್ರಂದನಗಳು ಮತ್ತು ಗೌತಮನ ಬೇಸರದ ಬಾಳು ಅವರ ನವ ದಾಂಪತ್ಯ ಭಾವವನ್ನು ಸೊಗಸಾಗಿ ಮೂಡಿಸಿವೆ. ಧರ್ಮ ಮತ್ತು ಬಯಕೆಗಳ ತುಮುಲವೂ ಈ ದೃಷ್ಟಿಯಿಂದ ಸಫಲವಾಗಿ ಮೂಡಿದೆ. ಭಾವಾಭಿವ್ಯಕ್ತಿಯ ದೃಷ್ಟಿಯಿಂದ ವಾಲ್ಮೀಕಿ ರಾಮಾಯಣದ ನೀರಸತೆಯು ಇಲ್ಲಿ ರಸದ ಮಡುವಾಗಿದೆ. ಪಾತ್ರಗಳ ಪ್ರವೇಶ ಕಾಲದಲ್ಲಿ ಆಕರ್ಷಣೀಯವಾದ ಸಂಭಾಷಣೆಗಳು, ಪ್ರವೇಶಕ್ಕೆ ತಕ್ಕ ಹಿನ್ನೆಲೆಗಳ ಕಲ್ಪನೆಗಳು, ಗೂಢ ಭಾವಗಳ ಸ್ಪಷ್ಟ ಚಿತ್ರಣಕ್ಕೆ ಯೋಗ್ಯವಾದ ಮೇಳಗೀತಗಳು, ಈ ಸಂದರ್ಭಗಳಲ್ಲಿ ಭಾವಗೀತೆ ಯೆಂಬಂತೆ ಮೆಲುಕು ಹಾಕಲು ಯೋಗ್ಯವಾದ ಬಂಧಗಳು ರಮ್ಯವಾಗಿವೆ. ಹೊಣೆಯನ್ನು ಹೆಚ್ಚಾಗಿ ಹೊರದಿದ್ದರೂ ಸೃಷ್ಟಿಯ ತತ್ವದ ಸ್ಪಷ್ಟ ಚಿತ್ರಣಕ್ಕಾಗಿ ಮದನನ ಪಾತ್ರಕ್ಕೆ ವಿಶೇಷ ಪ್ರವೇಶಗಳನ್ನು ಕಲ್ಪಿಸಿರುವುದು ಕೌಶಲದ ಉನ್ನತಿಯ ದ್ಯೋತಕವಾಗಿದೆ. ಅಹಲ್ಯೆಯು ದುರ್ಗತಿಗೆ ಗುರಿಯಾಗಬೇಕಾದರೆ ಅದಕ್ಕೆ ಹೊಣೆ ಯಾರೆಂಬುದನ್ನು ಚಿತ್ರಿಸ ಹೊರಟ ಶ್ರೀ ಆಚಾರ್ಯರವರು ಯಾವ ಪಾತ್ರಕ್ಕೂ ಅನ್ಯಾಯವನ್ನು ಬಿಟ್ಟುಕೊಡದೆ ಒಳ್ಳೆಯ ನ್ಯಾಯ ವಾದವನ್ನು ಸ್ಥಾಪಿಸಿರುವರಲ್ಲದೆ ಓದುಗರ ಕುತೂಹಲವು ಚಿರಕಾಲ ಶಾಶ್ವತವಾಗುವಂತೆ ಮಾಡಿದ್ದಾರೆ. ವಾಲ್ಮೀಕಿಯನ್ನು ಹೃದಯಾಂತರಾಳಕ್ಕೆ ಹೊಕ್ಕು ಪರಿಶೋಧಿಸುವ ಚಾತುರ್ಯ ವನ್ನು ತೋರ್ಪಡಿಸಿದ್ದಾರೆ. ವಾಲ್ಮೀಕಿಯು ಗುಪ್ತವಾಗಿರಿಸಿರುವ ಸಮಸ್ಯೆಯನ್ನು ವಿಂಗಡಿಸಿ, ಗೀತರೂಪದ ಮುಖ್ಯಪಾತ್ರಗಳಿಗೆ ಅದರ ಹೊಣೆಯನ್ನು ಅವರು ಹಂಚಿರುವಂತೆ ತೋರುತ್ತದೆ.

ಇನ್ನು ಅಹಲ್ಯೆಯನ್ನು ಪೂಜ್ಯಳನ್ನಾಗಿ ಮಾಡಿದ ಪತಿತ ಪಾವನನಾದ ಶ್ರೀ ರಾಮ. ವಿಶ್ವಾಮಿತ್ರನ ಬಗ್ಗೆ ಮೇಲೆಯೇ ಹೇಳಲಾಗಿದೆ. ರಾಮಲಕ್ಷ್ಮಣರೊಡನೆ ಆಶ್ರಮಕ್ಕೆ ಬಂದ ವಿಶ್ವಾಮಿತ್ರನು ರಾಮನ ಪ್ರಶ್ನೆಗೆ ಉತ್ತರವಾಗಿ ಅಹಲ್ಯೆಯ ಉದ್ಧರಣಕ್ಕೆ ಮುನ್ನವೇ ಅವಳ ಶಾಪವೃತ್ತಾಂತವನ್ನು ತಿಳಿಸಿದಂತೆ ವಾಲ್ಮೀಕಿ ರಾಮಾಯಣದಲ್ಲಿ ಹೇಳಿದೆ. ಆದರೆ ಗೀತ ರೂಪಕದಲ್ಲಿ ಈ ಬಗ್ಗೆ ಒಂದು ಚಾತುರ್ಯವು ಕಂಡುಬರುತ್ತದೆ. ಅಹಲ್ಯೆಯು ಮೈದೋರುವ ವರೆವಿಗೂ ರಾಮನಿಗೆ ಈ ವೃತ್ತಾಂತವು ಗುಪ್ತವಾಗಿಯೇ ಉಳಿದಿರುತ್ತದೆ. ಆದರೂ ಮೂಲ ಕ್ಕೇನೂ ಭಂಗವುಂಟಾಗಿಲ್ಲ. ವಿಶ್ವಾಮಿತ್ರನು ಇತ್ತ ಲಕ್ಷ್ಮಣನಿಗೆ ವೃತ್ತಾಂತವನ್ನು ವಿವರಿಸು ತ್ತಿರುವುದೂ, ಅತ್ತ ಅಹಲ್ಯೆಯ ಉದ್ಧರಣವೂ ಏಕಕಾಲದಲ್ಲಿ ನಡೆದಂತೆ ಚಿತ್ರಿಸಿರುವುದು ಸಂದರ್ಭಕ್ಕೆ ಮೆರುಗನ್ನು ಕೊಟ್ಟಿದೆ.

ವಾಲ್ಮೀಕಿಯು ಈ ಉಪಾಖ್ಯಾನವನ್ನು ಮಿತಭಾಷೆಯಲ್ಲಿ ವಿವರಿಸಿಕೊಂಡು ಮುಂದುವರೆ ದಿರುವುದರ ಔಚಿತ್ಯವನ್ನೂ ಒಂದು ರೀತಿಯಲ್ಲಿ ಯೋಚಿಸಬಹುದು. ರಾಮಾಯಣವು ಮುಖ್ಯ ವಾಗಿ ಅವತಾರ ಮೂರ್ತಿಯಾದ ರಾಮನ ಕಥೆ. ಮುನಿಯ ದೃಷ್ಟಿಯಲ್ಲಿ ಅಹಲ್ಯೆಯನ್ನು ಲೋಕಪೂಜ್ಯಳೆಂದು ತೋರಿಸುವುದಕ್ಕಿಂತಲೂ ಹೆಚ್ಚಾಗಿ ರಾಮನು ಪತಿತಪಾವನನೆಂದು ತೋರಿಸುವುದೇ ಉದ್ದೇಶ್ಯವಾಗಿದೆ. ಹಾಗೆಂದು ಗೀತರೂಪಕದಲ್ಲಿ ರಾಮನ ಶ್ರೇಷ್ಠತ್ವಕ್ಕೆ ಕೊರತೆಯುಂಟಾಗಿದೆಯೆಂದು ಅರ್ಥವಲ್ಲ. ಇಲ್ಲಿಯೂ ಹೆಚ್ಚಿನ ವೈಶಿಷ್ಟ್ಯ ಕಾಣಬಹುದಾಗಿದೆ. ವಾಲ್ಮೀಕಿ ರಾಮಾಯಣದಲ್ಲಿ ಅಹಲ್ಯೆಯ ಉದ್ಧರಣದ ಕೀರ್ತಿಯು ರಾಮನಿಗೆ ಮಾತ್ರ ಸಲ್ಲು

ತ್ತದೆ. ಅವರನ್ನು ಕರೆತಂದ ವಿಶ್ವಾಮಿತ್ರನು ಕೇವಲ ನಿಮಿತ್ತ ಮಾತ್ರನಾಗಿರುತ್ತಾನೆ. ಗೀತ ರೂಪಕದ ಪ್ರಕಾರ ಅಹಲ್ಯೆಯ ಉದ್ಧರಣಕ್ಕಾಗಿ ನಲಿದು ಲೋಕಗಳು ಅರ್ಪಿಸಿದ ಶ್ರದ್ಧಾಂಜಲಿ ಯನ್ನು ರಾಮನು ತನ್ನ ಗುರುಗಳಾದ ವಿಶ್ವಾಮಿತ್ರರಿಗೂ ಹಂಚಿಕೊಟ್ಟಿದ್ದಾನೆ. ಗುರುಕೃಪೆ ಯಿಂದಲೇ ಶಿಷ್ಯನು ಸರ್ವಶಕ್ತನಾಗುವನೆಂದು ಸ್ಥಾಪಿಸುವ ಹಾಗೂ ಗುರುಶಿಷ್ಯರು ಒಬ್ಬರನ್ನೊ ಬ್ಬರು ಅರ್ಥಮಾಡಿಕೊಂಡು ವರ್ತಿಸುವ ಈ ಸಂದರ್ಭ ಎಲ್ಲರಿಗೂ ಹೌದೆನಿಸುವಂತಿದೆ.

ಇನ್ನು ಈ ಕೃತಿರತ್ನದ ಸೌಂದರ್ಯವನ್ನು ಕುರಿತು ಒಂದು ಮಾತು. ಶ್ರೀ ಪು. ತಿ. ನರಸಿಂಹಾಚಾರ್ಯರು ಕಲಾತಪಸ್ವಿಗಳಾಗಿ ತಮ್ಮ ತಪೋಸಾಧನೆಯಿಂದ ದೊರೆತ ಈ ಅನರ್ಘ್ಯ ರತ್ನವನ್ನು ಕನ್ನಡ ಮಾತೆಯ ಪೂಜಾ ಸಂದರ್ಭಕ್ಕೆ ಬೆಳಗುವ ದೀವಿಗೆಯಾಗಲೆಂದು ಅರ್ಪಿಸಿ ದ್ದಾರೆ. ಗಾಳಿ ಧೂಳುಗಳಿಂದ ಆರಿಹೋಗದೆ ಕುಂದದ ಕಾಂತಿಯುಳ್ಳದ್ದು ರತ್ನ. ಅಂತೆಯೇ ಇದೂ ಸಹ.

ಈ ಗೀತರೂಪಕದಲ್ಲಿ ಛಂದೋಬಂಧಗಳು ಜನಪ್ರಿಯವಾಗುವಂತೆ ಮೂಡಿಬಂದಿವೆ. ಭಾವಗೀತೆಗಳಂತಿರುವ ಮೇಳಗೀತಗಳೂ ಸ್ವತಂತ್ರ ಗೀತಗಳೂ ಸೊಗಸಾಗಿವೆ. ತಿರುಳನ್ನೊಳ ಗೊಂಡ ಲಲಿತವಾದ ಭಾಷೆ 'ಕನ್ನಡ ಕಸ್ತೂರಿ' ಯನ್ನು ಜ್ಞಾಪಕಕ್ಕೆ ತರುತ್ತದೆ.

ಇದೊಂದು ಗೀತರೂಪಕ. ರೂಪಕವೆಂದ ಕೂಡಲೇ ಅದರ ವ್ಯಾಪ್ತಿ ಕೋಣೆಗೆ ಮಾತ್ರ ವಿನಾಸಲಾಗದೆ ರಂಗಕ್ಕೂ ವ್ಯಾಪಿಸಿರಬೇಕಾದುದು ಅನಿವಾರ್ಯ. ಅಂತಹ ಯೋಗ್ಯತೆಯುಳ್ಳ ಈ ರೂಪಕವನ್ನು ರಂಗದ ಮೇಲೆ ತಂದು ಮನಸ್ಸಿನೊಡನೆ ಕಣ್ಣನ್ನೂ ತಣಿಸಿಕೊಳ್ಳುವ ಭಾರ ಕನ್ನಡಿಗರದಾಗಿದೆ.



### ವಿಜಯನಗರ ಸಾಮ್ರಾಜ್ಯ ಸಂಸ್ಥಾಪಕರಾದ

# ರಾಜಗುರು ವಿದ್ಯಾರಣ್ಯ ಕ್ರಿಯಾಶಕ್ತಿ ಗುರುವರೇಣ್ಯರು

**ಲೇಖಕರು : ಟಿ. ಎನ್. ಮಲ್ಲಪ್ಪ**

(ರಿ॥ ಹೈಕೋರ್ಟ್ ಜಡ್ಜ್, ಬೆಂಗಳೂರು)

ಭಾರತೀಯ ಸನಾತನ ಧರ್ಮವು ಮಹಮ್ಮದೀಯರ ಧಾಳಿಗೆ ಸಿಕ್ಕಿ ಅಧಃಪತನವಾಗುತ್ತಿದ್ದುದನ್ನು ತಡೆದು ಅದರ ಉದ್ಧಾರವನ್ನು ಕೈಗೊಂಡ ಕೀರ್ತಿ ಕರ್ನಾಟಕ ವಿಜಯನಗರ ಸಾಮ್ರಾಜ್ಯವನ್ನು ಇಂದೂ ಸ್ಮರಣೀಯವನ್ನಾಗಿ ಮಾಡಿದೆ; ದಕ್ಷಿಣ ದೇಶದಲ್ಲಿ ನಡೆದ ಅಲ್ಲಾವುದೀನನ ಹಾಗೂ ಅವನ ಸೇನಾಧಿಪತಿ ಮಲ್ಲಿಕಾಫುರನ ದಂಡಯಾತ್ರೆಗಳನ್ನು ಉತ್ತರ ದೇಶದಲ್ಲಿ ನಡೆದ ಘಜನಿ ಮಹಮದನ ದಂಡಯಾತ್ರೆಗಳನ್ನು ಸ್ಮೃತಿಪಥಕ್ಕೆ ತರುತ್ತವೆ. ದೇವಗಿರಿಯ ಸೇವುಣ ರಾಜ್ಯವು ಮಹಮ್ಮದೀಯರ ಧಾಳಿಯನ್ನು ತಡೆಯಲಾರದೆ ಅವರ ಅಧೀನವಾಯಿತು. ಪಾಂಡ್ಯರ ಮಧುರೆಯೂ ಮಹಮ್ಮದೀಯರ ಕೈವಶವಾಯಿತು. ಕರ್ನಾಟಕದ ಹೊಯ್ಸಳ ರಾಜನು ಸೋಲನ್ನು ಅನುಭವಿಸಿದರೂ ಮತ್ತೆ ಚೇತರಿಸಿಕೊಂಡನು. ಮೊದಲು ಮೊದಲು ಯಶಸ್ವಿಯಾಗಿ ಮಹಮ್ಮದೀಯರ ಆಕ್ರಮಣವನ್ನು ಎದುರಿಸಿ ಜಯಶೀಲನಾದವನು ಆಂಧ್ರ ದೇಶದ ಕಾಕತೀಯ ರಾಜನಾದ ರುದ್ರದೇವನು.[1] ಆದರೂ ಸಾವುಣರಾಜರು ಮಹಮ್ಮದೀಯರಿಗೆ ಮಾಡಿದ ಸಹಾಯದಿಂದಲೂ, ಸ್ವದೇಶದಲ್ಲಿಯೇ ಕೆಲವರೆಸಗಿದ ದ್ರೋಹದಿಂದಲೂ ರುದ್ರದೇವನು ಸೋತು ಸೆರೆಯಾಳಾದನು. ಆದರೆ ಆ ಧೀರನ ಅನುಯಾಯಿಗಳಾದ ಹರಿಹರನೂ ಅವನ ತಮ್ಮಂದಿರೂ ಸ್ವದೇಶವಾದ ಕರ್ನಾಟಕದ ಕಡೆಗೆ ಬಂದು ಅವರೊಡನೆ ಬಂದ ವಿದ್ಯಾರಣ್ಯ ಗುರುವರ್ಯರ ಪ್ರೋತ್ಸಾಹದಿಂದ ಹೊಯ್ಸಳರ ಬಲ್ಲಾಳ ರಾಜನಿಗೆ ನೆರವಾಗಿ ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿ ತುರುಷ್ಕರ ಉಪಟಳವನ್ನು ತಡೆದು ಸನಾತನ ಭಾರತೀಯ ಧರ್ಮವನ್ನು ಉದ್ಧಾರಮಾಡಿದುದು ಐದು ಶತಮಾನಗಳ ಹಿಂದಿನಿಂದಲೇ ರಚಿತವಾದ ಗ್ರಂಥಗಳಿಂದಲೂ ಶಾಸನಗಳಿಂದಲೂ ಪ್ರಸಿದ್ಧವಾದ ವಿಷಯವಾಗಿದೆ.

## ಫಾದರ್ ಹೆರಾಸರ ಸಂಶೋಧನೆ

ಭಕ್ತಿಭಾವಗಳಿಂದ ನಂಬಲ್ಪಟ್ಟಿದ್ದ ಪರಂಪರಾಗತವಾಗಿ ಬಂದ ಪ್ರತೀತಿಯಂತೆ ವಿದ್ಯಾರಣ್ಯ ಶ್ರೀಪಾದಗಳವರೇ ವಿಜಯನಗರ ರಾಜ್ಯಸ್ಥಾಪನೆಗೆ ಮೂಲಕಾರಣರು. ಬಹುಕಾಲದಿಂದ

1 There is evidence that Vira Rudra was the bulwork of Hinduism in the north where, in his time he checked the Mahamadan advance: Page 16 in S. Srikantiah's founders of Vijayanagaram.

ಬೆಳೆದು ನಿಂದ ಈ ನಂಬುಗೆಯೆಂಬ ಹೆಮ್ಮರವನ್ನು ಖಚಿತವಾದ ಆಧಾರಗಳಿಂದ ಕೂಡಿದ ವಾದವೈಖರಿಯಿಂದ ಬುಡಮೇಲು ಮಾಡಿದವರು ಪ್ರಸಿದ್ಧ ಐತಿಹಾಸಿಕ ಪಂಡಿತರಾದ ಫಾದರ್ ಹೆರಾಸರವರು. ಈ ವಾದದ ವೈಖರಿಯನ್ನೇ ಮುಂದುವರಿಸಿದವರು ಸಾಲತ್ತೂರು ಪ್ರಭುಗಳು. ಶ್ರೀ ವಿದ್ಯಾರಣ್ಯರಿಂದ ವಿಜಯನಗರ ರಾಜ್ಯಸ್ಥಾಪನೆಯಾಗಲಿಲ್ಲನೆಂದು ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್‌ಬಹದ್ದೂರ್ ನರಸಿಂಹಾಚಾರ್ಯರೂ ಡಾ|| ಕೃಷ್ಣನ್ ಮೊದಲಾದ ಐತಿಹಾಸಿಕ ಪಂಡಿತರೂ ಅಭಿಪ್ರಾಯಪಟ್ಟಿರುವರು. ಇದನ್ನೊಪ್ಪದ ಶ್ರೀಯುತ ಎಸ್. ಶ್ರೀಕಂಠಯ್ಯ ಮೊದಲಾದವರು ಸಹಾ ಫಾದರ್ ಹೆರಾಸರು ದೊಡ್ಡ ಪಂಡಿತರೆಂಬುದನ್ನು ಖಂಡಿಸಿಲ್ಲ. ಅವರ ವಿಷಯದಲ್ಲಿ ಗೌರವವನ್ನು ಸೂಚಿಸಿಯೇ ಅವರ ವಾದವನ್ನು ಖಂಡಿಸುವುದಾಗಿ ಶ್ರೀ ಎಸ್. ಶ್ರೀಕಂಠಯ್ಯನವರು ಹೇಳಿದ್ದಾರೆ. ಫಾದರ್ ಹೆರಾಸರು ಹೇಳಿರುವುದರಲ್ಲಿ, ವಿದ್ಯಾರಣ್ಯರು ವಿಜಯನಗರ ಸಂಸ್ಥಾಪಕರಲ್ಲವೆಂಬುದಕ್ಕಿಂತಲೂ ಉದ್ರೇಕಕಾರಿಯಾದುದು—ವಿದ್ಯಾರಣ್ಯರು ವಿಜಯನಗರ ಸಂಸ್ಥಾಪನೆಯನ್ನು ಮಾಡಿದರೆಂದು ಹೇಳುವ ಸುಳ್ಳು ಶಾಸನಗಳ ಸೃಷ್ಟನೆಗೆ ಶೃಂಗೇರಿ ಜಗದ್ಗುರುಗಳೇ ಕಾರಣರು ಎಂಬ ಅವರ ವಾದ. ಡಾ|| ನಂದೀಮಠರು ೧೯೩೬ನೆಯ ಇಸವಿಯ ಏಪ್ರಿಲ್-ಸೆಪ್ಟೆಂಬರ್ ವೀರಶೈವ ತ್ರೈಮಾಸಿಕದಲ್ಲಿ ಹೇಳಿರುವ ಮಾತು ಈಗ ಪಂಡಿತರು ಸಾಮಾನ್ಯವಾಗಿ ಪಡುವ ಅಭಿಪ್ರಾಯವನ್ನು ಸೂಚಿಸುತ್ತದೆ. ಅವರು ಹೇಳಿರುವುದಿದು—"ಫಾದರ್ ಹೆರಾಸರ ಈ ಮೇಲಿನ ಅಭಿಪ್ರಾಯ ಕಟು ಮತ್ತು ಕಠೋರ ವಾದುದು. ಐದಾರು ನೂರು ವರ್ಷಗಳಿಂದ ನಡೆದುಬಂದ, ಬಹು ಜನರು ಒಪ್ಪಿಕೊಂಡ ಅಭಿಪ್ರಾಯವನ್ನು ತಳ್ಳಿಹಾಕುವುದು ಕಠಿಣ. ಆದರೂ ಐತಿಹಾಸಿಕ ಆಧಾರಗಳ ಮೇಲೆ ನಿಲ್ಲಲಾರದ ಸಂಗತಿಗಳನ್ನು ನಂಬುವುದೂ ಕಠಿಣ. ಫಾದರ್ ಹೆರಾಸರು ತೋರಿಸಿದ ಆಧಾರಗಳನ್ನು ಖಂಡಿಸುವ ಪ್ರಬಲವಾದ ಸಾಧನಗಳು ದೊರೆಯುವವರೆಗೆ ಅವರು ಹೇಳಿದ ಮಾತುಗಳನ್ನು ಒಪ್ಪಿಕೊಳ್ಳಬೇಕಾಗುವುದು"—ಫಾದರ್ ಹೆರಾಸರೇ ಮೊದಲಾದವರು ಹೇಳುವ ಆಧಾರಗಳು ಅಂದು ಪ್ರಚಲಿತವಾಗಿ ನಂಬಲ್ಪಟ್ಟಿದ್ದ ಕೆಲವು ತಪ್ಪುತಿಳುವಳಿಕೆಗಳಿಂದ ತಪ್ಪಾಗಿ ಅನ್ವಯಿಸಲ್ಪಟ್ಟಿರುವುವೆಂಬುದನ್ನು ಪ್ರಬಲ ಆಧಾರಗಳಿಂದ ತೋರಿಸುವುದು ಈ ಲೇಖನದ ಒಂದು ಉದ್ದೇಶವಾಗಿದೆ.

## ನರಸಿಂಹಾಚಾರ್ಯರ ಸಂಶೋಧನೆ

ಐದಾರುನೂರು ವರ್ಷಗಳಿಂದಲೂ ಪ್ರಚಲಿತವಾಗಿ ನಂಬಲ್ಪಟ್ಟಿದ್ದ ಮತ್ತೊಂದು ವಿಷಯದ ನಂಬುಗೆಯನ್ನು ಬುಡಮೇಲು ಮಾಡಿದವರು ರಾವ್ ಬಹದ್ದೂರ್ ನರಸಿಂಹಾಚಾರ್ಯರು. ಹಿಂದುಗಳಿಗೆ ಪವಿತ್ರವೆಂದು ಪೂಜ್ಯತೆಯಿಂದ ಭಾವಿಸಲ್ಪಟ್ಟಿರುವ ವೇದಗಳಿಗೆ ಭಾಷ್ಯವನ್ನು ಬರೆದ ಕೀರ್ತಿ ಸಾಯಣಾಚಾರ್ಯರಿಗೆ ಸಲ್ಲುವುದು. ಇವರಿಗೆ ಮಾಧವಾಚಾರ್ಯರೆಂಬ ಸಹೋದರರಿದ್ದರು. ಇವರೀರ್ವರೂ ಅಲ್ಲದೆ "ಉಪನಿಷನ್ಮಾರ್ಗ ಪ್ರತಿಷ್ಠಾಗುರು" ಎಂದು ಶಾಸನಗಳಲ್ಲಿ ಹೊಗಳಲ್ಪಟ್ಟಿರುವ ಮತ್ತು ಸೂತ ಸಂಹಿತೆಗೆ ತಾತ್ಪರ್ಯದೀಪಿಕೆಯೆಂಬ ವ್ಯಾಖ್ಯಾನ ಬರೆದ ಮಾಧವಾಚಾರ್ಯರೆಂಬ ಮತ್ತೊಬ್ಬ ಘನವಿದ್ವಾಂಸರು ವಿಜಯನಗರದ ರಾಜ್ಯದಲ್ಲಿ ಮಂತ್ರಿಗಳಾಗಿದ್ದರು ಈ ಮಾಧವಾಚಾರ್ಯರು ಅನೇಕ ಶಾಸನಗಳಲ್ಲಿ ಹೊಗಳಲ್ಪಟ್ಟಿದ್ದಾರೆ. ಕ್ರಿ.ಶ. 1347 ಇಸವಿಯ ಶಾಸನವೊಂದರಲ್ಲಿ (E. C. VIII Shimoga375) "ಪ್ರಜ್ಞಾಬಲೇನ ಗುರು" ವೆಂದು ಹೊಗಳಲ್ಪಟ್ಟಿರುವಂತೆಯೇ "ಪರಂಜಯ" ಎಂದರೆ

ಶತ್ರುಗಳನ್ನು ಜಯಿಸುವವನು ಎಂದು ಇವರ ವಿಷಯದಲ್ಲಿ ಉಲ್ಲೇಖವಿದೆ. ಕ್ರಿ. ಶ. 1398ರ ಶಾಸನವೊಂದರಲ್ಲಿ ಇವರ ನಯ ಶೌರ್ಯ ಮುಖ್ಯಗುಣಗಳೂ ಬ್ರಾಹ್ಮಣ್ಯದ ವರ್ಚಸ್ಸೂ ಕ್ಷಾತ್ರ ತೇಜಸ್ಸೂ ಹೊಗಳಲ್ಪಟ್ಟಿವೆ.[1] ಉಪನಿಷನ್ಮಾರ್ಗ ಪ್ರತಿಷ್ಠಾ ಗುರುವೆಂದು ಪ್ರಸಿದ್ಧರಾದ ಈ ಮಾಧವಾಚಾರ್ಯರೇ ವಿದ್ಯಾರಣ್ಯರೆಂಬ ಪ್ರತೀತಿಯು ಇದ್ದಿತು. ಇವರಿಬ್ಬರಲ್ಲಿ ಯಾರೂ ವಿದ್ಯಾರಣ್ಯರಲ್ಲವೆಂದು ಸಿದ್ಧಾಂತವಾದ ಮೇಲೆ ಸಾಯಣಸಹೋದರರಾದ ಮಾಧವಾ ಚಾರ್ಯರೇ ವಿದ್ಯಾರಣ್ಯರೆಂಬ ಸಂಶೋಧನೆ ರಾವ್‌ಬಹದ್ದೂರ್ ನರಸಿಂಹಾಚಾರ್ಯರದು. ಕೊನೆಯದಾಗಿ "ಉಪನಿಷನ್ಮಾರ್ಗ ಪ್ರತಿಷ್ಠಾಗುರು" ವೆನಿಸಿದ ಮಾಧವಾಚಾರ್ಯರ ಗುರು ವಾದ, ರಾಯರಾಜಗುರುವೇ ಮೊದಲಾಗಿ ಹೊಗಳಲ್ಪಟ್ಟ ಕ್ರಿಯಾಶಕ್ತಿದೇಶಿಕರೇ ವಿದ್ಯಾರಣ್ಯ ರೆಂಬುದಾಗಿ ಡಾ|| ವೆಂಕಟಸುಬ್ಬಯ್ಯನವರು ನಿಶ್ಚಯಿಸಿದ್ದಾರೆ. ಇವರಲ್ಲಿ ಯಾರು ವಿದ್ಯಾರಣ್ಯರು ಎಂಬುದನ್ನು ನಿಶ್ಚಯಿಸುವುದೂ ಈ ಲೇಖನದ ಉದ್ದೇಶ.

## ಸಾಯಣಾಚಾರ್ಯರು ವಿದ್ಯಾರಣ್ಯರೇ?

ಬುಕ್ಕ ಮಹೀಪತಿಯ ಮಂತ್ರಿಗಳಾಗಿದ್ದವರು ಭಾರದ್ವಾಜಗೋತ್ರದ ಮಾಧವಾಚಾ ರ್ಯರು. ಬುಕ್ಕ ಮಹೀಪತಿಯಿಂದ ವೇದಭಾಷ್ಯವನ್ನು ಬರೆಯಬೇಕೆಂದು ಆಜ್ಞಪ್ತರಾದ ಈ ಮಾಧವಾಚಾರ್ಯರು, ಸರ್ವಜ್ಞರಾದ ಅವರ ಅನುಜ ಸಾಯಣಾಚಾರ್ಯರು ಆ ಕಾರ್ಯ ವನ್ನು ಮಾಡುವರೆಂದು ಹೇಳಲು, ಬುಕ್ಕ ಮಹೀಪತಿಯು ಆ ಕಾರ್ಯವನ್ನು ಮಾಡಬೇಕೆಂದು ತಮಗೆ ಆಜ್ಞಾಪಿಸಿದನೆಂದು ಸಾಯಣಾಚಾರ್ಯರೇ ಅವರ ಋಕ್ ಮತ್ತು ತೈತ್ತರೀಯ ಸಂಹಿತಾ ಭಾಷ್ಯಗಳ ಅವತರಣಿಕೆಯಲ್ಲಿ[2] ಹೇಳಿದ್ದಾರೆ. ಇದರಿಂದ ಸಾಯಣರೂ ಅವರ ಅಣ್ಣ ಮಾಧವಾಚಾರ್ಯರೂ ಒಬ್ಬರೇ ಅಲ್ಲವೆಂಬುದು ವ್ಯಕ್ತ. ಇವರು ಭಾರದ್ವಾಜ ಗೋತ್ರದವರು. 'ಉಪನಿಷನ್ಮಾರ್ಗ ಗುರು' ವೆಂದು ಪ್ರಸಿದ್ಧರಾದ ಇನ್ನೊಬ್ಬ ಮಾಧವಾಚಾರ್ಯರು ಆಂಗೀರಸ ಗೋತ್ರದವರು. ಆದುದರಿಂದ ಸಾಯಣರೂ ಇವರೂ ಒಂದೇ ಅಲ್ಲ. ಸಾಯಣಾಚಾರ್ಯರೂ ಮಾಧವಾಚಾರ್ಯರೂ ಒಬ್ಬರೇ ಎಂಬ ಭ್ರಾಂತಿಯಿಂದ ಸಾಯಣಾಚಾರ್ಯರು ವಿದಾರಣ್ಯ ರೆಂಬುದಾಗಿ ಹೇಳಲ್ಪಡುತ್ತಿದ್ದಿತು. ಆದರೆ ಹಾಗೆ ಹೇಳುವುದು ತಪ್ಪು; ಸಾಯಣಾಚಾರ್ಯರು

---

1 "ತಸ್ಯಾಸ್ತಿ ಶಸ್ತ ಯಶಸೋನಯ ಶೌರ್ಯಮುಖ್ಯೈಃ ಖ್ಯಾತೋ ಗುಣೈರ್ಜಗತಿ ಮಾಧವಯಿತ್ಯ ಮಾತ್ಯಃ ಯೋ ಬ್ರಹ್ಮಜಿಹ್ಮದಮನಾಧಿಕೃತಃಪವಿತ್ರಂಕ್ಷತ್ರಂಚ ಚೈತ್ರಮುಭಯಾಯಭುವೋಬಿ ಭರ್ತಿ"

2 . . . . . . ಬುಕ್ಕಮಹೀಪತಿಃ |
ಅನ್ವಶಾನ್ ಮಾಧವಾಚಾರ್ಯಂ ವೇದಾರ್ಥಸ್ಯ ಪ್ರಕಾಶನೇ ॥ ೮ ॥
ಸಾ ಪ್ರಾಹ ನೃಪತಿಂ ರಾಜನ್ ಸಾಯಣಾರ್ಯೋ ಮಮಾನುಜಃ |
ಸರ್ವಂ ವೇ ತ್ಯೇಷಾಂ ವೇದಾನಾಂ ವಾಖ್ಯಾತ್ರಿತ್ವೇ ನಿಯುಜ್ಯತಾ' ॥ ೯ ॥
ಇತ್ಯುಕ್ತೋ ಮಾಧವಾಚಾರ್ಯೇಣ ವೀರ ಬುಕ್ಕಮಹೀಪತಿಃ |
ಅನ್ವಶಾತ್ ಸಾಯಣಾಚಾರ್ಯಂ ವೇದಾರ್ಥಸ್ಯ ಪ್ರಕಾಶನೇ ॥ ೧೦ ॥
ಯೇ ಪೂರ್ವೋತ್ತರ ಮೀಮಾಂಸೇತೇ ವ್ಯಾಖ್ಯಾಯಾತಿ ಸಂಗ್ರಹಾತ್ |
ಕೃಪಾಳುಃ ಸಾಯಣಾಚಾರ್ಯೋ ವೇದಾರ್ಥಂ ವಕ್ತುಮುದ್ಯತಃ ॥ ೧೧ ॥

ವಿದ್ಯಾರಣ್ಯರಲ್ಲವೆಂಬುದು ಸ್ಪಷ್ಟ. ಈ ವಿಷಯವು ಈಗ ನಿರ್ವಿವಾದವಾಗಿದೆಯೆನ್ನಬಹುದು.[1] ಇನ್ನು ಮಾಧವಾಚಾರ್ಯರಿಬ್ಬರಲ್ಲಿ ಯಾರಾದರೂ ವಿದ್ಯಾರಣ್ಯರೇ ಎಂಬುದು ವಿಚಾರಾರ್ಹ ವಾಗಿದೆ.

## ಆಂಗೀರಸ ಗೋತ್ರದ ಮಾಧವಾಚಾರ್ಯರು ವಿದ್ಯಾರಣ್ಯರೇ ?

"ಉಪನಿಷನ್ಮಾರ್ಗ ಪ್ರತಿಷ್ಠಾಗುರು" ವೆಂದೂ ಸೂತ ಸಂಹಿತಾ ತಾತ್ಪರ್ಯ ದೀಪಿಕಾ ಗ್ರಂಥಕರ್ತರೆಂದೂ ಶಾಸನಗಳಲ್ಲಿ ಹೊಗಳಲ್ಪಟ್ಟ ಆಂಗೀರಸ ಗೋತ್ರದ ಮಾಧವಾಚಾರ್ಯರು ವಿದ್ಯಾರಣ್ಯರಲ್ಲವೆಂದೂ ಸಾಯಣಾನುಜರಾದ ಭಾರದ್ವಾಜ ಗೋತ್ರದ ಮಾಧವಾಚಾರ್ಯರೇ ವಿದ್ಯಾರಣ್ಯರೆಂದೂ ಶ್ರೀ ನರಸಿಂಹಾಚಾರ್ಯರು ಇಂಡಿಯನ್ ಆಂಟಿಕ್ವೆರಿಯ 1916ರ ಜನವರಿ ಮತ್ತು ಫೆಬ್ರವರಿ ಸಂಚಿಕೆಗಳಲ್ಲಿ ಬರೆದ ಲೇಖನದಲ್ಲಿ ಸಾಧಿಸಿದ್ದಾರೆ. ವಿ. ಸುಬ್ರಹ್ಮಣ್ಯ ಐಯರರು ಇದನ್ನು ಮಿಥಿಕ್ ಸೊಸೈಟಿ ಜರ್ನಲ್ VII ಪುಟ 217ರಲ್ಲಿ ಪ್ರಕಟವಾದ ಲೇಖನದಲ್ಲಿ ಖಂಡಿಸಿದ್ದಾರೆ. ವಿ. ಸುಬ್ರಹ್ಮಣ್ಯ ಐಯರರ ಮುಖ್ಯ ಆಕ್ಷೇಪಣೆ, ಅಪ್ರಸಿದ್ಧರಾದ ಮತ್ತು ಯಾವ ವೇದಾಂತ ಗ್ರಂಥವನ್ನೂ ಬರೆಯದಿರುವ ಭಾರದ್ವಾಜ ಗೋತ್ರದ ಮಾಧವಾಚಾರ್ಯರು ಹೇಗೆ ವಿದ್ಯಾರಣ್ಯರಾದಾರು ಎಂಬುದೇ ಆಗಿದೆ. ಮಿಥಿಕ್ ಸೊಸೈಟಿಯ ಜರ್ನಲ್ VII ಪುಟ 318ರ ಲೇಖನದಲ್ಲಿ ಡಾ|| ನರಸಿಂಹಾಚಾರ್ಯರು ಮೇಲಿನ ಲೇಖನಕ್ಕೆ ಕೊಟ್ಟಿರುವ ಉತ್ತರ ದಲ್ಲಿ ಭಾರದ್ವಾಜ ಗೋತ್ರದ ಮಾಧವಾಚಾರ್ಯರು ಘನ ವಿದ್ವಾಂಸರಾಗಿದ್ದರೆಂಬುನ್ನು ಪ್ರಸ್ತಾ ಪಿಸಿಯೇ ಇಲ್ಲ; ಆಂಗೀರಸ ಮಾಧವಾಚಾರ್ಯರು ವಿದ್ಯಾರಣ್ಯರಲ್ಲವೆಂಬುದಕ್ಕೆ ಮಾತ್ರ ಕಾರಣಗಳನ್ನು ಕೊಟ್ಟಿದ್ದಾರೆ. ಮೇಲ್ಕಂಡ ಲೇಖನಗಳು ಪಠನಾರ್ಹವಾಗಿವೆ. ಆಂಗೀರಸ ಗೋತ್ರದ ಮಾಧವಾಚಾರ್ಯರು ವಿದ್ಯಾರಣ್ಯರು ಕಾಲವಾದರೆಂದು ತಿಳಿದುಬಂದಿರುವ ಕಾಲ ಕ್ಕಿಂತಲೂ ಮುಂದೆ ಎಂದರೆ ಕ್ರಿ. ಶ. 1391ರ ವರೆಗೂ ಬದುಕಿದ್ದರೆಂದೂ ಅವರು ಮರಣ ಹೊಂದುವ ಕಾಲದಲ್ಲಿ ಒಂದು ಗ್ರಾಮವನ್ನು ಮಾಧವಪುರವೆಂಬ ಹೆಸರಿನಲ್ಲಿ ದಾನಮಾಡಿರುವ ರೆಂದೂ ಆದರಿಂದ ಅವರು ಕೊನೆಯವರೆಗೂ ಮಾಧವಾಚಾರ್ಯರೆಂಬ ಹೆಸರನ್ನು ತ್ಯಜಿಸಿ ವಿದ್ಯಾರಣ್ಯರೆಂಬ ಹೆಸರಿನಿಂದ ಸಂನ್ಯಾಸಿಗಳಾಗಲಿಲ್ಲವೆಂದೂ ಹೇಳಿದ್ದಾರೆ. ಇದರಿಂದ ಆಂಗೀರಸ ಗೋತ್ರದ ಮಾಧವಾಚಾರ್ಯರು ವಿದ್ಯಾರಣ್ಯರಲ್ಲನೆಂಬುದು ಸ್ಪಷ್ಟವಾದಂತಾಯಿತು. ಮುಂದೆ ಇದೇ ವಿಷಯಗಳನ್ನು (VIII Q. J. M. S. 118ರಲ್ಲಿ)ಪ್ರಸ್ತಾಪಿಸಿರುವ ಡಾ|| ವೆಂಕಟಸುಬ್ಬಯ್ಯ ನವರಾಗಲೀ, 'Founders of Vijayanagara' ಎಂಬ ಗ್ರಂಥದಲ್ಲಿ ಪ್ರಸ್ತಾಪಿಸಿರುವ ಶ್ರೀ ಎಸ್. ಶ್ರೀಕಂಠಯ್ಯನವರಾಗಲೀ, 'ವೀರಶೈವ' ತ್ರೈಮಾಸಿಕದಲ್ಲಿ ಪ್ರಸ್ತಾಪಿಸಿರುವ ಡಾ|| ನಂದೀಮಠರಾಗಲೀ ರಾವ್ ಬಹದ್ದೂರ್ ನರಸಿಂಹಾಚಾರ್ಯರು ಹೀಗೆ ಹೇಳಿರುವ ವಿಷಯ

---

1 "Mr. Narasimhachar has proved bayond a doubt that Sayana was not identical with Madhava who was his brother"—By V. Subrahamanya Iyer in VII Q.J.M.S. 217 on page 218.

The old Sayana-Madhava theory has been given up and I have no wish to raise it up again—Founders of Vijayanagaram by **Sri S. Srikantiah, page 155.**

ಗಳನ್ನು ಖಂಡಿಸಿಲ್ಲ. ಮತ್ತಾವ ವಿದ್ವಾಂಸರು ಖಂಡಿಸಿರುವುದೂ ಕಂಡು ಬಂದಿಲ್ಲ. ಈ ಮಾಧವಾಚಾರ್ಯರಿಗೆ ಬೊಟ್ಟರಸನೆಂಬ ಮಗನಿದ್ದನೆಂದು ತಿಳಿದುಬರುತ್ತದೆ. (ಮೈಸೂರು ಗೆಜೆಟಿಯರ್ ಪುಟ 1444) ಆದುದರಿಂದ ಆಂಗೀರಸ ಮಾಧವಾಚಾರ್ಯರು ವಿದ್ಯಾರಣ್ಯರೆಂಬ ಸಂನ್ಯಾಸಿಗಳಲ್ಲವೆಂಬ ತೀರ್ಮಾನವು ಸಾಯಣಾಚಾರ್ಯರು ವಿದ್ಯಾರಣ್ಯರಲ್ಲವೆಂಬ ತೀರ್ಮಾನದಷ್ಟೇ ನಿರ್ವಿವಾದ ವಿಷಯವಾಗಿರುತ್ತದೆ. ಶ್ರೀ ನರಸಿಂಹಾಚಾರ್ಯರ ವಾದವು ಉಲ್ಲೇಖಾರ್ಹವಾಗಿದೆ[1] ಅಲ್ಲದೆ ಈ ಆಂಗೀರಸ ಮಾಧವಾಚಾರ್ಯರ ವಿಷಯದಲ್ಲಿ ಅವರ ಮರಣ ಕಾಲದವರೆಗೂ ಅನೇಕ ಶಾಸನಗಳಲ್ಲಿ–ದೇವಗುರು ಬೃಹಸ್ಪತಿಯೇ ಇವರು ಎಂಬಂತೆ–ಹೊಗಳಲ್ಪಟ್ಟಿದ್ದರೂ ಅವರು ವಿದ್ಯಾರಣ್ಯರಾಗಿದ್ದರೆಂದಾಗಲೀ ವಿಜಯ ನಗರ ಸಂಸ್ಥಾಪನೆಗೆ ಕಾರಣರಾದ ಸಂನ್ಯಾಸಿಗಳೆಂದಾಗಲೀ ಹೊಗಳಲ್ಪಡದಿರುವುದರಿಂದ ಅವರು ವಿದ್ಯಾರಣ್ಯರಲ್ಲವೆಂಬುದು ಖಚಿತವಾದುದೇ ಆಗಿದೆ.

## ಭಾರದ್ವಾಜ ಗೋತ್ರದ ಮಾಧವಾಚಾರ್ಯರು ವಿದ್ಯಾರಣ್ಯರೆ?

ಇನ್ನೊಬ್ಬರಾದ ಮಾಧವಾಚಾರ್ಯರು ಭಾರದ್ವಾಜ ಗೋತ್ರದವರು. ವೇದಭಾಷ್ಯವನ್ನು ಬರೆದ ಸಾಯಣರ ಅನುಜರು. ಹಿಂದೆ ಹೇಳಿದಂತೆ, ಇವರು ವೇದಭಾಷ್ಯವನ್ನು ಬರೆಯಬೇಕೆಂದು ಬುಕ್ಕ ಮಹೀಪತಿಯಿಂದ ಆಜ್ಞಪ್ತರಾದರೂ ತಾವು ಅದನ್ನು ಬರೆಯದೆ ತಮ್ಮ ಅನುಜರಾದ ಸಾಯಣಾಚಾರ್ಯರೇ ಸರ್ವಜ್ಞರೆಂದೂ ವೇದಭಾಷ್ಯವನ್ನು ಬರೆಯಲು ಅವರೇ ತಕ್ಕವರೆಂದೂ ಹೇಳಲು ಸಾಯಣಾಚಾರ್ಯರು ಬುಕ್ಕಮಹೀಪತಿಯಿಂದ ಆಜ್ಞಪ್ತರಾಗಿ ವೇದಭಾಷ್ಯಗಳನ್ನು ಬರೆದರು, ಧಾತುವೃತ್ತಿ ಮೊದಲಾದ ಗ್ರಂಥಗಳೂ ಸಾಯಣಾಚಾರ್ಯರಿಂದ ರಚಿತವಾದುವೇ ಹೊರತು ಮಾಧವಾಚಾರ್ಯರಿಂದ ರಚಿತವಾದುವಲ್ಲವೆಂಬುದನ್ನು ಡಾ|| ವೆಂಕಟಸುಬ್ಬಯ್ಯನವರು Q. J. M. S. VIII 118ರಲ್ಲಿ ಪ್ರಕಟವಾದ 'ರಾಜಗುರು ಕ್ರಿಯಾಶಕ್ತಿ' ಎಂಬ ಲೇಖನದಲ್ಲಿ ಸಿದ್ಧಾಂತಮಾಡಿದ್ದಾರೆ. ಪಂಚದಶಿಯು ಮಾಧವಾ

---

1 In my article I have quoted a record from thc *Journal of the Bombay Branch of the Royal Asiatic Society* which gives A. D. 1931 as the date of Madhava A's death, while a copper plate inscription in the possition of Sringeri *matha* gives A. D. 1386 as the date of Vidyaranya's death. (2) According to a record at Sringeri, Vidyaranya died at Hampi, but according to the above mentioned record in the Bombay Journal, Madhava A died on the West-coast. (3) Another record at Sringeri says that King Bukka brought Vidyaranya to Sringeri and directed Madarasa i.e. Madhava A, to grant lands in Kikunda nadu and Hiriya Kodu nadu which belonged to the province under his rule for the livlihood of the ascetics and desciples in the *matha* of Vidyaranya. (4) The above mentioned record in the Bombay Journal registers the grant by Madhava A who was on his deathbed of a village which was

ಚಾರ್ಯರ ಕೃತವೆಂಬ ವಿಷಯದಲ್ಲಿ ಅದು ಸರಿಯೆಂಬುದಕ್ಕೆ ಯಾವ ಆಧಾರವೂ ಇಲ್ಲವೆಂದು ಹೇಳಿದ್ದಾರೆ. ಆದರೆ ಇದಕ್ಕೂ ಮುಂದೆ ಹೋಗಿ, ಶ್ರೀಯುತ ಹಯವದನರಾಯರು ೧೧ನೆಯ ಮೈಸೂರ್ ಗೆಜಿಟಿಯರ್ 1441ನೆಯ ಪುಟದಲ್ಲಿ, ಸಾಯಣ ಮಾಧವಾಚಾರ್ಯರುಗಳ ಕಾಲಕ್ಕಿಂತಲೂ ಒಂದು ಶತಮಾನದ ನಂತರ ಪಂಚದಶಿಯು ಹುಟ್ಟಿದ ಗ್ರಂಥವೆಂದು ನಿರ್ಧರಿಸಿದ್ದಾರೆ.[3] ಉಪನಿಷನ್ಮಾರ್ಗ ಪ್ರತಿಷ್ಠಾ ಗುರುವೆನಿಸಿದ ಆಂಗೀರಸ ಮಾಧವರಂತೆಯಾಗಲೀ ಸಾಯಣಾಚಾರ್ಯರಂತೆಯಾಗಲೀ ವಿದ್ವತ್ತಿಗೆ ಪ್ರಸಿದ್ಧರಲ್ಲದ ಭಾರದ್ವಾಜ ಗೋತ್ರದ ಮಾಧವಾಚಾರ್ಯರು ವಿದ್ಯಾರಣ್ಯರಾದರೆಂದು ಹೇಳುವುದು ನಿರಾಧಾರವಾದುದೆಂಬ ವಿ. ಸುಬ್ರಹ್ಮಣ್ಯ ಅಯ್ಯರರ ವಾದವನ್ನು ಡಾ|| ವೆಂಕಟಸುಬ್ಬಯ್ಯನವರು ಚೆನ್ನಾಗಿ ಸಮರ್ಥಿಸಿದ್ದಾರೆ. ಅಲ್ಲದೆ ಸಾಯಣರೂ ಅವರ ಅನುಜ ಮಾಧವರೂ ಬುಕ್ಕಮಹೀಪತಿಯಿಂದ ಆಜ್ಞಪ್ತರಾದರೆಂದು ಸಾಯಣರೇ ಹೇಳಿರುವುದನ್ನು ಹಿಂದೆ ಹೇಳಿದೆ. ವಿದ್ಯಾರಣ್ಯರೆಂಬ ಹೆಸರಿನಿಂದ ಸಂನ್ಯಾಸಿಗಳಾಗಿ ಹರಿಹರನ ಕಾಲದಲ್ಲಿ ಇವರಲ್ಲಿ ಯಾರಾದರೂ ವಿಜಯನಗರ ರಾಜ್ಯಸ್ಥಾಪನೆಗೆ ಕಾರಣರಾಗಿದ್ದರೆ, ಅಂತಹವರನ್ನು ಬುಕ್ಕಮಹೀಪತಿಯು ಆಜ್ಞಾಪಿಸುತ್ತಿರಲಿಲ್ಲವೆಂಬ ಡಾ|| ವೆಂಕಟಸುಬ್ಬಯ್ಯನವರ ವಾದವು ಗಮನಾರ್ಹವಾಗಿದೆ. ಮಾಧವಾಚಾರ್ಯರೆಂಬುವರಾರೂ ವಿದ್ಯಾರಣ್ಯರಾದರೆಂಬುದಕ್ಕೆ ಯಾವ ಶಾಸನಾಧಾರವಿಲ್ಲವೆಂಬುದನ್ನು ರಾವ್‌ಬಹದ್ದೂರ್ ನರಸಿಂಹಾಚಾರ್ಯರು ಒಪ್ಪಿರುವರೆಂದೂ ಅದಕ್ಕೆ ಗ್ರಂಥಾಧಾರವು ಇರುವುದನ್ನು ಅವರು ತೋರಿಸಿಲ್ಲವೆಂದೂ ವಿ. ಸುಬ್ರಹ್ಮಣ್ಯ ಅಯ್ಯರರು ಪೂರ್ವೋಕ್ತ ಲೇಖನದಲ್ಲಿ ಆಕ್ಷೇಪಿಸಿದ್ದಾರೆ. ಆದರೆ ಇದಕ್ಕೆ ಉತ್ತರವಾದ ಲೇಖನದಲ್ಲಿ ನರಸಿಂಹಾಚಾರ್ಯರು ಯಾವ ಶಾಸನಾಧಾರವನ್ನಾಗಲೀ ಗ್ರಂಥಾಧಾರವನ್ನಾಗಲೀ ಕೊಟ್ಟಿಲ್ಲ. ಆದುದರಿಂದ ಮಾಧವಾಚಾರ್ಯರು ವಿದ್ಯಾರಣ್ಯರಾದರೆಂಬುದು ಐತಿಹ್ಯದ ಆಧಾರದ ಮೇಲೆ ಮಾತ್ರ ನಿಂತಿದೆ. ನರಸಿಂಹಾಚಾರ್ಯರು ಹೇಳುವಂತೆ ಈ ಐತಿಹ್ಯದ ಪ್ರಕಾರ ಮಾಧವಾಚಾರ್ಯರು ಮಂತ್ರಿಪದವಿಯನ್ನು ತೊರೆದು ಅಂತ್ಯಕಾಲದಲ್ಲಿ ಸಂನ್ಯಾಸವನ್ನು ಸ್ವೀಕರಿಸಿದರು ಎಂಬುದೇ ಆಗಿದೆ. ಇದು ನಿಜವಾದರೂ ಬುಕ್ಕ ಮತ್ತು

---

named Madhavapura after the donor. This shows that Madhava A was not Vidyaranya even at the time of his death ; else the village would naturally have been named Vidyaranyapura. The Sringeri inscription referred to above as giving the date of Vidyaranya's death records the grant by King Harihara II, of a village named Vidyaranyapura after the sage. These facts can lead to but one conclusion namely that Madhava A was not Vidyaranya. The fact is that Madhava A was only a provincial governor and he died as such. *He was never a sanyasi.*

2 Panchadasi which has been attributed to Mayana Madhava is neither his work nor that of Sayana Madhava. Its author praises in the opening verses (1 & 2) his guru . . . Shankarananda Bharati . . . who came a century later. He was consecrated in 1428 A. D.

3 ಮೋಕ್ಷಪ್ರಾಪ್ತಿರ್ನತ್ವ ಸಂನ್ಯಾಸಿನಃ.

ಎರಡನೆಯ ಹರಿಹರನ ಕಾಲದಲ್ಲಿ ಮಂತ್ರಿಗಳಾಗಿದ್ದ ಇಬ್ಬರು ಮಾಧವಾಚಾರ್ಯರಾಗಲೀ ಸಾಯಣಾಚಾರ್ಯರಾಗಲೀ ಆ ವೇಳೆಗೆ ಗತಿಸಿಹೋಗಿದ್ದ ಮೊದಲನೆಯ ಹರಿಹರನು ವಿಜಯ ನಗರ ರಾಜ್ಯಸಂಸ್ಥಾಪನೆ ಮಾಡಿದುದಕ್ಕೆ ಸಹಾಯಮಾಡಿದ ಸಂನ್ಯಾಸಿಯಾಗಿರಲಾರರು. ಅಥವಾ ಒಂದುವೇಳೆ ಅವರು ಆ ಹಿಂದೆಯೇ ಸಂನ್ಯಾಸಿಗಳಾಗಿದ್ದರೆ ಅದನ್ನು ತ್ಯಜಿಸಿ ಮಂತ್ರಿಗಳಾಗಿ ಕಾರ್ಯಭಾರ ನಡೆಸಿರಲಾರರು ಏಕೆಂದರೆ ಸಂನ್ಯಾಸವನ್ನು ತ್ಯಜಿಸಿ ರಾಜಕೀಯ ಸಂಸ್ಕಾರಕ್ಕೆ ಇಳಿಯುವುದು ಶಾಸ್ತ್ರವಿರುದ್ಧವಾದುದೇ ಅಲ್ಲದೆ, ಶ್ರೀ ಶಂಕರಾಚಾರ್ಯರು ಸಂನ್ಯಾಸಿಯಲ್ಲ ದವನಿಗೆ ಮೋಕ್ಷಪ್ರಾಪ್ತಿಯಾಗುವುದಿಲ್ಲವೆಂದು ಅವರ ಗೀತಾಭಾಷ್ಯದಲ್ಲಿ ಹೇಳಿದ್ದಾರೆ. ಐತಿಹ್ಯವೇ ಆಧಾರವಾದ ಈ ನಂಬುಗೆಯ ಪ್ರಕಾರವಾದರೂ ಸಾಯಣಾನುಜ ಮಾಧವಾ ಚಾರ್ಯರಿಗೂ ಶೃಂಗೇರಿ ಜಗದ್ಗುರುತ್ವಕ್ಕೂ ವಿದ್ಯಾರಣ್ಯರಿಗೂ ಯಾವ ಸಂಬಂಧವೂ ಇಲ್ಲ. ಈ ಐತಿಹ್ಯದಂತೆ ಮಂತ್ರಿಗಳಾಗಿದ್ದ ಸಾಯಣಾನುಜ ಮಾಧವರು ರಾಜ್ಯಭಾರ ಕಾರ್ಯವನ್ನು ಮುಗಿಸಿಕೊಂಡು, ಮುಳ್ಬಾಗಿಲಿಗೆ ಹೋಗಿ ಆ ಮಠದ ಗುರುಗಳಾಗಿ ಸಂನ್ಯಾಸವನ್ನು ಸ್ವೀಕರಿಸಿ ದರು[1] ಸಾಯಣಾಚಾರ್ಯರಾಗಲೀ ಅವರ ಅನುಜ ಮಾಧವಾಚಾರ್ಯರಾಗಲೀ ಶೃಂಗೇರಿ ಮಠದ ಗುರುಗಳಾದ ವಿದ್ಯಾರಣ್ಯರಲ್ಲವೆಂಬುದು ಕ್ರಿ.ಶ. 1705ರಲ್ಲಿಯೇ ಶೃಂಗೇರಿ ಮಠದ ಜಗದ್ಗುರುಗಳಾದ ಸಚ್ಚಿದಾನಂದ ಭಾರತಿಯವರ ಅಪ್ಪಣೆಯ ಪ್ರಕಾರ ಬರೆಯಲ್ಪಟ್ಟ ಗ್ರಂಥ ವಾದ ಗುರುವಂಶ ಕಾವ್ಯದಿಂದಲೇ ವ್ಯಕ್ತವಾಗುತ್ತದೆ. ಮಠದ ಐತಿಹ್ಯವನ್ನೆಲ್ಲ ಸಂಗ್ರಹಿಸಿ, ವಿಮರ್ಶೆಗೊಳಗಾದ ಮೇಲೆ ಬರೆದ ಗ್ರಂಥವಿದೆಂದೂ, ಇದು ಮಠದ ಚರಿತ್ರೆಯ ವಿಷಯದಲ್ಲಿ ಉತ್ತಮವಾದ ವಿಷಯಗಳನ್ನು ಒದಗಿಸುವುದೆಂದೂ ಡಾ. ಕೃಷ್ಣರು ಹೇಳಿರುವ ಅಭಿಪ್ರಾಯ ವನ್ನು ಶ್ರೀ ಎಸ್. ಶ್ರೀಕಂಠಯ್ಯನವರು ಅನುಮೋದಿಸಿರುವುದರಿಂದ ಅವರ ಪೂರ್ವೋಕ್ತ ಗ್ರಂಥದಲ್ಲಿ ಅದನ್ನು ಉಲ್ಲೇಖಿಸಿದ್ದಾರೆ. ಶೃಂಗೇರಿ ಮಠದ ಗುರುವಂಶ ವಿಷಯವನ್ನೂ ಹೇಳುವ ಈ ಗ್ರಂಥದಲ್ಲಿಯೇ ಸಾಯಣರೂ ಅವರ ಅನುಜರಾದ ಮಾಧವರೂ ವಿದ್ಯಾರಣ್ಯರನ್ನು ಸಂಧಿಸಿ ಪುತ್ರಾಪೇಕ್ಷೆಯನ್ನು ವ್ಯಕ್ತಪಡಿಸಿದರೆಂದು ಹೇಳಿದೆ. ಇದರಿಂದ ಸಾಯಣರಾಗಲೀ ಅವರ ಅನುಜ ಮಾಧವರಾಗಲೀ ವಿದ್ಯಾರಣ್ಯರಲ್ಲವೆಂಬುದು ಖಚಿತವಾದ ವಿಷಯವಾಗಿದೆ. ಸಾಯಣರಿಗೆ ಹೇಮಾವತಿಯೆಂಬ ಹೆಂಡತಿಯೂ ಮೂವರು ಗಂಡು ಮಕ್ಕಳೂ ಇದ್ದರೆಂದು "ಉದಾಹರಣ ಮಾಲೆ" ಯಿಂದ ತಿಳಿದುಬರುತ್ತದೆ.

ಚರ್ವಿತ ಚರ್ವಣವಾದರೂ, ಸಾಯಣಾಚಾರ್ಯರಾಗಲೀ ಅವರ ಅನುಜ ಭಾರದ್ವಾಜ ಗೋತ್ರದ ಮಾಧವಾಚಾರ್ಯರಾಗಲೀ ವಿದ್ಯಾರಣ್ಯರಲ್ಲವೆಂಬ ವಿ. ಸುಬ್ರಹ್ಮಣ್ಯ ಐಯ್ಯರರ ಮತ್ತು ಡಾ. ವೆಂಕಟಸುಬ್ಬಯ್ಯನವರ ವಾದವನ್ನು ಪುಷ್ಟೀಕರಿಸಿ, ಖಚಿತವಾದ ಈ ವಿಷಯವನ್ನು ಮತ್ತಷ್ಟು ಖಚಿತಗೊಳಿಸುವ ಮತ್ತೆರಡು ಆಧಾರಗಳಿಂದ ಮುಕ್ತಾಯಗೊಳಿಸಬಹುದು.

---

1 There is a tradition that while Sayana was guru at Sringeri, Madhavacharya his brother had no conorcetion with the *peetha*. He was only a layman concerned with the day to day administration of the newly found empire and very late in life, when his work was complete he became a *sanyasi* came to Avani in Mulbagal Rajya and founded a *matha* there. It is said that he died there. —Founders of Vijayanagara by S. Srikantiah, page 157.

ಸಾಯಣಾಚಾರ್ಯರು ಅನೇಕ ಗ್ರಂಥಗಳನ್ನು ರಚಿಸಿದ್ದರೂ ಅದು ಯಾವುದರಲ್ಲಿಯೂ, ತಾವಾಗಲೀ ತಮ್ಮ ಅನುಜರಾದ ಮಾಧವರಾಗಲೀ ವಿದ್ಯಾರಣ್ಯರೆಂಬ ಹೆಸರಿನಿಂದ ಸಂನ್ಯಾಸಿಗಳಾದುದನ್ನು ಹೇಳಿಲ್ಲ. ಸಾಯಣರು ಅವರ ಪುರುಷಾರ್ಥ ಸುಧಾನಿಧಿಯಲ್ಲಿ ಮಾಧವಾಚಾರ್ಯರು ಮಂತ್ರಿಗಳಾಗಿದ್ದುದನ್ನೂ ಅವರ ಅನಂತ ಸೌಭಾಗ್ಯ ಗುಣಗಳನ್ನೂ ವರ್ಣಿಸಿರುವರಾದರೂ ಅವರು ವಿದ್ಯಾರಣ್ಯರಾಗಿದ್ದರೆಂಬುದನ್ನು ಹೇಳಿಲ್ಲ. ಇನ್ನು ಇವರ ಕಾಲಾನಂತರ ಇವರ ತಂಗಿ ಸಿಂಗಳೆಯ ಮಗನಾದ ಲಕ್ಷ್ಮೀಧರನು (SII IV. P. 61) ತನ್ನ ಶಾಸನವೊಂದರಲ್ಲಿ ಹೀಗೆ ವರ್ಣಿಸಿದ್ದಾನೆ—

"ಆ ದೇವರಾಯ ಭೂಪನ | ಯಾದವ ವಂಶ ಪ್ರದೀಪನ ಸ್ವಯದೇಶದೊಳ್ ಸಂ |
ದಾದಿಪ್ರಧಾನರೀ ಧರೆ | ಗಾದರ್ ಮಾದರಸ ಸಾಯಣಾಖ್ಯರ್ ಮುಖ್ಯರ್ ||
ತೋಡದ ಭಾವಿಯಿಲ್ಲ ಮರೆಕಟ್ಟದ ಪರ್ಗೆರೆಯಿಲ್ಲ ಲೀಲೆಯಿಂ |
ಮಾಡದ ದೇವತಾ ಭವನಮಿಲ್ಲೊ ಲವಿಂ ಬಿಡದಗ್ರಹಾರಮಿ |
ಲ್ಲಾ ಡಲದೇನೊ ಭೂಭುವನ ಬುಂಭುಕಮಾದುದು ಕೀರ್ತಿಭಾಪುನಾ |
ಡಾಡಿಯೆ ಸೈಪು ಮಾದರಸ ಸಾಯಣರೆಂಬ ಮಹಾ ಪ್ರಧಾನರಾ ||
ಅವರಂ ಬಲಭದ್ರಾಚ್ಯುತ | ರಿವರೆನೆ ಜನರವರ ತಂಗಿ ಸಿಂಗಲೆ, ಭುವನ ||
ಸ್ತವನೀಯ ಚರಿತೆ ಸಂತತ | ಮವನೀತಳದೊಳ್ ಸುಭದ್ರೆಯೆನಿಪುದುಪಿರಿದೇಂ ||"

ಈ ಶಾಸನವನ್ನು ಬರೆಸಿದ ಲಕ್ಷ್ಮಣನು ಕ್ರಿ.ಶ. 1406 ರಿಂದ 1418ರ ವರೆಗೆ ಆಳಿದ ದೇವರಾಯನ ಮಂತ್ರಿಯಾಗಿದ್ದನು. ಹೀಗೆ ಶಾಸನದಲ್ಲಿ ಸಾಯಣಮಾಧವಾಚಾರ್ಯರುಗಳನ್ನು ಅವರ ಸೋದರಳಿಯನಾದ ಈ ಲಕ್ಷ್ಮಣಾಮಾತ್ಯನು ಬಲರಾಮ ಕೃಷ್ಣರಿಗೆ ಹೋಲಿಸಿ ಅವರು ಮಾಡಿದ ಸತ್ಕಾರ್ಯಗಳನ್ನು ವರ್ಣಿಸಿರುವನೆಂದ ಮೇಲೆ ಅವರಲ್ಲಿ, ಯಾರಾದರೂ ವಿದ್ಯಾರಣ್ಯರಾಗಿ, ವಿಜಯನಗರ ರಾಜ್ಯಸ್ಥಾಪನೆಗೆ ಕಾರಣರಾಗಿದ್ದರೆ ಅವರು ಗತಿಸಿದ ನಂತರ ಬರೆಯಲ್ಪಟ್ಟ ಈ ಶಾಸನದಲ್ಲಿ ಅದನ್ನು ಹೊಗಳದೆ ಬಿಡುತ್ತಿರಲಿಲ್ಲ. ಆದುದರಿಂದ ಭಾರದ್ವಾಜ ಗೋತ್ರದವರಾದ ಸಾಯಣಮಾಧವರು ವಿದ್ಯಾರಣ್ಯರಲ್ಲವೆಂಬುದರಲ್ಲಿ ಸಂದೇಹವೇ ಇಲ್ಲ.

## ಕ್ರಿಯಾಶಕ್ತಿ ದೇಶಿಕರು ವಿದ್ಯಾರಣ್ಯರೆ?

ಇನ್ನು ಉಳಿದುದು ಆಗಿನ ಕಾಲದಲ್ಲಿ ರಾಯರಾಜಗುರು ಕಾಶೀವಿಲಾಸ ಕ್ರಿಯಾಶಕ್ತಿಗಳು ವಿದ್ಯಾರಣ್ಯರೆಂಬ ಹೆಸರಿನಿಂದ ಶೃಂಗೇರಿ ಮಠದ ಗುರುಗಳಾದರೇ ಎಂಬ ವಿಷಯವನ್ನು ನಿರ್ಣಯಿಸುವುದೇ ಆಗಿದೆ—ವಿದ್ಯಾರಣ್ಯರೆಂದೇ ಮೊನ್ನೆ ಮೊನ್ನೆಯವರೆಗೂ ಪರಿಗಣಿಸಲ್ಪಟ್ಟ ಆಂಗೀರಸ ಗೋತ್ರದ ಮಾಧವಮಂತ್ರಿಯ ಗುರುಗಳು ಶ್ರೀಮತ್ಕಾಶೀ ವಿಲಾಸ ಕ್ರಿಯಾಶಕ್ತಿ ದೇಶಿಕರು. ಕ್ರಿ.ಶ. 1888ನೆಯ ಇಸವಿಯಲ್ಲಿ ಬೆಂಗಳೂರು ಕಳಾನಿಧಿ ಮುದ್ರಾಕ್ಷರ ಶಾಲೆಯಲ್ಲಿ ತಾತ್ಪರ್ಯ ದೀಪಿಕೆಯೊಡನೆ ಮುದ್ರಿತವಾದ ಸೂತಸಂಹಿತೆ ಗ್ರಂಥದಲ್ಲಿ "ಶ್ರೀ ಮಾಧವಾಚಾರ್ಯ ವಿರಚಿತ ತಾತ್ಪರ್ಯ ದೀಪಿಕಾಖ್ಯಯಾ ವ್ಯಾಖ್ಯಾಯಾ ಸಂವಳಿತಃ" ಎಂದೇ ಮುದ್ರಿತವಾಗಿದೆ. ಈ ಮಾಧವಾಚಾರ್ಯರು ವಿದ್ಯಾರಣ್ಯರಲ್ಲವೆಂಬುದು ಈಚೆಗೆ ಗೊತ್ತಾಗಿರುವುದಾದರೂ ಇವರು ವಿದ್ಯಾರಣ್ಯರೇ ಎಂದು ಪ್ರಸಿದ್ಧಿಗೆ ಬರುವಷ್ಟು ವಿದ್ವಾಂಸರು, ಅಲ್ಲದೆ, ಇವರು "ಉಪನಿಷನ್ಮಾರ್ಗ ಪ್ರತಿಷ್ಠಾಗುರು", "ಉಪನಿಷನ್ಮಾರ್ಗ ಪ್ರವರ್ತಕಾಚಾರ್ಯ", "ವೇದ ಶಾಸ್ತ್ರಪ್ರತಿಷ್ಠಾತೃ" ಎಂದೂ ಶಾಸನಾದಿಗಳಲ್ಲಿ ಹೊಗಳಲ್ಪಟ್ಟಿರುವ ಹಿರಿಯ ವಿದ್ವಾಂಸರೂ

ಅಹುದು. ಇಂತಹ ವಿದ್ವಾಂಸರ ಗುರು ಕಾಶೀವಿಲಾಸ ಕ್ರಿಯಾಶಕ್ತಿ ದೇಶಿಕರು ಎಂದ ಮೇಲೆ ಅವರು ಅತ್ಯಂತ ಪ್ರಭಾವಶಾಲಿಗಳೇ ಆಗಿರಬೇಕಷ್ಟೆ. ಇವರು ವಿಜಯನಗರ ರಾಜ್ಯ ಸಂಸ್ಥಾಪನೆಯಾದ ಕಾಲದಿಂದ ವಿಜಯನಗರದ ರಾಜರುಗಳಿಗೆ ಕುಲಗುರುಗಳಾಗಿದ್ದುದರಿಂದ ಅತಿಶಯ ಗೌರವದಿಂದ ಸಂಗಮ ವಂಶದ ರಾಜರಿಂದ ಸನ್ಮಾನಿಸಲ್ಪಟ್ಟಿದ್ದಾರೆ. **"ಕ್ರಿಯಾಶಕ್ತಿಗುರುಃ ಸಾಕ್ಷಾತ್ ತೇಜಸಾ ಶ್ರೀ ತ್ರ್ಯಂಬಕಃ"** ಎಂದೂ **"ಯಃ ಸಾಕ್ಷಾತ್ ಗಿರೀಶಾವತಾರ ವಪುಷಃ"** ಎಂದೂ **"ಕ್ರಿಯಾಶಕ್ತಿರಿತ್ಯಾಖ್ಯಾತಾಸ್ಸಗುರೋರ್ಗುರೋರಿವಸತಾಂ"** ಎಂದೂ **ತಪೋ ರಾಜ್ಯಲಕ್ಷ್ಮೀ ನಿವಾಸಕಾಯ ಶ್ರೀ ಕ್ರಿಯಾಶಕ್ತಿ**"(7) ಎಂದೂ ಇವರು E. C. VIII ಸೊರಬ 375. E. C. VII ಶಿಕಾರಿಪುರ 281. E. C. X ಮುಳಬಾಗಿಲು, XI Ep. K. ದಾವಣಗೆರೆ 23ನೆ ಶಾಸನಗಳಲ್ಲಿ ವರ್ಣಿಸಲ್ಪಟ್ಟಿದ್ದಾರೆ. ಮತ್ತೊಂದು ಶಾಸನದಲ್ಲಿ ಕ್ರಿಯಾಶಕ್ತಿ ದೇಶಿಕರು

> **ವಿರೂಪಾಕ್ಷ ಸಾಕ್ಷಾತ್ ಕುಲಪರಮ ದೈವಂ ಕುಲಗುರು।**
> **ಕ್ರಿಯಾಶಕ್ತ್ಯಾಚಾರ್ಯ ಕಲಿಕಲಭ ಕಂಠೀರವ ಯಶಃ॥**

ಎಂದು ವರ್ಣಿತರಾಗಿರುತ್ತಾರೆ. ಚನ್ನರಾಯಪಟ್ಟಣದ 256ನೆಯ ಶಾಸನದಲ್ಲಿ ಇಮ್ಮಡಿ ಹರಿಹರನವರೆಗೆ ಸಂಗಮವಂಶದ ವಂಶವೃಕ್ಷವಿದೆ. ಇದರಲ್ಲಿ, ಸಂಗಮವಂಶದವರಿಗೆ ವಿರೂಪಾಕ್ಷ ದೇವರು ಕುಲದೈವವಾಗಿರುವಂತೆ ಕ್ರಿಯಾಶಕ್ತ್ಯಾಚಾರ್ಯರು ಕುಲಗುರುಗಳೆಂದು ವರ್ಣನೆ ಇದೆ. ಗಂಗಾದೇವಿಕೃತ ಪ್ರಸಿದ್ಧ 'ಮಧುರಾ ವಿಜಯ' ವೆಂಬ 'ವೀರ ಕಂಪಣರಾಯ ಚರಿತೆ' ಯಲ್ಲಿ **"ಅಸಾಧಾರಣ ಸಾರ್ವಜ್ಞ ವಿಲಸತ್ ಸರ್ವಮಂಗಲಂ। ಕ್ರಿಯಾಶಕ್ತಿ ಗುರುಂ ವಂದೇ ತ್ರಿಲೋಚನನಿವಾಪರಂ॥"** ಎಂದು ಹೇಳಿರುವುದರಲ್ಲಿ ಕ್ರಿಯಾಶಕ್ತಿ ದೇಶಿಕರು ಸಾಕ್ಷಾತ್ ಶಿವನಿಗೇ ಹೋಲಿಸಲ್ಪಟ್ಟಿದ್ದಾರೆ. ಶ್ರೀ ವಿ. ಸುಬ್ರಹ್ಮಣ್ಯ ಅಯ್ಯರ್‌ರವರ ವಾದಸರಣಿಯಂತೆ (Q.J.M.S. VII 217) ಭಾರದ್ವಾಜ ಗೋತ್ರದ ಮಾಧವಾಚಾರ್ಯರ ವಿದ್ವತ್ತಿಗೂ ಉಪನಿಷನ್ಮಾರ್ಗ ಪ್ರತಿಷ್ಠಾಪನಾಚಾರ್ಯ ಆಂಗೀರಸ ಗೋತ್ರದ ಮಾಧವಾಚಾರ್ಯರ ವಿದ್ವತ್ತಿಗೂ ಅಜಗಜಾಂತರ. ಆದರೂ ಭಾರದ್ವಾಜ ಗೋತ್ರದ ಮಾಧವಾಚಾರ್ಯರೂ ಅವರ ಅನುಜರಾದ ಸಾಯಣಾಚಾರ್ಯರೂ ಹಿಂದೆ ಹೇಳಿದಂತೆ ಹೇಗೆ, ಬುಕ್ಕಮಹೀಪತಿಯ ಅಪ್ಪಣೆಯಂತೆ ನಡೆಯುವವರಾಗಿದ್ದರೋ ಹಾಗೆಯೇ ಆಂಗೀರಸ ಗೋತ್ರದ ಮಾಧವಾಚಾರ್ಯರು "ವೀರ ಬುಕ್ಕ ಭೂಪತೇರಾದೇಶಾತ್" ಎಂದರೆ ಆ ರಾಜನ ಆಜ್ಞಾನುಸಾರವಾಗಿ ರಾಜ್ಯವಾಳಿದವರು. ಕ್ರಿಯಾಶಕ್ತಿಗಳ ವಿಷಯದಲ್ಲಿ ರಾಜರು ಉಪಯೋಗಿಸುವ ಮಾತುಗಳು ಇಂತಹವಲ್ಲ. ಬಹು ಗೌರವಯುತವಾದ ವಾಕ್ಯಗಳವು. ದಾವಣಗೆರೆ ಶಾಸನವೊಂದರಲ್ಲಿ (E. C. XI, Dg. 23) ಲಿಖಿತವಾದ ಮಾತುಗಳಿವು ಈ ವಿಷಯದಲ್ಲಿ ಉದಾಹರಣಾರ್ಹವಾಗಿವೆ. **"ಶ್ರೀಸ್ವಂಭೂತ್ರಿಯಂಬಕ ಚರಣಾರವಿಂದಾರಾಧಕ ಶ್ರೀಮದ್ರಾಯ ರಾಜಗುರು ಮಂಡಲಾಚಾರ್ಯವರ್ಯ ಅಭಂಗರಾವುತರಾಯ ತಪೋರಾಜ್ಯಲಕ್ಷ್ಮೀ ನಿವಾಸಕಾಯ ಶ್ರೀ ಕ್ರಿಯಾಶಕ್ತಿ ಗುರುವರ ಚರಣಪರಿಚರಣ ಪ್ರಸಾದಾಸಾದಿತ ಮಹಿತ ಸರ್ವಜ್ಞ ಸಾಮ್ರಾಜ್ಯ ವೈಭವ"** ನಾದವನು ವೀರ ಪ್ರತಾಪದೇವರಾಯನು. ಈ ಶಾಸನದಲ್ಲಿ ಹೇಳಿದಂತೆ ರಾಜನಿಗೆ ಸಾಮ್ರಾಜ್ಯವು **"ಶ್ರೀ ಕ್ರಿಯಾಶಕ್ತಿ ಗುರುವರ ಚರಣ ಪರಿಚರಣ ಪ್ರಸಾದಾಸಾದಿತ"** ವಾದುದು. ಕೆಲವರು ಭಾವಿಸಿದಂತೆ ವಿದ್ಯಾತೀರ್ಥರೆಂಬ ಹಿಂದಿನ ಗುರುಗಳ ಕೃಪೆಯಿಂದ ಬಂದುದಲ್ಲ ಈ ಸಾಮ್ರಾಜ್ಯ. ಏಕೆಂದರೆ ಋಗ್ವೇದದ ನಾಲ್ಕನೆಯ ಮಂಡ

ಲದ ೫೮ನೆಯ ಸೂಕ್ತದ ಭಾಷ್ಯದಲ್ಲಿ ಸಾಯಣಾಚಾರ್ಯರು ಅವರ ರಾಜನಾದ ಬುಕ್ಕ ಮಹಾರಾಜನು “ ವಿದ್ಯಾತೀರ್ಥ ಗುರೋರ್ದೃಷ್ಟ್ಯಾ ಪ್ರಾಪ್ತಸಾರ್ವಜ್ಞ ವೈಭವಃ ” ಎಂದು ವರ್ಣಿಸಿದ್ದಾರೆಯೇ ಹೊರತು “ ವಿದ್ಯಾತೀರ್ಥ ಗುರೋರ್ದೃಷ್ಟ್ಯಾ ಪ್ರಾಪ್ತಸಾಮ್ರಾಜ್ಯ ವೈಭವಃ ” ಎಂದು ವರ್ಣಿಸಿಲ್ಲ. ಅಲ್ಲದೆ ಮೊದಲನೆಯ ಹರಿಹರನೂ ಅವನ ತಮ್ಮನೂ ಕ್ರಿ.ಶ. 1346ರಲ್ಲಿ ಮತ್ತು ಬುಕ್ಕ ಭೂಪತಿಯು 1356ರಲ್ಲಿ ಮಾಡಿದ ದಾನ ಶಾಸನಗಳಲ್ಲಿಯೂ ಗುರುಗಳಾದ ವಿದ್ಯಾತೀರ್ಥರಾಗಲೀ ಭಾರತೀತೀರ್ಥರಾಗಲೀ ಸಾಮ್ರಾಜ್ಯವನ್ನು ಕರುಣಿಸಿದರೆಂದು ಹೇಳಿಲ್ಲವಾಗಿ ಅವರು ವಿಜಯನಗರ ರಾಜ್ಯವನ್ನು ಕಟ್ಟಿದುದಕ್ಕೆ ಕಾರಣರಲ್ಲ. ಕ್ರಿಯಾಶಕ್ತಿ ದೇಶಿಕರೇ ವಿಜಯನಗರ ರಾಜ್ಯಪ್ರಾಪ್ತಿಗೆ ಕಾರಣರೆಂದು ಮೇಲ್ಕಂಡ ಶಾಸನಗಳಲ್ಲಿಯೂ ವಿದ್ಯಾರಣ್ಯರು ಕಾರಣರೆಂದು ಮುಂದಿನ ಕಾಲದ ಶಾಸನಗಳಲ್ಲಿಯೂ ಉಲ್ಲೇಖವಾಗಿದೆ. ಶ್ರೀ ವಿದ್ಯಾರಣ್ಯರು ಮಹಾತಪಸ್ವಿಗಳೆಂದು ಹೊಗಳಲ್ಪಟ್ಟಿರುವಂತೆ, ಕ್ರಿಯಾಶಕ್ತಿ ದೇಶಿಕರು “ ತಪೋರಾಜ್ಯ ಲಕ್ಷ್ಮೀನಿವಾಸತಾಯ ಶ್ರೀ ಕ್ರಿಯಾಶಕ್ತಿ ” ಎಂದು ವರ್ಣಿಸಲ್ಪಟ್ಟಿರುವುದರಿಂದ ಇವರು ಮಹಾ ತಪಸ್ವಿಗಳೂ ಅಹುದು. ವಿದ್ಯಾರಣ್ಯರು ವೈದಿಕ ವಿದ್ಯಾಪಾರಂಗತರಾಗಿದ್ದರೆಂಬ ಪ್ರಖ್ಯಾತಿಯುಂಟಷ್ಟೆ. ಕ್ರಿಯಾಶಕ್ತಿಗಳು ಪುರಾರು ವೇದಗಳನ್ನೂ ಪುರಾಣಗಳನ್ನೂ ಸಮಾಲೋಚಿಸಿ ಲೋಕಹಿತಕ್ಕಾಗಿಯೂ ಮಾಧವರ ಪ್ರೀತಿಗಾಗಿಯೂ ಶೈವಾಗಮಸಾರ ಸಂಗ್ರಹವನ್ನು ರಚಿಸಿದರೆಂದು ಶಿವಮೊಗ್ಗೆಯ ಶಾಸನ (E· C· VIII Sh. 375) ವೊಂದರಲ್ಲಿ ಹೇಳಿರುವುದರಿಂದ ಈ ಕ್ರಿಯಾಶಕ್ತಿಗಳು ವೈದಿಕ ವಿದ್ಯೆಯಲ್ಲಿ ಪಾರಂಗತರೆಂಬುದು ಶಾಸನೋಕ್ತ ವಿಷಯವಾಗಿದೆ. ಇದೇ ಶಾಸನದಲ್ಲಿಯೇ ಇವರ ಶಿಷ್ಯರಾದ ಮಾಧವಾಚಾರ್ಯರು ಪ್ರಜ್ಞಾಬಲದಲ್ಲಿ ಬೃಹಸ್ಪತಿಯನ್ನು ಮೀರಿಸುವಂತಹವರು ಎಂದು ಹೊಗಳಲ್ಪಟ್ಟಿದ್ದಾರೆ. ಉಪನಿಷನ್ಮಾರ್ಗ ಪ್ರವರ್ತಕಾಚಾರ್ಯರೆಂದೂ ವೇದಶಾಸ್ತ್ರ ಪ್ರತಿಷ್ಠಾತೃವೆಂದೂ ಶಾಸನಾದಿಗಳಲ್ಲಿ ಹೊಗಳಲ್ಪಟ್ಟ ಇಂತಹ ತೇಜಸ್ವಿಯಾದ ಇವರ ಶಿಷ್ಯ ಮಾಧವಾಚಾರ್ಯರು ಸೂತಸಂಹಿತೆಗೆ ತಾತ್ಪರ್ಯ ದೀಪಿಕೆಯನ್ನು ಬರೆದರೆಂದಮೇಲೆ ವಿದ್ಯಾರಣ್ಯರು ಪ್ರಸಿದ್ಧರಿರುವಂತೆ ಕ್ರಿಯಾಶಕ್ತಿ ದೇಶಿಕರೂ ವೈದಿಕ ವಾಙ್ಮಯ ಪ್ರೋತ್ಸಾಹಕರೆಂದು ಹೇಳಬೇಕಾದುದೇ ಇಲ್ಲ. ಹೀಗೆ ವಿದ್ಯಾರಣ್ಯರ ವಿಷಯದಲ್ಲಿ ಏನೇನನ್ನು ಹೇಳಬಹುದೋ ಅದೆಲ್ಲವನ್ನೂ ಕ್ರಿಯಾಶಕ್ತಿ ದೇಶಿಕರ ವಿಷಯದಲ್ಲಿಯೂ ಹೇಳಬಹುದು.

ಮಹಾ ತಪಸ್ವಿಗಳೂ, ವೇದವಿದ್ಯಾಪಾರಂಗತರೂ, ವೇದವಿದ್ಯಾ ಪ್ರೋತ್ಸಾಹಕರೂ ಆದವರಿಬ್ಬರೂ ಒಂದೇ ಕಾಲದಲ್ಲಿ ಇದ್ದರೆ ಹೆಚ್ಚಲ್ಲ. ಆದರೆ ಇಂಥವರು, ಒಂದೇ ಕಾಲದಲ್ಲಿ ಇಬ್ಬರು, ವಿಜಯನಗರದ ರಾಜರ ಸಾಮ್ರಾಜ್ಯ ಪ್ರಾಪ್ತಿಗೆ ಕಾರಣರೂ ಅವರ ಕುಲಗುರುಗಳೂ ಆಗಿದ್ದರೆಂಬುದು ಹೆಚ್ಚಿನ ಮಾತು. ಆದುದರಿಂದ ಕ್ರಿಯಾಶಕ್ತಿಗಳೇ ವಿದ್ಯಾರಣ್ಯರೆಂಬ ಹೆಸರಿನಿಂದ ಶೃಂಗೇರಿ ಗುರುಗಳಾಗಿದ್ದರು ಎಂದು ಡಾ|| ವೆಂಕಟಸುಬ್ಬಯ್ಯನವರು ತೀರ್ಮಾನಿಸಿದುದು ಸ್ವಾಭಾವಿಕವೆ. ಮಠಗಳ ಗುರುತ್ವವನ್ನು ವಹಿಸಿಕೊಳ್ಳುವಾಗ ಹೆಸರನ್ನು ಬದಲಾಯಿಸುವ ಪದ್ಧತಿಯು ಮೊದಲಿನಿಂದಲೂ ಇದೆ. ಹಿಂದಿನ ಶೃಂಗೇರಿ ಗುರುಗಳಲ್ಲಿ ಒಬ್ಬರು ವಿದ್ಯಾತೀರ್ಥರು. ಕ್ರಿಯಾಶಕ್ತಿಗಳ ಶೈವಸಂಪ್ರದಾಯದ ಗುರುಗಳಲ್ಲಿ ದಕ್ಷಿಣ ದೇಶದಲ್ಲಿ ಪ್ರಮುಖರಾಗಿದ್ದವರು ವಿದ್ಯಾರಾಶಿಗಳು ಎಂದು ಎಸ್. ಶ್ರೀಕಂಠಯ್ಯನವರು ಅವರ ಪೂರ್ವೋಕ್ತ ಗ್ರಂಥದ 142ನೆಯ ಪುಟದಲ್ಲಿ ಹೇಳಿದ್ದಾರೆ. ವಿದ್ಯಾಭರಣ, ವಾದಿವಿದ್ಯಾಭರಣ ಎಂಬುವರು ಶಾಸನೋಕ್ತ ಗುರುಗಳು. ಹೀಗಿರುವಲ್ಲಿ ‘ವಿದ್ಯಾ’ ಎಂಬ ಪದದಿಂದ ಪ್ರಾರಂಭವಾಗುವ ಹೆಸರೊಂದನ್ನು ಕ್ರಿಯಾ

ಶಕ್ತಿಗಳು ಆರಿಸಿಕೊಂಡುದು ಸ್ವಾಭಾವಿಕವೆ. ಅಂತಹ ಹೆಸರೊಂದನ್ನು ಆರಿಸಿಕೊಂಡರು ಎಂಬ ವಿಷಯದಲ್ಲಿ ಶಾಸನಾಧಾರವುಂಟು.

ಪ್ರಸಿದ್ಧ ಪುರುಷರು ಕೀರ್ತಿಶೇಷರಾದಾಗ ಅವರ ಹೆಸರಿನ ಸ್ಮಾರಕಗಳನ್ನೇರ್ಪಡಿಸುವ ಪದ್ಧತಿಯು ಇಂದೂ ಇದೆ. ಮಹಾತ್ಮ ಗಾಂಧಿಯವರ, ಪಂಡಿತ ನೆಹರು ಅವರ ಸ್ಮಾರಕಗಳು ಇಂದೂ ರಚಿಸಲ್ಪಟ್ಟಿವೆ. ರಚಿಸಲ್ಪಡುತ್ತಿವೆ. ಅಂದೂ ಈ ಪದ್ಧತಿ ಇದ್ದುದು ಕಂಡುಬರುತ್ತದೆ. ಅಂಗೀರಸ ಮಾಧವಾಚಾರ್ಯರು ಅವರ ಮರಣ ಕಾಲದಲ್ಲಿ ಒಂದು ಹಳ್ಳಿಗೆ ಮಾಧವಪುರಿ ಯೆಂದು ಹೆಸರಿಟ್ಟು ದಾನ ಮಾಡಿದುದು ಬನವಾಸಿಯ ಶಾಸನದಿಂದ ತಿಳಿದುಬರುತ್ತದೆಂದು ಹಿಂದೆಯೇ ಹೇಳಲಾಯಿತು. ಸೊರಬ ಶಾಸನ 375ರಲ್ಲಿ ಉಕ್ತವಾಗಿರುವಂತೆ—ಅವರ ರಾಜ ನಾದ ಮಾರಪನ ಹೆಸರಿನ ಸ್ಮಾರಕವಾಗಿ ಕಾಂತಪುರಿ ಗ್ರಾಮಕ್ಕೆ 'ವೀರ ಮಾರಪಪುರಿ' ಎಂಬ ಹೆಸರಿಟ್ಟು ಅದನ್ನು ದಾನ ಮಾಡಿದುದೂ, (E. C. VIII Sk. 18) ನೆಯ ಶಾಸನದಲ್ಲಿ ವಿದ್ಯೇಶ್ವರರ ಹೆಸರಿನಲ್ಲಿ ಒಂದು ಗ್ರಾಮವನ್ನು ದಾನ ಮಾಡಿದುದೂ ಅವರ ಗುರುವಾದ ಕ್ರಿಯಾ ಶಕ್ತಿಗೆ 'ವಿದ್ಯಾ' ಪದವನ್ನೊಳಗೊಂಡ ಹೆಸರಿದ್ದುದಕ್ಕಾಗಿಯೇ ಇರಬಹುದು ಎಂದು ಊಹಿಸ ಲಾಗಿದೆ. ಇಮ್ಮಡಿ ಬುಕ್ಕರಾಯನು ತನ್ನ ಗುರುಗಳಾದ ಕ್ರಿಯಾಶಕ್ತಿದೇಶಿಕರು ಶಿವೈಕ್ಯರಾದಾಗ, ಕುಮ್ಮದೇವಿಯ ಹಳ್ಳಿಯೆಂಬ ಗ್ರಾಮವನ್ನು ವಿದ್ಯಾಶಂಕರಪುರವೆಂದು ಅದಕ್ಕೆ ಹೆಸರಿಟ್ಟು ವಿದ್ಯಾ ಶಂಕರರ ವಿಗ್ರಹವನ್ನು ಸ್ಥಾಪಿಸಿ ಅದಕ್ಕೆ ದಾನಮಾಡಿದುದು (E.C. X Mb. 11) ಮುಳಬಾಗಿಲು ಶಾಸನದಿಂದ ತಿಳಿದುಬರುತ್ತದೆ. ಕ್ರಿಯಾಶಕ್ತಿಗಳು 'ವಿದ್ಯಾಧಿಕ ವ್ಯಕ್ತಿ'ಯಾದುದರಿಂದ ವಿದ್ಯಾರಣ್ಯರೆಂಬ ಹೆಸರಿನಿಂದ ಗುರುಗಳಾಗಿದ್ದರು. ಅವರು ಶಂಕರನಲ್ಲಿ ಐಕ್ಯವಾಗಿ 'ವಿದ್ಯಾ ಶಂಕರ ವಿಗ್ರಹ' ರಾದರು ಎಂಬುದು ಸಮಂಜಸವಾದುದೇ—ಅಲ್ಲದೆ ಕ್ರಿಯಾಶಕ್ತಿದೇಶಿಕರ ಹೆಸ ರನ್ನು ಎತ್ತಿದಾಗಲೆಲ್ಲ 'ಸಾಕ್ಷಾತ್ ತೇಜಸತ್ರ್ಯಂಬಕಃ', ಗಿರೀಶಾವತಾರವಪುಷಃ, ಎಂದು ಮೊದಲಾಗಿ ಹೊಗಳಿದ್ದುದನ್ನು ನೋಡಿದರೆ ಅವರಿಗೆ ವಿದ್ಯಾಶಂಕರ ಮತ್ತು ವಿದ್ಯೇಶ ಎಂಬ ಹೆಸರುಗಳೂ ಇದ್ದಿರಬಹುದು. ಪ್ರಸಿದ್ಧ ವಿದ್ವಾಂಸರಾದ ರಾವ್‌ಬಹದ್ದೂರ್ ಪ್ರಾಕ್ತನ ವಿಮರ್ಶ ವಿಚಕ್ಷಣ ನರಸಿಂಹಾಚಾರ್ಯರೂ, ಅಷ್ಟೇ ಹಿರಿಯ ವಿದ್ವಾಂಸರಾದ ಡಾ|| ವೆಂಕಟಸುಬ್ಬಯ್ಯ ನವರೂ ಈ ಶಾಸನವು 'ವಿದಾ' ಎಂಬ ಪದವನ್ನೊಳಗೊಂಡ ಹೆಸರಿನಿಂದ ಶೃಂಗೇರಿ ಗುರುಗಳಾದ ರೆಂಬುದನ್ನು ತೋರಿಸುವುದೆಂಬ ವಿಷಯದಲ್ಲಿ ಒಮ್ಮತರಾಗಿರುವುದು ಗಮನಾರ್ಹ ವಿಷಯವಾಗಿದೆ. ಕ್ರಿಯಾಶಕ್ತಿಗಳು ವಿದ್ಯಾತೀರ್ಥರೆಂಬ ಹೆಸರಿನಿಂದ ವಿದ್ಯಾರಣ್ಯರಾದರು. ಎಂದು ನರಸಿಂಹಾಚಾರ್ಯರು ಹೇಳುವುದು ಸರಿಯಲ್ಲ; ವಿದ್ಯಾತೀರ್ಥರು ಕ್ರಿ.ಶ. 1333ರಲ್ಲಿಯೇ ಶಿವೈಕ್ಯರಾದರು. ಕ್ರಿಯಾಶಕ್ತಿಗಳು ನಿಧನರಾದುದು ಕ್ರಿ.ಶ. 1388ನೇ ಇಸವಿಯಲ್ಲಿ; ಕ್ರಿ.ಶ. 1389ರಲ್ಲಿ ಈ ಶಾಸನದಂತೆ ದಾನ ಮಾಡಿದುದು; ಆದ್ದರಿಂದ ವಿದ್ಯಾರಣ್ಯರೆಂಬ ಹೆಸರಿನಿಂದ ಆಗ ಗುರುಗಳಾಗಿದ್ದವರೇ ಕ್ರಿಯಾಶಕ್ತಿಗಳು—ಎಂಬ ಡಾ|| ವೆಂಕಟಸುಬ್ಬಯ್ಯನವರ ವಾದವು ಒಪ್ಪತಕ್ಕದಾಗಿದೆ.

---

ಕ್ರಿಯಾಶಕ್ತಿರಿತ್ಯಾಖ್ಯಾತಸ್ಯ ಗುರೋರ್ಗುರೋರಿವಸತಾಂ ಶಕ್ರೋಽಭ್ಯದತ್ತಕಮಾತ್ . . . ವಿದ್ಯಾ ಶಂಕರ ವಿಗ್ರಾಹಾಯಗುರವೇ ವಿದ್ಯಾಧಿಕವ್ಯಕ್ತಯೇ . . . ಕುಮ್ಮಾದೇವಿಯ ಗಾಮುವಂದನು ವಿದ್ಯಾಶಂಕರ ಅಮೃತಪಡಿಗೆ . . . ವಿದ್ಯಾಶಂಕರಪುರವಾಗಿ ಕೊಟ್ಟೆವು"—E. C. X Mb. 11) ಶಾಸನದಲ್ಲಿರುವ ಮೇಲ್ಕಂಡ ಪದಗಳು ಗಮನಾರ್ಹವಾಗಿವೆ—

ಮಾಧವಾಚಾರ್ಯರೇ ವಿದ್ಯಾರಣ್ಯರೆಂಬ ಪ್ರತೀತಿ ಇದ್ದಿತಷ್ಟೆ. ಡಾ|| ನರಸಿಂಹಾಚಾರ್ಯರು ಈ ವಿಷಯದಲ್ಲಿ ಬರೆದಿರುವುದನ್ನು ಆಕ್ಷೇಪಿಸುತ್ತ, ವಿ. ಸುಬ್ರಹ್ಮಣ್ಯ ಅಯ್ಯರ್‌ರು ಹೇಳಿರುವ ಅಕ್ಷೇಪವು ಗಮನಾರ್ಹವಾಗಿದೆ—ಮಾಧವಾಚಾರ್ಯರೂ ವಿದ್ಯಾರಣ್ಯರೂ ಒಬ್ಬರೇ ಎಂದು ಹೇಳಲು ಶಾಸನಗಳು ಇಲ್ಲವೆಂಬುದನ್ನು ನರಸಿಂಹಾಚಾರ್ಯರು ಒಪ್ಪಿರುವರೆಂದೂ ಅವರು ಕೊಟ್ಟಿರುವ ಯಾವ ಗ್ರಂಥದ ಆಧಾರವೂ ಇವರಿಬ್ಬರೂ ಒಂದೆಯೆಂಬುದನ್ನು ತೋರಿಸುವುದಿಲ್ಲವೆಂಬುದೂ ಅಯ್ಯರ್ ಅವರ ಆಕ್ಷೇಪ. ಈ ಆಕ್ಷೇಪವನ್ನು ಶ್ರೀ ನರಸಿಂಹಾಚಾರ್ಯರು ಅವರ ಉತ್ತರದಲ್ಲಿ ಪರಿಹರಿಸಿಲ್ಲ. ಆದರೆ ಕ್ರಿಯಾಶಕ್ತಿಗಳೂ ವಿದ್ಯಾರಣ್ಯರೂ ಒಂದೆಯೆಂಬುದಕ್ಕೆ ಶಾಸನವಿರುವುದನ್ನು ಶ್ರೀ ಎಸ್. ಶ್ರೀಕಂಠಯ್ಯನವರು ಗಮನಿಸಿದ್ದಾರೆ.[1]" ಶಾಸನವೊಂದರಲ್ಲಿ (A. S. I 1925-26 p. 137) ಕ್ರಿಯಾಶಕ್ತಿವಿದ್ಯಾರಣ್ಯರ ಶಿಷ್ಯನು ಬುಕ್ಕ ಮಹಾರಾಜನೆಂದು ಹೇಳಿದೆ. ಈ ಶಾಸನದಲ್ಲಿ[2] ಕ್ರಿಯಾಶಕ್ತಿ, ವಿದ್ಯಾರಣ್ಯ ಎಂಬ ಪದಗಳ ಮಧ್ಯೆ ಈ ಹೆಸರುಗಳು ಬೇರೆ ಬೇರೆ ವ್ಯಕ್ತಿಗಳವು ಎಂದು ತೋರಿಸಲು 'ಮತ್ತು' ಎಂಬ ಪದವಿರಲಿಲ್ಲವಾದರೂ ಅದರ ಇಂಗ್ಲೀಷ್ ಭಾಷಾಂತರದಲ್ಲಿ ಇವರು ಬೇರೆ ಬೇರೆ ವ್ಯಕ್ತಿಗಳೆಂದು ಅಂದು ಭ್ರಾಂತಿಯಿದ್ದುದರಿಂದ 'and' ಎಂಬ ಪದವನ್ನು ಸೇರಿಸಿದ್ದಾರೆ. ಆದರೂ ಆ ಪದವು ಶಾಸನದಲ್ಲಿ ಇಲ್ಲವಾದುದರಿಂದ ಅದನ್ನು ಅವಗ್ರಹಣ (bracket) ಚಿಹ್ನೆಯಿಂದ ಮುಚ್ಚಿದ್ದಾರೆ. ಈ ಶಾಸನದಿಂದ ವಿದಾರಣ್ಯ ಕ್ರಿಯಾಶಕ್ತಿಗಳು ಒಬ್ಬರೇ ಎಂಬುದು ವ್ಯಕ್ತವಾದ ವಿಷಯವಾಗಿದೆ.

ವೈದಿಕ ಧರ್ಮದ ಅದ್ವೈತ ಸಂಪ್ರದಾಯದ ಶಂಕರಾಚಾರ್ಯರಿಂದ ಸ್ಥಾಪಿತವಾದ ಶೃಂಗೇರಿ ಮಠಕ್ಕೆ ಆಗಮಾನುಯಾಯಿಗಳಾದ ಕಾಳಾಮುಖ ಸಂಪ್ರದಾಯದ ಕ್ರಿಯಾಶಕ್ತಿಗಳು ಗುರುಗಳಾಗಿರಲಾರರು—ಎಂಬುದೇ ಈ ವಿಷಯದಲ್ಲಿರುವ ಆಕ್ಷೇಪ. ಫಾದರ್ ಹೆರಾಸರ ಲೇಖನದಿಂದ ಹಿಡಿದು ಡಾ|| ವೆಂಕಟಸುಬ್ಬಯ್ಯನವರ ಲೇಖನದವರೆಗೂ ಕೂಲಂಕಶವಾಗಿ ವಿಚಾರ ಮಾಡಿರುವ ಶ್ರೀ ಎಸ್. ಶ್ರೀಕಂಠಯ್ಯನವರು ಈ ಚಿಕ್ಕ ಆತಂಕವಿರುವುದೆಂದು ಹೇಳಿ

---

1 If we have succeeded in showing that Kriasakti cannot be identical with Vidyaranya as attempted by Dr. Venkatasubbiah perhaps developing a causal hint of Mr. Narasimhachar that Kriasakti referred to in the inscriptions may be Vidyatirtha and on the fact that a Vijayanagar prince has been referred to in one place as the desciple of Kriasakti Vidyaranya without a conjunction between the two words, then in follows that Kriasakti's desciple Madhva mantri who died in the Kanara District in 1392-1393 cannot at all be Madhavacharya, brother of Sayana much less Vidyaranya—Pages 151-152 founders of Vijayanagar.

2 Bailapa Dandanatha . . . in the presence of Lord Pampa (Pampapati or Virupaksha of Hampi) with the permission of King Harihara (II) and the pupil of teacher Kriasakti (and) Vidyaranya made a gift of the village Hosalli . . . A. S. I 1925-26—page 137

ದ್ದಾರೆ.[1] ಆದರೆ ಅವರಿಗೆ ಈ ಆತಂಕವು ಮಹತ್ವದ್ದಾಗಿ ಕಾಣುವುದಿಲ್ಲ; ಏಕೆಂದರೆ ವಿದ್ಯಾರಣ್ಯರು ಉತ್ತರ ದೇಶದಿಂದ ಶೃಂಗೇರಿಗೆ ಹಿಂದಿರುಗುವಾಗ ಒಂದು ಬ್ರಹ್ಮರಾಕ್ಷಸಿಯೊಡನೆ ಹಿಂತಿರುಗಿದರೆಂಬುದು ಕ್ರಿಯಾಶಕ್ತಿಯೂ ವಿದ್ಯಾರಣ್ಯರೂ ಒಬ್ಬರೇ ಎಂಬುದನ್ನು ಹೇಗೆ ಸಿದ್ಧಾಂತ ಮಾಡುವುದಿಲ್ಲವೋ ಅರಿಯೆ ಎಂದಿದ್ದಾರೆ;[2] ಶೃಂಗೇರಿ ಮಠವು ಶ್ರೀ ಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟಿತೆಂಬುದನ್ನು ಬಿಟ್ಟರೆ ವಿಜಯನಗರ ರಾಜ್ಯ ಸ್ಥಾಪನೆಯವರೆಗೆ ಅದರ ಧಾರ್ಮಿಕ ಲೌಕಿಕ ವಿಷಯವೇನೂ ತಿಳಿಯದೆಂದಿದ್ದಾರೆ;[3] ಅದು ಲಕುಲೀಶ ಮಠವಾಗಿದ್ದು ಕಾಳಾಮುಖರ ಪ್ರಬಲ ಸ್ಥಾನವಾಗಿದ್ದಿತೋ? ಅದನ್ನು ವಿದ್ಯಾಶಂಕರರು ಇಂದಿನ ರೂಪಕ್ಕೆ ತಂದರೋ?[4]—ಎಂದು ಸಂದೇಹಿಸಿದ್ದಾರೆ. ಇವೆಲ್ಲ ವಿಚಾರಗಳು ವಿಚಾರಾರ್ಹವಾಗಿರುವುದರಿಂದ ಪ್ರತ್ಯೇಕ ಲೇಖನದಲ್ಲಿ ವಿಚಾರ ಮಾಡಲಾಗುವುದು. ಈಗ ಕ್ರಿಯಾಶಕ್ತಿಗಳ ಧಾರ್ಮಿಕ ನಿಲುವಿಗೂ ಶೃಂಗೇರಿ ಮಠದ ಧಾರ್ಮಿಕ ನಿಲುವಿಗೂ ವ್ಯತ್ಯಾಸವೇನೂ ಇರಲಿಲ್ಲವಾಗಿ ಅವರು ವಿದ್ಯಾರಣ್ಯರಾದುದರಲ್ಲಿ ಸಂದೇಹವಿಲ್ಲವೆಂಬುದನ್ನು ಈ ಲೇಖನದಲ್ಲಿ ತೋರಿಸಲಾಗುವುದು.

ವೇದಾನುಯಾಯಿಗಳಿಗೂ ಆಗಮಾನುಯಾಯಿಗಳಿಗೂ ಹಿಂದೆ ಇದ್ದ ವೈಷಮ್ಯವು ಹೋಗಿ ಎಷ್ಟೋ ಕಾಲವಾಯಿತು. 'ಅವಿಪಶ್ಚಿತಾಃ ವೇದವಾದರತಾಃ' ಎಂದು ಭಗವದ್ಗೀತೆಯಲ್ಲಿ ಹೀಯಾಳಿಸಲ್ಪಟ್ಟ ತ್ರಯೀ ವಿದ್ಯದ ಕರ್ಮಠರು 'ವೇದೋಪರಾ ವೇದಾಂತಾಃ' ಎಂದು ಹೇಳುತ್ತ ಉಪನಿಷದ್ವಿದ್ಯವನ್ನೇ ಹೀಯಾಳಿಸುತ್ತಿದ್ದರಾದುದರಿಂದ, ಅವರು ಆಗಮಗಳನ್ನು ಹೀಯಾಳಿಸುತ್ತಿದ್ದುದು ಆಶ್ಚರ್ಯವಲ್ಲ. ಆಗಮಾನುಯಾಯಿಗಳು ಇದನ್ನು ಪ್ರತಿಭಟಿಸಿ 'ವೇದಶಾಸ್ತ್ರಪುರಾಣಾನಿ ಸಾಮಾನ್ಯಗಣಿತಾ ಇವ| ಯಾ ಪುನಃ ಶಾಂಭವೀ ವಿದ್ಯಾ ಗುಪ್ತಾ ಕುಲವಧೂರಿವ' ಎಂದು ಹೇಳುತ್ತಿದ್ದುದು ನಿಜ. ಆದರೆ ಭಾರತೀಯರಲ್ಲಿನ ಗುಣಗ್ರಹಣ ಧರ್ಮದಿಂದ ಈ ಕಲುಷಿತ ವಾತಾವರಣವು ತಿಳಿಗೊಳ್ಳಲು, ಒಂದು ಧರ್ಮದವರು ಮತ್ತೊಂದು ಧರ್ಮದವರಲ್ಲಿರುವ ಗುಣಗಳನ್ನು ಗ್ರಹಿಸಲಾಗಿ ಹಾಲು ಜೇನು ಸೇರಿದಂತೆ ವೈದಿಕ ಆಗಮಿಕ ಧರ್ಮಗಳು ಒಂದಾದವು—ಪಿ. ಟಿ. ಎಸ್. ಅಯ್ಯಂಗಾರ್ಯರು ತಮಿಳರ ಚರಿತ್ರೆಯಲ್ಲಿ ಹೇಳಿದಂತೆ,[5]

---

1 The identification of Kriasakti with Vidyaranya attempted by Dr. Venkatasubbiah is a little far fetched.

2 I do not know if an inference could not be drawn from Vidyaranya's northern pilgrimage and his return with a Brahmarakshasa to Sringeri which would not support the view propounded by Dr. Venkatasubbiah that Kriasakti and Vidyaranya are identical.

3 Except that the Sringeri Matha was founded by Sri Sankara, very little is known about its religious or secular activities till the beginning of Vijayanagara.

4 Was it a Kalamukha stronghold and a Lakulisha Mutt? Did Vidya Sankara convert it with the modern Sringeri Mutt? page 143.

5 The religion as practised to day by the Hindus is almost entirely based on the Agamas and has little to do with the Vedas.

ಮತ್ತು ರಾಧಾಕೃಷ್ಣನ್‌ರವರ ಇಂಡಿಯನ್ ಫಿಲಾಸಫಿ ಗ್ರಂಥದಲ್ಲಿ ಹೇಳಿದಂತೆ[1] ಇಂದು ಆಸೇತು ಹಿಮಾಚಲದವರೆಗೆ ಆಚರಿಸಲ್ಪಡುತ್ತಿರುವುದು ಆಗಮಿಕ ಧರ್ಮವೆ. ಶ್ರೀ ಶಂಕರಾಚಾರ್ಯರ ತಾತ್ವಿಕ ಹಾಗೂ ಸಾಂಪ್ರದಾಯಿಕ ನಿಲುವು ಆಗಮಗಳಿಂದ ಪ್ರಭಾವಿತವಾಗಿದೆಯೆಂದು ಶ್ರೀ ರಾಧಾಕೃಷ್ಣನ್ ಅವರು ಹೇಳಿದ್ದಾರೆ. ಶ್ರೀ ಶಂಕರಾಚಾರ್ಯರಿಂದ ಸ್ಥಾಪಿತವಾದುವೆಂದು ಪ್ರಸಿದ್ಧವಾಗಿರುವ ಮಠಗಳಲ್ಲಿ ಶ್ರೀಚಕ್ರವು ಸ್ಥಾಪಿಸಲ್ಪಟ್ಟಿದೆ. ಶ್ರೀಚಕ್ರ ವಿಷಯವು ಶ್ರೀ ಶಂಕರಾಚಾರ್ಯಕೃತ ಸೌಂದರ್ಯ ಲಹರಿಯಲ್ಲಿ ವಿವರಿಸಲ್ಪಟ್ಟಿದೆ. ಶ್ರೀ ಶಂಕರಾಚಾರ್ಯರು ಶಾಕ್ತರಲ್ಲಿ ಸಮಯಾನುಯಾಯಿಗಳೆಂದು ಪ್ರಸಿದ್ಧರಾಗಿದ್ದಾರೆ. ವಿದ್ಯಾರಣ್ಯರು ಮಂತ್ರತಂತ್ರ ನಿಪುಣರೆಂದು ಗುರುವಂಶ ಕಾವ್ಯದಲ್ಲಿಯೇ ಹೇಳಿದೆ. ಇಂದೂ ಶೃಂಗೇರಿ ಮಠದಲ್ಲಿ ಬ್ರಹ್ಮರಾಕ್ಷಸ ವಿಗ್ರಹವು ಪೂಜೆಗೊಳ್ಳುತ್ತಿದೆ. ಆದುದರಿಂದ ಶೃಂಗೇರಿ ಮಠವು ಆಗಮಿಕ ಸಂಪ್ರದಾಯಕ್ಕೆ ಒಳಗಾದುದೇ ಹೊರತು ಹೊರಗಾದುದಲ್ಲ.

ಶಕ್ತಿಪದಾಂತವಾದ ಹೆಸರಿರುವುದರಿಂದ ವಿಜಯನಗರದ ರಾಜಗುರು ಕ್ರಿಯಾಶಕ್ತಿಗಳು ಕಾಳಾಮುಖರೆಂದು ಭಾವಿಸಲ್ಪಟ್ಟಿದ್ದಾರೆ. ಕಾಳಾಮುಖ ಗುರುಗಳು, ಆ ಕಾಲದಲ್ಲಿಯೂ ಆ ಹಿಂದೆ ಏಳೆಂಟು ಶತಮಾನಗಳಿಂದಲೂ ದಕ್ಷಿಣ ದೇಶದಲ್ಲೆಲ್ಲಿಯೂ ರಾಜಗುರುಗಳಾಗಿ ಐಹಿಕ ಪಾರಮಾರ್ಥಿಕ ಸಂಪತ್ತನ್ನು ಪಡೆದು ಹಿಂದುಗಳ ಸಂಘಟನೆಯನ್ನು ಮಾಡಲು ಶಕ್ತರಾಗಿದ್ದರು. ವಿಜಯನಗರದ ರಾಜರ ಗುರುಗಳಾದ ಕ್ರಿಯಾಶಕ್ತಿಗಳು ಇಂತಹವರಲ್ಲಿ ಒಬ್ಬರೆನ್ನಬೇಕು. ಕಾಳಾಮುಖರ ವಿಷಯವನ್ನು ಕೂಲಂಕಶವಾಗಿ ಅಭ್ಯಾಸಮಾಡಿ "ಕರ್ನಾಟಕ ಲಾಕುಳಶೈವರ ಇತಿಹಾಸ" ಎಂಬ ಗ್ರಂಥವನ್ನು ಬರೆದ ಶ್ರೀ ಕಪಟರಾಳ ಕೃಷ್ಣರಾಯರು ಆ ಗ್ರಂಥದ ೧೩೫ನೆಯ ಪುಟದಲ್ಲಿ ಹೇಳಿದಂತೆ–"ಕರ್ನಾಟಕದಲ್ಲಿಯ ಕಾಳಾಮುಖರು ಘೋರ ಕರ್ಮಿಗಳೆಂಬುದಕ್ಕೆ ಸದ್ಯಕ್ಕಂತೂ ಯಾವ ನಿದರ್ಶನವೂ ಇಲ್ಲ. ರಾಜಮನ್ನಣೆಯನ್ನು ಹೊಂದಿದ್ದು, ರಾಜ್ಯದ ಏರಿಳಿತಕ್ಕೂ ಈ ಮತಕ್ಕೂ ನಿಕಟ ಸಂಬಂಧವಿದ್ದುದು ಕಂಡುಬರುತ್ತದೆ. ಇಡೀ ಹಿಂದೂಸ್ಥಾನದ ದೃಷ್ಟಿಯಿಂದಲೂ ಈ ಮಾತು ದೃಢಪಡುತ್ತದೆ" ಇವರು ಆಗಮಗಳನ್ನು ಗೌರವಿಸುವಂತೆಯೇ ವೇದಗಳನ್ನೂ ಗೌರವಿಸುತ್ತಿದ್ದುದರಿಂದ ಎಲ್ಲರಿಂದಲೂ ಮಾನ್ಯತೆಪಡೆದು ಎಲ್ಲ ಧರ್ಮದವರಿಗೂ ಜ್ಞಾನಪ್ರಸಾರ ಮಾಡುತ್ತಿದ್ದುದು ಕಂಡುಬರುತ್ತದೆ. ಇವರ ಮಠಗಳಲ್ಲಿ ಪ್ರಸಿದ್ಧವಾದ ಕೋಡೀ ಮಠವು, (E. C. VII Sk. 102) ಶಿಕಾರಿಪುರದ ಶಿಲಾಶಾಸನವೊಂದರಲ್ಲಿ—"**ದಕ್ಷಿಣ ಕೇದಾರಸ್ಥಾನಮುಂ, ಶಿವಲಿಂಗಪೂಜಾಪುಲಕ ಸಸ್ಯಸರಸ ಕೇದಾರಸ್ಥಾನಮುಂ, ನೈಷ್ಠಿಕ ಬ್ರಹ್ಮಚರ್ಯ ಶಿವಮುನಿಜನಾನುಷ್ಠಾನಾನುಷ್ಠಿತ ಸ್ಥಾನಮುಂ, ಸಾಂಗಋಗ್‌ಯಜುಸ್ ಸಾಮಾಥರ್ವ ಚತುರ್ವೇದ ಸ್ವಾಧ್ಯಾಯಸ್ಥಾನಮುಂ**" ಎಂದು ಮುಂತಾಗಿ ವರ್ಣಿಸಲ್ಪಟ್ಟಿದೆ. ಆದುದರಿಂದ ಕಾಳಾಮುಖರು ವೈದಿಕರೆಂಬುದು ಸ್ಪಷ್ಟ ಅಥವಾ ಭಾಷ್ಯಕಾರರಾದ ಶ್ರೀಕಂಠ ಶಿವಾಚಾರ್ಯರು ಹೇಳಿದಂತೆ "ವಯಂತು ವೇದ ಶಿವಾಗಮಯೋಃ ಭೇದಂ

---

1 The loving Hindu religion of to day from the cape comorion to the remotest corners of Tibet is essentially Tantric.

Shankara was a professed shakta and his advaitic reposition, though overtly independent of the Shakta Agamas is influenced by Tantric theories and his descipline by Tantric practices.

ನಪಶ್ಯಾಮ" ಎಂದರೆ ವೇದಾಗಮಗಳಲ್ಲಿ ಯಾವ ಭೇದವನ್ನೂ ಕಾಣೆವೆನ್ನುವರು. ಕ್ರಿಯಾ ಶಕ್ತಿಗಳು (E.C. VIII sh. 375) ಶಾಸನದಲ್ಲಿ ಹೇಳಿದಂತೆ. ಮೂರು ವೇದಗಳ ಸಮಾಲೋಚನೆ ಯಿಂದ ಶೈವಾಗಮಸಾರ ಸಂಗ್ರಹವನ್ನು ಬರೆದವರು ಅವರ ಶಿಷ್ಯರಾದ ಮಾಧವಾಚಾರ್ಯರು ಹಿಂದೆ ಹೇಳಿದಂತೆ "ವೇದಶಾಸ್ತ್ರಪ್ರತಿಷ್ಠಾತೃ" ವೆಂದು ಹೊಗಳಲ್ಪಟ್ಟಿದ್ದಾರೆ. ಆದುದರಿಂದ ವೈದಿಕರೇ ಆದ ಕ್ರಿಯಾಶಕ್ತಿಗಳು ಶೃಂಗೇರಿ ಮಠದ ಜಗದ್ಗುರುಗಳಾಗಲು ಎಲ್ಲ ವಿಧದಿಂದಲೂ ಅರ್ಹರಾಗಿದ್ದರಲ್ಲದೆ ಅವರ ಸಿದ್ಧಾಂತಕ್ಕೂ ಶ್ರೀ ಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟಿ ದೆಂದು ಪ್ರಸಿದ್ಧಿ ಹೊಂದಿದ ಶೃಂಗೇರಿ ಮಠದ ಗುರುಗಳ ಸಿದ್ಧಾಂತಕ್ಕೂ ಯಾವ ವ್ಯತ್ಯಾಸವೂ ಇರಲಿಲ್ಲ.

ಶ್ರೀ ಶಂಕರಾಚಾರ್ಯರ ಸಿತ್ಧಾಂತವು ಅದ್ವೈತವಾದುದರಿಂದ ಅದ್ವೈತಿಗಳಲ್ಲದ ಕಾಳಾ ಮುಖರು ಆ ಮಠದ ಗುರುಗಳು ಹೇಗೆ ಆಗುವರು?—ಎಂಬ ಪ್ರಶ್ನೆಯೂ ಎದ್ದಿದೆ. ನ್ಯಾಯ ವೈಶೇಷಿಕ ತಾರ್ಕಿಕ ಸಿದ್ಧಾಂತದವರು ಕಾಳಾಮುಖರಲ್ಲಿ ವಿಶೇಷವಾಗಿರುವರಾದರೂ ಕಾಳಾ ಮುಖರೆಂದು ನಂಬಲ್ಪಟ್ಟಿರುವ ಪಂಗಡದಲ್ಲಿ ಅದ್ವೈತಿಗಳೂ ಇರುವುದು ಶಾಸನೋಕ್ತ ವಿಷಯ ವಾಗಿದೆ. ಶಿಕಾರಿಪುರದ (E. C. VII Sk. 129) ಶಾಸನವೊಂದರಲ್ಲಿ ಬಳ್ಳಿಗಾವೆಯ ಮಠದ ಗುಣಗಳ್ಳ ಯೋಗಿಗಳ 'ಕಾಲಂಕರ್ಚಿ' ಮಾಡಿದ ದಾನದ ವಿಷಯವಿದೆ. 'ಅದ್ವೈತ ಧನಂ', 'ಆನಂದಾದ್ವಯ ಸತ್ಯಜ್ಞಾನಮಯಂ' ಎಂದು ಮೊದಲಾಗಿ, ಮತ್ತೆ ಮತ್ತೆ ಅದ್ವೈತಜ್ಞಾನಿ ಯೆಂಬುದನ್ನು ವರ್ಣಿಸುತ್ತ ಗುಣಗಳ್ಳ ಯೋಗಿಯು ಅದ್ವೈತ ಸಿದ್ಧಾಂತ ಪ್ರತಿಪಾದಕನೆಂಬು ದನ್ನು ಈ ಶಾಸನದಲ್ಲಿಯ ಶ್ಲೋಕಗಳು ಘೋಷಿಸುತ್ತವೆ. "ಹರಿಹರಾದಿತ್ಯದೇವರ್ಗೆ ಸ್ನಾನ ನೈವೇದ್ಯಕ್ಕಂ ದೇಗುಲದ ಬೆಸಕ್ಕೆ ಮಠದ ಬಿಯಕ್ಕಂ" ದಾನ ಮಾಡಲಾಗಿದೆ. ಈ ಶಾಸನದ ಇಂಗ್ಲೀಷ್ ಭಾಷಾಂತರದ ಅಡಿ ಟಿಪ್ಪಣಿಯಲ್ಲಿ ಹೇಳಿದಂತೆ ಶಾಸನದ ಮೇಲೆ ಈ ಗುರುಗಳ ವಿಗ್ರಹವಿದೆ ಮತ್ತು ಅದರ ಕೆಳಗೆ "ಶ್ರೀಮದ್‌ಗುಣಗಳ್ಳದೇವರ ದಿಬ್ಯ ಮೂರ್ತಿ" ಎಂಬ ಶಾಸನ ಭಾಗವಿದೆ. ಶಕ್ತಿ, ಜೀಯ, ರಾಶಿ, ಈಶ್ವರ, ದೇವ ದೇವರು ಮೊದಲಾದ ಪದಗಳು ಈ ಕಾಳಾ ಮುಖರೆಂದು ಕರೆಯಲ್ಪಡುತ್ತಿರುವವರ ಹೆಸರುಗಳ ಅಂತ್ಯದಲ್ಲಿರುಲ್ಲಿರುತ್ತವೆ (ಕರ್ನಾಟಕದ ಲಾಕುಳ ಶೈವರ ಇತಿಹಾಸ ಪುಟ 100) ಬೆಳ್ಳಿಗಾವೆಯ ದೇವಸ್ಥಾನ ಮತ್ತು ಮಠಕ್ಕೆ ದಾನ ಮಾಡಿರುವುದರಿಂದಲೂ ಬೆಳ್ಳಿಗಾವಿಯು ಕಾಳಾಮುಖರ ಕೇಂದ್ರಸ್ಥಾನವಾದುದರಿಂದಲೂ ಗುಣ ಗಳ್ಳದೇವರ ಹೆಸರಿನ ಕೊನೆಯಲ್ಲಿ ದೇವರೆಂಬ ಪದವಿರುವುದರಿಂದಲೂ ಈ ಗುರುಗಳು ಕಾಳಾ ಮುಖ ಗುರುಗಳೆಂಬುದು ವ್ಯಕ್ತವಾದ ವಿಷಯ.

ಕ್ರಿಯಾಶಕ್ತಿ ಗುರುಗಳಂತೂ ಅದ್ವೈತಿಗಳೆಂಬುದರಲ್ಲಿ ಸಂದೇಹವೇ ಇಲ್ಲ. ಇವರ ಶಿಷ್ಯ ಮಾಧವಾಚಾರ್ಯರು ಸೂತಸಂಹಿತೆಗೆ ತಾತ್ಪರ್ಯ ದೀಪಿಕೆಯನ್ನು ಬರೆದಿದ್ದಾರೆ. ಶ್ರೀ ಸುಬ್ರ ಹ್ಮಣ್ಯ ಅಯ್ಯರರು (Q. J. M. S. VII 117) ತಮ್ಮ ಲೇಖನದಲ್ಲಿ ಹೇಳಿದಂತೆ ಸೂತಸಂಹಿ ತೆಯು ಅದ್ವೈತ ಗ್ರಂಥವೆಂಬುದು ಅದ್ವೈತ ವಿಷಯ ಬಲ್ಲವರೆಲ್ಲರಿಗೂ ಗೊತ್ತು. ಶ್ರೀ ಶಂಕರಾ ಚಾರ್ಯರೇ ಅದನ್ನು ಅನೇಕಬಾರಿ ಓದಿ ವೇದಾಂತ ಸೂತ್ರವನ್ನು ಬರೆದರೆಂದೂ ಅವರ ಸಿದ್ಧಾಂತಕ್ಕೆ ಅದು ಪ್ರಬಲ ಆಧಾರವೆಂದೂ ಅಯ್ಯರರು ಉಲ್ಲೇಖಿಸಿದ್ದಾರೆ. ಈ ಲೇಖನಕ್ಕೆ ಬರೆದ ಉತ್ತರದಲ್ಲಿ ಶ್ರೀ ನರಸಿಂಹಾಚಾರ್ಯರು ಈ ಮಾತನ್ನು ನಿರಾಕರಿಸಿಲ್ಲ. ಡಾ॥ ವೆಂಕಟ ಸುಬ್ಬಯ್ಯನವರು ಅವರ ಲೇಖನದಲ್ಲಿಯೂ (VIII Q. J. M. 118) ಶ್ರೀ ಎಸ್. ಶ್ರೀಕಂಠಯ್ಯ ನವರು ಅವರ ಗ್ರಂಥದಲ್ಲಿಯೂ ಇದನ್ನು ಅನುಮೋದಿಸಿದ್ದಾರೆ. ಆದುದರಿಂದ ಕ್ರಿಯಾಶಕ್ತಿ

ಗುರುಗಳು ಅವರ ಶಿಷ್ಯರಂತೆ ಅದ್ವೈತಿಗಳಾಗಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಶ್ರೀ ನರಸಿಂಹಾಚಾರ್ಯರು ಕ್ರಿಯಾಶಕ್ತಿಗಳು ಶೃಂಗೇರಿ ಜಗದ್ಗುರುಗಳಾದ ವಿದ್ಯಾತೀರ್ಥರೆಂದು ಹೇಳುವುದರಿಂದ ಅವರಿಗೆ ಈ ವಿಷಯದಲ್ಲಿ ಅಪರಿಹಾರ್ಯವಾದ ತೊಡಕಿದ್ದಂತೆ ಕಾಣುವುದಿಲ್ಲ. ಕೃಷ್ಣಶಾಸ್ತ್ರಿಗಳ ಆಕ್ಷೇಪಣೆ ಕ್ರಿಯಾಶಕ್ತಿಗಳು ವಿಷ್ಣುಪೂಜೆಗೆ ವಿರೋಧಿಗಳೆಂಬುದು ಮೈಸೂರ್ ಗೆಜೆಟಿಯರ್ ಸಂಪುಟ II ಭಾಗ 3ರ 1653ನೇ ಪುಟದಲ್ಲಿ ಹೇಳಿದಂತೆ ಕ್ರಿಯಾಶಕ್ತಿಯು ವರದರಾಜ ದೇವಸ್ಥಾನಕ್ಕೆ ದಾನ ಮಾಡಿರುವುದರಿಂದ ಕಾಳಾಮುಖರು ವಿಷ್ಣುಪೂಜೆಗೆ ವಿರೋಧಿಗಳಲ್ಲವೆಂದಾಯಿತು. ಆದುದರಿಂದ ಕ್ರಿಯಾಶಕ್ತಿಗಳೇ ವಿದ್ಯಾರಣ್ಯರೆಂಬ ಹೆಸರಿನಿಂದ ಶೃಂಗೇರಿ ಜಗದ್ಗುರುಗಳಾದರೆಂಬುದಕ್ಕೆ ಯಾವ ತೊಡಕೂ ಇರುವುದಿಲ್ಲ.

ಕ್ರಿಯಾಶಕ್ತಿ ದೇಶಿಕರ ಶಿಷ್ಯರಾದ ಮಂತ್ರಿಗಳು ಆಂಗೀರಸ ಗೋತ್ರದವರು ಎಂದೂ ಭಾರದ್ವಾಜ ಗೋತ್ರದ ಸಾಯಣ ಮಾಧವರಿಂದ ಭಿನ್ನರು ಎಂದೂ ನರಸಿಂಹಾಚಾರ್ಯರು ನಿರ್ಧರಿಸುವವರೆಗೆ ಶೃಂಗೇರಿ ಮಠದವರಾಗಲೀ ಇತರರಾಗಲೀ ಅನೇಕ ಶತಮಾನಗಳಿಂದಲೂ ಈ ಮಾಧವಾಚಾರ್ಯರೇ ವಿದ್ಯಾರಣ್ಯರೆಂದು ನಂಬುವುದಕ್ಕೆ ಅವರು ಕ್ರಿಯಾಶಕ್ತಿಗಳ ಶಿಷ್ಯರೆಂಬುವುದು ಅಡ್ಡಿಯಾಗಿರಲಿಲ್ಲ, ಅಷ್ಟೇ ಅಲ್ಲ, ಗುರುವಂಶ ಕಾವ್ಯದಲ್ಲಿ ವಿದ್ಯಾರಣ್ಯರ ಶಿಷ್ಯರೊಬ್ಬರು ಕ್ರಿಯಾಶಕ್ತಿಗಳಿದ್ದಂತೆ ಹೇಳಿರುವುದರಿಂದ ಕ್ರಿಯಾಶಕ್ತಿಗಳೆಂಬುವರ ಧರ್ಮಕ್ಕೂ ಶೃಂಗೇರಿ ಗುರುಗಳ ಧರ್ಮಕ್ಕೂ ಯಾವ ವ್ಯತ್ಯಾಸವೂ ಇಲ್ಲವೆಂಬುದು ಸ್ಪಷ್ಟ. ಅಲ್ಲದೆ ಮಾಧವಾಚಾರ್ಯರ ಗುರುವಾದ ಕ್ರಿಯಾಶಕ್ತಿಗಳು ಕ್ರಿ.ಶ. 1388ರಲ್ಲಿ ಶಿವೈಕ್ಯರಾದ ನಂತರ ಅವರ ಶಿಷ್ಯರಾದ ಮತ್ತೊಬ್ಬ ಕ್ರಿಯಾಶಕ್ತಿಗಳಿದ್ದಂತೆ ಕ್ರಿ.ಶ. 1419ರ (E. C. XI Dg. 23) ಶಾಸನದಿಂದ ತಿಳಿದುಬರುತ್ತದೆ. ವಿದ್ಯಾರಣ್ಯರೇ ಆದ ಕ್ರಿಯಾಶಕ್ತಿಗಳಿಗೆ ಮುಂದೆ ಕ್ರಿಯಾಶಕ್ತಿ ಎಂಬುವರು ಒಬ್ಬರು ಶಿಷ್ಯರು ಆಗಿದ್ದರೆಂಬುದು ಸರಿಹೊಂದುತ್ತದೆ. ಅಲ್ಲದೆ ಕ್ರಿಯಾಶಕ್ತಿಗಳು ಮಹೇಶ್ವರರೆಂದು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟವರ ಗುಂಪಿಗೆ ಸೇರಿದವರು. ಸಾಯಣಾಚಾರ್ಯರು ವಿದ್ಯಾತೀರ್ಥರನ್ನು ವೇದಭಾಷ್ಯಗಳ ಉಪೋದ್ಘಾತದಲ್ಲಿ "ವಂದೇ ವಿದ್ಯಾತೀರ್ಥ ಮಹೇಶ್ವರಂ" ಎಂದು ಪ್ರಾರ್ಥಿಸಿದ್ದಾರೆ. ವಿದ್ಯಾತೀರ್ಥರೂ, ಅವರ ಶಿಷ್ಯರಾದ ಕ್ರಿಯಾಶಕ್ತಿ ವಿದ್ಯಾರಣ್ಯರೂ ಅವರ ಶಿಷ್ಯ ಕ್ರಿಯಾಶಕ್ತಿಗಳೂ ಮಹೇಶ್ವರ ಧರ್ಮಕ್ಕೆ ಸೇರಿದವರೆಂದಾಯಿತು. ಡಾ|| ಎಂ. ಎಚ್. ಕೃಷ್ಣ ಅವರು ಸಾಹಿತ್ಯ ಪರಿಷತ್ ಪತ್ರಿಕೆ ಸಂಪುಟ ೨೮ ಸಂಚಿಕೆ ೧ರಲ್ಲಿ ಕಾಳಾಮುಖರ ವಿಷಯವಾಗಿ—ಇವರು ವೇದಮತಾನುಯಾಯಿಗಳಾದ ಬ್ರಾಹ್ಮಣರು, ಘನ ವಿದ್ವಾಂಸರು, ಮಠ ಮತ್ತು ದೇವಸ್ಥಾನಗಳಿಗೆ ಮುಖ್ಯಾಧಿಕಾರಿಗಳಾಗಿದ್ದರು. ರಾಜಗುರುಗಳಾಗಿ ೧೧ರಿಂದ ೧೪ನೆಯ ಶತಮಾನದವರೆಗೆ ಇವರು ಪ್ರಬಲರಾಗಿದ್ದರು. ವಿಜಯನಗರದ ಬುಕ್ಕನಿಗೂ . . . ಗುರುವಾಗಿದ್ದ ಕ್ರಿಯಾಶಕ್ತಿಯು ಈ ಕಾಳಾಮುಖ ಸಂಪ್ರದಾಯದವನು ಎಂದಿದ್ದಾರೆ: ಆದರೂ ಶಕ್ತಿಪದಾಂತವಾದ ಹೆಸರುಳ್ಳವರೆಲ್ಲರೂ ಕಾಳಾಮುಖರಲ್ಲವೆಂದೂ, ಕ್ರಿಯಾಶಕ್ತಿಗಳೂ ಅವರ ಶಿಷ್ಯರಾದ ಮಾಧವಾಚಾರ್ಯರೂ ಶುದ್ಧ ಶೈವಾಮ್ನಾಯ ಧರ್ಮದ ಶ್ರೋತ್ರಿಯರೆಂದೂ, ಈ ಕ್ರಿಯಾಶಕ್ತಿದೇಶಿಕ ವಿದ್ಯಾರಣ್ಯರು ವಿಜಯನಗರ ಸ್ಥಾಪನೆಗೆ ಹೇಗೆ ಸಹಾಯ ಮಾಡಿದರೆಂದೂ, ಫಾದರ್ ಹೆರಾಸ್ ಮೊದಲಾದವರು ಹೇಳುವಂತೆ ಶೃಂಗೇರಿ ಗುರುಗಳು ಶಾಸನಾದಿಗಳನ್ನು ಸೃಷ್ಟನೆ ಮಾಡಲು ಕಾರಣರಾದರೆಂಬುದು ಆಗ ತಪ್ಪಾಗಿ ತಿಳಿದಿದ್ದ ತಿಳುವಳಿಕೆಗಳ ಆಧಾರದ ಮೇಲೆ ಹೇಳಿದುದೆಂದೂ ಮುಂದಿನ ಲೇಖನದಲ್ಲಿ ತಿಳಿಸಲಾಗುವುದು.

---

# ಪುರಂದರದಾಸರ ಮಾಧುರ್ಯೋಪಾಸನೆ

**ಲೇಖಕರು : ಮ. ಸು. ಕೃಷ್ಣಮೂರ್ತಿ**

ಪ್ರಕೃತಿಯಲ್ಲಿ ಯಾವುದನ್ನು ನಾವು ಮಿಥುನಭಾವ ಎನ್ನುತ್ತೇವೋ ಅದೇ ಸಾಹಿತ್ಯದಲ್ಲಿ ರತಿ ಎನ್ನಿಸಿಕೊಳ್ಳುತ್ತದೆ; ಸಾಧನಾ ಕ್ಷೇತ್ರದಲ್ಲಿ 'ಮಧುರಭಾವ'ವೆನಿಸುತ್ತದೆ. ಇದನ್ನೇ ಪ್ರಿಯಪ್ರೇಯಸೀ ಭಾವ, ಸತಿಪತಿ ಭಾವ ಎನ್ನುತ್ತಾರೆ; ವೀರಶೈವ ಸಾಹಿತ್ಯದಲ್ಲಿ 'ಶರಣಸತಿ ಲಿಂಗಪತಿ' ಎನ್ನುತ್ತಾರೆ. ಭಕ್ತಿಯ ಪಂಚವಿಧಗಳಲ್ಲಿ 'ಮಧುರ'ವೂ ಒಂದಾದರೂ ಇಡೀ ಭಕ್ತಿಯೇ ಪ್ರೇಮದ ರೂಪಾಂತರ ವೆನ್ನಬಹುದು. ಭಕ್ತಿಯ ಲಕ್ಷಣವನ್ನು ಹೇಳುತ್ತ ಶಾಂಡಿಲ್ಯನು 'ಸಾಪರಾನುರಕ್ತಿರೀಶ್ವರೇ'ಎಂದು ಹೇಳುತ್ತಾನೆ. ನಾರದ ಕೂಡ ತನ್ನ ಭಕ್ತಿಸೂತ್ರಗಳಲ್ಲಿ 'ಅದು ಪರಮಪ್ರೇಮರೂಪವಾದುದು, ಅಮೃತಸ್ವರೂಪವಾದುದು' ಎಂದು ಹೇಳುತ್ತಾನೆ. ಭಕ್ತಿ 'ಅನುಭಯನಿಷ್ಠ'ವಾದುದರಿಂದ ಅದನ್ನು ನಮ್ಮ ಲಾಕ್ಷಣಿಕರು ರಸವೆಂದು ಅಂಗೀಕರಿಸಲಿಲ್ಲ. ಆದರೆ ಅದನ್ನು ರತಿಯ ಪ್ರಭೇದಗಳಲ್ಲಿ ಒಂದಾಗಿ ಪರಿಗಣಿಸಿದರು. ಮುಂದೆ 'ಭಕ್ತಿರಸಾಮೃತ ಸಿಂಧು' ಮೊದಲಾದ ಗ್ರಂಥಗಳಲ್ಲಿ ಅದೊಂದು ಸ್ವತಂತ್ರ ರಸವೆಂದೂ, ಅದರಲ್ಲಿ ಮಧುರ ಭಕ್ತಿಯೇ ಶ್ರೇಷ್ಠವೆಂದೂ ಪ್ರತಿಪಾದಿಸಲಾಗಿದೆ. ಈ ವಾದವನ್ನು ವಿದ್ವಾಂಸರು ಪುರಸ್ಕರಿಸಲಿ, ಬಿಡಲಿ ಮಧುರಭಾವದ ಮಹತ್ವವನ್ನು ಯಾರೂ ಅಲ್ಲಗಳೆದಿಲ್ಲ.

ವಿಚಾರವಾದಿಗಳು ದಾಂಪತ್ಯ ಪ್ರೇಮವೇ ಉತ್ಕೃಷ್ಟ ಪ್ರೇಮವೆಂದಿದ್ದಾರೆ. ಈ ದಾಂಪತ್ಯ ಪ್ರೇಮ ದೈವೀಪ್ರೇಮವಾಗಿ ಪರಿಣಮಿಸಿದರೆ ಅದರ ಉತ್ಕೃಷ್ಟತೆ ಇನ್ನೆಷ್ಟು ಎಂದು ಹೇಳಬೇಕಾಗಿಲ್ಲ. ದೇವರ ಜೊತೆಯಲ್ಲಿ ಜೀವ ಬೆಳೆಸುವ ಎಲ್ಲ ಸಂಬಂಧಗಳಲ್ಲಿ ಮಧುರಭಾವ ಇಲ್ಲವೆ ಕಾಂತಾರತಿಯ ಸಂಬಂಧ ಅತ್ಯಂತ ಮನೋಹರ; ಅತ್ಯಂತ ಶ್ರೇಷ್ಠ. ವಾತ್ಸಲ್ಯ ಭಾವದಲ್ಲಿ ದೇವರ ಶಿಶುರೂಪವೇ ಆಲಂಬನ. ತಂದೆ ತಾಯಿಗಳಿಗೆ ಇದು ಅತ್ಯಂತ ಪ್ರಿಯವಾಗಿರಬಹುದು. ಆದರೆ ತಂದೆ ತಾಯಿ ಮತ್ತು ಮಗುವಿನ ಸಂಬಂಧ ಸಮಾನ ಭೂಮಿಕೆಯದಲ್ಲ; ಪರಸ್ಪರ ಭಾವಗಳಲ್ಲಿ ಕೂಡ ಏಕರೂಪತೆ ಇರುವುದಿಲ್ಲ. ಈ ಭಾವ ಇಷ್ಟದೈವದತ್ತ ವ್ಯಕ್ತವಾದಾಗ ಇನ್ನೂ ವಿಲಕ್ಷಣವಾಗುತ್ತದೆ. ವಾತ್ಸಲ್ಯ ಭಕ್ತಿ ಕೇವಲ ಇಷ್ಟದೈವದ ಬಾಲಲೀಲೆಗಳ ವರ್ಣನೆಯಲ್ಲಿ ಮಾತ್ರ ಸಫಲವಾಗುತ್ತದೆ. ಈ ರೀತಿಯ ಒಂದು ಮಾಧ್ಯಮವಿಲ್ಲದೆ ವಾತ್ಸಲ್ಯಭಾವ ಉತ್ಕೃಷ್ಟ ರೂಪದಲ್ಲಿ ವ್ಯಕ್ತವಾಗುವುದಿಲ್ಲ. ಪುರಂದರ ದಾಸ, ಸೂರದಾಸ ಮೊದಲಾದವರು ಈ ಮಾಧ್ಯಮದಿಂದಲೇ ವಾತ್ಸಲ್ಯಭಾವಾಭಿವ್ಯಕ್ತಿ ಮಾಡಿದ್ದಾರೆ.

ದಾಸ್ಯಭಾವದಲ್ಲೂ ಇದೇ ದೋಷ ಕಂಡುಬರುತ್ತದೆ. ಆದರೆ ದಾಸ್ಯಭಾವಕ್ಕೂ ವಾತ್ಸಲ್ಯ ಭಾವಕ್ಕೂ ಇರುವ ಅಂತರವೆಂದರೆ ವಾತ್ಸಲ್ಯ ಭಾವದಲ್ಲಿ ದಾಸ್ಯಭಾವದಲ್ಲಿರುವ ಪ್ರಪತ್ತಿ ಇಲ್ಲವೆ ಶರಣಾಗತಿ ಇರುವುದಿಲ್ಲ. ಶರಣಾಗತಿ ಆತ್ಮಸಮರ್ಪಣೆಯ ಚರಮ ಪರಮರೂಪ. ಈ ಆತ್ಮಸಮ ರ್ಪಣೆ ಪ್ರೇಮದ ಸಾರಸರ್ವಸ್ವ. ಆದ್ದರಿಂದಲೇ ಕೆಲವರು ದಾಸ್ಯಭಾವ ಮಾಧುರ್ಯಕ್ಕಿಂತ ಶ್ರೇಷ್ಠ ಎಂದು ಹೇಳುತ್ತಾರೆ. ದಾಸ್ಯಭಾವದಲ್ಲಿ ಪ್ರೇಮ ಅತ್ಯಂತ ಸುಂದರವಾಗಿ ಒಡಮೂಡುತ್ತದೆ, ಆದ್ದ ರಿಂದ ಕನ್ನಡನಾಡಿನ ಮಾಧ್ವಭಕ್ತರ ಭಕ್ತಿ ಹೆಚ್ಚು ಮಧುರವಾದುದು ಎಂದು ಕೆಲವರ ಅಭಿ

ಪ್ರಾಯ. ಆದರೆ ಇಲ್ಲಿ ಕೂಡ ಭಾವ ಸಮಾನ ಭೂಮಿಕೆಯಲ್ಲಿರುವುದಿಲ್ಲ ತಾರತಮ್ಯಕ್ಕೆ ಪ್ರಾಧಾನ್ಯ ಎಂಬುದನ್ನು ಮರೆಯಬಾರದು. ತಾರತಮ್ಯ ಬಂದಾಗ ಪ್ರೇಮತೀವ್ರತೆ ಅಸಂಭವ. ಸಖ್ಯಭಾವ ದಲ್ಲೇನೋ ಸಮಾನ ಭೂಮಿಕೆ ಇರುತ್ತದೆ. ಕೃಷ್ಣಾರ್ಜುನ, ಕೃಷ್ಣ ಉದ್ಧವ ಅಥವಾ ಕೃಷ್ಣ ಸುದಾಮರ ಪ್ರೇಮಭಾವ ಸಮಾನ ಭೂಮಿಕೆಯದೆಂದು ಹೇಳುತ್ತಾರೆ. ಆದರೆ ಭಗವದ್ಗೀತೆ ಮತ್ತು 'ಭಾಗವತ'ಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದ ಶ್ರೀಕೃಷ್ಣಾರ್ಜುನ, ಕೃಷ್ಣ ಉದ್ಧವರ ಪ್ರೇಮ ಭಾವ ಕೂಡ ಸಮಾನ ಭೂಮಿಕೆಯಲ್ಲವೆಂದು ಕಾಣುತ್ತದೆ. ಶ್ರೀಕೃಷ್ಣನ ಮಹತ್ವ ವನ್ನು ಅರಿತು ಅರ್ಜುನ ಭಯಭೀತನಾಗಿ 'ಸಖಾ' ಎಂದು ಅವನನ್ನು ಕರೆದುದಕ್ಕಾಗಿ ಕ್ಷಮೆ ಬೇಡು ತ್ತಾನೆ. ಆದ್ದರಿಂದ ಸಖ್ಯಭಾವದಲ್ಲಿ ಕೂಡ ಶುದ್ಧ ಅಮಿಶ್ರಿತ ಪ್ರೇಮದ ಸಮರೂಪತೆ ಕಂಡು ಬರುವುದಿಲ್ಲ. ನಿಜವಾದ ಪ್ರೇಮವು ಪ್ರೇಮಿ ಮತ್ತು ಪ್ರೇಮಾಸ್ಪದರಲ್ಲಿ ಯಾವ ಅಂತರವೂ ಉಳಿ ಯದಿದ್ದಾಗ ಮಾತ್ರ ಸಾಧ್ಯ. ಆಗ ಅವರಿಬ್ಬರೂ ಪರಸ್ಪರ ಬೆರೆತು ಏಕರಸ, ಏಕರೂಪರಾಗಿ ಹೋಗುತ್ತಾರೆ. ಇದೇ ನಿಜವಾದ ತನ್ಮಯತೆ, ಪ್ರೇಮದ ಅದ್ವೈತ. ಇದು ಕಂಡುಬರುವುದು 'ಸತಿಪತಿ ಭಾವ' ಇಲ್ಲವೆ ಮಧುರಭಾವದಲ್ಲಿ ಮಾತ್ರ. ಆದ್ದರಿಂದಲೇ ಅದು ಎಲ್ಲಕ್ಕಿಂತಲೂ ಶ್ರೇಷ್ಠ ವೆಂದು ಪರಿಗಣಿತವಾಗಿದೆ.

ಶೃಂಗಾರ ವಿಶ್ವಮೋಹಕ ರಸ. ಲಾಕ್ಷಣಿಕರು ಅದನ್ನು ರಸರಾಜವನ್ನಾಗಿ ಪರಿಗಣಿಸಿ ದ್ದಾರೆ—ಅಷ್ಟೇ ಅಲ್ಲ ಪ್ರಸಂಚದಲ್ಲಿ ಏನೆಲ್ಲ ಮಧುರವೋ ಶ್ರೇಷ್ಠವೋ ಅವೆಲ್ಲವೂ ಶೃಂಗಾರದ ಮೂಲಕವೇ ವ್ಯಕ್ತವಾಗಿರುತ್ತವೆ ಎಂದು ಭರತಮುನಿ ಹೇಳುತ್ತಾನೆ :

> " ಯತ್ಕಿಂಚಿಲ್ಲೋಕೇ ಶುಚಿಮೇಧ್ಯಮುಜ್ವಲಂ ದರ್ಶನೀಯಂ ವಾ
> ತಚ್ಛೃಂಗಾರೇಣೋಪಮೀಯತೇ "

ಇನ್ನು ಈ ಶೃಂಗಾರ ಆಧ್ಯಾತ್ಮಕ್ಕೇರಿದಾಗ ಬಂಗಾರವಾಗುತ್ತದೆ. ದಾಂಪತ್ಯ ಪ್ರೇಮದಲ್ಲಿ ಆತ್ಮಸಮರ್ಪಣೆ ಪೂರ್ಣರೂಪದಲ್ಲಿ ನಡೆಯುತ್ತದೆ, ಎಂಬುದನ್ನು ಮೇಲೆ ನೋಡಿದ್ದೇವೆ. ಭಕ್ತಿಯ ಪರಿಪೂರ್ಣ ವಿಕಾಸ ಈ ಕಾಂತಾ ಭಾವದಲ್ಲೇ ಎಂದು ವಂಗೀಯ ಭಕ್ತಿಶಾಸ್ತ್ರಜ್ಞರು ಪ್ರತಿಪಾದಿಸಿದ್ದಾರೆ. ಮನೋವಿಜ್ಞಾನಿ ಫ್ರಾಯ್ಡನ 'Sublimation' 'ಉನ್ನಯನ'ವೂ ಇದನ್ನೇ ಸಮರ್ಥಿಸುತ್ತದೆ. ಪಾಶ್ಚಾತ್ಯ ಸಂತರೂ ಚಿಂತಕರೂ ಕಾಂತಾಭಾವದ ಮಹತ್ವವನ್ನು ಒಪ್ಪಿದ್ದಾರೆ. ಸುಪ್ರಸಿದ್ಧ ಅನುಭಾವಿಕವಿ ಕಾರ್ಡಿನಲ್ ನ್ಯೂಮನ್ ಹೀಗೆ ಹೇಳಿರುತ್ತಾನೆ: " If the soul is to go into higher spirituai blessedness, it must become woman ; yes, however manly thoul mayest be among men."

ಇಷ್ಟೇ ಅಲ್ಲ. ಪ್ರೇಮತೀವ್ರತೆ ತನ್ನ ಪತಿಯ ಅನುರಾಗಕ್ಕಿಂತ ಹೆಚ್ಚಾಗಿ ಉಪಪತಿಯ ಅನುರಾಗದಲ್ಲಿರುತ್ತದೆಂದೂ ಅದೇ 'ಪರಕೀಯ ಭಾವ'ವೆಂದೂ ಹೇಳಲಾಗಿದೆ. ಜಾರನಾರಿಗೆ ತನ್ನ ಗಂಡನನ್ನು ಕಾಣುವ ಹಂಬಲಕ್ಕಿಂತ ಉಪಪತಿಯನ್ನು ಕಾಣುವ ಹಂಬಲ, ಆವೇಶ ಹೆಚ್ಚು ಹೆಚ್ಚು ತೀವ್ರವಾಗಿರುವುದಂತೆ. ಆದ್ದರಿಂದ ಬಂಗಾಳದ ವೈಷ್ಣವ ಪಂಥದಲ್ಲಿ ಈ ಪರಕೀಯ ಭಾವಕ್ಕೇ ಮಹತ್ವ ದೊರೆಯಿತು. ಈ ಭಾವ ನಿನ್ನಿನ ಮೊನ್ನಿನದಲ್ಲ. ಋಗ್ವೇದದಲ್ಲೇ ಇದರ ಉಲ್ಲೇಖವಿದೆ. " ಯೋಷಾ ಜಾರಮಿವ ಪ್ರಿಯಂ" (9-32-1) ಅಂದರೆ ದೇವರೆಡೆಗೆ ಜೀವನ ಪ್ರೇಮಾವೇಗ ಉಪಪತಿಯ ಮೇಲೆ ಪರಸತಿಯ ಪ್ರೇಮಾವೇಗದಂತೆಯೇ ತೀವ್ರತರವಾಗಿರಬೇಕು.

ಇಷ್ಟಾದರೂ ಈ ಪ್ರೇಮಭಾವ ಮಧ್ಯ ಯುಗದಲ್ಲೇ ವಿಕಾಸಗೊಂಡುದು. ವೈದಿಕ ಸಾಹಿತ್ಯದಲ್ಲಿ 'ಪ್ರೇಮ' ಎಂಬ ಶಬ್ದ ಅಷ್ಟು ಪ್ರಚುರವಾಗಿಲ್ಲ. 'ಪ್ರಿಯ', 'ಪ್ರೇಮ', 'ಪ್ರೇಷ್ಠ',

ಮೊದಲಾದ ಶಬ್ದಗಳೇನೋ ಅಲ್ಲಿ ದೊರೆಯುತ್ತವೆ. ಆದರೆ ಅವು 'ಒಂದು ವಸ್ತುವಿನ ಬಯಕೆ' ಎಂಬ ಅರ್ಥದಲ್ಲಿ ಬರುತ್ತವೆ ಅಷ್ಟೆ. ಪ್ರೇಮಕ್ಕೆ ಬದಲಾಗಿ 'ಕಾಮ' ಎಂಬ ಶಬ್ದ ಅಲ್ಲಿ ಬಳಕೆಯಲ್ಲಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಬ್ರಹ್ಮಾನಂದವನ್ನು ಕುರಿತು ಹೇಳುವಾಗ 'ತನ್ನ ಸತಿಯ ಪ್ರೇಮಾಲಿಂಗನದಲ್ಲಿ ಲೀನನಾಗಿರುವ ಪುರುಷನಿಗೆ ಯಾವ ರೀತಿ ಬಾಹ್ಯ ಪ್ರಪಂಚದ ಪರಿವೆಯೇ ಇರುವುದಿಲ್ಲವೋ ಅಂತೆಯೇ ಬ್ರಹ್ಮಾನಂದಾನುಭೂತಿಯಲ್ಲೂ ಪರವಶತೆ ಇರುತ್ತದೆ ಎಂದು 'ಯಥಾ ಪ್ರಿಯಯಾ ಸಮ್ಪರಿಷ್ವಕ್ತ' ಮೊದಲಾದ ಮಾತುಗಳಲ್ಲಿ ಹೇಳಿದೆ. ಅನಂತರ ಬಹಳ ಕಾಲದಮೇಲೆ ಸಂಸ್ಕೃತ ಕಾವ್ಯಗಳಲ್ಲಿ ಈ 'ಪ್ರೇಮ' ಶಬ್ದ ಬಳಕೆಗೆ ಬರುತ್ತದೆ. ಇದರಿಂದ ತನ್ನ ಇಷ್ಟದೈವದ ಬಗೆಗೆ ಪ್ರೇಮವನ್ನು ಪ್ರದರ್ಶಿಸುವ ಭಕ್ತಿಯ ಸ್ವರೂಪ ಅಷ್ಟು ಹಳೆಯದಲ್ಲವೆಂದು ತೋರುತ್ತದೆ. ಈ ಶಬ್ದದ ಸ್ಪಷ್ಟ ಚರ್ಚೆ ಕಂಡುಬರುವುದು ಮಧ್ಯಯುಗದಲ್ಲೇ. ಭಾಗವತ, ನಾರದ, ಶಾಂಡಿಲ್ಯರ ಭಕ್ತಿಸೂತ್ರಗಳೇ ಮೊದಲಾದ ಮಧ್ಯ ಯುಗದ ಗ್ರಂಥಗಳಲ್ಲಿ ಇದರ ಜಿಜ್ಞಾಸೆ, ವಿವೇಚನೆ ಬರುತ್ತದೆ.

ಈ ಪ್ರೇಮಸಾಧನೆಯ ಸ್ಪಷ್ಟರೂಪ ಮೊತ್ತಮೊದಲು ಕಾಣಿಸಿಕೊಳ್ಳುವುದು ಭಾಗವತದಲ್ಲಿ. ಈ ಭಾಗವತ ಕೂಡ ಮಧ್ಯಯುಗ ಅಥವಾ ಅದಕ್ಕೆ ಕೊಂಚ ಹಿಂದಿನ ಕೃತಿಯೆಂದು ವಿದ್ವಾಂಸರ ಅಭಿಪ್ರಾಯ. ಭಾಗವತದ ದಶಮಸ್ಕಂಧದಲ್ಲಿ ಗೋಪಿಕಾಸ್ತ್ರೀಯರು ಆದರ್ಶ ಪ್ರೇಮಿಗಳಂತೆ, ಭಕ್ತರಂತೆ ಚಿತ್ರಿತರಾಗಿದ್ದಾರೆ. ಆಮೇಲೆ ಬಂದ ವಲ್ಲಭ ಸಂಪ್ರದಾಯದಲ್ಲಿ ಈ ಗೋಪಿಕಾ ಸ್ತ್ರೀಯರನ್ನು ಪ್ರೇಮಾ ಭಕ್ತಿಯ ಗುರುಗಳು, ಆದರ್ಶ ಪ್ರೇಮಿಗಳು ಎಂದು ಕರೆದು ಅವರ ಹಾದಿಯನ್ನು ಭಕ್ತರು ಅನುಸರಿಸಬೇಕೆಂದು ಹೇಳಿದೆ.

'ಮಧುರಭಾವ'ದ ಚರಮವಿಕಾಸವನ್ನು ಜಯದೇವನ 'ಗೀತ ಗೋವಿಂದ'ದಲ್ಲಿ ಕಾಣಬಹುದು. ರಾಧಾಕೃಷ್ಣರ ಪ್ರೇಮಕಥೆಯನ್ನು ಜಯದೇವ ಅನ್ಯಾದೃಶವಾಗಿ ಬಣ್ಣಿಸಿದ್ದಾನೆ. ಯಾವ ಕಾಂತಾ ಭಕ್ತಿಯನ್ನು 'ಗೀತಗೋವಿಂದ'ಕ್ಕೂ ಮುಂಚೆ ಆಂಡಾಳ್ ಮತ್ತು ಶಡಗೋಪರು ಉಪಾಸಿಸಿದ್ದರೋ ಅದೇ ಮುಂದೆ ಮಧುರಭಾವ ಇಲ್ಲವೆ ಮಧುರರಸವಾಗಿ ಅರಳಿ ಪರಿಮಳಿಸಿತು. ರಾಧಾಕೃಷ್ಣರು ಆದರ್ಶ ನಾಯಿಕೆ ನಾಯಕರಾಗಿ, ಮಧುರ ರಸದ ಮೂರ್ತಿಗಳಾಗಿ ಪರಿಣಮಿಸಿದರು. ಪೂರ್ವ ಮತ್ತು ಉತ್ತರ ಭಾರತದ ವೈಷ್ಣವ ಕವಿಗಳಲ್ಲಿ ಜಯದೇವ, ಚಂಡೀದಾಸ, ವಿದ್ಯಾಪತಿ, ಸೂರದಾಸನೇ ಮೊದಲಾದವರು ರಾಧಾಕೃಷ್ಣರ ಪ್ರೇಮಲೀಲೆಗಳನ್ನೇ ಪ್ರಧಾನವಾಗಿ ತಮ್ಮ ಕಾವ್ಯಗಳಲ್ಲಿ ವರ್ಣಿಸಿದ್ದಾರೆ.

'ಗೀತ ಗೋವಿಂದ'ದಲ್ಲಿ ಒಂದುಕಡೆ ಹೀಗೆ ಬರುತ್ತದೆ. 'ಎಲೆ ಸಖಿ, ಯಾವನು ಅನುರಂಜನೆಯ ಮೂಲಕ ಇಡೀ ಜಗತ್ತಿಗೇ, ಆನಂದವನ್ನುಂಟುಮಾಡುತ್ತಾನೋ. ಯಾರು ತನ್ನ ಇಂದೀವರ ಶ್ರೇಣಿಯಂತಹ ಕೋಮಲ ಶ್ಯಾಮಲ ಅಂಗಗಳಿಂದ ಆನಂದೋತ್ಸವವನ್ನುಂಟು ಮಾಡುತ್ತಿದ್ದಾನೋ, ವ್ರಜಸುಂದರಿಯರಿಂದ ಯಾರ ಅಂಗ ಆಲಿಂಗಿತವಾಗಿದೆಯೋ ಆ ದೇವ ಮೈವೆತ್ತ ಶೃಂಗಾರದಂತೆ ಕಂಗೊಳಿಸುತ್ತಾ ವಸಂತ ಋತುವಿನಲ್ಲಿ ವಿಹರಿಸುತ್ತಿದ್ದಾನೆ, ಈ ರೀತಿ ಭಾರತೀಯ ಸಾಹಿತ್ಯದಲ್ಲಿ ಶೃಂಗಾರ ಸ್ವರೂಪನಾದ ಕೃಷ್ಣನೇ ಮಧುರ ರಸದ ಪ್ರಧಾನ ಆಲಂಬನ. ಶಿವನನ್ನು ಮಧುರಭಾವದ ಆಲಂಬನವಾಗಿ ಉಳ್ಳ ಅಕ್ಕಮಹಾದೇವಿ ಮೊದಲಾದ ಅನುಭವಿಗಳ ಸಂಖ್ಯೆ ವೈಷ್ಣವ ಭಕ್ತರಷ್ಟಿಲ್ಲ. ಅಷ್ಟೇ ಅಲ್ಲ, ಅವನು ಮಧುರ ರಸದ ಸಾಕಾರ ಮೂರ್ತಿ. ಅವನ ಮಧುರ ಚದುರಮೂರ್ತಿಯನ್ನು ವಲ್ಲಭಚಾರ್ಯರು ಹೀಗೆ ಬಣ್ಣಿಸುತ್ತಾರೆ :

"ಅಧರಂ ಮಧುರಂ ವದನಂ ಮಧುರಂ ನಯನಂ ಮಧುರಂ ಹಸಿತಂ ಮಧುರಂ |
ಹೃದಯಂ ಮಧುರಂ, ಗಮನಂ ಮಧುರಂ, ಮಧುರಾಧಿಪತೇರಖಿಲಂ ಮಧುರಂ" ||

ಭಾರತೀಯರ ಪ್ರಕಾರ ದೇವರು ಅನಂತಶೀಲ, ಅನಂತಶಕ್ತಿ, ಮತ್ತು ಅನಂತ ಸೌಂದರ್ಯ ಈ ಗುಣಗಳಿಂದ ಮಂಡಿತನಾಗಿದ್ದಾನೆ. ಮಧ್ಯಯುಗದಲ್ಲಿ ಆಸೇತು ಹಿಮಾಚಲಪರ್ಯಂತ ನಡೆದ ಈ ಭಕ್ತಿಯ ಆಂದೋಳನದಲ್ಲಿ ಪರಮಾತ್ಮನ ಅನಂತ ಸೌಂದರ್ಯಕ್ಕೇ ಹೆಚ್ಚುಪ್ರಾಶಸ್ತ್ಯ. ಏಕೆಂದರೆ ಭಕ್ತಿಯ ಆಂದೋಳನ ಜನಾಂದೋಳನ. "ಜನ ಬದುಕಬೇಕೆಂದು" ಕೆಲವರು ಭಕ್ತಿ ಗೀತಗಳನ್ನು ಹಾಡಿದರೆ ಮತ್ತೆ ಕೆಲವರು 'ಸ್ವಾಂತಃ ಸುಖಾಯ' ಹಾಡುತ್ತಿದ್ದರು. ಸಾತ್ವಿಕರು ಪರಮಾತ್ಮನ ಶೀಲಸೌಂದರ್ಯವನ್ನು ಉಪಯೋಗಿಸುವರಂತೆ. ತಾಮಸಿಕರು ಶಕ್ತಿಯ ಉಪಾಸಕರಂತೆ. ರಾಜಸರು ಸೌಂದರ್ಯೋಪಾಸಕರಂತೆ. ಸಾಧಾರಣ ಜನ ಬಹುಪಾಲು ರಜೋಗುಣ ಪ್ರಧಾನವಾದುದು. ಆದ್ದರಿಂದ ಅದು ಸೌಂದರ್ಯಕ್ಕೇ ಮಾರುಹೋಯಿತು. ಮಧ್ಯಯುಗದ ಭಕ್ತಿಯ ವೈಶಿಷ್ಟ್ಯವೆಂದರೆ ಆಗಿನ ಭಕ್ತರು ಸೌಂದರ್ಯವೊಂದನ್ನೇ ಪರಮಾತ್ಮನ ಏಕಮಾತ್ರ ವಿಭೂತಿ ಎಂದು ಬಗೆದುದು. ಅಷ್ಟೇ ಏಕೆ 'ಶಿವ'ನನ್ನೇ ಉಪಾಸಿಸಿದ ಬಸವ, ಅಕ್ಕಮಹಾದೇವಿ ಮೊದಲಾದವರಲ್ಲೂ ಕೂಡ ಈ ಮಧುರೋಪಾಸನೆ, ಕಂಡುಬರುತ್ತದೆ. ಆದರೆ ಇದು ಮಿತ ಪರಿಮಾಣದಲ್ಲಿ ಎಂಬುದನ್ನು ಮರೆಯಲಾಗದು.

ಪ್ರಾಚೀನ ಕನ್ನಡ ಸಾಹಿತ್ಯದ ಮೂರು ಯುಗಗಳಲ್ಲಿ 'ಸತ್ಯಂ', 'ಶಿವಂ', 'ಸುಂದರಂ'ಗಳ ತ್ರಿವೇಣೀ ಸಂಗಮವನ್ನು ಕಾಣಬಹುದು. ಜೈನ ಯುಗದಲ್ಲಿ ಸತ್ಯಾನ್ವೇಷಣೆಗಾಗಿ ಭೋಗ ನಿರಸನ, ನಿವೃತ್ತಿ ಮಾರ್ಗಗಳನ್ನು ಕಾಣಬಹುದು. ವೀರಶೈವ ಯುಗದಲ್ಲಿ 'ಶಿವೇತರಕ್ಷತಿಗಾಗಿ' ಸಾಧನೆ ಮಾಡಿದ ವೀರಶೈವರ ಕ್ಷಾತ್ರವನ್ನು ಕಾಣಬಹುದು. ವೈಷ್ಣವ ಯುಗದಲ್ಲಿ ಜಗತ್ತಿನ ಸತ್ಯತೆಯನ್ನು ಸಾಧಿಸಿ 'ಸುಂದರ'ವನ್ನು ಅರ್ಚಿಸುವ ಪ್ರವೃತ್ತಿ ಮಾರ್ಗಗಳು ಗೋಚರಿಸುತ್ತಾರೆ.

ದೇವರ ಸೌಂದರ್ಯಾರ್ಚನೆ ಈ ಯುಗದ ಪ್ರಧಾನ ವೈಶಿಷ್ಟ್ಯ. ಆದರೆ ಅದರಲ್ಲಿ ಹೆಚ್ಚು ಮಂದಿ ಸಫಲರಾಗಿಲ್ಲ. ರೂಪೋಪಾಸನೆ ವೈಷ್ಣವ ಭಕ್ತಿಪದ್ಧತಿಯ ದೊಡ್ಡ ವೈಶಿಷ್ಟ್ಯ. ಭಗವಂತನ ರೂಪವೇ ಅವರ ಭಕ್ತಿಯ ಆಲಂಬನವಾಗಿತ್ತು. ವೀರಶೈವ ಕವಿಗಳು ಪೂರ್ಣತಃ ಸಗುಣರಲ್ಲ. ಹೀಗಾಗಿ ಅವರಲ್ಲಿ ರೂಪೋಪಾಸನೆಗೆ ಮಹತ್ವ ದೊರೆಯಲಿಲ್ಲ. ವೈಷ್ಣವ ಭಕ್ತರು ಪೂರ್ಣತಃ ಸಗುಣ ಭಕ್ತರು. ಆದ್ದರಿಂದ ಅವರು ಪರಮಾತ್ಮನ ಅನಂತ ಸೌಂದರ್ಯ ಮತ್ತು ಅನಂತ ಐಶ್ವರ್ಯವನ್ನು ವರ್ಣಿಸಿದರು. ವೈಷ್ಣವ ಕವಿಗಳು ವೀರಶೈವಸಂತರಂತೆ ತಮ್ಮ ಧರ್ಮವನ್ನು ಜನಸಾಮಾನ್ಯರಿಗೆ ಒಯ್ಯಲು ಪ್ರಯತ್ನಿಸಿದರು. ಜನಸಾಮಾನ್ಯರ ಅಭಿರುಚಿಯತ್ತ ಅವರ ಗಮನವೂ ಹರಿದಿರಬಹುದು. ಅಷ್ಟೇ ಅಲ್ಲ ಜಾನಪದ ಪ್ರೇಮ ಗೀತೆಗಳೂ, ಕೃಷ್ಣಲೀಲೆಯನ್ನು ಕುರಿತ ಜಾನಪದ ಗೀತೆಗಳೂ ಅವರ ಕಣ್ಣ ಮುಂದಿದ್ದಿರಬಹುದು.

ಮಧ್ಯಯುಗದ ಇತರ ವೈಷ್ಣವ ಪಂಥಕ್ಕೂ ಹರಿದಾಸ ಪಂಥಕ್ಕೂ ಇರುವ ಅಂತರವೆಂದರೆ ಹರಿದಾಸ ಸಾಹಿತ್ಯದಲ್ಲಿ 'ರಾಧೆ'ಗೆ ಸ್ಥಾನವಿಲ್ಲದಿರುವುದು. ಪರಕೀಯಳೆಂದು ಗೃಹೀತಳಾಗಿರುವ ರಾಧೆಯ ವ್ಯಕ್ತಿತ್ವದಿಂದ ಸಮಾಜದಲ್ಲಿ ಅಸ್ಥಿರತೆ ಬಂದೀತೆಂಬ ಭಯದಿಂದ ಅವರು ಅದಕ್ಕೆ ಪ್ರಾಶಸ್ತ್ಯ ಕೊಡಲಿಲ್ಲವೆಂದು ಕಾಣುತ್ತದೆ. ಇದರಿಂದಾಗಿ ರಾಧೆಯ ವ್ಯಾಜದಿಂದ ಅಭಿವ್ಯಕ್ತವಾಗುತ್ತಿದ್ದ ಪ್ರೇಮತೀವ್ರತೆ, ಸಾಂದ್ರತೆ, ಕಳಕಳಿ ಮತ್ತು ಪ್ರೇಮದ ವಿಶ್ವರೂಪದರ್ಶನ ಸಮನಾಗುವುದಿಲ್ಲ. ಹೀಗಾಗಿ ಮಾಧುರ್ಯ ಭಾವದ ತೀವ್ರತೆ ನಮ್ಮಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಎರಡನೆಯದಾಗಿ ಉತ್ತರ ಮತ್ತು ಪೂರ್ವಭಾರತದ ವೈಷ್ಣವ ಪಂಥಗಳ ಮೇಲೆ 'ಸರ್ವಂ ದುಃಖಂ

ಎನ್ನುವ ಬೌದ್ಧರ ದುಃಖವಾದದ ಮತ್ತು ಸೂಫೀಸಂತರ ವಿಶ್ವವ್ಯಾಪಕ ಪ್ರೇಮದ ಪ್ರಭಾವ ಬಿದ್ದಿದೆ. ಈ ಎರಡು ಪ್ರಭಾವಗಳ ಫಲವಾಗಿ ಬಂಗಾಳದ ಹಾಗೂ ಉತ್ತರದ ವೈಷ್ಣವ ಕವಿಗಳ ಮಾಧುರ್ಯಮಂಡಿತ ಗೇಯಪದಗಳು ಏಕಾಂತ ಮಧುರವಾಗಿವೆ, ಅವರ ಹಾರ್ದಿಕ ವೇದನೆಯಿಂದ ಆರ್ದ್ರವಾಗಿವೆ. ಈ ರೀತಿ ಆ ಕವಿಗಳ ತಲ್ಲೀನತೆ, ಮತ್ತು ವೇದನಾಮಾಧುರ್ಯವನ್ನು ಕನ್ನಡ ನಾಡಿನ ವೈಷ್ಣವ ಕವಿಗಳಲ್ಲಿ ಅರಸುವುದೂ ತಪ್ಪಾಗುತ್ತದೋ ಏನೋ. ಆ ಮಟ್ಟದ ತಲ್ಲೀನತೆ, ವ್ಯಾಪಕತೆ ಇಲ್ಲದಿದ್ದರೂ ಸ್ವಲ್ಪ ಮಟ್ಟಿಗಾದರೂ ಕೆಲವು ಜನ ಹರಿದಾಸರಿಗೆ ಮಾಧುರ್ಯಚಿತ್ರಣ ದಲ್ಲಿ ಯಶಸ್ಸು ದೊರೆತಿದೆ. ಇಂಥವರಲ್ಲಿ ಪುರಂದರದಾಸರು ಅಗ್ರಗಣ್ಯರು.

ಪ್ರೇಮದ ಮಹತ್ವವನ್ನು ಪುರಂದರ ದಾಸರು ತುಂಬ ಮಾರ್ಮಿಕವಾಗಿ ಹೇಳಿದ್ದಾರೆ.

'ಕೇಳನೋ ಹರಿ ತಾಳನೋ ‖ ಪ ‖
ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ ‖ ಅನುಪ ‖
ತಂಬೂರಿ ಮೊದಲಾದ ಅಖಿಳವಾದ್ಯಗಳಿದ್ದು |
ಕೊಂಬುಕೊಳಲು ಧ್ವನಿಸ್ವರಗಳಿದ್ದು ‖
ತುಂಬುರು ನಾರದರ ಗಾನ ಕೇಳುವ ಹರಿ |
ನಂಬಲಾರ ಈ ಡಂಭದ ಕೂಗಾಟ ‖ ೧ ‖

ಮಾಧುರ್ಯೋಪಾಸನೆ ಎರಡು ತೆರ: ಪ್ರತ್ಯಕ್ಷ ಮತ್ತು ಪರೋಕ್ಷ. ಯಾವ ಮಾಧ್ಯಮವೂ ಇಲ್ಲದೆ ದೇವರೊಡನೆ ನೇರವಾಗಿ ಭಕ್ತನ ಪ್ರಣಯ ನಿವೇದನೆ, ವಿರಹ ವೇದನೆಯ ಅನುಭವ ಅಭಿ ವ್ಯಕ್ತಿ ಪ್ರತ್ಯಕ್ಷ ಮಾರ್ಗವೆನಿಸುತ್ತದೆ. ಗೋಪಿಯರೇ ಮೊದಲಾದ ಮಾಧ್ಯಮಗಳ ಮೂಲಕ ಅಭಿವ್ಯಕ್ತವಾದರೆ ಅದನ್ನು ಪರೋಕ್ಷ ಮಾರ್ಗವೆನ್ನಬಹುದು.

ಪುರಂದರದಾಸರಲ್ಲಿ ಪರೋಕ್ಷ ಮಾರ್ಗವೇ ಹೆಚ್ಚು. ಆದರೂ ನೇರವಾಗಿ ಸೌಂದರ್ಯಾ ರಾಧನೆ ಮಾಡಿರುವ ಕೆಲವು ಕೀರ್ತನೆಗಳೂ ಉಂಟು. ಪುರಂದರದಾಸರ ವಾಣಿಯು ಎಲ್ಲ ಐಶ್ವರ್ಯವೂ ಮಾಧುರ್ಯದ ಮೂರ್ತಿಯ ಪರಿಯ ಸೊಬಗಿನ ಮೇಲೆ ಸೂರೆಹೋಗಿದೆ. ಅದು ಯಾವ ಪರಿಯ ಸೊಬಗು ಎಂಬುದನ್ನು ಅವರನ್ನೇ ಕೇಳಬೇಕು :

"ಈ ಪರಿಯ ಸೊಬಗಾವ ದೇವರಲಿ ನಾ ಕಾಣೆ ‖ ಪ ‖
ಗೋಪೀಜನಪ್ರಿಯ ಗೋಪಾಲಗಲ್ಲದೆ ‖ ಅ ‖
ದೊರೆಯತನದಲಿ ನೋಡೆ ಧರಣಿದೇವಿಗೆ ರಮಣ |
ಸಿರಿಯತನದಲಿ ನೋಡೆ ಶ್ರೀಕಾಂತನು ‖
ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ |
ಗುರುವುತನದಲಿ ನೋಡೆ ಜಗದಾದಿಗುರುವು ‖ ೧ ‖

ಪಾವನತ್ವದಿ ನೋಡೆ ಅಮರ ಗಂಗಾಜನಕ |
ದೇವತ್ವದಲಿ ನೋಡೆ ದಿವಿಜರೊಡೆಯ ‖
ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ |
ಆವ ಧೈರ್ಯದಿ ನೋಡೆ ಅಸುರಾಂತಕ ‖ ೨ ‖

ಗಗನದಲಿ ಸಂಚರಿಪ ಗರುಡದೇವನೆ ತುರಗ |
ಜಗತೀಧರಶೇಷ ಪರ್ಯಂಕಶಯನ ‖

ನಿಗಮಗೋಚರ ಪುರಂದರ ವಿಠಲ ಗಲ್ಲದೆ ।
ಮಿಗಿಲಾದ ದೈವಗಳಿಗೀ ಭಾಗ್ಯವುಂಟೆ? ॥ ೩ ॥

ಇಂಥ ಮಧುರ ಚದುರ ಮೂರ್ತಿ ದಾಸರಿಗೆ ಸಮಸ್ತ ಚರಾಚರಗಳಲ್ಲಿ ಎಲ್ಲೆಲ್ಲೂ ಗೋಚರಿಸುತ್ತದೆ:

'ಪಿಳ್ಳಂಗೋವಿಯ ಚೆಲ್ವಕೃಷ್ಣನ । ಎಲ್ಲಿ ನೋಡಿದಿರಿ । ರಂಗನ ಎಲ್ಲಿ ನೋಡಿದಿರಿ ॥ ಪ ॥
ಎಲ್ಲಿ ನೋಡಿದರಲ್ಲಿ ತಾನಿಲ್ಲ । ದಿಲ್ಲವೆಂದು ಬಲ್ಲ ಜಾಣರು ॥ ಅನುಪ ॥
ನಂದಗೋಪನ ಮಂದಿರಂಗಳ ಸಂದುಗೊಂದಿನಲಿ ।
ಚಂದ ಚಂದದ ಗೋಪಬಾಲಕ ವೃಂದ ವೃಂದದಲಿ
ಸುಂದರಾಂಗದ ಸುಂದರಿಯರ ಹಿಂದುಮುಂದಿನಲಿ ।
ಅಂದದಾಕಳ ಕಂದಕರುಗಳ ಮಂದೆ ಮಂದೆಯಲಿ ॥ ೧ ॥

ಆಗಮಾರ್ಥದೊಳಗೆ ಮಾಡುವ ಯಾಗ ಯಾಗದಲಿ ॥
ಶ್ರೀಗೆ ಭಾಗ್ಯವಾಗಿ ವರ್ತಿಪ ಭೋಗ ಭೋಗದಲಿ ।
ಭಾಗವತರು ಬಾಗಿ ಪಾಡುವ ರಾಗ ರಾಗದಲಿ ॥ ೨ ॥

ಈ ಚರಾಚರದೊಳಗೆ ಜನಂಗಳಾಚೆ ಈಚೆಯಲಿ ।
ಖೇಚರೇಂದ್ರನ ಸುತನ ರಥದ ಚೌಕ ಪೀಠದಲಿ ॥
ನಾಚದೆ ಮಾಧವ ಎಂಬ ಭಕ್ತರ ವಾಚಕಂಗಳಲಿ ।
ವೀಚುಕೊಂಡದ ಪುರಂದರ ವಿಠಲನ ಲೋಚನಾಗ್ರದಲಿ ॥ ೩ ॥

ಪರಮಾತ್ಮನ ದಿವ್ಯಮಂಗಳವಿಗ್ರಹ ಈ ರೀತಿ ದಾಸವರ್ಯರ ಲೋಚನಾಗ್ರದಲ್ಲಿ ನಿಂತಿದೆ. ಅದನ್ನು ಕುರಿತು ಎಷ್ಟೆಷ್ಟು ಪರಿಭಾವಿಸಿದರೂ ತೃಪ್ತಿಯಿಲ್ಲ. ಸಂಭಾಷಣಾಶೈಲಿಯಲ್ಲಿ ಕೆಳಗಿನ ಕೀರ್ತನೆಯಲ್ಲಿ ದಾಸರ ಹೆಣ್ಣುಹೃದಯ ಆ ಗಾಡಿಕಾರನ ಗಾಡಿಯನ್ನು ಪರಿಪರಿಯಾಗಿ ನೆನೆದು ತೋಡಿಕೊಂಡಿದೆ. ಅವರು ಆ ಚೆಲುವನ್ನು ಆಪಾದಮಸ್ತಕ ನೋಡಿ ತಣಿಯರು, ಹಾಡಿ ತಣಿಯರು.

ಶರಣಸತಿ ಲಿಂಗಪತಿ, ಎಂಬುದು ಭಾರತೀಯ ಭಕ್ತಿಯಾದರೆ ಇಸ್ಲಾಂ ಧರ್ಮದ ಸೂಫೀಪಂಥ ದಲ್ಲಿ ಇದಕ್ಕೆ ವ್ಯತಿರಿಕ್ತ. ಸೂಫೀ ಪಂಥದಲ್ಲಿ ಪರಮಾತ್ಮ ಹೆಣ್ಣು ಆತ್ಮ ಗಂಡು. ಆ ಹೆಣ್ಣಿನ ಅಲೌಕಿಕ ಸೌಂದರ್ಯದ ವರ್ಣನೆ, ವಿಶ್ವವ್ಯಾಪಕ ವಿರಹ, ಮಾದಕ ಮಿಲನಗಳ ಭೂತಿ ಮೊದಲಾದ ವುಗಳ ವರ್ಣನೆ ಫಾರಸೀ ಸಾಹಿತ್ಯದ ತವನಿಧಿ. ದೇವರನ್ನು ಹೆಣ್ಣಿನ ರೂಪದಲ್ಲಿ ಪುರಂದರದಾಸರೂ ಕಂಡಿದ್ದಾರೆ. ಮೋಹಿನಿಯ ಅವತಾರದ ಪೌರಾಣಿಕ ಕಲ್ಪನೆಯನ್ನೇ ಚೆಲುವಿನ ಕಣ್ಣಿನಿಂದ ಪುರಂದರದಾಸರು ಕಂಡಿದ್ದಾರೆ. ಆದರೆ ಈ ಸೌಂದರ್ಯವರ್ಣನೆಯಲ್ಲಿ ಬರಿಯ ಮಾಯಾ ವರ್ಣನೆಯಿದೆಯೇ ಹೊರತು ರೂಪವರ್ಣನೆ ಇಲ್ಲ. ಇಂಥ ಕೆಲವು ಕೀರ್ತನೆಗಳಲ್ಲಿ ಪುರಂದರ ದಾಸರ ಮೊದಲ ಚರಣಗಳು ಚೆಲುವಾಗಿರುತ್ತವೆ. ಆದರೆ ಪ್ರತಿಮೆ ಮುಂದುವರಿಯದೆ ಪೌರಾಣಿಕ ಪೂರ್ವ ಕತೆಗಳ ಬೆನ್ನು ಹತ್ತಿ ಅವರ ಪ್ರತಿಭೆ ತೊಳಲಿರುವುದೂ ಉಂಟು. ಅಂಥ ಕೀರ್ತನೆಗಳಲ್ಲಿ ಇದೂ ಒಂದು.

"ಇಂಥಾ ಹೆಣ್ಣನ ನಾನೆಲ್ಲೂ ಕಾಣೆನೊ । ಹೊಂತಕಾರಿ ಕಾಣಿರೋ ॥ ಪ ॥
ಸಂತತ ಸುರರಿಗೆ ಅಮೃತವನುಣಿಸಿದ । ಪಂಕ್ತಿಯೊಳಗೆ ಪರವಂಚನೆ ಮಾಡಿದ ॥ ಅ ॥

ಮಂದರಗಿರಿ ತಂದು ಸಿಂಧುವಿನೊಳಗಿಟ್ಟು ।
ಚಂದದಿ ಕಡೆದು ಅಮೃತವ ತೆಗೆದು ॥

ಇಂದು ಮುಖಿಯೆ ನೀ ಬಡಿಸೆಂದು ಕೊಟ್ಟರೆ ।
ದಂಧನಗಳ ಮಾಡಿ ದೈತ್ಯರ ವಂಚಿಸಿದ ॥ ೧ ॥

ವಿಶ್ವಾಸದಿಂದಲಿ ಅಸುರಗೆ ವರವಿತ್ತು ।
ತ್ರಿಶೂಲಧರ ಓಡಿ ಬಳಲುತಿರೆ ॥
ನಸುನಗುತಲಿ ಬಂದು ಭಸ್ಮಾಸುರನಿಗೆ ಭೋಗ ।
ದಾಸೆಯ ತೋರಿ ಭಸ್ಮವ ಮಾಡಿದ ॥ ೨ ॥

ವಸುಧೆಯೊಳಗೆ ಹೆಣ್ಣು ಒಸಗೆಯಾಗದ ಮುನ್ನ ।
ಬಸಿರಲಿ ಬ್ರಹ್ಮನ ಪಡೆದವಳಿವಳು ॥
ಕುಸುಮನಾಭ ಶ್ರೀ ಪುರಂದರ ವಿಠಲನ ।
ಹೆಸರು ಪೊತ್ತಿಹಳು ಈ ಪೊಸಕನ್ನಿಕೆಯು ॥ ೩ ॥

ಪರೋಕ್ಷ ಪ್ರೇಮಾಭಿವ್ಯಂಜನೆಯಲ್ಲಿ ಪುರಂದರದಾಸರಿಗೆ ಪ್ರತ್ಯಕ್ಷಕ್ಕಿಂತ ಹೆಚ್ಚಿನ ಯಶಸ್ಸು ದೊರೆತಿಲ್ಲ. ಕವಿ ಅಲ್ಲಿ ತನ್ನ ಎಲ್ಲ ಉಪಾಧಿಗಳನ್ನು ಮರೆತು ಆತ್ಮಾಭಿವ್ಯಂಜನೆ ಮಾಡಬಲ್ಲ. ಗೋಪಿಕೆಯರ ಪರಕಾಯ ಪ್ರವೇಶ ಮಾಡಿ ಪುರಂದರದಾಸರು ಆ ಮಧುರ ಚಿನ್ಮಯನತ್ತ ತಮ್ಮ ರತಿಯನ್ನು ವ್ಯಕ್ತಪಡಿಸಲು ಪ್ರಯತ್ನಿಸಿದ್ದಾರೆ. ಅವರ ಹೃದಯ ಅಲ್ಲಿ ತನ್ನ ಎಲ್ಲ ಪೌರುಷ ಪರುಷತೆಯನ್ನೂ ಕಳೆದುಕೊಂಡು ಪ್ರೇಮಜಾಹ್ನವಿಯಾಗಿ ಹರಿದಿದೆ. ಅದರಲ್ಲಿ ಅಪೂರ್ವವಾದ ತೀವ್ರತೆ, ಕಳಕಳಿ ಹಣಿಕಿರುತ್ತದೆ. ಆದರೆ ಅಲ್ಲಿ ಕೂಡ ಪುರಾಣಿಕ ಕವಿಗೆ ಅಡ್ಡವಾಗಿ ಬರುತ್ತಾನೆ. ಭಾವಸೂಕ್ಷ್ಮತೆಗೆ ಬದಲಾಗಿ ಪೌರಾಣಿಕ ಘಟನೆಗಳ ಪುನರಾವರ್ತನೆ ತಾನೇ ತಾನಾಗುತ್ತದೆ. ಭಾವ ಸೂಕ್ಷ್ಮತೆ ವಿನಾ ವ್ಯಾಪಕತೆಯ ದೃಷ್ಟಿಯಿಂದ ಜಯದೇವ ಚಂಡೀದಾಸ, ವಿದ್ಯಾಪತಿ, ಸೂರದಾಸ ಮೊದಲಾದ ಕವಿಗಳ ಕೃತಿಗಳನ್ನು ಪುರಂದರದಾಸರ ಕೃತಿಗಳೊಡನೆ ಹೋಲಿಸಿ ನೋಡಿದಾಗ ಅವರ ಕೀರ್ತನೆಗಳ ಸಾಧಾರಣತೆ ಅಸಾಧಾರಣವಾಗಿ ಎದ್ದು ತೋರುತ್ತದೆ. ಇದಕ್ಕೆ ಕಾರಣ ಪುರಂದರದಾಸರು ಕೃಷ್ಣ ದೇವರು ಎಂಬುದನ್ನು ಕ್ಷಣ ಕಾಲವೂ ಮರೆಯಲಾರರು. ಅಥವಾ ಪರಕಾಯ ಪ್ರವೇಶದಲ್ಲೇ ಯಶಸ್ಸು ಸಿಗುವುದಿಲ್ಲವೆಂದು ಕಾಣುತ್ತದೆ.

ತಮಗೂ ದೇವರಿಗೂ ಇರುವ ತಾರತಮ್ಯವನ್ನು ಅವರು ಮರೆಯಲಾರರು. ಈ ರೀತಿ ಅವರ ತಾರತಮ್ಯಜ್ಞಾನ ತಾದಾತ್ಮ್ಯ ಸಿದ್ಧಿಗೆ, ಕವಿಯ ಸಾಧಾರಣೀಕರಣಕ್ಕೆ ಅಡ್ಡವಾಗುತ್ತದೆ. ಅದರ ಫಲವಾಗಿ ಅವರ ಮಧುರಭಾವದ ಕೀರ್ತನೆಗಳಲ್ಲಿ ತಲ್ಲೀನತೆ ಕಾಣದಾಗುತ್ತದೆ; ಕಾವ್ಯಗುಣ ಕುಗ್ಗತೊಡಗುತ್ತದೆ. ತಾದಾತ್ಮ್ಯ, ಸಮಾನ ಭೂಮಿಕೆ, ಮಧುರ ರಸ ಸಾಧನೆಗೆ ಅತ್ಯಗತ್ಯ ಎಂಬುದನ್ನು ಹಿಂದೆಯೇ ಹೇಳಿದೆ.

ಪೂರ್ವರಾಗ ಚಿತ್ರಣ ಸಾಕಷ್ಟು ಯಶಸ್ವಿಯಾಗಿದೆ. ಕೃಷ್ಣನ ಪ್ರಥಮ ದರ್ಶನ ಗೋಪಿಯ ಮೇಲೆ ಅದೆಂತಹ ಮಾದಕ ಪ್ರಭಾವ ಬೀರುತ್ತದೆ! ಅವನ ಓರೆನೋಟ ಅವಳನ್ನು ಕೊಂದು ಬಿಡುತ್ತದೆ. ಪ್ರಣಯದರ್ಶನದ ತರುವಾಯ ಆಕೆಗೆ ಆತನವೇ ನೆನವು, ಹಂಬಲ ! ಆತನ ರೂಪ ವನ್ನು ಬಿಡಿ ಬಿಡಿಯಾಗಿ ಬಿಡಿಸಿ ಬಿಡಿಸಿ ಎಷ್ಟು ಬಣ್ಣಿಸಿದರೂ ಸಾಲದು. ಕೃಷ್ಣನ ರೂಪ ಅವಳ ಕಣ್ಣಿನಲ್ಲಿ ಕಟ್ಟಿದಂತಿದೆ. ಇಲ್ಲೂ ಅಷ್ಟೇ ಕೀರ್ತನೆಯ ಆರಂಭ ಮೋಹಕವಾಗಿದೆ. ಕೊನೆ ಕೊನೆಗೆ ದಾಸರ ಮನ ಎಲ್ಲೆಲ್ಲೋ ಸುತ್ತಿ ಉಡುಪಿ ಕೃಷ್ಣನ ಬಳಿ ಬಂದು ನಿಲ್ಲುತ್ತದೆ. ಮೊದಲ ನೆಯ ಕೆಲವು ಚರಣಗಳನ್ನು ಮಾತ್ರ ನೋಡಬಹುದು.

ಅರಮಗನೆಂದರಿಯದೆ ಇವನನ್ನು ಕೇರಿಯೊಳು ಸುಳಿವ ಪೋಪನನ್ನು
ಪಾರಿಜಾತವ ತರುಬಿದ ಕಸ್ತೂರಿ| ನೀರು ಗಂಧವ ತಿದ್ದಿಹನನ್ನು ||
ದೂರವಲಿನಿಯ ಕೊಂಡು || ಸೋಗಕಣ್ಣು ಓರೆನೋಟದಿ ಬಿರಿದು ಮುರಿದಾನೆ || ೧ ||

ಆದರೆ ಎಲ್ಲ ಕಡೆಯೂ ಹೀಗಾಗಿಲ್ಲ. ಒಂದೆರಡು ಕಡೆ ವಿರಳವಾದರೂ ಸರಿ ಪುರಂದರ ದಾಸರಿಗೆ ತಾದಾತ್ಮ್ಯ ಸಿದ್ಧಿಸಿದೆ. ಪ್ರೇಮಾನುಭೂತಿ ತುಂಬ ಗಾಢವಾದುದು. ಅದರ ಪ್ರಭಾವ ಮುದ್ರೆಯ ಸಮುದ್ರದಲ್ಲಿ ಮುಳುಗಿರುವವನಿಗೆ ಬೇರೇನೂ ಕಾಣುವುದೇ ಇಲ್ಲ. ಈ ಪ್ರೇಮ ನಿರಂತರವಾಗಿ ವರ್ಧಿಸುತ್ತ ಹೋಗುತ್ತದೆ, ಕ್ರಮೇಣ ಭಕ್ತನ ಎದೆಯಲ್ಲಿ ಮೂಡುವ ಎಲ್ಲ ಭಾಗಗಳನ್ನೂ ಆಕ್ರಮಿಸಿ ತಾನೇ ತಾನಾಗಿ ನಿಲ್ಲುತ್ತದೆ. ಆಗ ಅವನಿಗೆ ಎಲ್ಲೆಡೆಯೂ ಪ್ರೇಮಾಸ್ಪದರೂಪ ಗೋಚರವಾಗುತ್ತದೆ. ಬೇಡ ಬೇಡವೆಂದರೂ ಅದು ಅವನನ್ನು ಅಟ್ಟಿಸಿಕೊಂಡು ಬರುತ್ತದೆ. ಪ್ರೇಮದ, ಪ್ರೇಮಿಯ ಈ ಆಕ್ರಮಣವನ್ನು ಪಾಶ್ಚಾತ್ಯ ಅನುಭಾವಿ ಕವಿ Francis Thompson 'Hound of Heaven' ಎಂಬ ತನ್ನ ಕವಿತೆಯಲ್ಲಿ ತುಂಬ ಸುಂದರವಾಗಿ ವರ್ಣಿಸಿದ್ದಾನೆ. ಪುರಂದರದಾಸರ ಈ ಕೀರ್ತನೆಯಲ್ಲಿ ಪರಮಾತ್ಮನ ಸರ್ವವ್ಯಾಪಕತೆ ಮಧುರ ರಸಮಂಡಿತವಾಗಿ ಮೂಡಿದೆ.

"ನಿನ್ನಮಗ ಬೆನ್ನ ಬಿಡಲೊಲ್ಲ ಕಾಣೆ | ನಿನ್ನಾಣೆ ಜಾಣೆ || ಪ ||
ಅಲ್ಲಿ ನೋಡಲು ತಾನೆ ಇಲ್ಲಿ ನೋಡಲು ತಾನೆ ಫುಲ್ಲಲೋಚನೆ ಸುಪ್ರವೀಣೆ || ೧ ||
ಹಿಂದೆ ನೋಡಲು ತಾನೆ ಮುಂದೆ ನೋಡಲು ತಾನೆ ಮಂದಿರದೊಳಹೊರಗಿಹನೆ || ೨ ||
ಮುದ್ದು ಪುರಂದರ ವಿಠಲರಾಯನು | ಎದ್ದು ಬಂದಪ್ಪಿ ಕೊಂಡನೆ || ೩ ||

ಕೃಷ್ಣನ ರೂಪಮಾಧುರಿಯನ್ನು ಎಷ್ಟು ಪಾನಮಾಡಿದರೂ ಗೋಪಿಯರಿಗೆ ತೃಪ್ತಿಯಿಲ್ಲ. ಅವರು ಅವನ ಅಂಗಾಂಗಗಳ ಕಾಂತಿಯನ್ನೆಲ್ಲ ತಮ್ಮ ಕಣ್ಣಿನಲ್ಲಿ ತುಂಬಿಕೊಳ್ಳಬಯಸುತ್ತಾರೆ. ಇದು ಪೂರ್ವರಾಗದ ಅನುಭವ. ಇದರ ಚಿತ್ರಣದಲ್ಲಿ ಪುರಂದರದಾಸರು ಸಫಲರಾಗಿದ್ದಾರೆ.

"ವೃಂದಾವನದೊಳಾಡುವನ್ಯಾರೆ ಗೋಪಿ |
ಚಂದಿರವದನೆ ನೋಡುವ ಬಾರೆ || ಪ ||

ಅರುಣ ಪಲ್ಲವ ಪಾದಯುಗಳನೇ | ದಿವ್ಯ |
ಮರಕತ ಮಂಜುಳಾಭರಣನೇ
ಸಿರಿವರ ಯದುಕುಲ ಸೋಮನೆ | ಇಂಥ |
ಪರಿಪೂರ್ಣಕಾಮನಿಸ್ಸೀಮನೆ || ೧ ||

ಹಾರಹೀರ ಗುಣಧಾರನೆ | ದಿವ್ಯ | ಸಾರ ಶರೀರ ಶೃಂಗಾರನೇ |
ಆರಿಗಾದರೂ ಮನದೂರನೆ | ತನ್ನ |
ಸೇರಿದವರ ಮಾತ ಮೀರನೆ || ೨ ||

ಮಸಣ ಕುಂಡಲ ಕಾಂತಿಭರಿತನೆ | ದಿವ್ಯ |
ಅಕಳಂಕರೂಪಲಾವಣ್ಯನೆ ||
ಸಕಲರೊಳಗೆ ದೇವಸೀತನೆ | ನಮ್ಮ
ಮುಕುಂದೀಶ ಪುರಂದರ ವಿಠಲನೆ || ೩ ||

ಈ ಲೋಕಮೋಹಕನ ರೂಪ ಕವಿಯನ್ನು ಭಾವಮದಿರಗೊಳಿಸುತ್ತದೆ. ಮೋಹಕ ಆವೇಶ ಹೆಚ್ಚುತ್ತದೆ, ಆ ಲೋಕಮೋಹಕನ ಸಾಹಚರ್ಯಕ್ಕಾಗಿ ಗೋಪಿಯ ಚಿತ್ತ ತಳಮಳಿಸುತ್ತದೆ. ಅದನ್ನು ಪಡೆದವರ ಭಾಗ್ಯವನ್ನು ಎಷ್ಟು ಹೊಗಳಿದರೂ ತೀರದು.

"ಎಂಥಾ ಪುಣ್ಯವೆ ಗೋಪಿ, ಎಂಥಾ ಭಾಗ್ಯವೆ ಯಶೋದೆ, ಇಂಥಾ ಮಗನ ಕಾಣೆವೆ ‖ ಪ ‖
ಚಿಂತಿಸದಿರು ದೊರಕ ಚೆಲುವರಾಜಗೋಪಾಲ ಭ್ರಾಂತಿ ಮಾತುಗಳಲ್ಲವೆ ಬಹು ನಿಜವೆ ‖ ಅ ‖
ಸರಸಿಜನಾಭನ ಸುಮ್ಮನೆ ಕಂಡರೆ ದುರಿತವೆಲ್ಲವು ಪೋಪುದೆ।
ಸರಸದಿಂದಲಿ ಒಮ್ಮೆ ಸವಿಮಾತನಾಡಿದರೆ ಹರುಷ ಕೈಗೂಡುವುದೆ ಯಶೋದೆ ‖ ೧ ‖

ಶ್ರೀ ಕೃಷ್ಣನ ಸಾಹಚರ್ಯಸೌಖ್ಯವನ್ನು ಸಿಂದೆಯ ರೂಪದಲ್ಲಿ ಎಷ್ಟು ಹೇಳಿಕೊಂಡರೂ ಗೋಪಿಯರಿಗೆ ತೃಪ್ತಿಯಿಲ್ಲ. ಅದರ ಸೆನಹಿನಲ್ಲೇ ಅವರು ಜೀವಿಸುತ್ತಾರೆ.

"ಮೆಲ್ಲಮೆಲ್ಲನೆ ಬಂದನೆ, ಗೋಪಮ್ಮ ಕೇಳೆ, ಮೆಲ್ಲ ಮೆಲ್ಲನೆ ಬಂದನೆ ‖ ಪ ‖
ಮೆಲ್ಲ ಮೆಲ್ಲಗೆ ಬಂದು ಗಲ್ಲಕೆ ಮುದ್ದು ಕೊಟ್ಟು।
ನಿಲ್ಲದೆ ಓಡಿ ಪೋದ ಕಳ್ಳಗೆ ಬುದ್ಧಿ ಪೇಳೆ ‖

ತಮ್ಮ ಎದೆಯಾಣ್ಮನಾದ ಆ ಚೆಲುವ ಕೃಷ್ಣನನ್ನು ಯಾರು ಕರೆದೊಯ್ಯುವರೋ, ತಮ್ಮ ಕೈಯಿಂದ ಎಲ್ಲಿ ಆ ನಿಧಿ ಕಳಚಿಹೋಗುವುದೋ ಎಂದು ಅವರಿಗೆ ಕಳವಳ. ಆ ಕಳವಳದಲ್ಲಿ ಅವನ ಮೋಹಕಮೂರ್ತಿ ಅವರ ಕಣ್ಣೆದುರಿಗೆ ನಿಲ್ಲುತ್ತದೆ. ಕುರುಡ ತನ್ನ ಕಡವರವನ್ನು ತಡವರಿಸಿ ತಡವರಿಸಿ ನೋಡುವಂತೆ ಅವರು ಅವನ ರೂಪವನ್ನು ನೆನೆಯುತ್ತಾರೆ.

"ಯಾರೆ ರಂಗನ ಯಾರೆ ಕೃಷ್ಣನ। ಯಾರೆ ರಂಗನ ಕರೆಯ ಬಂದವರು ‖ ಪ ‖
ಗೋಪಾಲಕೃಷ್ಣನ ಪಾಪವಿನಾಶನ। ಈ ಪರಿಯಿಂದಲಿ ಕರೆಯ ಬಂದವರು ‖ ೧ ‖
ವೇಣು ವಿನೋದನ ಪ್ರಾಣಪ್ರಿಯನ। ಜಾಣೆಯರರಸನ ಕರೆಯ ಬಂದವರು ‖ ೨ ‖
ಕರಿರಾಜ ವರದನ ಪರಮ ಪುರುಷನ। ಪುರಂದರ ವಿಠಲನ ಕರೆಯ ಬಂದವರು ‖ ೩ ‖

ಮೂರೇ ಚರಣದ ಈ ಪದ್ಯದಲ್ಲಿ ಗೋಪಿಯ ಹೃದಯದ ಕಾತರತೆ ಅತ್ಯಂತ ಮಾರ್ಮಿಕವಾಗಿ ಮೂಡಿ ಬಂದಿದೆ. ಮತ್ತೊಂದು ಕೀರ್ತನೆಯಲ್ಲಿ ಒಬ್ಬ ಗೋಪಿ ತನ್ನ ಎದೆಯಾಣ್ಮನ ಚೆಲುವನ್ನು ವ್ಯಾಜನಿಂದೆಯಿಂದ ಹೀಗೆ ಹೊಗಳುತ್ತಾಳೆ. ಇಲ್ಲೂ ಅಷ್ಟೆ. ಮೊದಲ ಚರಣ ಚೆಲುವಾಗಿದೆ.

"ಇತರ ಚೆಲುವ ರಂಗಯ್ಯ। ಹರಿಯೆಂಬ ಮಾತಿಗೆ ಮರುಳಾದೆವಲ್ಲದೆ ‖"

ಪರಕೀಯ ಭಾವವೂ ಕೆಲವು ಕೀರ್ತನೆಗಳಲ್ಲಿ ಕಂಡುಬರುತ್ತದೆ.

"ಮನಸು ನಿನ್ನ ಮೇಲೆ ಬಹಳ। ಎನಗನುಕೂಲವಾಗೋದು ಹೇಳ ‖ ಪ ‖
ಮನಸಿಜನಾಟದಿ ಕೂಡುವೆನೆಂದರೆ। ಮನುಜರೆಲ್ಲರು ಕಾಯುವರೆನ್ನ ‖ ಅ ‖
ನೆರೆಹೊರೆ ಮನೆಯವರೆಲ್ಲ। ಎನ್ನ ನೆರಳ ಕಂಡರೆ ಸೇರರಲ್ಲ ‖
ಸರಿಸಖಿಯರೆಲ್ಲ ಸುಮ್ಮನೆ ಮೂರ್ದರು। ಬರಿ ಮಾತನಾಡಲು ಸಮಯಸಿಗದಲ್ಲ ‖ ೧ ‖

ಆದರೆ ಪರಕೀಯ ಭಾವದಲ್ಲಿ ಕಂಡುಬರುವ ಅಭಿಸಾರಮಾನ, ಒಳತೋಟಿ, ಮೂಗುಬ್ಬಸ ಗಳನ್ನು ನಾವು ಇಲ್ಲಿ ಕಾಣಲಾರೆವು. ಕಾರಣ ಕವಿಯ ಮನಸ್ಸು ಇದರಲ್ಲಿ ತಲ್ಲೀನವಾಗಿಲ್ಲ. ಪ್ರಾಸಂಗಿಕವಾಗಿ ಈ ಕೀರ್ತನೆ ಬಂದಿದೆ ಅಷ್ಟೆ.

ಸಂಯೋಗ ಶೃಂಗಾರಕ್ಕಿಂತ ವಿಪ್ರಲಂಭ ಶೃಂಗಾರ ಮಧುರತರ. ಅಷ್ಟೇ ಅಲ್ಲ, ಅದು ಪ್ರೇಮದ ಜೀವಜೀವಾಳ. ಮಿಲನದಲ್ಲಿ ಪ್ರೇಮ ಲಯವಾಗಿ ಹೋಗುತ್ತದೆ. ವಿರಹದಲ್ಲಿ ಅದು ಜಾಗೃತವಾಗಿರುತ್ತದೆ. ವಿಯೋಗದಲ್ಲಿ ಪ್ರಿಯ ಜನರಿಗೆ ಕ್ಷಣವೊಂದು ಯುಗವಾಗುತ್ತದೆ. ಮೀರಾ ಮೊದಲಾದವರು ಕಾದಲನ ಹಾದಿಯನ್ನು ತಮ್ಮ ರೆಪ್ಪೆಯಿಂದ ಗುಡಿಸಿ ಕಂಬನಿಯಿಂದ ಸಾರಿಸಿ ದ್ದಾರೆ ಇರುಳೆಲ್ಲ ಜಾಗರರಾಗಿ ಅಂಗಳವೆಲ್ಲ ನಾಗರಾಗಿ ಸುರಗಿಯ ಮೇಲೆ ಒರಗಿದವರಂತೆ ಅವರು

ಹೊತ್ತು ಕಳೆಯುತ್ತಾರೆ. ಜಯದೇವನಂತೂ 'ಸಾದೀನಾತವ ವಿರಹೇ' ಮೊದಲಾದ ಪಂಕ್ತಿಗಳನ್ನು ಕಂಬನಿಯಿಂದ ಬರೆದಿದ್ದಾನೆ. ಚಂಡೀದಾಸ, ವಿದ್ಯಾಪತಿ, ಸೂರದಾಸ, ಮೊದಲಾದವರು ವಿರಹವನ್ನು ವಿಶ್ವವ್ಯಾಪಕವನ್ನಾಗಿ ಮಾಡಿದ್ದಾರೆ. ಶ್ರೀ ಕೃಷ್ಣನ ವಿರಹದಲ್ಲಿ ಸೃಷ್ಟಿಯ ಚರಾಚರವೂ ಬೇಯುತ್ತಿರುತ್ತದೆ. ಗೋಪೀಕೃಷ್ಣರ ವಿವಾಹದ ವ್ಯಾಜದಿಂದ ಜಯದೇವ, ಚಂಡೀದಾಸ, ವಿದ್ಯಾಪತಿ ಮತ್ತು ಸೂರದಾಸರು ಅಸೀಮ ಅನಂತ ಪುರುಷನನ್ನು ಕಾಣಲು ಜೀವ ಯುಗಯುಗಾಂತರದಿಂದ ಪಡುವ ಬವಣೆ ವೇದನೆಯನ್ನು ಇನ್ನಿಲ್ಲದಂತೆ ಚಿತ್ರಿಸಿದ್ದಾರೆ. ಅವರ ಚಿತ್ರ ಹೃದಯವಿದಾರಕವಾಗಿದೆ. ಅವರ ಹೃದಯ ಅಲ್ಲಿ ತಮ್ಮ ಎಲ್ಲ ಬಂಧನ, ಉಪಾಧಿಗಳನ್ನೂ ಹರಿದೊಗೆದು ವೇದನೆಯ ಆನಂದ ಮಂದಾಕಿನಿಯಾಗಿ ಹರಿದಿದೆ. ಅದರಲ್ಲಿ ತೋಯ್ದ ಅವರ ವಾಣಿ ಪುನೀತವಾಗಿದೆ. ಆ ಮಟ್ಟದ ಕಾತರ ತೀವ್ರತೆ ಮತ್ತು ಕಳಕಳಿಯನ್ನು ಪುರಂದರದಾಸರ ಕೀರ್ತನೆಗಳಲ್ಲಿ ಅರಸುವುದು ಅವರಿಗೆ ಅನ್ಯಾಯ ಮಾಡಿದಂತೆ. ಆದರೆ ಕೆಲವಾದರೂ ಕೀರ್ತನೆಗಳಲ್ಲಿ ಕೊಂಚ ಮಟ್ಟಿಗೆ ಅವರ ಪ್ರತಿಭೆ ಸಂಪ್ರದಾಯದ ಚಿಪ್ಪಿನಿಂದ ಹೊರಗೆ ಇಣಿಕಿ ಮಿಣಿಕಿದೆ. ಉಳಿದ ಕೀರ್ತನೆಗಳಲ್ಲೆಲ್ಲ ಬರಿಯ ವರ್ಣನೆ, ಮಾಹಾತ್ಮ್ಯ, ಜ್ಞಾನ ನಿರೂಪಣೆ. ಅಂಥ ಕೆಲವು ಕೀರ್ತನೆಗಳನ್ನು ನೋಡಬಹುದು.

ವೃಂದಾವನದಲ್ಲಿ ಗೋಪಿಯರ ಹೃದಯವನ್ನು ತನ್ನ ಪ್ರೇಮಾಮೃತದಿಂದ ತಣಿಸಿದ ಕೃಷ್ಣ ಬಿಲ್ಲಹಬ್ಬಕ್ಕೆಂದು ಮಧುರೆಗೆ ತೆರಳಿದವನು ಮತ್ತೆ ಮರಳಲಿಲ್ಲ. ಅವನು ಬಿಲ್ಲಹಬ್ಬಕ್ಕೆ ಹೋಗಲಿದ್ದಾನೆಂಬ ವಾರ್ತೆ ಕಾಳ್ಗಿಚ್ಚಿನಂತೆ ಹಬ್ಬುತ್ತದೆ. ಆದನ್ನು ಕೇಳಿದ ಒಬ್ಬ ಗೋಪಿ ತನ್ನ ಸಂಕಟವನ್ನು ಈ ರೀತಿ ತೋಡಿಕೊಳ್ಳುತ್ತಾಳೆ:

"ಅಕ್ಕ ಎತ್ತಣ ಬಿಲ್ಲ ಹಬ್ಬ ಬಂತೆಮಗೆ |
ಪ್ರಾಣಕಾಂತನ ಕರೆದೊಯ್ದರು ಮಧುರೆಗೆ ||
ಅಕ್ಕ ಮಧುರಾಪಟ್ಟಣದ ನಾರಿಯರು |
ಅಕ್ಕ ಚದುರೆ ಚೆಲುವೆ ಚಪಲೆಯರು ||
ಅಕ್ಕ ಮದನಶಾಸ್ತ್ರದಿ ನಿಪುಣೆಯರು |
ಸಿಕ್ಕ ಮಾಧವನ ಕಂಡರೆ ಅವರುಬಿಡರು ||೧||

ಅಕ್ಕ ಮೋಹನ ಕಾಣೆ ಮಧುರಾಪುರ |
ಅಕ್ಕ ಮೋಹನ ನಾರಿಯರು ಉದಾರ |
ಅಕ್ಕ ಮೋಹನ ಕಾಣೆಯುಮುನಾತೀರ |
ಅಕ್ಕ ಮೋಹನರಂಗ ಮನೆಗೆ ಬರ ||೨||

ಅಕ್ಕ ಕರೆದು ಒಯ್ದರು ನಂದಕ್ರೂರ |
ಅಕ್ಕ ಬಂದೆಹೇಳುವನಂದಕ್ರೂರ ||
ಅಕ್ಕ ಧರೆಯೊಳಗೆಲ್ಲ ಅತಿಕ್ರೂರ |
ಅಕ್ಕ ನಮಗಿರುವುದ ಬಿಡ ಸ್ಮರಚೋರ ||೩||

ಅಕ್ಕ ಹೇಗೆ ಸೈರಿಸುವೆನರೆಗಳಿಗೆ |
ಅಕ್ಕ ನಗಧರ ಬಾರನಲ್ಲೆ ಮನೆಗೆ |
ಅಕ್ಕ ಹಗಲಿರುಳೆಂಬುದೊಂದು ಗಳಿಗೆಯಾಗೆ |
ಅಕ್ಕ ಸಾಗಿಸಿಗಳುಹೆ ನನ್ನಬಳಿಗೆ ||೪||

ಅಕ್ಕ ಮೋಹನಕಾಣೆ ಶ್ರೀರಂಗನು |
ಅಕ್ಕ ಕರೆದರೆ ಓಡಿಬರತಾನು ಪುರಂದರವಿಟ್ಠಲನು |
ಅಕ್ಕ ಭಕುತರಿಗೆ ಸಿಕ್ಕಬಾರನು ||೫|| "

'ಅಕ್ಕ ಅಕ್ಕ' ಎಂದು ಹೇಳುವಾಗ ಈ ಪದದಲ್ಲಿ ಗೋಪಿಯು ಅಳುವ ಬಿಕ್ಕಳಿಕೆಯನ್ನೂ ನಾವು ಕೇಳಬಹುದು. ಇಲ್ಲಿ ಯಾವ ಅಲಂಕಾರವೂ ಇಲ್ಲ. ಆದರೆ ಅದರ ಸ್ವಭಾವೋಕ್ತಿಯ ಮುಂದೆ ಯಾವ ಅಲಂಕಾರವೂ ನಿಲ್ಲಲಾರದು.

ಆದರೇನು ಕ್ರೂರನಾದ ಅಕ್ರೂರ ಕೃಷ್ಣನನ್ನು ಕರೆದೊಯ್ದ. ಕೃಷ್ಣನ ವಿರಹದಲ್ಲಿ ವೃಂದಾವನ ಹಾಳು ಹಾಳು ಸುರಿಯುತ್ತದೆ. ಮೊರನಟ್ಟಿಳಿ ತಾಳಲಾರದೆ ಗೋಪಿಯರು ಪ್ರಲಾಪ ಮಾಡುತ್ತಿದ್ದಾರೆ. ಅವರ ಆಕ್ರಂದದಿಂದ, ಕಂಬನಿಯಿಂದ ಈ ಗೀತೆ ಆರ್ದ್ರವಾಗಿದೆ.

" ಯಾಕೆ ಗೋಕುಲ ನಮಗ್ಯಾಕೆ ವೃಂದಾವನ |
ಯಾಕೆ ಸಂತತ ಸುಖವು ||ಪ||

ಶ್ರೀಕಾಂತ ಅನೇಕ ಬಗೆಗಳಿಂದ |
ರಾಕೇಯಮುಖವ ನಿರಾಕರಿಸಿದಮೇಲೆ ||ಅ||

ಹೆತ್ತ ತಾಯಿತಂದೆ ಅತ್ತೆಮಾವಂದಿರ ಬಿಟ್ಟು |
ಹತ್ತುದಿಕ್ಕಿಲಿ ಇವನ ನಾವೆಲ್ಲರು ಪೊತ್ತೇವೆ ದೂರಿಷ್ಟು |
ಉತ್ತಮರತಿ ನಮಗಿತ್ತುಪೊರೆವ ಪುರುಷೋತ್ತಮಗಿಷ್ಟು |
ಚಿತ್ತವಿಲ್ಲದಮೇಲೆ ॥ "

ಯಾವ ಯಾವ ವಸ್ತುಗಳು ಪ್ರಿಯನ ಸಂಯೋಗದಲ್ಲಿ ರತಿಯನ್ನು ಉದ್ದೀಪಿಸುತ್ತಿದ್ದವೋ ಅವೇ ಇಂದು ತಾಪವನ್ನು ಉದ್ದೀಪಿಸುತ್ತಿವೆ. ತಿಂಗಳು ಇಂಗಳವಾಗಿದೆ, ಮಲಯಮಾರುತ ಅಗ್ನಿಯ ಮಳೆ ಗರೆಯುತ್ತಿದ್ದಾನೆ; ಚಂದನ ಇಂಧನವಾಗಿದೆ. ಈ ರೀತಿಯ ವಿರಹ ವರ್ಣನೆ ಸಾಂಪ್ರದಾಯಿಕವಾದರೂ ಸಾಕಷ್ಟು ಸಜೀವವಾಗಿದೆ:

" ಕಂಗಳಿಗೊಳವಿಲ್ಲವೆ | ರಂಗನನೋಟ !|ಪ||
ಅಂಗದೊಳು ಬೆಳದಿಂಗಳು ತುಂಬಿತು ||ಅ||

ಚಂದನದಿಂದ ಕುಚಂಗಳ ತವಿಸಲಿ |
ಇಂದುಕಿರಣ ಬಂದು ಕಂದಿಸಲಿ |
ಮಂದಮಾರುತದಲಿ ನಿಂದಿರಲಾಕೆಗೆ |
ಕಂದರ್ಪತಾಪವು ಹೋಹುದೇನೆ ||೧||

ಬಂಗಾರ ದೇಹಕೆ ಭಾರವಾಗಿದೆ |
ಶೃಂಗರಿಸಿಕೊಳಲಾರಿಗಾಗಿ |
ಅಂಗಜಶರ ತಾಪ ತಾಳಲಾರನು |
ಉಂಗುರವು ಕೈಗೆ ಉಚಿತವೇನೇ ಹೆಣ್ಣೆ ॥
ಮುನ್ನ ಪುರಂದರವಿಠಲರಾಯ ಕೂಡಿ |
ಇನ್ನೂ ಬಾರೆಂದರೆ ಬಾರನೇಕೆ ।|
ಅನ್ನಪಾನರುಚಿಯಾಗಿ ತೋರಲಿಲ್ಲ |
ನಿನ್ನಾಣೆ ಕಣ್ಣುನಿದ್ರೆ ಬಾರದು ಹೆಣ್ಣೆ ||

ಗೋಪಿಯರನ್ನು ಸಂತೈಸಲು ಕೃಷ್ಣ ತನ್ನ ಅಂತರಂಗಸಖನಾದ ಉದ್ಧವನನ್ನು ಕಳುಹಿಸುತ್ತಾನೆ. ಉದ್ಧವನ ಆಗಮನ, ಅವನ ಜ್ಞಾನೋಪದೇಶ, ಗೋಪಿಯರ ವಿರಹವೇದನೆ, ನಿವೇದನೆ ಮೊದಲು ಭಾಗವತದ 'ಭ್ರಮರಗೀತ'ದಲ್ಲಿ ಸುಂದರವಾಗಿ ಮೂಡಿಬಂದಿವೆ. ಸೂರದಾಸ ಮೊದಲಾದವರಂತೂ ಈ ಮಾರ್ಮಿಕ ಸನ್ನಿವೇಶವನ್ನು ತುಂಬ ಸುಂದರವಾಗಿ ಬಳಸಿಕೊಂಡಿದ್ದಾರೆ. ಸಂದೇಶಕಾವ್ಯವೊಂದರ ಎಲ್ಲ ಮಾರ್ಮಿಕತೆ ಇಲ್ಲಿದೆ. ಆದರೆ ಪುರಂದರದಾಸರು ಅದನ್ನು ತುಂಬ ಸಾಧಾರಣವಾಗಿ ಚಿತ್ರಿಸಿದ್ದಾರೆ:

" ಏಕೆ ವೃಂದಾವನ ಸಾಕು ಗೋಕುಲವಾಸ।
ಏಕೆ ಬಂದೆಯೊ ಉದ್ಧವ।।
ಸಾಕು ಸ್ನೇಹದಮಾತನೇಕ ಮಹಿಮನು ತಾನು।
ಆ ಕುಬುಜೆಯನು ಕೂಡಿದ ಉದ್ಧವ ॥ಪ॥

ಬಿಲ್ಲುಬಿಳಿನಯ್ಯನ ಬೇಟೆ ನಗೆ ನುಡಿ ನೋಟ।
ಇಲ್ಲದಂತಾಯಿತಲ್ಲ॥
ಎಲ್ಲರಿಂದಗಲಿಸಿ ಕ್ರೂರ ಅಕ್ರೂರನು।
ವಲ್ಲಭನ ಒಯ್ದನಲ್ಲ॥
ಮಲ್ಲರನು ಮರ್ದಿಸುತ ಮಾವಕಂಸನ ಕೊಂದ।
ಮಾಧವನ ತಂದುತೋರಿಸೈ ಉದ್ಧವ ॥೧॥

ತನ್ನ ನಲ್ಲನ ಬಳಿಯಿಂದ ಸಂದೇಶವೊಂದನ್ನು ಹೊತ್ತು ತಂದಿದ್ದಾನೆ ಉದ್ಧವ. ಅವನನ್ನು ಅವರು ಎಷ್ಟು ಕಾತರದಿಂದ ಇದಿರುಗೊಳ್ಳಬೇಡ. ನಲ್ಲನ ಒಡನಾಡಿ ಎಂದು ಅವನ ಮೇಲೆ ಎಷ್ಟೊಂದು ವಿಶ್ವಾಸ ತೋರಿಸಬೇಡ! ಕಾದಲನ ಕೆಳೆಯ ಎಂದ ಕೂಡಲೆ ಅವರ ಕಂಬನಿ ಕೋಡಿ ಹರಿಯಬೇಡವೆ? ಅವನ ಮುಂದೆ ಅವರ ಮೂಕವೇದನೆ ನಯನಗಳಲ್ಲಿ ವ್ಯಕ್ತವಾಗಬೇಡವೆ? ನಲ್ಲನ ಸಂದೇಶವನ್ನು ಕೇಳಲು ಅವರ ಕುತೂಹಲ, ಕಾತರತೆ, ಯಾವುದೂ ಇಲ್ಲಿಲ್ಲ. ತಮ್ಮ ಎದೆಯಳಲನ್ನು ಅವರು ತೋಡಿಕೊಳ್ಳದೆ ಒಂದೇ ಮಾತಿನಲ್ಲಿ ಒಟ್ಟಾಗಿ ಕೃಷ್ಣನ ಮೇಲಿನ ಕೋಪವನ್ನೆಲ್ಲ ಅವನ ಮೇಲೆ ತೋರಿಸುತ್ತಾರೆ. ಈ ರೀತಿ ಶ್ರೇಷ್ಠ ಕಾವ್ಯವಾಗಬಹುದಾಗಿದ್ದ ಉದ್ಧವಪ್ರಸಂಗ ಇಲ್ಲಿ ಬರಿಯ ಸಂಪ್ರದಾಯಪಾಲನೆಯಾಗಿ ಉಳಿತಿದೆ.

ತನ್ನ ಎದೆಯಾಣ್ಮನ ವಿರಹದಲ್ಲಿ ಚೇತನಾಚೇತನದ ಪರಿಜ್ಞಾನವನ್ನೂ ಮರೆತು ತರುಲತೆಗಳನ್ನು, ಖಗ ಮೃಗಗಳನ್ನು, ಭೃಂಗಕೀಟಗಳನ್ನು 'ಚೆನ್ನಮಲ್ಲಿಕಾರ್ಜುನನನ್ನು'ಕಂಡಿರಾ ಎಂದು ಕೇಳುವ ಮಹಾದೇವಿಯಕ್ಕನ ಭಾವತೀವ್ರತೆಯನ್ನು ಪುರಂದರದಾಸರಲ್ಲಿ ಕಾಣಲಾರೆವು. ಹೋಗಲಿ ಅಕ್ಕಮಹಾದೇವಿಯದು ಹೆಣ್ಣುಹೃದಯ. ಅವಳ ವೇದನೆ ಹೆಣ್ಣಿನ ಕರುಳವೇದನೆ. ಅದನ್ನು ಗಂಡಿನ ವಾಣಿಯಲ್ಲಿ ಅರಸುವುದೂ ತಪ್ಪಾದೀತು. ಆದರೆ ಬಸವಣ್ಣನವರಲ್ಲಿ ಕಂಡು ಬರುವ ಮಧುರಭಾವದ ಒಂದೆರಡು ವಚನಗಳಲ್ಲಿ ಅದ್ಭುತ ತಲ್ಲೀನತೆಯಿದೆ. ಕಾರಣ ಬಸವಣ್ಣನವರು ಬಹುಬೇಗನೆ ತಮ್ಮ ಆಂತರಿಕ ವಿರಹಿಣಿಯ ಕಂಬನಿಯಲ್ಲಿ ಮುಳುಗಿ ಕರಗಿಹೋಗುತ್ತಾರೆ. ಅವರ ವಿರಹವೇದನೆ ಇತರ ಭಕ್ತರ ವೇದನೆಗಿಂತ ದಾರುಣ. ಕಾರಣ ಅವರ ನಲ್ಲ ಎಲ್ಲೋ ಕಾಣದ ತಳದಲ್ಲಿಲ್ಲ, ಅವರ ರೋಮ ರೋಮದಲ್ಲಿರುವ ಅರೂಪವಿಹಾರಿ. ಇನ್ನು ಅದರ ಮೂಗುಬ್ಬಸವನ್ನು ಕೇಳಬೇಕೆ?

" ಎಲ್ಲರ ಗಂಡರ ಹರಿಯಂತಲ್ಲ ನೋಡವ್ವ :
ನಮ್ಮ ನಲ್ಲ ಸುಳಿಯಲಿಲ್ಲ : ಸುಳಿದು ಸಿಂಗಾರವ ಮಾಡಲಿಲ್ಲ !
ಕೂಡಲ ಸಂಗಮದೇವನು ತನ್ನೊಳಗೆ ಜೈಸಿಟ್ಟನಾಗಿ."

ಈ 'ನಿರ್ಗುಣ' ನಲ್ಲನಿಗಾಗಿ ನಿತ್ಯ ನಿತ್ಯ ಸಿಂಗರಿಸಿಕೊಂಡು ಬಸವಣ್ಣನವರು ದಾರಿ ಕಾಯುತ್ತಾರೆ. ಅವರ ಕಣ್ಣ ಹಂಬಲ ಮಾತ್ರ ಹಿಂಗುವುದಿಲ್ಲ. ಪುರುಷನ ಒಲವಿಲ್ಲದ ಲಲನೆಯಾಗಿ ಅವರು ಪಡುವ ಬೇಗುದಿ ಮಾತಿಗೆ ಮೀರಿದುದು. ಗಂಡನ ಒಲವಿಲ್ಲದ ನಾರಿಯಾದ ಮೇಲೆ ತೀರಿತು ಅವಳ ಬಾಳು ಕಣ್ಣೀರ ಕಡಲು :

" ಅರಿಸಿನವನೆ ಮಿಂದು, ಹೊಂದೊಡಿಗೆಯನೆ ತೊಟ್ಟು
ಪುರುಷನ ಒಲವಿಲ್ಲದ ಲಲನೆಯಂತಾಗಿರ್ದೆನಯ್ಯಾ !
ವಿಭೂತಿಯನೆ ಹೂಸಿ, ರುದ್ರಾಕ್ಷಿಯನೆ ಕಟ್ಟಿ
ಶಿವ ನಿಮ್ಮೊಲವಿಲ್ಲದಂತೆ ಆಗಿರ್ದೆನಯ್ಯಾ !
ಕೆಟ್ಟು ಬಾಳುವರಿಲ್ಲಾ ಎಮ್ಮವರ ಕುಲದಲ್ಲಿ ;
ನೀನೊಲಿದಂತೆ ಸಲಹಯ್ಯ, ಕೂಡಲ ಸಂಗಮದೇವಾ "

ಆದರೆ ಬಸವಣ್ಣನವರು 'ಶಿವ'ನ ಅರ್ಚಕರು, 'ಸುಂದರ'ನ ಅರ್ಚಕರಲ್ಲ. ಅದೂ ಅಲ್ಲದೆ ಶೈವ ಧರ್ಮದಲ್ಲಿ ರೂಪೋಪಾಸನೆಯ ಸ್ಥಾನವೇನು ಎಂಬುದು ಅಸ್ಪಷ್ಟ. ಹೀಗಿರುವಾಗ ಬಸವಣ್ಣನವರಲ್ಲಿ ಕಂಡುಬರುವ ಈ ಮಧುರೋಪಾಸನೆ ಅಪ್ರತಿಹತವಾಗಿ ಅಯತ್ನಪೂರ್ವಕವಾಗಿ ಅವರ ಎದೆಯಿಂದ ಮೂಡಿದುದು. ಆದರೆ ಹರಿದಾಸರ ವಿಷಯ ಹಾಗಲ್ಲ. ಅವರು ಪರಮಾತ್ಮನ ಸೌಂದರ್ಯ ಮತ್ತು ಶೀಲಕ್ಕೆ ಹೆಚ್ಚು ಮಹತ್ವ ನೀಡಿದ್ದಾರೆ. ಈ ಸೌಂದರ್ಯಪೂಜೆಯ ಪರಿಶುದ್ಧ ರೂಪವನ್ನು ನಾವು ಕಾಣಲಾರೆವು. ಮಾಹಾತ್ಮ್ಯಜ್ಞಾನ, ತಾರತಮ್ಯ ಜ್ಞಾನಗಳು ತಾದಾತ್ಮ್ಯಕ್ಕೆ ಅಡ್ಡಿಬಂದು ಪ್ರೇಮಾನುಭೂತಿಯ ತೀವ್ರತೆಯನ್ನು ಕೆಳಕ್ಕೆ ತುಯ್ದಿವೆ. ಈ ಮಾತು ಎಲ್ಲ ಹರಿದಾಸರ ಮಾಧುರ್ಯ ಮಂಡಿತ ಕೀರ್ತನೆಗಳಿಗೆ ಅನ್ವಯಿಸುತ್ತದೆ. ಪುರಂದರದಾಸರಂಥ ಸಶಕ್ತ ಕವಿಗಳು ಆಗೊಮ್ಮೆ ಈಗೊಮ್ಮೆಯಾದರೂ ತಾದಾತ್ಮ್ಯವನ್ನು ಪಡೆದಿರುವುದು ಸಂತಸದ ಸಂಗತಿ. ಹರಿದಾಸರಿಗೆ ಸಮಾನಭೂಮಿಕೆ ಅಷ್ಟಾಗಿ ಅಪೇಕ್ಷಿತವಲ್ಲದ ದಾಸ್ಯ ಮತ್ತು ವಾತ್ಸಲ್ಯದಲ್ಲಿ ಹೆಚ್ಚಿನ ಯಶಸ್ಸು ದೊರೆತಿದೆ.

---

# ಗುಜರಾತಿನ ಒಂದು ಮಹಾಶಬ್ದಕೋಶ

ಮೂಲ: ಶ್ರೀಯುಕ್ತ ಅಗರ್‌ಚಂದ್ ನಾಹಟಾ

ಅನುವಾದ: ರಾ. ನಾ. ರತನ್

ಶಬ್ದವನ್ನು ಬ್ರಹ್ಮವೆಂದೆನ್ನಲಾಗಿದೆ. ಶಬ್ದಗಳು ಅನಂತ. ಮಾನವ ಜಾತಿಯದಂತೂ ಇಡೀ ವ್ಯವಹಾರವೇ ಶಬ್ದಗಳನ್ನಾಧರಿಸಿದೆ. ಪಶು-ಪಕ್ಷಿಗಳು ಮತ್ತು ಸಣ್ಣ ಸಣ್ಣ ಜೀವ-ಜಂತುಗಳೇ ಅಲ್ಲದೆ, ಅಜೀವ ಪದಾರ್ಥಗಳ ಘರ್ಷಣೆಯಿಂದಲೂ ಸಹ ಒಂದು ಧ್ವನಿ ಹೊರಡುತ್ತದೆ. ಈ ಕಾರಣದಿಂದ ಜೈನಾಗಮಗಳು ಶಬ್ದವನ್ನು ಕುರಿತು ಮುಖ್ಯವಾಗಿ ಎರಡು ಪ್ರಕಾರಗಳನ್ನು ಸ್ವೀಕರಿಸಿವೆ. ಮೊದಲನೆಯದು ಜೀವ ಶಬ್ದ, ಎರಡನೆಯದು ಅಜೀವ ಶಬ್ದ. ಮಾನವೇತರ ಪ್ರಾಣಿಗಳ ಕೆಲಸ ಕಾರ್ಯವಂತೂ ಸಾಮಾನ್ಯಧ್ವನಿ ಅಥವಾ ಶಬ್ದವಿಶೇಷ ಮಾತ್ರದಿಂದಲೇ ನೆರವೇರಿಬಿಡುತ್ತದೆ. ಆದರೆ ಮಾನವನು ಹೊಸ ಹೊಸ ಆವಿಷ್ಕಾರಗಳನ್ನು ಮಾಡಿರುವನು. ಅಸಂಖ್ಯ ಪದಾರ್ಥಗಳೊಡನೆ ಅವನ ಸಂಬಂಧ ಸಂಪರ್ಕ ಬೆಳೆಯುತ್ತಲಿದೆ. ಈ ಕಾರಣದಿಂದ ಅವನ ಶಬ್ದ ಭಂಡಾರವು ಅಭಿವೃದ್ಧಿ ಪಡೆಯುತ್ತಲೇ ಇರುತ್ತದೆ. ಸಂತತವಾಗಿ ಹೊಸ ಹೊಸ ಶಬ್ದಗಳ ಆವಿಷ್ಕಾರವಾಗುತ್ತದೆ. ಅಲ್ಲದೆ ಶಬ್ದಗಳ ರೂಪ ಹಾಗೂ ಅರ್ಥದಲ್ಲಿ ಪರಿವರ್ತನೆ ಕೂಡ ಆಗುತ್ತದೆ.

ವಿಶ್ವದಲ್ಲಿ ಅನೇಕ ಭಾಷೆಗಳಿವೆ. ಇವುಗಳ ಪೈಕಿ ಪ್ರತಿಯೊಂದಕ್ಕೂ ತನ್ನ ಸ್ವಂತ ಶಬ್ದ-ಭಂಡಾರವುಂಟು. ಒಂದೇ ಭಾಷೆಯ ಸಮಸ್ತ ಶಬ್ದಗಳ ವ್ಯವಹಾರ ಯಾವೊಬ್ಬ ವ್ಯಕ್ತಿಯಿಂದಲೇ ಆಗಲಿ ಸಾಧ್ಯವಿಲ್ಲ. ಕೆಲವು ಶಬ್ದಗಳಷ್ಟರಿಂದ ಮಾತ್ರವೇ ಅನೇಕ ವ್ಯಕ್ತಿಗಳ ಕಾರ್ಯ ಕೈಗೂಡಿಬಿಡುತ್ತದೆ. ಆದರೆ ಹೇಗೆ ಹೇಗೆ ಮಾನವ ಬುದ್ಧಿಯ ವಿಕಾಸವಾಗುತ್ತದೋ, ಅನೇಕ ವಿಧ ವಿಚಾರಗಳ ಉದ್ಭವವಾಗುತ್ತದೋ, ಹೊಸ-ಹೊಸ ಆವಿಷ್ಕಾರಗಳಾಗುತ್ತವೋ ಹಾಗೆ ಹಾಗೆ ಶಬ್ದಗಳನ್ನು ಹೆಚ್ಚು ಹೆಚ್ಚಾಗಿ ವ್ಯವಹಾರಕ್ಕಿಳಿಸುವ ಅವಶ್ಯಕತೆ ಕಂಡುಬರುತ್ತದೆ. ಸಾಹಿತ್ಯ, ಕಲೆ, ವಿಜ್ಞಾನ, ದರ್ಶನ ಮುಂತಾದವುಗಳ ವಿಕಾಸದ ಜೊತೆ-ಜೊತೆಯಲ್ಲಿ ಶಬ್ದ ಸಮೃದ್ಧಿಯಾಗುತ್ತಿರುತ್ತದೆ. ಮಾತ್ರವಲ್ಲ. ಆ ಶಬ್ದಗಳ ಶುದ್ಧ ಹಾಗೂ ನೈಜರೂಪ ಮತ್ತು ಅವುಗಳ ವಿವಿಧಾರ್ಥಗಳನ್ನು ಅರಿಯಲೋಸುಗ 'ಶಬ್ದಕೋಶ' ಗಳು ರಚಿಸಲ್ಪಡುತ್ತವೆ. ಪ್ರತಿಯೊಂದು ಸಮೃದ್ಧ ಭಾಷೆ ಮತ್ತು ಸಾಹಿತ್ಯದ ದೃಷ್ಟಿಯಿಂದ ಇಂತಹ ಕೋಶ ಗ್ರಂಥಗಳ ಉಪಯುಕ್ತತೆ ಹಾಗೂ ಅವಶ್ಯಕತೆ ಅನಿವಾರ್ಯ.

ಭಾರತದಲ್ಲಿ ಉತ್ತರ ಮತ್ತು ದಕ್ಷಿಣ ಎಂಬ ಎರಡು ಪ್ರಧಾನ ಖಂಡಗಳಿವೆ. ಈ ಎರಡೂ ಖಂಡಗಳ ಭಾಷೆಗಳು ಮತ್ತು ಲಿಪಿಗಳಲ್ಲಿ ಸಾಕಷ್ಟು ಅಂತರವಿದೆ. ಸಂಸ್ಕೃತವು ಭಾರತದ ಪ್ರಾಚೀನತಮ ಭಾಷೆ. ದಕ್ಷಿಣದ ಭಾಷೆಗಳ ಮೇಲೂ ಇದರ ಪ್ರಭಾವ ಬಿದ್ದಿದೆ. ಆದರೂ ಕೂಡ ಉತ್ತರ ಭಾರತದ ಓರ್ವ ವ್ಯಕ್ತಿ ಇದ್ದಕ್ಕಿದ್ದಂತೆಯೇ ದಕ್ಷಿಣ ಭಾರತಕ್ಕೆ

ಹೊರಟುಹೋದ ಪಕ್ಷಕ್ಕೆ ಅವನಿಗೆ, ಅಲ್ಲಿಯ ತಮಿಳು, ತೆಲಗು, ಕನ್ನಡ, ಮಲೆಯಾಳಂ ಮುಂತಾದ ಭಾಷೆಗಳನ್ನರಿತುಕೊಳ್ಳುವುದು ಅತ್ಯಂತ ಕಠಿಣವೇ ಸರಿ. ಅಂತರದ ದೃಷ್ಟಿಯಿಂದ ಲಾದರೋ ಉತ್ತರ ಭಾರತದ ಭಾಷೆಗಳಲ್ಲಿಯೂ ಭೇದವುಂಟು, ಆದರೂ ಅಷ್ಟು ಹೆಚ್ಚಾಗಿಲ್ಲ.

ಉತ್ತರ ಭಾರತದ ಪ್ರಾಚೀನ ಭಾಷೆಗಳಲ್ಲಿ ಸಂಸ್ಕೃತ ಮತ್ತು ಪ್ರಾಕೃತಗಳು ಪ್ರಧಾನ ಭಾಷೆಗಳು. ಸಂಸ್ಕೃತದಲ್ಲಿ ಕೂಡ, ವೇದಗಳ ಭಾಷೆ ಮತ್ತು ಪರವರ್ತಿ ಸಂಸ್ಕೃತಗಳಲ್ಲಿ ಅಂತರವುಂಟು. ಇಂತೆಯೇ ಪ್ರಾಕೃತದಲ್ಲಿಯೂ ಸಹ ಕೆಲವು ಭೇದಗಳಿವೆ—ಅರ್ಧಮಾಗಧೀ, ಶೌರಸೇನೀ, ಮಹಾರಾಷ್ಟ್ರೀ, ಪೈಶಾಚೀ ಮುಂತಾದವು. ಪ್ರಾಕೃತ ಭಾಷೆಯಿಂದ ಅಪಭ್ರಂಶವು ವಿಕಸಿತಗೊಂಡಿತು. ಅಪಭ್ರಂಶದಿಂದ ಉತ್ತರ ಭಾರತದ ಪ್ರಾಯಶಃ ಎಲ್ಲಾ ಪ್ರಾಂತೀಯ ಭಾಷೆಗಳೂ ಹೊರಟವು. ಸಂಸ್ಕೃತದ್ದೂ ಪ್ರಭಾವ ಕೆಲವಾರು ಭಾಷೆಗಳ ಮೇಲಿದೆ. ಆ ಭಾಷೆಗಳಲ್ಲಿ ಅನೇಕ ಸಂಸ್ಕೃತ ಶಬ್ದಗಳು ಯಥಾವತ್ ಪ್ರಾಪ್ತವಾಗುತ್ತವೆ. ಇದೇ ರೀತಿ ಪ್ರಾಕೃತದ ಕೆಲವು ಶಬ್ದಗಳೂ ಕೂಡ ಅದೇ ರೂಪದಲ್ಲಿ ವ್ಯವಹೃತವಾಗಿವೆ. ಆದರೆ ಶಬ್ದರೂಪ ಗಳಲ್ಲಿ ಬಹುವಾಗಿ ಪರಿವರ್ತನೆಯಾಗಿಬಿಟ್ಟಿದೆ. ದೇಶ್ಯ ಶಬ್ದಗಳೂ ಸಾಕಷ್ಟು ಪ್ರಚಲಿತವಾಗಿವೆ. ಇದೇ ಕಾರಣ, ಆಚಾರ್ಯ ಹೇಮಚಂದ್ರರಿಗೆ 'ಅಭಿಧಾನ-ಚಿಂತಾಮಣಿ-ನಾಮ ಮಾಲಾ' ಎಂಬ ಸಂಸ್ಕೃತ ಕೋಶದ ಜೊತೆ ಜೊತೆಗೆ 'ದೇಶೀ ನಾಮ ಮಾಲಾ' ಎಂಬುದನ್ನು ಕೂಡ ರಚಿಸಬೇಕಾಗಿ ಬಂತು. ಆಯಾ ಕಾಲದಲ್ಲಿ ಸಂಸ್ಕೃತದ ಅನೇಕ ಕೋಶಗಳದ್ದಂತೂ ರಚನೆ ಯಾಯಿತು. ಆದರೆ ಪ್ರಾಕೃತಕ್ಕೆ ಸಂಬಂಧಿಸಿ ಒಂದೇ ಪ್ರಾಚೀನ ಕೋಶಗ್ರಂಥ 'ಪಾಇಅ ಲಚ್ಛೀ ನಾಮ-ಮಾಲಾ' ದೊರಕುತ್ತದೆ. ಇಪ್ಪತ್ತನೆಯ ಶತಮಾನದಲ್ಲಿ 'ಪಾಇಅ ಸದ್ದ ಮಹಣ್ಣವೋ' (ಪ್ರಾಕೃತ ಶಬ್ದ ಮಹಾರ್ಣವ) 'ಅಭಿಧಾನ-ರಾಜೇಂದ್ರ', 'ಅರ್ಧ-ಮಾಗಧೀ ಜೈನಾಗಮ ಶಬ್ದ ಕೋಶ' ಎಂಬೀ ಮೂರು ಮಹತ್ವಪೂರ್ಣ ಕೋಶಗಳು ಪ್ರಕಾಶಿತಗೊಂಡಿವೆ. ಅಪಭ್ರಂಶ ಶಬ್ದಗಳ ಬಗ್ಗೆಯಂತೂ ಈತನಕ ಯಾವ ಕೋಶವೂ ತಯಾರಾಗಿಲ್ಲ. ಅದರ ಅವಶ್ಯಕತೆಯಂತೂ ಬಹಳವಾಗಿದೆ. ಇವುಗಳ ಪೈಕಿ ಗುಜರಾತೀ ಭಾಷೆಯ ಒಂದು ಮಹಾ ಕೋಶದ ಸಂಕ್ಷಿಪ್ತ ಪರಿಚಯವನ್ನು ಪ್ರಸ್ತುತ ಲೇಖದ ಮೂಲಕ ಕೊಡಲಾಗುತ್ತಿದೆ. ಅಂದಂತೆ ಅನೇಕ ಗುಜರಾತೀ ಕೋಶಗಳೂ ಪ್ರಕಟಗೊಂಡಿವೆ ಹಾಗೂ ಅವುಗಳನ್ನು ಕುರಿತು ಫಾರ್ಬಸ್ ಸಭೆಯ ತ್ರೈಮಾಸಿಕ ಪತ್ರಿಕೆಯಲ್ಲಿ ಮುಖ್ಯವಾದ ಲೇಖವು ಪ್ರಕಾಶಿತಗೊಂಡಿದೆ. ಆದರೆ ಪ್ರಸ್ತುತ ಕೋಶವು ಈವರೆಗೆ ಪ್ರಕಾಶಿತ ಸಮಸ್ತ (ಗುಜರಾತೀ) ಕೋಶಗಳ ಪೈಕಿ ದೊಡ್ಡದು.

ಈ ಕೋಶವನ್ನು ಗೋಂಡಲ್ (ಸೌರಾಷ್ಟ್ರ) ರಾಜ್ಯದ ಮಹಾರಾಜ ಭಗವತಸಿಂಹ ಅವರು ತಯಾರಿಸಿದರು-ತಯಾರು ಮಾಡಿಸಿದರು. ಅದ್ದರಿಂದಲೇ ಇದಕ್ಕೆ 'ಭಗವದ್ ಗೋಮಂಡಲ್' ಎಂದು ಹೆಸರಿಡಲಾಗಿದೆ. ಇದರ ಅರ್ಥ ಭಗವತಸಿಂಹ ಶಬ್ದ-ಸಂಗ್ರಹ, ಅಥವಾ ಬೃಹತ್ ಶಬ್ದ-ಕೋಶ, ಸಮೃದ್ಧಿಶಾಲಿ ಶಬ್ದಕೋಶ ಎಂದು. ಈ ಕೋಶವು ದೊಡ್ಡ ಆಕಾರದ ಒಂಭತ್ತು ಭಾಗಗಳಲ್ಲಿ ಪ್ರಕಾಶಿತವಾಗಿದೆ. ಪುಟಸಂಖ್ಯೆ ೯೨೭೦. ಇದರಲ್ಲಿ ೨೮೧೩೭೭ ಶಬ್ದಗಳಿವೆ. ಇವುಗಳ ೫೪೦೪೫೫ ಅರ್ಥಗಳನ್ನು ಸಂಗ್ರಹಿಸಲಾಗಿದೆ. ಪ್ರಾಂತೀಯ ಭಾಷೆಗಳ ಮಾತು ಬಿಟ್ಟುಬಿಡೋಣ. ರಾಷ್ಟ್ರಭಾಷೆಯಾದ ಹಿಂದಿಯಲ್ಲಿಯೂ ಸಹ ಈ ತನಕ ಇಷ್ಟೊಂದು ದೊಡ್ಡ ಕೋಶ ಪ್ರಕಾಶಿತವಾಗಿಲ್ಲ. ಈ ಕೋಶದಲ್ಲಿ ಸಂಸ್ಕೃತ ಶಬ್ದಗಳ ಪ್ರಾಚುರ್ಯವಿದೆ, ನಿಜ. ಆದರೂ ಕೂಡ ಇದರ ವಿಶಾಲತೆ ಮತ್ತು ಮಹಾನತೆಗೆ ಸಂಬಂಧಪಟ್ಟಂತೆ ಎರಡು ಅಭಿಪ್ರಾಯಗಳಿರಲಾರವು.

ಕೋಶಕಾರ ಮಹಾರಾಜ ಭಗವತಸಿಂಹ ಅವರು ಓರ್ವ ವಿಲಕ್ಷಣ ಪ್ರತಿಭಾ-ಸಂಪನ್ನ ವ್ಯಕ್ತಿಗಳಾಗಿದ್ದರು. ಇವರು ೨೪ನೇ ಅಕ್ಟೋಬರ್ ೧೮೬೫ರಂದು ಸೌರಾಷ್ಟ್ರದ ಧೋರಾಜೀ ನಗರದಲ್ಲಿ ಜನ್ಮ ತಳೆದರು. ಒಂಭತ್ತು ವರ್ಷದ ವಯಸ್ಸಿನಲ್ಲಿ ಇವರನ್ನು ರಾಜಕೋಟೆಯ ರಾಜಕುಮಾರ ಕಾಲೇಜಿಗೆ ಶಿಕ್ಷಣ ಪ್ರಾಪ್ತಿಗೆಂದು ಕಳುಹಿಸಲಾಯಿತು. ಇದಕ್ಕೆ ಮುನ್ನ ಇವರು ಗುಜರಾತೀ ಭಾಷೆಯ ಪ್ರಾಥಮಿಕ ಜ್ಞಾನವನ್ನು ಮನೆಯಲ್ಲಿದ್ದೇ ಗಳಿಸಿಕೊಂಡಿದ್ದರು. ತಮ್ಮ ಪ್ರತಿಭೆ, ಸ್ಮರಣಶಕ್ತಿ ಮತ್ತು ಗ್ರಹಣ ಬುದ್ಧಿಯ ಮೂಲಕ ಇವರು ತಮ್ಮ ಅಧ್ಯಾಪಕರನ್ನು ಚಕಿತಗೊಳಿಸಿಬಿಟ್ಟರು. ಡ್ರಾಯಿಂಗ್‌ನಲ್ಲಂತೂ ಇವರು ಬಹಳ ಕುಶಲರಾಗಿದ್ದರು. ಪ್ರತಿಯೊಂದು ವಿಷಯದಲ್ಲಿ ಉಚ್ಚ ಅಂಕಗಳನ್ನು ಪಡೆದು ಇವರು ಉತ್ತೀರ್ಣರಾಗುತ್ತಿದ್ದರು ಮತ್ತು ಪಾರಿತೋಷಕಗಳನ್ನು ಗಿಟ್ಟಿಸುತ್ತಿದ್ದರು. ಕಾಲೇಜು ಶಿಕ್ಷಣವನ್ನು ಪೂರ್ಣಗೊಳಿಸಿದ ಬಳಿಕ ೧೮೮೩ರಲ್ಲಿ ಉಚ್ಚಶಿಕ್ಷಣ ಪಡೆಯುವ ಉದ್ದೇಶ್ಯದಿಂದ ಇವರು ಯೂರೋಪಿಗೆ ತೆರಳಿದರು. ಅಲ್ಲಿಯ ಪ್ರವಾಸವನ್ನು ಕುರಿತಾದ ನೋಟ್-ಪುಸ್ತಕವನ್ನು ೧೮೮೬ರಲ್ಲಿ ಆಂಗ್ಲಭಾಷೆಯಲ್ಲಿ ಪ್ರಕಟಪಡಿಸಿದರು. ಇದಕ್ಕೆ ಸಂಬಂಧಪಟ್ಟಂತೆ ಹಂಗೇರಿಯ ಪ್ರೊಫೆಸರ್ ಬಾಜೇರೀ ಮುಂತಾದವರು ಅವರನ್ನು ಪ್ರಶಂಸೆ ಮಾಡುತ್ತಾ ಹೀಗೆ ಬರೆದಿದ್ದಾರೆ—ಕೇವಲ ಇಪ್ಪತ್ತು ವರ್ಷ ವಯಸ್ಸಿನಲ್ಲಿ ಬರೆಯಲಾದ ಈ ಪುಸ್ತಕವು ಲೇಖಕರ ಸೂಕ್ಷ್ಮನಿರೀಕ್ಷಣಶಕ್ತಿ, ಪರಿಪಕ್ವಬುದ್ಧಿ, ವಸ್ತುಸ್ಥಿತಿಯ ಯಥಾರ್ಥ ಜ್ಞಾನ ಮತ್ತು ಪ್ರಚಂಡ ಸ್ವದೇಶಾಭಿಮಾನದ ಕಾರಣ ಪ್ರಥಮ ಶ್ರೇಣಿಯ ಪುಸ್ತಕಗಳಲ್ಲಿ ಸೇರಿಸಬಹುದಾಗಿದೆ. ಹದಿನೆಂಟು ವರ್ಷ ವಯಸ್ಸಿನಲ್ಲಿಯೇ ಇವರಿಗೆ ಗೋಂಡಲ್ ರಾಜ್ಯದ ಸಂಪೂರ್ಣ ಸತ್ತೆ ದೊರಕಿಬಿಟ್ಟಿತ್ತು. ಹಾಗಾದರೂ ಕೂಡ ಇವರು ತಮ್ಮ ಅಭ್ಯಾಸವನ್ನು ಮುಂದುವರಿಸಿದರು. ೧೮೮೫ರಲ್ಲಿ ಇವರನ್ನು ಮುಂಬಯಿ ವಿಶ್ವವಿದ್ಯಾನಿಲಯದ ಸದಸ್ಯರಾಗಿ ಚುನಾಯಿಸಲಾಯಿತು.

ಇವರಲ್ಲಿದ್ದ ಜ್ಞಾನ-ಪಿಪಾಸೆ ಅಗಾಧ. ಖುದ್ದು ಡಾಕ್ಟರಾಗಿ ಜನತೆಯ ದುಃಖ-ನಿವಾರಣೆ ಮಾಡಬಹುದು ಎಂಬ ಉದ್ದೇಶದಿಂದಲೇ ಇವರು ೧೮೮೬ರಲ್ಲಿ ಸ್ಕಾಟ್ಲೆಂಡಿಗೆ ಹೋದರು. ರಾಯಲ್ ಕಾಲೇಜ್ ಆಫ್ ಫಿಸಿಶಿಯನ್ಸ್‌ನ ಮೂವರು ಉಮೇದುವಾರರ ಪೈಕಿ ಇಬ್ಬರು ಯೂರೋಪಿನವರು ಮತ್ತೊಬ್ಬರು ಸ್ವಯಂ ಈ ಭಾರತೀಯರೇ ಇದ್ದರು. ಪರೀಕ್ಷೆಯ ಪ್ರಶ್ನೆಪತ್ರಿಕೆಗಳನ್ನು ಇವರು ಎಷ್ಟು ಚೆನ್ನಾಗಿ ಮಾಡಿದ್ದರೆಂದರೆ, ಪರೀಕ್ಷಕರು ಇವರನ್ನು ಅಸಾಧಾರಣ ಯೋಗ್ಯತೆಯುಳ್ಳವರೆಂದು ಮಾನಿಸಿದರು. ಹದಿನೆಂಟು ತಿಂಗಳ ನಿಷ್ಠೆ ಮತ್ತು ಪರಿಶ್ರಮ ಪೂರ್ಣ ಅಭ್ಯಾಸದ ಮೂಲಕ ಇವರು ೧೮೮೭ರಲ್ಲಿ ಎಲ್.ಎಲ್.ಡಿ. ಡಿಗ್ರಿಯನ್ನು ಪಡೆದುಕೊಂಡರು. ಆದರೆ ಇಷ್ಟರಿಂದಲೂ ಅವರಿಗೆ ಸಂತೋಷವಾಗಲಿಲ್ಲ. ಇದಾದನಂತರವೂ ಸಹ ಎಡಿನ್‌ಬರಾ ವಿಶ್ವವಿದ್ಯಾಲಯದಲ್ಲಿ ಇವರು ವೈದ್ಯಕೀಯ ಉಚ್ಚತಮ ಅಭ್ಯಾಸವನ್ನು ಕೈಗೊಂಡರು ಹಾಗೂ ಎಂ. ಬಿ. ಸಿ. ಎಮ್. ಮತ್ತು ಎಂ. ಆರ್. ಸಿ. ಪಿ. ಡಿಗ್ರಿಗಳನ್ನು ಪ್ರಾಪ್ತಮಾಡಿಕೊಂಡರು. ತರುವಾಯ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಅಭ್ಯಾಸ ಮಾಡಿದರು. ಅಲ್ಲಿಂದ ೧೮೯೨ರಲ್ಲಿ ಡಿ. ಸಿ. ಎಲ್. ಡಿಗ್ರಿಯನ್ನು ಹೊಂದಿದರು. ತದನಂತರ ಇವರು ಇಂಗ್ಲೆಂಡಿನಿಂದ ಅಮೇರಿಕಾ, ಜಪಾನ್, ಚೀನಾ, ಆಸ್ಟ್ರೇಲಿಯಾ, ಸಿಲೋನ್ ಮುಂತಾದ ದೇಶಗಳ ಸಂಚಾರ ಕೈಗೊಂಡು ಭಾರತಕ್ಕೆ ಮರಳಿದರು. ಇವರು 'ಆರ್ಯನ್ ಮೆಡಿಕಲ್ ಸೈನ್ಸ್' ಎಂಬ ಶೋಧಪೂರ್ಣ ನಿಬಂಧ (ಥೀಸಿಸ್) ವನ್ನು ಬರೆದು ಎಡಿನ್‌ಬರಾ ಯೂನಿವರ್ಸಿಟಿಗೆ ಕಳುಹಿಸಿಕೊಟ್ಟರು. ಇದರ ಮೇಲೆ ೧೮೯೫ರಲ್ಲಿ ಇವರಿಗೆ ಎಮ್.ಡಿ. ಡಿಗ್ರಿ ದೊರಕಿತು. ಆಯುರ್ವೇದದಲ್ಲಿ ಇವರ

ನಿಪುಣತೆಯನ್ನು ಕಂಡು ಕಲಕತ್ತೆ ವಿಶ್ವವಿದ್ಯಾಲಯವು ಇವರಿಗೆ 'ಪ್ರಾಣಾಚಾರ್ಯ' ಎಂಬ ಪದವಿಯನ್ನಿತ್ತು ಅಲಂಕರಿಸಿತು ಹಾಗೂ ಪರೀಕ್ಷಕರನ್ನಾಗಿ ಆಯ್ಕೆ ಮಾಡಿಕೊಂಡಿತು. ರಾಜ್ಯ-ಸಂಚಾಲನೆಯ ಜೊತೆಜೊತೆಗೆ ಆಯುರ್ವೇದ ಪರೀಕ್ಷೆಯ ಉತ್ತರ ಪತ್ರಗಳನ್ನೂ ಸಹ ಇವರು ಬಹಳ ಎಚ್ಚರಿಕೆ ವಹಿಸಿ ನೋಡುತ್ತಿದ್ದರು. ಈ ರೀತಿ ಇವರು ಓರ್ವ ನಿಷ್ಣಾತ ಪರೀಕ್ಷಕನ ಗೌರವಶಾಲಿ ಪದವನ್ನು ನಿರ್ವಹಿಸುತ್ತಿದ್ದರು.

ಮಹಾರಾಜ ಭಗವಂತಸಿಂಹ ಅವರು ಒಬ್ಬ ಉನ್ನತ ಮಟ್ಟದ ಲೇಖಕರಷ್ಟೇ ಅಲ್ಲದೆ ಒಬ್ಬ ಮಹಾನ್ ವಿಚಾರಕರೂ ಆಗಿದ್ದರು. ಶಬ್ದಮೀಮಾಂಸೆಯ ಹವ್ಯಾಸ ಇವರಲ್ಲಿ ಪ್ರಾರಂಭದಿಂದಲೇ ಇತ್ತು. ೧೮೮೩ರಲ್ಲಿ ಉಚ್ಚಶಿಕ್ಷಣ ಪಡೆಯಲೋಸುಗ ಯಾವಾಗ ಇವರು ಯೂರೋಪಿಗೆ ತೆರಳಿದರೋ ಆಗ ಒಂದುಕಡೆ 'ಮಾರ್ಕೆಟ್' ಶಬ್ದಕ್ಕೆ ಬದಲಾಗಿ 'ಬಾಜಾರ್' ಎಂಬ ಹಿಂದಿ ಶಬ್ದವು ಪ್ರಯುಕ್ತವಾಯಿತು. ಇದನ್ನು ಕಂಡು ಇವರು ೧೮೮೬ರಲ್ಲಿ ಪ್ರಕಾಶಿತವಾದ ತಮ್ಮ ಪ್ರವಾಸ-ವರ್ಣನೆಯ ಪುಸ್ತಕದಲ್ಲಿ ಬರೆದಿರುವುದೇನೆಂದರೆ, ಆಂಗ್ಲರು ಹಿಂದಿ ಭಾಷೆಗೆ ಬದಲು ಹಿಂದ್ ನಿವಾಸಿಗಳನ್ನು ಹೆಚ್ಚಾಗಿ ಬಯಸುವುದೇ ಈಗ ಬೇಕಾಗಿರುವುದು. ಎಲ್ಲಿಯ ವರೆಗೆ ಇಂತಹ ಭಾವನೆ ಉದಯಿಸುವುದಿಲ್ಲವೋ ಅಲ್ಲಿಯತನಕ ಹಿಂದೂಸ್ಥಾನಕ್ಕೆ ಸುಖದ ದಿನಗಳನ್ನು ಕಾಣುವ ಭಾಗ್ಯ ಬಂದೊದಗದು. 'ಭಗವತ್ ಗೋಮಂಡಲ್ ಕೋಶ್' ಗ್ರಂಥ ಸಂಪಾದಕರಾದ ಶ್ರೀ ಚಂದೂಲಾಲ್ ಬೇಚರ್‌ಲಾಲ್ ಪಟೇಲ್ ಅವರು ಬರೆದಿದ್ದಾರೆ—ನನ್ನ ದೃಷ್ಟಿಯಿಂದ ಮೇಲ್ಕಾಣಿಸಿದ ಶಬ್ದದ ಮೀಮಾಂಸೆಯೇ 'ಭಗವದ್ ಗೋಮಂಡಲ್' ಎಂಬ ಕೋಶಕ್ಕೆ ಪರೋಕ್ಷ ಬೀಜರೂಪದಲ್ಲಿದೆ. ಮಹಾರಾಜರವರ ಗ್ರಂಥಾಲಯವು ಆಂಗ್ಲ, ಹಿಂದಿ, ಅರಬೀ, ಫಾರಸೀ, ಗುಜರಾತೀ, ಸಂಸ್ಕೃತ, ಬಂಗಾಲೀ ಮುಂತಾಗಿ ಅನೇಕ ಭಾಷೆಗಳ ಗ್ರಂಥಗಳಿಂದ ಸಮೃದ್ಧವಾಗಿದೆ. ಅವರಲ್ಲಿ ಬಹಳವೇ ಗ್ರಂಥಾಧ್ಯಯನದ ಹವ್ಯಾಸವಿತ್ತು. ಈ ಕಾರ್ಯಕ್ಕಾಗಿ ಅವರು ಸಾಕು-ಬೇಕಾದಷ್ಟು ಕಾಲವಿನಿಯೋಗ ಮಾಡುತ್ತಿದ್ದರು. ಈ ತರಹ ಅರ್ಧಶತಮಾನ ಪರ್ಯಂತ ಕೈಗೊಂಡ ಶಬ್ದಬ್ರಹ್ಮನ ಅಖಂಡ ಉಪಾಸನೆಯ ಅಮರಫಲದ ರೂಪದಲ್ಲಿ ನಮಗೆ 'ಭಗವತ್ ಗೋಮಂಡಲ್' ಎಂಬೀ ಶಬ್ದಕಲ್ಪದ್ರುಮವು ಪ್ರಾಪ್ತವಾಗಿದೆ.

೨೪ನೇ ಅಕ್ಟೋಬರ್ ೧೯೨೮ರಂದು, ಮಹಾರಾಜರ ವರ್ಧಂತಿಯ ದಿನ ಈ ಬೃಹದ್ ಶಬ್ದಕೋಶದ ಮಂಗಳ ಮುಹೂರ್ತ ನೆರವೇರಿತು. ಅವರ ಪರಮ ಪುರುಷಾರ್ಥ ಹಾಗೂ ೨೬ ವರುಷಗಳ ಅಖಂಡ ಸಾಧನೆಯ ಪರಿಣಾಮಸ್ವರೂಪವಾಗಿ ತಾ|| ೯ನೇ ಮಾರ್ಚ್ ೧೯೫೫ ರಂದು ಈ ಕೋಶವು ಪೂರ್ಣಗೊಂಡಿತು. ಈ ಕೋಶಕಾರ್ಯವು ಪ್ರಾರಂಭವಾಗುವ ಮುನ್ನ ಮಹಾರಾಜರವರು ಸುಮಾರು ಇಪ್ಪತ್ತು ಸಾವಿರ ಶಬ್ದಗಳನ್ನು ಕಲೆಹಾಕಿಕೊಂಡಿದ್ದರು. ನಂತರ ಅವರು ಇದರಲ್ಲಿ ಎಷ್ಟರಮಟ್ಟಿಗೆ ತಲ್ಲೀನರಾಗಿಬಿಟ್ಟರೆಂದರೆ ಯಾರೊಡನಾದರೂ ಮಾತನಾಡುವ ವೇಳೆಯಲ್ಲಿ ಯಾವುದಾದರೂ ಹೊಸ ಶಬ್ದ ಕೇಳಿಬಂದರೆ ತತ್‌ಕ್ಷಣ ಅದನ್ನು ಗುರುತುಹಾಕಿಕೊಳ್ಳುವ ಕಡೆಯೇ ಗಮನ ಕೇಂದ್ರೀಕರಿಸುತ್ತಿದ್ದರು. ಆ ವೇಳೆಗೆ ಕಾಗದವಿಲ್ಲದೆ ಹೋದ ಪಕ್ಷಕ್ಕೆ ಅವರ ಹತ್ತಿರ ಯಾವ ಪದಾರ್ಥವಿರುತ್ತಿತ್ತೋ ಅದರ ಮೇಲೆಯೇ ಸೀಸದ ಕಡ್ಡಿಯಿಂದ ಗುರುತುಹಾಕಿಕೊಳ್ಳುತ್ತಿದ್ದರು. ಗ್ರಾಮಗಳಿಗೆ ಹೋಗುತ್ತಿದ್ದರೆ ಗ್ರಾಮ್ಯ ಶಬ್ದಗಳನ್ನು ತಮ್ಮ ನಿಲುವಂಗಿಯ ಮೇಲೆಯೇ ಬರೆದುಕೊಳ್ಳುತ್ತಿದ್ದರು. ಓರ್ವ ಮಹಾರಾಜರು ಇಷ್ಟೊಂದು ತನ್ಮಯತೆಯಿಂದ ಶಬ್ದಸಂಗ್ರಹ ಮಾಡುವುದೆಂದರೆ ಅದು ನಿಜಕ್ಕೂ ಆಶ್ಚರ್ಯಜನಕವಾಗಿ ಕಂಡು ಬರುತ್ತದೆ. ಕೋಶ ಕಾರ್ಯವನ್ನು ನಿಯಮಿತ ರೂಪದಿಂದ ಪ್ರಾರಂಭಿಸುತ್ತಲೇ, ಇವರು ಶಬ್ದ

ಸಂಗ್ರಹಣೆಗೆಂದು ಸೌರಾಷ್ಟ್ರದ ಗ್ರಾಮ-ಗ್ರಾಮಗಳಲ್ಲಿ ಒಂದು ಪತ್ರಿಕೆಯನ್ನು ಪ್ರಚಾರಗೊಳಿಸಿದರು. ಅದರ ಪ್ರಾರಂಭದಲ್ಲಿ ಹೀಗೆ ಬರೆಯಲಾಗಿತ್ತು—

"ಮಾತೃಭಾಷಾ ಪ್ರೇಮ ಹಾಗೂ ಸಾಹಿತ್ಯಸೇವೆಯೆಂಬ ಸನ್ಮಾರ್ಗದಲ್ಲಿ ನಡೆಯತಕ್ಕಂಥ ಸಾಹಿತ್ಯ ಪ್ರೇಮಿಾ ಸಜ್ಜನರೇ! ಇದು ಗೋಂಡಲ್ ಕೋಶದ ಪ್ರಥಮ ಪತ್ರಿಕೆ. ನೀವು ಯಥಾಶಕ್ತಿ ಪ್ರಯತ್ನಪಟ್ಟು ಇದಕ್ಕೆ ಸಕ್ರಿಯ ಸಹಯೋಗ ನೀಡಬೇಕು. ಇದರಿಂದ ಈ ಕೋಶವು ಶಿಷ್ಟ ಲೇಖಕರ ಪ್ರಯೋಗಗಳಿಂದಲೂ, ವಿವಿಧ ಪ್ರಕಾರದ ವ್ಯುತ್ಪತ್ತಿಗಳಿಂದಲೂ, ಮನೋರಂಜಕ ಚಿತ್ರಗಳಿಂದಲೂ, ನವಯುಗದ ವಿಭಿನ್ನ ಶಬ್ದಗಳಿಂದಲೂ ನವಪಲ್ಲವಿತಗೊಳ್ಳಲಿ. ಶಾಸ್ತ್ರೀಯವಾಗಿ ಸಂಪೂರ್ಣಗೊಳ್ಳಲಿ. ಆದರ್ಶ ಕೃತಿಯಾಗಲಿ"[1] ಎಲ್ಲದಕ್ಕೂ ಮುಂಚೆ ಅವರು ಗೃಹಕೃತ್ಯ ಹಾಗೂ ಗ್ರಾಮೀಣ ಅಚ್ಚ ಶಬ್ದಗಳನ್ನು ಸಂಗ್ರಹಿಸಿದರು. ಏಕೆಂದರೆ, ಶಿಷ್ಟ ಸಾಹಿತ್ಯದಲ್ಲಿ ಬಳಸಲಾಗುವ ಶಬ್ದಗಳ ಸಂಗ್ರಹ ಕಾರ್ಯವನ್ನಂತೂ ಯಾವಾಗ ಬೇಕೆಂದರೆ ಆಗ ಮಾಡಿಕೊಳ್ಳಬಹುದೆಂಬುದು ಅವರ ವಿಚಾರವಾಗಿತ್ತು. ಆದರೆ ಈ ಮೌಖಿಕ ಅಚ್ಚ ಶಬ್ದಗಳು ಕ್ರಮ-ಕ್ರಮವಾಗಿ ಮರೆಯಲ್ಪಡುತ್ತಿವೆ. ಆದಕಾರಣ ಸರ್ವ-ಪ್ರಥಮತಃ ಇವುಗಳದೇ ಸಂಗ್ರಹವಾಗಬೇಕು. ಮಹಾರಾಜರಿಗೆ ಎಲ್ಲ ಜನರು ಬಹು ಚೆನ್ನಾಗಿ ಸಹಕಾರ ನೀಡಿದರು. ತರುವಾಯ ಪ್ರಾಚೀನ ವಾಙ್ಮಯದಿಂದ ಇನ್ನೂ ಮೂವತ್ತೈದು ಸಾವಿರ ಶಬ್ದಗಳನ್ನು ಸಂಗ್ರಹಿಸಿದರು. ಈ ರೀತಿ ಎಂಭತ್ತು ಸಾವಿರ ಶಬ್ದಗಳು ಒಟ್ಟುಗೂಡಿ ಬಿಟ್ಟ ತರುವಾಯ ಕಚ್ಛ ಮತ್ತು ಗುಜರಾತಿನ ಪ್ರಾಂತೀಯ ಶಬ್ದಗಳನ್ನು ಸಂಗ್ರಹಿಸುವ ಕಾರ್ಯವನ್ನಾರಂಭಿಸಿದರು.

ಪ್ರಸ್ತುತ ಕೋಶದ ಸಂಪಾದಕ ಶ್ರೀ ಚಂದೂಲಾಲ್ ಪಟೇಲರವರು, ಮಹಾರಾಜರು ಈ ಶಬ್ದ-ಸಂಗ್ರಹದ ಕಾರ್ಯನಿರ್ವಹಣೆಯಲ್ಲಿ ಎಷ್ಟು ಶ್ರಮವಹಿಸಿದ್ದಾರೆ ಎಂಬುದರ ವಿಸ್ತೃತ ವಿವರಣೆಯನ್ನು ತಮ್ಮ ವ್ಯಾಖ್ಯಾನದಲ್ಲಿ ಕೊಟ್ಟಿದ್ದಾರೆ. ಈ ವ್ಯಾಖ್ಯಾನವು ಅಹಮದಾಬಾದಿನ ಗುಜರಾತ್ ಸಾಹಿತ್ಯ ಸಭೆಯ ೧೯೫೩-೫೪ರ ಕಾರ್ಯ ವಿವರಣೆ ಎಂಬ ಗ್ರಂಥದಲ್ಲಿ ಅಚ್ಚಾಗಿದೆ. ಶಬ್ದಗಳ ಅರ್ಥಗಳೊಂದಿಗೇ ಅವರು ಅವಶ್ಯಕ ರೇಖಾಚಿತ್ರಗಳನ್ನೂ ತಯಾರಿಸಿದರು. ಪಾರಿಭಾಷಿಕ ಶಬ್ದಗಳನ್ನೂ ಕೂಡ ಸಂಗ್ರಹಿಸಿದರು. ಅನೇಕ ಶಬ್ದಕೋಶಗಳಿಂದ ಸಹಾಯ ಪಡೆದುಕೊಳ್ಳಲಾಯಿತು. ಅನೇಕ ವ್ಯಕ್ತಿಗಳಿಂದ ಸಹಕಾರ ಪಡೆದರು. ಕೋಶವನ್ನು ಹೆಚ್ಚು ಹೆಚ್ಚಾಗಿ ಸಮೃದ್ಧ ಹಾಗೂ ಪ್ರಾಮಾಣಿಕವಾಗಿ ಮಾಡಲು ತಮ್ಮ ಕಡೆಯಿಂದ ಯಾವ ದೋಷವೂ ಘಟಿಸದಂತೆ ಎಚ್ಚರ ವಹಿಸಿದರು. ಶಬ್ದಗಳ ಶುದ್ಧರೂಪ ಮತ್ತು ಅವುಗಳ ಅರ್ಥಗಳನ್ನು ನಿರ್ಣಯಿಸಲೋಸುಗ ಅನೇಕ ವಿದ್ವಾಂಸರೊಡನೆ ಪರಾಮರ್ಶೆ ನಡೆಸಲಾಗುತ್ತಿತ್ತು. ಅಲ್ಲದೆ ಸ್ವಯಂ ಮಹಾರಾಜರೇ ಅವರ ಸೂಚನೆಗಳನ್ನು ನೋಡಿ ಅವಶ್ಯಕವಾದ ಪರಾಮರ್ಶೆ ನೀಡುತ್ತಿದ್ದರು. ನಂತರ, ನಿರ್ಣಯ ಯಾವ ತರಹದ್ದೇ ಆಗುತ್ತಿರಲಿ, ಅದನ್ನು ಚುರುಕಾಗಿ ಶೀಘ್ರಗತಿಯಿಂದ ವ್ಯವಹಾರದಲ್ಲಿ ಇಳಿಸಲು ಆರಂಭಿಸುತ್ತಿದ್ದರು. ಸಂಪೂರ್ಣತಃ ಕಡೆಯ ಪ್ರೂಫ್ ಅನ್ನು

1. 'ಗೋಂಡಲ್ ಕೋಶ್ ನೀ ಪೆಹಲೀ ಪತ್ರಿಕಾ, ಮಾತೃಭಾಷಾ ಪ್ರೀತ್ಯರ್ಥೇ, ಸಾಹಿತ್ಯ ಸೇವಾ ಸನ್ಮಾರ್ಗೇ, ಸಾಹಿತ್ಯ ಪ್ರೇಮಿ ಸಜ್ಜನೋ! ಭಾಗೇ ಪಡತುಂ ಕರಿ ನೇ, ಸಕ್ರಿಯ ಸಾಥ್ ಆಪೀನೇ, ಗೋಂಡಲ್ ಕೋಶ್ ಶಿಷ್ಟ ಲೇಖಕೋ ನಾ ಪ್ರಯೋಗೋ ಥೀ ಪ್ರಮಾಣ ಭೂತ ವಿವಿಧ ಪ್ರಕಾರನಾ ಚಿತ್ರೋ ಥೀ ಮನೋರಂಜಕ್ ನವಯುಗನಾ ಶಬ್ದೋ ಥೀ ನವಪಲ್ಲವಿತ್, ವ್ಯುತ್ಪತ್ತಿ ಆದಿ ಥೀ ಶಾಸ್ತ್ರೀಯ ಸಂಪೂರ್ಣ ಅನೇ ಆದರ್ಶ್ ಬನಾವೋ'

ಖುದ್ದಾಗಿ ತಾವೇ ನೋಡಿ ಶುದ್ಧಿ-ವೃದ್ಧಿಯೊಡನೆ ಚರ್ಚೆ-ವಿಚಾರಗಳನ್ನು ನಡೆಸುತ್ತಿದ್ದರು. ಸಂಪಾದಕರು ಒಂದು ಪ್ರಸಂಗವನ್ನುಲ್ಲೇಖಿಸುತ್ತಾ ಬರೆದಿದ್ದಾರೆ:—ಒಂದು ಶಬ್ದಕ್ಕೆ 'ಒಂದು ತೆರನಾದ ವಿಷವುಳ್ಳ ವಿಷ ಮೂಷಿಕ' ಎಂಬುದಾಗಿ ಅರ್ಥ ಬರೆಯಲಾಗಿತ್ತು. ಮಹಾರಾಜರು ಇದರ ಪ್ರೂಫ್ ಅನ್ನು ನೋಡಿ "ವಿಷವುಳ್ಳ" ಶಬ್ದದ ಮುಂದೆ ಪ್ರಶ್ನವಾಚಕ ಚಿಹ್ನೆಯನ್ನು ಬರೆದುಬಿಟ್ಟರು. ಈ ಅರ್ಥಕ್ಕೆ ಪ್ರಮಾಣವಾಗಿ ಅವರಿಗೆ ಆಪ್ಟೆಯವರ ಕೋಶವನ್ನು ತೋರಿಸ ಲಾಯಿತು. ಆದರೆ ಇದರಿಂದ ಅವರಿಗೆ ಸಮಾಧಾನವಾಗಲಿಲ್ಲ. ಆದ್ದರಿಂದ ಕಲಕತ್ತೆಯ 'ಟ್ರಾಪಿಕಲ್ ಸ್ಕೂಲ್ ಆಫ್ ಮೆಡಿಸಿನ್' ಅನ್ನು ವಿಚಾರಿಸಿ ನಿರ್ಣಯ ಕೈಗೊಳ್ಳುವಂತೆ ಆಜ್ಞಾಪಿಸಿದರು. ಅಲ್ಲಿಂದ ಇಲಿ ವಿಷವುಳ್ಳದ್ದಾಗಿರಬಹುದೆಂದು ಉತ್ತರ ದೊರಕಿತು. ಹಾಗಾದರೂ ಕೂಡ 'ಹೆಫ್‌ಗಇನ್ ಇನ್ಸ್ಟಿಟ್ಯೂಟ್ ಬೊಂಬಾಯಿ' ಯನ್ನು ಕೇಳಿದರು. ಅಲ್ಲಿಯ ಡಾಕ್ಟರ್ ಸೋಖೆಯವರ ಸಮ್ಮತಿ ಸಿಕ್ಕ ನಂತರವೇ ಆ ಶಬ್ದಕ್ಕೆ ವಿವರಣೆ ಯನ್ನೀಯಲಾಯಿತು. ಈ ಒಂದು ಉದಾಹರಣೆಯಿಂದಲೇ, ಕೋಶಕಾರರು ಈ ಕೋಶವನ್ನು ಪ್ರಾಮಾಣಿಕವಾಗಿಸಲು ಎಷ್ಟರಮಟ್ಟಿನ ಎಚ್ಚರಿಕೆ ವಹಿಸಿದರು, ಎಷ್ಟೊಂದು ಶ್ರಮಪಟ್ಟಿರ ಬೇಕೆಂಬುದರ ಒಳ್ಳೆಯ ಪರಿಚಯ ದೊರಕಿಬಿಡುತ್ತದೆ.

ಇದೇ ರೀತಿ ಶಬ್ದ ಸಂಗ್ರಹಕ್ಕೋಸ್ಕರವೂ ಮಹಾರಾಜರು ಎಷ್ಟು ಗಮನಕೊಟ್ಟಿದ್ದರು ಹಾಗೂ ಪರಿಶ್ರಮ ವಹಿಸಿದ್ದರು ಎಂಬುದರ ಬಗ್ಗೆ ಸಂಪಾದಕರು ಒಂದುಕಡೆ ಪ್ರಸ್ತಾಪಿಸಿ ದ್ದಾರೆ. ಒಮ್ಮೆ ಸಿನಿಮಾ ಮಂದಿರವೊಂದರ ಮಾಲೀಕ ಚಿತ್ರ ನೋಡುವ ಆಹ್ವಾನವನ್ನೀ ಯಲು ಮಹಾರಾಜರಲ್ಲಿಗೆ ತೆರಳಿದ. ಆ ಚಿತ್ರಕ್ಕೆ ಸಂಬಂಧಪಟ್ಟ ವಿಜ್ಞಾಪನೆಯನ್ನು ಅವರ ಮುಂದೆ ಇಟ್ಟ. ಅದನ್ನೋದುವುದರಲ್ಲಿ ಅವರು ಎಷ್ಟರಮಟ್ಟಿಗೆ ತಲ್ಲೀನರಾಗಿಬಿಟ್ಟರೆಂದರೆ, ಆಹ್ವಾನವನ್ನೀಯಲು ಬಂದಿದ್ದ ವ್ಯಕ್ತಿಗೆ, ಇಂದಿನ ದಿನವಂತೂ ಸಿನಿಮಾ ನೋಡಲು ಮಹಾ ರಾಜರು ಖಂಡಿತವಾಗಿ ಪಾದ ಬೆಳೆಸುವರೆಂಬಂತೆ ಭಾಸವಾಯಿತು. ಅಷ್ಟರಲ್ಲಿಯೇ ಮಹಾ ರಾಜರು ಸೀಸದಕಡ್ಡಿ ತೆಗೆದು ಆ ವಿಜ್ಞಾಪನೆಯಲ್ಲಿ ಏನೋ ಬರೆಯಲಾರಂಭಿಸಿದರು. ಆ ವ್ಯಕ್ತಿಗೆ ಇದರ ರಹಸ್ಯ ಮಾರನೆಯ ದಿವಸ ತಿಳಿದುಬಂತು. ಆ ವಿಜ್ಞಾಪನೆಯಲ್ಲಿ ಯಾವ ಯಾವ ಹೊಸ ಶಬ್ದಗಳು ದೊರಕಿದವೋ ಅವುಗಳ ಕೆಳಗೆ ಮಹಾರಾಜರು ಚಿಹ್ನೆ ಯನ್ನೆಳೆಯಲು ಆರಂಭಿಸಿದ್ದರು. ಫಲ-ಪುಷ್ಪ, ವೃಕ್ಷ, ಮುತ್ತು, ಮಾಣಿಕ್ಯ, ವಸ್ತ್ರ, ಜವಾಹಿರಿ ಗಳು, ಆಭೂಷಣ ಮುಂತಾದ ಅನೇಕ ವಸ್ತುಗಳ ಸೂಚಿಪತ್ರಗಳು ಮಹಾರಾಜರಲ್ಲಿಗೆ ಬರುತ್ತಿದ್ದವು. ಮಹಾರಾಜರು ಅವುಗಳನ್ನು ಕೂಡ ಬಹಳ ಎಚ್ಚರಿಕೆ ವಹಿಸಿ ನೋಡಿ, ಶಬ್ದ-ಕೋಶಕ್ಕೆ ತೆಗೆದುಕೊಳ್ಳಲು ಯೋಗ್ಯ ಶಬ್ದಗಳನ್ನು ಆರಿಸುತ್ತಿದ್ದರು. ಆ ಶಬ್ದಗಳಿಗೆ ವಿವರಣೆ ಬರೆಯುತ್ತಿದ್ದರು.

ಇವರು ಒಮ್ಮೆ ಯಾವುದೋ ಒಂದು ಗ್ರಾಮಕ್ಕೆ ಹೋದರು. ರಾತ್ರಿಯಾಗಿಬಿಟ್ಟಿದ್ದರಿಂದ ಹೊಲಗಳ ನಡುವೆ ಮಾರ್ಗತಪ್ಪಿಹೋಯಿತು. ಜತೆಯಲ್ಲಿದ್ದ ಜನರು ದಾರಿಹುಡುಕುವುದಕ್ಕೆಂದು ಹೊರಬಿದ್ದರು. ಅಡ್ಡ-ದಿಡ್ಡ ಮಾರ್ಗವಾಗಿ ಹಳ್ಳಿಯ ಜನರನ್ನು ಸೇರಿಕೊಂಡರು. ಅವರೊಂದಿಗೆ ಮಾತನಾಡುತ್ತಿರುವಾಗ ಮಧ್ಯೆ ಹೊಸ ಹೊಸ ಶಬ್ದಗಳನ್ನೂ ಅವುಗಳ ಅರ್ಥಗಳನ್ನೂ ಗುರುತು ಹಾಕಿಕೊಂಡರು. ವಾಸ್ತವವಾಗಿಯೇ ಮಹಾರಾಜರು ಓರ್ವ ನೈಜಕೋಶಕಾರರಾಗಿದ್ದರು. ಆದಕಾರಣ ಅವರ ಈ ಕೋಶವು ಮಹಾಕೋಶವಾದದ್ದು ಸ್ವಾಭಾವಿಕವೇ ಸರಿ.

ತಮ್ಮ ತಂದೆಯುವರಿಂದ ಪ್ರಾರಂಭವಾದ ಈ ವಿಶಿಷ್ಟ ಯಜ್ಞವನ್ನು ಪೂರ್ಣಗೊಳಿಸುವಲ್ಲಿ ಅವರ ಸುಪುತ್ರರಾದ ಮಹಾರಾಜ ಭೋಜರಾಜ ಮತ್ತು ವಿಕ್ರಮಸಿಂಹರ ಪೂರ್ಣ ಸಹಕಾರ ವಿತ್ತು. ಕೋಶ ಸಂಪಾದಕ ಶ್ರೀ ಚಂದೂಲಾಲ್ ಪಟೇಲ್ ಅವರು ಕೋಶಕಾರರ ಬಗ್ಗೆ ತಮ್ಮ ಶ್ರದ್ಧಾಂಜಲಿಯನ್ನರ್ಪಿಸಿದ್ದಾರೆ ಹಾಗೂ ಅವರ ಸುಪುತ್ರರ ಸಹಯೋಗ-ಋಣವನ್ನು ಸ್ವೀಕರಿಸಿದ್ದಾರೆ. ಇದರೊಂದಿಗೇ, ಈ ಶಬ್ದಬ್ರಹ್ಮನ ಉಪಾಸನೆಯಲ್ಲಿ ಸೌರಾಷ್ಟ್ರ ಸರಕಾರದ್ದೂ ಕೂಡ ಸೌಜನ್ಯ ಹಾಗೂ ಉದಾರ ಸಹಯೋಗ ದೊರಕಿತು. ಇದನ್ನೂ ಕೂಡ ಅವರು ಉಲ್ಲೇಖಿಸಿದ್ದಾರೆ. ಮಹಾರಾಜ ಭಗವತಸಿಂಹರು ಸುಮಾರು ಎಂಭತ್ತು ವರ್ಷದ ವಯಸ್ಸಿನಲ್ಲಿ ಅಂದರೆ ೧೯೪೪ರಲ್ಲಿ ಸ್ವರ್ಗಸ್ಥರಾದರು. ಆಗ ಒಮ್ಮೆಯಂತೂ ಅವರ ಶೋಕದಲ್ಲಿ ಕೋಶಕಾರ್ಯವು ತಣ್ಣಗಾಗಿಬಿಟ್ಟಿತ್ತು. ಆದರೆ ಅವರ ಸುಪುತ್ರರು ಮತ್ತು ಪುತ್ರಿಯರು (ಎರಡು ಭಾಗಗಳಂತೂ ಮಹಾರಾಜರ ಜೀವನ ಕಾಲದಲ್ಲಿಯೇ ಪ್ರಕಾಶಿತವಾಗಿಬಿಟ್ಟಿದ್ದವು) ಮುಂದಿನ ಭಾಗಗಳನ್ನು ಶೀಘ್ರವಾಗಿ ಪ್ರಕಾಶಿತಗೊಳಿಸಬೇಕೆಂದು ಬಹಳ ತತ್ಪರತೆಯಿಂದ ಕಾರ್ಯ ಮುಂದುವರಿಸಿದರು. ತತ್ಫಲವಾಗಿ ೧೯೪೪ರಿಂದ ೧೯೪೮ರ ವರೆಗಿನ ಈ ನಾಲ್ಕು ವರ್ಷಗಳಲ್ಲಿ ಇನ್ನೂ ಎರಡು ಭಾಗಗಳು ಅಚ್ಚಾಗಿ ಹೊರಬಂದುಬಿಟ್ಟವು. ತದನಂತರ ಸೌರಾಷ್ಟ್ರದ ರಾಜ್ಯಗಳ ವಿಲೀನೀಕರಣವಾಗಿಬಿಟ್ಟಿತು. ಆಗ ಸೌರಾಷ್ಟ್ರ ಸರಕಾರವು ಇಂತಹ ಮಹಾನ್ ಕಾರ್ಯವನ್ನು ಪೂರ್ಣಗೊಳಿಸುವಂತೆ ನೆರವು ನೀಡಿತು.

ಕೋಶದ ಒಂಭತ್ತನೆಯ ಭಾಗದಲ್ಲಿ ಸಂಪಾದಕರು ಬಹಳ ವಿಸ್ತಾರವಾಗಿ ಈ ಬೃಹತ್ ಕಾರ್ಯದ ವಿವರಣೆಯನ್ನು ಕೊಟ್ಟಿದ್ದಾರೆ. ಆದರಿಂದ ಮಹಾರಾಜರು ಈ ಕಾರ್ಯದಲ್ಲಿ ತೀರ ತನ್ಮಯರಾಗಿಬಿಟ್ಟಿದ್ದರೆಂಬುದು ಗೊತ್ತಾಗುತ್ತದೆ. ಅವರು 'ಕೋಶ-ಕಚೇರಿ' ಯ ಬೇರೆ ಒಂದು ವಿಭಾಗವನ್ನೇ ಸ್ಥಾಪಿಸಿಬಿಟ್ಟಿದ್ದರು. ಇದಕ್ಕಾಗಿ ಲಕ್ಷಾಂತರ ರೂಪಾಯಿಗಳು ವ್ಯಯವಾದವು. ನಲವತ್ತು ವ್ಯಕ್ತಿಗಳು ಆ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದರು. ಪ್ರಾತಃಕಾಲ ೭ರಿಂದ ೧೦ರ ತನಕ, ನಂತರ ೧೧ರಿಂದ ೫ರ ವರೆಗೆ ಹಾಗೂ ರಾತ್ರಿ ೭ರಿಂದ ೧೦ರ ತನಕ ಕೋಶ ಕಾರ್‍ಯವು ನಡೆಯುತ್ತಿತ್ತು. ಆದರೆ ಅಲ್ಲಿನ ವ್ಯವಸ್ಥೆ ಎಷ್ಟು ಚೆನ್ನಾಗಿತ್ತೆಂದರೆ ಪ್ರತಿಯೊಬ್ಬ ವ್ಯಕ್ತಿಯೂ ಕೇವಲ ಮೂರು ಘಂಟೆಗಳಷ್ಟೇ ಕಾರ್‍ಯ ಮಾಡಬೇಕಾಗುತ್ತಿತ್ತು. ನಿಯಮಪಾಲನೆ ಎಷ್ಟರಮಟ್ಟಿನಲ್ಲಿತ್ತೆಂದರೆ ಒಂದು ನಿಮಿಷ ತಡವಾಗಿಬಿಟ್ಟರೂ ಕೂಡ ಕಾರ್ಯಕರ್ತೃಗಳು ತಮ್ಮ ಮನೆಗಳಿಗೆ ಹಿಂತಿರುಗಿಬಿಡುತ್ತಿದ್ದರು. ಕೋಶದ ಸಂಪಾದಕರು, ಇಪ್ಪತ್ತೆಂಟು ವರುಷಗಳತನಕ ತಾವು ಮಹಾರಾಜರೊಡನೆ ಕೆಲಸ ಮಾಡಿದುದಾಗಿ ಬರೆದಿದ್ದಾರೆ. ಈ ಅವಧಿಯಲ್ಲಿ ಕೇವಲ ಒಂದುದಿನ ಎರಡು ನಿಮಿಷಗಳಷ್ಟು ತಡವಾದುದು ತಮಗೆ ಜೀವನ ಪರ್ಯಂತ ಚುಚ್ಚುತ್ತಿರುತ್ತದೆಂದೂ ತಿಳಿಸಿದ್ದಾರೆ.

ಗುಜರಾತಿನ ವಿದ್ವಾಂಸರಾದ ಕೃಷ್ಣಲಾಲ್ ಝುವೇರಿಯವರು ಮುನ್ನುಡಿಯಲ್ಲಿ, ಈ ಕೋಶದ ಹೋಲಿಕೆಯಲ್ಲಿ ಯಾವ ಭಾರತೀಯ ಕೋಶವೂ ಇಲ್ಲವೆಂದೂ, ಆ ಕಾರಣ ಇದನ್ನು 'ಎನ್‌ಸೈಕ್ಲೋ-ಪೀಡಿಯಾ ಬ್ರಿಟಾನಿಕಾದೊಡನೆ' ಹೋಲಿಸಬಹುದೆಂಬುದಾಗಿಯೂ ಬರೆದಿದ್ದಾರೆ. ಕೋಶದ ಒಂಭತ್ತು ಭಾಗಗಳ ಮೂಲ ಬೆಲೆ ಐನೂರಮೂವತ್ತೈದು ರೂಪಾಯಿಗಳಾಗುತ್ತದೆ. ಆದರೆ ಇದನ್ನು ಕೊಳ್ಳುವುದು ಯಾರಿಗೂ ಭಾರವಾಗಿ ಕಂಡುಬರದಿರಲಿ ಎಂಬ ಉದ್ದೇಶ್ಯದಿಂದ ಇದಕ್ಕೆ ಒಂದು ನೂರ ನಲವತ್ತಾರು ರೂಪಾಯಿ ಮಾತ್ರವೇ ಬೆಲೆ ಇಟ್ಟಿದ್ದಾರೆ. ಒಂಭತ್ತನೆಯ ಭಾಗದ ಬೆಲೆ ಐವತ್ತೆಂಟು ರೂಪಾಯಿ ಬದ್ದಿದೆ. ಆದರೆ ಇಟ್ಟಿರುವುದು ಮಾತ್ರ

ಹದಿನೈದೇ ರೂಪಾಯಿ. ಪ್ರತಿವರ್ಷ ಎಷ್ಟೆಷ್ಟು ಖರ್ಚಾಯಿತು ಎಂಬೀ ವಿವರಣೆ ಕೂಡ ಒಂಭತ್ತನೆಯ ಭಾಗದ ಕೊನೆಯಲ್ಲಿ ಕೊಡಲ್ಪಟ್ಟಿದೆ. ಪ್ರತ್ಯೇಕ ಪ್ರತ್ಯೇಕ ಖರ್ಚು ಮತ್ತು ಕೋಶದ ಒಂದೊಂದು ಭಾಗವು ತೂಕದಲ್ಲಿ ಎಷ್ಟಿದೆ, ಎಷ್ಟು ಪುಟಗಳಿವೆ, ಎಷ್ಟು ಶಬ್ದಗಳಿವೆ, ಶಬ್ದಗಳಿಗೆ ಎಷ್ಟು ಅರ್ಥಗಳಿವೆ ಮತ್ತು ಎಷ್ಟು ರೂಢಿ-ಪ್ರಯೋಗಗಳನ್ನು ಕೊಡಲಾಗಿದೆ—ಈ ವಿವರಣೆಗಳೆಲ್ಲಾ ಸಂಪೂರ್ಣವಾಗಿ ಕೋಶದ ಕಡೆಯ ಪುಟದಲ್ಲಿ ಪ್ರಕಟಿತಗೊಂಡಿದೆ. ಕೋಶದಲ್ಲಿ ಚಿತ್ರಗಳನ್ನೂ ಸಾಕಷ್ಟು ಕೊಡಲಾಗಿದೆ. ಇಷ್ಟೊಂದು ದೊಡ್ಡ ಕೋಶವು ಎಲ್ಲರ ದೃಷ್ಟಿಯಿಂದ ಸುಲಭವೂ ಉಪಯುಕ್ತವೂ ಆಗಲಾರದು. ಆದಕಾರಣ ಇದನ್ನಾಧರಿಸಿ ಇನ್ನೂ ನಾಲ್ಕು ಸಂಕ್ಷಿಪ್ತಕೋಶಗಳನ್ನು ತಯಾರಿಸಿ ಪ್ರಕಾಶಿತಗೊಳಿಸಿದ್ದಾರೆ. (೧) ಕುಮಾರ್ ಕೋಶ್—ವಿದ್ಯಾರ್ಥಿಗಳಿಗಾಗಿ, ಸಂಯುಕ್ತ ಶಬ್ದ ಪ್ರಧಾನ, ಪಾಕೆಟ್ ಸೈಜು. (೨) ಸ್ವಾಧ್ಯಾಯ್ ಕೋಶ್—ಅಭ್ಯಾಸಿಗಳಿಗೋಸ್ಕರವಾಗಿ. ವ್ಯುತ್ಪತ್ತಿ ಪ್ರಧಾನ. (೪) ಸಂಕ್ಷಿಪ್ತ ಕೋಶ್—ಸರ್ವ ಜನೋಪಯುಕ್ತ. (೪) ಶಬ್ದ ರತ್ನಾಂಜಲಿ—ಅತ್ಯಂತ ಕಡಿಮೆ ಬೆಲೆಯಲ್ಲಿ ಪ್ರಚಾರ ಮಾಡಲೋಸುಗ ಮಹಾರಾಜರ ರಾಜಕುಮಾರಿಯಾದ ತಾರಾಬಾ ಅವರು ಇದನ್ನು ಸಿದ್ಧಗೊಳಿಸಿದರು. ಇದರಲ್ಲಿ ೬೪೦ ಪುಟಗಳಿವೆ. ಈ ಕೋಶದ ಬೆಲೆ ಕೇವಲ ಹನ್ನೆರಡು ಆಣೆ. ಅಲ್ಲದೆ ವಿದ್ಯಾರ್ಥಿಗಳಿಗಂತೂ ಇನ್ನೂ ಕಡಿಮೆ ಅಂದರೆ ಕೇವಲ ಹತ್ತೇ ಆಣೆ.

ಈ ಕೋಶದಲ್ಲಿ ಕೇವಲ ಗುಜರಾತಿ ಭಾಷೆಯಷ್ಟರದ್ದೇ ಶಬ್ದಗಳಿಲ್ಲ. ಗುಜರಾತೀ ಭಾಷೆಯಲ್ಲಿ ಸಮ್ಮಿಳಿತಗೊಂಡುಬಿಟ್ಟಿರುವ ಇಪ್ಪತ್ತಮೂರು ಭಾಷೆಗಳ ಶಬ್ದಗಳೂ ಕೂಡ ಸಮಾವೇಶಗೊಂಡಿವೆ. ಅರಬೀ, ಅಪಭ್ರಂಶ, ಅವೆಸ್ತಾ, ಅಂಗ್ಲ, ಗ್ರೀಕ್, ತುರ್ಕಿ, ಪ್ರಾಚೀನ ಗುಜರಾತೀ, ತಮಿಳು, ತೆಲಗು, ದೇಶ್ಯ, ಪಲಹವೀ, ಪುರ್ತಗೀಜ್ (ಪೋರ್ಚುಗೀಸ್). ಪ್ರಾಕೃತ, ಫಾರಸೀ, ಫ್ರೆಂಚ್, ಮರಾಠೀ, ಮಲಯಾಳಂ, ಯವನ, ಲ್ಯಾಟಿನ್, ಸಂಸ್ಕೃತ, ಸ್ಪ್ಯಾನಿಶ್ ಹಾಗೂ ಹಿಂದಿ. ಶಬ್ದಗಳ ಮೂಲ-ರೂಪಗಳು, ಅವುಗಳ ವ್ಯುತ್ಪತ್ತಿ, ಅವುಗಳ ಉಚ್ಚಾರಣೆ, ಹಾಗೂ ಅರ್ಥ ಮುಂತಾದವುಗಳನ್ನು ಹೆಚ್ಚು ಹೆಚ್ಚಾಗಿ ಪ್ರಾಮಾಣಿಕ ರೂಪದಲ್ಲಿ ಪ್ರಸ್ತುತಗೊಳಿಸಲು ಅನೇಕ ವಿದ್ವಾಂಸರು ಮತ್ತು ಕೋಶ-ಗ್ರಂಥಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಈ ಪ್ರಕಾರದ ಮಹಾನ್ ಪ್ರಯತ್ನ ಭಾರತದಲ್ಲಿಯಂತೂ ಸಂಭವತಃ ಸರ್ವ ಪ್ರಥಮ ಹಾಗೂ ಅಸಾಧಾರಣವಾದುದೆಂದೇ ಹೇಳಲ್ಪಡಬೇಕು. ಇಷ್ಟು ಹೆಚ್ಚು ಶಬ್ದಗಳ ಕೋಶವೂ ಕೂಡ ಭಾರತದಲ್ಲಿ ಬಹುಶಃ ಇದೊಂದೇ ಹೌದು.




---

# ಸಂಪಾದಕೀಯ

## ಹಳಗನ್ನಡ ಗ್ರಂಥಗಳ ಪುನರ್ಮುದ್ರಣದ ಆವಶ್ಯಕತೆ

ಈಚೆಗೆ ಹಳಗನ್ನಡ ಗ್ರಂಥಗಳ ಮುದ್ರಿತ ಪ್ರತಿಗಳ ಅಭಾವ ಬಹಳ ಹೆಚ್ಚಾಗಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಕರ್ನಾಟಕದ ಮೂರು ವಿಶ್ವವಿದ್ಯಾನಿಲಯಗಳಲ್ಲಿಯೂ ಕನ್ನಡ ಎಂ.ಎ. ತರಗತಿಗಳು ನಡೆಯುತ್ತಿವೆ. ಆ ಪರೀಕ್ಷೆಗಳಿಗೆ ಓದುತ್ತಿರುವ ವಿದ್ಯಾರ್ಥಿಗಳಿಗೂ 'ರತ್ನ' ಮೊದಲಾದ ಕನ್ನಡದ ಪ್ರೌಢಪರೀಕ್ಷೆಗಳಿಗೆ ಕೂರಬಯಸುವವರಿಗೂ ಮತ್ತು ಹಳಗನ್ನಡ ಗ್ರಂಥಗಳ ಪ್ರತಿಗಳನ್ನು ವಾಚನದ ಸಲುವಾಗಿ ಕೊಳ್ಳಬಯಸುವವರಿಗೂ ಅವುಗಳ ಅಭಾವ ದಿಂದ ತುಂಬ ತೊಂದರೆಯಾಗಿದೆಯೆಂಬುದನ್ನು ಪ್ರತ್ಯೇಕ ಹೇಳಬೇಕಾಗಿಲ್ಲ. ಈ ಅಭಾವವನ್ನು ನಿವಾರಿಸಬೇಕಾದುದು ಅಗತ್ಯ ಕರ್ತವ್ಯ. ಹಳಗನ್ನಡ ಗ್ರಂಥ ಗಳನ್ನು ಮುದ್ರಿಸಲು ಖಾಸಗಿ ಪ್ರಕಾಶಕರು ಮುಂದೆ ಬರುವುದಿಲ್ಲವಾಗಿ ವಿಶ್ವವಿದ್ಯಾ ನಿಲಯಗಳು, ಸಾಹಿತ್ಯ ಪರಿಷತ್ತು ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಗಳೇ ಈ ಜವಾಬ್ದಾರಿಯನ್ನು ಹೊರಬೇಕಾಗಿದೆ. ಹಳಗನ್ನಡದಲ್ಲಿರುವ ಶ್ರೇಷ್ಠ ಕೃತಿಗಳ ತಿಳಿವಳಿಕೆಯನ್ನು ನಾಡಿನಲ್ಲಿ ಹರಡಲು ಈ ಕಾರ್ಯ ಅತ್ಯಗತ್ಯವಾದುದರಿಂದ ಮೇಲೆ ಹೆಸರಿಸಿದ ಸಂಸ್ಥೆಗಳು ಒಟ್ಟುಗೂಡಿ ಈ ಕಾರ್ಯವನ್ನು ನಿರ್ವಹಿಸಿದರೆ ಸಾಹಿತ್ಯಾಭಿಮಾನಿಗಳಿಗೆ ಶೀಘ್ರಪ್ರಯೋಜನ ಲಭಿಸಲು ಸಾಧ್ಯವಾದೀತು. ಈ ಸಕಾಲಿಕ ಸಲಹೆಯತ್ತ ಸಂಬಂಧಪಟ್ಟ ಸಂಘ ಸಂಸ್ಥೆಗಳು ತಮ್ಮ ಗಮನ ಹರಿಸ ಬೇಕಾಗಿ ಪ್ರಾರ್ಥನೆ.

---

ಸಾಹಿತ್ಯ ಪರಿಷತ್ಪತ್ರಿಕೆಯ ಕಳೆದ ಸಂಚಿಕೆಯ ಸಂಪಾದಕೀಯದಲ್ಲಿ ತಿಳಿಸಿದ್ದಂತೆ ಅದರ ಐವತ್ತನೆಯ ಸಂಪುಟದ ಎರಡು ಸಂಚಿಕೆಗಳೂ ಈಗ ಒಟ್ಟಾಗಿ ಪ್ರಕಟವಾಗಿವೆ. ಇದರೊಂದಿಗೆ ವಿಶ್ವಾವಸು ಸಂವತ್ಸರದ ಎರಡು ಸಂಚಿಕೆಗಳೂ ಹೊರಬಂದಂತಾಯಿತು. ಪರಾಭವ ಸಂವತ್ಸರದ ಸಂಚಿಕೆಗಳು ಸಕಾಲದಲ್ಲಿ ಹೊರಬರುವ ಏರ್ಪಾಟನ್ನು ಮಾಡಲಾಗಿದೆ.

# ಕೆಲವು ಅಚ್ಚಿನ ತಪ್ಪುಗಳು

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೩೧ | ೧೬ | ಶಾಸನಗಳೇನೂ ಮೊಹೆಂಜೊದಾರೊವಿನಲ್ಲಿಯಾಗಲೀ | ಮೊಹೆಂಜೊದಾರೊವಿನಲ್ಲಿಯಾಗಲೀ ಶಾಸನಗಳೇನೂ |
| ,, | ಅಡಿಟಿಪ್ಪಣಿ | Comparion to Lation | Companion to Latin |
| ,, | ,, | Mohento | Mohenjo |
| ೩೨ | ೧೩ | ಚಾಚುಕಿವೆ | ಚಾಚುಕಿವಿ |
| ೩೩ | ೧೫ | ಅವನ ಲಿಖಿತ | ಅವನ ದೃಷ್ಟಿಯಲ್ಲಿ ಲಿಖಿತ |
| ೩೫ | ೧೫ | Burnell ನುತ್ತು Rice | ಬರ್ನೆಲ್ (Burnell) ಮತ್ತು ರೈಸ್ (Rice) |
| ೩೫ | ೨೩ | ೧೯೧೮ | ೧೪೧೮ |
| ೩೫ | ೨೭ | ಸ್ಟೈನ್‌ಕಿ | ಸ್ಟೈನ್‌ಗೆ |
| ೩೭ | ೨-೩ | ಸಂಶೋಧನೆಗಳಿಂದಾಗಿ ತಾವು | ಸಂಶೋಧನೆಗಳಿಂದಾಗಿ |
| ೩೯ | ೧೬ | ಸೀಸಗಡ್ಡಿ (Pencils ?) | ಸೀಸಗಡ್ಡಿ |
| ೪೦ | ೬ | ಬಳೆದಿರುತ್ತದೆ | ಎಳೆದಿರುತ್ತದೆ |
| ,, | ೭ | ಯಾವಾಗಲೂ ಸಾಲುಗಳ | ಸಾಲುಗಳು ಯಾವಾಗಲೂ |
| ,, | ೮ | ಪದಾರ್ಥ | ಪದ್ಯಾರ್ಧ |
| ೪೧ | ೩೧ | ವರ್ಷಋತು | ವರ್ಷ, ಋತು |
| ೪೨ | ೧ | ಬಿರುದುಗಳು (Titles) | ಬಿರುದುಗಳು |
| ೪೩ | ೧೬-೧೮ | ಪಾಣಿನಿಯ . . . . . ಹೇಳಿಲ್ಲ ಎಂಬ | ವಾಕ್ಯ ತಪ್ಪಾಗಿ ಬಿದ್ದಿದೆ |
| ೪೪ | ೩೧ | ಭಾಗ | ಭಾಗ್ಯ |

# ವಿನಿಮಯ ಪತ್ರಿಕೆಗಳು

**ದಿನಪತ್ರಿಕೆ :**

(೧) ಜನವಾಣಿ-ಬೆಂಗಳೂರು. (೨) ಸಂಯುಕ್ತ ಕರ್ನಾಟಕ-ಬೆಂಗಳೂರು.

**ವಾರಪತ್ರಿಕೆ :**

(೧) ಪ್ರಜಾಮತ-ಬೆಂಗಳೂರು. (೨) ಮೈಸೂರು ಗೆಜೆಟ್-ಬೆಂಗಳೂರು. (೩) ರಾಯಭಾರಿ-ಉಡುಪಿ. (೪) ವಿಕ್ರಮ-ಬೆಂಗಳೂರು. (೫) ಕಂಠೀರವ-ಮಂಗಳೂರು. (೬) ಪ್ರಭಾತ-ಮಂಗಳೂರು. (೭) ಕರ್ನಾಟಕ ವೈಭವ-ಬಿಜಾಪುರ. (೮) ಕರ್ಮವೀರ-ಹುಬ್ಬಳ್ಳಿ. (೯) ಬೆಳಕು-ಮೈಸೂರು. (೧೦) ನವಯುಗ-ಉಡುಪಿ. (೧೧) ಜನಪ್ರಗತಿ-ಬೆಂಗಳೂರು. (೧೨) ಕಾನಡಾವೃತ್ತ-ಕುಮಟ. (೧೩) ರಾಷ್ಟ್ರಮತ-ಮಂಗಳೂರು. (೧೪) ಕನ್ನಡಿಗ-ಹುಬ್ಬಳ್ಳಿ. (೧೫) ಪ್ರಪಂಚ-ಹುಬ್ಬಳ್ಳಿ. (೧೬) ಜನಸೇವಕ-ಅಂಕೋಲ. (೧೭) American Reporter-New Delhi. (೧೮) ಸಂದರ್ಶನ-ಬಿಜಾಪುರ. (೧೯) ಸಂದೇಶ-ಬೆಳಗಾಂವಿ. (೨೦) ಸತ್ಯವಾದಿ-ಮೈಸೂರು.

**ಮಾಸಪತ್ರಿಕೆ :**

(೧) ಅಧ್ಯಾತ್ಮಪ್ರಕಾಶ-ಹೊಳೇನರಸೀಪುರ. (೨) ಅಮರವಾಣಿ-ಯಾದಗಿರಿ. (೩) ಕಸ್ತೂರಿ-ಹುಬ್ಬಳ್ಳಿ. (೪) ಕತೆಗಾರ-ಬೆಂಗಳೂರು. (೫) ಕೊರವಂಜಿ-ಬೆಂಗಳೂರು. (೬) ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ-ಕಾಕಿನಾಡ. (೭) ಗುರುದೇವ-ಮೂಡಬಿದರೆ. (೮) ಜೀವನ-ಬೆಂಗಳೂರು. (೯) ಜಯ ಕರ್ನಾಟಕ-ಧಾರವಾಡ. (೧೦) ಜ್ಯೋತಿರ್ವಾಣಿ-ಬೆಂಗಳೂರು. (೧೧) ಜಯಂತಿ-ಧಾರವಾಡ. (೧೨) ಧನ್ವಂತರಿ-ಬಿಜಾಪುರ. (೧೩) ದಿವ್ಯಜ್ಯೋತಿ-ಮೈಸೂರು. (೧೪) ಪುಸ್ತಕ ಪ್ರಪಂಚ-ಮೈಸೂರು. (೧೫) ಧರ್ಮಬೋಧ-ಉಡುಪಿ. (೧೬) ಪ್ರಕಾಶಿನಿ-(ದ. ಕ.) (೧೭) ಪ್ರದೀಪ-ಧಾರವಾಡ. (೧೮) ಪರಿಮಳ-ನಂಜನಗೂಡು. (೧೯) ಮೈಸೂರು ವ್ಯವಸಾಯ ಸಂಶೋಧನ ಪತ್ರಿಕೆ-ಬೆಂಗಳೂರು. (೨೦) ಮೊಗವೀರ-ಬೊಂಬಾಯಿ. (೨೧) ಭಾರತ ಸರ್ಕಾರದ ಪ್ರಕಾಶನಭಾಗ-ನ್ಯೂ ಡೆಲ್ಲಿ. (೨೨) ಮಲೆನಾಡು-ಬೆಂಗಳೂರು- (೨೩) ಪಂಚಾಮೃತ-ಗದಗ. (೨೪) ಗಾಯನಗಂಗ-ಬೆಂಗಳೂರು. (೨೫) ತತ್ವವಾದ-ಬೆಂಗಳೂರು. (೨೬) ವಿನೋದ-ಬೆಂಗಳೂರು. (೨೭) ಶರಣಸಾಹಿತ್ಯ-ಬೆಂಗಳೂರು. (೨೮) ಸದ್ಧರ್ಮ ದೀಪಿಕೆ. ಮೈಸೂರು. (೨೯) ವಿವೇಕಾಭ್ಯುದಯ-ಮಂಗಳೂರು. (೩೦) ಯುಗಪುರುಷ-ಕಿನ್ನಿಗೋಳ. (೩೧) ಶ್ರೀ ಸುಧಾ-ಬೆಂಗಳೂರು. (೩೨) ಸುಬೋಧ-ಬೆಂಗಳೂರು. (೩೩) ಸೋವಿಯತ್ ದೇಶ-ಮದರಾಸು.

**ತ್ರೈಮಾಸಿಕ ಪತ್ರಿಕೆ :**

(೧) ಮೈಸೂರು ಸಕ್ಕರೆ-ಮಂಡ್ಯ. (೨) ಪ್ರಬುದ್ಧ ಕರ್ನಾಟಕ-ಮೈಸೂರು. ಪುಸ್ತಕಮಿತ್ರ-ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ, ಮದರಾಸು.

**Fortnightly** :—(1) British Information Service, Fortnightly Review of News and Events, Delhi.

**Monthly**:—1. P.E.N., Bombay. 2. Journal of Mysore State Educational Federation, Bangalore. 3. Mysore Information Bulletin, Bangalore. 4. British Book News, London. 5. The Indian Publisher and Book-seller, Bombay.

**By-Monthly**:—1. Journal of the University of Bombay, Bomby. 2. Public Affairs-Gokhale Institute Bangalore.

**Quarterly**:—1. Journal of the Mythic Society, Bangalore. 2. Journal of the Annamalai University, Annamalai Nagar. 3. Bulletin of the Deccan College Research Institute, Poona. 4. Annals of Bhandarkar Oriental Research Institute. 5. Bulletin of the School of Oriental and African Studies, London.

**Half-Yearly** :—Half-Yearly Journal of the Mysore University, Mysore.

# ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ. ಪೈ |
|---|---|---|
| ೧. | ಕನ್ನಡದ ಬಾವುಟ (ಐದನೆಯ ಮುದ್ರಣ ೧೯೫೮) | ೨=೦೦ |
| ೨. | ಸೀತಾ ಪರಿತ್ಯಾಗ (ಜೈಮಿನಿ ಭಾರತದಿಂದ ೧೯೬೧) | ೦=೬೫ |
| ೩. | ಜೇಮ್ಸ್ ಏಬ್ರಹಾಮ್ ಗಾರ್ಫೀಲ್ಡನ ಚರಿತ್ರೆ : ಕ್ಯಾಲಿಕೋ ಪ್ರತಿ (೧೯೩೦) | ೧=೫೦ |
| | (ನಾಲ್ಕನೆಯ ಮುದ್ರಣ) ಸಾದಾ ಪ್ರತಿ (೧೯೩೮) | ೧=೦೦ |
| ೪. | ಜ್ಯೋತಿರ್ವಿನೋದಿನಿ (೧೯೩೧) | ೨=೦೦ |
| ೫. | ಹೂಮಾಲೆ (೧೯೪೩) | ೦=೬೩ |
| ೬. | ಕನ್ನಡ ನಾಡಿನ ಚರಿತ್ರೆ: ಭಾಗ ೧ | |
| | ,, ಭಾಗ ೨ (ಎರಡನೆಯ ಮುದ್ರಣ ಅಚ್ಚಿನಲ್ಲಿದೆ) | ೨=೦೦ |
| | ,, ಭಾಗ ೩ ( ,, ೧೯೫೯) | ೧=೨೫ |
| ೭. | ಸರ್ವೋದಯ (೧೯೪೯) | ೦=೩೭ |
| ೮. | ಸಂಕಲನ (೧೯೪೯) | ೦=೬೩ |
| ೯. | ಕನ್ನಡದಲ್ಲಿ ಸುಧಾರಣೆಗಳು ೧೯೪೬ | ೦=೩೮ |
| ೧೦. | ಅರುಂಧತಿ (೧೯೫೧) | ೦=೨೫ |
| ೧೧. | ಶಿವಶರಣರ ಕೃತಿಗಳು (ಸ್ವರಪ್ರಸ್ತಾರ ಸಹಿತ ೧೯೫೨) | ೨=೦೦ |
| ೧೨. | ಹರಿದಾಸ ಸಾಹಿತ್ಯ–ಇಂಗ್ಲಿಷ್ ಉಪೋದ್ಘಾತದೊಡನೆ (೧೯೫೨) | ೧೦=೦೦ |
| ೧೩. | ,, ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ (೧೯೫೨) | ೮=೦೦ |
| ೧೪. | ಗಾಳಿಯಲ್ಲಿನ ಅಗೋಚರ ಶತ್ರುಗಳು (೧೯೫೮) | ೧=೨೫ |
| ೧೫. | ನಕ್ಷತ್ರದರ್ಶನ (೧೯೫೪) | ೧=೫೦ |
| ೧೬. | ಹರಿದಾಸ ಕೃತಿಮಂಜರಿ (೧೯೫೫) | ೧=೨೫ |
| ೧೭. | ಪ್ಲೇಟೋವಿನ ಆದರ್ಶರಾಜ್ಯ (೧೯೫೬) | ೧=೩೮ |
| ೧೮. | ವಾಚನ ಕಾವ್ಯಮಂಜರಿ (೧೯೫೫) | ೦=೧೯ |
| ೧೯. | ಚೇರಮ ಕಾವ್ಯಂ (೧೯೫೬) | ೨=೦೦ |
| ೨೦. | ಅನುಭವ ಮುಕುರಂ (೧೯೫೬) | ೦=೩೮ |
| ೨೧. | ಆಧುನಿಕ ಗದ್ಯ ಸಾಹಿತ್ಯ (ಎರಡನೆಯ ಮುದ್ರಣ ೧೯೬೧) | ೨=೫೦ |
| ೨೨. | ಕನ್ನಡದ ಅತ್ಯುತ್ತಮ ಸಣ್ಣ ಕತೆಗಳು (ಮೂರನೆಯ ಸಂಪುಟ ೧೯೫೮) | ೪=೦೦ |
| ೨೩. | ಕಾದಂಬರಿ–ಸಾಮಾನ್ಯ ಮನುಷ್ಯ (೧೯೫೭) | ೧=೦೦ |
| ೨೪. | ಉದ್ಭಟದೇವ ಚರಿತೆ (೧೯೫೭) | ೧=೫೦ |
| ೨೫. | ತ್ರಿಪುರದಹನ ಸಾಂಗತ್ಯ (೧೯೫೯) | ೦=೭೫ |
| ೨೬. | ಮೂರು ಸ್ಪರ್ಧಾ ನಾಟಕಗಳು (೧೯೫೯) | ೨=೭೫ |
| ೨೭. | ಕಾವ್ಯ ಸೌರಭ (೧೯೬೨) | ೨=೦೦ |
| **೨೮.** | **ಕರ್ಣಾಟಕ ಕವಿಚರಿತೆ (೧ನೆ ಭಾಗ)** | **೧೨=೦೦** |
| | **,, ,, ಲೈಬ್ರರಿ ಪ್ರತಿಗಳು** | **೧೫=೦೦** |
| ೨೯. | ಕಾವ್ಯಗಾಯನ ಕಲಾ ಸಂಗ್ರಹ | ೧=೨೫ |

ಪುಸ್ತಕ ವ್ಯಾಪಾರಿಗಳಿಗೆ ಕರ್ಣಾಟಕ ಕವಿಚರಿತೆ ವಿನಾ ಮಿಕ್ಕೆಲ್ಲ ಪುಸ್ತಕಗಳಿಗೆ ಶೇ. 25ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ






ಸಂಪುಟ ೫೧ — Vol. 51

ಸಂಚಿಕೆ ೧-೨ — No. 1-2

ಜೂನ್ - ಡಿಸೆಂಬರ್ — JUNE-DECEMBER

೧೯೬೬ — 1966

Half-Yearly

JOURNAL OF THE KANNADA LITERARY ACADEMY

KANNADA SAHITYA PARISHAT

BANGALORE-18

ವಾರ್ಷಿಕ ಚಂದಾ ರೂ. ೨-೫೦ ◆ Annual Subscription Rs. 2·50

# ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

## ಕಾರ್ಯಕಾರಿ ಸಮಿತಿಯ ಸದಸ್ಯರು

೧. ಪ್ರೊ॥ ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.

೨. ಶ್ರೀ ವೆಂಕಟೇಶ ಸಾಂಗಲಿ

೩. ಶ್ರೀ ಹಂಪ. ನಾಗರಾಜಯ್ಯ, ಎಂ.ಎ.

೪. ಶ್ರೀ ಅ. ನ. ಕೃಷ್ಣರಾವ್

೫. ಶ್ರೀ ಕಡೆಂಗೋಡ್ಲು ಶಂಕರಭಟ್ಟ

೬. ಪ್ರೊ॥ ದಿ. ಜವರೇಗೌಡ, ಎಂ.ಎ.

೭. ಶ್ರೀ ಕೆ. ಎಸ್. ಧರಣೇಂದ್ರಯ್ಯ, ಎಂ.ಎ., ಬಿ.ಟಿ.

೮. ಶ್ರೀ ಕೃಷ್ಣಮೂರ್ತಿ ಪುರಾಣಿಕ, ಬಿ.ಎ., ಬಿ.ಟಿ.,

೯. ಶ್ರೀ ಅನ್ನದಾನಯ್ಯ ಪುರಾಣಿಕ, ಬಿ.ಕಾಂ., ಎಲ್‌ಎಲ್.ಬಿ.

೧೦. ಶ್ರೀ ಎನ್. ಎಸ್. ಹೆಗ್ಗಡೆ

೧೧. ಶ್ರೀ ಪ. ಸು. ಭಟ್ಟ, ಎಂ.ಎ.

೧೨. ಡಾ॥ ಎಸ್. ರಾಮಕೃಷ್ಣ

೧೩. ಶ್ರೀ ಸೂರ್ಯನಾರಾಯಣ ಚಡಗ

೧೪. ಶ್ರೀ ವಿ. ರಘುರಾಮ ಶೆಟ್ಟಿ

೧೫. ಶ್ರೀಮತಿ ಕೆ. ಟಿ. ಬನಶಂಕರಮ್ಮ, ಬಿ.ಎಸ್‌ಸಿ., ಬಿ.ಇಡಿ.

೧೬. ಶ್ರೀ ನೆ. ಸು. ಕೃಷ್ಣಮೂರ್ತಿ, ಎಂ.ಎ.

೧೭. ಶ್ರೀ ಗ. ಸ. ಹಾಲಪ್ಪ, ಎಂ.ಎ.

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

HALF-YEARLY JOURNAL OF THE

# KANNADA SAHITYA PARISHAT

BANGALORE-18






ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ :: ಬೆಂಗಳೂರು-೧೮

೧೯೬೬

ಸಂಪಾದಕರು

ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ  ಹಂಪ. ನಾಗರಾಜಯ್ಯ

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮

೧೯೬೭

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

## ಶ್ರೀ ಪರಾಭವ

ಸಂಪುಟ : ೫೧ ಜೂನ್-ಡಿಸೆಂಬರ್ ೧೯೬೬ ಸಂಚಿಕೆ : ೧-೨

ವಿಷಯ ಸೂಚಿಕೆ

HALF-YEARLY JOURNAL
OF THE
Kannada Literary Academy, Bangalore
KANNADA SAHITYA PARISHAT PATRIKE

Vol : 51 JUNE-DECEMBER 1966 No : 1-2

# ‘ಕವಿರಾಜಮಾರ್ಗ’ದಲ್ಲಿನ ರಾಮಾಯಣ ಪದ್ಯಗಳು

**ಲೇಖಕರು: ಎಂ. ವಿ. ಸೀತಾರಾಮಯ್ಯ**

ದಿವಂಗತ ಆರ್. ನರಸಿಂಹಾಚಾರ್ಯರು ತಮ್ಮ ‘ಕರ್ಣಾಟಕ ಕವಿಚರಿತೆ’ಯ ಪ್ರಥಮ ಸಂಪುಟದಲ್ಲಿ ‘ಕವಿರಾಜಮಾರ್ಗ’ದ ವಿಚಾರವಾಗಿ ಬರೆಯುತ್ತ—“ಈ ಗ್ರಂಥದಲ್ಲಿ ಅನೇಕ ಪದ್ಯಗಳು ಉದಾಹೃತವಾಗಿವೆ. ಇವು ಪ್ರಾಯಶಃ ನೃಪತುಂಗನಿಗೆ ಹಿಂದೆ ಇದ್ದ ಕವಿಗಳ ಗ್ರಂಥಗಳಿಂದ ಉದ್ಧೃತವಾಗಿರಬಹುದು. ಈ ಪದ್ಯಗಳಲ್ಲಿ ರಾಮಾಯಣದ ಕಥೆಗೆ ಸಂಬಂಧಿಸಿದುವು ಕೆಲವಿವೆ. ಇದರಿಂದ ಈಗ ನಮಗೆ ದೊರೆತಿಲ್ಲದ ಅವುದೋ ಒಂದು ರಾಮಾಯಣವು ಆ ಕಾಲದಲ್ಲಿ ಇದ್ದಂತೆ ತೋರುತ್ತದೆ. ಈ ರಾಮಾಯಣದ ಪದ್ಯಗಳು **ನಾಗವರ್ಮನ** (ಸು. ೯೯೦) ಛಂದೋಂಬುಧಿಯಲ್ಲಿಯೂ ಉದಾಹೃತವಾಗಿವೆ”—ಎಂದು ಹೇಳಿ, ‘ಕವಿರಾಜಮಾರ್ಗ’ ಕ್ಕಿಂತ ಹಿಂದೆ ಇದ್ದಿರಬಹುದಾದ ಒಂದು ರಾಮಾಯಣ ಕಥೆಗೆ ನಮ್ಮ ಗಮನವನ್ನು ಸೆಳೆದಿದ್ದಾರೆ.[1] ಇತರ ಕೆಲವು ವಿದ್ವಾಂಸರೂ ಈ ಊಹೆಗೆ ಪುಷ್ಟಿಯನ್ನು ನೀಡಿದ್ದಾರೆ. ವಿಶೇಷವಾಗಿ ಡಾ. ರಂ. ಶ್ರೀ ಮುಗಳಿಯವರು ತಮ್ಮ ‘ಕನ್ನಡ ಸಾಹಿತ್ಯ ಚರಿತ್ರೆ’ಯಲ್ಲಿ ಈ ವಿಷಯವನ್ನು ಸಂಕ್ಷೇಪವಾಗಿಯಾದರೂ ವಿಮರ್ಶಾತ್ಮಕವಾಗಿ ಚರ್ಚಿಸಿ, “ಸಾಮಾನ್ಯವಾಗಿ ಇವನ್ನೆಲ್ಲ ಹಳೆಯ ಒಂದು ರಾಮಾಯಣ ಗ್ರಂಥದಿಂದ ಅವತರಿಸಿಕೊಂಡಿರಬಹುದೆನ್ನಲು ಅಡ್ಡಿಯಿಲ್ಲ” ಎಂಬ ನಿಲುವಿಗೆ ಬಂದಿದ್ದಾರೆ. ಅದರೊಂದಿಗೆಯೆ, “ಬೇರೆ ಕೆಲವು ಸ್ವತಂತ್ರ ಲಕ್ಷ್ಯಪದ್ಯಗಳಾಗಿ ಕವಿರಾಜಮಾರ್ಗಕಾರನು ತಾನೇ ಯಾಕೆ ಅವನ್ನು ಬರೆದಿರಬಾರದು ಎಂದು ಕೇಳಬಹುದು. ಈ ಕೇಳಿಕೆ ಸ್ವಾಭಾವಿಕವಾಗಿದೆ” ಎಂದು ವಿಚಾರ ಪ್ರಚೋದನೆಯನ್ನೂ ಮಾಡಿದ್ದಾರೆ.[2]

ಈ ವಿಷಯದ ವಿಚಾರವನ್ನು ಪುನರ್ವಿಮರ್ಶೆಗೆ ತೆಗೆದುಕೊಳ್ಳುವ ಮುನ್ನ, ಆ ರಾಮಾಯಣದ ಪದ್ಯಗಳನ್ನು ಉದ್ಧರಿಸಿ ಬರೆಯುವುದು ಅಪಕೃತವೆನಿಸದು ; ಮಾತ್ರವಲ್ಲ, ಅತ್ಯಾವಶ್ಯಕ ಅವು ಹೀಗಿವೆ :—

(೧) ಸಕಲಜನವಿನುತನಂ ಶತ |
ಮಖಸದೃಶ ವಿಶಾಲ ವಿವಿಧ ವಿಭವೋದಯನಂ ||
ಪ್ರಗತಗುಣಗಣನನರಿಬಲ |
ವಿಘಟನನಂ ಕಂಡನಣುವನಾ ರಾಘವನಂ ||

(೨) ಶಶಧರಬಿಂಬಾವನೆಯುಂ |
ಝಷಕೇತನಕೇತನಾಭತನು ತನುವಂ ತಾಂ ||
ಬಿಸವಿಶದ ವರ್ಣೆಯುಂ ಕಂ |
ಡೊಸೆದಂ ಬನದೊಳಗೆ ಜನಕತನಯಳನಣುವಂ ||

---

1. ‘ಕರ್ಣಾಟಕ ಕವಿಚರಿತೆ’... ೧೯೨೪ರ ಪ್ರಥಮ ಮುದ್ರಣ, ಪುಟ ೨೦
2. ‘ಕನ್ನಡ ಸಾಹಿತ್ಯ ಚರಿತ್ರೆ’....೧೯೬೦, ಎರಡನೆಯ ಮುದ್ರಣ, ಪುಟ ೨೨

(೩) ಜನವಿನುತನನಘನನುಪಮು |
ನನುನಯಪರನರಸನಿನಿಸು ನೆನೆನೆನೆದು ಮನೋ ||
ಜನಿತಮುದನನಿಲತನಯುನ |
ನನನೃತವಚನಪ್ರಪಂಚನಂತಿರೆ ನುಡಿದಂ ||

(೪) ಪರಮಾನುಭಾವ ಭಾಸುರ |
ಸುರರಾಜೋಪಮಿತ ವಿವಿಧ ವಿಭವೋದಯನಂ ||
ನರಪತಿಯಂ ಕಪಿಪ್ರತನಾ |
ಪರಿವೃತನಂ ಜಲಧಿತಟದೊಳಣುವಂ ಕಂಡಂ ||

(೫) ನರಪತಿಯಂ ಕಪಿಪೃತನಾ |
ಪರಿವೃತಂ ಜಳಧಿತಟದೊಳಣುವಂ ಕಂಡಂ ||
ಪರಮಾನುಭಾವ ಭಾಸುರ
ಸುರರಾಜೋಪಮಿತ ವಿವಿಧ ವಿಭವೋದಯನಂ ||

(೬) ಪರಿದೆಯ್ದಿ ತಾಗಿದಂ ಭಾ |
ಸುರತರ ರಘುಕುಲಲಲಾಮ ಲಕ್ಷ್ಮೀಧರನೊಳ್ ||
ಪರಿಕೋಪವಿಧೃತ ವಿಸ್ಫುರ |
ದುರುರಕ್ತಕಠೋರ ನಯನ ಯು(ಗ) ದಶವದನಂ ||

(೭) ಪರಿದೆಯ್ದಿ ತಾಗಿದಂ ಭಾ !
ಸುರತರ ರಘುಕುಲಲಲಾಮನೊಳ್ ಲಕ್ಷ್ಮಣನೊಳ್ ||
ಪರಿಕೋಪವಶ ಭ್ರಮಣೋ |
ದ್ಧುರರಕ್ತಕಠೋರ ಲೋಚನಂ ದಶವದನಂ ||

(೮) ತಾರಾ ಜಾನಕಿಯಂ ಪೋಗಿ ತಾರಾ ತರಳನೇತ್ರೆಯಂ |
ತಾರಾಧಿಪತಿ ತೇಜಸ್ವಿ ತಾರಾದಿ ವಿಜಯೋದಯಾ ||

(೯) ರಾವಣನಂ ಕೊಂದು ಜಯ |
ಶ್ರೀವಧುವಂ ತಾಳ್ದಿ ಮುಯ್ಪಿನೊಳ್ ವರ ಸೀತಾ ||
ದೇವತೆಯಂ ತರ್ಪನ್ನೆಗ |
ಮೋವದೆ ಪುರುಷವ್ರತೋಚಿತಂ ವೀರರಸಂ ||

(೧೦) ಜಲನಿಧಿಯಂ ಪಾಯ್ದೊರ್ವನೆ |
ನಿಲಿಕಿ ದಶಾನನಪೊಟಿಲನಾಲಂಕೆಯನಾ ||
ಕುಲಮಿಲ್ಲದಿಱಿದು ನಿಂದಂ |
ಕಲಿಯಾಂ ಬಗೆದು ನೋಟ್ಪೊಡದ್ಭುತಮಾದಂ ||

(೧೧) ಕೊಂದು ಜಟಾಯುವನಾತಂ |
ಮುಂದಿಟ್ಟಾ ಜನಕಸುತೆಯನೊಯ್ದಂ ಮತ್ತಾ ||
ಪಂದೆಯನಂತಕ ಮುಖದೊಳ್ |
ತಂದಿಟ್ಟಂದಲ್ಲದುಱುಗುಮೇ ರೌದ್ರರಸಂ ||

ಮೇಲೆ ಉದ್ಧರಿಸಿ ಕೊಟ್ಟಿರುವ ಹನ್ನೊಂದು ಕಂದ ಪದ್ಯಗಳು ಯಾವುದೋ ಒಂದು ರಾಮಾಯಣದಿಂದ ಆಯ್ದವು ಎಂಬ ಊಹೆ ವಿಚಾರಣೀಯ ಎಂದು ಇಟ್ಟುಕೊಂಡರೂ,

ಅವು ರಾಮಾಯಣದ ಕಥೆಗೆ ಸಂಬಂಧಪಟ್ಟವು ಎಂಬ ಅಂಶ ನಿರ್ವಿವಾದಾಸ್ಪದ; ಸ್ವಯಂಸ್ಪಷ್ಟ. ಕಥೆಗೆ ಸಂಬಂಧಪಟ್ಟಂತೆ ಪದ್ಯಗಳ ಸಂಖ್ಯೆ ಹನ್ನೊಂದಾಗಿರದೆ ಒಂಬತ್ತೇ ಎಂದು ತಿಳಿಯಬೇಕು. ಏಕೆಂದರೆ, (ಮೇಲಿನ) ಐದನೆಯ ಪದ್ಯ ನಾಲ್ಕನೆಯದರ, ಏಳನೆಯ ಪದ್ಯ ಆರನೆಯದರ, ಮಾರ್ಪಾಟು ಮಾಡಿದ ಪುನರಾವೃತ್ತಿಗಳು. ಹನುಮಂತನು ರಾಮನನ್ನು ಕಂಡದ್ದು (೧): ಅದೇ ಹನುಮಂತನು ಅಶೋಕ ವನದಲ್ಲಿ ಸೀತೆಯನ್ನು ಕಂಡದ್ದು (೨); ಅನಿಲತನಯನನ್ನು (ಹನುಮಂತನನ್ನು) ಕುರಿತು ಅರಸನು (ರಾಮನು) ನುಡಿದದ್ದು (೩); ಹನುಮಂತನು (ಬಹುಶಃ ಲಂಕೆಯಿಂದ ಹಿಂದಿರುಗಿದ ಮೇಲೆ) ಕಪಿಸೇನಾ ಪರಿವೃತನಾದ ರಾಮನನ್ನು ಪುನಃ ಕಡಲ ತೀರದಲ್ಲಿ ಕಂಡದ್ದು (೪-೫); ಲಕ್ಷ್ಮೀಧರನನ್ನು (ಲಕ್ಷ್ಮಣನನ್ನು) ದಶವದನನು ತಾಗಿದ್ದು (೬-೭); ಜಾನಕಿಯನ್ನು ಕರೆತರಲು ರಾಮನಿಗೆ (?) ಉತ್ತೇಜಕವಾದ ಕರೆ (೮); ಸೀತೆಯನ್ನು ಕರೆತರುವವರೆಗೂ ರಾಮನ ಪುರುಷವ್ರತಧಾರಣ (೯): ಹನುಮಂತನು ಕಡಲನ್ನು ಹಾರಿ ಲಂಕೆಯನ್ನು 'ಇಱಿದು' ನಿಂದುದು (೧೦); ಜಟಾಯುವನ್ನು ಕೊಂದು ಸೀತೆಯನ್ನುಯ್ದ ರಾವಣನನ್ನು ಕೊಲ್ಲುವ ಪ್ರತಿಜ್ಞೆ—ಇವೇ ಮೇಲಿನ ಪದ್ಯಗಳಲ್ಲಿ ಕಂಡುಬರುವ ರಾಮಾಯಣ ಕಥಾಸನ್ನಿವೇಶಗಳು.

ಈ ಮೇಲ್ಕಂಡ ಪದ್ಯಗಳಲ್ಲಿ—ಲಕ್ಷ್ಮಣನನ್ನು **ರಘುಕುಲಲಲಾಮ** ಹಾಗೂ **ಲಕ್ಷ್ಮೀಧರ** ಎಂದು ಸಂಬೋಧಿಸಿರುವುದು; ರಾವಣನೊಂದಿಗೆ ಲಕ್ಷ್ಮಣನು ಕಾದಿದನೆಂಬ ಸಂಗತಿ; ಹನುಮಂತನನ್ನು 'ಅಣುವ' ಎಂದು ಸಂಬೋಧಿಸಿರುವುದು; **'ತಾರಾದಿವಿಜಯೋದಯಾ'** ಎಂಬ ಪ್ರಯೋಗ—ಇವೆಲ್ಲ ಜೈನ ಸಂಪ್ರದಾಯದ ರಾಮಾಯಣಕ್ಕೆ ವಿಶಿಷ್ಟವಾದ ಸಂದರ್ಭಗಳು ಎಂಬ ಪ್ರೊ. ಕೆ. ಜಿ. ಕುಂದಣಗಾರರ ಸೂಚನೆಯನ್ನು ಒಪ್ಪಿಕೊಂಡು, ". . . ಇಂದ್ರನಿಗೆ **ಶತಮುಖ** ಎಂದುದು ವ್ಯುತ್ಪತ್ತಿಯಲ್ಲಿ ಜೈನ ರಾಮಾಯಣಕ್ಕೆ ಸರಿಹೋಗದು. ಇದರಿಂದ ಜೈನ ರಾಮಾಯಣದ ಪರಂಪರೆಯನ್ನು ಅನುಸರಿಸಿಯೂ ಕೆಲಮಟ್ಟಿಗೆ ವಾಲ್ಮೀಕಿ ರಾಮಾಯಣದ ಪ್ರಭಾವಕ್ಕೊಳಗಾದ ಕವಿ ಬರೆದ ಜೈನ ರಾಮಾಯಣವೊಂದು ಇದ್ದಿರಬಹುದೆಂದು ಭಾಸವಾಗುತ್ತದೆ" ಎಂದು ಅಭಿಪ್ರಾಯಪಟ್ಟಿದ್ದಾರೆ ಡಾ|| ಮುಗಳಿಯವರು.[3]

ಮೇಲ್ಕಂಡ ಪದ್ಯಗಳ ಹಲಕೆಲವು ವಿವರಗಳು ಜೈನ ಪರಂಪರೆಯ ರಾಮಾಯಣಕ್ಕೆ ಅನುಗುಣವಾಗಿವೆ ಎಂಬಲ್ಲಿ ಸಂದೇಹವಿಲ್ಲ. ಆದರೆ, ಈ ಪದ್ಯಗಳನ್ನು ಕವಿರಾಜ ಮಾರ್ಗಕಾರನು ತನ್ನ ಕಾಲದ ಅಥವಾ ತನಗಿಂತ ಹಿಂದಿನ ಜೈನರಾಮಾಯಣವೊಂದರಿಂದ ತೆಗೆದುಕೊಂಡಿರುವನೆ ಅಥವಾ ಅವುಗಳನ್ನು ತಾನೆ ರಚಿಸಿರುವನೇ ಎಂಬುದೀಗ ವಿಚಾರ ಮಾಡಬೇಕಾದ ವಿಷಯ.

" ರಾಮಾಯಣಕ್ಕೆ ಸಂಬಂಧಪಟ್ಟ ಅನೇಕ ಲಕ್ಷ್ಯಪದ್ಯಗಳಲ್ಲಿ ಸಂಸ್ಕೃತ ಸಮಾಸ ಪ್ರಚುರವಾದ ಶೈಲಿಯ ಏಕರೂಪತೆಯಿದೆ, ಕವಿರಾಜಮಾರ್ಗದ ಶೈಲಿಗಿಂತ ಈ ಶೈಲಿ ಭಿನ್ನವಾಗಿ ತೋರು

---

3. ಅದೇ: ಪುಟ ೨೨.

ಹನುಮಂತನಿಗೆ 'ಅನಿಲತನಯ' ಎಂದು ಪ್ರಯೋಗಿಸಿರುವುದನ್ನೂ ಗಮನಿಸಬಹುದು. ಇಷ್ಟರಿಂದಲೇ ವಾಲ್ಮೀಕಿ ರಾಮಾಯಣದ ಪ್ರಭಾವವನ್ನು ಗುರುತಿಸಬಹುದೆ? ಈ ಪದಗಳನ್ನು ಅನ್ವರ್ಥಕವಾಗಿ ಗ್ರಹಿಸದೆ, ಬಳಕೆಯ ಪರ್ಯಾಯ ಪದಗಳೆಂದು ಮಾತ್ರ ಸ್ವೀಕರಿಸಬಾರದೇಕೆ? ಇಂಥ ಪದ ಪ್ರಯೋಗಗಳು ಜೈನ ಕಾವ್ಯಗಳಲ್ಲಿ ದೊರಕುತ್ತವೆ.

ತ್ತದೆ. ಗ್ರಂಥದ ಮಧ್ಯಭಾಗದಿಂದ ಎತ್ತಿಕೊಂಡ ಪದ್ಯಗಳ ಸ್ವರೂಪವೂ ಕೆಲವಕ್ಕೆ ಇವೆ . . . ಆದರೆ ೩ನೆಯ ಪರಿಚ್ಛೇದದಲ್ಲಿ ಮೂರು ಪದ್ಯಗಳು ಮಾತ್ರ ಅಲ್ಲಿಯಷ್ಟು ಸಂಸ್ಕೃತಪ್ರಚುರ ವಾಗಿಲ್ಲ; ವೀರ ಅದ್ಭುತ ರೌದ್ರ ರಸಗಳ ಉದಾಹರಣೆಗೆಂದು ಕವಿರಾಜ ಮಾರ್ಗಕಾರನು ಉದ್ದೇಶಪೂರ್ವಕವಾಗಿ ರಚಿಸಿದಂತಿದೆ" ಎಂಬುದು ಡಾ|| ಮುಗಳಿಯವರ ವಾದ.[4] ಇವರ ಮಾತನ್ನು ಬಿಡಿಸಿ ಹೇಳಿದರೆ, ಕವಿರಾಜ ಮಾರ್ಗದಲ್ಲಿ ಇಬ್ಬರು ಭಿನ್ನ ಕವಿಗಳಿಂದ ರಚಿತವಾದ ರಾಮಾಯಣ ಪದ್ಯಗಳು ಕಂಡುಬರುತ್ತವೆ ಎನ್ನಬೇಕಾಗುತ್ತದೆ.

ಶೈಲಿಯ ಆಧಾರದ ಮೇಲೆ ಗ್ರಂಥಕರ್ತೃತ್ವವನ್ನು ನಿರ್ಣಯಿಸಬಹುದಾದ ಸಾಧ್ಯತೆಯಿದೆ ಯಾದರೂ, ಅದು ಅಷ್ಟು ಪ್ರಬಲವಾದ ಪ್ರಮಾಣವಾಗಲಾರದು. ಒಬ್ಬನೇ ಕವಿ ಬೇರೆ ಬೇರೆ ಕಾಲಗಳಲ್ಲಿ ಅಥವಾ ಬೇರೆ ಬೇರೆ ಉದ್ದೇಶಗಳಿಗಾಗಿ ವಿಭಿನ್ನ ಶೈಲಿಗಳನ್ನು ಬಳಸುವ ಸಂಭವ ವುಂಟು. ಕನ್ನಡದ ಪ್ರಾಚುರ್ಯ ಹೆಚ್ಚಾಗಿರುವ 'ವಿಕ್ರಮಾರ್ಜುನ ವಿಜಯ' ದಿಂದಲೂ ಕುಮಾರ ಭಾರತದಿಂದಲೂ ಬೇರೆಯ ಕವಿಗಳಿಂದಲೂ ಇದಕ್ಕೆ ಅನೇಕ ದೃಷ್ಟಾಂತಗಳನ್ನು ಕೊಡಬಹುದು. ವ್ಯಾಸ ಅಷ್ಟೇಕೆ? 'ಕವಿರಾಜಮಾರ್ಗ' ದಲ್ಲಿಯೆ ಸಂಸ್ಕೃತಪದಭೂಯಿಷ್ಠಗಳಾದ ಅನೇಕ ಪದ್ಯಗಳು ದೊರೆಯುತ್ತವೆ. (ಉದಾ: I-೨೦, ೨೨; III-೨೧೦, ೨೧೭, ೨೩೦, ೨೩೭). ಆದ್ದರಿಂದ, ಸಂಸ್ಕೃತ ಪದ ಪ್ರಚುರ ಶೈಲಿಯನ್ನು ಆಧಾರವಾಗಿಟ್ಟುಕೊಂಡು, ಈ ರಾಮಾಯಣ ಪದ್ಯಗಳನ್ನು ಬೇರೊಂದು ರಾಮಾಯಣ ಗ್ರಂಥದಿಂದ ಕವಿರಾಜಮಾರ್ಗಕಾರನು ಆಯ್ದು ಕೊಟ್ಟಿದ್ದಾನೆ ಎಂದು ತೀರ್ಮಾನಿಸುವುದು ಅಷ್ಟು ಸಾಧುವಾಗದು.

ಮೇಲ್ಕಂಡ ಲಕ್ಷ್ಯಪದ್ಯಗಳೆಲ್ಲವನ್ನೂ ಕವಿರಾಜಮಾರ್ಗಕಾರನೇ ಉದ್ದೇಶಪೂರ್ವಕವಾಗಿ ತಾನೇ ರಚಿಸಿ ಲಕ್ಷ್ಯಪದ್ಯಗಳಾಗಿ ಅಳವಡಿಸಿದ್ದಾನೆ ಎಂಬ ಅಂಶವು ಆ ಪದ್ಯಗಳ ಸ್ವರೂಪವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ವ್ಯಕ್ತವಾಗದಿರದು. ಅಂತಹ ಒಂದು ಪರಿಶೀಲನೆಯ ಪ್ರಯತ್ನ ವನ್ನು ಈ ಮುಂದೆ ನಡಸಲಾಗಿದೆ:—

(೧) ೩ನೆಯ ಪರಿಚ್ಛೇದದಲ್ಲಿ ಆಕ್ಷೇಪಾಲಂಕಾರದ ಲಕ್ಷಣವನ್ನು ತಿಳಿಸುವ ಪದ್ಯ (III-೧೦೦) ಇಂತಿದೆ:—

ವಿದಿತಾರ್ಥ ವಿಪರ್ಯಾಸಾ|
ಸ್ಪದಮೆ ದಲಾಕ್ಷೇಪಮೆಂಬಲಂಕಾರಂ ಮ||
ತ್ತದರ ವಿಶೇಷ ವಿಭಾಗಮು|
ನುದಾಹರಣಮಾರ್ಗದಿಂ ಪ್ರಯೋಗಿಸಿ ತೋರ್ಪೆಂ||

ಇಲ್ಲಿ ಸ್ಪಷ್ಟವಾಗಿ ಹೇಳಿರುವ "ಉದಾಹರಣ ಮಾರ್ಗದಿಂ ಪ್ರಯೋಗಿಸಿ ತೋರ್ಪೆಂ" ಎಂಬ ಕವಿರಾಜಮಾರ್ಗಕಾರನ ಉಕ್ತಿ ಸಾಮಾನ್ಯವಾಗಿ ಗ್ರಂಥದ ಎಲ್ಲ ಲಕ್ಷ್ಯಪದ್ಯಗಳಿಗೂ ಅನ್ವಯಿಸುತ್ತದೆ ಎಂದು ಹೇಳಬಹುದು. ಇದೇ ರೀತಿಯ ಇನ್ನೂ ಹಲವು ಉಕ್ತಿಗಳು ಗ್ರಂಥ ದಲ್ಲಿ ದೊರಕುತ್ತವೆ. ಉದಾ:—'ಪೇಟ್ವೆನುದಾಹರಣಂಗಳಂ' I-೧೩೧; 'ಕ್ರಮದಿನಱಪುವೆಂ ತದ್ಭವದೊಳ್'. II-೫೫; 'ತೋರ್ಪೆನದಱ ಲಕ್ಷ್ಯಕ್ರಮಮುಮಂ', III-೧೮೦; ಇತ್ಯಾದಿ.) ಇಂಥ ಉಕ್ತಿಗಳ ಉತ್ತಮ ಪುರುಷವಾಚಕವು ಗಮನಾರ್ಹ. ಆದ್ದರಿಂದ ರಾಮಾಯಣ ಪದ್ಯ ಗಳೂ ಕವಿರಾಜಮಾರ್ಗಕಾರಕೃತ ಎಂದು ಅನುಮಾನಿಸಲು ಅವಕಾಶವಿದೆ.

---

4. ಅದೇ: ಪುಟ ೨೨.

(೨) ಲಕ್ಷಣಕ್ಕೆ ಲಕ್ಷ್ಯಗಳನ್ನು ಕೊಡುವ ಅನೇಕ ಸಂದರ್ಭಗಳಲ್ಲಿ ದೋಷಪೂರ್ಣವಾದ ಲಕ್ಷ್ಯವನ್ನು ಮೊದಲು ಕೊಟ್ಟು ಅವೇ ಲಕ್ಷ್ಯದ ಪರಿಷ್ಕೃತವಾದ ದೋಷರಹಿತ ರೂಪವನ್ನು ತರುವಾಯ ಕೊಡುವುದು ಕವಿರಾಜಮಾರ್ಗಕಾರನ ಪರಿಪಾಠ. ಗ್ರಂಥದಲ್ಲಿ ಕೆಲವೆಡೆ ಇಂತಹ 'ಲಕ್ಷ್ಯಯುಗ್ಮ' ಗಳು ದೊರಕುತ್ತವೆ. ೮೮ : ೮೯, ೧೩೯ : ೧೪೦, ೧೪೧, ೧೪೨; II-೭ : ೮, ೧೦ : ೧೨, ೧೭ : ೧೮, ೨೧ : ೨೨; III-೧೩, ೧೪, ೫೦-೫೧; ಇತ್ಯಾದಿ.

ಒಂದು ಪ್ರಸಿದ್ಧ ಪದ್ಯವನ್ನು[5] ದೃಷ್ಟಾಂತವಾಗಿ ಉಲ್ಲೇಖಿಸಬಹುದು:—

" ಅರಿಸಮಾಸದ ದೋಷಕ್ಕೆ ಲಕ್ಷ್ಯ :
ಅರಸುಕುಮಾರನ ನಾಯತ |
ತರಳಕಡೆಗಣ್ಣಿಂ(ದೆ ನೋಡಿ) ಕೆಳದಿ ಸಮೇತಂ ||
ಪರಿಗತನಗೆಯಿಂದಿರ್ದ್ದಂ |
ಗುರುನಾಣ್ಭರದಿಂದಮೆಱಗಿ ಮುಖ(ದಾ)ವರೆಯುಂ ||

ಅರಿಸಮಾಸ ನಿರ್ದೋಷಕ್ಕೆ ಲಕ್ಷ್ಯ :
ನರಪತಿತನಯನನಾಯತ |
ತರಳಾಪಾಂಗದೊಳೆ ನೋಡಿ ಕೆಳದಿಯರೊಡನಾಂ |
ಪರಿಗತ ಹಾಸ್ಯದೊಳಿರ್ದ್ದಂ |
ಗುರುಲಜ್ಜಾಭರದಿನೆಱಗಿ ಮುಖಸರಸಿಜಮುಂ ||"

ಇಂಥಲ್ಲಿ ಅನುಸರಿಸಿರುವ ಕ್ರಮವೆ ರಾಮಾಯಣ ಪದ್ಯಗಳ (ಮೇಲಿನ ೪-೫, ೬-೭ ಪದ್ಯಗಳ) ಸಂಬಂಧವಾಗಿಯೂ ಅನುಸರಿಸಿರುವುದು ಕಂಡುಬರುತ್ತದೆ. ಪ್ರಸ್ತುತ ಲಕ್ಷ್ಯಯುಗಳಗಳಲ್ಲಿ —೪ನೆಯದು (II-೮೯) ಓಜೋಗುಣಕ್ಕೆ ವಿರುದ್ಧಲಕ್ಷ್ಯ; ೫ನೆಯದು (II-೯೦) ಸರಿಯಾದ, ತಿದ್ದುಪಡಿಯಾದ ಲಕ್ಷ್ಯ. ಈ ಉದಾಹರಣೆಯಲ್ಲಿ, ಪದ್ಯದ ಪೂರ್ವಾರ್ಧ ಉತ್ತರಾರ್ಧಗಳ ಸ್ಥಳಪಲ್ಲಟವಾಗಿದೆಯೆ ಹೊರತು ಭಾಷೆಯ ತಿದ್ದುಪಾಟು ಯಾವುದೂ ಇಲ್ಲ. ವಿಶೇಷಣ ವಿಶೇಷ್ಯಗಳನ್ನು ಸಮಸ್ತಪದವಾಗಿ ಪ್ರಯೋಗಿಸಕೂಡದೆಂಬುದಕ್ಕೆ ೬ನೆಯ ಪದ್ಯ (II-೯೩) ಲಕ್ಷ್ಯ; ೭ನೆಯದು ಅದರ ಸರಿಯಾದ, ಪರಿಷ್ಕೃತ ರೂಪ. ಈ ಉದಾಹರಣೆಯಲ್ಲಿ, ಪದ ಪ್ರಯೋಗದಲ್ಲಿ ಗಣನೀಯವಾದ ತಿದ್ದುಪಾಟುಗಳು ಆಗಿವೆ. ಹೀಗೆ, ರಾಮಾಯಣ ಪದ್ಯ ಗುಚ್ಛದಲ್ಲಿ ಎರಡು ವರ್ಗದ ಪದ್ಯಗಳಿವೆ: ತಿದ್ದುಪಾಟಾದ ಎರಡು (ಎಂದರೆ ಒಟ್ಟಿನಲ್ಲಿ ನಾಲ್ಕು) ಪದ್ಯಗಳು; ಉಳಿದ, ತಿದ್ದುಪಾಟಾಗದ ಐದು ಪದ್ಯಗಳು ಎರಡೂ ವರ್ಗಗಳ ಈ ಪದ್ಯಗಳು ಕವಿರಾಜಮಾರ್ಗಕಾರ ಕೃತವೆ, ಇಲ್ಲವೆ ಅನ್ಯ 'ಪುರಾಣಕವಿ' ಕೃತವೆ? ಇದೇ ನಮ್ಮ ಮುಂದಿರುವ ಪ್ರಶ್ನೆ— ಪರಿಹರಿಸಬೇಕಾದ ಪ್ರಶ್ನೆ.

(೩) " ಕವಿರಾಜಮಾರ್ಗವು ಪುರಾಣಕವಿ ಪ್ರಭುಗಳ ಪ್ರಯೋಗಗಳನ್ನು ಬಗೆದು ನೋಡಿ ಸಮೆದ ಒಂದು ಕಾವ್ಯವೆಂದು ೨ನೆಯ ಪರಿಚ್ಛೇದದ ಕೊನೆಯ ಪದ್ಯದಲ್ಲಿ ಹೇಳಿದ ಕಾರಣ ಅವನ್ನು ಇದರಲ್ಲಿ ಬಳಸಲಾಗಿದೆ ಎಂಬ ಸಂಶಯಕ್ಕೆ ಆಸ್ಪದವಿಲ್ಲ."[6] ಇದು ಡಾ|| ಮುಗಳಿಯವರ ಸ್ಪಷ್ಟವಾದ ನಿಲುವು. ೨ನೆಯ ಪರಿಚ್ಛೇದದ ಆ ಕೊನೆಯ ಪದ್ಯ ಹೀಗಿದೆ:—

5. ಈ ಪದ್ಯವನ್ನು ಕೇಶಿರಾಜನು ತನ್ನ 'ಶಬ್ದಮಣಿದರ್ಪಣ'ದಲ್ಲಿ ಉದಾಹರಿಸಿದ್ದಾನೆ. ಈ ಪದ್ಯಯುಗ್ಮದಿಂದ ಕವಿರಾಜಮಾರ್ಗಕಾರನ ಪದ್ಯರಚನಾಸಾಮರ್ಥ್ಯದ ಹಿರಿಮೆಯನ್ನು ಅರಿಯಬಹುದು.

6. ಅದೇ: ಪುಟ ೨೩.

"ಭಾವಿಸಿ ಶಬ್ದತತ್ವಸಮಯಸ್ಥಿತಿಯಂ, ಕುಱುಕೊಂಡಶೇಷಭಾ |
ಷಾವಿಷಯೋಕ್ತಿಯಂ, ಬಗೆದುನೋಡಿ ಪುರಾಣಕವಿ ಪ್ರಭುಪ್ರಯೋ |
ಗಾವಿಲ ಸದ್ಗುಣೋದಯಂ, ಆಯ್ದು ಪಜಿಂ ಸಮೆದೊಂದು ಕಾವ್ಯದಿಂ |
ಶ್ರೀವಿಜಯಪ್ರಭೂತಮಿದಮಂ ತನಗಾಗಿಸಿದೊಂ ಕವೀಶ್ವರಂ ||"

"ಬಗೆದುನೋಡಿ ಪುರಾಣಕವಿಪ್ರಭು ಪ್ರಯೋಗಾವಿಲ ಸದ್ಗುಣೋದಯಮಂ" ಎಂಬ ಉಕ್ತಿಗೆ- ಕವಿರಾಜಮಾರ್ಗಕಾರನು ತನ್ನ ಗ್ರಂಥರಚನೆಯಲ್ಲಿ ಪುರಾಣ **ಕವಿ ಪ್ರಭುಪ್ರಯೋಗಗಳ ಸದ್ಗುಣೋದಯವನ್ನು** ಬಗೆದು ನೋಡಿ ಅಂಗೀಕರಿಸಿದ್ದಾನೆಂದು ಅರ್ಥವಾದೀತೆ ಹೊರತು, ಅವನು ಆ ಕವಿಗಳ **ಪ್ರಯೋಗಗಳನ್ನು** ಲಕ್ಷ್ಯಪದ್ಯಗಳಾಗಿ ಆಯ್ದುಕೊಂಡಿದ್ದಾನೆ ಎಂದಾಗುವುದಿಲ್ಲ; ಇದು ನಮ್ಮ ಗ್ರಹಿಕೆ.[7] ಹಾಗೆ ಆಯ್ದುಕೊಂಡಿದ್ದುದಾದರೆ, 'ಕವಿಪ್ರಭು' ಎಂದು ತನ್ನ ಮನ್ನಣೆಗೆ ಪಾತ್ರರಾದ ಆ ಕವಿಗಳ ರಚನೆಗಳನ್ನು ತಿದ್ದಿತೋರಿಸುವ ಧಾರ್ಷ್ಟ್ಯಕ್ಕೆ ಅವನು ಕೈಹಾಕುತ್ತಿದ್ದನೆ? 'ಕವಿಪ್ರಭು' ಎನ್ನಿಸಿಕೊಂಡವರು ಅಂಥ ದೋಷಪೂರ್ಣ ಪದ್ಯಗಳ ರಚನೆ ಮಾಡುತ್ತಿದ್ದರೆ? ಒಂದುವೇಳೆ ಅವು ದೋಷಪೂರ್ಣವಾಗಿಯೆ ಇದ್ದಿದ್ದುವಾದರೆ, ಅವುಗಳ (ರಾಮಾಯಣ ಪದ್ಯಗಳ ಹಾಗೂ ಇನ್ನಿತರ ಪ್ರಯೋಗಗಳ) ಕರ್ತೃಗಳನ್ನು 'ಪುರಾಣ ಕವಿಪ್ರಭು' ವರ್ಗದಲ್ಲಿ ಸೇರಿಸಿ ಗೌರವ ತೋರಿಸುವ ಅಕಾರ್ಯವನ್ನು ಕವಿರಾಜಮಾರ್ಗಕಾರನು ಮಾಡುತ್ತಿದ್ದನೆ? ಈ ಪ್ರಶ್ನೆಗಳನ್ನು ಎದುರಿಸುವಾಗ, ಯಾರಿಗೇ ಆಗಲಿ ಹೊಳೆಯಬಹುದಾದ ಉತ್ತರವಿದು: ಕವಿರಾಜಮಾರ್ಗಕಾರನು ಲಕ್ಷಣ ನಿದರ್ಶನಕ್ಕಾಗಿ ದೋಷಯುಕ್ತ ಲಕ್ಷ್ಯಗಳನ್ನು ತಾನೇ ರಚಿಸಿ ಅವುಗಳ ಪರಿಷ್ಕೃತ ರೂಪವನ್ನೂ ತಾನೇ ರಚಿಸಿದ್ದಾನೆನ್ನುವುದು ಯುಕ್ತಿ

---

7. ದಿವಂಗತ ಮುಳಿಯ ತಿಮ್ಮಪ್ಪಯ್ಯನವರು ತಮ್ಮ 'ಕವಿರಾಜಮಾರ್ಗ ವಿವೇಕ' (ಭಾಗ ೧) ಎಂಬ ಗ್ರಂಥದಲ್ಲಿ ಈ ಪದ್ಯದ ತಾತ್ಪರ್ಯವನ್ನು ಹೀಗೆ ಗ್ರಹಿಸಿದ್ದಾರೆ: "ದ್ವಿತೀಯ ಪರಿಚ್ಛೇದಾಂತ್ಯದಲ್ಲಿ ಆ 'ಕವಿಪ್ರಕರ'ದೊಳಗೆ ವಿಶಿಷ್ಟವಾದ ಆಗಿನ ಕಾಲದ ಯಾರೋ ಒಬ್ಬ ಕವೀಶ್ವರನು, ಈ ಶ್ರೀವಿಜಯ ಗ್ರಂಥದಿಂದೊದಗಿದ ಆನಂದವನ್ನು ಸ್ವೀಕರಿಸಿದನು ಎಂಬ ಅಂಶವನ್ನು "ಶ್ರೀವಿಜಯ ಪ್ರಭೂತ ಮಿದಮಂ ತನಗಾಗಿಸಿದೊಂ ಕವೀಶ್ವರಂ" ಎಂದು ಸಾರಿದ್ದಾನೆ. ಬಹುಶಃ ನೃಪತುಂಗನ ಮಹಾಸಭೆಯೊಳಗಿನ ಕವೀಶ್ವರನೊಬ್ಬನು ಈ ಲಕ್ಷಣಗ್ರಂಥದಿಂದ ವಿಶೇಷವಾಗಿ ಆನಂದಗೊಂಡು ತದನುಸಾರವಾಗಿ ಒಂದು ಕಾವ್ಯವನ್ನು ಬರೆದಿರಬೇಕು. ಪ್ರಥಮ ಪರಿಚ್ಛೇದಾಂತ್ಯದಲ್ಲಿ ಗ್ರಂಥಕಾರನು ತಾನೆಸಗಿದ ಪ್ರಾರ್ಥನೆ ಸಫಲವಾಗಲಾರಂಭಿಸಿತು ಎಂಬುದನ್ನೆ ದ್ವಿತೀಯ ಪರಿಚ್ಛೇದಾಂತ್ಯದಲ್ಲಿ ಈ ರೀತಿಯಲ್ಲಿ ಸೂಚಿಸಿರಲೂಬಹುದು."

ಈ ಪದ್ಯದಲ್ಲಿ 'ಕವೀಶ್ವರಂ' ಎಂಬುದು ಕರ್ತೃಪದ; ಇದಕ್ಕೆ ಅನ್ವಯವಾಗುವ ಕ್ರಿಯಾ ಸೂಚಕ ಪದಗಳೆಂದರೆ 'ಭಾವಿಸಿ', 'ಕುಱುಕೊಂಡು', 'ಬಗೆದು ನೋಡಿ' ಇವು; ಇವೆಲ್ಲ ಭೂತ ಕೃದಂತಗಳು. ಮುಖ್ಯ ಕ್ರಿಯೆಯನ್ನು ಸೂಚಿಸುವ ಪದವೆಂದರೆ, 'ತನಗಾಗಿಸಿದೊಂ' (=ತನಗಾಗಿಸಿದವನು); ಇದರ ಕರ್ಮಪದ, 'ಶ್ರೀವಿಜಯ ಪ್ರಭೂತಮಿದಂ' (= ಶ್ರೀವಿಜಯ ರಚಿತ ಕವಿರಾಜಮಾರ್ಗದಿಂದ ದೊರಕುವ ಸಂತೋಷವನ್ನು). 'ಇಂಥ ಒಂದು ಸಂತೋಷವನ್ನು ತನಗೆ ಒದಗಿಸುವವನೆ ಕವೀಶ್ವರ ಎಂದರೆ ಕವಿಶ್ರೇಷ್ಠ' ಎಂದು ಕವಿರಾಜಮಾರ್ಗಕಾರನು ಕರೆ (challenge) ಕೊಟ್ಟಿದ್ದಾನೆ. (ಹೀಗೆ ಅರ್ಥಮಾಡುವುದೇ ಸಾಧುವಾಗಿ ಕಾಣುತ್ತದೆ. ಆ ಸಂದರ್ಭದಲ್ಲಿ, 'ಕವೀಶ್ವರ' ಎಂಬುದು ಅಂಕಿತನಾಮವಾಗದು; ಕವಿರಾಜಮಾರ್ಗವು ಕವೀಶ್ವರಕೃತ ಎಂಬ ವಾದಕ್ಕೆ ಅವಕಾಶವೆ ಇರುವುದಿಲ್ಲ. ಮಾತ್ರವಲ್ಲ, ಮೇಲೆ ಶ್ರೀವಿಜಯ ಪರವಾಗಿ ಅರ್ಥಮಾಡಲೂ ಅವಕಾಶವಿರುವುದಿಲ್ಲ.

ಯುಕ್ತವಾಗಿಯೂ ಸಹಜವಾಗಿಯೂ ತೋರುತ್ತದೆ; ‘ಪುರಾಣ ಕವಿಪ್ರಭು’ ಗಳ ಪ್ರಯೋಗಗಳನ್ನು ತಿದ್ದುವ ಉದ್ದೇಶವನ್ನೇ ಅವನು ಹೊಂದಿರಲಾರ. ತಿದ್ದಿರುವ ರಾಮಾಯಣ ಪದ್ಯಗಳು ಅವನವು ಎಂದಾದಮೇಲೆ, ಉಳಿದವೂ ಅವನವೇ ಆಗಿರುವ ಸಂಭವ ಹೆಚ್ಚು.

(೪) ಎಲ್ಲ ರಾಮಾಯಣ ಲಕ್ಷ್ಯಪದ್ಯಗಳೂ ಕವಿರಾಜಮಾರ್ಗಕಾರನವೇ ಎಂದು ಇಟ್ಟುಕೊಳ್ಳೋಣ. ಆ ಪದ್ಯಗಳೆಲ್ಲವನ್ನೂ ತಾನೇ ರಚಿಸಿದ್ದಿರಬಹುದಾದ ರಾಮಾಯಣವೊಂದರಿಂದ ಅವನು ಆಯ್ದುಕೊಂಡಿರಬಹುದೆ? ಇದೂ ವಿಚಾರಮಾಡತಕ್ಕ ಪ್ರಶ್ನೆಯೆ. ಈ ಪದ್ಯಗಳ ಆನುಪೂರ್ವಿಯನ್ನು ಗಮನಿಸಿದರೆ, ಬಹುತೇಕ ಎಲ್ಲವೂ ವಾಲ್ಮೀಕಿ ರಾಮಾಯಣದ ಸುಂದರ ಕಾಂಡದ ಕಥಾಭಾಗಕ್ಕೆ (ಅಥವಾ ಅದಕ್ಕೆ ಸಂವಾದಿಯಾದ ಜೈನ ರಾಮಾಯಣ ಕಥಾಭಾಗಕ್ಕೆ) ಸಂಬಂಧಪಟ್ಟುವಾಗಿದ್ದು, ಒಂದಕ್ಕೊಂದು ಹೊಂದಿಕೊಂಡಿವೆ. (ಅನುಪೂರ್ವಿಯಲ್ಲಿ ೩ನೆಯ ಪದ್ಯದ ಹೊಂದಿಕೆ ಮಾತ್ರ ಸ್ಪಷ್ಟವಾಗುವುದಿಲ್ಲ. ೬-೭ನೆಯವು ಯುದ್ಧಕಾಂಡದ ಕಥೆಗೆ ಸಂಬಂಧಿಸಿವೆ) ಒಂದು ರಾಮಾಯಣ ಕಾವ್ಯದಿಂದಲೇ ಈ ಪದ್ಯಗಳನ್ನು ಉದ್ಧರಿಸಿದ್ದ ಪಕ್ಷದಲ್ಲಿ, ಇಲ್ಲಿರುವಂತೆ ಕೇವಲ ಕೆಲವೇ ಪದ್ಯಗಳ ಪರಿಮಿತ ವ್ಯಾಪ್ತಿಯಲ್ಲಿ ವಿಸ್ತಾರ ನಿರೂಪಣಾಶಕ್ಯವಾದ ಘಟನೆಯೊಂದು ವರ್ಣಿತವಾಗಿರುತ್ತಿರಲಿಲ್ಲ. ಆದ್ದರಿಂದ, ಕವಿರಾಜಮಾರ್ಗಕಾರನೇ ಆದರೂ ಪ್ರಕೃತ ಪದ್ಯಗಳನ್ನೊಳಗೊಂಡ ಒಂದು ರಾಮಾಯಣವನ್ನು-ಅದು ಜೈನ ಸಂಪ್ರದಾಯದ್ದೇ ಆಗಿರಲಿ-ರಚಿಸಿರುವ ಸಂಭವವೂ ಕಡಮೆಯೆ. ಅವನು ಒಂದು ಅತಿ ಸಂಗ್ರಹವಾದ ರಾಮಾಯಣವನ್ನು ರಚಿಸಿದ್ದಿರಬಹುದಲ್ಲ? ಈ ಸಂಭವವೂ ಕಡಮೆಯೆ. ಏಕೆಂದರೆ, ಕಾವ್ಯಲಕ್ಷಣ ಬಲ್ಲವನು ದೋಷಪೂರ್ಣ ಪದ್ಯಗಳನ್ನೇಕೆ ರಚಿಸುತ್ತಾನೆ? ಅಥವಾ, ಲಕ್ಷಣ ನಿರೂಪಣಕ್ಕಾಗಿ ತನ್ನ ಕಾವ್ಯದ ಸುಷ್ಠುವಾದ ಪದ್ಯಗಳನ್ನು ದೋಷಪೂರ್ಣವಾಗಿ ಮಾಡುವ ಹಾಸ್ಯಾಸ್ಪದ ಕಾರ್ಯಕ್ಕೆ ಅವನ ಮನಸ್ಸು ಒಡಂಬಟ್ಟೀತೆ? ಹೀಗಿರುವುದರಿಂದ, ರಾಮಾಯಣ ಪದ್ಯಗಳೆಲ್ಲವನ್ನೂ ಕವಿರಾಜಮಾರ್ಗಕಾರನು ಸಂದರ್ಭೋಚಿತವಾಗಿ–ಅರ್ಥಪ್ರತೀತಿಗೋಸ್ಕರ ಪ್ರಸಿದ್ಧ ಕಥೆಯೊಂದರ ಮುಖ್ಯ ಘಟನೆಗಳಿಗೆ ಸಂಬಂಧಪಟ್ಟಂತೆ-ಲಕ್ಷ್ಯಗಳಾಗಿ ತಾನೇ ರಚಿಸಿಕೊಂಡಿದ್ದಾನೆ ಎಂದು ತಿಳಿಯುವುದು ಸಾಧುವಾಗಿ ಕಾಣುತ್ತದೆ.

(೫) ಮೇಲ್ಕಂಡ ಪದ್ಯಗಳಲ್ಲಿ–೧ನೆಯದು ವರ್ಗಪ್ರಾಸಕ್ಕೂ, ೨ನೆಯದು ಸಮೀಪ ಪ್ರಾಸಕ್ಕೂ, ೩ನೆಯದು ಅನುಗತ ಪ್ರಾಸಕ್ಕೂ ಲಕ್ಷ್ಯಗಳು. ಒಂದು ಕಾವ್ಯದ ಒಂದು ಘಟನೆಯ ಅಲ್ಪಪರಿಮಿತಿಯಲ್ಲಿ ಒಬ್ಬ ಕವಿ ಇಂಥ ಚಮತ್ಕಾರಪೂರ್ಣ ಶಬ್ದಾಲಂಕಾರ ಪ್ರಯೋಗದಲ್ಲಿ ತೊಡಗುತ್ತಾನೆಂಬುದು ಅಷ್ಟಾಗಿ ವಿಶ್ವಸನೀಯವಾಗಿ ಕಾಣುವುದಿಲ್ಲ. ಕವಿರಾಜಮಾರ್ಗಕಾರನು ಲಕ್ಷಣಜ್ಞ ಮಾತ್ರನಲ್ಲದೆ ಶ್ಲಾಘನೀಯ ಕವಿತಾಸಾಮರ್ಥ್ಯವುಳ್ಳವನೆಂಬುದಕ್ಕೆ ಹಲವು ನಿದರ್ಶನಗಳನ್ನು ಕೊಡಬಹುದು. ಆದ್ದರಿಂದ, ಈ ಬಗೆಯ ಕೃತಕ ಪದ್ಯರಚನೆ ಲಕ್ಷ್ಯಪದ್ಯೋದಾಹರಣಕ್ಕೆಂದೇ ವಿನಿಯೋಗವಾಗಿದೆಯೆಂದರೆ ವಿಶ್ವಸನೀಯವಾಗಿ ಕಾಣುತ್ತದೆ.

(೬) ಮೊದಲ ಮೂರು ಪದ್ಯಗಳನ್ನು ಬಿಟ್ಟರೂ, ಇನ್ನುಳಿದ ಯಾವ ಪದ್ಯದಲ್ಲಿಯೂ ಸ್ವತಂತ್ರ ಕಾವ್ಯವೊಂದರಿಂದ ಎತ್ತಿಕೊಂಡ ಪದ್ಯಗಳಲ್ಲಿ ಕಂಡುಬರಬೇಕಾದ ಕಾವ್ಯಗುಣವು ಕಂಡುಬರುವುದಿಲ್ಲ; ಇವು ಲಕ್ಷಣ ನಿರೂಪಣಕ್ಕೆಂದೇ ರಚಿತವಾದ ಲಕ್ಷ್ಯಪದ್ಯಗಳೆಂಬುದು ಸ್ವಯಂಸ್ಪಷ್ಟ-ಭಕ್ತಿಯಿಲ್ಲದ ಬಾಹ್ಯಾಡಂಬರದ ಪೂಜೆಯಂತೆ.

(೭) ೯ರಿಂದ ೧೧ರ ವರೆಗಿನ ಮೂರು ಪದ್ಯಗಳು ವೀರರಸ, ಅದ್ಭುತ ರಸ, ರೌದ್ರ ರಸ-ಇವಕ್ಕೆ ಲಕ್ಷ್ಯಗಳು. ಈ ಪದ್ಯಗಳು ಸ್ವತಂತ್ರವಾದ-ತನಿಯಾದ-ಕಾವ್ಯದ ಪದ್ಯಗಳಾಗಿದ್ದಿದ್ದರೆ, ಪದ್ಯಾಂತದಲ್ಲಿ ರಸನಿರ್ದೇಶಮಾಡುತ್ತಿದ್ದನೆ, ಯಾವ ಕವಿಯೇ ಆದರೂ?

ಈ ಎಲ್ಲ ಕಾರಣಗಳಿಂದ, ಕವಿರಾಜಮಾರ್ಗದಲ್ಲಿನ ರಾಮಾಯಣ ಪದ್ಯಗಳು ಕವಿರಾಜಮಾರ್ಗಕಾರನಿಂದಲೇ ರಚಿತವಾದ ಲಕ್ಷ್ಯಪದ್ಯಗಳು. ಅವನಿಂದಲೇ ರಚಿತವಾದ ಅಥವಾ ಅನ್ಯ ಕವಿಕೃತವಾದ ಬೇರೆಯ ರಾಮಾಯಣ ಗ್ರಂಥವೊಂದರಿಂದ ಉದ್ಧರಿಸಿದ ಪದ್ಯಗಳಲ್ಲ-ಎಂದು ಬಹುಮಟ್ಟಿಗೆ ನಿರ್ವಿವಾದವಾಗಿ ತೀರ್ಮಾನಮಾಡಬಹುದು.

---

# ಭಾಷಾಶುದ್ಧತೆಯ ರಹಸ್ಯ

**ಲೇಖಕರು: ಟಿ. ಕೇಶವ ಭಟ್ಟ**

ಮಾನವನಿಗೆ ತನ್ನ ಸಮಾಜದಲ್ಲಿ ಪರಸ್ಪರ ವ್ಯವಹಾರಕ್ಕೆ ಅತ್ಯುಪಯುಕ್ತವಾದುದು ಭಾಷೆ. ಭಾಷೆಯು ಸಾರ್ಥಕ ಶಬ್ದ-ವಾಕ್ಯಗಳ ಮೂಲಕ ಒಬ್ಬನ ಮನೋಭಾವವನ್ನು ಇತರರಿಗೆ ಮುಟ್ಟಿಸುವ ದೌತ್ಯವನ್ನು ವಹಿಸುವುದು. ಈ ದೌತ್ಯವು ಪ್ರತ್ಯಕ್ಷದಲ್ಲಿ ಮಾತಿನ ಮೂಲಕವೂ ಪರೋಕ್ಷದಲ್ಲಿ ಬರಹದ ಮೂಲಕವೂ ಈಡೇರುವುದು. ಮಾತು ಸಂದರ್ಭಕ್ಕೆ ಅನುಗುಣವಾಗಿ ಭಾಷಣ, ಸಂಭಾಷಣ, ಪ್ರವಚನ, ಕಥನ, ಉಪದೇಶ, ಉಪನ್ಯಾಸ, ಆಜ್ಞಾಪನ, ವಿಜ್ಞಾಪನ—ಮುಂತಾದ ಬಹಿರಂಗಗಳನ್ನು ತಾಳುವುದು ಬರಹವು ಆ ಮಾತಿನ ಲಿಖಿತ ರೂಪ. ಅದು ಪತ್ರ, ಕಥೆ, ಕಾದಂಬರಿ, ಕಾವ್ಯ, ನಾಟಕ, ಸಂಶೋಧನ, ವಿಮರ್ಶನ—ಮುಂತಾದ ಸ್ವರೂಪಗಳನ್ನು ತಾಳುವುದು. ಹೀಗೆ ಮಾತು ಮತ್ತು ಬರಹ ಎಂಬಿವು ಭಾಷೆಯೆಂಬ ನಾಣ್ಯದ ಎರಡು ಮುಖಗಳು. ನಾಣ್ಯವು ನಿಶ್ಚಿತ ಲೋಹದಿಂದ, ಆಕೃತಿಯಿಂದ, ಮುದ್ರೆಯಿಂದ, ಉಲ್ಲೇಖದಿಂದ ಮತ್ತು ಬೆಲೆಯಿಂದ ಕೂಡಿರುವಂತೆ ಭಾಷೆಯೂ ನಿರ್ದಿಷ್ಟವಾದ ಶಬ್ದರೂಪದಿಂದ, ವಾಕ್ಸರಣಿಯಿಂದ, ಉಚ್ಚಾರಣದಿಂದ ಮತ್ತು ಅರ್ಥವಾಹಕತೆಯಿಂದ ಒಪ್ಪುವುದು. ಭಾಷೆಗೆ ಶುದ್ಧತೆ ಮುಖ್ಯ. ಮಾನವನ ಆಚಾರ ವಿಚಾರಗಳು, ಉಡುಗೆ ತೊಡುಗೆಗಳು, ದೇಹ-ಮನಸ್ಸು-ವ್ಯವಹಾರಗಳು ಪರಿಶುದ್ಧವಾಗಿ ಪವಿತ್ರವಾಗಿ ಇರಬೇಕೆಂಬುದನ್ನು ಒಪ್ಪದವರಿಲ್ಲ. ದೇಹವು ಶುದ್ಧವಾಗಿಲ್ಲದಿದ್ದರೆ ವ್ಯಾಧಿಯೂ ಮನವು ನಿರ್ಮಲವಾಗಿಲ್ಲದಿದ್ದರೆ ಆಧಿಯೂ ತಲೆತೋರುವುದು ಸಹಜ. ದೇಹ-ಮನಸ್ಸುಗಳು ಪರಿಶುದ್ಧವಾಗಿರಬೇಕೆನ್ನುವಾಗ ತ್ರಿಕರಣಗಳಲ್ಲಿ ಇನ್ನು ಮೂರನೆಯದಾದ ವಾಕ್ಕಿನ ಶುದ್ಧತೆ ಅನಪೇಕ್ಷಣೀಯವೆ? ನ್ಯೂಮನ್ (Newman) ಎಂಬ ಆಂಗ್ಲ ವಿದ್ವಾಂಸನು ಈ ವಿಚಾರವಾಗಿ ಹೇಳಿದ ಮಾತಿದು—

"As certain unaffected neatness and propriety and grace of diction may be required of any author, for the same reason that a certain attention to dress is expected of every gentleman".

ಉಚ್ಚಾರಣೆಯ ದೋಷದಿಂದ, ಬರೆವಾಗ ಆಗುವಾಗ ಅಕ್ಷರಗಳ ಅಸ್ಪಷ್ಟತೆಯ ಅಥವಾ ಸ್ಖಾಲಿತ್ಯದ ದೋಷದಿಂದ ಶಬ್ದಗಳ ರೂಪುಗೆಟ್ಟು, ಅರ್ಥ ವ್ಯತ್ಯಾಸವಾಗುವುದು ಎಲ್ಲ ಭಾಷೆಗಳಲ್ಲಿಯೂ ನಿಜವಾದ ಸಂಗತಿ. ಸಂಸ್ಕೃತದಲ್ಲಿ "ಲಳಯೋರಭೇದಃ"—ಲಕಾರ ಳಕಾರಗಳಿಗೆ ಅರ್ಥ ಭೇದವಿಲ್ಲ. ಜಲ-ಜಳ, ಕುಲ-ಕುಳ, ಪುಲಿನ-ಪುಳಿನ—ಎಂಬಲ್ಲೆಲ್ಲ ಲಕಾರವಿರಲಿ, ಳಕಾರವಿರಲಿ—ಅರ್ಥ ಒಂದೇ. ಆದರೆ ಈ ಸೂತ್ರ ಕನ್ನಡಕ್ಕೆ ಅನ್ವಯಿಸದು. ಕನ್ನಡದಲ್ಲಿ ಕಾಲು-ಕಾಳು, ಬೆಲೆ-ಬೆಳೆ, ಹಾಲು-ಹಾಳು, ಬಲೆ-ಬಳೆ. ಹೊಲೆ-ಹೊಳೆ, ತಲೆ-ತಳೆ, ಹಳ್ಳಿ-ಹಲ್ಲಿ, ಕಳ್ಳು-ಕಲ್ಲು—ಎಂಬಲ್ಲೆಲ್ಲ ಅರ್ಥಭೇದ, ಸ್ಪಷ್ಟವಾಗಿದೆ. ಹೀಗೆಯೇ ಅಲ್ಪಪ್ರಾಣ ಮಹಾಪ್ರಾಣ ಅಕ್ಷರಗಳನ್ನು ಪಲ್ಲಟಗೊಳಿಸಿದಾಗಲೂ ಹಲವೆಡೆ ಅರ್ಥಭೇದವಿದೆ:—ಧನ-ದನ. ಅಘ-ಅಗ, ಗದಾ-ಗಧಾ, ಬಾರ-ಭಾರ—ಇವು ಉದಾಹರಣಗಳು. ಭಾಷೆ ಪರಿಶುದ್ಧವಾಗಿರಬೇಕೆನ್ನುವವರು ಹೀಗೆ ಅಕ್ಷರ ವ್ಯತ್ಯಾಸಗಳಿಂದ ಆಗುವ

ಅರ್ಥ ವ್ಯತ್ಯಾಸವನ್ನು ತಿಳಿದಿರುವುದು ಆವಶ್ಯಕ. ಶಬ್ದಶುದ್ಧಿಯನ್ನು ದೃಷ್ಟಿಯಲ್ಲಿಟ್ಟು ಆಂಗ್ಲ ವಿದ್ವಾಂಸನೊಬ್ಬನು ಹೇಳಿದ ಮಾತುಗಳಿವು :

Words are, in fine, the only currency in which we can exchange thought with ourselves. Does it not follow, then, that the more accurately we use words, the closer definition we shall give to our thouahts?[1]

ಹಾಗಾದರೆ ಭಾಷಾ ಶುದ್ಧತೆಯನ್ನು ನಿರ್ಣಯಿಸುವ ಸಾಧನವಾವುದು? ಅದು ವ್ಯಾಕರಣವೆಂದು ವೈಯಾಕರಣರು ಹೇಳುವರು. ಶಬ್ದಾನುಶಾಸನ ಪ್ರಕಾಶಿಕೆಯಲ್ಲಿ ಬಂದಿರುವ ಶ್ಲೋಕವಿದು—

" ಸರ್ವೇಷಾಂ ವ್ಯವಹಾರಾಣಾಂ ಮೂಲಂ ಶಬ್ದಾರ್ಥನಿರ್ಣಯ"
ಸ್ವಚ ವ್ಯಾಕರಣಾದೇವ ಮುನಿಭಿಸ್ತೇನ ತತ್ಕೃತಂ ॥"

[ಎಲ್ಲ ತರದ ವ್ಯವಹಾರಗಳಿಗೂ ಶಬ್ದಗಳ ಮತ್ತು ಅರ್ಥಗಳ ನಿರ್ಣಯವೇ ಆದಿ. ಅದು ವ್ಯಾಕರಣದಿಂದಲೇ ಸಾಧ್ಯ. ಆದುದರಿಂದ ಮುನಿಗಳು ವ್ಯಾಕರಣರಚನೆಯನ್ನು ಮಾಡಿದ್ದಾರೆ] "ವ್ಯಾಕರಣ" ಎಂಬ ಶಬ್ದದ ವ್ಯುತ್ಪತ್ತಿಯೂ ಈ ವಿಚಾರವನ್ನು ಸ್ಪಷ್ಟಪಡಿಸುವುದು. "ವ್ಯಾಕ್ರಿಯಂತೇ-ವ್ಯುತ್ಪಾದ್ಯಂತೇ, ಅಸಾಧುಭ್ಯೋ ವಿವಿಚ್ಯ ಬೋಧ್ಯಂತೇ ಯತ್ರ"—ಇದರಂತೆ ಶಬ್ದಗಳ ಸಾಧುತ್ವವನ್ನು ಅಥವಾ ಪ್ರಯೋಗಾರ್ಹತೆಯನ್ನು ಬೋಧಿಸುವ ವಿಷಯವು 'ವ್ಯಾಕರಣ'ವೆಂದು ವಿಶದವಾಗುವುದು. ಸಕಲ ವಿದ್ಯೆಗಳಿಗೆ ಚಿಕಿತ್ಸಕ ರೂಪವಾಗಿಯೂ ಇರುವುದು ವ್ಯಾಕರಣವೇ ಆಗಿದೆಯೆಂದು ಶಬ್ದಾನುಶಾಸನಕಾರನು ದೃಢಪಡಿಸಿದ್ದಾನೆ. ಕವಿ ಕೇಶಿರಾಜನು ವ್ಯಾಕರಣದ ಮಹತಿಯನ್ನು ಕೊಂಡಾಡಿದ ಪದ್ಯವಿದು :

" ವ್ಯಾಕರಣದಿಂದೆ ಪದಮಾ
ವ್ಯಾಕರಣದ ಪದದಿನರ್ಥಮರ್ಥದೆ ತತ್ತ್ವಾ
ಲೋಕಂ ತತ್ತ್ವಾಲೋಕದಿ
ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ ॥ "[2]

ವ್ಯಾಕರಣವು ಪದಸಿದ್ಧಿ ಅರ್ಥನಿರ್ಣಯಾದಿಗಳ ಮೂಲಕ ಭಾಷಾ ಶುದ್ಧತೆಯನ್ನು ಮಾತ್ರವೇ ಅಲ್ಲ, ಆಯಾ ಭಾಷೆಯ ವೈಶಿಷ್ಟ್ಯವನ್ನೂ ತಿಳಿಯಲು ಸಾಧನವಾಗಿದೆ.

The life and soul of a language, that which constitutes its substantial individuality, and distinguishes it from all others, is its grammar.[3]

ಜನರಾಡುವ ಭಾಷೆ ಗ್ರಂಥಸ್ಥವೂ ಆಗಿದ್ದರೆ, ಅದಕ್ಕೆ ಎರಡು ರೂಪಗಳಿರುವುದು ಸಹಜ. ಆ ರೂಪಗಳನ್ನು ವ್ಯಾವಹಾರಿಕವೆಂದೂ (colloquial), ಗ್ರಾಂಥಿಕ (Literary) ವೆಂದೂ ಕರೆವರು. ವ್ಯಾವಹಾರಿಕ ಭಾಷೆ ಸ್ಥೂಲಸಿರೀಕ್ಷೆಗೆ ಒಂದೇ ಆಗಿ ತೋರಿದರೂ ಅದರ ಶಬ್ದ-ವಾಕ್ಯ-ಉಚ್ಚಾರಣೆ-ಅರ್ಥಗಳಲ್ಲಿ ಹಲವೆಡೆ ವ್ಯತ್ಯಾಸಗಳು ಕಾಣಿಸುತ್ತವೆ. ಈ ವ್ಯತ್ಯಾಸಗಳಿಗೆ ಆಯಾ ಪ್ರದೇಶ-ಜನತೆ-ಕಾಲ ಮುಂತಾದವನ್ನೇ ಕಾರಣಗಳೆನ್ನಬಹುದು. ವ್ಯಾವಹಾರಿಕ ಭಾಷೆಯಲ್ಲಿ ಗ್ರಾಮ್ಯತೆ-ಶಬ್ದ

1. Sir Arthur Quiller Coutch—On the Art of Writing.
2. ಶಬ್ದಮಣಿದರ್ಪಣ.
3. Rao Bahadur R. Narasimhacharya, M.A., M. R. A. S.—History of Kannada Language—page 3.

ಸಂಸ್ಕಾರ ರಾಹಿತ್ಯವೇ ಹೆಚ್ಚು. ಆದರೆ ಗ್ರಾಂಥಿಕ ಭಾಷೆ ವ್ಯಾಕರಣ ಸಿದ್ಧವಾಗಿ ಶುದ್ಧವಾಗಿ ಏಕರೂಪವಾಗಿರುವುದು. ಅದರಲ್ಲಿಯೂ ಪ್ರದೇಶಾನುಗುಣವಾಗಿ ಜನಾನುಗುಣವಾಗಿ ಭಿನ್ನತೆ ತೋರಿಬಂದರೂ ಆ ಭಿನ್ನತೆಯು ಏಕರೂಪಕ್ಕೆ ಅತಿ ಸಮೀಪವಿರುವುದು. ವಿಶಾಲವಾದ ನಾಡ ಜನರು ಪರಸ್ಪರರ ಹೃದಯವನ್ನರಿಯಲು ಏಕರೂಪ ಭಾಷೆಯ ಆವಶ್ಯಕತೆಯಿದೆ. ಭಾಷೈಕ್ಯತೆ ನಾಡ ಏಕತೆಗೆ ಸಹಕಾರಿ. ಆದುದರಿಂದ ಪ್ರದೇಶಾನುಗುಣವಾದ ದೇಶೀ ರೂಪಗಳು ಸಂಸ್ಕಾರಾರ್ಹವಾಗಿ ಗ್ರಾಂಥಿಕ ಭಾಷೆಯೆನಿಸಿ ಪ್ರಯೋಗಾರ್ಹವಾಗುವವು. ಇಂತಹ ಪದ-ವಾಕ್ಯ ಸಂಸ್ಕಾರವನ್ನು ವ್ಯಾಕರಣವು ಈಡೇರಿಸುವುದು.

ವ್ಯಾಕರಣಕ್ಕೆ ಆಧಾರವಾಗಿ ಕನ್ನಡದಲ್ಲಿ ಉಪಲಬ್ಧವಾಗುವ ಗ್ರಂಥಗಳೆಂದರೆ, ನಾಗವರ್ಮನ (ಕ್ರಿ.ಶ. ೧೨ನೆಯ ಶತಮಾನ) "ಭಾಷಾಭೂಷಣ" ಮತ್ತು ಕಾವ್ಯಾವಲೋಕನ "ಶಬ್ದಸ್ಮೃತಿ" ಎಂಬ ಭಾಗ. ಕವಿ ಕೇಶಿರಾಜನ (೧೩ನೆಯ ಶತಮಾನ) ಶಬ್ದಮಣಿದರ್ಪಣ, ಭಟ್ಟಾಕಲಂಕನ (೧೬೦೪) ಶಬ್ದಾನುಶಾಸನ—ಇವೇ ಮುಖ್ಯವೆನ್ನಬಹುದು. ಮೈಸೂರು ವಿಶ್ವವಿದ್ಯಾಲಯದ "ಕನ್ನಡ ಕೈಪಿಡಿ" ಗ್ರಂಥದ ಒಂದು ಭಾಗವೂ ವ್ಯಾಕರಣ ವಿಷಯಕವಾಗಿದೆ. ಇವಲ್ಲದೆ ಕ್ರಿ.ಶ. ೯ನೆಯ ಶತಮಾನದ "ಕವಿರಾಜಮಾರ್ಗ" ಗ್ರಂಥದ ಪ್ರಥಮ ಪರಿಚ್ಛೇದದಲ್ಲಿ ಭಾಷೆಯ ಶುದ್ಧಾಶುದ್ಧ ವಿವೇಚನೆಯಿದೆ. ಕಾವ್ಯಾವಲೋಕನದ "ಕಾವ್ಯಮಲವ್ಯಾವೃತ್ತ್ಯಧಿಕರಣಂ" ಎಂಬ ಅಧ್ಯಾಯದಲ್ಲಿ ಪದ-ಪದಾರ್ಥ-ಸಂಧಿಗಳ ದೋಷವಿಚಾರಣೆಯಿದೆ. ಇವೂ ಅಲ್ಲದೆ ಈಚೆಗಿನ ಹಲವು ವಿದ್ವಾಂಸರು ಶಾಲಾ ವಿದ್ಯಾರ್ಥಿಗಳಿಗಾಗಿ ಬರೆದಿರುವ ಹಲವು ವ್ಯಾಕರಣ ಪುಸ್ತಕಗಳೂ ಇವೆ. ಹೀಗೆ ಭಾಷೆಯನ್ನು ಸಂಸ್ಕರಿಸುವ ವ್ಯಾಕರಣ ಗ್ರಂಥಗಳಿದ್ದರೂ ಕನ್ನಡದಲ್ಲಿ ಇಂದು ಬಳಕೆಯಾಗಿರುವ ಮತ್ತು ಆಗುತ್ತಿರುವ ಪ್ರಯೋಗಗಳು ವ್ಯಾಕರಣಬದ್ಧವಾಗಿಯೇ ಇವೆಯೆ? ವ್ಯಾಕರಣಕ್ಕೆ ಸರಿಯಲ್ಲದ ಪ್ರಯೋಗದಲ್ಲಿ ನೆಲೆವಡೆದಿರುವ ರೂಪಗಳಿಗೆ ಸ್ಥಾನ ಯಾವುದು? ಎಂಬುದರ ಪರ್ಯಾಲೋಚನೆ ಆವಶ್ಯಕ. ಅಂತಹ ಕೆಲವು ವಿಷಯಗಳಿವು:

೧. ಸಂಸ್ಕೃತದ ಹಲವು ಸಮಾಸಪದಗಳು ಕನ್ನಡದಲ್ಲಿ ಹಲವು ಕಡೆ ತಪ್ಪಾಗಿಯೇ ಪ್ರಯೋಗಿಸಲ್ಪಟ್ಟಿವೆ. ಮನರಂಜನೆ, ಮನವೇಗ, ಜಗಭರಿತ—ಇಂಥವು ಸರಿಯೆಂದು ಸಂಸ್ಕೃತ ವ್ಯಾಕರಣವಾಗಲೀ ಕನ್ನಡ ವ್ಯಾಕರಣವಾಗಲೀ ಹೇಳುವುದಿಲ್ಲ. ಸಂಸ್ಕೃತದ ಸಮಾಸಪದದಲ್ಲಿ ಪೂರ್ವಪದಾಂತ್ಯಕ್ಕೆ ಮಾರ್ಪಾಟು ಬರಲಾರದು—ಎಂಬುದನ್ನು ಶ. ಶಾ. ಸೂತ್ರ ೧೩೨, ೧೩೪—ಇವುಗಳಲ್ಲಿ ನೋಡಬಹುದು. ಈ ನಿಯಮಕ್ಕೆ ವ್ಯತಿರಿಕ್ತವಾಗಿ ಕುಮಾರವ್ಯಾಸ ಭಾರತದಲ್ಲಿ ಮನವೇಗ (ಅರಣ್ಯಪರ್ವ ಸಂಧಿ ೩-೨೨) ಜಗಭರಿತ (ಪೀಠಿಕಾ ಸಂಧಿ-೮) ಎಂಬ ರೂಪಗಳನ್ನು ಕಾಣಬಹುದು. ನಡುಗನ್ನಡ ಹೊಸಗನ್ನಡಗಳಲ್ಲಿ ಇಂತಹ ದೋಷಯುಕ್ತ ಸಮಾಸಪದಗಳಿವೆ.

೨. ಸಂಸ್ಕೃತವನ್ನೂ ಕನ್ನಡವನ್ನೂ ಬೆರಸಿ ಸಮಾಸ ಮಾಡಬಾರದೆಂದು ಕವಿರಾಜಮಾರ್ಗವು ಘಂಟಾಘೋಷ ಮಾಡಿದೆ—

"ತಱಸಂದಾ ಸಕ್ಕದಮುಮ
ನಱಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್
ಕುಱತು ಬೆರಸಿದೊಡೆ ವಿರಸಂ
ಮಱುಗುವ ಪಾಲ್ಗಳೆಯ ಪನಿಗಳಂ ಬೆರಸಿದವೊಲ್"[4]

4. ಕವಿರಾಜಮಾರ್ಗ ೧-೫೮.

ಇಂತಹ ಸಂಸ್ಕೃತ-ಕನ್ನಡ ಮಿಶ್ರ ಸಮಾಸವನ್ನು "ಅರಿಸಮಾಸ" ಎನ್ನುವರು. ತಮಿಳು, ತೆಲುಗು, ಮಲಯಾಳ—ಮುಂತಾದ ಇತರ ದ್ರಾವಿಡ ಭಾಷೆಗಳಲ್ಲಾಗಲೀ ಮರಾಠಿ, ಹಿಂದೀ ಮುಂತಾದ ಸಂಸ್ಕೃತಜನ್ಯ ಭಾಷೆಗಳಲ್ಲಾಗಲೀ ಅರಿಸಮಾಸವು ದೋಷಕರವಲ್ಲ; ಕನ್ನಡದಲ್ಲಿ ವೈಯಾಕರಣರ ಮತದಂತೆ ಅದು ಹೇಯ. ಕವಿರಾಜಮಾರ್ಗಕಾಲದ ಮೂರು ಶತಮಾನಾನಂತರ ಬಂದಾಗ ಈ ನಿಯಮವು ಸ್ವಲ್ಪ ಶಿಥಿಲವಾದುದು ಕಾಣುತ್ತದೆ—"ಸಮಸಂಸ್ಕೃತಂ ದೇಶೀಯ ಪದೇನ ಸಮಸ್ಯತೇ" ಪ್ರಯೋಗ:—ನಾರದದಂಡಿಗೆ, ಪರಕೊತ್ತಳಂ, ಅರಸುದಳಂ, ಮಾಜನಂ, ಮಾಪಾತಕಂ, ತುರಗದಳಂ"[5]

ಇದಕ್ಕೂ ಒಂದು ಶತಮಾನ ಈಚೆಗೆ ಬಂದ ಕವಿ ಕೇಶಿರಾಜನು ಈ ಸಮಾಸದ ವಿಷಯದಲ್ಲಿ ಇನ್ನಷ್ಟು ವಿವರಣೆ ಮಾಡಿರುವನು—

"ಪದವಿಧಿ ಕನ್ನಡಕಂ ಸ
ಕ್ಕದಕ್ಕಮಿಲ್ಲಾದ್ಕರಿಂದೆ ಸಂದುವನಜುದಿ
ರ್ಪುದು ಬಿರುದಾವಳಿಯೊಳ್ ಪೇ
ಟ್ಟುದು ಪೆಜವಜೊಳಾಗದಿದು ವಿರುದ್ಧಸಮಾಸಂ"[6]

ಈತನು ಅರಿಸಮಾಸವನ್ನು ನಿಷೇಧಿಸಿ, ಹಿಂದಿನವರು ಮಾಡಿದ ಪ್ರಯೋಗಗಳನ್ನು ಮಾತ್ರ ಒಪ್ಪಿಕೊಂಡಿದ್ದಾನೆ. ಬಿರುದುಗಳಲ್ಲಿ ಅರಿಸಮಾಸವು ದೋಷಕರವಲ್ಲವೆಂದು ಹೇಳಿ, ಬೇರೆ ಕಡೆ ಅದು ಅಸಾಧುವೆಂದು ಕಟ್ಟಾಜ್ಞತಿ ಮಾಡಿ, ಉದಾಹರಣಗಳನ್ನೂ ಕೊಟ್ಟಿದ್ದಾನೆ. ಭಟ್ಟಾಕಲಂಕನು ಇವನ್ನೇ "ತಜ್ಜ ಬಿರುದಾವಲ್ಯಾಂ, ಕಡುರಾಗಾದಯಃ"[7] ಎಂಬೆರಡು ಸೂತ್ರಗಳಲ್ಲಿಯೂ ಅವಕ್ಕೆ ಕೊಟ್ಟ ಉದಾಹರಣಗಳಲ್ಲಿಯೂ ವಿವರಿಸಿದ್ದಾನೆ. ಇಷ್ಟೇ ಅಲ್ಲದೆ ಅವನು ಸಂಸ್ಕೃತ-ಕನ್ನಡ ಮಿಶ್ರ ಸಮಾಸರಚನೆಯಲ್ಲಿ ಇನ್ನೂ ಹೆಚ್ಚಿನ ಸ್ವಾತಂತ್ರ್ಯವನ್ನು ಕೊಟ್ಟುದು ಕಾಣುತ್ತದೆ. "ಶಶಿಶೇಖರ" ಎಂಬ ಸಮಸ್ತ ಪದವನ್ನು ಸಸಿಶೇಖರ, ಶಶಿಸೇಖರ, ಸಶಿಶೇಖರ—ಮುಂತಾಗಿ "ಏಕದೇಶವಿಕೃತ" ವಾಗಿ ಮಾಡಿದ ಮಾತ್ರಕ್ಕೆ ಆ ಪದವು ಪೂರ್ಣವಾಗಿ ತದ್ಭವವೇ ಆಗುವುದೆಂದು ಸೂಚಿಸಿದ್ದಾನೆ[8]. ಹೀಗೆ ನಿಯಮದ ನಿಟ್ಟು ಕಡಮೆಯಾಗಿ ಇಂದಿಗೆ ಸ್ವಚ್ಛಂದವಾಗಿ ಸಾಹಿತ್ಯರಥ ಸಾಗುತ್ತಿರುವ ಹೊಸಗನ್ನಡದಲ್ಲಿ ಈ ಸಮಾಸ ನಿಯಮದ ಕಡಿವಾಣ ಕಡಿದು ಹೋಗಿರುವುದು ಸ್ಪಷ್ಟವಾಗಿರುವ ವಿಷಯ.

೩. ಇಂದಿನ ಹೆಚ್ಚಿನ ಕಥೆ ಕಾದಂಬರಿಗಳಲ್ಲಿ. ಕವನಗಳಲ್ಲಿ, ವಿಮರ್ಶನಗಳಲ್ಲಿ ಮತ್ತು ಹಲವರ (ವಿದ್ವಾಂಸರ) ಭಾಷಣಗಳಲ್ಲಿ ಅಬದ್ಧ ಪ್ರಯೋಗಗಳು ಹಲವು ಕಾಣಸಿಗುತ್ತವೆ. ನೋಡಲೆತ್ನಿಸು, ಬೆಗ್ಗಾಡು, ಕಗ್ಗಾಳು, ಶಾಲೆನಲ್ಲಿ-ಕೈನಲ್ಲಿ, ನೆಹರುರವರು-ಕುವೆಂಪುರವರು—ಇತ್ಯಾದಿ ಪದಪ್ರಯೋಗಗಳು ಸರಿಯೆ? ನೋಡಲು+ಯತ್ನಿಸು ಎಂಬಲ್ಲಿ ಸಂಧಿಯಾಗದು "ಎತ್ನಿಸು" ಎಂದು ಶಬ್ದವೇ ಇಲ್ಲದುದರಿಂದ ನೋಡಲೆತ್ನಿಸು, ಹೇಳಲೆತ್ನಿಸು ಎಂಬ ರೂಪಗಳು ಸರಿಯಲ್ಲ. ಬಿಸಿದು (ಬೆಚ್ಚನೆ)+ಕಾಡು-ಎಂಬುದು ಬಿಸುಗಾಡು, ಬೆಂಗಾಡು ಆಗಬಲ್ಲುದು; ಆದುದರಿಂದ ಆ ಅರ್ಥದಲ್ಲಿ 'ಬೆಗ್ಗಾಡು' ಅಶುದ್ಧ.

---

5. ಭಾಷಾಭೂಷಣ ಸೂತ್ರ ೧೪೯
6. ಶಬ್ದಮಣಿ ದರ್ಪಣ ಸೂತ್ರ ೧೬೫
7. ಶಬ್ದಾನುಶಾಸನ ಸೂತ್ರ ೨೯೫, ೨೯೬
8. ಅದರಲ್ಲೇ ಸೂತ್ರ ೧೪೮

ಕರಿದು+ಆಳು—"ಕಾರಾಳು" ಆಗುವುದು; ಕಗ್ಗಾಳು ಎಂದಾಗಲಾರದು. ಕೈಯಲ್ಲಿ, ಶಾಲೆಯಲ್ಲಿ, ಮನೆಯಲ್ಲಿ—ಎಂಬ ಯಕಾರಾಗಮ ಸ್ಥಾನಗಳಲ್ಲೆಲ್ಲಾ ಹಲವರು—ವಿದ್ವಾಂಸರೆನಿಸಿದವರು ಕೂಡ, ಕೈನಲ್ಲಿ, ಶಾಲೆನಲ್ಲಿ, ಮನೆನಲ್ಲಿ—ಎನ್ನುತ್ತಾರೆ. "ಎಂ.ಎ. ನಲ್ಲಿ ನಾನು ಉತ್ತೀರ್ಣನಾದಾಗ . . ." ಹೀಗೆಂದು ಕನ್ನಡದಲ್ಲಿ ಎಂ.ಎ. ಪದವೀಧರರು ವಾಕ್ಯಾರಂಭ ಮಾಡುವುದುಂಟು. (ಈ ಕಾಲದಲ್ಲಿ ಮನೆ ಮನೆಗೂ 'ನಲ್ಲಿ' ಬಂದಿರುವುದರ ಪ್ರಭಾವವೋ ಏನೋ!). ನೆಹರು+ಅವರು 'ನೆಹರುವವರು' ಎಂದಾಗುವುದು, 'ನೆಹರುಗಳವರು' ಎನ್ನಬಹುದು. ಆದರೆ 'ನೆಹರುರವರು' ಹೇಗಾಗುವುದೆಂಬುದಕ್ಕೆ ನಿಯಮಾಧಾರವಿಲ್ಲ. ಅಲ್ಲದೆ ಇಂಥವನ್ನು ರೂಢಿಗತವಾಗಿ ಆದ ಮಾರ್ಪಾಡುಗಳೆನ್ನಲು ಸಾಧ್ಯವಿಲ್ಲ ದುದರಿಂದ ಭಾಷಾ ದೋಷಗಳೆಂದೇ ಹೇಳಬೇಕಾಗುತ್ತದೆ. ಮಾರ್ಪಾಡುಗಳ ಒಂದೆರಡು ಉದಾಹರಣಗಳನ್ನಿಲ್ಲಿ ಕೊಡಬಹುದು.

೪. 'ಜನ' ಎಂಬ ಶಬ್ದವು ನಪುಂಸಕಲಿಂಗೈಕವಚನವೆಂದು ಕೇಶಿರಾಜನ ಮತ (ಶ. ದ. ಸೂ. ೯೪). ನಮ್ಮ ಪ್ರಾಂತದ ಕೆಲವು ಕಡೆಗಳಲ್ಲಿ ಇದನ್ನು ಈಗಲೂ ನಪುಂಸಕಲಿಂಗದ ಏಕವಚನ ವಾಗಿಯೇ ಬಳಸುತ್ತಾರೆ. ಇನ್ನು ಕೆಲವು ಕಡೆಗಳಲ್ಲಿ ಪುಲ್ಲಿಂಗ-ಸ್ತ್ರೀಲಿಂಗಗಳ ಬಹುವಚನ ರೂಪ ವಾಗಿ ಪ್ರಯೋಗಿಸುತ್ತಾರೆ—"ಜನ ಹೀಗೆ ಹೇಳುತ್ತಾರೆ. ಎನ್ನುತ್ತಾರೆ. ಇಂತಹ ಸಂದರ್ಭಗಳಲ್ಲಿ ಶಾಸ್ತ್ರಾಧಾರವೂ ಲೋಕಪ್ರಯೋಗವೂ ಕೂಡಿಬಂದುದನ್ನೇ ಸಾಧುವೆಂದು ಪರಿಗಣಿಸುವುದೇ ಉಚಿತವೆನಿಸುವುದು.

ಶಬ್ದಮಣಿ ದರ್ಪಣದಲ್ಲಿ ಹೇಳಿರುವಂತೆ (ಸೂತ್ರ ೨೭೦) "ಬೆಳೆ" ಎಂಬ ಧಾತುವನ್ನು ಸಸ್ಯಾಳಿಯಲ್ಲಿ ಮಾತ್ರ ಪ್ರಯೋಗಿಸಬೇಕು. ಇತರ ಕಡೆಯಲ್ಲೆಲ್ಲ 'ಬಳೆ' ಎಂಬುದನ್ನು ಪ್ರಯೋಗಿಸಬೇಕು. ಆದರೆ ಇಂದು 'ಬೆಳೆ' ಎಂಬುದನ್ನೇ ಎಲ್ಲಾ ಕಡೆಯೂ ಪ್ರಯೋಗಿಸುತ್ತಾರೆ. 'ಬೆಳೆ' ಭಾವನಾಮ ವಾಗಿ 'ಬೆಳೆ'-'ಬೆಳಸು' ಎಂದಾಗಿದೆ. ಇಂದಿಗೆ ಪ್ರಚುರವಾಗಿ 'ಬೆಳವಣಿಗೆ' ಎಂಬ ಭಾವನಾಮವಿದೆ.

ಹಳಗನ್ನಡದ ಎಷ್ಟೋ ಶಬ್ದ ರೂಪಗಳು ಹೊಸಗನ್ನಡದಲ್ಲಿ ಬೇರೆ ರೂಪಗಳನ್ನು ತಾಳಿವೆ. ಹಿಂದಿನ ಱಕಾರ ೞಟಗಳು ಇಂದಿಗೆ ಪ್ರಯೋಗದಲ್ಲಿಲ್ಲ. ವ್ಯಂಜನಾಂತ ಶಬ್ದಗಳು ಸ್ವರಾಂತ ವಾಗಿವೆ—ಕಾಲ್, ಕಾಲು, ಕಣ್-ಕಣ್ಣು, ಪುಲ್-ಹುಲ್ಲು ಇತ್ಯಾದಿ. ವರ್ತಮಾನಕಾಲಕ ತಿಙ್ ಪ್ರತ್ಯಯವಾಗಿರುವ 'ದಪ' ಎಂಬುದು 'ಉತ್ತ+ಆನೆ' ಎಂದಾಗಿದೆ: ಬಂದಪಂ-ಬರುತ್ತಾನೆ. ಹೊಸ ಗನ್ನಡದಲ್ಲಿ ಕಾಣುವ ಈ ರೂಪಗಳನ್ನು ದೋಷವೆನ್ನಲಾಗದು. ಇದು ಕಾಲಾನುಗುಣ ಪರಿವರ್ತನೆ ಯಾದುದರಿಂದ ಹೊಸಗನ್ನಡದ ವ್ಯಾಕರಣದಲ್ಲಿ ಇಂಥವಕ್ಕೆ ಸಾಧುತ್ವವನ್ನು ಕಲ್ಪಿಸಬಹುದು.

೫. ಕನ್ನಡದಲ್ಲಿ ಹಿಂದೆ ಅಕಾರಾಂತ ಸ್ತ್ರೀಲಿಂಗವೆನಿಸುವ ಸ್ವತಂತ್ರ ಶಬ್ದಗಳು ಮೂರು ಇದ್ದವು:—ಅಕ್ಕ, ಅಮ್ಮ, ಅಪ್ಪ ಎಂಬಿವು. ಇವಕ್ಕೆ ಹತ್ತುವ ನಾಮವಿಭಕ್ತಿ ಪ್ರತ್ಯಯಗಳು ಅಕಾರಾಂತ ಪುಲ್ಲಿಂಗದಂತೆಯೇ ಇರುತ್ತವೆ.

ಉದಾ: ಅಕ್ಕ(ನು), ಅಕ್ಕನನ್ನು, ಅಕ್ಕನಿಂದ—ಇತ್ಯಾದಿಯಾಗಿ. ವ್ಯವಹಾರದಲ್ಲಿಯೂ ವ್ಯಾಕರಣ ಶಾಸ್ತ್ರದಲ್ಲಿಯೂ ಶಬ್ದಗಳಿಗೆ ಪ್ರತ್ಯಯ ಕ್ರಮ ಇದೇ—

"ಪುದಿಗುಮುದಂತಕೆ ಪುಲ್ಲಿಂ
ಗದವೋಲ್ ಕಿಂದೆಡೆಗಳಲ್ಲಿಯೆಲ್ಲಂ ಸ್ತ್ರೀಲಿಂ"
ಗದೊಳರಿ . , . . . . [9]

9. ಶಬ್ದಮಣಿ ದರ್ಪಣ ಸೂತ್ರ ೧೨೪

ಹಿಂದೆ ಅಕಾರಾಂತ ಸ್ತ್ರೀಲಿಂಗದಲ್ಲಿ ಅಂಕಿತನಾಮಗಳಿದ್ದಿಲ್ಲ: ಆಕಾರಾಂತಗಳಿದ್ದವು. ಕನ್ನಡದಲ್ಲಿ ಲಿಂಗವಾಗುವಾಗ (ವಿಭಕ್ತಿ ಹಚ್ಚಲು ಅರ್ಹವಾಗುವಾಗ) ಅವು ಎಕಾರಾಂತಗಳಾಗುತ್ತಿದ್ದವು. ಉದಾ :—ಸೀತಾ–ಸೀತೆ, ಕಮಲಾ–ಕಮಲೆ, ರಮಾ–ರಮೆ ಇತ್ಯಾದಿ. ಆದರೆ ಇಂದಿನ ವ್ಯವಹಾರದಲ್ಲಿ ಅಕಾರಾಂತ ಸ್ತ್ರೀಲಿಂಗ ಶಬ್ದಗಳು ನೂರಾರಿವೆ. ಕಮಲ, ಮಧುರ, ಸುಮ, ಕುಸುಮ, ಅನಂತ ಇತ್ಯಾದಿ ಶಬ್ದಗಳು ಅಕಾರಾಂತವಾಗಿಯೇ ಇದ್ದು ಸ್ತ್ರೀಲಿಂಗದಲ್ಲಿವೆ. ಇವುಗಳಿಗೆ ವಿಭಕ್ತಿಗಳು ಪುಲ್ಲಿಂಗದಂತಿರಬೇಕೆ? ಸ್ತ್ರೀಲಿಂಗದಂತೆ ಳುಗಾಗಮದಿಂದ ಕೂಡಿರಬೇಕೆ? ಕಮಲನು. ಕಮಲನನ್ನು, ಕಮಲನಿಂದ ಎಂದಿರಬೇಕೆ? ಕಮಲಳು, ಕಮಲಳನ್ನು ಕಮಲಳಿಂದ ಎಂದಿರಬೇಕೆ? —ಎಂಬುದಿಲ್ಲಿ ಸಮಸ್ಯೆ. ಕಥೆ ಕಾದಂಬರಿಗಳಲ್ಲಿ 'ಳು' ಪ್ರತ್ಯಯ ಹಚ್ಚುತ್ತಾರೆ. ಕನ್ನಡನಾಡಿನಲ್ಲಿ ಮನೆಮಾತು ಕನ್ನಡವೇ ಆಗಿರುವ ಹಲವು ವರ್ಗದವರು ಪುಲ್ಲಿಂಗದ ಪ್ರತ್ಯಯಗಳನ್ನೇ ಇಂತಹ ಶಬ್ದಗಳಿಗೆ ಹಚ್ಚುವವರಿದ್ದಾರೆ. ವ್ಯಾಕರಣದ ಆಧಾರಪ್ರಯೋಗ ಪದ್ಧತಿ ಎಂಬ ಎರಡನ್ನೂ ಯೋಚಿಸಿ ತೀರ್ಮಾನಿಸುವುದಾದರೆ 'ಅಕ್ಕ' ಶಬ್ದದಂತೆ ಪುಲ್ಲಿಂಗದ ವಿಭಕ್ತಿಪ್ರತ್ಯಯ ಹಚ್ಚುವುದೇ ಸಾಧುವೆನಿಸುವುದು.[10]

೬. ಕೇಶಿರಾಜನು ಬೆರಲ್, ಪೆರಲ್, ಒರಲ್, ಕೊರಲ್, ಸರಲ್, ಅರಲ್, ಪರಲ್, ಮರಲ್, ನರಲ್ ಎಂಬಿವನ್ನು ಲಕಾರಾಂತಗಳೆಂದೂ ಳಕಾರಾಂತಗಳಲ್ಲವೆಂದೂ ಸ್ಪಷ್ಟಪಡಿಸಿದ್ದಾನೆ. (ಶ ದ.ಸೂ. ೩೧). ಕೇಶಿರಾಜನ ಕಾಲದಲ್ಲಿ ಗ್ರಾಮ್ಯರು ಅವನ್ನೆಲ್ಲ ಳಕಾರಾಂತವಾಗಿ ತಿಳಿಯುತ್ತಿದ್ದಂತೆ ಇಂದಿಗೆ ಗ್ರಾಮ್ಯರಲ್ಲದವರೂ ಬೆರಳು, ಕೊರಳು—ಇತ್ಯಾದಿಯಾಗಿ ಳಕಾರಾಂತವಾಗಿಯೇ ಪ್ರಯೋಗಿಸುವುದನ್ನು ಕಾಣುತ್ತೇವೆ. ಇವು ಲಕಾರಾಂತವಾಗಿದ್ದರೇ ಶುದ್ಧರೂಪಗಳೆಂಬುದಕ್ಕೆ ಶಬ್ದಮಣಿ ದರ್ಪಣದ ಮುಂದಿನ ಸೂತ್ರವು ಸಮರ್ಥಕವಾಗುತ್ತದೆ. ಅಲ್ಲಿ ಮರಲ್, ಅರಲ್, ಎರಲ್—ಎಂಬೀ ಮೂರು ಶಬ್ದಗಳ ಅಂತರಾಳದ ರೇಫಕ್ಕೆ ಲಕಾರವು ಬಂದು ವಿಕಲ್ಪವಾಗಿ ಮಲರ್, ಅಲರ್, ಎಲರ್ ಎಂಬ ರೂಪಗಳಾಗುವುದನ್ನು ಹೇಳಿದೆ. ಇಲ್ಲಿ ನಡುವೆ ಬಂದ ಲಕಾರವು ಪರಕೀಯಾಕ್ಷರವಲ್ಲ. ಅದು ಆಯಾ ಶಬ್ದದ ಕೊನೆಯದು ; ಮತ್ತು ಕೊನೆಗೆ ಬಂದ ರೇಫ ವ್ಯಂಜನವು ಶಬ್ದದ ನಡುವಿನದು. ಈ 'ವರ್ಣ ವಿಪರ್ಯಯ'ವು (Metathesis) ಭಾಷಾ ಶಾಸ್ತ್ರಾಂತರ್ಗತವಾದ ಒಂದು ಲಕ್ಷಣ. ಶಾಸ್ತ್ರ ವಿವೇಚನೆಯ ದೃಷ್ಟಿಯಿಂದ ಲಕಾರಾಂತವಾಗಿರುವುದೇ ಶುದ್ಧವೆನಿಸಿದರೂ ಇಂದು ವ್ಯವಹಾರದಲ್ಲಿ ಳಕಾರಾಂತವಾಗಿರುವುದನ್ನು ತಪ್ಪೆಂದು ಹೊಡೆದು ಹಾಕುವಂತಿಲ್ಲವಾಗಿದೆ.

ವ್ಯಾಕರಣದ ಎಲ್ಲೆಯನ್ನು ಕೆಲವೆಡೆ ಮೀರಿದ ಮಾತ್ರದಿಂದ ಭಾಷೆ ಕೆಟ್ಟಿತೆನ್ನಲಾಗುವುದಿಲ್ಲ. ಭಾಷೆಗೂ ವ್ಯಾಕರಣಕ್ಕೂ ಇರುವ ಸಂಬಂಧವನ್ನು ಇಲ್ಲಿ ಅರ್ಥ ಮಾಡಿಕೊಳ್ಳುವುದು ಆವಶ್ಯಕ. ಭಾಷೆ ಹರಿಯುವ ನದಿಯಾದರೆ ವ್ಯಾಕರಣವೇ ಅದರ ದಡ. ಕೆಲವೊಮ್ಮೆ ಪ್ರವಾಹ ಹೆಚ್ಚಿ ದಡವನ್ನು ಕೊರೆಯುವುದೂ ಮೇಲೆ ಮಗುಚಿ ಹರಿಯುವುದೂ ಸಹಜ. ಆದರೆ ದಡವೇ ಇಲ್ಲವಾದರೆ ಪ್ರವಾಹದ ಹಾನಿ ಹೆಚ್ಚು. ಭಾಷೆಯಂತೂ ಮೊದಲು, ವ್ಯಾಕರಣ ಮತ್ತಿನದು. ಭಾಷೆಗನುಸರಿಸಿ ವ್ಯಾಕರಣವಲ್ಲದೆ ವ್ಯಾಕರಣವನ್ನನುಸರಿಸಿ ಭಾಷೆಯಿರಬೇಕಾದುದಲ್ಲ. ವ್ಯಾಕರಣಕ್ಕೆ ಪ್ರಯೋಗವೇ ಶರಣು. ಅಲ್ಲಿ ಯೋಗಕ್ಕಿಂತ ರೂಢಿಗೆ ಬಲ ಹೆಚ್ಚು. ವ್ಯಾಕರಣವು ನಿರಂಕುಶಪ್ರಭುವಿನ ಶಾಸನವಲ್ಲ. ಅದು ಧರ್ಮನಿಷ್ಠ ಪ್ರಜಾತಂತ್ರಜನತೆಯ ರಾಜ್ಯಸಂವಿಧಾನ. ಜನತೆಯ ಪ್ರಗತಿಗೂ ವಿಕಾಸಕ್ಕೂ

---

10. ಈ ವಿಚಾರವಾಗಿ "ಅಕಾರಾಂತ ಸ್ತ್ರೀಲಿಂಗ ನಾಮಪದಗಳು" ಎಂಬ ನನ್ನ ಲೇಖನ ನೋಡಿ... ಕನ್ನಡನುಡಿ. ಆಗಸ್ಟ್, ೧೯೬೦.

ಅದು ಪ್ರೋತ್ಸಾಹಕ. ಹಾಗೆ ಅದಿಲ್ಲವೆಂದು ತೋರಿದಲ್ಲಿ ಅಂತಹ ಶಾಸನದ ಪರಿಚ್ಛೇದಗಳನ್ನು ಮಾರ್ಪಡಿಸುವಂತೆ ಭಾಷೆಗನುಗುಣವಾಗಿ ವ್ಯಾಕರಣವನ್ನೂ ಮಾರ್ಪಡಿಸಬೇಕಾಗುವುದು ಸಹಜ. ಜನಜೀವನವು ಕಾಲಾನುಗುಣವಾಗಿ ಮಾರ್ಪಾಡು ಹೊಂದುವಂತೆ ಭಾಷೆಯೂ ಭಾಷೆಯ ಸಾಹಿತ್ಯ ಸ್ವರೂಪವೂ ಮಾರ್ಪಡುವುದು ಸಹಜವಾದುದರಿಂದ ಒಂದು ಕಾಲದ ವ್ಯಾಕರಣದ ಎಲ್ಲ ನಿಬಂಧನೆಗಳು ಎಲ್ಲ ಕಾಲಕ್ಕೂ ಸರಿಯೆನ್ನಲಾಗುವುದಿಲ್ಲ. ಆದುದರಿಂದ ಸಮಕಾಲಿಕ ಭಾಷೆಗೆ ಪೂರ್ವ ವ್ಯಾಕರಣವನ್ನು ಅನ್ವಯಿಸುವವರು ಅಥವಾ ಹೊಸತಾಗಿ ವ್ಯಾಕರಣ ಮಾಡುವವರು ಭಾಷಾ ಧರ್ಮವನ್ನು ತಿಳಿದಿರಲೇಬೇಕು—ಭಾಷಾ ಶಾಸ್ತ್ರವನ್ನು (philology) ಅಭ್ಯಾಸ ಮಾಡಿರಬೇಕು.

ವ್ಯಾಕರಣವು ತಾನು ರಚಿತವಾದ ಕಾಲದ ಮತ್ತು ಆ ಕಾಲಕ್ಕೆ ಹಿಂದಿನ ಗ್ರಂಥಸ್ಥ ಭಾಷೆಯ ಶುದ್ಧತೆಯನ್ನು ನಿಷ್ಕರ್ಷಿಸುವುದು. ಭಾಷಾಶಾಸ್ತ್ರವು ವ್ಯಾವಹಾರಿಕ ರೂಪವನ್ನು ವಿಶೇಷವಾಗಿ ದೃಷ್ಟಿಯಲ್ಲಿಟ್ಟು, ಕಾರ್ಯಕಾರಣ ಸಂಬಂಧದಿಂದ ಭಾಷೆಯ ಸ್ವರೂಪ–ಅರ್ಥಗಳಲ್ಲಿ ಕಾಲಕಾಲಕ್ಕೆ ಆಗುವ ಮಾರ್ಪಾಡುಗಳನ್ನು ವಿವರಿಸುವುದು. ಆದ್ದರಿಂದ ಭಾಷಾಶುದ್ಧತೆಯ ಮರ್ಮವನ್ನರಿಯಲು ಭಾಷಾಶಾಸ್ತ್ರದ ಅಭ್ಯಾಸ ಅನಿವಾರ್ಯ. ವೈಯಾಕರಣರ ದೃಷ್ಟಿಯಿಂದ ಸರಿಯೆನಿಸಲಾರದ ಹಾಗೂ ನಿರ್ಣಯಿಸಲು ಸಾಧ್ಯವಾಗದ ಎಷ್ಟೋ ಪದಪ್ರಯೋಗಗಳು ಭಾಷಾಶಾಸ್ತ್ರ ಪ್ರಯೋಗದಿಂದ ಪಳಗಿ ಸಾಧುವೆನಿಸಬಲ್ಲವು. ಅದನ್ನಿಲ್ಲಿ ಪರಿಶೀಲಿಸಬಹುದು :

**ಭಾಷಾಶಾಸ್ತ್ರದ ಉಪಯೋಗ :**

೧. ಹಿಂದೆ ತಿಳಿಸಿದಂತೆ ಕೇಶಿರಾಜನು ಮರಲ್, ಅರಲ್, ಎರಲ್ ಎಂಬಿವು ಏಕೆ ಮಲರ್, ಅಲರ್, ಎಲರ್ ಆಗಿವೆಯೆನ್ನದಿದ್ದರೂ ಅವನ ಆ ಹೇಳಿಕೆಯಲ್ಲಿ ಭಾಷಾಶಾಸ್ತ್ರದ ವರ್ಣವ್ಯತ್ಯಯ ತತ್ವವು ಅಡಕವಾಗಿರುವುದು ಕಾಣುತ್ತದೆ. ಇದೇ ರೀತಿ ಪಲ್ಲಟವಾಗುವ ಹಲವಾರು ಶಬ್ದಗಳಿವೆ :— ಅಸಗ–ಅಗಸ, ಎಹಗೆ–ಹೇಗೆ, ಅಹಗೆ–ಹಾಗೆ, ಅಹುದು–ಹೌದು, ಒಸುರು–ಸೋರು, ಅಮಚು–ಅಮುಚ, ನಾರಿಕೇಲ–ನಾಲಿಕೇರ ಇತ್ಯಾದಿ.

೨. ಸರ್ವನಾಮಗಳ ವಿಭಕ್ತಿರೂಪವಿಷಯಕವಾದ ಒಗಟನ್ನು ಬಿಡಿಸಲು ಭಾಷಾಶಾಸ್ತ್ರವು ಹೇಗೆ ಸಹಕಾರಿಯಾಗಿದೆ ಎಂಬುದನ್ನು ಇಲ್ಲಿ ವಿವರಿಸಲಾಗುವುದು. ಸರ್ವನಾಮ ವಿಭಕ್ತಿಗೆ ಸಂಬಂಧಿಸಿದ ವ್ಯಾಕರಣ ಸೂತ್ರವಿದು—

"ಪೀನಂ ಪ್ರಥಮೆಗೆ ನೀನಾಂ
ತಾನೆಂದಱು ನಿನಗೆಯೆನಗೆ ತನಗೆಂದು ಚತು
ರ್ಥೀಗೆ ನಿರ್ದೇಶಕ್ಕಿತರ
ಸ್ಥಾನಕ್ಕಸ್ವರದಿನಿರ್ಪ ನಿಂನೆನ್ತಂಗಳ್" 11

ನಾಗವರ್ಮನು ತನ್ನ ಕಾವ್ಯಾವಲೋಕನದ ಸೂತ್ರ ೩೬ರಲ್ಲಿಯೂ ಭಾಷಾಭೂಷಣ ಸೂತ್ರ ೯೯,೧೦೦,೧೦೧,ಗಳಲ್ಲಿಯೂ ಇದೇ ವಿಷಯವನ್ನು ತಿಳಿಸಿದ್ದಾನೆ. ಇವುಗಳ ಪ್ರಕಾರ ಸರ್ವನಾಮ ವಿಭಕ್ತಿಗಳಲ್ಲಿ ಪ್ರಥಮೆಯ ಮತ್ತು ಚತುರ್ಥಿಯ ರೂಪಗಳನ್ನೇನೋ ತಿಳಿಯಿಸಿದಂತಾಯಿತಲ್ಲದೆ. ಆ ರೂಪಗಳಾಗಲು ಕಾರಣಗಳನ್ನು ಸ್ಪಷ್ಟಪಡಿಸಿದಂತಾಗಲಿಲ್ಲ. ಪ್ರಥಮೆ–ಚತುರ್ಥಿ ಹೊರತಾದ

11. ಶಬ್ದಮಣಿ ದರ್ಪಣ ಸೂತ್ರ ೧೫೭

ವಿಭಕ್ತಿಗಳಿಗೆಲ್ಲ ನಿನ್, ಎನ್, ತನ್-ಎಂಬಿವೇ ಪ್ರಕೃತಿಗಳಾಗಿದ್ದು ಅದರಂತೆ 'ನಿನ್' ಎಂಬ ಪ್ರಕೃತಿಗೆ ಅಂ (ಅನ್ನು), ಇಂ (ಇಂದ), ಅತ್ತಣಿಂ, ಆ, ಒಳ್ (ಅಲ್ಲಿ) ಎಂಬೀ ಪ್ರತ್ಯಯಗಳು ಸೇರಿ ನಿನ್ನಂ (ನಿನ್ನನ್ನು), ನಿನ್ನಿಂ (ನಿನ್ನಿಂದ), ನಿನ್ನತ್ತಣಿಂ, ನಿನ್ನ, ನಿನ್ನೊಳ್ (ನಿನ್ನಲ್ಲಿ)-ಹೀಗೆ ಐದು ವಿಭಕ್ತಿ ರೂಪಗಳು ಸಿದ್ಧವಾಗುತ್ತವೆ. ವಿಷಯ ಪ್ರತಿಪಾದನೆ ಸ್ಪಷ್ಟವಾಗಿಯೂ ಲಾಕ್ಷಣಿಕವಾಗಿಯೂ ಕಾಣುತ್ತದೆ. ಆದರೆ ಪ್ರಥಮೆಯಲ್ಲಿ ನೀನ್ (ನೀನು), ಆನ್ (ಆನು. ನಾನು), ತಾನ್ (ತಾನು) ಎಂದು ಆದಿಗೆ ದೀರ್ಘವೇಕೆ ಬಂತು? ಇದಲ್ಲದೆ ಚತುರ್ಥಿಯಲ್ಲಿ ಈ ಮೂರು ಸರ್ವನಾಮಗಳಿಗೆ ಮಾತ್ರ ನಿನಗೆ, ಎನಗೆ (ನನಗೆ), ತನಗೆ (ಬಹುವಚನದಲ್ಲಿ ಮಧ್ಯದ ನಕಾರಕ್ಕೆ ಮಕಾರವಿದೆ-ನಿಮಗೆ, ಎಮಗೆ, ತಮಗೆ-ಎಂದು.)- ಎಂಬ ರೂಪಗಳು ಏಕೆ ಬಂದುವು? ಎಂಬಿವು ವಿಮರ್ಶಿಸಬೇಕಾದ ಸಂಗತಿಗಳು. ವೈಯಾಕರಣಪಕ್ಷದಿಂದ ಹೇಳುವುದಾದರೆ, ವ್ಯಾಕರಣ ನಿಯಮದಿಂದ ಕೆಲವೆಡೆ ಬಹಳ ಗ್ರಹಣವಿದ್ದು ಹೀಗೆ ಆಗುತ್ತವೆಂದು ಹೇಳಿಬಿಡಬಹುದು. ಈ ಸಮಸ್ಯೆಗೆ ಸರಿಯಾದ ಉತ್ತರಕ್ಕೆ ಭಾಷಾಶಾಸ್ತ್ರವನ್ನು ಪರಿಶೀಲಿಸಬೇಕು. ಅದರಂತೆ, ನೀನ್, ಆನ್, ತಾನ್-ಎಂದು ಆದಿಗೆ ದೀರ್ಘ ಬಂದಿರುವುದು ಉಚ್ಚಾರಣೆಯ ಸೌಕರ್ಯಕ್ಕಾಗಿ ಎಂದು ನಿರ್ಧರಿಸಬೇಕಾಗುತ್ತದೆ.

ಇನ್ನು ಚತುರ್ಥೀ ರೂಪಗಳಾದ ನಿನಗೆ, ಎನಗೆ (ನನಗೆ), ತನಗೆ-ಎಂಬ ರೂಪಗಳ ನಿಷ್ಪತ್ತಿ ವಿಚಾರ:—ಚತುರ್ಥೀ ವಿಭಕ್ತಿಯ ಪ್ರತ್ಯಯಗಳು .ಕೆ (ಕ್ಕೆ), ಗೆ (ಇಗೆ ಇಂಗೆ) ಎಂಬವು. ಇವುಗಳಲ್ಲಿ ಯಾವುದನ್ನು ಹಚ್ಚಿದರೂ ನಿನಗೆ, ಎನಗೆ, ತನಗೆ-ಎಂದಾಗಲಾರವು. 'ಕೆ' ಅಥವಾ 'ಕ್ಕೆ' ಎಂಬಿವು ನಪುಂಸಕ ಲಿಂಗದಲ್ಲಿ ಬರುವವುಗಳಾದುದರಿಂದ ಅವನ್ನಿಲ್ಲಿ ಬಿಟ್ಟುಬಿಡಬಹುದು. ನಾಡಿಂಗೆ, ಗುರುವಿಂಗೆ, ಪಿತೃವಿಂಗೆ-ಆಗುವ ರೀತಿಯಲ್ಲಿ ನಿನ್, ಎನ್, ತನ್-ಎಂಬಿವಕ್ಕೆ 'ಇಂಗೆ' ಪ್ರತ್ಯಯ ಹಚ್ಚಲಾಗುವುದಿಲ್ಲ. 'ಇಗೆ' ಎಂಬುದನ್ನು ಹಚ್ಚಿದಾಗ ನಿನ್ + ಇಗೆ-ನಿನಿಗೆ ಎನ್ + ಇಗೆ-ಎನಿಗೆ (ನನಿಗೆ), ತನ್ + ಇಗೆ-ತನಿಗೆ ಎಂದಾಗಬೇಕಾಗುವುದು. ಇತರ ಸರ್ವನಾಮ ಪ್ರಕೃತಿಗಳಾದ ಅವನ್, ಅವಳ್, ಅವರ್-ಇತ್ಯಾದಿಗಳಿಗೆ 'ಇಗೆ' ಪ್ರತ್ಯಯ ಸೇರಿದಾಗ ಅವನಿಗೆ, ಅವಳಿಗೆ, ಅವರಿಗೆ-ಎಂಬ ರೂಪಗಳಾಗುವವಷ್ಟೆ. ಹಾಗಿದ್ದರೆ ಗ್ರಾಮ್ಯರು ಮಾತನಾಡುವಾಗ ಹೇಳುವ ನಿನಿಗೆ, ನನಿಗೆ, ತನಿಗೆ-ಎಂಬವು ಸರಿಯೆನಿಸಬಹುದಷ್ಟೆ? ಆದರೆ, ಸಾಹಿತ್ಯ ಭಾಷೆಯಲ್ಲಿ ಹಾಗೂ ವ್ಯಾಕರಣೋಕ್ತ ಶುದ್ಧರೂಪದಲ್ಲಿ ನಿನಗೆ, ಎನಗೆ (ನನಗೆ), ತನಗೆ (ಬಹುವಚನದಲ್ಲಿ ನಿಮಗೆ, ಎಮಗೆ, ತಮಗೆ) ಎಂದೇ ಇದೆಯಲ್ಲ? ಹಾಗಿದ್ದರೆ ಈ ಸರ್ವನಾಮಗಳಿಗೆ ಬರುವ ಚತುರ್ಥೀ ವಿಭಕ್ತಿ ಪ್ರತ್ಯಯವು 'ಅಗೆ'ಯೆ? ಒಟ್ಟಿನಲ್ಲಿ 'ಅಗೆ' ಎಂಬ ಪ್ರತ್ಯಯವೇ ಇಲ್ಲದಿರುವುದರಿಂದ ಆ ರೀತಿಯ ತೀರ್ಮಾನಕ್ಕೆ ಆಸ್ಪದವಿಲ್ಲ. ವ್ಯಾಕರಣಶಾಸ್ತ್ರದಲ್ಲಿ ಹೇಳಿರುವುದನ್ನಿಲ್ಲಿ ನೋಡೋಣ-

"ಮೊದಲೊಳ್ ಹ್ರಸ್ವೈಕಸ್ವರ
ಮೊದವೆ ಪರಂ ಸ್ವರಮುದಾಗೆ ಣಣಲಯಳಂಗ
ಳ್ಗುದಯಿಸುಗುಂ ದ್ವಿತ್ವಂ ಪೂ
ರ್ವದೀರ್ಘಕವ್ಯಯಕೆ ವರ್ಣತತಿಗದ್ವಿತ್ವಂ ॥"[12]

ಇದಲ್ಲದೆ ಶಬ್ದಾನುಶಾಸನ (ಸೂತ್ರ ೫೩) ತಿಳಿಸುವಂತೆ 'ನಿನ್' ಎಂಬುದಕ್ಕೆ 'ಅಗೆ' ಯಾಗಲೀ 'ಇಗೆ'ಯಾಗಲಿ ಸೇರಿದ್ದುದು ನಿಜವಾದರೆ ನಿನ್ನಗೆ, ನಿನ್ನಿಗೆ-ಎಂದು ನಡುವಿನ ಅಕ್ಷರಕ್ಕೆ ದ್ವಿತ್ವ

12. ಶಬ್ದಮಣಿದರ್ಪಣ ಸೂ. ೭೯

ಅಕ್ಷರಕ್ಕೆ ದ್ವಿತ್ವ ಬರಬೇಕಾಗಿತ್ತು. ಈ ಕಾರಣಗಳಿಂದ ಕನ್ನಡ ವೈಯಾಕರಣರಿಗೆ ಆ ಮೂರು ಸರ್ವನಾಮಗಳ ಚತುರ್ಥೀ ವಿಭಕ್ತಿಯ ರೂಪಸಿದ್ಧಿಯನ್ನು ಸಕಾರಣವಾಗಿ ತಿಳಿಸಲಿಕ್ಕಾಗಲಿಲ್ಲವೆಂದು ಹೇಳಬಹುದು.

ನಾಗವರ್ಮನು 'ಭಾಷಾ ಭೂಷಣ' ದಲ್ಲಿ ಮೇಲಿನ ಮೂರು ಸರ್ವನಾಮಗಳಿಗೆ ನಿನ್ನ, ಎನ್ನ, ತನ್ನ-ಎಂಬೀ ಷಷ್ಠೀರೂಪಗಳನ್ನು ಹೇಳಿ, ಚತುರ್ಥಿಯ 'ಗೆ' ಪ್ರತ್ಯಯ ಬಂದಾಗ ಆ ರೂಪಗಳಿಗೆ ನಿನ, ಎನ, ತನ- ಎಂಬ ರೂಪಗಳು ಆದೇಶವಾಗುತ್ತವೆ (ಸೂತ್ರ ೧೦೦) ಎಂದಿದ್ದಾನೆ. ಈ ನಿಯಮ ನಿರೂಪಣೆಯೂ ಅಷ್ಟು ಸರಿ ಎನ್ನಲಾಗುವುದಿಲ್ಲ. 'ನಿನ್ನ' ಎಂಬುದು 'ನಿನ' ಆಗುವಾಗ 'ನ್' ಎಂಬೊಂದು ವ್ಯಂಜನವು ಲೋಪವಾಯಿತೆನ್ನುವುದೇ ಸಮಂಜಸವಲ್ಲವೆ? ಅಲ್ಲದೆ ಚತುರ್ಥಿ ವಿಭಕ್ತಿ ಪ್ರತ್ಯಯವನ್ನು ಷಷ್ಠಿ ಪ್ರತ್ಯಯದನಂತರ ಹಚ್ಚುವುದೆಂಬುದು ವಿಚಿತ್ರ ರೀತಿಯ ನಿಯಮನೆನಿಸದೆ? ಒಂದು ವೇಳೆ ತೃತೀಯೆಯ ಮುಂದೆ ಚತುರ್ಥಿ, ಪಂಚಮಿ, ಷಷ್ಠಿ, ಸಪ್ತಮೀ ವಿಭಕ್ತಿಗಳು ಬರುವುದಿದೆಯೆನ್ನಬಹುದು. 'ಗುರುವಿಂ' ಎಂಬ ತೃತೀಯೆಗೆ ಮುಂದಿನ ವಿಭಕ್ತಿ ಪ್ರತ್ಯಯಗಳು ಸೇರಿ ಗುರುವಿಂಗೆ, ಗುರುವಿನತ್ತಣಿಂ, ಗುರುವಿನ, ಗುರುವಿನೊಳ್-ಎಂಬ ರೂಪಗಳಾಗುತ್ತಿವೆ. ಷಷ್ಠಿಯ ಮುಂದೆ ಚತುರ್ಥಿಯನ್ನು ಹಚ್ಚುವುದು ವ್ಯವಹಾರಶುದ್ಧವೆನಿಸದು. ಹಾಗಿದ್ದರೆ ನಿನಗೆ, ಎನಗೆ, ತನಗೆ-ಎಂಬ ಚತುರ್ಥೀ ರೂಪಗಳು ಹೇಗೆ ಸಿದ್ಧಿಸಿವೆ? ನೋಡೋಣ.

ನಿನ್, ಎನ್, ತನ್-ಎಂಬ ಸರ್ವನಾಮ ಪ್ರಕೃತಿಗಳೆಂದು ತೆಗೆದುಕೊಳ್ಳಬಹುದು. ಪ್ರಥಮಾ ವಿಭಕ್ತಿಯಲ್ಲಿ ಇವುಗಳ ಆದ್ಯಕ್ಷರಕ್ಕೆ ಆಘಾತವಿದ್ದು (accent) ಉಚ್ಚಾರಣ ಸೌಕರ್ಯಕ್ಕಾಗಿ ದೀರ್ಘ ಬಂದಿದೆ. ಚತುರ್ಥಿಯ 'ಗ' ಪ್ರತ್ಯಯವು ಮೇಲಿನ ಪ್ರಕೃತಿಗಳಿಗೆ ಸೇರಿದಾಗ ನಿನ್ಗೆ, ಎನ್ಗೆ, ತನ್ಗೆ-ಎಂದಾಗಬೇಕಷ್ಟೆ. ಗ್ರಾಮ್ಯವಾಗಿ ಇಂದಿಗೂ ನಿಂಗೆ, ನಂಗೆ—ಎಂದು ಹೇಳುವುದನ್ನು ಇಲ್ಲಿ ಲಕ್ಷಿಸಬಹುದು. ಗ್ರಾಮ್ಯತೆಯನ್ನು ಬಿಟ್ಟು, ವ್ಯಾಕರಣ ಶುದ್ಧವಾಗಿ ನಿನ್ಗೆ, ಎನ್ಗೆ, ತನ್ಗೆ-ಎಂಬಲ್ಲಿ ಉಚ್ಚಾರಣೆ ಸುಗಮವಾಗಿಲ್ಲ, ಆದುದರಿಂದ ಇಲ್ಲಿ ಭಾಷಾಶಾಸ್ತ್ರ ಪ್ರವೇಶ ಮಾಡಿತು. ಇಲ್ಲಿ ಒಂದು ಸ್ವರಾಗಮವಾಯಿತು. ಈ 'ಸ್ವರಾಗಮ' ವನ್ನು "Anaptyxis" ಎನ್ನುವರು. ಸಂಸ್ಕೃತದಲ್ಲಿಯೂ ಉಚ್ಚಾರಣೆಯ ಸೌಲಭ್ಯಕ್ಕಾಗಿ ಸ್ವರಾಗಮವಾದುದುಂಟು—ಪೃಥ್ವೀ-ಪೃಥಿವೀ, ಸ್ವರ್ಣ-ಸುವರ್ಣ ಇತ್ಯಾದಿಗಳು ಅಂಥವು. ಸಂಸ್ಕೃತ ಶಬ್ದಗಳು ತದ್ಭವವಾಗುವಲ್ಲಿಯೂ ಸ್ವರಾಗಮವಾದುದುಂಟು: ಭಕ್ತ-ಬಕುತ, ಕಾರ್ಯ-ಕಾರಿಯ, ಸೂರ್ಯ-ಸೂರಿಯ, ವರ್ಷ-ವರುಷ ಇತ್ಯಾದಿಗಳು. ಈ ಲಕ್ಷಣದಂತೆ ಅವಂಗೆ (ಅವನ್ಗೆ)-ಅವನಿಗೆ, ಅವಳ್ಗೆ-ಅವಳಿಗೆ, ಅವರ್ಗೆ-ಅವರಿಗೆ, ಗುರುಗಳ್ಗೆ-ಗುರುಗಳಿಗೆ ಹೀಗೆ ಹೊಸಗನ್ನಡದ ರೂಪಗಳಲ್ಲಿ ಇಕಾರಾಗಮವಾಗಿದೆ. ರಾಮುಂಗೆ, ಕಣ್ಗೆ, ಪುಲ್ಗೆ-ಎಂಬವು ರಾಮನಿಗೆ, ಕಣ್ಣಿಗೆ, ಹುಲ್ಲಿಗೆ ಎಂಬ ರೂಪ ತಾಳಿರುವುದೂ ಇಕಾರಾಗಮದಿಂದಲೇ. ಹೊಸಗನ್ನಡದಲ್ಲಿ ಮಾತ್ರ ರೂಪ ತಾಳಿರುವ ಅವನಿಗೆ, ಅವಳಿಗೆ, ರಾಮನಿಗೆ, ಎಂಬವುಗಳ ನಿಷ್ಪತ್ತಿ ಸಾದೃಶ್ಯದಿಂದ ನಿನ್, ಎನ್ (ನನ್), ತನ್-ಗಳಿಗೆ ಇಕಾರಾಗಮವನ್ನು ಮಾಡಿ ನಿನಿಗೆ, ನನಿಗೆ, ತನಿಗೆ ಎಂಬುದು ಭಾಷಾಶಾಸ್ತ್ರದ ದೃಷ್ಟಿಯಿಂದ ತಪ್ಪಲ್ಲವೆನಿಸಿದರೂ ವ್ಯಾಕರಣ ಶಾಸ್ತ್ರದ ದೃಷ್ಟಿಯಿಂದ ತಪ್ಪೆನಿಸುವುದು. ಸಿದ್ಧವಾದ ರೂಪವನ್ನು ಕೆಡಿಸಬಾರದು.[13]

---

13. ಅನ್ಯತ್ರ ಇದೇ ಲೇಖಕನು ಬರೆದಿರುವ "ಸಪ್ತವಿಭಕ್ತಿಗಳು" ಎಂಬ ಲೇಖಾಂತರ್ಗತವಾದ 'ಚತುರ್ಥೀ ವಿಭಕ್ತಿ' ಎಂಬ ಪ್ರಕರಣದಲ್ಲಿ ಇನ್ನೂ ಹೆಚ್ಚಿನ ವಿವರಗಳನ್ನು ಕಾಣಬಹುದು.

ಶಬ್ದಗಳು ಮಾರ್ಪಾಟು ಹೊಂದುವ ಕೆಲವು ಲಕ್ಷಣಗಳನ್ನಿಲ್ಲಿ ಅವಲೋಕಿಸಬಹುದು. ಭಾಷಾ ಶಾಸ್ತ್ರಾಧ್ಯಯನದ ಅಂಶಗಳಿವು :

೩. **ಧ್ವನಿ ವಿಕಾರ** (Phonetic Decay) : ಇದರಲ್ಲಿ ಅಕ್ಷರಗಳ ಲೋಪ-ಆಗಮ-ಆದೇಶ ಗಳು ಇರುತ್ತವೆ. ಚಮ್ಮಟಿಗೆ-ಚಾಟಿ ; ಬರೆಹ-ಬರಹ ; ಬರೆವಣಿಗೆ-ಬರವಣಿಗೆ ; ಗಂಡು+ಕೂಸು-ಗಂಡುಸು, ಗಂಡಸು ; ಹೆಣ್ಣು+ಕೂಸು-ಹೆಂಗುಸು, ಹೆಂಗಸು ; ತಣ್+ಕೂಳು-ತಂಗೂಳು, ತಂಗುಳು, ಥಂಗಳು ; ಕರುಳು-ಕರಳು ; ನಾರಾಯಣ-ನಾಣ, ನಾಣಿ ; ಪದ್ಮಾವತೀ-ಪದ್ದು ; ಲೀಲಾವತೀ-ಲೀಲ . . . ಇತ್ಯಾದಿ.

೪. **ಏಕವರ್ಣ ಲೋಪ** (Haplology) : ತಮ್ಮ + ತಮ್ಮ - ತಂತಮ್ಮ; ನಡೆದು+ ನಡೆದು-ನಡೆನಡೆದು ; ನುಡಿದು+ನುಡಿದು-ನುಡಿನುಡಿದು ; ಮಗ+ಮಗ-(ಮಮ್ಮಗ) ಮೊಮ್ಮಗ.

೫. **ರೂಪಸಾಮ್ಯ** (Analogy) : ಈ ಲಕ್ಷಣದಲ್ಲಿ ಅನುಕರಣೆ, ಸೌಲಭ್ಯಾಕಾಂಕ್ಷೆ ಎಂಬೆ ರಡೂ ಅಂತರ್ಗತವಾಗಿರುತ್ತವೆ, ಉದಾ : 'ಪೌರ್ವಾತ್ಯ' ಎಂಬುದರಂತೆ 'ಪಾಶ್ಚಿಮಾತ್ಯ' ಎಂಬ ಶಬ್ದ ರೂಢಿಗೆ ಬಂದಿದೆ. ವ್ಯಾಕರಣದ ಪ್ರಕಾರ 'ಪಾಶ್ಚಾತ್ಯ' ಎಂದಾಗಬೇಕು. 'ದಿವಸ್ಪತಿ' ಎಂಬುದರಂತೆ 'ವನಸ್ಪತಿ' ಶಬ್ದವಾಗಿದೆ. ನಿರ್ಣಯಿಸು, ನಿಶ್ಚಯಿಸು-ಎಂಬ ನಿಷ್ಪತ್ತಿ ಸಾಮ್ಯ ದಿಂದ ಪರಿಚಯಿಸು, ವಿಶ್ರಾಂತಿಸು, ಪ್ರಯಾಣಿಸು, ಉತ್ತರಿಸು (ಉತ್ತರ ಹೇಳು ಎಂಬರ್ಥದಲ್ಲಿ)- ಇತ್ಯಾದಿ ಪ್ರಯೋಗಗಳಾಗುತ್ತವೆ. 'ಬೆಳೆಯುತ್ತದೆ' ಎಂಬ ರೂಪವಿರುವಂತೆ 'ಮಳೆ ಬರುತ್ತಿದೆ' ಎಂಬ ಅರ್ಥದಲ್ಲಿ 'ಮಳೆಯುತ್ತದೆ' ಎಂತಲೂ ಪ್ರಯೋಗಿಸತೊಡಗಿದ್ದಾರೆ.

ಮೇಲಿನವು ಶಬ್ದಗಳ ಸ್ವರೂಪ ವ್ಯತ್ಯಾಸಕ್ಕೆ ಉದಾಹರಣೆಗಳು. ಶಬ್ದರೂಪ ವ್ಯತ್ಯಾಸವಾಗು ವಂತೆ ಕಾಲಾನುಗುಣವಾಗಿ ಮತ್ತು ಪ್ರದೇಶಾನುಗುಣವಾಗಿ ಶಬ್ದಗಳಿಗೆ ಅರ್ಥ ವ್ಯತ್ಯಾಸವಾಗು ವುದೂ ಉಂಟು. ಭಾಷಾ ಶಾಸ್ತ್ರಜ್ಞರು ಹೀಗೆ ಆಗುವುದನ್ನು ಪರಿಗಣಿಸಿ ಇದನ್ನು 'ಶಬ್ದಾರ್ಥ ಶಾಸ್ತ್ರ' (Semantics) ಎಂದು ಕರೆದಿದ್ದಾರೆ. ಈ ಲಕ್ಷಣದಂತೆ ಶಬ್ದಗಳ ಅರ್ಥವು ವಿಶಾಲವಾಗು ವುದೂ ಸಂಕುಚಿತವಾಗುವುದೂ ಪರಿವರ್ತಿತವಾಗುವುದೂ ಉಂಟು. ಅವಕ್ಕೆ ಉದಾಹರಣೆಗಳಿವು :

೧. **ಅರ್ಥವೈಶಾಲ್ಯ** (Extension in meaning). ಎಲ್ಲೆಡೆ ಇಂದು ಪ್ರಚಲಿತವಾಗಿ ರುವ 'ಎಣ್ಣೆ' ಎಂಬ ಶಬ್ದವು ಎಳ್+ನೆಯ್ ಎಂಬ ವಿಂಗಡಣದ ಅರ್ಥಕ್ಕೆ ಅನುಗುಣವಾಗಿ ಎಳ್ಳಿ ನಿಂದ ತೆಗೆದ ತೈಲವನ್ನು ಮಾತ್ರ ಸೂಚಿಸುವುದು. (ತಿಲದಿಂದ ಬಂದುದಾಗಿ 'ತೈಲ' ಎಂಬ ಸಂಸ್ಕೃತ ಶಬ್ದವೂ ಇದೇ ಅರ್ಥವನ್ನು ಸೂಚಿಸುವಂತಿದೆ). ಆದರೆ ಇಂದು 'ಎಣ್ಣೆ' ಎಲ್ಲಾ ತರದ ತೈಲಕ್ಕೂ ಅನ್ವಯಿಸುತ್ತದೆ. ಎಳ್ಳೆಣ್ಣೆ, ತೆಂಗಿನೆಣ್ಣೆ, ಹರಳೆಣ್ಣೆ-ಇತ್ಯಾದಿ ಪ್ರಯೋಗಗಳಿವೆ. 'ಚೆಂಬು' ಅಂದರೆ ತಾಮ್ರ ಮತ್ತು ತಾಮ್ರದ ಪಾತ್ರೆ. ಇಂದು ಎಲ್ಲ ತರದ ವಿಶಿಷ್ಟ ಆಕೃತಿಯ ಪಾತ್ರೆಗೆ ಸಂಬಂಧಿಸಿದ್ದು ಬೆಳ್ಳಿಚೆಂಬು, ಚಿನ್ನಚೆಂಬು, ಮಣ್ಣುಚೆಂಬು, ಚೆಂಬಿನ ಚೆಂಬು (ತಾಮ್ರದ ಚೆಂಬು)-ಇತ್ಯಾದಿಯಾಗಿ ಅರ್ಥ ವ್ಯಾಪಕತೆಯನ್ನು ಪಡೆದಿದೆ, 'ಪತ್ರ' ಎಂದರೆ ಎಲೆ. ಈಗ ಅದಕ್ಕೆ ಕಾಗದ ಅಥವಾ ಯಾರಿಗಾದರೂ ಬರೆದಿರುವ ಓಲೆ ಎಂದು ಅರ್ಥ.

೨. **ಅರ್ಥ ಸಂಕೋಚ** (Contraction). 'ನೆಯ್' ಎಂಬುದಕ್ಕೆ 'ತೈಲ' ಎಂಬ ಅರ್ಥವಿತ್ತು. ಈಗ ಅದಕ್ಕೆ ಆಕಳ ಅಥವಾ ಎಮ್ಮೆಯ 'ತುಪ್ಪ' ಎಂಬ ಅರ್ಥವಾಗಿದೆ. 'ಅಗ್ಗ' ಎಂದರೆ ಬಹಳ ಬೆಲೆಯುಳ್ಳದ್ದು. ಈಗ ಅದಕ್ಕೆ 'ಬೆಲೆ ಕಡಮೆಯದು' ಎಂಬ ಅರ್ಥ ಬಂದಿದೆ.

'ಸಂಸ್ಥೆ' ಎಂಬ ಶಬ್ದದ ಅಪಭ್ರಂಶವಾಗಿರುವ 'ಸಂತೆ' ಮೂಲಕ್ಕಿಂತ ಹೀನನಾದ ಅರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ.

೩. **ಪರಿವರ್ತನೆ** (Change in meaning). 'ಅಮ್ಮ' ಎಂಬ ಶಬ್ದಕ್ಕೆ 'ತಂದೆ' ಎಂಬ ಅರ್ಥವಿದ್ದುದು ಇಂದು 'ತಾಯಿ' ಎಂಬ ಅರ್ಥವಾಗಿ ಪರಿವರ್ತಿತವಾಗಿದೆ. 'ವಸ್ತ್ರ' ಎಂಬರ್ಥದಲ್ಲಿ ರುವ 'ಚೀರ' ಎಂಬ ಸಂಸ್ಕೃತ ಶಬ್ದವು 'ಶೀರೆ' ಎಂದು ತದ್ಭವವಾಗಿ ಹೆಂಗಸರು ಮಾತ್ರ ಉಡುವ ವಸ್ತ್ರವೆನಿಸಿದೆ. 'ವೇಗವಾಗಿ' ಎಂಬರ್ಥದಲ್ಲಿ ಮೈಸೂರು ಕಡೆ ಬಳಕೆಯಾಗುವ 'ಜಾಗ್ರತೆ ಯಾಗಿ' ಎಂಬುದೂ ಅದೇ ಅರ್ಥದಲ್ಲಿ ಧಾರವಾಡದ ಕಡೆ ಪ್ರಯೋಗಿಸುವ ಲಘುವಾಗಿ (ಲಗೂನೆ) ಎಂಬುದೂ ದಕ್ಷಿಣ ಕನ್ನಡದಲ್ಲಿ 'ಮೆಲ್ಲನೆ' ಎಂಬ ವಿರುದ್ಧಾರ್ಥವನ್ನು ತಳೆದಿದೆ-ಇದನ್ನು ಪ್ರಾದೇಶಿಕ ಅರ್ಥವ್ಯತ್ಯಾಸವೆನ್ನಬಹುದು.

ಕನ್ನಡದಲ್ಲಿ ಭಾಷಾ ಶುದ್ಧತೆಯನ್ನು ನಿರ್ಣಯಿಸುವವರು ವ್ಯಾಕರಣವನ್ನು ಸರಿಯಾಗಿ ಅರ್ಥ ಮಾಡಿ ತಿಳಿದುಕೊಳ್ಳುವಂತೆ, ವ್ಯಾಕರಣಕ್ಕೆ ಆಧಾರಭೂತವಾದ ಭಾಷಾ ಪ್ರಯೋಗಗಳನ್ನೂ ಲಕ್ಷ್ಯದಲ್ಲಿಡಬೇಕೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅದಕ್ಕಾಗಿ ಭಾಷಾಶಾಸ್ತ್ರದ ಅನುಭವ ಅನಿವಾರ್ಯ.

ನಮ್ಮ ನಾಡು ಇಂದು ರಾಜಕೀಯವಾಗಿ ಕೆಲಮಟ್ಟಿಗೆ ಒಂದುಗೂಡಿದೆಯಾದರೂ ಅದಿನ್ನೂ ಪರಿಪೂರ್ಣವಾಗಿಲ್ಲ. ಇದಕ್ಕಿಂತಲೂ ಮೇಲಾಗಿ ನಮ್ಮ ನುಡಿಯನ್ನು ಒಂದುಗೂಡಿಸಬೇಕಾಗಿದೆ. ನಮ್ಮ ತಾಯಿನುಡಿ ಅಥವಾ ನಾಡುನುಡಿ ಕನ್ನಡವೇ ಆದರೂ ಅದು ಹಲವಾರು ಪ್ರಾದೇಶಿಕ ಭೇದ ಗಳಿಂದ ಬೇರೆ ಬೇರೆಯಾಗಿಯೂ ಕಾಣುತ್ತದೆ. ಸಾಹಿತ್ಯಭಾಷೆಯಲ್ಲಾದರೂ ಅದು ಒಂದುಗೂಡಿ ರುವುದು ಅವಶ್ಯಕ. ಹಾಗೆ ಒಂದುಗೂಡುವುದರೊಂದಿಗೆ ಶಬ್ದಸಂಪತ್ತು, ಅರ್ಥಸಂಪತ್ತು, ಅಭಿವ್ಯಕ್ತಿ ಸಾಮರ್ಥ್ಯಗಳೂ ಹೆಚ್ಚಬೇಕು. ಅದಕ್ಕಾಗಿ ನಮ್ಮ ನಾಡಿನ ಬೇರೆ ಬೇರೆ ಕಡೆಗಳಲ್ಲಿರುವ ದೇಶೀ ಶಬ್ದಗಳನ್ನು ಭಾಷಾ ಧರ್ಮಕ್ಕೆ ತಕ್ಕಂತೆ ಗ್ರಾಮ್ಯತೆ ತಲೆದೋರದಂತೆ ಸರಿಗೊಳಿಸಿ ಶಬ್ದ ಭಂಡಾರಕ್ಕೆ ಸೇರಿಸಿ. ಎಲ್ಲ ಕನ್ನಡಿಗರಿಗೆ ಅವುಗಳ ಪರಿಚಯ ಮಾಡಿಕೊಡಬೇಕು. ಭಾಷಾಶಾಸ್ತ್ರಕ್ಕೂ ವ್ಯಾಕರಣಕ್ಕೂ ಅನುಗುಣವಾಗುವ ಮಾರ್ಪಾಡುಗಳೊಡನೆ ಅವನ್ನು ಒಪ್ಪಿ ಸ್ವೀಕರಿಸಬೇಕು. ಹಳಗನ್ನಡದ ವ್ಯಾಕರಣ ಪಂಚಾಂಗದಲ್ಲಿ (ತಳಹದಿಯಲ್ಲಿ) ಹೊಸಗನ್ನಡದ ವಿವೇಚನಾಪೂರ್ವಕ ಹೊಸ ವ್ಯಾಕರಣದ ಉತ್ತಮ ರಚನೆಯೂ ಆಗಬೇಕು. ಈ ನಿರ್ಮಾಣಕಾರ್ಯದಲ್ಲಿ ಹಿಂದಿನ ಮತ್ತು ಇಂದಿನ ಶಬ್ದರೂಪಗಳ ಶುದ್ಧತೆಯನ್ನು ವ್ಯಾಕರಣಶಾಸ್ತ್ರ ಭಾಷಾಶಾಸ್ತ್ರಗಳೆರಡರ ನಿಕಷ ದಲ್ಲಿಟ್ಟು ನಿಶ್ಚಯಿಸಿಕೊಳ್ಳಬೇಕೆಂಬುದನ್ನು ದಿಗ್ದರ್ಶಿಸಿ, ಅಂತಹ ವಿಚಾರವನ್ನು ಈ ಲೇಖನವು ಪ್ರಚೋದಿಸುವುದೆಂದು ಭಾವಿಸಲಾಗಿದೆ.

---

# ತೌಳವ ಪ್ರಾದೇಶಿಕ ನಾಮಗಳು

**ಲೇಖಕರು: ವಿದ್ವಾನ್ ಕೆ. ವೆಂಕಟರಾಯಾಚಾರ್ಯ**

'ತೌಳವ ಭಾಷೆ' ಯೆಂಬ ಲೇಖನದಲ್ಲಿ[1] ಕೆಲವು ನುಡಿತಗಳ ಬಗ್ಗೆ ಬರೆಯಲಾಗಿದೆ. 'ತುಳು' ವೆಂಬ ನುಡಿಯ ಹುಟ್ಟು-ಬಗೆತಗಳ ಬಗ್ಗೆ ಶ್ರೀ ಎಂ. ಗೋವಿಂದ ಪೈಯವರು ಬರೆದಿದ್ದಾರೆ.[2] ರಾಮಭೋಜನೆಂಬ ರಾಜನು ಭಾರ್ಗವನ ಅಪ್ಪಣೆಯಂತೆ 'ತುಲಾಭಾರ' ಹಾಗೂ 'ತುಲಾಪುರುಷ ದಾನ' ಮಾಡಿದುದರಿಂದ, ಅವನಿಗೆ ತುಲಾರಾಜ, ತುಲಾ ದೇಶಾಧಿಪ, ತುಲಾಭಾರನೆಂದು ಹೆಸರು ಬಂತೆಂದೂ; ಆ ದೇಶದ ಜನರಿಗೆ 'ತೌಲವ' ರೆಂಬ ಹೆಸರಾಯಿತೆಂದೂ ತಿಳಿಯುತ್ತದೆ.[3] ಯೆಂದು ಹೇಳಿ, "ಈ ಕಟ್ಟುಕತೆಯನ್ನು ಆದರಷ್ಟಕ್ಕೆ ನೀಗಿಬಿಡಬಹುದು, ಏಕೆಂದರೆ, ಅಚ್ಚ ಅನಾರ್ಯ ದೇಶಗಳಾದ ಚೋಳ, ಪಾಂಡ್ಯ, ಚೇರ (= ಕೇರಳ) ಗಳಿಗೆ ದ್ರಾವಿಡ ಭಾಷೆಗಳಿಂದ ತಾನೆ ಆಯಾ ಹೆಸರಾದಂತೆ, ದ್ರಾವಿಡ ಭಾಷೆಯಿಂದಲೆ ಹುಟ್ಟಿರಬೇಕಾದ ತುಳು ಎಂಬ ಹೆಸರನ್ನು ಸಂಸ್ಕೃತದಿಂದ ಹುಟ್ಟಿಸಲಿಕ್ಕೆ ಹೆಣೆದಿರುವ ಈ ಕಲ್ಪನೆಯಲ್ಲಿ ನೀರು ನಿಲ್ಲುವಂತಿಲ್ಲ" ವೆಂದಿದ್ದಾರೆ. ಮತ್ತು ಅವರು ಬರೆಯುತ್ತಾ, "ಈ ನಾಡಿನ ಕಡಲ ಕರೆಯ ಮಣ್ಣು ಹೋಲಿಕೆಯಲ್ಲಿ ಸಹಜವಾಗಿ ಮೆತ್ತನಾಗಿರುವುದರಿಂದ, ಮೆದು ಮಣ್ಣಿನ ಪ್ರದೇಶ ಎಂಬ ಅರ್ಥದಲ್ಲಿ ಈ ದೇಶಕ್ಕೆ ತುಳುವ ಎಂಬ ಹೆಸರಾಗಿರಬಹುದೇನೋ!" ಎಂದಿದ್ದಾರೆ. ಈ ಬಗ್ಗೆ ಉದಾಹರಿಸುವಂತೆ, ಮರು, ಕಚ್ಛ, ಜೇರ್‌ಗಳನ್ನು ಹೇಳಿದ್ದಾರೆ. ಮತ್ತೆ ತಮಿಳು ನುಡಿಯ ಶಬ್ದಗಳಿಂದಲೂ, ಹರಿವಂಶಗ್ರಂಥದ ಕಥೆಯಿಂದಲೂ ಬೆಂಬಲಿಸಿದರೆ, "ಕಡಲ ಕರೆಯ ಪ್ರದೇಶವಾಗಿದ್ದ ಈ ನಾಡಿನಲ್ಲಿ ಆ ಹಳಗಾಲದಲ್ಲಿ ಬೆಸ್ತರೂ ಅಂಬಿಗರೂ ಸಹಜವಾಗಿ ಹೇರಳವಾಗಿದ್ದು ದಾಶಭೂಯಿಷ್ಠವಾಗಿರಬೇಕಾದ ಈ ದೇಶವು ಅದೇ ಕಾರಣದಿಂದ ತುಳು ಎಂದು ಕರೆಯಲ್ಪಟ್ಟಿರಬೇಕು." ಎಂದು, ಅಂಬಷ್ಠದ ಉದಾಹರಣವೆತ್ತಿದ್ದಾರೆ! ತುಳು ಭಾಷೆಯಲ್ಲೂ 'ತುಲಾವುನಿ', 'ತುಲಾವು' ಎಂಬುದು ದಾಶವೃತ್ತಿಗೆ ಸೇರಿದುದು ಇಲ್ಲಿ ನೆನೆಯತಕ್ಕುದು. "ಸಾಹಿತ್ಯದಲ್ಲಿ ತುಳುನಾಡಿನ ಮೊದಲ ಉಲ್ಲೇಖ: ಪರಣಾರ್ ಎಂಬ ತಮಿಳು ಕವಿಯ ಸಾಹಿತ್ಯದಲ್ಲಿ 'ತುಳುನಾಟ್' ಎಂಬ ಹೆಸರಿದೆ. ಸಂಘಮ್ ಸಾಹಿತ್ಯ ಕ್ರಿ.ಶ. ಒಂದನೆಯ ಶತಕದಿಂದ ಮೂರನೆಯ ಶತಕದ ತನಕ ಬರೆಯಲ್ಪಟ್ಟಿರಬೇಕೆಂದು ಸಂಶೋಧಕರ ಅಭಿಪ್ರಾಯ"[4] ಕರ್‌ನಾಟ-ಕರ್ಣಾಟ-ಕನ್ನಡವೆಂಬುದು ಎರಡು ಕೂಡು ನುಡಿಗಳಿಂದಾಗಿ, 'ದೊಡ್ಡನಾಡು' ಎಂಬರ್ಥದಲ್ಲಿ ಬಂದಿರಬೇಕೆಂಬುದನ್ನು[5] ಗಮನಿಸಿದರೆ, 'ತುಳುವ' ವೆಂದರೆ 'ತುಳು ದೇಶದವ' ನೆಂಬುದೂ ದೇಶದಿಂದ ಬಂದಿರಬೇಕೆನ್ನಲಾಗುತ್ತದೆ. ಈ ಬಗೆಗೆ ಬಲ್ಲವರ ಗಮನ ಅವಧಾನ

---

1. ಪ್ರಬುದ್ಧ ಕರ್ಣಾಟಕ, ೧೯೬೫.
2. ತೆಂಕನಾಡು-ತುಳುನಾಡು ಪೂರ್ವಸ್ಮೃತಿ, ಪುಟ ೧೮-೧೯.
3. ರಜತಪೀಠ ಮಾಹಾತ್ಮ್ಯ, ಅಧ್ಯಾಯ ೨—೩೬, ೩೭.
4. ತುಳುನಾಡು-ಶ್ರೀ ಪಿ. ಗುರುರಾಜಭಟ್, ಉಡುಪಿ, ಪುಟ ೨೫೯.
5. ಸಾಹಿತ್ಯದ ಹಿನ್ನೆಲೆ, ಪುಟ ೯೦-೯೨.

ಇನ್ನೂ ಹೆಚ್ಚು ಸೆಳೆಯಬೇಕಾಗಿದೆಯೆಂದು ವಿಜ್ಞಾಪನೆ. ಪ್ರಕೃತ, ಸಂಸ್ಕೃತ 'ಮಧ್ವವಿಜಯ' ಟೀಕಾ ಗ್ರಂಥದಲ್ಲಿ[6] ಹೆಸರಿಸಲ್ಪಟ್ಟ ಕೆಲವು 'ತೌಳವ ಪ್ರಾದೇಶಿಕ ನಾಮಗಳು' ವಿವರಿಸಲಾಗಿವೆ. ಈ ಬಗೆಗೆ ಇನ್ನೂ ಹಲವು ಕೃತಿಗಳ ಪರಿಶೋಧನೆಯು ಬೆಂಬಲ ದೊರೆಯಲು ಇದೊಂದು ಕಿರು ಹಜ್ಜೆಯಾಗಿದೆ.

'ಉಡುಪಿ' ಕ್ಷೇತ್ರದ ಹೆಸರಿನ ಬಗ್ಗೆ ಪೌರಾಣಿಕವಾಗಿ ಬೇರೆ ಬೇರೆ ಕಥೆಗಳು ಹೇಳಲಾಗಿವೆ: 'ರಜತಪೀತಪುರ' ವೆಂದರೆ, 'ಬೆಳ್ಳಿಯ ಪೀಠದ ದೇವಾಲಯವುಳ್ಳ ಪುರ' ವೆಂದು ಒಂದು ಕಥನ ವಿದೆ. 'ಉಡುಪಿ' ಯೆಂದರೆ, 'ಉಡುಪನು-ಚಂದ್ರನು-ತಪಸ್ಸುಮಾಡಿದ ಸ್ಥಳ' ಎಂದು ಬೇರೆ ಕಥನವಿದೆ. ಇದು ಕೇವಲ ಸಂಸ್ಕೃತ ಭಾಷೆಯಲ್ಲಿ ನಿರವಿಸಿದುದು, ಸ್ಥಳೀಯವಾಗಿರುವುದು!

ಪರಂತು ಹಲವು ಶಿಲಾಶಾಸನಗಳಲ್ಲೂ[7], ಕೆಳದಿ ನೃಪವಿಜಯ[8] ಮೊದಲಾದ ಕೃತಿಗಳಲ್ಲೂ[9] 'ಉಡುಪಿನ' ಎಂದು ಷಷ್ಠೀ ವಿಭಕ್ತಿರೂಪವಿರುವುದರಿಂದ ಅದರ ಮೂಲರೂಪವು 'ಉಡುಪು' ಎಂದಿರಬೇಕೆಂದು ತೋರುತ್ತದೆ. ಈ ವಿಷಯವು 'ಮಧ್ವವಿಜಯ'ಕಾರನಿಂದ ಹೇಳಲ್ಪಟ್ಟಿದೆ.[10] "ರಜತಪೀತಪುರಂ-'ಒಡಿಪು' ಇತ್ಯಪಭ್ರಷ್ಟಭಾಷಾಯಾಂ." 'ಒಡಿಪು-ಉಡಿಪು-ಉಡುಪು' ಗಳು ರೂಪಾಂತರಗಳೆಂದು, 'ಉಡುಪು' ಎಂಬುದರ ಷಷ್ಠಿವಿಭಕ್ತಿರೂಪ 'ಉಡುಪಿನ' ವೆಂಬುದು ಸಾಧುವೆಂದು ಇಲ್ಲಿ ತಿಳಿಯುತ್ತದೆ! 'ಮಲ್ಪೆ' ಯೆಂದು, 'ಮಲಪೆ' ಯೆಂದು ಈಗ ಹೆಸರಿಸುವ ಉಡುಪಿನ ಬಳಿಯ ಕಡಲ ತಡಿಯ ಬಂದರಿನ ಹೆಸರು 'ಕೆಳದಿ ನೃಪವಿಜಯ' ದಲ್ಲಿ[11] 'ಉಡುಪಿನ ಬಳಿಯೊಳ್ ಮಲಪಿನ' ಎಂದಿದೆ. (ಗ್ರೀಕ ದೇಶದವರ ೨ನೆಯ ಶತಕದ ಪ್ರಹಸನದಲ್ಲಿ 'ಮಲ್ಪಿ ನಾಯಕರು ಕುಕೂಬಿ ಕರ್‌ಕೋ(ಂಡು ಬಾ')[12] ಎಂಬಲ್ಲಿಯ 'ಮಲ್ಪಿ' ಶಬ್ದದ ಬಗ್ಗೆ ಇಲ್ಲಿ ಗಮನಿಸ ಬೇಕಾಗಿದೆ.)

ಮಧ್ವಾಚಾರ್ಯರಿಗೆ ಬಾಲ್ಯದಲ್ಲಿ ಹಾಲುಣ್ಣಲು ಗೋವನ್ನಿತ್ತವರು 'ಮೂಡಿಲ್ಲಾಯ' ಮನೆತನದವರೊಬ್ಬರು.[13] (ಪೂರ್ವಾಲಯವೆಂದು ಇಲ್ಲಿ ಸಂಸ್ಕೃತೀಕರಿಸಿದೆ). ಈ ಶಬ್ದವು ತೌಳವ ಭಾಷೆಯೆನ್ನುವುದಕ್ಕೆ ಇಲ್ಲಿಯ 'ಇಲ್' (ಮನೆ) ಎಂಬುದೆ ಸಾಕ್ಷಿಯಾಗಿದೆ. ಮಧ್ವಾಚಾರ್ಯರಿಗೆ ವಿದ್ಯಾಭ್ಯಾಸ ಮಾಡಿಸಿದವರು 'ತೋಟಂತಿಲ್ಲಾಯ' (ಪೂಗವನಾನ್ವಯಜ) ಬ್ರಾಹ್ಮಣರೊಬ್ಬರು[14]. ಇಲ್ಲಿಯೂ 'ಇಲ್ಲಾಯ' (ಮನೆಯವ) ನೆಂಬುದು ಗಮನಾರ್ಹವಾಗಿದೆ.

ಒಮ್ಮೆ ಮಧ್ವಾಚಾರ್ಯರು ಬಾಲ್ಯದಲ್ಲಿ ನಿಜಬಂಧುಗಳ ಮನೆಯಿಂದೊಬ್ಬರೇ ಹೊರಟು, 'ಕುಡುವೂರು' ದೇವಾಲಯಕ್ಕೈದಿ ನಮಸ್ಕರಿಸಿದ್ದರು. 'ಮಲಪೆ' ಯ ಬಳಿಯ 'ಕೊಡವೂರು'

---

6. ಉಡುಪಿ ಮುದ್ರಣ-ಮಧ್ವವಿಜಯ ಭಾವಪ್ರಕಾಶಿಕಾ, ನಾರಾಯಣ ಪಂಡಿತಾಚಾರ್ಯ ವಿರಚಿತಾ.
7. ದ. ಭಾ. ಶಾ. VII ನಂ. ೨೯೬, ೨೯೭, ೨೯೮, ೨೯೯, ೩೦೧, ೩೦೩ ಇತ್ಯಾದಿ.
8. ೯–೧೯.
9. ಶ್ರೀ ವಾದಿರಾಜರ ಕೀರ್ತನೆ, ಇತ್ಯಾದಿ.
10. ೨–೬ರ ಟೀಕೆ.
11. ೧೧–೧೯.
12. ಪ್ರಬುದ್ಧ ಕರ್ಣಾಟಕ, ೧೧-೧, 'ಗೀತಪ್ರಹಸನದಲ್ಲಿ ಕನ್ನಡ ಮಾತುಗಳು'.
13. ಮಧ್ವ ವಿಜಯ, ೨–೩೦ರ ಟೀಕೆ.
14. ಅದೇ ೩–೪೯ರ ಟೀಕೆ.

ಎಂಬುದೇ ಇಲ್ಲಿ ಹೆಸರಿಸಲಾಗಿದೆ (ಕಾನನದೇವತಾಸದನಂ)[15]. ಈಗಣ 'ಕೊಡವೂರು' ಕೋಡಾಶ್ರಮವೆಂದು, 'ಕೊಡಗಿ' ಯೆಂದು ಹೆಸರುಗೊಂಡಿದೆಯೆಂದು (ಹರಿದಾಸರಲ್ಲೊಬ್ಬರಾದ) ಶ್ರೀ ಮಲ್ಪೆ ರಾಮದಾಸ ಸಾಮಗರು ನನಗೆ ಹೇಳಿದ್ದರು. ಪರಂತು, 'ಕ್ರೋಡಯೋಗೀಶ್ವರಕ್ಷೇತ್ರಂ ಭಾತಿಶುಕ್ತಿಮತೀತಟೇ' ಎಂದು 'ತೀರ್ಥಪ್ರಬಂಧ' ದಲ್ಲಿ[16] ಹೇಳಿದುದು; ಶಿಲಾ ಶಾಸನಗಳಲ್ಲಿ ಕೊಡಂಗಿ, ಕೊಡಗಿ, ಕೊಡಗೆ[17] ಯೆಂದುದು, 'ದೊರೆ ಕೆಳದಿ ಬಸವ ಕ್ಷಿತೀಶನ ಚರಣ ಕಮಲದ ಭೃಂಗ ಶರಜಾನಾಗಸನ್ಮಂತ್ರಿ' ಬರೆದ 'ಶುಕಸಪ್ತತಿ' ಪದ್ಯ ಕಾವ್ಯದಲ್ಲಿ[18] 'ಕೋಡಗಿ' ಯೆಂದುದು ಇಲ್ಲಿ ಗಮನಿಸಿಯುವಿದೆ. ಕೊಡವೂರು ತಾನೆ ಇವೆಲ್ಲಾ ಕಡೆಗಳಲ್ಲಿ ಹೇಳಿದ್ದಲ್ಲ: 'ಶಂಕರ ನಾರಾಯಣ' ವೆಂದು ಪ್ರಸಿದ್ಧವಾದ ಸ್ಥಳವೆ ಇಲ್ಲಿ ಹೇಳಿದುದೆಂದು ತಿಳಿಯಬೇಕು !

ಕೊಡವೂರಿನ ಸಮೀಪದಲ್ಲಿಯ 'ನಾರಿಕೇಲ್ಯುಪಪದಾಂತರಸದ್ಮ' ದಲ್ಲಿಯ ದೇವರನ್ನು ಮಧ್ವಾಚಾರ್ಯರು ಮತ್ತೆ ವಂದಿಸಿದ್ದರು[19]. ಇದಕ್ಕೆ 'ತಾಳಿ ಕುಡೆ' ಯೆಂದು ತೌಳವ ಭಾಷೆಯ ಹೆಸರೆಂದಿದೆ. ಇಲ್ಲಿಯ 'ಕುಡೆ' ಯು ತೌಳವ ಭಾಷೆಯದಾಗಿದೆ.

ಮಧ್ವಾಚಾರ್ಯರು ಅನಂತಪುರ (ಕೇರಳ) ದ ಸಂದರ್ಶನ ಮಾಡಿದ ಮೇಲೆ, 'ಅಪ್ರಾಂಶು ನೂತ್ನೋಪಪದಾಧಿವಾಸಜ' ನೊಂದಿಗೆ ವಾದಿಸಿದ್ದು ಹೇಳಿದೆ[20]. ಅಂದರೆ, ಅದಕ್ಕೆ 'ಕುದು (ದಿ) ಪುಸ್ತೂರು' ಎಂದು ಮೌಲಿಕನಾಮವು ಹೇಳಿದೆ. ಇಲ್ಲಿಯ ಊರು ತೌಳವವೋ, ಮಲೆಯಾಳವೋ ಎಂದು ವ್ಯಂಗ್ಯವಿದೆ.

'ಮರಡಿತಾಯ' ಮನೆತನದವನೊಬ್ಬನನ್ನು ಕುರಿತು 'ಜರಾಘಟಿತ ಗೋತ್ರ' ನೆಂದು ಹೆಸರಿಸಿದೆ[21]. ಶ್ರೀ ಮಧ್ವಾಚಾರ್ಯರು ಸಂದರ್ಶಿಸಿದ ಸ್ಥಳಗಳಲ್ಲಿ 'ಸ್ವಾರಾಮ' ವೆಂದರೆ 'ಕಾವು' ಗ್ರಾಮವೆಂದು 'ಪ್ರಾಗ್ರ್ಯವಾಟ' ವೆಂದರೆ 'ಕೊಡಿಪಾಡಿ' ಯೆಂದು[22] ಹೆಸರಿಸಿದೆ. 'ಸ್ತಂಭ ಪದೋಪಸರ್ಜನ' ವೆಂದರೆ 'ಕಬೆನಾಡು' ಎನ್ನಲಾಗಿದೆ[23]. 'ಅಮರಾಲಯ' ವೆಂದರೆ 'ಕುಡಿಲ್' ಎನ್ನಲಾಗಿದೆ[24]. 'ಗಂಡವಾಟ' ನೆಂದರೆ 'ಕೊಡಿಂಚಾಡಿ' ಯವನೆಂದು[25], 'ಪೂರ್ವವಾಟ' ದವನೆಂದರೆ 'ಮೂಡೆಂಬಾಡಿ' ಯವನೆಂದಿದೆ[26].

---

15. ಅದೇ ೩-೪ರ ಟೀಕೆ.
16. ೩-೫೧—೫೫.
17. ದ. ಭಾ. ಶಾ. IX, ೪೦೫, ೪೧೯, ೪೨೫ ಇತ್ಯಾದಿ.
18. ಅಮುದ್ರಿತವಾದ ಕನ್ನಡದ ಸರಸಪದ್ಯ ಕಾವ್ಯವಿದು ಮುದ್ರಣಕ್ಕೆ ಸಿದ್ಧವಾಗಿದೆ.
19. ಮಧ್ವ ವಿಜಯ, ೩-೪ರ ಟೀಕೆ.
20. ಅದೇ ೫-೩೮.
21. ಅದೇ ೯-೪೪.
22. ಅದೇ ೧೨-೫೪.
23. ಅದೇ ೧೩-೯.
24. ಅದೇ ೧೫-೧.
25. ಅದೇ ೧೬-೨೫.
26. ಅದೇ ೧೬-೩೧.

'ಪಾರಂತೀಸುರಸದನ' ವು 'ಕೇವುಡ (ಕೇಟ) ದೇಲ' ರೂಪಾಂತರವಾಗಿಯೂ[27], 'ಸರಿ ದಂತರಾಖ್ಯ ದೇಶ' ವು 'ಇಡೆತುದೆ' ಯ ರೂಪಾಂತರವಾಗಿಯೂ[28], 'ಉಚ್ಚಭೂತಿ' ಯು 'ಉಜೇರ್ (? ಉಜಿರೆ)' ವೆಂಬುದರ (ಪರ್ಯಾಯ) ನಾಮಾಂತರವಾಗಿಯೂ[29] ಹೇಳಲಾಗಿವೆ. (ಇಲ್ಲಿ 'ಇಡೆತುದೆ' ಯೆಂಬುದೇ ತೌಳವ ಭಾಷೆಯಾಗಿ ಕಾಣುತ್ತದೆ ಇದೇ ಮುಂದೆ ಕನ್ನಡಿಸಲ್ಪಟ್ಟು, ಎಡೆನೀರ್-ಎಡನೀರ್ ಆಗಿರಬಹುದೆ ಎಂಬುದು ಜಿಜ್ಞಾಸೆಯಾಗಿದೆ).

'ಶಿವಳ್ಳಿ' ಎಂಬುದು 'ಶಿವಬೆಳ್ಳಿ' ಯೆಂಬುದರ ಹ್ರಸ್ವೀಕರಣವಾಗಿ ಇರಬೇಕೆಂದು ಅದಕ್ಕೆ ಹೇಳಿದ 'ಶಿವರೂಪ್ಯ' ವೆಂಬ ಶಬ್ದದಿಂದ ವ್ಯಕ್ತವಾಗುತ್ತಿದೆ[30].

ತೌಳವ ಪ್ರದೇಶಗಳ ಗ್ರಾಮ-ಪತ್ತನಗಳ, ಮನೆತನಗಳ ಹಾಗೂ ಜನರ ಹೆಸರುಗಳಲ್ಲಿ ಹಲವು ಉಲ್ಲೇಖಗಳು ಇಲ್ಲಿವೆ. ಇವು ತೌಳವ ಭಾಷೆಯಿಂದ ಸಂಸ್ಕೃತೀಕೃತವಾಗಿ ಹೇಳಲಾಗಿವೆಯಲ್ಲದೆ; ಕನ್ನಡ ಭಾಷೆಯಿಂದಲ್ಲ. ಸಂಸ್ಕೃತ ಭಾಷೆಯಿಂದಲ್ಲವೆಂದು ನಿರೀಕ್ಷಿಸಬಹುದಾಗಿದೆ. ಇಂತಹ ಪ್ರಾಚೀನ ವಿಚಾರಗಳನ್ನು ತಿಳಿಯಬಾಶಿಸದೆ ಕೆಲವರು ತೌಳವ ಪ್ರದೇಶಾದಿಗಳಿಗೆ ಸಂಸ್ಕೃತ-ಕರ್ಣಾಟಕ-ರೀತಿ ಯಲ್ಲಿಯೆ-ಸುಮ್ಮನೆ-ನಿರ್ವಚಿಸುವುದನ್ನು ಕಾಣುತ್ತೇವೆ. ಮೌಲಿಕ ರೂಪಾರ್ಥಗಳೇನೆಂದು ತಿಳಿದ ರೇನೇ ರೂಪಾಂತರಾದಿ ವಿಚಾರಗಳು ತಿಳಿಯಬಹುದಾಗಿದೆ!

"ದ. ಕ. ಜಿಲ್ಲೆಯಲ್ಲಿ ಶೇ. ೫೦ ರಷ್ಟು ಕೊಂಕಣಿ ಭಾಷೆಯವರಿದ್ದಾರೆಂದು"[31] ಮೈಸೂರ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಮಂಗಳೂರಿನ ಸಭೆಗೆ ಸಂದೇಶವಿತ್ತುದು ಅಚ್ಚಾಗಿದೆ. ಇದು ಯಥಾರ್ಥವಲ್ಲ. ಇಲ್ಲಿಯ ತೌಳವ ಜನಾಂಗ-ಭಾಷೆ ಹಾಗೂ ಪ್ರಾದೇಶೀಯ ವಿಚಾರಗಳನ್ನು ವಿವೇಚಿಸಬೇಕು. ಕೊಂಕಣ ಪ್ರಾಂತ್ಯವೆಂಬುದು ಪ್ರತ್ಯೇಕವಾಗಬೇಕೆನ್ನುವಲ್ಲಿ ಇದು ಆಧಾರವಾಗ ಲಾರದು. ತೌಳವ ಪ್ರಾಂತ್ಯವೂ ಪ್ರತ್ಯೇಕವಾಗಿರಬೇಕೆಂದು ಹೇಳುವುದು ಈ ಯೆಡೆಯಲ್ಲಿ ನ್ಯಾಯ ಸಮ್ಮತವಾದೀತು! ಶ್ರೀ ಕಯ್ಯಾರ ಕಿಞ್ಞಣ್ಣ ರೈ ಯವರು ಕಾರವಾರ ಸಾಹಿತ್ಯ ಸಮ್ಮೇಳನದ ಭಾಷಾ ಬಾಂಧವ್ಯ ಗೋಷ್ಠಿಯಲ್ಲಿ ವಿಸ್ತಾರವಾಗಿ ತೌಳವ ವಿಚಾರ ಹೇಳಿದ್ದು ಇಲ್ಲಿ ನೆನೆಯತಕ್ಕು ದಾಗಿದೆ.

ತೌಳವ ಪ್ರದೇಶ-ಜನಾಂಗ-ಭಾಷೆಗಳು ಸ್ವತಂತ್ರ ಹಾಗೂ ವಿಶಿಷ್ಟ ಕ್ರಮಗಳಿಂದ ಕೂಡಿವೆ ಯೆಂದೂ, ಇತರ ಪ್ರಾದೇಶಿಕ-ಸಂಸ್ಕೃತಿಯ-ಜನಾಂಗದ ಭಾಷೆಯ ಕಟ್ಟಿನಲ್ಲಿ ಸಿಲುಕಲಾರದೆಂದೂ ಇಲ್ಲಿ ವ್ಯಕ್ತವಾಗುತ್ತದೆ!

---

27. ಅದೇ ೧೬-೩೬.
28. ಅದೇ ೧೬-೩೮.
29. ಅದೇ ೧೬-೪೧.
30. ಅದೇ ೨-೧೦.
31. ಮಂಗಳೂರ 'ನವಭಾರತ' ದೈನಿಕ.

# ಭಾರತೀಯ ಗ್ರಂಥಸಂಪಾದನ ಪರಿಚಯ

**ಮೂಲ ಲೇಖಕರು :** ಡಾ. ಎಸ್. ಎಂ. ಕತ್ರೆ

**ಅನುವಾದಕರು :** ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ

## ಅಧ್ಯಾಯ II : ಹಸ್ತಪ್ರತಿಗಳ ಬಗೆಗಳು

(ಹಿಂದಿನ ಸಂಚಿಕೆಯಿಂದ)

ದುರದೃಷ್ಟವಶಾತ್ ಭಾರತದಲ್ಲಿ ಗ್ರಂಥಸಂಪಾದನೆಯ ಚರಿತ್ರೆಯೇ ಬೆಳೆದುಬಂದಿಲ್ಲ. ಕಾಳಿದಾಸ ಭವಭೂತಿಗಳ ಸ್ವಹಸ್ತ ಪ್ರತಿಗಳ ಗತಿಯೇನಾಯಿತೆಂಬುದಾಗಲೀ ಅಥವಾ ಆ ನಂತರ ಲಿಖಿತವಾದ ಮುಖ್ಯಪ್ರತಿಗಳು ಚರಿತ್ರೆಯ ಯಾವ ಯಾವ ಕಾಲಗಳಲ್ಲಿ ಇದ್ದುವೆಂಬುದಾಗಲೀ ನಮಗೆ ತಿಳಿದಿಲ್ಲ. ಪ್ರತಿಗಳಿರಲಿ, ಆ ಕವಿಗಳ ಕಾಲವೇ ವಿವಾದಾಸ್ಪದವಾಗಿಬಿಟ್ಟಿದೆ. ನಮಗೆ ಚೆನ್ನಾಗಿ ತಿಳಿದ ಒಂದೇ ಒಂದು ಹಸ್ತಪ್ರತಿ ಪಟ್ಟಿಯು ಮಧ್ಯಯುಗಕ್ಕೆ ಸಂಬಂಧಿಸಿದ್ದು; ಕಾಶಿಯ ವಿದ್ವಾಂಸನಾದ ಕವೀಂದ್ರಾಚಾರ್ಯನ (ಕ್ರಿ. ಶ. ೧೬೫೬) ಬಳಿಯಿದ್ದ ಪುಸ್ತಕ ಭಂಡಾರದ್ದು.[1] ಇತರ ಗ್ರಂಥಸಂಗ್ರಹಗಳ ಬಗ್ಗೆ ನಮಗೆ ತಿಳಿದಿರುವುದೆಲ್ಲ ಹಸ್ತಪ್ರತಿಗಳಲ್ಲಿಯೇ ಇರುವ ಸಮಾಪ್ತಿ ವಚನಗಳಲ್ಲಿ ದೊರೆತದ್ದು. ಹೀಗೆ ಹಸ್ತಪ್ರತಿಗಳ ಚರಿತ್ರೆಯೇ ನಮಗೆ ದೊರೆಯದಿರುವಾಗ, ಭಾರತದ ಒಳಗೆ ಮತ್ತು ಹೊರಗೆ ಅನೇಕ ಹಸ್ತಪ್ರತಿ ಸಂಗ್ರಹಗಳಲ್ಲಿ ನಮಗೆ ಇಂದು ಕಾಣಸಿಗುತ್ತಿರುವ ಪ್ರತಿಗಳು, ಸ್ವಹಸ್ತಪ್ರತಿಗಳಿಂದ ಇಲ್ಲವೆ ಅವುಗಳ ಸದ್ಯಪ್ರತಿ (Immediate copy) ಅಥವಾ ದೂರಪ್ರತಿ (distant copy) ಗಳಿಂದ ಎಂಥ ಪರಿಸ್ಥಿತಿಯಲ್ಲಿ ನಕಲುಗೊಂಡವು ಎಂಬುದನ್ನು ನಾವು ಕೇವಲ ಊಹಿಸಬೇಕಷ್ಟೆ!

ಸ್ವಹಸ್ತಪ್ರತಿಯ ಸೂತ್ರವನ್ನು ಆಗಲೇ ಹೇಳಿದ್ದಾಗಿದೆ. ಇನ್ನು ಹಸ್ತಪ್ರತಿಗಳ ವಿಷಯ. ಇವು ಸ್ವಹಸ್ತಪ್ರತಿಗಳಾಗಿರಬಹುದು, ಇಲ್ಲವೆ ಅವುಗಳ ಸದ್ಯಪ್ರತಿಗಳಾಗಿರಬಹುದು, ಅಥವಾ ಸ್ವಹಸ್ತಪ್ರತಿಯಿಂದ ಹುಟ್ಟಿದ ನಕಲುಗಳ ಸಾಲಿನಲ್ಲಿ ಯಾವ ನಕಲಾದರೂ ಆಗಿರಬಹುದು.

ಗ್ರಂಥಸಂಪಾದನೆಯ ಕಾರ್ಯಕ್ಷೇತ್ರವು ಸ್ವಹಸ್ತಪ್ರತಿಗಳನ್ನೂ ಒಳಗೊಳ್ಳುತ್ತದೆ. ಪತ್ರಿಕೆಗಳ ಸಂಪಾದಕರು ತಮ್ಮ ಲೇಖಕರು ಮಾಡಿದ ಕೈತಪ್ಪುಗಳನ್ನು ತಿದ್ದುವುದು ಇಂದಿಗೂ ಸಾಮಾನ್ಯವಾದ ಅನುಭವ. ಲೇಖಕರಿಂದ ಘಟಿಸಿದ ಇಂಥ ತಪ್ಪುಗಳನ್ನು ಸಂಪಾದಕರು

---

1. ಕವೀಂದ್ರನ ಅನಂತರ ಲಿಖಿತವಾದ ಅನೇಕ ಹಸ್ತಪ್ರತಿಗಳ ಉಲ್ಲೇಖವಿರುವುದರಿಂದ ಈ ಪಟ್ಟಿಯು ಪೂರ್ಣವಾಗಿ ವಿಶ್ವಾಸಾರ್ಹವಾದುದಲ್ಲವೆಂದು ಶ್ರೀ ಗೋಡೆಯವರು ನನಗೆ ತಿಳಿಸುತ್ತಾರೆ. ಬರ್ಮಾ ದೇಶದ ಪೆಗುವಿನಲ್ಲಿರುವ ಕ್ರಿ. ಶ. C ೧೪೪೨ರ ಸ್ವಾರಸ್ಯಕರವಾದ ಶಾಸನವೊಂದರಲ್ಲಿ ತ್ರೌಂಗ್ಡ್ವಿನ್ ಮತ್ತು ಅವನ ಹೆಂಡತಿ ಬೌದ್ಧಸಂಘಕ್ಕೆ ಕೊಟ್ಟ ೨೯೫ ಪುಸ್ತಕಗಳ ಪಟ್ಟಿ ಇವೆ. (ತಾಳ ಹಸ್ತಪ್ರತಿಗಳ ಪಟ್ಟಿ, ಕೊಲಂಬೊ, ಪು. XXV).

ಸಾಮಾನ್ಯವಾಗಿ ಅಡಿಟಿಪ್ಪಣಿಗಳಲ್ಲಿ ತಿದ್ದುತ್ತಾರೆ. ಆದರೆ ಆಧುನಿಕ ಭಾರತೀಯ ವಿದ್ವತ್ತಿಗೂ ಗ್ರಂಥಸಂಪಾದನೆಯ ಈ ಶಾಖೆಗೂ ನೇರವಾದ ಸಂಬಂಧವೇನಿಲ್ಲ. ಸದ್ಯಪ್ರತಿಗಳ ವಿಷಯ ಹೀಗಲ್ಲ, ಕಲ್ಲುಗಳ ಮೇಲೆ ಕೊರೆದಿರುವ ಶಾಸನಗಳು ಅಥವಾ ಲೇಖನಗಳು ಸರಿಯಾಗಿ ನೋಡಿಕೊಳ್ಳದೆಯೋ, ಗಾಳಿ, ಮಳೆ, ಬಿಸಿಲುಗಳಿಗೆ ಸಿಕ್ಕೋ ಇಲ್ಲವೇ ರೂವಾರಿಗಳ ತಪ್ಪಿನಿಂದಾಗಿಯೋ ವಿಕೃತವಾಗಿದ್ದಾಗ ಅವುಗಳನ್ನು ಸರಿಪಡಿಸಲು ಗ್ರಂಥಸಂಪಾದನೆಯು ನೆರವಾಗಬಹುದು. ಭಾರತದ ಶಾಸನ ಪ್ರಕಟನೆಗಳ ಪ್ರತಿಯೊಂದು ಪುಟದಲ್ಲಿಯೂ ಇದಕ್ಕೆ ಉದಾಹರಣೆಗಳನ್ನು ಕಾಣಬಹುದು.

ಗ್ರಂಥಸಂಪಾದನೆಯ ಮುಖ್ಯಭಾಗವು ಪ್ರಧಾನವಾಗಿ ಪರಂಪರಾಗತ ಪ್ರತಿಗಳ ವಿಷಯಕ್ಕೆ ಸಂಬಂಧಿಸುತ್ತದೆ. ಮುನ್ನುಡಿಯಲ್ಲಿ ನಾವು ಆಗಲೇ ಗಮನಿಸಿದಂತೆ ನಮಗೆ ಉಳಿದು ಬಂದ ಗ್ರಂಥಗಳು ಬಹುಮಟ್ಟಿಗೆ ಕಲ್ಲು ಅಥವಾ ಇತರ ಬಾಳಿಕೆ ಬರುವ ವಸ್ತುಗಳ ಮೇಲೆ ಕೊರೆದದ್ದಾಗಿರದೆ ಭೂರ್ಜಪತ್ರ, ತಾಳಪತ್ರ ಮತ್ತು ಕಾಗದಗಳ ಮೇಲೆ ಬರೆದುವಾಗಿವೆ. ಈ ಬರೆಹಗಳನ್ನು ಕಾಪಾಡುವುದಕ್ಕಾಗಿಯೂ ಮತ್ತು ಇವುಗಳನ್ನು ತಮ್ಮ ಬಳಿ ಇಟ್ಟುಕೊಳ್ಳಬೇಕೆಂಬ ಜನರ ಅಪೇಕ್ಷೆಯನ್ನು ಪೂರೈಸುವ ಸಲುವಾಗಿಯೂ ಕಾಲಕಾಲಕ್ಕೆ ಇವುಗಳ ಪ್ರತಿಗಳನ್ನು ತಯಾರಿಸಬೇಕಾಯಿತು. ಮೊದಲೇ ಹೇಳಿದಂತೆ ಕೃತಿಯ ನಕಲುಗಳನ್ನು ಮನುಷ್ಯ ಹಸ್ತದಿಂದ ತಯಾರಿಸಬೇಕಾಗಿತ್ತು. ಫೋಟೋ ನಕಲುಗಳನ್ನು (Photographic facsimiles) ತೆಗೆಯುವಂತೆ ಆಧುನಿಕ ಯಾಂತ್ರಿಕ ಸಾಧನಗಳ ಬಲದಿಂದ ತಯಾರಿಸುವ ಹಾಗಿರಲಿಲ್ಲ. ಇದರ ಮೇಲ್ವಿಚಾರಣೆ ನೋಡುತ್ತಿದ್ದವರಾದರೂ ಮನುಷ್ಯರೇ. ಕೇವಲ ಯಾಂತ್ರಿಕ ಸಾಧನಗಳಿಂದ ನಕಲುಗಳನ್ನು ತಯಾರಿಸುವುದಾಗಿದ್ದಲ್ಲಿ ಭಾರತೀಯ ಗ್ರಂಥಸಂಪಾದನೆಗೂ ಭಾರತೀಯ ಗ್ರಂಥಗಳಿಗೂ ಸಂಬಂಧವೇ ಬರುತ್ತಿರಲಿಲ್ಲ. ಹೀಗೆ ಸಿದ್ಧವಾದ ನಕಲು ಅದಕ್ಕೆ ಆಧಾರವಾದ ಮಾತೃಕೆಯ ತದ್ವತ್ತಾದ ಪ್ರತಿಕೃತಿಯಾಗಿರುವುದು ಎಂದಿಗೂ ಸಾಧ್ಯವಿಲ್ಲ. ತಪ್ಪುಗಳು ಎಷ್ಟು ಅನಿವಾರ್ಯವಾಗಿ ನುಸುಳುತ್ತವೆಯೆಂದರೆ ಯಾವ ಪ್ರತಿಯೂ ಮಾತೃಕೆಗೆ ಸರಿಸಮವಾಗಿರುವುದಿಲ್ಲ. ಮಾತ್ರವಲ್ಲ, ಇನ್ನೂ ತುಂಬ ಕೀಳಾಗಿರಬಹುದು. ಒಂದರಿಂದ ಇನ್ನೊಂದು ಪ್ರತಿ ನಕಲುಗೊಳ್ಳುತ್ತ, ನಕಲುಗಳ ಸಂಖ್ಯೆ ಬೆಳೆಯುತ್ತ ಹೋದಂತೆ ಇಂಥ ದೋಷವೂ ಹೆಚ್ಚುತ್ತ ಹೋಗುತ್ತದೆ. ಮೂಲಪ್ರತಿ ಮತ್ತು ಆದರ ಸದ್ಯಪ್ರತಿಗಳು ಕ್ರಮೇಣ ನಷ್ಟವಾಗಿ ಬಿಟ್ಟಮೇಲೆ, ಪರಂಪರಾಗತ ಪ್ರತಿಗಳೇ, ಅವು ಎಷ್ಟನೆಯ ಪ್ರತಿಗಳಾದರೂ ಆಗಿರಲಿ, ಮುಂದಿನ ನಕಲುಗಳ ತಯಾರಿಕೆಗೆ ಆಧಾರಪ್ರತಿಗಳಾಗುತ್ತವೆ. ಒಂದು ನಕಲು ಶುದ್ಧವೇ ಅಶುದ್ಧವೇ ಎಂದು ನಿರ್ಣಯಿಸಲು ಹಸ್ತಪ್ರತಿಯ ಕಾಲವೊಂದೇ ಪ್ರಮಾಣವೇನಲ್ಲ. ಆದರೆ ಪರಂಪರಾಗತ ಪ್ರತಿಗಳಲ್ಲಿ ಸ್ಖಾಲಿತ್ಯ ಸಂಖ್ಯೆಯು ಸಾಮಾನ್ಯವಾಗಿ ಉದ್ದಕ್ಕೂ ಹೆಚ್ಚುತ್ತ ಹೋಗುವುದರಿಂದ ಹಸ್ತಪ್ರತಿಯ ಕಾಲ ಬಹು ಮುಖ್ಯವಾದ ಅಂಶ.

ಕೃತಿಯಲ್ಲಿ ದೋಷ ಹೇಗೆ ಬೆಳೆಯುವುದೆಂಬುದನ್ನು ಗಣಿತಕ್ರಮದ ಒಂದು ನಿದರ್ಶನದಿಂದ ಸ್ಪಷ್ಟಪಡಿಸಬಹುದು. ಪೂರ್ಣವಾಗಿ ಶುದ್ಧವಾಗಿರುವ 'ಅ' ಹಸ್ತಪ್ರತಿಯ ಪರಿಶುದ್ಧತೆ ೧೦೦ ಎಂದು ಭಾವಿಸೋಣ. 'ಅ' ದಿಂದ 'ಕ' ಮತ್ತು 'ಕ' ದಿಂದ 'ಗ' ಪ್ರತಿಗಳನ್ನು ತಯಾರಿಸಿದೆ. 'ಅ' ಪ್ರತಿಯ ಪಾಠ ಹೀಗೆ ಎರಡು ಸಲ ನಕಲುಗೊಂಡಿದೆ. ಈಗ ಮೊದಲ ಲಿಪಿಕಾರನ ತಪ್ಪುಗಳಿಂದ 'ಕ' ಪ್ರತಿಯಲ್ಲಿ ೩% ರಷ್ಟು ಸತ್ಯಾಂಶ ಬಿಟ್ಟುಹೋಗಿದೆ ಎಂದು ಭಾವಿಸೋಣ.

ಈ ಪ್ರತಿಯಿಂದ ನಕಲು ತಯಾರಿಸುವಾಗ ಎರಡನೆಯ ಲಿಪಿಕಾರ ಮಾಡುವ ತಪ್ಪುಗಳಿಂದ ಅವನ ಪ್ರತಿಯಲ್ಲಿ ಮತ್ತೆ ೩% ರಷ್ಟು ಸತ್ಯಾಂಶ ಮರೆಯಾಗುತ್ತದೆ. 'ಕ' ಮತ್ತು 'ಗ' ಪ್ರತಿಗಳ ಪರಿಶುದ್ಧತೆ ಕ್ರಮವಾಗಿ ೯೭ ಮತ್ತು ೯೪.೦೯ ಆಗಿರುತ್ತದೆ. ಈಗ ಇಷ್ಟೇ ಸ್ಖಾಲಿತ್ಯ ಪ್ರಮಾಣವಿರುವ 'ಚ' ಪ್ರತಿಯನ್ನು 'ಗ' ದಿಂದ ತಯಾರಿಸಬೇಕಾದಲ್ಲಿ ಅದರ ಪರಿಶುದ್ಧತೆ ೯೧.೧೭ ಆಗುತ್ತದೆ. ನಮಗೆ ದೊರೆತಿರುವ ಬಹುಮಟ್ಟಿನ ಎಲ್ಲ ಸಂಸ್ಕೃತ ಮತ್ತು ಪ್ರಾಕೃತ ಕಾವ್ಯಗಳ ಪಾಠವೂ ಪರಂಪರಾಗತವಾಗಿ, ಎಂದರೆ ನಮಗೆ ತಿಳಿಯದಷ್ಟು ಬಾರಿ ನಕಲುಗೊಂಡು ಬಂದವು ಎಂಬುದನ್ನು ನೆನೆದರೆ ಇದರ ಮಹತ್ವ ಎಷ್ಟೆಂಬುದು ಸ್ಪಷ್ಟವಾಗುತ್ತದೆ.

ಹಸ್ತಪ್ರತಿ ತಯಾರಿಸುವ ವಿಧಾನವನ್ನು ಕೈಜೋಡಣೆ (Hand Setting) ಅಥವಾ ಯಂತ್ರಜೋಡಣೆ (Machine Setting) ಇರುವ ಮುದ್ರಣಾಲಯಗಳ ಕಂಪೋಜಿಟರನ ಕಲೆಗೆ ಹೋಲಿಸಬಹುದು. ಅವನು ಪ್ರತಿಯನ್ನು ಎದುರಿಗೆ ಇಟ್ಟುಕೊಂಡು ಅದನ್ನನುಸರಿಸಿ ಅಕ್ಷರಶಃ ಮೊಳೆ ಆರಿಸುತ್ತಾನೆ. ಜೋಡಿಸುವಾಗ ಆಗುವ ತಪ್ಪುಗಳು ಯಂತ್ರದ ನೆರವಿನಿಂದಾಗಿ ಬಹು ಪಾಲು ಸರಿಹೋಗುತ್ತವೆ. ಅಂಥ ಸಾಧನಗಳಿಲ್ಲದೆ ಅನೇಕ ಕೊರತೆಗಳಿರುವ ಕಂಪೋಜಿಟರ ನನ್ನು ಹಿಂದಿನ ಲಿಪಿಕಾರನಿಗೆ ಹೋಲಿಸಬಹುದು. ಪಾಠವನ್ನು ಅಕ್ಷರಶಃ ಬರೆಯುವ ಬದಲು ಅವನು ಅಚ್ಚಿನ ಮೊಳೆಗಳನ್ನು ಆರಿಸುತ್ತಾನೆ. ಅವನ ಕಣ್ಣು ಸಂತತವಾಗಿ ಮೊಳೆಗಟ್ಟಿನಿಂದ ಪ್ರತಿಯ ಕಡೆಗೆ ಚಲಿಸುತ್ತಲೇ ಇರುತ್ತದೆ. ಪ್ರತಿಯಲ್ಲಿರುವ ವಿಷಯ ಅವನಿಗೆ ಸ್ವಾರಸ್ಯಕರ ವಾಗಿ ಇರದಿದ್ದರಂತೂ ಮನಸ್ಸು ಬೇರೆಲ್ಲೋ ಅಲೆಯುತ್ತಿರಬಹುದು. ಲೇಖನವನ್ನು ಪೂರ್ತಿ ಜೋಡಿಸಿದ ಕೂಡಲೇ ಕರಡುಪ್ರತಿ ಓದುವವರು ಅವುಗಳನ್ನು ಎಚ್ಚರದಿಂದ ಪರಿಶೀಲಿಸುತ್ತಾರೆ. ಮೂಲಪ್ರತಿಯೊಡನೆ ಹೋಲಿಸಿ ಆಕಸ್ಮಿಕವಾಗಿ ಆಗಿರುವ ತಪ್ಪುಗಳನ್ನು ತಿದ್ದುತ್ತಾರೆ. ಈ ದೃಷ್ಟಿಯಿಂದ ಮುದ್ರಣದ ಕೆಲಸ ಸಾಂಸ್ಥಿಕ ಕೆಲಸ. ಪ್ರತಿಲೇಖನದ ಕೆಲಸ ಇಂಥದಲ್ಲ. ಈಗ ಕರಡುಪ್ರತಿ ಓದುವವರು ಇರುವಂತೆ ಹಿಂದೆ ಪರಿಶೀಲಕರು (Revisers) ಇರುತ್ತಿದ್ದರು. ಲಿಪಿ ಕಾರರು ಇವರ ಪ್ರಯೋಜನವನ್ನು ಪಡೆದಿರುವುದುಂಟು. ಪರಿಶೀಲಕರು ಹಸ್ತಪ್ರತಿಯನ್ನು ಮಾತೃಕೆಯೊಡನೆ ಹೋಲಿಸಿ ನೋಡಿ ಹಸ್ತಪ್ರತಿಯಲ್ಲಿಯೇ ವ್ಯತ್ಯಾಸವನ್ನೋ ತಿದ್ದುಪಾಟು ಗಳನ್ನೋ ಗುರುತಿಸುತ್ತಿದ್ದರು. ಈಗಲಾದರೆ ಗ್ರಂಥಕರ್ತನು ಬದುಕಿದ್ದಲ್ಲಿ ಮುದ್ರಣಕ್ಕೆ ಅನುಮತಿಯನ್ನು ಕೊಡುವ ಮೊದಲು ಮುದ್ರಕನ (Printer) ತಪ್ಪುಗಳನ್ನು ತಾನೇ ತಿದ್ದು ತ್ತಾನೆ. ಹಾಗಲ್ಲದೆ ಅವನು ಕಾಲವಾಗಿದ್ದಲ್ಲಿ ಅವನ ಪ್ರತಿನಿಧಿಯೊಬ್ಬನು ಕರಡುಪ್ರತಿಯ ಕಡೆಯ ತಿದ್ದುಪಡಿಯನ್ನು ಮಾಡುತ್ತಾನೆ. ಗ್ರಂಥಕರ್ತ ಅಥವಾ ಅವನ ಪ್ರತಿನಿಧಿ ಇರುವಾ ಗಲೂ ಸಹ ಕೈಬರೆಹದ ಪ್ರತಿಗಳಿಗೆ ಈ ಅನುಕೂಲ ಸಾಮಾನ್ಯವಾಗಿ ದೊರೆಯದಿರಬಹುದು. ಆದ್ದರಿಂದ ಉತ್ತಮ ಮುದ್ರಣದಲ್ಲಿ ಆ ನಿರ್ದಿಷ್ಟ ಮುದ್ರಣದ ಮಟ್ಟಿಗೆ ಪಾಠವು ಅಧಿಕೃತವೂ, ಖಚಿತವೂ ಆಗಿರುತ್ತದೆ. ಆದರೆ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆ ಬೇರೆ ತಪ್ಪುಗಳಿಗೆ ಎಡೆಗೊಡುವ ಹಸ್ತಲೇಖನದ ವಿಷಯ ಹೀಗಲ್ಲ. ಹೆಚ್ಚು ಪ್ರತಿಗಳನ್ನು ತಯಾರಿಸುವ ಸಲುವಾಗಿ ಮಾಡುವ ಉತ್ತರೋತ್ತರವಾದ ಪ್ರತಿಯೊಂದು ನಕಲೂ ಪಾಠದಲ್ಲಿ ಹೊಸ ದೋಷಬೀಜಗಳನ್ನು ಸೇರಿಸುತ್ತ ಹೋಗುತ್ತದೆ. ಆದರೆ ಎರಡಕ್ಕೂ ನಡುವಿನ ಒಂದು ಮೂಲಭೂತ ವ್ಯತ್ಯಾಸ ಇದು. ಕಂಪೋಜಿಟರನ ಕೈಯಲ್ಲಿ ಸ್ವಹಸ್ತಪ್ರತಿ ಇದ್ದರೆ ಪ್ರತಿಕಾರನಲ್ಲಿ ಸ್ವಹಸ್ತಪ್ರತಿಯೋ ಸದ್ಯಪ್ರತಿಯೋ ಅಥವಾ ಮೂಲಪ್ರತಿಯಿಂದ ಮುಂದಕ್ಕೆ ಯಾವ ಕಾಲದ್ದಾದರೂ ಆಗಿರಬಹುದಾದ ಪರಂಪರಾ ಗತ ಪ್ರತಿಯೋ, ಯಾವುದು ಬೇಕಾದರೂ ಇರಬಹುದು. ಪ್ರತಿಕಾರನಿಗೂ ಸ್ವಹಸ್ತಪ್ರತಿಗೂ

ಅಂತರ ಹೆಚ್ಚಿದಂತೆ ದೋಷದ ಪ್ರಮಾಣವೂ ಹೆಚ್ಚುತ್ತದೆ. ಹೋಲಿಸಿದಾಗ ಕಂಪೋಜಿಟರನ ಕೆಲಸದಲ್ಲಿ ಉಳಿಯುವ ತಪ್ಪುಗಳು ಕಡಮೆ. ಆದರೆ ಎಷ್ಟೇ ಎಚ್ಚರ ವಹಿಸಿಯೂ ಕೆಲವು ತಪ್ಪುಗಳು ಉಳಿದೇ ಉಳಿಯುತ್ತವೆ.

ಈ ಎರಡು ಪ್ರಸಂಗಗಳಲ್ಲಿಯೂ ಪ್ರತಿ ಮತ್ತು ಮೂಲಪ್ರತಿಗಳ ನಡುವೆ ಒದಗುವ ವ್ಯತ್ಯಾಸಕ್ಕೆ ಎರಡು ಸರ್ವವೇದ್ಯವಾದ ಕಾರಣಗಳಿವೆ. ಅವು ಚಕ್ಷುದೋಷ (visual error) ಮತ್ತು ಚಿತ್ತದೋಷ (Psychological error) ಗಳು. ಇವು ಪ್ರತಿಯೊಬ್ಬ ಪ್ರತಿಕಾರ ಮತ್ತು ಕಂಪೋಜಿಟರಲ್ಲಿಯೂ ಬೇರೆ ಬೇರೆ ಮಟ್ಟದಲ್ಲಿರುತ್ತವೆ. ಲಿಪಿಕಾರ ಅಥವಾ ಪ್ರತಿಕಾರ ಈ ಎರಡು ತಪ್ಪುಗಳನ್ನು ಮಾಡಲು ಸಾಧ್ಯವಿದೆ. ಹೀಗಾಗಿ ಮೂಲಪ್ರತಿಯಿಂದ ಅವನು ಸ್ವಲ್ಪವೇ ಆದರೂ ಹೋಗುತ್ತಾನೆ. ಲಿಪಿಕಾರನ ಕಣ್ಣು ದುರ್ಬಲತೆಯಿಂದಲೋ, ಅನವಧಾನದಿಂದಲೋ ಆಗುವ ಪ್ರತಿನಿಧಾನ, ಲೋಪ, ಪ್ರಕ್ಷೇಪಗಳೆಲ್ಲವೂ ಚಕ್ಷುದೋಷಗಳು. ತನ್ನ ತಪ್ಪುಗಳಲ್ಲಿ ಇಲ್ಲವೆ ಮಾತೃಕೆಯಲ್ಲಿಯೇ ಇರುವ ತಪ್ಪುಗಳಲ್ಲಿ ಯಾವುದೋ ಅರ್ಥ ಕಾಣಲೆಳಸುವ ಮನೋವೃತ್ತಿಯಿಂದ ಚಿತ್ತದೋಷಗಳು ಉಂಟಾಗುತ್ತವೆ. ಪ್ರಾಚೀನ ಗ್ರಂಥಗಳಲ್ಲಿ ಕಂಡುಬರುವ ಅಪಪಾಠಗಳೆಲ್ಲ ಬಹುಪಾಲು ಇಂಥ ತಪ್ಪುಗಳಿಂದಾಗಿ ಆದವು. ಶ್ರೇಷ್ಠಲಿಪಿಕಾರನೂ ಸಹ, ತನ್ನ ಬುದ್ಧಿ ಕೌಶಲ ಪ್ರದರ್ಶಿಸುವ ಇಂಥದೇನನ್ನಾದರೂ ಮಾಡದೆ ಬಹುಕಾಲ ಯಾಂತ್ರಿಕವಾಗಿ ನಕಲು ಮಾಡಲಾರ. ಏನೇ ಆದರೂ ತನಗೆ ಅರ್ಥವಾಗುವ ಯಾವ ಲೇಖನವನ್ನೂ ಅವನು ಅಕ್ಷರಶಃ ಪ್ರತಿಮಾಡಲಾರ. ಲಿಪಿಕಾರರು ಪ್ರತಿಮಾಡುವುದು ಪದಗಳನ್ನೇ ಹೊರತು ಅಕ್ಷರಗಳನ್ನಲ್ಲವೆಂಬುದು ಅನೇಕ ಪ್ರಸಂಗಗಳಲ್ಲಿ ಕಂಡುಬರುತ್ತದೆ.

ಈ ಎರಡು ಪ್ರಧಾನ ದೋಷಗಳಿಂದ ಉದ್ಭವಿಸುವ ಪಾಠದೋಷಗಳ ಬಗ್ಗೆ ಇನ್ನೊಂದು ಅಧ್ಯಾಯದಲ್ಲಿ ಹೇಳಲಾಗುತ್ತದೆ. ಇಲ್ಲಿ ಲಿಪಿಕಾರನ ಕೆಲವು ಸ್ವಭಾವ ಲಕ್ಷಣಗಳನ್ನು ಗಮನಿಸಬಹುದು. ಹಸ್ತಪ್ರತಿಗಳಲ್ಲಿ ಕಾಣುವ ಪಾಠದೋಷಗಳು ಸ್ವಹಸ್ತಪ್ರತಿಯ ಕಾಲದಿಂದಲೇ ಬಂದಿರಬಹುದು. 'ಹೋಮರನೂ ತೂಕಡಿಸುತ್ತಾನೆ' (Quandoque bonus dormitat Homerus) ಎಂಬ ನಾಣ್ಣುಡಿ ಸ್ವಹಸ್ತಪ್ರತಿಯ ದೋಷಗಳ ಲಕ್ಷಣವನ್ನು ತಿಳಿಸುತ್ತದೆ. ಶ್ರೇಷ್ಠ ಲೇಖಕರೂ ಕೂಡ ಸದಾ ತಮ್ಮ ಮಟ್ಟಕ್ಕೆ ಅನುಗುಣವಾಗಿ ಬರೆಯುವುದಿಲ್ಲ. ಶೈಲಿಯ ಪ್ರಸಾದ ಗುಣಕ್ಕೆ, ಸ್ಪಷ್ಟತೆಗೆ, ಸಂಬದ್ಧತೆಗೆ, ಕಡೆಗೆ ವ್ಯಾಕರಣಕ್ಕೂ ಸಹ ಭಂಗತರುವ ಅಂಶಗಳು ಅತ್ಯುತ್ತಮ ಬರೆಹಗಳಲ್ಲಿಯೂ ಅಲ್ಲೊಮ್ಮೆ ಇಲ್ಲೊಮ್ಮೆ ಕಾಣಬಹುದು. ಸಾಮಾನ್ಯವಾಗಿ ನುರಿತ ವಿದ್ವಾಂಸನಾಗಿರುವ ಗ್ರಂಥಕರ್ತೃವಿನ ವಿಷಯದಲ್ಲಿಯೇ ಹೀಗಿದ್ದರೆ ಲಿಪಿಕಾರನ ವಿಷಯದಲ್ಲಿ ಇದು ಇನ್ನೂ ಹೆಚ್ಚು. ಮಾತೃಕೆಯಲ್ಲಿ ಮೊದಲೇ ಇರುವ ದೋಷಗಳಿಗೆ ಅವನು ಇನ್ನಷ್ಟು ದೋಷಗಳನ್ನು ಕೂಡಿಸುತ್ತ ಹೋಗುತ್ತಾನೆ. ಇದು ತಿಳಿಯದೆ ಆಗುವುದುಂಟು, ತಿಳಿದೂ ಮಾಡುವುದುಂಟು. ಇವುಗಳಲ್ಲಿ ಬಹುಪಾಲು ಲಿಪಿಕಾರನ ಅಸಡ್ಡೆಯಿಂದ ಆಗುತ್ತವೆ. ಈ ದೋಷಗಳು ಅರಿವಿದ್ದು ಆದುವೋ, ಅಲ್ಲವೋ ಎಂಬುದನ್ನು ಗಮನದಲ್ಲಿಟ್ಟು ಇವುಗಳನ್ನು ಉದ್ದೇಶರಹಿತ (ಅಥವಾ ಯಾಂತ್ರಿಕ) ವಾದವು, ಸ್ವಲ್ಪ ತಿಳಿದೂ ಆದವು, ಬುದ್ಧಿಪೂರ್ವಕವಾಗಿ ಆದವು ಎಂದು ಸ್ಥೂಲವಾಗಿ ವಿಭಾಗಿಸಬಹುದು. ಈ ದೋಷಗಳನ್ನು ಕುರಿತ ಮತ್ತೊಂದು ವರ್ಗೀಕರಣದಲ್ಲಿ ಇವುಗಳನ್ನು ಆಕಸ್ಮಿಕ ಮತ್ತು ಬುದ್ಧಿಪೂರ್ವಕ ದೋಷಗಳೆಂದು ಕರೆದಿದೆ.

ಪ್ರತಿಕಾರನು ಬಳಸಿದ ಮಾತೃಕೆಯು ಶೇವಗೊಂಡೋ, ಸಂತತ ಬಳಕೆಯಿಂದಾಗಿಯೋ ಓದಲಾಗದಷ್ಟು ಅಸ್ಪಷ್ಟವಾಗಿ ಬಿಡಬಹುದು. ಅದರ ಭಾಗಗಳು ಹರಿದು ಹೋಗಬಹುದು;

ಪತ್ರಗಳು ಬಿಡಿಬಿಡಿಗೊಂಡು ಕಳೆದುಹೋಗಬಹುದು ಇಲ್ಲವೆ ಸ್ಥಳಾಂತರಗೊಳ್ಳಬಹುದು. ಹಸ್ತ ಪ್ರತಿಯಲ್ಲಿ ಅಂಚುಗಳು ತುಂಬ ದುರ್ಬಲವಾದ ಭಾಗಗಳು. ಆದ್ದರಿಂದ ಸಾಲುಗಳ ಮೊದಲ ಹಾಗೂ ಕೊನೆಯ ಭಾಗಗಳು ಮತ್ತು ಪತ್ರದ ಮೇಲಿನ ಹಾಗೂ ಕೆಳಗಿನ ಸಾಲುಗಳು ನಷ್ಟ ವಾಗುವ ಸಾಧ್ಯತೆ ವಿಶೇಷವಾಗಿರುತ್ತಿತ್ತು. ಹಸ್ತಪ್ರತಿಯಲ್ಲಿರುವ ಕೆಲವು ತಪ್ಪುಗಳು ಮಾತೃಕೆಯ ಇಂಥ ಬಾಹ್ಯದೋಷಗಳಿಂದಾಗಿ ಬಂದಿರಬಹುದು. ಡಟ್ರೆಲ್ ಡಿ ರ್ಹೈನ್ಸ್ (Dutreuil De Rhins)ರವರು ಪತ್ತೆಮಾಡಿದ ಪ್ರಸಿದ್ಧವಾದ ಪ್ರಾಕೃತ ಧಮ್ಮಪದದ ಓಲೆಗಳು ಇಂಥ ಬಾಹ್ಯಾಘಾತಗಳಿಗೆ ಗುರಿಯಾಗಿ ತುಂಡಾಗಿದ್ದವು. ಈ ಪತ್ರಗಳನ್ನು ಜೋಡಿಸಿದ ರೀತಿಯು ಸೆನಾರ್ಟ್ (Senart)ನ ಮುದ್ರಣದಲ್ಲಿರುವ ಕೆಲವು ದೋಷಗಳಿಗೆ ಕಾರಣವಾಯಿತು.

ಗ್ರಂಥ ದೊಡ್ಡದಾಗಿದ್ದಲ್ಲಿ ಅದನ್ನು ಒಬ್ಬನಾಗಲೀ, ಹಲವು ಲಿಪಿಕಾರರು ಒಟ್ಟಾಗಿ ಯಾಗಲೀ ಪ್ರತಿಮಾಡಿರಬಹುದು. ಹಲವರು ಪ್ರತಿಮಾಡಿದ್ದ ಸಂದರ್ಭದಲ್ಲಿ ನಾವು ಅವರೆಲ್ಲರ ಮನೋಧರ್ಮವನ್ನೂ ಅಭ್ಯಾಸಮಾಡಬೇಕಾಗುತ್ತದೆ. ಇದರಿಂದ ಪಾಠಸಂಪ್ರದಾಯ ತುಂಬ ತೊಡಕಾಗುತ್ತದೆ. ಏಕೆಂದರೆ ಒಂದು ಹಸ್ತಪ್ರತಿಯನ್ನು ಒಂದೇ ಸ್ಥಳದಲ್ಲಿ, ಒಂದೇ ಮಾತೃಕೆ ಯನ್ನು ಆಧರಿಸಿ ಮಾಡಲಾಯಿತೋ ಇಲ್ಲವೆ ಹಲವು ಸ್ಥಳಗಳಲ್ಲಿ, ಹಲವು ಅವಧಿಗಳಲ್ಲಿ, ಹಲವು ಮಾತೃಕೆಗಳನ್ನು ಆಧರಿಸಿ ಪ್ರತಿಮಾಡಿದನಂತರ ಆ ಭಾಗಗಳನ್ನು ಸೇರಿಸಲಾಯಿತೋ ಎಂಬು ದನ್ನು ಇಷ್ಟೊಂದು ಕಾಲವಮೇಲೆ ಹೇಳುವುದು ಸಾಧ್ಯವಿಲ್ಲ. ಬೃಹತ್ ಕೃತಿಗಳ ಬೇರೆ ಬೇರೆ ಭಾಗಗಳನ್ನು ಪ್ರತ್ಯೇಕವಾಗಿ ನಕಲುಮಾಡಿರಬಹುದೆಂದು ನಿರೀಕ್ಷಿಸುವುದು ಯುಕ್ತವಾದುದೇ. ಹಾಗೆ ಒಂದು ಹಸ್ತಪ್ರತಿಯಲ್ಲಿ ಜೋಡಣೆಗೊಂಡ ಭಾಗಗಳ ಕಾಲವು ಲೇಖ್ಯಸಾಮಗ್ರಿಯ ಸ್ವರೂಪ ಮತ್ತು ಲಿಪಿಶಾಸ್ತ್ರಕ್ಕೆ ಸಂಬಂಧಿಸಿದ ಲಕ್ಷಣಗಳಿಂದ ಸೂಚಿತವಾಗುತ್ತದೆ. ಹೀಗಿರು ವುದರಿಂದ ಒಂದು ಹಸ್ತಪ್ರತಿಯ ಲೇಖನಕಾರ್ಯದಲ್ಲಿ ಎಷ್ಟು ಕೈಗಳು ಕೆಲಸ ಮಾಡಿವೆಯೆಂದು ತಿಳಿಯುವುದು ಅಗತ್ಯ.

ನಮಗೆ ದೊರೆತಿರುವಂತೆ ಹಸ್ತಪ್ರತಿಯು ಸಾಮಾನ್ಯವಾಗಿ ಶುದ್ಧಪ್ರತಿಯಾಗಲೀ ಸಮಗ್ರ ವಾದ ಒಂದೇ ಬರೆಹವಾಗಲೀ ಅಲ್ಲ. ಅಳಿಸಿ, ಸೇರಿಸಿ, ತಿದ್ದಿಮಾಡಿದ ಬದಲಾವಣೆಗಳು ಅವುಗಳಲ್ಲಿ ತೀರ ಸಾಮಾನ್ಯ. ಇವಕ್ಕೆ ಹಸ್ತಪ್ರತಿಯ ಲಿಪಿಕಾರರೋ ಇಲ್ಲವೆ ಪರಿಷ್ಕಾರಕರೆಂದು ಕರೆಸಿಕೊಳ್ಳುವ ವ್ಯಕ್ತಿಗಳೋ ಕಾರಣ. ಈ ತಿದ್ದುಪಡಿಗಳ ಸಾಂಬಂಧಿಕಪ್ರಾಮುಖ್ಯ ತೀರ ಭಿನ್ನವಾಗಿರಬಹುದು.

ಪ್ರತಿಯೊಬ್ಬ ಲಿಪಿಕಾರನಲ್ಲಿಯೂ ಅವನದೇ ಆದ ಕೆಲವು ವೈಚಿತ್ರ್ಯಗಳಿರುತ್ತವೆ ಮತ್ತು ಪ್ರತಿಯೊಂದು ಹಸ್ತಪ್ರತಿಯಲ್ಲಿಯೂ ಅದರದೇ ವೈಶಿಷ್ಟ್ಯಗಳಿರುತ್ತವೆ. ಲಿಪಿಕಾರನ ವೈಲಕ್ಷಣ್ಯ ಗಳು ಅವನ ಕೈ ಬರೆಹದಲ್ಲಿ, ಕೆಲವು ವಿಶಿಷ್ಟ ರೀತಿಯ ತಪ್ಪುಗಳನ್ನು ಮಾಡುವುದರಲ್ಲಿ ಮತ್ತು ಕೆಲವು ತಪ್ಪುಗಳಿಗೆ ಪೂರ್ಣವಾಗಿ ಒಗ್ಗಿಹೋಗುವುದರಲ್ಲಿ ತೋರಿಬರುತ್ತದೆ. ಹಾಗೆಯೇ ಎರಡು ಅಥವಾ ಹೆಚ್ಚು ಶಬ್ದರೂಪಗಳಲ್ಲಿ ಯಾವುದಾದರೂ ಒಂದನ್ನು ಆರಿಸಬೇಕಾಗಿ ಬಂದಾಗ ತೋರುವ ಅವನ ಆಲೋಚನೆಯ ಇಲ್ಲವೆ ಅಭಿರುಚಿಯ ಪಕ್ಷಪಾತದಲ್ಲಿಯೂ ಇದು ಕಾಣುತ್ತದೆ. ಹಸ್ತಪ್ರತಿಯ ಗಾಢವಾದ ಮತ್ತು ಸಂತತವಾದ ಅಭ್ಯಾಸದಿಂದ ಮಾತ್ರವೇ ವೈಚಿತ್ರ್ಯಗಳನ್ನು ತಿಳಿಯಲು ಸಾಧ್ಯ.

ಲಿಪಿಕಾರನಲ್ಲಿ ಇರಬೇಕಾದ ವಿಶೇಷ ಗುಣಗಳೆಂದರೆ ಪ್ರಾಮಾಣಿಕತೆ ಮತ್ತು ಜಾಗರೂ ಕತೆ; ಅಥವಾ ಒಂದೇ ಪದದಲ್ಲಿ ಹೇಳುವುದಾದರೆ ನಿಷ್ಠೆ (ಮತ್ತು ಬುದ್ಧಿಶಕ್ತಿ). ಆದರೆ ಇವೆಲ್ಲವೂ

ಉನ್ನತಮಟ್ಟದಲ್ಲಿ ಬೆಳೆದಿರುವುದು ಕಡಮೆ. ವ್ಯವಹಾರ ಎಷ್ಟೇ ಯಾಂತ್ರಿಕವಾಗಿರಲಿ, ಮಾನವ ಬುದ್ಧಿಯು ಚಾಕ್ಷುಷ ಮತ್ತು ಚಿತ್ತದೋಷಗಳ ಮೂಲಕ ಪ್ರತಿ ಲೇಖನದಲ್ಲಿ ಹೊಸ ದೋಷ ಮೂಲಗಳನ್ನು ತನಗೇ ಅರಿವಿಲ್ಲದ ರೀತಿಯಲ್ಲಿ ಪ್ರವೇಶಗೊಳಿಸಿಬಿಡುತ್ತದೆ. ಆದರೆ ವಿಚಿತ್ರವಾಗಿ ಕಾಣಬಹುದಾದ ಒಂದು ವಿಷಯವೆಂದರೆ ಹೆಚ್ಚು ಅರ್ಹತೆ ಬುದ್ಧಿಗಳಿದ್ದರೂ ನಿಷ್ಠಾಹೀನನಾಗಿರುವ ಲಿಪಿಕಾರನ ನಕಲಿಗಿಂತ, ಮಂದಬುದ್ಧಿಯವನಾದರೂ ನಿಷ್ಠಾವಂತನಾದ ಲಿಪಿಕಾರನ ಯಾಂತ್ರಿಕ ಪ್ರತಿಲೇಖನವು ಕೃತಿಗೆ ಸಮೀಪವಾಗಿರುತ್ತದೆ. ಈ ನಿಷ್ಠೆಯನ್ನು ಪ್ರತಿಯ ಅಂತರ್ಪರಿಶೀಲನೆಯಿಂದ ನಿರ್ಣಯಿಸಬೇಕಾಗುತ್ತದೆ. ಮಾತೃಕೆಯಲ್ಲಿರುವ ಲೋಪಗಳು ಮತ್ತು ಇತರ ತಪ್ಪುಗಳನ್ನು ತಿದ್ದಲು ಯತ್ನಿಸದೆ ತನ್ನ ಪ್ರತಿಯಲ್ಲಿಯೂ ಅವುಗಳನ್ನು ಉಳಿಸಿಕೊಳ್ಳುವ ಲಿಪಿಕಾರನು ನಂಬಿಕೆಗೆ ಅರ್ಹನೆಂದು ತೋರುತ್ತದೆ. ಸಣ್ಣಪುಟ್ಟ ವಿಷಯಗಳಲ್ಲಿ ಪ್ರಾಮಾಣಿಕನಾಗಿದ್ದರೆ ಉಳಿದೆಲ್ಲ ವಿಷಯಗಳಲ್ಲಿಯೂ ಪ್ರಾಮಾಣಿಕನಾಗಿರುವುದುಂಟು. ಉದಾಹರಣೆಗೆ ಪ್ರತಿಕಾರನು ತನ್ನ ಮಾತೃಕೆಯಲ್ಲಿನ ಅಕ್ಷರ ಸಂಯೋಜನೆಯ ವಿಚಿತ್ರ ವೈಚಿತ್ರ್ಯಗಳನ್ನು ಉಳಿಸಿಕೊಂಡಿದ್ದರೆ ಅಥವಾ ಅದರಲ್ಲಿರುವ ಲೋಪಗಳನ್ನೋ, ದೋಷಗಳನ್ನೋ ಹಾಗೆಯೇ ನಕಲು ಮಾಡಿದ್ದರೆ ನಮ್ಮ ನಂಬಿಕೆಗೆ ಪಾತ್ರನಾಗುತ್ತಾನೆ.

ನಮಗೆ ಲಭಿಸಿರುವ ಹಸ್ತಪ್ರತಿಗಳು ಎರಡು ರೀತಿಯಲ್ಲಿ ನಕಲುಗಳಾಗಿ ಬಂದಿವೆ. ಮೊದಲನೆಯದು, ಅನುಮತಿ ಪಡೆದು ಅಥವಾ ರಕ್ಷಣೆಯಿದ್ದು ಮಾಡಿದ ಪ್ರತಿಲೇಖನ. ಈ ರೀತಿಯ ಪ್ರತಿಲೇಖನವು ಗ್ರಂಥಕರ್ತನ ಇಲ್ಲವೆ ಅವನ ಪ್ರತಿನಿಧಿಯ ಅಥವಾ ಮಾತೃಕೆಯ ಒಡೆಯನಾದ ವಿದ್ವಾಂಸನ ನಿರ್ದೇಶನದಲ್ಲಿ ನಡೆದಿರುತ್ತದೆ: ಅಥವಾ ಈ ಕೆಲಸದ ಮೇಲ್ವಿಚಾರಣೆ ನೋಡಿಕೊಳ್ಳಲು ವಿದ್ವಾಂಸರನ್ನು ನೇಮಿಸಿರುವ ಆಶ್ರಯದಾತ ಪ್ರಭುವಿನ ಸೂಚನೆಗಳಿಗೆ ಅನುಗುಣವಾಗಿ ಗ್ರಂಥವು ನಕಲುಗೊಂಡಿರುತ್ತದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಗ್ರಂಥದ ಋಜುತ್ವವನ್ನು ಕಾಪಾಡುವ ಸಲುವಾಗಿ ಲಿಪಿಕಾರನ ಮೇಲೆ ಹತೋಟಿ ಇಟ್ಟುಕೊಳ್ಳಲಾಗುತ್ತದೆ. ಇಲ್ಲದ ಪಕ್ಷದಲ್ಲಿ ಗ್ರಂಥದ ಮೂಲಸ್ವರೂಪವು ಗ್ರಂಥಕರ್ತನ ಜೀವಿತಾವಧಿಯಲ್ಲಿಯೇ ವಿಕೃತಗೊಳ್ಳುವುದು ನಿಶ್ಚಯ. ಇನ್ನು ಗ್ರಂಥಕರ್ತನು ಕಾಲವಾಗಿದ್ದರಂತೂ ಗ್ರಂಥಪಾತದ ಸಾಧ್ಯತೆಗಳಿಗೆ ಮಿತಿಯೇ ಇಲ್ಲ. ಇನ್ನೊಂದು ರೀತಿಯ ಪ್ರತಿಲೇಖನವು ಪರವಾನಿಗೆಯೇ ಇಲ್ಲದೆ ಅವ್ಯವಸ್ಥಿತವಾಗಿ ನಡೆಯುವಂಥದು. ಪ್ರಾಯಶಃ ಇದೇ ಹೆಚ್ಚಾಗಿ ಬಳಕೆಯಲ್ಲಿತ್ತು. ಹೀಗೆ ನಕಲಾಗುವ ಗ್ರಂಥಗಳೆಲ್ಲ ಬಹುಮಟ್ಟಿಗೆ, ಅಷ್ಟು ಬುದ್ಧಿವಂತರಾಗಲೀ ಸುಶಿಕ್ಷಿತರಾಗಲೀ ಅಲ್ಲದ, ಆದರೆ ತಾವು ಪ್ರತಿಮಾಡುವ ಗ್ರಂಥದ ಅಲ್ಪ ಪರಿಚಯವುಳ್ಳ ಲಿಪಿಕಾರರಿಂದ ನಕಲುಗೊಳ್ಳುತ್ತಿದ್ದುವು. ಮೂಲಮಾತೃಕೆ ಸಿಗುವುದೆಂದರೆ ಒಂದು ವೈಭವದ ವಿಷಯವಾಗಿದ್ದು, ವಿದ್ವಾಂಸರಿಗೂ ಮುಟ್ಟಗೊಡದಂತೆ ಅವುಗಳನ್ನು ಕಾಪಾಡುತ್ತಿದ್ದ ಕಾಲದಲ್ಲಿ ಮೇಲೆ ಹೇಳಿದಂತೆ ಖಾಸಗಿ ಪ್ರತಿಗಳನ್ನು ತಯಾರಿಸುವಾಗ ಎಷ್ಟು ತೊಂದರೆಗಳು ಇದ್ದಿರಬೇಕು! ಕೆಲವು ಖಾಸಗಿ ಪುಸ್ತಕ ಭಂಡಾರಗಳ ಹಸ್ತಪ್ರತಿಗಳನ್ನು ಪ್ರತಿಮಾಡಿಕೊಳ್ಳಲು ವಿದ್ವಾಂಸರು ಈ ಕಾಲದಲ್ಲೂ ಪಡಬೇಕಾದ ಕಷ್ಟಗಳಿಂದ ಅದನ್ನು ತಿಳಿಯಬಹುದು. ಇತ್ತೀಚಿನ ಇಂಥ ಒಂದು ಉದಾಹರಣೆಯನ್ನು ಧವಲಾ, ಜಯಧವಲಾ ಮತ್ತು ಮಹಾಧವಲಾ ಎಂಬ ಕೃತಿಗಳ ಸಂಬಂಧದಲ್ಲಿ ನೋಡಬಹುದು. ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದ್ರೆಯಲ್ಲಿರುವ ಜೈನ ಧರ್ಮಪೀಠದಲ್ಲಿ ಇವುಗಳ ಒಂದೊಂದೇ ಹಸ್ತಪ್ರತಿ ಇವೆ. ಅಪಾರವಾದ ತಾಳ್ಮೆ, ಚಾಕಚಕ್ಯತೆ, ಧನವ್ಯಯ, ಕಾಲವ್ಯಯಗಳಿಂದ ಮಾತ್ರವೇ ಇವುಗಳನ್ನು ಪ್ರತಿಮಾಡಿಕೊಳ್ಳಲು ಸಾಧ್ಯವಾಯಿತು.

ಹೀಗೆ ನಕಲುಗೊಂಡ ಗ್ರಂಥಗಳ ಬಗ್ಗೆ ಹೇಳುತ್ತಾ ಲಭ್ಯ ಹಸ್ತಪ್ರತಿಗಳಲ್ಲಿ ಬಹು ಸಲ ಪರಿಷ್ಕಾರಕರ ಕೈವಾಡ ಕಾಣುತ್ತದೆಂಬುದನ್ನು ನಾವು ಆಗಲೇ ಗಮನಿಸಿದ್ದೇವೆ. ಹಸ್ತಪ್ರತಿ ಹೇಗೆ ಲಿಖಿತವಾಯಿತೆಂಬುದಾಗಲೀ ತಿದ್ದುಗಾರನು ಪ್ರತಿಕಾರನ ಕೆಲಸವನ್ನು ಹೇಗೆ ತಿದ್ದಿದನೆಂಬುದಾಗಲೀ ನಮಗೆ ತಿಳಿಯದು. ಬೇರೆ ಯಾರ ಸಹಾಯವೂ ಇಲ್ಲದೆ ಪ್ರತಿಕಾರನು ತಾನೊಬ್ಬನೇ ಮಾತೃಕೆಯನ್ನು ಪ್ರತಿ ಮಾಡಿರಬಹುದು ಅಥವಾ ಅವನು ಪ್ರತಿಮಾಡುವಾಗ ಮತ್ತೊಬ್ಬ ಲಿಪಿಕಾರನೋ ಇಲ್ಲವೆ ವಾಚಕನೋ ಅವನಿಗೆ ಮಾತೃಕೆಯನ್ನು ಓದಿ ಹೇಳಿರಬಹುದು. ತಿದ್ದುಗಾರನೂ ಸಹ ಅನ್ಯರ ಸಹಾಯವಿಲ್ಲದೆ ತಾನೊಬ್ಬನೇ ನೂತನ ಪ್ರತಿಯನ್ನು ಮಾತೃಕೆಯೊಡನೆ ಹೋಲಿಸಿ ನೋಡಿರಬಹುದು; ಇಲ್ಲವೆ ಬೇರೊಬ್ಬರು ಅವನಿಗೆ ಮಾತೃಕೆಯನ್ನು ಓದಿ ಹೇಳಿರಬಹುದು. ಅಂಥ ತಿದ್ದುಪಡಿಗಳನ್ನು ಸಾಮಾನ್ಯವಾಗಿ ಈ ಮೊದಲು ಹೇಳಿದಂತೆ ಅಂಚಿನಲ್ಲಿ ಅಥವಾ ಸಾಲುಗಳ ನಡುವಿನಲ್ಲಿ ಗುರುತಿಸಿರುತ್ತದೆ. ತಪ್ಪಿನಿಂದಾಗಿ ಬಿಟ್ಟುಹೋಗಿರುವ ಪಾಠ ಭಾಗಗಳನ್ನೂ ಹೀಗೆಯೇ ತೋರಿಸಿರುತ್ತದೆ. ಹಸ್ತಪ್ರತಿಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೇಗೆ ಸಾಗಿದುವೆಂಬುದನ್ನು ಈಗ ಒಂದು ಕ್ಷಣ ಕಲ್ಪಿಸಿಕೊಳ್ಳಿ. ಶ್ರೀಮಂತನ ಬಳಿ ಒಂದು ಹಸ್ತಪ್ರತಿ ಇದ್ದಲ್ಲಿ ಅವನು ಪ್ರಯಾಣ ಮಾಡುವಾಗಲೆಲ್ಲ ಆ ಹಸ್ತಪ್ರತಿಯನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗಬಹುದು; ವಿದ್ವಾಂಸನೊಬ್ಬನನ್ನು ಜೊತೆಗೊಂಡು ಪ್ರಯಾಣ ಮಾಡಬಹುದು. ಅವನು ಭೇಟಿಕೊಟ್ಟ ಅನೇಕ ವಿದ್ಯಾಕೇಂದ್ರಗಳಲ್ಲಿ ಅವನಲ್ಲಿರುವ ಗ್ರಂಥದ ಬೇರೆ ಬೇರೆ ಮಾತೃಕೆಗಳಿರುವ ಸಾಧ್ಯತೆ ಉಂಟು. ಆ ಮಾತೃಕೆಗಳೊಡನೆ ಹೋಲಿಸಿದಾಗ ವಿದ್ವಾಂಸನಿಗೆ ಭಿನ್ನ ಪಾಠಗಳು, ಹೆಚ್ಚಿನ ಭಾಗಗಳು ಇತ್ಯಾದಿಗಳು ದೊರೆತು ಅವುಗಳನ್ನು ತನ್ನ ಹಸ್ತಪ್ರತಿಯ ಅಂಚಿನಲ್ಲಿ, ಸಾಲುಗಳ ಮಧ್ಯೆ ಬರೆದಿರಬಹುದು. ಸುಕಥಣ್‌ಕರ್‌ರವರು ಸೂಚಿಸಿರುವಂತೆ ಈ ಪರಿಷ್ಕರಣ, ತಿದ್ದುಪಾಟು ಇಲ್ಲವೆ ಹಸ್ತಪ್ರತಿ ಮಿಶ್ರಣಗಳಲ್ಲಿ ಯಾತ್ರಾ ಸ್ಥಳಗಳು ಬಹು ಮುಖ್ಯವಾದ ಪಾತ್ರವನ್ನು ವಹಿಸಿರಬೇಕು. "ಉಜ್ಜಯಿನಿ, ರಾಮೇಶ್ವರ, ಕಾಶಿ ಮತ್ತು ಇತರ ಪ್ರಸಿದ್ಧ ಯಾತ್ರಾ ಸ್ಥಳಗಳ ಪ್ರಖ್ಯಾತ ದೇವಾಲಯಗಳಲ್ಲಿ ಕಾಲಕಾಲಕ್ಕೆ ಮಹಾ ಕಾವ್ಯಗಳ ವಾಚನ ನಡೆಯುತ್ತಿದ್ದಿರಬೇಕು. ಈ ಸ್ಥಳಗಳಿಗೆ ಭೇಟಿಕೊಟ್ಟ ಭಕ್ತ ಯಾತ್ರಿಕರಲ್ಲಿ ಹೀಗೆ ಸ್ಥಳೀಯ ಪಾಠಗಳು ಪ್ರಚುರವಾಗಿರಬೇಕು ಈ ಯಾತ್ರಿಕರಲ್ಲಿ ಚಾರಣರೂ (Bards) ಮತ್ತು ಮಹಾ ಕಾವ್ಯಗಳ ವಾಚನವನ್ನೇ ವೃತ್ತಿಯಾಗಿ ಮಾಡಿಕೊಂಡ ಗಮಕಿಗಳೂ ಇದ್ದಿರಬೇಕು ಎಂದು ಊಹಿಸಬಹುದು" ಉಳಿದ ಬಗೆಯ ಗ್ರಂಥಗಳಿಗೂ ಕೂಡ, ಅದರಲ್ಲಿಯೂ ಹೆಚ್ಚು ಜನಪ್ರಿಯವಾದ ನಾಟಕ ಮತ್ತು ಕಾವ್ಯಗಳಿಗೆ ಈ ಹೇಳಿಕೆ ಅನ್ವಯಿಸುತ್ತದೆ. ಇಂಥದೇನೋ ನಡೆದಿರಬೇಕೆಂಬುದನ್ನು ಪರಂಪರಾಗತವಾಗಿ ನಮಗೆ ಬಂದ ಅನೇಕ ಬಗೆಯ ಗ್ರಂಥ ಪಾಠಗಳಿಂದ ತರ್ಕಿಸಬಹುದು.

ಹೀಗೆ ತಿದ್ದುಪಾಟಿಗೆ ಒಳಗಾದ ಪ್ರತಿಗಳೇ ಮುಂದೆ ಬೇರೆ ನಕಲುಗಳಿಗೆ ಮಾತೃಕೆಗಳಾಗಿ ಪರಿಣಮಿಸಿದರೆ ಹೊಸ ಪ್ರತಿಕಾರನಿಗೆ ಪಾಠಗಳನ್ನು ಆರಿಸುವ ಅವಕಾಶ ಒದಗುತ್ತದೆ. ಅವನು ತನ್ನ ಅಭಿರುಚಿಗೆ ಅನುಗುಣವಾಗಿ ಒಂದು ಪಾಠವನ್ನು ಸ್ವೀಕರಿಸಿ ಮತ್ತೊಂದನ್ನು ವರ್ಜಿಸುತ್ತಾನೆ. ಹೊಸದಾಗಿ ಸೇರಿಸಿರುವ ಭಾಗಗಳ ವಿಷಯವೂ ಹೀಗೆಯೇ. ಇದರ ಪರಿಣಾಮವಾಗಿ ಗ್ರಂಥಹಾನಿ ಇನ್ನಷ್ಟು ತ್ವರಿತ ಗತಿಯಿಂದ ಸಾಗುತ್ತದೆ.

ತಿದ್ದುಗಾರರು ಪ್ರತಿಗಳನ್ನು ಪರಿಶೀಲಿಸುವುದರ ಜೊತೆಗೆ ಗ್ರಂಥಕರ್ತನೇ ಸ್ವಹಸ್ತ ಪ್ರತಿಯನ್ನು ಹಲವು ಸಲ ತಿದ್ದಿರುವ ಪ್ರಸಂಗಗಳುಂಟು. ಇಂದು ನಾವು ಮುದ್ರಿತ ಗ್ರಂಥಗಳ

ಸಂಬಂಧದಲ್ಲಿ ಇದನ್ನು ಕಾಣುತ್ತಿದ್ದೇವೆ. ಯಂತ್ರಗಳ ಸಾಧನದಿಂದ ಪುನರ್ಮುದ್ರಿಸಲು ಅನುಕೂಲ ಇಲ್ಲದಿರುವಾಗ ಕೃತಿಕಾರನು ಪರಿಷ್ಕೃತ ಪಾಠಕ್ಕೆ ಅನುಗುಣವಾಗಿ ಸಂಪೂರ್ಣ ಹಸ್ತಪ್ರತಿಯೊಂದನ್ನು ಬರೆಯುಬಹುದು ಅಥವಾ ಎರಡನೆಯ ಹಸ್ತಪ್ರತಿಯನ್ನು ಸಿದ್ಧಮಾಡುವ ಮುಂಚೆಯೇ ಮೊದಲ ಹಸ್ತಪ್ರತಿಯಲ್ಲಿ ಏನನ್ನಾದರೂ ಸೇರಿಸಿಯೋ ತೆಗೆದೋ ಮಾಡಬಹುದು. ಕಡೆಯದೇ ಹೆಚ್ಚು ಸಂಭಾವ್ಯ. ಈ ಎರಡು ಸಂದರ್ಭಗಳಲ್ಲಿಯೂ ಲಿಪಿಕಾರನ ಎದುರಿಗೆ ಕೃತಿಕಾರನೇ ತಿದ್ದಿದ ಅಥವಾ ಪರಿಷ್ಕರಿಸಿದ ಸ್ವಹಸ್ತ ಪ್ರತಿಯಿದ್ದು, ಒಬ್ಬನೇ ಲೇಖಕ ರಚಿಸಿದ ಎರಡು ಪಾಠಭೇದಗಳಲ್ಲಿ ಯಾವುದಾದರೂ ಒಂದನ್ನು ಆಯುವ ಅವಕಾಶವಿರುತ್ತದೆ. ಪ್ರತಿಕಾರನು ತನ್ನ ಇಷ್ಟಕ್ಕನುಗುಣವಾಗಿ ಬಿಟ್ಟುಬಿಡುತ್ತಾನೆ. ಹಾಗಲ್ಲದಲ್ಲಿ ತಿರಸ್ಕೃತ ಪಾಠ ಭಾಗವನ್ನು ಓಲೆಯ ಅಂಚಿನಲ್ಲಿಯೋ ಎರಡು ಪಂಕ್ತಿಗಳ ನಡುವೆಯೋ ಸೇರಿಸಬಹುದು. ಮುಂದೆ ಈ ಪ್ರತಿಯಿಂದ ನಕಲುಗೊಂಡ ಪ್ರತಿಗಳ ಪರಂಪರೆಯಲ್ಲಿ ಅಂಚಿನ ಪಾಠಗಳೊ (Marginalia) ಇಲ್ಲವೆ ಪಂಕ್ತಿಮಧ್ಯದ ಪಾಠಗಳೋ ಪೂರ್ಣವಾಗಿ ಬಿಟ್ಟುಹೋಗಬಹುದು.

ಮಾಲತೀ ಮಾಧವದ ಎಲ್ಲ ಲಬ್ಧಹಸ್ತಪ್ರತಿಗಳನ್ನೂ ಪರಿಶೀಲಿಸಿದ ಭಂಡಾರ್‌ಕರ್ ಅವರು ಸ್ವತಃ ಭವಭೂತಿಯೇ ತನ್ನ ಸ್ವಹಸ್ತ ಪ್ರತಿಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿದ್ದು, ಒಂದರ್ಥದಲ್ಲಿ ಅದನ್ನು ಪರಿಷ್ಕರಿಸಿದ್ದನೆಂದು ತೀರ್ಮಾನಿಸಿದ್ದಾರೆ. ತೋದರಮಲ್‌ರವರೂ ಸಹ ತಮ್ಮ ಮಹಾವೀರಚರಿತದ ಮುದ್ರಣದಲ್ಲಿ ಅದನ್ನೇ ಹೇಳಿದ್ದಾರೆ. ಭಂಡಾರ್‌ಕರ್‌ರವರ ಊಹೆಗೆ ಕೆಳಗಿನ ಎರಡು ನಿದರ್ಶನಗಳನ್ನು ಉದಾಹರಿಸಬಹುದು. ಪಾಠಾಂತರ ಸಂಕಲನಕ್ಕೆ ಬಳಸಿದ ಒಂಬತ್ತು ಹಸ್ತಪ್ರತಿಗಳಲ್ಲಿ ಆರು ಪ್ರತಿಗಳಿಂದ ಸಮರ್ಥಿತವಾದ MmI3a ಅವರ ಮುದ್ರಣದಲ್ಲಿ ಈ ರೀತಿ ಇದೆ:

"ಕಲ್ಯಾಣಾನಾಂ ತ್ವಮಸಿ ಮಹಸಾಂ ಭಾಜನಾಂ ವಿಶ್ವಮೂರ್ತೇ"

ಉಳಿದ ಹಸ್ತಪ್ರತಿಗಳಾದ Bh, Kl ಮತ್ತು o ಗಳಲ್ಲಿ,

"ಕಲ್ಯಾಣಾನಾಂ ತ್ವಮಿಹ ಮಹಸಾಂ ಈಶಷೇ ತ್ವಂ ವಿಧತ್ಸೇ"

ಎಂದಿದೆ. ಈ ಸಾಲಿನಲ್ಲಿರುವ ಪ್ರಾರ್ಥನೆಗೆ ಅರ್ಥ ಮಾಡುವುದಕ್ಕೆ ಇದೇ ಉತ್ತಮವಾದ ಪಾಠಾಂತರವಾಗಿ ತೋರುತ್ತದೆ. c ಪ್ರತಿಯ ಕಡೆಯ ಎರಡು ಪದಗಳು ಎರಡನೆಯ ಪಾಠಾಂತರದಂತೆಯೂ ಉಳಿದುದು ಮೊದಲದರಂತೆಯೂ ಇದೆ. ಜಗದ್ಧಾರನ ವ್ಯಾಖ್ಯಾನ ಮತ್ತು N ಹಸ್ತಪ್ರತಿಯ ಆಧಾರ ಮಾತ್ರ ಇದ್ದು ರಚಿಸಿರುವ ಪಾಠದ III 7aನಲ್ಲಿ ಮತ್ತು N ಹಸ್ತಪ್ರತಿಯಲ್ಲಿ "ಸ್ಖಲಯತಿ ವಚನಂ ತೇ ಸ್ರಂಸಯತ್ಯಂಗ ಮಾಂಗಮ್" ಎಂಬ ಪಾಠವಿದೆ. ಪಾಠದ ಸ್ರಂಸಯತಿಯ ಬದಲು, ಸಂಶ್ರಯತಿ, ತೋರಿಸುವ ಉಳಿದ ಎಂಟು ಹಸ್ತಪ್ರತಿಗಳ ಪಾಠಾಂತರಕ್ಕಿಂತ ಇದು ಉತ್ತಮವೆಂದು ಭಂಡಾರ್‌ಕರ್ ಪರಿಗಣಿಸುತ್ತಾರೆ. ದಕ್ಷಿಣ ಭಾರತವು ಕೆಲಕಾಲ ಸಂಸ್ಕೃತಿ ವಿದ್ಯೆಗಳ ತವರು ಎನಿಸಿದ್ದುದರಿಂದ N ಹಸ್ತಪ್ರತಿಯಲ್ಲಿರುವ ಉತ್ತಮ ಪಾಠಾಂತರಕ್ಕೆ ಅಲ್ಲಿಯ ಪಂಡಿತವಾಚಕರ ಕಲ್ಪನಾಚಾತುರ್ಯ ಕಾರಣವಾಗಿರಬಹುದು. ಆದರೆ ಅಷ್ಟೇ ಸಮರ್ಪಕವಾಗಿ ಹೊಂದುವ ಇತರ ಪಾಠಭೇದಗಳ ಸಂಖ್ಯೆಯನ್ನು ಗಮನಿಸಿದಾಗ ಕೃತಿಕಾರನ ಪರಿಷ್ಕರಣಗಳ ಸಂಭಾವ್ಯತೆಯೇ ಹೆಚ್ಚಿಸಿಸುತ್ತದೆ.

ಕೆಲವು ಸಲ ಹಸ್ತಪ್ರತಿಗಳ ತಿದ್ದುಗಾರರು ಸಂಪಾದಕರೂ ಆಗಿರುವುದುಂಟು. ಹಸ್ತಪ್ರತಿಯಲ್ಲಿ ಲೋಪವಾದ ಭಾಗಗಳನ್ನು ಸೇರಿಸುವ ಅಥವಾ ನುಸುಳಿರುವ ತಪ್ಪುಗಳನ್ನು ತಿದ್ದುವ

ಯತ್ನದಲ್ಲಿ ತಿದ್ದುಗಾರರು ತಾವು ಬಳಸಿದ ಮಾತೃಕೆಯಲ್ಲದೆ ಇತರ ಲಭ್ಯ ಹಸ್ತಪ್ರತಿಗಳನ್ನೂ ಹೋಲಿಸಿ ಪಾಠವನ್ನು ಸುಧಾರಿಸಲು ಪ್ರಯತ್ನಿಸುತ್ತಾರೆ. ಈ ಅರ್ಥದಲ್ಲಿ ತಿದ್ದುಗಾರರು ಹಸ್ತಪ್ರತಿಗಳ ಸಂಪಾದಕರಾಗಿ ವರ್ತಿಸುತ್ತಾರೆ.

ಕಾಲಗತಿಯಿಂದ ಕೃತಿಗೊದಗುವ ಹಾನಿಯನ್ನೂ ಲಿಪಿಕಾರರ ಅಜ್ಞಾನ ಹಾಗೂ ಅಲಕ್ಷ್ಯಗಳನ್ನೂ ಮತ್ತು ಪಾಠಸ್ಖಾಲಿತ್ಯದ ಶೀಘ್ರಗತಿಯನ್ನೂ ಜ್ಞಾನೇಶ್ವರೀ ಗ್ರಂಥದ ಬಗ್ಗೆ ಪ್ರಚಲಿತವಾಗಿರುವ ಐತಿಹ್ಯವೊಂದರಿಂದ ನಿದರ್ಶಿಸಬಹುದು. ಶಕೆ ೧೨೧೨ (ಕ್ರಿ. ಶ. ೧೨೯೦) ರಲ್ಲಿ ಜ್ಞಾನೇಶ್ವರನು ರಚಿಸಿದ್ದ ಪಾಠವು ಏಕನಾಥ ಕವಿಯ ಕಾಲಕ್ಕೆ ಎಷ್ಟು ಕೆಟ್ಟುಹೋಗಿತ್ತೆಂದರೆ ಏಕನಾಥನು ತನಗೆ ಸಿಕ್ಕ ಹಸ್ತಪ್ರತಿಗಳ ಸಹಾಯದಿಂದ ಶಕೆ ೧೫೦೬ (ಕ್ರಿ. ಶ. ೧೫೮೪) ರಲ್ಲಿ, ಎಂದರೆ ಕೃತಿರಚನೆಯಾದ ಮುನ್ನೂರು ವರ್ಷಗಳೊಳಗಾಗಿ ಅದನ್ನು ಪರಿಷ್ಕರಿಸಬೇಕಾಯಿತು. ಏಕನಾಥನಿಗೆ ಮುಂಚೆ ಇದ್ದ ಪಾಠದ ಕೆಲವು ಹಸ್ತಪ್ರತಿಗಳು ಪತ್ತೆಯಾದಲ್ಲದೆ ಅವನು ಪಾಠಶುದ್ಧೀಕರಣಕ್ಕೆ ಅನುಸರಿಸಿದ ನಿಯಮವನ್ನು ತಿಳಿಯುವ ಯಾವ ಸಾಧನಗಳೂ ದುರದೃಷ್ಟದಿಂದಾಗಿ ಇಂದು ಇಲ್ಲ. ಬೇರೆ ಬೇರೆ ಹಸ್ತಪ್ರತಿಗಳೊಡನೆ ಪ್ರಾಚೀನ ಪರಿಷ್ಕೃತಪ್ರತಿಗಳನ್ನು ಹೋಲಿಸುವುದರಿಂದ ಪಾಠವನ್ನು ಸುಧಾರಿಸಬಹುದೆಂಬುದು ಅವನಿಗೆ ತಿಳಿದಿದ್ದಿರಬೇಕು. ಅನೇಕ ಹಸ್ತಪ್ರತಿಗಳ ಅಂಚಿನಲ್ಲಿಯೋ ಇಲ್ಲವೆ ಸಾಲುಗಳ ನಡುವೆಯೋ ಏಕೆ ತಿದ್ದುಪಡಿಗಳು ಇರುತ್ತವೆಂಬುದನ್ನೂ ಇದು ವಿವರಿಸುತ್ತದೆ. ಸಂಪಾದಕರು ಶಾಸ್ತ್ರೀಯ ರೀತಿಯಲ್ಲಿ ಕೆಲಸ ಮಾಡಲಿಲ್ಲವೆಂಬುದು ಅವರ ತಪ್ಪಲ್ಲ, ಅವರು ಇದ್ದ ಕಾಲದ್ದು. ಗ್ರಂಥಸಂಪಾದನೆಯ ಬಗ್ಗೆ ತಮಗಿದ್ದ ಇಂಥ ತಿಳಿವಳಿಕೆಯ ಫಲವಾಗಿ ಅವರು ಒಂದು ಗ್ರಂಥದ ಮಾತೃಕೆಯ ಜೊತೆಗೆ ಆ ಗ್ರಂಥದ ಎಲ್ಲ ಲಭ್ಯಪ್ರತಿಗಳ ಪಾಠಗಳನ್ನೂ ಮಧ್ಯೆ ಸೇರಿಸಿ ಇಲ್ಲವೆ ಕಲಸಿ ಮಿಶ್ರ ಪ್ರತಿಗಳನ್ನು (Conflated Mss. or Misch-codices) ಸೃಷ್ಟಿಸಿದರು. ಹೀಗೆ ಪಾಠಮಿಶ್ರಣ ಮಾಡುವಾಗ ಅವರು ಯಾವ ವ್ಯವಸ್ಥಿತ ನಿಯಮಗಳನ್ನೂ ಅನುಸರಿಸಲಿಲ್ಲ.

ಪ್ರಾಚೀನ ಗ್ರಂಥಗಳು ನಮಗೆ ಪರಂಪರಾಗತ ಪ್ರತಿಗಳಿಂದ ದೊರೆತಿವೆ. ಈ ಪರಂಪರಾಗತ ಪ್ರತಿಗಳು ಆರಂಭದಲ್ಲಿ, ಸಾಮಾನ್ಯ ಮೂಲಕ್ಕೆ ಸೇರಿರುವ ಕೆಲವು ಪ್ರಾಚೀನ ಶಾಖೆಗಳಿಂದ ಬೆಳೆದು ಬಂದಿರುತ್ತವೆ. ಆದ್ದರಿಂದ ಈ ಹಸ್ತಪ್ರತಿಗಳೆಲ್ಲಕ್ಕೂ, ಅವು ಶುದ್ಧವಾಗಿರುವಷ್ಟು ಭಾಗದಲ್ಲಿ ಪರಸ್ಪರ ಸಂಬಂಧವಿರುತ್ತದೆ. ಇದನ್ನು ಒಂದು ಪೀಳಿಗೆಯ ರೂಪದಲ್ಲಿ ತೋರಿಸಬಹುದು.[೨]

ಬೇರೆ ಮಾತುಗಳಲ್ಲಿ ಹೇಳುವುದಾದರೆ ಈ ಹಸ್ತಪ್ರತಿಗಳು ಕೆಲವು ನಿರ್ಣಾಯಕ ಲಕ್ಷಣಗಳಿಂದ ರೂಪಿತವಾದ ಸಂಪ್ರದಾಯವೊಂದನ್ನು ಪ್ರತಿನಿಧಿಸುತ್ತವೆ. ಆದರೆ ಈ ಸಂಪ್ರದಾಯದ ಎಳೆಗಳು ಹೆಚ್ಚಿನ ಪ್ರಸಂಗಗಳಲ್ಲಿ ಪ್ರತ್ಯೇಕತೆಯನ್ನು ತೋರುವಂಥವಲ್ಲ. ಈ ಮುಂಚೆ ತಿಳಿಸಿದಂತೆ ಪರಿಶೀಲಕರ ಮತ್ತು ಪರಿಷ್ಕಾರಕರ ಸಂತತವಾದ ಚಟುವಟಿಕೆಗಳಿಂದಾಗಿ ಅವು ಮೊದಲಿನಿಂದಲೂ ಹಾಸುಹೊಕ್ಕಾಗಿ ಸೇರಿಕೊಂಡುಬಿಟ್ಟಿರುತ್ತವೆ.

ಹೀಗೆ ಕಾಲಾನುಕ್ರಮವಾಗಿ ಒದಗುವ ಹಾನಿಯಿಂದ ಮತ್ತು ಇತರ ಕಾರಣಗಳಿಂದ ಬಹುಸಂಖ್ಯೆಯ ಸ್ವಹಸ್ತ ಪ್ರತಿಗಳು ಇಲ್ಲವೆ ಅವುಗಳ ಬಳಿನಕಲುಗಳು ಅಥವಾ ಪ್ರಾಚೀನ ಪ್ರತಿಗಳು

---

೨. ಇದನ್ನು ಸ್ಥಾಪಿಸಲು ಬೇಕಾದ ಪ್ರಮಾಣಗಳನ್ನು ಅಥವಾ ವೈಲಕ್ಷಣ್ಯಗಳನ್ನು ಪಾಠ ಸಂಪ್ರದಾಯವನ್ನು (Recension) ಕುರಿತ ಅಧ್ಯಾಯದಲ್ಲಿ ಕೊಡಲಾಗುವುದು.

ನಾಶವಾಗಿಬಿಟ್ಟಿದ್ದು, ಈಗ ನಮಗೆ ಲಭಿಸಿರುವ ಈಚಿನ ಪ್ರತಿಗಳಲ್ಲಿ ಊನಗೊಂಡ, ವಿರೂಪ ಗೊಂಡ, ಜೀರ್ಣವಾದ ಪಾಠಗಳು ದೊರೆಯುತ್ತವೆಂಬುದನ್ನು ಭಾರತೀಯ ಹಸ್ತಪ್ರತಿ ಪರಂಪರೆಯು ತೋರಿಸುತ್ತದೆ. ಕೆಲವು ಸಂದರ್ಭಗಳಲ್ಲಿ ಗ್ರಂಥಕ್ಕೆ ಒದಗಿದ ಹಾನಿಯು ಗ್ರಂಥವು ಅರ್ಥವಾಗುವುದೇ ಕಷ್ಟವಾಗುವ ಮಟ್ಟಿಗೆ ಅದನ್ನು ವಿರೂಪಗೊಳಿಸಿರಬಹುದು.

ಕಾಲಗತಿಯಿಂದ, ವಿಧ್ವಂಸಕ ಕೃತ್ಯಗಳಿಂದ, ಉದ್ದೇಶವಿಲ್ಲದೆ ಘಟಿಸಿದ ಕೇಡಿನಿಂದ, ಗ್ರಂಥವೇ ಅಮುಖ್ಯವಾದುದರಿಂದ, ಹುಳು ಗೆದ್ದಲುಗಳ ಉಪಟಳಗಳಿಂದ ಭಾರತದಲ್ಲಿ ಬಹು ಸಂಖ್ಯೆಯ ಗ್ರಂಥಗಳು ನಷ್ಟವಾಗಿವೆ; ಲಭ್ಯಪ್ರತಿಗಳಲ್ಲಿ ದೊರೆಯುವ ಎಲ್ಲೋ ಕೆಲವು ಬಿಡಿ ಉದ್ಧರಣಗಳನ್ನು ಬಿಟ್ಟರೆ ಗುರುತೇ ಉಳಿಯದಂತೆ ನಿಶ್ಶೇಷವಾಗಿಬಿಟ್ಟಿವೆ. ಆದರೆ ಅದೃಷ್ಟ ವಶಾತ್ ಮಹಾಯಾನಪಂಥಕ್ಕೆ ಸೇರಿದ ಬೌದ್ಧರ ಸಂತತವಾದ ಸಾಹಿತ್ಯಿಕ ಪರಿಶ್ರಮದಿಂದ ವೈದಿಕ ಮತ್ತು ಬೌದ್ಧ–ಈ ಎರಡೂ ಧರ್ಮಗಳ, ಅದರಲ್ಲಿಯೂ ವಿಶೇಷವಾಗಿ ಬೌದ್ಧ ಧರ್ಮದ, ಕೆಲವು ಮುಖ್ಯ ಕೃತಿಗಳು ಉಳಿದಿವೆ. ಇವು ಟಿಬೆಟ್ ಮತ್ತು ಚೀನಾ ದೇಶಗಳ ಪತ್ರಾಗಾರ (archives)ಗಳಲ್ಲಿದ್ದು ಟಿಬೆಟನ್ ಭಾಷೆಗೋ ಅಥವಾ ಚೈನೀ ಭಾಷೆಗೋ ಅನುವಾದಿತವಾಗಿವೆ ಇಲ್ಲವೆ ಲಿಪ್ಯಂತರಗೊಂಡಿವೆ. ಕೆಲವು ಸಲ ಕಳೆದುಹೋದ ಗ್ರಂಥಗಳ ಅನುವಾದಗಳು ನಮಗೆ ದೊರೆತಿವೆ. ಇದಕ್ಕೆ ಪ್ರಸಿದ್ಧವಾದ ನಿದರ್ಶನವೆಂದರೆ ಐತಿಹ್ಯದ ಪ್ರಕಾರ ಪೈಶಾಚೀ ಭಾಷೆಯಲ್ಲಿದ್ದ ಗುಣಾಢ್ಯನ ಬೃಹತ್ಕಥೆ. ಇದು ಎಂದೂ ಲಭ್ಯವಾಗದ ರೀತಿಯಲ್ಲಿ ನಷ್ಟವಾಗಿ ಹೋಗಿದೆ ಯಾದರೂ ಕ್ಷೇಮೇಂದ್ರ ಮತ್ತು ಸೋಮದೇವರ ಸಂಸ್ಕೃತ ಅನುವಾದಗಳಲ್ಲಿ ಉಳಿದಿದೆ. ಕಳೆದು ಹೋದ ಈ ಕೆಲವು ಗ್ರಂಥಗಳ ವಿಷಯ ನಮಗೆ ಕೆಳಕಂಡ ಮೂಲಗಳಿಂದ ತಿಳಿಯುತ್ತದೆ : (೧) ಅನುವಾದಗಳು (೨) ಲಭ್ಯ ಹಸ್ತಪ್ರತಿಗಳಲ್ಲಿ ಅವುಗಳ ಶೀರ್ಷಿಕೆಗಳ ಉಲ್ಲೇಖ (೩) ಆ ಗ್ರಂಥಗಳ ಪ್ರಸ್ತಾಪ ಇಲ್ಲವೆ ಉದ್ಧರಣಗಳು (೪) ವ್ಯಾಖ್ಯಾನಗಳು.

ಭಾರತೀಯ ಸಾಹಿತ್ಯದ ಮತ್ತು ಗ್ರಂಥಸಂಪಾದನೆಯ ಚರಿತ್ರೆ ಇನ್ನೂ ಅಪಾರ ವ್ಯಾಪ್ತಿ ಯಿರುವ ಸಂಶೋಧನೆಯ ವಸ್ತುವಾಗಿಯೇ ಉಳಿದಿದೆ. ಹೀಗಿದ್ದೂ ಲಭ್ಯ ಹಸ್ತಪ್ರತಿಗಳ ಅಧ್ಯಯನ ದಿಂದ ಕೆಲವು ವಿಷಯಗಳು ಹೊರಪಡುತ್ತವೆ. ಈ ಹಸ್ತಪ್ರತಿಗಳು ಸಾಮಾನ್ಯವಾಗಿ ಒಂದೇ ಸಂತತ ಪರಂಪರೆಯ ಒಂದಿಲ್ಲೊಂದು ಅಂಗಕ್ಕೆ ಸಂಬಂಧಿಸುತ್ತವೆಂಬುದನ್ನು ನಾವು ನೋಡಿದ್ದೇವೆ. ಭಾರತದ ಅನೇಕ ಭಾಗಗಳಲ್ಲಿ ಬಳಕೆಯಲ್ಲಿರುವ ವಿವಿಧಲಿಪಿಗಳಲ್ಲಿ ಅವು ಲಿಖಿತವಾಗಿವೆ. ಮಧ್ಯ ಯುಗದಲ್ಲಿ ವೃತ್ತಿಯಿಂದ ಲಿಪಿಕಾರರಾಗಿದ್ದವರಿಗೆ ಒಂದಕ್ಕಿಂತ ಅಥವಾ ಹೆಚ್ಚೆಂದರೆ ಎರಡಕ್ಕಿಂತ ಹೆಚ್ಚು ಲಿಪಿಗಳ ಪರಿಚಯ ಇದ್ದಿರಲಾರದು. ಆದ್ದರಿಂದ ಹಸ್ತಪ್ರತಿಗಳನ್ನು ನಕಲು ಮಾಡುವ ಅವರ ಕೆಲಸ ಸಹಜವಾಗಿಯೇ ಒಂದು ಅಥವಾ ಎರಡು ಲಿಪಿಗಳ ಮಿತಿಗೆ ಒಳಪಟ್ಟಿರುತ್ತಿತ್ತು. ಮಾತೃಕೆಯು ಯಾವ ಲಿಪಿಯಲ್ಲಿ ರಚಿತವಾಗಿತ್ತೋ ಆ ಲಿಪಿಯ ಜೊತೆಜೊತೆಗೇ ಹಸ್ತಪ್ರತಿಯ ಸಂಪ್ರದಾಯವೂ ಬೆಳೆದು ಬಂತೆಂಬುದು ಇದರಿಂದ ತಿಳಿಯುತ್ತದೆ. ಎರಡು ಲಿಪಿಗಳನ್ನೂ ಬಲ್ಲ ಲಿಪಿಕಾರನಿಂದ ಮಾತೃಕೆಯು ಲಿಪ್ಯಂತರಗೊಳ್ಳುತ್ತಿತ್ತು. ನೂತನ ಪ್ರತಿಯಿಂದ ಆ ಲಿಪಿಯಲ್ಲಿ ಮುಂದಕ್ಕೆ ಹೊಸ ಸಂಪ್ರದಾಯವೊಂದು ಪ್ರಾರಂಭವಾಗುತ್ತಿತ್ತು. ಲಿಪಿಯ ಪರಿಚಯ ಕಡಮೆ ಇದ್ದಷ್ಟೂ ಅದರ ಹಸ್ತಪ್ರತಿಗಳು ಏಕರೀತಿಯ ಸಂಪ್ರದಾಯವನ್ನು ಅನುಸರಿಸುವ ಸಂಭವ ಹೆಚ್ಚು. ಇದು ಸಾಧ್ಯವಾಗಬೇಕಾದಲ್ಲಿ ತಿದ್ದುಗಾರರಿಗಾಗಲೀ, ಪರಿಷ್ಕಾರಕರಿಗಾಗಲೀ ಅಥವಾ ಲಿಪಿಕಾರ ರಿಗಾಗಲೀ ಎರಡಕ್ಕಿಂತ ಹೆಚ್ಚು ಲಿಪಿಗಳ ಪರಿಚಯವಿರಬಾರದು ಮತ್ತು ಅವರು ತಮ್ಮ ಕೆಲಸದಲ್ಲಿ

ಇತರ ಹಸ್ತಪ್ರತಿಗಳ ಸಹಾಯ ಪಡೆಯಬಾರದು. ಸುಕ್ತಂಕರ್‌ರವರು ಹೇಳುವಂತೆ ಈ ಭೇದವು ಮೊದಲ ನೋಟಕ್ಕೆ ತೋರುವಷ್ಟು ಕ್ರಮರಹಿತವಾದುದಲ್ಲ. ಲಿಪಿಗಳ ಈ ತೋರಿಕೆಯ ವ್ಯತ್ಯಾಸವು ವಾಸ್ತವವಾಗಿ ಅಂತಸ್ಥವಾದ ಹಿರಿಯ ಪಾಠವ್ಯತ್ಯಾಸಗಳಿಗೆ ಸಂಬಂಧಿಸಿರುತ್ತದೆಂಬುದು ಅನುಭವದಿಂದ ತಿಳಿದುಬಂದಿದೆ. ಈ ಸಾಮಾನ್ಯ ನಿಯಮಕ್ಕೆ ಒಂದೇ ಒಂದು ಅಪವಾದವೆಂದರೆ ದೇವನಾಗರಿಲಿಪಿ. ಇದು ಭಾರತದಲ್ಲಿ ಬಹಳ ಕಡೆ ಬಳಕೆಯಲ್ಲಿದ್ದು, ಅರ್ಥವಾಗುತ್ತಿದ್ದ ಜನಲಿಪಿ (Vulgar Script) ಯಾಗಿತ್ತು. ಈ ನಿಯಮವು ಹೇಗೆ ಪೂರ್ಣವಾಗಿ ಯಾಂತ್ರಿಕವಾಗಲೀ, ಯಾದೃಚ್ಛಿಕವಾಗಲೀ ಅಲ್ಲವೋ ಹಾಗೆಯೇ ಪೂರ್ತಿಯಾಗಿ ಆದರ್ಶಪ್ರಾಯವಾಗಲೀ ಅಥವಾ ದೋಷದೂರವಾಗಲೀ ಅಲ್ಲ. ಉದಾಹರಣೆಗೆ ದೇವನಾಗರಿಲಿಪಿಯ ಮಧ್ಯ ಪ್ರವೇಶದಿಂದಾಗಿ ಅದು ಉಲ್ಲಂಘನೆಗೊಂಡಿದೆ. ಈ ನಿಯಮಕ್ಕೆ ಬಾಧೆ ತರುವ ಮತ್ತೊಂದು ಅಂಶವೆಂದರೆ ಭಿನ್ನಲಿಪಿಗಳನ್ನು ಬಳಸುವ ಮತ್ತು ಭಿನ್ನಭಾಷೆಗಳನ್ನು ಆಡುವ ಪ್ರಾಂತ್ಯಗಳ ಗಡಿಗಳ ಉದ್ದಕ್ಕೂ ಎಡೆಬಿಡದೆ ಇರುವ ದ್ವಿಭಾಷಾ, ದ್ವಿಲಿಪಿ ವಲಯಗಳು. ಮೇಲೆ ಸೂಚಿಸಿರುವ ಅವಕಾಶಗಳು ಎರಡು ಲಿಪಿಗಳಿಂದ ಪ್ರತಿನಿಧಿತವಾದ ಪರಂಪರೆಯ ಭಿನ್ನಸೂತ್ರಗಳು ಒಂದರೊಡನೊಂದು ಹೆಣೆದುಕೊಳ್ಳಲು ಕಾರಣವಾಗುತ್ತವೆ.

# ಅಧ್ಯಾಯ III : ಗ್ರಂಥಸಂಪಾದನೆಯ ಕೆಲವು ಮೂಲಭೂತ ವಿಷಯಗಳು

ಗ್ರಂಥಸಂಪಾದನೆಯ ಏಕಮೇವ ಗುರಿಯೆಂದರೆ ಗ್ರಂಥದ ಹಸ್ತಪ್ರತಿಗಳಲ್ಲಿ ಅಥವಾ ಲಿಖಿತ ದಾಖಲೆಗಳಲ್ಲಿ ಇರುವ ಸಾಕ್ಷ್ಯಗಳನ್ನು ಸರಿನೋಡಿ ವ್ಯಾಖ್ಯಾನಿಸುವುದು; ಎಷ್ಟು ಸಾಧ್ಯವೋ ಅಷ್ಟೂ ಹಿಂದಕ್ಕೆ ಸಾಗಿ ಪ್ರಮಾಣಪಾಠವನ್ನು ಮತ್ತೆ ಪಡೆಯುವುದು ಇಲ್ಲವೆ ಕವಿಯೇ ಬರೆದಿರಬಹುದಾದ ಪದಗಳಿಗೆ ಸಾಧ್ಯವಾದಷ್ಟು ಸಮೀಪವಾದ ಪಾಠವನ್ನು ನಿರ್ಣಯಿಸುವುದು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಸಾಧ್ಯವಾದಮಟ್ಟಿಗೂ ಗ್ರಂಥವನ್ನು ಅದರ ಮೂಲರೂಪಕ್ಕೊಯ್ಯುವ ಏಕಮೇವ ಉದ್ದೇಶದಿಂದ ಪಾಠ ನಿರ್ಣಯ ಕಾರ್ಯದಲ್ಲಿ ಕೌಶಲ್ಯ ಜ್ಞಾನಗಳನ್ನು ಉಪಯೋಗಿಸಿ ವಿಚಾರ ಮಾಡುವುದು. ಇಲ್ಲಿ ಮೂಲರೂಪವೆಂದಾಗ ಕವಿವಿವಕ್ಷೆಯ ಪಾಠವೆಂದು ಅರ್ಥ. ಇಂಥ ಪುನರ್ರಚನೆ ವಿಮರ್ಶಾತ್ಮಕ ಪರಿಷ್ಕರಣ ಎನ್ನಿಸಿಕೊಳ್ಳುತ್ತದೆ.

ಅಂಗೀಕೃತವಾದ ಪದ್ಧತಿಯೊಂದರ ಪ್ರಕಾರ ಗ್ರಂಥ ಸಂಪಾದನೆಯಲ್ಲಿ ಎರಡು ಭಾಗಗಳಿವೆ. (೧) ಪಾಠಸಂಪ್ರದಾಯ ನಿರ್ಣಯ (Recensio) ಮತ್ತು (೨) ಪಾಠಪರಿಷ್ಕರಣ (Emendation). ಇದು ಸಾಂಪ್ರದಾಯಿಕವಾದ ವಿಭಾಗ ಸ್ವಹಸ್ತಪ್ರತಿಯ ಪಾಠವನ್ನು ಅಥವಾ ಅದಕ್ಕೆ ಸಮೀಪವಾದ ಪಾಠವನ್ನು ರಚಿಸುವುದಕ್ಕೆ ಆಧಾರವಾಗಿ ನಂಬಲರ್ಹವಾದ ಹಸ್ತಪ್ರತಿಗಳನ್ನೋ ಇಲ್ಲವೆ ಲಿಖಿತ ಆಧಾರಗಳನ್ನೋ ಆರಿಸುವುದು ಸಂಪ್ರದಾಯನಿರ್ಣಯ. ಸಿಗುವ ಎಲ್ಲ ಸಾಕ್ಷ್ಯಗಳನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿದ ಮೇಲೆಯೇ ಈ ಆಯ್ಕೆ ಸಾಧ್ಯ. ಅತ್ಯುತ್ತಮ ಹಸ್ತಪ್ರತಿ ಇಲ್ಲವೆ ದಾಖಲೆಗಳಲ್ಲಿಯೂ ಸಹ ಕಂಡುಬರುವ, ಆದರೆ ನಂಬಲು ಯೋಗ್ಯವಲ್ಲದ ಅಂಶಗಳನ್ನು ಹಸ್ತಪ್ರತಿ ಸಂಪ್ರದಾಯದಿಂದ ತೆಗೆದುಹಾಕುವುದೇ ಪಾಠಪರಿಷ್ಕರಣ. ಒಂದು ಅರ್ಥದಲ್ಲಿ ಅದು ಸಂಪ್ರದಾಯವನ್ನು ದಾಟಿ ಹೋಗುವಂಥದು. ಆದ್ದರಿಂದ ಬುದ್ಧಿಪೂರ್ವಕವಾಗಿ ತಳ್ಳಿಹಾಕುವ ವ್ಯವಸ್ಥಿತಯತ್ನವೆಂದೂ ಅದನ್ನು ಕರೆಯಬಹುದು.

F. W. ಹಾಲ್ (F. W. Hall) ಅವರು ಹೇಳುವಂತೆ ಅನೇಕ ಜನ ಗ್ರಂಥಸಂಪಾದನೆಯನ್ನು ಒಂದು ಒಡಗೆಂಬಂತೆ ನೋಡುತ್ತಾರೆ. ಆದರೆ ಇದು ಒಡಗೂ ಅಲ್ಲ, ಪ್ರೌಢ ಶಾಸ್ತ್ರವೂ ಅಲ್ಲ. ಸಂಶೋಧಕರು ತಮ್ಮ ತಲೆಯನ್ನು ಮುತ್ತುವ ಒಂದು ವಿಶಿಷ್ಟವರ್ಗದ ಸಮಸ್ಯೆಗಳನ್ನು ಬಿಡಿಸಲು ಹಸ್ತಪ್ರತಿಗಳ ಆಧಾರ ಹಿಡಿದು ತೋರುವ ಸಾಮಾನ್ಯ ತಿಳಿವಳಿಕೆ.[1] ಈ ಸಮಸ್ಯೆಗಳಲ್ಲಿ ಹೆಚ್ಚಿನವು ಪರಂಪರಾಗತವಾಗಿ ಸಾಗಿಬಂದ ಪ್ರತಿಲೇಖನಕಾರ್ಯದಲ್ಲಿ ಒಳಸೇರಿದ ತಪ್ಪುಗಳಿಗೆ ಸಂಬಂಧಿಸಿದವು. ಸಂಪಾದಕನು ಅವುಗಳನ್ನು ತಿದ್ದುವ ಮೊದಲು ತಾನು ಉಪಯೋಗಿಸುತ್ತಿರುವ ಗ್ರಂಥದ ಚರಿತ್ರೆಯನ್ನು ಗಮನಿಸಲೇಬೇಕು. ಇಲ್ಲದಿದ್ದಲ್ಲಿ ಆಧುನಿಕ ವಿಧಾನಗಳಿಂದ ಸರಿಪಡಿಸಲು ಸಾಧ್ಯವೇ ಇಲ್ಲದಷ್ಟು ಪ್ರಾಚೀನವಾದ ಸ್ಖಾಲಿತ್ಯಗಳನ್ನು ತಿದ್ದಲು ಅವನು ಯತ್ನಿಸಬಹುದು.[2] ಅಥವಾ ಕವಿಯೇ ರಚಿಸಿರಬಹುದಾದ ಪಾಠದ ಬಗ್ಗೆ ಸಂದೇಹಪಡಬಹುದು. ಈ ಕಾರಣದಿಂದ ಗ್ರೀಕ್ ಮತ್ತು ಲ್ಯಾಟಿನ್ ಗ್ರಂಥಗಳ ಸಂಪಾದನೆಗೆ ಅನುಸರಿಸಿದ ಪ್ರಾಚೀನ ವಿಧಾನದಲ್ಲಿ ಗ್ರಂಥಸಂಪಾದನೆಯನ್ನು ನಾಲ್ಕು ಹಂತಗಳಾಗಿ ವಿಂಗಡಿಸಲಾಗಿದೆ.

1. Companion to Classical Studies, P. iii

(೧) **ಸಾಮಗ್ರಿ ಸಂಕಲನ** (Heuristics) : ಹಸ್ತಪ್ರತಿ ಮತ್ತು ಪ್ರಮಾಣ ಲೇಖನಗಳಿಂದ ಕೂಡಿದ ಸಮಸ್ತ ಸಾಮಗ್ರಿಯನ್ನೂ ಕಲೆಹಾಕಿ ಅದನ್ನು ವಂಶವೃಕ್ಷ ಅಥವಾ ಪೀಳಿಗೆಯ (stemma codicum) ರೂಪದಲ್ಲಿ ಜೋಡಿಸುವುದು. (೨) **ಪಾಠ ಸಂಪ್ರದಾಯ ನಿರ್ಣಯ** (Recensio) : ಮೇಲೆ ಹೇಳಿದ ಸಾಮಗ್ರಿಗಳ ಮೂಲರೂಪವನ್ನು ಸಾಧಿಸುವುದು. (೩) **ಪಾಠ ಸಂಯೋಜನೆ** (Emendation) : ಗ್ರಂಥಕಾರನ ಪಾಠದ ಮೂಲರೂಪವನ್ನು ಸಾಧಿಸುವುದು. (೪) **ಉನ್ನತ ವಿಮರ್ಶೆ** (Higher criticism) : ಕವಿ ಬಳಸಿರುವ ಮೂಲಗಳನ್ನು ಪ್ರತ್ಯೇಕಿಸುವುದು.

ಸಂಪಾದಕನಿಗೆ ಸಾಧ್ಯವಿರುವ ಕೆಲಸವಿಷ್ಟು. ಮೊದಲ ವಿಧಾನದ ಮೂಲಕ ಪರಸ್ಪರ ಸ್ವತಂತ್ರವಾಗಿರುವ ಅಥವಾ ಬೆರೆತುಹೋಗಿ ಪರಸ್ಪರ ಸಂಬಂಧಗೊಂಡಿರುವ ಕೆಲವು ನಿರ್ದಿಷ್ಟ ಅಂಗಗಳಲ್ಲಿ ಹಸ್ತಪ್ರತಿಸಾಕ್ಷ್ಯಗಳನ್ನು ಅಳವಡಿಸುವುದು. ಪರಂಪರಾಗತಪಾಠದಲ್ಲಿ ದೊರೆಯುವ ಸಾಕ್ಷ್ಯಗಳ ಪರಿಶೀಲನೆಯಿಂದ ಈ ಕೆಲಸ ಆರಂಭವಾಗುತ್ತದೆ. ಈ ಸಾಕ್ಷ್ಯಗಳಿಗೆ ನಾವು ಹಸ್ತಪ್ರತಿಗಳನ್ನು ಅವಲಂಬಿಸಬೇಕು. ಇವು ಲಭ್ಯಹಸ್ತಪ್ರತಿಗಳಾಗಿರಬಹುದು ಅಥವಾ ನಷ್ಟಹಸ್ತಪ್ರತಿಗಳಾಗಿರಬಹುದು. ಲಭ್ಯಪ್ರತಿಗಳ ಪ್ರಮಾಣಗಳನ್ನು ಪಾಠಾಂತರದಿಂದ (Collation) ನಿರ್ಧರ ಮಾಡಿಕೊಳ್ಳಬೇಕು. ಹಸ್ತಪ್ರತಿಯ ಪಾಠಾಂತರ ಸಂಕಲನ ಮಾಡುವುದೆಂದರೆ ಆ ಹಸ್ತಪ್ರತಿಯ ಮಾತೃಕೆಯಲ್ಲಿ ಏನಿದ್ದಿತೆಂಬುದನ್ನು ನಿರ್ಧರಿಸಲು ಉಪಯುಕ್ತವಾದ ಅಂಶಗಳೆಲ್ಲವನ್ನೂ ಗುರುತು ಹಾಕಿಕೊಳ್ಳುವುದು. ಮಹಾಭಾರತದ ಆದಿಪರ್ವದ ಪರಿಷ್ಕೃತ ಮುದ್ರಣಕ್ಕೆ ಸುಕ್ತಂಕರ್‌ರವರು ಬರೆದ ಉಪೋದ್ಘಾತದಲ್ಲಿ ಮತ್ತು ಎಡ್ಗರ್‌ಟನ್ನರ (Edgerton) "ಪುನರ್ರಚಿತ ಪಂಚತಂತ್ರ" [Pancatantra reconstructed] ದಲ್ಲಿ ಪಾಠಾಂತರ ಸಂಕಲನಕ್ಕೆ ಉಪಯುಕ್ತವಾದ ಕೆಲವು ಸೂಚನೆಗಳಿವೆ. ಪಾಠಾಂತರ ಸಂಕಲನಕ್ಕೆ ಆಯ್ದ ಕೃತಿ ಕಾವ್ಯವಾಗಿದ್ದಲ್ಲಿ ಪದ್ಯ (ಶ್ಲೋಕ) ವೃತ್ತವನ್ನು ಘಟಕವಾಗಿ ಪರಿಗಣಿಸಬಹುದು. ಉತ್ತಮ ಹಸ್ತಪ್ರತಿಯನ್ನು ಪ್ರಮಾಣಪ್ರತಿಯಾಗಿ ತೆಗೆದುಕೊಂಡು ಪದ್ಯದ ಒಂದೊಂದೇ ಅಕ್ಷರವನ್ನು, ಒಂದೇ ಹಾಳೆಯ ಮೇಲೆ, ಸರಿಯಾಗಿ ವಿಂಗಡಿಸಿರುವ ಚೌಕಗಳಲ್ಲಿ, ಮೇಲ್ಭಾಗದಲ್ಲಿ ಬರೆಯಬೇಕು. ಇದಕ್ಕೆ ಹೊಂದುವ ಚೌಕಗಳಲ್ಲಿ ಪಾಠವ್ಯತ್ಯಾಸಗಳನ್ನು ಸೂಚಿಸಬೇಕು. ಸಂಕಲಿತವಾದ ಹಸ್ತಪ್ರತಿ ಯಾವುದೆನ್ನುವುದನ್ನು ಎಡಪಾರ್ಶ್ವದಲ್ಲಿ ಸೂಚಿಸಿದರೆ ಹೆಚ್ಚು ಅಗಲವಿರುವ ಬಲಪಾರ್ಶ್ವದಲ್ಲಿ ಅಧಿಕಪಾಠ (Additional passages) ಗಳನ್ನೂ ಇತರ ವಿಶೇಷ ಸೂಚನೆಗಳನ್ನೂ ಬರೆಯಬಹುದು. ಮಹಾಭಾರತದ ಪರಿಷ್ಕೃತ ಮುದ್ರಣದಲ್ಲಿ ಅನುಸರಿಸಿದ ಪಾಠಾಂತರಕ್ರಮದ ವಿವರಗಳನ್ನು ಮೇಲೆ ಸೂಚಿಸಿದ ಸುಕ್ತಂಕರ್‌ರವರ ಉಪೋದ್ಘಾತದಲ್ಲಿ ಅಭ್ಯಾಸ ಮಾಡಬಹುದು.

ಎಡ್ಗರ್‌ಟನ್‌ರವರು ಬಳಸಿದ ವಿಧಾನ ಹೀಗಿದೆ: ಪಂಚತಂತ್ರವನ್ನು ಮೊದಲು ಚೆನ್ನಾಗಿ ಅಭ್ಯಾಸಮಾಡಿ ಮೂಲ ಪಂಚತಂತ್ರದ ಪುನರ್ರಚನೆಗೆ ಉಪಯುಕ್ತವಾದ, ಕಡೆಯಪಕ್ಷ ಕಾರ್ಯಸಾಧ್ಯವಾದ, ಎಲ್ಲ ಆಧಾರಗಳೂ ಇರುವ ಪಂಚತಂತ್ರದ ಕಾವ್ಯಪಾಠಗಳನ್ನು (versions) ಅವರು ಆರಿಸಿಕೊಂಡರು. ಇತರ ಪ್ರತಿಗಳಲ್ಲಿರುವ ವಿಷಯಕ್ಕೆ ಹೊಂದುವಂಥದು ಏನೇನಿದ್ದುವೋ ಅಂಥ ವಿಷಯಗಳೆಲ್ಲವನ್ನೂ ಒಂದೊಂದು ಪ್ರತಿಯಲ್ಲಿಯೂ ಸೂಕ್ಷ್ಮವಾಗಿ ಪರಿಶೀಲಿಸಿದರು. ಇದಕ್ಕಾಗಿ ಪಾಠವನ್ನು ಸಾಧ್ಯವಿರುವಷ್ಟು ಚಿಕ್ಕ ಘಟಕಗಳಾಗಿ ಒಡೆಯಲಾಯಿತು. ಒಂದೊಂದು ಘಟಕವೂ

ಒಂದೊಂದು ಗದ್ಯವಾಕ್ಯವೋ ಅಥವಾ ಕೆಲವು ಸಲ ವಾಕ್ಯದ ಭಾಗವೋ ಆಗಿರುತ್ತಿತ್ತು. ಅನಂತರ ಮೇಲೆ ಹೇಳಿದ ಕ್ರಮಗಳಿಗೆ ಹೋಲುವ ರೀತಿಯಲ್ಲಿ ಪಾಠಾಂತರ ಸಂಕಲನವು ಮುಂದುವರಿಯಿತು. ಹೀಗೆ ಗದ್ಯ ಮತ್ತು ಪದ್ಯಗ್ರಂಥಗಳೆರಡರ ಪಾಠಾಂತರ ಸಂಕಲನವೂ ನಡೆಯಬಹುದು.

ಅಂಥ ಪಾಠಾಂತರ ಸಂಕಲನಗಳ ಆಧಾರದ ಮೇಲೆ ಹಸ್ತಪ್ರತಿಗಳ ವಂಶಸಂಬಂಧ ಸ್ಪಷ್ಟವಾಗುತ್ತದೆ. ಇದನ್ನು ಅನಂತರ ಒಂದು ಪೀಳಿಗೆಯ ಮೂಲಕ ತೋರಿಸಬಹುದು.

ಎರಡನೆಯ ಕೆಲಸ ಅವುಗಳನ್ನು ಅರ್ಥೈಸುವುದು. ಇದರಲ್ಲಿ ಹಸ್ತಪ್ರತಿಗಳಲ್ಲಿರುವ ಲಿಖಿತ ಸಾಕ್ಷ್ಯಗಳನ್ನು ಅರ್ಥೈಸಿ ಹಲವು ದೃಷ್ಟಿಗಳಿಂದ ತೂಗಿ ನೋಡಬೇಕಾಗುತ್ತದೆ. ಈ ಆಧಾರಗಳನ್ನು ಬಳಸಿ ಮುಂದಿನ ಅಧ್ಯಾಯದಲ್ಲಿ ಹೇಳಲಿರುವ ಕೆಲವು ನಿಯಮಗಳಿಗನುಸಾರವಾಗಿ ಸಾಧ್ಯವಾದಷ್ಟುಮಟ್ಟಿಗೆ ಪಾಠದ ಪ್ರಾಚೀನರೂಪವನ್ನು ನಿರ್ಧರಿಸಬೇಕು. ಗ್ರಂಥಸಂಪಾದನೆಯ ಈ ಭಾಗ ನಿಜವಾಗಿ ಪ್ರಾಚೀನರೂಪಗಳ ಅನ್ವೇಷಣೆಗೆ ಸಂಬಂಧಿಸಿದ ಹಂತ. ನಾವು ಸಂಪಾದಿಸುತ್ತಿರುವ ಗ್ರಂಥದ ನಿರ್ಧರಸಾಧ್ಯವಾದ ಪ್ರಾಚೀನರೂಪ ಯಾವುದೆಂಬುದನ್ನು ಕಂಡು ಹಿಡಿಯುವುದೇ ಇದರ ಧ್ಯೇಯ.

ಮೂರನೆಯ ಹಂತ ಪ್ರಧಾನತಃ ಕೃತಿಕಾರನ ಪಾಠವನ್ನು ತಿಳಿಯುವುದು ಮತ್ತು ಒಂದರ್ಥದಲ್ಲಿ, ಗ್ರಂಥವು ಒದಗಿಸುವ ಅಂತಃಸಾಕ್ಷ್ಯಗಳ ಬಲದಿಂದ, ಅಗತ್ಯವಾದರೆ ಲಿಖಿತ ಸಾಕ್ಷ್ಯಗಳನ್ನೂ ನಿರಾಕರಿಸಿ, ಅವುಗಳ ಆಚೆ ಸಾಗುವುದು. ನಮ್ಮ ದೇಶದ ಪ್ರಾಚೀನ ಕೃತಿಕಾರರು ಉಳಿದವರಿಂದ ಪ್ರತ್ಯೇಕಗೊಂಡು ನಿಲ್ಲುವಂಥವರಲ್ಲ. ಹಾಲ್‌ರವರು ಹೇಳುವಂತೆ ನಮ್ಮ ಪ್ರಾಚೀನ ಲೇಖಕರು ಒಬ್ಬರೇ ಇದ್ದು ಅವರ ಕೃತಿಯ ಬಗ್ಗೆ ಲಭ್ಯವಿರುವ ಸಾಕ್ಷಿಯು ಕೇವಲ ಹಸ್ತಪ್ರತಿ ರೂಪದಲ್ಲಿ ಮಾತ್ರವೇ ಇದ್ದರೆ ಆ ಪ್ರತಿಗಳಿಗೂ ಹಿಂದಿನ ಕಾಲದ ಪಾಠ ಚರಿತ್ರೆಯ ವಿಷಯವನ್ನು ಹೆಚ್ಚು ತಿಳಿಯುವುದು ಸಾಧ್ಯವಿಲ್ಲ. ಕೆಲವು ಸಲ ಹಸ್ತಪ್ರತಿಯೋ ಹಸ್ತಪ್ರತಿಸಮೂಹವೋ ಒಂದು ನಿರ್ದಿಷ್ಟಕಾಲದ ಮತ್ತು ಕೈಬರೆಹದ ಪ್ರಧಾನ ಮಾತೃಕೆಯಿಂದ ನಕಲುಗೊಂಡಿತೆಂದು ಹೇಳುವುದು ಸಾಧ್ಯ. ಆದರೂ ಸಂಶೋಧನೆಯು ಪ್ರಾಚೀನ ಹಸ್ತಪ್ರತಿಗಳ ಕಾಲಕ್ಕಿಂತ ಹೆಚ್ಚು ಮುಂದೆ ಸಾಗುವುದಿಲ್ಲ. ಆಗ ಸಂಪಾದಕನ ಸ್ಥಿತಿಯು ನೆಲದ ಮೇಲ್ಭಾಗದಲ್ಲಿ ಕಾಣುವ ಸ್ತರದಿಂದ ಸ್ವರ್ಣರೇಖೆಯ ಪಥದ ಬಗ್ಗೆ ವಾದಿಸುವ ಗಣಿಶಿಲ್ಪಿಯ (mining engineer) ಸ್ಥಿತಿಯಂತಾಗುತ್ತದೆ. ಗಣಿಶಿಲ್ಪಿಯು ಅನೇಕ ಭಾಗಗಳಲ್ಲಿ ಕೊರೆದು ನೋಡಿ ಚಿನ್ನದ ರೇಖೆಯು ಹಾದು ಹೋಗಿರುವ ಪಥದ ಗುರುತುಗಳನ್ನು ತಿಳಿಯುತ್ತಾನೆ. ಹಾಗೆಯೇ ಗ್ರಂಥವಿಮರ್ಶಕನು ಲಭ್ಯಹಸ್ತಪ್ರತಿಗಳ ಸಂಪ್ರದಾಯಕ್ಕಿಂತ ಹಿಂದೆ ಇದ್ದಿರಬಹುದಾದ ಪಾಠರೂಪವನ್ನು ಬಾಹ್ಯ ಅಥವಾ ಪರೋಕ್ಷ ಸಾಕ್ಷ್ಯಗಳಿಂದ ತಿಳಿಯುತ್ತಾನೆ. ಹಿರಿಯ ಪರಿಷ್ಕೃತಗ್ರಂಥಗಳಲ್ಲಿ ಅಂಥ ಪರೋಕ್ಷ ಆಧಾರ (Testimonium)ಗಳನ್ನು ಪ್ರಮಾಣ ಸಾಮಗ್ರಿಗಳೆಂದು ಕರೆದು ಅವುಗಳ ಪ್ರತ್ಯೇಕ ವಿಭಾಗವನ್ನೇ ಮಾಡಿರುತ್ತಾರೆ. ಸಾಮಾನ್ಯವಾಗಿ ಈ ಆಧಾರಗಳನ್ನು ಕೆಳಕಂಡ ವಿಭಾಗಗಳಾಗಿ ವಿಂಗಡಿಸುತ್ತಾರೆ.

ಮಧ್ಯಯುಗದ ಅಥವಾ ಪ್ರಾಚೀನವಾದ ಕಾವ್ಯಮಂಜರಿಗಳು (Anthologies or Florilegia) ಅಥವಾ ಉದ್ಧೃತಭಾಗಗಳ ಸಂಗ್ರಹಗಳು (collecting of extracts). ಹಾಲನ 'ಸತ್ತಸಈ', ಶಾರ್ಙ್ಗಧರನ ಪದ್ಧತಿ ಅಥವಾ ಜಲ್ಹಣನ ಸೂಕ್ತಿಮುಕ್ತಾವಳೀ—ಇವು

ಹೀಗೆ ನಮಗೆ ಲಭಿಸಿರುವ ಗ್ರಂಥಗಳಲ್ಲಿ ಕೆಲವು ಮಾತ್ರ. ಪ್ರಾಚೀನ ಕೃತಿಯೊಂದರಿಂದ ಇತರ ಕೃತಿಕಾರರು ಆಯ್ದ ಅಂಥ ಉದ್ಧೃತಭಾಗಗಳಿಂದ ನಮಗೆ ದೊರೆಯುವ ಸಾಕ್ಷ್ಯಗಳು ತುಂಬ ಉಪಯುಕ್ತವಾದುವು. ಅಂಥ ಕೃತಿಕಾರರು ಕೆಲವು ಸಲ ಗ್ರಂಥದ ಅತಿ ಹಳೆಯ ಲಭ್ಯಹಸ್ತ ಪ್ರತಿಗಳ ಕಾಲವನ್ನು ಅನೇಕ ಶತಮಾನಗಳಷ್ಟು ಹಿಂದಕ್ಕೆ ಒಯ್ಯುವುದುಂಟು.

ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಮಾಡಿದ ಅನುವಾದವು ಮೂಲಪಾಠವನ್ನು ಪುನರ್ರಚಿಸಲು ಸಹಾಯಮಾಡಬಹುದು. ಹಾಗೆಯೇ ನಾವು ಸಂಪಾದಿಸುತ್ತಿರುವ ಮೂಲ ಪಾಠವು ಅನುವಾದವನ್ನು ಪುನರ್ರಚಿಸಲು ಸಹಾಯಕವಾಗಬಹುದು. ಅದರಲ್ಲಿಯೂ ಹಸ್ತಪ್ರತಿಗಿಂತ ಹಿಂದಿನಕಾಲದಲ್ಲಿ ಈ ಅನುವಾದದ ರಚನೆಯಾಗಿದ್ದಲ್ಲಿ ಲಭ್ಯವಾಗಿರುವ ಪ್ರಾಚೀನ ಹಸ್ತ ಪ್ರತಿಯ ಬೆಲೆ ತುಂಬ ಹೆಚ್ಚುತ್ತದೆ. ಅಷ್ಟೇ ಅಲ್ಲ, ಅದರ ಸಾಕ್ಷಿಯು ಪಾಠಾಧ್ಯಯನ ಸಾಮಗ್ರಿಯ (apparatus criticus) ಒಂದು ಅನಿವಾರ್ಯ ಅಂಗವಾಗುತ್ತದೆ. ಸಂಸ್ಕೃತದಲ್ಲಿರುವ ಹೆಚ್ಚಿನ ಮಹಾಯಾನ ಗ್ರಂಥಗಳ ಮೂಲಪಾಠಗಳನ್ನು ಪುನರ್ರಚಿಸಲು ಇರುವ ದೊಡ್ಡ ಪ್ರಮಾಣವೆಂದರೆ ಪ್ರಾಚೀನಕಾಲದಲ್ಲಿಯೇ ಟಿಬೆಟನ್ ಮತ್ತು ಚೀನಾ ಭಾಷೆಗಳಲ್ಲಿ ರಚಿತವಾದ ಅವುಗಳ ಅನುವಾದಗಳು. ಮಹಾಭಾರತದ ಸಂಪಾದನೆಯ ಕೆಲಸಕ್ಕೆ ಜ್ಯಾವನೀಸ್ (ಸು. ಕ್ರಿ.ಶ. ೧೦೦೦) ಮತ್ತು ತೆಲುಗು (ಸು. ಕ್ರಿ.ಶ. ೧೦೨೫) ರೂಪಾಂತರಗಳು (Adaptations) ಅಥವಾ ಸಂಕ್ಷಿಪ್ತ ರೂಪ (Epitomes)ಗಳು ನೆರವಾಗಿವೆ. ಇವು ಕ್ರಮವಾಗಿ ಹನ್ನೊಂದನೆಯ ಶತಮಾನದ ಜ್ಯಾವನೀಸ್ ಮತ್ತು ತೆಲುಗು ಭಾಷೆಗಳಲ್ಲಿ ರಚಿಸಿದವಾಗಿದ್ದು ಸಂಸ್ಕೃತದ ಲಭ್ಯಪ್ರಾಚೀನ ಪ್ರತಿಯ ಕಾಲವನ್ನು ಕೆಲವು ಶತಮಾನಗಳಷ್ಟು ಹಿಂದಕ್ಕೆ ಒಯ್ದಿವೆ.

ಮೂಲಗ್ರಂಥಗಳಲ್ಲಿರುವ ಅನೇಕ ಭಾಗಗಳ ನೇರವಾದ ಉದ್ಧರಣಗಳು ಅನಂತರದ ಸಾಹಿತ್ಯ ಕೃತಿಗಳಲ್ಲಿ, ವಿಶೇಷವಾಗಿ ಶಾಸ್ತ್ರಗ್ರಂಥಗಳಲ್ಲಿ, ಅಲ್ಲಲ್ಲಿ ಕಂಡುಬರುತ್ತವೆ. ನಿದರ್ಶನಕ್ಕೆ, ವ್ಯಾಕರಣ ಮತ್ತು ಅಲಂಕಾರ ಗ್ರಂಥಗಳಲ್ಲಿ ಚರ್ಚಿಮಾಡಿದ ಅಥವಾ ಸೂತ್ರಿಸಿದ ಪ್ರಭೇದಗಳಿಗೆ ಉದಾಹರಣೆಗಳಾಗಿ ಇತರ ಸಾಹಿತ್ಯ ಕೃತಿಗಳಿಂದ ಉದ್ಧರಣಗಳನ್ನು ಕೊಟ್ಟಿರುವುದು ಕಂಡುಬರುತ್ತದೆ. ಇವುಗಳ ಜೊತೆಯಲ್ಲಿ ಕರ್ತೃವಿನ ಹೆಸರನ್ನು ಹೇಳಿರಬಹುದು ಅಥವಾ ಹೇಳದೆಯೂ ಇರಬಹುದು.

(ವಿಡಂಬನೆಗಳೂ ಸೇರಿ) ಅನುಕರಣೆಗಳಿಂದು ಸ್ಪಷ್ಟವಾಗಿ ತಿಳಿದಿರುವ ಭಾಗಗಳನ್ನು ವಿಡಂಬನೆಯ ಅಥವಾ ವಿಡಂಬನೆಗೆ ಗುರಿಯಾದ ಕೃತಿಯ ಪದಗಳನ್ನು ಪುನಸ್ಸಂಯೋಜಿಸಲು ಬಳಸಬಹುದು. ನಿದರ್ಶನವಾಗಿ ಜಿನಸೇನನೆಂಬುವನು ಬರೆದ ಪಾರ್ಶ್ವಾಭ್ಯುದಯವು ಕಾಳಿದಾಸನ ಪ್ರಸಿದ್ಧವಾದ ಮೇಘದೂತವನ್ನು ಬಳಸಿ ರಚಿತವಾಗಿದೆ. ಮೇಘದೂತವನ್ನು ಅದು ಎಷ್ಟರಮಟ್ಟಿಗೆ ಆಶ್ರಯಿಸಿದೆಯೆಂದರೆ ಪಾರ್ಶ್ವಾಭ್ಯುದಯದ ಪ್ರತಿಯೊಂದು ವೃತ್ತದಲ್ಲಿಯೂ ಮೇಘದೂತದ ಒಂದೋ ಎರಡೋ ಸಾಲುಗಳಿವೆ. ಸಂಕ್ಷಿಪ್ತ ಕೃತಿಗಳೂ ಮತ್ತು ರೂಪಾಂತರಗಳೂ (ತಾತ್ಪರ್ಯಗಳೂ ಸೇರಿ) ತಮಗೆ ಆಧಾರವಾಗಿದ್ದ ಮೂಲದಲ್ಲಿ ಏನಿತ್ತೆಂಬುದನ್ನು ಸ್ವಲ್ಪಮಟ್ಟಿಗೆ ಪುನಸ್ಥಾಪಿಸಲು ಸಹಾಯಮಾಡುತ್ತವೆ ಕಾಶ್ಮೀರದ ಕವಿಯಾದ ಕ್ಷೇಮೇಂದ್ರನ 'ಭಾರತ ಮಂಜರಿ' ಯು ಮಹಾಭಾರತದ ಕಾಶ್ಮೀರ ಪಾಠವಾಗಿದ್ದು ಆ ಕಾವ್ಯಪಾಠದ ಮೇಲೆ ಬೆಳಕು ಚೆಲ್ಲುತ್ತದೆ.

ಸಹಾಯಕ ಲಕ್ಷಣಗಳುಳ್ಳ ಮತ್ತೊಂದು ಆಕರವೆಂದರೆ ಪ್ರಾಚೀನವ್ಯಾಖ್ಯಾನಗಳು. ಯಾವ ಪಾಠಭಾಗವನ್ನು ಕುರಿತು ವ್ಯಾಖ್ಯಾನಮಾಡಲಾಗಿದೆಯೋ ಅದನ್ನು ಪೂರ್ಣವಾಗಿ

ಅಥವಾ ಲೆಮ್ಮಾತ (Lemmata)ದ ರೂಪದಲ್ಲಿ ಉದ್ಧರಿಸುವುದುಂಟು. ಅಂತಹ ಪ್ರಸ್ತಾಪ (citations) ಗಳು ಪಾಠದಲ್ಲಿ ಅವುಗಳಿಗೆ ಸಂಬಂಧಪಟ್ಟ ಭಾಗಗಳನ್ನು ಪುನರ್ರಚಿಸಲು ಸಹಾಯಕವಾಗುತ್ತವೆ.

ಒಂದು ವೇಳೆ ಮೂಲವು ಏಕಕರ್ತೃಕವಾಗಿರದೆ ಮಹಾಭಾರತ ಅಥವಾ ಅನೇಕ ಪುರಾಣಗಳಂತೆ ಸಂಪ್ರದಾಯಸಾಹಿತ್ಯದ ಒಂದು ನಿರ್ದಿಷ್ಟಶಾಲೆಯಿಂದ ರೂಪುಗೊಂಡಿದ್ದ ಪಕ್ಷದಲ್ಲಿ ಅದರಲ್ಲಿ ಬರುವ ಉಪಾಖ್ಯಾನಗಳ ಅಥವಾ ಭಾಗಗಳ ಸದೃಶಪಾಠಗಳನ್ನು ಬೇರೆ ಗ್ರಂಥಗಳಲ್ಲಿ ಕಾಣಬಹುದು. ಪದ್ಮಪುರಾಣದಲ್ಲಿ ಶಕುಂತಳೋಪಾಖ್ಯಾನದ (ಮಹಾಭಾರತ I, 62 ff.) ಸದೃಶಪಾಠ ಕಂಡುಬರುತ್ತದೆ.

ಗ್ರಂಥಸಂಪಾದನೆಯ ಕಡೆಯ ಹಂತವೆಂದರೆ ಗ್ರಂಥಕರ್ತನು ಬಳಸಿಕೊಂಡಿರುವ ಆಕರಗಳನ್ನು ಪ್ರತ್ಯೇಕಿಸುವುದು.

ಲ್ಯೂಡರ್ಸ್‌ರವರಂಥ ಪ್ರಖ್ಯಾತ ವಿದ್ವಾಂಸರು ಈ ಮಾರ್ಗದಲ್ಲಿ ಪ್ರಾಥಮಿಕ ಅಧ್ಯಯನವನ್ನು (Die Sage von Rsyas'rṇaga) ನಡೆಸಿದ್ದಾರೆ. ಆದರೂ ಪ್ರಸಿದ್ಧವಾದ ಮಹಾಕಾವ್ಯಗಳೇ ಇನ್ನೂ ಶಾಸ್ತ್ರೀಯವಾಗಿ ಸಂಪಾದಿತವಾಗಿಲ್ಲದಿರುವಾಗ ಭಾರತೀಯ ಸಂಪಾದನಾ ಕ್ಷೇತ್ರದಲ್ಲಿ ಈ ಕೆಲಸಕ್ಕೆ ಇನ್ನೂ ಕಾಲ ಸನ್ನಿಹಿತವಾಗಿಲ್ಲವೆಂದೇ ಹೇಳಬೇಕಾಗುತ್ತದೆ. ಆದ್ದರಿಂದ ಈ ಕೃತಿಯಲ್ಲಿ ಗ್ರಂಥಸಂಪಾದನೆಯ ನಾಲ್ಕನೆಯ ಹಂತವಾದ ಗ್ರಂಥಗಳ ವಿಮರ್ಶಾತ್ಮಕ ಮಾನನಿರ್ಣಯ (critical estimate) ವನ್ನು ಸೇರಿಸುವುದಿಲ್ಲ.

# ಅಧ್ಯಾಯ IV : ವಿಮರ್ಶಾತ್ಮಕ ಪಾಠಪರಿಷ್ಕರಣದ ಸಮಸ್ಯೆ

ಇದುವರೆಗೆ ಯಾರೂ ಸಂಪಾದಿಸದಿರದ, ಕಡೆಯಪಕ್ಷ ವಿಮರ್ಶಾತ್ಮಕವಾಗಿ ಸಂಪಾದಿಸಿರದ ಗ್ರಂಥವೊಂದರ ಸವಿಮರ್ಶ ಸಂಪಾದಿತಪಾಠವನ್ನು ಹೊರತರಲು ಸಂಪಾದಕನು ನಿಶ್ಚಯಿಸಿದ್ದಾನೆಂದು ಭಾವಿಸೋಣ. ಅವನು ಮಾಡಬೇಕಾದ ಮೊದಲ ಕೆಲಸವೆಂದರೆ ಇದಕ್ಕೆ ಬೇಕಾದ ಆಧಾರಗಳನ್ನು ಸಂಗ್ರಹಿಸುವುದು. ಬಹುಮಟ್ಟಿಗೆ ಪರಂಪರಾಗತ ಹಸ್ತಪ್ರತಿಗಳೇ ಇಂಥ ಆಧಾರಗಳಾಗಿರುತ್ತವೆ. ಸುಮಾರು ನೂರು ವರ್ಷಗಳಷ್ಟು ಕಾಲ ಅವ್ಯಾಹತವಾಗಿ ದುಡಿದ ವಿದ್ವಾಂಸರಿಂದಾಗಿ ಸಂಸ್ಕೃತ, ಪ್ರಾಕೃತ ಮತ್ತು ದೇಶೀಯ ಭಾಷಾ ಗ್ರಂಥಗಳನ್ನು ತಿಳಿಸುವ ಪುಸ್ತಕಪಟ್ಟಿಗಳ, ಕರಪತ್ರಗಳ ಮತ್ತು ವಿವರಣಾತ್ಮಕ ಪಟ್ಟಿಗಳ[1] ಹಸ್ತಪ್ರತಿಗಳು ಸಾರ್ವಜನಿಕ ಗ್ರಂಥಾಲಯಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಕಲವು ಸಲ ಮಿತ್ರ್ರರವರ ಸೂಚನ ಪತ್ರಗಳಲ್ಲಿಯಂತೆ ಖಾಸಗಿ ವ್ಯಕ್ತಿಗಳ ಗ್ರಂಥ ಭಂಡಾರದಲ್ಲಿರುವ ಹಸ್ತಪ್ರತಿಗಳ ಪ್ರಸ್ತಾಪವೂ ಬರುತ್ತದೆ. ಸಂಸ್ಕೃತ ಹಸ್ತಪ್ರತಿಗಳ ಬಗ್ಗೆ ತಿಳಿಯಲು ಆಫ್ರೆಚ್ (Aufrecht)ನ ಅಮೂಲ್ಯವಾದ ಪುಸ್ತಕಪಟ್ಟಿ ಇದೆ. ಅಸ್ತಿತ್ವದಲ್ಲಿದೆಯೆಂದು ತಿಳಿದು ಬರುವ ಎಲ್ಲ ಗ್ರಂಥಗಳು ಮತ್ತು ಹಸ್ತಪ್ರತಿಗಳ ಬಗ್ಗೆ ಅದರಲ್ಲಿ ಸಂಗ್ರಹವಾದ ವರದಿ ಇದೆ. ಖಾಸಗಿ ಪುಸ್ತಕಪಟ್ಟಿಗಳಲ್ಲಿ ಕರಪತ್ರಗಳಲ್ಲಿ ಇಲ್ಲವೆ ನಿಯತಕಾಲಿಕಗಳಲ್ಲಿ ಪ್ರಕಟವಾದ ಸೂಚನಪತ್ರಗಳು ಮತ್ತು ಹಸ್ತಪ್ರತಿ ವಿವರಗಳನ್ನು ಆಧರಿಸಿ ಆಫ್ರೆಚ್‌ನ ಪಟ್ಟಿ ರಚಿತವಾಗಿದೆ. ಹಸ್ತಪ್ರತಿಗಳನ್ನು ಸಂಗ್ರಹಿಸುವ ಮತ್ತು ಅವುಗಳನ್ನು ವಿವರಿಸುವ ಕಾರ್ಯ ಪ್ರಗತಿಗೊಳ್ಳುತ್ತಿದ್ದು ವರ್ಷ ವರ್ಷಕ್ಕೂ ಹೊಸ ವಿಚಾರ ಸಂಗ್ರಹವಾಗುತ್ತಿದ್ದರೂ ಸಂಪಾದಕನು ಮಾತ್ರ ಲಭ್ಯ ಆಕರಗಳಿಂದ ದೊರೆಯುವ ವಿಷಯದಿಂದಲೇ ತೃಪ್ತನಾಗಬೇಕಾಗಿದೆ. ಆದ್ದರಿಂದ ಅವನ ಮೊದಲ ಕೆಲಸವೆಂದರೆ ತನ್ನ ಉದ್ದೇಶಕ್ಕನುಗುಣವಾದ ಯಾವ ಯಾವ ಹಸ್ತಪ್ರತಿಗಳು ದೊರೆಯುತ್ತವೆಂಬುದನ್ನು ತಿಳಿಯುವುದು ಮತ್ತು ಪಾಠಾಂತರ ಸಂಕಲನ ಹಾಗೂ ದೀರ್ಘ ಅಭ್ಯಾಸಗಳ ಸಲುವಾಗಿ ಆ ಪ್ರತಿಗಳನ್ನು ದೊರಕಿಸಲು ಯತ್ನಿಸುವುದು. ಆ ಹಸ್ತಪ್ರತಿಗಳನ್ನು ಮತ್ತೆ ಮತ್ತೆ ಓದಿ ತಾನು ಬಳಸುತ್ತಿರುವ ಪ್ರತಿಗಳು ಗ್ರಂಥದ ನಿಜವಾದ ಪರಂಪರಾಗತ ಪ್ರತಿಗಳೆಂಬುವನ್ನು ಸಂಪಾದಕನು ದೃಢಮಾಡಿಕೊಳ್ಳಬೇಕು.

ಲಭ್ಯ ಹಸ್ತಪ್ರತಿಗಳ ಪಾಠಾಂತರ ಸಂಕಲನ ಮುಗಿಸಿ ಅವುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ ಮೇಲೆ, ಪಾಠರಚನೆಗೆ ಆಧಾರವಾಗಿ ಎಲ್ಲ ವಿಶ್ವಾಸಾರ್ಹ ಹಸ್ತಪ್ರತಿಗಳನ್ನೂ ಆಯ್ಕೆ ಮಾಡಬೇಕು. ಒಬ್ಬ ವ್ಯಕ್ತಿಯ ಚಾರಿತ್ರ್ಯವು ಅವನು ನೀಡುವ ಯಾವುದೇ ಸಾಕ್ಷ್ಯದ ಯಥಾರ್ಥತೆಯ ಮೇಲೆ ಬೆಳಕು ಚೆಲ್ಲುವಂತೆ ಹಸ್ತಪ್ರತಿಯ ಸಾಮಾನ್ಯಗುಣಲಕ್ಷಣಗಳು, ಅದು ಪಾಠಾಂತರದ ಬಗ್ಗೆ ನೀಡುವ ಸಾಕ್ಷಿಯ ಬೆಲೆಯನ್ನು ನಿರ್ಣಯಿಸಲು ಸಹಾಯ ಮಾಡುತ್ತವೆ. 'ಎ' ಮತ್ತು 'ಬಿ' ಎಂಬ ಎರಡು ಪ್ರತಿಗಳಿವೆ ಎನ್ನೋಣ. ಇವುಗಳ ನಡುವೆ ಭಿನ್ನತೆ ಇರುವಲ್ಲೆಲ್ಲಾ ನಿಜವಾದ ಅಥವಾ ಬಹುಮಟ್ಟಿಗೆ ಸಂಭಾವ್ಯವಾದ ಪಾಠಗಳ ಸಂಖ್ಯೆಯು 'ಎ'ಗಿಂತಲೂ 'ಬಿ'ಯಲ್ಲಿ ಹೆಚ್ಚಾಗಿರುತ್ತದೆಯೆಂಬುದು ಈ ಪ್ರತಿಗಳನ್ನು ಹೋಲಿಸಿ ನೋಡಿ ತಿಳಿದಿದೆಯೆನ್ನೋಣ.

---

1. ಅಥವಾ ಫ್ರೆಂಚ್ Catalogues raisonne's

'ಎ' ಮತ್ತು 'ಬಿ'ಗಳ ನಡುವಿನ ಪಾಠಾಂತರವನ್ನು ನಿರ್ಧರಿಸುವುದು ಕಷ್ಟವಾಗಿರುವಾಗ 'ಬಿ' ಹೆಚ್ಚು ನಂಬಲರ್ಹವಾದದ್ದೆಂಬ ಅಂಶವನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. 'ಬಿ'ಯು ಎಲ್ಲ ಪಾಠಾಂತರಗಳ ಶುದ್ಧತೆಗೂ ಇದು ಒಂದು ಅಳತೆಗೋಲೆಂದು ಭಾವಿಸಬಾರದು. ಏಕೆಂದರೆ ಮೇಲೆ ಹೇಳಿದ ಎರಡು ಹಸ್ತಪ್ರತಿಗಳಲ್ಲಿ 'ಎ' ಕೆಳಮಟ್ಟದ್ದೇ ಆದರೂ ಅದು ಕೆಲವೆಡೆ 'ಬಿ'ಯಲ್ಲಿ ಲ್ಲಿದ ಶುದ್ಧಪಾಠಗಳನ್ನು ಉಳಿಸಿಕೊಂಡಿರಬಹುದು. ಶಾಕುಂತಲದ ದ್ವಿತೀಯ ಮುದ್ರಣಕ್ಕೆ ಪಿಶೆಲ್ (Pischel) ಬಳಸಿದ 'ಬಿ' ಹಸ್ತಪ್ರತಿಯಲ್ಲಿ ಎಲ್ಲ ಬಗೆಯ ಪ್ರಮಾದಗಳೂ ಇಡಿಕಿರಿದಿವೆ. ಆಯುಃಷ್ಮಾನ್ ಎಂಬ ಸಾಮಾನ್ಯ ಪದಕ್ಕೆ ಅಮುಷ್ಮಾನ್ ಎಂಬ ಅರ್ಥಹೀನ ಪದವಿದೆ. ಇದು ಲಿಪಿಕಾರನ ಜ್ಞಾನ ಮತ್ತು ಬುದ್ಧಿಶಕ್ತಿಗೆ ಒಂದು ಸೂಚನೆ. ಮೂಲ ಪಾಠಾಂತರಗಳು ಅದರಲ್ಲಿ ಅಪರೂಪವಾದರೂ ಒಂದೊಂದೆಡೆ ಅವು ಉಳಿಯುವುದುಂಟು. ೧-೪-೪ ನಲ್ಲಿ 'ಅಹಿಣೀಡು' ಎಂಬುದಕ್ಕೆ ಅಹಿಯರೀಯುಡು ಎಂಬ ಪಾಠಾಂತರವಿದೆ. ದಕ್ಷಿಣ ಭಾರತದ ಸಂಕ್ಷಿಪ್ತ ಪರಿಷ್ಕರಣ (shorter recension)ಗಳ ಪಾಠಾಂತರ ಕೂಡ ಇದೇ ಆಗಿದೆ.

ಆಯ್ದ ಹಸ್ತಪ್ರತಿಗಳ ಪರಸ್ಪರ ಯೋಗ್ಯತೆಯನ್ನು ತೂಗುವಾಗ, ಆಗಲೇ ತಿಳಿಸಿದಂತೆ ಪ್ರತಿಯೊಂದು ಹಸ್ತಪ್ರತಿಗೂ ಅದರದೇ ಆದ ವೈಲಕ್ಷಣ್ಯಗಳಿವೆ ಎಂಬುದನ್ನು ನೆನಪಿಡಬೇಕು. ಹಸ್ತಪ್ರತಿಯನ್ನು ಗಾಢವಾಗಿ ಮತ್ತು ಸಂತತವಾಗಿ ಅಭ್ಯಾಸಮಾಡಿದರೆ ಮಾತ್ರ ಈ ವೈಲಕ್ಷಣ್ಯ ಗಳನ್ನು ತಿಳಿಯುವುದು ಸಾಧ್ಯ. ಇವುಗಳ ಅಭ್ಯಾಸ ಗ್ರಂಥಸಂಪಾದಕನ ಕೆಲಸದ ಒಂದು ಪ್ರಧಾನಭಾಗ. ಸಂಗ್ರಹವಾಗಿ ಹೇಳುವುದಾದರೆ ಇದೆಲ್ಲದರ ಸಾರಾಂಶ ಇಷ್ಟೆ. ಹಸ್ತಪ್ರತಿಯ ಬಗ್ಗೆ ತೀರ್ಪುಕೊಡುವ ಮುಂಚೆ ಅದರಲ್ಲಿರುವ ಎಲ್ಲ ಸಾಕ್ಷ್ಯಗಳಿಗೂ ಕಿವಿಗೊಡಬೇಕು; ಮತ್ತೆ ಮತ್ತೆ ಆಲಿಸಬೇಕು. ವುಲ್ಫ್ (Wolf) ಹೇಳುವಂತೆ ಸಂಪಾದಕನ ಕೆಲಸ ಗ್ರಂಥದ ಪರಿಷ್ಕರಣವೇ ಹೊರತು ಪರಿಚಯವಲ್ಲ.[2] ಒಂದೇ ಒಂದು ಹಸ್ತಪ್ರತಿ ದೊರಕಿರುವಾಗಲಂತೂ ಇದು ಇನ್ನಷ್ಟು ಅಗತ್ಯ. ಒಂದೊಂದೇ ಪ್ರತಿ ಇರುವಾಗ ಒಂದು ಪಾಠಾಂತರ ತಪ್ಪೆಂದು ನಿರ್ಣಯಿಸುವುದಕ್ಕಾಗಲೀ ಅಥವಾ ಅದನ್ನು ತಿದ್ದುವುದಕ್ಕಾಗಲೀ ಆ ಪ್ರತಿಯ ಗಾಢಪರಿಚಯ ಆವಶ್ಯಕ. ವಿಶೇಷವಾಗಿ ಶಾಸನಗಳ ವಿಷಯದಲ್ಲಿ ಇಂಥ ಪ್ರಸಂಗ ಒದಗುತ್ತದೆ. ಅಲ್ಲದೆ ಹಸ್ತಪ್ರತಿಗಳ ಸಂಖ್ಯೆ ದೊಡ್ಡದಾಗಿದ್ದಾಗ ಗುಣ ಯೋಗ್ಯತೆಗಳ ಆಧಾರದ ಮೇಲೆ ಅವುಗಳನ್ನು ಹೋಲಿಸಿ ನೋಡುವುದು ತುಂಬ ಕಷ್ಟವಾಗುತ್ತದೆ. ಇಂಥ ಪ್ರಸಂಗಗಳಲ್ಲಿ ಹಸ್ತಪ್ರತಿಗಳ ಪೀಳಿಗೆಯನ್ನು ಗುರುತಿಸುವುದು ಸಾಧ್ಯವೇ, ಎಷ್ಟು ದೂರ ಸಾಧ್ಯ ಎಂಬುದನ್ನು ತಿಳಿಯುವುದು ಅತ್ಯಗತ್ಯವಾಗುತ್ತದೆ.

ಹೀಗೆ ಪರಿಷ್ಕರಣದ (Recension) ಸಮಸ್ಯೆ ಯಾವಾಗಲೂ ಸರಳವೇನಲ್ಲ. ಅದು ಗ್ರಂಥದ ಲಭ್ಯಹಸ್ತಪ್ರತಿಗಳೇ ಒದಗಿಸುವ ಸಂಪ್ರದಾಯದ ಮುಖ್ಯಮಾದರಿಗಳನ್ನು ಅವಲಂಬಿಸುತ್ತದೆ ಗ್ರಂಥದ ಸಾಕ್ಷ್ಯವಾಗಿ ಕಾಪಾಡಿರುವ ಪ್ರತಿಯೊಂದು ಹಸ್ತಪ್ರತಿಯನ್ನೂ ಮತ್ತೆ ಮತ್ತೆ ಅಭ್ಯಾಸಮಾಡುವ ಅಗತ್ಯವನ್ನು ಕುರಿತು ಮೇಲೆ ಹೇಳಿದೆ. ಆ ನಿಯಮಗಳಿಗೆ ಹೊಂದುವಂತೆ ಇಲ್ಲಿ, ಅನುಕೂಲದ ಸಲುವಾಗಿ, ಮುಖ್ಯಮಾದರಿಗಳನ್ನು ಪ್ರತ್ಯೇಕವಾಗಿ ಗಮನಿಸಬಹುದು.

2. Hall op. cit., PP. 122.

ಗ್ರಂಥವು ಪೂರ್ಣವಾಗಿ ನಷ್ಟವಾಗಿಲ್ಲದಿದ್ದರೆ ಅದು ಅನುಕೂಲ ಪರಿಸ್ಥಿತಿಗಳಲ್ಲಿ ಪರಂಪರಾಗತವಾಗಿ ನಕಲುಗೊಂಡು ಬಂದು (೧) ಒಂದು ಹಸ್ತಪ್ರತಿಯಲ್ಲಿ ಉಳಿದಿರಬಹುದು ಅಥವಾ (೨) ಒಂದಕ್ಕಿಂತ ಹೆಚ್ಚು ಹಸ್ತಪ್ರತಿಗಳಲ್ಲಿ ದೊರೆಯಬಹುದು.

ಪರಂಪರಾಗತ ಪಾಠವಿರುವ ಒಂದೇ ಒಂದು ಹಸ್ತಪ್ರತಿ (ಏಕೈಕ ಹಸ್ತಪ್ರತಿ) ಸಿಕ್ಕಿದಾಗ ಸಂಪಾದಕನ ಕೆಲಸವೆಲ್ಲ ಈ ಏಕೈಕ ಸಾಕ್ಷ್ಯವನ್ನು ಸಮರ್ಪಕವಾಗಿ ನಿರೂಪಿಸುವುದು ಮತ್ತು ಅರ್ಥೈಸುವುದು. ಬಹು ಸಂಖ್ಯೆಯ ಶಾಸನಗಳು ಮತ್ತು ದಾನಶಾಸನಗಳ ವಿಷಯವೆಲ್ಲ ಹೀಗೆಯೇ. ಖೋಟಾನ್ (Khotan) ಮತ್ತು ಟರ್ಫಾನ್ (Turfan) ಗಳಲ್ಲಿ ದೊರೆತು ಲ್ಯೂಡರ್ಸ್‌ನಿಂದ ಸಂಪಾದಿತವಾದ ಬೌದ್ಧನಾಟಕಗಳ ತುಂಡುಗಳು, ವಿಶ್ವನಾಥನ ಕೋಶಕಲ್ಪತರು ಇಲ್ಲವೆ ನಾನ್ಯದೇವನ ಭಾರತ ಭಾಷ್ಯ–ಈ ಎಲ್ಲ ಏಕೈಕ ಲಭ್ಯಪ್ರತಿಗಳ ವಿಷಯಕ್ಕೂ ಮೇಲಿನ ಮಾತೇ ಅನ್ವಯಿಸುತ್ತದೆ.

ವಂಶಾವಳಿಯನ್ನು ರಚಿಸುವ ಕ್ರಮವು ಹಿಂದಿನ ಅಧ್ಯಾಯಗಳಲ್ಲಿ ನಾವು ಚರ್ಚಿಸಿದ ಸರಳ ವಿಚಾರಗಳನ್ನು ಅವಲಂಬಿಸಿದೆ. ಆದರೆ ಅದನ್ನು ಬಳಸಿದುದು ಈಚೆಗೆ. ರೈಲ್ವೆ ಸೌಕರ್ಯಗಳಿರದ ಬಹು ಹಿಂದಿನ ಕಾಲದಲ್ಲಿ ಈ ದೊಡ್ಡ ಉಪಖಂಡದ ದೂರ ದೂರದ ಪುಸ್ತಕ ಭಂಡಾರಗಳಲ್ಲಿಯೋ ಖಾಸಗಿ ಗ್ರಂಥ ಭಂಡಾರಗಳಲ್ಲಿಯೋ ಚೆದರಿ ಹೋಗಿರುವ ಕೃತಿಯೊಂದರ ಹಸ್ತಪ್ರತಿಗಳನ್ನೆಲ್ಲ ನೋಡುವುದಕ್ಕಾಗಲೀ ಅಥವಾ ಪಾಠಾಂತರ ಸಂಕಲನವನ್ನು ಸಮರ್ಪಕವಾಗಿ ಮಾಡುವುದಕ್ಕಾಗಲೀ ವಿದ್ವಾಂಸರಿಗೆ ಅವಕಾಶವಿರಲಿಲ್ಲ. ಜೊತೆಗೆ ಹಸ್ತಪ್ರತಿಗಳ ಫೋಟೋ ನಕಲುಗಳನ್ನು ತೆಗೆಯುವ ಯಾಂತ್ರಿಕ ವಿಧಾನಗಳೂ ಆಗ ತಿಳಿದಿರಲಿಲ್ಲ.

ಪಾಠಭೇದಗಳಿರುವ ಲಿಖಿತಪ್ರತಿಗಳು ಕೈಬರೆಹದ ಮೂಲಕ ಅನೇಕ ಶತಮಾನಗಳುದ್ದಕ್ಕೂ ಕೈಯಿಂದ ಕೈಗೆ ದಾಟಿಬಂದ ಪ್ರತಿಗಳಾಗಿರುತ್ತವೆ. ಆದರೂ ಇವು ಕೊನೆಯಲ್ಲಿ ಒಂದರಿಂದೊಂದು ಪೂರ್ಣವಾಗಿ ಸ್ವತಂತ್ರವಾಗಿರುವುದು ಸಾಧ್ಯವಿಲ್ಲ. ಅವು ಏಕಪರಂಪರೆಯ ಭಿನ್ನ ಸೀಳುಗಳಲ್ಲಿ ಇಳಿದುಬಂದಿದ್ದು ಈಗ ಬಹುಶಃ ಕಳೆದುಹೋಗಿರಬಹುದಾದ ಸಾಮಾನ್ಯ ಮೂಲವೊಂದರ ಸಂತತಿಗೆ ಸೇರಿರುತ್ತವೆ. ಇವುಗಳ ರಚನೆಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಕಂಡುಕೊಳ್ಳುವುದು ಸಾಧ್ಯವಾದಲ್ಲಿ ಅವುಗಳ ಜನನಗತಿಯನ್ನು ಸೂಚಿಸುವ ಪೀಳಿಗೆಯೊಂದನ್ನು ನಾವು ರಚಿಸಬಹುದು. ಈ ಗುರಿಯನ್ನು ಹೆಚ್ಚು ಹೆಚ್ಚು ಸಮೀಪಿಸಿದಂತೆ ನಿಜಪಾಠದಿಂದ ಹುಸಿಪಾಠವನ್ನು ಪ್ರತ್ಯೇಕಿಸುವ ಸಾಮರ್ಥ್ಯವೂ ನಮ್ಮಲ್ಲಿ ಹೆಚ್ಚುತ್ತದೆ.

ಆಕಸ್ಮಿಕಗಳಲ್ಲದ ಸಮಾನಪಾಠಗಳು ಸಮಾನಮೂಲವನ್ನು ಸೂಚಿಸುತ್ತವೆ. ಇದು ಹಸ್ತಪ್ರತಿಗಳ ಮೂಲವನ್ನು ನಿರ್ಣಯಿಸಲು ಆಧಾರವಾಗಿಟ್ಟುಕೊಳ್ಳುವ ಒಂದು ಸಾಮಾನ್ಯ ನಿಯಮ. ಕೃತಿಕಾರನ ಸ್ವಹಸ್ತಪ್ರತಿಯೇ ಈ ಸಾಮಾನ್ಯಪಾಠದ ಮೂಲವಾಗಿರಬಹುದು. ಅಲ್ಲವಾದಲ್ಲಿ ಪ್ರತಿಪರಂಪರೆಯಲ್ಲಿನ ಯಾವುದೋ ಹಸ್ತಪ್ರತಿ ಅದರ ಆಕರವಾಗಿರಬೇಕು. ಒಂದೇ ಗ್ರಂಥದ ಹದಿನೈದು ಹಸ್ತಪ್ರತಿಗಳಿವೆಯೆಂದು ಭಾವಿಸಿ. ಇವುಗಳಲ್ಲಿ ಒಂದು ನಿರ್ದಿಷ್ಟ ಭಾಗದಲ್ಲಿ ಎಂಟು ಪ್ರತಿಗಳ ಪಾಠ ಒಂದು ರೀತಿಯಿದ್ದು ಉಳಿದ ಏಳು ಪ್ರತಿಗಳ ಪಾಠ ಮತ್ತೊಂದು ರೀತಿಯಿದೆ. ಬೇರೆ ಏನೂ ಬೆರೆತಿರದಿದ್ದಲ್ಲಿ, ಈ ಪಾಠಭೇದವು ಆ ಎಂಟು ಹಸ್ತಪ್ರತಿಗಳ ಸಾಮಾನ್ಯಮೂಲದಲ್ಲಿ ಒಂದು ಪಾಠವೂ ಉಳಿದ ಏಳು ಹಸ್ತಪ್ರತಿಗಳ ಸಾಮಾನ್ಯ ಮೂಲದಲ್ಲಿ ಮತ್ತೊಂದು ಪಾಠವೂ ಇದ್ದಿತೆಂಬುದನ್ನು ತೋರಿಸುತ್ತದೆ.

ಹಸ್ತಪ್ರತಿಗಳ ವಂಶಸಂಬಂಧವನ್ನು ನಿರ್ಧರಿಸಲು ಇರುವ ಸಾಮಾನ್ಯವಾದ ಪರೀಕ್ಷೆಗಳೆಂದರೆ:

೧. ಪದಗಳ ಹಾಗೂ ಪಾಠಭಾಗಗಳ ಲೋಪ ಮತ್ತು ಪಾಠಭಾಗಗಳ ಸ್ಥಾನಪಲ್ಲಟ. ಲೋಪಗಳು ಪರಸ್ಪರ ಸಂಬಂಧವನ್ನು ತಿಳಿಸುವ ನಿಶ್ಚಿತವಾದ ಪರೀಕ್ಷೆಗಳು ಎಂದು ಹಾಲ್ ಹೇಳುತ್ತಾರೆ. ಏಕೆಂದರೆ ಅವು ಹೆಚ್ಚಿನ ಸಂಖ್ಯೆಯಲ್ಲಿದ್ದಲ್ಲಿ ಆಕಸ್ಮಿಕಗಳಿಂದಾದವು ಎಂದು ಹೇಳುವಂತಿಲ್ಲ ಮತ್ತು ಇತರ ಹಸ್ತಪ್ರತಿಗಳಿಗೆ ಹೋಲಿಸಿ ತಿದ್ದುವುದರಿಂದ ಈ ಲೋಪಗಳು ಗ್ರಂಥದಲ್ಲಿ ಸೇರಿದುವು ಎಂದೂ ಹೇಳುವಂತಿಲ್ಲ. ಸಾಮಾನ್ಯವಾಗಿ ಪಾಠಸಾದೃಶ್ಯದಿಂದ ಅನುಮಿತವಾಗುವ ಸಂಬಂಧಕ್ಕಿಂತ ಹೆಚ್ಚು ನಿಕಟವಾದ ಸಂಬಂಧವನ್ನು ಈ ಲೋಪಗಳು ಸೂಚಿಸುತ್ತವೆ. ಮತ್ತು ಹಲವು ಸಲ ಒಂದು ಹಸ್ತಪ್ರತಿ ಮತ್ತೊಂದು ಹಸ್ತಪ್ರತಿಯ ಸದ್ಯಪ್ರತಿ ಎಂಬುದನ್ನು ಇವು ತೋರಿಸಿಕೊಡುತ್ತವೆ.[3]

೨ ಹಲವು ವಿಶಿಷ್ಟಪಾಠಗಳಲ್ಲಿ ಅಥವಾ ಹಸ್ತಪ್ರತಿಯ ಇತರ ವೈಶಿಷ್ಟ್ಯಗಳಲ್ಲಿ ಒಮ್ಮತವಿರುವಿಕೆ. ಎರಡು ಹಸ್ತಪ್ರತಿಗಳಿಗಿರುವ ಸಂಬಂಧ ಯಾವಾಗಲೂ ಸರಳವಾದುದೇನಲ್ಲ ಎಂಬುದನ್ನು ನೆನಪಿನಲ್ಲಿಡಬೇಕು. ಪಾಠರಚನೆಯ ಸಾಧನವಾಗಿ ಅಂಗೀಕರಿಸಿದ ಪ್ರತಿಯೊಂದು ಹಸ್ತಪ್ರತಿಯೂ ಒಂದೇ ಪ್ರಾಚೀನ ಪ್ರತಿಯಿಂದ ಬಂದಿರಬೇಕಾದುದಿಲ್ಲ. ಕಡೆಯಲ್ಲಿ ಏಕಮೂಲಕ್ಕೆ ಸೇರಿರುವ ಹಸ್ತಪ್ರತಿಗಳಲ್ಲಿ ಯಾವಾಗಲೂ ಪೂರ್ಣಪಾಠಸಾದೃಶ್ಯ ಇರುವುದೆಂದು ಹೇಳುವಂತಿಲ್ಲ.

ಸವಿಮರ್ಶಪಾಠ ಪರಿಷ್ಕರಣಕ್ಕೆ ಆಧಾರವಾಗಿ ಸಂಪಾದಕನು ಸಿದ್ಧಮಾಡಿರುವ ಪಾಠಾಂತರ ಸಂಕಲನವು ಅಂಥ ಸಾದೃಶ್ಯಗಳನ್ನು ತೋರಿಸಿಕೊಡುತ್ತದೆ. ಅದರ ನೆರವಿನಿಂದ ಸಂಪಾದಕನು ಹಸ್ತಪ್ರತಿಗಳನ್ನು ವರ್ಗೀಕರಿಸಲು ಸಮರ್ಥನಾಗುತ್ತಾನೆ.

ಕೆಲವು ಸಲ ಎರಡು ಹಸ್ತಪ್ರತಿಗಳಲ್ಲಿ ವಿಶಿಷ್ಟವಾದ ಹೋಲಿಕೆಗಳು ಕಂಡುಬರುತ್ತವೆ. ಇದು ಆ ಹಸ್ತಪ್ರತಿಗಳಲ್ಲಿ ಒಂದು ಮತ್ತೊಂದರಿಂದ ಜನ್ಯವಾದದ್ದೆಂಬುದನ್ನು ಸೂಚಿಸದಿದ್ದರೂ ಅವೆರಡಕ್ಕೂ ಯಾವುದೋ ಸಂಬಂಧವಿದೆಯೆಂಬುದನ್ನು ದೃಢಪಡಿಸಬಹುದು. ಈ ಸಂಬಂಧವು ಆಕರಸಮುದಾಯದಿಂದ (Community of sources) ಜನ್ಯವಾದದ್ದೆಂಬುದನ್ನು ನಾವು ಊಹಿಸುತ್ತೇವೆ. ಹೀಗೆ ನಾವು ಹಸ್ತಪ್ರತಿ ಕುಟುಂಬ (Family of Manuscripts)ವೊಂದಿದೆಯೆಂಬುದನ್ನು ತಿಳಿಯುತ್ತೇವೆ.

ಒಂದು ಗ್ರಂಥದ ಎಂಟು ಹಸ್ತಪ್ರತಿಗಳಿವೆಯೆಂದು ಭಾವಿಸೋಣ. ಇವುಗಳಿಗೆ A B C D E F G H ಎಂದು ಹೆಸರು ಕೊಟ್ಟಿದ್ದೇವೆ. ಇವುಗಳಲ್ಲಿ A ಪ್ರತಿಯ ವೈಲಕ್ಷಣ್ಯಗಳು

---

3. ರಕ್ಷಿತಶಬ್ದರೂಪಗಳು (conservations) ನಾವು ಅಭ್ಯಸಿಸಿದ ಭಾಷೆಗಳ ಮೂಲಕುಟುಂಬವನ್ನು ಸೂಚಿಸುವುದಾದರೂ ಸಾಮಾನ್ಯಪರಿವರ್ತನೆಗಳು (comman innovations) ಅವುಗಳ ನಡುವಿನ ಸಂಬಂಧವನ್ನು ತಿಳಿಸುವ ನಿಜವಾದ ಸೂಚಕಸಾಧನಗಳೆಂಬುದಾಗಿ ಭಾಷಾಶಾಸ್ತ್ರದಲ್ಲಿ ಒಂದು ನಿಯಮವಿದೆ. ಇದರೊಡನೆ ಮೇಲಿನ ನಿಯಮವು ಅನುಕೂಲಕರವಾಗಿ ಹೊಂದುತ್ತದೆ. ಹಸ್ತಪ್ರತಿಗಳ ಪರಸ್ಪರ ಸಂಬಂಧವನ್ನು ಶೋಧಿಸುವ ನಮ್ಮ ಉದ್ದೇಶಕ್ಕನುಗುಣವಾಗಿ ಪಾಠಸಾಂಗತ್ಯವನ್ನು ಒಟ್ಟಿನಲ್ಲಿ ರಕ್ಷಿತ ಶಬ್ದರೂಪಗಳಿಗೂ ಮತ್ತು ಮೇಲೆ ಹೇಳಿದ ಲೋಪಗಳನ್ನು ಪರಿವರ್ತನೆಗಳಿಗೂ ಹೋಲಿಸಬಹುದು.

ಅದಕ್ಕೆ ಮಾತ್ರವೇ ವಿಶಿಷ್ಟವಾಗಿದ್ದು, ಉಳಿದ ಏಳು ಪ್ರತಿಗಳಲ್ಲಿ ಒಂದರೊಡನೆಯೂ A ಪ್ರತಿಗೆ ಹೆಚ್ಚಿನ ಹೋಲಿಕೆ ಇಲ್ಲ. B ಮತ್ತು C ಪ್ರತಿಗಳೂ ಹಾಗೂ D E F G H ಪ್ರತಿಗಳೂ ತಮ್ಮ ತಮ್ಮಲ್ಲಿ ಹೆಚ್ಚು ಹೋಲುತ್ತಿವೆ. ಈಗ B Cಗಳು ಒಂದು ಕುಟುಂಬವೆಂದೂ, ನಾವು 'X' ಎಂದು ಕರೆಯಬಹುದಾದ ಕಲ್ಪಿತ (hypothetical) ಪೂರ್ವಪ್ರತಿಯೊಂದು ಇವುಗಳಿಗೆ ಸಾಮಾನ್ಯ ಮೂಲವಾಗಿರಬೇಕೆಂದೂ ಹೇಳಬಹುದು ಹಾಗೆಯೇ D E F G H ಪ್ರತಿಗಳು ಇನ್ನೊಂದು ಕುಟುಂಬದವಾಗಿದ್ದು ನಾವು 'Y' ಎಂದು ಹೆಸರಿಸಬಹುದಾದ ಮತ್ತೊಂದು ಕಲ್ಪಿತಪ್ರಾಚೀನಪ್ರತಿ ಇವುಗಳಿಗೆ ಏಕಮೂಲವೆಂದೂ ಹೇಳಬಹುದು. ಹಸ್ತಪ್ರತಿಗಳು ಸಂತತವಾಗಿ ನಕಲುಗೊಳ್ಳುವಾಗ ತಪ್ಪುಗಳು ಹೇಗೆ ಒಳನುಸುಳುತ್ತವೆಂಬುದನ್ನು ನಾವು ಆಗಲೇ ನೋಡಿದ್ದೇವೆ. ಆದ್ದರಿಂದ 'X' ನ ಪಾಠಾಂತರಗಳು B ಅಥವಾ C ಯ ಪಾಠಾಂತರಗಳಿಗಿಂತ ಹೆಚ್ಚು ಶುದ್ಧವಾಗಿರುತ್ತವೆ. 'X' ಎನ್ನುವುದು B C ಗಳ ಕಲ್ಪಿತ ಮೂಲವಾಗಿರುವುದರಿಂದ ಅದರ ಪಾಠಾಂತರಗಳು C ಪ್ರತಿಯ ಯಾವುದೇ ಪಾಠಕ್ಕಿಂತ ಹೆಚ್ಚು ಪ್ರಾಚೀನವೂ ಪ್ರಮಾಣಯುತವೂ ಆಗಿರುತ್ತವೆ. B ಮತ್ತು C ಯ ಪಾಠಾಂತರಗಳನ್ನು ಹೋಲಿಸಿ 'X' ಪ್ರತಿಯ ಪಾಠಾಂತರಗಳನ್ನು ಪಡೆಯಬೇಕಾಗುತ್ತದೆ. 'X' ಪ್ರತಿ ಲಭ್ಯವಾಗಿದ್ದಲ್ಲಿ, ಒಂದೊಂದನ್ನೇ ಪ್ರತ್ಯೇಕವಾಗಿ ಗಣಿಸಿದಾಗ, B ಅಥವಾ C ಪ್ರತಿಗಿಂತ ಅದು ಹೆಚ್ಚು ಪ್ರಾಚೀನ ಮತ್ತು ಆಧಾರಯುತವೆಂಬುದನ್ನು ಪರೀಕ್ಷಿಸಿ ನೋಡುವುದಕ್ಕಾಗಲೀ B ಮತ್ತು C ಗಳ ಪಾಠದೊಳಗೆ ನುಸುಳಿರುವ ಕೆಲವಾದರೂ ಲಿಪಿಕಾರಸ್ಖಾಲಿತ್ಯಗಳನ್ನು ವಿವರಿಸುವುದಕ್ಕಾಗಲೀ ಸಾಧ್ಯವಾಗುತ್ತಿತ್ತು. ಹಾಗೆಯೇ D E F G H ಪ್ರತಿಗಳಲ್ಲಿ ಒಂದೊಂದನ್ನೇ ತೆಗೆದುಕೊಂಡರೆ ಅವುಗಳ ಪಾಠಾಂತರಗಳಿಗಿಂತ 'Y' ಪ್ರತಿಯ ಪಾಠಾಂತರಗಳೇ ಹೆಚ್ಚು ಪ್ರಾಚೀನವೂ ಆಧಾರಯುತವೂ ಆಗಿರುತ್ತವೆ. ಕುಟುಂಬಕ್ಕೆಲ್ಲ ಸಾಮಾನ್ಯವಾದ ಲಕ್ಷಣಗಳನ್ನು ಪಡೆದಿರುವುದರ ಜೊತೆಗೆ G ಮತ್ತು H ಪ್ರತಿಗಳ ವೈಲಕ್ಷಣ್ಯಗಳಲ್ಲಿ ತೋರುವ ಸಂಬಂಧವು ಅವುಗಳಿಗೆ D E F ಗಳ ವೈಲಕ್ಷಣ್ಯಗಳೊಡನಿರುವ ಸಂಬಂಧಕ್ಕಿಂತ ಹೆಚ್ಚು ಸಮೀಪವಾದುದಾದರೆ G ಮತ್ತು H ಗಳು 'W' ಎಂಬ ಬೇರೊಂದು ಕಲ್ಪಿತ ಏಕಮೂಲದಿಂದ ಬಂದಿರಬೇಕೆಂದು ಅರ್ಥವಾಗುತ್ತದೆ. ಈ 'W' ಪ್ರತಿ D E F 'W' ಕುಟುಂಬಕ್ಕೆ ಸೇರಿದ್ದಾಗಿರುತ್ತದೆ. G ಮತ್ತು H ಗಳನ್ನು ಹೋಲಿಸಿ ಪುನರ್ರಚಿಸಿದ ಪಾಠಾಂತರಗಳು G ಮತ್ತು H ಪ್ರತ್ಯೇಕ ಪ್ರತಿಗಳ ಪಾಠಾಂತರಗಳಿಗಿಂತ ಹೆಚ್ಚು ಪ್ರಾಚೀನವೂ ಬೆಲೆಯುಳ್ಳದ್ದೂ ಆಗಿರುತ್ತವೆ. ಇಲ್ಲಿಗೇ ನಾವು ನಿಲ್ಲಬೇಕಾಗಿಲ್ಲ. D E F ಮತ್ತು 'W' ಗಳ ಪಾಠಾಂತರಗಳನ್ನು ಹೋಲಿಸಿ, 'Y' ಪಾಠವನ್ನು ಪಡೆಯಬಹುದು. ಮತ್ತು ಅದರ ಹಾಗೂ 'X' ಪ್ರತಿಯ ಪಾಠಾಂತರಗಳನ್ನು ಪರಸ್ಪರವಾಗಿಯೂ, A ಪ್ರತಿಯ ಪಾಠಾಂತರಗಳೊಡನೆಯೂ ಹೋಲಿಸಿ ಆ ಮೂಲಕ ಇನ್ನೂ ಹೆಚ್ಚು ಪ್ರಾಚೀನವಾದ 'Z' ಪ್ರತಿಯ ಪಾಠವನ್ನು ಕಲ್ಪಿಸಬಹುದು. ಈ Z ಎಂಬುದು ಎಂಟು ಹಸ್ತಪ್ರತಿಗಳಿಗೂ ಸಾಮಾನ್ಯವಾದ ಕಲ್ಪಿತ 'Z' ಮೂಲವಾಗಿರುತ್ತದೆ. ಈ Z ಪ್ರತಿಯಿಂದ A, 'X' ಮತ್ತು 'Y' ಗಳಂಥ ಹಸ್ತಪ್ರತಿ ಪರಂಪರೆಯ ಅನೇಕ ಸೀಳುಗಳು ಅಥವಾ ಸಾಲುಗಳು ಹೊರಡುತ್ತವೆ. ಲಭ್ಯಹಸ್ತಪ್ರತಿಗಳಿಂದ ಪಡೆದ A, 'X' ಮತ್ತು 'Y' ಪಾಠಾಂತರಗಳನ್ನು ಹೋಲಿಸಿ ಪುನರ್ರಚಿಸಬಲ್ಲ ಪ್ರಾಚೀನತಮ ಸಾಮಾನ್ಯಮೂಲವೆಂದರೆ 'Z' ಪ್ರತಿ. ಆದ್ದರಿಂದ ಅದನ್ನು ಎಲ್ಲ ಲಭ್ಯಹಸ್ತಪ್ರತಿಗಳ ಪ್ರಧಾನಮಾತೃಕೆ (Archtype) ಯೆಂದು ಕರೆಯಬಹುದು. ಹೀಗೆ ನಮಗೆ ಹಸ್ತಪ್ರತಿಗಳ

ಸೀಳಿಗೆಯೊಂದು (Stemma Codicum) ಸಿಗುತ್ತದೆ. ಅದನ್ನು ಕೆಳಕಂಡಂತೆ ಚಿತ್ರಿಸಬಹುದು.




ಮೇಲಿನ ಸೀಳಿಗೆಯಲ್ಲಿ ಕಲ್ಪಿತ ಪ್ರಾಚೀನ ಪ್ರತಿಗಳಾದ 'X' ಮತ್ತು 'Y' ಗಳನ್ನು ಉಪಪ್ರಧಾನ ಮಾತೃಕೆಗಳೆಂದು ಅಥವಾ ಪ್ರಧಾನಮಾತೃಕೆಯ ಅಲಭ್ಯಸದ್ಯಪ್ರತಿಗಳೆಂದು ಕರೆಯುಬಹುದು. ಲಭ್ಯಹಸ್ತಪ್ರತಿಗಳೇ ಸಾಕ್ಷ್ಯಸಹಿತವಾಗಿ ತೋರಿಸಿದಂತೆ ಇವು ಪ್ರತಿಪರಂಪರೆಯನ್ನು ಭಿನ್ನಸೀಳುಗಳಾಗಿ ಒಡೆಯುತ್ತವೆ.

ಲಭ್ಯಹಸ್ತಪ್ರತಿಗಳಲ್ಲಿಯೇ ಯಾವುದಾದರೂ ಒಂದು ಪ್ರತಿ ಉಳಿದವುಗಳೆಲ್ಲಕ್ಕೂ ಸಾಮಾನ್ಯವಾದ ಮೂಲವೆಂಬುದನ್ನು ತೋರಿಸಲು ಸಾಧ್ಯವಿರುವಂಥ ಹಸ್ತಪ್ರತಿಕುಟುಂಬ ಇರುವುದುಂಟು. ಆಗ ಪ್ರತಿಗಳ ಪಾಠಶೋಧನೆಯಲ್ಲಿ ಈ ಹಸ್ತಪ್ರತಿಸೀಳಿಗೆಯನ್ನು ಬಹಳ ಸುಲಭವಾಗಿ ಬಳಸಬಹುದು. A B C D E F G H I J K L ಎಂದು ಹನ್ನೆರಡು ಹಸ್ತಪ್ರತಿಗಳಿದ್ದು B ಯಿಂದ L ವರೆಗಿನ ಹನ್ನೊಂದು ಹಸ್ತಪ್ರತಿಗಳು A ಯಿಂದ ಜನ್ಯವಾದುವೆಂದು ತೋರಿಸುವುದು ಸಾಧ್ಯವಾದಲ್ಲಿ ಪಾಠಪರಿಷ್ಕರಣದ ಸಮಸ್ಯೆ ಪರಿಹಾರದಂತೆಯೇ. ಏಕೆಂದರೆ ಈ ಹಸ್ತಪ್ರತಿಗಳಲ್ಲಿ ಹನ್ನೊಂದು ಪ್ರತಿಗಳಿಗೆ ಮೂಲಪಾಠವನ್ನು ನಿರ್ಣಯಿಸುವ ಕಾರ್ಯದಲ್ಲಿ ಸ್ವತಂತ್ರ ಬೆಲೆಯೇನೂ ಇಲ್ಲ. ಅವುಗಳಿಗೂ ಮತ್ತು ಅವುಗಳ ಮೂಲಪ್ರತಿಯಾದ A ಗೂ ನಡುವಿನ ಭಿನ್ನತೆಗಳೆಲ್ಲಾ ಲಿಪಿಕಾರನ ವೈಲಕ್ಷಣ್ಯಗಳಿಂದಾಗಿಯೋ, ತಪ್ಪುಗಳಿಂದಾಗಿಯೋ ಅಥವಾ ಊಹೆಗಳಿಂದಾಗಿಯೋ ಕಾಣಿಸಿಕೊಂಡಿರುತ್ತವೆ. ಹೀಗಾಗಿ ಈ ಪ್ರತಿಗಳು ಲಿಖಿತವಾದ ಮೇಲೆ ಮೂಲಪ್ರತಿಯಲ್ಲಿ ನಷ್ಟವಾಗಿರಬಹುದಾದ ಭಾಗಗಳನ್ನು ತಿದ್ದಲು ಈ ಪ್ರತಿಗಳನ್ನು ಬಳಸಬಹುದೇ ಹೊರತು ಉಳಿದ ಸಂದರ್ಭಗಳಲ್ಲಿ ಇವುಗಳನ್ನು ಅಲಕ್ಷಿಸಿಬಿಡಬಹುದು. ಗ್ರಂಥಸಂಪಾದಕನ ಬಹು ಮುಖ್ಯವಾದ ನಿಯಮವೆಂದರೆ ಗ್ರಂಥದ ಸ್ವತಂತ್ರ ಪ್ರಮಾಣಗಳನ್ನು ಉಪಯೋಗಿಸುವುದು. ಹೀಗೆ ಸ್ವತಂತ್ರ ಪ್ರಮಾಣಗಳಾಗಿ ಜನ್ಯಪ್ರತಿಗಳಿಗೆ ಏನೂ ಬೆಲೆಯೇ ಇಲ್ಲ. ಆದ್ದರಿಂದ, ವಿಶೇಷ ಸಂದರ್ಭಗಳಲ್ಲಿ ವಿನಾ, ಮೂಲಹಸ್ತಪ್ರತಿಯ ಜನ್ಯಪ್ರತಿಗಳನ್ನು ವರ್ಜಿಸಬೇಕಾಗುತ್ತದೆ.

ಆದರೆ ಅಂಥ ಜನ್ಯಪ್ರತಿಯೊಂದರಲ್ಲಿ ನಿಜವಾದುವೆಂಬಂತೆ ತೋರುವ ಸಾಕ್ಷ್ಯಗಳನ್ನು ಪರೀಕ್ಷಿಸುವಾಗ ತುಂಬ ಎಚ್ಚರವಾಗಿರುವುದು ಅಗತ್ಯ. ಆ ಪ್ರತಿಗಳನ್ನು ನಿರಾಕರಿಸುವ ಮುಂಚೆ ಅವುಗಳನ್ನು ಸ್ಪಷ್ಟವಾಗಿ ತೋರಿಸಬೇಕು. ಹಸ್ತಪ್ರತಿಯೊಂದರ ಪ್ರತಿಕಾರನು ಸೂಕ್ತ ಊಹೆ

ಯಿಂದಲೋ ಅಥವಾ ಬೇರೆ ಮಾತೃಕೆಯೊಂದಕ್ಕೆ ಹೋಲಿಸಿನೋಡಿಯೋ ಮೂಲಪ್ರತಿಯ ಅಪಪಾಠವನ್ನು ತನ್ನ ಹಸ್ತಪ್ರತಿಯಲ್ಲಿ ತಿದ್ದಿಬಿಟ್ಟಿರುತ್ತಾನೆ. ಇವುಗಳಲ್ಲಿ ಕಡೆಯದು ಘಟಿಸಿದ್ದು, ಅದು ಸಿದ್ಧವಾದಲ್ಲಿ ಅವನ ಪ್ರತಿಯು ಅಂಥ ಪ್ರಸಂಗಗಳಲ್ಲಿ ಸ್ವತಂತ್ರ ಸಾಕ್ಷ್ಯವಾಗುವ ಹಕ್ಕನ್ನು ಉಳಿಸಿಕೊಳ್ಳುತ್ತದೆ. ಆದ್ದರಿಂದ ಅದನ್ನು ಪೂರ್ಣವಾಗಿ ವರ್ಜಿಸಿಬಿಡುವುದು ಸಾಧ್ಯವಿಲ್ಲ.

'W' 'X' 'Y' ಉದಾಹರಣೆಗಳಲ್ಲಿ ಕಾಣುವಂತೆ ಮೂಲಪ್ರತಿ ಅಲಭ್ಯವಾಗಿದ್ದಾಗ ಅದರ ಪಾಠಾಂತರಗಳನ್ನು ಜನ್ಯಪ್ರತಿಗಳ ಸಾಕ್ಷ್ಯಗಳ ಮೇಲೆ ಪುನರ್ರಚಿಸಬೇಕಾಗುತ್ತದೆ. ನಾವು ನಮ್ಮ ಕೆಲಸವನ್ನು ಸರಿಯಾಗಿ ಮಾಡಿದಲ್ಲಿ X ಮತ್ತು Y ಪ್ರತಿಗಳಿಗೆ ನಾವು ರಚಿಸುವ ಪಾಠವು ಕ್ರಮವಾಗಿ B ಮತ್ತು C, DEF ಮತ್ತು GHಗಳ ಪಾಠಕ್ಕಿಂತ ಹೆಚ್ಚು ಶುದ್ಧವಾಗಿದ್ದು 'Z' ಪ್ರತಿಯ ಪಾಠವು ಯಾವುದೇ ಲಭ್ಯಹಸ್ತಪ್ರತಿಗಳಿಗಿಂತ ಹೆಚ್ಚು ದೋಷದೂರವಾಗಿರುತ್ತದೆ. ಮೂಲಪ್ರತಿಯ ಪಾಠಪುನರ್ರಚನೆಯ ಕೆಲಸದಲ್ಲಿ ಸ್ವತಂತ್ರಸಾಕ್ಷ್ಯದ ಬೆಲೆಯಿರದ ಹಸ್ತಪ್ರತಿಗಳನ್ನು ವರ್ಜಿಸುವಾಗ ಹಿಂದಿನ ಪ್ರಸಂಗದಲ್ಲಿ ಪರಿಗಣಿಸಿದ ರಕ್ಷಣೆ ನಿಯಮಗಳಿಗನುಸಾರವಾಗಿ ವರ್ಜಿಸಬೇಕಾಗುತ್ತದೆ.

ಮೇಲೆ ಕೊಟ್ಟಿರುವ ಮಾದರಿ ಪೀಳಿಗೆಯ 'X' ಮತ್ತು 'Y' ಪ್ರತಿಗಳ ಪುನರ್ರಚಿತ ಪಾಠಾಂತರಗಳಲ್ಲಿ ಒಮ್ಮತವಿರಬಹುದು ಅಥವಾ ಇಲ್ಲದಿರಲೂಬಹುದು. ಒಮ್ಮತವಿದ್ದಲ್ಲಿ ಆ ಪಾಠ ಭಾಗಗಳಲ್ಲಿ 'Z' ಪ್ರತಿಗೆ ಸೇರಿದ್ದು, ಎಂದರೆ ಮೂಲಪಾಠ ಎಂದರ್ಥ. ಅವುಗಳಲ್ಲಿ ವ್ಯತ್ಯಾಸವಿದ್ದರೆ ಎರಡೂ 'Z' ಪ್ರತಿಯ ಪಾಠಗಳಾಗಿರುವುದು ಸಾಧ್ಯವಿಲ್ಲ; ಒಂದು 'Z' ಪ್ರತಿಯ ಪಾಠವಾಗಿದ್ದು ಮತ್ತೊಂದು ಲೇಖನಸ್ಖಾಲಿತ್ಯವೋ ಅಥವಾ ಪ್ರತಿಕಾರನು ಅಲ್ಲೊ ಮ್ಮೆ ಇಲ್ಲೊಮ್ಮೆ ಊಹೆ ಮಾಡಿ ಆದ ತಪ್ಪೋ ಆಗಿರಬೇಕು. ಇಲ್ಲಿ ನಮಗೆ ಎರಡು ಪಾಠಗಳಲ್ಲಿ ಒಂದನ್ನು ಆಯುವ ಅವಕಾಶವಿದೆ. ಇವುಗಳನ್ನು ಭಿನ್ನಪಾಠಗಳು (variants) ಎಂದು ಕರೆಯುತ್ತಾರೆ. ಇವೆರಡರಲ್ಲಿ ಒಂದು 'Z' ಪಾಠವಾಗಿರಬಹುದು. ಇಂಥ ಸಂದರ್ಭಗಳಲ್ಲಿ 'X' 'Y' ಮತ್ತು A ಗಳನ್ನು 'Z' ಮೂಲಪ್ರತಿಯ ಭಿನ್ನಪಾಠ ವಾಹಕಗಳು (variant bearers) ಎಂದು ಕರೆಯುಬಹುದು. ಹಾಗೆಯೇ 'W' ಪ್ರತಿಗೆ ಸಂಬಂಧಿಸಿದಂತೆ G ಮತ್ತು H ಗಳು ಭಿನ್ನಪಾಠ ವಾಹಕಗಳು. 'Y' ಹಸ್ತಪ್ರತಿಕುಟುಂಬದಲ್ಲಿ D ಮತ್ತು Gಗಳು ಮಾತ್ರವೇ ಲಭ್ಯವಾಗಿರುವಾಗ ಅವೆರಡನ್ನೇ ಆಧರಿಸಿ 'Y' ಪ್ರತಿಯ ಪಾಠವನ್ನು ಪುನರ್ರಚಿಸಬೇಕಾಗುತ್ತದೆ. ಇವುಗಳಲ್ಲಿ ಒಮ್ಮತವಿಲ್ಲದಾಗ ಈ ಭಿನ್ನೋಪಪಾಠ (subvariant) ಗಳಲ್ಲಿ ಯಾವುದಾದರೊಂದನ್ನು ಆರಿಸಿಕೊಳ್ಳಬೇಕಾಗುತ್ತದೆ. ಹೀಗೆ ಪುನರ್ರಚಿಸಿದ ಪಾಠಗಳು 'Z' ಪ್ರತಿಗೆ ಭಿನ್ನಪಾಠಗಳಾಗುತ್ತವೆ.

ಈವರೆಗೆ ವಿವರಿಸಿದ ವಿಧಾನಗಳೇನಿದ್ದರೂ 'X' ಮತ್ತು 'Y' ಕುಟುಂಬಗಳಲ್ಲಿ ಮಧ್ಯೆ ಬೇರೆ ಪಾಠಗಳ ಬೆರಕೆಯಾಗಿಲ್ಲವೆಂಬ ಕಲ್ಪನೆಯ ಮೇಲೆ ಮಾಡಿದ್ದು. ಆದರೆ ಹಸ್ತಪ್ರತಿಗಳು ಸಾಮಾನ್ಯವಾಗಿ ಸಂಪ್ರದಾಯದ ಒಂದೇ ಎಳೆಯಲ್ಲಿ ಇಷ್ಟು ಕ್ರಮಾನುಸಾರವಾಗಿ ಬಂದಿರುವುದಿಲ್ಲ. ಎರಡು ಅಥವಾ ಹೆಚ್ಚು ಭಿನ್ನಹಸ್ತಪ್ರತಿಗಳ ಪಾಠಗಳನ್ನು ಅನುಸರಿಸಿ ಅನೇಕ ಹಸ್ತಪ್ರತಿಗಳು ರಚಿತವಾಗಿವೆ. ಸಾಮಾನ್ಯವಾಗಿ ಗ್ರಂಥಸಂಪ್ರದಾಯದ ಭಿನ್ನ ಶಾಖೆಗಳು ಪ್ರಾರಂಭದಿಂದಲೂ ಹಾಸುಹೊಕ್ಕಾಗಿ ಸೇರಿಬರುತ್ತವೆ. ಆದ್ದರಿಂದ ಪ್ರತಿಪರಂಪರೆಯ ಚರಿತ್ರೆ ಇಲ್ಲದಾಗ ಪ್ರತ್ಯೇಕ ಪ್ರತಿಗಳಲ್ಲಿ ಅವುಗಳನ್ನು ಬೇರ್ಪಡಿಸಿ ತಿಳಿಯುವುದು ಬಹಳ ಕಷ್ಟ. ಭಿನ್ನ

ಶಾಖೆಗಳು ಹೀಗೆ ಒಂದರೊಡನೊಂದು ಸೇರುವುದನ್ನು ಪಾಠಮಿಶ್ರಣ (closing or intermixing) ಎಂದೂ ಮತ್ತು ಹಾಗೆ ಸೃಷ್ಟಿಯಾದ ಹಸ್ತಪ್ರತಿಗಳಿಗೆ ಮಿಶ್ರಪ್ರತಿಗಳೆಂದೂ (Misch–codices) ಹೆಸರು.

ಎರಡು ಹಸ್ತಪ್ರತಿಗಳನ್ನು ಹೋಲಿಸುವುದರಿಂದ ಪಾಠವನ್ನು ಸುಧಾರಿಸಬಹುದೆಂಬ ವಿಷಯ ಹೊಸ ಸಂಶೋಧನೆಯೇನಲ್ಲ. ದೇವಬೋಧ ಮತ್ತು ಅರ್ಜುನಮಿಶ್ರರಂಥ ಮಹಾಭಾರತದ ವ್ಯಾಖ್ಯಾನಕಾರರು ಭಿನ್ನಪಾಠ (ಅಥವಾ ಪಾಠಾಂತರ)ಗಳನ್ನು ಪ್ರಸ್ತಾಪಿಸಿರುವ ಉದಾಹರಣೆಗಳಿವೆ. ಶ್ರೀ ಗೋಡೆಯವರು ಮಧ್ಯಯುಗದ ಗ್ರಂಥಸಂಪಾದನೆಯಲ್ಲಿ ನಡೆದ ಸ್ವಾರಸ್ಯಕರವಾದ ಪ್ರಯೋಗವೊಂದನ್ನು "ಹದಿಮೂರನೆಯ ಶತಮಾನದಲ್ಲಿ ಗ್ರಂಥಸಂಪಾದನೆ"[4] ಎಂಬ ತಮ್ಮ ಲೇಖನದಲ್ಲಿ ಪ್ರಸ್ತಾಪ ಮಾಡಿದ್ದಾರೆ. ಇಲ್ಲಿ ಕೊಟ್ಟಿರುವ ನಕ್ಷೆಯು ಹಸ್ತಪ್ರತಿ—ಪೀಳಿಗೆಯೊಂದನ್ನು ತೋರಿಸುತ್ತದೆ. ಇದರಲ್ಲಿ **K** ಮತ್ತು **L** ಗಳು ಕ್ರಮವಾಗಿ **A** ಮತ್ತು **B** ಹಾಗೂ **C** ಮತ್ತು **F** ಗಳ ಪಾಠಗಳನ್ನು ಬೆರಸಿ ರಚಿಸಿದ ಮಿಶ್ರಪ್ರತಿಗಳು.




ಈ ಮಿಶ್ರಣಕ್ಕೆ ಒಂದು ಮಿತಿಯೇನೂ ಇರಬೇಕಾದುದಿಲ್ಲ. ಹೀಗಾಗಿ ಅದರ ಪ್ರಮಾಣ ಹೆಚ್ಚಿದಷ್ಟೂ ಒಂದು ಗ್ರಂಥದ ಪಾಠಪರಂಪರೆಯನ್ನು ಪತ್ತೆಮಾಡುವುದು ಕಷ್ಟವಾಗುತ್ತದೆ. ವೆಸ್ಟ್‌ಕಾಟ್ (West Cott) ಮತ್ತು ಹಾರ್ಟ್ (Hort) ರವರು ಹೇಳುವಂತೆ "ಈ ಮಿಶ್ರಣದ ರೀತಿ ಎಂಥದೆಂದರೆ ಇತರ ಪಾಠಗಳ ಬೆರಕೆಯಿಂದ ಗ್ರಂಥದ ಅಂತರ್ಶುದ್ಧಿಗೆ ಒದಗುವ ಲಾಭ ಅಥವಾ ನಷ್ಟವನ್ನು ನಿರ್ಧರಿಸುವುದು ಸಾಧ್ಯವಿಲ್ಲ. ಅನೇಕ ಪ್ರಸಂಗಗಳಲ್ಲಿ ಅದರಿಂದ ಲಾಭ ನಷ್ಟಗಳೆರಡೂ ಇರುತ್ತವೆ. ಆದರೆ ಎರಡೂ ಆಕಸ್ಮಿಕಗಳಾಗಿದ್ದು ಸಂಭಾವ್ಯವಾದ ಯಾವ ಪ್ರಮಾಣದಲ್ಲಿಯಾದರೂ ಇರಬಹುದು.[5] ಅಂಥ ಮಿಶ್ರಣವು ಅಂತಶ್ಶುದ್ಧವಾದ ಪಾಠವನ್ನು ನೀಡುವುದೇ ಎಂಬುದು ಮಿಶ್ರಣಕಾರ (crosser)ನ ತೀರ್ಮಾನ ಮತ್ತು ವಿಷಯದಲ್ಲಿ ಅವನಿ

4. Woolner Commemoration, pp. 106-108.

5. ಪೋಸ್ಟ್‌ಗೇಟ್‌ರವರ Companion to Latin Studies ಗ್ರಂಥದಿಂದ ಉದ್ಧರಿಸಿರುವ ಭಾಗ, pp. 795.

ಗಿರುವ ಅಂತರ್ದೃಷ್ಟಿ (insight) ಗಳನ್ನು ಅವಲಂಬಿಸುತ್ತದೆ. ಪಾಠಮಿಶ್ರಣವು ಪಾಠದ ಅಯ್ಕೆಯನ್ನೂ ಸೂಚಿಸುವುದರಿಂದ ಅದರ ಜೊತೆಯಲ್ಲಿ ಪಾಠಸುಧಾರಣೆಗೆ ಇತರ ಪ್ರಯತ್ನ ಗಳೂ ನಡೆದಿರಬಹುದು. ಹಾಗಿದ್ದಲ್ಲಿ ಪಾಠ ಬಹುಮಟ್ಟಿಗೆ ಕೆಟ್ಟುಹೋಗುತ್ತದೆ. ಏಕೆಂದರೆ ವಿದ್ವಾಂಸರು ತಿದ್ದುಪಡಿಗಳನ್ನು ಮಾಡಿರುವ ಪ್ರಸಂಗಗಳಲ್ಲಿಯೂ ನಿಜವಾದ ಪಾಠಶುದ್ಧಿಯನ್ನು ಪ್ರತಿನಿಧಿಸುವ ಅಂಶ ಕಡಮೆ. ಹೀಗೆಂದಮೇಲೆ ಲಿಪಿಕಾರರ ತಿದ್ದುಪಡಿಗಳಿಂದಾಗುವ ಪಾಠದ ನಿಜವಾದ ಸುಧಾರಣೆ ಅದಕ್ಕಿಂತಲೂ ಕಡಮೆಯಾಗಿರುವುದು ಸ್ವಾಭಾವಿಕ.

ಮಿಶ್ರಪ್ರತಿಯನ್ನು ಬರೆಯಲು ಬಳಸಿದ ಹಸ್ತಪ್ರತಿಗಳಲ್ಲಿ ಯಾವುದಾದರೊಂದು ಹಸ್ತಪ್ರತಿ ಕಳೆದುಹೋಗಿದ್ದಲ್ಲಿ ಮಿಶ್ರಪ್ರತಿಗೆ ವಿಶೇಷವಾಗಿ ಬೆಲೆ ಬರುತ್ತದೆ. ಆಗ ಕಳೆದುಹೋಗಿರುವ ಹಸ್ತಪ್ರತಿಯ ಪಾಠಾಂತರಗಳಿಗೆ ಮಿಶ್ರಪ್ರತಿ ಒಂದು ಸ್ವತಂತ್ರಸಾಕ್ಷ್ಯವಾಗಿ ಪರಿಣಮಿಸುತ್ತದೆ. ಅಲ್ಲದೆ ಇನ್ನಾವ ರೀತಿಯಲ್ಲಿಯೂ ಪಡೆಯಲು ಸಾಧ್ಯವಿರದಿದ್ದ ಸತ್ಯಾಂಶಗಳನ್ನು ಉಳಿಸಿಕೊಟ್ಟ ಯೋಗ್ಯತೆ ಅದರದ್ದಾಗುತ್ತದೆ.

ಇಂಥ ಮಿಶ್ರಣದ ಸ್ವಾರಸ್ಯಕರವಾದ ಪ್ರಸಂಗವೊಂದು ಪಂಚತಂತ್ರದ ಪರಿಷ್ಕರಣದಲ್ಲಿ ದೊರೆಯುತ್ತದೆ. ಲಭ್ಯಸಾಮಗ್ರಿಯನ್ನು ವಿವರವಾಗಿ ಮತ್ತು ಲಕ್ಷ್ಯಪೂರ್ವಕವಾಗಿ ಅಭ್ಯಾಸ ಮಾಡಿದ ಎಡ್ಗರ್ಟನ್ ಅವರು ನಾಲ್ಕು ಸ್ವತಂತ್ರ ಶಾಖೆಗಳನ್ನು ಸ್ಥಾಪಿಸುತ್ತಾರೆ. ಅವು ಹೀಗಿವೆ :

1. ತಂತ್ರಾಖ್ಯಾಯಿಕಾ ಮತ್ತು ಪೂರ್ಣಭದ್ರ
2. ದಕ್ಷಿಣದ ಪಂಚತಂತ್ರ, ನೇಪಾಳಿ ಪಂಚತಂತ್ರ ಮತ್ತು ಹಿತೋಪದೇಶ
3. ಬೃಹತ್ಕಥೆಯ ಪಾಠಗಳು (ಸೋಮದೇವ ಮತ್ತು ಕ್ಷೇಮೇಂದ್ರ)
4. ಪಹ್ಲವಿ ಪಾಠಗಳು

ಕ್ಷೇಮೇಂದ್ರನು ತಂತ್ರಾಖ್ಯಾಯಿಕೆಯನ್ನು ಬಳಸಿದನೆಂಬುದು ಸ್ಪಷ್ಟವಾಗಿರುವುದರಿಂದ ಅವನೂ ಸ್ವಲ್ಪಮಟ್ಟಿಗೆ ಮೊದಲ ಗುಂಪಿಗೆ ಸೇರುತ್ತಾನೆ. ಅವನ ಪಾಠದೊಡನೆ ತಂತ್ರಾಖ್ಯಾಯಿಕೆಯ ಪಾಠ ಬೆರೆತಿದೆ. ಆದ್ದರಿಂದ 3 ಮತ್ತು 4ರ ಪಾಠಗಳೊಂದಿಗೆ ಹೊಂದಿದಾಗ ಅವನ ಪಾಠ ಮಹತ್ವದ್ದಾಗುತ್ತದೆಯೇ ಹೊರತು 1ರೊಂದಿಗೆ ಹೊಂದಿದಾಗಲ್ಲ. ಪೂರ್ಣಭದ್ರನು ಕಡೆಯ ಪಕ್ಷ ಒಂದು ಪ್ರತ್ಯೇಕ ಶಾಖೆಯನ್ನಾದರೂ ಸ್ವಲ್ಪಮಟ್ಟಿಗೆ ಉಪಯೋಗಿಸಿಕೊಂಡಿದ್ದಾನೆ. ಆ ಶಾಖೆ ಬೇರೆ ಯಾವ ಶಾಖೆಗಳಿಗೂ ಸಂಬಂಧಿಸಿಲ್ಲ. ಹೀಗೆ ಕಡೆಯಪಕ್ಷ ಐದನೆಯದಾದರೂ ಆಗಿರುವಂಥ ಶಾಖೆಯೊಂದರ ಸೂಚನೆಗಳು ನಮಗೆ ಪೂರ್ಣಭದ್ರನಲ್ಲಿ ಸಿಗುತ್ತವೆ. ಆದರೆ ನಮಗೆ ದೊರೆತಿರುವ ಪಾಠಗಳಲ್ಲಿ ಎಲ್ಲಿಯೂ ಈ ಶಾಖೆ ಪರಿಶುದ್ಧವಾದ, ಅಮಿಶ್ರವಾದ ರೂಪದಲ್ಲಿ ಸಿಗುವುದಿಲ್ಲ. ಪರಿಣಾಮವಾಗಿ ಊಹೆಯಲ್ಲಿ ಉಳಿದ ಈ ಐದನೆಯ ಶಾಖೆಗೆ ಪೂರ್ಣಭದ್ರನ ಪಾಠ ಪ್ರಮಾಣವು ಸ್ವತಂತ್ರಪ್ರಮಾಣವಾಗಿ ಒದಗುತ್ತದೆ.

ಕಟ್ಟುನಿಟ್ಟಾಗಿ ಹೇಳುವುದಾದರೆ ವಂಶಾವಳಿವಿಧಾನ (Geneological method) ವನ್ನು ಮಿಶ್ರಪ್ರತಿಗಳಿಗೆ ಅನ್ವಯಿಸಲು ಸಾಧ್ಯವಿಲ್ಲ. ಬಹುಸಲ ಅವುಗಳ ಪರಸ್ಪರ ಸಂಬಂಧವನ್ನು ಬಿಡಿಸುವುದೇ ಕಷ್ಟ. ಆದರೂ ಒಮ್ಮೊಮ್ಮೆ ಇವುಗಳಲ್ಲಿ ಸಮಾನಧಾಟಿಯೊಂದು ಕಾಣುವುದುಂಟು. ಕೇವಲ ಊಹೆಯಿಂದ ತಿಳಿಯಲು ಕಷ್ಟಕರವಾದ ಈ ಸಮಾನಾಂಶವು ಕೆಲವು

ವಿಶಿಷ್ಟದೋಷಗಳಲ್ಲಿಯೋ ಅಥವಾ ಉತ್ತಮಪಾಠಗಳಲ್ಲಿಯೋ ಇರುವ ಹೊಂದಿಕೆಗಳಿಂದ ಸೂಚಿತವಾಗುತ್ತದೆ. ಇದರಿಂದಾಗಿ ಹಸ್ತಪ್ರತಿಯ ಕೆಲವು ಭಾಗಗಳಿಗೆ ವಾಂಶಿಕವಿಧಾನವನ್ನು ಅಂಶತಃ ಅನ್ವಯಿಸಬೇಕಾಗುತ್ತದೆ.

ಕೆಲವು ಸಲ ಸಂಬಲರ್ಹವಲ್ಲದ ಮತ್ತು ಉದ್ದಕ್ಕೂ ಪ್ರಸ್ತಾಪಿಸಲು ಯೋಗ್ಯವಲ್ಲದ ಹಸ್ತಪ್ರತಿಗಳಲ್ಲಿ ಉತ್ತಮ ಪಾಠಗಳು ದೊರೆಯುವುದುಂಟು. ಇಂಥ ಪ್ರತಿಗಳನ್ನು ಮೂಲಪಾಠ ಶೋಧನೆಗೆ ನೆರವಾಗುವ ಪ್ರಸಂಗಗಳಲ್ಲಿ ಮಾತ್ರ ಬಳಸಿಕೊಳ್ಳಬಹುದು.

ಅನೇಕ ಪ್ರಸಂಗಗಳಲ್ಲಿ ಬೇರೆ ಬೇರೆ ಶಾಖೆಗಳ ಜಟಿಲಮಿಶ್ರಣದಿಂದ ಹಸ್ತಪ್ರತಿಗಳ ಸಂಬಂಧವು ಪೀಳಿಗೆರಚನೆಗೆ ಅವಕಾಶವನ್ನೇ ಕೊಡದಷ್ಟು ಅಸ್ಪಷ್ಟವಾಗಿರಬಹುದು. ದಿವಂಗತ ಶ್ರೀ ರಾಮಕೃಷ್ಣಭಂಡಾರ್‌ಕರ್‌ರವರು ತಾವು ಹೊರತಂದ ಮಾಲತೀಮಾಧವದ ಮುದ್ರಣಕ್ಕೆ ಬಳಸಿದ ಹಸ್ತಪ್ರತಿಗಳೆಲ್ಲ ಇಂಥವು. ಈಗ ABCDEF ಎಂಬ ಆರು ಪ್ರತಿಗಳಿದ್ದು ಅವುಗಳ ಲಿಖಿತಚರಿತ್ರೆ ಸರಿಯಾಗಿ ತಿಳಿದಿಲ್ಲವೆಂದು ಭಾವಿಸೋಣ. ಇವುಗಳಲ್ಲಿ ABC ಗಳು ಏಕಮೂಲದಿಂದ ಬಂದಿದ್ದು ಒಂದು ವಂಶದವೂ DEF ಗಳು ಮತ್ತೊಂದು ವಂಶದವೂ ಆಗಿವೆಯೆಂದು ಹೇಳುವಂತಿಲ್ಲ. ಹೋಲಿಸಿದಾಗಲೇನೋ ಕೆಲವು ಉತ್ತಮ ಪಾಠಗಳು ABC ಗಳಿಗೆ ಸಾಮಾನ್ಯವಾಗಿದ್ದು DEF ಗಳಲ್ಲಿ ಇಲ್ಲದೆಯೇ ಇರಬಹುದು. ಆ ಪಾಠಗಳ ಮಟ್ಟಿಗೆ ಯಾವುದೋ ಉತ್ತಮ ಹಸ್ತಪ್ರತಿಯೊಂದು ABC ಗಳಿಗೆ ಸಮಾನಮೂಲವಾಗಿತ್ತೆಂದು ಹೇಳಬಹುದು. ಆದರೆ ಆ ಮೂಲಪ್ರತಿಯು ಉಳಿದ ವಿಷಯಗಳಲ್ಲಿ ಮಿಶ್ರಾಂಶಗಳಿಂದ ಕೂಡಿರಬಹುದು. ಈ ವಿಧಾನವು ಪರಿಚಿತವಾದ ಏಕಪ್ರತಿಯ ಸಾಕ್ಷ್ಯಗಳ ಮೇಲೆ ರೂಪಿಸಿದ ವಿಧಾನಕ್ಕೂ ಮತ್ತು ಹಸ್ತಪ್ರತಿ ಕುಟುಂಬದ ವಿಧಾನಕ್ಕೂ ಮಧ್ಯದ ಕ್ರಮವಾಗುತ್ತದೆ.

ಲಭ್ಯ ಮತ್ತು (ಲಭ್ಯಪಾಠಗಳ ಆಧಾರದ ಮೇಲೆ ಅನುಮಿತವಾದ) ಅಲಭ್ಯ ಹಸ್ತಪ್ರತಿಗಳಲ್ಲಿ ದೊರೆಯುವ ಆಧಾರಗಳನ್ನು ಕ್ರಮಪೂರ್ಣವಾಗಿ ಬಳಸಿಕೊಂಡರೆ ಪರಂಪರಾಗತಪಾಠ ಎಂದು ಕರೆಯಬಹುದಾದ ಪಾಠವು ಸಿಕ್ಕುತ್ತದೆ. ಈ ಪರಂಪರಾಗತಪಾಠ ಯಾವುದೇ ಲಭ್ಯ ಪಾಠಕ್ಕಿಂತ ಭಿನ್ನ. ಅದು ಅತ್ಯುತ್ತಮ ಪಾಠವೇನೂ ಆಗಿರುವುದಿಲ್ಲ; ಉತ್ತಮಪಾಠ ಸಹ ಆಗಬೇಕಾಗಿಲ್ಲ. ಆದರೆ ತಲೆತಲಾಂತರದಿಂದ ಲಿಖಿತವಾಗಿ ಬಂದ ಪಾಠಗಳಲ್ಲಿ ಅದೇ ಅತ್ಯಂತ ಹಳೆಯದಾಗಿರುತ್ತದೆ. ಅಷ್ಟೇ ಅಲ್ಲ; ಪ್ರತಿಲೇಖನ ಮತ್ತು ಅಕ್ರಮಪಾಠಸುಧಾರಣೆಗಳಿಂದ ಪಾಠದಲ್ಲಿ ಸೇರಿಕೊಂಡಿದ್ದು ಪತ್ತೆಮಾಡಲು ಸಾಧ್ಯವಿರುವ ಎಲ್ಲ ತಪ್ಪುಗಳಿಂದಲೂ ಮುಕ್ತವಾಗಿರುತ್ತದೆ.

ನಿರ್ದಿಷ್ಟಸಂಖ್ಯೆಯ ಲಭ್ಯಹಸ್ತಪ್ರತಿಗಳ ನಷ್ಟಮಾತೃಕೆಯೊಂದನ್ನು ಪುನಸ್ಸಂಯೋಜಿಸುವ ವಿಧಾನವನ್ನು ತಿಳಿಯಲು ಒಂದು ಕಲ್ಪಿತ ಉದಾಹರಣೆಯನ್ನು ನೋಡಬಹುದು. *a b c d e f g h i* ಎಂದು ಒಂಬತ್ತು ಹಸ್ತಪ್ರತಿಗಳಿವೆಯೆನ್ನೋಣ. ಗಾಢವಾಗಿ ಪರಿಶೀಲಿಸಿ ಒಂದರೊಡನೊಂದನ್ನು ಹೋಲಿಸಿ ನೋಡಿದ ಮೇಲೆ ಅವುಗಳು *a b c d* ಮತ್ತು *e f g h i* ಎಂದು ಎರಡು ಕುಟುಂಬಗಳಾಗಿ ನಿಲ್ಲುತ್ತವೆ. ಆಗ ಮೊದಲ ನಾಲ್ಕು ಹಸ್ತಪ್ರತಿಗಳು ತಮ್ಮೆಲ್ಲಕ್ಕೂ ಸಮಾನಮೂಲವಾದ X ಎಂಬ ಅಲಭ್ಯ ಪೂರ್ವಪ್ರತಿಯಿಂದಲೂ ಉಳಿದ ಐದು ಹಸ್ತಪ್ರತಿಗಳು ತಮ್ಮೆಲ್ಲಕ್ಕೂ ಸಮಾನಮೂಲವಾದ Y ಎಂಬ ಅಲಭ್ಯಪೂರ್ವಪ್ರತಿಯಿಂದಲೂ ಜನಿಸಿವೆಯೆಂದು ಹೇಳಬಹುದು. ಇನ್ನೂ ಪರಿಶೀಲಿಸಿದಾಗ ಐದು ಪ್ರತಿಗಳ ಕುಟುಂಬವು ಪುನಃ

*e*, *f i* ಮತ್ತು *g h* ಎಂದು ಮೂರು ಭಾಗವಾಗಿ ವಿಂಗಡಿಸಿಕೊಳ್ಳಬಹುದು. ಈ ಮೂರು ಚಿಕ್ಕ ಗುಂಪುಗಳಲ್ಲಿ *e* ಪ್ರತ್ಯೇಕವಾಗಿ ನಿಲ್ಲುತ್ತದೆ. *i* ಎಂಬುದು *f* ಎಂಬುದರ ನೇರಹಸ್ತಪ್ರತಿ ಯಾಗಿದ್ದು *i f* ಗಳು S ಎಂಬ ಸಮಾನ ಮೂಲದಿಂದಲೂ *g h* ಗಳು T ಎಂಬ ಅಲಭ್ಯ ಪೂರ್ವಪ್ರತಿಯಿಂದಲೂ ಬಂದಿರುತ್ತವೆ. ಈ ನಿದರ್ಶನದಲ್ಲಿ ಬಳಸಿರುವ ಸಣ್ಣಕ್ಷರಗಳು ಹಸ್ತಪ್ರತಿ ಗಳು ಲಭ್ಯವೆಂಬುದನ್ನೂ, ದೊಡ್ಡಕ್ಷರಗಳು ಪ್ರತಿಗಳು ಅಲಭ್ಯವೆಂಬುದನ್ನೂ ಸೂಚಿಸುತ್ತವೆ. ಪಾಠಶಾಖೆಗಳು (Lines of transmission) ಒಂದರೊಡನೊಂದು ಹೆಣೆದುಕೊಂಡಿಲ್ಲವೆಂದು ಭಾವಿಸೋಣ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಪಾಠಸಂಪ್ರದಾಯವು ಏಕರೀತಿಯಲ್ಲಿದೆ ಮತ್ತು ಹಸ್ತಪ್ರತಿಗಳಲ್ಲಿ ಯಾವುದೂ ಮಿಶ್ರಪ್ರತಿಯಲ್ಲ. ಎಂದರೆ ಕ್ರಮವಾಗಿ X ಮತ್ತು Y ಗಳಿಂದ ಜನಿಸಿದ ಪೀಳಿಗೆಗಳೊಳಗಾಗಲಿ ಅಥವಾ Y ಯೊಳಗಿನ ಚಿಕ್ಕ ಗುಂಪುಗಳೊಳಗಾ ಗಲೀ ಮಿಶ್ರಣ ನಡೆದಿರುವುದಕ್ಕೆ ಸಾಕ್ಷ್ಯಗಳಿಲ್ಲ. ಈಗ ವಂಶವೃಕ್ಷದಲ್ಲಿ O ಮತ್ತು A ಗಳು ಕ್ರಮವಾಗಿ ಪ್ರಧಾನ ಮತ್ತು ಉಪಪ್ರಧಾನಮಾತೃಕೆಗಳಾಗಿದ್ದು A ಯಿಂದ X ಮತ್ತು Y ಗಳು ಜನಿಸುತ್ತವೆ.





O ಮತ್ತು A ಗಳು ಪರಸ್ಪರ ಸಮಾನವೆಂದು ತೋರಿಸಲು ಸಾಧ್ಯವಿದ್ದಲ್ಲಿ A ಸಂಕೇತವನ್ನು ತೆಗೆದು ಅದನ್ನು O ಎಂದು ಕರೆಯಬಹುದು.

ಈಗ ಲಭ್ಯಹಸ್ತಪ್ರತಿಗಳ ಪಾಠಗಳನ್ನೆಲ್ಲಾ ಪರೀಕ್ಷಿಸಿ ಅವುಗಳನ್ನು ವಿವರವಾಗಿ ಹೋಲಿಸಿ ನೋಡೋಣ. *i* ಎಂಬುದು *f* ಎಂಬುದರ ನೇರಪ್ರತಿಯೆಂದು ನಂಬಿಕೆಯಾದಲ್ಲಿ ಅದನ್ನು ಪೀಳಿಗೆಯಿಂದಲೇ ತೆಗೆದುಬಿಡಬಹುದು. *i* ಪ್ರತಿಯ ರಚನೆಯಾದ ಮೇಲೆ *f* ಪ್ರತಿಯಲ್ಲಿ ಹಾಳಾ ಗಿರಬಹುದಾದ ಪಾಠಭಾಗಗಳನ್ನು ನೋಡಬೇಕಾದಾಗ ಮಾತ್ರ *i* ಪ್ರತಿಯನ್ನು ಬಳಸಿದರೆ ಸಾಕು.

ಈಗ ನಾವು *a b c d e f g h* (ಮತ್ತು ಮೇಲೆ ಹೇಳಿದ ಸಂದರ್ಭದಲ್ಲಿ *i*) ಪ್ರತಿಗಳು ಒದಗಿಸುವ ಆಧಾರಗಳ ಮೇಲೆ A ಪ್ರತಿಯ ಪಾಠಾಂತರಗಳನ್ನು ಪುನರ್ರಚಿಸಬೇಕು.

(1) ಎಲ್ಲ ಎಂಟು (*i* ಪ್ರತಿಯನ್ನೂ ಸೇರಿಸಿದಲ್ಲಿ ಒಂಬತ್ತು) ಪ್ರತಿಗಳಲ್ಲಿ ಕಂಡುಬರುವ ಪಾಠವು A ಯ ಪಾಠವಾಗಿರಬೇಕು. ಹೆಚ್ಚು ಕಡಮೆ ಸ್ವತಂತ್ರವೆಂದು ತೋರಿಸಬಹುದಾದ

ಹಸ್ತಪ್ರತಿಗಳಲ್ಲಿ ಯಾವ ಪಾಠದ ಬಗ್ಗೆ ಒಮ್ಮತ ಇರುತ್ತದೋ ಅದು ಪ್ರಧಾನಮಾತೃಕೆಯ ಮೂಲಪಾಠವೆಂದು ಹೇಳಬಹುದು.

(2) X ಪ್ರತಿಯ ನಾಲ್ಕು ಜನ್ಯಪ್ರತಿಗಳಲ್ಲಿ ಒಂದು ಪಾಠವೂ ಮತ್ತು Yನ ಐದು ಜನ್ಯಪ್ರತಿಗಳಲ್ಲಿ ಮತ್ತೊಂದು ಪಾಠವೂ ಇದ್ದಲ್ಲಿ ವಂಶಾವಳಿಯ ಆಧಾರದಿಂದ A ಯ ಪಾಠ ಯಾವುದೆಂದು ತಿಳಿಯಲು ಸಾಧ್ಯವಿಲ್ಲ. ಎರಡು ಕಡೆಯೂ ಇರುವ ಹಸ್ತಪ್ರತಿಗಳ ಸಂಖ್ಯೆಯಾಗಲೀ, Y ಗುಂಪಿನ ಚಿಕ್ಕಸಂಗಡಗಳಲ್ಲಿರುವ ಒಮ್ಮತವಾಗಲೀ ಬಹಳ ಗೌಣವಾದದ್ದು. ಪ್ರತಿಗಳನ್ನು ತೂಗಬೇಕೇ ಹೊರತು ಎಣಿಸಬಾರದು ಎಂಬುದು ಗ್ರಂಥಸಂಪಾದನೆಯ ಪ್ರಧಾನ ನಿಯಮಗಳಲ್ಲಿ ಒಂದು. ಆದ್ದರಿಂದ ಎರಡು ಕಡೆಯ ಪ್ರತಿಗಳ ಸಂಖ್ಯೆಯಿಂದ ನಾವು ಸಮರ್ಪಕಪಾಠವನ್ನು ತಿಳಿಯುವುದು ಸಾಧ್ಯವಿಲ್ಲ. ಈ ಸಂದರ್ಭದಲ್ಲಿ Aಯ ಪಾಠ ಯಾವುದೆಂಬುದರ ಬಗ್ಗೆ ಪೂರ್ಣನಿಶ್ಚಿತತೆ ಎಂಬುದು ಸಾಧ್ಯವಿಲ್ಲ. ಎರಡು ಪಾಠಾಂತರಗಳನ್ನು ಬಿಟ್ಟು ಎಲ್ಲವೂ ಎರಡಕ್ಕೂ ಸಮ. ಈ ಎರಡು ಪಾಠಾಂತರಗಳಲ್ಲಿ ಒಂದು ಮತ್ತೊಂದರ ಕಲುಷಿತ ರೂಪವೆಂಬುದನ್ನು ಪ್ರತಿಲೇಖನ ಸಂಭಾವ್ಯತೆಯು ತೋರಿಸಿಕೊಟ್ಟಲ್ಲಿ ಆ ಎರಡರಲ್ಲಿ ಒಂದು ಪಾಠಾಂತರ Aಯ ಪಾಠವಾಗಿರಬೇಕು. ಉದಾಹರಣೆಗೆ *a b c d* ಗಳು 'ಧಿಸ್ಮಿತಾ' ಎಂಬ ಪಾಠವಿರುವ ಉತ್ತರ ಭಾರತದ ಹಸ್ತಪ್ರತಿಗಳನ್ನೂ ಉಳಿದ ಐದು ಪ್ರತಿಗಳು 'ವಿಸ್ಮಿತಾ' ಎಂಬ ಪಾಠವಿರುವ ದಕ್ಷಿಣದ ಹಸ್ತಪ್ರತಿಗಳನ್ನೂ ಪ್ರತಿನಿಧಿಸಿದಲ್ಲಿ 'ಧಿಸ್ಮಿತಾ' ಎಂಬುದೇ Aಯ ಪಾಠವಿರಬೇಕೆಂಬುದನ್ನು ನಾವು ತಿಳಿಯಬಹುದು. ಏಕೆಂದರೆ ಪ್ರಾಚೀನಲಿಪಿಯಲ್ಲಿ 'ಧ್' ಮತ್ತು 'ವ್' ಗಳು ಪರಸ್ಪರ ಸಾದೃಶ್ಯವಿರುವ ಅಕ್ಷರಗಳು. ಆದ್ದರಿಂದ ಲಿಪಿಲೇಖನಸಂಭಾವ್ಯತೆಯ ಪ್ರಕಾರ 'ಧಿಸ್ಮಿತಾ' ಎಂಬುದನ್ನು ಬರೆಯುವುದು ಸಾಧ್ಯವಾಗಿದೆ.

(3) ಈಗ Xನ (ಅಥವಾ Yಯ) ಜನ್ಯಪ್ರತಿಗಳು ತಮ್ಮತಮ್ಮಲ್ಲೇ ವಿಂಗಡಗೊಂಡಿವೆಯೆಂದುಕೊಳ್ಳೋಣ. T ವಿಭಾಗವು S ಮತ್ತು *e* ಗುಂಪಿನೊಡನೆ ಹೊಂದದೆ *a b c d* ಗಳೊಡನೆ ಹೊಂದುತ್ತವೆ. ಈಗ Yಯ ಪಾಠವನ್ನು T ಗುಂಪಿನಿಂದ ಅನುಮಿತಮಾಡುವುದೇ ಅಥವಾ S ಮತ್ತು e ಗಳಿಂದ ಅನುಮಿತ ಮಾಡುವುದೇ? Tಯ ಪಾಠವನ್ನೇ ಸ್ವೀಕರಿಸಬೇಕೆನ್ನುವುದು ಸ್ಪಷ್ಟ. ಏಕೆಂದರೆ ಆಕಸ್ಮಿಕವಾಗಿ ಪಾಠ ಮಿಶ್ರಣವಾಗಿರಬಹುದಾದ ಸಂಭಾವ್ಯತೆಯನ್ನು ಬಿಡುವುದಾದರೆ T ಗುಂಪಿಗೆ *a b c d* ಗಳೊಡನಿರುವ ಹೊಂದಿಕೆಗೆ X ಮತ್ತು Y ಗಳಲ್ಲಿರುವ ಪಾಠವೇ T ವರ್ಗದಲ್ಲಿಯೂ ಇರುವುದು ಕಾರಣ. ಈ ನಿರ್ದಿಷ್ಟ ನಿದರ್ಶನದಲ್ಲಿ S ಮತ್ತು eಯ ಪಾಠಾಂತರಗಳನ್ನು ಅಪಪಾಠ (mislection) ಅಥವಾ ವಿಕೃತರೂಪಗಳೆಂದು ಕೈಬಿಡಬೇಕಾಗುತ್ತದೆ.

ವಂಶಾವಳಿ ವಿಧಾನವು ಸಾಧ್ಯವಿರುವೆಡೆಯಲ್ಲಿ ಅದರಿಂದ ಎರಡು ರೀತಿಯ ಅನುಕೂಲಗಳಿವೆ: (i) ಕೆಲವು ಭಿನ್ನಪಾಠಗಳನ್ನು ವರ್ಜಿಸುವುದರಿಂದ ಸಂಪಾದನಾಕಾರ್ಯವು ಸುಲಭವಾಗುತ್ತದೆ ಮತ್ತು (ii) Aಯ ಜನ್ಯಪ್ರತಿಗಳಿಗೆಲ್ಲ ಸಮ್ಮತವಾಗುವ ಪಾಠಾಂತರಗಳ ಜೊತೆಗೆ Aಯ ಮತ್ತೆ ಕೆಲವು ಪಾಠಾಂತರಗಳನ್ನು ಕಲ್ಪಿಸುವುದು ಸಾಧ್ಯವಾಗುತ್ತದೆ.

ಈಗ ನಾವು ಅಲಭ್ಯಹಸ್ತಪ್ರತಿಗಳ ವಿಷಯವನ್ನು ಸಂಕ್ಷಿಪ್ತವಾಗಿ ಗಮನಿಸಬಹುದು. ಲಭ್ಯಹಸ್ತಪ್ರತಿಗಳಿಗಿರುವ ಪರಸ್ಪರ ಸಂಬಂಧವನ್ನು ವಿವರಿಸಬೇಕಾದರೆ ನಾವು ಈ ಅಲಭ್ಯಹಸ್ತ

ಪ್ರತಿಗಳು ಹಿಂದೆ ಯಾವುದೋ ಒಂದು ಕಾಲದಲ್ಲಿ ಇದ್ದುವೆಂಬುದನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ. ಮೇಲೆ ಕೊಟ್ಟ ಪೀಳಿಗೆಯಲ್ಲಿ :

(1) Tಯ ಪಾಠವನ್ನು ರಚಿಸಲು ನಾವು ಈ ಅಂಶಗಳನ್ನು ಆಧಾರವಾಗಿಟ್ಟುಕೊಳ್ಳಬೇಕು.

(*a*) *g* ಮತ್ತು *h* ಗಳಲ್ಲಿನ ಹೊಂದಾಣಿಕೆ.

(*b*) *g* ಅಥವಾ *h* ಮತ್ತು Y ಕುಟುಂಬದ ಇತರ ಹಸ್ತಪ್ರತಿಗಳ ಹೊಂದಾಣಿಕೆ. ಏಕೆಂದರೆ Y ಕುಟುಂಬದ ಹಸ್ತಪ್ರತಿಗಳಲ್ಲಿ ಕಾಣುವ ಒಮ್ಮತಕ್ಕಿರುವ ಒಂದೇ ಒಂದು ವಿವರಣೆಯೆಂದರೆ ಈ ಪಾಠಾಂತರಗಳೆಲ್ಲವೂ Y ಯಿಂದಲೇ ಎಲ್ಲ ಪ್ರತಿಗಳಿಗೂ ಇಳಿದುಬಂದುವೆಂಬುದು. T ವಿಭಾಗವು *a b c d* ಪ್ರತಿಗಳ ಜೊತೆಯಲ್ಲಿ ಹೊಂದುವ ವಿಷಯವನ್ನು ಆಗಲೇ ಪ್ರಸ್ತಾಪಿಸಿದ್ದಾಗಿದೆ. ಇದರಿಂದ *g* ಮತ್ತು *h* ಗಳಿಗೇ ವಿಶಿಷ್ಟವಾದ ಸ್ಖಾಲಿತ್ಯಗಳು ಸಾಮಾನ್ಯವಾಗಿ Tಯ ರಚಿತ ಪಾಠವನ್ನು ಸಂದೇಹಿಸುವಂತೆ ಮಾಡುವುದು ಸಾಧ್ಯವಿಲ್ಲ. ಇಷ್ಟಾದರೂ *g* ಮತ್ತು *h* ಗಳ ಪಾಠವು ಪರಸ್ಪರವಾಗಿಯಾಗಲೀ ಅಥವಾ ಉಳಿದ ಪ್ರತಿಗಳೊಡನೆಯಾಗಲೀ ಹೊಂದದಿದ್ದಾಗ ಇಲ್ಲವೆ ಅವು ಪರಸ್ಪರ ಸ್ವತಂತ್ರವಾಗಿ ಒಂದೇ ರೀತಿಯ ಸ್ಖಾಲಿತ್ಯಗಳಿಗೆ ಎಡೆಕೊಟ್ಟಿರುವಾಗ Tಯ ಪಾಠವು ಅನುಮಾನಾಸ್ಪದವಾಗುತ್ತದೆ.

(2) ಇದೇ ರೀತಿಯಲ್ಲಿ ಮತ್ತು ಇಷ್ಟೇ ಖಚಿತವಾಗಿ ಅಥವಾ ಅನಿರ್ದಿಷ್ಟವಾಗಿ Sನ ಪಾಠವನ್ನು *f* ಮತ್ತು T ಗಳ ಆಧಾರದ ಮೇಲೆ ಸ್ಥಾಪಿಸುವುದು ಸಾಧ್ಯ.

(3) ಇದೇ ಪ್ರಕಾರ ಮತ್ತು ಇದೇ ಮಟ್ಟದಲ್ಲಿ *e*, S ಮತ್ತುT ಗಳ ಆಧಾರದ ಮೇಲೆ Yಯ ಪಾಠವನ್ನು ರೂಪಿಸಬಹುದು.

(4) X ನ ಪಾಠವನ್ನು ಕೆಳಗಿನ ಅಂಶಗಳ ಆಧಾರದ ಮೇಲೆ ಸ್ಥಾಪಿಸಬಹುದು.

(*a*) *a b c d* ಗಳಲ್ಲಿ ಯಾವುದಾದರೂ ಎರಡು ಪ್ರತಿಗಳಿಗೆ ಸಮಾನಪಾಠವಿರುವುದು.

(*b*) ಈ ಗುಂಪಿನ ಯಾವುದಾದರೂ ಎರಡು ಹಸ್ತಪ್ರತಿಗಳಿಗೂ ಮತ್ತು Y ವಿಭಾಗದ ಹಸ್ತಪ್ರತಿಗಳಿಗೂ ಇರುವ ಹೊಂದಿಕೆ. X ಮತ್ತು Y ಗಳಲ್ಲಿ ಸಮಾನ ಪಾಠವಿದ್ದು, ಆ ಮೂಲಕ ಅದು Aಯ ಪಾಠವೂ ಆಗಿದ್ದಾಗ ಮಾತ್ರವೇ ಮೇಲೆ ಹೇಳಿದ ಪಾಠಸಾಂಗತ್ಯವು ಸಾಧ್ಯ. *a b c d* ಗಳು ಭಿನ್ನಪಾಠಗಳನ್ನು ಹೊಂದಿದ್ದು ಪರಸ್ಪರವಾಗಿಯೂ ಮತ್ತು Yಯೊಡನೆಯೂ ಹೊಂದಿಗೆ ತೋರದಿದ್ದಾಗ X ನ ಪಾಠವು ಅನುಮಾನಾಸ್ಪದವಾಗುತ್ತದೆ. ಇದರಿಂದ *a b c d e* S (*f*) *g* ಮತ್ತು *h* ಗಳ ವಿಶಿಷ್ಟ ಪಾಠಾಂತರಗಳೆಲ್ಲವೂ X ಮತ್ತು Y ಗಳ ಪಾಠರಚನೆಯಲ್ಲಿ ಪ್ರಯೋಜನಕ್ಕೆ ಬರದೆ ಹೋಗುತ್ತವೆ. ಆದ್ದರಿಂದ ಅವುಗಳನ್ನು ವರ್ಜಿಸಿಬಿಡಬೇಕು.

A ಪ್ರಧಾನಮಾತೃಕೆಯಿಂದ X ಮತ್ತು Y ಗಳಲ್ಲದೆ ಇನ್ನಷ್ಟು ಸಂಖ್ಯೆಯ ಶಾಖೆಗಳು ಹೊರಟಿರುವಾಗಲೂ ಇದೇ ಕ್ರಮವನ್ನು ಅನ್ವಯಿಸಬಹುದು ಮತ್ತು X ಹಾಗೂ Y ಗಳ ಪಾಠವನ್ನು ಪುನರ್ರಚನೆಯ ಇದೇ ನಿಯಮಗಳಿಗೆ ಅನುಸಾರವಾಗಿ ರಚಿಸಬಹುದು.

(5) A ಪ್ರಧಾನಮಾತೃಕೆಯ ರಚನೆಯಲ್ಲಿ ಸಂದರ್ಭಗಳು ಬೇರೆಯಾಗುತ್ತವೆ. ಅದು X ಮತ್ತು Y ಎಂಬ ಎರಡೇ ಭಾಗಗಳಾಗಿ ಮುಂದಕ್ಕೆ ಹರಿದಿದ್ದು X ಮತ್ತು Y ಗಳು ಪಾಠ ಸಾಂಗತ್ಯವನ್ನು ತೋರಿದಲ್ಲಿ, ಈ ಮುಂಚೆ ವಿವರವಾಗಿ ತಿಳಿಸಿರುವಂತೆ, ಅವೆರಡಕ್ಕೂ ಸಮ್ಮತ ವಾಗುವ ಪಾಠವೇ Aಯ ಪಾಠವಾಗುತ್ತದೆ. ಅವುಗಳು ಭಿನ್ನಪಾಠಗಳನ್ನು ತೋರಿದರೆ ಈ ಭಿನ್ನಪಾಠಗಳಲ್ಲಿ ಒಂದು Aಯ ಪಾಠವಾಗುತ್ತದೆ. ಆದರೆ ಮೇಲೆ ತಿಳಿಸಿದಂತೆ ವಂಶಾವಳಿ ವಿಧಾನದಿಂದ ಇಲ್ಲಿ ನಮಗೆ ಸಹಾಯವೇನೂ ಆಗುವುದಿಲ್ಲ. ಉಳಿದುವೆಲ್ಲ ಸಮವಾಗಿದ್ದಾಗ ಪಾಠನಿರ್ಣಯಕ್ಕೆ ಪ್ರತಿಲೇಖನ ಸಂಭಾವ್ಯತೆ (Transcriptional or Documentary Probabality) ಮತ್ತು ಅಂತಸ್ಸಂಭಾವ್ಯತೆಗಳನ್ನು ಪರಿಗಣಿಸಬೇಕಾಗುತ್ತದೆ. ಆ ಪರಿಗಣನೆ ಗಳ ವಿಷಯ ಮುಂದಿನ ಅಧ್ಯಾಯದಲ್ಲಿ ಬರುತ್ತದೆ.

(*a*) X ಮತ್ತು Y—ಈ ಎರಡು ಕುಟುಂಬಗಳಲ್ಲಿ *a* ಮತ್ತು *i*—ಹೀಗೆ ಒಂದೊಂದೇ ಹಸ್ತಪ್ರತಿ ಉಳಿದುಬಂದಿದ್ದಲ್ಲಿ ನಾವು Aಯ ಪಾಠವನ್ನು ಅಷ್ಟೇ ಖಚಿತವಾಗಿ ರಚಿಸಬಹುದಿತ್ತು. ಆಗ *a* ಮತ್ತು *i* ಗಳು ಭಿನ್ನಪಾಠಗಳಾಗುತ್ತಿದ್ದುವು. ಆದರೆ ಮೊದಲೇ ಕೆಟ್ಟುಹೋದ X ಮತ್ತು Y ಗಳ ಪಾಠವು ಮುಂದೆ ಪ್ರತಿಗೊಳ್ಳುತ್ತ ಇನ್ನಷ್ಟು ಕೆಟ್ಟುಹೋದರೆ ಅಥವಾ Xನಲ್ಲಿ ಇನ್ನಷ್ಟು ಕೆಟ್ಟುಹೋಗಿದ್ದು Y ನಲ್ಲಿ ಇನ್ನೂ ಶುದ್ಧವಾಗಿ ಉಳಿದಿರುವ ಪಾಠಾಂತರವೊಂದು *i* ಪ್ರತಿಯಲ್ಲಿ ಕೆಟ್ಟುಹೋದರೆ ಪ್ರಧಾನ ದೋಷಗಳು ಉಳಿದುಬಿಡುತ್ತವೆ.

(*b*) *a e* ಮತ್ತು *i* ಗಳು ಲಭ್ಯವಾಗಿದ್ದಾಗಲೂ ಇಂಥದೇ ಪರಿಸ್ಥಿತಿ ಒದಗುತ್ತದೆ. *a*ಗೆ ವಿರೋಧವಾಗಿ *e* ಮತ್ತು *i* ಗಳು ಹೊಂದುತ್ತಿದ್ದು *a* ಮತ್ತು Y ಗಳು ಭಿನ್ನಪಾಠವಾಹಕಗಳಾ ಗುತ್ತಿದ್ದುವು. *e*ಗೆ ವಿರೋಧವಾಗಿ *a i* ಗಳಾಗಲೀ ಅಥವಾ *i*ಗೆ ವಿರೋಧವಾಗಿ *a e* ಗಳಾ ಗಲೀ ಹೊಂದಿದಲ್ಲಿ ಪ್ರತ್ಯೇಕಪಾಠ (isolated Readings) ಬೆಲೆಯಿಲ್ಲದವಾಗುತ್ತವೆ. *a i* ಮತ್ತು *e*ಗಳೆಲ್ಲವೂ ಪರಸ್ಪರ ವಿರೋಧ ತೋರಿದಲ್ಲಿ ಲಭ್ಯಸಾಮಗ್ರಿಯಿಂದ Y ಯನ್ನಾಗಲೀ A ಯನ್ನಾಗಲೀ ರಚಿಸುವುದು ಸಾಧ್ಯವಿಲ್ಲ. ಆಗ *e* ಮತ್ತು *i* ಗಳ ಭಿನ್ನೋಪಪಾಠ (Sub-variants) ಗಳಿಂದ *y*ಯ ಪಾಠಾಂತರಗಳನ್ನು ರಚಿಸುವ ಯತ್ನ ಮಾಡಬೇಕು. ಆಗ ಈ ಭಿನ್ನಪಾಠಗಳನ್ನು ಪಾಠಸಂಪ್ರದಾಯದಲ್ಲಿ ನೋಡಿರುವಂತೆ *a*ಯ ಭಿನ್ನಪಾಠಗಳಿಗೆ ಸಮಾನ ವಾದ ಪಾಠಗಳೆಂದು ಗಣಿಸಬಹುದು.

(6) ಕೇವಲ *ab*, ಅಥವಾ *eg*, ಅಥವಾ *gh* ಗಳು ಮಾತ್ರವೇ ಉಳಿದಿದ್ದಲ್ಲಿ X ಅಥವಾ Y ಅಥವಾ T—ಈ ಮೂಲ ಪ್ರತಿಗಳ ಪಾಠವನ್ನು ಮಾತ್ರ ರಚಿಸಬಹುದು. ಕಳೆದುಹೋದ ಈ ಒಂದೊಂದು ಮೂಲಕ್ಕೂ ಎರಡು ಲಭ್ಯಪ್ರತಿಗಳು ಭಿನ್ನಪಾಠವಾಹಕಗಳಾಗುತ್ತವೆ.

(7) A ಪ್ರಧಾನಮಾತೃಕೆಯು X, Y ಮತ್ತು K ಗಳಂಥ ಮೂರು (ಅಥವಾ ಮೂರ ಕ್ಕಿಂತ ಹೆಚ್ಚು) ಶಾಖೆಗಳಾಗಿ ಒಡೆದಿದ್ದಲ್ಲಿ ಇವುಗಳಲ್ಲಿ ಯಾವುದಾದರೂ ಎರಡು ಉಪಪ್ರಧಾನ ಮಾತೃಕೆಗಳ ಹೊಂದಿಕೆಯನ್ನವಲಂಬಿಸಿ Aಯ ಪಾಠವನ್ನು ರಚಿಸಬಹುದು. ಆದರೆ ಈ ಗುಂಪುಗಳ ಪಾಠಗಳಲ್ಲಿ ಪರಸ್ಪರ ಭಿನ್ನತೆ ಕಂಡುಬಂದಾಗ ಅಥವಾ ಇವುಗಳ ಪಾಠಸಾಂಗತ್ಯ ಕೇವಲ ಆಕಸ್ಮಿಕವೋ ಇಲ್ಲವೆ ಪರಸ್ಪರ ಸ್ವತಂತ್ರವೋ ಆಗಿರುವಾಗ Aಯ ಪಾಠವು ಪೂರ್ಣ ವಾಗಿ ನಿರ್ವಿವಾದವಾದುದೆಂದು ಹೇಳುವುದು ಸಾಧ್ಯವಿಲ್ಲ.

ಪಾಠಸಂಪ್ರದಾಯದಲ್ಲಿ ಯಾವ ಮಿಶ್ರಣವೂ ಆಗಿಲ್ಲವೆಂದು ಭಾವಿಸಿಕೊಂಡು ಮೇಲೆ ಕಂಡಂತೆ ವಿವೇಚಿಸಲಾಯಿತು. ಪಾಠಸಂಕರ (contamination) ಅಥವಾ ಪಾಠಮಿಶ್ರಣ (conflation) ವಾಗಿರುವ ಪ್ರಸಂಗಗಳನ್ನು ಕುರಿತು ಈಗ ವಿಚಾರ ಮಾಡಬಹುದು. ಲಭ್ಯಪ್ರತಿಗಳು ಮೂಲಪಾಠದಿಂದ ಹೊರಳಿ ಅನ್ಯಮೂಲಗಳೊಂದಿಗೆ ಸಂಪರ್ಕಗೊಂಡುವೆನ್ನೋಣ. ಎಂದರೆ, ಉದಾಹರಣೆಗೆ, Kಗೆ ಎದುರಾಗಿ KY, Yಗೆ ಎದುರಾಗಿ XK ಅಥವಾ Xಗೆ ಎದುರಾಗಿ YKಗಳು ಮಿಶ್ರಣವಾಗಿವೆಯೆಂದು ಭಾವಿಸೋಣ. ಆಗ ಸಾಮಾನ್ಯ ಪ್ರಸಂಗಗಳಲ್ಲಿ ಬೆಲೆಯಿಲ್ಲದವು ಎಂದು ಹೇಳಿ ಬಿಟ್ಟುಬಿಡುತ್ತಿದ್ದ X, Y ಮತ್ತು Kಗಳ ಪ್ರತ್ಯೇಕಪಾಠಗಳನ್ನು ಪ್ರಧಾನಮಾತೃಕೆಯ ರಚನೆಯಲ್ಲಿ ಸಂಭಾವ್ಯ ಭಿನ್ನಪಾಠವಾಹಕ (Presumptive Variants) ಗಳಾಗಿ ಪರಿಗಣಿಸಲಾಗುತ್ತದೆ. ಏಕೆಂದರೆ X, Y ಮತ್ತು K ಗಳೆಲ್ಲವೂ ಪಾಠಸಂಕರಕ್ಕೆ ಎಡೆಗೊಟ್ಟಿವೆ. ಮತ್ತು ಮೂರನೆಯದೊಂದನ್ನು ವಿರೋಧಿಸಿ ಪರಸ್ಪರ ಹೊಂದಿಕೆ ತೋರುವ ಯಾವ ಎರಡು ಪಾಠಗಳಾದರೂ ಪ್ರಧಾನಮಾತೃಕೆಯ ರಚನೆಯಲ್ಲಿ ಸಮಾನ ಬೆಲೆಯುಳ್ಳ ಎರಡು ಭಿನ್ನಪಾಠಗಳನ್ನು ಒದಗಿಸುತ್ತವೆ.

ಮಿಶ್ರಪ್ರತಿಗಳೆಂದು ಖಚಿತವಾಗಿ ತಿಳಿದುಬಂದ ಹಸ್ತಪ್ರತಿಗಳಿಗೆ ಈ ನಿಯಮಗಳನ್ನು ಅನ್ವಯಿಸಿದ ಪ್ರಾಯೋಗಿಕ ನಿದರ್ಶನವೊಂದನ್ನು ಮಹಾಭಾರತದ ವಿಮರ್ಶಾತ್ಮಕ ರಚನೆಯಲ್ಲಿ ಕಾಣಬಹುದು. ಈ ನಿದರ್ಶನದಲ್ಲಿ ಮಾದರಿಪೀಳಿಗೆಯು N ಮತ್ತು S ಎಂಬ ಎರಡು ಶಾಖೆಗಳಾಗಿ ಒಡೆದಿದ್ದು N ಶಾಖೆಯು ಪುನಃ V ಮತ್ತು Y ಗಳೆಂಬ ಉಪವಿಭಾಗಗಳಾಗಿ ಒಡೆದಿದೆ. ಹೋಲಿಕೆಯಲ್ಲಿ ಹೆಚ್ಚು ಶುದ್ಧಪ್ರತಿಯೆನಿಸಿಕೊಂಡ K ಪಾಠವೂ ಸಹ ಪೂರ್ಣವಾಗಿ ಮಿಶ್ರಣ ದೂರವಾಗಿಲ್ಲ. ಪಾಠಪ್ರಮಾಣತೆಯನ್ನು ಕುರಿತ ಎಲ್ಲ ಊಹೆಗಳಿಗೂ ಆಧಾರವಾದ ಮುಖ್ಯ ಸೂತ್ರವೊಂದಿದೆ. ಹೆಚ್ಚುಕಡಮೆ ಸ್ವತಂತ್ರವೆಂದು ಸಿದ್ಧಮಾಡಬಹುದಾದ ಪಾಠಗಳಲ್ಲಿ ಮೂಲದ್ದೆಂದು ನಾವು ತರ್ಕಿಸಬಹುದಾದ ಕೆಲವು ಭಾಗಗಳಿರುತ್ತವೆಯಷ್ಟೆ. ಅವುಗಳಲ್ಲಿ ಕಂಡುಬರುವ ಏಕತೆಯೇ ಆ ಸೂತ್ರವೆನ್ನಬಹುದು. ಸ್ವತಂತ್ರ ಪಾಠಗಳ ಮತ್ತು ಪಾಠಸಂಪ್ರದಾಯಗಳ ಒಮ್ಮತದಿಂದ ರೂಪುಗೊಳ್ಳಬಹುದಾದ ನಿಯಮವನ್ನು ಗ್ರಹಿಸುವುದೂ ಸುಲಭ ಮತ್ತು ಅದರ ಅನ್ವಯವೂ ಬಹಳ ಸರಳ. ಆದರೆ ಅದರ ಕಾರ್ಯಕ್ಷೇತ್ರ ಮಿತವಾದದ್ದು. ಅನಿಶ್ಚಿತತೆ ತಲೆಹಾಕಿದಾಗ ತೊಂದರೆಗಳು ಉದ್ಭವಿಸುತ್ತವೆ. ಇದು ಸಾಮಾನ್ಯ ಸ್ಥಿತಿ. ಹೀಗಾಗಿ ಅನಿಶ್ಚಿತತೆ ಒದಗಿದಾಗ ಸಂಪಾದಕರು ಮೇಲಿನ ನಿಯಮದ ಅನುಸಿದ್ಧಾಂತದ ಪ್ರಕಾರ ಹೆಚ್ಚು ಸಂಖ್ಯೆಯ ಸ್ವತಂತ್ರ ಪಾಠಗಳಲ್ಲಿ ದೊರೆತ ಮತ್ತು ಅಂತಸ್ಸಂಭಾವ್ಯತೆಯಿಂದ ಸಮರ್ಥಿತವಾದ ಪಾಠಾಂತರವನ್ನೇ ಆರಿಸಿದರು. ಈ ಪ್ರಸಂಗಗಳಲ್ಲಿ ಕಲ್ಪಿತ ಮೂಲಪಾಠವು ಸಾಮಾನ್ಯವಾಗಿ ಭಿನ್ನಪಾಠಗಳಲ್ಲಿ ತೋರುವ ನಿಶ್ಚಿತ ಒಮ್ಮತದ ಅಭಾವದಿಂದ ದೃಢಪಡುತ್ತದೆ. ಆದರೆ ಸಂಗತಪಾಠಗಳು ಎರಡಿದ್ದಾಗ ಅಥವಾ ಪ್ರತಿಯೊಂದು ಪಾಠಸಂಪ್ರದಾಯದಲ್ಲಿ ಎರಡು ಇಲ್ಲವೆ ಎರಡಕ್ಕಿಂತ ಹೆಚ್ಚು ಗುಂಪುಗಳಲ್ಲಿ ಪಾಠಸಾಂಗತ್ಯ ಕಂಡುಬಂದಾಗ ದೊಡ್ಡ ಕಷ್ಟ ಒದಗುತ್ತದೆ. ಇಲ್ಲಿ ಎರಡು ಸಂಗತಪಾಠಗಳೂ ಮೂಲಪಾಠಗಳಾಗಿರುವುದು ಸಾಧ್ಯವಿಲ್ಲವಾಗಿ ಅವುಗಳಲ್ಲಿ ಒಂದರ ಸಾಂಗತ್ಯ ಕೇವಲ ಆಕಸ್ಮಿಕವಾದುದಾಗಿರಬೇಕು. ಸಮಾನವಾದ ಅಂತಃಪ್ರಾಮಾಣ್ಯ ಇದ್ದರೆ ಅವುಗಳಲ್ಲಿ ಯಾವುದನ್ನಾದರೂ ಸ್ವೀಕರಿಸಬಹುದು. ಸಂಭಾವ್ಯತೆ ಸಮಾನವಾಗಿರುವುದರಿಂದ ಅಂತಹ ಪಾಠಗಳಲ್ಲಿ ಆಯ್ಕೆ ಕಷ್ಟಕರವಾಗುತ್ತದೆ. ಸಮರ್ಪಕತೆಯ ಲಕ್ಷಣಗಳಿಂದ ಕೂಡಿರುವ ಸಾಕ್ಷಿಗೆ ಅಂಥ ಪ್ರಸಂಗಗಳಲ್ಲಿ ಹೆಚ್ಚಿನ ಬೆಲೆ ಕೊಡಬಹುದು. ಹೀಗೆ ಸುಕ್ತಂಕರ್‌ರವರು SKಯ ಪಾಠಾಂತರ

ವನ್ನು ಸ್ವೀಕರಿಸಿದ್ದಾರೆ. ಎರಡು ಪಾಠಸಂಪ್ರದಾಯಗಳಲ್ಲಿ ಸಮಾನ ಅಂತಃಪ್ರಾಮಾಣ್ಯವಿರುವ, ಆದರೆ ಒಂದರಿಂದೊಂದು ಜನಿಸಿರದ ಪರ್ಯಾಯಪಾಠ (Alternate readings)ಗಳಿದ್ದಾಗ ಆಯ್ಕೆಯು ತುಂಬ ದುಷ್ಕರವಾಗುತ್ತದೆ. ಏಕೆಂದರೆ ಸಂಭಾವ್ಯತೆಯು ಎರಡು ಸಂಪ್ರದಾಯಗಳಿಗೂ ಸಮಾನವಾಗಿರುತ್ತದೆ. ಇದ್ದುದರಲ್ಲಿ ಸಮರ್ಪಕವಾದ ಪಾಠಕ್ಕೆ ಬೆಲೆ ಕೊಡಬೇಕೆಂಬ ನಿಯಮವನ್ನು ಇಂಥ ಪ್ರಸಂಗಗಳಲ್ಲಿ ಅನುಸರಿಸಬೇಕು. ಹೆಚ್ಚು ಸಂಭವನೀಯವಾದ ಪಾಠವನ್ನು ತಾತ್ಕಾಲಿಕವಾಗಿ ಆಯ್ದುಕೊಳ್ಳಬೇಕು. ಭಿನ್ನಪಾಠಗಳ ಅನಗತ್ಯವಾದ ಮತ್ತು ಅಯುಕ್ತವಾದ ಮಿಶ್ರಣವನ್ನು ನಿವಾರಿಸುವ ದೃಷ್ಟಿಯಿಂದ ಇಂಥ ಆಯ್ಕೆ ಅಗತ್ಯ. ಈ ಪರೀಕ್ಷೆಗಳೆಲ್ಲ ವಿಫಲವಾದಾಗ ಇಲ್ಲವೆ ವಿರುದ್ಧ ಫಲಿತಾಂಶ ಕೊಟ್ಟಾಗ ಸುಕ್ತ್‌ಂಕರ್‌ರವರು ಅನುಸರಿಸಿದ ಯುಕ್ತ ವಿಧಾನವೆಂದರೆ ಉಳಿದ ಪಾಠಾಂತರಗಳು ಹೇಗೆ ಬಂದುವೆಂಬುದನ್ನು ತಿಳಿಸಬಲ್ಲ ಪಾಠಾಂತರವೊಂದನ್ನು ಕಂಡುಕೊಳ್ಳುವುದು. ಹೀಗೆ 1·98·18 ಸಮುದ್ಗೆ > ಸಮುದ್ರೆ, ಸಮೂಹೆ, ಸಮೃದ್ಧೆ—ಇತ್ಯಾದಿ. ಅಂಥ ಸಂದರ್ಭಗಳಲ್ಲಿ ಅನೇಕ ಸಲ ಕಿಷ್ಟತರವಾದ ಪಾಠವೋ (Lectio difficilor] ಅಥವಾ ಪ್ರಾಚೀನ ಪ್ರಯೋಗವೋ ನಿಜವಾದ ಪಾಠವೆಂದು ಸಿದ್ಧವಾಗಿದೆ. ಅವುಗಳನ್ನು ಬಿಡಬೇಕೆಂಬ ಉದ್ದೇಶವೇ ಪಾಠವ್ಯತ್ಯಾಸವಾದುದಕ್ಕೆ ಕಾರಣವಾಗಿ ತಿಳಿದುಬಂದಿದೆ.

ಲಭ್ಯಪ್ರತಿಗಳು ಕಲುಷಿತವಾಗಿದ್ದಲ್ಲಿ ಭಿನ್ನಸಂಪ್ರದಾಯಕ್ಕೆ ಸೇರಿದ ಉಪಮಾತೃಕೆಗಳ ಪಾಠಗಳನ್ನು ಸಂಪಾದಿಸುವುದು ಸಹ ಹೀಗೆಯೇ ಬಹುಕಷ್ಟದ ಕೆಲಸ. ಮಹಾಭಾರತದ ಹಸ್ತಪ್ರತಿಗಳ ಅಧ್ಯಯನ ಮಾಡಿ ಸುಕ್ತ್‌ಂಕರ್‌ರವರು ನೀಡಿದ ಅಭಿಪ್ರಾಯಗಳಿಂದ ಇದನ್ನು ತಿಳಿಯಬಹುದು. "ಒಂದು ಸಂಪ್ರದಾಯ (ಗ್ರಂಥ)ದ ವಿಮರ್ಶಾತ್ಮಕ ಪಾಠವನ್ನು ಸಿದ್ಧಮಾಡಲು ಆ ಸಂಪ್ರದಾಯದ ಆರು ಹಸ್ತಪ್ರತಿಗಳನ್ನು ಪರೀಕ್ಷಿಸಿದೆವೆಂದು ಭಾವಿಸಿ. ಇವುಗಳಲ್ಲಿ ನಾಲ್ಕು (G 1-2-4-5) ಮಿಶ್ರಪ್ರತಿಗಳೆನ್ನೋಣ. ಮಿಶ್ರಪ್ರತಿಗಳಲ್ಲಿ ಸಾಮಾನ್ಯಪಾಠಾಂತರವೂ (Secondary reading) ಉಳಿದೆರಡರಲ್ಲಿ ಮಾತ್ರ ಸರಿಯಾದ ಪಾಠಾಂತರವೂ ಇರಬಹುದು. ಇಂಥ ಪ್ರಸಂಗಗಳಲ್ಲಿ ಈ ಭಿನ್ನಪಾಠಾಂತರಗಳ ನಿಜಸ್ವರೂಪವೇನೆಂಬುದು ಈ (G) ಸಂಪ್ರದಾಯದ ಪ್ರತಿಗಳಿಂದ ತಿಳಿಯುವುದೇ ಇಲ್ಲ; ಇತರ ಸಂಪ್ರದಾಯ (T ಅಥವಾ M ಇಲ್ಲವೆ N) ಗಳಿಂದಲೇ ಅದು ತಿಳಿಯಬೇಕು. ಹಾಗೆ ನೋಡಿದರೆ ಒಂದು ನಿರ್ದಿಷ್ಟ ಸಂಪ್ರದಾಯಕ್ಕೆ ಸೇರಿದ ಪ್ರತಿಯ ಪಾಠವು ಕಲುಷಿತವಾಗಿದೆಯೆಂಬುದನ್ನು ತಿಳಿಯಬೇಕಾದಲ್ಲಿ ಇತರ ಸಂಪ್ರದಾಯಗಳ ಪಾಠವನ್ನು ಪರಿಶೀಲಿಸುವುದಲ್ಲದೆ ಬೇರೆ ಮಾರ್ಗವೇ ಇಲ್ಲ.[6] ಇದರಿಂದ ಸ್ಪಷ್ಟವಾಗುವುದಿಷ್ಟು; ನಾವು ಈ ಅಧ್ಯಾಯದಲ್ಲಿ ಚರ್ಚಿಸಿದ ಮಾದರಿ ವಿಧಾನವನ್ನು ಕಾರ್ಯರೂಪಕ್ಕೆ ಇಳಿಸುವಾಗ ಕೆಲವು ಮಾರ್ಪಾಟುಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಈ ಮಾರ್ಪಾಟುಗಳು ವಿಮರ್ಶಾತ್ಮಕ ಪಾಠರಚನೆಯ ಸಿದ್ಧತೆಗೆ ನಾವು ಬಳಸುವ ಲಭ್ಯಹಸ್ತಪ್ರತಿಗಳ ಸ್ವರೂಪಕ್ಕೆ ಅನುಗುಣವಾಗಿರುತ್ತವೆ.

ಲಭ್ಯಹಸ್ತಪ್ರತಿಗಳ ಸಮರ್ಪಕ ವಂಶಸಂಬಂಧವನ್ನು ಸಾಧ್ಯವಿದ್ದಲ್ಲೆಲ್ಲ ಶೋಧಿಸುವುದರ ಮಹತ್ವವೇನೆಂಬುದು ಕೆಳಗಿನ ಕಾರಣದಿಂದ ತಿಳಿಯಬಹುದು. ಮೂಲದಿಂದ ಎಲ್ಲಿಯೂ ಭಿನ್ನವಾಗಿಲ್ಲದ ಹಸ್ತಪ್ರತಿಯೊಂದಿದ್ದು ಅದರ ಪಾಠಪರಂಪರೆ ಅಮಿಶ್ರಿತವಾಗಿ, ಶುದ್ಧವಾಗಿ ಉಳಿದು

6. Prolegomena, pp. Lxxxi.

ಬಂದಿದೆಯೆಂದು ಭಾವಿಸಿ. ಈಗ ಅದಕ್ಕೆ ಮೂಲದೊಡನಿರುವ ಸಂಬಂಧವನ್ನಾಗಲೀ ಅಥವಾ ಆ ಮೂಲದಿಂದ ಹೊರಟ ಇತರ ಪ್ರತಿಸಂತತಿ (descendants) ಯೊಡನಿರುವ ಸಂಬಂಧವನ್ನಾಗಲೀ ನಿರ್ಧರಿಸುವುದು ಸಾಧ್ಯವಿಲ್ಲ. ಉದಾಹರಣೆಗೆ ಮೇಲೆ ಗಮನಿಸಿದ ಹಸ್ತಪ್ರತಿಪೀಳಿಗೆಯಲ್ಲಿ S ಪ್ರತಿಯಿಂದ ನಕಲುಗೊಂಡ *f* ಹಸ್ತಪ್ರತಿಯು ಸ್ವವಿಶಿಷ್ಟವಾದ ಯಾವ ದೋಷಗಳನ್ನೂ ತೋರಿಸದಿದ್ದಲ್ಲಿ *i* ಪ್ರತಿಯು S ಪ್ರತಿಯಿಂದ ನೇರವಾಗಿ ನಕಲುಗೊಂಡಿತೋ ಅಥವಾ S ಪ್ರತಿಯಿಂದ *f* ಪ್ರತಿ ರಚಿತವಾಗಿ ಅದರಿಂದ *i* ಪ್ರತಿಯು ಹುಟ್ಟಿಬಂತೋ ಎನ್ನುವುದನ್ನು ಹೇಳುವುದು ಸಾಧ್ಯವಿಲ್ಲ. *i* ಮತ್ತು *f* ಪ್ರತಿಗಳು ಮಾತ್ರವೇ ಉಳಿದಿವೆಯೆಂದು ಭಾವಿಸೋಣ. ಆಗ *i* ಪ್ರತಿಯು ಸಂಭಾವ್ಯ ಭಿನ್ನಪಾಠವಾಹಕ (Presumtive variant bearer) ವಾಗುತ್ತದೆ. ಆದರೆ ಪರಂಪರಾಗತವಾಗಿ ಸಾಗಿಬಂದ ಪಾಠಲೇಖನದ ಚರಿತ್ರೆಯನ್ನು ನಾವು ಸಾಕಷ್ಟು ಒಳಹೊಕ್ಕು ಪರೀಕ್ಷಿಸಿದಲ್ಲಿ *i* ಪ್ರತಿಯನ್ನು ವರ್ಜಿಸಬೇಕಾಗುತ್ತದೆ. ಆದ್ದರಿಂದ ಆ ಪ್ರತಿಗೆ ವಿಶಿಷ್ಟವಾಗಿರುವ ಪಾಠಾಂತರಗಳನ್ನು, ಅವು ನಿಜವಾಗಿ ದೋಷಗಳೇ ಆಗಿದ್ದರೂ, ಪರೀಕ್ಷಿಸುವುದು ಆಗತ್ಯವಾಗುತ್ತದೆ.

ಇದೇ ರೀತಿಯಲ್ಲಿ ಪ್ರತಿಕಾರನೊಬ್ಬನು ಅನಿರೀಕ್ಷಿತ ಊಹಾಪಾಠದಿಂದ ಮೂಲದ ಒಂದು ತಪ್ಪನ್ನು ತಿದ್ದಿಬಿಟ್ಟು ಅದನ್ನು ಎಲ್ಲೂ ಸೂಚಿಸಿಲ್ಲವೆನ್ನೋಣ. ಆಗ ಆ ಪಾಠಾಂತರದಿಂದಾಗಿ ಅವನ ಪ್ರತಿಯು ತನ್ನ ನಿಜವಾದ ಮಾತೃಕೆಯಿಂದ ನಕಲಾದಂತೆ ತೋರದೆ ಮತ್ತಾವುದೋ ಮೂಲದಿಂದ ಬಂದುದೆಂಬಂತೆ ಕಾಣುತ್ತದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಹಸ್ತಪ್ರತಿಯ ಸಾಕ್ಷ್ಯಗಳನ್ನು ವರ್ಗೀಕರಿಸುವ ವ್ಯಕ್ತಿಯು ಅಲ್ಲಿ ಏನೋ ಮಿಶ್ರಣವಾಗಿದೆಯೆಂದು ಊಹಿಸುವ ಸಾಧ್ಯತೆ ಇದೆ. ಈ ಪಾಠಾಂತರಗಳನ್ನು ಬೇರೆ ಕಾರಣಗಳಿಗಾಗಿ ತೆಗೆದುಹಾಕಬೇಕಾಗಿ ಬಂದರೆ, ಯೋಗ್ಯ ಊಹೆಯಿಂದ ಕಂಡುಕೊಂಡ ಸಮರ್ಪಕವಾದ ಪಾಠಗಳೇ ಆಗಿದ್ದರೂ ಅವುಗಳನ್ನು ಸಮರ್ಥಿಸುವುದು ಸಾಧ್ಯವಿಲ್ಲ. ಆದ್ದರಿಂದ ಒಂದು ಪರಂಪರೆಯ ಸ್ವತಂತ್ರಶಾಖೆಯಲ್ಲಿಯೇ ಆಗಲಿ, ಮಿಶ್ರಶಾಖೆಯಲ್ಲಿಯೇ ಆಗಲಿ, ಹಸ್ತಪ್ರತಿಗಳ ವಂಶಸಂಬಂಧವನ್ನು ನಿರ್ಧರಿಸುವಾಗ ತುಂಬ ಎಚ್ಚರಿಕೆ ವಹಿಸಬೇಕಾಗುತ್ತದೆ.

ಲಭ್ಯಹಸ್ತಪ್ರತಿಗಳಿಂದ ಪಾಠಾಂತರಗಳನ್ನು ಸಂಕಲಿಸಿ ಅವುಗಳನ್ನು ವಿಮರ್ಶಾದೃಷ್ಟಿಯಿಂದ ವಿಶ್ಲೇಷಿಸಿ ಪ್ರಧಾನಮಾತೃಕೆಯನ್ನು ಸಂಯೋಜಿಸಬಹುದಷ್ಟೆ. ಈ ಪಾಠವು ಸ್ವಹಸ್ತಪ್ರತಿಯ ಪಾಠಕ್ಕೆ ಸಮಾನವಾಗಿದೆಯೇ ಇಲ್ಲವೇ ಎಂಬುದನ್ನು ಹಸ್ತಪ್ರತಿಕಾರರ ಅಥವಾ ಹಸ್ತಪ್ರತಿಗಳ ಸಮರ್ಪಕವಾದ ಕಾಲಸೂಚಿ ಇಲ್ಲದಿರುವಾಗ ಹೇಳುವುದು ಸಾಧ್ಯವಿಲ್ಲ. ಪ್ರಧಾನಮಾತೃಕೆಯು ಮೂಲಪಾಠವೇ ಆಗಿರಬಹುದು ಅಥವಾ ಅದಕ್ಕಿಂತ ಸ್ವಲ್ಪ ನಂತರದ ಪಾಠವಾಗಿರಬಹುದು. ಅನಂತರದ ಪಾಠವಾಗಿದ್ದಲ್ಲಿ ಅದು ಸ್ವಹಸ್ತಪ್ರತಿಯ ಬಳಿನಕಲಾಗಿರಬಹುದು ಅಥವಾ ಲಭ್ಯಹಸ್ತಪ್ರತಿಗಳ ಸಾಕ್ಷ್ಯದಿಂದ ಪಡೆಯಬಹುದಾದ ಪ್ರಾಚೀನವಾದ ಮಧ್ಯಂತರ ಪ್ರತಿಯಾಗಿರಬಹುದು. ಒಂದು ಪಾಠಪರಂಪರೆಯ ಭಿನ್ನಶಾಖೆಗಳ ನಡುವೆಯಾಗಲೀ ಅಥವಾ ಮೂಲಕೃತಿಗೂ ಮತ್ತು ಲಭ್ಯಕೃತಿಗಳಿಗೂ ಮಧ್ಯೆಯಾಗಲೀ ಎಷ್ಟು ಬಾರಿ ಪಾಠಲೇಖನಗಳು ಜರುಗಿರಬಹುದೆಂಬುದನ್ನು ಎಲ್ಲ ಸಲವೂ ಹೇಳುವುದು ಸಾಧ್ಯವಿಲ್ಲ.

---

### ಶ್ರೀ ಎಸ್. ಜಿ. ಗೋವಿಂದರಾಜಾಖ್ಯ ವಿರಚಿತಮಪ್ಪ

# ಶ್ರೀ ರಾಮಾನುಜಸೂರಿಚರಿತಂ

### ಎಂಬ ಶ್ರೀ ಮಂಡಯಂ. ಆಜೀ. ರಾಮಾನುಜಯ್ಯಂಗಾರ್ಯರವರ

### ಜೀವನ ಚರಿತ್ರೆಯ ಸಂಗ್ರಹ

[೧] ಶ್ರೀಮುಷ್ಣಂ ನಿಜಗೇಹಮಾಗೆ ಬಲವದ್ವಿದ್ವಿಟ್ಸಮಾಕ್ರಾಂತೆಯಂ
ಭೂಮೀಕಾಂತೆಯನಂಕಮೇರಿಸಿದವಂ ಮೈಸೂರ ರಾಜನ್ಯರು
ದ್ದಾಮಾರಾಧನೆಯಿಂ ಪ್ರಸನ್ನಹೃದಯಂ ತದ್ರಾಜಧಾನೀಸ್ಥಿತಂ
ಶ್ರೀಮಚ್ಛ್ವೇತ ವರಾಹಮೂರ್ತಿ ದಯಗೆಯ್ಗೆಮ್ಮೊಳ್ ವರಾಹಂಗಳಂ[೨]

ಬಲದರ್ಪೋದ್ಧತದಾನವಾಕ್ರಮಣದಿಂ ಪಾತಾಳದೊಳ್ ಬಿಳ್ದಿಳಂ
ನಲವಿಂದೆತ್ತುತುಮೆನ್ನ ಚಿತ್ತಭವಸಂತಾಪಂಗಳಂ ತೂಳ್ದಿನಿ
ರ್ಮಳೆಯಂಮಾಡಿದಗಂಡನೀತನೆನುತುಂ ಸೌಕರ್ಯಮುಂಕಂಡುಪೊಂ
ಪುಳಿವೆತ್ತಾ ನೆಲವೆಣ್ ಜಗಜ್ಜಠರಮುಂ ಪೂರಯ್ಸುತಿರ್ಕಾವಗಂ ॥

[೩] ಶ್ರೀರಂಗನಾಯಕೀ ಮುಖ
ಸಾರಸಮಿತ್ರಂ ಸರೋಜಭವಮತಿಪಾತ್ರಂ
ಶ್ರೀರಂಗನಾಯಕಂ ಸುಖ
ಸಾರಂಗಳನೀವನಕ್ಕೆ ಸಕಲ ಜಗಕ್ಕಂ

[೪] ಶ್ರೀಯದುಗಿರಿಯೆರೆಯಂ ನಾ
ರಾಯಣನಾಜೀಕುಲಾಬ್ಜವನಕಳಹಂಸಂ
ಗಾ [೫] ಯದುಗಿರಿಪತಿರಾಮುಕ
ನೀಯಾಂಸಂಗೀವನಕ್ಕೆ ಶಾಶ್ವತಪದಮಂ

ಯದುಗಿರಿನಾಯಕಿ ಕರುಣಾ
ನಿಧಿಯಾಜೀವಂಶಮೌಕ್ತಿಕಂಗೊಲವಿಂದಾ
ಯದುಗಿರಿಪತಿರಾಮಾನುಜ
ಸುಧೀವರಂಗೀವಳಕ್ಕೆ ಪರಸಂಪದಮಂ

---

೧. ಶ್ರೀ ರಾಮಾನುಜಯ್ಯಂಗಾರ್ಯರ ಹಿಂದಿನವರು ಮೈಸೂರು ಕೋಟೆಯಲ್ಲಿರುವ ಶ್ವೇತವರಾಹಸ್ವಾಮಿ ದೇವಸ್ಥಾನದಲ್ಲಿ ಶಾನುಭೋಗರಾಗಿ ಸೇವೆ ಮಾಡುತ್ತಿದ್ದುದರಿಂದ ಈ ಪ್ರಾರ್ಥನಾಪದ್ಯ.

೨. ವರ+ಅಹಂಗಳು=ಶ್ರೇಷ್ಠ ಅಥವಾ ಉತ್ತಮವಾದ ಹಗಲುಗಳು ಅಥವಾ ದಿನಗಳು.

೩. ಗ್ರಂಥಕರ್ತನ ಊರು ಶ್ರೀರಂಗಪಟ್ಟಣವಾದ್ದರಿಂದ ಶ್ರೀ ರಂಗನಾಥನ ಪ್ರಾರ್ಥನೆ.

೪. ಶ್ರೀ ರಾಮಾನುಜಯ್ಯಂಗಾರ್ಯರ ಹಿಂದಿನವರು ಮೇಲುಕೋಟೆ (ಯದುಗಿರಿ)ಯ ಪರಮಭಕ್ತರಾದ ರಿಂದ ಶ್ರೀ ನಾರಾಯಣನ ಪ್ರಾರ್ಥನೆ.

೫. ಶ್ರೀ ರಾಮಾನುಜಯ್ಯಂಗಾರ್ಯರ ಧರ್ಮಪತ್ನಿ ಯದುಗಿರಿಯಮ್ಮ ಎಂಬುದಾಗಿ.

ಎಸೆವಾ ದುಂದುಭಿನಾಮುಸಂವತ್ಸರದೊಳಾಜೀವಂಶ ಮುಕ್ತಾಫಲ
ಪ್ರಸವಾಗಾರನ ವೇಂಕಟಾರ್ಯನ ಗೃಹೋದ್ಧದ್ದೇಶದೊಳ್ಪುಟ್ಟಿದಂ
ನಿಸದಂ ಶ್ರಾವಣಕೃಷ್ಣದಷ್ಟಮಿಯೊಳಾ ಶ್ರೀರೋಹಿಣೀತಾರೆಯೊಳ್
ವಸುದೇವಾಲಯದಲ್ಲಿ ಕೃಷ್ಣನವೊಲೀರಾಮಾನುಜಂ ಬಾಲಕಂ ॥

ಈತಂ ಮೂವರ್ ಸೋದರರೊಳ್ ಕಿರಿಯನಾಗಿಯುಂ ಗುಣದಿಂ ಪಿರಿಯನಾಗಿಯುಂ, ಕೃಷ್ಣಜನ್ಮದಿನದೊಳವತರಿಸಿಯುಂ ಶುಕ್ಲವರ್ಣನುಂ, ಕೃಷ್ಣನಂತೆ ರಾಮಾನುಜನುಮಾಗಿ, ಬಾಲ ಲೀಲೆಯಿಂ ಪೆತ್ತರಚಿತ್ತಕಾನಂದಮಂ ಸೂಸುತ್ತುಂ ಬಳೆದು, ಶೈಶವಮನೊತ್ತರಿಸಿ ಬಾಲ್ಯದೊಳ್ ಪದಮನಿರಿಸಲೊಡಂ.

ಖ್ಯಾತಶ್ರೀಪೆರಿಯಸ್ವಾ
ಮಿಾತಿರುಮಲೆಯಾರ್ಯರಿಂದೆ ಸಂಸ್ಕೃತಭಾಷಾ
ರೀತಿಯನರಿದಂ ಕನ್ನಡ
ದಾತಿರುಳಂ ತಾಯ ಮೊಲೆಯಪಾಲೊಡನುಂಡಂ ॥

ಪ್ರಬಲತೆಯಾಂತಿರ್ದಾಂಗ್ಲೀ
ಯಭಾಷೆಯಂ ಚೆನ್ನಪುರದೆ೧ ಮೈಸೂರೊಳಮೊ
ಪ್ಪೆಭರಿಸಿ ಶಿತಮತಿಯಿವನಾಂ
ಗ್ಲಭಾಷೆಯೊಳಮೇಳ್ಗೆವೆತ್ತಿ ಪಂಡಿತನಾದಂ ॥

ಭಾಷಾಶಾಸ್ತ್ರಂಭೌತವಿ
ಶೇಷರಸಾಯನಸುಶಾಸ್ತ್ರಭೌಮಚರಿತ್ರಾ
ಭ್ಯಾಸಂಗೆಯ್ದುಂಗಡಮಿ
ನ್ನೇಸೈಪೋಗಣಿತಶಾಸ್ತ್ರಪರಿಣಿತನಾದಂ ॥

ನಿಶಿತಪ್ರಜ್ಞಂಗೀಗಣಿ
ತಶಾಸ್ತ್ರವಿಜ್ಞಂಗೆ ವಾಸ್ತುಮುಖ ಶಿಲ್ಪಕಳಾ೨
ಕುಶಲಶ್ರೀಯುಂ ಕೊನರಿಸೆರಾ
ಜಶಾಸಕರ್ ಛಾತ್ರವೇತನಮನೊಸೆದಿತ್ತರ್ ॥

ಕನ್ನಡಿಗರ ಸೈಪುಂ ಮೇಣ್
ಕನ್ನಡನಾಡೊಂದು ಪುಣ್ಯಮುಂ ನುಡಿವೆನ್ನೊಂ
ದುನ್ನತಸೌಭಾಗ್ಯಮುಮಿಾ
ಬಿನ್ನಣಿಗನ ಶಿಲ್ಪವಿದ್ಯೆಗೊಡರಿಸಿತೆಡರಂ ॥

ಅಧಿಕೃತಿಯಂ ಸಂಪತ್ತುಂ
ವಿಧಿವಶದಿಂದವನಧೀನಮಪ್ಪವೊಲಿರ್ದುಂ
ಮುಧೆಯಾದುವು ಮುಂದೊದವುವ
ಸುಧವಳಕೀರ್ತಿಪ್ರರೋಹಕೀನವೊಲೆಡೆಯಂ ॥

---

೧. ಇಂಜನೀಯರಿಂಗ್

೨. ಮದರಾಸು

೧ ದ್ರಮಿಡಾಮ್ನಾಯಮುಮಂ ವೇ
ದಮಾರ್ಗಮಂ ಭಕ್ತಿಯಿಂದಮಾಚಾರ್ಯಪದಾ
ಬ್ಜಮನಾಶ್ರಯಿಸುತೆತಿಳಿದು
ತ್ತಮಿಕೆಯನಾಂತಿವನದೊರೆಗೆ ಬರ್ಪರುಮೊಳರೇ ॥

ಧನಸಂಗ್ರಹಮಂ ಚೈರಂ
ತನಮುನದಿಂ ಮಾಡಿ ತದ್ವ್ಯಯೋಪಚಯಕ್ಕಾ
ವನುಮೀತಂಗೆಣೆಯಿಲ್ಲೆಂ
ದೆನಿಪಂದದಿ ಜಾಣ್ಮೆದೋರಿದಂ ಸುಕೃತಿಯಿವಂ ॥

ಗೃಹಶಿಲ್ಪಜ್ಞತೆ ಚಿತ್ರವಿದ್ಯೆಯೆಸಕಂ ಗಾಂಧರ್ವವಿಜ್ಞಾನಮು
ದ್ಗೃಹಟದ್ರತ್ನವಿಮರ್ಶೆ ದಿವ್ಯಕವಿತಾಚಾತುರ್ಯಮಾರೂಪ್ಯವಿ
ಗ್ರಹ ನಿರ್ಮಾಪಕಶಕ್ತಿಯುಂದ್ವಿತಯವೇದಾಂತಾರ್ಥರಾಸಿಕ್ಯಮುಂ
ಸಹಜಂರಾಮಕನೀಯನೊಳ್ ಮೆರೆದುವೇಂ ವಿಜ್ಞಾನಿಯೋ ಜಾಣನೋ ॥

ಇನಿತುಂ ಬಿನ್ನಣಮುಪಪ
ತ್ತಿನಿಪಾಂತಂ ತನ್ನೊಳಿರ್ದೊಡಂ ಸೌಜನ್ಯಂ
ವಿನಯಂ ನಿರಹಂಯುತೆಗೆಡೆ
ಯೆನಿಸಿದಿವಂಗೆಣೆಯದಾವನಿನ್ನುಂ ಮುನ್ನುಂ ॥

ಈ ಪರಿಯಿಂದೆಳೆವರೆಯದೊಳೆ ಸಕಳ ವಿದ್ಯಾವಿಶಾರದನುಂ, ಗುಣಪರಿಪೂರ್ಣನುಮೆನಿಸಿ ನೆಗಳ್ತೆವಡೆದ ರಾಮಾನುಜಾಚಾರ್ಯಂಗಾಗಡಿನ ಪರಿಸ್ಥಿತಿಗೆ ತಕ್ಕಂತೆ ಊನಷೋಡಶವರ್ಷದೊಳೆ ವಿವಾಹಂಗೆಯ್ಯಲೆಳಸಿ ನಿಜಾನ್ವಯವಿಶುದ್ಧತೆಗಂ, ಸದಾಚಾರಕ್ಕಂ ತಕ್ಕಂತಾಭಿಜಾತ್ಯಮಂ, ಸದಾಚಾರಮುಮನಾಂತ ಭಾರದ್ವಾಜಗೋತ್ರದ ನೃಸಿಂಹಾಚಾರ್ಯರೆಂಬ ಮಹನೀಯರ ಪಿರಿಯಕುವರಿಯಂ ಗುಣದಿಂ ಪಿರಿಯಳಂ ತಂದೀತನ ಪಿತಂ

ಗುಣದಿಂ ರೂಪಿಂ ಶೀಲದಿ
ನೆಣೆಯಿಾತಂಗೆನಿಪ ಕನ್ಯೆಯಂ ಯದುಗಿರಿಯಂ
ಪೆಣೆದಂ ಮದುವೆಯೊಳಗೆ ಕುಂ
ದಣದೊಳ್ ಬೆಸೆದಂತನರ್ಘರತ್ನಮನೊಂದಂ ॥

ಇಂತು ತನಗನುರೂಪೆಯೆನಿಪ್ಪ ಕನ್ಯಾರತ್ನಂ ದೊರೆಯಲೊಡಂ ಕಿರುವೆರೆಯದ ಕುಮಾರ ರಾಮಾನುಜಂ ಧರ್ಮದ ಕಟ್ಟಿಂ ಮಿಾರದಂತವಳೊಡವೆರೆದು ಸಂಸೃತಿಸುಖವನನುಭವಿಸುತ್ತುಂ ತಂದೆಯ ಪೊರೆಯೊಳಿರೆ, ತಾಯ್ತುಂದೆವಿರಿಂ ಸುಶಿಕ್ಷಿತೆಯಾದೀಕೆನ್ನ ಮಾವನ ಮನೆಯೊಳ್ ಗೃಹಕಾರ್ಯಮಂ ಜಾಣ್ಮೆಯಿಂ ನಿರ್ವಹಿಸುತ್ತೆಯತ್ತೆಮಾವಂದಿರೊಳಂ, ಗುರುಜನದೊಳಂ ಭಕ್ತಿಯ ನೋರಗಿತಿಯರೊಳ್ ನೇಹಮನಿನಿಯನೊಳಕ್ಕರಂ ತೋರುತ್ತುಮೆಲ್ಲರ ಮೆಚ್ಚಿಂಗಂ ಪಾತ್ರಮಾಗಿ ಸೊಗಂ ಬಾಳುತಿರ್ದಳ್ ಅನಿತರೊಳ್

ಆ ಮಹಿಶೂರ ಪತ್ತನದೊಳೊಪ್ಪುವ ವೆಸ್ಲಿಯ ಪಾಠಶಾಲೆಯು
ದ್ದಾಮದ ಬೋಧಕತ್ವಮುಮರಲ್ ಪಿತೃಮಂದಿರದಿಂ ಸ್ವತಂತ್ರಮ
ಪ್ಪಾಮನೆ ಮಾಡಿ ತನ್ನ ಗೃಹಿಣೀಸಹಿತಂ ಬಹುಶಾಸ್ತ್ರಪಾಠಪೂ
ಜಾಮಹಿತಾತ್ಮಚಿಂತೆಯೊಳೆ ನೂಂಕುತುಮಿರ್ದನತೀವಕಾಲಮಂ ॥

೧. ದ್ರಮಿಡಾಮ್ನಾಯ=ದ್ರಾವಿಡವೇದ=ತಮಿಳು ಆಳ್ವಾರ್ ಪ್ರಬಂಧಗಳು.

ಇಂತಿರುತುಂ ತಾನೋದಿದ
ನಂತ ವಿಚಾರಂಗಳಂ ಕರಂ ಕನ್ನಡದಿಂ
ಸಂತರರಿವಂತೆಯೊಳವುರು
ಳಂ ತಿಳಿವಂದದೊಳ್ ಬರೆಯಲುದ್ಯೋಗಿಸಿದಂ ||

"ಆರ್ಯಮತ ಸಂಜೀವಿನೀ" ಎಂಬ ಮಾಸಪತ್ರಿಕೆಯಂ ಪ್ರಕಟಿಸಲನುಗೆಯ್ದುದರೊಳ್ ದ್ರಾವಿಡ ವೇದಾಂತಗ್ರಂಥಂಗಳಂ, ಸಂಸ್ಕೃತಶಾಸ್ತ್ರಗ್ರಂಥಂಗಳಂ ಸುಲಲಿತಮಪ್ಪ ಕನ್ನಡ ನುಡಿಗಳಿಂ ಬರೆದು, ಬರೆಯಿಸಿ, ಪ್ರಕಟಂಗೆಯ್ದು ಸಮಸ್ತಾಸ್ತಿಕ ಜನಂಗಳ್ಗಮುಪಕಾರಕ ನಾಗಿರ್ದಂ. 'ಶ್ರೇಯಾಂಸಿ ಬಹುವಿಘ್ನಾನಿ' ಎಂಬಂತಿವಂ ಕೆಯ್ಕೊಂಡನಲ್ಗಜ್ಜಂ ಕಾರಣಾಂತರದಿಂ ನಡೆಗೆಟ್ಟು ನಿಂದುದು ಆದೊಡಮಿವನೆರ್ದೆಗಿಡದೆ

ಶ್ರೀಮದ್ಗೌತಮಗೋತ್ರಜಾತನಳಸಿಂಗ್ರಾಚಾರ್ಯಪುತ್ರಂಗುಣಾ
ರಾಮಂ ಶ್ರೀ ನರಸಿಂಹಸೂರಿ೧ ಕೆಳೆಯಂ ತಾನಾಗಿರಲ್ಕಾತನು
ದ್ದಾಮಪ್ರೌಢಿಮೆಯಂ ನೆರಂಬಡೆಯುತುಂ ಕರ್ಣಾಟಗದ್ಯೋಕ್ತಿಯಿಂ
ದಾಮಾಭಾರತದಾದ್ಯಪರ್ವಯುಗ೨ ಮುಂಗೆಯ್ದಂ ಮಹೋತ್ಸಾಹದಿಂ ||

ಅನಿತರೊಳೆ ವಿರಮಿಸದೆ ಕನ್ನಡನಾಡೊಳಿರ್ಪ ಜೈನ, ಬ್ರಾಹ್ಮಣ, ವೀರಶೈವ ಕವೀಶ್ವರ ರಚಿತ ಪುರಾತನೋತ್ತಮ ಕಾವ್ಯನಾಟಕಾದಿ ಗ್ರಂಥಗಳಂ ಸಂಗ್ರಹಿಸಿ ಪ್ರಕಟಂಗೆಯ್ದು ಕನ್ನಡ ನುಡಿವೆಣ್ಗೆ ಬಣ್ಣಮೇರಿಸಲೆಂದು ತರಿಸಂದು, ತನ್ನೊಳ್ಗೆಳೆಯನುಂ, ಕುಶಾಗ್ರಮತಿಯುಂ, ಕರ್ಣಾಟಗದ್ಯಪದ್ಯನಿರ್ಮಾಣಧುರೀಣನುಂ, ಸರಸ ಕವಿತಾರಸಾಸ್ವಾದಲೋಲುಪನುಮೆನಿಪ ನರಸಿಂಹಾಚಾರ್ಯನೊಳಾಲೋಚಿಸಿ ತಮ್ಮಂತೀಕಾರ್ಯದೊಳುತ್ಸಾಹಂಗೊಂಡ ಕೆಳೆಯ ರಿರ್ವರಂ ನೆರಂಗೊಂಡು

ಪುಳುಗಳ ಬೋನಮಾಗಿಯಿಲಿಗಳ್ ಕಡಿದುಂ ಪುಡಿಯಾಗಿ ಮುಗ್ಗಿಕೆ
ಟ್ಟಳಿದುಳಿದಿರ್ದ ಕನ್ನಡದ ಕಬ್ಬಿಗರಗ್ಗದ ಕಾವ್ಯಮಾಲೆಯಂ
ಗಳಿಸಿಯವಂ ಪರಿಷ್ಕರಿಸಿ ಮುದ್ರಿಸಿ ಕನ್ನಡಬಾಸೆವೆಣ್ಣನು
ಜ್ಜಳಿಸಿದ ಕೀರ್ತಿಗಿಂತಿವರ ಮಾಳ್ಕೆಯೊಳಾವನೊನೋಂತನುರ್ವಿಯೊಳ್ || ೩

ಇವರ್ಗಳ ಪಿರಿದುತ್ಸುಕತೆಯ
ನಿವರ್ಗಳಸಾಹಸವನಿವರ್ಗಳ ಸಹಾಯತೆಯಂ
ವಿವರಿಸಿ ಬಣ್ಣಿಸಿನಲಿದಂ
ವಿವಿಧಕಲಾಭಿಜ್ಞನೆನಿಪ "ರೈಸ್ಸು"೪ ಗುಣಜ್ಞಂ ||

ಇಂತು ಪಲವುಂಬರಿಸಂಬರಂ ಪುಸ್ತಕಂಗಳಂ ಪ್ರಕಟಿಸಿ ಧನಸಹಾಯಮುಂ, ಜನ ಸಹಾಯಮುಂ, ವಿದ್ವಜ್ಜನ ಪ್ರೋತ್ಸಾಹಮುಮಿಲ್ಲದೀಯುದ್ಯಮುಂ೫ ಕಲ್ನೆಲನನುಳ್ತಂತೆಯುಂ,

---

೧. ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರು.

೨. ಮಹಾಭಾರತದ ಆದಿಪರ್ವ, ಸಭಾಪರ್ವಗಳು.

೩. ಮೊದಲು 'ಕರ್ನಾಟಕ ಕಾವ್ಯಮಂಜರಿ' ಎಂಬ ಹೆಸರಿನ ಮಾಸಪತ್ರಿಕೆಯಲ್ಲಿ ಈ ಗ್ರಂಥಗಳನ್ನು ಭಾಗಶಃ ಪ್ರಕಟಿಸುತ್ತ ನಂತರ 'ಕರ್ನಾಟಕ ಕಾವ್ಯ ಕಲಾನಿಧಿ' ಎಂಬ ಹೆಸರಿನಿಂದ ಪುಸ್ತಕಗಳನ್ನು ಪ್ರಕಟಿಸಿದರು.

೪. Rev. Rice.

೫. ಅದು ಕನ್ನಡವೇ ಎಂದು ಜನ ಮೂಗು ಮುರಿಯುತ್ತಿದ್ದ ಕಾಲ.

ಪಾಳ್ಬಾವಿಗೆ ನೀರನಡಕಿದಂತೆಯುಂ ವಿಫಲಮಪ್ಪುದೆಂದರಿದು ತತ್ಸಮಯದೊಳ್ ವಿದ್ಯಾಶಾಖಾ ಸೂತ್ರಮಂ ಕೊಂಡು, ವಿದ್ಯಾಭಿಮಾನಿಯಾಗಿರ್ದ[೧] ಭಾಭಾ ಮಹಾಶಯನ ನೆರವಂ ಬೇಡ ಲೆಂದು ನೃಸಿಂಹಾಚಾರ್ಯನಂ ಪ್ರೋತ್ಸಾಹಿಸಲವನಂತೆಗೆಯ್ಯಲೊಡಂ

ಪ್ರಾಜ್ಞಂ ಭಾಭನಿವರ್ಗಳ
ವಿಜ್ಞಾಪನೆಗೇಳ್ದು ತಕ್ಕವರ್ಷಾಶನಮಂ
ಸುಜ್ಞಪ್ತಿಯಿಂದೆಕೊಟ್ಟುಚಿ
ತಜ್ಞಂ ಕನ್ನಡದ ನುಡಿಗೆ ಕಳೆಯೇರಿಸಿದಂ ॥

ಇದರಿಂದುತ್ತಮ ಕಾವ್ಯನಾಟಕಾಲಂಕಾರಚ್ಛಂದೋ ನಿಘಂಟ್ವಾದಿಗ್ರಂಥಗಳ್ ಪ್ರಕಾಶಿತ ಮಾಗೆ, ಕನ್ನಡ ನುಡಿಯಿಂಪುಂ ಪೆಂಪುಂ ಕನ್ನಡ ನಾಡೊಳಗಂ, ಪೊರಗುಮಿರ್ಪ ಕನ್ನಡಿಗರ ಮನಮಂ ಸೂರೆಗೊಂಡು ಜನತೆಯೊಳಪೂರ್ವಮುತ್ಸಾಹಮಂ ಪುಟ್ಟಿಸಿದವು.

ಈ ಗ್ರಂಥಂಗಳಂ ಕನ್ನಡ ನಾಡಿನ ಸಕಲ ವಿದ್ಯಾಪೀಠಂಗಳುಂ, ವಿದ್ವತ್ಪರೀಕ್ಷೆಗಳ್ಗೆ ಪಠ್ಯ ಪುಸ್ತಕಂಗಳಾಗಿ ನಿಯಮಿಸಿಯೀಮಹನೀಯರುದ್ಯೋಗಕ್ಕೆ ಪ್ರೋತ್ಸಾಹಮಂ ನೀಡಿದುವು. ಇವರ್ ಕೊಂಡ ಕಜ್ಜಂ ಫಲೋನ್ಮುಖಮಪ್ಪ ಸಮಯದೊಳ್ ಮುಗಿಲಿಲ್ಲದ ಗಗನದಿಂ ಬರಸಿಡಿಲೆರಗಿದಂತೆ ರಾಮಾನುಜಾಚಾರ್ಯನೊಳ್ಗೆಳೆಯಂ, ಕುಶಾಗ್ರಮತಿಯುಂ, ಕರ್ಣಾಟಕವಿತಾರಸಾಸ್ವಾದ ಲೋಲುಪನುಂ, ಕವಿತಾವಧೂಟೀವರನುಮಪ್ಪ ನರಸಿಂಹಾಚಾರ್ಯಂ ಪರಾಸುವಾಗಲೊಡಂ ಕನ್ನಡಬಾಣಿ ಶೋಕಭಾರದಿಂ ಕುಗ್ಗಿದಳ್; ಕಂದಿಕುಂದಿದಳ್. ಕನ್ನಡಿಗರುಂ ಮುಂದು ಗಾಣದೆ ಕಣ್ಗೆಟ್ಟರ್. ಗ್ರಂಥ ಪ್ರಕಟನೋದ್ಯಮದೊಳ್ ತನಗೆ ದಕ್ಷಿಣಭುಜದಂತಿರ್ದೀ ವಿದ್ವದ್ವ ರನಕಾಲದೊಳ್ ಕಾಲಾಧೀನಮಾಗೆ ರಾಮಾನುಜಾಚಾರ್ಯನುತ್ಸಾಹಮುಮುತ್ಸಾರಿತ ಮಾದುದು. ಆದೊಡಂ 'ಪ್ರಾರಬ್ಧಮುತ್ತಮಗುಣಾಃ ನಪರಿತ್ಯಜಂತಿ' ಎಂಬ ಲೋಕೋಕ್ತಿ ಯಂತೆ ಪಿಡಿದ ಕಜ್ಜಕೆಡರಡಸಿದೊಡಮಿಾಯುತ್ತಮಗುಣಂ ಬಹುಕಷ್ಟದಿಂ ನಡೆಯಿಸುತಿರ್ದಂ.

ನಿಸದಂ ಕರ್ಣಾಟಭಾಷಾರಸಿಕನೆನಿಪ ರಾಮಾನುಜಾಚಾರ್ಯ ಸಂಬಂ
ಧಸಹಾವಾಸಂಗಳಿಂದಾತನಸುತೆ ಗೃಹಿಣೀಪುತ್ರಪೌತ್ರೀಜನಂಗಳ್
ರಸವತ್ಕಾವ್ಯವಿಜ್ಞರ್ ಸಹಕರಿಸಿದರುದ್ಯದ್ವಚಸ್ಸೇವೆಯೊಳ್ ಸಂ
ತಸದಿಂದಂತಾಮೆನಲ್ ಸಜ್ಜನರೆಡೆಯೊಳಿರಲ್ಕಾಗದಾಕಜ್ಜಮುಂಟೇ ॥

ಇಂತು ಬೋಧಕನಾಗಿರುತಿರ್ದ ವೆಸ್ಲಿಯನ್ ಪಾಠಶಾಲಾಧಿಕಾರಿಗಳ್ ದ್ರವ್ಯಾಭಾವದಿಂ ಬಹುದಿನಂ ಕಾರ್ಯಗೆಯ್ಯುತಿರ್ದ ಪಳೆಯಕಾಲದುಪಾಧ್ಯಾಯರಂ ವಿರಮಿಸಲೆಂದು ಪೇಳ್ದು ಯಥಾ ಕಿಂಚಿತ್ ಪಾರಿತೋಷಕರೂಪಮಾಗಿ ಧನಮಂ ಕೊಟ್ಟು ಕಳುಪಿದರ್. ಅವರೊಳ್ ರಾಮಾ ನುಜಾರ್ಯನುಮೊರ್ವನಾದಂ. ಇಂತನಿಮಿತ್ತಮಾಗಿ ತನ್ನ ಜೀವನದ ಕಾರ್ಯಂ ದೂರಮಾಗೆ ರಾಮಾನುಜಾಚಾರ್ಯಂ ಮಿತ್ರವಿಯೋಗದಿಂದೆಯುಂ, ವೃತ್ತಿವಿಯೋಗದಿಂದೆಯುಮಭಿಭೂತ ನಾಗಿ ಮನಮಂ ಚಿಂತೆಗೆ ಮಾರಿ ಕಿಂಕರ್ತವ್ಯತಾಮೂಢನಾಗಿರೆಯಿವನ ಪಾಂಡಿತ್ಯಮಂ, ಈ ಗಣ ನಿಲುಮೆಯುಮುಮರಿತು ವಿದ್ಯಾಶಾಲಾಬೋಧಕತ್ವಮಂ ನೃಸಿಂಹಾಚಾರ್ಯನಳಿವಿಂ ರಾಜ್ಯಾಂಗ ದೊಳ್ ತೆರಪಾಗಿರ್ದ ಕರ್ಣಾಟಭಾಷಾಪರಿವರ್ತನಕಾರ್ಯಮುಮಿವಂಗಮರ್ಚಲೆಂದು ತತ್ಪತ್ನೀ

---

೧. ಹಲವರಿಗೆ ಹಲವಾರು ರೀತಿ ಸಹಾಯಮಾಡಿ ಪ್ರೋತ್ಸಾಹಿಸಿದ ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರ್ ಆಗಿದ್ದ ಶ್ರೀ ಭಾಭಾ ಅವರು.

ಮಾತುಲನಪ್ಪ ಶ್ರೀ ವಾಸಾಚಾರ್ಯನೆಂಬ[೧] ಮಹಾಭಾಗಂ, ಭಾಭಾಮಹಾಶಯಂಗೆ ಸಹಾಯಾಧಿಕಾರಿಯಾಗಿರ್ದ ದಯಾಮಯನುಂ, ವಿದ್ವದಭಿಮಾನಿಯುಂ, ವಿದ್ವದ್ವರನುಂ, ಸುಹೃತ್ತಮನುಂ, ನ್ಯಾಯಪಕ್ಷಪಾತಿಯುಮೆನಿಪ ವಾಸುದೇವಾರ್ಯನೆಂಬ[೨] ಪುಣ್ಯನಾಮನೊಳೀ ವಿಷಯಮಂ ಪ್ರಸ್ತಾಪಿಸಲಾಮಹಾಸುಭಾರನದಂ ಭಾಭಾಮಹಾಶಯನೊಳ್ ನಿವೇದಿಸೆ.

ಈತಂ ಮಧ್ಯವಯಸ್ಕನುತ್ತಮಪರೀಕ್ಷಾಪತ್ರಮೇನೊಂದುಮಿ
ಲ್ಲೀತಂ ನೂತನನೆಂತುದೇಶದುರುವಿದ್ಯಾಶಾಲೆಯಾದ್ಯೋಗಮಿ
ನ್ನೀತಂಗಾದಪುದೆಂದು ಶಂಕಿತಮಹಾಭಾಗಂಗೆ ಸಪ್ರತ್ಯಯಂ
ಪ್ರಾತಶ್ಚಿಂತ್ಯಸುಪುಣ್ಯನಾಮನೊರೆದಂ ಶ್ರೀವಾಸುದೇವಾಭಿದಂ ॥

ನುಡಿದಿಟಮಾದುದಾದೊಡಮಿವಂ ಬಹುಕಾಲದ ಪಿಂತಣಿಂದೆ ಕ
ನ್ನಡನುಡಿಯೇಳ್ಗೆಗಾಗಿ ದುಡಿದಿರ್ದಪನೀತನ ಮಾಳ್ಕೆಯಿಂದೆ ಕ
ನ್ನಡನುಡಿಜಾಣರಿಲ್ಲಿವನನೊಂದು ವಿಶೇಷಣವಿಧಾನದಿಂದಣಂ
ನಡುವುದು ಬೋಧನಾಲಯದೆಸೂಕ್ತಮೆನುತ್ತೊರೆದಂ ಮಹಾಶಯಂ ॥

ಇಂತೊರೆದ ಶ್ರೀ ವಾಸುದೇವಾರ್ಯನಮತಂ ತನಗಭಿಮತವಾಗೆ, ಮಹಾಮಹಿಮನೆನಿಪ ಭಾಭನಂದಿನಮಾತ್ಯವರನೊಳಾಲೋಚಿಸಿ, ತನ್ನುದ್ದೇಶಕ್ಕೆಡರಡಸದಂತೆ ಸಕಾರಣಂ ತನ್ನ ಸಂಕಲ್ಪಮನಾತನ ಮುಂದಿಡಲೊಡಮಾಧೀಸಚಿವನತೀವವಾದ ವಿವಾದಾನಂತರಂ ಮನಮಿಲ್ಲದ ಮನದಿಂದನುಮೋದಿಸಿದಂ.

ಈತನ ಪೂರ್ವಪುಣ್ಯತರುವಂಕುರಮಾದುದು ಶ್ರೀನಿವಾಸವಾ
ಗ್ವಾತದೆ ವಾಸುದೇವಬುಧಸಾಹ್ಯದೆ ಪಲ್ಲವಿಸಿತ್ತು ಪೂತುದಾ
ಖ್ಯಾತನೆನಿಪ್ಪ ಭಾಭನ ಮಹಾಶಯದಿಂದಮಮಾತ್ಯನೊಪ್ಪೆತಾಂ
ಕಾತುದು ಪಣ್ತುದೆಂದೊಡದನೇವೊಗಳ್ವೆಂ ಸುಕೃತಪ್ರಭಾವಮಂ

ಶ್ರೀವಾಸುದೇವರಾಯ
ಶ್ರೀವಾಸಾರ್ಯರಬಹುಪ್ರಯತ್ನದಿನೀರಾ
ಮಾವರಜಂ ಕ ವಿದ್ಯಾಶಾ
ಖಾವನಿತಾಶಾಲೆಯಲ್ಲಿಯೊವಜನೆ ಆದಂ ॥

ಭಾರತ ರಾಮಾಯಣಗಳ
ಸಾರಮನುರೆ ತಾಯ್ವಿರೊಲ್ದು ಮಕ್ಕಳಿಗೆಲ್ಲಂ
ಆರಯ್ದು ಪೇಳ್ವ ತೆರನಂ
ಚಾರುಸತೀಪದಮನುರದೆ ಬೋಧಿಸಿದನಿವಂ ॥

ಕನ್ನಡ ಬಾಣಿಯಮೊಲೆವಾ
ಲನ್ನೆಟ್ಟನೆ ಸವಿಸಿಯವಳೊಳೆರಕಮಂ ಪುಟ್ಟಿಸುತು
ತ್ಪನ್ನಮತಿಯಾಕೆಯುಳಿಗ
ಮುನ್ನಿಸದಂಗೆಯ್ವತೆರದೆ ಬಾಲೆಯರ್ಗೊರೆದಂ।

---

೧. 'ರಾಜಾಮಲಯಸಿಂಹ'ವನ್ನು ಬರೆದ ಎಂ. ಎ. ಶ್ರೀನಿವಾಸಾಚಾರ್ಯರು.
೨. ಕೀರ್ತಿಶೇಷ ಚ. ವಾಸುದೇವಯ್ಯನವರು.
೩. ಮಹಾರಾಣಿ ಕಾಲೇಜಿನಲ್ಲಿ ಕನ್ನಡ ಶಿಕ್ಷಕರಾದರು.

ಇಂತು ಬೋಧಕ ವೃತ್ತಿಯೊಳ್ ಕೆಲವಾನುಂ ಬರಿಸವಿರ್ದು, ನಿಜಶಿಷ್ಯಜನಹೃತ್ತಾಪಹಾರಿಯಪ್ಪಂತೆ ಪಾಠಂಗಳನೋದಿಸುತ್ತುಂ, ತದ್ವಿದ್ಯಾಶಾಲಾದಿ ಕಾರಿಗಳ್ಗಂ, ವಿದ್ಯಾಪ್ರಧಾನಾಧಿಕಾರಿಗ್ಗಳಂ ಸಂತಸಮನುಂಟುಮಾಡೆ, ಅವರ್ ವಿದ್ಯಾಶಾಖೆಯ ಕರ್ಣಾಟಪರಿವರ್ತನೋದ್ಯೋಗಮಂ ನಿರ್ವಹಿಸಲೆಂದೀತನಂ ನಿಯೋಜಿಸಿದರ್. ಆ ಸಮಯದೊಳೀತಂ ವಿದ್ಯಾರ್ಥಿಜನೋಪಯೋಗಿಗಳಪ್ಪ ಪಲವುಂ ಪುಸ್ತಕಂಗಳಂ ಬರೆದುಂ, ತಿರ್ದಿಯುಂ, ಪ್ರಕಟಿಸಿಯುಂ, ಧಾರವಾಡದ ವಿದ್ಯಾವರ್ಧಕಸಂಘಮೆಂಬ ವಿದ್ವನ್ಮಂಡಲಿಯೊಳ್ 'ಕವಿಕಾರ್ಯ ಪ್ರಶಂಸೆ' ಎಂಬ ವಿಷಯಮನಧಿಕರಿಸಿ ನಿರರ್ಗಳಮಾದ ವಾಣಿಯಿಂ ಪ್ರೌಢೋಪನ್ಯಾಸಂಗೆಯ್ದುಂ ಕೀರ್ತಿವಂತನಾದಂ. ಮತ್ತಂ ಮಹಿಳಾಶಾಲೆಯೊಳ್ ಕರ್ನಾಟಕಭಾಷಾಚಾರ್ಯನಾಗಿ ಛಾತ್ರಜನಚಿತ್ತಕಾನಂದಮನುಂಟು ಮಾಡುತುಂ, ಪಳಗಾಲದ ಕನ್ನಡಕಬ್ಬಂಗಳಂ ಪ್ರಕಟಿಸುತ್ತುಂ ನುಡಿಗಂ, ನಾಡಿಂಗಮಮೋಘಮಪ್ಪಸೇವೆಯಂ ಸಲಿಸುತ್ತಿರ್ದಂ. ಗ್ರಂಥಪ್ರಕಟಣೆಯ ಕಜ್ಜಕೆಯ್ದೆಸಲುತಿರ್ದ ವರ್ಷಾಶನಂ ಭಾಷಾಭಿಮಾನರಹಿತರೆನಿಪಧಿಕಾರಿಗಳಿಂದಂತರ್ಹಿತಮಾದುದು. ವಯಃಪರಿಣಿತಿಯಾದುದರಿಂದೀತನಧ್ಯಾಪಕೋದ್ಯೋಗದಿಂದೆಯುಂ, ಪ್ರಕಟಣೋದ್ಯೋಗದಿಂದೆಯುಂ ವಿರಮಿಸಿ ಭಗವದ್ಭಾಗತಸಪರ್ಯೆಯೊಳಂ, ಪುರಾಣೇತಿಹಾಸ ಪಾರಾಯಣದೊಳಂ, ಸರಸಕಾವ್ಯರಸಾಸ್ವದನೆಯೊಳಂ, ಹಿತಮಿತ್ರಗೋಷ್ಠೀಚಾಟುವಾದನದೊಳಂ ಕಾಲಮಂ ನೂಂಕುತಿರ್ದಂ, ಬಹುಕಾರ್ಯನಿರತನೆನಿಸಿಯುಮಿವಂ ಸರಸಮುಂ, ಸರಳಮುಪ್ಪ ಕನ್ನಡದಿನಿವಾತುಗಳಿಂ 'ಕವಿಸಮಯಮಂ,' 'ಬಾಗಿಲುಭದ್ರಂ,' 'ಸುವ್ರತಂ,' 'ಪ್ರಬಂಧಾವಳೀ,' 'ಪ್ರಮಾಣಪ್ರಮೇಯವಿವೇಕಂ' ಎಂಬ ಮಾಲಿಕೆಯಂ, ಸಹೃದಯ ಹೃದಯಧಾರ್ಯಮಪ್ಪಂತಿರೆ ಗ್ರಥಿಸಿಯಶೇಷ ಕರ್ಣಾಟಕಜನಗೀತಕೀರ್ತಿಯನಾಂತಂ

ಈ ತೆರದಿಂದಿವಂ ಜನೋಪಕಾರಕಾರ್ಯಭಾರದಿಂ ವಿರತನಾಗಿ ವಿಶ್ರಾಂತಿಸುಖಮನನುಭವಿಸುತ್ತಿರ್ಪಿನಂ

ಶ್ರೀಮನ್ನಾಲ್ವಡೀಕೃಷ್ಣಮಹೀಶಂ ಪಟ್ಟಾಭಿಷಿಕ್ತನಾದಂದಿನಿಂ ದೇಶಸಂಚಾರಕಾಲದೊಳಂ, ಮಿಕ್ಕಕಾಲದೊಳಂ, ಪ್ರಜಾವರ್ಗಕ್ಕೆದಯೆಗೆಯ್ದ ವೃತ್ತಾಂತಗಳನಾಂಗ್ಲಭಾಷೆಯೊಳ್ ಪುಸ್ತಕರೂಪದಿಂ ಪ್ರಕಟವಾಗಿರ್ಪುವು; ಅವಂ ಆಂಗ್ಲಭಾಷೆಯ ಪರಿಚಯಮಿಲ್ಲದ ಪ್ರಜೆಗಳೆಲ್ಲರುಂ ತಿಳಿದಾನಂದಿಸುಗೆಂಬುದಾರ ಹೃದಯದಿಂ ಕನ್ನಡನುಡಿಯೊಳ್ ಬರೆಯಿಸಲೆಳಸಿ, ಉಭಯಸಾಹಿತ್ಯದೊಳು ರಾಮಾನುಜಾಚಾರ್ಯಂ ಪ್ರವೀಣನಕ್ಕುಮೆಂದು ಕೇಳ್ದು ತತ್ಕಾರ್ಯಮನವಂಗೆ ಕೃಪೆಗೆಯ್ದುಮರಿಸೆ, 'ಪ್ರಭುವಿನಾಣತಿ ಶಿರೋಧಾರ್ಯ' ಮೆಂದರಿದಾ ಕಾರ್ಯಮಂ ಮೂರುತಿಂಗಳೊಳೆ ಪೂರ್ತಿಗೆಯ್ದು, ಮಹಾರಾಜನ ಮೆಚ್ಚುಗೆಗೆ ಪಾತ್ರನಾದಂ.

ಇವನಂ

೧ ಮೆರೆವಾಜೀ ಕುಲಶೇಖರಂ, ಹರಿಪದ ಶ್ರೀಭಕ್ತಪದ್ರೇಣುಮಾ
ವರನಾರಾಯಣ, ಭಕ್ತಿಸಾರನೆಸೆವಾ ಶ್ರೀವಿಷ್ಣುಚಿತ್ತಂ ಸುಬಂ
ಧುರ ಗೋದಾಕೃತ ಸುಪ್ತಬಂಧರಸಿಕಂ ರಾಮಾನುಜಾರ್ಯೋಕ್ತತ
ತ್ಪರತಂ ನೋಳ್ಪೊಡೆ ದಿವ್ಯಸೂರಿಸದೃಶಂ ರಾಮಾನುಜಂ ರಂಜಿಕುಂ ॥

೧. ತಮಿಳು ಆಳ್ವಾರುಗಳ ನಾಮಶ್ಲೇಷೆಯಿಂದ ರಾಮಾನುಜಯ್ಯಂಗಾರ್ಯರ ಪ್ರಶಂಸಾಪದ್ಯ.

ಚರಿತದೊಳಕಳಂಕಂ, ಶಿಷ್ಯಸಂಪೂಜ್ಯಪಾದಂ
ವರಗುಣದೊಳನಂತಂ ಸ್ವಾಂತದೊಳ್ ಪದ್ಮನಾಭಂ
ಪರಮ ೧ ಜಿನಮತಶ್ರೀಯೊಂದಿಯುಂ ವೈಷ್ಣವಾಗ್ರೇ
ಸರನೆನಿಸಿದನೀ ರಾಮಾನುಜಂ ಚೋದ್ಯಮಲ್ತೇ ॥

ಅಳಿಕದೊಳೊಪ್ಪಿರ್ಪ ಜಿಳಿನಾಮದಕಾಂತಿಯಮರ್ತ್ಯಸಿಂಧುವಂ
ಕೆಳೆಗೊಳೆ ವಕ್ತ್ರದೊಳ್ ವರಸರಸ್ವತಿಸನ್ನಿಧಮಾಗೆ ಚಿತ್ತದೊಳ್
ನೆಲಸಿರಲಾ ರಮಾಧವನ ಶೋಣಪದಾಂಬುರುಹಂ ಸಮಂತು ಮೂ
ವೊಳೆಯೊಡಗೂಡಲಾದ ತೀರ್ಥಮೆನಲ್ ಬುಧವರ್ಯ ನೊಪ್ಪಿದಂ ॥

ಎಂದಭಿಯುಕ್ತರ್ ಪೆರ್ಕಳದಿಂ ಸೊಲ್ಲಿಸುವರ್. ಇಂತು ಲೌಕಿಕ ಪಾರಲೌಕಿಕ ವಿದ್ಯಾವಿದಗ್ಧರಿಂದಭಿಷ್ಟುತನಾದೀತಂಗೆ ಪುರಾತನಕರ್ಮಪರಿಪಾಕದಿಂ ರೋಗಂ ತಲೆದೋರಿಯೊಂದುವರ್ಷಂ ಬರಮಳಲಿಸಿ ದುಶ್ಚಿಕಿತ್ಸ್ಯಮಾಗೆ

ಮೆರೆವಾಕಾಶರಸೇಭಚಂದ್ರಕಲಿತ ಶ್ರೀಶಾಲಿವಾಹಾಬ್ದದೀ
ಶ್ವರದಾಜ್ಯೇಷ್ಠಪರಾರ್ಧದಗ್ಗದ ಚತುರ್ಥೀಭಾನುವಾರಂರಮಾ
ವರನಕ್ಷತ್ರಮಿರಲ್ಕೆ ಮಧ್ಯದಿನದಲ್ಲಾಜೀಕುಲಾಂಭೋಜಭಾ
ಸ್ಕರರಾಮಾನುಜಸೂರಿಯೆಯ್ದೆ ಪಡೆದಂ ಶ್ರೀವಿಷ್ಣುಸಾಯುಜ್ಯಮಂ ॥

ಸರಸತಿಯೋಲೆವಾಗ್ಯಮರೆಯಾದುದುಹಾ ! ಸತಿಯೈದೆದಾಳಿಕ
ತ್ತರಿಸಿದುದಯ್ಯೋ ! ಶೀಲಕಿಡೆಯಿಲ್ಲದೆ ಪೋದುದು ಪಜ್ಜೆಗೆಟ್ಟುದಾ
ಚರಣೆಯುಹೋ ! ಮಹೋನ್ನತದ ೨ ಮಂಡಯದುತ್ಕುಲಮಾಗಳೀತನಂ
ತರಿಸಿರಲೇಳ್ಗೆಗುಂದಿದುದು ಸಂತರಸಾವೊಳದಾರೊ ನೋಯದರ್ ॥

ಕಳಿವೊಡಲಂ ಬಿಸುಟಳಿಯದ
ಬಿಳಿದಿನಜಸದೊಡಲನಾಂತು ರಾಮಾನುಜನೇ
ಗಳುಮೆಸೆವಂ ಬಂಧುಸುಹೃ
ತ್ಕುಳಹೃದಯಾಕಾಶದಲ್ಲಿಯಮೃತಕರಂಬೋಲ್ ।

ಶ್ರೀಮಲ್ಲೋಹಿತ ವಂಶಜ
ರಾಮಾನುಜ ಸೂರಿಚರಿತಮಂ ಸಂಗ್ರಹದಿಂ
ಧೀಮಂತರಹುದೆನಲ್ಕೆಸು
ಧೀಮಣಿ ಗೋವಿಂದರಾಜನೊಲವಿಂ ಬರೆದಂ ॥

ಸಂ ॥ ಶ್ರೀಮದಾಜೀಕುಲಾಂಭೋಜ ಭಾಸ್ಕರಾಯ ಮಹಾತ್ಮನೇ ।
ರಾಮಾನುಜ ಸುಧೀಂದ್ರಾಯ ನಿತ್ಯಶ್ರೀರ್ನಿತ್ಯ ಮಂಗಲಂ ॥

ಧರೆ ಸಸ್ಯಾಳಿಸಮೃದ್ಧಮಕ್ಕೆ ಸುಜನರ್ ಸಂತೋಷದಿಂದಿರ್ಕೆಸ
ತ್ಯರತರ್ ಭೂಮಿಪರಕ್ಕೆಯಾಜಕುಲಜರ್ ಸಂತಾನ ಸೌಭಾಗ್ಯದಿಂ
ಮೆರೆಯುತ್ತಿರ್ಕೆ ಕೃಷ್ಣಭೂಮಿವರನೀ ಮೈಸೂರ ಸಾಮ್ರಾಜ್ಯಮಂ
ನಿರುತಂ ಪಾಲಿಸುತೇಳ್ಗೆದಾಳ್ಗೆ ಸತತಂ ಭದ್ರಂ ಶುಭಂ ಮಂಗಳಂ ॥

---

೧. ಕರ್ಣಾಟಕ ಕಾವ್ಯಕಲಾನಿಧಿ ಪ್ರಕಟಣೆಯಲ್ಲಿ ಜೈನಗ್ರಂಥಗಳ ಸಂಖ್ಯೆಯೇ ಹೆಚ್ಚು.

೨. ಮಂಡಯಂ ಶ್ರೀವೈಷ್ಣವಕುಲ

## ವಿಜಯನಗರ ಸಾಮ್ರಾಜ್ಯ ಸಂಸ್ಥಾಪಕರಾದ

# ರಾಜಗುರು ವಿದ್ಯಾರಣ್ಯ ಕ್ರಿಯಾಶಕ್ತಿ ಗುರುವರೇಣ್ಯರು

ಲೇಖಕರು : ಟಿ. ಎನ್. ಮಲ್ಲಪ್ಪ

ರಿ॥ ಹೈಕೋರ್ಟ್ ಜಡ್ಜ್, ಬೆಂಗಳೂರು

[ಕಳೆದ ಸಂಚಿಕೆಯಿಂದ ಮುಂದುವರಿದುದು]

ವಿಜಯನಗರ ಸಾಮ್ರಾಜ್ಯ ಸಂಸ್ಥಾಪಕರಾದ ವಿದ್ಯಾರಣ್ಯರು ಯಾರು ಎಂಬ ವಿಷಯವು ಹಿಂದಿನಿಂದ ಬಹುಲೇಖನಗಳಿಗೆ ಎಡೆಕೊಟ್ಟಿದೆ. ವಿವಾದಾಸ್ಪದವಾದ ಈ ವಿಷಯವನ್ನು ಕೂಲಂಕಷವಾಗಿ ವಿಚಾರಿಸಿ ಬಗೆಹರಿಸುವ ಪ್ರಯತ್ನವು ಸ್ವಲ್ಪಮಟ್ಟಿಗೆ ಹಿಂದಿನ ಸಂಚಿಕೆಯಲ್ಲಿ ಸಾಗಿತು. ಉಪನಿಷನ್ಮಾರ್ಗಪ್ರತಿಷ್ಠಾಗುರುವೆನಿಸಿ, ಅದ್ವೈತ ಗ್ರಂಥವಾದ ಸೂತಸಂಹಿತೆಗೆ ತಾತ್ಪರ್ಯದೀಪಿಕೆಯನ್ನು ಬರೆದ ಅಂಗೀರಸ ಮಾಧವ ಮಂತ್ರಿಯು ಆತನ ಮರಣಕಾಲದಲ್ಲಿ ಒಂದು ಗ್ರಾಮಕ್ಕೆ ಮಾಧವಪುರವೆಂದು ಹೆಸರಿಟ್ಟು ದಾನ ಮಾಡಿದುದರಿಂದಲೂ, ಸಾಯಣ ರನ್ನೂ ಅವರ ಅನುಜ ಮಾಧವರನ್ನೂ ಅವರ ಮರಣಾನಂತರವೂ ವಿದ್ಯಾರಣ್ಯರೆಂದು ಕರೆಯದೆ ಅವರ ಹೆಸರಿನಿಂದಲೇ ಉಲ್ಲೇಖಿಸಿ ಸ್ತೋತ್ರ ಮಾಡಿರುವುದರಿಂದಲೂ, ಇವರೆಲ್ಲರೂ ವಿವಾಹಿತ ರಾದುದರಿಂದಲೂ ಇವರು ವಿದ್ಯಾರಣ್ಯರಲ್ಲವೆನ್ನಲಾಯಿತು. ಆ ಗುರುವಂಶಕಾವ್ಯದಲ್ಲಿ ಹೇಳಿ ದಂತೆ ಸಾಯಣರೂ ಅವರ ಸಹೋದರ ಮಾಧವರೂ ವಿದ್ಯಾರಣ್ಯರನ್ನು ಸಂಧಿಸಿ ಪುತ್ರರನ್ನು ಬೇಡಿದುದರಿಂದ ಅವರು ವಿದ್ಯಾರಣ್ಯರಿಂದ ಭಿನ್ನರು ಎಂಬುದು ಸ್ಪಷ್ಟ. ಇನ್ನು ಕ್ರಿಯಾ ಶಕ್ತಿಗಳೆನ್ನುವವರು ವಿದ್ಯಾರಣ್ಯರಂತೆಯೇ ಸಾಮ್ರಾಜ್ಯಕ್ಕೆ ದುಡಿದ ತಪಸ್ವಿಗಳೆಂಬುದು ನಿರ್ವಿವಾದ ವಿಷಯವಾಗಿರುವಲ್ಲಿ ಹಾಗೆ ದುಡಿದವರು ಒಬ್ಬರೇ ಎಂಬುದು ಪರಂಪರಾಗತ ಐತಿಹ್ಯವಾದುದ ರಿಂದ ಅವರು ಕ್ರಿಯಾಶಕ್ತಿ-ವಿದ್ಯಾರಣ್ಯರೆಂಬುವರೊಬ್ಬ ವ್ಯಕ್ತಿಯೇ ಇರಬೇಕೆಂಬುದು ಸ್ಪಷ್ಟ. ಇವರು ಒಬ್ಬರೇ ಎಂಬುದಕ್ಕೆ ಶಾಸನಾಧಾರಗಳನ್ನು ಕೊಡಲಾಯಿತು. ಈಚೆಗೆ ನನ್ನ ಗಮನಕ್ಕೆ ಬಂದಿರುವುದಾದರೂ, ಕ್ರಿಯಾಶಕ್ತಿ-ವಿದ್ಯಾರಣ್ಯರೆಂಬುವರೊಬ್ಬರೇ ಎಂಬುದನ್ನು ಅನುಮಾನ ವಿಲ್ಲದಂತೆ ತೋರಿಸುವ ಬಾಂಬೆ ಹಿಸ್ಟಾರಿಕಲ್ ಸೊಸೈಟಿ ಜನರಲ್ ಸಂಪುಟ ೧, ಭಾಗ ೨ ಪುಟ ೧೭ರಲ್ಲಿರುವ ಶಾಸನ ಭಾಗ, ಅದನ್ನಿಲ್ಲಿ ಕೊಡಲಾಗಿದೆ :

" ಮಹಾನುಭಾವಾನಾಂ ಕ್ರಿಯಾಶಕ್ತಿ ವಿದ್ಯಾರಣ್ಯ ಶ್ರೀಚರಣಾನಾಂ
ಉಪದೇಶೇನಜನಿತ ತತ್ತ್ವಪ್ರಕಾಶಕೇನ
ಧರ್ಮಶೇಖರೇನ ಸತ್ಯಸಂಧೇನ
ಸಂಗಮಸೂನು ಬುಕ್ಕರಾಯತನಯೇನ ಹರಿಹರೇನ"

ಎಂದಿದೆ ಆ ಶಾಸನದಲ್ಲಿ. " ಕ್ರಿಯಾಶಕ್ತಿ ವಿದ್ಯಾರಣ್ಯರ ಉಪದೇಶದಿಂದ ಎಂದು ಹೇಳಿರುವುದ ರಲ್ಲಿ ಬೇರೆ ಬೇರೆ ಧರ್ಮದವರೆನ್ನುವ ಇಬ್ಬರು ಗುರುಗಳನ್ನು ಒಟ್ಟಿಗೆ ಸೇರಿಸಿ ಹೇಳಿರುವುದು ಅಸಂ ಗತ. ಕ್ರಿಯಾಶಕ್ತಿಗಳು ಶೃಂಗೇರಿ ಮಠಕ್ಕೆ ವಿದ್ಯಾರಣ್ಯರು ಎಂಬ ಹೆಸರಿನಿಂದ ಗುರುಗಳಾದುದು ೧೩೭೦ರ ಸುಮಾರಿನಲ್ಲಿ. ಈ ಶಾಸನವು ೧೩೭೯ರದಾದುದರಿಂದ ' ಕ್ರಿಯಾಶಕ್ತಿ ' ಎಂಬ ಹೆಸರು ' ವಿದ್ಯಾರಣ್ಯ ' ಎಂದು ಬದಲಾಯಿಸಿದೆ. ಹೊಸದರಲ್ಲಿ ಹೊಸಹೊಸದು ರೂಢಿಗೆ ಬಂದಿಲ್ಲವಾಗಿ

ಹೊಸ ಹೆಸರಾದ 'ವಿದ್ಯಾರಣ್ಯ' ಎಂಬುದರೊಡನೆ ಹಳೆಯ ಹೆಸರನ್ನು ಸೇರಿಸಿ 'ಕ್ರಿಯಾಶಕ್ತಿ ವಿದ್ಯಾರಣ್ಯರ ಉಪದೇಶದಿಂದ' ಎಂದು ಹೇಳಿದೆ. ಇಲ್ಲಿ ಇಬ್ಬರು ಗುರುಗಳು ಹೇಳಲ್ಪಟ್ಟಿದ್ದರೆ 'ಕ್ರಿಯಾಶಕ್ತಿ ವಿದ್ಯಾರಣ್ಯರ ಉಪದೇಶಗಳಿಂದ' ಎಂದು ಶಾಸನದಲ್ಲಿ ಬರೆಯಲ್ಪಡುತ್ತಿದ್ದಿತು. ಉಪದೇಶಪದದ ದ್ವಿವಚನವನ್ನು ಉಪಯೋಗಿಸದೆ ಏಕವಚನವನ್ನು ಉಪಯೋಗಿಸಿರುವುದರಿಂದ ಈ ಶಾಸನವು ಕ್ರಿಯಾಶಕ್ತಿ ವಿದ್ಯಾರಣ್ಯರು ಒಬ್ಬರೇ ಎಂಬುದನ್ನು ಖಚಿತಗೊಳಿಸುತ್ತದೆ.

## ಭಾರದ್ವಾಜಗೋತ್ರದ ಮಾಧವಾಚಾರ್ಯರು ವಿದ್ಯಾರಣ್ಯರಲ್ಲವೆಂದು ಖಚಿತಗೊಳಿಸುವ ಶಾಸನ

ಎಂ. ಎ. ಆರ್. ೧೯೧೪–೧೫ ಪುಟ ೪೨ರಲ್ಲಿ ಮುದ್ರಿತವಾಗಿರುವ ಕ್ರಿ. ಶ. ೧೩೭೭ನೆಯ ಇಸವಿಯ ಶಾಸನದಲ್ಲಿ ಬೇರೆ ಬೇರೆ ಗೋತ್ರದ ಬ್ರಾಹ್ಮಣರಿಗೆ ಹರಿಹರದ್ವಿತೀಯನು ದಾನಮಾಡಿದುದನ್ನು ಹೇಳಿದೆ. ಈಚೆಗೆ ನನ್ನ ಗಮನಕ್ಕೆ ಬಂದ ಆ ಶಾಸನದ ಭಾಗವಿದು ವಿಚಾರಾರ್ಹವಾಗಿದೆ

> "ತತ್ರಾದೌ ಭಾರದ್ವಾಜಗೋತ್ರೋ ಯಜುಶ್ಶಾಖಾಧ್ಯಾಯೀ ಸಾಯಣಾಚಾರ್ಯಃ,
> ತತ್ತನಯಃ ಸಿಂಗಣಃ ತಗೋತ್ರೋಬಹ್ವೃಚೋರಾಯರ ಆಶ್ರಿತ ನರರಾಜವೃತ್ತಿತ್ರಯೇಣ
> ಮಾಧವಾಚಾರ್ಯ
> ತನುಜೋ ಮಾಯಣ್ಣ, ಸಾಯಣ್ಣಾರ್ಯತನುಜೌಮಾದಣ್ಣನಾಗಣ್ಣಾ ವಿತಿತ್ರಯಃ
> ಹಾರೀತಃ ತಾರ್ಕಿಕ ಭಟ್ಟಃ."

ಮೇಲೆ ಹೇಳಿರುವುದರಲ್ಲಿ ಭಾರದ್ವಾಜಗೋತ್ರದ ಯಜುಶ್ಶಾಖೆಯವರು ಸಾಯಣರೆಂದು ಹೇಳಿರುವುದರಿಂದ ವೇದಭಾಷ್ಯವನ್ನು ಬರೆದ ಸಾಯಣರಿಗೂ ಅವರ ಮಗ ಸಿಂಗಣರಿಗೂ ಮೊದಲು ದಾನ ಕೊಟ್ಟಿರುವುದನ್ನು ಹೇಳಿದೆ. ಇವರ ಹೆಸರಿಗೂ ಮಾಧವಾಚಾರ್ಯರ ಹೆಸರಿಗೂ ಮಧ್ಯೆ ಯಾರ ಹೆಸರೂ ಹೇಳಲ್ಪಟ್ಟಿಲ್ಲ. ಅವುಗಳಲ್ಲಿರುವ ಪದಗಳ ಮಧ್ಯೆ ಸ್ಥಳಬಿಟ್ಟಿಲ್ಲವಾದುದರಿಂದ ಕೈಬಿಟ್ಟುಹೋಗಿದ್ದರೆ ಅಲ್ಲೊಂದು ಇಲ್ಲೊಂದು ಅಕ್ಷರಬಿಟ್ಟು ಹೋಗಿರಬಹುದು. 'ತದ್ ಗೋತ್ರೋ ಬಹ್ವೃಚೋರಾಯರ ಆಶ್ರಿತ್ಯಜನರಾಜ' ಎಂದಿರಬೇಕು. ರಾಯರ ಎಂಬ ಷಷ್ಟ್ಯಂತವಾದ ಕನ್ನಡ ಪದದೊಡನಿರುವ ಉಳಿದ ಪದಗಳು ಕನ್ನಡವೇ ಇರಬೇಕಷ್ಟೆ. ಆ ಕಾಲದ ಮಂತ್ರಿಗಳು ಬಂದು ಆಶ್ರಿತರಾಜವಿಭಾಗವನ್ನು ಆಳುತ್ತಿದ್ದಂತೆ ಕಂಡುಬರುತ್ತದೆ. ಹರಿಹರರಾಯನ ರಾಜ್ಯದ ಜನರ ಆಶ್ರಿತ ವಿಭಾಗವನ್ನು ಆಳುತಿದ್ದ, ಮಾಧವ ಎಂದೂ ಅವನ ಸೋದರಳಿಯ ಲಕ್ಷ್ಮೀಧರನ ಶಾಸನದಲ್ಲಿ ಮಾದರಸ ಎಂದೂ ಉಲ್ಲೇಖಿಲ್ಪಟ್ಟ ಭಾರದ್ವಾಜ ಗೋತ್ರದ ಮಾಧವಾಚಾರ್ಯರು ಇಲ್ಲಿ ಉಲ್ಲೇಖಿಸಲ್ಪಟ್ಟಿದ್ದಾರೆ. 'ನರರಾಜ' ಎಂಬುದರ ಹಿಂದೆ 'ಜ' ಬಿಟ್ಟು ಯಾವ ಬೇರೆ ಅಕ್ಷರವನ್ನು ಎಲ್ಲಿ ಸೇರಿಸಿದರೂ ಅರ್ಥವಾಗುವುದಿಲ್ಲ. ಅಂತು ಈ ಕನ್ನಡ ಪದಗಳ ಮಧ್ಯೆ ಯಾವ ಹೆಸರೂ ಇಲ್ಲ. ಆದುದರಿಂದ "ತದ್‌ಗೋತ್ರೋಬೃಹ್ವೃಚಃ" ಎಂದರೆ ಹಿಂದಿನ ಗೋತ್ರದ ಎಂದರೆ ಸಾಯಣಾಚಾರ್ಯರಿಗೆ ಹೇಳಿದ ಗೋತ್ರದವರೂ ಬಹ್ವೃಚರೂ ಎಂದು ಬಹು ಋಕ್ಕುಗಳನ್ನು ಬಲ್ಲವರೂ ಆದ ಮಾಧವಾಚಾರ್ಯರೆಂದರೆ ಸಾಯಣಾನುಜರೇ ಇಲ್ಲಿ ಹೇಳಲ್ಪಟ್ಟಿರುವರೆಂದಾಯಿತು. ಸಾಯಣರ ಭಾಷ್ಯದ ಸಾರವನ್ನು ಬರೆದ ಮುದ್ಗಲನು "ಆಲೋಚ್ಯ ಪೂರ್ವಭಾಷ್ಯಂಚ ಬಹ್ವೃಚಸ್ಯ ಸಮಂತತಃ" ಎಂದು ಹೇಳುವುದರಲ್ಲಿ ಭಾಷ್ಯ ಕರ್ತರಾದ ಸಾಯಣರನ್ನೂ ಬಹ್ವೃಚರೆಂದೇ ಹೇಳಿರುವುದರಿಂದ ಸಾಯಣ ಸಾಯಣಾನುಜ ಮಾಧವಪ್ರವರವೆಲ್ಲವನ್ನೂ ಇಲ್ಲಿ ಹೇಳಿದಂತಾಯಿತು. ಪ್ರಾಚ್ಯೈತಿಹ್ಯಕ್ಕೆ ವಿರೋಧವಿಲ್ಲದಂತೆ

ಪರಂಪರಾಗತವಾಗಿ ನಂಬಲ್ಪಟ್ಟಿರುವುದನ್ನೇ ಬರೆಯುವುದಾಗಿ ಹೇಳಿ ಬರೆಯಲ್ಪಟ್ಟಿರುವ ಗುರು ವಂಶ ಕಾವ್ಯದಲ್ಲಿ ಹೇಳಿದಂತೆ, ಈ ಸಾಯಣ ಮಾಧವ ಸಹೋದರರಿಬ್ಬರೂ ಪುತ್ರಾರ್ಥಿಗಳಾಗಿ ವಿದ್ಯಾರಣ್ಯರನ್ನು ಸಮೀಪಿಸಿದರಾಗಿ ಅವರು ಸಂಸಾರಿಗಳಾಗಿ ಈ ಶಾಸನದಲ್ಲಿ ಹೇಳಿದಂತೆ ಪುತ್ರ ವಂತರೂ ಆಹುದು. ಅವರಿಬ್ಬರಲ್ಲಿ ಯಾರೂ ವಿದ್ಯಾರಣ್ಯರಲ್ಲವೆಂಬುದನ್ನು ಈ ಶಾಸನವು ಖಚಿತಗೊಳಿಸುವುದು. ವೇದ ಭಾಷ್ಯವನ್ನು ಬರೆಯಲು ತಮ್ಮ ರಾಜನಿಂದ ಆಜ್ಞಪ್ತರಾದರೂ ಅದನ್ನು ಬರೆಯಲು ತಮ್ಮ ತಮ್ಮ ಸಾಯಣರೇ ತಕ್ಕ ವಿದ್ವಾಂಸರೆಂದು ಬಿನ್ನೈಸಿಕೊಂಡ ಮಾಧವಾಚಾರ್ಯರಿಗಿಂತಲೂ ಸಾಯಣರೇ ವಿದ್ವತ್ತಿನಲ್ಲಿ ಹಿರಿಯರು. ಆದುದರಿಂದಲೇ ಈ ಶಾಸನದಲ್ಲಿಯೂ ಇತರ ಕಡೆಗಳಲ್ಲಿಯೂ ಸಾಯಣರ ಹೆಸರೇ ಮೊದಲು ಹೇಳಲ್ಪಡುವುದು ಉದಾಹರಣೆಗಾಗಿ ಜಗದ್ಗುರು ರತ್ನಮಾಲಾಸವದಲ್ಲಿ 'ಸಾಯಣಮಾಧವೋಪದೇಷ್ಟ್ರನ್' ಎಂದೂ ಅದರ ವ್ಯಾಖ್ಯಾನದಲ್ಲಿ 'ಸಾಯಣಮಾಧವಯೋಃ' ಎಂದು ಹೇಳಿರುವುದನ್ನೂ ಪುಣ್ಯ ಶ್ಲೋಕದಲ್ಲಿಯೇ 'ಸಾಯಣಮಾಧವೋಕ್ತವಿಧಯಾ' ಎಂದು ಹೇಳಿರುವುದನ್ನೂ ಇಲ್ಲಿ ಉಲ್ಲೇ ಖಿಸಬಹುದು. ಸೂತಸಂಹಿತೆಗೆ ತಾತ್ಪರ್ಯದೀಪಿಕೆಯನ್ನು ಬರೆದ ಉಪನಿಷನ್ಮಾರ್ಗಪ್ರತಿಷ್ಠಾ ಗುರುವೆನಿಸಿದ ಆಂಗೀರಸ ಗೋತ್ರದ ಮಾಧವಾಚಾರ್ಯರು ವಿದ್ಯಾರಣ್ಯರಲ್ಲವೆಂದು ಸಿದ್ಧಾಂತ ವಾದ ಮೇಲೆ ವಿದ್ಯಾರಣ್ಯರಿರಬಹುದೆಂದು ಊಹಿಸಲ್ಪಟ್ಟ ಭಾರದ್ವಾಜ ಗೋತ್ರದ ಮಾಧವಾ ಚಾರ್ಯರು ವಿದ್ಯಾರಣ್ಯರಲ್ಲವೆಂಬುದು ಈ ಶಾಸನದಿಂದ ಸಿದ್ಧಾಂತವಾಗುವುದು.

## ಸಂಗಮ ವಂಶದವರಾಳಿದ ವಿಜಯನಗರ ಸಾಮ್ರಾಜ್ಯವು ಹೇಗೆ, ಯಾರಿಂದ ಯಾವಾಗ ಸ್ಥಾಪಿಸಲ್ಪಟ್ಟಿತು ?

ಮೇಲಿನ ಶಾಸನವನ್ನು ಸಂಪಾದಿಸಿದ ದಿ|| ಕುಂದಣಗಾರರು ಗಮನಿಸಿದ ಸಂಗತಿಯೊಂದು ವಿಚಾರಾರ್ಹವಾಗಿದೆ. ಈ ಶಾಸನದ ಪ್ರಾರಂಭದಲ್ಲಿ ಎರಡನೆಯ ಹರಹರನ ವರೆಗೆ ಅವನ ವಂಶ ದವರ ಹೆಸರುಗಳನ್ನು ಕೊಟ್ಟಿದೆ. ಸಂಗಮನ ಹೆಸರಿನ ನಂತರ ಆಳಿದನೆಂಬಲ್ಲಿ ಮೊದಲನೆ ಹರಿ ಹರನ ಹೆಸರನ್ನು ಹೇಳದೆ ಬುಕ್ಕನ ಹೆಸರನ್ನು ಹೇಳಿದೆ. ಶ್ರೀ ಶೈಲದ ಶಾಸನ ಪುಟಗಳಲ್ಲಿಯೂ ಹೀಗೆಯೆ ಆಗಿರುವುದರಿಂದ ಇದರ ಮಥಿತಾರ್ಥವನ್ನು ಮುಂದೆ ಯಾವಾಗಲಾದರೂ ಮಾಡಬೇ ಕೆಂದಿದ್ದಾರೆಂದು ಹೇಳಿದ್ದಾರೆ; ಹಾಗೆ ಮಾಡಿರುವುದು ತಿಳಿದಿಲ್ಲ. ಆದರೆ ಬಲ್ಲಾಳ ತೃತೀಯನು ಅವನ ರಾಜ್ಯವನ್ನು ಕಾಪಾಡುವುದರಲ್ಲಿ ಮೊದಲನೆಯ ಹರಿಹರನು ಸಹಾಯಕ ನಾಗಿದ್ದನೇ ಹೊರತು ಮುಂದೆ ಸಂಗಮವಂಶದವರು ಸ್ವತಂತ್ರರಾಗಿ ಆಳಿದ ವಿಜಯನಗರ ಸಾಮ್ರಾಜ್ಯವನ್ನು ಕಟ್ಟುವುದರಲ್ಲಿ ಅವನ ದುಡಿಮೆಯೇನೂ ಇಲ್ಲದುದರಿಂದಲೇ ಶಾಸನಗಳಲ್ಲಿ ಅವನ ಹೆಸರನ್ನು ಕೈಬಿಟ್ಟಿರುವುದೆಂಬುದು ಸ್ಪಷ್ಟ. ಇನ್ನು ಈ ವಿಷಯವನ್ನು ವಿಮರ್ಶೆ ಮಾಡಲಾಗುವುದು.

ತುರುಷ್ಕರ ಆಕ್ರಮಣವನ್ನು ಪರಾಕ್ರಮದಿಂದ ಎದುರಿಸುತ್ತಿದ್ದ ಪ್ರತಾಪರುದ್ರನ ಪತನವು ೧೩೨೩ರಲ್ಲಿ ಆಗಲು ಆತನ ಕೈಕೆಳಗಿನ ಅಧಿಕಾರಿಗಳಾದ ಹರಿಹರನೂ ಅವನ ಸಹೋದರರೂ ಅವರ ಬಂಧುವೇ ಆದ ಹೊಯ್ಸಳ ಚಕ್ರಾಧಿಪತಿ ಬಲ್ಲಾಳ ತೃತೀಯನ ನೆರವಿಗೆ ಧಾವಿಸಿದರು. ತನ್ನ ಬಂಧುಗಳ ಸಭೆಯನ್ನು ಸೇರಿಸಿ ಮಂತ್ರಾಲೋಚನೆಯಿಂದ ಬಲ್ಲಾಳನು ಫಾ. ಹೆರಾಸರು ಹೇಳುವಂತೆ, ಉತ್ತರದಿಂದ ಧಾಳಿಯಿಡುತ್ತಿದ್ದ ಮಹಮದೀಯರನ್ನು ಎದುರಿಸಲು ಮಧ್ಯ ದಲ್ಲಿ ಹರಿಹರಬುಕ್ಕರನ್ನೂ ಪೂರ್ವದಲ್ಲಿ ಅವರ ಸಹೋದರ ಕಂಪನನ್ನೂ ಪಶ್ಚಿಮದಲ್ಲಿ ಅವರ

ಸಹೋದರ ಮಾರಪನನ್ನೂ ನಿಲ್ಲಿಸಿದನು. ಇವರೆಲ್ಲರೂ ಹೊಯ್ಸಳ ಚಕ್ರಾಧಿಪನ ಮಾಂಡಲಿಕರಾಗಿ ಅವನ ನೆರವಿಗೆ ನಿಂತರು. ಹೊಯ್ಸಳ ಬಲ್ಲಾಳರಾಜ್ಯದ ಸಂರಕ್ಷಣೆಯಲ್ಲಿ ಪಡೆದ ವಿಜಯದ ಸಮಾರಂಭವೊಂದರಲ್ಲಿ ಶೃಂಗೇರಿ ಶಾಸನ ೧ರ ಪ್ರಕಾರ ೧೩೪೬ ದಾನ ಮಾಡಲ್ಪಟ್ಟಿತು. ಆ ಶಾಸನದಲ್ಲಿ ದಾನ ಮಾಡಿದವರು "ಶ್ರೀಮನ್ಮಹಾಮಂಡಲೇಶ್ವರಂ" ಎಂದೇ ಹೊಗಳಲ್ಪಟ್ಟ ಹರಿಹರನೂ ಅವನ ಸಹೋದರರೂ; ಆಗ ಹರಿಹರನು ಸ್ವತಂತ್ರವಾದ ಮಹಾರಾಜನಲ್ಲ ಮತ್ತು ಅಂದು ಅವನು ವಿಜಯನಗರ ರಾಜ್ಯಸ್ಥಾಪನೆಯನ್ನು ಮಾಡಿರಲಿಲ್ಲ. ವಿಜಯನಗರದ ಹೆಸರೇ ಆ ಶಾಸನದಲ್ಲಿ ಇಲ್ಲ. ೧೩೩೬ರಲ್ಲಿ ಯಾವ ರಾಜ್ಯವೂ ಅವರಿಂದ ಸ್ಥಾಪಿಸಲ್ಪಡಲಿಲ್ಲ. ಅನಂತರವೂ ೧೩೩೯ರಲ್ಲಿ ಮೂರನೆಯ ಬಲ್ಲಾಳನೇ ವಿಜಯನಗರವನ್ನೊಳಗೊಂಡ ರಾಜ್ಯದಲ್ಲಿ ಸ್ವತಂತ್ರವಾಗಿ ರಾಜ್ಯವಾಳುತ್ತಿದ್ದುದು E.C. Ht 43 ಶಾಸನದಿಂದ ತಿಳಿದು ಬರುತ್ತದೆ. ತುರುಷ್ಕರೊಡನೆ ಯುದ್ಧದಲ್ಲಿ ತನಗೇನಾಗುವುದೋ ಎಂಬ ಭಯದಿಂದ ಮುಂಜಾಗ್ರತೆ ಕ್ರಮವಾಗಿ ೧೩೪೦ರಲ್ಲಿ ಮೂರನೆಯ ಬಲ್ಲಾಳನು ತನ್ನ ಮಗನಾದ ವೀರವಿಜಯ ವಿರೂಪಾಕ್ಷದೇವನಿಗೆ ಹಂಪೆಯಲ್ಲಿ ಯುವರಾಜ್ಯಾಭಿಷೇಕವನ್ನು ಮಾಡಿ ಹಂಪೆಗೆ ವಿಜಯನಗರವೆಂದು ಹೆಸರಿಟ್ಟನೆಂಬುದು ಪೆರಿಸ್ಟಾ ಎನ್ನುವನು ಬರೆದಿಟ್ಟಿರುವ ಚರಿತ್ರೆಯಿಂದ ತಿಳಿದುಬರುತ್ತದೆ. ೧೩೪೨ರಲ್ಲಿ ಮೂರನೆಯ ಬಲ್ಲಾಳನು ವೀರ ಸ್ವರ್ಗವನ್ನು ಪಡೆಯಲು ೧೩೪೩ರಲ್ಲಿ E.C. VI 105ನೆಯ ಶಾಸನದಲ್ಲಿ "ಶ್ರೀ ವೀರವಿಜಯ ವಿರೂಪಾಕ್ಷಬಲ್ಲಾಳ ದೇವರಿಗೆ ಪಟ್ಟವಾದಲ್ಲಿ ಆ ದೇವರು ಕರುಣಿಸಿದ" ದಾನವು ಉಲ್ಲೇಖಿಸಲ್ಪಟ್ಟಿದೆ. ಹಿಂದೆ ಹೇಳಿದಂತೆ ೧೩೪೬ರ ಶೃಂಗೇರಿ ೧ ಶಾಸನದ ಕಾಲದಲ್ಲಿಯಾಗಲೀ ೧೩೫೬ರಲ್ಲಿ ಯಾಗಲೀ ಮೊದಲನೆಯ ಹರಿಹರನೂ ಅವನ ಸಹೋದರ ಮಂಡಲಾಧೀಶ್ವರರಾಗಿದ್ದರೇ ಹೊರತು ಸ್ವತಂತ್ರರಾಜ್ಯವಾವುದನ್ನೂ ಸ್ಥಾಪಿಸಿರಲಿಲ್ಲ. ಮಾಂಡಲಿಕನಾಗಿಯೇ ೧೩೫೬ರಲ್ಲಿ ಮೊದಲನೆಯ ಹರಿಹರನು ಮಡಿದನು.

ಸಂಗಮ ವಂಶದವರಾಳಿದ ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿದವನು ಹರಿಹರನ ಸಹೋದರನಾದ ಬುಕ್ಕ ಭೂಪತಿಯು. ಹರಿಹರನು ಪಾಂಡವರಲ್ಲಿ ಯುಧಿಷ್ಠಿರನಂತೆ ಹಿರಿಯನು. ಬುಕ್ಕ ಭೂಪತಿಯು ಪಾಂಡವ ಮಧ್ಯಮನಾದ ಅರ್ಜುನನಂತೆ ವಿಜಯನು. ಇದು ಶಾಸನೋಕ್ತವಾದ ಹೋಲಿಕೆ. VI E.C. ಕೊಪ್ಪದ ೩೫ನೆಯ ಶಾಸನದಲ್ಲಿ "ಬುಕ್ಕ ಭೂಪತಿಃ ಪ್ರಚಂಡ ವಿಕ್ರಮೋ ಮಧ್ಯೆ ಪಾಂಡವನಾಮಿದ್ವಾರ್ಜುನಃ" ಎಂದು ಹೇಳಿದೆ. ಈ ವಂಶದ ಕುಲಗುರುವೂ ಈ ರಾಜ್ಯಸ್ಥಾಪನೆಗೆ ಕಾರಣನೂ ಆದ ಕ್ರಿಯಾಶಕ್ತಿದೇಶಿಕನ ಪ್ರಮುಖಶಿಷ್ಯನಾದ ಅಂಗೀರಸ ಗೋತ್ರದ ಮಾಧವ ಮಂತ್ರಿಯು ಬುಕ್ಕನ ವಿಜಯಕ್ಕೆ ಮುಖ್ಯ ಕಾರಣನು; ತುರುಷ್ಕರನ್ನು ತುಂಡರಿಸಿ ಗೋವೆಯವರೆಗೂ ರಾಜ್ಯವನ್ನು ವಿಸ್ತರಿಸಿದನು. ಕ್ರಿ.ಶ. ೧೩೭೮ರ ಸುಮಾರಿನಲ್ಲಿ ವಿಜಯನಗರವನ್ನು ರಾಜಧಾನಿಯಾಗಿ ಮಾಡಿಕೊಂಡುದೂ ಆವರೆಗೂ ಅದನ್ನು ರಾಜಧಾನಿಯನ್ನು ಮಾಡಿಕೊಂಡುದಕ್ಕೆ ಶಾಸನಾಧಾರವಿಲ್ಲದುದೂ ಡಾ. ಸಾಲತೊರೆಯವರ ("Social and political Life in Vijaya Nagara Kingdom Vol 1 Pages 102, 104") ಗ್ರಂಥದಿಂದ ತಿಳಿದು ಬರುತ್ತದೆ. ಇದಕ್ಕೆ ಬಹಳ ಹಿಂದೆಯೇ ಬಲ್ಲಾಳರ ವಂಶ ಕೊನೆಗೊಂಡಿದ್ದರೂ ಬುಕ್ಕ ಭೂಪತಿಯು "ವಿಷ್ಣುವರ್ಧನ ಪ್ರತಾಪ ಹೊಯ್ಸಳ" ರಾಜ್ಯದಲ್ಲಿ ಮಾಂಡಲಿಕನಾಗಿ ಆಳಿದುದಕ್ಕೆ E.C.IV ch 113ನೇ ಶಾಸನವೇ ಮೊದಲಾದ ಶಾಸನಗಳಿವೆ. ಬುಕ್ಕ ಭೂಪನ ಅಂತ್ಯಕಾಲದೊಳಗೆ ಅವನಿಂದ ವಿಜಯನಗರ ರಾಜ್ಯಸ್ಥಾಪನೆಯಾಯಿತಾದರೂ, ಸ್ವತಂತ್ರ ಚಕ್ರವರ್ತಿಯಂತೆ ಅದನ್ನು ಮೊದಲು ಆಳಿದವನು ಅವನ ಮಗ ಹರಿಹರ ದ್ವಿತೀಯನು.

ಡಾ. ಕೃಷ್ಣನ್‌ರವರು 1932 M. A. R. 79ರಲ್ಲಿ "ಒಂದನೇ ಬುಕ್ಕನೇ ಎಲ್ಲರಿಗಿಂತಲೂ ಹೆಚ್ಚಾಗಿ ವಿಜಯನಗರ ರಾಜ್ಯ ಸ್ಥಾಪನೆಗೆ ಕಾರಣನಾಗಿದ್ದಾನೆ" ಎಂದಿದಾರೆ.[1]

## ಶೃಂಗೇರಿಯ ಗುರುಗಳು ಶಿಲಾಶಾಸನಗಳ ಸೃಷ್ಟನೆ ಮಾಡಿದರೆಂಬ ಫಾದರ್ ಹೆರಾಸರ ಆಪಾದನೆಯ ಖಂಡನೆ

ಮೊಲವು ಬೇಟೆಯ ನಾಯಿಯನ್ನು ಎದುರಿಸಿದ ಕಾಡಿನಲ್ಲಿ ಒಂದನೇ ಹರಿಹರನಿಗೆ ಆಕಸ್ಮಿಕವಾಗಿ ಸಿಕ್ಕಿದ ವಿದ್ಯಾರಣ್ಯರ ಅನುಗ್ರಹದಿಂದ ವಿಜಯನಗರ ಸ್ಥಾಪನೆಯಾಯಿತೆಂಬ ಕಟ್ಟು ಕಥೆಗಳಲ್ಲಿ ಒಂದಕ್ಕೊಂದಕ್ಕಿರುವ ವ್ಯತ್ಯಾಸಗಳನ್ನು ಫಾದರ್ ಹೆರಾಸರು ಕಂಡುಹಿಡಿಯುವ ಸಾಹಸಕ್ಕೆ ಕೈಹಾಕಬೇಕಾಗಿರಲಿಲ್ಲ; ಏಕೆಂದರೆ ಇಂಥ ಕಟ್ಟು ಕಥೆಗಳನ್ನು ಚಾರಿತ್ರಿಕಾಂಶಗಳೆಂದು ಯಾರೂ ನಂಬುವುದಿಲ್ಲ. ಆದರೆ ವಿದ್ಯಾರಣ್ಯರ ಸಹಾಯದಿಂದ ಸಂಗಮ ವಂಶದವರು ಆಳಿದ ವಿಜಯನಗರ ಸಾಮ್ರಾಜ್ಯವು ಕಟ್ಟಲ್ಪಟ್ಟು ಹಿಂದೂ ಧರ್ಮವು ಉದ್ಧಾರವಾಯಿತೆಂಬ ನಿಜವಾದ ಅಂಶದ ಮೇಲೆ ಇಂತಹ ಕಟ್ಟು ಕಥೆಗಳು ಕಟ್ಟಲ್ಪಟ್ಟಿವೆ ಎಂಬುದನ್ನು ಫಾದರ್ ಹೆರಾಸರು ಗಮನಿಸದಿದ್ದುದು ದುರಾದೃಷ್ಟಕರವಾಗಿದೆ. ವಿದ್ಯಾರಣ್ಯರು ವಿಜಯನಗರ ರಾಜ್ಯ ಸ್ಥಾಪನೆಗೆ ಸಹಾಯ ಮಾಡಿದರೆಂಬುದು ಸುಳ್ಳೆಂದು ತೋರಿಸಲು ಫಾದರ್ ಹೆರಾಸರು ಹೇಳಿರುವ ಕಾರಣಗಳನ್ನು ಮೂರು ಗುಂಪಾಗಿ ವಿಂಗಡಿಸಬಹುದು. ಮೊದಲನೆಯ ಹರಿಹರನೂ ಮತ್ತು ಅವನ ಸಹೋದರರೂ ತಮ್ಮ ವಿಜಯೋತ್ಸವದ ನೆನಪಿಗಾಗಿ ಮಾಡಿದ ಶಾಸನದಲ್ಲಿಯಾಗಲೀ, ೧೩೪೬ರಲ್ಲಿ ಬುಕ್ಕ ಭೂಪತಿಯು ವಿದ್ಯಾತೀರ್ಥರಿಗೆ ದಾನ ಮಾಡಿದ ಶಾಸನದಲ್ಲಿಯಾಗಲೀ ವಿದ್ಯಾರಣ್ಯರು ವಿಜಯನಗರ ಸಂಸ್ಥಾನಕ್ಕೆ ಸಹಾಯ ಮಾಡಿದರೆಂದು ಹೇಳಲಿಲ್ಲವೆಂಬುದು ಅವರ ಮೊದಲನೆಯ ಗುಂಪಿನ ಆಕ್ಷೇಪಣೆಗಳು. ೧೩೩೬ರ ಶಾಸನ ಕಾಲದಲ್ಲಿ ವಿಜಯನಗರ ಸ್ಥಾಪನೆಯಾಗಿರಲಿಲ್ಲ. ಹರಿಹರನು ಇನ್ನೂ ಮಂಡಲೇಶ್ವರನೆಂದು ಅದರಲ್ಲಿ ಹೇಳಿದೆ; ವಿಜಯನಗರದ ಹೆಸರೂ ಸಹ ಆ ಶಾಸನದಲ್ಲಿ ಇಲ್ಲ. ವಿದ್ಯಾರಣ್ಯರು ಎಂಬ ಹೆಸರಿನಿಂದ ಅವರು ಇನ್ನೂ ಶೃಂಗೇರಿ ಮಠದ ಗುರುಗಳಾಗಿರಲಿಲ್ಲ. ಶೃಂಗೇರಿಪಟ್ಟಣವಾಗಲೀ ಮಠವಾಗಲೀ ಇದ್ದುದನ್ನು ಆ ಶಾಸನದಲ್ಲಿ ಹೇಳಿಲ್ಲ. ಈ ಸ್ಥಿತಿಯು ೧೩೪೬ರಲ್ಲಿಯೂ ಮುಂದುವರಿಯಿತು. ಅಲ್ಲಿಯವರೆಗೆ ವಿಜಯನಗರದ ಸ್ಥಾಪನೆಯೂ ಆಗಿರಲಿಲ್ಲ; ೧೩೪೬ನೆಯ ಶಾಸನದಂತೆ ದಾನ ಮಾಡಿದುದು ವಿದ್ಯಾತೀರ್ಥರಿಗೆ; ವಿದ್ಯಾರಣ್ಯರು ಶೃಂಗೇರಿ ಗುರುಗಳು ಆಗಿರಲಿಲ್ಲ. ಶೃಂಗೇರಿ ಗುರುಗಳು ಆಗ ಆಗಿರಲಿಲ್ಲವೆಂದ ಮೇಲೆ ಅದರ ಸ್ಥಾಪನೆಗೆ ವಿದ್ಯಾರಣ್ಯರು ಸಹಾಯ ಮಾಡಿದರೆಂಬುದನ್ನು ಉಲ್ಲೇಖಿಸುವುದು ಸಾಧ್ಯವೇ ಇಲ್ಲವಷ್ಟೆ. ಇನ್ನು ಅಂಗೀರಸ ಮಾಧವಾಚಾರ್ಯರನ್ನು ಹೊಗಳಿರುವ ಅನೇಕ ಶಾಸನಗಳಲ್ಲಿ ವಿದ್ಯಾರಣ್ಯರು ಮಾಡಿದ ಸಹಾಯವು ಉಲ್ಲೇಖಿಸಲ್ಪಟ್ಟಿಲ್ಲವೆಂಬ ಆಕ್ಷೇಪಣೆಯು ಅಂಗೀರಸ ಮಾಧವ ಮಂತ್ರಿಯೇ ವಿದ್ಯಾರಣ್ಯರೆಂಬ ತಪ್ಪು ಭಾವನೆಯಿಂದ ಹೊರಹೊಮ್ಮಿದುದಾಗಿದೆ. ಅಂಗೀರಸ ಮಾಧವ ಮಂತ್ರಿಯು ವಿದ್ಯಾರಣ್ಯರಲ್ಲವೆಂಬುದು ನಿಶ್ಚಯಿಸಲ್ಪಟ್ಟಿರುವುದರಿಂದ ಫಾದರ್ ಹೆರಾಸರ ಈ ಆಕ್ಷೇಪಣೆಗಳಲ್ಲಿಯೂ ತಿರುಳಿಲ್ಲ. ಸಂಗಮ ವಂಶದ ರಾಜರ ಕಾಲದ ಯಾವ ಶಾಸನದಲ್ಲಿಯೂ ವಿದ್ಯಾರಣ್ಯರು ಮಾಡಿದ ಸಹಾಯವು ಹೇಳ

1. Bukka I, more than anybody else was responsible for the establishment of the Kingdom of Vijayanagara.

ಲ್ಪಟ್ಟಿಲ್ಲ ಮತ್ತು ಅದನ್ನು ಹೇಳಿದ ಶಾಸನಗಳು ವಿಜಯನಗರವನ್ನು ಆಳಿದ ಮೂರನೆಯ ವಂಶದ ಕಾಲದವು; ವಿದ್ಯಾರಣ್ಯರು ವಿಜಯನಗರ ರಾಜ್ಯ ಸ್ಥಾಪನೆಗೆ ಸಹಾಯ ಮಾಡಿದ್ದರೆ ಅವರ ಜೀವಿತಕಾಲದ ಶಾಸನಗಳಲ್ಲಿಯೇ ಅದು ಉಲ್ಲೇಖಿಸಲ್ಪಡುತ್ತಿದ್ದಿತು ಎಂಬುದು ಮತ್ತೊಂದು ಆಕ್ಷೇಪಣೆ. ಆ ಆಕ್ಷೇಪಣೆಯಲ್ಲಿಯೂ ತಿರುಳಿಲ್ಲ. ಹಿಂದೆ ಹೇಳಿದಂತೆ—ಬಲ್ಲಾಳರ ಸಾಮ್ರಾಜ್ಯದ ನಂತರ ಸಂಗಮ ವಂಶದ ವಿಜಯನಗರದ ರಾಜ್ಯ ಸಂಸ್ಥಾಪನೆಯು ಬುಕ್ಕ ಭೂಪತಿಯ ಅಂತ್ಯ ಕಾಲದಲ್ಲಿಯೇ ಆಯಿತೆನ್ನಬಹುದಾದರೂ ಆತನು ಬಲ್ಲಾಳರ ರಾಜ್ಯವನ್ನೇ ಆಳುತ್ತಿದ್ದಂತೆ ಮಾಂಡಲಿಕನೆಂಬ ಹೆಸರಿನಿಂದಲೇ ಆಳಿದುದರಿಂದ, ಸ್ವತಂತ್ರ ಚಕ್ರಾಧಿಪತಿಯೆಂದು ಕರೆದು ಕೊಂಡ ಎರಡನೆಯ ಹರಿಹರನೇ ಸಂಗಮ ವಂಶದ ಮೊದಲ ಚಕ್ರವರ್ತಿ ಎನ್ನಬಹುದು. ಈತನು ರಾಜ್ಯವಾಳಿದುದು ೧೩೭೬ರಿಂದ ೧೪೦೪ರ ವರೆಗೆ. ವಿದ್ಯಾರಣ್ಯರು ಆ ಹೆಸರಿನಿಂದ ಶೃಂಗೇರಿ ಗುರುಗಳಾಗಿದ್ದುದು ಕ್ರಿ. ಶ. ೧೩೮೦ರಿಂದ ೧೩೮೬ರ ವರೆಗೆ ಎಂಬುದು ಶೃಂಗೇರಿ ಮಠದ ದಾಖಲೆ ಗಳಿಂದ ತಿಳಿದು ಬರುತ್ತದೆ. ಸ್ವಲ್ಪ ಹೆಚ್ಚುಕಡಮೆ ಆ ಕಾಲವೂ ಸರಿ ಎನ್ನಬಹುದಾದರೂ ಶೃಂಗೇರಿತೀರ್ಥದಲ್ಲಿ ಅನುಷ್ಠಾನ ಮಾಡಿಕೊಂಡಿದ್ದ ಭಾರತೀತೀರ್ಥ ಶ್ರೀಪಾದಗಳವರು ೧೩೭೪ ರಲ್ಲಿ ಶಿವೈಕ್ಯರಾದುದರಿಂದ ಆ ಸುಮಾರಿನಲ್ಲಿಯೇ ಎರಡನೆಯ ಹರಿಹರನು ಹಂಪೆಯಲ್ಲಿ ಗುರು ಗಳಾಗಿದ್ದ ವಿದ್ಯಾರಣ್ಯರನ್ನು ಕರೆಸಿಕೊಂಡು ಶೃಂಗೇರಿಮಠವನ್ನು ಕಟ್ಟಿಸಿ ಶೃಂಗೇರಿ ಮತ್ತು ವಿದ್ಯಾಶಂಕರ ಅಗ್ರಹಾರಗಳನ್ನು ರಚಿಸಿ ಅವರಿಗೆ ಒಪ್ಪಿಸಿರಬೇಕು. ಯಾರೊಬ್ಬರ ಜೀವನದ ಹಿರಿ ಮೆಯು ಮನಸ್ಸಿಗೆ ಹಿಡಿಯುವುದು ಅವರ ಮರಣಾನಂತರವಷ್ಟೆ. ಆದುದರಿಂದ ವಿದ್ಯಾರಣ್ಯರು ಜೀವಿಸಿದ ಕಾಲದಲ್ಲಿ ಅವರ ಉಪಕಾರದ ಸ್ಮರಣೆ ಶಾಸನಗಳಲ್ಲಿ ಇಲ್ಲ. ಎರಡನೆಯ ಹರಿಹರನ ಮಗನಾದ ದೇವರಾಯನು ಬರೆಸಿದ ಶಾಸನದಲ್ಲಿ "ಶ್ರೀ ಕ್ರಿಯಾಶಕ್ತಿ ಗುರುಮಂಚರಣ ಪರಿಚರಣ ಪ್ರಸಾದಾಸಾದಿತಮಹಿತಸರ್ವಜ್ಞಸಾಮ್ರಾಜ್ಯವೈಭವ" ತಾನೆಂದು ಬರೆಸಿಕೊಂಡು ವಿದ್ಯಾ ರಣ್ಯರು ಕ್ರಿಯಾಶಕ್ತಿ ಎಂಬ ಹೆಸರಿನಲ್ಲಿದ್ದಾಗ ಸಾಮ್ರಾಜ್ಯಸಂಘಟನೆಗೆ ಮಾಡಿದ ಮಹೋಪ ಕಾರವನ್ನು ನೆನಸಿಕೊಂಡನು. ಮುಂದಿನ ಕಾಲದಲ್ಲಿ ಕ್ರಿಯಾಶಕ್ತಿಗಳು ವಿದ್ಯಾರಣ್ಯರೆಂಬ ಹೆಸರಿ ನಿಂದಲೇ ಪ್ರಸಿದ್ಧರಾಗಿದ್ದರಾದುದರಿಂದ ವಿದ್ಯಾರಣ್ಯರೆಂಬ ಹೆಸರಿನಿಂದಲೇ ಅವರು ಸಂಸ್ಥಾನಕ್ಕೆ ಮಾಡಿದ ಉಪಕಾರವು ಶಾಸನಗಳಲ್ಲಿ ನೆನಸಿಕೊಳ್ಳಲ್ಪಟ್ಟಿದೆ. ಶೃಂಗೇರಿಗುರುಗಳು ಯಾವ ಶಾಸನವನ್ನೂ ಸೃಷ್ಟನೆ ಮಾಡಿಲ್ಲ. ಹಾಗೆ ಮಾಡುವ ಆವಶ್ಯಕತೆಯೂ ಇರಲಿಲ್ಲ. ಕ್ರಿಯಾ ಶಕ್ತಿಗಳ ಶಿಷ್ಯರಾದ ಆಂಗೀರಸಗೋತ್ರದ ಮಾಧವಾಚಾರ್ಯರೇ ವಿದ್ಯಾರಣ್ಯರೆಂಬ ಭ್ರಾಂತಿಯಿದ್ದುದರಿಂದಲೂ ವಿಜಯನಗರ ಸಂಸ್ಥಾನವನ್ನು ಒಂದನೇ ಹರಿಹರನು ಸ್ಥಾಪಿಸಿದ ನೆಂಬ ಭ್ರಾಂತಿಯಿದ್ದುದರಿಂದಲೂ, ಕ್ರಿಯಾಶಕ್ತಿಗಳೇ ವಿದ್ಯಾರಣ್ಯರು ಎಂಬುದು ಸಿದ್ಧಾಂತ ವಾಗಿರಲಿಲ್ಲವಾದುದರಿಂದಲೂ, ಕ್ರಿಯಾಶಕ್ತಿಗಳು ವಿದ್ಯಾರಣ್ಯರೆಂಬ ಹೆಸರಿನಿಂದ ಗುರು ವಾಗುವ ಮೊದಲೇ ಅವರು ಬುಕ್ಕ ಭೂಪನಿಗೆ ವಿಜಯನಗರ ಸಂಸ್ಥಾಪನೆಗೆ ಸಹಾಯ ಮಾಡಿ ದುದು—ಎಂಬುದು ಸ್ಪಷ್ಟವಾಗಿರಲಿಲ್ಲವಾದ್ದರಿಂದಲೂ, ಫ್ಲಾದರ್ ಹೆರಾಸರೇ ಮೊದಲಾದವರು ವಿದ್ಯಾರಣ್ಯರು ವಿಜಯನಗರ ಸಂಸ್ಥಾಪನೆಗೆ ಸಹಾಯ ಮಾಡಿದರೆಂಬ ಶಾಸನಗಳು ಸೃಷ್ಟನೆ ಯಾದವುಗಳೆಂದು ತೀರ್ಮಾನಿಸಲು ಕಾರಣವಾಯಿತು. ಮೊಲವು ಬೇಟೆನಾಯಿಯನ್ನು ಎದುರಿ ಸಿದ ಕಾಡಿನಲ್ಲಿ ವಿದ್ಯಾರಣ್ಯರು ಮಂತ್ರತಂತ್ರಗಳಿಂದ ವಿಜಯನಗರವನ್ನು ನಿರ್ಮಿಸಿ ೧ನೆಯ ಹರಿಹರನಿಗೆ ಪಟ್ಟಕಟ್ಟಿ ಸುವರ್ಣವರ್ಷ ಧಾರೆಯಾಗಿಸಿದರೆಂಬ ಐತಿಹ್ಯವನ್ನು ನಂಬಲಾಗುವು ದಿಲ್ಲವೆಂಬುದು ನಿಜ. ಆದರೆ ಏಕಶಿಲಾನಗರದಿಂದ ಹರಿಹರನ ಸಹೋದರರೂ ಕ್ರಿಯಾಶಕ್ತಿ

ವಿದ್ಯಾರಣ್ಯರೂ ಬಂದು ಬಲ್ಲಾಳ ರಾಜ್ಯವನ್ನು ಉಳಿಸಲು ಸಹಾಯಮಾಡದಿದ್ದರೆ ಮತ್ತು ಬುಕ್ಕ ಭೂಪತಿಗೆ ಅವರ ಶಿಷ್ಯರಾದ ಆಂಗೀರಸ ಮಾಧವ ಮಂತ್ರಿಯ ಮೂಲಕ ಸಹಾಯ ಮಾಡಿಸದಿದ್ದರೆ ಸಂಗಮ ವಂಶದವರು ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿ ಸನಾತನ ಭಾರತೀಯ ಧರ್ಮವನ್ನು ಉದ್ಧಾರ ಮಾಡುವುದು ಸಾಧ್ಯವಾಗುತ್ತಿರಲಿಲ್ಲವೆಂಬುದು ಅಷ್ಟೇ ನಿಜ. ಕಟ್ಟುಕಥೆಗಳ ಹಿನ್ನೆಲೆಯಲ್ಲಿರುವ ನಿಜಾಂಶವನ್ನು ಕಂಡುಹಿಡಿಯದೆ ಅರೆಬರೆ ನಿಜವಾದ ಅಂಶಗಳ ಆಧಾರದ ಮೇಲೆ ಶೃಂಗೇರಿ ಪೀಠದಂತಹ ಶ್ರೇಷ್ಠ ಪೀಠದ ಸನ್ಯಾಸಿಗಳ ವಿಷಯದಲ್ಲಿ ಸೃಷ್ಟನೆ ಮೋಸದ ಆಪಾದನೆಗಳನ್ನು ಫ್ಲಾದರ್ ಹೆರಾಸರು ಮಾಡಿರುವುದು ಫ್ಲಾದರ್ ಹೆಸರಿಗೆ ತಕ್ಕ ನಡೆಯಲ್ಲವೆನ್ನಲೇ ಬೇಕು.

"ಫಾದರ್ ಹೆರಾಸರವರ ಈ ಮೇಲಿನ ಅಭಿಪ್ರಾಯ ಕಟು ಮತ್ತು ಕಠೋರವಾದುದು. ಐದಾರು ನೂರು ವರ್ಷಗಳಿಂದ ನಡೆದು ಬಂದು ಬಹುಜನರು ಒಪ್ಪಿಕೊಂಡ ಅಭಿಪ್ರಾಯವನ್ನು ತಳ್ಳಿಹಾಕುವುದೂ ಕಠಿಣ. ಆದರೂ ಐತಿಹಾಸಿಕ ಆಧಾರಗಳ ಮೇಲೆ ನಿಲ್ಲಲಾರದ ಸಂಗತಿಗಳನ್ನು ನಂಬುವುದು ಕಠಿಣ. ಫ್ಲಾದರ್ ಹೆರಾಸರು ತೋರಿಸಿದ ಆಧಾರಗಳನ್ನು ಖಂಡಿಸುವ ಪ್ರಬಲವಾದ ಸಾಧನಗಳು ದೊರೆಯುವವರೆಗೆ ಅವರು ಹೀಗೆ ಹೇಳಿದ ಮಾತುಗಳನ್ನು ಒಪ್ಪಿಕೊಳ್ಳಬೇಕಾಗುವುದು" ಎಂದು ಡಾ|| ನಂದಿಮಠರು ವೀರಶೈವ ತ್ರೈಮಾಸಿಕದಲ್ಲಿ[1] ಹೇಳಿರುವುದನ್ನು ಹಿಂದೆಯೇ ಹೇಳಲಾಯಿತು. "ಈ ಮಹಾನುಭಾವ ಹೇಳಿ ಮೂವತ್ತುಮೂರು ವರ್ಷಗಳಾದರೂ ಭಾರತೀಯ ಸನ್ಯಾಸಿಗಳೇ ಆಗಲೀ ಇತಿಹಾಸಸಂಶೋಧಕರೇ ಆಗಲಿ ಪಾದ್ರಿಗಳ ಈ ಸುಳ್ಳನ್ನು, ಈ ಅಸಹ್ಯ ಆಪಾದನೆಯನ್ನು ಶಿಲುಬೆಗೆ ಏರಿಸಲಿಲ್ಲವಲ್ಲಾ—ಎಂಬುದೇ ಮಹದಾಶ್ಚರ್ಯ" ಎಂದು ಮಾನ್ಯ ತಿರುಮಲೆ ತಾತಾಚಾರ್ಯಶರ್ಮರು ಕರ್ಮವೀರದ ೧೯೬೧ನೆಯ ಇಸವಿಯ ದೀಪಾವಳಿ ಸಂಚಿಕೆಯ ೧೧ನೆಯ ಪುಟದಲ್ಲಿ ಬರೆದಿದ್ದಾರೆ. ಈ ಲೇಖನಕ್ಕೂ ಅದರ ತಳಹದಿಯಾದ ಅನ್ವೇಷಣಕ್ಕೂ ಈ ಮಾನ್ಯರುಗಳ ಉದ್ಗಾರವು ಸ್ವಲ್ಪಮಟ್ಟಿಗೆ ಪ್ರಚೋದನಕಾರಿಯಾಯಿತೆನ್ನಬಹುದು. ಫ್ಲಾದರ್ ಹೆರಾಸರು ಶೃಂಗೇರಿಗುರುಗಳ ವಿಷಯದಲ್ಲಿ ಮಾಡಿರುವ ಕಠೋರವಾದ ಆಪಾದನೆಗಳನ್ನು ಖಂಡಿಸಲು ಪ್ರಬಲವಾದ ಸಾಧನಗಳು ಈಗ ದೊರೆತಿರುವುದು ಸಮಾಧಾನಕರ ವಿಷಯವಾಗಿದೆ.

## ವಿಜಯನಗರ ಸಂಸ್ಥಾನದಿಂದ ಶೃಂಗೇರಿಮಠದ ಸ್ಥಾಪನೆ

ಶ್ರೀಶಂಕರ ಭಗವತ್ಪಾದಾಚಾರ್ಯರ ಭಾಷ್ಯಗಳನ್ನೆಲ್ಲಾ ವಿಚಾರಪೂರ್ವಕವಾಗಿ ಮನನ ಮಾಡಿಕೊಂಡು ಅವನ್ನು ಕನ್ನಡದಲ್ಲಿ ಭಾಷಾಂತರಿಸಿ ಬರೆದ ಸಾಹಸವು ಹಿಮಗಿರಿ ಶಿಖರವನ್ನೇರಿದಷ್ಟೇ ಸಾಹಸಕಾರ್ಯ. ಇಂತಹ ಕಾರ್ಯವನ್ನು ಸಾಧಿಸಿದ ಹಿರಿಮೆ ಹೊಳೆನರಸೀಪುರದ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರದು. ಇವರು ಬರೆದಿರುವ "ಶ್ರೀ ಶಂಕರ ಭಗವತ್ಪಾದ ವೃತ್ತಾಂತ ಸಾರಸರ್ವಸ್ವ ಗ್ರಂಥದ ೯೦ನೆಯ ಪುಟದಲ್ಲಿ ಹೇಳಿದಂತೆ—"ಆಚಾರ್ಯರು ಕರ್ಮ ಸನ್ಯಾಸವನ್ನು ತೆಗೆದುಕೊಂಡಾಗಲೇ ಮಠ ಸ್ಥಾಪನೆಯಾಯಿತೆಂದು ಯಾರೂ ಒಪ್ಪುವುದಿಲ್ಲ. ಸರ್ವಕರ್ಮಸನ್ಯಾಸವನ್ನು ಮಾಡುವ ಪರಮಹಂಸರಿಗೆ ದೇವತಾರ್ಚನೆಯು ಎಲ್ಲಿಯೂ ವಿಹಿತವಾಗಿರುವುದಿಲ್ಲ; ಆಚಾರ್ಯರ ಭಾಷ್ಯಗಳಲ್ಲಿ ಎಲ್ಲಿಯೂ ಅಂಗೀಕೃತವಾಗಿಲ್ಲ" ಶ್ರೀ ಶಂಕರಾಚಾರ್ಯರು ಅನೇಕ ದೇವತಾ ಪ್ರಾರ್ಥನೆಗಳನ್ನು ಮಾಡಿರುವರೆಂದು ನಂಬಲಾಗಿದೆ; ಆದರೆ

---

೧. ಸಂಪುಟ V, ಸಂಚಿಕೆ H2.

ಶಾರದಾ ಸ್ತುತಿಯನ್ನು ಮಾಡಿದಂತೆ ಕಂಡುಬರುವುದಿಲ್ಲ. ಶ್ರೀ ಶಂಕರಾಚಾರ್ಯರು, ಒಂದು ವೇಳೆ, ಶೃಂಗೇರಿ ಮಠದ ಸ್ಥಾಪನೆಯನ್ನು ಮಾಡಿದ್ದರೂ ಅದು ಅನೇಕ ಶತಮಾನಗಳ ಮೇಲೆ. ಅದು ಅಸ್ತಿತ್ವವಾಗಿದ್ದುದು ಕಂಡುಬಂದಿಲ್ಲ. ವಿದ್ಯಾತೀರ್ಥರ ಕಾಲಕ್ಕೆ ಹಿಂದೆ ಶೃಂಗೇರಿ ವಿಷಯವಾಗಲೀ, ಶೃಂಗೇರಿ ಗುರುಗಳ ವಿಷಯವಾಗಲೀ ಯಾವ ಶಾಸನದಲ್ಲಿಯೂ ಉಕ್ತವಾಗಿಲ್ಲವೆಂಪೂ, ಅವರ ವಿಷಯವಾಗಿ ಏನೂ ತಿಳಿಯದೆಂದೂ ಪ್ರಾಕ್ತನ ವಿಮರ್ಶ ವಿಚಕ್ಷಣ ನರಸಿಂಹಾಚಾರ್ಯರು (VIII Q J M S. 18ರಲ್ಲಿ) ಹೇಳಿದ್ದಾರೆ. ಕ್ರಿ.ಶ. ೧೩೪೬ನೆಯ ಇಸವಿಯ E C. VI Sq. ೧ ಶಿಲಾ ಶಾಸನವೇ ಶೃಂಗೇರಿ ವಿಷಯ ಮೊದಲನೆಯ ಶಾಸನವೆಂದು ತೋರುತ್ತದೆ. ಹಿಂದೆ ಹೇಳಿದಂತೆ ಈ ಶಾಸನವು ಸಂಗಮ ವಂಶದ ವಿಜಯನಗರ ರಾಜ್ಯ ಸ್ಥಾಪನೆಯು ಆಗ ಆಗಿರಲಿಲ್ಲವೆಂಬ ವಿಷಯದಲ್ಲಿ ಬೆಳಕನ್ನು ಬೀರುವಂತೆಯೇ ಶೃಂಗೇರಿ ಮಠವು ಆಗ ಸ್ಥಾಪನೆಯಾಗಿರಲಿಲ್ಲವೆಂಬುದನ್ನೂ ಸೂಚಿಸುತ್ತದೆ. ಶೃಂಗೇರಿ ಪಟ್ಟಣ ವಿಷಯವಾಗಲೀ, ಶೃಂಗೇರಿಯ ಮಠದ ವಿಷಯವಾಗಲೀ, ಅವುಗಳು ಆಗ ಅಸ್ತಿತ್ವದಲ್ಲಿದ್ದರೆ ಅದರಲ್ಲಿ ಬರೆಯಲಾಗುತ್ತಿತ್ತು; ಏಕೆಂದರೆ ಆ ಪುರದ ಆ ಮಠದ ಗುರುಗಳೆಂದು ನಂಬಲ್ಪಟ್ಟಿರುವ ಭಾರತೀ ತೀರ್ಥರಿಗೆ ದಾನಮಾಡಿದ ವಿಷಯವು ಅದರಲ್ಲಿದೆ. ಭಾರತೀ ತೀರ್ಥರು ಆ ಮಠದ ಗುರುಗಳಾಗಿದ್ದ ಮಾತಿರಲಿ, ಅವರು ಆ ಹಿಂದೆ ಶೃಂಗೇರಿ ತೀರ್ಥವಾಸದಲ್ಲಿ ಅನುಷ್ಠಾನ ಮಾಡಿಕೊಂಡಿದ್ದುದೂ ಅದರಲ್ಲಿ ಕಂಡು ಬರುವುದಿಲ್ಲ; ಅಲ್ಲಿ ಅನುಷ್ಠಾನ ಮಾಡಿಕೊಂಡಿದ್ದ ಭಾರತೀತೀರ್ಥರಿಗೆ ದಾನ ಮಾಡಿದೆ ಎಂದು ಶಾಸನದಲ್ಲಿ ಹೇಳಿಲ್ಲ. ಒಂದನೇ ಹರಿಹರನಿದ್ದ ಏಕಶಿಲಾ ನಗರದಿಂದ ಬಂದು ಮುಂದೆ ವಿದ್ಯಾರಣ್ಯರಾದವರು ಹಂಪೆಯಲ್ಲಿ ತಪಸ್ಸನ್ನು ಮಾಡಲು ವ್ಯವಸ್ಥೆಯಾದ ಮೇಲೆ, ಅವರ ಸಹೋದರರಾದ "ಭಾರತೀತೀರ್ಥ ಶ್ರೀಪಾದಂಗಳೂ ಅವರ ಶಿಷ್ಯಾದಿಗಳೂ ಆ ಶೃಂಗೇರಿ ತೀರ್ಥವಾಸದ ಅನುಷ್ಠಾನ ಮಾಡಿಕೊಂಡಿದ್ದುದಕ್ಕೆ ಒಂದನೇ ಹರಿಹರನು ಈ ಶಾಸನದ ಪ್ರಕಾರ ವ್ಯವಸ್ಥೆ ಮಾಡಿದುದು ಕಂಡುಬರುತ್ತದೆ. ಈ ಶಾಸನದಲ್ಲಿ ಹೇಳಿದಂತೆ ಒಂದನೇ ಹರಿಹರನು ಮಾಂಡಲಿಕನು, ಮಹಾರಾಜನಲ್ಲ; ಕೊನೆಯವರೆಗೂ ಅವನು ಬಲ್ಲಾಳ ಚಕ್ರವರ್ತಿಯ ಅಧೀನದಲ್ಲಿ ಮಾಂಡಲಿಕನಾಗಿಯೇ ಇದ್ದನೆಂಬುದು ಹಿಂದೆಯೇ ಹೇಳಿದೆ. ಇವನ ತಮ್ಮನ ಮಗನಾದ ಎರಡನೆಯ ಹರಿಹರನೇ ಸಂಗಮವಂಶದ ಮೊದಲನೆಯ ಸ್ವತಂತ್ರ ಮಹಾರಾಜನು. ಶೃಂಗೇರಿ ೧೧ನೆಯ ಶಾಸನದಲ್ಲಿ ಹೇಳಿದಂತೆ "ಪಂಪಾತೀರ ನಿವಾಸ ಶ್ರೀ ವಿರೂಪಾಕ್ಷ ಪ್ರಸಾದಾಸಾದಿತ ತಪೋಬಲದಿಂದ ವಿದ್ಯಾನಗರ ನಿರ್ಮಾಣವ ಮಾಡಿ, ಹರಿಹರ ಮಹಾರಾಯರನು ಪಟ್ಟಾಭಿಷೇಕವ ಮಾಡಿದ ನಂತರದಲ್ಲಿ ಶ್ರೀಮದ್ರಾಜಾಧಿರಾಜ ಪರಮೇಶ್ವರ . . . ಶ್ರೀಮದ್ ಹರಿಹರ ಮಹಾರಾಯರು ಶೃಂಗಪುರದಲ್ಲಿ ಶಂಕರಾಚಾರ್ಯರು ನಿರ್ಮಾಣ ಮಾಡಿದ ಧರ್ಮಪೀಠದಲ್ಲಿ ಮಠ ಅಗ್ರಹಾರವಿರಬೇಕೆಂದು ಬಿನ್ನಹಂ ಮಾಡಿಕೊಂಡು . . . ಶೃಂಗಪುರ ವಿದ್ಯಾರಣ್ಯಪುರದ ಅಗ್ರಹಾರಂಗಳ ನಿರ್ಮಾಣವ ಮಾಡಿ . . . ವಿದ್ಯಾರಣ್ಯ ಭಾರತೀ ಸ್ವಾಮಿಗಳ ಪಾದಕ್ಕೆ ಸಮರ್ಪಿಸಿದ"ನೆಂಬುದು ತಿಳಿದು ಬರುತ್ತದೆ. ಇದರಿಂದ ಸಂಗಮ ವಂಶದವರಲ್ಲಿ ಮೊದಲು ರಾಜಾಧಿರಾಜ ಪರಮೇಶ್ವರನಾದ ಎರಡನೆಯ ಹರಿಹರನು ಹಂಪೆಯ ವಿರೂಪಾಕ್ಷ ಸನ್ನಿಧಿಯಲ್ಲಿ ತಪಸ್ಸು ಮಾಡಿಕೊಂಡಿದ್ದ ವಿದ್ಯಾರಣ್ಯರಿಗಾಗಿ ಮಠವನ್ನು ಶೃಂಗೇರಿಪುರ ಮತ್ತು ವಿದ್ಯಾರಣ್ಯಪುರ ಅಗ್ರಹಾರಗಳನ್ನು ಕಟ್ಟಿಸಿ ಅವರ ಪಾದಕ್ಕೆ ಸಮರ್ಪಿಸಿದನು. ಅವುಗಳನ್ನು ಅವನು ವಿಜ್ಞಾಪಿಸಿಕೊಂಡುದರಿಂದ ಆ ಕಾಲದಲ್ಲಿ ಅವು ಇರಲಿಲ್ಲವೆಂಬುದು ಸ್ಪಷ್ಟ. ಶಾಸನದಲ್ಲಿ ಉಕ್ತವಾದ "ಶಂಕರಾಚಾರ್ಯರು ನಿರ್ಮಾಣ ಮಾಡಿದ ಧರ್ಮಪೀಠದ ವಿಷಯ

ದಲ್ಲಿನ ಪ್ರತೀತಿಯು ಹೀಗಿದೆ—೧೯೬೫ನೆಯ ಮೇ ತಿಂಗಳ ಸುಧಾ ಸಂಚಿಕೆಯಲ್ಲಿ "ಶ್ರೀ ಎಸ್. ಕೆ. ರಾಮಚಂದ್ರರಾಯರು ಬರೆದಿರುವಂತೆ," ಶಂಕರಾಚಾರ್ಯರು ಇಲ್ಲಿಗೆ ಬಂದು ಬಂಡೆಯೊಂದರ ಮೇಲೆ ಶ್ರೀ ಚಕ್ರವನ್ನು ರಚಿಸಿ ಚಕ್ರದುರ್ಗಯಂತ್ರದಿಂದ ಶಾರದೆಯನ್ನು ಇಲ್ಲಿ ನಿಲ್ಲಿಸಿದರೆಂದು ಪ್ರತೀತಿ . . . ಈ ಮಠದ ಪ್ರಾಚೀನ ಗುರುಗಳ ಕಾಲದಲ್ಲಿ ಮಠ ಎಂಬ ಸಂಸ್ಥೆ ಇದ್ದಿರಲಾರದು" ವಿಜಯನಗರ ರಾಜ್ಯ ಸ್ಥಾಪನೆಗೆ ನೆರವಾಗಲು ತಮಿಳು ದೇಶದಿಂದ ಬಂದ ವಿದ್ಯಾತೀರ್ಥರು ಸಿಂಹಗಿರಿಯ ಪ್ರಶಸ್ತ ಸ್ಥಲದಲ್ಲಿ ತಪಸ್ಸು ಮಾಡಿಕೊಂಡಿದ್ದರು. ಅವರು ಶೃಂಗೇರಿಮಠದ ಗುರುಗಳೆಂದು ಅವರ ಶಿಷ್ಯರಾದ ಸಾಯಣಾದಿಗಳು ಅವರನ್ನು ಕುರಿತು ಮಾಡಿದ ಸ್ತೋತ್ರಗಳಲ್ಲಿ ಹೇಳಿರುವುದು ಕಂಡು ಬಂದಿಲ್ಲ. ಶಾಸನಗಳಲ್ಲಿ ಅವರು ಹೊಗಳಲ್ಪಟ್ಟಿದ್ದರೂ ಅವರು ಶೃಂಗೇರಿ ಮಠದಲ್ಲಿ ಯೋಗಸಾಮ್ರಾಜ್ಯದಲ್ಲಿ ನಿರತರಾಗ್ದಿರೆಂದು ಇತರ ಗುರುಗಳ ವಿಷಯದಲ್ಲಿ ಹೇಳಿದ ದಂತೆ ಹೇಳಿಲ್ಲ. ಅವರ ಕಾರ್ಯಭಾರವೆಲ್ಲವೂ ವಿಜಯನಗರದ ಕಡೆಯೇ ಇದ್ದುದರಿಂದ ಅವರ ವಿಷಯದ ಶಾಸನಗಳು ಅಲ್ಲಿ ದೊರೆಯುವುವೇ ಹೊರತು ತಮಿಳುನಾಡಿನಲ್ಲಿ ಅಲ್ಲ. ಇವರ ಶಿಷ್ಯ ರಾದ ಕ್ರಿಯಾಶಕ್ತಿ ವಿದ್ಯಾರಣ್ಯರನ್ನು ಅವರು ಹಂಪೆಯ ಮಠದಲ್ಲಿ ಗುರುಗಳನ್ನಾಗಿ ಮಾಡಿದು ದಕ್ಕೆ ಆಧಾರವಿದೆ ಅವರ ಸಮಾಧಿಯು ಅಲ್ಲಿಯೇ ಇರುವುದರಿಂದ ಹಂಪೆಯೇ ಅವರ ಮುಖ್ಯ ಕಾರ್ಯಸ್ಥಾನವಾಗಿದ್ದುದೆಂಬುದರಲ್ಲಿ ಸಂಶಯವಿಲ್ಲ. ಅವರ ಅನುಜರಾದ ಭಾರತೀತೀರ್ಥ ರನ್ನು ಮೊದಲನೆಯ ಹರಿಹರನು ಶೃಂಗೇರಿತೀರ್ಥವಾಸದಲ್ಲಿ ಅನುಷ್ಠಾನ ಮಾಡಿಕೊಂಡಿರಲು ಶೃಂಗೇರಿಯ ೧ನೆಯ ಶಾಸನದಲ್ಲಿ ಹೇಳಿದಂತೆ ಅನುಕೂಲ ಮಾಡಿಕೊಟ್ಟನು. ಇವರು ೧೩೭೪ರಲ್ಲಿ ದಿವಂಗತರಾಗಲು ಶೃಂಗೇರಿಮಠವನ್ನೂ ಶೃಂಗಪುರಿ ಮತ್ತು ವಿದ್ಯಾರಣ್ಯಪುರಿ ಅಗ್ರಹಾರ ಗಳನ್ನೂ ಎರಡನೆಯ ಹರಿಹರನು ರಾಜನಾದ ಮೇಲೆ ಕಟ್ಟಿಸಿ ಕೊಟ್ಟನು. ಆ ಹಿಂದೆ ಶೃಂಗೇರಿ ಮಠವಿದ್ದುದಕ್ಕೆ ಸಮಕಾಲೀನ ಶಾಸನವಾಗಲೀ ಸಮಕಾಲೀನ ಇತರ ಆಧಾರವಾಗಲೀ ಇಲ್ಲ. ವಿಜಯನಗರದ ಶಾಸನಗಳಲ್ಲಿ ಅನೇಕ ಶಾಸನಗಳು ನಿಜವಾದುದಲ್ಲವೆಂಬುದನ್ನು ಎಲ್ಲರೂ ಒಪ್ಪಿ ದ್ದಾರೆ. ಹರಿಹರ ದ್ವಿತೀಯನ ತಾಮ್ರಶಾಸನಗಳಲ್ಲಿ ಒಂದಾದ ವಿದ್ಯಾರಣ್ಯರು ೧೩೮೬ರಲ್ಲಿ ನಿಧನರಾದರೆಂದು ಹೇಳುವ ಶಾಸನದಲ್ಲಿ ಹೇಳಿರುವ ನಿಧನ ಕಾಲಕ್ಕಿಂತ ಮೂವತ್ತುನಾಲ್ಕು ದಿನ ಗಳ ನಂತರ ವಿದ್ಯಾರಣ್ಯರ ಎದುರಿನಲ್ಲಿಯೇ ದಾನ ಮಾಡಿದಂತೆ ಅವನ ಮತ್ತೊಂದು ಶಾಸನವು ಹೇಳುತ್ತದೆ. ಅಲ್ಲದೆ ಇವುಗಳ ಪ್ರಕಾರ ವಿದ್ಯಾರಣ್ಯರೇ ಭಾರತೀತೀರ್ಥರ ಗುರುಗಳೆಂಬಂತೆ ತಿರುಗುಮುರುಗಾಗಿ ಹೇಳಿದೆ. ಈ ದೃಷ್ಟಿಯಿಂದ ಇವುಗಳು ಸರಿಯಾದುದಲ್ಲವೆಂದು ಡಾ. ವೆಂಕಟ ಸುಬ್ಬಯ್ಯನವರು (VIII Q J. M. S. P. 118-136) ಲೇಖನದಲ್ಲಿ ನಿರ್ಧರಿಸಿದ್ದಾರೆ. ಇಂತಹ ಅನುಮಾನಗಳಿಗೆ ಆಸ್ಪದ ಕೊಡದಿರುವ ಶೃಂಗೇರಿ, ೧, ೧೧ ಮತ್ತು ೧೩ನೆಯ ಶಿಲಾ ಶಾಸನಗಳಲ್ಲಿ ಹೇಳಿರುವುದನ್ನು ವಿಚಾರದೃಷ್ಟಿಯಿಂದ ಪರಿಶೀಲಿಸಿದರೆ, ವಿಜಯನಗರ ಸಾಮ್ರಾಜ್ಯ ಚಕ್ರವರ್ತಿ ಹರಿಹರ ದ್ವಿತೀಯನು ಶೃಂಗೇರಿಮಠವನ್ನು ಶೃಂಗೇರಿ ಮತ್ತು ವಿದ್ಯಾ ರಣ್ಯಪುರಗಳನ್ನು ಸ್ಥಾಪಿಸಿದನೆಂಬುದರಲ್ಲಿ ಸಂದೇಹ ಬರುವುದಿಲ್ಲ.

ಹಿರಿಯ ಮಠದವರು ತಮ್ಮ ಪರಂಪರೆಯನ್ನು ಹೇಳುವಾಗ ಮೂಲಗುರುವಿನಿಂದ ಪ್ರಾರಂಭಿಸುವರಷ್ಟೆ. ಶೃಂಗೇರಿಗುರುಗಳು ವಿದ್ಯಾರಣ್ಯರಿಂದ ತಮ್ಮ ಪರಂಪರೆಯನ್ನು ಪ್ರಾರಂಭಿಸುವುದು ಶೃಂಗೇರಿ ೧೭ ಮತ್ತು ೨೪ನೆಯ ಶಾಸನಗಳಲ್ಲಿ ಕಂಡುಬರುತ್ತದೆ. ಶೃಂಗೇರಿ ಹನ್ನೆಂಟು ಮತ್ತು ಅದನ್ನೇ ಪದಶಃ ನೋಡಿಬರೆದಿರುವ ಶೃಂಗೇರಿ ಹದಿನೂರನೆಯ ಶಾಸನಗಳಲ್ಲಿ ಶೃಂಗೇರಿಗುರುಗಳು ಶಂಕರಾಚಾರ್ಯರ ಪರಂಪರೆಯವರೆಂದು ಹೇಳಿದೆ.

ವಿಜಯನಗರ ಪತನವಾದನಂತರ ಅದರೊಡನೆ ಹೀನಸ್ಥಿತಿಗೆ ಬಂದ ಶೃಂಗೇರಿಮಠವನ್ನು ಕೆಳದಿ ರಾಜನು ಉದ್ಧಾರ ಮಾಡಿದುದನ್ನು ಹೇಳುವ ಈ ಶಾಸನಗಳಲ್ಲಿ ಮಠದ ಹಿರಿಮೆಯನ್ನು ತೋರಿಸಲು ಹೇಳಿದ ಮಾತುಗಳಿವು; ಶಾಂಕರ ಸಾಂಪ್ರದಾಯದವರೆಂಬ ದೃಷ್ಟಿಯಿಂದಲೂ ಹಾಗೆ ಹೇಳಬೇಕು; ಅಥವಾ ಶಂಕರಾಚಾರ್ಯರ ಪರಂಪರೆಯು ಮಧ್ಯೆ ನಿಂತುಹೋಗಿ ವಿದ್ಯಾರಣ್ಯರಿಂದ ಪ್ರಾರಂಭವಾದುದು, ಎರಡು ರೀತಿ ಪರಂಪರೆಯನ್ನು ಹೇಳುವುದಕ್ಕೆ ಕಾರಣ ವಾಗಿರಬೇಕು. ಶಂಕರಮಠಗಳ ವಿಷಯವಾಗಿ "ಶಂಕರ ಭಾಗವತ್ಪಾದ ವೃತ್ತಾಂತ ಸಾರ ಸರ್ವಸ್ವ" ಎಂಬ ಪೂರ್ವೋಕ್ತ ಗ್ರಂಥದ ೩೫೨ನೆಯ ಪುಟದಲ್ಲಿ ಹೇಳಿದಂತೆ "ಈ ಮಠಗಳೆಲ್ಲಾ, ಮಠದ ಮುದ್ರೆಯಲ್ಲಿ "ವಿದ್ಯಾರಣ್ಯ" ಅಥವಾ "ವಿದ್ಯಾಶಂಕರ" ಎಂಬ ಹೆಸರುಗಳನ್ನು ಇಟ್ಟು ಕೊಂಡಿವೆ. ಈ ಎರಡು ಹೆಸರುಗಳೂ ಒಬ್ಬರದೇ" ಎಂದು ಕಾಂಚಿ ಕಾಮಕೋಟಿಪೀಠದ ಪರವಾದ ಅಭಿಪ್ರಾಯವನ್ನು ಹೇಳಿದೆ. ವಿದ್ಯಾರಣ್ಯರೇ ವಿದ್ಯಾಶಂಕರರು ಎಂದು ಹಿಂದೆ ನಿರ್ಧರಿಸಲಾಗಿದೆಯಷ್ಟೆ. ಮಠದ ಮುದ್ರೆಯಲ್ಲಿ "ವಿದ್ಯಾರಣ್ಯ" "ವಿದ್ಯಾಶಂಕರ" ಎಂದಿರು ವುದು ಈ ಮಠದ ಮೂಲಗುರುಗಳಾರು ಎಂಬುದನ್ನು ಸೂಚಿಸುತ್ತದೆ. ಹಿಂದೆ ನಿರ್ಧರಿಸಿದಂತೆ ವಿದ್ಯಾಶಂಕರರು ಎಂಬ ಅಭಿಪ್ರಾಯವು ಇದರಿಂದ ಸಮರ್ಥನೆಯಾಗುವುದಲ್ಲದೆ ವಿದ್ಯಾರಣ್ಯರೇ ಇಂದಿನ ಶೃಂಗೇರಿಮಠಕ್ಕೆ ಆದಿಗುರುಗಳು ಎಂಬುದನ್ನು ಸೂಚಿಸುತ್ತದೆ.

ಒಟ್ಟಾರೆ ಹೀಗೆ ಹೇಳಬಹುದು—ತುರುಷ್ಕರ ಆಕ್ರಮಣವನ್ನು ತಡೆದು ಹಿಂದೂ ಧರ್ಮೋ ದ್ಧಾರ ಮಾಡಲು ಹೊಯ್ಸಳ ಬಲ್ಲಾಳ ತೃತೀಯನಿಗೆ ನೆರವಾದರು. ಕಾಕತೀಯ ರಾಜ್ಯದಿಂದ ಬಂದ ಹರಿಹರ ಸಹೋದರರೂ, ವಿದ್ಯಾರಣ್ಯರಾಗಿ ಮುಂದೆ ರಾರಾಜಿಸಿದವರೂ ಅವರ ಸಹೋದ ರರೂ ಕಾಕತೀಯ ರಾಜ್ಯದಿಂದ ಹೊಯ್ಸಳ ರಾಜ್ಯಕ್ಕೆ ಹಿಂದೂ ಧರ್ಮೋದ್ಧಾರಕ್ಕಾಗಿ ಬಂದರು; ವಿದ್ಯಾತೀರ್ಥರು ತಮಿಳುನಾಡಿನಿಂದ ಬಂದು ಇವರಿಗೆ ಮಾರ್ಗದರ್ಶಕರೂ ಗುರುಗಳೂ ಆದರು; ಇವರು ವಿದ್ಯಾರಣ್ಯರನ್ನು ಹಂಪೆಯಲ್ಲಿ ಗುರುಗಳನ್ನಾಗಿ ನಿಲ್ಲಿಸಲು, ಅವರು ಮಾಧವ ಮಂತ್ರಿ ಮೊದಲಾದ ಶಿಷ್ಯರ ಸಹಾಯದಿಂದ ತುರುಷ್ಕರನ್ನು ಓಡಿಸಲು ಬುಕ್ಕಭೂಪತಿಗೆ ಸಹಾಯ ಮಾಡಿದರು. ಒಂದನೇ ಹರಿಹರನು ಏಕಶಿಲಾ ನಗರದಿಂದಲೇ ಬಂದ ಭಾರತೀತೀರ್ಥರಿಗೆ ಶಿಷ್ಯರೊಡನೆ ಅನುಷ್ಠಾನ ಮಾಡಿಕೊಂಡಿರಲು ವ್ಯವಸ್ಥೆಮಾಡಿದನು. ಇವನ ಕಾಲದಲ್ಲಿ ಬಲ್ಲಾಳ ರಾಜ್ಯವು ನೆಲೆಯಾಗಿ ನಿಲ್ಲಲು ಸಹಾಯವಾಯಿತು. ಮಾಂಡಲಿಕನಾಗಿಯೇ ವಯಸ್ಕನಾದ ಇವನು ಮಡಿದನಂತರ, ಚಕ್ರಾಧಿಪತ್ಯವನ್ನು ಬುಕ್ಕಭೂಪತಿಯೂ ಅವನ ಮಂತ್ರಿ ಮಾಧವನೂ ಕಟ್ಟಿದರು. ಹರಿಹರ ದ್ವಿತೀಯನೇ ಸ್ವತಂತ್ರನಾದ ಸಂಗಮವಂಶದ ಮೊದಲನೆಯ ಚಕ್ರವರ್ತಿ. ಇವನೇ ಶೃಂಗೇರಿಮಠವನ್ನು ಕಟ್ಟಿಸಿ ಅದರ ಪ್ರಪ್ರಥಮ ಗುರುವನ್ನಾಗಿ ವಿದ್ಯಾರಣ್ಯರಿಗೆ ಗುರು ಪಟ್ಟವನ್ನು ಕಟ್ಟಿದನು ಎನ್ನಬಹುದು.

ವಿದ್ಯಾರಣ್ಯರು ಅವರ ಪೂರ್ವಾಶ್ರಮದಲ್ಲಿ ಕ್ರಿಯಾಶಕ್ತಿಯೆಂಬ ಹೆಸರಿನಿಂದ ಬಲ್ಲಾಳ ಚಕ್ರವರ್ತಿಯ ರಾಜ್ಯವನ್ನು ಉಳಿಸಿದ, ಮತ್ತು ಅವನ ವಂಶದವರು ಅಳಿದಮೇಲೆ ಬುಕ್ಕ ಭೂಪತಿಯು ಸಂಗಮ ವಂಶದ ವಿಜಯನಗರ ರಾಜ್ಯವನ್ನು ಕಟ್ಟಲು ಸಹಾಯಮಾಡಿದ ರಾಜ ಕಾರಣಿಗಳೂ ಅಹುದು, ತಪಸ್ವಿಗಳೂ ಅಹುದು. ಇವರ ಗುರುಗಳಾಗಿದ್ದು ಸಿಂಹಗಿರಿಯಲ್ಲಿ ತಪಸ್ಸುಮಾಡುತ್ತಿದ್ದ ವಿದ್ಯಾತೀರ್ಥರ ಪ್ರಭಾವವು ಇವರ ಮತ್ತು ಶೃಂಗೇರಿತೀರ್ಥದಲ್ಲಿ ಅನುಷ್ಠಾನ ಮಾಡಿಕೊಂಡಿದ್ದ ಭಾರತೀತೀರ್ಥರು ಮತ್ತು ಬುಕ್ಕಭೂಪತಿ ಸಾಯಣಾನುಜರೇ ಮೊದಲಾದ ಅನೇಕ ಶಿಷ್ಯರ ಮೇಲೆ ಬಿದ್ದು ಧರ್ಮೋದ್ಧಾರಕ್ಕೆ ಪ್ರೋತ್ಸಾಹ ಕೊಟ್ಟಿತು.

ವಿದ್ಯಾತೀರ್ಥರೂ ಭಾರತೀತೀರ್ಥರೂ ಶೃಂಗೇರಿಯಲ್ಲಿಯೇ ಆಶ್ರಮವಾಸಿಗಳಾಗಿ ಇದ್ದುದರಿಂದಲೂ ವಿದ್ಯಾರಣ್ಯರಿಗೆ ಗುರುಗಳಾಗಿದ್ದವರಿಂದಲೂ ಅವರೂ ಶೃಂಗೇರಿಗುರುಗಳೆಂದೇ ಭಾವಿಸಲ್ಪಟ್ಟಿರುವುದರಲ್ಲಿ ಆಶ್ಚರ್ಯವಿಲ್ಲ. ಸಮಕಾಲೀನ ಶಿಷ್ಯರು ಅವರನ್ನು ಸ್ತೋತ್ರಮಾಡಿರುವುದರಿಂದ ಅಂತಹ ಸ್ತೋತ್ರಗಳಲ್ಲಿ ಅವರನ್ನು ಶೃಂಗೇರಿಗುರುಗಳೆಂದು ಉಲ್ಲೇಖಿಸಿದ್ದಾರೆಯೇ ಎಂಬುದು ವಿಚಾರಾರ್ಹವಾದುದು; ಅಂತಹ ಉಲ್ಲೇಖಗಳಾವುವೂ ನನ್ನ ಗಮನಕ್ಕೆ ಬಂದಿಲ್ಲ. ಅವರು ಶೃಂಗೇರಿಗುರುಗಳಾಗಿದ್ದುದೂ ಇಲ್ಲದುದೂ ಮಹತ್ವ ವಿಷಯವಲ್ಲ; ಅವರು ಹಿಂದೂ ಧರ್ಮಕ್ಕೆ ಮಾಡಿದ ಉಪಕಾರವು ಚಿರಸ್ಮರಣೀಯವಾದುದೇ ಆಗಿದೆ.

## ಭಾರದ್ವಾಜ ಗೋತ್ರದ ಮಾಧವಾಚಾರ್ಯರು ವಿದ್ಯಾರಣ್ಯರಲ್ಲದುದನ್ನು ಖಚಿತಗೊಳಿಸುವ ಶಾಸನ

೧೯೧೪–೧೫ನೆಯ ವರುಷದ M.A.R. ಪುಟ ೪೨ರಲ್ಲಿ ಅಚ್ಚಾಗಿರುವ ಹರಿಹರ ದ್ವಿತೀಯನ ಕ್ರಿ.ಶ. ೧೩೭೭ನೆಯ ಇಸವಿಯ ಶಾಸನದ ಭಾಗವಿದು ಗಮನಾರ್ಹವಾಗಿದೆ—

> . . . "ತತ್ರಾದೌ ಭಾರದ್ವಾಜಗೋತ್ರೋ ಯಜುಶ್ಶಾಖಾಧ್ಯಾಯೀ ಸಾಯಣಾಚಾರ್ಯಃ, ತತ್ತನಯಃ ಸಿಂಗಣಃ, ತಗೋತ್ರೋ ಬಹ್ವೃಚೋ ರಾಯರ ಆಶ್ರಿತ್ಯ ನರರಾಜ ವೃತ್ತಿತ್ರಯೇಣ ಮಾಧವಾಚಾರ್ಯ ತನುಜೋ ಮಾಯಣ್ಣ, ಸಾಯಣ್ಣಾರ್ಯ ತನುಜೌ ಮಾದಣ್ಣ ನಾಗಣಾ ವಿತಿತ್ರಯಃ, ಹಾರೀತಃ ತಾರ್ಕಿಕಭಟ್ಟಃ, ಆತ್ರೇಯಃ ಚಿನ್ಮಯಭಟ್ಟಃ."

ಈ ಶಾಸನದಲ್ಲಿ ೬೦ ವೃತ್ತಿಗಳನ್ನು ನಾನಾಗೋತ್ರದ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟುದು ಕಂಡುಬರುತ್ತದೆ. ಮೊದಲನೆಯದಾಗಿ ಭಾರದ್ವಾಜಗೋತ್ರದ ಯಜುಶ್ಶಾಖೆಯ ಸಾಯಣರೂ ಅವರ ಮಗ ಸಿಂಗಣರೂ ಉಲ್ಲೇಖವಾಗಿದ್ದಾರೆ. ಈ ಸಾಯಣರು ವೇದಭಾಷ್ಯಕರ್ತರೆಂಬುದರಲ್ಲಿ ಅವರ ಗೋತ್ರವನ್ನು ಹೇಳಿರುವುದರಿಂದ ಸ್ಪಷ್ಟಮಾಡಲ್ಪಟ್ಟಿದೆ. ತ (?) ಗೋತ್ರೋ ಎಂಬುದು 'ತದ್‌ಗೋತ್ರೋ' ಎಂದಿರಬೇಕೆಂಬುದು ಸ್ಪಷ್ಟ 'ರಾಯರ' ಎಂಬ ಷಷ್ಠಿವಿಭಕ್ತ್ಯಂತವಾದ ಕನ್ನಡಪದದೊಡನಿರುವ 'ನರರಾಜವೃತ್ತಿತ್ರಯೇಣ' ಎಂಬ ಅರ್ಥವಾಗದ ಪದಗಳಲ್ಲಿ ಯಾವ ಹೆಸರೂ ಇಲ್ಲ. ಅವು ಮಾಧವಾಚಾರ್ಯರು ರಾಯರ ಆಶ್ರಿತರೂ ಎಂದು ಮೊದಲಾಗಿ ಹೇಳಲು ಉಪಯೋಗಿಸಲ್ಪಟ್ಟಂತಿವೆ. 'ತದ್‌ಗೋತ್ರೋಬಹ್ವೃಚೋ' ಎಂಬ ಪದಗಳು ಮೇಲ್ಕಂಡ ಪದಗಳಿಗೆ ಅನ್ವಯಿಸಲು ಸಾಧ್ಯವಾಗುವಂತಿಲ್ಲ. ಅಲ್ಲದೆ ಈ ಎರಡು ಪದಗಳನ್ನು 'ಮಾಧವಾಚಾರ್ಯ ತನುಜೋ ಮಾಯಣ್ಣ' ಎಂಬ ಪದಗಳಿಗೆ ಅನ್ವಯಿಸಿಕೊಳ್ಳದೆ ಹೋದರೆ ಯಾವ ಮಾಧವಾಚಾರ್ಯರ ಮಗ ಮಾಯಣ್ಣನಿಗೆ ದಾನಕೊಟ್ಟಿದೆ ಎಂಬುದು ತಿಳಿಯುವುದೇ ಇಲ್ಲ. ಆದುದರಿಂದ ತದ್‌ಗೋತ್ರ ಎಂದರೆ ಹಿಂದೆ ಹೇಳಿದ ಭಾರದ್ವಾಜಗೋತ್ರದ ಬಹ್ವೃಚರಾದ ಮಾಧವಾಚಾರ್ಯರ ಮಗ ಮಾಯಣ್ಣನೆಂದಾಗಿ ಯಾವ ಮಾಧವಾಚಾರ್ಯರ ಮಗನೆಂಬುದು ಸ್ಪಷ್ಟವಾಗುವುದು. ಒಂದು ವೇಳೆ 'ರಾಯರ ಆಶ್ರಿತ್ಯನರರಾಜ' ಎಂಬ ಪದದಲ್ಲಿ ಯಾರದಾದರೂ ಹೆಸರಿದೆಯೆಂದೂ ಊಹಿಸಿದರೂ ಅವನೂ ಮಾಧವಾಚಾರ್ಯರೂ ಭಾರದ್ವಾಜ ಗೋತ್ರದವರೂ ಬಹ್ವೃಚರೂ ಎಂದು ನಿರ್ದೇಶಿಸಲ್ಪಟ್ಟಿದ್ದಾರೆ ಎನ್ನಲೇಬೇಕಾಗುವುದು. ಸಾಯಣಾಚಾರ್ಯರೂ ಬಹ್ವೃಚರೆ ಎಂಬುದನ್ನು ತೋರಿಸಿದರೆ ಬಹ್ವೃಚ ಪದವು ಅವರಣ್ಣ ಮಾಧವರಿಗೂ ಅನ್ವಯಿಸುವುದೆಂಬುದು ಹೆಚ್ಚು ಸ್ಪಷ್ಟವಾಗುತ್ತದೆ. ಸಾಯಣ ಭಾಷ್ಯಸಾರವನ್ನು ಸಂಗ್ರಹಿಸಿರುವ ಮುದ್ಗಲನು "ಆಲೋಚ್ಯ ಪೂರ್ವಭಾಷ್ಯಂಚ ಬಹ್ವೃಚಸ್ಯ ಸಮಂತಕ"

ಎಂದು ಮೊದಲಾಗಿ ಹೇಳಿರುವುದರಲ್ಲಿ ಸಾಯಣರನ್ನು ಬಹ್ವೃಚರು ಎಂದಿದ್ದಾನೆ. ಆದುದರಿಂದ ಶಾಸನದಲ್ಲಿ ಹೇಳಲ್ಪಟ್ಟಿರುವ ಮಾಧವಾಚಾರ್ಯರು ಸಾಯಣಾಚಾರ್ಯರ ಅಣ್ಣನೆಂಬುದು ಸ್ಪಷ್ಟವಾಯಿತು. ವೇದಭಾಷ್ಯಗಳನ್ನು ಬರೆಯಲು ತನಗಿಂತಲೂ ಸಾಯಣರೇ ತಕ್ಕವರು ಎಂದು ಬುಕ್ಕನಿಗೆ ಹೇಳಿದ ಮಾಧವರಿಗಿಂತ ಅವರ ತಮ್ಮ ಸಾಯಣರೇ ವಿದ್ವತ್ತಿನಲ್ಲಿ ಹಿರಿಯರು ಮತ್ತು ಹೆಚ್ಚು ಪ್ರಸಿದ್ಧರು. ಆದುದರಿಂದ ಅವರ ಹೆಸರು ಮೊದಲು ಬರುವುದು. ಜಗದ್ಗುರು ರತ್ನಮಾಲಾಸ್ತವದಲ್ಲಿ "ಸಾಯಣಮಾಧವೋಪದೇಷ್ಟಾರ್ನ್" ಎಂದೂ ಆ ಶ್ಲೋಕದ ವ್ಯಾಖ್ಯಾನದಲ್ಲಿ "ಸಾಯಣ ಮಾಧವಯೋಃ" ಎಂದೂ ಹೇಳಿರುವುದರಲ್ಲಿ ತಮ್ಮನ ಹೆಸರು ಮೊದಲು ಬಂದಿದೆ. ಅಲ್ಲದೆ ದಾನಕೊಟ್ಟಿರುವುದು ಮಾಧವನ ಮಗನಿಗೆ. ಪ್ರಾಚ್ಯ ಐತಿಹ್ಯದಂತೆ ಬರೆಯುವುದಾಗಿ ಪ್ರತಿಜ್ಞೆಮಾಡಿ ಬರೆದಿರುವ ಗುರುವಂಶ ಕಾವ್ಯದಲ್ಲಿ ಹೇಳಿದಂತೆ ಸಾಯಣ ಮಾಧವರು ವಿದ್ಯಾರಣ್ಯರನ್ನು ಸಂಧಿಸಿ ತಮಗೆ ಪುತ್ರರಾಗಬೇಕೆಂದು ಬೇಡಿದ ಪ್ರಕಾರ ಮಕ್ಕಳನ್ನು ಪಡೆದ ಈ ಸಹೋದರರು ಗೃಹಸ್ಥರು. ಭಾರದ್ವಾಜ ಗೋತ್ರದ ಮಾಧವಾಚಾರ್ಯರು ವಿದ್ಯಾರಣ್ಯರಲ್ಲವೆಂಬುದು ಈ ಶಾಸನದಿಂದ ಖಚಿತವಾಗುತ್ತದೆ.

## ವಿಜಯನಗರ ರಾಜ್ಯಸ್ಥಾಪನೆಗೆ ರಾಜಕೀಯ ಮತ್ತು ಧಾರ್ಮಿಕ ಹಿನ್ನೆಲೆ

ಕಲಚುರಿ ವಂಶದ ಬಿಜ್ಜಳನು, ಕರ್ನಾಟಕ ರಾಜ್ಯವನ್ನಾಳುತ್ತಿದ್ದ ಚಾಳುಕ್ಯರ ರಾಜ್ಯವನ್ನು ಅಪಹರಿಸಿದ ಮೇಲೆ ಬಹಳ ದಿನ ಬಾಳಲಿಲ್ಲ. ಅವನ ಮತ್ತು ಅವನ ಸಂಬಂಧಿಗಳ ಆಡಳಿತವು ಇಪ್ಪತ್ತು ವರ್ಷಗಳೊಳಗೆ ಮುಗಿಯಿತು. ಚಾಳುಕ್ಯರ ಕೊನೆಯ ಅರಸನಾದ ನಾಲ್ಕನೆಯ ಸೋಮೇಶ್ವರನು ಮತ್ತೆ ರಾಜನಾದರೂ ಅವನು ದುರ್ಬಲನಾದುದರಿಂದ ಚಾಳುಕ್ಯರ ರಾಜ್ಯವು ಸೇವುಣ ಹೊಯ್ಸಳ ಕಾಕತೀಯ ರಾಜ್ಯಗಳಲ್ಲಿ ಹರಿದು ಹಂಚಿ ಹೋಯಿತು. ಸೇವುಣರು ಒಂದು ಕಡೆ ಕಾಕತೀಯರೊಡನೆಯೂ, ಮತ್ತೊಂದು ಕಡೆ ಹೊಯ್ಸಳರೊಡನೆಯೂ ಪದೇ ಪದೇ ಯುದ್ಧಮಾಡುತ್ತಿದ್ದು ನಿರ್ಬಲರಾದರು. ಕ್ರಿ. ಶ. ೧೪ನೆಯ ಇಸವಿಯಲ್ಲಿ ಅಲ್ಲಾವುದೀನನು ದೇವಗಿರಿಯನ್ನು ಮುತ್ತಿ ಆಗ ರಾಜನಾಗಿದ್ದ ರಾಮದೇವನನ್ನು ಸೋಲಿಸಿ ತನ್ನ ಅಧೀನರಾಜನನ್ನಾಗಿ ಮಾಡಿಕೊಂಡನು. ಅವನು ಸರಿಯಾಗಿ ಕಪ್ಪವನ್ನು ಕೊಡದಿದ್ದುದರಿಂದ ೧೩೦೭ರಲ್ಲಿ ಮಲ್ಲಿಕಾಫೂರನೆಂಬ ಅಲ್ಲಾವುದೀನನ ಸೇನಾಧಿಪತಿಯು ಮತ್ತೆ ಅವನನ್ನು ಸೋಲಿಸಿದನು. ೧೩೧೦ರಲ್ಲಿ ಮಲ್ಲಿಕಾಫೂರನು ಹೊಯ್ಸಳರ ಮೂರನೆಯ ಬಲ್ಲಾಳನನ್ನು ಸೋಲಿಸಿದರೂ ಮಲ್ಲಿಕಾಫೂರನು ಹಿಂತಿರುಗಿದ ಮೇಲೆ ಸ್ವತಂತ್ರವಾಗಿಯೇ ಬಲ್ಲಾಳನು ರಾಜ್ಯವಾಳುತ್ತಿದ್ದನು. ಮಹಮದೀಯರು ಆಂಧ್ರರಾಜ್ಯವನ್ನಾಳುತ್ತಿದ್ದ ಪ್ರತಾಪರುದ್ರನ ಮೇಲೆ ಯುದ್ಧ ಮಾಡಿದರೂ ಅವನು ಅವರನ್ನು ಎರಡು ಮೂರು ಸಲ ಹೊಡೆದೋಡಿಸಿದನು ಆದರೆ ಆಂಧ್ರ ಚರಿತ್ರೆಯ ೩೩೮ನೆಯ ಪುಟದಲ್ಲಿ ಹೇಳಿದಂತೆ ಮಹಮದೀಯರ ಆಡಿಯಾಳಾಗಿದ್ದ ಸೇವುಣ ರಾಜನು ಮಹಮದೀಯರನ್ನು ಕರೆಸಿ ಅವರಿಗೆ ಸಹಾಯಮಾಡಿ ಕಾಕತೀಯ ರುದ್ರನ ವಿನಾಶಕ್ಕೆ ಕಾರಣನಾದನು. ಕಾಕತೀಯರ ರಾಜ್ಯವಾದ ಆಂಧ್ರದಿಂದಲೇ ಕ್ರಿಯಾಶಕ್ತಿ ವಿದ್ಯಾರಣ್ಯರು, ಹರಿಹರ ಬುಕ್ಕರು, ಸಂಪೂರ್ಣವಾಗಿ ವಿನಾಶವಾಗದೆ ಉಳಿದಿದ್ದ ಹೊಯ್ಸಳ ರಾಜ್ಯವನ್ನು ಉಳಿಸಿ ಹಿಂದೂಧರ್ಮೋದ್ಧಾರ ಮಾಡಲು ಆ ದೇಶಕ್ಕೆ ಧಾವಿಸಿದುದರಿಂದ ಕಾಕತೀಯ ರಾಜ್ಯದ ರಾಜಕೀಯ ಮತ್ತು ಧಾರ್ಮಿಕ ಪ್ರಭಾವವು ವಿಜಯನಗರ ರಾಜ್ಯಸ್ಥಾಪನೆಗೆ ಹೇಗೆ ಸಹಾಯಕವಾಯಿತೆಂಬುದು ವಿಚಾರಾರ್ಹವಾಗಿದೆ.

ಆರ್ಯರ ಕೇಂದ್ರವಾಗಿದ್ದ ಉತ್ತರ ಹಿಂದೂಸ್ಥಾನವನ್ನು ಮಹಮದೀಯರು ಆಕ್ರಮಿಸಿದ ಮೇಲೆ ಆರ್ಯಧರ್ಮವು ಉಳಿದು ನಿಂತುದು ದಕ್ಷಿಣದೇಶದಲ್ಲಿ ಎನ್ನಬಹುದು. ಇಲ್ಲಿಯೇ ಶಂಕರ ರಾಮಾನುಜ ಮಾಧ್ವ ಬಸವೇಶ್ವರರುದಯಿಸಿ ಆ ಧರ್ಮವನ್ನು ಆಯಾ ಕಾಲಕ್ಕೆ ತಕ್ಕಂತೆ ಸಂಸ್ಕರಿಸಿ ಕಾಲಚಕ್ರಕ್ಕೆ ಸಿಲುಕಿ ಅಳಿದುಹೋಗದಂತೆ ಮಾಡಿದುದು. ಈ ಮಹತ್ಕಾರ್ಯದಲ್ಲಿ ನೆರವಾದವರು ದಕ್ಷಿಣ ದೇಶದಲ್ಲೆಲ್ಲ ಹರಡಿ ಋಗ್ಯಜುಸ್ಸಾಮಾಥರ್ವ ವೇದಗಳನ್ನು ಸ್ಮೃತ್ಯಾಗಮ ಪುರಾಣಗಳನ್ನೂ ಕಲಿಯಲು ಅನೇಕ ಪಾಠಶಾಲೆಗಳನ್ನು ನಿರ್ಮಿಸಿ ರಾಜಾಧಿರಾಜರುಗಳಿಂದ ಮನ್ನಣೆ ಪಡೆವಷ್ಟು ಗುಣಾಢ್ಯರಾಗಿದ್ದ ಮಾಹೇಶ್ವರಮಠಗಳ ಗುರುಗಳೆಂಬುದು ಬೆಳ್ಗಾವಿ ಮೊದಲಾದ ಸ್ಥಳಗಳಲ್ಲಿರುವ ನೂರಾರು ಶಾಸನಗಳು ಘೋಷಿಸುವ ವಿಷಯ. ಇವರು ವಾಯವೀಸಂಹಿತೆಯನ್ನೊಳಗೊಂಡ ಶಿವಮಹಾಪುರಾಣದಲ್ಲಿ ಉಲ್ಲೇಖವಾಗಿರುವ ಲಾಕುಳವಂಶದ ಪಾಶುಪತಮಹೇಶ್ವರರು. ಇವರಲ್ಲಿ ಕಾಳಾಮುಖ ದೀಕ್ಷೆಯನ್ನು ಪಡೆದ ಕೆಲವರು ಕಾಳಾಮುಖರಿದ್ದರು. ಅಂತೆಯೇ ಕಾಳಾಮುಖ ದೀಕ್ಷೆಯನ್ನು ಖಂಡಿಸುವ ಸೂತ ಸಂಹಿತೆಯ ಅನುಯಾಯಿಗಳಾದ ಶುದ್ಧಶೈವಾಮ್ನಾಯಾನುಸಾರಿಗಳಾದ ಮಾಹೇಶ್ವರರೂ ಇದ್ದರು. ಕ್ರಿಯಾಶಕ್ತಿಗಳು ಕಾಳಾಮುಖರಾಗಿದ್ದರೆ, ಕಾಳಾಮುಖರನ್ನು ಪಾಷಂಡಿಗಳೆಂದು ಹೇಳುವ ಸೂತಸಂಹಿತೆಗೆ ಅವರ ಪಟ್ಟಶಿಷ್ಯನಾದ ಆಂಗೀರಸ ಮಾಧವ ಮಂತ್ರಿಯು ವ್ಯಾಖ್ಯಾನವನ್ನು ಬರೆಯಲು ಆರಿಸಿಕೊಳ್ಳುತ್ತಿರಲಿಲ್ಲ. ಕ್ರಿಯಾಶಕ್ತಿಯೂ ಅವರ ಶಿಷ್ಯ ಮಾಧವ ಮಂತ್ರಿಯೂ ಶುದ್ಧ ಶೈವಾಮ್ನಾಯಾನುಸಾರಿಗಳಾದ ಸ್ಮಾರ್ತಶ್ರೋತ್ರಿಯ ಬ್ರಾಹ್ಮಣರು. ಅವರು ದಾನಮಾಡಿರುವುದು ಶುದ್ಧಶೈವಾಮ್ನಾಯದ ಬ್ರಾಹ್ಮಣರಿಗೆಂಬುದು ಶಾಸನೋಕ್ತವಾಗಿದೆ.

ದಕ್ಷಿಣ ದೇಶದ ರಾಜರುಗಳೆಲ್ಲ ಒಬ್ಬರೊಡನೊಬ್ಬರು ಯುದ್ಧಮಾಡುತ್ತಿದ್ದವರನ್ನು ಒಟ್ಟುಗೂಡಿಸಲು ಶಕ್ತರಾಗಲು ದಕ್ಷಿಣದೇಶದ ರಾಜರುಗಳಿಗೆ ರಾಜಗುರುವಾದಂತಹ ಮಠದವರಿಗೆ ಮಾತ್ರ ಸಾಧ್ಯವಷ್ಟೆ. ಅಂತಹ ಮಠವೊಂದು ಅಂದು ಇದ್ದುದು ಹಿಂದೂಧರ್ಮದ ಪುಣ್ಯ. ಆಂಧ್ರವನ್ನು ಕೇಂದ್ರವನ್ನಾಗಿ ಮಾಡಿಕೊಂಡು ದಕ್ಷಿಣ ದೇಶದಲ್ಲೆಲ್ಲ ಶಾಖಾಮಠಗಳನ್ನು ಏರ್ಪಡಿಸಿಕೊಂಡಿದ್ದ ಗೋಳಕೀಮಠವೇ ಅಂತಹ ಮಠವಾಗಿದ್ದಿತು. ಈ ಮಠದಲ್ಲಿ ಪ್ರಸಿದ್ಧ ಗುರುವಾದ ವಿಶ್ವೇಶ್ವರ ಶಿವದೇಶಿಕರ ವಿಷಯವಾಗಿ ಮಲ್ಕಾಪುರ ಶಾಸನದಲ್ಲಿ ಹೀಗೆ ಹೇಳಿದೆ :

> " ಶ್ರೀಚೋಳೇಶ್ವರ ಮಾಳವಕ್ಷಿತಿಪತೀ ರಾಜನ್ಯ ಚೂಡಾಮಣೀ |
> ಯಚ್ಛಿಷ್ಯಾ ಕಿಮತಃ ಪರಂಗಣಪತಿ ಕ್ಷೋಣೀಪತಿರ್ಯತ್ ಸುತಃ |
> ನಸ್ಯಾತ್ಕಾಸ್ಯ ಮುದೇನು ದೇಶಿಕವರಶ್ಶೈವಾಗಮಾಂಭೋನಿಧಿ |
> ಶ್ರೀವಿಶ್ವೇಶ್ವರ ದೇಶಿಕಃ ಕಲಚುರಿಕ್ಷ್ಮಾಪಾಲ ದೀಕ್ಷಾಗುರುಃ ‖ "

ಗೋಳಕೀಮಠದ ಗುರುವು ಚೋಳ ಮಾಳವದೇಶದ ರಾಜರ ಗುರುಗಳೂ ಕಲಚುರಿ ರಾಜರ ಹಾಗೂ ಕಾಕತೀಯ ಗಣಪತಿ ಚಕ್ರವರ್ತಿಯ ದೀಕ್ಷಾಗುರುವೆಂದು ಹೊಗಳಲ್ಪಟ್ಟಿದ್ದಾರೆ. ಶ್ರೀಯುತ ಕಪಟರಾಳ ಕೃಷ್ಣರಾಯರ "ಕರ್ನಾಟಕ ಲಾಕುಳಶೈವರ ಇತಿಹಾಸ" ಎಂಬ ಗ್ರಂಥದ ಅನುಬಂಧದಲ್ಲಿ ಈ ಮಠದ ವಿಷಯವು ಕೊಡಲ್ಪಟ್ಟಿದೆ. ಹೀಗೆ ದಕ್ಷಿಣ ದೇಶದ ಅನೇಕ ಅರಸರನ್ನು ಶಿಷ್ಯರನ್ನಾಗಿ ಪಡೆಯುವಷ್ಟು ಪ್ರಭಾವಶಾಲಿಗಳಾದ ಇವರು ಆಂಧ್ರದಲ್ಲಿ ಅಲ್ಲದೆ ಕರ್ನಾಟಕದಲ್ಲಿ ಬಲ್ಲಾಳ ರಾಜ್ಯದಲ್ಲಿ ಪ್ರಭಾವ ಬೀರಲು ಶಕ್ತರಾಗಿದ್ದುದರಿಂದ ವಿಜಯನಗರದ ಸ್ಥಾಪನೆಗೆ ಇವರ ಸಹಾಯವು ಎಷ್ಟೆಂಬುದು ಹೇಳಬೇಕಾದುದಿಲ್ಲ. "ಈಗಲೂ ಆಂಧ್ರದಲ್ಲಿ ಈ

ಸಂಪ್ರದಾಯದ ಶೈವಬ್ರಾಹ್ಮಣರು ಇರುವರು. ಆದರೆ ಕರ್ನಾಟಕದಲ್ಲಿ ಹಾಸನ ಮತ್ತು ಕಡೂರು ಜಿಲ್ಲೆಗಳಲ್ಲಿ ಈ ಶೈವಬ್ರಾಹ್ಮಣರ ಸಂಬಂಧವಾದ ಶಾಸನಗಳು ದೊರೆಯುತ್ತವೆ. ಈ ಎರಡು ಜಿಲ್ಲೆಗಳು ಬಲ್ಲಾಳ ಅರಸರ ಆಳಿಕೆಯಲ್ಲಿದ್ದವು" ಎಂದು ಮೇಲಿನ ಅನುಬಂಧದಿಂದ ತಿಳಿದುಬರುತ್ತದೆ. ಆಂಧ್ರ ಬಸವಪುರಾಣಕ್ಕೆ ವಿದ್ವತ್ಪೂರ್ಣವಾದ ಮುನ್ನುಡಿಯನ್ನು ಬರೆದ ವೇಟೂರು ಪ್ರಭಾಕರ ಶಾಸ್ತ್ರಿಗಳು ೭೪, ೭೫, ೭೬ನೆಯ ಪುಟಗಳಲ್ಲಿ ಈ ಶೈವಮಠಗಳ ವಿಷಯವನ್ನು ಹೇಳಿದ್ದಾರೆ. ಶೈವಾಚಾರ್ಯರ ಗೋಳಕೀಮಠವು ಹತ್ತನೆಯ ಶತಮಾನಕ್ಕಿಂತಲೂ ಹಿಂದಿನಿಂದ ಪ್ರಖ್ಯಾತವಾಗಿತ್ತು. ಈ ಮಠದ ಸೋಮಶಂಭುವು ಸೋಮಶಂಭುಪದ್ಧತಿಯೆಂಬ ಆಧಾರಗ್ರಂಥವನ್ನು ಬರೆದಿದ್ದಾನೆ. ಈ ಪರಂಪರೆಯವರು 'ಕಲಚುರಿ ಕ್ಷಾಮಾಪಾಲ ದೀಕ್ಷಾಗುರು'ಗಳೆಂದು ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಈ ಮಠದ ಪರಂಪರೆಯ ಸಹಸ್ರಾರು ಮಹನೀಯರು ದಕ್ಷಿಣಾಪಥದಲ್ಲಿ ವ್ಯಾಪಿಸಿದರು; ಕೇರಳದಲ್ಲಿ ಮಠಗಳನ್ನು ಸ್ಥಾಪಿಸಿದರು. ಕೃಷ್ಣಲೀಲಾಶುಕ್ರನ ಗುರುವಾದ ಈಶಾನಶಿವಾಚಾರ್ಯರು ಕೇರಳದಲ್ಲಿದ್ದವರೆ; ಇವರು ಚೋಳರಾಜನಾದ ರಾಜರಾಜಚೋಳನಿಗೂ ಗುರುಗಳು; ಇವರು ಈಶಾನ ಶಿವಪದ್ಧತಿಯೆಂಬ ಗ್ರಂಥವನ್ನು ರಚಿಸಿದ್ದಾರೆ. ಕೇರಳದಿಂದ ವಿಮಲಶಿವ, ಧರ್ಮಶಿವ, ವಿಶ್ವೇಶ್ವರಶಿವ ಮೊದಲಾದ ಗುರುಗಳು ಆಂಧ್ರಕ್ಕೆ ಬಂದರು. ಇವರಲ್ಲಿ ವಿಶ್ವೇಶ್ವರಶಿವಗುರುಗಳು ಕಾಕತೀಯ ಗಣಪತಿಗೆ ದೀಕ್ಷಾಗುರುವಾಗಿದ್ದರು. ಶ್ರೀಶೈಲವೇ ಮೊದಲಾದ ಅನೇಕ ಸ್ಥಳಗಳಲ್ಲಿ ಇವರು ಮಠಗಳನ್ನು ಸ್ಥಾಪಿಸಿದರು. ಅದ್ವೈತಮತಾಚಾರ್ಯ ಪೀಠಗಳಾಗಿರುವ ವಿರೂಪಾಕ್ಷ ಪುಷ್ಪಗಿರಿ ಪೀಠಗಳು ಆ ಕಾಲದಲ್ಲಿ ಇವರು ಸ್ಥಾಪಿಸಿದ ಶೈವಮಠಗಳೇ. ಪೆದ್ದಕಳ್ಳೆಪಳ್ಳಿಯಲ್ಲಿನ ಶಿವಾಲಯವನ್ನು ಈ ಸಂಪ್ರದಾಯದ ಪುಷ್ಪಗಿರಿ ಮಠಾಧಿಪತಿಯಾದ ಸೋಮಶಿವಾಚಾರ್ಯರು ಕಾಕತೀಯ ಪ್ರತಾಪರುದ್ರನ ಪಾಲನೆಯಲ್ಲಿ ೧೨೮೯ರಲ್ಲಿ ಕಟ್ಟಿದರು. ಅವರ ಪ್ರತಿಮೆಯು ಈಗಲೂ ಅಲ್ಲಿ ಇದೆ. ಕೃಷ್ಣರಾಯನ ಕಾಲದ ಮುಕ್ಕತಿನ್ಮಾದಿಗಳಿಗೆ ಗುರುಗಳಾದ ಅಘೋರಶಿವಾಚಾರ್ಯ ದಕ್ಷಿಣಾಮೂರ್ತಿಶಿವಾಚಾರ್ಯರು ಈ ಸಂಪ್ರದಾಯದವರೇ. ಸೂತ್ರ ಭಾಷ್ಯಕಾರ ಶ್ರೀಕಂಠಶಿವಾಚಾರ್ಯರೂ ಈ ಸಂಪ್ರದಾಯದವರು ಎಂದು ತಿಳಿದಿರುವೆನು—ಎಂದು ವೇಟೂರು ಪ್ರಭಾಕರ ಶಾಸ್ತ್ರಿಗಳು ಅಭಿಪ್ರಾಯಪಟ್ಟಿದ್ದಾರೆ. "ಪ್ರಸಿದ್ಧ ಶೈವಮಠಗಳಾದ ಶ್ರೀ ಕೋಸಗೀ ಶ್ರೀಶೈಲ ಶ್ರೀ ಪುಷ್ಪಗಿರಿ ಮುಂತಾದವುಗಳಿಗೆ ವಿಶ್ವೇಶ್ವರದೇಶಿಕನು ಅಧಿಕಾರಿಯಾಗಿ"ದ್ದನು ಎಂದು ಉಸ್ಮಾನಿಯಾ ಯೂನಿವರ್ಸಿಟಿಯ ಡಾ. ಡಿ. ಕೆ. ಭೀಮಸೇನರಾಯರು ಅವರ 'ಹದಿಮೂರನೆಯ ಶತಮಾನದ ಕರ್ನಾಟಕಾಂಧ್ರಮಹಾರಾಷ್ಟ್ರ ಸಾಹಿತ್ಯಾವಲೋಕನ' ಗ್ರಂಥದಲ್ಲಿ ಹೇಳಿದ್ದಾರೆ. ಶ್ರೀಶೈಲದಲ್ಲಿ ಗೋಲಕೀಮಠವಿದ್ದುದು ಸುಪ್ರಸಿದ್ಧ ವಿಷಯ. ಆಂಧ್ರ ಹಿಸ್ಟಾರಿಕಲ್ ರಿಸರ್ಚ್ ಸೊಸೈಟಿಯ ಜರ್ನಲ್ ಸಂಪುಟ ೧, ಪುಟ ೧೫೫ರ ಲೇಖನದಲ್ಲಿ ಆಂಧ್ರದೇಶದವರೇ ಆದ ಮೀಮಾಂಸಕಾಚಾರ್ಯ ರಾಮನಾಥ ಶಾಸ್ತ್ರಿಗಳೂ ರಾಮಕೃಷ್ಣ ಕವಿಗಳೂ—ಶ್ರೀಕಂಠಶಿವಾಚಾರ್ಯರ ಅನುಯಾಯಿಗಳಾದ ಶ್ರೀಕಂಠರೆಂಬುವರು ಶ್ರೀಶೈಲ ಪ್ರಾಂತದಲ್ಲಿದ್ದರೆಂದು ಹೇಳುತ್ತಾರೆ. ಶ್ರೀಕಂಠಶಿವಾಚಾರ್ಯ ಪಂಥದವರು ಗೋಳಕೀ ಸಂಪ್ರದಾಯದವರೆಂಬುದನ್ನು ಸಂಭಾವನೀಯವನ್ನಾಗಿ ಇದು ಮಾಡುತ್ತದೆ. ಹರಿಹರ ಬುಕ್ಕರು ಶೈಲಾಂಕನಾಥ ನೃಪಕುಲದವರೆಂಬುದು ಶಾಸನೋಕ್ತವಾಗಿದೆ. ಇವರೂ ಇವರ ಯಜಮಾನನಾದ ಪ್ರತಾಪರುದ್ರನಂತೆ ಗೋಳಕೀಮಠದ ಶಿಷ್ಯರಾಗಿರಬೇಕೆಂಬುದೂ ಸಂಭಾವನೀಯವೇ.

ಆಂಧ್ರದೇಶದಿಂದ ಬಂದು ವಿಜಯನಗರ ಸಾಮ್ರಾಜ್ಯವನ್ನು ಕಟ್ಟಲು ಸಹಾಯಕರಾದ

ಕ್ರಿಯಾಶಕ್ತಿ ವಿದ್ಯಾರಣ್ಯರು ಗೋಳಕೀಮಠದ ಸಂಪ್ರದಾಯದವರೇ ಆಗಿರಬೇಕೆಂಬುದರಲ್ಲಿ ಸಂದೇಹ ಬರಲಾರದು. ಅವರ ಶಿಷ್ಯನಾದ ಆಂಗೀರಸ ಮಾಧವಾಚಾರ್ಯರು ಬರೆದಿರುವ ಸೂತಸಂಹಿತೆಯ ಪ್ರಾರಂಭದಲ್ಲಿಯೇ 'ಸೋಮಶಂಭುವನ್ನು' ಆಧಾರವಾಗಿ ತೆಗೆದುಕೊಂಡಿರುವುದು, ಸೋಮಶಂಭುವಿನ ಅನುಯಾಯಿಗಳು ಈ ಗುರು ಶಿಷ್ಯರು ಎಂಬುದನ್ನು ನಿರ್ಧಾರ ಮಾಡುತ್ತದೆ. ಗೋಲಕೀಮಠದ ವಿಶ್ವೇಶ್ವರದೇಶಿಕರು 'ನೈಷ್ಠಿಕರು' ಎಂದು ಮಲ್ಕಾಪುರ ಶಾಸನವು ಹೇಳುತ್ತದೆ. ಶ್ರೀಕಂಠಶಿವಾಚಾರ್ಯರಿಗೆ ಮುಖ್ಯ ಆಧಾರವಾದ ಶಿವಮಹಾಪುರಾಣದಲ್ಲಿ ನೈಷ್ಠಿಕರೆಂದರೆ ಪಾಶುಪತವ್ರತವನ್ನು ಆಜೀವಪರ್ಯಂತ ಆಚರಿಸುವ ನಿವೃತ್ತರೆಂದು ಹೇಳಿದೆ. ಶ್ರೀಕಂಠಶಿವಾಚಾರ್ಯರು ಅವರ ಭಾಷ್ಯದಲ್ಲಿ ಆಜೀವಪರ್ಯಂತ ಆಚರಿಸುವ ಪಾಶುಪತವ್ರತದಿಂದಲೇ ಮೋಕ್ಷವೆಂದಿದ್ದಾರೆ. ಸೂತಸಂಹಿತೆಯಲ್ಲಿಯೂ ಅದರ ವ್ಯಾಖ್ಯಾನದಲ್ಲಿಯೂ ಮೋಕ್ಷಕ್ಕಾಗಿ ಪಾಶುಪತವ್ರತವನ್ನು ಆಚರಿಸಬೇಕೆಂದು ಹೇಳಿದೆ. ಅಲ್ಲದೆ ಹಂಪೆಯ ಪುಷ್ಪಗಿರಿಮಠವು ಗೋಳಕೀಮಠ ಸಂಪ್ರದಾಯವೆಂಬುದಕ್ಕೆ ಹಿಂದೆ ಆಧಾರವನ್ನು ಕೊಟ್ಟಿದೆ. ಒಟ್ಟಿನಲ್ಲಿ ರಾಜಾಧಿರಾಜರ ಗುರುಗಳಾದ ಗೋಳಕೀಮಠದ ಸಂಪ್ರದಾಯದ ಗುರುಗಳಾಗಿದ್ದು ಪ್ರಭಾವಯುತವಾದ ಆ ಸಂಪ್ರದಾಯದವರ ಬೆಂಬಲದಿಂದ ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿ ಹಿಂದೂ ಧರ್ಮವನ್ನು ಉಳಿಸಲು ಸಾಧ್ಯವಾದುದು ಹಿಂದುಗಳ ಪುಣ್ಯವೆನ್ನಬೇಕು.

ಇವರ ಗುರುಗಳಾದ ವಿದ್ಯಾತೀರ್ಥರು ತಮಿಳು ನಾಡಿನಿಂದ ಬಂದ ಮಾಹೇಶ್ವರರು. ಆಂಧ್ರ ರಾಜ್ಯದಲ್ಲಿ ಅಲ್ಲದೆ, ಶೃಂಗೇರಿಗೆ ಸಮೀಪವಾದ ಕಡೂರು ಹಾಸನ ಜಿಲ್ಲೆಗಳಲ್ಲಿ ಈ ಧರ್ಮದವರ ಶಾಸನಗಳಿದ್ದುದಕ್ಕೂ ಆಂಧ್ರದೇಶಕ್ಕೆ ಈ ಸಂಪ್ರದಾಯದವರು ಬಂದುದು ತಮಿಳು ದೇಶದಿಂದಲೆಂಬುದಕ್ಕೂ ಹಿಂದೆ ಆಧಾರಗಳನ್ನು ಕೊಟ್ಟಿದೆ. ಮೈಸೂರ್ ಗೆಜೆಟಿಯರ್ ಎರಡನೆಯ ಸಂಪುಟ ಎರಡನೆಯ ಭಾಗ ೧೪೯ ಮತ್ತು ೧೩೦೦ನೆಯ ಪುಟಗಳಲ್ಲಿ ಆರ್ಯಾವರ್ತದ ಗೋಳಕೀಮಠದ ಶಾಖೆಗಳು ಪಾಂಡ್ಯರಾಜ ಮಾರವರ್ಮ ಸುಂದರಪಾಂಡ್ಯನ ಎರಡು ಶಾಸನಗಳಲ್ಲಿ ಉಲ್ಲೇಖವಾಗಿವೆ ಎಂದು ಮೊದಲಾಗಿ ಹೇಳಿದೆ. ಒಟ್ಟಿನಲ್ಲಿ ಕಂಚಿ ಮೊದಲಾದ ಸ್ಥಳಗಳಲ್ಲಿ ಆ ಕಾಲದಲ್ಲಿ ಪ್ರಭಾವಯುತವಾದ ಮಠಗಳೆಂದರೆ ಗೋಳಕೀಸಂಪ್ರದಾಯದ ಮಾಹೇಶ್ವರಮಠಗಳೇ. ಮಾಹೇಶ್ವರರನ್ನು ಮುನೀಶ್ವರರೆಂದೂ ಕರೆವುದು ರೂಢಿಯಾಗಿದ್ದಿತು. ಜೊಂತೆಯ ಮುನೀಶ್ವರ, ರುದ್ರಶಕ್ತಿಮುನಿಪ, ಕಾಶ್ಮೀರಮುನೀಶ್ವರಾದಿಗಳು ಶಾಸನೋಕ್ತ ಮಾಹೇಶ್ವರರು. ವಿದ್ಯಾರಣ್ಯರಿಂದ ರಚಿತವಾದುದೆಂದು ಪ್ರಸಿದ್ಧವಾಗಿರುವ 'ಅನುಭೂತಿ ಪ್ರಕಾಶ' ಗ್ರಂಥದಲ್ಲಿ ವಿದ್ಯಾರಣ್ಯರೇ ತಮ್ಮ ಮುಖ್ಯ ಗುರುವೆಂದು ಹೇಳುವ "ಮುಖ್ಯಗುರುಃ ಪಾತು ವಿದ್ಯಾತೀರ್ಥ ಮಹೇಶ್ವರಃ" ಎಂಬ ಪ್ರಾರ್ಥನೆಯಿದೆ. ಹಾಗೆಯೇ ಜೀವನ್ಮುಕ್ತಿ ವಿವೇಕದಲ್ಲಿಯೂ ಅನುಭೂತಿಪ್ರಕಾಶದ ಇಪ್ಪತ್ತು ಅಧ್ಯಾಯಗಳ ಕೊನೆಯಲ್ಲಿಯೂ 'ವಿದ್ಯಾತೀರ್ಥ ಮಹೇಶ್ವರಃ' ಎಂಬ ಪದಗಳನ್ನೊಳಗೊಂಡ ಪ್ರಾರ್ಥನೆಗಳಿವೆ. ಸಾಯಣಾಚಾರ್ಯರು ವಿದ್ಯಾತೀರ್ಥರನ್ನು ತಮ್ಮ ವೇದಭಾಷ್ಯದ ಪ್ರತಿಯೊಂದು ಭಾಗದ ಉಪಕ್ರಮದಲ್ಲಿಯೂ ವಿದ್ಯಾತೀರ್ಥಮಹೇಶ್ವರರೆಂದೇ ಸ್ತೋತ್ರಮಾಡಿದ್ದಾರೆ. ಈ ರೀತಿಯ ಸ್ತೋತ್ರವು ಅನೇಕ ಶಾಸನಗಳಲ್ಲಿ ಕಂಡುಬಂದಿದೆ. ಕಾಂಚೀಪೀಠದ ಶಂಕರಾನಂದರ ಬೃಹದಾರಣ್ಯದೀಪಿಕೆಯಲ್ಲಿ 'ವಿದ್ಯಾತೀರ್ಥ ಮಹೇಶ್ವರಾನ್ ಹೃದಿಸದಾ ವಿದ್ಯೋತಮಾನಾನ್ ಭಜೇ' ಎಂಬ ಪ್ರಾರ್ಥನೆಯಿದೆ. ಆದುದರಿಂದ ವಿದ್ಯಾತೀರ್ಥರೂ ಅವರ ಶಿಷ್ಯರಾದ ಕ್ರಿಯಾಶಕ್ತಿ,-ವಿದ್ಯಾರಣ್ಯ ಮಾಧವ

ಮಂತ್ರಿ ಮೊದಲಾದವರಂತೆ ಗೋಳಕೀಮಠದ ಸಂಪ್ರದಾಯದ ಶುದ್ಧಶೈವಾಮ್ನಾಯಸ್ಮಾರ್ತ ಶ್ರೋತ್ರೀಯ ಮಹೇಶ್ವರರಾಗಿರಬೇಕು ವಿದ್ಯಾತೀರ್ಥರಚಿತ ರುದ್ರಪ್ರಶ್ನಭಾಷ್ಯಾಂತದಲ್ಲಿ "ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ಪರಮಾತ್ಮ ತೀರ್ಥಶಿಷ್ಯ ವಿದ್ಯಾತೀರ್ಥ ವಿರಚಿತಂ ರುದ್ರಪ್ರಶ್ನಭಾಷ್ಯಂ ಸಮಾಪ್ತಂ" ಎಂದಿದೆ. ಈ ಪರಮಾತ್ಮತೀರ್ಥರೇ ಶೃಂಗೇರಿ ಗುರು ಪಟ್ಟಿಯಲ್ಲಿರುವ ನರಸಿಂಹಮುನಿಗಳಾಗಲೀ ಕಾಂಚೀಪೀಠದ ಪಟ್ಟಿಯಲ್ಲಿರುವ ಜಾಹ್ನವೀ ಚಂದ್ರಚೂಡೇಂದ್ರರಾಗಲೀ ಆಗಿರುವರೇ ಎಂಬುದು ಸಂಶೋಧನಾರ್ಹವಾಗಿದೆ.

ವೇಟೂರು ಪ್ರಭಾಕರ ಶಾಸ್ತ್ರಿಗಳು ವಿರೂಪಾಕ್ಷ, ಪುಷ್ಪಗಿರಿ ಪೀಠಗಳು ಅದ್ವೈತಾಚಾರ್ಯ ಪೀಠಗಳೆಂದೂ ಅವು ಗೋಳಕೀಸಂಪ್ರದಾಯದ ಮಠಗಳೆಂದೂ ಹೇಳುವುದರಿಂದ ಗೋಳಕೀ ಸಂಪ್ರದಾಯವು ಅದ್ವೈತಪರವಾದುದೆ. ಸೂತಸಂಹಿತೆಯ ವ್ಯಾಖ್ಯಾನದಲ್ಲಿ ಮಾಧವರು ಸೋಮಶಂಭುವಿನ ಆಧಾರ ತೆಗೆದುಕೊಂಡಿರುವರಷ್ಟೆ. ಈ ಸೂತಸಂಹಿತೆಯು ಶಂಕರಾದ್ವೈತಕ್ಕೆ ಮುಖ್ಯ ಆಧಾರ ಗ್ರಂಥವೆಂದು ಪ್ರಸಿದ್ಧಿಯೆಂದು ಅದ್ವೈತ ವಿದ್ವಾಂಸರಾದ ಶ್ರೀ ವಿ. ಸುಬ್ರಹ್ಮಣ್ಯ ಐಯರವರು VII Q.J.M.S. 221 ರಲ್ಲಿ ಹೇಳಿದ್ದಾರೆ. ಆದುದರಿಂದ ಕ್ರಿಯಾಶಕ್ತಿ ವಿದ್ಯಾರಣ್ಯರೂ ಅವರ ಶಿಷ್ಯರೂ ಹಾಗೂ ಗುರುಗಳಾದ ವಿದ್ಯಾತೀರ್ಥರು ಅದ್ವೈತಿಗಳಾದ ಗೋಳಕೀ ಸಂಪ್ರದಾಯದ ಮಹೇಶ್ವರರೆಂದೇ ಪರಿಗಣಿಸಬೇಕು. ಶೃಂಗೇರಿಮಠದಲ್ಲಿದ್ದಂತೆ ಹಂಪೆಯ ವಿರೂಪಾಕ್ಷ ದೇವಸ್ಥಾನದ ಹಿಂದೆ ಶ್ರೀಚಕ್ರವು ಸ್ಥಾಪಿಸಲ್ಪಟ್ಟಿದೆ. ಇದರ ಸಮೀಪದಲ್ಲಿ ಕೆತ್ತಿರುವ ವಿಗ್ರಹವು ಯೋಗದಂಡವನ್ನು ಹಿಡಿದು ಯೋಗಾರೂಢವಾದವರದಂತಿದೆ. ಇದರ ಕೆಳಗೊಂದು ಮತ್ಸ್ಯದ ವಿಗ್ರಹವಿದೆ. ಇದೆಲ್ಲವನ್ನು ಕುರಿತು 'Founders of Vijayanagara' ಗ್ರಂಥವನ್ನು ಬರೆದ ಶ್ರೀಕಂಠಯ್ಯನವರು ಮತ್ಸ್ಯೇಂದ್ರನಾಥನಂತಹ ಹೆಸರು ಭೋಗನಾಥನಿಗಿರುವುದರಿಂದ ಇವರೂ ಈ ವಿಗ್ರಹದಲ್ಲಿ ಕೆತ್ತಿರುವ ವಿದ್ಯಾರಣ್ಯರು ಅಥವಾ ವಿದ್ಯಾತೀರ್ಥರು ನಾಥಸಂಪ್ರದಾಯದವರೋ ಎಂದು 26 Q J.M.S. ಲೇಖನದಲ್ಲಿ ಸಂದೇಹಿಸಿದ್ದಾರೆ.

ಕಂಚಿಯ ವರದರಾಜ (ಅರುಲಾಳ ಪೆರುಮಾಳ್) ದೇವಾಲಯದ ಗೋಡೆಯ ಮೇಲಿರುವ ಶಿಲಾಶಾಸನದಲ್ಲಿ (E.I. III no. 19 P 118) ಸಾಯಣರಿಗೆ "ಅನುಜಃ ಭೋಗನಾಥಃ . . . ಶ್ರೀಕಂಠನಾಥೇಗ ರುಃ" ಎಂದು ಹೇಳಿದೆ. ಸಾಯಣಾನುಜ ಮಾಧವರು ಸಾಯಣರಿಗೆ ಹೇಗೋ ತಮಗೂ ಹಾಗೆ ಗುರುಗಳಾದ ಶ್ರೀಕಂಠನಾಥರನ್ನು ಪರಾಶರಸ್ಮೃತಿವ್ಯಾಖ್ಯೆಯಲ್ಲಿ "ಹೃದಿಭಜೇ ಶ್ರೀಕಂಠಮವ್ಯಾಹತಂ" ಎಂದು ಪ್ರಾರ್ಥಿಸಿದ್ದಾರೆ. ಇನ್ನುಳಿದ ಸಹೋದರರಾದ ಭೋಗನಾಥರು ಅವರ ಮಹಾಗಣಪತಿಸ್ತವದಲ್ಲಿ "ಶ್ರೀಕಂಠಗುರು"ವನ್ನು ಪ್ರಾರ್ಥಿಸಿದ್ದಾರೆ. ಆದುದರಿಂದ ಶ್ರೀಕಂಠಯ್ಯನವರು ಭೋಗನಾಥರ ಹೆಸರಿನಲ್ಲಿರುವಂತೆಯೇ ಈ ಮೂವರು ಸಹೋದರರಿಗೆ ಹಾಗೂ ಅವರ ರಾಜರಾದ ಸಂಗಮನಿಗೂ ಗುರುವಾದ ಶ್ರೀಕಂಠನಾಥರ ಹೆಸರಿನಲ್ಲಿಯೂ ನಾಥಪದವಿರುವುದನ್ನು ಗಮನಿಸಿದ್ದರೆ ಇವರೆಲ್ಲರೂ ನಾಥಸಂಪ್ರದಾಯದ ಮಹೇಶ್ವರರೆಂಬ ಅವರ ಸಂದೇಹವು ಬಲಪಡುತ್ತಿದ್ದಿತು. ಸಂಗಮರಾಜನು ತನ್ನ ತಂದೆಗೆ ಸದ್ಗತಿಯಾಗಲೆಂದು ಬಿಟ್ಟರಗುಂಟೆ ಗ್ರಾಮಕ್ಕೆ ಶ್ರೀಕಂಠಪುರವೆಂದು ಹೆಸರಿಟ್ಟು ಬ್ರಾಹ್ಮಣರಿಗೆ ದಾನಮಾಡಿದುದು (E.I. vol. IV, p. 21) ಶಾಸನೋಕ್ತವಾಗಿರುವುದು. ಅದರಲ್ಲಿ ಈ ವಿಷಯದಲ್ಲಿ ಗಮನಾರ್ಹ ಭಾಗವಿದು—

"ಶ್ರೀಮಾನ್ ಸನ್ನಿಧಿಮಾದಧತ್ ಪಶುಪತಿಃ ಶ್ರೀಕಂಠನಾಥಾತ್ಮನಾ
ಮಾಹೇಶ್ವರಾಣಾಂ ತತ್ತ್ವಾನಾಂ ಮಾನ್ಯೋಯಸ್ಮಿನ್ ಪ್ರವರ್ತಕೇ
ಪ್ರಾಚಾನಾವರ್ಶಿನಾಥಾನಾಂ ಪ್ರಾಯೇಣ ನವತಾಭುವಿ."

ಸಾಕ್ಷಾತ್ ಪಶುಪತಿಯೇ ಶ್ರೀಕಂಠನಾಥ ರೂಪದಲ್ಲಿ ಅವತಾರಮಾಡಿದ್ದಾನೆಂದೂ ಪ್ರಾಚೀನ ಮಾಹೇಶ್ವರನಾಥ ಸಂಪ್ರದಾಯ ತತ್ತ್ವಗಳನ್ನು ಹೊಸದು ಎನ್ನುವಂತೆ ಭೂಮಿಯಲ್ಲಿ ಉಪದೇಶ ಮಾಡಿದ್ದಾನೆಂದೂ ಇದರಲ್ಲಿ ಹೇಳಿರುವುದು ಶ್ರೀಕಂಠಯ್ಯನವರ ನಿಲುವಿಗೆ ಪೋಷಕವಾಗಿದೆ. ಶ್ರೀಕಂಠನಾಥರೇ ವಿಶ್ವನಾಥರೆನ್ನುವ ಅಭಿಪ್ರಾಯವೂ ಉಂಟು (1909 M A R). ಇದ್ದರೂ ಇರಬಹುದು. ಶೃಂಗೇರಿಯಲ್ಲಿಯೂ ಕಂಚಿ ಮೊದಲಾದ ಶಾಂಕರಸಂಪ್ರದಾಯದ ಮಠಗಳಲ್ಲಿಯೂ ಹಾಗೆಯೇ ಹಂಪೆಯ ವಿರೂಪಾಕ್ಷಮಠದಲ್ಲಿಯೂ ಶ್ರೀಶಂಕರಾಚಾರ್ಯ ಕೃತ ಸೌಂದರ್ಯಲಹರಿಯಲ್ಲಿ ಉಕ್ತವಾದ ಶ್ರೀಚಕ್ರ ಪೂಜೆಯನ್ನೊಳಗೊಂಡ ಸಮಯಾನುಯಾಯಿ ಶಾಕ್ತಸಂಪ್ರದಾಯದ ಒಲುಮೆಯು ಕಡಮೆಯಾಗಿ ಶುದ್ಧ ಅದ್ವೈತವು ಪ್ರಾಮುಖ್ಯತೆಗೆ ಕ್ರಮೇಣ ಬಂದುದು ಒಂದು ಲೇಖನಕ್ಕೆ ವಿಷಯವಾಗಿರುವುದರಿಂದ ಅದು ಇಲ್ಲಿ ಅಪ್ರಕೃತ. ಆವರೆ ಹಿಂದಿನ ಮಾಹೇಶ್ವರರಾಗಲೀ ಎಲ್ಲರೂ ಶ್ರೋತ್ರೀಯ ಬ್ರಾಹ್ಮಣರೇ ಎಂಬುದನ್ನು ಮರೆಯಲಾಗದು. ಆದುದರಿಂದ ಇದೆಲ್ಲವೂ ಗೌಣ; ಮಹಮದೀಯರ ದುರಾಕ್ರಮಣದಿಂದ ಖಿಲವಾಗುತ್ತಿದ್ದ ಹಿಂದೂ ಧರ್ಮವನ್ನು ಕಾಕತೀಯ ರಾಜರೂ ಅನಂತರ ಅವರ ಕೈಕೆಳಗಿನ ಅಧಿಕಾರಿಗಳಾದ ಹರಿಹರ ಸಹೋದರರೂ ಅವರ ಸಂತತಿಯವರೂ .ಶ್ರೀಕಂಠನಾಥ ವಿದ್ಯಾತೀರ್ಥರ ಹಾಗು ಕ್ರಿಯಾಶಕ್ತಿ ವಿದ್ಯಾರಣ್ಯರ ಸಹಾಯದಿಂದ ಉದ್ಧಾರಮಾಡಿದುದು ಚಿರಸ್ಮರಣೀಯವಾದ ವಿಷಯವಾಗಿದೆ.

---




# ರತ್ನಾಕರನ ಸ್ತ್ರೀಪಾತ್ರಗಳು

**ಲೇಖಿಕೆ: ಕಮಲಾ ಹಂಪನಾ**

ರತ್ನಾಕರವರ್ಣಿಯ ಭರತೇಶವೈಭವ ಹತ್ತುಸಾವಿರ ಪದ್ಯಗಳನ್ನೊಳಗೊಂಡ ಒಂದು ಬೃಹತ್‌ಕಾವ್ಯ. ಈ ಹಾಡುಗಬ್ಬದ ಛಂದಸ್ಸು ಸಾಂಗತ್ಯ. ಕಾವ್ಯದ ಹೆಸರೇ ಸೂಚಿಸುವಂತೆ ಭರತನೇ ಅದರ ಕಥಾನಾಯಕ. ಭರತೇಶವೈಭವಕ್ಕಿಂತಲೂ ಹಿಂದೆ ಸಂಸ್ಕೃತದಲ್ಲಿ, ಪ್ರಾಕೃತದಲ್ಲಿ, ಕನ್ನಡದಲ್ಲಿ ಇನ್ನೂ ಇತರ ಭಾಷೆಗಳಲ್ಲಿ ಆದಿತೀರ್ಥಂಕರನಾದ ವೃಷಭದೇವನ ಚರಿತ್ರೆಯನ್ನು ನಿರೂಪಿಸುವ ಎಲ್ಲ ಕಾವ್ಯಗಳಲ್ಲೂ ಪ್ರಥಮ ಚಕ್ರವರ್ತಿಯಾದ ಭರತನ ಚರಿತೆಯೂ ಹಾಸುಹೊಕ್ಕಾಗಿ ನಿರೂಪಿತವಾಗಿದೆ. ಆದರೆ ಆ ಕಾವ್ಯಗಳಲ್ಲಿ ಕಾಣುವ ಭರತನಾದರೋ ಉದ್ಧತ, ಗರ್ವಿಷ್ಠ, ಅಹಂಕಾರಿ. ರತ್ನಾಕರನ ಭರತನಾದರೋ ಪರಮಜ್ಞಾನಿ; ಯೋಗಿಯಾಗಿರುವಂತೆ ಭೋಗಿಯೂ ಆಗಿದ್ದಾನೆ. ಇಲ್ಲಿನ ಭರತ ಸ್ಥಿತಪ್ರಜ್ಞ, ನಿರ್ಲಿಪ್ತ. ತಾವರೆ ಎಲೆಯ ಮೇಲಿನ ನೀರಿನಂತೆ ಸಂಸಾರದ ಕರ್ಮಕ್ಕೆ ಅಂಟಿಯೂ ಅಂಟದಂತಿದ್ದಾನೆ. ಬೇರೆ ಕಾವ್ಯಗಳ ಭರತನಿಗೂ ರತ್ನಾಕರನ ಭರತನಿಗೂ ಅಜಗಜಾಂತರ ವ್ಯತ್ಯಾಸ. ಅಷ್ಟೇ ಅಲ್ಲದೆ ಇತರ ಕವಿಗಳು ಭರತನ ಚರಿತ್ರೆಯನ್ನು ಚಿತ್ರಿಸುವಾಗ-ಆತನ ಜನನ, ಪಟ್ಟಾಭಿಷೇಕ, ಚಕ್ರರತ್ನದ ಉದಯ, ಷಟ್ಖಂಡಗಳ ದಿಗ್ವಿಜಯ, ಗರ್ವದ ಪ್ರದರ್ಶನ, ಅದಕ್ಕೆ ಅವನ ತಮ್ಮನಾದ ಬಾಹುಬಲಿಯಿಂದಲೇ ಬೀಳುವ ಪೆಟ್ಟು, ಜ್ಞಾನೋದಯ-ಇವುಗಳ ಕಡೆಗೆ ಗಮನ ಹರಿಸಿದ್ದಾರೆ. ಅಲ್ಲಿ ಭರತನ ವೈಭವ-ಅಟ್ಟಹಾಸಗಳ ಸಂಪೂರ್ಣ ಚಿತ್ರ ಎದ್ದು ಕಾಣುತ್ತದೆಯೇ ಹೊರತು, ಆತನ ಸಂಸಾರದ ಸುಂದರಚಿತ್ರ ಕಾಣುವುದಿಲ್ಲ; ಅದನ್ನು ಚಿತ್ರಿಸುವ ಕಡೆಗೆ ಅವರ ಗಮನ ಹರಿದಿಲ್ಲ. ಆದರೆ ರತ್ನಾಕರನಾದರೋ ಭರತನ ಪಾತ್ರವನ್ನು ಮಾರ್ಪಡಿಸಿರುವುದರ ಜೊತೆಗೆ ಅವನ ಸಂಸಾರದ ಸುಂದರಚಿತ್ರವನ್ನು ಚಿತ್ರಿಸಿದ್ದಾನೆ; ತನ್ಮೂಲಕ ಕಾವ್ಯದಲ್ಲಿ ಶೃಂಗಾರರಸದ ತುಟ್ಟತುದಿಯನ್ನು ಮುಟ್ಟಿದ್ದಾನೆ.

ಭರತನಿಗೆ ತೊಂಬತ್ತಾರು ಸಾವಿರ ಮಂದಿ ಪತ್ನಿಯರು. ಅಧಿಕ ಸಂಖ್ಯೆಯಲ್ಲಿ ಹೆಂಡಂದಿರನ್ನು ಮದುವೆಯಾಗುವುದು ಹೆಚ್ಚಿನದಲ್ಲ; ಅವರೊಡನೆ ಸುಖಕರವಾದ ಬಾಳನ್ನು ಬಾಳುವುದು ಹೆಚ್ಚಿನದು. ಇಲ್ಲಿನ ಭರತನಾದರೋ ಶೃಂಗಾರ ರಸದ ಅಧಿದೇವತೆ (?) ಯಂತೆ ಮೆರೆದು ಆನಂದಮಯವಾದ, ನಿರ್ಮಲವಾದ, ವಿಲಾಸ ವೈಭವದಿಂದ ಕೂಡಿದ ದಾಂಪತ್ಯ ಜೀವನದ ಸುಖವನ್ನು ಅನುಭವಿಸುತ್ತಾನೆ.

ರತ್ನಾಕರ ಚಿತ್ರಿಸಿರುವ ಚಿತ್ರಶಾಲೆ ವಿಶಾಲ. ಅಲ್ಲಿಯ ಚಿತ್ರಗಳೋ ವಿಪುಲ. ಅವುಗಳಲ್ಲಿ ಹೆಚ್ಚು ರಮಣೀಯವಾದ ಹಾಗೂ ಆಕರ್ಷಕವಾದ ಚಿತ್ರಗಳೆಂದರೆ ಸ್ತ್ರೀ ಚಿತ್ರಗಳೇ. ಇಲ್ಲಿ ಜಯದೇವನ ಗೀತಗೋವಿಂದದ ಶೃಂಗಾರರಸದ ರಮಣೀಯ ನಿರೂಪಣೆಯಿದೆ: ಆದಿಪುರಾಣದ-ಎಲ್ಲ ಜೈನ ಪುರಾಣಗಳ ಶಾಂತಿರಸದ ಮಹೋನ್ನತಿಯಿದೆ. ಲೌಕಿಕಕಾವ್ಯಗಳ ಜಯ ದಿಗ್ವಿಜಯಗಳ

ವರ್ಣನೆಯಿದೆ, ಅಲೌಕಿಕಕಾವ್ಯಗಳ ಆಧ್ಯಾತ್ಮ ವೈಭವದಚಿತ್ರಣವಿದೆ. ಒಂದು ಕಾವ್ಯದ ಔನ್ನತ್ಯವನ್ನು ಲೋಕಕ್ಕೆ ಸಾರಲು ಈ ಗುಣಸಮುದಾಯಕ್ಕಿಂತಲೂ ಮತ್ತೇನು ತಾನೆ ಬೇಕು? ರತ್ನಾಕರನ ಈ ಕಾವ್ಯ ಯೋಗ-ಭೋಗಗಳ ಅದ್ವಿತೀಯ ಸಮನ್ವಯಕ್ಕೆ ಮಾತ್ರ ಹೆಸರಾಂತಿಲ್ಲ; ಅದರಲ್ಲಿನ ಸಂಸಾರದ ಸುಂದರ ಚಿತ್ರಣಕ್ಕೂ ಪ್ರಸಿದ್ಧಿಯಾಗಿದೆ.

ರತ್ನಾಕರನ ಭರತೇಶವೈಭವ ಒಂದು ಪರಿಪೂರ್ಣ ಪ್ರಮೀಳಾರಾಜ್ಯ. ಹೆಣ್ಣು ಮಕ್ಕಳನ್ನು ಅವನು ಅರ್ಥಮಾಡಿಕೊಂಡು ಬಣ್ಣಿಸಿದ್ದಾನೆ. ಅವರ ಭಾವನೆಗಳಲ್ಲಿ ಬೆರೆತು ಅವರ ಅಂತರಂಗವನ್ನು ಅರಿತು ಅವರ ಅನ್ನಿಸಿಕೆಗಳಿಗೆ, ಆಶೆ ಆಶೋತ್ತರಗಳಿಗೆ ದನಿಕೊಟ್ಟಿದ್ದಾನೆ. ಚೆಲ್ಲಾಟ, ಚಕ್ಕಂದ, ಗಂಭೀರ, ಗಹನತೆ – ಇಲ್ಲಿ ಬಾರದ ಭಾವವಿಲ್ಲ. ಎಲ್ಲ ತರದ ಹೆಣ್ಣು ಜೀವವೂ ಇಲ್ಲಿ ಕಣ್ಣು ಪಡೆದಿದೆ. ಬಾಲಕಿಯಿಂದ ಮುದುಕಿಯವರೆಗೆ, ಪಂಡಿತಳಿಂದ ಪಾಮರೆಯವರೆಗೆ, ರಾಗಿಣಿಯಿಂದ ವಿರಾಗಿಣಿಯವರೆಗೆ ಹಲವು ತೆರದ ಹೆಂಗಸರ ಮೂರ್ತಿಗಳು ಈ ಕಾವ್ಯಶರೀರದಲ್ಲಿ ಕಾಣಿಸಿಕೊಂಡಿವೆ.

ಬೆಡಗು ಬಿನ್ನಾಣ ಬೇಕೆ? ಬಿಂಕ ಬಿಗುಮಾನ ಬೇಕೆ? ಈ ಮೃದುತ್ವ, ಈ ಮದ ಬೇರಾರಿಗಿದೆ? ಭರತೇಶನ ಸುತ್ತ ಸುರಸುಂದರಿಯರ ಸಮೃದ್ಧವಾದ ಸೌಂದರ್ಯಸಾಗರ ಸೊಕ್ಕಿ ಹರಿದಿತ್ತು. ಈ ರಾಗ ಅನುರಾಗಗಳ ಆಧಿಕ್ಯದಲ್ಲಿ ಆತ ಮುಳುಗಿಹೋಗಿದ್ದರೂ ಆತ್ಮೋನ್ನತಿಯನ್ನು ಮರೆಯಲಿಲ್ಲ. ಆ ಹೆಂಗಳೆಯರೂ ಅಂಥವರೇ ಆಗಿದ್ದರು, ಅವನನ್ನು ಮುಕ್ತಿಯ ಕಡೆಯಿಂದ ಅನುರಕ್ತಿಯ ಕಡೆಗೇ ಮುಖಮಾಡಿ ನಿಲ್ಲುವಂತೆ ಮಾಡಲಿಲ್ಲ. ಅನ್ಯೋನ್ಯವಾಗಿ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು ಅನುಸರಣೆಯಿಂದ ಓಲೈಸಿದ ಆದರ್ಶ ಜೀವನ.

ವೈದಿಕಪುರಾಣದ ಕೃಷ್ಣನಂತೆ ರತ್ನಾಕರನ ಕಾವ್ಯದ ನಾಯಕನಾದ ಭರತ. ಕೃಷ್ಣನ ಶೃಂಗಾರ ಲೀಲೆಗಳನ್ನು ಚಿತ್ರಿಸುವ ಅಸಂಖ್ಯಾತ ಕಾವ್ಯಗಳಲ್ಲಿ ಜಯದೇವಕವಿಯ 'ಗೀತ ಗೋವಿಂದ'ವೂ ಒಂದು ಶೃಂಗಾರರಸಭರಿತ ಗ್ರಂಥ. ರಾಧೆ-ಮಾಧವರ ಪ್ರಣಯ ಸನ್ನಿವೇಶಗಳನ್ನು ಹೃದಯಂಗಮವಾಗಿ ಚಿತ್ರಿಸಿದ್ದರೂ, ಅಲ್ಲಿ ಆದರ್ಶ ದಾಂಪತ್ಯಜೀವನದ ಚಿತ್ರ ಕಾಣುವುದಿಲ್ಲ.

ರತ್ನಾಕರ ಸೃಷ್ಟಿಸಿರುವ ಅಸಂಖ್ಯಾತ ಸ್ತ್ರೀಪಾತ್ರಗಳಲ್ಲಿ, ಭರತನ ಪತ್ನಿಯರಲ್ಲದೆ ಓದುಗರ ಮನಸ್ಸನ್ನು ಸೆಳೆಯುವ ಒಂದು ಪಾತ್ರವೆಂದರೆ, ಪಂಡಿತೆ. ಪಂಡಿತೆಯ ಹೆಸರು ಔಚಿತ್ಯಪೂರ್ಣವಾಗಿದೆ, ಅನ್ವರ್ಥವಾಗಿದೆ. ಆಕೆ ಭರತನ ಪತ್ನಿಯರಿಗೆ ದಾದಿ. ಹೆಸರಿಗೆ ದಾದಿಯಾದರೂ ಆ ಹೆಣ್ಣುಗಳಿಗೆ ಸಕಲ ವಿದ್ಯೆಯನ್ನೂ ಕಲಿಸುವ ವಿದ್ಯಾಗುರುವಾಗಿದ್ದಾಳೆ. ಅಷ್ಟೇ ಅಲ್ಲದೆ, ಆಕೆಗೆ ಭರತನಲ್ಲಿ ವಿಶೇಷ ಸಲುಗೆ. ಭರತನೂ ಈಕೆಯನ್ನು ಗಂಭೀರಭಾವದಿಂದ ಕಾಣುತ್ತಾನೆ. ರಾಣಿಯರನ್ನು ತಿದ್ದಿ, ಅವರಿಗೆ ಮಾರ್ಗದರ್ಶನ ನೀಡುವ ದಾರಿಬೆಳಕು ಈಕೆ. ಹೇಗೆ ಗುರುವಿಗೆ ಶಿಷ್ಯನಲ್ಲಿ ಅಧಿಕಾರ, ಪ್ರೀತಿ, ಮಮತೆ ಇರುತ್ತದೆಯೋ ಹಾಗೆ ಇಲ್ಲಿ ಪಂಡಿತೆಗೆ ಭರತನ ಪತ್ನಿಯಲ್ಲಿ ಅದೇ ರೀತಿಯ ಅಧಿಕಾರ, ಪ್ರೀತಿ, ಮಮತೆ ಇವೆ. ಚಕ್ರವರ್ತಿ ಭರತನಿಗೂ ಮತ್ತು ಆತನ ಪತ್ನಿಯರಿಗೂ, ಮನಸ್ಸಿನಲ್ಲಿ ಉಂಟಾಗುವ ಅನೇಕ ಆಸೆ-ಆಕಾಂಕ್ಷೆಗಳಿಗೆ, ಪ್ರಶ್ನೆಗಳಿಗೆ, ಕೋಮಲ ಭಾವನೆಗಳಿಗೆ ಪಂಡಿತೆ ಕ್ರಮವಾಗಿ ಸೂಕ್ತಸಲಹೆ ಕೊಡುತ್ತಾ, ಉಚಿತ ಉತ್ತರಗಳನ್ನೂ ಹೇಳುತ್ತಾ ಅವರುಗಳ ಮನಸ್ಸಿನ ಸಂಕೋಚವನ್ನು ಹೋಗಲಾಡಿಸಿ, ಸಂತೋಷ

ವನ್ನು ಹೊಮ್ಮಿಸಿ, ಸ್ವಲ್ಪ ದೂರ ಸರಿದಿದ್ದ ಅವರ ಹೃದಯಗಳನ್ನು ಪ್ರೀತಿಯಿಂದ ಸೇರಿಸುವ ರಸಸೇತುವೆಯಾಗಿದ್ದಾಳೆ.

ಉಪ್ಪರಿಗೆಯ ಓಲಗದಲ್ಲಿ ಕುಳಿತಿದ್ದ ಚಕ್ರವರ್ತಿ ಭರತನನ್ನು ಕಾಣಲು ಆತನ ರಾಣಿಯರು ಮದಿರೆಯ ಒಡಗೂಡಿ ಬರುತ್ತಾರೆ. ಹಾಗೆ ಬಂದಾಗ, ಒಬ್ಬೊಬ್ಬಳೂ ಒಂದೊಂದು ಉಡುಗೊರೆಯನ್ನು ತಂದು ರಾಜನಿಗೆ ಭಕ್ತಿಯಿಂದ ಅರ್ಪಿಸಿ ಕೃತಾರ್ಥರಾದೆವೆಂದು ಸಂತಸಗೊಳ್ಳುತ್ತಾರೆ. ಆ ಸನ್ನಿವೇಶದಲ್ಲಿ ಒಬ್ಬಳು ಒಂದು ಪಾದರಿಹೂವನ್ನು ತಂದುಕೊಡಲು, ಅದು ಜಾರಿ ಭರತನ ಕಾಲಮೇಲೆ ಬೀಳುತ್ತದೆ. ಅದನ್ನು ಆತ ಕಾಲಿನಿಂದ ಒದೆಯುತ್ತಾನೆ. ಅದನ್ನು ಕಂಡ ಪಂಡಿತೆ ಆ ಸನ್ನಿವೇಶಕ್ಕೆ ಕಳೆಕಟ್ಟುವಂತೆ ಮಾತುಗಳನ್ನು ಆಡುತ್ತಾಳೆ.

> " ಪರದಾರ ಸೋದರನೊತ್ತಿಗೆ ಪಾದರಿ
> ಬರಬಹುದೇ ಭರತೇಶ |
> ಚರಣದಿಂದೊದೆದುದಾಯ್ತೆಂದು ಪಂಡಿತೆ
> ಅರಸನ ನಸುನಗಿಸಿದಳು."

ಪರನಾರಿಯರನ್ನು ಸೋದರಿಯರಂತೆ ಕಾಣುವ ಭರತನ ಸಮೀಪಕ್ಕೆ ಪಾದರಿ ಬರಬಹುದೇ ? ಅದನ್ನು ಆತನು ಪಾದದಿಂದ ಒದೆದದ್ದು ಸರಿಯಾಯ್ತೆಂದು ಹೇಳಿದಳಾದರೂ, ತಕ್ಷಣವೇ ಪಂಡಿತೆ ಆಲೋಚಿಸುತ್ತಾಳೆ; ಆ ಕಾಣಿಕೆಯನ್ನು ತಂದುಕೊಟ್ಟ ಹೆಣ್ಣಿನ ಮನಸ್ಸಿಗೆ ತನ್ನ ಈ ವಾಕ್ಯದಿಂದ ನೋವಾಗಬಹುದೆಂದು. ಆಗ ಆ ಹೆಣ್ಣನ್ನು ಸಮಾಧಾನಪಡಿಸುವಂತೆ

> " ಕಡುಶೀಲವತಿಯರು ನಿನ್ನ ಪೆಂಡಿರು ತಮ್ಮ
> ಕಡೆಗೊಬ್ಬ ಪಾದರಿ ಬರಲು
> ಪಿಡಿತಂದು ನಿನಗೊಪ್ಪಿಸಿದರು ನೀನೊದೆದುದು
> ಬೆಡಗಾಯ್ತು ಶೀಲ ನಿಧಾನ"

ಕಡುಶೀಲವತಿಯರಾದ ನಿನ್ನ ಹೆಂಡತಿಯರು, ತಾವು ಅನುಭವಿಸಿದ ಆನಂದವನ್ನು ಆಕೆಯೂ ಅನುಭವಿಸಲಿ ಎಂದು ಆಕೆಯನ್ನು ತಂದು ಶೀಲನಿಧಾನನಾದ ನಿನಗೆ ಒಪ್ಪಿಸಿದರು. ಅದನ್ನು ನೀನು ಕಾಲಿನಿಂದೆ ಒದ್ದೆ. ಆ ಹೆಣ್ಣುಮಕ್ಕಳು ಆ ಪಾದರಿಯನ್ನು ತಂದು ಒಪ್ಪಿಸಿದ್ದು ಅವರ ಹಿರಿತನವನ್ನು ತೋರಿಸಿದರೆ, ನೀನು ಒದೆದುದು ನಿನ್ನ ಹಿರಿತನವನ್ನು ತೋರಿಸುತ್ತದೆ ಎಂದು ಹೇಳುತ್ತಾಳೆ. ಹೀಗೆ ಪಂಡಿತೆ ಆ ದಾಂಪತ್ಯದ ಸೌಂದರ್ಯವನ್ನು ಸಹೃದಯರಿಗೆ ತಿಳಿಯಪಡಿಸಿ, ಓದುಗರ ಮನಸ್ಸನ್ನು ತನ್ನ ಕಡೆಗೆ ಸೆಳೆದುಕೊಳ್ಳುತ್ತಾಳೆ.

ಮತ್ತೊಬ್ಬ ಕನ್ಯೆ ಭರತನಿಗೆ ಒಂದು ಮುತ್ತನ್ನು ಕಾಣಿಕೆಯಾಗಿ ತಂದುಕೊಡಲು, ಅದನ್ನು ಕಂಡ ಪಂಡಿತೆ—

> " ವದನ ವದನ ಸೋಂಕಿ ಮುತ್ತು ಕೊಡುವುದು ಲೋ
> ಕದೊಳುಂಟು ಭರತ ಚಕ್ರೇಶ
> ಇದು ಚಿತ್ರ ಕರಯುಗ ಸೋಕಿ ಮುತ್ತೀವುದೆಂ
> ದೆದೆಯೊಳಿನಿಸು ನಗಿಸಿದಳು."

ಹೀಗೆ ಹೇಳಿ ಭರತನನ್ನು ಮತ್ತು ಆತನ ಪತ್ನಿಯರನ್ನು ಮಾತ್ರವಲ್ಲದೆ, ಸಹೃದಯರನ್ನು ನಗೆಗಡಲಲ್ಲಿ ಮುಳುಗಿಸುತ್ತಾಳೆ.

ಕುಸುಮಾಜಿ ಏಕಾಂತದಲ್ಲಿ ಗಿಳಿಯೊಡನೆ ರಾಜನ ಲಾವಣ್ಯ, ರೂಪು, ವೈಭವ, ಮೋಹ ಕತೆ-ಇವುಗಳನ್ನು ಕುರಿತು ಮಾತನಾಡಿದುದನ್ನು, ಅಮರಾಜಿ, ಸುಮನಾಜಿಯರು ಕಾವ್ಯವಾಗಿ ರಚಿಸಿ, ಭರತನ ಮತ್ತು ಆತನ ಇತರ ಪತ್ನಿಯರ ಎದುರಿನಲ್ಲಿ ಓದಿ ಹಾಡಲು ಸಂತಸಗೊಂಡು ಭರತ ಅವರಿಬ್ಬರನ್ನೂ ಉಪಾಯದಿಂದ ತನ್ನ ಸಮೀಪಕ್ಕೆ ಕರೆದು, ಆಲಿಂಗಿಸಿ ಉಡುಗೊರೆ ಕೊಡುತ್ತಾನೆ. ಕಾವ್ಯವನ್ನು ರಚಿಸಿ ಹಾಡಿದವರಿಗೆ ಉಡುಗೊರೆ ಕೊಟ್ಟದ್ದಾಯಿತು. ಕಾವ್ಯಕ್ಕೆ ವಸ್ತುವನ್ನು ಒದಗಿಸಿಕೊಟ್ಟ ಕುಸುಮಾಜಿಗೆ ಉಡುಗೊರೆ ಆಕೆಯ ಮನೆಗೇ ಹೋಗಿ ಕೊಟ್ಟು ಆಕೆಯನ್ನು ಆನಂದಗೊಳಿಸಬೇಕೆಂದು ಭರತನಿಗೆ ಆಸೆಯಾಗುತ್ತದೆ. ಆದರೆ ತನ್ನ ಈ ಮನ ದಾಸೆಯನ್ನು ತೊಂಬತ್ತಾರು ಸಾವಿರ ಮಂದಿ ಪತ್ನಿಯರ ಎದುರಿನಲ್ಲಿ ಹೊರುಗೆಡಹುವುದು ಹೇಗೆ? ಇದರಿಂದ ಇತರ ರಾಣಿಯರ ಮನಸ್ಸಿಗೆ ನೋವಾಗುವುದಿಲ್ಲವೆ? ಹೀಗೆಂದು ಆಲೋಚಿಸಿ ಭರತ ಪಂಡಿತೆಯ ಸಹಾಯವನ್ನು ಅಪೇಕ್ಷಿಸುತ್ತಾನೆ.

ಭರತ ಪಂಡಿತೆಯನ್ನು ಕುರಿತು ಪ್ರಶ್ನಿಸುತ್ತಾನೆ: 'ಇಂದು ನಮ್ಮ ಮನೆಯಲ್ಲಿ ಉಂಡರೆ ಒಳ್ಳೆಯದೊ ಅಥವಾ ರಾಣಿಯರಲ್ಲಿ ಒಬ್ಬರ ಮನೆಗೆ ಹೋಗುವುದು ಒಳ್ಳೆಯದೊ?' ಸೂಕ್ಷ್ಮ ಮತಿಯಾದ ಪಂಡಿತೆಗೆ ಭರತನ ಮನೋಭಿಪ್ರಾಯ ಅರ್ಥವಾಗುತ್ತದೆ. ಆಗ ಅವಳು ಹೇಳು ತ್ತಾಳೆ; 'ದೇವಾ ಇಂದು ಒಬ್ಬಳ ಮನೆಗೆ ಹೋದರೆ ಒಳ್ಳೆಯದು' ಎಂದು. ತಕ್ಷಣವೇ ಭರತ ಕುಸುಮಾಜಿಯ ಮನೆಗೆ ಹೋಗುತ್ತೇನೆಂದು ಹೇಳುವುದಿಲ್ಲ. ಅದಕ್ಕೆ ಬದಲಾಗಿ ಪುನಃ ಪಂಡಿತೆಯನ್ನೆ ಮರೆಹೋಗುತ್ತಾನೆ. 'ಹಾಗಾದರೆ ಯಾರ ಮನೆಗೆ ಹೋದರೆ ಒಳ್ಳೆಯದೆಂದು' ಆಗ ಪಂಡಿತೆಯು ಆಲೋಚಿಸುವಂತೆ ನಟಿಸುತ್ತಾಳೆ; ಆ ಸುಂದರ ಚಿತ್ರವನ್ನು ರತ್ನಾಕರನ ಪದ್ಯದಿಂದಲೇ ನೋಡಬೇಕು:

"ಮೂಗಿನ ಮೇಲೆ ಬೆರಳನಿಟ್ಟು ಕಣ್ಮುಚ್ಚಿ  
ತೂಗಾಡಿ ತಲೆಯನೊಂದಿನಿಸು  
ಯೋಗಿಗಳಂತಿಷ್ಟು ಜಾನಿಸಿ ಕದ್ದರೆ  
ದಾಗಳೆ ನುಡಿದಳು ಕುಟಿಲೆ."

'ಇಂದು ದೇವರು ಕುಸುಮಾಜಿಯ ಮನೆಗೆ ಅಡಿ ಇಟ್ಟರೆ ಉತ್ತಮ'ವೆಂದು ಹೇಳಿ ಭರತನ ಮನಸ್ಸಿನ ಆಸೆಯನ್ನು ಈಡೇರಿಸುತ್ತಾಳೆ.

ಹೀಗೆ ಪಂಡಿತೆ, ತನ್ನ ಪಾಂಡಿತ್ಯದಿಂದ, ಕುಶಲತೆಯಿಂದ, ಬುದ್ಧಿವಂತಿಕೆಯಿಂದ, ವಿಚಾರ ಶಕ್ತಿಯಿಂದ ಭರತನ ಶೃಂಗಾರಮಯವಾದ ದಾಂಪತ್ಯ ಜೀವನದಲ್ಲಿ ಅಲ್ಲಲ್ಲಿ ಕಾಣಿಸಿಕೊಂಡು, ಆ ಸನ್ನಿವೇಶಗಳಿಗೆ ಹೆಚ್ಚು ಕಳೆಕೊಟ್ಟಿದ್ದಾಳೆ.

ಭರತನ ಸಂಸಾರ ಹೆಚ್ಚು ಸುಖಮಯವಾಗುವುದಕ್ಕೆ, ಆದರ್ಶ ದಾಂಪತ್ಯ ಜೀವನವಾಗು ವುದಕ್ಕೆ ಆತನ ಪತ್ನಿಯರು ಮಾತ್ರ ಕಾರಣವಲ್ಲ. ತನ್ನ ಪತ್ನಿಯರನ್ನು ಮಮತೆಯಿಂದ, ಆದರದಿಂದ, ಪ್ರೀತಿಯಿಂದ ನೋಡಿಕೊಳ್ಳುವ ಭರತನ ಮನೋಭಾವವೂ ಅಷ್ಟೇ ಮುಖ್ಯ ವಾಗಿದೆ. ಚಕ್ರವರ್ತಿಯಾದ ಭರತನು ಕುಸುಮಾಜಿಯ ಮನೆಗೆ ಇಂದು ಹೋಗುತ್ತೇನೆ ಎಂದು ಹೇಳಿ ಹೋಗಿದ್ದರೆ ಆತನನ್ನು ತಡೆಯುವ ಶಕ್ತಿ ಯಾರಿಗೂ ಇರಲಿಲ್ಲ. ಆದರೆ ಭರತ ಹಾಗೆ ಮಾಡಿ ತನ್ನ ಇತರ ಪತ್ನಿಯರ ಮನಸ್ಸಿಗೆ ನೋವನ್ನುಂಟುಮಾಡಲು ಇಚ್ಛಿಸಲಿಲ್ಲ. ರತ್ನಾಕರನು

ಕೋಮಲ ಸ್ವಭಾವದವನು. ಅವನ ಕಥಾನಾಯಕನೂ ಅಷ್ಟೇ. ಆದರ್ಶ ದಾಂಪತ್ಯದಲ್ಲಿ ದರ್ಪಕ್ಕೆ ಎಡೆಯಿಲ್ಲ. ಭೋಗದ ಮಧ್ಯೆ ವಿನಯವೂ ಸೇರಿ ಕತೆಯಲ್ಲಿನ ಅನೇಕ ಸನ್ನಿವೇಶಗಳಿಗೆ ಚಿನ್ನದ ಮೆರುಗನ್ನು ಕೊಟ್ಟಂತಾಗಿದೆ. ಹರಿಹರನ ಪುಷ್ಪರಗಳೆಯಲ್ಲಿ ಪುಷ್ಪಗಳನ್ನು ದೃಷ್ಟಿಸಿ ನೋಡಿದರೆ ಎಲ್ಲಿ ಬಾಡಿಹೋಗುತ್ತವೆಯೋ ಎಂದು ಯೋಚಿಸುವ ಭಕ್ತನಂತೆ ಇಲ್ಲಿ ಭರತ ಸ್ವಲ್ಪ ಕಠಿನವಾಗಿ ವರ್ತಿಸಿದರೂ ತನ್ನ ಪತ್ನಿಯರಲ್ಲಿ ಯಾರ ಮನಸ್ಸು ಬಾಡಿಹೋಗುತ್ತದೆಯೋ ಎಂದು ಯೋಚಿಸುತ್ತಾನೆ: ಇಂತಹ ಪತಿಯನ್ನು ಪಡೆದಿರುವ ಯಾವ ಸಂಸಾರ ತಾನೇ ಸ್ವರ್ಗಸಮಾನವಾಗಲಾರದು? ಭರತನ ಸಂಸಾರದಲ್ಲಿ 'ಪತಿ ಲೇಸು' ಆದರೆ 'ಸತಿಯರು ಲೇಸು ಲೇಸು.' ಆದ್ದರಿಂದಲೇ ಸಂಸಾರದ ರಥ ಸುಗಮವಾಗಿ ಸಾಗಿ ಇತರರಿಗೂ ಮಾರ್ಗದರ್ಶನ ಮಾಡಿದೆ.

ಭರತನ ತೊಂಬತ್ತಾರು ಸಾವಿರ ಮಂದಿ ಪತ್ನಿಯರಲ್ಲಿ ಕುಸುಮಾಜಿಯು ವಿಶಾಲ ಆಕಾಶದಲ್ಲಿ ಸಾವಿರಾರು ನಕ್ಷತ್ರಗಳ ಮಧ್ಯೆ ಶೋಭಿಸುವ ಚಂದ್ರನಂತೆ ಶೋಭಿಸುತ್ತಾಳೆ. ತನ್ನ ಜಾಣ್ಮೆಯಿಂದ, ಕುಶಲತೆಯಿಂದ, ಪತಿಭಕ್ತಿಯಿಂದ, ಪತಿಪ್ರೇಮದಿಂದ, ಮೋಹಕ ರೂಪಿನಿಂದ, ಕೋಮಲ ಸ್ವಭಾವಗಳಿಂದ ಭರತನ ಮನಸ್ಸನ್ನು ವಿಶೇಷವಾಗಿ ಸೆಳೆದಿದ್ದಾಳೆ. ಗಂಡನನ್ನು ಎಷ್ಟು ವರ್ಣಿಸಿದರೂ ತೀರದು, ಯಾವ ರೀತಿಯಿಂದ ಸೇವಿಸಿದರೂ ಸಮಾಧಾನವಾಗದು, ಯಾವ ಭಂಗಿಗಳಿಂದ ನೋಡಿದರೂ ತೃಪ್ತಿಯಾಗದು, ಹೆಣ್ಣುಗಳ ತವರೂರ ಮರೆಯಿಸಿ ನಿದ್ರೆಯ ತೊರೆಯಿಸಿ, ಸವಿಗಳನರಿಯಿಸಿ ದಿವರಾತ್ರಿಗಳೆನ್ನದೆ ಸುಖದೊಳೋಡಾಡಿಸುವ ಆವಗಡ ಅವನಿಗೆ ಹೇಗೆ ಬಂದಿತೆನ್ನುವಳು? ತಿಂಗಳ ಬೆಳಕು ಸೋಕುತಿದ್ದಂತೆ ಶಶಿಕಾಂತಶಿಲೆ ಕರಗುವಂತೆ ಭರತನ ಕಣ್ಣಿನ ಕಾಂತಿ ತಾಗುತ್ತಿದ್ದಂತೆಯೇ ನಾರಿಯರ ಹೃದಯಗಳು ಹಾಗೇ ಕರಗುತ್ತವೆಯಂತೆ. ಇಂತಹ ರೂಪು ಹೇಗೆ ಉಂಟಾಯಿತೆಂದು ಕುಸುಮಾಜಿ ಸೋಜಿಗಪಡುವಳು.

ಭರತ ತನ್ನ ಮನೆಗೆ ಊಟಕ್ಕೆ ಬರುತ್ತಾನೆಂದು ತಿಳಿದಾಗ ಆಕೆಗೆ ಆಗುವ ಆನಂದ ಅಷ್ಟಿಷ್ಟಲ್ಲ. ಸಂಭ್ರಮದಿಂದ ಓಡಾಡುತ್ತಾಳೆ. ಭರತನಿಗೆ ಆಕೆ ಊಟ ಬಡಿಸುತ್ತಿದ್ದುದು—

"ಸ್ವರ್ಗದೊಳಗೆ ಬಿತ್ತಿ ಬೆಳೆದ ಶಾಲಿಯನಪ
ವರ್ಗಲೋಕದೊಳಿಟ್ಟು ತಂದು
ಭೋರ್ಗರೆದೆಡೆಮಾಳ್ಪ ಪುಣ್ಯಲಕ್ಷ್ಮಿಯೆಯೆಂಬ
ಮಾರ್ಗದೊಳನ್ನವಿಕ್ಕಿದಳು."

ಹೀಗೆ ವರ್ಣಿತವಾಗಿದೆ. ಹೀಗೆ ಊಟಮಾಡಿಸಿ, ಮಲಗಿಸಿ, ವೀಣೆ ನುಡಿಸಿ, ಹಾಡಿ ಭರತನ ಮನಸ್ಸನ್ನು ಸೂರೆಗೊಳ್ಳುತ್ತಾಳೆ. ಆಕೆ ಕುಶಲ ಕಲೆಗಳಲ್ಲಿ ಸರಸ್ವತಿಯನ್ನು ಮೀರಿಸಿದ್ದಾಳೆ. ರೂಪಿನಲ್ಲಿ ರತಿಯನ್ನು ಮೀರಿಸಿದ್ದಾಳೆ. ಹಾಸ್ಯ ಬೇಕೆ? ಲಾಸ್ಯ ಬೇಕೆ? ನಿಮಗೆ? ಎಲ್ಲವೂ ಇಲ್ಲಿದೆ. ನೀಲಾಂಜನೆಯ ನರ್ತನದ ನಿರೂಪಣೆಯ ಸೊಗಸನ್ನು ಕವಿ ಸೆರೆಹಿಡಿದು ಈ ಕಾವ್ಯದಲ್ಲೂ ಅದರ ಪ್ರತಿಬಿಂಬ ಮೂಡಿಸಿದ್ದಾನೆ. ಚಿತ್ರಮೋಹಿನಿ, ನೇತ್ರಮೋಹಿನಿ, ಪದ್ಮಿನಿ, ರೂಪರಾಣಿಯರ ನೃತ್ಯವಂತೂ, ದೇವಕನ್ನಿಕೆಯರ ನೃತ್ಯವನ್ನು ಮೀರಿ ನಿಲ್ಲುತ್ತದೆ. ಭರತನ ಸುತ್ತ ಈ ಪತ್ನಿಯರಿಂದ ಒಂದು ಗಂಧರ್ವಲೋಕವೇ ಸೃಷ್ಟಿಯಾಗಿದೆ. ಸುತ್ತಲೂ ಗಂಧರ್ವ ಗಾಯನ, ಗಂಧರ್ವ ನೃತ್ಯ, ಗಂಧರ್ವಾಭಿನಯ. ಭರತ ಎತ್ತ ಕಣ್ಣಾಡಿಸಿದರೂ ಶೃಂಗಾರ ರಸವನ್ನು ಬುಗ್ಗೆಹರಿಸುವ ಶೃಂಗಾರ ಭಾವಗಳಿಂದ ತುಂಬಿನಿಂತಿರುವ ಶೃಂಗಾರ ಹೆಣ್ಣುಗಳು.

ನೃತ್ಯಕನ್ನಿಕೆಯರ ವಿವಿಧ ರೀತಿಯ ಭಂಗಿಗಳಿಂದ, ಓದುಗರನ್ನು ರಂಗಮಂಟಪದಲ್ಲಿ ತಂದು ನಿಲ್ಲಿಸುತ್ತಾನೆ.

ಸಹೃದಯರನ್ನು ಮೋಡಿಹಾಕಿ ನಿಲ್ಲಿಸುವ ರತ್ನಾಕರನ ಮತ್ತೊಂದು ಸ್ತ್ರೀಪಾತ್ರವೆಂದರೆ ಮಕರಂದಾಜಿ. ಒಂದರೆ ವರ್ಷಕ್ಕೆ ಪ್ರಾಪ್ತವಯಸ್ಕಳಾಗುವ ಆಕೆ ಕುಸುಮಾಜಿಯ ತಂಗಿ. ಕುಸುಮಾಜಿಯು ಮನೆಗೆ ಊಟಕ್ಕೆ ಬರುವ ತನ್ನ ಪತಿ ಭರತನನ್ನು ಊಟಕ್ಕೆ ಕರೆತರಲು ತಾಂಬೂಲ, ಗಂಧ, ಅಕ್ಷತೆಗಳನ್ನು ಕೊಟ್ಟು ತನ್ನ ತಂಗಿ ಮಕರಂದಾಜಿಯನ್ನು ಕಳುಹಿಸುತ್ತಾಳೆ. 'ನಮ್ಮ ಮನೆಗೆ ಊಟಕ್ಕೆ ಬಾ' ಎಂದು ಹೇಳುವ ಮಕರಂದಾಜಿಯನ್ನು ಭರತ ಸ್ವಲ್ಪ ಕೀಟಲೆಮಾಡಿ ಸರಸದ ಮಾತನ್ನು ಆಡುತ್ತಾನೆ. 'ನಿನ್ನ ಮನೆಗೆ ಈಗಲೇ ಹೇಗೆ ಬರಲಿ? ಇನ್ನು ಅರೆವರುಷ ಕಳೆದರೆ ಬರುತ್ತೇನೆನ್ನುತ್ತಾನೆ.' ಈ ಮಾತು ಕೇಳಿ ಮಕರಂದಾಜಿ ಹುಸಿ ಮುನಿಸನ್ನು ತಾಳುತ್ತಾಳೆ. ಅವಳನ್ನು ಹಿಂಬಾಲಿಸಿ ಬಂದ ಭರತ ಕುಸುಮಾಜಿಯ ಮನೆಯನ್ನು ಮುಟ್ಟಿ ಬಾಗಿಲನ್ನು ದಾಟುತ್ತಿದ್ದಂತೆಯೇ ಮಕರಂದಾಜಿಯ ಉಪದೇಶವನ್ನು ಪಡೆದಿದ್ದ ಅಮೃತವಾಚಾಂಕನೆಂಬ ಗಿಳಿ ಭರತನಿಗೆ—

"ಬಂದೆಯ ಭಾವ, ಬಂದೆಯ ಸುಪ್ರಭಾವ ಅ
ಯ್ತಂದೆಯ ಸುಗುಣ ಸ್ವಭಾವ
ಬಂದುದು ಲೇಸು ಮಹಾನುಭಾವಾಯೆಂದು
ದಂದು ಮುದ್ದಿನ ರಾಜಕೀರ."

ಕ್ಷೇಮವೇ ಭಾವಾಜಿ? ನಿಮಗೆ ಪರಿಣಾಮವೇ ಭಾವಾಜಿ? ಈ ಮನೆಯಲೇಕೆ ಅಡಿಗಡಿಗುಸ್ತಿರೆ? ಧರೆಯನಾಳಿದನೆಂಬ ಗರ್ವವೋ? ಈಗ ಮನೆಗೆ ಬಂದಿರುವೆ, ನೀನು ಇನ್ನು ತಪ್ಪಿಸಿಕೊಂಡು ಹೋಗುವುದನ್ನು ನೋಡುತ್ತೇನೆ; ನಮ್ಮ ಅಕ್ಕನ ನಳಿತೋಳುಗಳ ಪಾಶವಿದೆ. ಆಕೆಯ ಮುಂಗುರುಳ ಉರಲು ಇದೆ. ಕಡೆಗಣ್ಣ ಕಾಂತಿಯ ಸಂಕೋಲೆ ಇದೆ. ಇವುಗಳಿಂದ ನಿಮ್ಮನ್ನು ಬಂಧಿಸಿಬಿಡುತ್ತೇನೆ ಎನ್ನುತ್ತದೆ. ಈ ಮಾತುಗಳನ್ನು ಗಿಣಿಯಿಂದ ಕೇಳಿದ ಭರತ, ಇದು ಗಿಳಿಯ ಮಾತಲ್ಲ. ಇದು ಮಕರಂದಾಜಿಯ ಮಾತೆಂದು ತಿಳಿದು, ಗಿಳಿಯನ್ನು ಮುದ್ದಿಸಲು, ಅದನ್ನು ಹತ್ತಿರ ತಾರೆಂದು ಮಕರಂದಾಜಿಗೆ ಹೇಳುತ್ತಾನೆ. ಇವನ ಕುಟಿಲವನ್ನು ಅರಿಯದ ಮಕರಂದಾಜಿ ಭರತನ ಸಮೀಪಕ್ಕೆ ಗಿಳಿಯನ್ನು ತರಲು, ಭರತ ಗಿಳಿಯನ್ನು ಬಿಟ್ಟು, ಆಕೆಯನ್ನು ಆಲಿಂಗಿಸಿ ಕೊರಳಿಗೆ ಮುತ್ತುಕೊಟ್ಟು ಮೆಚ್ಚಿಕೊಟ್ಟೆ ಹೋಗೆನ್ನುತ್ತಾನೆ. ಇದರಿಂದ ಮಕರಂದಾಜಿಗೆ ಬಹಳ ಆನಂದವಾದರೂ ಅದನ್ನು ತೋರಗೊಡದೆ ಭಾವನನ್ನು ಹುಸಿಮುನಿಸಿನಿಂದ ನಿಂದಿಸುತ್ತಾಳೆ. ಅಕ್ಕನ ಮನೆಗೆ ಬಂದರೆ ತಕ್ಕ ಫಲ ದೊರೆಯಿತು, ಇನ್ನು ಚಕ್ಕನೆ ನನ್ನ ಊರಿಗೆ ಹೋಗುತ್ತೇನೆ ಎನ್ನುತ್ತಾಳೆ. ಭರತನನ್ನು ಕುಟಿಲ, ಧೂರ್ತನೆಂದು ನಿಂದಿಸುತ್ತಾಳೆ. ಬಳ್ಳಿಯಂತೆ ಎದುರು ಬಂದ ಹೆಣ್ಣುಗಳನ್ನೆಲ್ಲಾ ತಬ್ಬಿಕೊಳ್ಳುವುದೇ ನಿನ್ನ ಧ್ಯಾನವೆನ್ನುತ್ತಾಳೆ. ಒಬ್ಬರಿಬ್ಬರೇ ನಿನಗೆ ಹೆಣ್ಣುಗಳು ಸಬ್ಬಲಗ್ಗೆಯೊಳಿದೆ ಎಂದು ನಿಂದಿಸುತ್ತಾಳೆ. ಚಕ್ರವರ್ತಿಗೆ ಇರಬೇಕಾದ ಗಂಭೀರಭಾವ ಎಲ್ಲಿ ಹೋಯಿತೆಂದು ಝಂಕಿಸಿ ನುಡಿಯುತ್ತಾಳೆ. ಆದರೆ ಇದೆಲ್ಲವನ್ನೂ ಕೇಳಿ ಭರತ ಕೋಪಗೊಳ್ಳುವುದಿಲ್ಲ; ನಸುನಗುತ್ತಾನೆ. ತಲೆದೂಗುತ್ತಾನೆ. ಕಣ್ಸನ್ನೆಯಿಂದ ನಿನ್ನ ತಂಗಿಯ ಆಟವನ್ನು ನೋಡೆಂದು ಕುಸುಮಾಜಿಗೆ ತಿಳಿಸುತ್ತಾನೆ. 'ಮಕರಂದಾಜಿಯ ಕೋಪವನ್ನು ಕಡಿಮೆ ಮಾಡುತ್ತೇನೆ. ಆಕೆಯನ್ನು

ನನ್ನ ಹತ್ತಿರ ಕರೆತಾರೆಂದು' ತನ್ನ ಪತ್ನಿ ಕುಸುಮಾಜಿಗೆ ಹೇಳುತ್ತಾನೆ. 'ಮಾತು ಆಡಿದರೆ ಹೋಯಿತು; ಮುತ್ತು ಒಡೆದರೆ ಹೋಯಿತೆಂಬ' ಗಾದೆಯಂತೆ, ಬಹಳ ಎಚ್ಚರಿಕೆಯಿಂದ, ಬಹಳ ಸೂಕ್ಷ್ಮವಾಗಿ ಅಲ್ಲೊಮ್ಮೆ ಇಲ್ಲೊಮ್ಮೆ ಮಾತನ್ನು ಆಡುವ ಭರತ ನಾದಿನಿಯ ಬಳಿಯಲ್ಲಿ ಮಾತ್ರ ಬಹಳ ಸರಸದಿಂದ, ವಿನೋದದಿಂದ ಮಾತನಾಡುತ್ತಾನೆ. ಭಾವ-ನಾದಿನಿಯ ಹುಸಿ ಜಗಳ ಹರಿಯಲಿಲ್ಲ. ಆಗ ಕುಸುಮಾಜಿ ಮಧ್ಯೆ ಬಂದು ತನ್ನ ತಂಗಿಯನ್ನು ಕರೆಸಿ ಭರತನ ಕೈಯಲ್ಲಿ ಮಕರಂದಾಜಿಯ ಕೈಯನ್ನು ಇರಿಸಿ ಧಾರೆ ಎರೆಸುವೆನು, ನಿಮ್ಮಿಬ್ಬರಿಗೆ ಬಂದಿರುವ ಈ ಹೋರಾಟ ತೊಳೆದುಹೋಹಂತೆ' ಎಂದು ಹೇಳುವಳು. ಈ ಮಾತನ್ನು ಕೇಳುತ್ತಿದ್ದಂತೆ ಮಕರಂದಾಜಿಯ ಕೋಪವೆಲ್ಲ ಆರಿಹೋಗುತ್ತದೆ. ಬದಲಾಗಿ ನಾಚಿಕೆ, ಸಂಕೋಚದಿಂದ

"ಎಲ್ಲಿ ಹೋದುದೊ ಮೊದಲಾಡಿದ ನುಡಿ ನೋಟ
ಚೆಲ್ಲಾಟ ನಗೆಯು ಸೊಕ್ಕಿವಳ
ನಲ್ಲನ ನೋಡಲಂಜುತ ಲಜ್ಜಿಗೊಳುತೆಳೆ
ಹುಲ್ಲೆಯಂತಿದ್ದಳೇನೆಂಬೆ."

ಈಕೆ ಗುಣಗಳಿಂದ, ರೂಪಿನಿಂದ, ತನ್ನ ಅಕ್ಕ ಕುಸುಮಾಜಿಯನ್ನು ಮೀರಿಸಿದ್ದಾಳೆ. ಹಾಗಿದ್ದ ರಿಂದಲೇ ಆಕೆಯನ್ನು ನೋಡುತ್ತಿದ್ದಂತೆಯೇ ಭರತನಿಗೂ ಆಕೆಯ ಮೇಲೆ ಮನಸಾಗುವುದು.

ರತ್ನಾಕರವರ್ಣಿ ಭಾವ-ನಾದಿನಿಯರ ಸರಸ ಸಂಭಾಷಣೆಯನ್ನು ತನ್ನ ಕಾವ್ಯದಲ್ಲಿ ತರುವುದರ ಮೂಲಕ ಕನ್ನಡ ಸಾಹಿತ್ಯಕ್ಕೆ ಒಂದು ಅಪೂರ್ವ ಕಾಣಿಕೆಯನ್ನು ಕೊಟ್ಟಿದ್ದಾನೆ. ಶೃಂಗಾರ ರಸಭರಿತವಾದ ಅನೇಕ ಬೃಹತ್‌ಗ್ರಂಥಗಳು ರತ್ನಾಕರನ ಭರತೇಶ ವೈಭವಕ್ಕಿಂತ ಹಿಂದೆ ರಚಿತವಾಗಿದ್ದರೂ, ಈ ಸನ್ನಿವೇಶವನ್ನು ಯಾವ ಕವಿಯೂ ಯಾವ ಕಾವ್ಯದಲ್ಲಿಯೂ ಚಿತ್ರಿಸಿಲ್ಲ. ಹಾಗಾಗಿ ರತ್ನಾಕರ ಕನ್ನಡ ಸಾಹಿತ್ಯಕ್ಕೆ ಕೊಟ್ಟ ಒಂದು ಕಾಣಿಕೆ ಈ ಭಾವ-ನಾದಿನಿಯರ ಸಂಭಾಷಣೆ. ಈ ಮೂಲಕ ಶೃಂಗಾರರಸ ನಿರೂಪಣೆ. ಜನಪದ ಸಾಹಿತ್ಯದಲ್ಲಿ ಅಲ್ಲೊಮ್ಮೆ ಇಲ್ಲೊಮ್ಮೆ ಕಂಡು ಮಾಯವಾಗುವ ಈ ರೀತಿಯ ಭಾವ-ನಾದಿನಿಯರ ಸರಸ-ಸಂಭಾಷಣೆ, ಬಂಗಾಳಿ ಸಾಹಿತ್ಯದಲ್ಲಿ ಸ್ವಲ್ಪ ಹೆಚ್ಚಿನ ಮಟ್ಟದಲ್ಲಿ ಕಾಣಿಸಿಕೊಳ್ಳುತ್ತದೆ.

ಹೀಗೆ ರತ್ನಾಕರ ಸ್ತ್ರೀಪಾತ್ರಗಳಲ್ಲಿ ಕೆಲವನ್ನು ಬಿಡಿಬಿಡಿಯಾಗಿ ನೋಡಿದರೆ, ಇನ್ನು ತೊಂಬತ್ತಾರು ಸಾವಿರ ಪತ್ನಿಯರ ಸಾಮೂಹಿಕವಾದ ರೀತಿ-ನೀತಿ, ನಡೆ-ನುಡಿ, ಆಚಾರ-ವ್ಯವಹಾರಗಳ ಕಡೆ ಸ್ವಲ್ಪ ಗಮನ ಹರಿಸಬೇಕು. ಅವರಲ್ಲಿ ಕಾಣುವ ಪತಿಭಕ್ತಿ, ಪತಿಪ್ರೇಮ, ಅಕ್ಕ-ತಂಗಿಯರಲ್ಲಿ ಇರುವ ಸಾಮರಸ್ಯ, ಲಲಿತಕಲೆಗಳಲ್ಲಿ ಇರುವ ಅಭಿರುಚಿ-ಇವುಗಳಿಂದ ಓದುಗರ ಮನಸ್ಸನ್ನು ಬಹಳವಾಗಿ ಆಕರ್ಷಿಸುತ್ತಾರೆ. ಅವರ ಆಳವಾದ ಪತಿಭಕ್ತಿಯನ್ನು ಎತ್ತಿ ತೋರಿಸುವ ಅನೇಕ ನಿದರ್ಶನಗಳಲ್ಲಿ ಒಂದನ್ನು ಇಲ್ಲಿ ನೋಡಬಹುದು. ಈ ತೊಂಬತ್ತಾರುಸಾವಿರ ಮಂದಿ ಭರತನ ಆರೋಗಣೆಗೆ ಸಕಲ ಸಿದ್ಧತೆಗಳನ್ನು ಮಾಡಿದ್ದಾರೆ. ವಿವಿಧರೀತಿಯ ಭಕ್ಷ್ಯಗಳನ್ನು ವಿವಿಧರೀತಿಯ ಭಂಗಿಗಳಲ್ಲಿ ತಮ್ಮ ಪತಿಯ ಮನಸ್ಸನ್ನು ಅರಿತು ಬಡಿಸಿ, ಊಟಮಾಡಿಸಲು ಸಿದ್ಧರಾಗಿ ನಿಂತಿದ್ದಾರೆ. ಆದರೆ ಅಂತಹ ಸಂದರ್ಭದಲ್ಲಿ ಭರತ ಅವರನ್ನೂ ತನ್ನ ಸಹಪಂಕ್ತಿಯಲ್ಲಿ ಕುಳಿತು ಊಟಮಾಡುವಂತೆ ಹೇಳುತ್ತಾನೆ. 'ಪತಿಯೇ ಪರದೈವವೆಂದು ನಂಬಿರುವ ಆ ಪತಿಭಕ್ತೆಯರಾದ ಹೆಣ್ಣುಗಳಿಗೆ ಈ ಮಾತುಗಳನ್ನು ಕೇಳುತ್ತಿದ್ದಂತೆಯೇ, ಅವರ ಮುಖ

ಕಪ್ಪಿಡುತ್ತದೆ; ಅವರ ಮನಸ್ಸಿನಲ್ಲಿ ಕಳವಳ ಉಂಟಾಗುತ್ತದೆ. ಪತಿಪಂಕ್ತಿಯಲ್ಲಿ ಕುಳಿತು ಪತಿವ್ರತಾ ಹೆಣ್ಣುಗಳು ಊಟಮಾಡಬಹುದೇ? ಹಾಗೆ ಮಾಡಿದ್ದೇ ಆದರೆ ರೌರವನರಕ ಪ್ರಾಪ್ತವಾಗದೇ? ಆದರೆ ಪತಿ ಈಗ ಆಹ್ವಾನಿಸುತ್ತಿದ್ದಾನೆ. ಪತಿಯ ಮಾತನ್ನು ಮೀರಲು ಸಾಧ್ಯವೇ? ಈ ಎರಡು ಸೆಳಸಾಟಕ್ಕೆ ಸಿಕ್ಕಿದ ಅವರ ಮನಸ್ಸಿನ ನೋವನ್ನು ಕವಿ ಬಹಳ ಚೆನ್ನಾಗಿ ಚಿತ್ರಿಸಿದ್ದಾನೆ, ತನ್ಮೂಲಕ ಆ ಹೆಣ್ಣುಮಕ್ಕಳಿಗೆ ಪತಿಯಲ್ಲಿ ಇದ್ದ ಭಕ್ತಿಯನ್ನು ಎತ್ತಿ ತೋರಿಸಿದ್ದಾನೆ.

ಅಕ್ಕ ತಂಗಿಯರಲ್ಲಿ ಕಾಣುವ ಸಾಮರಸ್ಯವೂ ವಿಶೇಷರೀತಿಯದಾಗಿದೆ; ಶ್ರೇಷ್ಠಮಟ್ಟದ್ದಾಗಿದೆ. ಎಲ್ಲಿ ಸವತಿ ಮಾತ್ಸರ್ಯದ ಜ್ವಾಲೆ ಎದ್ದು ಸಂಸಾರ ಸುಟ್ಟು ಬೂದಿಯಾಗಬೇಕೋ, ಅಲ್ಲಿ ಸಾಮರಸ್ಯದ ಗಂಗೆ ಹರಿದು, ಶೃಂಗಾರ ಸಾಗರದಲ್ಲಿ ಸಂಸಾರ ಆನಂದದಿಂದ ತೇಲಾಡುವುದನ್ನು ಕಾಣುತ್ತೇವೆ. ಒಂದೆರಡು ಸಣ್ಣ ಚಿತ್ರ ಸಾಕು, ಇದರ ತಿರುಳನ್ನು ಎತ್ತಿತೋರಿಸಲು. ಒಮ್ಮೆ ಉಪ್ಪರಿಗೆಯಲ್ಲಿ ಕುಳಿತಿದ್ದ ಭರತನನ್ನು ತಮ್ಮ ಪತಿಯನ್ನು ಕಾಣಲು ಪತ್ನಿಯರೆಲ್ಲಾ ಹೋಗುತ್ತಾರೆ. ಆಗ ಒಬ್ಬಳು ಮತ್ತೊಬ್ಬಳನ್ನು ನಡೆಸಿಕೊಳ್ಳುವ ರೀತಿ ಹೀಗಿದೆ:

"ನೋಡಿ ಬಾ ತಂಗಿ ಯಚ್ಚಕೆಯಕಾಜಿ ಕೈ
ನೀಡಕ್ಕ ಕೋ ಹಿಡಿ ತಾಯಿ
ಓಡದಿರಕ್ಕಾ ಬಾ ಬಾ ತಂಗಿಯೆಂದು ಮಾ
ತಾಡುತೇರಿದರೊಲವಿನೊಳು."

ಈ ರೀತಿಯಲ್ಲಿ ನಡೆದುಕೊಳ್ಳುವ ಪತ್ನಿಯರಿಂದಲೆ ಭರತನ ಸಂಸಾರ ಸುಖಮಯವಾಯಿತು. ಮತ್ತೊಮ್ಮೆ ಭರತ, ಸುಮನಾಜಿ–ಅಮರಾಜಿಯರಿಗೆ ತನ್ನ ಮೈಮೇಲಿನ ಆಭರಣವನ್ನು ಉಡುಗೊರೆ ಕೊಡಲು ಬಯಸಿದಾಗ, ಅದಕ್ಕೆ ತಮ್ಮ ಪತಿಯ ಮೈಮೇಲಿನ ಆಭರಣ ಕಳಚಿ ಅವನ ಆಭರಣರಹಿತ ರೂಪನ್ನು ನೋಡಲು ಆ ಕುಲಸತಿಯರು ಇಚ್ಛಿಸುವುದಿಲ್ಲ. ಆದರೆ ಭರತನಾದರೋ ಆ ಹೆಣ್ಣುಗಳಿಗೆ ಉಡುಗೊರೆಯನ್ನು ಕೊಡಲೇಬೇಕೆಂದು ತನ್ನ ಖಚಿತ ಅಭಿಪ್ರಾಯ ತಿಳಿಸುತ್ತಾನೆ. ಆಗ ಸುಮನಾಜಿ, ಅಮರಾಜಿಯರು ಆಲೋಚಿಸಿ, ಒಂದು ಉಪಾಯ ಕಂಡುಕೊಂಡು ಸೂಚನೆ ಮಾಡಲು ತೊಂಬತ್ತಾರುಸಾವಿರ ಮಂದಿ ಪತ್ನಿಯರೆಲ್ಲಾ ಎದ್ದು ನಿಂತು ಉಡುಗೊರೆ ತೆಗೆದುಕೊಳ್ಳಲು ಸಿದ್ಧರಾಗುತ್ತಾರೆ. ರತ್ನಾಕರ ಇಂತಹ ಅನೇಕ ಸನ್ನಿವೇಶಗಳನ್ನು ತನ್ನ ಕಾವ್ಯದಲ್ಲಿ ತರುವುದರ ಮೂಲಕ ಆ ಹೆಣ್ಣುಗಳಿಗೆ ಗಂಡನಲ್ಲಿ ಇದ್ದ ಪ್ರೀತಿ ಮತ್ತು ಅಕ್ಕ–ತಂಗಿಯರಲ್ಲಿ ಇದ್ದ ಸಾಮರಸ್ಯವನ್ನು ಚಿತ್ರಿಸಿದ್ದಾನೆ.

ಮತ್ತೊಮ್ಮೆ ಕುಸುಮಾಜಿಯ ಮನೆಗೆ ಭರತ ಊಟಕ್ಕೆ ಹೋಗುವ ಏರ್ಪಾಡಾಗಲು ಕುಸುಮಾಜಿಗೆ ದೊರೆತ ಈ ಭಾಗ್ಯ, ತಮ್ಮ ಭಾಗ್ಯವೇ ಎಂದು ನೆನೆಯುವ ಆ ಕನ್ಯೆಯರ ಹಿರಿಯ ಗುಣ ಸ್ತ್ರೀಯರ ಪಾತ್ರಕ್ಕೆ ಇಟ್ಟ ಕಳಸದಂತಿದೆ. ಅವರು ಸಂಕೋಚಗೊಂಡಿರುವ ಕುಸುಮಾಜಿಗೆ ಹೇಳುತ್ತಾರೆ:

"ತಂಗಿ ಹೋಗಕ್ಕೆ ಹೋಗಾಣ್ಮನಾರೋಗಣೆ
ಗಂಗನೆಡೆಮಾಳ್ಪ ಭಾಗ್ಯ
ಸಂಗಡಿಸಿತು ನಿನಗದು ನಮ್ಮ ಭಾಗ್ಯವೆಂ
ದಿಂಗಿತ ಮಿಗೆ ಕಳುಹಿದರು."

ಹೀಗೆ ಕುಸುಮಾಜಿಯ ಭಾಗ್ಯ ತಮ್ಮ ಭಾಗ್ಯವೇ ಎಂದು ಹೇಳಿ ಕುಸುಮಾಜಿಯ ಮನಸ್ಸಿನ ಸಂಕೋಚವನ್ನು ಹೋಗಲಾಡಿಸುತ್ತಾರೆ. ಇದರಿಂದ ಅವರಲ್ಲಿನ ವಿಶಾಲಹೃದಯ, ಉದಾತ್ತ ಭಾವನೆ, ಬಹು ಚೆನ್ನಾಗಿ ವ್ಯಕ್ತವಾಗುತ್ತದೆ.

ಭರತನ ಪತ್ನಿಯರಲ್ಲಿ ಮಾತ್ರ ಈ ಸ್ನೇಹ ಸಾಮರಸ್ಯವನ್ನು ಕಾಣುವುದಲ್ಲ, ಅದಕ್ಕಿಂತಲೂ ಹೆಚ್ಚಿನದಾಗಿ ಅತ್ತೆ-ಸೊಸೆಯರ ಪ್ರೀತಿ ತುಂಬಿದ, ವಾತ್ಸಲ್ಯ ತುಂಬಿದ ಪಾತ್ರಗಳನ್ನು ಕಾಣ ಬಹುದು. ಅತ್ತೆಯನ್ನು ಕಂಡು ನಮಸ್ಕರಿಸಿ, ಆಶೀರ್ವಾದ ಬೇಡಿ, ಅವರಿಂದ ಬುದ್ಧಿವಾದದ ಉಪದೇಶವನ್ನು ಬೇಡುವ ಸೊಸೆಯರನ್ನು ಕಾಣುತ್ತೇವೆ ಭರತನ ತಾಯಿ ಯಶೋಮತಿ ದೇವಿಯೂ ಅಷ್ಟು ವಾತ್ಸಲ್ಯದಿಂದ ಸೊಸೆಯರನ್ನು ಕಾಣುತ್ತಾಳೆ. ಭರತನಲ್ಲಿ ಇರುವ ಪ್ರೀತಿ ಯನ್ನೇ ಸೊಸೆಯರಲ್ಲೂ ತೋರಿಸುತ್ತಾಳೆ. ಹೀಗೆಯೇ ಅತ್ತಿಗೆ ನಾದಿನಿಯರ ಸರಸ, ಭರತನನ್ನು ಮದುವೆಯಾಗಲು ಸಿದ್ಧಳಾಗಿರುವ ಸುಭದ್ರೆಯ ಬಳಿ ಹೋಗಿ, ಭರತನ ಸೋದರಿಯರಾದ ಗಂಗಾ, ಸಿಂಧುದೇವಿಯರು, ಮಾತನಾಡಿಸುವುದೂ, ಮದುವಣಗಿತ್ತಿ ಮಾತನಾಡದೆ ನಾಚಿ ತಲೆಬಾಗಲು ಆಕೆಗೆ ಕೋಪ ಉಂಟಾಗುವಂತೆ ಚುಚ್ಚುಮಾತನ್ನು ಆಡುವರು. ಆದರೆ ಅದಕ್ಕೂ ಸುಭದ್ರೆಯದು ನಗುವಿನ ಉತ್ತರವೇ. ಮದುವೆಯಾದ ಮಾರನೆಯ ದಿವಸ ಸುಭದ್ರೆ ನಾದಿನಿ ಯರನ್ನು ಮಾತನಾಡಿಸಿ ಸಂತೋಷಗೊಳಿಸುತ್ತಾಳೆ. ಹೀಗೆ ಎಲ್ಲೆಲ್ಲಿ ಜಗಳ, ಮಾತ್ಸರ್ಯ, ದರ್ಪ ಹರಿದಾಡಬೇಕಿತ್ತು, ಅಲ್ಲೆಲ್ಲಾ ರತ್ನಾಕರ ಪ್ರೀತಿ, ಮಮತೆ, ವಾತ್ಸಲ್ಯ, ಸರಸ, ಸಾಮರಸ್ಯ ಗಳನ್ನು ತಂದುಹಾಕಿ ಈ ಸ್ತ್ರೀಪಾತ್ರಗಳ ಮೂಲಕ ಜಗತ್ತಿನ ಸ್ತ್ರೀಯರಿಗೆ ಮಾರ್ಗದರ್ಶನ ನೀಡಿದ್ದಾನೆ.

ರತ್ನಾಕರನ ಸ್ತ್ರೀಯರು ಸಕಲಕಲಾ ಪ್ರವೀಣೆಯರಾಗಿದ್ದಾರೆ. ರತ್ನಾಕರ ಸ್ತ್ರೀಯನ್ನು ಕೇವಲ ಒಂದು ಭೋಗದ ವಸ್ತು ಎಂದು ಭಾವಿಸಿಲ್ಲ, ಆಕೆಗೂ ಆತ್ಮವಿದೆ, ಹೃದಯವಿದೆ, ಆಸೆ-ಆಕಾಂಕ್ಷೆಗಳಿವೆ. ಅವುಗಳನ್ನು ಬೆಳೆಸಿಕೊಳ್ಳುವ, ರೂಪಿಸಿಕೊಳ್ಳುವ, ಈಡೇರಿಸಿಕೊಳ್ಳುವ ಅವಕಾಶ ಸಿಕ್ಕಬೇಕು. ಅಂಥ ಅವಕಾಶವನ್ನು ಪುರುಷ ಸ್ತ್ರೀಗೆ ಕಲ್ಪಿಸಿಕೊಡಬೇಕು. ಪತ್ನಿ, ತನ್ನ ಪತಿಯನ್ನು 'ಪುತ್' ಎನ್ನುವ ನರಕದಿಂದ ವಿಮುಕ್ತಗೊಳಿಸಲು ಪುತ್ರನನ್ನು ಹಡೆದು ಕೊಡುವ ಒಂದು ಜೀವಂತ ಯಂತ್ರವಲ್ಲ. ಆಕೆಗೂ ಪುರುಷನಿಗಿರುವ ಎಲ್ಲಾ ರೀತಿಯ ಸ್ವಾತಂತ್ರ್ಯಬೇಕು. ಆಕೆಯ ಆತ್ಮವೂ ವಿಕಾಸವಾಗಬೇಕು; ಬದುಕು ಹಸನಾಗಬೇಕು; ವಿಚಾರ ಶಕ್ತಿಯನ್ನು ಬೆಳಸಿಕೊಳ್ಳಬೇಕು-ಹೀಗೆಂದು ಯೋಚಿಸಿ ರತ್ನಾಕರನು ಭರತನ ಮೂಲಕ ಆತನ ಪತ್ನಿಯರಿಗೆ ಸಕಲರೀತಿ ವಿದ್ಯೆಯನ್ನು ಹೇಳಿಕೊಡುತ್ತಾನೆ. 'ವಿವಾಹಂ ವಿದ್ಯಾನಾಶನಂ' ಎಂಬ ಗಾದೆಗೆ ವಿರೋಧವಾಗಿ ಭರತನನ್ನು ಮದುವೆಯಾದ ಹೆಣ್ಣುಗಳು, ತಮ್ಮ ತಮ್ಮ ಅಭಿರುಚಿಗೆ ತಕ್ಕಂತೆ ವಿದ್ಯಾಭ್ಯಾಸ ಮಾಡಿ, ಜ್ಞಾನಾರ್ಜನೆ ಮಾಡಿಕೊಂಡಿದ್ದಲ್ಲದೆ ಆತ್ಮ ವಿಕಾಸಗೊಳಿಸಿಕೊಂಡು ತಮ್ಮ ಲಲಿತಕಲೆಗಳಿಂದ ಇತರರಿಗೂ ಆನಂದವನ್ನುಂಟು ಮಾಡುತ್ತಾರೆ.

ಹೀಗೆ ರತ್ನಾಕರನು ಸ್ತ್ರೀಪಾತ್ರಗಳ ಹಿರಿಮೆಯನ್ನು ಸಾರುವುದರ ಮೂಲಕ ಆದರ್ಶ ದಾಂಪತ್ಯಜೀವನದ ತಿರುಳನ್ನು ಹೃದಯಂಗಮವಾದ ನೂರಾರು ಸನ್ನಿವೇಶಗಳಿಂದ, ಮನೋ ಹರವಾದ ಘಟನೆಗಳಿಂದ, ಆಕರ್ಷಕವಾದ ಚಿತ್ರಗಳಿಂದ, ಸರಳವಾದ ಹಿತವಾದ, ಮಧುರವಾದ

ಶೈಲಿಯಿಂದ ಬಿಡಿಬಿಡಿಯಾಗಿ ಚಿತ್ರಿಸಿ ಸಹೃದಯರನ್ನು ಶೃಂಗಾರರಸದ ಸಾಗರದಲ್ಲಿ ತೇಲಿಸಿದ್ದಾನೆ. ಲಲಿತಕಲೆಗಳಲ್ಲಿ ಪರಮ ಪರಿಣತರಾಗಿ ಸುಳಿದಾಡುವ ಸರಸ್ವತಿಯರಂತೆ ಇರುವ ಪತ್ನಿಯರಿಂದ ಕೂಡಿದ ಭರತನ ಸಂಸಾರಲೋಕ ಒಂದು ಗಂಧರ್ವ ಲೋಕವಾಗಿದೆ. ಹೀಗೆ ರತ್ನಾಕರನ ಭರತೇಶ ವೈಭವ ಕುಟುಂಬಜೀವನದ ಕೈಗನ್ನಡಿಯಾಗಿದೆ. ಆದರ್ಶದಾಂಪತ್ಯ ಜೀವನದ ಮಣಿದರ್ಪಣವಾಗಿದೆ. ಕವಿ ತನ್ನೆಲ್ಲ ಅನುಭವ ಪ್ರತಿಭೆಗಳನ್ನು ಇಲ್ಲಿ ಬರುವ ಸ್ತ್ರೀ ಪಾತ್ರಗಳ ಮೂಲಕ ಅನನ್ಯವಾದ ರೀತಿಯಲ್ಲಿ ಪ್ರತಿಪಾದಿಸಿದ್ದಾನೆ.

---

## ನಾರಾಯಣಕವಿ ವಿರಚಿತ

# ಉತ್ತರರಾಮಕಥೆ

**ಲೇಖಕರು: ನ್ಯೈ. ಶೇ. ಅನಂತಪದ್ಮನಾಭರಾವ್**

ಸುಮಾರು ನಾನೂರು ವರ್ಷಗಳ ಹಿಂದೆಯೇ ರಚಿತವಾದ ಈ ಸುಂದರ ಕಾವ್ಯವು ಇದುವರೆಗೂ ಬೆಳಕಿಗೆ ಬಾರದೆ ಸಾಹಿತಿಗಳ ಗಮನಸೆಳೆಯದೆ ಇದ್ದುದು ಆಶ್ಚರ್ಯದಸಂಗತಿಯಾಗಿದೆ. ವಿದ್ವಾನ್ ಕೆ. ವೆಂಕಟರಾಮಾಚಾರ್ಯರವರ ಸತತಪರಿಶ್ರಮದಿಂದ ಈಗ ಮೊದಲನೆಯ ಮುದ್ರಣ ಕಂಡಿರುವ ಈ ಉತ್ತರರಾಮಕಥೆಯು ಎಲ್ಲ ರೀತಿಯಿಂದಲೂ ಮನೋಹರವಾಗಿದ್ದು, ಕುಮಾರ ವಾಲ್ಮೀಕಿಯು ಹೇಳದೆ ಬಿಟ್ಟಿರುವ ಉತ್ತರಕಾಂಡ ರಾಮಾಯಣವನ್ನು ನಾರಾಯಣ ಕವಿಯು ಪೂರ್ಣಗೊಳಿಸಿದಂತಾಗಿದೆ. ಈ ಕವಿಯ ಕಾಲಕ್ಕೆ ತೊರವೆ ರಾಮಾಯಣವು ಬಹುಶಃ ಇನ್ನೂ ಪ್ರಸಿದ್ಧಿಗೆ ಬಂದಿದ್ದಿರಲಾರದು. ಇವನ ಬಾಲ್ಯದಲ್ಲಿ ಕುಮಾರ ವಾಲ್ಮೀಕಿಯು ಜೀವಿಸಿದ್ದು ವೃದ್ಧನಾಗಿದ್ದಿರಲೂಬಹುದು.

ಉತ್ತರರಾಮಕಥೆಯ ಕಾವ್ಯಕರ್ತೃವಾದ ನಾರಾಯಣನು "ಭಾನುಕವಿತಾ ಸತ್ಸರೋರುಹ ಭಾನು, ತತ್ಸುತ ತಿಮ್ಮಣಾರ್ಯನು . . . ವಾಕ್ಯಾಮಸು ವಿಭಾಡಿಸುವ ಆ ನಿಖಿಲ ಗುಣಸಿಧಿಯ ಲೋದಿದೆನಾನೆನಲು . . ." ಎಂದು ಹೇಳಿಕೊಂಡಿದ್ದಾನೆ. ಆದಕಾರಣ ಇವನು ಮಹಾಭಾರತದ ಕೊನೆಯ ಎಂಟು ಪರ್ವಗಳ ಕರ್ತೃವಾದ ತಿಮ್ಮಣ್ಣ ಕವಿಯ ಶಿಷ್ಯನೆಂಬುದು ವ್ಯಕ್ತವಾಗುವುದು. ತಿಮ್ಮಣ್ಣಕವಿ ಅಥವಾ ತಿಮ್ಮಣಾರ್ಯನು ಭಾನುಕವಿಯ ಮಗ. ಈತನ ಕಾಲ ಸುಮಾರು ೧೫೧೦ ಎಂದು ಹೇಳಲಾಗಿದೆ. ಆದುದರಿಂದ ಈ ಕಾವ್ಯಕರ್ತೃವಾದ ನಾರಾಯಣನು ಸು. ೧೫೩೦ರಲ್ಲಿ ಇದ್ದಿರಬಹುದೆಂದು ವಿದ್ವಾನ್ ಉಗ್ರಾಣ ಮಂಗೇಶರಾಯರು ಹೇಳಿರುತ್ತಾರೆ. "ಈ ಕೃತಿಗಹೋಬಲ ನಾರಸಿಂಹನೆ ಪತಿ . . ." ಎಂದು ೧ನೆಯ ಸಂಧಿಯಲ್ಲಿ ಹೇಳಿರುವುದರಿಂದ ಇವನು ಆ ಕಡೆಯವನಿರಬಹುದೆಂದು ಊಹಿಸಲಾಗಿದೆ. ಈ ಅಹೋಬಲ ಕ್ಷೇತ್ರವು ಆಂಧ್ರ ದೇಶದ ಕರ್ನೂಲು ಜಿಲ್ಲೆಯಲ್ಲಿರುವ ಕ್ಷೇತ್ರ. ಕವಿಯು ಅಹೋಬಲ ನಾರಸಿಂಹನನ್ನು ಪುನಃ ಯಾವ ಸಂದರ್ಭದಲ್ಲೂ ಸ್ಮರಿಸಿಲ್ಲ. ಆದರೂ ಆ ಕ್ಷೇತ್ರದ ನಾರಸಿಂಹದೇವರಿಗೆ ಈ ಕಾವ್ಯ ಅರ್ಪಿತವಾಗಿರುವ ಕಾರಣದಿಂದಲೂ, ಆ ಕ್ಷೇತ್ರವು ಮಾಧ್ವರ ಭೂವೈಕುಂಠವೆಂದು ಪ್ರಸಿದ್ಧವಾಗಿರುವುದರಿಂದಲೂ, ೧ನೆಯ ಸಂಧಿಯ ೨ನೆಯ ಪದ್ಯದಲ್ಲೇ ಆಂಜನೇಯನನ್ನು ಸ್ತುತಿಸಿರುವುದರಿಂದಲೂ, ೪೩ನೆಯ ಸಂಧಿಯ ೨೧ನೆಯ ಪದ್ಯದಲ್ಲಿ, "ನೀನೆ ಮುಖ್ಯ ಪ್ರಾಣ, ಸೀತೆಯು ತಾನೆ ದೇವಿ ಪ್ರಭಂಜನನ ವಧು . . ." ಎಂದು ರಾಮನನ್ನು ಹೊಗಳಿರುವುದರಿಂದಲೂ, ಈ ಕವಿಯು ಮಾಧ್ವಬ್ರಾಹ್ಮಣನಾಗಿರಬಹುದೆಂದು ಊಹಿಸಲಾಗಿದೆ.

ನಾರಾಯಣಕವಿಯು ಕುಮಾರವ್ಯಾಸನನ್ನು, "ಆ ಮಹಾಭಾರತವಸಿಳೆಗೆ ಸುಧಾಮಧುರ ಕರ್ಣಾಟಭಾಷಾ ಭಾಮಿನೀಪತಿ ಭಾಮಿನೀ ಷಟ್ಪದಿಯಲಳವಡಿಸಿ, ಸ್ವಾಮಿ ಗದುಗಿನವೀರ ಲಕ್ಷ್ಮೀಧಾಮ ನಾರಾಯಣನ ಕರುಣದಿ ಈ ಮಹಿಗೆ ಪೇಳಿದ ಕುಮಾರವ್ಯಾಸಗೆರಗುವೆನು." ಎಂದು ಭಕ್ತಿಪೂರ್ವಕವಾಗಿ ಸ್ತುತಿಸಿದ್ದಾನೆ. ಆದಕಾರಣ ಇವನು ಕುಮಾರವ್ಯಾಸನಿಗಿಂತ

ಎಷ್ಟೋ ಈಚಿನವನು ಎಂಬುದು ಸ್ಪಷ್ಟವಾಗಿದೆ. ಆದರೆ ರಾಮಾಯಣಕರ್ತೃವಾದ ಕುಮಾರ ವಾಲ್ಮೀಕಿಯನ್ನು ಸ್ಮರಿಸಿಲ್ಲ.

* ಈ ಕಾವ್ಯವು ಸಮಸ್ತ ಕಾವ್ಯಲಕ್ಷಣಗಳಿಂದ ಕೂಡಿದ್ದು, ಮನೋರಂಜಕವೂ, ಭಕ್ತಿಪ್ರದವೂ, ಶ್ರೇಯಸ್ಕರವೂ, ಆಗಿರುವ ಕಾರಣ ಇದನ್ನು ಮಹಾಕಾವ್ಯವೆಂದು ಹೇಳಲು ಯಾವ ಅಡ್ಡಿಯೂ ಇರಲಾರದು. ಇದು ಮಂಜುಳವಾದ ಭಾಮಿನೀಷಟ್ಪದಿಯಲ್ಲಿ ರಚಿತವಾಗಿದ್ದು ಇದರಲ್ಲಿ ೨೦೨೬ ಪದ್ಯಗಳಿವೆ. ಮೊದಲಲ್ಲಿ ಕವಿಯ ಇಷ್ಟದೇವತೆಯೂ ಕಾವ್ಯದ ಮಹಾನಾಯಕನೂ ಆದ ಶ್ರೀರಾಮಚಂದ್ರನ ಸ್ತುತಿಯಿದೆ. ಎರಡನೆಯ ಪದ್ಯವೇ ಆಂಜನೇಯ ಸ್ತೋತ್ರ. ಅನಂತರ ಅನುಕ್ರಮವಾಗಿ ಶಿವ, ಶಾರದೆ, ಗಣಪತಿ ಇವರ ಸ್ತುತಿಗಳಿವೆ. ಆಮೇಲೆ ಆದಿಕಾವ್ಯಕರ್ತೃವಾದ ಶ್ರೀ ವಾಲ್ಮೀಕಿಮಹರ್ಷಿ, ವೇದವ್ಯಾಸ ಮಹಾಮುನಿಗಳ ಸ್ತುತಿಗಳಿವೆ. ಅನಂತರ ಕಾಳಿದಾಸ, ಕುಮಾರವ್ಯಾಸ ಮಹಾಕವಿಗಳನ್ನು ಸ್ಮರಿಸಿ, ತನ್ನ ಗುರುವಾದ ತಿಮ್ಮಣಾರ್ಯನನ್ನು ನೆನೆದಿದ್ದಾನೆ. ಆಮೇಲೆ ತನ್ನ ಕಾವ್ಯದ ಹಿರಿಮೆಯನ್ನೂ, ತನ್ನ ಪ್ರೌಢಿಮೆಯನ್ನೂ ಹೇಳಿಕೊಂಡು, "ಆದರಿನೀ ಸತ್ಕಾವ್ಯವೆಂತೆನೆ . . ." ಎಂದು ಕಥಾರಂಭ ಮಾಡಿರುತ್ತಾನೆ. ಮೊದಲ ಭಾಗವೆಲ್ಲ ರಾಕ್ಷಸರ ಮತ್ತು ರಾವಣನ ಚರಿತ್ರೆಗೇ ಮೀಸಲಾಗಿದೆ. ಆದರೆ ಕಾವ್ಯದುದ್ದಕ್ಕೂ ಶ್ರೀರಾಮನ ದಿವ್ಯಚಿತ್ರವು ಎದುರಿಗೆ ನಿಲ್ಲುವಂತೆ, ಎಲ್ಲಿಯೂ ವಾಚಕರು ರಾಮನನ್ನು ಮರೆಯದಂತೆ ಎಸಗಿದ್ದಾನೆ. ಕುಮಾರವ್ಯಾಸನು ಶ್ರೀಕೃಷ್ಣನನ್ನು ಅಲ್ಲಲ್ಲಿ ಮನೋಹರವಾಗಿ ಸ್ತುತಿಸಿರುವಂತೆ ನಾರಾಯಣಕವಿಯೂ ಶ್ರೀರಾಮನನ್ನು ಪ್ರತಿಸಂಧಿಯ ಆದಿ-ಅಂತ್ಯಗಳಲ್ಲಿ ಹೃದಯಂಗಮವಾಗಿ ಕೀರ್ತಿಸಿರುತ್ತಾನೆ.

ಈ ಕಾವ್ಯದಲ್ಲಿ ಬಹುಮಟ್ಟಿಗೆ ಕುಮಾರವ್ಯಾಸನ ಶೈಲಿ, ಧಾಟಿ, ಪದಪ್ರಯೋಗಗಳು ಸ್ಪಷ್ಟವಾಗಿ ಕಂಡು ಬರುವುವು. ಇವುಗಳ ಪ್ರಯೋಗವು ಸುಂದರವಾಗಿದ್ದು ಸಾರ್ಥಕವಾಗಿವೆ. ಕೆಲವು ಕಡೆ ಶಿಥಿಲೋಚ್ಚಾರಣೆಗಳಿದ್ದರೂ, ಓಟವು ಸುಲಭವಾಗಿದ್ದು ಕಾವ್ಯಗಾಯನಕ್ಕೆ ಎಲ್ಲಿಯೂ ತೊಡಕುಂಟಾಗುವುದಿಲ್ಲ. ಭಾರತ- ರಾಮಾಯಣ ಮಹಾ ಕಾವ್ಯಗಳನ್ನು ವಾಚನ ಮಾಡುವಂತೆಯೇ ಈ ಕಾವ್ಯವನ್ನೂ ವಾಚನ ಮಾಡಬಹುದು.

ಕವಿಯು "ಕಾಳಿದಾಸಾದಿಗಳ ವರಸತ್ಕೀರ್ತಿ ಸುಧೆ ನಾಲಗೆಯೊಳಗೆ ತನಗರಿದೆ ಮಧುರೋಕ್ತಿಗಳನೆಸಗುವುದು" ಎಂದು ಹೇಳಿಕೊಂಡಿರುವುದರಿಂದ ಇವನು ಸಂಸ್ಕೃತ ಭಾಷಾಕೋವಿದನೆಂಬುದು ಸ್ಪಷ್ಟವಾಗಿದೆ. ಇವನ ನುಡಿ ಕಿವಿಗಿಂಪು, ಹೃದಯಕ್ಕೆ ತಂಪು ಎಂದು ವಿದ್ವಾನ್ ಉಗ್ರಾಣ ಮಂಗೇಶರಾಯರು ಹೇಳಿರುವುದು ಉಚಿತವಾಗಿದೆ. ಪ್ರತಿಸಂಧಿಯ ಪ್ರಥಮ ಪದ್ಯದಲ್ಲಿ ಶ್ರೀರಾಮನ ಗುಣಕಥನ, ಸಂಧಿಯ ಕೊನೆಯಲ್ಲಿ ಬಹುತರವಾಗಿ "ರಘುಕುಲ ಸುಧಾಂಬುಧಿ ಚಂದ್ರ" ಎಂಬ ಮುದ್ರಿಕೆಯಿರುವುದು ಕಂಡುಬರುತ್ತದೆ.

## ೨

ಕವಿಯು ಶ್ರೀರಾಮ-ಸೀತಾದೇವಿಯರನ್ನು ದೈವತಾಭಾವದಿಂದಲೂ ಭಕ್ತಿಪ್ರದವಾಗಿಯೂ ರೂಪಿಸಿರುತ್ತಾನೆ. ಮಂಗಳ ಪದ್ಯದಲ್ಲೇ "ತಾರಕರಾಮ ಮಂತ್ರಾತ್ಮಕನು . . . . ."

---

* ಉತ್ತರರಾಮ ಕಥೆ (ಕಾವ್ಯ), ನಾರಾಯಣ ಕವಿ. ಭಾಗ ೧. ಪುಟ ಕ್ರೌನ್ ಅಷ್ಟಪತ್ರ ೧೫೮. ರೂ. ೨ ೫೦. ಭಾಗ ೨. ಪುಟ ೧೬೪/೧೬. ರೂ. ೩. ಸಂಪಾದಕರು: ವಿದ್ವಾನ್ ಕೆ. ವೆಂಕಟರಾಮಾಚಾರ್ಯರು. ಪ್ರಕಾಶಕರು: ವಿಜಯಸಾಹಿತ್ಯ ಮಾಲೆ, ಸುರತ್ಕಲ್ಲು, ದಕ್ಷಿಣ ಕನ್ನಡ ಜಿಲ್ಲೆ.

ಎಂದಿದ್ದಾನೆ. "ವಿದಿತ ಪುಣ್ಯಚರಿತ್ರ, ಸೀತಾವದನ ಪಂಕಜಮಿತ್ರ, ಜಗದಭ್ಯುದಯಕಾರಣ ರಾಘವೇಶ್ವರನಿರ್ದನೊಲವಿನಲಿ." ಇಷ್ಟೇ ಅಲ್ಲದೆ:

"ಸರಸಿರುಹಭವ ಮಂತ್ರಗಾನಾಕ್ಷರ ಮನೋಹರ ಮಧ್ಯಸ್ಫುರಿತ ದ್ಯುಮಣಿ ನಾಯಕರತ್ನ ಮಂಗಳ ರಾಮ ರಘುರಾಮ":

"ಶ್ರೀಮಹಿಳೆ ವೈದೇಹಿ ಪಾವನ ನಾಮ, ನಾರಾಯಣನೆ, ರಘುಕುಲ ರಾಮನಾ ವೈಕುಂಠ ಪುರವೆ ಅಯೋಧ್ಯೆಯೆಂದೆನಿಸಿ.":

"ಕರಸರೋರುಹ ಭೂಷಣಗಳಾಗಿರೆ ಸುದರ್ಶನ, ಶಾರ್ಙ ಮೊದಲಾದುರುತರಾಯುಧ ರತ್ನಗಳು ಮಹನೀಯತೇಜದಲಿ, ಸ್ಫುರಿತವಾದಿಮ ವಿಷ್ಣುನೀನೆಲೆಯರಸ ವಾಮನನಾಗಿ ಮೂರಡಿ ಧರೆಯ ಬೇಡಿದೆ.":

ಈ ಪ್ರಕಾರವಾಗಿ-ಇನ್ನೂ ಅನೇಕ ಸಂದರ್ಭಗಳಲ್ಲಿ, ಅನೇಕ ಪಾತ್ರಗಳ ಮೂಲಕ ಹೇಳಿಸಿರುವುದರಿಂದ ಕವಿಯು ಶ್ರೀರಾಮನನ್ನು ಕಾವ್ಯದುದ್ದಕ್ಕೂ ದೇವರೆಂದೇ ಭಾವಿಸಿ ಆ ಪ್ರಕಾರವಾಗಿ ಚಿತ್ರಿಸಿದ್ದಾನೆ. ಕಾವ್ಯ ಸರಸವಾಗಿಯೂ, ಮನೋಹರವಾದ ಪದಪುಂಜಗಳಿಂದಲೂ, ಸುಲಭವಾದ ಗತಿಯಿಂದಲೂ ಕ್ಲಿಷ್ಟಪದರಹಿತವಾಗಿಯೂ ರಮ್ಯವಾಗಿದೆ. ಶ್ರೀರಾಮನು ದೇವಮಾತ್ರನೇ ಅಲ್ಲ. ಅವನು ವಿರಾಟ್ಪುರುಷನು, ಸರ್ವಾಂತರ್ಯಾಮಿಯಾದ ಪರಮಾತ್ಮ. ಸೀತಾದೇವಿಯೇ ಸಾಕ್ಷಾತ್ ಲಕ್ಷ್ಮೀದೇವಿ. ಉದಾಹರಣೆ:

"ನೀನು ನಾರಾಯಣನು, ಲಕ್ಷ್ಮಿಯು
ತಾನೆ ಜಾನಕಿ, ಶಿವನು ನೀನೇ
ಮೇನಕಾತ್ಮಜೆಯೆನಿಸಿ, ವಿಧಿ ನೀನೀಕೆ ಬ್ರಹ್ಮಾಣಿ;
ನೀನೆ ಶಕ್ರನು, ಸೀತೆಯೇ ಪೌ
ಲೋಮಿ, ನೀನೇ ಅಗ್ನಿ, ಸೀತೆಯು
ತಾನೆ ಸ್ವಾಹಾದೇವಿ..."

"ನೀನೆ ಪಲರೂಪಾಂತ ಪುರುಷನು
ತಾನೆ ಸೀತಾದೇವಿ ಸತಿ ರೂ
ಪಾನುಮತಿ, ನೀನಲ್ಲದನ್ಯಥವಿಲ್ಲ ಜಗಕೆಂದು
ವೃಕ್ಷರೂಪನು ನೀನೆ ನೋಡಿ ಪ
ರೀಕ್ಷಿಸಲು ಲತೆಯಾಗಿ ಲೋಕವ
ರಕ್ಷಿಪಳು ಈ ಸೀತೆಯಲ್ಲದೆ ಬೇರೆ ಪರರುಂಟೇ"

ಈ ಪ್ರಕಾರ ಹಲವು ವಿಧವಾಗಿ ಶ್ರೀರಾಮನ ಅಂತರ್ಯಾಮಿತ್ವವನ್ನು ಪ್ರಕಟಿಸಿರುವನು.

ಜಗದಂತರ್ಯಾಮಿಯಾದ ಶ್ರೀರಾಮನು ಈ ಮನುಷ್ಯಾವತಾರಕಾಲದಲ್ಲಿ, ಕ್ಷತ್ರಿಯೋಚಿತವಾದ ಕರ್ಮಾನುಷ್ಠಾನಗಳನ್ನು ಆಚರಿಸುವನು:

"ತರಣಿಗಖಿಲಾಮ್ನಾಯ ರತ್ನದ
ಭರಣಿಗಾನತ ಯೋಗಿ ಜೀವನ
ಸರಣಿಗಾತಪನೆಂಬ ವೈಶ್ವಾನರನು ಸಂಜನಿಪ|
ಅರಣಿಗಾಶು ಪವಿತ್ರಿತಾಖಿಲ
ಧರಣಿಗಘವಾರಾಶಿ ತಾರಕ
ತರಣಿಗರ್ಘ್ಯವನಿತ್ತು ಗಾಯತ್ರಿಯನು ಜನಿಸಿದನು॥"

ಆಗ ಗಾಯತ್ರಿದೇವಿಯು :

" ಹಿರಿದೆನಿಪ ಭಕ್ತಿಯಲಿ ಜನಿಸಿದ
ಪುರುಷರಿಗೆ ಸರ್ವಜ್ಞತೆಯನೀ
ವರಿದೆನಿಸುವಾತ್ಮೀಯ ಮಂಗಳನಾಮ ಮಂತ್ರದಲಿ|
ಸುರರರಿಯೆ ವರ್ತಿಸುವ ರಘುಕುಂ
ಜರನು ಗಾಯತ್ರಿಯನು ಜಪಿಸಲು
ಶಿರವ ನಮುಬಾಗಿದಳು ಸಲೆ ಗಾಯತ್ರಿ ನಮನಗುತ ‖ "

ಈ ವರ್ಣನೆ ಕವಿಯ ಭಾವನೆಗೆ ಹಿರಿಮೆಯನ್ನುಂಟುಮಾಡಿದೆ. ಒಡ್ಡೋಲಗಕ್ಕೆ ಹೋಗುವ ಮುನ್ನ ರಾಜಯೋಗ್ಯವಾದ ಉಡುಗೆತೊಡುಗೆಗಳಿಂದ ಅಲಂಕಾರಪೂರ್ಣನಾದ ಶ್ರೀರಾಮನು ನೋಡುವವರಿಗೆ ಕಾಣುವ ರೀತಿ :

" ಸ್ಮರನ ಪಿತನೋ ರೂಪದಲಿ ಸಿರಿ
ಯರಸನೋ ಭಾಗ್ಯದಲಿ ಇಂದ್ರಾ
ವರಜನೋ ವಿಭವದಲಿ ಬ್ರಹ್ಮನ ಪಿತನೊ ಮಹಿಮೆಯಲಿ|
ಹಿರಿಯ ವರಶೃಂಗಾರರಸವಿ
ಸ್ಫುರಣೆಯಲಿ ಸುರನದಿಯ ತಾತನೊ
ಪರಮ ಪೂತತ್ವದಲೆನಲು ರಘುರಾಮರಂಜಿಸಿದ ‖ "

ಶ್ರೀರಾಮನ ಆಸ್ಥಾನದಲ್ಲಿ ಅಲಂಕೃತರಾಗಿದ್ದ ಸುಂದರಿಯರಾದ ನಾರಿಯರು :

" ಆರು ಗತಿ ಯತಿಗಳಿಗೆ ವ್ರತಿಗಳ
ಪೌರುಷಗಳಿನ್ನುಂಟೆ ಮದನನ
ಚಾರುತರ ಸಮ್ಮೋಹನಾಸ್ತ್ರಗಳೋ ಮಹಾದೇವ|
ವಾರನಾರಿಯರೆಂದೆನುತ ಝುಂ
ಕಾರ ಕೈವಾರದಲಿ ಭೃಂಗ ಕಿ
ಶೋರಗಳು ತನು ಸೌರಭಕೆ ಬರೆ ಬಂದರೋಲಗಕೇ ‖ "

ಶ್ರೀರಾಮನ ಭಕ್ತವರ್ಗದಲ್ಲಿ ಅಗ್ರೇಸರನಾಗಿ ಬೆಳಗಿದವನು ಹನುಮಂತನು. ಅವನಲ್ಲಿ ರಾಮನಿಗೂ ಅಮಿತ ಪ್ರೇಮ. ಇದಕ್ಕೆ ನಿದರ್ಶನವಾಗಿ, ಅಗಸ್ತ್ಯ ಮುನಿಯು ಆಂಜನೇಯನ ಜನ್ಮಕಥಾನಿರೂಪಣೆಯನ್ನು ಮಾಡುವ ಸಂದರ್ಭದಲ್ಲಿ ಶ್ರೀರಾಮನು ಅವನ ವಿಷಯದಲ್ಲಿ ತೋರಿಸಿದ ಪರಮ ವಾತ್ಸಲ್ಯದ ವರ್ಣನೆ :

" . . . . . . . . . . ಪ್ರತಿಭಟ
ದನುಜಭಟ ಹೃತ್ಕುಂತ ಹನುಮಂ
ತನ ಹೆಗಲಲಾತ್ಮೀಯ ಕರಪಂಕರುಹವನು ಇರಿಸಿ|
ವಿನಯ ಕೃಪೆ ವಾತ್ಸಲ್ಯಗಳು ಸಂ
ಜನಿಸೆ ಮನದಲಿ ದಶನ ಚಂದ್ರಿಕೆ
ಮಿನುಗೆ ಮನುಕುಲಚಂದ್ರ ಮುನಿಕುಲಚಂದ್ರಗಿಂತೆಂದ ‖

ನೆನಹಿನಲಿ ನೆಲೆಗೊಂಡ ಲೇಸನು
ಮನವೆ ಬಲ್ಲಂದದಲಿ ನಾಲಗೆ
ಯನಿತು ಬಲ್ಲುದೆ ನುಡಿಯಲಳವೇ ಈ ಮರುತ್ಸುತನ|

ಘನತೆಯನು ಪ್ರಾಣೋಪಕಾರ
ಕ್ಕನಘ ಪ್ರತ್ಯುಪಕಾರವಿಲ್ಲೆಂ
ದೆನಿಸಿ ಮಾಡಿದ ನೊಂದು ಶೌರ್ಯಪನೇನನುಸುರುವೆನು ॥

ಅಳಿದ ಲಕ್ಷ್ಮಣನೊಡನೆ ತಾನಂ
ದಳಿಯದಂತಿರೆ ಕೂಡಿ ಬಾಂಧವ
ರಳಿಯದಂತಿರೆ ತಂದ ಸಂಜೀವನ ಮಹೌಷಧಿಯ ।
ತಳಿದು ತಮ್ಮನ ದೀರ್ಘ ನಿದ್ರೆಯ
ಕಳಚಿ ಹರಣವ ನಿಲಿಸಿ ಸಮರ
ಸ್ಥಳದೊಳಗೆ ನಿಲಿಸಿದನು ಉಳಿಸಿದನೆಮ್ಮ ರಘುಕುಲವ ॥

ಶರಣು ಹೊಕ್ಕ ವಿಭೀಷಣನನಾ
ದರಿಸಿ ನೃಪಧರ್ಮದಲಿ ಲಂಕಾ
ಪುರಪತಿಯ ಮಾಡುವುದ ಕಂಡೆನು ಸಲಿಸಿ ಭಾಷೆಯನು ।
ಮರಳಿ ಜಾನಕಿಯೊಡನಯೋಧ್ಯೆಗೆ
ಪರಮ ಬಾಂಧವರೊಡನೆ ರಾಜ್ಯದ
ಸಿರಿಯನಾಳಲು ಬಂದೆನೀ ಪಾವನಿಯದೆಸೆಯಿಂದ ॥ ”

ಈ ಪ್ರಕಾರವಾಗಿ ಆಂಜನೇಯನನ್ನು ಶ್ರೀರಾಮನೇ ಮುಕ್ತಕಂಠದಿಂದ ಹೊಗಳಿರುವುದ ರಿಂದ ಶ್ರೀರಾಮನ ನಂತರ ಹನುಮಂತನೇ ಉಪನಾಯಕನಂತ ಬೆಳಗುತ್ತಾನೆ. ಶರಣಾಗತ ನಾದ ವಿಭೀಷಣನಿಗೆ, ಮೊದಲೇ ಕೊಟ್ಟ ವಚನದಂತೆ. ಲಂಕಾರಾಜ್ಯಾಧಿಪತ್ಯವನ್ನು ಕೊಟ್ಟು, ರಾಮನ ಸತ್ಯ ವಾಕ್ಯಪರಿಪಾಲನೆಯು ಸಾಧ್ಯವಾಗುವುದಕ್ಕೆ ಹನುಮಂತನೇ ಮುಖ್ಯ ಕಾರಣನು. ಈ ಕಾವ್ಯದಲ್ಲಿ ಆಂಜನೇಯನ ಕಥೆ ಸಂಕ್ಷೇಪವಾಗಿದ್ದರೂ, ಹೃದಯಂಗಮವೂ, ಮನೋಹರವೂ ಆಗಿದೆ. ಅವನ ಪರಾಕ್ರಮವನ್ನೂ ಪ್ರಭಾವವನ್ನೂ ರಾಮನೇ ಹೊಗಳಿರುವುದು ಉಚಿತವೂ ಭಾವಮನೋಹರವೂ ಆಗಿದೆ.

೩

ಈ ಕಾವ್ಯದಲ್ಲಿ ಸೀತಾಪರಿತ್ಯಾಗಭಾಗವು ಸಂಕ್ಷೇಪವಾಗಿವೆ. ಜೈಮಿನಿಭಾರತದಲ್ಲಿ ಹೇಳಿ ರುವಂತೆ, ಇಲ್ಲಿ ಸಂತತಿಯಾಗದೆ ಸೀತಾರಾಮರು ದುಃಖಿಸುವುದಿಲ್ಲ. ಕಾಲಕ್ರಮದಲ್ಲಿ ಸೀತೆಯು ಗರ್ಭಿಣಿಯಾಗಿ ಸೊಗಸಿದಳು. ಅದನ್ನರಿತ ರಘುಕುಂಜರನು ಏಕಾಂತದಲಿ 'ಹೇಳು ಮನದೀಪ್ಸಿ ತವನೆನಗೆ' ಎಂದ. ಆಗ ಸೀತೆಯು 'ನಿಜಪದವನಜಸೇವೆಯದಲ್ಲದೆ. ಎನ್ನಯ ಮನಕೆ ಬೇರೊಂದಿಲ್ಲ ವಾಂಛಿತ. ಆದೊಡೆ ವಿನುತ ಭಾಗೀರಥಿಯ ತೀರದ ಮುನಿವನಂಗಳೊಳೊಂದು ದಿನ ಮುನಿಜನವ ಸೇವಿಪ ಬಯಕೆಯಾಯ್ತು' ಎಂದಳು.

ಹೀಗಿರುವಾಗ ಒಂದು ಸಮಯದಲ್ಲಿ ನಗರದಲ್ಲಿ ಗಸ್ತುತಿರುಗುವ ಯಾಮಿಕರಲ್ಲಿ ಒಬ್ಬ ನಾದ ಭದ್ರನೆಂಬ ಗೂಢಚಾರನು, ಮಿಕ್ಕ ಗೂಢಚಾರರು ಅವರವರ ವರದಿಗಳನ್ನೊಪ್ಪಿಸಿದನಂತರ ಶ್ರೀರಾಮನನ್ನು ನೋಡಿ, “ನುಡಿಯಲನುಚಿತವಾದ ನುಡಿಯನು ನುಡಿಯಬಾರದು ಸಭೆಯೊಳಾ ಗಿಯು, ನುಡಿಯಬೇಹುದು ಸತ್ಯವನು ನಿಮ್ಮಾಜ್ಞೆಯಿಂದೆನಗೆ. ಪೊಡವಿಯರಿಯಲು ರಾವ ಣನು ಸೆರೆವಿಡಿದ ಕಾಂತೆಯ ತಂದು ನೃಪಕೈವಿಡಿದು ಬಾಳುತಲಿರ್ದನೆಂದಾಡುವುದು ಜನವು”

ಎಂದನು. ಈ ಕಾರಣದಿಂದ ರಾಮನು ಲೋಕಾಪವಾದವನ್ನು ಸಹಿಸದೆ ಸೀತೆಯನ್ನು ತ್ಯಜಿಸುವನು. ಒಟ್ಟಿನಲ್ಲಿ ಪ್ರಜೆಗಳ ಒಂದು ಪಕ್ಷದ ಅಭಿಪ್ರಾಯವನ್ನು ಶ್ರೀರಾಮನು ಮಾನ್ಯ ಮಾಡಿದನು. (ಇಲ್ಲಿ ರಜಕನ ವೃತ್ತಾಂತ ಬರುವುದೇ ಇಲ್ಲ.)

ತನ್ನನ್ನು ಶ್ರೀರಾಮನು, ಜನಾಪವಾದಕ್ಕೆ ಗುರಿಯಾಗಿ, ಪರಿತ್ಯಜಿಸಿದನೆಂಬ ಸುದ್ದಿಯನ್ನು ಕೇಳಿ, ಸೀತೆಯು ದುಃಖದಿಂದ ನೊಂದು, ನುಡಿ ಮಹಾಸಿಯ ತೆರದಿ ಹೃದಯವನಡರೆ, ಶೋಕಾನ್ವಿತೆಯನೆನ್ನನು ಪಡೆದೆಯೇತಕೆ ಜನನಿಯೆಂದಳು ತಪ್ಪಿದಂದದಲಿ ಮೂರ್ಛೆಯಲೊರಗಿ, ಮೆಲ್ಲನೆ ತಿಳಿದು ಕಣ್ಗಳ ಕಡೆಯಲಶ್ರುಗಳೊಗಲು, ನುಡಿದಳು ಬಲಿದು ಧೈರ್ಯವನು. ಬಹು ವಿಧವಾಗಿ ದುಃಖಿಸಿ, ಹಂಬಲಿಸಿ, ತನ ದುಷ್ಕರ್ಮವಿದೆಂದು ತಿಳಿದು, ಆಕೆಯು ಯಾವ ರೀತಿಯಿಂದಲೂ ಪತಿಯಲ್ಲಿ ತಪ್ಪೆಣಿಸಲಿಲ್ಲ. ಪ್ರತಿಯಾಗಿ ಸೀತೆಯು ಪತಿಭಕ್ತಿಯನ್ನೂ, ತನ್ನ ಮೇಲೆ ಬರಬಹುದಾದ ಜನನಿಂದೆಯ ಭೀತಿಯನ್ನೂ, ಜೊತೆಯಲ್ಲೇ ಮನೋದಾರ್ಢ್ಯವನ್ನೂ ಇಲ್ಲಿ ಪ್ರದರ್ಶಿಸಿದ್ದಾಳೆ.

"ವನಿತೆ, ನಿನ್ನನದೇತಕಗಲಿದ
ನನಘ ರಘುಪತಿಯೆಂದು ಬೆಸಗೊಳೆ
ಮುನಿಕುಮಾರರಿಗೇನನೆಂಬೆನು ॥"

ಆದರೂ ಲಕ್ಷ್ಮಣನನ್ನು ನೋಡಿ,

"ಅರಸಗೆನ್ನಿಂದಾದ ನಿಂದೆಗೆ
ಧರೆಯೊಳೆಲ್ಲರು ಮೆಚ್ಚೆ ನಡೆದದ
ಪರಿಹರಿಪೆನೆಂದಾಡು ಪರದೇವತೆ ಮಹಾಬಂಧು |
ಹರಣವೆನ್ನಯ ದೇಹದಿಂದನೆ
ವರತವಿರಲಿಕೆ ವರ್ತಿಸುವೆ ನೀ
ಪರಿಯಿನರುಹೆಲೆ ಮಗನೆ. . ."

ಎನ್ನುವ ಸೀತೆಯ ಮಾತುಗಳು ಮನಕರಗುವಂತಹುದಾಗಿವೆ.

ಮೂಲ ವಾಲ್ಮೀಕಿರಾಮಾಯಣವನ್ನನುಸರಿಸಿಯೇ ಇಲ್ಲಿಯೂ ಕಥೆ ಸಾಗುತ್ತದೆ. ಈ ಕಥೆಯಲ್ಲಿ, ಬ್ರಹ್ಮಕುಲೋತ್ಪನ್ನನಾದ ರಾವಣನ ವಧೆಗೆ ಪ್ರಾಯಶ್ಚಿತ್ತರೂಪವಾಗಿ ರಾಮನು ಅಶ್ವಮೇಧಯಾಗವನ್ನು ಮಾಡುವುದಿಲ್ಲ. ಆ ಪ್ರಸಂಗವೇ ಇಲ್ಲಿ ಬರುವುದಿಲ್ಲ. ಆದರೆ ಶ್ರೀರಾಮನು ತಾನು ರಾಜಸೂಯಯಾಗ ಮಾಡಬೇಕೆಂಬ ಅಪೇಕ್ಷೆಯನ್ನು ಸೂಚಿಸಿದಾಗ, ಭರತಲಕ್ಷ್ಮಣರು, ಅದು ದ್ವೇಷಾಸೂಯೆಗಳಿಗೂ, ದೇಶದಲ್ಲಿ ಅಶಾಂತಿಗೂ ಕಾರಣವಾಗುವುದರಿಂದ ಅದನ್ನು ಬೇಡವೆಂದು ಹೇಳಿ, ಅಶ್ವಮೇಧಯಾಗವು ಶುಭಫಲಪ್ರದವೆಂದು ಸೂಚಿಸುವರು. ಅವರ ಅಭಿಮತದಂತೆ ರಾಮನು ಅಶ್ವಮೇಧಯಾಗ ಮಾಡಲು ದೀಕ್ಷಾಬದ್ಧನಾಗುವನು. ಕುಶಲವರ ಕಾಳಗದ ಪ್ರಸಂಗವೂ ಇಲ್ಲಿ ಬರುವುದಿಲ್ಲ. ಯಾಗಕಾಲದಲ್ಲಿ, ವಾಲ್ಮೀಕಿ ಮುನಿಯಿಂದ ಆಜ್ಞಪ್ತರಾದ ಕುಶಲವರು, ಶ್ರೀರಾಮನ ಸಮ್ಮುಖದಲ್ಲಿ, ಶ್ರೀಮದ್ರಾಮಾಯಣವನ್ನು, ರಾಮನಿಗೂ ಆಶ್ಚರ್ಯವಾಗುವ ರೀತಿಯಲ್ಲಿ ಗಾನಮಾಡಿದರು. ಆ ಸಮಯದಲ್ಲಿ ಆ ಸುಂದರ ಕುಮಾರರೀರ್ವರೂ ತನ್ನ ಮಕ್ಕಳೆಂದು ರಾಮನಿಗೆ ತಿಳಿಯಿತು. ವಾಲ್ಮೀಕಿಯು ಸೀತಾವೃತ್ತಾಂತವನ್ನೂ, ಕುಶಲವರ ಜನ್ಮಕಥೆಯನ್ನೂ ವಿವರವಾಗಿ ರಾಮನಿಗೆ ತಿಳಿಸಿ, ಪರಿಶುದ್ಧೆಯಾದ ಸೀತೆಯನ್ನು ಪರಿಗ್ರಹಿಸೆಂದು ಹೇಳುವನು.

ಇಲ್ಲಿ ಸೀತಾವಿಷಯದಲ್ಲಿ, ಕವಿಯು ಶ್ರೀರಾಮನ ಬಾಯಿಯಿಂದ ಆಡಿಸಿರುವ ಮಾತುಗಳು, ಸೀತೆಯ ಘನತೆಗೆ ಅಪಚಾರವಾಗಿದೆ. ಇದು ಕಾವ್ಯದ ಸೊಬಗಿಗೂ ಕುಂದನ್ನು ತಂದಿದೆ. ಸೀತೆಯ ಘನತೆಯನ್ನು ಕುಗ್ಗಿಸಿರುವುದರ ಜೊತೆಗೆ, ಮಹಾ ಪ್ರಭಾವಶಾಲಿಯೂ, ಕಥಾನಾಯಕನ. ಆದ ಶ್ರೀರಾಮನ ಘನತೆಗೂ ಕುಂದನ್ನುಂಟುಮಾಡಿದೆ.

ಶ್ರೀರಾಮನ ಕಟೂಕ್ತಿ :

"ಎಲೆ ಮುನೀಶ್ವರ ಹಿಂದೆ ಕಾನನ
ದಲಸಿಕೆಯಲಾನಿರಲು ಹೊಮ್ಮೃಗ
ಸುಳಿಯಲದ ಬಯಸಿದಳು ತರಬೇಕೆಂದಳದಕಾಗ|
ಘಳಿಲನೈದಿದ ಸಮಯವರಿದಾ
ಖಳನೊಳತಿ ನೇಹದಲಿ ಸೂಚನೆ
ಬಳಸಿತದ ನೀವರಿಯಿರೇ ಮೇಲಾದ ಸಂಗತಿಯ ||

ಹೋಗಲೊಲ್ಲದೆ ಲಕ್ಷ್ಮಣನು ಸಿಲ
ಲಾಗ ದುರ್ವಚನಗಳಲವನನು
ಬೇಗೆಗೊಳಗಹ ರೀತಿಯನು ತಾ ಮಾಡಿ ಹೊರವಡಿಸಿ|
ಬೇಗಲಾಖಳನೊಡನೆ ಪೋದುದ
ನಾಗಮಜ್ಞರು ತಿಳಿದುದಿಲ್ಲವೆ
ಭೋಗಿಭೂಷಣ ಬಲ್ಲನಾಯಾಸದ ಪರಂಪರೆಯ ||"

"ರಾವಣವಧಾನಂತರ ಸೀತೆಯು, ಕಪಟಯುಕ್ತಿಯುಲಾತಗಳ ಬರಿಸಿದಳು ದಶರಥ ಮುಖ್ಯ ಭೂಭುಜರ. ಕಾತರಿಸಿ ಕಣ್ಗೆಡಲು ಪಾವಕನೋತು ಶಾಂತತ್ವವನು ಧರಿಸಿದನೇತಕದ ನಾನಾಡಿ ಫಲವೇನುಂಟು ನಮಗೆ! ಈ ತೆರದ ಮಾಯಾತಿರೇಕದ ಕೌತುಕವ ನೀವರಿಯರೇ . . . ನಿಮ್ಮಾಜ್ಞೆಯಿಂದಂದು ಪ್ರೀತಿಯನು ನೆರೆಮಾಡಿರಲು, ಆ ತಳೋದರಿ ಮತ್ತೆ ವನವನು ಕಾತರಿಸಿ ಬಯಸಿದಳು. ನಮ್ಮಲ್ಲಿ ಕೊರತೆಯೇನು?"

ಇದಕ್ಕೆ ಮೊದಲು ಸೀತಾ ವಿಷಯದಲ್ಲಿ ರಾಮನು ಹೊಂದಿರುವ ಉತ್ತಮಾಭಿಪ್ರಾಯಗಳಿಗೆ ಇದು ವಿರುದ್ಧವಾಗಿರುವುದು. ಹಿಂದೆ ಯಾವ ಸನ್ನಿವೇಶದಲ್ಲೂ ಇಂಥಾ ಅಪವಾದದ ಮಾತುಗಳನ್ನು ರಾಮನು ಆಡಿರುವುದಿಲ್ಲ. ಮೂಲದಲ್ಲೂ ಈ ಬಗೆಯಾದ ಕಟೂಕ್ತಿಯಿಲ್ಲ. ಇದೇ ರಾಮನು ಸೀತೆಯ ವಿಷಯದಲ್ಲಿ, ಜನಾಪವಾದಸುದ್ದಿ ತಿಳಿವಾಗ "ವೃಂದ ವೀಕ್ಷಿಸುತಿರಲು ವನಜಾಕರವ ಹೊಗುವಂತೆ, ಇಂದುಮುಖಿ ವಹ್ನಿಯನು ಹೊಗಲು, ಐತಂದ ಶಿಖಿ, ಈ ಸತಿ ಪತಿವ್ರತೆಯೆಂದು ಕೊಂಡಾಡಿದನಲೇ. ಅನಲ ನುಡಿನುದೆ ಸತ್ಯವೆಂದೆನುತನಿಮಿಷಾವಳಿ ನುಡಿದುದು. ಎಮ್ಮಯ ಜನಕನಾರೀತಿಯಲಿ ನುಡಿದನು ಸತಿಯ ಸದ್ಗುಣವ. ತನುಜ ನೀ ವರಿಸೆ ನಲುವರಿಸಿದೆ. ಲೋಕದ ಜನರು ತಾವಿದನರಿಯದಾಡುವರನುಚಿತಂಗಳನು" ಎಂಬ ಈ ಮಾತುಗಳಿಗೆ ವಿರುದ್ಧವಾಗಿ ಕೊನೆಯಲ್ಲಿ ರಾಮನ ಕಟೂಕ್ತಿ ಬರುವುದು ಅನುಚಿತವಾಗಿದೆ. ಈ ಅಪವಾದದ ಮಾತುಗಳಿಂದ "ಕೋಟಿವಾರಿಧಿಗಳ ಗಭೀರನ, ಕೋಟಿತೀರ್ಥಸಮಾನನಾಮನ, ಕೋಟಿಬ್ರಹ್ಮಾಂಡೈಕರೂಪನನಿಂತನಚ್ಯುತನ, ಕೋಟಿಫಲಗಳನೀವ ನಾರಾಯಣನ, ರಘುರಾಮನ" ಗುಣವೈಶಿಷ್ಟ್ಯಕ್ಕೆ ಅಪಾರ ಕೊರತೆಯುಂಟಾಗಿದೆ.

ವಾಲ್ಮೀಕಿ ರಾಮಾಯಣದಲ್ಲಿ ಹೇಳಿರುವಂತೆ, ಇಲ್ಲಿ ಸೀತಾದೇವಿಯು, ಶ್ರೀರಾಮನ ಪುನರ್ದರ್ಶನಾನಂತರ ಭೂಪ್ರವೇಶ ಮಾಡುವುದಿಲ್ಲ. ಬದಲಾಗಿ ರಾಮನು ಭೂದೇವಿಯ ಪ್ರಾರ್ಥನೆಯಂತೆ ಸ್ವೀಕರಿಸುವನು. ಸೀತೆಯ ಪರವಾಗಿ ವಾಲ್ಮೀಕಿಯು, "ವನಿತೆ ಪರಚಿಂತೆಯಲಿ ಪುರುಷರ ನೆನೆವಳಾದರೆ ನಾನು ಮಾಡಿದ ಘನತಪದ ಫಲವೆಲ್ಲ ನಿಷ್ಫಲವಾಗಲಿ" ಎನ್ನುತ್ತಾನೆ. ಸೀತೆಯೂ ರಾಮನ ಸಮ್ಮುಖದಲ್ಲಿ, "ಅನಘ ರಾಘವ ಕೇಳು, ತನ್ನಯ ಮನವಚನ ಕಾಯದಲಿ ನಿನ್ನಯ ಸ್ಮರಣೆ ಹೋಲಿತಾಗಿ, ಜಿನುಗಿ ನಾನನ್ಯಥವ ನೆನೆದರೆ ಮುನಿಯದಿಹರೇ ಸಕಲ ದಿವಿಜರು, ಘನ ಮಹಿಮ ಕೇಳೊಂದು ಶಪಥವನಧಿಕ ವಿಸ್ಮಯವ" ಎಂದು ನುಡಿದು,

"ಎಲೆ ಮಹಾಭೂವನಿತೆ ಕೇಳಿನ
ಗೊಲವಿನಲಿ ಚಿಂತೆಯಲಿ ನಿದ್ರೆಯ
ಲಲಸಿಕೆಗಳಲಿ ರಾಮಚಂದ್ರನ ದಿವ್ಯಪದಯುಗದ।
ನೆಲೆಯೆನಿಸಿ ತಾ ನೆನೆದುದುಳ್ಳರೆ
ಸುಲಭದಲಿ ವೈದೋರು ಪುನರಪಿ
ಹಲವು ಬುದ್ಧಿಯನುಳ್ಳಡಂತರ್ಧಾನವಾಗೆನಗೆ ॥"

ಎಂದಾಗ ವಸುಧೆಯುತಿನುದದಿಂದ ತನುಜೆಯ ನುಡಿಯ ಕೇಳುತ ಬಂದಳಾಕ್ಷಣಕೆ. ಭೂದೇವಿಯು ರಾಮನನ್ನು ನೋಡಿ "ಎಲೆ ಅಂಬುಜಾಂಬಿಕರಾಮ, ಪತಿಕರಿಸೆಂ"ದು ಕೊಡಲು ರಾಮನು ಅಂಬಿಕದ ನೀರೊರತೆಯಲಿ, ಹರುಷಮಿಗೆ ಪತಿಕರಿಸಿದನು ಜಾನಕಿಯ. ಅನಂತರ ಶಚಿಪಾರ್ವತಿಯರು ಸೀತಾರಾಮಚಂದ್ರರಿಗೆ ಜಯಮಂಗಳಾರತಿಯ ಬೆಳಗಿದರು. ದೇವಾದಿಗಳು ಹಲವು ಬಗೆಯಿಂದ ಸೀತಾರಾಮರನ್ನು ಸ್ತೋತ್ರ ಮಾಡಿದರು.

೪

ರಾವಣನು ತನ್ನ ಹಿರಿಯರಿಂದ ಪ್ರೇರಿತನಾಗಿ, ಧರ್ಮದೂಷಕನಾಗಿ, ಯಜ್ಞಯಾಗಾದಿಗಳನ್ನು ನಾಶ ಮಾಡಿ, ಲೋಕಹಿಂಸೆಯಲ್ಲಿ ನಿರತನಾಗಿರುವನೆಂದು ತಿಳಿದು, ಅಣ್ಣನಾದ ವೈಶ್ರವಣನು, ತನ್ನ ದೂತನ ಮೂಲಕ, ವಿವೇಕವನ್ನು ಹೇಳಿ ಕಳುಹಿಸುವನು. ಧರ್ಮನಿರತನಾಗಿ, ಕೀರ್ತಿಶಾಲಿಯಾಗಿ ಬಾಳುವುದೇ ರಾಜಧರ್ಮವೆಂದು ತಿಳಿಸುವನು. ಈ ಮಾತುಗಳು ರಾವಣನಿಗೆ ರುಚಿಸಲಿಲ್ಲ. ಕುಬೇರನ ದೂತನ ಮಾತುಗಳನ್ನು ಕೇಳಿ :

"ಹೇಳೆ ಭುಗಿಲೆಂದಸುರರಾವು ವಿ
ಶಾಲ ನಯವಿದ ತಾನು ಕೆಳೆತನ
ಶೂಲಿಯಲಿ ತನಗಾ ಮಹತ್ವವನಿಂದು ನೀತಿಯನು।
ಹೇಳುವೀ ನೆವದಿಂದ ಬಣ್ಣಿಸಿ
ಹೇಳಿದೆಯಲಾ ಬುದ್ಧಿ ಹೆಚ್ಚಿತು
ಮೇಲೆ ನಡೆದವುನಣ್ಣದೇವಗೆ ತೋರದಿರೆವೆಂದ ॥"
ಸೆರಗನೆಳೆದನೆ ಹಸಿದು ನಿದ್ರೆಯ
ಮರವೆಯಿಂದಿಹ ಹುಲಿಯ ಮುಖದಲಿ
ಮುರಿಯದುಳುಹಿದೆನಣ್ಣನೆಂಬುದ ಕಂಡು ಲಂಕೆಯಲಿ ॥"

[ಮೇಲಿನ ಪದ್ಯವು ಕುಮಾರವ್ಯಾಸನ "ಮುಸಗಿದನು ನಿಮ್ಮಾತನುಗಿದೆಬ್ಬಿಸಿದ ಹುಲಿಯೋ ನೊಂದ ಹಂದಿಯೊ ಹಸಿದಭುಜಗನೊ . . ." ಎಂಬ ಪದ್ಯವನ್ನು ಹೋಲುವುದು.]

ಕುಬೇರನ ಸಂದೇಶದಿಂದ ಆಕ್ರೋಶಗೊಂಡ ರಾವಣನು ಆಹವಕ್ಕಿದು ಮೊದಲೆನುತ ಪುಣ್ಯಾಹವಾಚನೆಗೈದು, ತನ್ನ ಮೊದಲ ದಂಡಯಾತ್ರೆಯನ್ನು ನಿಶ್ಚಯ ಮಾಡಿದನು. ಅಳಕಾಪುರಿಯ ಮೇಲೆ ದಂಡಯಾತ್ರೆ ಹೊರಟಿರುವ ಸೇನೆಯು :

" ಮುಂಬರಿದ ಧರೆಯೆನಿತು ದೆಸೆಯೆನಿ
ತಂಬರವದೆನಿತನಿತುವನು ತಾ
ನಿಂಬುಗೊಂಡುದು ಭುವನನಾದಾತ್ಮಕವಿದೆಂಬಂತೆ |

" ಬಲದೊಳುದಿಸಿದ ಧೂಳಿ ಗಗನ
ಸ್ಥಳಕೆ ಬಲದಿಂ ಮುನ್ನ ಹಾಯ್ದು
ಜ್ವಲಿಪ ಮಂದಾಕಿನಿಯ ನೀರಜಕುಮುದ ತೇಜವನು |
ಸೆಳೆದು ನಡೆದಳಕಾಪುರಿಗೆ ಕೋ
ಮಲೆಯರಳಕಾವಳಿಗಳಸು ಕೈ
ಕೊಳುತಲಿರ್ದುದು ಸೂಚಿಪಂತಾ ಕಾಮಕಾರ್ಯವನು ‖ "

ಇದಕ್ಕೆ ಪೂರ್ವಭಾವಿಯಾಗಿ ನಡೆದ ದೇವಾಸುರ ಯುದ್ಧದ ಇನ್ನೊಂದು ರೂಪ :

" ಹೊದರುಗರುಳಿನ ಬಳ್ಳಿಗಳ ಶೀ
ವಿದ ಪಲಲ ಪಲ್ಲವದ ಚೆಲ್ಲಿದ
ಮಿದುಳಿನಾ ಬಿರಿಮುಗುಳ ತಲೆಗಳ ಪಕ್ವಫಲಚಯದ |
ಒದವಿ ಭೋರೆನೆ ಪರಿವ ಬಿಸಿರಕು
ತದ ಮಹಾರಸ ನದಿಗಳಲಿ ಗೆಲಿ
ದುಧುರಣಾವನಿ ಚೈತ್ರಕಾಲದ ವನದ ಮೈಸಿರಿಯಾ ‖ "

ರಾವಣನು ಇಂದ್ರನ ಮೇಲೆ ಧಾಳಿ ಮಾಡಿದಾಗ, ಸಾವಿತ್ರನೆಂಬ ವಸುವಿನ ಸೇನೆಗೂ ಸುಮಾಲಿಯ ಸೇನೆಗೂ ನಡೆದ ಹೋರಾಟ :

" ಬೆರಸಿ ಹೊಕ್ಕರು ಖಿಲಿಯ ಕಾಲದ
ಶರಧಿ ಶರಧಿಗೆ ಮಲೆತಪೊಲ್ಬಲು
ಸರಳ ಸುರಿದರು ತೂಗಿ ಹೊಯ್ದರು ಮುಸಲಗದೆಗಳಲಿ |

" ತಲೆಯ ಶಂಖದ ದಂತ ಮುಕ್ತಾ
ಫಲದ ಹೊಳೆ ನವಮಾಂಸ ರಕ್ತೋ
ತ್ಪಲದ ನಡುಸಿಡಿದೆನಿಪ ಕರುಳಿನ ಬಳ್ಳಿಗಳ ತೋಟ |
ನಲವ ಮುಂಚದ ನಾಟ್ಯಗೃಹ ದೆಸೆ
ಗಳಿಗೆ ಚೆಲ್ಲಿದ ಮಿದುಳ ಪೊಸ ಪೂ
ವಲಿಗಳಂಗಳವೆನಿಸಿ ಸಮರಾಂಗಣವಿರಾಜಿಸಿತು ‖ "

ಕುಬೇರನ ಯಕ್ಷ ಸೇನೆಯೊಡನೆ ರಾವಣನು ಮಾಡಿದ ಮಾಯಾಯುದ್ಧ ವರ್ಣನೆಯ ಒಂದು ಪದ್ಯವು, ರಾತ್ರಿ ಯುದ್ಧದಲ್ಲಿ ಘಟೋತ್ಕಚನು ಮಾಡಿದ ಮಾಯಾಯುದ್ಧವನ್ನು ನೆನಪಿಗೆ ತರುವುದು :

" ಬಗೆಯಲಳವೇ ಬಹು ವಿಧದ ಮಾ
ಯೆಗಳ ಮೆರೆದನು ಹುಲಿಯ ರೂಪದ
ಲಗಿದು ಹೋಯ್ದನು ಸೂಕರಾಕೃತಿಯಿಂದ ತೋರಿದನು |

ಬಿಗಿದ ನೆಂಬುದವಾಗಿ ಬಿದ್ದನು
ನಗವೆನಿಸಿ ವಾರಾಸಿಯಾಗಿಯೆ
ಮೊಗೆದು ಹೊಯ್ದಗ್ರಜನ ನಡಗೆಡಹಿದನು ರಥದೊಳಗೆ ॥ "

—ನಾರಾಯಣ ಕವಿ

" ಮಾಯದಲಿ ಹುಲಿಯಾಗಿ ಗರ್ಜಿಸಿ
ಹಾಯಿದನು ಕಲಿಸಿಂಹವಾಗಿ ಗ
ದಾಯುಧದಲಪ್ಪಳಿಸಿದನು ಭೈರವನ ರೂಪಾಗಿ |
ಬಾಯಲಡಸಿದನಹಿತರನು ದಂ
ಡಾಯುನದ ನಿಲವಿನಲಿ ಸುಭಟರ
ದಾಯಗೆಡಿಸಿದನೊಂದು ನಿಮಿಷದೊಳೊರಸಿದನು ಬಲವ ॥ "

—ಕುಮಾರವ್ಯಾಸ

ಲೋಕ ಭಯಂಕರನಾದ ರಾವಣನ ಪರಾಕ್ರಮದ ಇನ್ನೊಂದು ವಿವರ:

" ಹಗಲು ತಾರಗೆಯೆಂದವಾದುದು
ದಿಗಧಿಪರ ಸತ್ಕೀರ್ತಿ ಬಿರು ಬೇ
ಸಗೆಯ ಪಲ್ಲವವಾಯ್ತು ವೃಂದಾರಕರ ಪರಿತೋಷ |
ಸೆಗಳಿಕೆಯ ಸಸಿಯಾಯ್ತು ಭೂಪರ
ಬಿಗುಹು ವರರ್ಗದಲಿ ಹೆಚ್ಚಿದ
ವಿಗಡನಾತನ ವಿಕ್ರಮಾನಲ ನೈದೆ ಪಸರಿಸಿತು ॥ "

ಬಹ್ಮವರಬಲ ಮತ್ತು ತನ್ನ ಭುಜಬಲದ ಕೊಬ್ಬಿನಿಂದ ರಾವಣನು, ತನ್ನೆದುರು ಧೈರ್ಯ ದಿಂದ ಕಾದಬಲ್ಲ ವೀರನನ್ನು ತೋರಿಸೆಂದು ನಾರದರನ್ನು ಕೇಳಿದಾಗ, ನಾರದರು ಕಾಲಯಮ ನನ್ನು ಸೂಚಿಸಿ: ಕೋರೆದಾಡೆಯ ಮುರಿದ ಮೀಸೆಯ, ತಾರೊಡಲ ಕಿಡಿಗಣ್ಣ ಘೋರಾಕಾರ ನಾತನ ತೊಡಕಿ ಬದುಕುವ ಸುಭಟರಾರೆಂದ. ಈ ಸಾಲುಗಳು ಕುಮಾರವ್ಯಾಸನ "ಹೊಗೆ ಮೊಗದ ಕಿಡಿಗಣ್ಣ ಕೆಮ್ಮಿಸೆಗಳ ಗುಜುರಿನ ಜುಂಜುಗೇಶದ ವಿಗಡ . . ." ಎಂಬ ದುಶ್ಶಾಸನನ ರೂಪವರ್ಣನೆಯನ್ನು ನೆನಪಿಗೆ ತರುವುದು,

ಇಕ್ಷ್ವಾಕುಲ ಪ್ರಸೂತನಾದ ಅನರಣ್ಯನೆಂಬ ರಾಜನೊಡನೆ ಮಾಡಿದ ಯುದ್ಧದ ಒಂದು ಪದ್ಯ ಹೀಗಿದೆ:

" ಕುಸುರುಗರುಳಿನ ದಂಡೆಯಲಿ ಕರ
ಕಿಸಲಯ ಪ್ರತತಿಯಲಿ ಕಾಳಿಜ
ದಸಿತ ಕೈರವದೆಸಳಿನಲಿ ತಲೆಗಳ ಸರೋಜದಲಿ |
ಪ್ರಸರಿಸಿದ ದಂತಗಳ ಕುಂದ
ಪ್ರಸರದಲಿ ರಣದೇವತೆಯನ
ರ್ಚಿಸಿದವೊಲು ರಣಭೂಮಿ ಪಡೆದುದು ಕಣ್ಗೆ ಕೌತುಕವ ॥ "

ರಾವಣನು ದಿಗ್ವಿಜಯದಲ್ಲಿ ತೊಳಲಿರುವಾಗ, ಈ ಕಡೆ ರಾಜಕುಮಾರನಾದ ಮೇಘ ನಾದನು, ನಿಕುಂಭಿಳೆಯಲ್ಲಿ, ಅಸುರಗುರುವಾದ ಶುಕ್ರಾಚಾರ್ಯರ ನೇತೃತ್ವದಲ್ಲಿ, ಶ್ರುತಿವಿಹಿತ ಮಾರ್ಗವ ಬಿಡದೆ ಅಗ್ನಿಷ್ಟೋಮಯಾಗ, ಗೋಸವವೆಂಬ ಪಾವನ ವೈಷ್ಣವಕ್ರತು, ತುರಗ

ಮೇಧ, ರಾಜಸೂಯ, ಮಾಹೇಶ್ವರ ಮಹಾ ಯಜ್ಞಗಳನ್ನು ಅತಿಭಕ್ತಿಯಲಿ ಮಾಡಿದನು. ಮಹೇಶ್ವರನನ್ನು ಹಿರಿದು ಮೆಚ್ಚಿಸಿ ಸತ್ಯಪಾಸಾಗರನ ಕೈಯಲಿ ಪಡೆದನೀತನು ವರಗಳನು :

" ನೆನೆಡೆಗೆ ಕೊಂಡೊಯ್ವ ಖೇಚರ
ವೆನಿಪ ದಿವ್ಯವರೂಥವನು ಲೋ
ಚನಗಳಿಗೆ ಗೋಚರಿಸದರಿಗಳನೈದೆ ಭಂಗಿಸುವ |
ವಿನುತ ಮಾಯಂಗಳನು ನೋಯದ
ಧನುವ ಬತ್ತಳಿಕೆಯಲಿ ಕುಂದದ
ಘನ ಶರಂಗಳ ಹಡೆದ . . , . . . ‖ "

ಆದರೆ ಯಜ್ಞ ಯಾಗಾದಿಗಳ ಭಂಜಕನಾದ ರಾವಣನಿಗೆ ಇದು ಸೊಗಸದೆ ದಿವಿಜಾರಾತಿ ನುಡಿದನು, " ಪುರುಹೂತ ಮುಖ್ಯರು ಪೂಜಿಸಿದರಕಟಕಟ ನಿಷ್ಠೆಯಲಿ. ಏತಕೀ ವಿಭ್ರಾಂತಿ. ಬಾತನುಜಾತ, ಬಾರೆಲೆ ವತ್ಸ, ಕಂದಿದೆ ಈ ತಪದ ತೀವ್ರಾತಪದಲೆಂ "ದೆನುತ ಮಾಣಿಸಿದ.

೫

ಶೃಂಗಾರರಸ ವರ್ಣನಾ ವೈಖರಿಯಲ್ಲಿ ಹೆಚ್ಚಾಗಿ ಕುಮಾರವ್ಯಾಸನ ಧಾಟಿಯನ್ನೇ ನಾರಾಯಣ ಕವಿಯು ಅನುಸರಿಸಿದ್ದಾನೆ, ಅವನ ವೈವಿಧ್ಯವೂ ಪದಪುಂಜಗಳೂ ಅಲ್ಲಲ್ಲಿ ಬರುತ್ತವೆ. ಶೃಂಗಾರ ವರ್ಣನೆಯಲ್ಲಿ ಕವಿಯು ಮಧುರವಾದ ಶಬ್ದ ಸರಣಿಯನ್ನು ಪ್ರಯೋಗಿಸಿದ್ದಾನೆ. ಮೇರುಗಿರಿಯಲ್ಲಿ ರಾವಣನು ರಂಭೆಯನ್ನು ಮೊದಲು ಸಂದರ್ಶಿಸಿದಾಗ ಅವನಿಗೆ ಕಂಡ ಅವಳ ರೂಪ :

" ಪರಮ ಮನ್ಮಥ ತತ್ವ ವಿದ್ಯಾ
ಪರಿಣತರ ವಿಜ್ಞಾನ ಲಕ್ಷ್ಮಿಯೊ
ನಿರುಪಮಿತ ಶೃಂಗಾರ ಪಾರಾವಾರ ವರಸುಧೆಯೊ |
ಸ್ಮರನ ಸ್ಥೈರ್ಯ ಸುಮೇರು ಧರಣೀ
ಧರ ಮಹೀಲಾಧಾರ ಶಕ್ತಿಯೊ
ಸುರಸತೀರತ್ನವನು ಬಣ್ಣಿಸಲರಿವನಾರೆಂದ ‖ "

ಈ ಸಂದರ್ಭದಲ್ಲಿ ಕುಮಾರವ್ಯಾಸನು ಮಾಡಿರುವ ಊರ್ವಶಿಯ ರೂಪವರ್ಣನೆಯನ್ನು ಇಲ್ಲಿ ಗಮನಿಸಬಹುದು :

" ಸ್ಮರನ ವಿಜಯಧ್ವಜವೊ ಮನ್ಮಥ
ಪರನು ಶಾಸ್ತ್ರದ ಮೂಲ ಮಂತ್ರವೊ
ಸುರಸತಿಯರಧಿ ದೇವತೆಯೊ ವರ್ಣಿಸುವೊಡರಿದೆಂದ ‖ "

ರಂಭೆಯ ಪರಮ ಚೆಲುವನ್ನು ಕಂಡ ಕಾಮುಕನಾದ ರಾವಣನು ಮನಸೋತು ಅವಳಿಗಿದಿರಾಗಿ ಬರುವ ರೀತಿ :

" ಅರರೆ ಪದ್ಮ ಸುಗಂಧಿ ಯಾವಳ
ಬರವೊ ತುಂಬಿಯ ಹಾಯಲಿದೆ ತಂ
ಬೆರಲು ಕದ್ದೊಯ್ಯುತ್ತಿರುತಲಿದೆ ಪರಿಮಳ ನಿಧಾನವನು |

ಅರಳ ನಾಸಾಕಿಥದ ಲಂತಃ
ಕರಣ ಸೆಳೆತಂದನು ಭವಿಸಿ ವಿ
ಸ್ತರಿಸಿ ದಣಿಯದು ಹರಯೆನುತ ದನುಜೇಶನಿದಿರೆಡ್ಡ ॥ ”

ತಪೋನಿರತಳಾಗಿದ್ದ ವೇದಾವತಿಯ ಚೆಲುವನ್ನು ಈ ರೀತಿ ಬಣ್ಣಿಸಿದ್ದಾನೆ :

“ ಗುರುಕುಚಗಳುನ್ನತಿಕೆಯಲಿ ಮುನಿ
ವರರ ತಪದುನ್ನತಿಕೆಯನು ಪಂ
ಕರುಹವದನೆಯ ವದನ ಪಂಕೇರುಹದ ವೈಭವದಿ |
ವರ ವಿವೇಕದ ವೈಭವಂಗಳ
ಪರಿಭವಿಸಲಂಗಜ ವಿರಿಂಚನು
ವಿರಚಿಸಿದನೀ ಕೋಮಲಾಂಗಿಯನೆನುತ ಹೊಗಳಿದನು ॥ ”

“ ಎಳೆಯ ಹಾವಸೆ ಹಸರಿಸಿದ ತಿಳಿ
ಗೊಳದ ಪರಿಯಲಿ ಗೂಢಪಡ ಸ
ಮ್ಮಿಳಿತ ಕಾವ್ಯದ ಚುಂಬಿತೋಪಮೆಯಂತೆ ಧೂಳಿಯಲಿ |
ಬಳಸಿ ತೋರುವ ಕನ್ನಡಿಯವೋಲ್
ಮಲಿನರೂಪದ ತಪದ ವೇಷದಿ
ಚೆಲುವುಗುಂದಿದಡರಿವರಿಗೆ ಪ್ರಜ್ವಲಿಸದಿರದೆಂದ ॥ ”

ಇದನ್ನೇ ಹೋಲುವ ರೀತಿಯಲ್ಲಿ ಕುಮಾರ ವಾಲ್ಮೀಕಿಯ ಪದ್ಯವೊಂದಿದೆ. ಅಶೋಕ ವನದಲ್ಲಿ ಶೋಕಾಕುಲೆಯಾಗಿದ್ದ ಸೀತಾದೇವಿಯನ್ನು ಆಂಜನೇಯನು ಕಂಡ ಬಗೆ:

“ ಹೊಗೆಯಲದ ಪುತ್ಥಳಿಯವೊಲು ಹಿಮು
ವಗಿದ ತಾವರೆಯಂತೆ ಬಿಚ್ಚದೆ
ಬಿಗಿದ ಚಿಪ್ಪಿನ ಮುತ್ತಿನಂದದಿ ರಾಹುಲಂಬಿಸಿದ |
ಮೃಗಧರಸವೊಲು ಗೂಢದರ್ಥವ
ತೆಗೆಯಬಾರದ ಕಾವ್ಯದವೊಲಿ
ರ್ದಗಣಿತಾಮಲ ಪುಣ್ಯಚರಿತೆಯ ಕಂಡನಾ ಹನುಮ ॥ ”

ರಂಭೆಯು ತಾನು ಕುಬೇರಪುತ್ರನಾದ ನಳಕೂಬರನನ್ನು ವರಿಸಿ ಅವನ ಬಳಿಗೆ ಹೋಗುತ್ತಿರುವವಳು : ಆದಕಾರಣ ತಾನು ರಾವಣನ ಸೊಸೆ, ರಾವಣನು ತನಗೆ ಮಾವ. ಹೀಗಿರುವುದರಿಂದ ತನ್ನನ್ನು ಮೋಹಿಸುವುದು ಸಲ್ಲದೆಂದು ವಾದಿಸುವಳು.

“ ರಜನಿಚರಪತಿ ಕೇಳು ನಿನಗ
ಗ್ರಜನಲಾ ವಿತ್ತೇಶನವನಾ
ತ್ಮಜನ ನಳಕೂಬರನ ವಲ್ಲಭೆ ತಾನು ನೀನೆನಗೆ |
ತ್ರಿಜಗವರಿಯಲು ಮಾವನಹುದಂ
ಗಜನ ಬಿರುಗಣೆಗಳಿಗೆ ನೀ ಗಜ
ಬಜಿಸಿ ಪಾಪದ ಹಾದಿ ಗೈದದಿರೆಂದಳಿಂದುಮುಖಿ ॥ ”

ಆಗ ರಾವಣನು ದೇವಲೋಕದ ಸೂಳೆಯರೊಳೀ ಭಾವಶುದ್ಧಿಯ ಮಹಿಮೆ ನಿನಗಲ್ಲದಿಲ್ಲೆಂದ. ಕಾಮುಕ ಜನದ ಹರಣಕೆ ಮುಳಿದ ಕೊಲೆಗಾತಿಗೆಲ್ಲಿಯ ನಿಜವು ಪರರನೊಲಿಸುವರಲ್ಲದೊಲಿವರೆ ವಾರವನಿತೆಯರು ಎಂದು ಮುಳಿದು :

" ನೋಟವೊಬ್ಬನ ಮೇಲೆ ಸವಿನುಡಿ
ವೇಟವೊಬ್ಬನ ಮೇಲೆ ಮನದೆಡೆ
ಯಾಟವೊಬ್ಬನ ಮೇಲೆ ನಗೆ ಸಮ್ಮೇಳವೊಬ್ಬನಲಿ |
ಕೂಟವೊಬ್ಬನೊಳಿಂತು ಮಾಯಾ
ನಾಟಕದಿ ಮೋಹಿಸುವ ನಿಮ್ಮಯ
ಮಾಟ ನಿಮ್ಮಯ ಮನದ ಭಾವದ ಭಂಗಿ ಬೇರೆಂದ ‖ "

ಇಲ್ಲಿ ಮಹಾಭಾರತದಲ್ಲಿ ಬರುವ ಅರ್ಜುನ-ಊರ್ವಶಿಯರ ಸಂವಾದವನ್ನು ಗಮನಿಸಬಹುದು :

ಅರ್ಜುನ :

" ನಾರಿಸೀ ಪೂರ್ವದಲಿ ನಮ್ಮ ಪು
ರೂವರನ ಸತಿ ನಿನಗೆ ಬಳಿಕ ಕು
ಮಾರ ಜನಿಸಿದ ನಾಯುವಾತನೊಳುದಿಸಿದನು ನಹುಷ |
ವೀರರಾಜ ಪರಂಪರೆಯು ಬರ
ಲಾರಿಗಾವುದಿಸಿದೆವು ನಮ್ಮ ವಿ
ಚಾರಿಸಿದುದಿಲ್ಲಾ ಯೆನುತ ವಿನಯದಲಿ ನರನುಡಿದ ‖ "

ಊರ್ವಶಿ :

" ಅಯ್ಯನಯ್ಯನು ನಿಮ್ಮವರ ಮು
ತ್ತಯ್ಯನಾತನ ಭಾವಮೈದುನ
ನಯ್ಯನಗ್ರಜರನುಜರೆಂಬೀ ಜ್ಞಾತಿ ಬಾಂಧವರ |
ಕೈಯಲರಿಗಳ ಹೊಯ್ದು ಶಿರನರಿ
ದುಯ್ಯಲಾಡಿದವರ್ಗ ಮೇಣ್ ಮುಖ
ಪಯ್ಯಗಳಿಗಾನೊಬ್ಬಳೆದಂಳು ನಗುತ ನಳಿನಾಕ್ಷಿ ‖ "

ಇದೇ ರೀತಿಯಲ್ಲಿ ಕರ್ಣಾರ್ಜುನರ ಯುದ್ಧ ಕಾಲದಲ್ಲಿ ಅಶ್ವತ್ಥಾಮನು ಕರ್ಣನನ್ನು ಯುದ್ಧದಿಂದ ತಡೆದು ಉಳಿಸಿಕೊಳ್ಳೆಂದು ಉಪದೇಶಿಸಿ, ಆ ಮಾತುಗಳಿಂದ ಕೌರವನು ಕರ್ಣನ ಜಯದಿಂದ ಉಬ್ಬಿ ಉತ್ತರವಿತ್ತ ಸಮಯದಲ್ಲಿ ಆಡಿದ ಮಾತುಗಳಿವು : ಜಯವಧು ಜಾರೆ ದೃಢ ಪತಿವ್ರತೆಯಲ್ಲವೆಂದು ಹೇಳುವನು. ಜಯವಧುವಿಗೆ,

" ಮುಗುಳ ನಗೆಯೊಬ್ಬರಲಿ ಸವಿವಾ
ಕುಗಳ ರಸವೊಬ್ಬರಲಿ ಕಡೆಗ
ಣ್ಣುಗಳ ಮಿಂಚೊಬ್ಬರಲಿ ನೇವುರದೆಳೆ ಮೊಳಗು ಸಹಿತ |
ಸೊಗಸು ಬೇರೊಬ್ಬರಲಿ ನೇಹದ
ತಗಹು ಬೇರೊಬ್ಬರಲಿ ಸತಿಯರ
ವಿಗಡತನವಿದು ಸಹಜ ಜಯವಧು ಜಾರೆ ನೋಡೆಂದ ‖ "

(ಕುಮಾರವ್ಯಾಸ)

ವೀರರಸ ಯುಕ್ತವಾದ ಭಕ್ತಿಭಾವವು ಭೀಷ್ಮರ ಯುದ್ಧ ಕಾಲದಲ್ಲಿ ಬಂದಿರುವಂತೆ, ಇಲ್ಲಿಯೂ ಹೃದಯಂಗಮವಾಗಿ ವರ್ಣಿಸಲ್ಪಟ್ಟಿದೆ. ಉದಾ: ಕಪಿಲ ಮಹಾಮುನಿಯನ್ನು ಕೆಣಕಿ ಪರಾಭವವನ್ನನುಭವಿಸಿದ ರಾವಣನು ಆಶ್ಚರ್ಯದಿಂದ, "ಅಮಮ! ಭುಜಶಕ್ತಿಯಲಿ, ಪಟುವಿಕ್ರಮದಲಿ, ಅತಿಮಹಿಮೆಯಲಿ, ಶೂರೋತ್ತಮನೆ, ನಿನಗೆಣೆಯಾದ ಸುಭಟನ ಕಾಣೆನೈ. ನಿನ್ನ ವಿಮಲ ತೇಜವೇ ವಿಲಯಶಿಖಿಯಾಕ್ರಮಿಸಿದಂತಿದೆ, ನೀನದಾವನು ಸಮರದುರ್ಜಯ ಹೇಳದಾರು?" ಎಂದು ಕೇಳಿದನು.

ಕಪಿಲಮುನಿ:

"ಎಂದು ಸಮರದೊಳೆನ್ನ ಶರಗಳ
ಸಂದಣಿಯಲೀ ಧರಣಿಗೊರಗುವೆ
ಯಂದು ತಾನಾರಾವ ಹೆಸರೆಂಬುದನು ನೀನರಿವೆ ॥"

ಕಪಿಲನ ಈ ಮಾತುಗಳನ್ನು ಕೇಳಿ, ಬ್ರಹ್ಮವರಬಲದಿಂದ ಉಬ್ಬಿದ ರಾವಣನು ಪರಮಾಶ್ಚರ್ಯದಿಂದ:

"ಇನಿತು ತಪ್ಪಿಸಬಹುದೆ ಚತುರಾ
ನನನ ವರವನು ಜೀವಯೋನಿಯೊ
ಳನಘ ಹಿಂದಕೆ ಜನಿಸಿದಾತಗೆ ಮುಂದೆ ಜನಿಸುವಗೆ |
ಅನುವರದೊಳೆನ್ನೊಡನೆ ತೊಡರುವ
ಘನತೆಯೆಲ್ಲಿಯದೆನ್ನ ತೇಜೋ
ದಿನಕರನ ತೀವ್ರತೆಗೆ ಸೈರಿಸಿ ನಿಲುವನಾರೆಂದ ॥"

"ಸೋಲವೇ ಬ್ರಹ್ಮಪ್ರಪೌತ್ರಗೆ
ಮೇಲೆ ರಾವಣನೆನಗೆ ಶಿವಶಿವ
ಹೋಲದೀ ನುಡಿ ಹೋಗಲದಕೇನೆಲೆ ಭಟೋತ್ತಮನೆ |
ಕೇಳು ಕಾಲಾಂತರಕೆ ತನ್ನನು
ಕಾಳಗದೊಳಗೆ ಕೊಲುವೆ ನೀಗಡ
ಹೇಳಲದು ತಾ ಸದರವೇ ಸತ್ಕೀರ್ತಿಯಹುದೆಂದ ॥"

ಆಗ ತನ್ಮಹಾತ್ಮನ ತನುವಿನಲಿ ಪಿತೃದೇವತೆಗಳನು, ಮನುಮರುದ್ಗಣಗಳನು, ರುದ್ರಾದಿತ್ಯ ವಸುಗಳನು, ದಿಕ್ಪಾಲರನು, ತೇಜೋವಿನಯವಹ್ನಿತ್ರಿತಯವನು, ವಿಜೃಂಭಿತ ವೇದವೇದಾಂಗಾದಿ ವಿದ್ಯೆಗಳ, ಪುರಸರಸ್ಸುಗಳ, ಸರಿತ್ಸಾಗರಗಳ, ವನಸಂಕುಲಗಳ, ಗಿರಿಗಳನು, ಸಕಲ ಗ್ರಹಂಗಳ, ಎಲ್ಲ ತಾರೆಗಳ, ಧರೆಯು, ನಭವನು, ಸಿದ್ಧರನು, ಸಾಧ್ಯರನು ಮುನಿಗಳಶ್ವಿನಿಯರನು, ಉರಗಪತಿಗಳನು, ದೇವದಾನವರು, ಇವೆಲ್ಲವನ್ನೂ ಆ ರಾವಣನು ಆ ಕಪಿಲಮುನಿಯಲ್ಲಿ ಕಂಡನು. "ರಾವಣನು ನಿನ್ನಿಂದಳಿದು ಮುಕ್ತಿಯ ಗಳಿಸಲೆಂದು ಒಯ್ದನು ಜಗತ್ತ್ರಯಜನನಿ ಜಾನಕಿಯ" ಎಂದು ಅಗಸ್ತ್ಯಮುನಿ ಶ್ರೀರಾಮನಿಗೆ ತಿಳಿಸಿದರು. ಆಗ "ರಾವಣನೊಳತಿ ವೈರವೆ ಮಹಾಕೃಪೆಯಾಗಿ ಯೋಗಿಪ್ರವರನ ನಾಚಿಸಿತು. ಲೇಸೆನಿಸಿತ್ತು ದುರ್ನೀತಿ."

ರಾವಣನು ವಿರಾಡ್ರೂಪ ದರ್ಶನಲಾಭವನ್ನು ಪಡೆದ ವಿಚಾರವನ್ನು ಕೇಳಿ ಶ್ರೀರಾಮನು "ಇದೊಂದು ಪುಣ್ಯ ಕಥೆ"ಯೆಂದೂ, ಕೊನೆಯಲ್ಲಿ "ಪುಣ್ಯಕಥಾ ಶ್ರವಣವಾಯ್ತನಘ"ಎಂದು ತಲೆದೂಗಿದನು. "ಇನಿತು ಪುಣ್ಯಸಲಾಪಕಾನನನೆನಿಸುತ" ಮಹಾಸಭೆ ಬೆರಗಾದುದು.

ವರ್ಣನಾಭಾಗದಲ್ಲಿ ನಾರಾಯಣ ಕವಿಯ ವಾಗ್ವೈಖರಿಯನ್ನು ಸ್ವಲ್ಪ ಗಮನಿಸಬಹುದು.

ಸೂರ್ಯಾಸ್ತಮಾನ :

“ ಉಟ್ಟ ವಿಮಲ ದುಕೂಲಗಳ ಹೊಂ
ಬಟ್ಟೆಯುಂದವ ಮಾಡಿ ಖಚರಿಯ
ರಿಟ್ಟ ಚಂದನತಿಲಕದಲಿ ಕುಂಕುಮದ ಚೆಲುವಿಕೆಯ |
ಪುಟ್ಟಸಲು ಪೊಂಬಿಸಿಲು ಗಗನದ
ಬಟ್ಟೆಯಲಿ ದಿನನಾಥ ಪಡುವಣ
ಬೆಟ್ಟವನು ಸಾರಿದನು ಸಾರೆ ಖಗಾಳಿ ತರುಚಯವ ||

ಕತ್ತಲೆ :

“ ಬಿಗಿದ ತಾಳೋರಗನ ಪೆಡೆಗಳ
ನೊಗದ ಹೇಳಿಗೆಯಂತೆ ಭೃಂಗಾ
ಳಿಗಳನೊಡಗೊಂಡೊಡನೆ ಮುಗಿದ ಸರೋಜದಂದದಲಿ |
ಸೊಗಸುತೀರ್ದುದಜಾಂಡ ಫಲಿತಾ
ರಿಗೆ ತಿಮಿರಕರಿ ಪುಷ್ಕರಾಗ್ರದಿ
ತೆಗೆದು ಸೂಸಿದ ಸೀರ್ಪನಿಗಳೆನೆ ಮೆರೆದುಡಭೃದಲಿ

ಚಂದ್ರೋದಯ :

“ ಆ ಸಮಯದಲಿ ಕುಮುದಿನೀ ದರ
ಹಾಸರುಚಿಯೆಂತಂತೆ ಕುಸುಮ ಶ
ರಾಸನನ ಸತ್ಕೀರ್ತಿ ಸುಧೆಯೆಂತಂತೆ ಯಾಮಿನಿಯ |
ಭಾಸಮಾನ ದುಕೂಲ ವಸನದ
ನ್ಯೈಸಿರಿಯದೆಂತಂತೆ ಚಾರುವಿ
ಲಾಸದಲಿ ಧವಳಿಸಿತು ಚಂದ್ರಿಕೆ ಸಕಲ ದಿಕ್ತಟವಲಿ || ”

“ ಭುವನಭವನವ ಚಂದ್ರಿಕಾ ಸುಧೆ
ಧವಳಿಸಿತು ಶಶಿಕಾಂತಶಿಲೆಗಳ
ಬೆವರಿಸಿತು ಬಾಯೊರಸಿತೆಲ್ಲೆಡೆಯಲಿ ಚಕೋರಿಗಳ |
ಕುವಲಯಂಗಳ ನಗಿಸಿ ತನುತಾ
ಪವರಚಿಸಿ ಕೋಕಗಳನಳಿಸಿತು
ಧವಳ ಕೀರ್ತಿಯ ನೊದಪಿಸಿತು ಮನಸಿಜ ಮಹೀಪತಿಯ ”

ವಸಂತಋತು :

“ ನೂತನಾಂಗಜ ಶಸ್ತ್ರರಚನಾ
ಖ್ಯಾತ ಭಾಸುರಲೋಹಕಾರ ಮ
ಹಾತಪಸ್ವಿಜನಕೃತಾಂತ ವಸಂತನೈತಂದ”

“ ಸ್ಮರನ ತೇಜವೊ ಹುತವಹನ ಭಾ
ಸುರ ಶಿಖಾಳಿಯದೊಂದು ರೂಪದಿ
ಪರಿಣಮಿಸಿ ತೆಂಬಂದದಲಿ ಪಲ್ಲವಿಸೆ ಶಾಖೆಗಳು |

ಸುರಿಯಲಾಗ ಪರಾಗ ಕುಸುಮೋ
ತ್ಕರದಿನೆಸೆದವು ಕವಿಯು ತುಂಬಿಯು
ನೆರಪಿ ತತ್ಪಾವಕನ ಕರ್ಚೋಗೆಯಂತೆ ರಚಿಸಲು"

ಅಲಂಕಾರ ವರ್ಣನೆಯಲ್ಲಿ ಕುಮಾರವ್ಯಾಸನ ಶಬ್ದಸರಣಿಯೇ ಕೆಲವಡೆ ಮೂಡಿ ಬಂದಿದೆ. ಉದಾಹರಣೆ :

" ಹಾರಪದಕ ಕೀರಿಟ ಮಣಿ ಕೇ
ಯೂರ ಕುಂಡಲ ಮುಖ್ಯ ಬಹು ಭೂ
ಷಾ ರಚನೆಯಲಿ ರಕ್ತಮಾಲಾಂಬರ ಸುಗಂಧಗಳ | "

ಕುಮಾರವ್ಯಾಸ್ಯನ ಪದ್ಯ :

" ಹಾರ ಪದಕ ಕೀರಿಟ ಮಣಿ ಕೇ
ಯೂರ ಕರ್ಣಾಭರಣವೆಂಬವು . . .

ಇಂದ್ರಜಿತು ಪರಾಕ್ರಮದಲ್ಲಿ ತಂದೆಯಾದ ರಾವಣನನ್ನೂ ಮೀರಿಸಿ ಇಂದ್ರನನ್ನೇ ಜಯಿಸಿದನು. ಇಂತಹ ಪೌರುಷವಂತನೂ, ಮಾಯಾಯುದ್ಧಕುಶಲನೂ 'ಇಂದ್ರಜಿತು' ಎಂಬ ಎಂಬ ಬಿರುದನ್ನು ಬ್ರಹ್ಮನಿಂದ ಪಡೆದವನೂ ಆದ ಮೇಘನಾದನನ್ನು ಯುದ್ಧದಲ್ಲಿ ವೀರನಾದ ಲಕ್ಷ್ಮಣನು ಸಂಹರಿಸಿ ವಿಜಯವನ್ನು ಪಡೆದುದು ಸಾಮಾನ್ಯವಲ್ಲವೆಂದು ಅಗಸ್ತ್ಯರು ಹೇಳುವರು.

" ಅವರ ಹವಣೇ ಮೇಘನಾದನು
ದಿವಿಜರೆದೆ ದಲ್ಲಣನು ಜಗದೊಳ
ಗವನೆ ಸಾಹಸಿಯವನೆ ಬಿಲ್ಲಾಳವನೆ ರಣವಿಜಯ |
ಅವನ ಗೆಲುವುದು ಲಕ್ಷ್ಮಣಗೆ ಸಂ
ಭವಿಸಿತಲ್ಲದಡಾವ ವೀರರು
ಬವರದೊಳಗವನೊಡನೆ ನಿಲುವರೆನುತ್ತ ಹೊಗಳಿದರು"

" ಅದರಿನಧಿಕನು ಮೇಘನಾದನು
ತ್ರಿದಶಪತಿಯನು ಗೆಲಿದನಾತನ
ಕದನ ಮುಖಲಿ ಗೆಲುವನಾವನೆನುತ್ತ ಮುನಿ ನುಡಿಯೆ|
ಅದಟನಹುದಹುದೆಂದು ಕೊಂಡಾ
ಡಿದನು ರಘುಪತಿ ರವಿಸುತಾದಿಗ
ಳಿದು ಮಹಾದ್ಭುತವೆಂದು ಹೊಗಳಿದರವನ ವಿಕ್ರಮವ"

"ದಶಕಂಧರನ ಕಲಿಗುತ್ತಿಸಿದನಾಹವದೊಳಿಂದ್ರನು ಬಾಹುಸತ್ವದಲಿ. ಮತ್ತೆ, ಕರಿ ಪಂಕರುಹವನು ಪಿಡಿದೆತ್ತಿದಪೊಲಾ ವಜ್ರಿಯನು ಪಿಡಿದೆತ್ತಿ ತಂದನು ಮೇಘನಾದನು ಹೊಯ್ದು ನಿರ್ಜರರ. ಪಡೆದಸಿಂದ್ರಜಿತಾಖ್ಯವನು ಕೈಯೊಡನೆ ಕಮಲಜನಿಂದಲಾತನ ಕೆಡಹಿದನು ಲಕ್ಷ್ಮಣನು ನಿನ್ನ ಕೃಪಾವಿಶೇಷದಲಿ." ಎಂದರು ಅಗಸ್ತ್ಯರು.

ಅಗಸ್ತ್ಯರು ರಾವಣಾದಿಗಳ ಸಮಸ್ತ ಚರಿತ್ರೆಯನ್ನೂ ರಾಮನಿಗೆ ಹೇಳಿ, ಅವನ ಅನುಜ್ಞೆಯನ್ನು ಪಡೆದು ಅವರ ಆಶ್ರಮಕ್ಕೆ ಹಿಂತಿರುಗಿದರು. ಅನಂತರ ರಾಮನು ತನ್ನ ಪಟ್ಟಾಭಿಷೇಕಕ್ಕಾಗಿ ಬಂದಿದ್ದ ಸಮಸ್ತ ಬಂಧುಮಿತ್ರರನ್ನೂ ಉಚಿತಸತ್ಕಾರಗಳಿಂದ ಕಳುಹಿಸಿಕೊಟ್ಟನು. ಆ ಸಮಯದಲ್ಲಿ ಆಂಜನೇಯನು ಶ್ರೀರಾಮನ ಪಾದಗಳಿಗೆರಗಿ, " ಹಿರಿದು ರಾಮ ಕಥಾಮೃತವನಾ

ದರದಿ ಸಪಿವಭಿಲಾಷೆ ತನಗೆ. ಆದರಿಂದ ಸುರಸತಿಯುದು ಬಂದಿಕ್ಕೈಲದೊಳೋಲೈಸಿ, ಸರಸ ಮೃದುಗಾನದಲಿ, ನಿಮ್ಮಯ ಪರಮಪುಣ್ಯಚರಿತ್ರೆಗಳನನವರತ ಪಾಡಲು ಕೇಳುತಿಹೆನೀ ವರವ ಕೊಡಿ" ಯೆಂದ ಅದನ್ನು ಮೆಚ್ಚಿದ ರಾಮನು ಸಿಂಹಾಸನದಲಿದ್ದು, ಪಹಿಲದಲಿ ತಕ್ಕೈಸಿ ನುಡಿದನು, "ಭುವನ ಸಂದೋಹಂಗಳುಳ್ಳನ್ನೆವರ ರಾಮಾಯಣ ಮಹಾಕಾವ್ಯವು ನೆಗಳಿದಾ ಭುವನದೊಳಗುಳ್ಳನ್ನಬರ ನಿನ್ನ ಪ್ರಪಿಮುಲಾಂಗವ ಬಿಡದೆ ದೀರ್ಘಾಯುವನು ಧರಿಸಿದರು. ಕೀರ್ತಿಸುಧೆ ನೆರೆ ಭುವನ ಸೌಧಂಗಳನು ಧವಳಿಸಿ ರಮ್ಯವಾಗಿರಲಿ," ಎಂದು ಅನುಗ್ರಹಿಸಿದನು.

ಯಾಗ ಪೂರ್ತಿಯಾದನಂತರ, ಕಾಲಕ್ರಮದಲ್ಲಿ ರಾಮ, ಲಕ್ಷ್ಮಣ, ಭರತ, ಶತ್ರುಘ್ನರ ಮಕ್ಕಳೆಲ್ಲರಿಗೂ ರಾಜ್ಯಭಾಗವನ್ನಿತ್ತು ಪಟ್ಟಾಭಿಷೇಕ ಮಾಡಿದನಂತರ, ಶ್ರೀರಾಮನು ಸೀತಾದೇವಿ ಯೊಡನೆ ಸುಖದಿಂದ ರಾಜ್ಯಭಾರ ಮಾಡುತ್ತಿದ್ದನು ಎಂಬಲ್ಲಿಗೆ ಈ ಕಾವ್ಯವು ಮುಕ್ತಾಯವಾಗು ವುದು.

೬

ಕವಿಯು ಅಲ್ಲಲ್ಲಿ ಮನೋರಂಜಕವಾದ ನಾಣ್ಣುಡಿಗಳನ್ನು ಉಪಯೋಗಮಾಡಿರುತ್ತಾನೆ. ಉದಾಹರಣೆಗಾಗಿ ಕೆಲವನ್ನು ಇಲ್ಲಿ ಕೊಡಲಾಗಿದೆ. ಹುಲ್ಲಿನುರಿಯಂತಾಯ್ತುಕಟ ಭಟರಲ್ಲಿ ತೋರಿದ ವಿಕ್ರಮದ ಸಿರಿ; ಬೆಟ್ಟವನ್ನು ಗುಂಗುರು ಕಾಡಿತು; ಹುಲಿಯು ಉಪವಾಸವ್ರತವೆ ಪಶುಹಿಂಸೆಗಾದಂತೆ (ಕುಮಾರ ವ್ಯಾಸನು: ಹುಲಿಯು ಮುರಿದೊತ್ತಿದೊಡೆ ಪಶುಸಂಕುಲಕೆ ಸಂಕಟವೇನು ಎಂಬ ಪ್ರಯೋಗ ಮಾಡಿದ್ದಾನೆ); ಕಲ್ಲೊಡನೆ ಹೋರಟೆಯ ತಲೆಯಲಿ ಬಲ್ಲಿದನ ತಾನೆಂದು; ತರಗೆಲೆ ಹೊದಿಕೆಯೇ ಶಿಖಿಗೆ; ತಡೆಯುದರಸುವ ಬಳ್ಳಿ ಕಾಲಿಗೆ ತೊಡರಿತು; ವಿಲಯದ ಕಡಲು ಭೋರ್ಗರೆವಂತೆ; ತೋಳಸಿರಿ ಸುಪತಿವ್ರತೆಯಲೇ; ಗರುಡ ಬೆಂಬಲವಾಗೆ ಫಣಿಗಳ ಶಿರವನೊದವುದದಾವ ಘನ; ಕಾಲಕೂಟಕೆ ನಡೆವ ಶಿವನಂತೆ, ಘನ ಕಲ್ಯಾಣಗಿರಿ ಶೃಂಗವನು ಸಾರುವ ನೀಲಘನದಂತೆ; ಇತ್ಯಾದಿ.

ಈ ಕಾವ್ಯದ ಒಟ್ಟು ೪೪ ಸಂಧಿಗಳಲ್ಲಿ ಸುಮಾರು ೨೨ ಸಂಧಿಗಳಷ್ಟು ರಾವಣನ ಜನ್ಮ ಮತ್ತು ದಿಗ್ವಿಜಯ ವರ್ಣನೆಗೆ ವಿನಿಯೋಗವಾಗಿದೆ. ವಾಲ್ಮೀಕಿ ಮಹಾಮುನಿ ಪ್ರಣೀತವೆಂದು ಪ್ರಸಿದ್ಧವಾಗಿರುವ ಉತ್ತರಕಾಂಡ ರಾಮಾಯಣದ ಕಥೆಯೇ ಇಲ್ಲಿ ಹೇಳಲ್ಪಟ್ಟಿದೆ. ಕಥಾಸರಣಿ ಯಲ್ಲಿ, ಅಲ್ಲಲ್ಲಿ ಕವಿಯು ಕೆಲವು ಸಣ್ಣ ಪುಟ್ಟ ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ. ಮೂಲ ದಲ್ಲಿ ಕೊನೆಯಲ್ಲಿ ಹೇಳಿದ ಕಥೆಯು ಇದರಲ್ಲಿ ಮೊದಲೇ ಬಂದಿದೆ. ಬುಧನು ಇಳೆಯಲ್ಲಿ ಜನಿಸಿದ ತನ್ನ ಮಗ ಪುರೂರವನನ್ನು ಚಂದ್ರನಿಗೆ ಅರ್ಪಿಸುವ ಭಾಗವು ಮೂಲದಲ್ಲಿಲ್ಲ. ಲಕ್ಷ್ಮಣನು ಇಂದ್ರ ಅಹಲ್ಯೆಯರ ಕಥಾನಿರೂಪಣೆಯನ್ನು ಮಾಡುವ ಭಾಗವೂ ಅಲ್ಲಿಲ್ಲ. ಈ ಕಾವ್ಯದಲ್ಲಿ ಅಹಲ್ಯಾ ವೃತ್ತಾಂತವು ಎರಡು ಕಡೆ ಬಂದಿದೆ. ಇಂದ್ರನು ಇಂದ್ರಜಿತುವಿನ ಸೆರೆಯಿಂದ ಬಿಡುಗಡೆ ಹೊಂದಿದ ಮೇಲೆ, ಬ್ರಹ್ಮನು. ಈ ಪರಾಭವವು ಗೌತಮರ ಶಾಪದ ಫಲವೆಂದು ಇಂದ್ರನಿಗೆ ಹೇಳುವ ಸಂದರ್ಭದಲ್ಲೂ ಅಹಲ್ಯೆಯ ಕಥೆ ಬರುವುದು. ಮತ್ತೆ ಅಶ್ವಮೇಧಯಾಗಾರಂಭ ಪೂರ್ವದಲ್ಲಿ ಪುನರುಕ್ತವಾಗಿದೆ.

ನಾರಾಯಣಕವಿಯು ಕುಮಾರವ್ಯಾಸ, ಕುಮಾರವಾಲ್ಮೀಕಿ, ಲಕ್ಷ್ಮೀಶ ಮಹಾಕವಿಗಳ ರೀತಿಯಲ್ಲಿ ಉತ್ತರರಾಮ ಕಥೆಯನ್ನು ರಸವತ್ತಾಗಿ ನಿರೂಪಿಸಿರುತ್ತಾನೆ. ಕುಮಾರ ವಾಲ್ಮೀಕಿಯ ರಾಮಾಯಣದ ಜೊತೆಯಲ್ಲಿ ನಿಲ್ಲಲು ಈ ಕಾವ್ಯವು ಎಲ್ಲ ರೀತಿಯಿಂದಲೂ ಅರ್ಹವಾಗಿದೆ.

ಶಿವಮೊಗ್ಗೆಯಲ್ಲಿ ಈ ಕಾವ್ಯವಾಚನವನ್ನು ಎರಡು ತಿಂಗಳ ಕಾಲ ನಡೆಸಿದಾಗ ನೆರೆದಿದ್ದ ವಿದ್ವಾಂಸ ವರ್ಗದವರೂ ರಸಿಕವರ್ಗದವರೂ ಮೆಚ್ಚಿ ತಲೆದೂಗಿದ್ದಾರೆ.

" ಪ್ರಣುತ ವರ್ಣಗಳಾಗಿ ವಿಬುಧಾ
ಗ್ರಣಿಗಳತಿ ಭಾವಿಸಲು ಶ್ರುತಿ ಭೂ
ಷಣಗಳಾದುವು ರಘುಕುಲೋದ್ಭವ ವೀರರಘುವರನ |
ಗುಣಗಳನುಗುಣವಾಗೆ ನಾರಾ
ಯಣ ಕವಿಯ ವಾಗ್ರತ್ನಗಳಿ ನೀ
ಗಣನೆಯಿಲ್ಲದ ಸುಕೃತಗಳ ಮಾಡಿದನೊ ಜಗದೊಳಗೆ ‖ "

ಎಂಬ ಕವಿಯ ಈ ಹೆಗ್ಗಳಿಕೆಯು ಈ ಕಾವ್ಯರಚನೆಯಲ್ಲಿ ಸಾರ್ಥಕವಾಗಿದೆ.

" ವಿನುತ ತತ್ವದ ಸಾರವಿದು ಸ
ಜ್ಜನರ ಕರ್ಣಾಭರಣವಿದು ಪಾ
ವನಕೆ ಪಾವನವಿದು ಮಹಾಶ್ರುತಿಮೌಳಿ ಶಿಖರಿಯಲಿ |
ಜನಿಯಿಸಿದ ಮಾಣಿಕ್ಯವಿದು ಶಾ
ಸನವಿದೇ ವಿಸ್ಮಾವಿಧಾನ
ಕ್ಕೆನೆಲು ಸವಿಯದರೊಳರೆ ರಾಮಾಯಣ ಸುಧಾಸವ ‖ "

# ಅಭಿಷೇಕನಾಟಕದಲ್ಲಿ ಪ್ರಚ್ಛನ್ನವಧೆ ಮತ್ತು ಅದರ ಸಮರ್ಥನೆ

**ಲೇಖಕರು : ಕೆ. ರಾಜಗೋಪಾಲಾಚಾರ್**

ವಾಲ್ಮೀಕಿಯ ರಾಮಾಯಣದ ಕಾಲದಿಂದಲೂ ವಿಮರ್ಶೆಗೆ ಮತ್ತು ಟೀಕೆಗೊಳಗಾಗಿರುವ ಗಹನವಿಚಾರವೇ ಪ್ರಚ್ಛನ್ನವಧೆ. ರಾಮ ವಿಷ್ಣುವಿನ ಅಂಶಸಂಭೂತ. ರಾಮ ಮತ್ತು ಧರ್ಮ ವಿಭಿನ್ನವಲ್ಲ. ದೇವರು ಮಾಡುವ ಕೆಲಸವು ಸಾಮಾನ್ಯ ಮನುಜನಿಂದಾಗುವ ಟೀಕೆಗೆ ಅತೀತ ಎನ್ನುವ ಸಂಪ್ರದಾಯವಾದವೊಂದುಂಟು. ಇದು ಸಂಪ್ರದಾಯರೀತ್ಯಾ ಒಳಿತಾದ ವಾದ. ಆದರೆ ಪ್ರಕೃತಕ್ಕೆ ನಮ್ಮ ಗಮನಕ್ಕೆ ಬರಬೇಕಾದುದು ಕಾವ್ಯದ ರೀತ್ಯಾ. ಕಾವ್ಯ ವಿಮರ್ಶಕರಾಗಿ ರಾಮಾಯಣವನ್ನೇ ಆಗಲಿ, ಅಭಿಷೇಕ ನಾಟಕವನ್ನೇ ಆಗಲಿ, ವಿಮರ್ಶೆಗೆ ಅಳವಡಿಸಿಕೊಂಡಾಗ ರಾಮನಿಂದಾದ ಈ ಪ್ರಚ್ಛನ್ನವಧೆಯನ್ನು ಸಮರ್ಥಿಸಲು ಅಥವಾ ಟೀಕಿಸಲು ಮತದ ಯಾವೊಂದು ಪೂರ್ವಾಗ್ರಹವೂ ಮನಸ್ಸಿನಲ್ಲಿರಕೂಡದು. ಕಾವ್ಯವಿಮರ್ಶೆಯ ತತ್ವವನ್ನು ನಾವು ಮನಸ್ಸಿನಲ್ಲಿಟ್ಟುಕೊಳ್ಳಬೇಕು.

ಕಪಿಗಳ ಒಡೆಯನಾದ ವಾಲಿಗೂ ಮತ್ತು ಅವನ ತಮ್ಮನಾದ ಸುಗ್ರೀವನಿಗೂ ಗುರುತರ ಕಾರಣವೊಂದರಿಂದ ಮತ್ತು ಸುಗ್ರೀವನ ಆತುರ ಅವಜ್ಞತೆಗಳಿಂದ ವೈಮನಸ್ಯವು ಬೆಳೆದು ಬಂದಿತ್ತು. ಮಾಯಾವಿಯ ವಿನಾಶವಾದ ಮೇಲೆ ಅನಿರೀಕ್ಷಿತವಾಗಿಯೇ ಕಿಷ್ಕಿಂದಾಪಟ್ಟಣವನ್ನು ಸೇರಿದ ಅತುಲಪರಾಕ್ರಮಿಯಾದ ವಾಲಿಯು, ಅವಜ್ಞತೆಗಳಿಂದ ಸಿಂಹಾಸನವನ್ನು ಮತ್ತು ತನ್ನ ಹೆಂಡತಿಯಾದ ತಾರೆಯನ್ನು ಪಡೆದಿದ್ದ ಸುಗ್ರೀವನನ್ನು ರಾಜ್ಯದಿಂದ ಹೊರಗೋಡಿಸಿ ಆವನಿಗೂ ಅವನ ಅನುಯಾಯಿಗಳಿಗೂ ಸಿಂಹಸ್ವಪ್ನವಾಗಿದ್ದನು. ಈ ಸಮಯದಲ್ಲಿ ಸೀತಾನ್ವೇಷಣೆಗಾಗಿ ರಾಮ ಮತ್ತು ಲಕ್ಷ್ಮಣ ಇವರಿಗೂ ಹೆಚ್ಚುಕಡಮೆ ಅದೇ ದುರವಸ್ಥೆಯನ್ನನುಭವಿಸುತ್ತಿದ್ದ ಸುಗ್ರೀವನಿಗೂ ಸಖ್ಯವೇರ್ಪಟ್ಟಿತು. ದಿವ್ಯಾಸ್ತ್ರವನ್ನು ಹೊಂದಿದ್ದ ರಾಮನ ಅಸ್ತ್ರನೈಪುಣ್ಯವನ್ನು ಹಿಮಗಿರಿ ಶೃಂಗೋಪಮವಾಗಿದ್ದ ಸಾಲವೃಕ್ಷಗಳ ಭೇದನದ್ವಾರಾ ವೀಕ್ಷಿಸಿದ್ದ ಸುಗ್ರೀವನು ರಾಮನಿಂದ ಆಗಲಿರುವ ವಾಲಿಯ ವಿನಾಶದಲ್ಲಿ ಹೆಚ್ಚು ಪ್ರತ್ಯಯವನ್ನಿಟ್ಟು ಯುದ್ಧಕ್ಕೆ ಕರೆಯುತ್ತಾನೆ. ಅಣ್ಣತಮ್ಮಂದಿರ ಈ ದ್ವಂದ್ವ ಯುದ್ಧದಲ್ಲಿ ಸುಗ್ರೀವನು ನೆಲಕ್ಕೆ ಬಿದ್ದರೂ ಅವನ ನೆಚ್ಚಿನ ಅನುಯಾಯಿಯಾದ ಹನುಮಂತನಿಂದ ಪ್ರಚೋದಿಸಲ್ಪಟ್ಟ ರಾಮನು ಮರೆಯಾಗಿ ನಿಂತು ತನ್ನ ಬಾಣದಿಂದ ವಾಲಿಯನ್ನು ಹೊಡೆಯುತ್ತಾನೆ. ಈ ದುರವಸ್ಥೆಗೆ ಪಕ್ಕಾದ ವಾಲಿಯು ಈ ಸಂದರ್ಭದಲ್ಲಿ ರಾಮನಿಗೆ ಹಾಕುವ ಪ್ರಶ್ನೆಗಳು ನಿಜವಾಗಿಯೂ ಅವನ ಧೈರ್ಯಸ್ಥೈರ್ಯಗಳಿಗೆ ಒಪ್ಪುವ ಪ್ರಶ್ನೆಗಳೇ ಸರಿ.

ಕೆಚ್ಚೆದೆಯ ವಾಲಿಯು ಮೋಸದಿಂದ ತನ್ನನ್ನು ಬಾಣದಿಂದ ಹೊಡೆದ ರಾಮನನ್ನು "ಕ್ಷಾತ್ರ ಧರ್ಮವನ್ನನುಸರಿಸುತ್ತಲಿರುವ ನೀನು ವೀರನಾದ ಮತ್ತು ಧರ್ಮತತ್ತ್ವಗಳಲ್ಲಿ ವಿಗತ ಸಂಶಯನಾದ ಅದೂ ಅಲ್ಲದೆ ಜನಗಳಲ್ಲಿರುವ ಮೋಸವನ್ನು ತೊಡೆದು ಹಾಕಲು ಬದ್ಧಕಂಕಣನಾಗಿರುವ ನೀನು ನನ್ನನ್ನು ಈ ರೀತಿ ಮೋಸದಿಂದ ಹೊಡೆಯುವುದು ಯಾವ ನ್ಯಾಯ ?" ಎಂದು ಕೇಳುತ್ತಾನೆ. ಅದೂ ಅಲ್ಲದೆ ಬಾಹ್ಯದೃಷ್ಟಿಗೆ ಸೌಮ್ಯಮೂರ್ತಿಯಾಗಿ ಕಂಗೊಳಿಸಿ ಕೀರ್ತಿಗೇ

ಭಾಜನಪ್ರಾಯವಾಗಿರುವ ರಾಮನು ಚೀರವಲ್ಕಲಧಾರಿಯಾಗಿ ವೇಷವಿಪರ್ಯಸ್ತಚಿತ್ತದಿಂದ ಸಹೋದರನ ಜೊತೆಯಲ್ಲಿ ಯುದ್ಧ ಮಾಡುತ್ತಿದ್ದಾಗ ವಾಲಿಯನ್ನು ಹೊಡೆದುದು ಪೆಟ್ಟು ತಿಂದ ವಾಲಿಗೆ ಮಾತ್ರವಲ್ಲ ಸಹೃದಯತೆ ಮತ್ತು ಸಾನುಕಂಪದಿಂದಿರುವ ನಮಗೂ ಅಧರ್ಮ ಮತ್ತು ಅನ್ಯಾಯವೆಂದು ತೋರದಿರದು. ರಾಮನು ಇದಕ್ಕೆ ಪ್ರತ್ಯುತ್ತರವಾಗಿ ಕೊಡುವ,

> "ವಾಗುರಾಚ್ಛನ್ನಮಾಶ್ರಿತ್ಯ ಮೃಗಾಣಾಮಿಷ್ಯತೇ ವಧಃ|
> ವಧ್ಯತ್ವಾಚ್ಚ ಮೃಗತ್ವಾಚ್ಚ ಭವಾನ್ಪನ್ನೇನದಂಡಿತಃ ||"

ಎಂಬ ವಾದಸರಣಿಯು ವಾಲ್ಮೀಕಿಯ ರಾಮನ ವಾದದಂತೆಯೇ ಮೊಂಡು ವಾದವೆಂದೆನಿಸಿಕೊಳ್ಳದಿರದು. ಮೃಗವನ್ನು ಬೇಟೆಗಾರನು ಮರೆಯಲ್ಲಿ ನಿಂತು ಹೊಡೆಯುವಂತೆ ರಾಮನು ವಾಲಿಯನ್ನು ಹೊಡೆದು 'ಮೃಗತ್ವಾತ್' ಎಂಬ ಕಾರಣವನ್ನೊಡ್ಡಿ ಸಮರ್ಥನೆ ಮಾಡಿದ್ದಲ್ಲಿ ವಾಲಿಗೆ ರುಚಿಸುತ್ತಿತ್ತೋ ಏನೋ. ಆದರೆ ವಧ್ಯತ್ವಾತ್ ಎಂದು ರಾಮನು ಉಪಯೋಗಿಸುವುದು ಸ್ವಪಾಪವಿಗತಶಂಕನಾದ ವಾಲಿಯ ಕುತೂಹಲವನ್ನು ಕೆರಳಿಸುತ್ತದೆ. ಆದುದರಿಂದಲೇ "ದಂಡ್ಯಃ ಇತಿ ಭವಾನ್ಮನ್ಯತೇ?" ಎಂದು ಕೇಳುತ್ತಾನೆ. ರಾಮನು ಅಗಮ್ಯಾಗಮನದ ನಿಮಿತ್ತದಿಂದ ವಾಲಿಯು ಶಿಕ್ಷಾರ್ಹ ಎಂದು ಹೇಳಿ ಸದ್ಯಃಕೃತಕೃತ್ಯನಾದೆನೆಂದು ರಾಮನು ಅಂದುಕೊಂಡರೂ ವಾಲಿಗೆ ನಿಜವಾಗಿಯೂ ಅಚ್ಚರಿಯುಂಟಾಗುತ್ತದೆ. ಕಾರಣ ಅದು ಮೃಗಜಾತಿಯ ಸಂಪ್ರದಾಯ ರಾಮನು ಮತ್ತೆ ಕೊಡುವ ವಾದ ಅಷ್ಟಾಗಿ ಸಮರ್ಥನೀಯವಲ್ಲ. ವಾಲಿಯು ಸರ್ವವಾನರರಾಜ. ಧರ್ಮಾಧರ್ಮದ ಬಗ್ಗೆ ವಿವೇಚನಾಶಕ್ತಿಯನ್ನು ಹೊಂದಿರುವ ಅವನು ಮೃಗವೆಂಬ ನೆಪದಿಂದ ಸಹೋದರನ ಹೆಂಡತಿಯನ್ನು ಪರಿಗ್ರಹಿಸಿರುವುದು ರಾಮನಿಗೇನೋ ಸಮರ್ಪಕವಾಗಿ ಕಾಣಲಿಲ್ಲ. ಹೌದು. ಆದರೆ ವಾಲಿಯು ಅದಕ್ಕೆ ಪ್ರತ್ಯುತ್ತರವಾಗಿ ಸುಗ್ರೀವನೂ ಅದೇ ರೀತಿಯ ಅಪರಾಧಕ್ಕೊಳಗಾಗಿರುವಾಗ ತನ್ನನ್ನು ಮಾತ್ರ ಶಿಕ್ಷೆಗೆ ಗುರಿಪಡಿಸಿರುವುದು ಔಚಿತ್ಯರಹಿತವೆಂದು ರಾಮನಿಗೆ ಹೇಳುತ್ತಾನೆ. ಅಣ್ಣನ ಹೆಂಡತಿಯನ್ನು ತಮ್ಮನು ಪರಿಗ್ರಹಿಸಿರುವುದು ಮೃಗಜಾತಿಗೆ ಸೇರಿದ ವಾಲಿಗೂ ಕೂಡ ಮಹದಕ್ಷಮ್ಯಾಪರಾಧವೆಂದು ಗೋಚರವಾಗುತ್ತದೆ. 'ಧರ್ಮಾಧರ್ಮೌವಿಜಾನತಾ' ಎನ್ನುವುದು ಸುಗ್ರೀವನಿಗೆ ಅನ್ವಯಿಸುವುದಿಲ್ಲವೇನು? ಆದರೆ ರಾಮನು ತನ್ನದೇ ಆದ ದೋಷಪೂರ್ಣವಾದದಿಂದ ಯಾವಾಗಲೂ ಹಿರಿಯ ಸಹೋದರನು ಕಿರಿಯವನ ಪತ್ನಿ ಪರಿಗ್ರಹ ಮಾಡಬಾರದೆಂದು ಹೇಳಿ ವಾಲಿಯನ್ನು ಸುಮ್ಮನಾಗಿಸುತ್ತಾನೆ.

ಮೇಲೆ ನಿರೂಪಿಸಿದ ವಾಲಿ ಮತ್ತು ರಾಮ—ಇವರ ವಾದ ಮತ್ತು ಸಮರ್ಥನೆ ಇವುಗಳನ್ನು ನಾವು ಪರಿಶೀಲಿಸಿದಲ್ಲಿ ರಾಮನು ಮಾಡಿದ ಕೆಲಸ ಶತಶಃ ಹೇಯವಾದುದು ಮತ್ತು ಅವನು ನೀಡುವ ಸ್ವಸಮರ್ಥನೆಗಳು ಸಮರ್ಪಕವಾಗಿಲ್ಲವೆಂದು ಹೇಳದೇ ವಿಧಿಯಿಲ್ಲ. ರಾಮನು ಪ್ರಪ್ರಥಮವಾಗಿ ವಾಲಿಯನ್ನು ಮೃಗವಾದುದರಿಂದ ಬೇಟೆಯಾಡಿದ್ದೇನೆ ಎಂದು ಹೇಳಿ ಮೃಗಸಂಪ್ರದಾಯವನ್ನು ಬದಿಗೊತ್ತಿ,

> "ಭವತಾವಾನರೇಂದ್ರೇಣ ಧರ್ಮಾಧರ್ಮೌವಿಜಾನತಾ|
> ಆತ್ಮಾನಂಮೃಗಮುದ್ದಿಶ್ಯ ಭ್ರಾತೃದಾರಾಭಿಮರ್ಶನಂ ||"

ಎಂದು ವಾಲಿಯ ಕೃತ್ಯವನ್ನು ಖಂಡಿಸುವುದು ದೋಷರಹಿತವಲ್ಲವೆಂದೇ ತೋರುತ್ತದೆ. ಅದೂ ಅಲ್ಲದೆ ಮಾನವನನ್ನೂ ಮತ್ತು ಮೃಗವನ್ನೂ ಬೇರ್ಪಡಿಸುವ ವಿವೇಚನಾಶಕ್ತಿಯಿಂದಲೇ ತಾನು ಮಾಡಿದ ಅಕೃತ್ಯವನ್ನು ಸಮರ್ಥಿಸುವುದು ವಿಮರ್ಶಾರೀತಿಯೇನು? 'ಯಥಾರಾಜಾ ತಥಾ

ಪ್ರಜಾಃ' ಎನ್ನುವ ನಾಣ್ಣುಡಿಯ ತತ್ವವನ್ನವಲಂಬಿಸಿ ರಾಮನೇನೋ 'ಭವತಾವಾನರೇಂದ್ರೇಣ' ಎಂಬ ವಾದವನ್ನು ಮುಂಚಾಚಿಪ್ಪಾನೆ. ಆದರೆ ಮಾನವ ಸಂಪ್ರದಾಯಕ್ಕೂ ವಿವೇಚನಾ ಶೂನ್ಯವಾದ ಮೃಗಗಳ ಸಂಪ್ರದಾಯಕ್ಕೂ ಎಷ್ಟೊಂದು ವ್ಯತ್ಯಾಸ? ಇಷ್ಟೇ ಅಲ್ಲದೆ ಮಾನವ ಸಂಪ್ರದಾಯದ ಅಳತೆಗೋಲಿನಿಂದ ವಿಭಿನ್ನಾಭ್ಯಾಸವನ್ನೇರ್ಪಡಿಸಿಕೊಂಡಿರುವ ಮೃಗಗಳ ನಡೆವಳಿಕೆಯನ್ನು ಅಳೆಯುವುದು ಅಷ್ಟು ಸಮರ್ಪಕವಾಗಿ ಕಾಣದು, ಈ ದೋಷವನ್ನೆತ್ತಿ ತೋರಿಸಲೇ ವಾಲಿ ರಾಮನಿಗೆ 'ಏಷಃ ಅಸ್ಮಾಕಂ ಧರ್ಮಃ' ಎಂದು ಹೇಳುವನು. ರಾಮನೇನೊ ವಾಲಿಗೆ'ನತ್ವೇವಹಿ ಕದಾಚಿಜ್ಜ್ಯೇಷ್ಠಸ್ಯಯವೀಯಸಃ ದಾರಾಭಿಮರ್ಶನಂ'ಎಂದು ವಿಗತಧರ್ಮ ಸಂಶಯನಕಂಠದಿಂದ ಹೇಳಿದನು. ಹಿರಿಯ ಅಣ್ಣ ತಂದೆಗೆ ಸಮಾನ. ಆ ದೃಷ್ಟಿಯಿಂದ ಸುಗ್ರೀವನಪತ್ನಿ ರುಮೆಯು ವಾಲಿಗೆ ಸೊಸೆಯಾದಂತಾಯಿತು. ಆದರಿಂದಾಗಿ ವಾಲಿಯು ಅವಳನ್ನು ಪರಿಗ್ರಹಿಸಿದುದು ಅಕೃತ್ಯವೆಂದು ರಾಮನು ಹೇಳಿದುದು ಒಪ್ಪತಕ್ಕ ಮಾತೇ ಸರಿ. ಆದರೆ ಕಿರಿಯ ಸಹೋದರನು ತನ್ನ ತಂದೆಗೆ ಸಮಾನನಾದ ಅಣ್ಣನ ಪತ್ನಿಯಾದ ತಾರೆಯನ್ನು ಸ್ವೀಕರಿಸಿದುದು 'ಧರ್ಮಾಧರ್ಮೌವಿಜಾನತಾ' ಅಳತೆಗೋಲಿನ ದೃಷ್ಟಿಯಲ್ಲಿ ಧರ್ಮವೇನು? ಉಚಿತವೇನು? ಜ್ಯೇಷ್ಠ ಸಹೋದರ ಪಿತೃಸಮಾನವಲ್ಲವೇ? ಇದನ್ನು ಮರೆತು ಮಾತೃಗಾಮಿಯಾದ ಸುಗ್ರೀವನನ್ನು ಎಂದಾದರೂ ರಾಮನು ಪ್ರಶ್ನಿಸಿ ವಿಷಯವನ್ನು ಕೂಲಂಕಷವಾಗಿ ವಿಚಾರಿಸಿದನೇನು? ಅಣ್ಣನು ಯಾವ ಕಟ್ಟುಪಾಡಿಗೆ ಬದ್ಧನೋ ಹಾಗೆಯೇ ತಮ್ಮನೂ ಅಲ್ಲವೇನು? ವಾಲಿಯು ರಾಜನಾದುದರಿಂದ ಬದ್ಧ ಎಂದು ಹೇಳಿದಲ್ಲಿ ಸುಗ್ರೀವನೂ ತಾರೆಯ ಪರಿಗ್ರಹಮಾಡಿದುದು ರಾಜನಾಗಿಯೇ ತಾನೇ. ಸುಗ್ರೀವನನ್ನು ಶಿಕ್ಷೆಗೊಳಪಡಿಸದೆ ಹಾಗೆಯೇ ಉಳಿಸಿ ತನ್ನನ್ನು ಮಾತ್ರ ತೀಕ್ಷ್ಣಬಾಣದಿಂದ ಹಾಗೂ ಶಬ್ದಜಾಲದಿಂದ ಮರ್ಮಾಹತನಾಗಿಸಿದುದು ನಮ್ಮ ಹಾಗೆಯೇ ವಾಲಿಗೂ ಸರ್ವಥಾ ಅನುಚಿತವೆಂದೇ ತೋರಿಸಬೇಕು. ರಾಮನು ಕೊಟ್ಟ "ನತ್ವೇವಹಿಜ್ಯೇಷ್ಠಸ್ಯ . . ." ಎಂಬ ಕಾರಣವು ಸಮರ್ಪಕವಾಗಿ ಕಂಡುದರಿಂದಲೇ ವಾಲಿಯು 'ಹಂತ, ಅನುತ್ತರಾವಯಂ' ಎಂದು ಹೇಳುವುದಕ್ಕಿಂತಲೂ, ಪ್ರಾಣೋತ್ಕ್ರಮಣ ದುರವಸ್ಥೆಯನ್ನು ಅನುಭವಿಸುತ್ತಿದ್ದ ವಾಲಿಗೇ ನೊಂಡುವಾದವನ್ನೇ ಜಟಿಲಶಬ್ದ ಸಂಯೋಜನೆಯ ಮೂಲಕ ಕೊಡುತ್ತಿದ್ದ ರಾಮನಿಗೆ ಉತ್ತರಿಸುವುದು ದುರ್ಭರ ಪ್ರಸಂಗವಾಗಿತ್ತೆಂದು ಕಾಣುತ್ತದೆ. ಹೇಗಿದ್ದರೂ ಸಾಯಲೇಬೇಕು. ಆದರೆ ತಾನು ಮಾಡಿದುದು ಪಾಪವೆಂದು ರಾಮನ ವಾದದಜಾಡಿನಿಂದ ಅರಿತು 'ಭವತಾ ದಂಡಿತಸ್ತ್ವೇನ ವಿಗತ ಪಾಪ್ಮೋಹಂ ನನು' ಎಂದು ಹೇಳಿ 'ತಪ್ಪಿಗೆ ಶಿಕ್ಷೆ' ಯಾಯಿತೆಂದು ಸ್ವಸ್ಥಚಿತ್ತನಾದನೆಂದೇಕೆ ಹೇಳಬಾರದು?

ಇಷ್ಟೆಲ್ಲ ಹೇಳಿದ ಅನಂತರ ನಾವು ಹೇಗೆ ರಾಮನ ಕೃತ್ಯವನ್ನು ಸಮರ್ಥಿಸಬಹುದೆಂಬ ಪ್ರಶ್ನೆಯು ಏಳುವುದು ಸಹಜವೇ ಸರಿ. ಸುಗ್ರೀವನು ವರ್ಷಕಾಲ ಗುಹೆಯ ದ್ವಾರದಲ್ಲಿ ವಾಲಿಗಾಗಿ ನಿರೀಕ್ಷಿಸಿ ಬೇಸತ್ತು ಕೊನೆಗೆ ಗುಹೆಯಿಂದ ಹೊರಹೊರಟ ರಕ್ತಪ್ರವಾಹದಿಂದಾಗಿ ಅಪ್ರತಿಹತನಾದ ದಾನವನ ಕೈಯಲ್ಲಿ ತನ್ನ ಅಣ್ಣನೇ ಹತನಾಗಿರುವನೆಂದು ತಿಳಿದು ರಾಕ್ಷಸನು ಪುನಃ ಪುನಃ ರಾಜ್ಯಕ್ಕೆ ಆಪತ್ತನ್ನುಂಟು ಮಾಡದಿರಲೆಂದು ಗುಹೆಯ ಬಾಗಿಲನ್ನು ಮುಚ್ಚಿ ರಾಜ್ಯಕ್ಕೆ ಮರಳಿ ರಾಜ್ಯವನ್ನಾಳುತ್ತಾನೆ ಮತ್ತು ಮೃಗಾಚರಣೆಯಂತೆ ಅಣ್ಣನ ಹೆಂಡತಿಯನ್ನು ಪರಿಗ್ರಹಿಸುತ್ತಾನೆ. ಇದಿಷ್ಟೂ ಸನ್ನಿವೇಶಶಿಸುವಾಗಿ ಅಜ್ಞಾತೆಯಿಂದ ಕೈಮಿಂಚಿ ನಡೆದ ಸುಗ್ರೀವನ ಕೃತ್ಯ, ಆದರೆ ಹಿಂತಿರುಗಿ ಬಂದ ವಾಲಿಯು ಸುಗ್ರೀವನಿಗೆ ತಾನು ಮಾಡಿದ ಅಕೃತ್ಯದ ವಿವರಣೆಗಾಗಿ ಕಿಂಚಿತ್ತಾದರೂ ಕಾಲನೀಡದೆ ಸುಗ್ರೀವನನ್ನು ರಾಜ್ಯದಿಂದ ಉಚ್ಚಾಟನೆಯನ್ನು ಮಾಡಿ

ಅವನ ಹೆಂಡತಿಯಾದ ರುಮೆಯನ್ನು ಸ್ವಾಂತಃಪುರಕ್ಕೆ ಸೇರಿಸಿಕೊಂಡುದು ಅವನ ಕಾಮ ತೃಷ್ಣೆಯ ಪೂರಣಕ್ಕಲ್ಲದಿದ್ದರೂ ಸೇಡಿನ ಪ್ರತೀಕಾರ ರೋಷಬುದ್ಧಿಯಿಂದ. ನಡೆಯುವ ಕಾಲು ಎಡವುತ್ತದೆ. ಅಂತೆಯೇ ಸುಗ್ರೀವನೂ ಕೂಡ ಅಜ್ಞತೆಯಿಂದವಮಾಡಿದ ಕೆಲಸವನ್ನು ವಾಲಿಯೇ ನಾದರೂ ಅವನಿಂದ ವಿವರಣೆಯನ್ನು ಪಡೆದು ಕ್ಷಮಾದೃಷ್ಟಿಯಿಂದ ತಮ್ಮನನ್ನು ನೋಡಿದ್ದ ಪಕ್ಷ ದಲ್ಲಿ ನಿಜವಾಗಿಯೂ ವಾಲಿಯು ತನ್ನ ಶೌರ್ಯಸ್ಥೈರ್ಯದಿಂದ ಹೇಗೋ ಹಾಗೆಯೇ ಕ್ಷಮೆಯೆಂಬ ದೈವತತ್ವ ಸಂಚಯದಿಂದ ಅಮರಕೀರ್ತಿಯನ್ನು ಪಡೆಯುತ್ತಿದ್ದನು. ಮುಯ್ಯಿಗೆ ಮುಯ್ಯಿ ಎಂಬ ಹಠಸಾಧನೆಯಿಂದ ಬುದ್ಧಿಪೂರ್ವಕವಾಗಿ ವಾಲಿಯು ಮಾಡಿದ ಹೇಯ ಕೃತ್ಯವು ನಿಜ ವಾಗಿಯೂ ದಂಡನಾರ್ಹ ಎಂಬ ಈ ವಾದವನ್ನು ಯಾರಾದರೂ ಒಪ್ಪಲೇಬೇಕು. ರಾಮನು ಮಾಡಿದುದು ತಪ್ಪಾಗದಿದ್ದಲ್ಲಿ ತ್ರೇತಾಯುಗದ ವಾಲಿಯು ದ್ವಾಪರ ಯುಗದಲ್ಲಿ ಬೇಡನಾಗಿ ಕೃಷ್ಣನನ್ನು ಸಂಹಾರ ಮಾಡಿದನೆಂಬ ಸಂಪ್ರದಾಯವಾದಕ್ಕೆ ಆಕರವಾದುದಾದರೂ ಏನು ?

---

# ಸಂಪಾದಕೀಯ

ನಮ್ಮ ದುರ್ದೈವದಿಂದಾಗಿ ಕನ್ನಡ ಭಾಷಾಸಾಹಿತ್ಯದಲ್ಲಿ ಆಳವಾದ ಪಾಂಡಿತ್ಯವನ್ನು ಗಳಿಸಿಕೊಂಡಿದ್ದ ಇಬ್ಬರು ವಿದ್ವಾಂಸರನ್ನು ಕಳೆದುಕೊಂಡಿದ್ದೇವೆ. ಪ್ರೊ. ತೀ. ನಂ. ಶ್ರೀ. ಯವರ ನಿಧನದಿಂದ ಇನ್ನೂ ಚೇತರಿಸಿಕೊಳ್ಳುವುದರಲ್ಲಿ ನಿಘಂಟು ಕಚೇರಿ ಉಪಸಂಪಾದಕರಾಗಿದ್ದ ಹೆಮ್ಮಿಗೆ ದೇಶಿಕಾಚಾರ್ಯರು ಕಣ್ಮರೆಯಾಗಿದ್ದಾರೆ. ಪರಿಷತ್ತು ತಯಾರಿಸುತ್ತಿರುವ ಕನ್ನಡ-ಕನ್ನಡ ನಿಘಂಟಿನ ಕೆಲಸದಲ್ಲಿ ಅವರು ಅಮೂಲ್ಯವಾದ ಸೇವೆ ಸಲ್ಲಿಸಿದ್ದರು; ಹಳಗನ್ನಡದ ಪ್ರೌಢಕೃತಿಗಳ ಅಧ್ಯಯನದಲ್ಲಿ ತೊಡಗಿದ್ದವರಿಗೆ ದಾರಿದೀಪಗಳಂತಿದ್ದರು. ಇವರ ನಿಧನದಿಂದ ಕನ್ನಡದ ವಿದ್ವದ್ವ್ಯವಸಾಯಕ್ಕೆ ಸದ್ಯಕ್ಕೆ ತುಂಬಿ ಬರಲಾಗದ ನಷ್ಟವಾಗಿದೆ. ಅವರು ನಮ್ಮ ಭಾಷೆ ಸಾಹಿತ್ಯಗಳಿಗೆ ಸಲ್ಲಿಸಿದ ಶ್ರೇಷ್ಠ ಸೇವೆಯನ್ನು ಸ್ಮರಿಸುತ್ತಾ ಭಗವಂತನು ಅವರ ಆತ್ಮಗಳಿಗೆ ಶಾಂತಿ ನೀಡಲೆಂದು ಪ್ರಾರ್ಥಿಸುತ್ತೇವೆ.

ಕರ್ನಾಟಕದಲ್ಲಿ ಕನ್ನಡಭಾಷೆ, ಸಾಹಿತ್ಯಗಳ ಪ್ರಗತಿಗೆ ಸಂಬಂಧಿಸಿದ ಘಟನೆಗಳು ಚಟುವಟಿಕೆಗಳು ಪ್ರೌಢ ಕ್ಷೇತ್ರಗಳಲ್ಲಿ ಹೆಚ್ಚು ಹೆಚ್ಚಾಗಿ ಒದಗುತ್ತಿವೆ. ಈಚೆಗಂತೂ ಗಮನಾರ್ಹವಾದ ಕೆಲವು ಕಾರ್ಯಗಳು ಜರುಗಿವೆ. ಮೊನ್ನೆ ತಾನೇ ಧರ್ಮಸ್ಥಳದ ೩೯ನೆಯ ಸಾಹಿತ್ಯ ಸಮ್ಮೇಳನ ಎಂದಿಗಿಂತ ಹೆಚ್ಚು ವೈಭವದಿಂದ ನಡೆಯಿತು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಬರೆಹಗಾರರ ಸಮ್ಮೇಳನ ತುಂಬ ಯಶಪ್ರದವಾಗಿ ನೆರವೇರಿದೆ. ಪ್ರಸಿದ್ಧ ಕನ್ನಡ ಸಾಹಿತಿಗಳಾದ ಪದ್ಮಶ್ರೀ ವಿನಾಯಕ ಕೃಷ್ಣ ಗೋಕಾಕ್ ಅವರು ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ನೇಮಕಗೊಂಡು ಅಧಿಕಾರಸೂತ್ರಗಳನ್ನು ವಹಿಸಿದ್ದಾರೆ. ರಾಜ್ಯದ ಮೂರು ವಿಶ್ವವಿದ್ಯಾನಿಲಯಗಳ ಉಪಕುಲಪತಿಗಳೂ ಶೈಕ್ಷಣಿಕ ಪ್ರಗತಿಗೆ ಮಾತೃಭಾಷೆಯು ಶಿಕ್ಷಣ-ಮಾಧ್ಯಮವಾಗಬೇಕೆನ್ನುವ ಅಭಿಪ್ರಾಯದವರಾಗಿದ್ದಾರೆ. ಬೆಂಗಳೂರು ವಿಶ್ವವಿದ್ಯಾನಿಲಯದ ಎಲ್ಲ ಕಾಲೇಜುಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರ ಉತ್ತಮ ಕವನಗಳ ಪ್ರಾತಿನಿಧಿಕ ಸಂಕಲವೊಂದನ್ನು ಪ್ರಕಟಿಸುವುದಾಗಿ ವಿಶ್ವವಿದ್ಯಾನಿಲಯ ತಿಳಿಸಿದೆ. ಅಲ್ಲದೆ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಮೊನ್ನೆ ತಾನೇ ಕವಿ ಸಮ್ಮೇಳನವೊಂದು ನಡೆದಿದೆ. ಬೆಂಗಳೂರಿನ ಎಲ್ಲ ಕಾಲೇಜುಗಳ ಕನ್ನಡ ಅಧ್ಯಾಪಕರೂ ಸಭೆ ಸೇರಿ ಸುಮಾರು ತಿಂಗಳಿಗೊಮ್ಮೆ ಸಾಹಿತ್ಯ ವಿಷಯಕವಾದ ಚರ್ಚಾಗೋಷ್ಠಿ ನಡೆಸುತ್ತಿರಬೇಕೆಂದೂ, ಅದರ ಫಲವಾಗಿ ಹೊರಬಿದ್ದ

ಲೇಖನಗಳನ್ನು ಗ್ರಂಥರೂಪದಲ್ಲಿ ಹೊರತರಬೇಕೆಂದೂ ತೀರ್ಮಾನಿಸಿದೆ. ಸಾಹಿತ್ಯ ವಿಮರ್ಶೆಯ ಬೇಸಿಗೆ ಶಿಬಿರವೊಂದನ್ನು ನಡೆಸುವ ಯೋಚನೆಯಿದೆ. ಮೊನ್ನೆ ತಾನೇ ದೆಲ್ಲಿಗೆ ಹೋಗಿದ್ದ ಪರಿಷತ್ತಿನ ಅಧ್ಯಕ್ಷರು ಕೇಂದ್ರ ಸಚಿವರನ್ನು ಕಂಡು ಪ್ರಾದೇಶಿಕ ಭಾಷೆಗಳ ಪ್ರಗತಿಯ ಬಗ್ಗೆ ಕೆಲವು ವಿಷಯಗಳನ್ನು ಚರ್ಚಿಸಿದ್ದಾರೆ. ಇವೆಲ್ಲವೂ ಕನ್ನಡ ಭಾಷೆಯ ಮತ್ತು ಸಾಹಿತ್ಯದ ಪ್ರಗತಿಯ ಚಿಹ್ನೆಗಳಾಗಿ ತೋರುತ್ತಿವೆ.

ಈವರೆಗೂ ಪರಿಷತ್ಪತ್ರಿಕೆಯ ಸಂಪಾದಕರಾಗಿ ಕೆಲಸ ಮಾಡುತ್ತಿದ್ದ ಶ್ರೀ ಹಂಪ ನಾಗರಾಜಯ್ಯನವರು ಈಗ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾಗಿ ನೇಮಕಗೊಂಡಿರುವುದರಿಂದ ಅವರು ಪತ್ರಿಕೆಯ ಸಂಪಾದಕ ಸ್ಥಾನದಲ್ಲಿಯೂ ಉಳಿದು ಕೆಲಸ ಮಾಡುವುದು ಅಸಾಧ್ಯವಾಗುತ್ತದೆ. ಆದ್ದರಿಂದ ಅವರು ನಿವೃತ್ತರಾಗಲು ಬಯಸಿದ್ದಾರೆ. ಶ್ರೀ ಹಂಪನಾ ಅವರು ಈವರೆಗೆ ಪತ್ರಿಕೆಗೆ ಸಲ್ಲಿಸಿರುವ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

---

# ವಿನಿಮಯ ಪತ್ರಿಕೆಗಳು

**ದಿನಪತ್ರಿಕೆ :**

(೧) ಜನವಾಣಿ-ಬೆಂಗಳೂರು. (೨) ಸಂಯುಕ್ತ ಕರ್ನಾಟಕ-ಬೆಂಗಳೂರು.

**ವಾರಪತ್ರಿಕೆ :**

(೧) ಪ್ರಜಾಮತ-ಬೆಂಗಳೂರು. (೨) ಮೈಸೂರು ಗೆಜೆಟ್-ಬೆಂಗಳೂರು. (೩) ರಾಯಭಾರಿ-ಉಡುಪಿ. (೪) ವಿಕ್ರಮ-ಬೆಂಗಳೂರು. (೫) ಕಂಠೀರವ-ಮಂಗಳೂರು. (೬) ಪ್ರಭಾತ-ಮಂಗಳೂರು. (೭) ಕರ್ನಾಟಕ ವೈಭವ-ಬಿಜಾಪುರ. (೮) ಕರ್ಮವೀರ-ಹುಬ್ಬಳ್ಳಿ. (೯) ಬೆಳಕು-ಮೈಸೂರು. (೧೦) ನವಯುಗ-ಉಡುಪಿ. (೧೧) ಜನಪ್ರಗತಿ-ಬೆಂಗಳೂರು. (೧೨) ಕಾನಡಾವೃತ್ತ-ಕುಮಟ. (೧೩) ರಾಷ್ಟ್ರಮತ-ಮಂಗಳೂರು. (೧೪) ಕನ್ನಡಿಗ-ಹುಬ್ಬಳ್ಳಿ. (೧೫) ಪ್ರಪಂಚ-ಹುಬ್ಬಳ್ಳಿ. (೧೬) ಜನಸೇವಕ-ಅಂಕೋಲ. (೧೭) American Reporter-New Delhi. (೧೮) ಸಂದರ್ಶನ-ಬಿಜಾಪುರ. (೧೯) ಸಂದೇಶ-ಬೆಳಗಾಂವಿ. (೨೦) ಸತ್ಯವಾದಿ-ಮೈಸೂರು.

**ಮಾಸಪತ್ರಿಕೆ :**

(೧) ಅಧ್ಯಾತ್ಮಪ್ರಕಾಶ-ಹೊಳೇನರಸೀಪುರ. (೨) ಅಮರವಾಣಿ-ಯಾದಗಿರಿ. (೩) ಕಸ್ತೂರಿ-ಹುಬ್ಬಳ್ಳಿ. (೪) ಕತೆಗಾರ-ಬೆಂಗಳೂರು. (೫) ಕೊರವಂಜಿ-ಬೆಂಗಳೂರು. (೬) ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ-ಕಾಕಿನಾಡ. (೭) ಗುರುದೇವ-ಮೂಡಬಿದರೆ. (೮) ಜೀವನ-ಬೆಂಗಳೂರು. (೯) ಜಯ ಕರ್ನಾಟಕ-ಧಾರವಾಡ. (೧೦) ಜ್ಯೋತಿರ್ವಾಣಿ-ಬೆಂಗಳೂರು. (೧೧) ಜಯಂತಿ-ಧಾರವಾಡ. (೧೨) ಧನ್ವಂತರಿ-ಬಿಜಾಪುರ. (೧೩) ದಿವ್ಯಜ್ಯೋತಿ-ಮೈಸೂರು. (೧೪) ಪುಸ್ತಕ ಪ್ರಪಂಚ-ಮೈಸೂರು. (೧೫) ಧರ್ಮಬೋಧ-ಉಡುಪಿ. (೧೬) ಪ್ರಕಾಶಿನಿ-(ದ. ಕ.) (೧೭) ಪ್ರದೀಪ-ಧಾರವಾಡ. (೧೮) ಪರಿಮಳ-ನಂಜನಗೂಡು. (೧೯) ಮೈಸೂರು ವ್ಯವಸಾಯ ಸಂಶೋಧನ ಪತ್ರಿಕೆ-ಬೆಂಗಳೂರು. (೨೦) ಮೊಗವೀರ-ಬೊಂಬಾಯಿ. (೨೧) ಭಾರತ ಸರ್ಕಾರದ ಪ್ರಕಾಶನಭಾಗ-ನ್ಯೂ ಡೆಲ್ಲಿ. (೨೨) ಮಲೆನಾಡು-ಬೆಂಗಳೂರು-(೨೩) ಪಂಚಾಮೃತ-ಗದಗ. (೨೪) ಗಾಯನಗಂಗ-ಬೆಂಗಳೂರು. (೨೫) ತತ್ವವಾದ-ಬೆಂಗಳೂರು. (೨೬) ವಿನೋದ-ಬೆಂಗಳೂರು. (೨೭) ಶರಣಸಾಹಿತ್ಯ-ಬೆಂಗಳೂರು. (೨೮) ಸದ್ಧರ್ಮ ದೀಪಿಕೆ. ಮೈಸೂರು. (೨೯) ವಿವೇಕಾಭ್ಯುದಯ-ಮಂಗಳೂರು. (೩೦) ಯುಗಪುರುಷ-ಕಿನ್ನಿಗೋಳಿ. (೩೧) ಶ್ರೀ ಸುಧಾ-ಬೆಂಗಳೂರು. (೩೨) ಸುಬೋಧ-ಬೆಂಗಳೂರು. (೩೩) ಸೋವಿಯತ್ ದೇಶ-ಮದರಾಸು.

**ತ್ರೈಮಾಸಿಕ ಪತ್ರಿಕೆ :**

(೧) ಮೈಸೂರು ಸಕ್ಕರೆ-ಮಂಡ್ಯ. (೨) ಪ್ರಬುದ್ಧ ಕರ್ನಾಟಕ-ಮೈಸೂರು. ಪುಸ್ತಕಮಿತ್ರ-ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ, ಮದರಾಸು.

**Fortnightly** :—(1) British Information Service, Fortnightly Review of News and Events, Delhi.

**Monthly**:—1. P.E.N., Bombay. 2. Journal of Mysore State Educational Federation, Bangalore. 3. Mysore Information Bulletin, Bangalore. 4. British Book News, London. 5. The Indian Publisher and Book-seller, Bombay.

**By-Monthly**:—1. Journal of the University of Bombay, Bomby. 2. Public Affairs-Gokhale Institute Bangalore.

**Quarterly**:—1. Journal of the Mythic Society, Bangalore. 2. Journal of the Annamalai University, Annamalai Nagar. 3. Bulletin of the Deccan College Research Institute, Poona. 4. Annals of Bhandarkar Oriental Research Institute. 5. Bulletin of the School of Oriental and African Studies, London.

**Half-Yearly** :—Half-Yearly Journal of the Mysore University, Mysore.

# ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ. ಪೈ |
|---|---|---|
| ೧. | ಕನ್ನಡದ ಬಾವುಟ (ಐದನೆಯ ಮುದ್ರಣ ೧೯೫೮) .... .... | ೨=೦೦ |
| ೨. | ಸೀತಾ ಪರಿತ್ಯಾಗ (ಜೈಮಿನಿ ಭಾರತದಿಂದ ೧೯೬೧) .... .... | ೦=೬೫ |
| ೩. | ಜೇಮ್ಸ್ ಏಬ್ರಹಾಮ್ ಗಾರ್‌ಫೀಲ್ಡನ ಚರಿತ್ರೆ : ಕ್ಯಾಲಿಕೋ ಪ್ರತಿ (೧೯೩೦) .... | ೧=೫೦ |
| | (ನಾಲ್ಕನೆಯ ಮುದ್ರಣ) ಸಾದಾ ಪ್ರತಿ (೧೯೩೮) .... | ೧=೦೦ |
| ೪. | ಜ್ಯೋತಿರ್ವಿನೋದಿನಿ (೧೯೩೧) .... .... .... | ೨=೦೦ |
| ೫. | ಹೂಮಾಲೆ (೧೯೪೩) .... .... .... | ೦=೬೩ |
| ೬. | ಕನ್ನಡ ನಾಡಿನ ಚರಿತ್ರೆ: ಭಾಗ ೧ .... .... .... | |
| | ,, ಭಾಗ ೨ (ಎರಡನೆಯ ಮುದ್ರಣ ಅಚ್ಚಿನಲ್ಲಿದೆ) .... | ೨=೦೦ |
| | ,, ಭಾಗ ೩ ( ,, ೧೯೪೯) .... .... | ೧=೨೫ |
| ೭. | ಸರ್ವೋದಯ (೧೯೪೯) .... .... .... | ೦=೩೨ |
| ೮. | ಸಂಕಲನ (೧೯೪೯) .... .... .... | ೦=೬೩ |
| ೯. | ಕನ್ನಡದಲ್ಲಿ ಸುಧಾರಣೆಗಳು ೧೯೪೬ .... .... .... | ೦=೩೮ |
| ೧೦. | ಅರುಂಧತಿ (೧೯೫೧) .... .... .... | ೦=೨೫ |
| ೧೧. | ಶಿವಶರಣರ ಕೃತಿಗಳು (ಸ್ವರಪ್ರಸ್ತಾರ ಸಹಿತ ೧೯೫೨) .... .... | ೨=೦೦ |
| ೧೨. | ಹರಿದಾಸ ಸಾಹಿತ್ಯ–ಇಂಗ್ಲಿಷ್ ಉಪೋದ್ಘಾತದೊಡನೆ (೧೯೫೨) .... .... | ೧೦=೦೦ |
| ೧೩. | ,, ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ (೧೯೫೨) .... | ೮=೦೦ |
| ೧೪. | ಗಾಳಿಯಲ್ಲಿನ ಅಗೋಚರ ಶತ್ರುಗಳು (೧೯೫೮) .... .... .... | ೧=೨೫ |
| ೧೫. | ನಕ್ಷತ್ರದರ್ಶನ (೧೯೫೪) .... .... .... | ೧=೫೦ |
| ೧೬. | ಹರಿದಾಸ ಕೃತಿಮಂಜರಿ (೧೯೫೫) .... .... .... | ೧=೨೫ |
| ೧೭. | ಪ್ಲೇಟೋವಿನ ಆದರ್ಶರಾಜ್ಯ (೧೯೫೬) .... .... .... | ೧=೩೮ |
| ೧೮. | ವಾಚನ ಕಾವ್ಯಮಂಜರಿ (೧೯೫೫) .... .... .... | ೦=೧೯ |
| ೧೯. | ಚೇರಮ ಕಾವ್ಯಂ (೧೯೫೬) .... .... .... | ೨=೦೦ |
| ೨೦. | ಅನುಭವ ಮುಕುರಂ (೧೯೫೬) .... .... .... | ೦=೩೮ |
| ೨೧. | ಆಧುನಿಕ ಗದ್ಯ ಸಾಹಿತ್ಯ (ಎರಡನೆಯ ಮುದ್ರಣ ೧೯೬೧) .... .... | ೨=೫೦ |
| ೨೨. | ಕನ್ನಡದ ಅತ್ಯುತ್ತಮ ಸಣ್ಣ ಕತೆಗಳು (ಮೂರನೆಯ ಸಂಪುಟ ೧೯೫೮) .... | ೪=೦೦ |
| ೨೩. | ಕಾದಂಬರಿ–ಸಾಮಾನ್ಯ ಮನುಷ್ಯ (೧೯೫೭) .... .... .... | ೧=೦೦ |
| ೨೪. | ಉದ್ಭಟದೇವ ಚರಿತೆ (೧೯೫೭) .... .... .... | ೧=೫೦ |
| ೨೫. | ತ್ರಿಪುರದಹನ ಸಾಂಗತ್ಯ (೧೯೪೯) .... .... .... | ೦=೭೫ |
| ೨೬. | ಮೂರು ಸ್ಪರ್ಧಾ ನಾಟಕಗಳು (೧೯೪೯) .... .... .... | ೨=೭೫ |
| ೨೭. | ಕಾವ್ಯ ಸೌರಭ (೧೯೬೨) .... .... .... | ೨=೦೦ |
| **೨೮.** | **ಕರ್ಣಾಟಕ ಕವಿಚರಿತೆ (೧ನೆ ಭಾಗ) .... .... ....** | **೧೨=೦೦** |
| | **,, ,, ಲೈಬ್ರರಿ ಪ್ರತಿಗಳು ....** | **೧೫=೦೦** |
| ೨೯. | ಕಾವ್ಯಗಾಯನ ಕಲಾ ಸಂಗ್ರಹ .... .... .... | ೧=೨೫ |

ಪುಸ್ತಕ ವ್ಯಾಪಾರಿಗಳಿಗೆ ಕರ್ಣಾಟಕ ಕವಿಚರಿತೆ ವಿನಾ ಮಿಕ್ಕೆಲ್ಲ ಪುಸ್ತಕಗಳಿಗೆ ಶೇ. 25ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

Half-Yearly Journrl of the Kannada Literary Academy

ಶ್ರೀ ಪ್ಲವಂಗ






ಸಂಪುಟ ೫೨ ಜೂನ್ ೧೯೬೭ ಸಂಚಿಕೆ ೧

ಕನ್ನಡ ಸಾಹಿತ್ಯ ಪರಿಷತ್ತು

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ಜೂನ್ ೧೯೬೭

ಸಂಪುಟ : ೫೨   ಸಂಚಿಕೆ : ೧



ಸಂಪಾದಕರು :

ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

ಕೆ. ಮರುಳಸಿದ್ದಪ್ಪ

ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ

ಬೆಂಗಳೂರು – ೧೮

# ಕನ್ನಡ ಸಾಹಿತ್ಯ ಪರಿಷತ್ತಿನ
# ಕಾರ್ಯಕಾರಿ ಸಮಿತಿಯ ಸದಸ್ಯರು



---


ಮುದ್ರಕರು :

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ

ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ

ಬೆಂಗಳೂರು – ೧೮

## ವಿ ಷ ಯ ಸೂ ಚಿ ಕೆ

# Contents

# ಕನ್ನಡದಲ್ಲಿ ತದ್ಭವೀಕರಣ ಮತ್ತು ಪ್ರತಿಶಬ್ದ ಸೃಷ್ಟಿ*

ಎಸ್. ಆರ್. ಮಳಗಿ

## ಹಿನ್ನೆಲೆ

ಕನ್ನಡನುಡಿಗೆ ಎರಡು ಸಾವಿರ ವರುಷಗಳ ಉಜ್ವಲ ಇತಿಹಾಸವಿದೆ. ಈ ಸುದೀರ್ಘ ಕಾಲಾವಧಿಯಲ್ಲಿ ಅದು ಅನೇಕ ಪರಭಾಷಾಸಂಬಂಧ-ಸಂಘರ್ಷಣೆಗಳನ್ನು ಹೊಂದಿದೆ; ಆಗಾಗ ಕೆಲಸಲ ಪರಭಾಷಾ ದಾಳಿಗಳನ್ನೂ ಯಶಸ್ವಿಯಾಗಿ ಇದಿರಿಸಿದೆ. ಇದೆಲ್ಲದರ ಫಲವಾಗಿ ಬಂದ ಆಪತ್ತು-ಕುತ್ತುಗಳನ್ನು ರೂಢಿಸಿಕೊಂಡು, ಮೈಗೂಡಿಸಿಕೊಂಡು ಒಂದು ಹೊಸ ಬಗೆಯ ಪೋಷಣೆಯನ್ನೂ ಪಡೆದಿದೆ. ಈ ತೆರದ ಪೋಷಣೆಯ ಒಡನೊಡನೆಯೆ ಕನ್ನಡನುಡಿಯ ಮೂಲಸತ್ವ-ಸಂಪತ್ತಿನ ಶೋಷಣೆಯೂ ಆಗದಿಲ್ಲ. ಆದರೂ ನಮ್ಮ ನುಡಿ ಬದುಕಿ ಉಳಿದಿದೆ, ಬೆಳೆಯುತ್ತಲೆ ಇದೆ. ಇದು ನಮ್ಮ ನುಡಿಯಲ್ಲಡಗಿದ ಸತ್ವದ ಗುಣ, ತಿರುಳಿನ ಶಕ್ತಿ.

ಕನ್ನಡನುಡಿಗೆ ಮೊಟ್ಟಮೊದಲು ಸಂಬಂಧವುಂಟಾದುದು ಸಂಸ್ಕೃತ-ಪ್ರಾಕೃತ ಭಾಷೆಗಳದು. ಸಂಸ್ಕೃತವು ಅಂದಿನ ಅತಿಪ್ರಮುಖ ಸಾಂಸ್ಕೃತಿಕ ಭಾಷೆ. ಪಂಡಿತರ ಹಾಗೂ ವಿಶಿಷ್ಟರ ಭಾಷೆಯೆನಿಸಿದ್ದ ಅದು ಜನಸಾಮಾನ್ಯರ ಮೇಲೂ ಪ್ರಗಾಢ ಪರಿಣಾಮವನ್ನುಂಟುಮಾಡಿತು. ಪ್ರಬಲ ಹಾಗೂ ಸಾಮಾನ್ಯ ಸಂಸ್ಕೃತಿಗಳಲ್ಲಿ ಸಂಪರ್ಕ-ಸಂಘರ್ಷಣೆಗಳುಂಟಾದಾಗ ಬರಬರುತ್ತ ಸಾಮಾನ್ಯ ಸಂಸ್ಕೃತಿ ಪರಿವರ್ತನಗೊಳ್ಳುತ್ತ, ಪ್ರಬಲ ಸಂಸ್ಕೃತಿಯತ್ತ ಸಾವಕಾಶವಾಗಿ ಒಲೆಯುತ್ತ ಕೊನೆಯಲ್ಲಿ ಅದರ ಅಂಕಿತಕ್ಕೆ ಬಹುಮಟ್ಟಿಗೆ ಒಳಪಡುವುದು ಸ್ವಾಭಾವಿಕ. ಇತಿಹಾಸವು ಇದಕ್ಕೆ ಸಾಕ್ಷಿ. ಕನ್ನಡವು ಮೊಟ್ಟಮೊದಲಲ್ಲಿ ಅಂದಿನ ಜನಸಾಮಾನ್ಯರಲ್ಲೆಲ್ಲ ನೆಲಸಿದ್ದ ಪ್ರಾಕೃತದ ಪ್ರಭಾವಕ್ಕೂ ಅನಂತರ ಅದೇ ಕಾಲದಲ್ಲಿ ಪಂಡಿತವರ್ಗದಲ್ಲಿ ಪ್ರಚಲಿತವಿದ್ದ ಸಂಸ್ಕೃತದ ವರ್ಚಸ್ಸಿಗೂ ಒಳಪಟ್ಟುದು ಹೀಗೆಯೇ. ಕಾಲಾನುಕ್ರಮದಲ್ಲಿ ಕನ್ನಡವು ತನ್ನತನವನ್ನು ಮರೆಯುವಷ್ಟರ ಮಟ್ಟಿಗೆ ಈ ಪರಭಾಷೆಗಳಿಗೆ ವಶವರ್ತಿಯಾದುದು ಕಂಡುಬರುತ್ತಿದೆ. ಇದೆಲ್ಲದರ ಪರಿಣಾಮವಾಗಿ ಇಂದು ನಿರಕ್ಷರಕುಕ್ಷಿಗಳ ಬಾಯಲ್ಲೂ ನೂರಾರು ಸಂಸ್ಕೃತ ಪದಗಳು ಮೂಲರೂಪದಲ್ಲೊ ತದ್ಭವರೂಪದಲ್ಲೊ ನಲಿದಾಡುತ್ತಿವೆ. ಅಂದಿನ ಕನ್ನಡ ಪಂಡಿತರು ಸುಶಿಕ್ಷಿತರು ಎಂಬುವರು ಸಂಸ್ಕೃತ-ಪ್ರಾಕೃತಗಳ ನೆರವಿಗೆ ಕೈಯಾಂತು ನಿಂತುದು ಜನಸಾಮಾನ್ಯರಿಗೆ ಮತ್ತಷ್ಟು ಪ್ರೋತ್ಸಾಹಜನಕವೆನಿಸಿತು. ಹೀಗಾಗಿ ಸಂಸ್ಕೃತ-ಪ್ರಾಕೃತಗಳಿಗೆ ಕನ್ನಡದಲ್ಲಿ ಚಂಚುಪ್ರವೇಶಕ್ಕೆ ಎಡೆದೊರಕಿ ತಳವೆ ಕೊನೆಯಲ್ಲಿ ಕನ್ನಡವು ಈ ಪರಭಾಷೆಗಳ

---

* ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರ ಅಧ್ಯಯನಗೋಷ್ಠಿಯಲ್ಲಿ ದಿ. ೨೪-೩-೧೯೬೭ ಶುಕ್ರವಾರದಂದು ಓದಿದ ಲೇಖನ.

ಸ್ವಚ್ಛಂದ ವಿಹಾರಕ್ಕೆ ಬಿತ್ತರದ ಆಡುಂಬೊಲವಾಯ್ತು. ಇದರಲ್ಲಿ ಅಚ್ಚರಿಯೇನಿಲ್ಲ. ಆ ಕಾಲದ ತಾತ್ವಿಕ, ವೈಚಾರಿಕ, ವೈಜ್ಞಾನಿಕ ಕ್ಷೇತ್ರಗಳ ಬೇಡಿಕೆಗಳಿಗನುಗುಣವಾಗಿ ಈ ಕ್ಷೇತ್ರಗಳಲ್ಲಿ ಶ್ರೀಮಂತಭಾಷೆಯೆನಿಸಿದ್ದ ಸಂಸ್ಕೃತಕ್ಕೆ ಕನ್ನಡವು ಮಾರುಹೋಯ್ತು. ಒಂದು ದೃಷ್ಟಿಯಿಂದ ಕನ್ನಡದ ಶಬ್ದಭಂಡಾರವು ಇದರಿಂದ ಹಿಗ್ಗಲಿಸಿತೆಂದೇ ಹೇಳಬೇಕು. ಆದರೆ ಸಂಸ್ಕೃತದ ಈ ಸಂಬಂಧವು ಮೊದಮೊದಲು ಪೋಷಕವೆನಿಸಿದರೂ ಕೆಲಕಾಲಾನಂತರದಲ್ಲಿ ಅದೊಂದು ಕುತ್ತವಾಗಿಯೇ ಪರಿಣಮಿಸಿತು. ಆಗ ಕನ್ನಡದ ಕಣ್ತೆರೆಯಿತು. ಪಂಡಿತರು, ಕವಿಗಳು ತಂತಮ್ಮ ಕೃತಿಗಳಲ್ಲಿ ಹೆಚ್ಚುಹೆಚ್ಚಾಗಿ ಅಚ್ಚಗನ್ನಡ-ತಿರುಳ್ಗನ್ನಡಗಳ ಬಳಕೆಯನ್ನು ರೂಢಿಸುತ್ತ ಬಂದರಲ್ಲದೆ ಸಂಸ್ಕೃತ ಶಬ್ದಗಳ ಕನ್ನಡೀಕರಣಕ್ಕೆ ತೊಡಗಿ ತದ್ಭವಗಳ ಬರವಿಗೆ ದಾರಿಮಾಡಿ ಕೊಟ್ಟರು. ಹೀಗೆ ಕನ್ನಡದೊಳಗೆ ಸಂಸ್ಕೃತ-ಪ್ರಾಕೃತ ಭಾಷೆಗಳಿಂದುಂಟಾದ ತದ್ಭವಗಳ ರಾಶಿ ಬಹು ದೊಡ್ಡದಿದೆ.

## ೧. ತದ್ಭವೀಕರಣ

ಈ ತದ್ಭವೀಕರಣವು ಸ್ಥೂಲವಾಗಿ ಎರಡು ಬಗೆಗಳಲ್ಲಿ ನಡೆದುದು ಕಂಡುಬರುತ್ತದೆ. (೧) ಜನಸಾಮಾನ್ಯರ ಬಾಯಲ್ಲಿ ತಮ್ಮಿಷ್ಟಕ್ಕೆ ತಾವೇ ಸಹಜರೀತಿಯಲ್ಲಿ ರೂಢವಾದ ಸಹಜ ತದ್ಭವಗಳ ರೀತಿಯೊಂದು. (೨) ಸುಶಿಕ್ಷಿತರು ಹಾಗೂ ಶಬ್ದಜ್ಞರು ಕಂಡುಕೊಂಡ ಕೆಲವೊಂದು ವ್ಯಾಕರಣ ನಿಯಮಗಳಿಗನುಸಾರವಾಗಿ ರೂಪುಗೊಂಡ ವ್ಯಾಕೃತ ತದ್ಭವಗಳ ರೀತಿಯಿನ್ನೊಂದು. ಎರಡನೆಯ ಪ್ರಕಾರದ ವ್ಯಾಕೃತ ತದ್ಭವಗಳು ಹೆಚ್ಚಾಗಿ ಗ್ರಂಥಗಳಲ್ಲಿ ಕಾಣಸಿಗುವವು. ಆದರೆ ಒಟ್ಟಿನ ಪರಿಣಾಮವೆಂದರೆ, ಜನಸಾಮಾನ್ಯರು ಈ ಗ್ರಾಂಥಿಕ ತದ್ಭವಗಳನ್ನು ಲೆಕ್ಕಿಸದೆ ತಮ್ಮ ಸೊಲ್ಲಿನ ಸೌಲಭ್ಯದಂತೆ ರೂಢಿಸಿಕೊಂಡ ಸಹಜ ತದ್ಭವಗಳನ್ನೇ ಬಳಸುತ್ತ ಬಂದಿದ್ದಾರೆ. ಉದಾಹರಣೆಗೆ ಈ ಕೆಲವನ್ನು ಅವಲೋಕಿಸಬಹುದಾಗಿದೆ:—

| ಸಂಸ್ಕೃತ | ಸಹಜ ತದ್ಭವ | ವ್ಯಾಕೃತ ತದ್ಭವ |
|---|---|---|
| ಅಕ್ಷರ | ಅಕ್ಸರ | ಅಕ್ಕರ |
| ಔಷಧ | ಔಸ್ದಿ, ಅಗಸಿದ್ದೆ | ಔಸದ |
| ಕಾರ್ಯ | ಕಾರೇವು | ಕಜ್ಜ |
| ಮುಖ | ಮುಕ, ಮಕ | ಮೊಗ |
| ವಿಧಿ | ಇದಿ | ಬದಿ |
| ವಿಷ | ಇಸ | ಬಿಸ |
| ಸಾಕ್ಷಿ | ಸಾಕ್ಸಿ, ಸಾಕ್ಕಿ | ಸಕ್ಕಿ |
| ಆಷಾಡ | ಆಸ್ಯಾಡ | ಆಸಡಿ |
| ಸುಖ | ಸುಕ (ಪಂಪ) | ಸೊಗ |
| ಸ್ಫಟಿಕ | ಪಟಗ | ಪಳಿಕು |
| ಅರ್ಧ | ಅರ್ದ | ಅಡ್ಡ |

ಇದರಿಂದ ಒಂದು ಮಾತು ಸ್ಪಷ್ಟವಾಗುವುದು : ಸಂಸ್ಕೃತ ಪದಗಳನ್ನು ಮೂಲದಲ್ಲಿದ್ದಂತೆಯೇ ಬಳಸುವುದು ಕನ್ನಡಿಗರೆಲ್ಲರಿಗೆ ಸಾಧ್ಯವಿಲ್ಲ. ಕೆಲವರಿಗೆ ಸಾಧ್ಯವಿದ್ದರೂ ಹಾಗೆ ಪ್ರಯತ್ನ

ಪೂರ್ವಕವಾಗಿ ಬಳಸುವುದಕ್ಕಿಂತ ಅವುಗಳಿಗೆ ಕನ್ನಡದ ಉಚ್ಚಾರ ಸರಣಿಗೆ ಒಗ್ಗುವ ರೂಪುಗೊಡುವ ಪ್ರಯತ್ನವು ಸಾಧುವಾದುದೆಂದು ತಿಳಿದುಬಂದಿದೆ. ಅಂತಹ ತದ್ಭವೀಕರಣದ ಪ್ರಯತ್ನವು ಬುದ್ಧಿಪೂರ್ವಕವಾಗಿ ನಡೆಯುತ್ತಲೇ ಬಂದಿದೆ. ಶಬ್ದಾಕ್ಷರ ಕಟ್ಟುಕಟ್ಟಳೆಗಳನ್ನು ಜನತೆ ಪಾಲಿಸುತ್ತ ನಡೆದಿರಲಿಕ್ಕಿಲ್ಲ. ಸುಶಿಕ್ಷಿತರು, ತಜ್ಞರು, ಗ್ರಂಥಕರ್ತರು ಇದರಿಂದ ಹತಾಶರಾಗದೆ ತದ್ಭವೀಕರಣದ ಈ ಪ್ರಯತ್ನವನ್ನು ತಂತಮ್ಮ ಅರಿವಿಗನುಗುಣವಾಗಿ ಮುಂದುವರಿಸುತ್ತಲೆ ಬಂದಿದ್ದಾರೆ. ಇದರ ಪರಿಣಾಮವು ಜನಸಾಮಾನ್ಯರ ಮೇಲೂ ಆಗದೇ ಇಲ್ಲ. ವೈಯಾಕರಣಿಗಳ ನಿಯಮಗಳಿಗೆ ಒಳಪಟ್ಟು ಜನತೆಯ ಬಾಯ್ಬಳಕೆಯಲ್ಲಿ ರೂಢಿಗೊಂಡ ತದ್ಭವ ಪದಗಳ ಈ ಪಟ್ಟಿಯನ್ನು ನೋಡಬಹುದು:—

| ಸಂಸ್ಕೃತ | ಪ್ರಾಕೃತ ಹಾಗೂ ಸಹಜ ತದ್ಭವ | ಸಂಸ್ಕೃತ | ಪ್ರಾಕೃತ ಹಾಗೂ ಸಹಜ ತದ್ಭವ |
|---|---|---|---|
| ಆಕರ | ಆಗರ | ಗ್ರಂಥಿ | ಗಂಟು |
| ಕುಠಾರ | ಕೊಡಲಿ | ತೃತೀಯೆ | ತದಿಗೆ |
| ದೀಪಿಕೆ | ದೀವಿಗೆ | ವಾಲ | ಬಾಲ |
| ದ್ವಿತೀಯೆ | ಬಿದಿಗೆ | ವಾಪಿ | ಬಾವಿ |
| ಪಶು | ಹಸು | ವೇಗ | ಬೇಗ |
| ಪಾದುಕಾ | ಹಾವುಗೆ | ವೀಥಿ | ಬೀದಿ |
| ಫಲಕ | ಹಲಗೆ | ವೈಶಾಖ | ಬೇಸಗೆ |
| ವಲ್ಲಿ | ಬಳ್ಳಿ | ವಂಧ್ಯಾ | ಬಂಜೆ |
| ವಸತಿ | ಬಸದಿ | ಸಂಧ್ಯಾ | ಸಂಜೆ |
| | | ಸಂಸ್ಥೆ | ಸಂತೆ |

ಈ ಪಟ್ಟಿಗೆ ಕೊನೆಯಿಲ್ಲ. ಸಂಸ್ಕೃತ ಪದಗಳು ಹೀಗೆ ತದ್ಭವೀಕರಣ ಹೊಂದಿ ಅಚ್ಚಗನ್ನಡವೇನೋ ಎನಿಸುವಷ್ಟರ ಮಟ್ಟಿಗೆ ಕನ್ನಡನುಡಿಗಳಲ್ಲಿ ಸಾಮರಸ್ಯದಿಂದ ಬೆರಕೆಗೊಂಡಿವೆ. ಸಂಸ್ಕೃತವು ಹೀಗೆ ಕನ್ನಡಕ್ಕೆ ಸರಿಪಟ್ಟು ತದ್ಭವೀಕರಣ ಹೊಂದುವಲ್ಲಿ ಪ್ರಾಕೃತದ ನೆರವು ವಿಶೇಷವಿತ್ತೆಂಬುದು ಬಲ್ಲಿದರಿಗೆ ವಿದಿತವೇ ಇದೆ.

## ಸಂಸ್ಕೃತ-ಪ್ರಾಕೃತಗಳ ಕಾಲಾನಂತರ

ಸಂಸ್ಕೃತ-ಪ್ರಾಕೃತಗಳ ಅನಂತರದಲ್ಲಿ ಕನ್ನಡವು ಉರ್ದು, ಪೋರ್ತುಗೀಜ ಹಾಗೂ ಕೊನೆಯಲ್ಲಿ ಆಂಗ್ಲಭಾಷೆ-ಇವುಗಳ ಪ್ರಭಾವಕ್ಕೆ ಕಾಲಕ್ರಮದಲ್ಲಿ ಒಳಪಟ್ಟಿದೆಯಷ್ಟೆ? ಸಂಸ್ಕೃತ-ಪ್ರಾಕೃತಗಳನ್ನು ಅರಗಿಸಿಕೊಂಡು ರಕ್ತಗತವಾಡಿಕೊಂಡು ಬಲಗೊಂಡ ಕನ್ನಡವು ಈ ಪರಭಾಷೆಗಳ ದಾಳಿಗೆ ಎಳ್ಳಷ್ಟೂ ತತ್ತರಿಸಲಿಲ್ಲ. ಸಂಸ್ಕೃತವನ್ನು ಬರಮಾಡಿಕೊಂಡಂತೆಯೇ ಇವುಗಳಿಗೂ ಸುಸ್ವಾಗತವಿತ್ತು, ತನಗೆ ಅವಶ್ಯವೆನಿಸಿದ ಶಬ್ದಸಂಪತ್ತನ್ನು ಹಿಂದು ಮುಂದು ನೋಡದೆ ಸ್ವೀಕರಿಸಿದೆ, ಸ್ವೀಕರಿಸುತ್ತಲೇ ಇದೆ. ಆದರೆ ಅವುಗಳಿಗೆ ತದ್ಭವದ ಮುದ್ರೆಯೊತ್ತಿಯೇ ಅವುಗಳನ್ನು ಬರಮಾಡಿಕೊಂಡಿದೆಯೆಂಬುದನ್ನು ಮುಂದಿನ ಪಟ್ಟಿ ಉದಾಹರಣೆಗಳಲ್ಲಿ ಕಾಣಬಹುದಾಗಿದೆ:—

| ಅರಬ್ಬೀ ಇಲ್ಲವೆ ಉರ್ದು | ತದ್ಭವ |
|---|---|
| ಇಸ್ಮ್ | ಇಸಮು |
| ಕಚಹರೀ | ಕಚೇರಿ |
| ಕಾಗಜ್ | ಕಾಗದ |
| ಕುರ್ಸೀ | ಕುರ್ಚಿ |
| ಜಮಾ | ಜಮೆ-ಜಮಾಯಿಸು (ಧಾ) |
| ಜಮೀನ್ | ಜಮೀನು |
| ತಯ್ಯಾರ್ | ತಯಾರು-ತಯಾರಿಸು (ಧಾ) ತಯಾರಿಕೆ (ನಾ) |
| ತಾರೀಖ್ | ತಾರೀಖು |
| ಪರ್ವಾಹ್ | ಪರವಾಯಿ |
| ಷರಾಬ್ | ಸರಾಯಿ |
| ತಕರಾರ್ | ತಕರಾರು |
| ಮುದತ್ | ಮುದ್ಯತ್ತು |
| ನಾಝುಕ್ | ನಾಜೂಕು |
| ರಯೀಯತ್ | ರೈತ |
| ಸಲಾಹ್ | ಸಲಹೆ |

ಈ ತದ್ಭವಗಳ ರಾಶಿಯು ಬಹು ದೊಡ್ಡದು. ೮, ೯ನೆಯ ಶತಮಾನದಿಂದಲೆ ಮುಸಲ್ಮಾನರ ಸಂಬಂಧವು ಭಾರತದೊಡನೆ ಮತ್ತು ಕನ್ನಡದೊಡನೆ ಬಂದುದರಿಂದ ಅವರ ನುಡಿಗಳ ಪ್ರವೇಶವು ನಿಯಮಿತ ಕ್ಷೇತ್ರಗಳಲ್ಲಿ ಕೆಲಮಟ್ಟಿಗೆ ಆವಶ್ಯಕವೇ ಎನಿಸಿತು. ಹೀಗೆಯೆ ಕನ್ನಡದ ಗೆರೆಯಲ್ಲಿ ಪೋರ್ತುಗೀಜರ ಆಡಳಿತನೇರ್ಪಟ್ಟುದರ ಫಲವಾಗಿ ಇಸ್ತ್ರಿ, ಕಾಡತೂಸು, ಚಾವಿ, ಪಗಾರ, ಬಿಸ್ಕೂಟು, (ಬಿಸ್ಕೀಟು-ಬಿಸ್ಕತ್ತು) ಲಿಲಾವು, ಪೊಪ್ಪಾಯಿ, ಬಟಾಟೆ, ಹಾಪೂಸು, ಪಾಯರಿ—ಮೊದಲಾದ ಹಲವಾರು ಶಬ್ದಗಳು ಕನ್ನಡಕ್ಕೆ ಬಂದವು. ಇವುಗಳ ಮೇಲೆ ಮೂಡಿದ ಕನ್ನಡದ ವಿಶಿಷ್ಟ ಉಚ್ಚಾರಣೆಯು ಮುದ್ರೆ ಸ್ಪಷ್ಟವಿದೆ.

## ಆಂಗ್ಲಭಾಷೆಯ ಪ್ರಭಾವ

ಇನ್ನು ಆಂಗ್ಲಭಾಷೆಯ ಪ್ರಭಾವದತ್ತ ಹೊರಳೋಣ. ಇಂದು ನಾವು ಆಂಗ್ಲರ ಆಡಳಿತದಿಂದ ಮುಕ್ತರಾಗಿದ್ದರೂ ಅವರ ಭಾಷೆಯು ಹಿಡಿತದಿಂದ ಬಿಡುಗಡೆಯಿಲ್ಲ. ಅದು ಸಲ್ಲದು ಎಂಬವರೂ ಇದ್ದಾರೆ. ಇದರ ಕಾರಣವು ಆಂಗ್ಲಭಾಷೆಯು ಅಂತರ್ರಾಷ್ಟ್ರೀಯ ಮಹತ್ವದಲ್ಲಿದೆ. ಆಂಗ್ಲಭಾಷೆ ಇಂದು ಜಾಗತಿಕ ಭಾಷೆಯೇ ಎನಿಸುವಷ್ಟರಮಟ್ಟಿಗೆ ವಿಶ್ವದ ಎಲ್ಲೆಡೆಗಳಲ್ಲೂ ವ್ಯಾಪಿಸಿದೆ. ಭಾರತದಲ್ಲಿ ರಾಜಕೀಯ ಕಾರಣದಿಂದಾಗಿ ಸಕಲ ಕ್ಷೇತ್ರಗಳಲ್ಲೂ ಅದು ಇಂದು ಹೊಕ್ಕಿದೆ. ಆಂಗ್ಲಭಾಷೆಯೊಂದಿಗೆ ಆಂಗ್ಲಸಾಹಿತ್ಯ,ಆಂಗ್ಲಸಂಸ್ಕೃತಿ-ನಾಗರಿಕತೆಗಳ ಹಿಡಿತವೂ ಭಾರತೀಯರೆಲ್ಲರ ಮನಸ್ಸುಗಳ ಮೇಲೆ ಬಲವತ್ತರವಾಗಿದೆ. ಹಿಂದಕ್ಕೆ ಸಾವಿರಾರು ವರುಷಗಳ ನಿಕಟ ಸಂಪರ್ಕದಿಂದ ಸಂಸ್ಕೃತ ಭಾಷೆಯ ವರ್ಚಸ್ಸಿಗೆ—ಸಂಸ್ಕೃತ ಜನ್ಯಭಾಷೆಗಳ ಮಾತ್ರವಲ್ಲದೆ, ಅವುಗಳೊಂದಿಗೆ ಭಾರತೀಯ ದ್ರಾವಿಡಭಾಷಾವರ್ಗವೆಲ್ಲವೂ—ಒಳಗಾಗಿದ್ದಂತೆ ಇಂದು ಕೇವಲ

ಇನ್ನೂರು ಮುನ್ನೂರು ವರುಷಗಳ ಸಂಬಂಧದಿಂದಲೇ ಆಂಗ್ಲಭಾಷೆ ಎಲ್ಲ ಭಾರತೀಯ ಭಾಷೆಗಳ ಮೇಲೆ ಪ್ರಭುತ್ವವೊಂದನ್ನು ಸ್ಥಾಪಿಸಿದೆ. ಇದರ ಪರಿಣಾಮವು ಸಂಸ್ಕೃತ ಭಾಷೆಯಷ್ಟು ಆಳವಾದುದಾಗಿರಲಿಕ್ಕಿಲ್ಲ. ಸಂಸ್ಕೃತವು ಭಾರತೀಯ ಎಲ್ಲ ಭಾಷೆಗಳ ಪದರು ಪದರುಗಳಲ್ಲಿ ಸೇರಿ ಒಂದಾಗಿದೆ. ಇಷ್ಟೇ ಅಲ್ಲ, ಸಂಸ್ಕೃತವು ಕೊಟ್ಟ ಧರ್ಮ, ನೀತಿ, ಅಧ್ಯಾತ್ಮ, ವೇದಾಂತ, ಜೀವನ ಪದ್ಧತಿ, ಆಚಾರ-ವಿಚಾರ-ಇವೆಲ್ಲವೂ ಇಂದು ಭಾರತೀಯರಾಗಿರುವ ನಮ್ಮೆಲ್ಲರಲ್ಲಿ ರಕ್ತಗತವಾಗಿಬಿಟ್ಟಿವೆ. ಆಂಗ್ಲಭಾಷೆ ಎಷ್ಟೇ ಪ್ರಭುತ್ವ ನಡೆಸುತ್ತಿದ್ದರೂ ಅದರ ಪ್ರವೇಶವು ಭಾರತೀಯ ಜನಗಣಮನದ ಹೊರ ಅಂಗಳದಲ್ಲಿ ಮಾತ್ರ. ಹೃದಯದ ಗರ್ಭಗುಡಿಯಲ್ಲಿ ಅದಕ್ಕೆ ಪ್ರವೇಶ ಅಷ್ಟಾಗಿ ದೊರೆತಿಲ್ಲ. ಆದರೂ ಅದರ ಸಂಬಂಧವನ್ನು ಕಡೆಗಣಿಸುವಂತಿಲ್ಲ. ಅದು ಇಂದು ನವೀನ ನಾಗರಿಕತೆಯೊಂದರ ಪಾಠಗಳನ್ನು ನಮ್ಮ ಜನತೆಗೆ ಕಲಿಸಿದೆ. ಸುಶಿಕ್ಷಿತರೆನಿಸಿಕೊಂಡವರನ್ನು ಈ ನೂತನ ನಾಗರಿಕತೆಯಲ್ಲಿ ಪಳಗಿಸಿದೆ. ಬ್ರಿಟಿಶರ ಆಡಳಿತ ಕಾಲದಲ್ಲಿ ಬ್ರಿಟಿಶರನ್ನು ಅನುಕರಿಸುವ ವಿಧಾನಗಳಲ್ಲಿ ಗುರುವಿಗೆ ತಿರುಮಂತ್ರ ಹೂಡುವಷ್ಟರ ಮಟ್ಟಿಗೆ ನಮ್ಮ ಜನ ತರಬೇತಿ ಪಡೆದರು. ಈ ಹೊಸ ನಾಗರಿಕತೆಯ ಪ್ರಭಾವ ಹೊಸಮಾದರಿಯ ವೇಷ-ಭೂಷಣ, ಊಟ-ಉಪಚಾರ, ಕೋರ್ಟು-ಕಚೇರಿಗಳ ಆಡಳಿತ ವ್ಯವಹಾರ, ಸಾರ್ವಜನಿಕ ಕಾರ್ಯಕಲಾಪಗಳು, ಶಿಕ್ಷಣ ಪದ್ಧತಿ, ನಾಗರಿಕ ಸೌಕರ್ಯ-ಸೌಲಭ್ಯಗಳು-ಇತ್ಯಾದಿಗಳಲ್ಲೆಲ್ಲ ಒಡೆದು ಕಾಣುವಂತಿದೆ. ಅಲ್ಲದೆ, ಆಂಗ್ಲಭಾಷೆ ಸುಮಾರು ಇನ್ನೂರು ವರುಷಗಳ ಕಾಲ ಆಡಳಿತ ಹಾಗೂ ರಾಜಕೀಯ ಭಾಷೆಯಾಗಿದ್ದರಿಂದಲೂ ಅದರ ಜಾಗತಿಕ ಸ್ಥಾನ-ಮಾನಗಳು ಉನ್ನತವಾಗಿರುವುದರಿಂದಲೂ ಅದರ ಪರಿಚಯ, ವ್ಯಾಸಂಗ, ಅಭ್ಯಾಸಗಳು ಭಾರತೀಯರಿಗೆ ಅನಿವಾರ್ಯವಾದವು. ಆಂಗ್ಲಭಾಷೆಯಲ್ಲಿ ಅರ್ಧಮರ್ಧ ಮಾತುಕತೆ ನಡೆಸುವ, ಪತ್ರವ್ಯವಹಾರ ಮಾಡುವ, ಲೇಖನ ಕಾರ್ಯವೆಸಗುವ ನೈಪುಣ್ಯಪ್ರತಿಷ್ಠೆಯ ಲಕ್ಷಣವೆನಿಸಿದೆ. ಈ ಪ್ರವೃತ್ತಿ ಸುಶಿಕ್ಷಿತವರ್ಗದ ಮಟ್ಟಿಗೆ ನಿಲ್ಲದೆ ಸರ್ವವ್ಯಾಪಿಯಾಗಿ ಭಾರತೀಯ ಜನಸಾಮಾನ್ಯರಲ್ಲೂ ಕೆಲಮಟ್ಟಿಗೆ ಹಬ್ಬಿದೆ. ಇಂದು ಅನಕ್ಷರಸ್ಥನಿಗೂ ನೂರಾರು ಆಂಗ್ಲಪದಗಳು ಗೊತ್ತಿವೆ. ಆದರೆ ತಾನು ಬಳಸುವ ಆಂಗ್ಲ ನುಡಿಗಳನ್ನು ಅರ್ಥಯಿಸಿಕೊಳ್ಳುವಲ್ಲಿ ಮತ್ತು ಉಚ್ಚರಿಸುವಲ್ಲಿ ತನಗೆ ಹೊಳೆದಂತೆ, ಹಗುರೆನಿಸುವಂತೆ ಆತನು ಮಾರ್ಪಾಟು ಮಾಡಿಕೊಂಡಿದ್ದಾನೆ. ಸಂಸ್ಕೃತ ಶಬ್ದಗಳನ್ನು ನಿರಕ್ಷರಸ್ಥನು ಮಾರ್ಪಡಿಸಿಕೊಂಡ ವಿಧಾನವೇ ಸ್ಥೂಲವಾಗಿ ಆಂಗ್ಲನುಡಿಗಳ ಮಾರ್ಪಾಟಿನಲ್ಲಿ ಕಂಡುಬರುತ್ತಿದೆ. ಕೆಳಗಿನ ಈ ಉದಾಹರಣೆಗಳನ್ನು ಗಮನಿಸಬಹುದು:

| | | | | |
|---|---|---|---|---|
| ಸಿಮೆಂಟು | ಹಾಟೆಲ್ಲು | ಬೂಟು | ತಿಕೀಟು | ಟೇಸನ್ನು |
| ಬಕೆಟ್ಟು | ಪಿಲೇಟು | ಹ್ಯಾಟು | ಪೋಸ್ಟು | ಎಕರೆ |
| ಡ್ರಮ್ಮು | ನಂಬರು | ಏರೋಪ್ಲೇನು | ಮಿನಿಸ್ಟರು | ಇಲೆಕ್ಸನ್ನು |
| ಬಂಗಲೆ | ಕೋಟು | ರೇಡಿಯೋ | ಚೀಫ್ ಮಿನಿಸ್ಟರು | ಕಾಲೇಜು |
| ಗೇಟು | ಶರ್ಟು | ಡಾಕ್ಟರು, ಡಾಗದರು | ಎಕ್ಸ್‌ಬಸ್ಸು | ಕಲೇಕಟರು |
| | | ಸಮನಸ್ಸು | ರೈಲು | |

ಇದಿನ್ನೂ ನೂರಾರು ನುಡಿ ಬೆಳೆಯಬಲ್ಲ ಪಟ್ಟಿ. ಈ ಆಂಗ್ಲ ಭಾಷೆಯ ಶಬ್ದಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿದಲ್ಲಿ ಇವು ಹೇಗೆ ತದ್ಭವೀಕರಣ ಹೊಂದಿದ ರೀತಿಯಲ್ಲಿವೆ ಎಂಬುದು ಹೊಳೆಯದಿರದು:—(೧) ಪದಾಂತ್ಯದ ವ್ಯಂಜನವು ಉಕಾರಾಂತ ತಳೆದಿದೆ; ಒಮ್ಮೊಮ್ಮೆ

ದ್ವಿತ್ವದೊಂದಿಗೆ ಉಕಾರ ತಳೆದಿವೆ. ೨) ವಿಜಾತೀಯ ದ್ವಿತ್ವಗಳಲ್ಲಿಯ ಶ, ಸಕಾರಗಳು ಷಕಾರಗಳಾಗಿವೆ. ೩) ಆ-ಓ ಗಳ ನಡುವಿನ ಸ್ವರವು ಈ ಎರಡು ಸ್ವರಗಳಲ್ಲಿ ಒಂದಾಗಿ ಒಲೆಯುವ ಧೋರಣೆ ಕಂಡುಬರುತ್ತಿದೆ. ೪) ವಿಜಾತೀಯ ದ್ವಿತ್ವಗಳು ಬಹುಮಟ್ಟಿಗೆ ಶಿಥಿಲಗೊಂಡಿವೆ, ಇಲ್ಲವೆ ಒತ್ತನ್ನು ಕಳೆದುಕೊಳ್ಳುತ್ತವೆ. ೫) ಮಹಾ ಪ್ರಾಣಾಕ್ಷರಗಳು ಅಲ್ಪಪ್ರಾಣಾಕ್ಷರಗಳಾಗುತ್ತಿವೆ. ಅಂತೂ ಆಂಗ್ಲ ನುಡಿಗಳ ತದ್ಭವೀಕರಣದಲ್ಲೂ ಸಂಸ್ಕೃತದ ತದ್ಭವಗಳಲ್ಲಿ ಕಂಡುಬರುವ ಮಾರ್ಪಾಟುಗಳೇ ಸಾಮಾನ್ಯವಾಗಿ ಘಟಿಸುತ್ತವೆ. ತಜ್ಞರು ಈ ಮಾರ್ಪಾಟುಗಳ ಗುಟ್ಟನ್ನರಿತು ಕನ್ನಡಕ್ಕೆ ಆವಶ್ಯಕವೆನಿಸುವ ಆಂಗ್ಲ ನುಡಿಗಳನ್ನು ಕನ್ನಡದ ನಾಲಗೆಗೆ ಒಗ್ಗುವಂತೆ, ಕನ್ನಡದ ಸೊಲ್ಲಿಗೆ ಸಲ್ಲುವಂತೆ ಬುದ್ಧಿಪುರಸ್ಸರವಾಗಿ ತಿದ್ದಿ ತದ್ಭವಗಳನ್ನಾಗಿ ಮಾಡಿ ಸ್ವೀಕರಿಸುವುದು ಉಚಿತವಲ್ಲವೆ? ಹಾಗೆ ಮಾಡಿದಲ್ಲಿ ಆಂಗ್ಲ ನುಡಿಗಳು ಸಂಸ್ಕೃತದ ಸಹಸ್ರಾರು ತದ್ಭವಗಳಂತೆ ಕನ್ನಡದ ನಾಲಗೆಯ ಸಹಜ ಸೊತ್ತಾಗಿ ಕನ್ನಡ ಶಬ್ದಭಂಡಾರದಲ್ಲಿ ಶಾಶ್ವತವಾಗಿ ಉಳಿಯಬಹುದಾಗಿದೆ. ನೂರಾರು ವರ್ಷಗಳ ಕಾಲ ಗತಿಸಿದಂತೆ ಆಂಗ್ಲ ನುಡಿಗಳಲ್ಲಿಯ ಮೂಲ ಉಚ್ಚರಣೆಯ ವಿಶಿಷ್ಟತೆ-ವಿಕ್ಲಿಷ್ಟತೆಗಳಡಗಿ ಕನ್ನಡದ ನುಡಿಗಳೇನೋ ಎಂಬಂತೆ ಅವು ಕನ್ನಡದ ಪದಸಂಪತ್ತನ್ನು ಹೆಚ್ಚಿಸುವಲ್ಲಿ ಸಂದೇಹವಿಲ್ಲ. ಕೆಲವಾರು ಆಂಗ್ಲನುಡಿಗಳು ಹೀಗೆ ಕಾಲಚಕ್ರದ ಅಡಿಗೆ ಸಿಲುಕಿ ಸವೆದು ಕನ್ನಡದ ಸೊಲ್ಲಿನಿಂಪುವಡೆದು ಮೂಲವನ್ನೇ ಮರೆಸಿರುವಂತೆ ಮಾರ್ಪಟ್ಟಿಲ್ಲವೆ? ಕೆಳಗಿನ ಈ ಉದಾಹರಣೆಗಳು ಈ ಮಾತನ್ನು ಪುಷ್ಟೀಕರಿಸುತ್ತವೆ:—

ಆಸ್ಪತ್ರೆ, ಕಂದೀಲು, ಕಪಾಟು, ಕಂತ್ರಾಟ, ಬಾಟ್ಲಿ, ಬಾಟ್ಲು,
ಮಾಸ್ತರ್, ಮೇಸ್ತ್ರು, ರಶೀದಿ, ಲಂಗರು, ಲಾಟನ್ನು, ಲಾಂದರು, ಇತ್ಯಾದಿ.

—ಹೀಗೆ ಕನ್ನಡದ ಉಚ್ಚರಣೆಗಳವಡುವಂತೆ ಅನ್ಯದೇಶ್ಯಗಳನ್ನು ಮಾರ್ಪಡಿಸಿಕೊಳ್ಳಬಲ್ಲ ಸಹಜಶಕ್ತಿ-ಸಾಮರ್ಥ್ಯಗಳು ಕನ್ನಡದ ನಾಲಗೆಗುಂಟೆಂಬುದನ್ನು ಜನಸಾಮಾನ್ಯರ ಬಾಯ್ಬಳಕೆಯ ಈ ಸಹಜ ತದ್ಭವೀಕರಣವು ಉದ್ಘೋಷಿಸುತ್ತಿದೆಯಲ್ಲವೆ?

ಇಂತಹ ಆಂಗ್ಲಭವಗಳ ರಾಶಿ ಈಗಾಗಲೆ ಕನ್ನಡದಲ್ಲಿ ಉಳಿದೆಲ್ಲ ಭಾರತೀಯ ಭಾಷೆಗಳಲ್ಲಿಯಂತೆಯೆ ಪ್ರತಿವರ್ಷದಲ್ಲೂ ಕೂಡಿ ಬೀಳುತ್ತಲೇ ಇದೆ. ಯಾರ ಇಚ್ಛೆ-ಅನಿಚ್ಛೆಗಳನ್ನೂ ಅದು ಅವಲಂಬಿಸಿಲ್ಲ. ಸುಶಿಕ್ಷಿತರು, ತಜ್ಞರು ಇಲ್ಲಿ ಮಾಡಬೇಕಾದ ಕರ್ತವ್ಯವನ್ನು ಈಗ ಸೂಚಿಸಬಯಸುತ್ತೇನೆ:—ಹಲವಾರು ಕಾರಣಗಳಿಂದ ಕನ್ನಡದಲ್ಲಿ ಕೂಡಿ ಬೀಳುತ್ತಿರುವ ಈ ಆಂಗ್ಲ ನುಡಿಗಳ ರಾಶಿಯನ್ನು ಕೂಲಂಕಷವಾಗಿ ಶೋಧಿಸಿ ಅಭ್ಯಸಿಸಬೇಕು. ಪ್ರತಿಯೊಂದು ಶಬ್ದದ ಓರೆ-ಕೋರೆಗಳನ್ನು ವೈಯಾಕರಣ ಬುದ್ಧಿಯಿಂದ ತಿದ್ದಿ, ಪರಿಷ್ಕರಿಸಿ, ಉಚ್ಚರಣೆಯಲ್ಲಿ ಕನ್ನಡಕ್ಕೆ ಸರಿಪಡಿಸಿಕೊಂಡು ಅದನ್ನು ಸ್ವೀಕರಿಸಬೇಕು. ಹೀಗೆ ಆಂಗ್ಲ ನುಡಿಗಳ ತದ್ಭವೀಕರಣದ ಪ್ರಯೋಗವು ಶಾಸ್ತ್ರೀಯ ರೀತಿಯಲ್ಲಿ ದೊಡ್ಡ ಪ್ರಮಾಣದಲ್ಲಿ ನಡೆಯಬೇಕಾದ ಕಾಲವಿದೀಗ ಸನ್ನಿಹಿತವಾಗಿದೆ. ಕನ್ನಡದ ಹಿಂದಿನ ವ್ಯಾಕರಣಕಾರರು ಸಂಸ್ಕೃತ-ಪ್ರಾಕೃತಗಳಿಂದ ಬಂದ ತದ್ಭವಗಳ ಸಂಸ್ಕರಣಕ್ಕೆಂದು ಕೆಲವೊಂದು ಸಾಮಾನ್ಯ ವ್ಯಾಕರಣ ನಿಯಮಗಳನ್ನು ಸಂಶೋಧಕ ಬುದ್ಧಿಯಿಂದ ಗೊತ್ತುಪಡಿಸುತ್ತಿದ್ದರಷ್ಟೆ? ಹಾಗೆ ಗೊತ್ತುಪಡಿಸಿದ್ದ ನಿಯಮಾವಳಿಯನ್ನು ಅವಶ್ಯಕವೆನಿಸುತ್ತಿದ್ದ ಇನ್ನೂ ಹೆಚ್ಚಿನ ತದ್ಭವೀಕರಣಕ್ಕೂ ಅವರು ಬಳಸುತ್ತಿದ್ದಂತೆ ಕಾಣುತ್ತದೆ. ಕೇಶಿರಾಜನ ಅಪಭ್ರಂಶ ಪ್ರಕರಣವು ಈ ಮಾತಿಗೊಂದು ನಿದರ್ಶನ. ವೈಜ್ಞಾನಿಕ ಪರೀಕ್ಷೆಯ ಅತ್ಯಮೂಲ್ಯ ಭಂಡಾರವೆನಿಸಿರುವ ಆಂಗ್ಲ ಭಾಷೆಯ ನೆರವು ಕನ್ನಡ ವೈಜ್ಞಾನಿಕ ಶಬ್ದಕೋಶಕ್ಕೆ

ಇಂದು ತೀರ ಆವಶ್ಯಕವಿರುವಾಗ ಮೇಲೆ ಸೂಚಿಸಿದಂತೆ ಆಂಗ್ಲ ನುಡಿಗಳ ವೈಯಾಕರಣ ಬುದ್ಧಿಯು ಶಾಸ್ತ್ರೀಯ ರೀತಿಯ ತದ್ಭವೀಕರಣದ ಅನಿವಾರ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಎಂದರೆ, ಇಂದಿನ ಕನ್ನಡ ವ್ಯಾಕರಣ ಗ್ರಂಥಗಳಲ್ಲಿ ಸಂಸ್ಕೃತ-ಪ್ರಾಕೃತಗಳಿಂದುಂಟಾದ ವ್ಯಾಕೃತ ತದ್ಭವಗಳ ಪಟ್ಟಿಯೊಂದಿಗೆ ವ್ಯಾಕೃತ ಆಂಗ್ಲಭವಗಳ ಮತ್ತು ಇನ್ನಿತರ ಅನ್ಯದೇಶ್ಯಗಳ ಪಟ್ಟಿಯೊಂದಕ್ಕೆ ಉಚಿತ ಅವಕಾಶವೀಯುವುದೂ ಹಲವಾರು ದೃಷ್ಟಿಗಳಿಂದ ತುಂಬ ಫಲಪ್ರದವೆನಿಸದಿರದು.

## ೨. ಪ್ರತಿಶಬ್ದ ಸೃಷ್ಟಿ

### (ಅ) ವ್ಯಾವಹಾರಿಕ ಭಾಷೆ :

ಆಂಗ್ಲಭವಗಳ ರಾಶಿಯೊಂದು ಕನ್ನಡದಲ್ಲಿ ಕಂಡಾಬಟ್ಟೆಯಾಗಿ ಬೆಳೆಯಲೆಂಬುದೇ ನನ್ನ ವಾದವೆಂದು ಮಾತ್ರ ಇದರಿಂದ ಊಹಿಸಕೂಡದು. ಇಂದು ಆಂಗ್ಲಭಾಷಾ ಮಹಾಪೂರದ ಆದಮ್ಯ ಒತ್ತಡಕ್ಕೆ ಕನ್ನಡದಲ್ಲಿ ಯೋಗ್ಯ ಮಾರ್ಗವನ್ನು ಕಲ್ಪಿಸಿಕೊಡಲು ತದ್ಭವೀಕರಣದೊಂದಿಗೆ ಇನ್ನೂ ಒಂದು ವಿಧಾನವಿದೆಯೆಂಬುದು ತಮಗೆಲ್ಲ ಗೊತ್ತೇ ಇದೆ. ಅದು ಪ್ರತಿಶಬ್ದಸೃಷ್ಟಿ (Coining of Equivalents) ಇದೂ ಕನ್ನಡದಲ್ಲಿ ಇದೀಗ ಕುದುರುತ್ತಿದೆ. ಸಂಸ್ಕೃತ ಶಬ್ದಗಳಿಗೆ ಕನ್ನಡದಲ್ಲಿ ಪ್ರತಿಶಬ್ದಗಳನ್ನು ಹುಟ್ಟಿಸಿಕೊಳ್ಳುತ್ತ ಬಂದಂತೆ ಕನ್ನಡದ ಬುದ್ಧಿ ಆಂಗ್ಲ ಪದಗಳ ಪ್ರತಿಶಬ್ದಗಳನ್ನೂ ಕಾಲಕಾಲಕ್ಕೆ ಆವಶ್ಯಕವೆನಿಸಿದಾಗ ನಿರ್ಮಿಸುತ್ತಲೇ ಬಂದಿದೆಯಷ್ಟೆ?

(i) ಪ್ರತಿಶಬ್ದ ನಿರ್ಮಿತಿಯಲ್ಲಿ ಹಲವಾರು ವಿಧಾನಗಳ ಪ್ರಯೋಗಗಳನ್ನು ರೂಢಿಸಿ ನೋಡುವುದೂ ಈಗ ಕಂಡು ಬರುತ್ತಿದೆ. ಒಂದು ಶಬ್ದಕ್ಕೆ ನಮ್ಮ ನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹಲವಾರು ಪ್ರತಿಶಬ್ದಗಳು ಹುಟ್ಟಿ ಬಳಕೆಯಲ್ಲಿ ಆಗಾಗ ತಲೆದೋರುತ್ತಿರುವವಲ್ಲದೆ ಆ ಶಬ್ದದ ತದ್ಭವರೂಪಗಳು ಅವುಗಳೊಡನೆಯೇ ಏಕಕಾಲಕ್ಕೆ ಚಲಾವಣೆಯಲ್ಲಿ ಬರುತ್ತಿರುವ ಸಂಭವವೂ ಇಲ್ಲದಿಲ್ಲ. ಈ ಅನೇಕ ಪದಪ್ರಯೋಗಗಳಲ್ಲಿ ಯಾವುದೊಂದನ್ನೋ ಕೆಲವನ್ನೋ ಉಳಿಸಿಕೊಂಡು ಇನ್ನುಳಿದುವನ್ನು ಅಳಿಸಿಬಿಡುವ ಅಧಿಕಾರವನ್ನು ಕಾಲಪ್ರವಾಹಕ್ಕೆ ಬಿಟ್ಟುಕೊಡುವುದೇ ವಿಹಿತ. ಹೊಸ ಶಬ್ದಗಳ ಹುಟ್ಟು-ಬೆಳವಣಿಗೆಯಲ್ಲಿ ಯಾರೊಬ್ಬರ ಹಟ-ಮುರವತ್ತುಗಳಿಗೂ ಇಂಬಿಲ್ಲ. ಕೆಳಗಿನ ಈ ಪ್ರತಿಶಬ್ದಗಳನ್ನು ಪರಿಶೀಲಿಸಬಹುದು :—

**ಆಂಗ್ಲಭವ : ಕನ್ನಡ ಪ್ರತಿಶಬ್ದ**

| | |
|---|---|
| ಇಲೆಕ್ಟ್ರಿಕ್ ಲ್ಯಾಂಪು | —ವಿದ್ಯುದ್ದೀಪ, ಮಿಂಚುದೀವಿಗೆ |
| ಆ್ಯಟಂ ಬಾಂಬು | —ಅಣ್ವಸ್ತ್ರ, ಅಣುಶಸ್ತ್ರ<br>ಅಣುಶಸ್ತ್ರಾಸ್ತ್ರ, ಅಣುಬಾಂಬು<br>ಪರಮಾಣು ಪ್ರಸ್ಫೋಟ, ಪರಮಾಣುಗೋಲ (ರಘುವೀರ ನಿಘಂಟು) |
| ಆ್ಯಡ್ಜರ್ನ್ | —ಮುಂದುವರಿಸು, ಮುಂದಕ್ಕೆ ಹಾಕು, ಸ್ಥಗಿತಗೊಳಿಸು |
| ರೇಡಿಯೊ | —ಬಾನುಲಿ, ಆಕಾಶವಾಣಿ, ಬಾಂದನಿ |

ಕಾರ್ಡು —ಕಾಗದ, ರಟ್ಟುಚೀಟಿ
ರೇಲ್ವೆ ಟ್ರೇನು —ಉಗಿಬಂಡಿ, ಹೊಗೆಬಂಡಿ,
ರೈಲುಗಾಡಿ, ರೈಲು.
ಸಾನೆಟ್ —ಅಷ್ಟಷಟ್ಪದಿ, ಸುನೀತ
ಸಟಾಯರ್ —ವಿಡಂಬನೆ, ಶತಾರಿ, ಚುಚ್ಚುಮಾತು.
ಪೋಸ್ಟ್ ಆಫೀಸು —ಅಂಚೆಕಚೇರಿ, ಟಪ್ಪಾಲ ಆಫೀಸು.
ವಾಯರು | ತಂತಿ, ತಾರು
ಟೆಲಿಗ್ರಾಮು |
ಮೂವ್ಹೀಸಿನೇಮಾ—ಚಲಚ್ಚಿತ್ರ
ಟಾಕಿ ,, —ವಾಕ್‌ಚಿತ್ರ, ವಾಕ್‌ಪಟ
ಟ್ರಾಜೆಡಿ | ದುರಂತ ನಾಟಕ, ರುದ್ರನಾಟಕ
| ಆವಿದ್ಧ ಪ್ರಯೋಗ
ಪ್ರೊಹಿಬಿಶನ್ನು —ಪಾನನಿರೋಧ, ಪಾನನಿಷೇಧ
ಫೈನಾನ್ಸ್ ಮಿನಿಸ್ಟರು—ಅರ್ಥಮಂತ್ರಿ, ಹಣಕಾಸಿನ ಮಂತ್ರಿ
ರೆವೊಲ್ಯುಶನ್ನು —ಕ್ರಾಂತಿ, ವಿಪ್ಲವ, ದೊಡ್ಡ ಬದಲಾವಣೆ
ಎವೊಲ್ಯುಶನ್ನು —ಉತ್ಕ್ರಾಂತಿ, ವಿಕಾಸ, ಉದ್ವಿಕಾಸ
ಮೆಂಬರು —ಸದಸ್ಯ, ಸಭಾಸದ
ಮೀಟಿಂಗು —ಸಭೆ
ಹೋಟಿಲ್ಲು, ಹೋಟೆಲ್ಲು—ಖಾನಾವಳಿ, ಊಟದ ಮನೆ, ಫಲಾಹಾರದಂಗಡಿ
ಫರಾಳದಂಗಡಿ, ನಂಬರ ಮನೆ.
ವಾರಂಟು —ಆಜ್ಞಾಪತ್ರ, ಪ್ರಮಾಣಪತ್ರ, ಅಧಿಪತ್ರ
ಅಧಿಕಾರಪತ್ರ.
ಸಮನ್ಸು-ಸಮನಸ್ಸು—ಆಹ್ವಾನ
ಚಾಲೆಂಜು —ಪ್ರತ್ಯಾಹ್ವಾನ, ಆಹ್ವಾನ
ಇನ್ವಿಟೇಶನ್ನು —ಆಮಂತ್ರಣ, ನಿಮಂತ್ರಣ, ಆಹ್ವಾನ, ಔತಣ, ಕರೆ.

—ಮಾದರಿಗಾಗಿ ಕೆಲವನ್ನು ಮಾತ್ರ ಇಲ್ಲಿ ಕೊಟ್ಟಿದೆ. ಒಂದೆರಡನ್ನು ಈಗ ಪರಿಶೀಲಿಸಬಹುದು. 'ಆಟಂಬಾಂಬ್' ಎಂಬಲ್ಲಿ ಇಂದಿನ ಪತ್ರಿಕೆಗಳು ಅಣ್ವಸ್ತ್ರ, ಅಣುಶಸ್ತ್ರ, ಅಣುಶಸ್ತ್ರಾಸ್ತ್ರ, ಅಣುಬಾಂಬು - ಮೊದಲಾದ ಪದಗಳನ್ನು ಪ್ರಯೋಗಿಸುತ್ತಿವೆ. ಬಾಂಬು ಎಸೆಯಲ್ಪಡುವುದಾದ್ದರಿಂದ ಅದನ್ನು 'ಶಸ್ತ್ರ' ಎನ್ನುವುದಕ್ಕಿಂತ 'ಅಸ್ತ್ರ' ಎನ್ನುವುದು ಲೇಸಲ್ಲವೆ? 'ರೇಡಿಯೋ' ಶಬ್ದದ ಪ್ರತಿಶಬ್ದಗಳಾಗಿರುವ ಬಾನುಲಿ, ಆಕಾಶವಾಣಿ, ಎಂಬೆರಡರಲ್ಲಿ 'ಆಕಾಶವಾಣಿ' ಎಂಬುದಕ್ಕೆ ಭಾರತೀಯ ಪೌರಾಣಿಕ ಕಥೆಗಳಲ್ಲಿ ಬೇರೊಂದು ಅರ್ಥಪ್ರತೀತಿಯಿದೆಯಲ್ಲವೆ? ಆದರೂ 'ಆಕಾಶವಾಣಿ' ಪದವು ಕೇಂದ್ರಸರಕಾರದಿಂದ ಸ್ವೀಕೃತವಾಗಿದೆ. ಅದರೊಡನೆ ಹಲವೆಡೆಗಳಲ್ಲಿ 'ಬಾನುಲಿ' ಪದವೂ ಜನಬಳಕೆಯಲ್ಲಿದೆ. ಮತ್ತು ಇದು ಅಚ್ಚಗನ್ನಡ ಪದವಾಗಿದ್ದು ಕನ್ನಡದಲ್ಲಿ ನೆಲೆಗೊಳ್ಳುವಂತಿದೆ. ಇನ್ನು 'ಕ್ರಾಂತಿ' ಶಬ್ದದ ಚರಿತ್ರೆಯನ್ನು ಗಮನಿಸಬೇಕು. ೫೦, ೬೦ ವರುಷಗಳ ಹಿಂದೆ ಅಷ್ಟೊಂದು ಬಳಕೆಯಲ್ಲಿಲ್ಲದ ಈ

ಶಬ್ದವು ಈಗ ಬಳಕೆ ಹೆಚ್ಚಿದಂತೆ - ಜನಪ್ರಿಯತೆ ಪಡೆದಿದೆ. To adjourn ಎಂಬುದಕ್ಕೆ 'ಮುಂದುವರಿಸು' ಎಂಬುದು ಸಮರ್ಪಕವಾಗಿಲ್ಲ. ಮುಂದು - ಹರಿಸು - ಮುಂದುವರಿಸು ಎಂದರೆ 'ಮುಂದೆ ಸಾಗಿಸು'-to continue ಎಂಬರ್ಥ ಬರುತ್ತದೆ. ಅಂಚೆ, ಟಪ್ಪಾಲು, ತಾರು, ತಂತಿ ಎಂಬವು ಆಯಾ ಪ್ರದೇಶಗಳಲ್ಲಿ ಎಲ್ಲರ ಮನೆಮಾತಾಗಿವೆ. sonnet ಶಬ್ದವನ್ನು 'ಸುನೀತ'ವೆಂದೂ satire ಶಬ್ದವನ್ನು 'ಶತಾರಿ' ಎಂದೂ ಕನ್ನಡಿಸುವ ಹವಣಿಕೆಯಲ್ಲಿ ಮೂಲಶಬ್ದದ ಸೊಲ್ಲಿನ ಮೋಹ ಕಂಡುಬರುತ್ತಿದೆಯಲ್ಲವೆ? ಈ ಶಬ್ದಗಳ ಅರ್ಥಸಾಮಂಜಸ್ಯ ವನ್ನು ಪರಿಶೀಲಿಸದೆ ಇವುಗಳ ಬಳಕೆ ಸಲ್ಲದು ಎನ್ನಬಹುದಷ್ಟೆ? 'ಆಹ್ವಾನ'ದಂತಹ ಶಬ್ದಗಳ ಬಳಕೆಯಲ್ಲಿರುವ ಗೊಂದಲಕ್ಕೆ ಪರಿಹಾರವನ್ನು ಶೋಧಿಸಬೇಕು. 'ಹೋಟ್ಲು', 'ವೈಲಿ', 'ಉಗಿಬಂಡಿ', 'ಖಾನಾವಳಿ', 'ಆಮಂತ್ರಣ', 'ನಿಮಂತ್ರಣ' ಇತ್ಯಾದಿ ಶಬ್ದಗಳಲ್ಲಿಯ ಪ್ರಾದೇಶಿಕತೆಯನ್ನು ಗಮನಿಸಿ ಇಂತಹದೇ ಶುದ್ಧರೂಪವೆಂಬ ಹಟಕ್ಕೆ ಬೀಳದೆ ರೂಢಿಯನ್ನನು ಸರಿಸುವುದೇ ಲೇಸಾದ ಹಾದಿ. ಒಂದು ರಾಜ್ಯಕ್ಕೆ ಸೇರಿದ ಕನ್ನಡರೆಲ್ಲರು ಬೇರೆ ಬೇರೆ ಪ್ರದೇಶ ಗಳಲ್ಲಿ ವಿಶೇಷ ಪ್ರಚಲಿತವಿದ್ದ ಇಂತಹ ಶಬ್ದಗಳ ಪರಿಚಯ ಮಾಡಿಕೊಳ್ಳುವುದು ವಿಹಿತವಲ್ಲವೆ?

ಇನ್ನೂ ಕೆಲವು ಆಂಗ್ಲ ನುಡಿಗಳ ಪ್ರತಿಶಬ್ದಗಳು ಜನಬಳಕೆಯಲ್ಲಿ ಬಂದಿಲ್ಲ. ಬರೆವಣಿಗೆ ಯಲ್ಲೂ ಹೆಚ್ಚಾಗಿ ಇಳಿದಿಲ್ಲ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡುವೆ:—

ಸಿಮೆಂಟು —ವಜ್ರಲೇಪ, ವಜ್ರಚೂರ್ಣ, ಯುಜಲೇಪ (ರ. ನಿ.)
ಇಂಜೆಕ್ಶನ್ —ಚುಚ್ಚುಮದ್ದು
ವಾಯರ್‌ಲೆಸ್ ನ್ಯೂಸ್—ಅಲೆಯಂಚೆ, ನಿಸ್ತಂತು ವಾರ್ತೆಯ ಸುದ್ದಿ.

—ಇಂತಹ ಪ್ರತಿಶಬ್ದಗಳಲ್ಲಿ ಅರ್ಥಪೂರ್ಣತೆ ಇದ್ದರೂ ಇವುಗಳನ್ನು ಬರೆವಣಿಗೆಯಲ್ಲಿ ತಂದು ಜನಮೆಚ್ಚಿಗೆ ನಡೆಯುವ ಹವಣಿಕೆಗಳು ನಡೆಯಬೇಕು. ಇವನ್ನು ವೈಜ್ಞಾನಿಕ ಪರಿಭಾಷೆ ಯೆಂದು ವೈಜ್ಞಾನಿಕ ಉದ್ಗ್ರಂಥಗಳಲ್ಲಿ ಬಳಸುವುದು ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಪ್ರಯೋಜನಕಾರಿ. ಈ ಶಬ್ದಗಳ ನಿರ್ಮಿತಿಯಲ್ಲಿ ಕಂಡುಬರುವ ಬುದ್ಧಿಯ ಸಾಹಸವು ಶ್ಲಾಘ ನೀಯವಾಗಿದೆಯಲ್ಲವೆ?

(iii) ಇನ್ನು ಪತ್ರಿಕೆಗಳಲ್ಲಿ ಬರುತ್ತಿರುವ ಈ ಕೆಲವು ಪದಪ್ರಯೋಗಗನ್ನು ಗಮನಿಸ ಬೇಕು:—

Point of order —ವಿಧಿ ಬಿಂಧು
Cold-war —ಶೀತಲ ಯುದ್ಧ
Sitting on the fence—ಬೇಲಿಯ ಮೇಲೆ ಕುಳಿತುಕೊಳ್ಳುವುದು.
Joint Secretary —ಸಹಕಾರ್ಯದರ್ಶಿ, ಜಂಟಿ ಕಾರ್ಯದರ್ಶಿ.

—'ವಿಧಿಬಿಂಧು', ಶೀತಲಯುದ್ಧ', ಬೇಲಿಯ ಮೇಲೆ ಕುಳಿತುಕೊಳ್ಳುವುದು'—ಇತ್ಯಾದಿ ಪ್ರತಿಪದ ಪ್ರಯೋಗಗಳಲ್ಲಿ ಮೂಲದ ಆಂಗ್ಲಪದ ಪ್ರಯೋಗಗಳ ಅರ್ಥವ್ಯಂಜನಕ್ಕೆ ಗಮನ ಕೊಡದೆ ಶಬ್ದಕ್ಕೆ ಪ್ರತಿಶಬ್ದ ವಿಡುವ ಹಗುರುತನ ಎದ್ದು ಕಾಣುತ್ತದೆಯಲ್ಲವೆ? Point of order ಎಂಬುದಕ್ಕೆ 'ಔಚಿತ್ಯ ಪ್ರಶ್ನೆ', 'ಕ್ರಮ ವಿಚಾರ' ಎಂಬ ಪ್ರತಿಪ್ರಯೋಗಗಳೂ Cold-war ಎಂಬು ದಕ್ಕೆ 'ಪ್ರಚ್ಛನ್ನ ಯುದ್ಧ' ಎಂಬುದೂ Sitting on the fence ಎಂಬುದಕ್ಕೆ 'ಎರಡೂ ದಂಡೆಗಳ

ಮೇಲೆ ಕೈಯೂರಿ ಕುಳಿತುಕೊಳ್ಳುವುದು 'ಅಡ್ಡ ಗೋಡೆಯ ಮೇಲೆ ದೀಪವಿಟ್ಟಂತೆ' ಮೊದಲಾದ ರೂಢಿಯ ಪ್ರಯೋಗಗಳೂ ಮೂಲಪದಗಳ ತಿರುಳೆತ್ತಿ ತೋರುವುದಿಲ್ಲವೆ? 'ಜಂಟಿ ಕಾರ್ಯದರ್ಶಿ' ಯಲ್ಲಿ ವಿಕ್ಷಿಪ್ತ ಅರಿಸಮಾಸವು ಕೇಶಿರಾಜನ ಮತದಂತೆ ಎಲ್ಲರ ಕಿವಿಗಳಿಗೂ ಕರ್ಕಶವೆನಿಸುವು ದಿಲ್ಲವೆ? 'ಸಹ ಕಾರ್ಯದರ್ಶಿ'ಯಂತಹ ಸುಂದರ ಸಮಸ್ತ ಪದವನ್ನೇಕೆ ಕಡೆಗಣಿಸಬೇಕೋ ತಿಳಿಯದು.

ದಿನಪತ್ರಿಕೆಗಳ ಕಾರ್ಯ ಗುರುತರವಾದುದೆಂಬುದನ್ನು ಒಪ್ಪಲೇ ಬೇಕು. ಅಲ್ಪಾವಧಿಯಲ್ಲಿ ಅನಂತ ಹಾಗೂ ಅಮೋಘ ಕಾರ್ಯವೆಸಗುತ್ತಿರುವ ದಿನಪತ್ರಿಕೆಗಳು ಇಂದಿನ ರಾಜಕಾರಣ ಪ್ರಪಂಚಕ್ಕೆ ಸೇರಿದ ಹಲವಾರು ಆಂಗ್ಲ ಶಬ್ದಗಳಿಗೆ ಸುಂದರ ಹಾಗೂ ಯಥಾರ್ಥ ಪ್ರತಿಶಬ್ದ ಗಳನ್ನೂ ಒದಗಿಸಿವೆ. ಕೆಳಗಿನ ಈ ಪ್ರತಿಶಬ್ದಗಳನ್ನು ಯಾರು ಮೆಚ್ಚರು?

| | |
|---|---|
| ಪಾರ್ಲಿಮೆಂಟು | —ಸಂಪತ್ತು |
| Movement | —ಚಳವಳಿ, ಆಂದೋಲನ. |
| Teargas | —ಅಶ್ರುವಾಯು |
| Leftists | —ಎಡಪಕ್ಷದ ಸಭಾಸದರು. |
| Secretary Council | —ಭದ್ರತಾ ಮಂಡಲ |
| United Nations U. N. O. | —ಯುಕ್ತರಾಷ್ಟ್ರ ಸಂಘ, ಸಂಯುಕ್ತರಾಷ್ಟ್ರ ಸಂಸ್ಥೆ. |
| Colonisation | —ವಸಾಹತು ವಾದ |
| Budget | —ಆಯವ್ಯಯ ಅಂದಾಜುಪತ್ರ, ಮುಂಗಡಪತ್ರ. |

(iv) ಪ್ರತಿ ಶಬ್ದಸೃಷ್ಟಿಯಲ್ಲಿ ಕವಿತ್ವವು ಅಮೋಘ ಕಾರ್ಯ ಮಾಡಬಲ್ಲದು. Electric shock ಎಂಬುದಕ್ಕೆ 'ತಟಿಚ್ಚುಂಬನ' ಎಂಬುದೂ Survival of the fittest ಎಂಬುದಕ್ಕೆ 'ಬಲಿಷ್ಠನಿಗೆ ಬಾಳು', 'ಬಲಕ್ಕೆ ಬದುಕು' ಎಂಬವೂ ಸೊಗಸಾದ ಪ್ರಯೋಗಗಳಲ್ಲವೆ? ಹೀಗೆಯೇ ಅಚ್ಚಗನ್ನಡ ಪ್ರಯೋಗಗಳೂ ಉತ್ತಮ ಪ್ರತಿಶಬ್ದಗಳನ್ನು ಒದಗಿಸಬಲ್ಲವು. ಈ ವಾಕ್ಯವನ್ನು ಗಮನಿಸಿ :—'ಈ ವಚನದಲ್ಲಿ ಎಂತಹ ನಗೆಯೀಟಿಯ ಚುಚ್ಚು ಕಿಚ್ಚಾಡುತ್ತಿದೆ!' (ಕುವೆಂಪು). ಇಲ್ಲಿ ನಗೆಯೀಟಿಯ ಚುಚ್ಚು—Satire, Sarcasm, ಕಟುವ್ಯಂಗ್ಯ ಎಂಬರ್ಥ ವನ್ನು ಅದೆಷ್ಟು ಸತ್ವಪೂರ್ಣವಾಗಿ ಎತ್ತಿ ತೋರುವದಲ್ಲ! ಹಾಗೆಯೆ Inner truth ಎಂಬು ದಕ್ಕೆ 'ಒಳನನ್ನಿ' ಎಂಬ ತಿರುಳ್ಗನ್ನಡ ಪದವು ಅದೆಷ್ಟು ಅರ್ಥಪೂರ್ಣ, ಅದೆಷ್ಟು ಸವಿ! ಇಂತಹ ಪ್ರಯೋಗಗಳು ಬರಿ ಪ್ರತಿಶಬ್ದಗಳಲ್ಲ; ಪಕ್ವಪ್ರತಿಭೆಯ ತೀಕ್ಷ್ಣಾನುಭವದ ಕಾವಿನಿಂದ ಸಿಡಿದೆದ್ದ ಮಿಂಚು ನುಡಿಗಳಿವು!

(v) ಕೆಲವೊಂದು ಬರೆವಣಿಗೆಯಲ್ಲಿ 'ಇಸು' ಪ್ರತ್ಯಯವನ್ನು ನಾಮಗಳ ಹಾಗೂ ವಿಶೇಷಣ ಗಳ ಮುಂದೆ ಹತ್ತಿಸಿ ಧಾತುಗಳನ್ನು ಮಾಡಿಕೊಳ್ಳುವ ವಿಧಾನವೂ ಕಂಡುಬರುತ್ತಿದೆ. ಆಂಗ್ಲ ಧಾತುಗಳ ಸೊಗಸನ್ನು ಕನ್ನಡಕ್ಕೆ ತರುವ ಕೌತುಕವು ಇಲ್ಲಿದೆ: ಉದಾಹರಣೆಗೆ—

| | |
|---|---|
| To attach | —ಲಗತ್ತಿಸು |
| To define | —ಲಕ್ಷಣಿಸು |
| To beautify | —ಸುಂದರಿಸು |

To name —ಹೆಸರಿಸು
To interpret —ಅರ್ಥಯಿಸು
To hasten —ದೌಡಾಯಿಸು

(vi) ಕೆಲಸಲ ಮೂಲ ಪದದ ಅರ್ಥವನ್ನು ಸಮರ್ಪಕವಾಗಿ ಅಭಿವ್ಯಕ್ತಪಡಿಸುವುದು ಅಸಾಧ್ಯವೆನಿಸಿದಾಗ ಲೇಖಕನು ತನ್ನ ಪ್ರತಿಭೆಯನ್ನು ಬೇರೊಂದು ದಿಶೆಯಲ್ಲಿ ಓಡಿಸಿ ಪ್ರತಿ ಶಬ್ದವನ್ನು ಮೂಡಿಸುತ್ತಾನೆ. ಇಂಥ ಶಬ್ದ ನಿರ್ಮಿತಿಗೆ ಬರಿ ಶಬ್ದಾರ್ಥಜ್ಞಾನವಷ್ಟೇ ಸಾಲದು. ಆ ಶಬ್ದದ ಇತಿಹಾಸ ಪ್ರಜ್ಞೆ ಇಲ್ಲಿ ಅದ್ಭುತ ರೀತಿಯಲ್ಲಿ ಕೆಲಸ ಮಾಡುವುದು. ಉದಾಹರಣೆಗೆ ಈ ವಾಕ್ಯವನ್ನು ಗಮನಿಸಿರಿ :—

'ಇದೊಂದು ಸಾಹಿತ್ಯದ tantricism ಎಂದರೆ ಗೋರಕ್ಷನಾಥ ತಂತ್ರ." (ಬಿ. ಎಚ್. ಶ್ರೀಧರ)—ಇಲ್ಲಿ tantricism ಪದದಲ್ಲಿ ಅಡಕವಾದ ಅರ್ಥವನ್ನು ಮನಸೆಳೆವ ಹಾಗೂ ನಾಟಕೀಯ ರೀತಿಯಲ್ಲಿ ಭಾಷಾಂತರಿಸಿದ್ದಾಗಿದೆ.

## (ಆ) ವೈಜ್ಞಾನಿಕ ಪರಿಭಾಷೆ

(i) ಇಂದು ಆಂಗ್ಲ ಭಾಷೆಯಲ್ಲಿಯ ವೈಜ್ಞಾನಿಕ ಶಬ್ದಸಂಪತ್ತನ್ನು ಯಾವುದೇ ಭಾರತೀಯ ಭಾಷೆಯಲ್ಲಿ ತರ್ಜುಮೆ ಮಾಡುವುದು ಬಹು ಕಠಿನ ಕೆಲಸ. ಭೌತಶಾಸ್ತ್ರ, ರಸಾಯನ ಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಅರ್ಥಶಾಸ್ತ್ರ, ರಾಜನೀತಿಶಾಸ್ತ್ರ, ಶಿಕ್ಷಣಶಾಸ್ತ್ರ, ಆಧ್ಯಾತ್ಮ ವಿಜ್ಞಾನ, ಸಾಹಿತ್ಯ ವಿಮರ್ಶಾಶಾಸ್ತ್ರ—ಇವೇ ಮೊದಲಾದ ಶಾಸ್ತ್ರ ವಿಷಯಕ ಶಬ್ದಭಂಡಾರವು ಆಂಗ್ಲ ಭಾಷೆಯಲ್ಲಿ ಅಪ್ರತಿಮವಾಗಿದೆ. ಇಂದು ಈ ಶಾಸ್ತ್ರಗಳಲ್ಲಿ ಪರಿಣತರಾದವರೂ ಕನ್ನಡ ಭಾಷಾತಜ್ಞರೂ ಇವುಗಳಿಗೆ ಸಂಬಂಧಪಟ್ಟ ಪಾರಿಭಾಷಿಕ ಶಬ್ದಸಂಗ್ರಹವನ್ನು ಕಲೆಹಾಕಬೇಕಾಗಿದೆ. ಈ ಮೊದಲೆ ಸೂಚಿಸಿದಂತೆ ತದ್ಭವೀಕರಣದಿಂದಲೂ ಪ್ರತಿಶಬ್ದ ನಿರ್ಮಿತಿಯಿಂದಲೂ ವೈಜ್ಞಾನಿಕ ಪರಿಭಾಷೆಯನ್ನು ಸಿದ್ಧಪಡಿಸುವುದು ಸಾಧ್ಯವಿದೆ. ಇಲ್ಲಿಯೂ ಹೆಚ್ಚಾಗಿ ಸಂಸ್ಕೃತದ ನೆರವು ಅವಶ್ಯಕ. ಅಧ್ಯಾತ್ಮಶಾಸ್ತ್ರದ ವಿವರಣೆಯಲ್ಲಿ ಹೊಸ ಹೊಸ ಪಾರಿಭಾಷಿಕ ಶಬ್ದಗಳು ಎಂದಿನಿಂದಲೂ ಕನ್ನಡದಲ್ಲಿ ಬಳಕೆಯಲ್ಲಿ ಬರುತ್ತಲಿವೆ. ಆಧ್ಯಾತ್ಮ ವಿದ್ಯಾನಿಧಿಯೆನಿಸಿರುವ ಸಂಸ್ಕೃತವು ಈ ಪಾರಿಭಾಷೆಗೆ ಹೇಗೆ ನೆರವಾಗಬಲ್ಲದೆಂಬುದನ್ನು ಕೆಳಗಿನ ಉದಾಹರಣೆಗಳಲ್ಲಿ ಕಂಡುಕೊಳ್ಳಬಹುದಾಗಿದೆ :—

Subconscious —ಉಪಪ್ರಜ್ಞೆ
Subliminal consciousness—ಪ್ರಕಾಶಿತ ಪ್ರಜ್ಞೆ
Unconscious —ಪ್ರಜ್ಞಾರಹಿತ ಪಾತಾಳ
Collective unconscious —ವಿಶ್ವಪ್ರಜ್ಞೆ
Supermind —ಅತಿಮಾನಸ ಪ್ರಜ್ಞೆ
Supramental —ಅತಿಮಾನಸ

(ii) ವಿವಿಧ ವಿಜ್ಞಾನ ವಿಷಯಗಳಿಗೆ ಸಂಬಂಧಪಟ್ಟ ಬೇರೆ ಬೇರೆ ಪಾರಿಭಾಷಿಕ ಶಬ್ದ ಸಂಗ್ರಹಗಳನ್ನು ಸಿದ್ಧಪಡಿಸುವ ನಿಟ್ಟಿನಲ್ಲಿ ಶ್ರೀ ರಘುವೀರರ ನಿಘಂಟು ಕೆಲಮಟ್ಟಿಗೆ ಮಾರ್ಗದರ್ಶಿಯಾಗಿದೆ. ಆದರೆ ಅಲ್ಲಿ ಕೊಟ್ಟ ಪದಗಳು ಕನ್ನಡದಲ್ಲಿ ರೂಢಿಯಲಿಲ್ಲ. ಇಲ್ಲಿಯವು ಬೇರೆಯೇ ಇವೆ. ಉದಾಹರಣೆಗೆ ಈ ಕೆಳಗಿನವುಗಳನ್ನು ಪರಾಮರ್ಶಿಸಬೇಕು :—

| ಆಂಗ್ಲ | ಕನ್ನಡದ ರೂಢಿ | ರಘುವೀರ ನಿಘಂಟು |
|---|---|---|
| Nitrogen | ಸಾರಜನಕ | ಭೂಯಾತಿ |
| Pythagorus Theorem | — | ಚಿತಿಪ್ರಮೇಯ |
| Quadrangle | ಚೌಕೋನ, ಚೌಕ<br>ಚೌಕಾಂಗಳ<br>ಚತುರ್ಭುಜಾಕೃತಿ | ಚತುಷ್ಕೋನ |
| Quinine | ಕ್ವಿನೀನು | ವಿಜ್ವರೀ |
| Radium | ರೇಡಿಯಮ್ಮು | ತೇಜಾತು |
| Reflection | ಪ್ರತಿಬಿಂಬ<br>ಪ್ರತಿಬಿಂಬಿಸುವುದು<br>ಮಾರ್ಪೊಳವು<br>ಮಾರ್ಪೊಳಿವುದು | ಪರಾವರ್ತ<br>ಪ್ರತಿಫಲನ |
| Strategy | ಸೇನಾವ್ಯವಸ್ಥೆ<br>ವ್ಯೂಹನಿರ್ಮಾಣ ವಿವೇಕ | ಯೋಧನ ನೀತಿ |
| Watt | ವಿದ್ಯುತ್ ಸಾಮರ್ಥ್ಯದ<br>ಏಕಮಾನ | ದ್ಯುಶಕ್ತಿ |
| Microscope | ಸೂಕ್ಷ್ಮದರ್ಶಕ ಯಂತ್ರ | ಅಣ್ವೀಕ್ಷಕ |

—ಮೇಲೆ ಕೊಟ್ಟ ಪಾರಿಭಾಷಿಕ ಪದಗಳನ್ನು ಪರೀಕ್ಷಿಸಿದಲ್ಲಿ ರಘುವೀರ ನಿಘಂಟಿನ ಹಲವಾರು ಪ್ರಯೋಗಗಳನ್ನು ರೂಢಿಯಲ್ಲಿ ತರುವುದು ಉಚಿತವಾಗಬಹುದೇನೋ ಯೋಚಿಸಬೇಕು. ವಿಜ್ಞಾನ ವಿಷಯದ ಪ್ರತಿಯೊಂದು ಶಬ್ದಕ್ಕೂ ಸಂಸ್ಕೃತ ಶಬ್ದಭಂಡಾರದಿಂದ ಪ್ರತಿಶಬ್ದವನ್ನು ಶೋಧಿಸಿ ಒದಗಿಸಿರುವ ಶ್ರೀ ರಘುವೀರರ ಸಾಹಸವು ಪ್ರಶಂಸಾರ್ಹ. ಅಲ್ಲದೆ, ಅವರು ಈ ಶಬ್ದ ನಿರ್ಮಿತಿಯಲ್ಲಿ ಇರಿಸಿಕೊಂಡ ವಿಧಾನಗಳು ಅಭ್ಯಸಿಸಲರ್ಹವಾಗಿವೆ. Pythagorus Theorem ಎಂಬುದಕ್ಕೆ ರಘುವೀರ ನಿಘಂಟಿನ 'ಚಿತಿಪ್ರಮೇಯ' ಎಂಬುದು ಸೂಕ್ತವಾದೀತೇ ಯೋಚಿಸಬೇಕು. ಹಾಗೆಯೆ, ಕ್ವಿನೀನು, ರೇಡಿಯಮ್ಮುಗಳ ಪ್ರತಿಶಬ್ದಗಳನ್ನು ಆಂಗ್ಲ ತದ್ಭವಗಳೊಂದಿಗೆ ರೂಢಿಸಿ ನೋಡುವುದು ಪ್ರಯೋಜನಕಾರಿಯಾದ ವಿಧಾನ.

(iii) To reflect ಮತ್ತು Reflection ಶಬ್ದಗಳಿಗೆ ಮಾರ್ಪೊಳೆ, ಮಾರ್ಪೊಳವು ಎಂಬ ಶಬ್ದಗಳು ಈ ಪ್ರಯತ್ನದಲ್ಲಿ ಹೊಸ ದಾರಿಯನ್ನು ಸೂಚಿಸುತ್ತಿವೆ. ಅಪಾರವಾಗಿರುವ ಹಳಗನ್ನಡವೂ ಇಲ್ಲಿ ಕಿಂಚಿತ್ತಾದರೂ ನೆರವು ನೀಡುವ ಸಾಧ್ಯತೆಯನ್ನು ಪರಾಮರ್ಶಿಸುವಂತಿದೆ. ಹಲ್ಮಿಡಿ ಶಾಸನದಲ್ಲಿ ಪ್ರಯೋಗಿಸಲಾದ'ಪತ್ತೊಂಡಿ'ಎಂದರೆ ಪತ್ತರಲ್ಲಿ ಒಂದು ಎಂಬುದಾಗಿ ಭಿನ್ನರಾಶಿಯನ್ನು ಸೂಚಿಸುವ ಉಪಾಯ ಬಹು ಕುತೂಹಲಕಾರಿಯಾಗಿದೆ.*ಇಂದು 1/10 (one upon ten) ಎಂಬುದಕ್ಕೆ ಉತ್ತರ ಕರ್ನಾಟಕದಲ್ಲಿ 'ಒಂದು ಹತ್ತಾಂಶ' ಎಂಬ ಪ್ರಯೋಗವಿದ್ದರೆ, ಮೈಸೂರು ಕಡೆಗಳಲ್ಲಿ 'ಹತ್ತನೆಯ ಒಂದು' ಎಂಬ ಪ್ರಯೋಗವಿವೆ. ಇಂಗ್ಲಿಷಿನ one tenth ಎಂಬುದರ ತದ್ವತ್ ಪರಿವರ್ತನವು ಮೈಸೂರಿನದು. ಬಹುಶಃ ಮಹಾರಾಷ್ಟ್ರದ 'ಏಕ ದಶಾಂಶ' ದ ತದ್ವತ್ ಪರಿವರ್ತನವು ಉತ್ತರ

* ಶ್ರೀ ಎಂ. ಮರಿಯಪ್ಪಭಟ್ಟರು ತಮ್ಮ ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪರಿಶೀಲಿಸಿದ ಹಲ್ಮಿಡಿ ಶಾಸನದ ವಿವರಣೆಯಲ್ಲಿ ಎತ್ತಿ ತೋರಿಸಿದ್ದಾರೆ.

ಕರ್ನಾಟಕದ್ದೆಂದು ಹೇಳಬಹುದು. ಇವೆರಡು ಪ್ರಯೋಗಗಳಿಗಿಂತ ಚೆಲುವಾದುದೂ ಅರ್ಥಪೂರ್ಣವಾದುದೂ ಎಂದರೆ ಅಚ್ಚಗನ್ನಡದ ಪ್ರಾಚೀನ ರೂಪ 'ಪತ್ತೊಂದಿ'ಯಾಗಿದೆ. ಇಂದು ಈ ಪದವನ್ನು ಅನುಸರಿಸಿ ಹತ್ತೊಂದಿ, ಹತ್ತೆರಡಿ, ಹತ್ತೇಳಿ, ಎಂಬಂತಹ ರೂಪಸಿದ್ಧಿಗಳನ್ನು ಸಾಧಿಸುವ ಸಾಧ್ಯತೆಯನ್ನು ಕುರಿತು ವಿವೇಚಿಸಬಹುದಲ್ಲವೆ?

(iv) ಇಂದಿನ ವೈಜ್ಞಾನಿಕ ನಾಗರಿಕತೆಯ ದಿನಗಳಲ್ಲಿ ವೈಜ್ಞಾನಿಕ ಪಾರಿಭಾಷಿಕ ಶಬ್ದಗಳ ಕೊರತೆ ಕನ್ನಡದಲ್ಲಿ ಅತಿಯಾಗಿರುವುದಕ್ಕೆ ಇಂದಿನ ನಮ್ಮ ನವ್ಯಕವಿಗಳ ಕೆಲ ಪದ್ಯಪಂಕ್ತಿಗಳು ಒಳ್ಳೆಯ ನಿದರ್ಶನಗಳಾಗಿವೆ. ನವ್ಯಕವಿಗಳ ಕ್ಷಮೆಕೋರಿ ಈ ಕವನಪಂಕ್ತಿಗಳನ್ನು ಉದ್ಧರಿಸುವೆ:—

೧. ಜೆಟ್ ವಿಮಾನು, ಹೆಲಿಕ್ಯಾಪ್ಟರ್, ಉಗಿಹಡಗ; ಬೋಟು, ಎಂ. ಎಸ್. ಎಂ, ರೈಲು,
ಕಾರು, ಕೊನೆಗೆ ಎಸ್. ಟಿ. ಬಸ್ಸು. (ಕಣವಿ)

೨. ಬೇಡ ನಿನ್ನಯ ಸ್ಟೀಯರಿಂಗು ಚಿಂತೆ
ಎಕ್ಸಲರೇಟರ್ ಪಾದ ಸಡಿಲಾಗದಂತೆ (ಪಿ. ವೆಂಕಟರಮಣಾಚಾರ್ಯ)

೩. ಅದರೆಲ್ಲಾ ಅವಯವ ಹಾರ್ಡ್‌ಫ್ಯಾಕ್ಟುಗಳಿಂದಲೇ
ನೋಡಿದೆ ನೋಡಿದೆ ಮಾಯಕ್ರೋಸ್ಕೋಪಿಸಿ (ಬಿ. ಎಚ್. ಶ್ರೀಧರ)

ಕವಿಗಳ ಸೂಕ್ಷ್ಮಾತಿಸೂಕ್ಷ್ಮ ಇಂಗಿತಗಳನ್ನು ತಿಳಿಯುವುದು ಕಷ್ಟವೆಂದು ಒಪ್ಪಿಕೊಂಡರೂ ಇತರರಿಗೆ ಮಾರ್ಗದರ್ಶನ ಮಾಡಬಲ್ಲ ಶಬ್ದಬ್ರಹ್ಮರೇ ಈ ದಾರಿ ಹಿಡಿದರೆ ಇನ್ನಿತರ ಶಬ್ದದರಿದ್ರರ ಪಾಡೇನು?—ಎಂದು ಕೇಳುವಂತಾಗುತ್ತದೆ.

ಅಂತೂ ಇಂದಿನ ಹೊಸ ನಾಗರಿಕತೆ ಕ್ಷಣಕ್ಷಣಕ್ಕೂ ತಂದೊಟ್ಟುತ್ತಿರುವ ಹೊಸ ವಸ್ತು, ವಿಚಾರ, ವಿಜ್ಞಾನ ವಿವರಗಳನ್ನು ಸರಿಯಾಗಿ ಅಭ್ಯಸಿಸಿ, ಅನುಭವಿಸಿ, ಜೀರ್ಣಿಸಿಕೊಳ್ಳಲು ಯತ್ನಿಸಿದಲ್ಲಿ ಸರಿಯಾದ ದಾರಿ ದೊರೆಯದಿರದು. ಈ ದಿಶೆಯಲ್ಲಿ ನಮ್ಮ ಕವಿಗಳು, ಪಂಡಿತರು, ವಿಜ್ಞಾನಿಗಳು, ಶಿಕ್ಷಕರು, ಶಿಕ್ಷಣಜ್ಞರು, ಪತ್ರಿಕೋದ್ಯೋಗಿಗಳು, ವಿದ್ಯಾಸಂಸ್ಥೆಗಳು, ವಿಶ್ವವಿದ್ಯಾಲಯಗಳು, ಸಾಹಿತ್ಯ ಸಂಸ್ಥೆಗಳು ಮನಃಪೂರ್ವಕವಾಗಿ ವಿಧಾಯಕ ರೀತಿಯಲ್ಲಿ ದುಡಿಯುವುದು ತೀರ ಅವಶ್ಯಕ.

ಕೊನೆಯ ಮಾತು: ಎರಡನೆಯ ಮಹಾ ಯುದ್ಧದ ಅನಂತರದ ಹತ್ತುವರ್ಷದ ಕಾಲಾವಧಿಯಲ್ಲಿ ಇಂಗ್ಲಿಷ್ ಶಬ್ದ ಭಂಡಾರಕ್ಕೆ ೧,೪೯೦೦೦ ಹೊಸ ಶಬ್ದಗಳು ಸೇರಿಸಲ್ಪಟ್ಟವಂತೆ. Indian words in English ಎಂಬಂತಹ ನಿಘಂಟುಗಳೂ ಅಲ್ಲಿ ಪ್ರಕಟವಾಗಿವೆಯಂತೆ. ಆಂಗ್ಲರ ಸತತೋದ್ಯೋಗಶೀಲತೆ, ಸಂಶೋಧನ ತತ್ಪರತೆ ಮತ್ತು ಸಂಘಟನಾ ಕೌಶಲಗಳು ಕನ್ನಡಿಗರಾದ ನಮ್ಮನ್ನೂ ಪ್ರಚೋದಿಸಲಿ ಎಂದು ಹಾರೈಸುತ್ತೇನೆ.

**ಆಧಾರ:** ೧. ಶಬ್ದಮಣಿದರ್ಪಣ—ಕೇಶಿರಾಜ
೨. ಕಬ್ಬಿಗರ ಕಾವಂ —ಆಂಡಯ್ಯ
೩. ರಾಮಾಶ್ವಮೇಧಂ, ಅದ್ಭುತರಾಮಾಯಣಂ | ಮುದ್ದಣ
೪. ಚಿಕ್ಕದೇವರಾಜ ವಂಶಾವಳಿ—ತಿರುಮಲಾರ್ಯ
೫. ನಮ್ಮ ನುಡಿ—ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್
೬. ಕನ್ನಡಿಯ ಹುಟ್ಟು—ಶಂ. ಬಾ. ಜೋಶಿ

# ಗಮಕ ಸಮಾಸ

---

ವಿ. ಕೃಷ್ಣಸ್ವಾಮಿ ಅಯ್ಯಂಗಾರ್

ಗಮಕಸಮಾಸದ ವಿಷಯದಲ್ಲಿ ಕನ್ನಡನುಡಿಯಲ್ಲಿ (ಏಪ್ರಿಲ್, ೧೯೬೫; ಸಂಪುಟ-೨೮, ಸಂಚಿಕೆ-೪) ನನ್ನದೊಂದು ಸಣ್ಣ ಲೇಖನ ಪ್ರಕಟವಾಗಿತ್ತು. ಅದರಲ್ಲಿ ಹೇಳಿರುವ ಕೆಲವು ಅಂಶಗಳ ಬಗ್ಗೆ ಆಕ್ಷೇಪಣೆ ಮಾಡಿ, ಶ್ರೀ ತೆಕ್ಕುಂಜ ಗೋಪಾಲಕೃಷ್ಣಭಟ್ಟರು ಕನ್ನಡನುಡಿಯ ಸಂಪುಟ ೨೯, ಸಂಚಿಕೆ-೮ರಲ್ಲಿ (ಆಗಸ್ಟ್-೧೯೬೬) ಒಂದು ಲೇಖನವನ್ನು ಬರೆದಿದ್ದಾರೆ. ಶ್ರೀ ಭಟ್ಟರು ೧೯೫೭ನೆಯ ಡಿಶಂಬರ್ ತಿಂಗಳಿನಲ್ಲಿ ಕರ್ಮವೀರದಲ್ಲಿ ಗಮಕ ಸಮಾಸದ ಬಗ್ಗೆ ಬರೆದಿದ್ದ ಲೇಖನವನ್ನು ನಾನು ಓದಿಲ್ಲ. ಆದುದರಿಂದ ಅದರ ವಿಷಯವಾಗಿ ನಾನು ಏನೂ ಹೇಳುವ ಸ್ಥಿತಿಯಲ್ಲಿಲ್ಲ. ಕನ್ನಡನುಡಿಯಲ್ಲಿ ಪ್ರಕಟವಾದ ಅವರ ಲೇಖನವನ್ನು ಮಾತ್ರ ಆಧಾರವಾಗಿ ಇಟ್ಟುಕೊಂಡು ನನ್ನ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತೇನೆ.

ನನ್ನ ಲೇಖನದಲ್ಲಿ ಮುಖ್ಯವೆಂದು ತೋರುವ ವಿಷಯಗಳಿವು:—

೧. ಗಮಕಸಮಾಸ ಎಂಬುದು ಸಮಾಸದ ಸ್ವತಂತ್ರ ಭೇದವಲ್ಲ. ಅದು ಕರ್ಮಧಾರಯದ ಒಂದು ಭೇದ. ಕರ್ಮಧಾರಯವಾದುದರಿಂದಲೇ ಅದು ತತ್ಪುರುಷವೂ ಆಗುತ್ತದೆ. ಏಕೆಂದರೆ, ಕರ್ಮಧಾರಯವೆಲ್ಲವೂ ತತ್ಪುರುಷದ ಒಂದು ಭೇದವೇ ಹೊರತು ಅತಿರಿಕ್ತವಲ್ಲ.

೨. ಗಮಕಸಮಾಸದಲ್ಲಿ ಅರಿಸಮಾಸದ ದೋಷವಿಲ್ಲವೆಂದು ಹೇಳಲಾಗಿದೆ. ಇದು ಸಮಾಸದ ಒಂದು ಸ್ವತಂತ್ರ ಭೇದವಲ್ಲದಿದ್ದರೂ, ಸಂಸ್ಕೃತ ಪದಗಳ ಮಿಶ್ರಣದ ವಿಷಯದಲ್ಲಿ ಇಲ್ಲಿ ಔದಾರ್ಯದ ನೀತಿಯನ್ನು ಕೈಹಿಡಿದಿರುವುದರಿಂದ, ಇದು ಸಂಸ್ಕೃತ ಮಿಶ್ರಣದ ಸಮಸ್ಯೆಯ ಒಂದು ಮುಖವೆನ್ನಬಹುದು.

೩. ಗಮಕಸಮಾಸವನ್ನು ಕೇಶಿರಾಜನೊಬ್ಬನೇ ಹೇಳಿದ್ದಾನೆ. ಅವನಿಗಿಂತ ಪ್ರಾಚೀನನಾದ ನಾಗವರ್ಮನಾಗಲೀ, ಅರ್ವಾಚೀನನಾದ ಭಟ್ಟಾಕಳಂಕನಾಗಲೀ ಈ ಹೆಸರನ್ನೇ ಎತ್ತಿಲ್ಲ. ಗಮಕ ಸಮಾಸ ನಿಜವಾಗಿಯೂ ಒಂದು ಸ್ವತಂತ್ರ ಭೇದವಾಗಿದ್ದರೆ, ಈ ಇಬ್ಬರು ವೈಯಾಕರಣರೂ ಅದನ್ನು ಹೇಗೆ ಉಪೇಕ್ಷಿಸುತ್ತಿದ್ದರು? ಇವರ ಈ ಉಪೇಕ್ಷೆಯೇ ಗಮಕಸಮಾಸ ಕರ್ಮಧಾರಯದಲ್ಲೇ ಅಂತರ್ಭಾವ ಹೊಂದುತ್ತದೆ ಎನ್ನಲು ಪ್ರಬಲ ಪ್ರಮಾಣವಾಗಿದೆ.

ಮೊದಲನೆಯದಾಗಿ, ಗಮಕಸಮಾಸವು ಕರ್ಮಧಾರಯ, ದ್ವಿಗು ಅಥವಾ ತತ್ಪುರುಷ ಅಲ್ಲ ಎಂದು ಸ್ಥಾಪಿಸಿದರೆ, ಅದು ಸ್ವತಂತ್ರಭೇದ ಎಂದು ಒಪ್ಪಿಕೊಳ್ಳಬಹುದು. ಶ್ರೀ ಭಟ್ಟರ ಲೇಖನದಲ್ಲಿ ಹೀಗೆ ಗಮಕಸಮಾಸವೇ ಬೇರೆ ರೀತಿಯ ಸ್ವತಂತ್ರ ಸಮಾಸವೆಂದು ಸ್ಥಾಪಿಸಲು ಪ್ರಯತ್ನ ನಡೆದಿಲ್ಲ. ಇದಕ್ಕೆ ವಿರುದ್ಧವಾಗಿ ಕೇಶಿರಾಜನೇ, "ಅದು ಕರ್ಮಧಾರಯದ ಭೇದಂ, ಎತ್ತಾನುಂ ತತ್ಪುರುಷಮುಪ್ಪುದು" ಎಂದು ಸ್ಪಷ್ಟವಾಗಿ ಸಾರಿ ಹೇಳಿದ್ದಾನೆ. ಕರ್ಮಧಾರಯದ ಭೇದವೆಂದಾದ

ಮೇಲೆ, ನಿಶ್ಚಯವಾಗಿ ತತ್ಪುರುಷದಲ್ಲೇ ಅಂತರ್ಭಾವ ಹೇಳಬೇಕಾಗಿರುವುದರಿಂದ, ಎತ್ತಾನುಂ ತತ್ಪುರುಷಮಪ್ಪುದು ಎಂಬ ಮಾತಿನ ಯುಕ್ತತೆ ಏನು ಎಂದು ನನ್ನ ಆಕ್ಷೇಪಣೆ. ತತ್ಪುರುಷವಲ್ಲದ ಕರ್ಮಧಾರಯ ಕನ್ನಡದಲ್ಲಿ ಉಂಟೇ? ಸಂಸ್ಕೃತದಲ್ಲಂತೂ, "ತತ್ಪುರುಷಃ ಸಮಾನಾಧಿಕರಣಃ ಕರ್ಮಧಾರಯಃ" ಎಂಬ ಲಕ್ಷಣ ವಾಕ್ಯದಲ್ಲೇ ತತ್ಪುರುಷ ಸಂಜ್ಞೆಯನ್ನು ಅನುವಾದ್ಯಕೋಟಿಯಲ್ಲಿ ಸೇರಿಸಿ, "ಮೊದಲು ತತ್ಪುರುಷ ಸಂಜ್ಞೆ, ಆಮೇಲೆ ಅದರ ಒಳಭೇದವಾದ ಕರ್ಮಧಾರಯ ಸಂಜ್ಞೆ" ಎಂದು ಅಸಂದಿಗ್ಧವಾಗಿ ಹೇಳಿದೆ. ನಾಗವರ್ಮನೂ ಸಹ, "ಸ ಏವ ಏಕಾಶ್ರಯಃ ಕರ್ಮಧಾರಯಃ" (ಸೂ-೧೩೪) ಎಂದು ಹೇಳಿದ್ದಾನೆ. ಇಲ್ಲಿ 'ಸಃ' ಎಂಬುದು ಪೂರ್ವಸೂತ್ರದಲ್ಲಿ ಹೇಳಿರುವ ತತ್ಪುರುಷವನ್ನೇ ನಿರ್ದೇಶಿಸುತ್ತದೆ. "ತತ್ಪುರುಷ ಸಮಾಸ ಏವ ಏಕಾಧಿಕರಣಶ್ಚೇತ್ ಕರ್ಮಧಾರಯ ಸಂಜ್ಞ್ಯಃ ಸ್ಯಾತ್" ಎಂದು ನಾಗವರ್ಮನೇ ವೃತ್ತಿಯಲ್ಲಿ ಇದರ ಅರ್ಥವನ್ನು ವಿವರಿಸಿದ್ದಾನೆ. ಕೇಶಿರಾಜನೂ ಸಹ,

> "ಪರಪದದೊಳರ್ಥವರ್ತನ-
> ಮಿರೆ ತತ್ಪುರುಷಂ ಸಮಂತದೇಕಾಶ್ರಯಮಾ।
> ಗಿರೆ ಕರ್ಮಧಾರಯಂ ನೆಲ-
> ಸಿರೆ ಮೊದಲೊಳ್ ಸಂಖ್ಯೆಯದೆ ವಲಂ ದ್ವಿಗುವಕ್ಕುಂ॥
> (ಸೂ-೧೭೫, ಡಿ. ಎಲ್. ನರಸಿಂಹಾಚಾರ್ಯರ ಸಂಸ್ಕರಣ, ಪು-೧೮೦)

ಎಂದು ನಾಗವರ್ಮನನ್ನೇ ಅನುಸರಿಸಿ ಲಕ್ಷಣ ಹೇಳಿದ್ದಾನೆ. ವೃತ್ತಿಯಲ್ಲೂ, "ಆ ತತ್ಪುರುಷಮೇಕಾಶ್ರಯಮಾಗೆ ಕರ್ಮಧಾರಯಮಕ್ಕುಂ ; ಅದುವೆ ಸಂಖ್ಯಾಪೂರ್ವಮಾಗೆ ದ್ವಿಗುವಕ್ಕುಂ" (ಪು-೧೮೧) ಎಂದು ಹೇಳಿದೆ. ಇದೆಲ್ಲವೂ ಸಂಸ್ಕೃತ ವ್ಯಾಕರಣದ ಲಕ್ಷಣಗಳನ್ನು ಅನುಸರಿಸಿಯೇ ಇದೆ. ಈ ವಿಷಯದಲ್ಲಿ ನಾಗವರ್ಮ-ಕೇಶಿರಾಜರಿಗೆ ಯಾವ ಮತಭೇದವೂ ಇಲ್ಲ. ಇದರಿಂದ ಕರ್ಮಧಾರಯವೆಲ್ಲವೂ ತತ್ಪುರುಷದ ಒಂದು ಭೇದವೆಂದು ಸಿದ್ಧವಾದ ಮೇಲೆ, "ಗಮಕಸಮಾಸವೆಂಬುದು ಕರ್ಮಧಾರಯದ ಒಂದು ಭೇದ ; ಕೆಲವೆಡೆ ಅದು ತತ್ಪುರುಷವೂ ಆಗಬಹುದು" ಎಂಬ ಮಾತಿನ ಔಚಿತ್ಯವೇನು? ಕೆಲವೆಡೆ ತತ್ಪುರುಷವಾದರೆ, ಮತ್ತೆ ಕೆಲವೆಡೆ ತತ್ಪುರುಷವಲ್ಲದೆ ಬೇರೆ ಏನಾಗಿರುತ್ತದೆ? ಈ ಮಾತುಗಳಲ್ಲಿ ಪೂರ್ವಾಪರ ವಿರೋಧಕ್ಕೆ ಸಮಾಧಾನವೇನು? ಶ್ರೀ ಭಟ್ಟರ ಲೇಖನದಲ್ಲಿ ಈ ಪ್ರಶ್ನೆಗೆ ಉತ್ತರವಿಲ್ಲ.

ಎರಡನೆಯದಾಗಿ, ಗಮಕಸಮಾಸವನ್ನು ಕರ್ಮಧಾರಯದ ಒಂದು ಭೇದವೆಂದೇ ಒಪ್ಪಿಕೊಂಡರೂ, ಕೇಶಿರಾಜನ ಲಕ್ಷಣದಲ್ಲಿ ಅತಿವ್ಯಾಪ್ತಿ ಉಂಟೆಂದು ಹೇಳಬೇಕಾಗುತ್ತದೆ. ಶ್ರೀ ಭಟ್ಟರ ಲೇಖನದಲ್ಲಿ "ಸಂಸ್ಕೃತದಲ್ಲಿ ಕರ್ಮಧಾರಯವೂ ದ್ವಿಗುವೂ ತತ್ಪುರುಷ ಭೇದವೇ ಎಂದಮೇಲೆ ಅಲ್ಲಿ ಆ ಭಿನ್ನ ನಾಮ ನಿರ್ದೇಶನದ ಪ್ರಯೋಜನವೇನೆಂದು ತರ್ಕಮಾಡಲು ಸಾಧ್ಯವಿಲ್ಲವೆ? ಅಲ್ಲಿ ಅವುಗಳ ಲಕ್ಷಣಗಳಲ್ಲಿ ಭಿನ್ನತೆ ಇರುವುದರಿಂದ ಭಿನ್ನ ನಾಮಧೇಯಗಳು ಬೇಕೆಂದಾದರೆ, ಕನ್ನಡದಲ್ಲಿಯೂ ಕರ್ಮಧಾರಯಕ್ಕೂ ತತ್ಪುರುಷಕ್ಕೂ ಭಿನ್ನವಾದ ಸ್ವರೂಪವನ್ನು ಪಡೆಯುವ, ಆದರೆ ಕರ್ಮಧಾರಯ-ತತ್ಪುರುಷಗಳ ಕೆಲವು ಲಕ್ಷಣಗಳನ್ನು ಪಡೆದಿರುವ ಸಮಾಸಕ್ಕೆ ಇನ್ನೊಂದು ಹೆಸರಿಲ್ಲದೆ ಗತ್ಯಂತರವೇ ಇಲ್ಲವೆಂದು ನಿರ್ಣಯಿಸಲೇಬೇಕಾಗುತ್ತದೆ" ಎಂದು ಹೇಳಲಾಗಿದೆ. ಸಂಸ್ಕೃತದಲ್ಲಿ ಕರ್ಮಧಾರಯವೂ ದ್ವಿಗುವೂ ತತ್ಪುರುಷಕ್ಕಿಂತ ಬೇರೆಯಲ್ಲ. ಆದರೆ ತತ್ಪುರುಷವೆಂಬ ಸಾಮಾನ್ಯ ಸಂಜ್ಞೆಯೇ ಸಾಕು ಎನ್ನಲು ಸಾಧ್ಯವಿಲ್ಲ. ಸಮಾಸವೆಂಬುವೇ ಒಂದು ಸಾಮಾನ್ಯ ಸಂಜ್ಞೆ. ಅವ್ಯಯೀಭಾವ, ಬಹುವ್ರೀಹಿ ಮುಂತಾದುವು ಸಮಾಸದ ಅವಾಂತರ ಭೇದಗಳು. ಅವ್ಯಯೀಭಾವಾದಿ ಅವಾಂತರ ಸಂಜ್ಞೆಗಳಿಂದಲೂ ವ್ಯಾಕರಣ ಶಾಸ್ತ್ರದಲ್ಲಿ ಅನೇಕ ಕಾರ್ಯಗಳನ್ನು ಹೇಳಿರು

ವುದರಿಂದ, (ಅವ್ಯಯೀಭಾವಶ್ಚ; ನಾವ್ಯಯೀಭಾವಾದತೋಮ್ ತ್ವಪಂಚಮ್ಯಾಃ. ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಂಗಾತ್ ಷಚ್, ರಾಜಾಹಃ ಸಖಿಭ್ಯಷ್ಟಚ್ ಮುಂತಾದ ಪಾಣಿನೀಯ ಸೂತ್ರಗಳಲ್ಲಿ ಅವ್ಯಯೀಭಾವ-ಬಹುವ್ರೀಹಿ-ತತ್ಪುರುಷ-ಸಂಜ್ಞಾ ಪ್ರಯುಕ್ತವಾದ ಕಾರ್ಯಗಳನ್ನು ವಿಧಿಸಲಾಗಿದೆ) ಈ ಸಂಜ್ಞೆಗಳು ಆವಶ್ಯಕವೆನಿಸುತ್ತವೆ. ಈ ರೀತಿಯಿಂದ ಪ್ರಯೋಜನವಿಲ್ಲದಿದ್ದಾಗ ಶಾಸ್ತ್ರಕಾರರು ಭೇದೋಪಭೇದಗಳ ಸಂಖ್ಯೆಯನ್ನು ಹೆಚ್ಚಿಸುವುದಿಲ್ಲ. ಕರ್ಮಧಾರಯದಲ್ಲೇ ಸಂಖ್ಯಾಪೂರ್ವಪದವಾದ ಭೇದವನ್ನು ದ್ವಿಗು ಎಂದು ಕರೆದರು. ಆದರೆ, ವಿಶೇಷಣ ಪೂರ್ವಪದ, ವಿಶೇಷಣೋಭಯಪದ, ಕೃದಂತಪೂರ್ವಪದ, ಕೃದಂತೋಭಯಪದ ಮುಂತಾದ ಭೇದಗಳಿಗೆ ಮನ್ನಣೆ ಕೊಡಲಿಲ್ಲ. ಹೀಗೆ ಸಂಸ್ಕೃತದಲ್ಲಿ ಕರ್ಮಧಾರಯವೂ ದ್ವಿಗುವೂ ತತ್ಪುರುಷದ ಭೇದವೇ ಆದರೂ ಅಲ್ಲಿ ಆ ಭಿನ್ನನಾಮ ನಿರ್ದೇಶನಕ್ಕೆ ಪ್ರಯೋಜನ ಉಂಟು. 'ಅಕಾರಾಂತೋತ್ತರಪದೋದ್ವಿಗುಃ ಸ್ತ್ರಿಯಾಮಿಷ್ಟಃ" ಮುಂತಾದ ಕಾರ್ಯವಿಧಿಗಳು ದ್ವಿಗುಸಂಜ್ಞೆಯನ್ನೇ ಅವಲಂಬಿಸಿ ನಿಂತಿವೆ. ಹೀಗೆ ಯಾವ ಪ್ರಯೋಜನವೂ ಇಲ್ಲದೆ ಒಂದು ಹೊಸ ಸಂಜ್ಞೆಯನ್ನು ಯಾವ ಸಂಸ್ಕೃತ ವೈಯಾಕರಣನೂ ಕಲ್ಪಿಸಿಲ್ಲವೆಂದು ನಿಸ್ಸಂಕೋಚವಾಗಿ ಹೇಳಬಹುದು. ಈ ರೀತಿ 'ಗಮಕ' ವೆಂಬ ಸಂಜ್ಞೆಯನ್ನು ಕಲ್ಪಿಸುವುದರ ಉದ್ದೇಶವೇನು?

ಇಲ್ಲೇ ಇನ್ನೊಂದು ಮಹತ್ವದ ಪ್ರಶ್ನೆಯೂ ಏಳುತ್ತದೆ. ಗಮಕ ಎಂಬ ಒಂದು ಹೊಸ ಸಂಜ್ಞೆಯನ್ನು ಸ್ವೀಕರಿಸಿದರೆ ಮಾತ್ರಸಾಲದು. ಗಮಕ ಸಮಾಸಕ್ಕೆ ಅವ್ಯಾಪ್ತಿ-ಅತಿವ್ಯಾಪ್ತಿ ದೋಷವಿಲ್ಲದ ಲಕ್ಷಣವನ್ನೂ ಹೇಳಬೇಕು. ಕೇಶಿರಾಜನ ಲಕ್ಷಣದಲ್ಲಿ ಈ ಅತಿವ್ಯಾಪ್ತಿ ದೋಷದ ನಿವಾರಣೆ ಹೇಗೆ? "ಪರಪದದೊಳ್ ಕಾರಕಮುಂ ಪೂರ್ವಪದದೊಳ್ ಸಂಖ್ಯೆ, ಸರ್ವನಾಮ, ಗುಣವಚನ, ಕೃದಂತಂಗಳೊಳಾವುದಿದ್ದೊಡಂ ಗಮಕ ಸಮಾಸಮಕ್ಕು." (ಪು-೧೮೫) ಎಂಬುದಿಷ್ಟೇ ಕೇಶಿರಾಜನು ಹೇಳಿರುವ ಲಕ್ಷಣ. ಇದು ಕರ್ಮಧಾರಯ ಮತ್ತು ದ್ವಿಗುವಿನಲ್ಲೂ ದೊರೆಯುವುದರಿಂದ ಅತಿವ್ಯಾಪ್ತಿದೋಷ ಇದ್ದೇ ಇದೆ. ಗಮಕಸಮಾಸವೆಲ್ಲವನ್ನೂ "ಕರ್ಮಧಾರಯಮದುವುಂ" ಎಂದು ಕರ್ಮಧಾರಯದಲ್ಲೇ ಸೇರಿಸಿದ ಕೇಶಿರಾಜನಿಗೆ, ಕರ್ಮಧಾರಯದ ಉಳಿದ ಭೇದಗಳಿಗೂ ಗಮಕಸಮಾಸಕ್ಕೂ ಇರುವ ಅಂತರವೇನೆಂಬುದನ್ನು ಸ್ಪಷ್ಟಪಡಿಸುವ ಅಗತ್ಯ ಏಕೆ ತೋರಲಿಲ್ಲವೋ? ಗಮಕಸಮಾಸದಲ್ಲಿ ಮಾತ್ರ 'ತನಗತ್ವಂ ಪೆಱಗಿತ್ವಂ' ಎಂಬ ವಿಧಿ ಬರುವುದರಿಂದ, ಇದೇ ಆ ಸಮಾಸಕ್ಕೂ ಉಳಿದ ಕರ್ಮಧಾರಯಕ್ಕೂ ಭೇದವೆಂದರೆ, ಈ ವಿಧಿ ಎಲ್ಲಿ ಬರುತ್ತದೆ ಮತ್ತು ಎಲ್ಲಿ ಬರುವುದಿಲ್ಲ ಎಂದು ಹೇಳಲು ಪ್ರಮಾಣವೇನು? ಗಮಕ ಸಮಾಸವಾದರೆ ಈ ವಿಧಿ ಬರುತ್ತದೆ, ಈ ವಿಧಿ ಬಂದರೆ ಅದು ಗಮಕ ಸಮಾಸವೆನಿಸಿಕೊಳ್ಳುತ್ತದೆ ಎಂದರೆ, ಅನ್ಯೋನ್ಯಾಶ್ರಯ ದೋಷಕ್ಕೆ ಇದೇ ಸರಿಯಾದ ನಿದರ್ಶನವೆನಿಸುತ್ತದೆ.

ಶ್ರೀ ಭಟ್ಟರ ಲೇಖನದಲ್ಲಿ ಇನ್ನೊಂದು ಮಾತು ಬಂದಿದೆ. ದೃಷ್ಟಾಂತಕ್ಕೆ ಒಂದು ವಾಕ್ಯವನ್ನೇ ಪರಿಶೀಲಿಸಬಹುದು. "ರಾಮಾಯಣದಲ್ಲಿ ಆವ ಒಂದು ಸಣ್ಣ ಸನ್ನಿವೇಶವನ್ನು ನೋಡಿದರೂ ಅಲ್ಲಿ ಸೌಂದರ್ಯವು ಕಾಣುತ್ತದೆ" ಎಂಬ ವಾಕ್ಯವಿದ್ದರೆ ಸಂನಿವೇಶವೆಂಬ ಪದಕ್ಕೆ ಗುಣವಚನ, ಸಂಖ್ಯೆ, ಸರ್ವನಾಮಗಳು ಅನುಕ್ರಮವಾಗಿ ಪೂರ್ವಪದವಾಗುತ್ತವೆ. ಆದರೆ ಎಲ್ಲವೂ ಸಂನಿವೇಶ ಎಂಬ ಪದಕ್ಕೆ ಸಂಬಂಧಿಸಿದವುಗಳೇ ಹೊರತು ಅವುಗಳಲ್ಲಿ ಒಂದಕ್ಕೆ ಇನ್ನೊಂದು ಸಂಬಂಧಿಸಿದುದಲ್ಲ. ಇವುಗಳಲ್ಲಿ ಒಂದು ಎಂಬ ಸಂಖ್ಯಾವಾಚಕವು ಸ್ವಸ್ವರೂಪದಲ್ಲಿದೆಯೇ ಹೊರತು ಉಳಿದವುಗಳು ಮೂಲಸ್ವರೂಪದಲ್ಲಿಲ್ಲ. ಮುಂದೆ ಎಲ್ಲೋ ಬರುವ ಒಂದು ಪದಕ್ಕೆ ಹಿಂದೆ ಎಷ್ಟೋ ದೂರದಲ್ಲಿರುವ ಪದವು ಸಮಾಸ ಸಂಬಂಧವುಳ್ಳದ್ದೆನ್ನುವಾಗ ಅದನ್ನೊಪ್ಪಲು ಮನಸ್ಸಾಗದೆ ಎಲ್ಲವೂ ಭಿನ್ನ

ಪದಗಳೆಂದು ತರ್ಕಿಸಿ ಆ ಬಗೆಯ ಸಿದ್ಧಾಂತಕ್ಕೆ ಬರುವ ಸಂಭವವಿದೆ. ಕೇಶಿರಾಜನು ಸವಿಹಿತ ಸಂಬದ್ಧಗಳಾದ ಪೂರ್ವೋತ್ತರ ಪದಗಳುಳ್ಳ ಗಮಕಸಮಾಸದ ಉದಾಹರಣೆಗಳನ್ನು ಕೊಟ್ಟಿರುವುದರಿಂದ ಅಲ್ಲಿ ಸಮಾಸವಿದೆಯೆಂದು ಒಪ್ಪಿಕೊಳ್ಳುವಾಗ ದೂರಸಂಬದ್ಧವಾದ ಪೂರ್ವೋತ್ತರ ಪದಗಳಿದ್ದರೂ ಗಮಕಸಮಾಸವಾಗುವುದೆಂಬುದನ್ನು ಮರೆಯಬಾರದು. ಉಳಿದ ಸಮಾಸಗಳಲ್ಲಿ ಪೂರ್ವೋತ್ತರ ಪದಗಳು ದೂರಾಂತರಿತವಾಗುವುದಕ್ಕೆ ಅವಕಾಶವೇ ಇಲ್ಲದ ಕಾರಣ ಈ ಗಮಕ ಸಮಾಸವು ತದ್ಭಿನ್ನವೆನ್ನುವುದರಲ್ಲಿ ಸಂಶಯವೇ ಉಳಿಯಲಾರದು. ಈ ಸಮಾಸದಲ್ಲಿ ಕನ್ನಡ ಸರ್ವನಾಮವು ಪೂರ್ವಪದವಾಗಿ ಉತ್ತರಪದವು ಸಂಸ್ಕೃತವಾಗಿದ್ದರೂ ದೋಷವಾಗುವುದಿಲ್ಲ. ಇದಕ್ಕೆ "ಪೂರ್ವೋತ್ತರ ಪದಗಳು ವ್ಯಸ್ತರೂಪದಿಂದಿದ್ದರೂ ಗಮಕಸಮಾಸವಾಗುತ್ತದೆ" ಎಂಬ ಕಾರಣವನ್ನೇ ಹೇಳಬೇಕು ಎಂದು ಪ್ರತಿಪಾದಿಸಿದ್ದಾರೆ. "ಆವ ಒಂದು ಸಣ್ಣ ಸಂನಿವೇಶ" ಎಂಬುದು ಸಮಾಸವೆಂದು ಹೇಳಿದರೆ, 'ಒಂದು' ಎಂಬ ಪದ ಮಾತ್ರ ವಿಪರ್ಯಾಸ ಹೊಂದದೆ ಹೇಗೆ ಉಳಿಯಿತು? ಸಂಸ್ಕೃತದಲ್ಲಿ ಸಮಾಸದಲ್ಲಿ ಇಷ್ಟೇ ಪದಗಳಿರಬೇಕೆಂಬ ಪದ ಸಂಖ್ಯಾನಿಯಮವಿಲ್ಲ. ಹತ್ತು-ಇಪ್ಪತ್ತು ಪದಗಳಿಂದ ಕೂಡಿದ ದೀರ್ಘಸಮಾಸಗಳು ಸಂಸ್ಕೃತದಲ್ಲಿ ಹೇರಳವಾಗಿವೆ. "ಪಾರಾವಾರ ಪಯೋವಿಶೋಷಣ ಕಲಾಪಾರೀಣ ಕಾಲಾನಲ ಜ್ವಾಲಾಜಾಲ ವಿಹಾರ ಹಾರಿ ವಿಶಿಖ ವ್ಯಾಪಾರ ಘೋರಕ್ರಮಃ" (ಇದರಲ್ಲಿ ೧೫ ಪದಗಳಿವೆ) ಮುಂತಾದ ದೀರ್ಘಸಮಾಸಗಳು ಸಂಸ್ಕೃತದಲ್ಲಿ ಸರ್ವೇಸಾಮಾನ್ಯ. ಆದರೆ, ಈ ಬಗೆಯ ಅನೇಕ ಪದಯುಕ್ತವಾದ ಸಮಾಸಗಳು ಕನ್ನಡದಲ್ಲಿಲ್ಲವೆಂದೇ ಹೇಳಬಹುದು. ಪಂಪ, ರನ್ನ ಮುಂತಾದ ಕವಿಗಳೂ ಸಹ ತಮ್ಮ ಗ್ರಂಥಗಳಲ್ಲಿ ಸಂಸ್ಕೃತ ಪದಯುಕ್ತವಾದ ದೀರ್ಘಸಮಾಸಗಳನ್ನು ಬಳಸಿದ್ದಾರೆಯೇ ಹೊರತು, ಬರೀ ಕನ್ನಡ ಪದಗಳಿಂದಲೇ ಕೂಡಿದ ಅತಿದೀರ್ಘಸಮಾಸಗಳನ್ನು ಬಳಸಿಲ್ಲ. ಇದಕ್ಕೆ ಕನ್ನಡದ ಪ್ರಕೃತಿಯೇ ಮುಖ್ಯಕಾರಣ. ಸಮಾಸರಚನೆ ಆಯಾ ಭಾಷೆಯ ಪ್ರಕೃತಿಗೆ ತಕ್ಕಂತೆ ರೂಪುಗೊಳ್ಳುತ್ತದೆ. ಸಂಸ್ಕೃತದಲ್ಲಿ ನಮಗಿಷ್ಟ ಬಂದಹಾಗೆ ಸಮಾಸಮಾಡಲು ಅವಕಾಶವಿದೆ. ಬಾಣನ ಕಾದಂಬರಿಯಲ್ಲಿ ಹೀಗೆ ನೂರಾರು ದೀರ್ಘಸಮಾಸಗಳನ್ನು ಉದಾಹರಿಸಬಹುದು. ಆದರೆ, ಅವು ಅವ್ಯಯೀಭಾವಾದಿ ಅಂಗೀಕೃತ ಸಮಾಸಭೇದಗಳಲ್ಲೇ ಅಂತರ್ಭಾವ ಹೊಂದುತ್ತವೆಯೇ ಹೊರತು, ಅತಿರಿಕ್ತ ಸಮಾಸಗಳಲ್ಲ. ಆ ರೀತಿ, 'ಆವ ಒಂದು ಸಣ್ಣ ಸಂನಿವೇಶ' ಎಂಬ ಪದವನ್ನು ಒಂದೇ ಸಮಾಸಪದವೆಂದು ಒಪ್ಪಿಕೊಂಡರೂ, ಇದು ಅನೇಕ ವಿಶೇಷಣ ಘಟಿತವಾದ ಕರ್ಮಧಾರಯವೆಂದು ಏಕೆ ಹೇಳಬಾರದು? "ಕರ್ಮಧಾರಯದಲ್ಲಿ ದೂರಾಂತರಿತ ಪದಗಳಿರಕೂಡದು; ಗಮಕಸಮಾಸದಲ್ಲಿ ಮಾತ್ರ ಇರಬಹುದು' ಎಂದು ಎಲ್ಲಿ ಯಾರು ನಿಯಮ ಮಾಡಿದ್ದಾರೆ?

ಇನ್ನು, 'ಆವ ಒಂದು ಸಣ್ಣ ಸಂನಿವೇಶ' ಎಂಬುದು ಒಂದೇ ಪದವೇ ಎಂಬುದನ್ನು ಸ್ವಲ್ಪ ಗಮನಿಸೋಣ. ಕನ್ನಡದ ರೀತಿಯನ್ನು ಬಲ್ಲವರು ಇದು ವ್ಯಸ್ತಪ್ರಯೋಗವೆಂದು ಸುಲಭವಾಗಿ ಹೇಳಿಯಾರು. ಆದುದರಿಂದಲೇ ಒಂದು ವಿಶೇಷ್ಯದ ಹಿಂದೆ ಅನೇಕ ವಿಶೇಷಣಗಳ ಪ್ರಯೋಗ ಬಂದಿದೆ. ಅವುದು ಎಂಬ ಶಬ್ದದ ಮೂಲಸ್ವರೂಪ 'ಆವ' ಎಂದು ಮಾರ್ಪಟ್ಟಿದೆ. 'ಸಣ್ಣದು' ಎಂಬುದು ಸಣ್ಣ ಎಂದಾಗಿದೆ. ಈ ವಿಕಾರಗಳು ಸಮಾಸದಲ್ಲಿ ಮಾತ್ರ ಸಾಧ್ಯ. ಆದುದರಿಂದ ಇದು ಸಮಸ್ತ ಪ್ರಯೋಗವೇ ಇರಬೇಕು ಎಂದು ವಾದಿಸಿದರೆ, ಒಂದು ಎಂಬ ಪದದ ಬಗ್ಗೆ ಏನು ಸಮಾಧಾನ ಹೇಳಲು ಸಾಧ್ಯ? ಅದು ಏಕೆ ಒರ್ ಎಂದು ಮಾರ್ಪಡಲಿಲ್ಲ? ಆದಕಾರಣ, "ಇದು ಸಮಾಸವೇ ಅಲ್ಲ. ವಿಶೇಷಣ ಬಾಹುಳ್ಯಯುಕ್ತವಾದ ವಿಶೇಷ್ಯದ ನಿರ್ದೇಶವಿಷ್ಟೇ ಇಲ್ಲಿಯ ವೈಶಿಷ್ಟ್ಯ. ಆವ, ಸಣ್ಣ ಎಂಬ ವಿಕಾರಗಳು ಸಮಾಸವಿಲ್ಲದಿದ್ದರೂ ಬರಬಹುದು.

ಇದಕ್ಕೆ ಪ್ರಯೋಗವೇ ಪ್ರಮಾಣ. "ಪ್ರಯೋಗ ಶರಣಾ: ವೈಯಾಕರಣಾಃ" ಎಂದು ಪ್ರತಿಪಾದಿಸಿದರೆ ಸಮಾಧಾನವೇನು? ಗಮಕ ಸಮಾಸದಲ್ಲಿ ಮಾತ್ರ ಬಹುಪದ ಸಮಾಸ ಉಂಟೆಂದು ಎಲ್ಲಿ ಯಾವ ಪ್ರಾಮಾಣಿಕ ವೈಯಾಕರಣ ಹೇಳಿದ್ದಾನೆ? ಇದನ್ನೇ ಕರ್ಮಧಾರಯವೆಂದು ಕರೆದರೆ ತಪ್ಪೇನು? ಕರ್ಮಧಾರಯವೆಂಬ ಹೆಸರಿಟ್ಟರೆ ಅನೇಕ ಪದಸಮಾಸ ಸಾಧ್ಯವಾಗುವುದಿಲ್ಲ ವಾದರೆ, ಗಮಕಸಮಾಸವೆಂದು ಅದಕ್ಕೆ ಬೇರೊಂದು ಹೆಸರು ಕೊಟ್ಟ ಮಾತ್ರಕ್ಕೇ ಅದು ಹೇಗೆ ಸಾಧ್ಯವಾಯಿತು? "ಪೂರ್ವೋತ್ತರ ಪದಗಳು ವ್ಯಸ್ತರೂಪದಿಂದಿದ್ದರೂ ಗಮಕಸಮಾಸವಾಗುತ್ತದೆ" ಎಂದರೇನು? ವ್ಯಸ್ತರೂಪದಲ್ಲಿದ್ದರೆ ಸಮಾಸ ಹೇಗಾಗುತ್ತದೆ? ಸಮಾಸಕ್ಕೂ ವ್ಯಸ್ತರೂಪಕ್ಕೂ ಅಂತರವೇ ಇಲ್ಲವೇ? ಏಕಾರ್ಥೀಭಾವ ರೂಪವಾದ ಸಾಮರ್ಥ್ಯವಿಲ್ಲದಿದ್ದರೆ, ಅದು ಸಮಾಸವೆಂಬ ಹೆಸರಿಗೆ ಹೇಗೆ ಅರ್ಹವಾದೀತು? ಏಕಾರ್ಥೀಭಾವವಿದ್ದ ಮೇಲೆ, ವ್ಯಸ್ತರೂಪವೆಂದು ಹೇಳುವುದು ಹೇಗೆ? ಆದುದರಿಂದ, ವ್ಯಸ್ತರೂಪಗಳ ಪ್ರಯೋಗವನ್ನೇ ಪ್ರಾಮಾಣಿಕವೆಂದು ಒಪ್ಪಿಕೊಂಡರೆ, ಸಮಾಸವೇ ಇಲ್ಲವೆಂದು ನಿಸ್ಸಂದೇಹವಾಗಿ ಹೇಳಬೇಕು. ಸಮಾಸವನ್ನೊಪ್ಪಿದರೆ, ಪೂರ್ವೋತ್ತರ ಪದಗಳಿಗೆ ವ್ಯವಧಾನವಿರಬಾರದು. ಸಮಾಸಕ್ಕೆ ಸೇರದ ಇತರ ಪದಗಳು ಮಧ್ಯೆ ಬಂದು ವ್ಯವಧಾನ ಮಾಡಿದರೆ ಅದು ಸಮಾಸವಾಗಲಾರದು. ಆವ, ಒಂದು, ಸಣ್ಣ ಮತ್ತು ಸಂನಿವೇಶ ಈ ನಾಲ್ಕು ಪದಗಳೂ ಸಮಾಸದ ಘಟಕಗಳೇ ಆದರೆ, ಒಂದು ಎಂಬ ಸಂಖ್ಯಾವಾಚಕ ಅವಿಕೃತವಾಗಿ ನಿಲ್ಲ ಲಾರದು. ಆದುದರಿಂದ, ಇದು ಚತುಷ್ಪದ ಸಮಾಸವಲ್ಲ ಎಂದು ಸ್ವಯಂ ವೇದ್ಯವಾಗಿದೆ. ವಿಶೇಷಣ ಪದಗಳಲ್ಲಿ ಕಂಡುಬರುವ ವಿಕಾರವು ಅನುವಾದ್ಯ ವಿಶೇಷಣಗಳಲ್ಲಿ ಸ್ವಾಭಾವಿಕವಾಗಿ ಬರುವ ವಿಕಾರವೇ. ಈ ವಿಕಾರ ಸಮಾಸವಿಲ್ಲದಿದ್ದರೂ ಬರುತ್ತದೆ ಎಂದೇ ಪ್ರಯೋಗಶರಣನಾದ ವೈಯಾಕರಣ ಹೇಳಬೇಕಾಗುತ್ತದೆ.

ವ್ಯಸ್ತರೂಪದಿಂದಿದ್ದರೂ ಗಮಕಸಮಾಸವಾಗುತ್ತದೆ ಎಂಬ ಮಾತಿನ ಆಧಾರದ ಮೇಲೆ, ಶ್ರೀಯುತರು ಗಮಕಸಮಾಸದ ಲಕ್ಷಣವನ್ನು ಈ ರೀತಿ ಸಂಗ್ರಹಿಸಿ ಹೇಳಿದ್ದಾರೆ: "ಸರ್ವನಾಮವು ಪೂರ್ವಪದವಾಗಿ ಮುಂದೆ ನಾಮಪದಗಳಿರುವ ಸಮಾಸ ಗಮಕ. ಗುಣವಚನವು ಪೂರ್ವಪದ ವಾಗಿದ್ದು ಉತ್ತರಪದವು ವಿಶೇಷ್ಯವಾಗಿ, ಪೂರ್ವಪದಾಂತ್ಯದಲ್ಲಿ ಒಂದು ಅಕಾರವಿದ್ದರೆ ಅದು ಗಮಕ ಸಮಾಸವಾಗುತ್ತದೆ. ಕರ್ಮಧಾರಯದಲ್ಲಿಯೂ ಗುಣವಚನವು ಪೂರ್ವಪದವಾಗಿದ್ದರೂ ಪೂರ್ವ ಪದಾಂತ್ಯದಲ್ಲಿ ಅಕಾರವಿರದೆ. ಉತ್ತರಪದಾದಿಯಲ್ಲಿ ಹೆಚ್ಚಾಗಿ ಸಂಧಿನಿಯಮವು ಸೇರಿಕೊಳ್ಳುವುದ ರಿಂದ ಗಮಕವು ಕರ್ಮಧಾರಯದ ಭೇದವೇ ಆದರೂ ತದ್ಭಿನ್ನ. ಕೃದಂತವು ಪೂರ್ವಪದವಾಗಿದ್ದು ಕಾರಕವು ಉತ್ತರಪದವಾಗಿದ್ದರೂ ಗಮಕಸಮಾಸವೇ ಆಗುವುದು. ಇದರಲ್ಲಿಯೂ ಪೂರ್ವ ಪದಾಂತ್ಯದಲ್ಲಿ ಒಂದು ಅಕಾರವಿದೆ. ಸಂಖ್ಯೆ ಪೂರ್ವಪದವಾಗಿದ್ದು ಉತ್ತರ ಪದವೂ ಸಂಖ್ಯೆಯೇ ಆಗಿದ್ದು ಇದರಲ್ಲಿಯೂ ಪೂರ್ವಪದಾಂತ್ಯದಲ್ಲಿ ಅಕಾರವಿದ್ದರೆ ಇದು ಗಮಕವಾಗುತ್ತದೆ. ದ್ವಿಗುವಿನಲ್ಲಾದರೆ ಪೂರ್ವಪದವಾಗಿರುವ ಸಂಖ್ಯೆಗೆ ಆದೇಶವು ಬರುತ್ತದೆ. ಇವೆಲ್ಲವುಗಳ ಲ್ಲಿಯೂ ಪೂರ್ವಪದಾಂತ್ಯದಲ್ಲಿ ಅಕಾರವಿರಲೇಬೇಕು. ಪೂರ್ವೋತ್ತರ ಪದಗಳೆರಡೂ ಸಮಾನಾಧಿಕರಣತ್ವವನ್ನು ಪಡೆದಿರಬೇಕು. ಪೂರ್ವೋತ್ತರ ಪದಗಳನ್ನು ಭಿನ್ನಪದಗಳಾಗಿ ಪ್ರಯೋಗಿಸುವುದಕ್ಕೆ ಸಾಧ್ಯವಾಗಬೇಕು." ಎಂದು ಗಮಕಸಮಾಸದ ವಿವರಣೆ ನೀಡಿದ್ದಾರೆ. ಎಲ್ಲೆಡೆ ಯಲ್ಲೂ ಪೂರ್ವಪದಾಂತ್ಯದಲ್ಲಿ ಅಕಾರವಿರಬೇಕು ಎಂಬ ನಿಯಮವನ್ನೇ ಪ್ರತಿಪಾದಿಸಿದ್ದಾರೆ. ಇದೇ ಗಮಕಸಮಾಸದ ಮುಖ್ಯ ವೈಶಿಷ್ಟ್ಯ. "ಸಮಾಸದಲ್ಲಿ ಪೂರ್ವಪದಾಂತ್ಯದಲ್ಲಿ ಅಕಾರ ಬಂದರೆ ಅದು ಗಮಕಸಮಾಸ; ಆ ರೀತಿ ಅಕಾರ ಬರದಿದ್ದರೆ ಅದು ಕರ್ಮಧಾರಯ" ಎಂದು ಹೇಳಿದಂತಾ

ಗುತ್ತದೆ. ಪೂರ್ವಪದಾಂತ್ಯದಲ್ಲಿ ಅಕಾರ ಎಲ್ಲಿ ಬರುತ್ತದೆ? ಗಮಕಸಮಾಸದಲ್ಲಿ ಮಾತ್ರ. ಗಮಕ ಸಮಾಸವೆಂದರೇನು? ಅತ್ವ ಬರುವ ಸಮಾಸ. ಇದನ್ನೇ ಶಾಸ್ತ್ರಕಾರರು ಅನ್ಯೋನ್ಯಾಶ್ರಯ ದೋಷವೆಂದು ಹೇಳುತ್ತಾರೆ. ಪೂರ್ವೋತ್ತರ ಪದಗಳನ್ನು ಭಿನ್ನ ಪದಗಳಾಗಿ ಪ್ರಯೋಗಿಸುವುದಕ್ಕೆ ಸಾಧ್ಯವಾಗಬೇಕು ಎಂಬ ಈ ನಿಯಮದ ತಾತ್ಪರ್ಯವೇನು? ಸಮಾಸ ಮಾಡಿದಮೇಲೆ ಭಿನ್ನಪದ ಪ್ರಯೋಗಕ್ಕೆ ಅವಕಾಶವೆಲ್ಲಿ? ಸಮಾಸಮಾಡದೆ ವ್ಯಸ್ತವಾಗಿಯೇ ಈ ಶಬ್ದಗಳನ್ನು ಪ್ರಯೋಗಿಸಬಹುದೆಂದರೆ, ಈ ರೀತಿ ಅಸಮಾಸವೇ ಸಿದ್ಧವಾಗುವಾಗ, ಸಮಾಸದ ಕಲ್ಪನೆ ಏಕೆ ಮಾಡಬೇಕು? “ಗಮಕಸಮಾಸದಲ್ಲಿ ಪೂರ್ವಪದ ಭಿನ್ನಪ್ರಯೋಗಾರ್ಹವಾಗಿರಬೇಕು” ಎಂದು ಕೇಶಿರಾಜನು ಎಲ್ಲಿ ಹೇಳಿದ್ದಾನೆ?

ಸಮಾನಾಧಿಕರಣ ಅಥವಾ ಏಕಾಶ್ರಯವಾದ ತತ್ಪುರುಷವೇ ಕರ್ಮಧಾರಯ. ಅದೇ ಸಂಖ್ಯಾಪೂರ್ವವಾದರೆ ದ್ವಿಗು ಎನ್ನಿಸಿಕೊಳ್ಳುತ್ತದೆ. ಈ ಸಮಾಸವೇ ಕೆಲವೆಡೆ ಪೂರ್ವಪದಾಂತ್ಯದಲ್ಲಿ ಅತ್ವವನ್ನು ಪಡೆಯುತ್ತದೆ. ಹೀಗೆ ಅತ್ವವನ್ನು ಪಡೆದ ಸಮಾಸದಲ್ಲಿ ಅರಿಪದ ದೋಷವಿಲ್ಲ. ಬಿರುದಾವಳಿಯಲ್ಲೂ ಕಡುರಾಗ ಮುಂತಾದ ಕೆಲವು ಪದಗಳಲ್ಲೂ ಅರಿಪದ ದೋಷವಿಲ್ಲ. ಬೇರೆಡೆಯಲ್ಲಾದರೆ ಕನ್ನಡ–ಸಂಸ್ಕೃತ ಶಬ್ದಗಳ ಸಮಾಸ ಮಾಡಬಾರದೆಂಬ ನಿಷೇಧವಿದೆ. ಇದಿಷ್ಟೇ ಇಲ್ಲಿ ಚರ್ಚೆಗೆ ಬಂದಿರುವ ವಿಷಯ. ಗಮಕ ಸಮಾಸದ ವಿಷಯವನ್ನು ನಾಗವರ್ಮ ಏಕೆ ಎತ್ತಲಿಲ್ಲ ಎಂಬ ಪ್ರಶ್ನೆಗೆ ನಾನು “ನಾಗವರ್ಮ ಪ್ರಾಚೀನ. ಅವನು ಗಮಕ ಸಮಾಸವನ್ನು ಬಿಡಲು ಅಜ್ಞಾನವೇ ಕಾರಣ ಎನ್ನಬಹುದಾದರೂ” ಎಂದು, ಗಮಕ ಸಮಾಸದ ಸ್ವತಂತ್ರ ಅಸ್ತಿತ್ವವನ್ನು ಒಪ್ಪುವವರ ದೃಷ್ಟಿಯಿಂದ ನಾಗವರ್ಮನಿಗೆ ಅಜ್ಞಾನವನ್ನು ಆರೋಪಿಸಿ ಉತ್ತರ ಕೊಡಲು ಪ್ರಯತ್ನಿಸಿ, ಆದರೆ, ಅರ್ವಾಚೀನನಾದ ಭಟ್ಟಾಕಲಂಕನು ಇದನ್ನು ಏಕೆ ಉಪೇಕ್ಷಿಸಿದ ಎಂದು ಇನ್ನೊಂದು ಶಂಕೆಯನ್ನೇ ಎತ್ತಿ ಹಿಡಿದಿದ್ದೇನೆ. ನಾಗವರ್ಮ ಗಮಕ ಸಮಾಸವನ್ನು ಬಿಟ್ಟದ್ದು ಉಪೇಕ್ಷೆಯಿಂದಲೇ. ಗಮಕವೆಂಬ ಭೇದ ಅಗತ್ಯವಿಲ್ಲವೆಂದೇ ಭಾವಿಸಿ ಆತ ಅದನ್ನು ಕೈ ಬಿಟ್ಟಿದ್ದಾನೆ. ಆದರೆ ಗಮಕ ಸಮಾಸವೆಂಬ ಹೊಸ ಭೇದ ಉಂಟೆಂದು ವಾದಿಸುವವರು, ‘ನಾಗವರ್ಮ ಹಳಬ, ಅವನ ಗ್ರಂಥದಲ್ಲಿ ಲೋಪ ದೋಷಗಳಿರುವುದು ಸಹಜ; ಅವನು ಹೇಳದಿದ್ದುದರಿಂದ ಗಮಕ ಸಮಾಸವೇ ಇಲ್ಲ ಎಂದು ವಾದಿಸಕೂಡದು; ಅವನು ಅಜ್ಞಾನದಿಂದ ಈ ವಿಷಯವನ್ನು ಹೇಳದಿರಬಹುದು. ಅವನು ಮರೆತರೂ ಕೇಶಿರಾಜ ಗಮಕ ಸಮಾಸವನ್ನು ಪ್ರತಿಪಾದಿಸಿದ್ದಾನೆ’ ಎಂದು ಉಪಪಾದಿಸಬಹುದೆಂಬ ಭಾವದಿಂದ ಹಾಗೆ ಬರೆದೆ.

ಭಟ್ಟಾಕಳಂಕನು ಗಮಕ ಸಮಾಸವನ್ನು ಹೇಳಿಲ್ಲ. ಹಾಗಾದರೆ ಪೂರ್ವಪದಾಂತ್ಯದ ಅತ್ವವೆಂಬ ವಿಶೇಷ ಅವನಿಗೆ ಗೋಚರವಾಗಲಿಲ್ಲವೇ? ಇಲ್ಲಿ ಪೂರ್ವಪದಾಂತ್ಯದ ಅತ್ವವನ್ನೇ ಅನುವಾದಿಸಿ ‘ಅತಃ ಪ್ರಕೃತ್ಯಾ” ಎಂಬ ಸೂತ್ರವನ್ನೇ ರಚಿಸಿರುವ ಆ ಶಾಸ್ತ್ರಕಾರನಿಗೆ, ಈ ವಿಷಯ ತಿಳಿದಿರಲಿಲ್ಲವೆಂದು ಹೇಳಲಾಗದು. ಆದರೂ, ಪಾಡುವ ತುಂಬಿ ಮುಂತಾದುವು ಸಮಾಸಗಳೇ ಅಲ್ಲವೇ ಎಂಬ ಸಂಶಯವನ್ನೂ ಆತ ವ್ಯಕ್ತಪಡಿಸಿದ್ದಾನೆ. “ಅತ್ರಾಯಂ ವಿಶೇಷಃ। ಎತ್ತುವ, ಪೊತ್ತುವ, ನೋಡಿದ, ಬೇಡಿದ ಇತ್ಯಾದಯಃ ಸಾಂಪ್ರತಿಕ ಕ್ರಿಯಾದ್ಯೋತಕಾಃ, ಎತ್ತಿದ, ಪೊತ್ತಿದ, ನೋಡಿದ ಇತ್ಯಾದಯಃ ಅತೀತ ಕ್ರಿಯಾದ್ಯೋತಕಾಶ್ಚಶಬ್ದಾಃ ವಿಶೇಷಣವಾಚಿನೋಪಿ ಉತ್ತರಪದೇನ ಸಮಸ್ತಾ ಏವೇತಿ ಏಕಃ ಪಕ್ಷಃ। ವ್ಯಸ್ತಾ ಏವ ಅರ್ಥಾನುಗುಣತಯಾ ಸಂಬಂಧನೀಯಾ ಇತಿ ಅಪರಃ ಪಕ್ಷಃ। ಪಕ್ಷದ್ವಯಮಪಿ ಸಾಂಪ್ರದಾಯಿಕಮೇವ॥ ಎಂದು ಹೇಳಿದ್ದಾನೆ ಮುಂದೆ ಆ ಎರಡು ಪಕ್ಷಗಳಿಗೂ ಉದಾಹರಣೆಯನ್ನೂ ಕೊಟ್ಟಿದ್ದಾನೆ. ಆದರೆ, ಎರಡು ಪಕ್ಷಗಳ ವಿಷಯವನ್ನು ಹೇಳಿಯೂ, ಇದು ಗಮಕ ಸಮಾಸವೆಂದು—ಕೇಶಿರಾಜನ ನಿರೂಪಣೆ ಅವನ ಮುಂದೆ ಇದ್ದರೂ ಸಹ—ಹೇಳದಿರಲು ಕಾರಣವೇನು? ಶ್ರೀರಾಮಾನಟಿ ಮುಂತಾದ ಪದ್ಯದಲ್ಲಿ ವಿಶೇಷಣದ ಪರಪ್ರಯೋಗಕ್ಕೆ ಹೇಗೆ

ಸಮರ್ಥನೆ ದೊರೆಯಬಹುದು? ಅದಕ್ಕಾಗಿಯೇ ಕ್ಲಿಷ್ಟಕಲ್ಪನೆಯನ್ನೂ ಒಪ್ಪಿ 'ಅಗಂತಂಶಬ್ದರೂಪಂ ಕಥಂಚಿದವ್ಯಯಂ ಭವತೀತಿಚ' ಎಂದು ಇನ್ನೊಂದು ಸಮಾಧಾನವನ್ನು ಸೂಚಿಸಿದ್ದಾನೆ. ಈ ರೀತಿ ಕ್ಲಿಷ್ಟಕಲ್ಪನೆ ಮಾಡುವಾಗಲೂ ಗಮಕ ಸಮಾಸದ ಹೆಸರು ಹೇಳದಿರುವುದರ ರಹಸ್ಯವೇನು?

ಭಟ್ಟಾಕಳಂಕ, ಕೇಶಿರಾಜ, ನಾಗವರ್ಮ ಮತ್ತು ಕವಿರಾಜಮಾರ್ಗಕಾರನ ಮುಂದೆ ಇದ್ದ ಸಮಸ್ಯೆ–ಸಂಸ್ಕೃತ ಮತ್ತು ಕನ್ನಡ ಶಬ್ದಗಳ ಮಿಶ್ರ ಸಮಾಸದ ಸಮಸ್ಯೆ. ಉಳಿದ ಲೇಖಕರೆಲ್ಲಾ ಕೆಲವು ಕಡೆ ಮಾತ್ರ ಮಿಶ್ರಸಮಾಸ ಉಂಟೆಂದು ಹೇಳಿ, ಈ ಸಮಸ್ಯೆಯನ್ನು ಬಗೆಹರಿಸಿದರು. ಕೇಶಿರಾಜನು ಮಾತ್ರ ಇದು ಗಮಕ ಸಮಾಸವೆಂದು ಹೊಸ ಹೆಸರು ಕೊಟ್ಟು, ಈ ಸಮಾಸದಲ್ಲಿ ಅರಿಸಮ ದೋಷವಿಲ್ಲ ಎಂದು ವಿಧಿಸಿದ್ದಾನೆ. ಆದುದರಿಂದ, ಇದು ಸಮಾಸದ ಭೇದೋಪಭೇದದ ಪ್ರಶ್ನೆಯಲ್ಲ; ಕನ್ನಡ–ಸಂಸ್ಕೃತ ಮಿಶ್ರಣದ ಸಮಸ್ಯೆ ಎಂದು ಸ್ಪಷ್ಟವಾಗುತ್ತದೆ. ಪೂರ್ವಪದಾಂತ್ಯದ ಅತ್ವಕ್ಕಾಗಿ ಒಂದು ಹೊಸ ಸಂಜ್ಞೆಯನ್ನೇ ಸೃಷ್ಟಿಸಬೇಕಾದ ಅಗತ್ಯವಿಲ್ಲ.

ಸಂಸ್ಕೃತದಲ್ಲಿ "ಗಮಕತ್ವಾತ್ ಸಮಾಸಃ" ಎಂಬ ಮಾತು ಬರುತ್ತದೆ. ಆದರೆ ಅದರ ಅರ್ಥ ಬೇರೆ. ಕೆಲವೆಡೆ ಪೂರ್ವೋತ್ತರ ಪದಗಳಿಗೆ ಪದಾಂತರಾಕಾಂಕ್ಷೆ ಇರುವುದರಿಂದ, ಸಾಮರ್ಥ್ಯವಿಲ್ಲದಿರಬಹುದು. ಹಾಗಾದರೂ, ಗಮಕತ್ವಾತ್ ಎಂದರೆ ಪೂರ್ವಪದಾರ್ಥಾನ್ವಿತ ಸ್ವಾರ್ಥಬೋಧಕತೆ ಇರುವುದರಿಂದ ಸಮಾಸವಾಗಬಹುದು. 'ದೇವದತ್ತಸ್ಯ ಗುರುಕುಲಂ' ಎಂಬುದು ಇದಕ್ಕೆ ಉದಾಹರಣೆ. ಇಲ್ಲಿ ಗುರುಶಬ್ದವು ದೇವದತ್ತಪದ ಸಾಕಾಂಕ್ಷವಾಗಿದ್ದರೂ, ಏಕಾರ್ಥೀಭಾವ ಸಾಮರ್ಥ್ಯಕ್ಕೆ ಚ್ಯುತಿಯಿಲ್ಲವೆಂದು ಒಪ್ಪಿ ಸಮಾಸವನ್ನು ಒಪ್ಪಿಕೊಂಡಿದ್ದಾರೆ. 'ಸಮರ್ಥಃ ಪದವಿಧಿಃ' ಎಂಬ ಸೂತ್ರದಲ್ಲಿ ಪಾಣಿನಿ ಸಮಾಸಕ್ಕೆ ಏಕಾರ್ಥೀಭಾವ ರೂಪವಾದ ಸಾಮರ್ಥ್ಯ ಬೇಕೆಂದು ಹೇಳಿದ್ದಾನೆ. ಕೆಲವೆಡೆ ಆ ಸಾಮರ್ಥ್ಯಕ್ಕೆ ಕುಂದೊದಗಿದ್ದರೂ ಸಮಾಸವಾಗಬಹುದೆಂಬುದೇ 'ಗಮಕತ್ವಾತ್'ಎಂಬ ಕಾರಣದ ಅರ್ಥ. ಇಂತಹ ಸಮಾಸಗಳನ್ನು ಸಂಸ್ಕೃತದಲ್ಲಿ ಗಮಕ ಸಮಾಸವೆನ್ನುತ್ತಾರೆ. ಕನ್ನಡದ ಗಮಕ ಸಮಾಸಕ್ಕೂ ಇದಕ್ಕೂ ಯಾವ ಸಂಬಂಧವೂ ಇಲ್ಲ.

ಶ್ರೀ ಭಟ್ಟರ ಲೇಖನದಲ್ಲಿ ಇನ್ನೂ ಅನೇಕ ವಿಷಯಗಳ ಪ್ರಸ್ತಾಪ ಬಂದಿದೆ, ಆದರೆ ಶ್ರೀಯುತರ ಪ್ರತಿಯೊಂದು ಮಾತನ್ನೂ ಖಂಡಿಸಬೇಕೆಂಬ ಆಗ್ರಹ ನನಗಿಲ್ಲ. 'ಗಮಕ ಸಮಾಸದಿಂ' ಮುಂತಾದ ಪದ್ಯ ಕೇಶಿರಾಜನದೇ ಎಂದು ಹೇಳಲು ಖಚಿತವಾದ ಆಧಾರವಿಲ್ಲವೆಂಬ ನನ್ನ ಹೇಳಿಕೆಯನ್ನು ನಿರಾಕರಿಸುತ್ತಾ, ಶ್ರೀಯುತರು "ಈ ಪದ್ಯಕ್ಕೆ ವೃತ್ತಿ ಅಥವಾ ವ್ಯಾಖ್ಯಾನ ದೊರೆಯದಿರುವುದೇ ಅವರ ಈ ಸಂದೇಹಕ್ಕೆ ಪ್ರಬಲ ಕಾರಣ. ಆದರೆ ಶಬ್ದಮಣಿದರ್ಪಣದ ಧಾತುಪ್ರಕರಣದ ಎರಡು ಸೂತ್ರಗಳಿಗೂ ಗ್ರಂಥಾಂತ್ಯದ ಇತರ ನಾಲ್ಕು ಪದ್ಯಗಳಿಗೂ ನಾನು ತಿಳಿದಂತೆ ವೃತ್ತಿಯಾಗಲಿ ವ್ಯಾಖ್ಯಾನವಾಗಲಿ ಇಲ್ಲ. ಈ ಕಾರಣದಿಂದ ಇವಾವೂ ಕೇಶಿರಾಜನ ಕೃತಿಗಳಲ್ಲವೆಂದು ಇತ್ಯರ್ಥ ಮಾಡಬಹುದೇ?" ಎಂದು ಪ್ರತಿಪ್ರಶ್ನೆ ಎತ್ತಿದ್ದಾರೆ. ಮತ್ತೆ "ಆ ಪದ್ಯದಲ್ಲಿ ಅವನು ಹೇಳಿದ ವೈಶಿಷ್ಟ್ಯಗಳೆಲ್ಲ ಅವನ ಗ್ರಂಥದಲ್ಲಿ ವಿವೇಚಿಸಲ್ಪಟ್ಟವುಗಳೇ ಹೊರತು ಅವನ ಗ್ರಂಥವನ್ನೋದಿ ತಾನು ಕಂಡುಕೊಂಡ ವಿಷಯಗಳನ್ನು ಅನ್ಯರಾರೋ ಒಬ್ಬ ಆ ಪದ್ಯದಲ್ಲಿ ಬರೆದನೆಂದು ಹೇಳುವುದು ಯುಕ್ತಿಯುಕ್ತವಾಗದು" ಎಂದು ತಮ್ಮ ತೀರ್ಮಾನವನ್ನು ಹೇಳಿದ್ದಾರೆ. ಗ್ರಂಥಾಂತದಲ್ಲಿ ಬರುವ ಐದು ಪದ್ಯಗಳ ಬಗ್ಗೆ, ಶ್ರೀ ಡಿ. ಎಲ್. ನರಸಿಂಹಾಚಾರ್ಯರ ಸಂಸ್ಕರಣದಲ್ಲಿ "ಈ ಪದ್ಯಗಳು 'ಕ' ಪ್ರತಿಯಲ್ಲಿಲ್ಲ" ಎಂದು ಟಿಪ್ಪಣಿ ಬರೆಯಲಾಗಿದೆ. ಗ್ರಂಥದ ಕೊನೆಯಲ್ಲಿರುವ ಈ ಪದ್ಯ ಬಂದಿ ಸಮಾಪ್ತಿಸೂಚಕವಾಗಿರದೆ, ಮಹತ್ವಪೂರ್ಣವಾದ ವಿಷಯಗಳ ವಿವೇಚನೆಯಿಂದ ಕೂಡಿದೆ. ಆದುದರಿಂದ ವೃತ್ತಿಕಾರನು ಇದನ್ನು ಉಪೇಕ್ಷಿಸಬಾರದಿತ್ತು. ಹೀಗಾದರೂ ವೃತ್ತಿ ಇಲ್ಲದಿರುವುದರಿಂದ

ಇದು ನಿಜವಾಗಿಯೂ ಕೇಶಿರಾಜನ ರಚನೆಯೇ ಎಂಬ ಸಂದೇಹ ಮೂಡಬಹುದು. ನಿಸ್ಸಂದೇಹವಾಗಿ ಈ ಪದ್ಯ ಕೇಶಿರಾಜನದೇ ಎಂದು ಸಿದ್ಧವಾದರೆ, ನನಗೆ ಯಾವ ಅಸೂಯೆಯೂ ಇಲ್ಲ. ಸಂದೇಹ ಮೂಡಬಹುದು ಎಂದು ಹೇಳಿದ ಮಾತ್ರಕ್ಕೆ, ಈ ಕೃತಿ ಕೇಶಿರಾಜನದಲ್ಲ ಎಂಬ ನಿರ್ಣಯಕ್ಕೆ ಬಂದಂತೆಯೂ ಆಗಲಿಲ್ಲ. ಇರಲಿ.

ನೂಱಪತ್ತು ಎಂಬ ಗಮಕ ಸಮಾಸದ ವಿಗ್ರಹವಾಕ್ಯದ ವಿಷಯದಲ್ಲಿ ಶ್ರೀಯುತರು, "ನೂಱಱಪತ್ತು" ಎಂದು ಷಷ್ಠೀವಿಭಕ್ತ್ಯಂತ ಪೂರ್ವಪದವನ್ನು ಸೇರಿಸಿ ತೋರಿಸಿದ್ದಾರೆ. ನಮ್ಮ ದೈನಂದಿನ ಪ್ರಯೋಗವೂ ಅನ್ಯದ್ರಾವಿಡ ಭಾಷಾ ಪ್ರಯೋಗವೂ ಇದಕ್ಕೆ ಸಮರ್ಥಕವಾಗಿವೆ ಎಂದಿದ್ದಾರೆ. ೧೯೬೬ ಎಂಬ ಸಂಖ್ಯೆಯನ್ನು ನಾವು ಕನ್ನಡದಲ್ಲಿ ಒಂದುಸಾವಿರದ ಒಂಭೈನೂರ ಅರವತ್ತಾರು ಎಂದೇ ಹೇಳುತ್ತೇವೆ. ಇಲ್ಲಿ ಸಾವಿರದ ಮತ್ತು ಒಂಭೈನೂರ ಎಂಬ ಶಬ್ದಗಳು ಷಷ್ಠೀ ವಿಭಕ್ತ್ಯಂತವಾಗಿವೆ. ಹೀಗೆ ವಿಗ್ರಹಿಸುವಾಗ ತತ್ಪುರುಷದ ಲಕ್ಷಣ ಇಲ್ಲಿರುವುದರಿಂದಲೇ ಕೇಶಿರಾಜನು ಸಂಖ್ಯಾ ಪೂರ್ವಪದ ಗಮಕವನ್ನು ಖಚಿತವಾಗಿ ತತ್ಪುರುಷದ ಭೇದವೆಂದು ಹೇಳಿದ್ದಾನೆ" ಎಂದು ಪ್ರತಿಪಾದಿಸಿದ್ದಾರೆ. ಈ ಮಾತು ಸ್ವೀಕಾರ್ಹವಾಗಿದೆ. ಕೇಶಿರಾಜನು ಗಮಕ ಸಮಾಸವನ್ನು 'ಕರ್ಮಧಾರಯಮದುವುಂ' ಎಂದು ಹೇಳಿರುವಾಗ, ವೃತ್ತಿಕಾರನು "ಉಂ ಎಂಬ ಸಮುಚ್ಚಯಾರ್ಥಕ ಅವ್ಯಯದಿಂದ ಅದು ಎತ್ತಾಣುಂ ತತ್ಪುರುಷಮಪ್ಪುದು" ಎಂದು ವ್ಯಾಖ್ಯಾನ ಮಾಡಿದ ರಹಸ್ಯ ಇದೇ ಎಂದು ಸ್ಪಷ್ಟವಾಗುತ್ತದೆ. ಅದರೆ, ಇದು ತತ್ಪುರುಷವೆಂದೇ ಏಕೆ ಹೇಳಲಿಲ್ಲ ಎಂದು ಶಂಕಿಸಿ, "ಸಂಖ್ಯಾ ಪೂರ್ವಪದವಾಗಿರುವುದೇ ಮೊದಲನೆಯ ಕಾರಣ; ಸಂಖ್ಯೋಭಯ ಪದವಾಗಿರುವುದು ಎರಡನೆಯ ಕಾರಣ ಸಂಖ್ಯಾಪೂರ್ವಕವಾಗಿದೆಯೆಂದು ದ್ವಿಗುವೆನ್ನುವಂತಿಲ್ಲ. ಸಂಖ್ಯೋಭಯಪದವೆಂದು ಬಹುವ್ರೀಹಿಯೆನ್ನುವಂತಿಲ್ಲ. ಪೂರ್ವಪದ ಸಂಖ್ಯೆಯಾದ ಕಾರಣ ಕರ್ಮಧಾರಯವೆಂದು ಹೇಳುವಂತಿಲ್ಲ. ಈ ಕಾರಣಗಳಿಂದಲೇ ಇದನ್ನು ಗಮಕವೆನ್ನಬೇಕಾಯಿತು" ಎಂದಿದ್ದಾರೆ. ಸ್ವತಃ ತಾವೇ ಷಷ್ಠೀ-ತತ್ಪುರುಷ ಸಮಾಸವನ್ನು ನಿರೂಪಿಸಿ, ಮತ್ತೆ ಸಂಖ್ಯಾಪೂರ್ವವಾದುದರಿಂದ ತತ್ಪುರುಷವಲ್ಲವೆಂದರೆ ಏನರ್ಥ? ಸಮಾನಾಧಿಕರಣವಲ್ಲದುದರಿಂದ ಕರ್ಮಧಾರಯವಲ್ಲ. ಆದರೆ, ಪೂರ್ವಪದ ಷಷ್ಠೀವಿಭಕ್ತ್ಯಂತವಾದುದರಿಂದ ತತ್ಪುರುಷವಾಗಲು ಬಾಧಕವೇನು? "ಸಂಖ್ಯಾ ಪೂರ್ವಪದವೂ ಸಂಖ್ಯೋಭಯ ಪದವೂ ತತ್ಪುರುಷವಾಗಬಾರದು" ಎಂಬ ನಿಯಮ ಎಲ್ಲಿದೆ? ವಾಸ್ತವವಾಗಿ ಅರ್ಥವಿಚಾರ ಮಾಡಿದರೆ, ಇಲ್ಲಿ ಷಷ್ಠೀ ವಿಭಕ್ತಿಗೆ ಉಪಪತ್ತಿಯೇ ಇಲ್ಲ. ಮಾವಿನ ಮರ ಮುಂತಾದ ಪ್ರಯೋಗಗಳಲ್ಲಿ ಅಭೇದಾರ್ಥದಲ್ಲಿ ಷಷ್ಠೀ ಬಂದಿದೆ ಎನ್ನಬಹುದು. ಇಲ್ಲಿ ಆಭೇದಾರ್ಥಕ್ಕೂ ಅವಕಾಶವಿಲ್ಲ. ಆದರೂ ಪ್ರಯೋಗ ಸಾಮಂಜಸ್ಯಕ್ಕಾಗಿ, ಚಿಕ್ಕ ಸಂಖ್ಯೆಯನ್ನು ದೊಡ್ಡ ಸಂಖ್ಯೆಯ ಅಂಗವೆಂದು ಭಾವಿಸಿ, ಅಂಗಾಂಗಿಭಾವ ಸಂಬಂಧೇ ಷಷ್ಠೀ ಎನ್ನಬೇಕು. ಆದರೂ ಉತ್ತರ ಪದಾರ್ಥ ಪ್ರಾಧಾನ್ಯಕ್ಕೆ ಚ್ಯುತಿಬರಬಾರದೆಂಬುದಕ್ಕಾಗಿ ನಾನು ಮಧ್ಯಮಲೋಪೀ ಸಮಾಸದ ರೀತಿಯನ್ನು ಸೂಚಿಸಿದೆ. ಆಗ ಸಾಮಾನಾಧಿಕರಣ್ಯವೂ ಹೊಂದುತ್ತದೆ. ಷಷ್ಠೀ ಸಮಾಸವನ್ನೇ ಆಶ್ರಯಿಸಿದರೂ, ಹೇಗಾದರೂ ಸಮುಚ್ಚಯದ ಅರ್ಥ ಬರುವಂತೆ ವೃತ್ತಿ ಕಲ್ಪಿಸಬೇಕು. ಹೇಗಾದರೂ ಇರಲಿ. ಪೂರ್ವ ಪದಾಂತ್ಯದ ಅತ್ವವನ್ನು ಬಿಟ್ಟರೆ ಈ ಸಮಾಸವನ್ನು ಷಷ್ಠೀ ಸಮಾಸವೆಂದೋ ಕರ್ಮಧಾರಯವೆಂದೋ ಕರೆಯುವುದರಲ್ಲಿ ಬಾಧಕವೇನು? ಆದುದರಿಂದ ಗಮಕವೆಂಬುದು ಸಮಾಸದ ಒಂದು ಹೊಸ-ಸ್ವತಂತ್ರ-ಭೇದವಲ್ಲವೆಂಬ ನಿರ್ಣಯವೇ ಸರಿಯೆಂದು ಕಾಣುತ್ತದೆ.

---

# ಭಾರತೀಯ ಗ್ರಂಥಸಂಪಾದನ ಪರಿಚಯ

ಮೂಲ: ಡಾ. ಎಸ್. ಎಂ. ಕತ್ರೆ

ಅನುವಾದ: ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ

(ಹಿಂದಿನ ಸಂಚಿಕೆಯಿಂದ)

## ಅಧ್ಯಾಯ V : ಪರಂಪರಾಗತ ಪಾಠದಲ್ಲಿ ಸ್ಖಾಲಿತ್ಯಗಳಿಗೆ ಕಾರಣಗಳು

ಪಾಠವೊಂದರ ಯೋಗ್ಯಪರಿಷ್ಕರಣದಿಂದ ಆಗುವ ಕೆಲಸವಿಷ್ಟು. ಅದು ಪರಂಪರಾಗತ ಪಾಠಕ್ಕೆ ಆಧಾರವಾದ ಮುಖ್ಯಲೇಖನಗಳ ಸಾಕ್ಷ್ಯವನ್ನು ವರದಿಮಾಡುತ್ತದೆ. ಅಲ್ಲದೆ ಲೇಖನಗಳ ಕಾಲ, ಲಕ್ಷಣಗಳ ಬಲದ ಮೇಲೆ ಯಾವ ಲೇಖನಗಳು ನಂಬಿಕೆಗೆ ಹೆಚ್ಚು ಯೋಗ್ಯವೆಂಬುದನ್ನು ನಿರ್ಣಯಿಸುತ್ತದೆ. ಇಷ್ಟಾದರೂ ಮೂಲದಲ್ಲಿ ಕೃತಿಕಾರ ಬರೆದದ್ದಲ್ಲವೆನಿಸುವ ಶಬ್ದಗಳಿಂದ ಕೂಡಿದ ಪಾಠಭಾಗಗಳಿದ್ದರೆ ಅವುಗಳನ್ನು ವರ್ಜಿಸಿಬಿಡುತ್ತದೆ. ಹೀಗೆ ಬಿಟ್ಟುಬಿಡುವ ಪಾಠಭಾಗಗಳ ಸಂಖ್ಯೆಯು ನಾವು ಪರಿಶೀಲಿಸುತ್ತಿರುವ ನಿರ್ದಿಷ್ಟ ಗ್ರಂಥಪಾಠದ ಸ್ವರೂಪ ಮತ್ತು ಇತಿಹಾಸಗಳಿಗೆ ಅನುಗುಣವಾಗಿ ಕೆಲವು ಸಲ ಹೆಚ್ಚಾಗಿಯೂ ಮತ್ತೆ ಕೆಲವು ಸಲ ಕಡಿಮೆಯಾಗಿಯೂ ಇರುತ್ತದೆ. ಅಂಥ ಪಾಠಾಂತರಗಳನ್ನು ವಿಕೃತ ಪಾಠಭಾಗಗಳೆಂದು ಕರೆಯುತ್ತಾರೆ. ಈ ವಿಕೃತ ಪಾಠಭಾಗಗಳನ್ನು ಗ್ರಂಥದಲ್ಲಿ ಉಳಿಸಿಕೊಳ್ಳುವ ಮೊದಲು ಅವುಗಳನ್ನು ತೆಗೆಯಬೇಕೇ, ತಿದ್ದಬೇಕೇ, ಎಂದು ವಿಚಾರ ಮಾಡಬೇಕು. ಮೂಲಪಾಠದ ಭಾಗವೊಂದು ಯಾವ ಗುರುತನ್ನೂ ಉಳಿಸದೆ ಲೋಪವಾಗಿಬಿಟ್ಟದೆಯೆಂದು ಸಿದ್ಧವಾದಲ್ಲಿ ಅದು ಸರಿಪಡಿಸಲಾಗದಂಥ ನಷ್ಟ. ಹಾಗಿದ್ದಾಗ ಸಂಪಾದಕನು ತನ್ನ ಪಾಠದಲ್ಲಿ ಆ ಲೋಪವನ್ನು ಎಚ್ಚರದಿಂದ ಗುರುತು ಮಾಡಬೇಕು. ಆದರೆ ವಿಕೃತಪಾಠಭಾಗಗಳಲ್ಲಿ ಮೂಲಪಾಠವು ಪೂರ್ತಿ ನಷ್ಟವಾಗಿ ಹೋಗಿರದೆ ವಿರೂಪಗೊಂಡು ಉಳಿದಿರುವ ನಿದರ್ಶನಗಳೇ ಹೆಚ್ಚು. ತಿದ್ದುಪಡಿ ವಿಧಾನದಿಂದ ಅವುಗಳನ್ನು ಹೆಚ್ಚು ಕಡಿಮೆ ಸಂಭಾವ್ಯಪಾಠಗಳಾಗಿ ಮಾಡಬಹುದು.

ವಿಕೃತವಾದುವೆಂದು ಸ್ಪಷ್ಟವಾಗಿ ತಿಳಿದ ಪಾಠಭಾಗಗಳೂ ಸೇರಿ, ಏನೇನು ಪ್ರಮಾಣಗಳಿವೆಯೋ ಅವೆಲ್ಲದರ ಬಲದ ಮೇಲೆ ಮೂಲದ ಪಾಠವನ್ನು ಸಂಯೋಜಿಸಬೇಕು. ಇದು ಸಾಧ್ಯವಾಗಲು ಮೂಲಪಾಠವನ್ನು ಹೀಗೆ ಬಹುಬಗೆಯ ವಿರೂಪಕ್ಕೆ ಗುರಿಮಾಡುವ ಕಾರಣಗಳನ್ನು ತಿಳಿದು ತೂಗಬೇಕಾಗುತ್ತದೆ.

ಪರಂಪರಾಗತ ಪಾಠದಲ್ಲಿ ಸೇರುವ ದೋಷಗಳನ್ನು ನಾವು ಆಗಲೇ ಸೂಚಿಸಿದ್ದೇವೆ. ಇವು ಚಾಕ್ಷುಷ ಇಲ್ಲವೆ ಮಾನಸಿಕ ದೋಷಗಳಾಗಿರಬಹುದು; ಆಕಸ್ಮಿಕವೋ ಇಲ್ಲವೆ ಉದ್ದೇಶ

ಪೂರ್ವಕವಾದುವೋ ಆಗಿರಬಹುದು ; ವಿವಕ್ಷಿತ, ಅವಿವಕ್ಷಿತ ಅಥವಾ ಅರ್ಧವಿವಕ್ಷಿತ ದೋಷಗಳಾಗಿರ ಬಹುದು. ಅನುಭವದ ಆಧಾರದಮೇಲೆ ಈ ಲೇಖನಸ್ಖಾಲಿತ್ಯಗಳ ಪರಿಪೂರ್ಣವಾದ ವರ್ಗೀ ಕರಣವನ್ನು ಮಾಡಲು ಈವರೆಗೂ ಶಾಸ್ತ್ರಜ್ಞರಿಗೆ ಸಾಧ್ಯವಾಗಲಿಲ್ಲ. ಜೆಬ್ (Jebb) ಹೇಳುವಂತೆ ಉದ್ದಿಷ್ಟದೋಷಗಳಿಗೆ ಕಾರಣವಾದ ಉದ್ದೇಶಗಳನ್ನು ಅಥವಾ ಪ್ರಮಾದಗಳಿಗೆ ದಾರಿಮಾಡುವ ಆಕಸ್ಮಿಕಗಳನ್ನು ಪಟ್ಟಿಮಾಡುವುದು ಅಸಾಧ್ಯ. ಏಕೆಂದರೆ ಈ ಪಾಠಲೇಖನ ಪರಂಪರೆಯ ಅಂಗಗಳಾಗಿದ್ದವರು ವ್ಯಕ್ತಿಗಳೇ ಹೊರತು ಯಂತ್ರಗಳಲ್ಲ. ಈ ಕೆಳಗೆ ಪರಿಶೀಲಿಸುವ ಅನೇಕ ಬಗೆಯ ದೋಷಗಳಿಗೆ, ಅವು ಸಂಭವಿಸುವ ರೀತಿಯಲ್ಲಿಯೂ ಪ್ರಮಾಣದಲ್ಲಿಯೂ ವ್ಯತ್ಯಾಸವಿದೆ. ಗ್ರಂಥಸಂಪಾದನೆಯ ಈ ವಿಭಾಗಕ್ಕೆ ಭದ್ರವಾದ ಅಡಿಪಾಯ ಹಾಕಬೇಕಾದಲ್ಲಿ ವಿಶಿಷ್ಟಕ್ರಮ ವೊಂದನ್ನು ಅನುಸರಿಸಬೇಕು. ಯಾವ ಹಸ್ತಪ್ರತಿಗಳ ಮೂಲವು ಲಭ್ಯವಿರುವುದೋ (ಮತ್ತು ಯಾವುದರ ಪಾಠಾಂತರಗಳನ್ನು ಸಾಮಾನ್ಯವಾಗಿ ನಮ್ಮ ಪರಿಷ್ಕೃತ ಮುದ್ರಣದಲ್ಲಿ ಬಿಟ್ಟು ಬಿಡುವೆವೋ) ಅಂಥ ಪ್ರತಿಗಳ ಆಧಾರದ ಮೇಲೆ ಬೇರೆಬೇರೆ ತಲೆಮಾರುಗಳಿಗೆ, ಸಾಹಿತ್ಯದ ಬಗೆಗಳಿಗೆ ಮತ್ತು ಅವು ರಚಿತವಾದ ಪ್ರದೇಶಗಳಿಗೆ ಅನುಸಾರವಾಗಿ ವ್ಯಕ್ತಿವಿಶಿಷ್ಟವಾದ ಲೇಖನ ಸ್ಖಾಲಿತ್ಯಗಳ ಒಂದು ಪಟ್ಟಿಯನ್ನು ತಯಾರಿಸಬೇಕು ಈ ದೋಷಗಳನ್ನು ಅವುಗಳ ವಿಧಗಳಿಗೆ ಅನುಸಾರವಾಗಿ ಜೋಡಿಸಿರಬೇಕು. ಅನಂತರ ಯಾವ ಹಸ್ತಪ್ರತಿಗಳ ಮೂಲವನ್ನು ಪಾಠ ಪರಿಷ್ಕರಣ ವಿಧಾನದ ಮೂಲಕ ಪುನರ್ರಚಿಸಲು ಸಾಧ್ಯವಿದೆಯೋ ಅಂಥ ಹಸ್ತಪ್ರತಿಗಳಿರುವ ವ್ಯಕ್ತಿವಿಶಿಷ್ಟವಾದ ಸ್ಖಾಲಿತ್ಯಗಳನ್ನೇ ಆಯ್ದುಕೊಳ್ಳಬೇಕು. ಇಂಥ ಪ್ರಸಂಗಗಳಲ್ಲಿ ಮಾಡ ಬೇಕಾದ ಮೊದಲ ಕೆಲಸವೆಂದರೆ ಯಾವ ಪ್ರತಿಗಳ ಮೂಲವನ್ನು ಆಯ್ಕೆಯಿಂದ ಸಂಯೋಜಿಸಲು ಸಾಧ್ಯವಿದೆಯೋ ಅಂಥ ಹಸ್ತಪ್ರತಿಗಳನ್ನು, ಯಾವ ಪ್ರತಿಗಳ ಮೂಲವನ್ನು ಕೇವಲ ಊಹೆಯ ಅಥವಾ ಕಲ್ಪನೆಯ ಬಲದಿಂದ ಕಂಡುಕೊಳ್ಳಬೇಕಾಗಿದೆಯೋ ಅಂಥ ಪ್ರತಿಗಳಿಂದ ಪ್ರತ್ಯೇಕಿಸ ಬೇಕು.

ಸದ್ಯದ ವಸ್ತುಸ್ಥಿತಿಗನುಗುಣವಾಗಿ ಈ ತಪ್ಪುಗಳನ್ನು ಕೆಲವು ರೀತಿಗಳಲ್ಲಿ ವಿಂಗಡಿಸ ಬಹುದು. ಹಾಲ್‌ರವರ ವರ್ಗೀಕರಣವನ್ನೇ ಅಳವಡಿಸಿಕೊಂಡು ಸ್ಖಾಲಿತ್ಯಗಳು ಘಟಿಸುವುದಕ್ಕೆ ಕೆಳಗಿನ ಕಾರಣಗಳನ್ನು ಹೇಳಬಹುದು.

I ಪಾಠಭ್ರಾಂತಿ ಮತ್ತು ಅವುಗಳನ್ನು ಪರಿಹರಿಸುವ ಪ್ರಯತ್ನಗಳು

೧. ಸದೃಶಾಕ್ಷರಗಳ ಮತ್ತು ಉಚ್ಚಾರಾಂಶಗಳ ಬಗ್ಗೆ ಭ್ರಾಂತಿ.

೨. ಸಾಮಾನ್ಯ ಸಾದೃಶ್ಯದಿಂದಾಗಿ ಶಬ್ದಗಳನ್ನು ತಪ್ಪಾಗಿ ಬರೆಯುವುದು.

೩. ಸಂಕ್ಷಿಪ್ತಗಳನ್ನು ತಪ್ಪಾಗಿ ವ್ಯಾಖ್ಯಾನಿಸುವುದು.

೪. ಅಪಯೋಜನೆ (Wrong combination) ಅಥವಾ ಅಪವಿಭಜನೆ.

೫. ಪಕ್ಕದ ಪದಗಳ ಪ್ರತ್ಯಯಗಳನ್ನು ಸೇರಿಸಿಕೊಳ್ಳುವುದು ಮತ್ತು ಪಕ್ಕದ ಪದಗಳಿಗೆ ಪ್ರತ್ಯಯಗಳನ್ನು ಒದಗಿಸುವುದು.

೬. ಅಕ್ಷರಗಳು, ಪದಗಳು ಮತ್ತು ವಾಕ್ಯಗಳ ಸ್ಥಾನವ್ಯತ್ಯಯ. ವಾಕ್ಯಗಳು, ಪಾಠ ವಿಭಾಗಗಳು ಮತ್ತು ಪುಟಗಳು ಹೆಚ್ಚುಕಡಮೆಯಾಗುವುದು.

೭. ಸಂಸ್ಕೃತ ಲೇಖನವನ್ನು ಪ್ರಾಕೃತ ಮತ್ತು ದೇಶಭಾಷೆಗಳಲ್ಲಿ ಹಾಗೂ ಪ್ರಾಕೃತ ಮತ್ತು ದೇಶಭಾಷೆಗಳಲ್ಲಿರುವ ಲೇಖನಗಳನ್ನು ಸಂಸ್ಕೃತದಲ್ಲಿ ತಪ್ಪಾಗಿ ಬರೆಯುವುದು.

೮. ಉಚ್ಚಾರ ದೋಷದಿಂದಾಗುವ ತಪ್ಪುಗಳು.
೯. ಸಂಖ್ಯೆಗಳನ್ನು ಅಕ್ಷರಗಳನ್ನಾಗಿ ತಪ್ಪು ತಿಳಿಯುವುದು.
೧೦. ಅಂಕಿತನಾಮಗಳ ಬಗ್ಗೆ ತೊಡಕು.
೧೧. ಅಪರಿಚಿತ ಪದಗಳನ್ನು ತೆಗೆದು ಅಲ್ಲಿ ಪರಿಚಿತ ಪದಗಳನ್ನೋ ಅಥವಾ ಸಮಾನಾರ್ಥಕ ಪದಗಳನ್ನೋ ಬಳಸುವುದು.
೧೨. ಹಳೆಯ ಕಾಗುಣಿತಕ್ಕೆ ಪ್ರತಿಯಾಗಿ ಹೊಸಕಾಗುಣಿತವನ್ನು ಬಳಸುವುದು.
೧೩. ಪಾಠ ಸುಧಾರಣೆ ಅಥವಾ ತಿಳಿಯದೆ ಆದ ಸ್ಖಾಲಿತ್ಯಗಳನ್ನು ತಿದ್ದುವ ಯತ್ನ.

II ಲೋಪಗಳು,

೧೪. ಸದೃಶಾಕ್ಷರ ಲೋಪಲೇಖನ ಅಥವಾ ಒಂದೇ ರೀತಿಯಲ್ಲಿ ಆರಂಭವಾಗುವ ಇಲ್ಲವೆ ಕೊನೆಯಾಗುವ ಪದಗಳ ಮತ್ತು ಉಚ್ಚಾರಾಂಶಗಳ ಲೋಪ (homoeoarcta ಮತ್ತು homoeotelcuta)
೧೫. ಲೋಪಲೇಖನ (parablepsia) ಅಥವಾ ಯಾವುದೇ ರೀತಿಯ ಸಾಮಾನ್ಯಲೋಪ.

III ಪ್ರಕ್ಷೇಪ

೧೬. ಪುನರ್ಲೇಖನ. ಪಕ್ಕದಲ್ಲಿಯೋ ಅಥವಾ ಸ್ವಲ್ಪ ಸಮೀಪದಲ್ಲಿಯೋ ಇರುವ ಪಾಠಾಂಶವನ್ನು ಮತ್ತೆ ಬರೆಯುವುದು.
೧೭. ಎರಡು ಸಾಲುಗಳ ನಡುವೆಯೋ ಅಥವಾ ಅಂಚಿನಲ್ಲಿಯೋ ಇರುವ ವಿವರಣೆ, ಟಿಪ್ಪಣಿಗಳನ್ನು ಮಧ್ಯೆ ಸೇರಿಸಿಬಿಡುವುದು (Adascripts)
೧೮. ಮಿಶ್ರಪಾಠಾಂತರಗಳು.
೧೯. ಸದೃಶ ಕೃತಿಗಳ ಪ್ರಭಾವಕ್ಕೆ ಸಿಕ್ಕು ಮಾಡುವ ಪ್ರಕ್ಷೇಪಗಳು.

ಕೆಳಗೆ ಕೆಲವು ಸ್ಖಾಲಿತ್ಯಗಳಿಗೆ ನಿದರ್ಶನಗಳನ್ನು ಕೊಡಲಾಗುವುದು. ಈ ಸ್ಖಾಲಿತ್ಯಗಳಿಗೆ ಲಿಪಿಕಾರನ ಉದ್ದೇಶ ಎಷ್ಟರಮಟ್ಟಿಗೆ ಕಾರಣವಾಗಿದೆ ಎಂಬುದನ್ನು ದೃಷ್ಟಿಯಲ್ಲಿಟ್ಟು ಅವುಗಳನ್ನು ಅವಿವಕ್ಷಿತ (ಅಥವಾ ಯಾಂತ್ರಿಕ), ಅರ್ಧವಿವಕ್ಷಿತ ಮತ್ತು ವಿವಕ್ಷಿತ ಸ್ಖಾಲಿತ್ಯಗಳೆಂದು ವಿಂಗಡಿಸಬಹುದು.

## ಅವಿವಕ್ಷಿತ (ಅಥವಾ ಯಾಂತ್ರಿಕ) ಸ್ಖಾಲಿತ್ಯಗಳು

ಚಾಕ್ಷುಷದೋಷಗಳು

(a) ಅಕ್ಷರಭ್ರಾಂತಿ: ಇದು ಕೇವಲ ಲಿಪಿಜ್ಞಾನದ ಪ್ರಮಾಣಗಳಿಂದ ನಿರ್ಧರಿತವಾಗಬೇಕಾದ ಸಮಸ್ಯೆ. ಜೈನರಿಗೆ ಮಾತ್ರವೇ ವಿಶಿಷ್ಟವಾದ ದೇವನಾಗರಿಯಲ್ಲಿ, ಉದಾಹರಣೆಗೆ ಕೆಳಕಂಡ ಅಕ್ಷರಗಳು ಪರಸ್ಪರ ಪಲ್ಲಟಗೊಳ್ಳುತ್ತವೆ. (i) ಚ್, ವ್, ಮತ್ತು ಬ್; (ii) ತ್ಥ ಮತ್ತು ಚ್ಛ (iii) ಥ್ ಮತ್ತು ಫ್ (iv) ಬ್ಭ, ಜ್ಝ ಮತ್ತು (v) ದ್ದ, ದ್ಧ, ಟ್ಟ, ಟ್ಠ ಮತ್ತು ಡ್ಢ. ದೇವನಾಗರಿಯ ಇತರ ಭಾಷಾವಿಭೇದಗಳಲ್ಲಿಯೂ ಅಂಥ ಭ್ರಾಂತಿಗಳು ತಲೆದೋರಿವೆ. ಕೆಲವು ಉದಾಹರಣೆಗಳಿಂದ ಇದು ಸ್ಪಷ್ಟವಾಗಬಹುದು.

ಮಹಾವೀರ ಚರಿತ:

| | | |
|---|---|---|
| ಸ್ಥ : ಚ್ಛ—I 1° | ಸ್ವಸ್ಥಾಯ > ಸ್ವಚ್ಛಾಯ E | |
| ಓ : ಆ—II $13^{a}$ | ಮಹಾದೋಃಸೋ > ಮಹಾದಾಸೋ | |
| ಯ್ : ಪ್—I $4^{c}$ | ವಾಕ್ಯನಿಷ್ಪಂದ-° > °-ನಿಷ್ಪಂದ್-° K E B° ಇತ್ಯಾದಿ | |
| III $40^{d}$ | ಕಲ್ಪಾಪಾಯು-° > ಕಲ್ಯಾಣಾಯ | Md, Mt, Mg. |
| ಣ್ : ಪ್ | ಕಲ್ಪಾಪಾಯ-° > ಕಲ್ಯಾಣಾಯ | |

ತಾನು ನಕಲು ಮಾಡುತ್ತಿರುವ ಹಸ್ತಪ್ರತಿಯ ಬರವಣಿಗೆಯು ಲಿಪಿಕಾರನಿಗೆ ಅಪರಿಚಿತವಾಗಿದ್ದು ಅದರಲ್ಲಿರುವ ಕೆಲವು ಅಕ್ಷರಗಳು ಅಥವಾ ಸಂಕೇತಗಳು ಅವನಿಗೆ ಅಭ್ಯಾಸವಾಗಿರುವ ಲಿಪಿಯ ಭಿನ್ನಮೌಲ್ಯದ ಕೆಲವು ಅಕ್ಷರಗಳನ್ನು ಹೋಲುತ್ತಿದ್ದಾಗ ಸಾಮಾನ್ಯವಾಗಿ ಇಂಥ ಭ್ರಾಂತಿ ಒದಗುತ್ತದೆ. ಮಹಾಭಾರತದ ಆದಿಪರ್ವಕ್ಕೆ ಸಂಬಂಧಿಸಿದ ಶಾರದಾಮಾತೃಕೆಯ ನಕಲುಪ್ರತಿಯೊಂದಿದೆ. $K_1$ ಎಂಬ ಈ ಹಸ್ತಪ್ರತಿಯು ಈಚಿನದೂ ಮತ್ತು ಅಶುದ್ಧವಾದುದೂ ಆಗಿದ್ದರೂ ತಕ್ಕಮಟ್ಟಿಗೆ ನಂಬಲರ್ಹವಾದ ಪ್ರತಿ. ಶಾರದಾ ಮತ್ತು ದೇವನಾಗರಿ ಅಕ್ಷರಗಳ ಭ್ರಾಮಕಸಾದೃಶ್ಯದಿಂದ ಒದಗುವ ತೊಡಕಿಗೆ ಇದರಲ್ಲಿ ನಿದರ್ಶನವನ್ನು ಕಾಣಬಹುದು. ಲಿಪಿಕಾರನು ಆಗಾಗ್ಗೆ **ಸ, ತ, ಥ, ರ, ಮ** (ಅಥವಾ **ಚ**) ಗಳಿಗೆ ಕ್ರಮವಾಗಿ **ದು, ಉ, ಷ** (ಉಷಾ-ತಥಾ) **ದ, ಶ** ಗಳನ್ನು ಬರೆದಿದ್ದಾನೆ. ಹಾಗೆಯೇ ಅಡಿಯ **ವ** ವರ್ಣಕ್ಕೆ ಮಧ್ಯಸ್ಥ **ಉ** ವರ್ಣವನ್ನು **ವೃ, ತ್ರ** ಮತ್ತು **ಚ್ಯ** ವರ್ಣಗಳಿಗೆ ಕ್ರಮವಾಗಿ **ವ್ಯ, ತು** (ಮತ್ತು **ತ್ತ**) ಮತ್ತು **ಸ್ಯ** ವರ್ಣಗಳನ್ನು ಬಳಸಿದೆ. ಭಾರತೀಯ ಲಿಪಿವಿಜ್ಞಾನವನ್ನು ಕುರಿತ ಯಾವುದೇ ಉತ್ತಮಗ್ರಂಥದಲ್ಲಿಯೂ ವಿವಿಧವರ್ಗದ ಹಸ್ತಪ್ರತಿಯಲ್ಲಿ ಬಳಕೆಯಾಗಿರುವ ಬೇರೆಬೇರೆ ಅಕ್ಷರ ರೂಪಗಳ ವಿವರ ದೊರೆಯುತ್ತದೆ. ಒಂದಕ್ಕೊಂದನ್ನು ತಪ್ಪು ತಿಳಿಯಬಹುದಾದ ಅಕ್ಷರಗಳು ಒಂದೇ ಲೇಖನದಲ್ಲಿರುವುದೂ ಮತ್ತು ಅಂಥದೇ ಸಾದೃಶ್ಯವಿದ್ದು ಭಿನ್ನಮೌಲ್ಯಗಳನ್ನು ಹೊಂದಿರುವ ಅಕ್ಷರಗಳು ಬೇರೆ ಬೇರೆ ಹಸ್ತಪ್ರತಿಗಳಲ್ಲಿ ಇರುವುದೂ ಈ ವಿವರಗಳಿಂದ ತಿಳಿಯುತ್ತದೆ. ಅವುಗಳ ಆಧಾರದ ಮೇಲೆ ಇಂಥ ಅಕ್ಷರಗಳ ಒಂದು ಪಟ್ಟಿಯನ್ನೇ ಮಾಡಬಹುದು.

(b) ಅಕ್ಷರಗಳು ಉಚ್ಚಾರಾಂಶಗಳು, ಅದರಲ್ಲಿಯೂ ವಿಶೇಷವಾಗಿ, ಸಾಲಿನ ಮೇಲ್ಭಾಗದಲ್ಲಿರುವ ಸ್ವರಚಿಹ್ನೆಗಳು ಲೋಪವಾಗುವುದು. ಇಂಥ ಒಂದು ನಿದರ್ಶನ ಮೇಲೆ ಬಂದಿದೆ. "ದಾಸೋ<ದೋಸೋ." ಮಹಾಭಾರತ $1.142.25^{d}$ ವಿನಂಕ್ಷ್ಯಸಿಗೆ ಬದಲಾಗಿ ವೃಥೈವ ಸೊ ವಿನಂಕ್ಷಸಿ D5: $T_2$ G ವಿನಶಿಷ್ಯಸಿ ನೋಡಿ ಈ ಅಪಪಾಠವು ಉಕ್ತಲೇಖನ ಬರೆಯುವವನ ಶ್ರವಣದೋಷದಿಂದಾಗಿ ಘಟಿಸಿರಬಹುದು.

ರಾಮಾಯಣ. I. $2^{8}$ "ಯೋ ಮದ್ವಿಷಯವಾಸಿನಃ" $D_6$ ಪ್ರತಿಯಲ್ಲಿ ಯ ಬಿಟ್ಟುಹೋಗಿ °ವಿಷವಾಸಿನಃ ಎಂದಿದೆ; $A_7$ರಲ್ಲಿ "ಯೆ" ಬದಲು "ಎ" ಇಲ್ಲದೆ ಅದರ ಮೇಲೆ ಒಂದು ಅಡ್ಡಗೀಟು ಇದೆ. I $5^{3}$ರಲ್ಲಿ "ನಾನಾ ನಗನಿವಾಸಿನಃ" ಎಂದಿದ್ದರೆ $D_6$ ಪ್ರತಿಯಲ್ಲಿ, ಪಕ್ಕದ ವರ್ಣಗಳ ಪ್ರಭಾವದಿಂದಾಗಿಯೋ ಏನೋ "ನ" ಬಿಟ್ಟು ಹೋಗಿದೆ. ಕಾರಣವು ಅದೇ ಆಗಿದ್ದಲ್ಲಿ ಅದನ್ನು ಕೆಳಗೆ ತಿಳಿಸುವ ಸದೃಶಾಕ್ಷರವೃಂದ ಮಧ್ಯಲೋಪಲೇಖನಕ್ಕೆ (Homoiographon) ಸೇರಿಸಬೇಕಾಗುತ್ತದೆ.

ಅಕ್ಷರ ಅಥವಾ ಉಚ್ಚಾರಾಂಶಗಳ ಸ್ಥಾನವ್ಯತ್ಯಯ (Anagrammatism): ಮಹಾಚ. III 37[d] "ಜ್ಞಾನೇನ ಚಾನ್ಯೋ">Mt, Md. "ಜ್ಞಾನೇಚ ಸಾನ್ಯೋ" (ಜ್ಞಾನೇ-ನ-ಚಾನ್ಯೋ ಎಂಬ ಪಾಠವನ್ನು ತಪ್ಪಾಗಿ ವಿಭಾಗಿಸಿರುವುದರಿಂದ ಹೀಗಾಗಿರಬಹುದು.)

ರಾಮಾಯಣ. I. 23[1] : "ಕರ್ಣಪ್ರಾವರಣಾಶ್ಚೈವ">$D_6$ "ಕರ್ಮ್‌ಣ್ಪ್ರ-°"

(d) ವರ್ಣಪ್ರಕ್ಷೇಪ. (ಅನೇಕ ಕಾರಣಗಳಿಂದ): ಮಹಾವೀರ ಚರಿತ I 2[a] "ಮಹಾಪುರುಷ ಸಂರಂಭೋ" > "ಸಮಾರಂಭೋ."

(e) ಪದಭ್ರಾಂತಿ: ಎರಡು ಶಬ್ದಗಳಿಗಿರುವ ಸಾಮಾನ್ಯ ಸಾದೃಶ್ಯವು ಅವುಗಳ ನಿರ್ದಿಷ್ಟ ವ್ಯತ್ಯಾಸವನ್ನೂ ಮರೆಸುವಂತಿದ್ದಾಗ ಅಂಥ ಯಾವ ಎರಡು ಶಬ್ದಗಳನ್ನಾದರೂ ಒಂದನ್ನು ಮತ್ತೊಂದಕ್ಕೆ ತಪ್ಪಾಗಿ ಭಾವಿಸುವ ಸಾಧ್ಯತೆಯುಂಟು.

(f) ಲೇಖನ ಸಾದೃಶ್ಯದಿಂದಾಗಿ ಅಕ್ಷರ, ಉಚ್ಚಾರಾಂಶ, ಪದ ಅಥವಾ ವಾಕ್ಯಗಳು ಬಿಟ್ಟು ಹೋಗುವುದು. (Homoiographon): ಸದೃಶಾಕ್ಷರಗಳು ಒಟ್ಟೊಟ್ಟಿಗೆ ಇದ್ದಾಗ ಸದೃಶಾಕ್ಷರ ಉಪ್ತಗ್ರಥನ (Haplography)ವಾಗುತ್ತದೆ.

ಮಹಾಭಾ. I. 103.13[c] $K_3$ $D_n$ $D_{1\cdot5}$ : "ಅಭ್ಯಸೂಯಯಯಾವ್" ಎಂಬುದಕ್ಕೆ "ಅಭ್ಯಸೂಯಯಾವ್."

ಸದೃಶಾಕ್ಷರ ವೃಂದ ಮಧ್ಯಲೋಪಲೇಖನ (Homoiographon):

ಮಹಾಚ. II 7[2] ಲೊಲಲೊಅಣೆ > ಲೊಲಅಣೊ

III 18[6] "ಪಾಖಂಡ ಕಂಡೀರ" > "ಪಾಖಂಡೀರ" Bo ; 19[3] "°ಪ್ರಸವಪಾಂಸನ" > "ಪ್ರಸವಾಸನ" E.

(g) ಪುನರಾವೃತ್ತಿ, ಪುನರ್ಲೇಖನ ಇತ್ಯಾದಿ. ಅಕ್ಷರಗಳು, ಅಕ್ಷರವೃಂದಗಳು, ಶಬ್ದಗಳು ಮತ್ತು ವಾಕ್ಯಗಳನ್ನು ಒಂದು ಸಲಕ್ಕೆ ಬದಲಾಗಿ ಎರಡು ಸಲ (ಅಥವಾ ಮತ್ತೆ ಮತ್ತೆ) ಬರೆದಿರುವುದು.

ಮಹಾಭಾ. 1.57, 21 : "ಹಾಸ್ಯರೂಪೇಣ ಶಂಕರ:" >$K_1$ "ಹಾಮ್ಯಹಾಮ್ಯ-°" ("ಹಾಸ್ಯ ಹಾಸ್ಯ-°"ಎಂಬುದರ ಕಲುಷಿತರೂಪ) ಇದು ಪುನರ್ಲೇಖನದ ಒಂದು ಸ್ಪಷ್ಟ ನಿದರ್ಶನ.

(h) ಅನವಧಾನದಿಂದ ಅಕ್ಷರ ವೃಂದಗಳು, ಶಬ್ದಗಳು ಮತ್ತು ವಾಕ್ಯಗಳು ಬಿಟ್ಟು ಹೋಗುವುದು.

ಮಹಾಚ. II 9[9] ಅಭಿಚರಂತಿ>ಅಚರಂತಿ E

**ಭಾಗವಿವಕ್ಷಿತ ಮತ್ತು ವಿವಕ್ಷಿತ ಸ್ಖಾಲಿತ್ಯಗಳು.**

(a) ಬೇರೊಬ್ಬರು ಹಸ್ತಪ್ರತಿಯನ್ನು ಓದಿಹೇಳಿ ಪ್ರತಿಕಾರನು ಅದನ್ನು ಬರೆದುಕೊಳ್ಳುವಾಗ ಧ್ವನಿಭ್ರಮೆ (Phonetic Confusion) ಯಾಗುವುದುಂಟು. ಮೊದಲ ವಿಭಾಗದಲ್ಲಿ (b) ವರ್ಗದಲ್ಲಿ ತೋರಿಸಿದ (ಮಹಾಭಾ: 1.1422.5[d] $D_5$ : ವಿನಂಕ್ಷಸಿ ಎಂಬುದು ವಿನಂಕ್ಷ್ಯಸಿ ಎಂದು ತಪ್ಪಾಗಿ ಲಿಖಿತವಾದ) ದೋಷವು ಈ ರೀತಿಯಲ್ಲಿ ಘಟಿಸಿದುದು. ಆದರೆ ಅವುಗಳನ್ನು ಶ್ರವಣದೋಷಗಳೆಂದೇ ಗಣಿಸಬೇಕಾದುದೇನೂ ಇಲ್ಲ. ಏಕೆಂದರೆ ಲಿಪಿಕಾರನು

ತಾನೇ ನೋಡಿಕೊಂಡು ಬರೆಯುತ್ತಿರುವಾಗಲೂ ಸಹ, ಉಚ್ಚರಿಸಿದಾಗ ಒಂದೇ ರೀತಿಯಲ್ಲಿ ಕೇಳಿಸುವ ಅಕ್ಷರಗಳನ್ನಾಗಲಿ ಅಥವಾ ಅಕ್ಷರ ವೃಂದಗಳನ್ನಾಗಲಿ, ಕಣ್ಣಿಗೆ ಅವುಗಳಲ್ಲಿ ಸಾದೃಶ್ಯವೇನೂ ಕಾಣದಿದ್ದರೂ, ಬೆರಸಿ ಬರೆಯುವ ಸಾಧ್ಯತೆ ಇದೆ.

(b) **ಇಡಿಯ ಪದಗಳ ಅಥವಾ ಪದಭಾಗಗಳ ಸ್ಥಾನವ್ಯತ್ಯಯ.**

ರಾಮಾಯಣ: I 9[6] "ಇದಂ ವಚನಮಬ್ರವೀತ್>$B_3$ ವಚನಂ ತ್ರಿದಮಬ್ರವೀತ್." I 11[6] "ತಸ್ಮಿನ ಕಾಲೇ ಸಹ ತ್ವಯಾ>ತಸ್ಮಿನ್ ಕಾಲೇ ತ್ವಯಾ ಸಹ"

ಮಹಾಚ. I 13[1] "ಮೈಥಿಲಸ್ಯ ರಾಜರ್ಷೇः": >$T_1T_2$ "ರಾಜರ್ಷೇರ್ಮೈಥಿಲಸ್ಯ"; 14[3] "ಕಿಲಾನ್ಯತ್" >$T_1$ "ಅನ್ಯತ್ ಕಿಲ"; III Mt . . . "ಅನದ್ವನ್ ಪುರುಷಾಧಮ">Mg . . . "ಪುರುಷಾಧಮ ಅನದ್ವನ್"

ಮಹಾಭಾ: 1.1.25[d] "ಧಾರ್ಯತೇ ಯತ್ ದ್ವಿಜಾತಿಭಿ": D1 "ಯತ್ ಧಾರ್ಯತೇದ್ವಿ°" (ಛಂದಸ್ಸು ಕೆಟ್ಟಿದೆ)

ಒಂದು ಅಥವಾ ಹೆಚ್ಚು ವಾಕ್ಯಗಳ ಸ್ಥಾನಪಲ್ಲಟ. ಬಿಟ್ಟುಹೋದುದನ್ನು ಮತ್ತೆ ಬರೆಯುವುದರಿಂದ ಈ ರೀತಿಯ ಸ್ಥಾನಪಲ್ಲಟ ಘಟಿಸುತ್ತದೆ. ಮಧ್ಯೆ ಒಂದು ಸಾಲನ್ನೋ ಅಥವಾ ಹೆಚ್ಚು ಸಾಲುಗಳನ್ನೋ ಬಿಟ್ಟು ಬರೆದಿರುವುದು ಲಿಪಿಕಾರನಿಗೆ ಅನಂತರ ಗೊತ್ತಾಯಿತೆನ್ನೋಣ. ಬರೆದ ಭಾಗವನ್ನು ಹೊಡೆದುಹಾಕಿ ಹಸ್ತಪ್ರತಿಯನ್ನು ಹೊಲಸು ಮಾಡಬಾರದೆಂಬ ಕಾರಣದಿಂದಲೋ ಅಥವಾ ತನ್ನ ಲೇಖನ ಸಾಮಗ್ರಿ ಮತ್ತು ಕಾಲ ವ್ಯರ್ಥವಾಗಬಾರದೆಂಬ ದೃಷ್ಟಿಯಿಂದಲೋ, ಬಿಟ್ಟು ಹೋಗಿದ್ದ ಭಾಗವನ್ನು ಕೃತಿಕಾರನು ಪತ್ರದ ಅಂಚಿನಲ್ಲಿಯೋ ಅಥವಾ ಕೆಳಭಾಗದಲ್ಲಿಯೋ ಬರೆದಿರುತ್ತಾನೆ. ಅದನ್ನು ಎಲ್ಲಿ ಸೇರಿಸಿಕೊಳ್ಳಬೇಕೆಂಬುದನ್ನು ಸೂಚಿಸುವ ಒಂದು ಗುರುತನ್ನು ಸಾಮಾನ್ಯವಾಗಿ ಮಾಡಿರುವುದುಂಟು. ಮುಂದೆ ಬರುವ ಪ್ರತಿಕಾರ ಈ ಚಿಹ್ನೆಯನ್ನು ಸರಿಯಾಗಿ ಗಮನಿಸದೆ ಆ ಭಾಗ ಶಾಶ್ವತವಾಗಿ ಸ್ಥಾನಾಂತರಗೊಳ್ಳುವಂತೆ ಮಾಡಿಬಿಡಬಹುದು.

ಕರ್ಪೂರಮಂಜರೀ I : T ಹಸ್ತಪ್ರತಿಯಲ್ಲಿ 2 ಮತ್ತು 4ನೆಯ ಪದ್ಯಗಳಿಗೆ ಸ್ಥಳಪಲ್ಲಟವೊದಗಿದೆ. ಹಾಗೆಯೇ NRನಲ್ಲಿ 7ನೇ ಪದ್ಯ 8ನೇ ಪದ್ಯದ ಅನಂತರ ಬಂದಿದೆ.

(d) ವ್ಯಾಕರಣಾಂಶಗಳನ್ನು ಅಥವಾ ಇತರ ವಿಷಯಗಳನ್ನು ಪಾಠಕ್ಕೆ ಸೇರಿಸಿಕೊಂಡು ಬಿಡುವುದು.

ರಾಮಾಯಣ I 12[8]: "ತ್ವಂ ಗತಿರ್ಹಿಮತೋ ಮಮ">$A_5$ . . . "ಹಿಮತಿರ್ಮಮ." 16[3]: "ವೃತ: ಶತಸಹಸ್ರೇಣ ವಾನರಾಣಾಂ ತರಸ್ವಿನಾಮ್" ಎಂದಿರುವುದು "ವಾನರಾಣಾಂ" ಎಂಬ ಬಹುವಚನ ರೂಪದ ಪ್ರಭಾವದಿಂದಾಗಿ $A_7(K_8)$ರಲ್ಲಿ "°ಸಹಸ್ರೈಶ್ಚ" ಎಂದಾಗಿದೆ.

8*3: "ತತ: ಶಕ-ಪುಲಿಂದಾಂಶ್ಚ ಕಲಿಂಗಾಂಶ್ಚೈವ ಮಾರ್ಗತ" ಎಂಬುದು ಮೊದಲ ಪಾದದಲ್ಲಿರುವ ಪುಲಿಂದ ಪದದ ಪ್ರಭಾವದಿಂದಾಗಿ $B_2$ $(K_8)$ರಲ್ಲಿ "ಕಾಲಿಂದಾಂಶ್ಚ" ಎಂದಾಗಿದೆ.

ಮಹಾಭಾ: 1.96.8ರಲ್ಲಿ "ಆಹೂಯ ದಾನಮ್ ಕನ್ಯಾನಾಮ್ ಗುಣವದ್ಭ್ಯಃ ಸ್ಮೃತಮ್ ಬುಧೈ:" ಎಂದಿದ್ದರೆ $T_1$ರಲ್ಲಿ "ಗುಣವದ್ಭಿ": ಎಂಬುದು "ಬುಧೈಃ": ಎಂಬುದರಿಂದಾಗಿ "ಸ್ಮೃತಮ್" ಜೊತೆಗೆ ಸೇರಿಕೊಂಡಿದೆ.

(e) ಪದಗಳ ಅಪಯೋಜನೆ ಮತ್ತು ವಿಭಜನೆ. ಇದು ಸಾಮಾನ್ಯವಾಗಿ ಪದಚ್ಛೇದ ಮಾಡದೆ ಪಾಠವನ್ನು ಬರೆಯುತ್ತಿದ್ದ ಕಾಲಕ್ಕೆ ಸಂಬಂಧಿಸುತ್ತದೆ. ಹಿಂದೆ ಹೇಳಿದ ಪಾಠ ಭಾಗವನ್ನೇ ಇಲ್ಲಿಯೂ ನಿದರ್ಶನವಾಗಿ ನೀಡಬಹುದು.

ಮಹಾಭ. III 37[d] : ಜ್ಞಾನೇನ ಚಾನ್ಯೋ>ಜ್ಞಾನೇ ನ ಚಾನ್ಯೋ>ಜ್ಞಾನೇ ನ ಚಾನ್ಯೋ> Mt. Md. ಜ್ಞಾನೇ ಚ ನಾನ್ಯೋ.

ಅದೇ ರೀತಿಯಲ್ಲಿ ಅರ್ಥ ತಿಳಿಯದ ವಾಚಕರು ಗೀತೆಯ "ಅಹಂ ವೈಶ್ವಾನರೋ ಭೂತ್ವಾ" ಎಂಬ ಶ್ಲೋಕವನ್ನು "ಅಹಂ ವೈಶ್ವಾ ನರೋ ಭೂತ್ವಾ" ಎಂದು ಪಠಿಸುವುದುಂಟು.

ಮಹಾಭಾ. 19.6.47[d] : "ಅಬ್ರವೀದ್-ಧಸತೀ" ಎಂಬಲ್ಲಿ "ಧಸತೀ" ಎನ್ನುವುದು "ಹಸತೀ"[1] ಎನ್ನುವುದಕ್ಕೆ ತಪ್ಪಾಗಿ ಬಂದಿದೆ.

3.69.25[d] : "ಗಾತ್ರಂ ಪರಂ ಅಶೋಭನಂ" ಎಂಬುದಕ್ಕೆ "ಗಾತ್ರಂ ಪರಮ ಶೋಭನಂ" ಎಂದಿದೆ.

(f) ಸಮಾನಾರ್ಥದ ಇಲ್ಲವೆ ವಿರುದ್ಧಾರ್ಥದ ಪದಗಳನ್ನೋ, ವಾಕ್ಯಾಂಶಗಳನ್ನೋ ಅಥವಾ ಸಂಬಂಧಸೂಚಕ ಪದಗಳನ್ನೋ ಅದಲು ಬದಲು ಮಾಡುವುದು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಸಮಾನ ಇಲ್ಲವೆ ವಿರುದ್ಧಾರ್ಥದ ಪದಗಳನ್ನು ಮುಂಚೆ ಇದ್ದ ಪದಕ್ಕೆ ಬದಲಾಗಿ ಬಳಸುವುದು. ಅಧಿ, ಅಭಿ ಇಲ್ಲವೆ ಅತಿ- ಈ ಪ್ರತ್ಯಯಗಳು ಪರಸ್ಪರ ಬದಲುಗೊಳ್ಳುತ್ತಿರುತ್ತವೆ. ನೋಡಿ. ರಾಮಾಯಣ I 16[4] ಅಧಿಗಚ್ಛ ದಿಶಂ ಪೂರ್ವಮ್ > $A_2$ $K_6$ ಅಭಿಗಚ್ಛ. ಸುಕ್ತಂಕರ್‌ರವರು ತಮ್ಮ ಉಪೋದ್ಘಾತ (prolegomena)ದಲ್ಲಿ ಮಹಾಭಾರತದಿಂದ ಆಯ್ದ ಸಮುಚ್ಚಯದಸ್ಸಿನ ಕೆಲವು ಸಮಾನಾರ್ಥಕ ಪದಗಳ ಉದ್ಧಪಟ್ಟಿಯೊಂದನ್ನು ಕೊಟ್ಟಿದ್ದಾರೆ (prolegomena P. XXX VII) ಅದರಂತೆ ವಾಕ್ಯಾಂಶಗಳ ಪಟ್ಟಿಯನ್ನೂ ಕೊಟ್ಟಿದ್ದಾರೆ. ಮೊದಲ ಬಗೆಗೆ

---

1 ಕೆಳಗಿನ ವಿವರಣೆ ಡಾ॥ ಸುಕ್ತಂಕರ್‌ರವರದು. ಹಸತೀ ಎಂಬುದು ಕೇವಲ ಛಂದೋಪೂರಕವಾದ ಪದವಾಗುತ್ತದೆಯೇ ಹೊರತು ಯಾವ ರೀತಿಯಲ್ಲಿಯೂ ಅರ್ಥಕ್ಕೆ ಹೊಂದುವುದಿಲ್ಲ. ಈ ಪದವು ಅಂಬೆಯ ವ್ಯಕ್ತಿತ್ವಕ್ಕೇ ಹೊರತಾದ ನಡೆಯನ್ನು ಅವಳಿಗೆ ಬಹು ವಿಷಮ ಪ್ರಸಂಗವೊಂದರಲ್ಲಿ ಆರೋಪಿಸಿಬಿಡುತ್ತದೆ. ಆದರೆ ಹ ಸತೀ ಎಂಬಲ್ಲಿ ಸತೀ ಎಂಬುದು ಬಹಳ ಅರ್ಥಗರ್ಭಿತವಾದ ಪದ. ಕುರುಕುಲದ ಸಂಬಂಧವು ಅವಳು ಆರಿಸಿಕೊಂಡ ಸಂಬಂಧಕ್ಕಿಂತ ಉತ್ತಮವಾದದ್ದು. ಅಲ್ಲದೆ ಅವಳಿಗೆ ಸಾಲ್ವನೊಡನೆ ವಿವಾಹಸಂಬಂಧವಾದ ಒಂದು ಔಪಚಾರಿಕ ಬಂಧನ ಸಹ ಇಲ್ಲ. ತನ್ನ ವೈಯಕ್ತಿಕ ಸ್ಥಾನಮಾನವನ್ನು ಬೆಳೆಸಿಕೊಳ್ಳುವ ಸಲುವಾಗಿ ಅವಳು ಸಾಲ್ವನನ್ನು ಸುಲಭವಾಗಿ ದೂರಮಾಡಿಬಿಡಬಹುದಾಗಿತ್ತು. ಅವಳು ಸಾಲ್ವನನ್ನು ವರಿಸಿದುದೇನಿದ್ದರೂ ಮನಸ್ಸಿನಲ್ಲಿ (ಮನಸಾವೃತಃ). ಆದರೆ ಸತಿಯಾದ ಅವಳು ತಾನು ಮೊದಲು ಮನಸ್ಸಿನಲ್ಲಿ ಒಲಿದವನನ್ನು ಬಿಡಲು ಸಿದ್ಧಳಿರಲಿಲ್ಲ. (ನೋಡಿ. ಸಾವಿತ್ರಿಯೂ ಸಹ) ಅವಳು ಸತಿಯೆಂಬುದರಿಂದಾಗಿಯೇ ಪರಶುರಾಮನು ಅವಳ ಸಲುವಾಗಿ ಭೀಷ್ಮನೊಡನೆ ಹೋರಾಡಿದನು. ಅವಳು ಶಿವನನ್ನು ಪ್ರಸನ್ನಗೊಳಿಸಿಕೊಂಡು ವರವನ್ನು ಪಡೆದದ್ದೂ ಅದಕ್ಕಾಗಿಯೇ. ಸತಿಯಾದುದರಿಂದ ಅವಳು ಭೀಷ್ಮನ ಮೇಲಿನ ವೈರವನ್ನು ಹೊತ್ತೇ ಮುಂದಿನ ಜನ್ಮಕ್ಕೆ ಹೋದಳು; ಶಿಖಂಡಿಯಾಗಿ ಭೀಷ್ಮನನ್ನು ಕೊಂದಳು. ಹೀಗೆ ಸತಿ ಎಂಬ ಪದ ಈ ಸಂದರ್ಭದಲ್ಲಿ ಎಷ್ಟು ಅರ್ಥವತ್ತಾಗಿದೆಯೆಂಬುದನ್ನು ಗಮನಿಸಬಹುದು. ಹಸತೀ ಎಂಬ ಪದ ಈ ಅರ್ಥದ ಸೊಗಸನ್ನು ಮರೆಮಾಡುವುದಲ್ಲದೆ ಅಂಬೆಯನ್ನು ಬೆಡಗುಗಾತಿಯಾಗಿ ಮಾಡಿ ಎಲ್ಲವನ್ನೂ ಅವ್ಯವಸ್ಥೆಗೊಳಿಸಿಬಿಡುತ್ತದೆ. ನಮಗೆ ತೃಪ್ತಿಯಾಗುವಂಥ ಅರ್ಥವೊಂದನ್ನು ಒಪ್ಪಿಕೊಂಡುಬಿಡುವುದು ಸಾಧ್ಯವಿದೆ. ಆದರೆ ಇದು ಪ್ರಾಚೀನ ಋಷಿಗಳ ಕಲ್ಪನೆಯನ್ನು ವಿಕೃತಗೊಳಿಸಬಾರದು.

ಉದಾಹರಣೆಯಾಗಿ ನರೇಶ್ವರಃ, ನರಾಧಿಪಃ, ನರೋತ್ತಮಃ, ನರರ್ಷಭ-ಇತ್ಯಾದಿ ಪದಗಳಿವೆ. ಸ್ವಸಂತಂ ಇವಪಸನ್ನಾಗಂ ಎಂಬುದಕ್ಕೆ ಪ್ರತಿಯಾಗಿ ನಿಶ್ವಸಂತಂ ಯಥಾನಾಗಂ ಎಂದು ಬರೆದಿರುವುದನ್ನು ಎರಡನೆಯದಕ್ಕೆ ಉದಾಹರಣೆಯಾಗಿ ತೆಗೆದುಕೊಳ್ಳಬಹುದು.

(g) ನೋಟ್ಟೋಟಕ್ಕೆ ಅಪ್ರಮುಖ್ಯವಾಗಿ ತೋರುವ ಲೋಪ ಅಥವಾ ಸೇರಿಸಿರುವ ಪದಗಳು ಗಳು. ಇವುಗಳೆಲ್ಲ ಬಹುಮಟ್ಟಿಗೆ ಪ್ರತ್ಯಯಗಳೋ, ಸಾಮಾನ್ಯಕ್ರಿಯಾವಿಶೇಷಣಗಳೋ ಇಲ್ಲವೆ ಸಂಬಂಧಾವ್ಯಯಗಳೋ ಆಗಿರುತ್ತವೆ.

| | | |
|---|---|---|
| ಪಂಚತಂತ್ರ. | TA 13 : | ಅಥಾತ್ರ ಕಿಂ ಕರ್ತುಕಾಮಃ |
| | SP 111 : | ಅಥ ಭವಾನ್ ಕಿಂ ವಕ್ಷ್ಯತಿ |
| | HP 55.4 ಮತ್ತು Hm14 5 | ಅಥ ಭವಾನ್ ಕಿಂ ಬ್ರವೀತಿ |

(h) ಮಿಥ್ಯಾಸ್ಮೃತಿಗಳು : ಒಮ್ಮೊಮ್ಮೆ ಲಿಪಿಕಾರನ ಕಣ್ಣಮುಂದಿರುವ ಪಾಠದ ಯಾವುದೋ ಒಂದು ಅಂಶದಿಂದ ಲಿಪಿಕಾರನ ಮನಸ್ಸಿನಲ್ಲಿ ಇನ್ನೇನೋ ಹೊಳೆಯಬಹುದು. ಎದುರಿಗಿರುವ ಪಾಠದಲ್ಲಿರುವುದನ್ನು ಬರೆಯುವ ಬದಲು ಅವನು ತನ್ನ ಮನಸ್ಸಿನಲ್ಲಿರುವುದನ್ನು ಬರೆದು ಬಿಡಬಹುದು.

ಮಹಾಭಾ. 5. 127. 29 ೩ ಇಲ್ಲಿ **ವಶ್ಯೇಂದ್ರಿಯಮ್ ಜಿತಾಮಾತ್ಯಮ್** ಎಂದಿದೆ. ಆದರೆ $K_1D_1T_1G_{1-3-4}$ ಗಳಲ್ಲಿ **ಜಿತಾತ್ಮಾನಮ್** ಎಂದಿದೆ. ಇದಕ್ಕೆ ಕಾರಣ 27ᶜ ಯಲ್ಲಿರುವ **ಅಜಿತಾತ್ಮಾ** ಎಂಬ ಪದಗಳು ಮನಸ್ಸಿನಲ್ಲಿರುವುದು.

(i) ಅಂಚಿನಲ್ಲಿರುವುದನ್ನು ಪಾಠದ ಚೌಕದೊಳಗೆ ಸೇರಿಸಿಬಿಡುವುದು. ಇವು ಪಾಠವಿವರಣೆಗಳೋ, ಉದಾಹೃತ ಉದ್ಧರಣಗಳ ವಿವರಣೆಗಳೋ ಅಥವಾ ಓದುಗನ ವ್ಯಾಖ್ಯಾನಗಳೋ ಆಗಿರಬಹುದು. ಸಂದೇಶರಾಸಕನ (ಭಂಡಾರ್ಕರ್ ಸಂಸ್ಥೆಯಲ್ಲಿರುವ ಸರ್ಕಾರೀ ಹಸ್ತಪ್ರತಿ ಸಂಗ್ರಹದ ನಂ $\frac{181}{1881\text{-}82}$) ಹಸ್ತಪ್ರತಿಯಲ್ಲಿ ಆ ಗ್ರಂಥದಲ್ಲಿಯೇ ಬಳಸಿರುವ ಕೆಲವು ಛಂದಸ್ಸುಗಳನ್ನು ವಿವರಿಸುವ ಸೂತ್ರಗಳು ಸೇರಿಬಿಟ್ಟಿವೆ. ಈ ಭಾಗಗಳು ಮೊದಲು ಅಂಚಿನಲ್ಲಿದ್ದಿರಬೇಕು. ತರುವಾಯ ಯಾವನೋ ಪ್ರತಿಕಾರನು ಇದನ್ನು ಪಾಠದ ನಡುವೆ ಸೇರಿಸಿಬಿಟ್ಟಿರಬೇಕು.

(j) ಪಾಠಸುಧಾರಣೆ (Intrpolation). ಉದ್ದೇಶವಿಲ್ಲದೆ ಘಟಿಸಿರುವ ಪಾಠಸ್ಖಾಲಿತ್ಯಗಳನ್ನು ತಿದ್ದಲು ಉದ್ದೇಶಪೂರ್ವಕವಾಗಿ ಪಾಠದಲ್ಲಿ ಅದಲು ಬದಲು ಮಾಡುವುದು. ಅಥವಾ ಹೊಸದಾಗಿ ಸೇರಿಸುವುದು. ಸ್ಪಷ್ಟವಾದ ಪಾಠದೋಷಗಳನ್ನೋ ಅಥವಾ ಪಾಠಲೋಪವನ್ನೋ ಸುಧಾರಿಸುವ ಏನಾದರೊಂದು ಉದ್ದೇಶದಿಂದಲೇ ಪಾಠಸುಧಾರಣೆ (Interpolation) ನಡೆಯುತ್ತದೆ. ಇಂಥ ಸುಧಾರಣೆಗಳಲ್ಲಿ ಕೌಶಲ್ಯದ ಕೊರತೆ ತೋರುವ ನಿದರ್ಶನಗಳೇ ಹೆಚ್ಚು. ಪಾಠಸುಧಾರಣೆ (ಎಂದರೆ ಸರಿಗೊಳಿಸುವಿಕೆ, ಉತ್ತಮಗೊಳಿಸುವಿಕೆ ಎಂಬ ಅರ್ಥದಲ್ಲಿ) ಪ್ರಕ್ಷೇಪ ಮತ್ತು ಲೋಪಗಳೆರಡನ್ನೂ ಒಳಗೊಳ್ಳುತ್ತದೆ. ಉದ್ದೇಶಪೂರ್ವಕವಾಗಿ ಮಾಡಿದ ಲೋಪಗಳನ್ನು ಪತ್ತೆಹಚ್ಚುವುದು ಕಷ್ಟಕರವಾಗುತ್ತದೆ. ಪಾಠವ್ಯತ್ಯಾಸವೊಂದು ಉದ್ದೇಶಪೂರ್ವಕವಾದದ್ದೋ ಅಲ್ಲವೋ ಎಂದು ಹೇಳುವುದು ದುಷ್ಕರವಾದ ಕೆಲಸ. ಭಂಡಾರ್ಕರ್

ಸಂಸ್ಥೆಯಲ್ಲಿ ನಡೆದ ಮಹಾಭಾರತದ ಅಧ್ಯಯನಕಾರ್ಯದಲ್ಲಿ ದೊರೆತ ಅನುಭವವನ್ನು ಆಧಾರವಾಗಿಟ್ಟುಕೊಂಡು ಪ್ರಕ್ಷೇಪಗಳನ್ನು ಕೆಳಕಂಡ ರೀತಿಯಲ್ಲಿ ವಿಭಾಗಿಸಬಹುದು.

೧. ಪ್ರತಿನಿಧಾನವು (Substitution) ಕೆಲವು ಪರಂಪರಾಗತ ಪಾಠಕ್ಲೇಶಗಳನ್ನು ಮರೆಮಾಡಿರುವುದು ಸಹಜ.

(i) ಲಿಪಿಕಾರರು ಮತ್ತು ಪರಿಷ್ಕಾರಕರು ಗ್ರಂಥಪಾತಗಳನ್ನು ನಿವಾರಿಸಲು ರಹಸ್ಯ ಪ್ರಯತ್ನಗಳನ್ನು ಮಾಡಿರುವುದು ಹಸ್ತಪ್ರತಿಯಲ್ಲಿ ಸುಲಭವಾಗಿ ತಿಳಿದುಹೋಗುತ್ತದೆ: ಉಪೋದ್ಘಾತ XCIII ನೋಡಿ

(ii) ಅಧಿಕಾಕ್ಷರವಿರುವ ಪಾದವನ್ನು ಸರಿಪಡಿಸಲು ಯತ್ನಿಸಿರುವುದು : 1.20
ವಿನತಾಂ ವಿಷಣ್ಣವದನಾಂ > v. 1. ವಿಷಣ್ಣರೂಪಾಂ ವಿನತಾಂ
ವಿನತಾಂ ದೀನವದನಾಂ ವಿಷಣ್ಣವದನಾಂ ಕದ್ರೂ :

(iii) ಅಪಪ್ರಯೋಗ (Solecism) ಗಳನ್ನು ನಿವಾರಿಸಲು ಯತ್ನಿಸಿರುವುದು :
5.86.16$^{d}$ : ವ್ಯಥಿತೋ ವಿಮನಾಭವತ್ : S ವಿಮನಾವ್ಯಥಿತೋಽಭವತ್

(iv) ಪ್ರಾಚೀನವಾದ ಶಬ್ದರೂಪಗಳನ್ನೂ ಮತ್ತು ಕ್ಲಿಷ್ಟವಾದ ಇಲ್ಲವೆ ಅಪರಿಚಿತವಾದ ಪದ ಹಾಗೂ ವಾಕ್ಯಾಂಶಗಳನ್ನೂ ತೆಗೆದುಹಾಕುವುದು :
5.34 78$^{d}$N ಅಪಾಚಿನಾನಿ : S ಅಪನೀತಾನಿ

(v) ಕ್ಲಿಷ್ಟವಾದ ಅಥವಾ ವಿಶೇಷತರದ ರಚನೆಯನ್ನೋ ಇಲ್ಲವೆ ಅರ್ಥವನ್ನೋ ಸುಧಾರಿಸುವುದು : ಮಹಾಭಾ. 5.7.28°N : ಕೃಷ್ಣನ್ ಚಾಪ್ಯತವಮ್ ಜ್ಞಾತ್ವಾ ಯುದ್ಧಾನ್ ಮೇನೇ ಜಿತಮ್ ಜಯಮ್ > S ಕೃಷ್ಣಮ್ ಚಾಪಿ ಮಹಾಬಾಹುಮ್ ಆಮಂತ್ರ್ಯ ಭರತರ್ಷಭ.

೨. ವಾಕ್ಯ, ಪದ್ಯ, ದೀರ್ಘವಾದ ಪಾಠಭಾಗ ಕಡೆಗೆ ಒಂದು ಇಡೀ ಅಧ್ಯಾಯವನ್ನೇ ಸೇರಿಸುವುದರವರೆಗೆ ಎಲ್ಲ ಹಂತಗಳಲ್ಲಿಯೂ ಪ್ರಕ್ಷೇಪ ಕಂಡುಬರುತ್ತದೆ. ಆದರೆ ಲಿಪಿಕಾರರಿಗೆ ಇವುಗಳನ್ನು ಆರೋಪಿಸುವಂತಿಲ್ಲ. ಹಸ್ತಪ್ರತಿಯ ಪರಿಷ್ಕಾರಕರಿಗೆ ಸಮಾನರೀತಿಯ ಮತ್ತೊಂದು ವಿಶಾಲ ಸಾಹಿತ್ಯಮೂಲದ ಪರಿಚಯವಿದ್ದು ಅದರಿಂದ ಮೇಲೆ ಹೇಳಿದಂಥ ಭಾಗಗಳನ್ನು ತೆಗೆದು ಸೇರಿಸಿರಬೇಕು.

(i) ಪಟ್ಟಿಯೊಂದರಲ್ಲಿ ಪ್ರಸ್ತಾಪಿಸಿರುವ ಅಂಶಗಳನ್ನು ಹೆಚ್ಚಿಸಿಹೇಳುವುದು ಅಥವಾ ವರ್ಣನೆಯೊಂದನ್ನು ವಿವರವಾಗಿ ಮಾಡಲು ಇಚ್ಛಿಸುವುದು :
ಸುಕ್ತಂಕರ್, ಉಪೋದ್ಘಾತ ಪು. XXXVIII ನೋಡಿ.

(ii) ಕಥೆಗಳನ್ನು, ಪ್ರಸಂಗಗಳನ್ನು ಅಥವಾ ಉಪದೇಶಗಳನ್ನು, ಅವು ಬರಬೇಕಾದ ಎಡೆಗಳಿಗಿಂತ ಮುಂಚೆಯೇ ಹೇಳಿಬಿಡುವುದು ಇಲ್ಲವೆ ಹೆಚ್ಚುಸಲ ಹೇಳುವುದು.

(iii) ನೀತಿ, ಧರ್ಮಗಳಿಗೆ ಸಂಬಂಧಿಸಿದ ಮಾತುಗಳನ್ನಾಗಲೀ ಇಲ್ಲವೆ ಸಾರವತ್ತಾದ ಹೇಳಿಕೆಗಳನ್ನಾಗಲೀ ಹೊಂದುವ ಸ್ಥಳಗಳಲ್ಲಿ ಸೇರಿಸಿಬಿಡುವುದು.

(iv) ಒಂದು ವಿಶಿಷ್ಟ ಸಿದ್ಧಾಂತಕ್ಕೆ ಸಂಬಂಧಿಸಿದ ಮಾತುಗಳ ಪ್ರಕ್ಷೇಪ.
ಉದಾ : ರಾಮಾಯಣದಲ್ಲಿ ರಾಮಾನುಜ ಪಂಥಕ್ಕೆ ಅನ್ವಯವಾಗುವ ಭಾಗ $R_1$ 5.27.20--32 ಈ ಭಾಗ ರಾಮನಿಗೆ ದೈವತ್ವವನ್ನು ಆರೋಪಿಸುತ್ತದೆ.

(v) ಲುಪ್ತಪಾಠವನ್ನು (ಇದು ನಿಜವಿರಬಹುದು ಅಥವಾ ಕೇವಲ ಕಲ್ಪಿತವಾಗಿರಲೂ ಬಹುದು) ತುಂಬಲು ಮಾಡುವ ಪ್ರಕ್ಷೇಪ:
ಮಹಾಭಾ : 1.482*

(vi) ಪರಸ್ಪರ ಹೊಂದದ ಭಾಗಗಳನ್ನು ಸೇರಿಸಲು ಮಾಡುವ ಅನ್ವಯ ಪ್ರಕ್ಷೇಪಗಳು. ಯುಧಿಷ್ಠಿರನಿಗೇ ಉತ್ತರಾಧಿಕಾರತ್ವ ಆರೋಪಿಸಿ ಪಟ್ಟಗಟ್ಟುವ ಮತ್ತು ಅರ್ಜುನನ್ನು ತನ್ನ ಗುರುವಿನೊಡನೆ ಹೋರಾಡಿದ ದೋಷದಿಂದ ಮುಕ್ತಗೊಳಿಸುವ ಒಂದೇ ಒಂದು ಹೇಳಿಕೆ ಬೊಂಬಾಯಿ ಮುದ್ರಣದ 139ನೆಯ ಅಧ್ಯಾಯದಲ್ಲಿ (App. I No. ಮಹಾಭಾರತದ ಸವಿಮರ್ಶ ಪರಿಷ್ಕೃತ ಮುದ್ರಣದ 80ನೆಯ ನಂ.) ಕಂಡು ಬರುತ್ತದೆ.

(vii) ರಂಗಪ್ರಕ್ಷೇಪಗಳು. ಅಭಿನಯದ ಸಲುವಾಗಿ ರಚಿಸಿದ ನಾಟಕಗಳಲ್ಲಿ ರಂಗ ಪ್ರಕ್ಷೇಪಗಳು ದೊರೆಯುತ್ತವೆ. ಕಾಳಿದಾಸನ ಶಾಕುಂತಲ ನಾಟಕದಲ್ಲಿ ಹಲವು ಸಂಪ್ರದಾಯಗಳು ಕಂಡು ಬರುವುದಕ್ಕೆ ಇದೇ ಕಾರಣವೆಂದು ಭಾವಿಸುತ್ತಾರೆ.

ಪಾಠಸ್ಖಾಲಿತ್ಯಕ್ಕೆ ಸಾಮಾನ್ಯವಾಗಿ ಒಂದಕ್ಕಿಂತ ಹೆಚ್ಚು ಕಾರಣಗಳಿರುತ್ತವೆ ಎನ್ನುವುದು ಮೇಲಿನ ವಿವರಣೆಯಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಒಂದು ನಿರ್ದಿಷ್ಟ ಸ್ಖಾಲಿತ್ಯಕ್ಕೆ ಇಂಥದೇ ಕಾರಣ ಎಂದು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ. ಇಂಥ ಪ್ರಸಂಗಗಳಲ್ಲಿ ಪಾಠಸ್ಖಾಲಿತ್ಯಕ್ಕೆ ಹೆಚ್ಚು ಕಡೆಗಳಲ್ಲಿ ಯಾವುವು ಕಾರಣಗಳಾಗಿ ಕಂಡುಬಂದಿವೆಯೋ ಅವುಗಳಿಗೇ ಪ್ರಾಧಾನ್ಯ ಕೊಟ್ಟು ಉಳಿದವುಗಳನ್ನು ಸಂಭಾವ್ಯ ಅಥವಾ ಪೋಷಕ ಕಾರಣಗಳಾಗಿ ಗಣಿಸ ಬೇಕೆಂಬುದು ಸಂಪಾದನಾಶಾಸ್ತ್ರದ ಮತ.

ಒಂದು ಪಾಠಸ್ಖಾಲಿತ್ಯ ಮತ್ತೊಂದಕ್ಕೆ ದಾರಿಮಾಡುತ್ತದೆಂಬ ವಿಷಯವೂ ಚೆನ್ನಾಗಿ ತಿಳಿದಿರುವಂಥದೆ. ಇದರ ಪರಿಣಾಮವೆಂದರೆ ಗ್ರಂಥದ ಬಾಹ್ಯ ಮತ್ತು ಅಂತಸ್ಥಿತಿಗಳು ಯಾವ ಕಾರಣದಿಂದಾದರೂ ಶುದ್ಧವಾಗಿ ಉಳಿಸಿಕೊಳ್ಳಲು ಸಹಾಯಕವಾಗಿರದಿದ್ದಲ್ಲಿ ಸಂಪಾದಕನೂ ಸರಿಪಡಿಸಲಾಗದ ಪರಿಣಾಮಗಳಿಗೆ ಪಾಠವು ಬಲಿಯಾಗುತ್ತದೆ. ಪಾಠವಿಕಲತೆ ಎಷ್ಟು ಶೀಘ್ರ ಗತಿಯಲ್ಲಿ ಘಟಿಸುತ್ತಾ ಹೋಗುವುದೆಂದರೆ ಹೊಸ ಸ್ಖಾಲಿತ್ಯಗಳ ಹುಲುಸು ಬೆಳೆಯಲ್ಲಿ ಮೂಲ ಪಾಠಾಂತರಗಳು ಮರೆಯಾಗಿ ಬಿಡುತ್ತವೆ ಇಲ್ಲವೆ ಅವುಗಳಿಗೆ ಗ್ರಂಥದಿಂದಲೇ ಉಚ್ಚಾಟನೆ ಸಂಭವಿಸಿಬಿಡುತ್ತದೆ.

# ಅಧ್ಯಾಯ VI : ತಿದ್ದುಪಡಿ

ಕಳೆದ ಅಧ್ಯಾಯದಲ್ಲಿ ಹೇಳಿದಂಥ ಅನೇಕ ವಿಧವಾದ ಸ್ಖಾಲಿತ್ಯಗಳು ಮತ್ತು ದುಷ್ಕೃತಿಗಳು ಪರಂಪರಾಗತವಾಗಿ ಬರುವ ಪಾಠದಲ್ಲಿ ವ್ಯತ್ಯಾಸವನ್ನುಂಟುಮಾಡುತ್ತವೆ. ಗ್ರಂಥದ ಸ್ವರೂಪವನ್ನು ಮತ್ತು ಅದರ ಪಾಠವನ್ನು ಕುರಿತು ತೀರ್ಮಾನಕ್ಕೆ ಬರುವ ಮುನ್ನ ಈ ಸ್ಖಾಲಿತ್ಯಗಳ ಅರಿವು ಸಂಪಾದಕನಿಗಿರಬೇಕು. ಪರಿಷ್ಕರಣ ಕಾರ್ಯವು ಪರಂಪರಾಗತ ಪಾಠದ ಅತ್ಯಂತ ಪ್ರಾಚೀನ ಸ್ವರೂಪವನ್ನು ತಿಳಿಯಲು ಸಂಪಾದಕನಿಗೆ ಸಹಾಯ ಮಾಡುತ್ತದೆ. ಅವನ ಮುಂದಿನ ಕೆಲಸ ತುಂಬ ಪ್ರಾಮಾಣಿಕನಾದ ಪಾಠಶೋಧಕನ ಕೆಲಸ, ಪಾಠವಿಮರ್ಶಕನ ಕೆಲಸವಲ್ಲ. ಏಕೆಂದರೆ ಪಾಠಸಂಪಾದನೆಯು ಮೂಲಪಾಠದ ಅಥವಾ ಅದಕ್ಕೆ ಆದಷ್ಟು ಸಮೀಪವಾದ ಪಾಠದ ಸಂಪಾದನೆ. ಮೂಲಪಾಠವೆಂದರೆ ನಾವು ಆಗಲೇ ಬಲ್ಲಂತೆ ಕೃತಿಕಾರ ಬರೆದ ಪಾಠ. ಆ ಮೂಲಪಾಠದ ಶೋಧನೆ ಇಷ್ಟಕ್ಕೇ ಮುಗಿಯುವುದಿಲ್ಲ.

ಆದ್ದರಿಂದ ಗ್ರಂಥ ಸಂಪಾದಕನು ಹಾಕಿಕೊಳ್ಳಬೇಕಾದ ಮೊದಲ ಪ್ರಶ್ನೆಯೆಂದರೆ 'ಪ್ರಾಚೀನ ಕೃತಿಕಾರನು ಇಲ್ಲಿ ಬರೆದಿದ್ದಿರಬಹುದಾದ ಪಾಠ ಇದೇ ಇರಬಹುದೆ' ಎಂಬುದು. ಈ ಪ್ರಶ್ನೆಗೆ ಉತ್ತರಿಸುವಾಗ ಕೃತಿಕಾರನ ಶಬ್ದಯೋಜನಾಕ್ರಮದ ಸಾಮಾನ್ಯ ಲಕ್ಷಣಗಳನ್ನೂ, ವಿಚಾರ ಸರಣಿಯನ್ನೂ ಮತ್ತು ಆ ಪಾಠಕ್ಕೆ ಸಂಬಂಧಿಸಿದ ನಿರ್ದಿಷ್ಟ ಸಂದರ್ಭವನ್ನೂ ನಾವು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಇದಕ್ಕೆ ಪ್ರತಿಯಾಗಿ ಇಂಥ ಪಾಠಾಂತರ ಅಸಂಭವ ಎಂಬುದನ್ನು ತಕ್ಕಮಟ್ಟಿಗೆ ಖಚಿತವಾಗಿ ಹೇಳಿಬಿಡಬಹುದು. ಆದರೆ ಇರಬೇಕಾದ ಪಾಠ ಇಂಥದೇ ಎಂದು ಹೇಳುವುದಕ್ಕೆ ಈ ರೀತಿಯ ಪರೀಕ್ಷೆ ಯಾವಾಗಲೂ ನಿರ್ಣಾಯಕವಾಗದಿರಬಹುದು. ಕೃತಿಕಾರನ ಶೈಲಿ, ಮನೋಧರ್ಮ, ಸಂದರ್ಭಗಳ ಬಗ್ಗೆ ನಮಗಿರುವ ಕಲ್ಪನೆಯೇ ನಮ್ಮ ವಿಚಾರಕ್ಕೆ ಆಧಾರ ಇಂಥ ಪ್ರಸಂಗಗಳಲ್ಲಿ ಹಿರಿಯ ವಿದ್ವಾಂಸರುಗಳೇ ಭಿನ್ನಾಭಿಪ್ರಾಯಗಳಿಗೆ ಬರಬಹುದು. ಈ ಒಂದೊಂದು ಅಭಿಪ್ರಾಯದ ಸಂಭಾವ್ಯತೆಯು ಎಷ್ಟೆಂಬುದನ್ನು ನಾವು ಗೊತ್ತು ಮಾಡುವುದು ಹೇಗೆ? ಪರಸ್ಪರ ವಿರುದ್ಧವಾದ ಅಭಿಪ್ರಾಯಗಳಲ್ಲಿ ಇಂಥದೇ ಸರಿಯೆಂದು ನಿರ್ಣಯಿಸುವುದು ಹೇಗೆ?

ಆದ್ದರಿಂದ ಸಂಪಾದಕನು ಪರಿಷ್ಕರಣಕಾರ್ಯದಲ್ಲಿ ದೊರೆತ ಪಾಠಾಂತರಗಳ ಅಂತಸ್ಸಂಭಾವ್ಯತೆಯನ್ನು ಗಣಿಸಬೇಕು. (ಹಸ್ತಪ್ರತಿಗಳಿಗೆಲ್ಲ ಸಮಾನವಾದ) 'ಪರಂಪರಾಗತ ಪಾಠವಾಗಲೀ (Transmitted Reading) (ಹಸ್ತ ಪ್ರತಿಗಳು ಮತ್ತು ಇತರ ನೇರ ಸಾಕ್ಷ್ಯಗಳು ಪುಷ್ಟೀಕರಿಸುವ) 'ಸಾಂಪ್ರದಾಯಿಕಪಾಠ'ವಾಗಲೀ (Traditional Reading) ಪೂರ್ತಿಯಾಗಿ ಅರ್ಥಹೀನವಾಗಿಬಿಟ್ಟಿರುವುದು, ಪರಿಶೀಲಿಸುತ್ತಿರುವ ಪಾಠದಲ್ಲಿ ಅಥವಾ ಅದರ ಸಮೀಪ ಪಾಠದಲ್ಲಿ ಎದ್ದು ತೋರುವ ವಿರೋಧಗಳಿರುವುದು, ಗಮನಾರ್ಹವಾದ ಆದರೆ ವಿವರಿಸಲು ಸಾಧ್ಯವಿಲ್ಲದ ಶಬ್ದರೂಪಗಳೋ ರಚನೆಗಳೋ ಇರುವುದು, ಲೇಖಕನಿಗೇ ವಿಶಿಷ್ಟವಾದ ಪ್ರಯೋಗಗಳಿದ್ದಲ್ಲಿ ನಿರುದ್ದಿಶ್ಯವಾದ ಅಥವಾ ಏಕಾರ್ಥದ ಪುನರುಕ್ತಿಗಳಿರುವುದು, ಕವಿ ಪಾಲಿಸಿಕೊಂಡು ಬಂದಿರುವ ಲಯ ಅಥವಾ ಛಂದೋ ನಿಯಮಗಳು ಭಂಗಗೊಂಡಿರುವುದು, ಸಂದರ್ಭ ಸ್ಪಷ್ಟವಾಗಿದ್ದೂ ವಿವರಿಸಲಾಗದಂತೆ ಪಾಠಭಂಗವಾಗಿರುವುದು ಅಥವಾ ವಿಚಾರಸರಣಿಯಲ್ಲಿ ಅಕ್ಷಮ್ಯ

ವಾದ ಅಸಂಬದ್ಧತೆ ಇರುವುದು-ಇಂಥ ಕಡೆಗಳಲ್ಲಿ ಬಾಹ್ಯಸಾಕ್ಷಿಗಳು ಅವುಗಳಿಗೆ ಎಷ್ಟೇ ಪರವಾಗಿದ್ದರೂ ಆ ಪಾಠಭಾಗ ವಿಕೃತವಾಗಿದೆಯೆಂದು ಹೇಳಬಹುದು. ಪಾಠದೋಷವನ್ನು ತೊಡೆಯಲು ಸಾಧ್ಯವಾಗದಿದ್ದಲ್ಲಿ ತಿದ್ದಲಾಗದ ದೋಷವೆಂದು ಆ ಪಾಠವನ್ನು ವರ್ಜಿಸಬಿಡಬಹುದು. ಆದರೆ ಹೆಚ್ಚಿನ ಪ್ರಸಂಗಗಳಲ್ಲಿ ಪಾಠದೋಷಕ್ಕೆ ಪರಿಹಾರವನ್ನು ಕಂಡುಕೊಳ್ಳುವುದು ಸಾಧ್ಯವಿದೆ. ಅಂಥ ಪ್ರಸಂಗದಲ್ಲಿ ಕವಿಮನೋಧರ್ಮವನ್ನು ಲಕ್ಷ್ಯದಲ್ಲಿಟ್ಟು ಅರ್ಥ, ಸಂದರ್ಭ ವ್ಯಾಕರಣ, ಶೈಲಿ, ಛಂದಸ್ಸು, ತಾಳಗಳಿಗೆ ಎಲ್ಲ ವಿಧದಲ್ಲೂ ಹೊಂದುವ ತೃಪ್ತಿಕರವಾದ ತಿದ್ದುಪಡಿಯೊಂದನ್ನು ಮಾಡಬಹುದು. ಈ ತಿದ್ದುಪಡಿಯನ್ನು ಅಂತಸ್ಸಂಭಾವ್ಯವಾದ ಪಾಠವೆಂದು ಹೇಳಬಹುದು. ಪಾಠಾಂತರದ ಅಂತಸ್ಸಂಭಾವ್ಯತೆ (Intrinsic probability) ಕೃತಿಕಾರನಿಗೆ ಸಂಬಂಧಿಸಿರುತ್ತದೆಯೇ ಹೊರತು ಪ್ರತಿಕಾರನಿಗಲ್ಲ.

ಜೊತೆಗೆ ಯೋಜಿತ ಪಾಠಾಂತರವು (ಹಿಂದಿನ ಅಧ್ಯಾಯದಲ್ಲಿ ಪ್ರಸ್ತಾಪಿಸಿದಂಥ) ನಿರ್ದಿಷ್ಟ ವಿಧಾನಗಳಲ್ಲಿ ವಿಕೃತಗೊಂಡು ಇತರ ಪಾಠಾಂತರಗಳೊಡನೆ ಸಾಂಪ್ರದಾಯಿಕ ಅಥವಾ ಪರಂಪರಾಗತ ಪಾಠದಲ್ಲಿ ಉಳಿದಿರುವಂಥದಾಗಿದ್ದಲ್ಲಿ ನಮ್ಮ ಊಹಾಪಾಠಕ್ಕೆ ಅಂತಸ್ಸಂಭಾವ್ಯತೆ ಮತ್ತು ಬಾಹ್ಯಸಂಭಾವ್ಯತೆ (Extrinsic probability) ಈ ಎರಡರ ಬೆಂಬಲವೂ ಇದೆಯೆಂದು ಹೇಳಬಹುದು.

ಹೀಗೆ ಮಾಡಿದ ಊಹೆಗೆ ಲಿಪಿಕಾರ ಲೇಖನ ಸಂಭಾವ್ಯತೆ (Transcriptional probability) ಇರಬೇಕು. ಎಂದರೆ ಪ್ರತಿಕಾರ ಹೇಗೆ ಈ ತಪ್ಪು ಮಾಡಿದನೆಂಬುದನ್ನು ಹೇಳಬೇಕು. ಹೀಗೆ ಹೇಳಬೇಕಾದಲ್ಲಿ ಅದು ಲಿಪಿವಿಜ್ಞಾನದ ದೃಷ್ಟಿಯಿಂದ ಹೊಂದುವಂಥದಾಗಿರಬೇಕು. ಇದನ್ನೇ ಬೇರೆ ಮಾತುಗಳಲ್ಲಿ ಹೀಗೆ ಹೇಳಬಹುದು. ಕೆಲವು ಪರಂಪರಾಗತ ಪಾಠಾಂತರಗಳು, ಮಾತೃಕೆಯಲ್ಲಿ ಇದ್ದಿರಬಹುದೆಂದು ನಂಬಬಹುದಾದ ಇನ್ನು ಕೆಲವು ಪಾಠಾಂತರಗಳನ್ನು ಬರೆಯುವಾಗ ಘಟಿಸಿದ ರೂಪವಿಕೃತಿಗಳಿಂದು ವಿವರಿಸುವುದು ಸಾಧ್ಯವಾದರೆ ಮಾತೃಕೆಯ ಪಾಠಾಂತರಗಳಿಗೆ ಲಿಪಿಲೇಖನಸಂಭಾವ್ಯತೆ ಇದೆಯೆಂದು ಹೇಳಲಾಗುತ್ತದೆ.

ಪಾಠಾಂತರದ ಅಂತಸ್ಸಂಭಾವ್ಯತೆಯು ಹೇಗೆ ಲಿಪಿಕಾರನಿಗೆ ಸಂಬಂಧಿಸದೆ ಕೃತಿಕಾರನಿಗೆ ಮಾತ್ರ ಸಂಬಂಧಿಸಿರುತ್ತದೋ ಹಾಗೆಯೇ ಲಿಪಿಲೇಖನ ಸಂಭಾವ್ಯತೆಯು ಕೃತಿಕಾರನಿಗೆ ಸಂಬಂಧಿಸಿರದೆ ಲಿಪಿಕಾರನಿಗೆ ಮಾತ್ರ ಸಂಬಂಧಿಸಿರುತ್ತದೆ. ಇದನ್ನೇ ಬೇರೆ ಮಾತುಗಳಲ್ಲಿ ಹೀಗೆ ಹೇಳಬಹುದು. ಊಧಃ ಖುದ್ಧಃ ಮತ್ತು ಊರ್ಧ್ವಃ—ಹೀಗೆ ಮೂರು ಪಾಠಾಂತರಗಳಿವೆಯೆನ್ನೋಣ. ಇವುಗಳಲ್ಲಿ ಉಳಿದೆರಡಕ್ಕಿಂತ ಉತ್ತಮವಾದದ್ದು ಯಾವುದು? ಈ ನಿದರ್ಶನದಲ್ಲಿ ಅಂತಸ್ಸಂಭಾವ್ಯತೆಯ, ಎಂದರೆ ಈ ಪಾಠಾಂತರಗಳ ಪರಸ್ಪರ ತುಲನೆಯ, ವಿಷಯ ಬರುವುದಿಲ್ಲ. ಇದು ಲಿಪಿಕಾರರ ಪ್ರತಿಲೇಖನಕ್ಕೆ ಸಂಬಂಧಿಸುತ್ತದೆ. ಊಧಃ ಎಂಬುದು

---

1 ಇದಕ್ಕೆ Documental ಅಥವಾ Documentary Probability ಎಂದೂ ಹೆಸರು.

2 ಮಹಾಭಾರತ. 1.57.7. ಕಷ್ಟ ಪಾಠದಿಂದ ಹುಟ್ಟಿದ ಭಿನ್ನರೂಪಗಳಿಗೆ ನಿದರ್ಶನಗಳಾಗಿ "ರೂಪಂ", "ರಮ್ಯಃ", "ಶ್ರೇಷ್ಠಃ", "ಉಚ್ಚೈಃ" ಗಳಂಥ ರೂಪಗಳೊಂದಿಗೆ ಇವುಗಳನ್ನು ಕೊಡಲಾಗಿದೆ. Prolegomena XII ನೋಡಿ. ಕಷ್ಟಪಾಠವನ್ನು ತೆಗೆಯುವಾಗ ಸಹ, ರೂಪದಲ್ಲಿಯೋ ಶಬ್ದದಲ್ಲಿಯೋ ಅದಕ್ಕೆ ಸಮೀಪವಾದ ಭಿನ್ನಪಾಠಗಳಲ್ಲಿ ಲೇಖನ ಸಂಭಾವ್ಯತೆ ಸೂಚಿತವಾಗಿರುವಂತೆ ತೋರುತ್ತದೆ.

ಮೂಲ ಪಾಠಾಂತರವೆಂಬ ಊಹೆಯ ಮೇಲೆ ಅದು ಖಃದ್ಧಃ ಮತ್ತು ಊರ್ಧ್ವಃ[2] ಎಂಬ ವಿಕೃತರೂಪಗಳಿಗೆ ತಿರುಗಿದ ಬಗೆ ಹೇಗೆ ಎಂದು ಹೇಳುವುದು ಸಾಧ್ಯವೆ? ಲಿಪಿಕಾರ ಲೇಖನ ಸಂಭಾವ್ಯತೆಯ ಪರೀಕ್ಷೆಯೆಂದು ಕರೆಯುವುದು ಇದನ್ನೇ.

ಗ್ರಂಥ ಸಂಪಾದಕರ ಅನೇಕ ಪೀಳಿಗೆಗಳು ಇದುವರೆಗೆ, ತಮ್ಮ ನಿರಂತರ ಪರಿಶ್ರಮದಿಂದ ಪಾಠಶೋಧನೆಯಲ್ಲಿ ಯಾವ ಯಾವ ಪರೀಕ್ಷಾ ಕ್ರಮಗಳನ್ನು ರೂಪಿಸಿವೆಯೋ ಅವೆಲ್ಲವುಗಳನ್ನೂ ಉಪಯೋಗಿಸಿ ಸಂಪಾದಕನೊಬ್ಬನು ಎಚ್ಚರದಿಂದಲೂ ಪ್ರಾಮಾಣಿಕವಾಗಿಯೂ ಪಾಠಪರಿಷ್ಕರಣ ಮಾಡಿದ್ದಾನೆ ಎನ್ನೋಣ. ಅಂಥ ಪ್ರತಿಯೊಂದು ಸೂಕ್ಷ್ಮ ಪರೀಕ್ಷೆಯ ನಂತರವೂ ಸ್ವೀಕರಣ (Acceptance) ಸಂದೇಹ (Doubt) ವರ್ಜನ (Rejection) ಪರಿಷ್ಕರಣ (Alteration)—ಈ ನಾಲ್ಕು ಬಗೆಯ ತೀರ್ಮಾನಗಳಿಗೆ ಬರುವುದು ಸಾಧ್ಯ. ಎಂದರೆ, ಪರಂಪರಾಗತ ಪಾಠದಲ್ಲಿರುವುದು ಕೃತಿಕಾರನು ಬರೆದುದನ್ನು ಅಥವಾ ಬರೆಯಬಹುದಾದುದನ್ನು ಪ್ರತಿನಿಧಿಸುವುದೆಂದು ಸ್ಪಷ್ಟೀಕರಿಸಬಹುದು; ಮೂಲವನ್ನು ಪ್ರತಿನಿಧಿಸುವುದೇ ಎಂಬ ಬಗ್ಗೆ ಸಂದೇಹ ತಾಳಬಹುದು; ಖಂಡಿತವಾಗಿ ಪ್ರತಿನಿಧಿಸುವುದಿಲ್ಲವೆಂದು ನಿರ್ಧರಿಸಬಹುದು; ಆ ಪಾಠಾಂತರವನ್ನು ತೆಗೆದು, ಮೂಲದಲ್ಲಿ ಖಂಡಿವಾಗಿ ಇತ್ತೆಂದು ತಿಳಿದುಬರುವ ಪಾಠಾಂತರವನ್ನು ಅಲ್ಲಿ ಸೇರಿಸಬಹುದು. ಮೊದಲ ಮೂರು ರೀತಿಯ ತೀರ್ಮಾನಗಳಿಗೆ, ಎಂದರೆ ಸ್ವೀಕರಣ, ಅನುಮಾನ, ವರ್ಜನಗಳಿಗೆ, ಅಂತಸ್ಸಂಭಾವ್ಯತೆಯ ಗಣನೆಗಳೇ ಆಧಾರ. ಆದರೆ ಕಡೆಯ ತೀರ್ಮಾನಕ್ಕೆ ಬರುವಾಗ ಲಿಪಿಲೇಖನ ಸಂಭಾವ್ಯತೆಯನ್ನೂ ಗಣಿಸಬೇಕಾಗುತ್ತದೆ.

ಇರುವ ಒಂದೇ ಒಂದು ಪಾಠಾಂತರವಾಗಲೀ ಅಥವಾ ಲಿಖಿತ ಆಧಾರಗಳು ಒದಗಿಸುವ ಯಾವುದೇ ಪಾಠಾಂತರವಾಗಲೀ ಅಸಮರ್ಪಕವಾಗಿ ಕಂಡುಬಂದಾಗ ಕೃತಿಕಾರನ ಪಾಠವನ್ನು ಪಡೆಯಲು ಇರುವ ದಾರಿ ಒಂದೇ ಒಂದು; ಅದೆಂದರೆ ಊಹಾತ್ಮಕ ತಿದ್ದುಪಡಿಯನ್ನು (Conjectural Emendation) ಮಾಡುವುದು. ಹಾಗೆ ಕಲ್ಪಿಸಲ್ಪಟ್ಟ ತಿದ್ದುಪಡಿಗೆ ಅಂತಸ್ಸಂಭಾವ್ಯತೆ ಮತ್ತು ಲಿಪಿಕಾರ ಲೇಖನ ಸಂಭಾವ್ಯತೆಗಳೆರಡೂ ಇರಬೇಕು. ಹಸ್ತಪ್ರತಿಗಳಲ್ಲಿ ದೊರೆಯುವ ಸಂದೇಹ ಪಾಠಾಂತರಗಳಿಗೂ ಈ ಪರೀಕ್ಷೆಗಳನ್ನು ನಾವು ಅನ್ವಯಿಸುತ್ತೇವೆ. ಆದರೆ ಪರೀಕ್ಷಿಸುವ ವಿಧಾನಕ್ಕೆ ಸಂಬಂಧಿಸಿದಂತೆ ಊಹಾತ್ಮಕ ತಿದ್ದುಪಡಿಗೂ ಮತ್ತು ಹಸ್ತಪ್ರತಿಗಳ ಭಿನ್ನಪಾಠಗಳಿಗೂ ಇದೊಂದು ವ್ಯತ್ಯಾಸವಿದೆ. ಎಲ್ಲ ಪರೀಕ್ಷೆಗಳಲ್ಲೂ ಉಳಿದವುಗಳಿಗಿಂತ ಉತ್ತಮ ಫಲಿತಾಂಶ ಕೊಡುವ ಪಾಠಾಂತರವನ್ನು ನಾವು ಒಪ್ಪಿಕೊಳ್ಳುತ್ತೇವೆ; ಆದರೆ ಊಹಾತ್ಮಕ ತಿದ್ದುಪಡಿ ಮಾತ್ರ ಆ ಪರೀಕ್ಷೆಯಲ್ಲಿ ತೀರ ಉತ್ತಮ ರೀತಿಯಲ್ಲಿ ತೇರ್ಗಡೆಗೊಳ್ಳಬೇಕು. ಈ ಊಹೆಯು ಅತ್ಯಂತ ಸಮರ್ಪಕವಾಗಿದ್ದಲ್ಲದೆ ಸಂಭಾವ್ಯ ಪಾಠವು ನಿಶ್ಚಿತಪಾಠ ಅಥವಾ ಅದಕ್ಕೆ ಸಮೀಪವಾದ ಪಾಠದ ಮಟ್ಟಕ್ಕೇರುವುದು ಸಾಧ್ಯವಿಲ್ಲ.

ಊಹಾತ್ಮಕ ತಿದ್ದುಪಡಿಯು ಅಂತಸ್ಸಂಭಾವ್ಯತೆ ಮತ್ತು ಲಿಪಿಕಾರ ಲೇಖನ ಸಂಭಾವ್ಯತೆಗಳೆರಡನ್ನೂ ಒಟ್ಟಿಗೆ ತೋರದಿದ್ದಲ್ಲಿ ಅವುಗಳ ನಡುವೆ ವ್ಯತ್ಯಾಸವಿದೆಯೆಂದು ಭಾವಿಸಬೇಕು. ಲೇಖನ ಸಂಭಾವ್ಯತೆಯನ್ನು ಅಲ್ಲಗಳೆದು ಅಂತಸ್ಸಂಭಾವ್ಯತೆಯನ್ನು ಮಾತ್ರ ಪ್ರಕಟಿಸುವ ತಿದ್ದುಪಡಿಯನ್ನು ಸತ್ಯಪಾಠವೆಂದೇ ಭಾವಿಸಲು ಸಾಧ್ಯವಿಲ್ಲವಾದರೂ ಅದು ಸತ್ಯಪಾಠವಾಗಿರಬಹುದಾದ ಸಾಧ್ಯತೆಯೇನೋ ಇದೆ. ಆದರೆ ಲೇಖನ ಸಂಭಾವ್ಯತೆಯನ್ನು ತೋರಿ ಅಂತಸ್ಸಂಭಾವ್ಯತೆ

1 Hall, P. 153

ಯನ್ನು ಅಲ್ಲಗಳೆಯುವ ತಿದ್ದುಪಡಿಗೆ ಮಾತ್ರ ಏನೂ ಬೆಲೆಯಿಲ್ಲ. ಆದ್ದರಿಂದಲೇ ಉತ್ತಮ ಸಂಪಾದಕನು ಬರಿಯ ಲಿಪಿಕಾರನಿಗಿಂತ ದೊಡ್ಡವನು ಎಂದು ಸೂಕ್ತಿ ಇರುವುದು.[1]

ಅಂತಸ್ಸಂಭಾವ್ಯತೆಗಳ ಬೆಲೆಯನ್ನು ನಿರ್ಧರಿಸಲು, ಲೇಖನ ಸಂಭಾವ್ಯತೆಯ ಅಥವಾ ಬಾಹ್ಯ ಸಂಭಾವ್ಯತೆಯ ಮೌಲ್ಯಮಾಪನಕ್ಕೆ ಬೇಕಾಗುವುದಕ್ಕಿಂತ ಹೆಚ್ಚಿನ ಜ್ಞಾನ, ನಿರ್ಣಯ ಶಕ್ತಿ ಮತ್ತು ನಿರೀಕ್ಷಣಾ ಸಾಮರ್ಥ್ಯಗಳು ಇರಬೇಕಾಗುತ್ತದೆ. ಈ ಕಾರಣದಿಂದ ಊಹಾತ್ಮಕ ತಿದ್ದುಪಡಿಯು ಸಂಪಾದನ ಕಾರ್ಯದಲ್ಲೇ ಬಹು ಮುಖ್ಯವೂ ಕಷ್ಟಕರವೂ ಆದ ಕೆಲಸ.

ಇಂಥ ಊಹಾತ್ಮಕ ತಿದ್ದುಪಡಿಗಳಿಂದಲೂ ಮೂಲ ಪಾಠವನ್ನು ಪಡೆಯಲಾಗದ ಪ್ರಸಂಗ ಗಳಿರುವುದುಂಟು. ಉದಾಹರಣೆಗೆ ಮಾತೃಕೆಯ ಕಾಲಕ್ಕಿಂತ ಹಿಂದೆಯೇ ತಪ್ಪು ಪಾಠಾಂತರ ವೊಂದು ಪ್ರತಿಯಲ್ಲಿ ಸೇರಿಕೊಂಡಿದ್ದು ಅದರ ಕಾಲವು ಸ್ವಹಸ್ತಪ್ರತಿಯದಕ್ಕೆ ಸಮೀಪವಾಗಿದೆ ಎಂದು ಭಾವಿಸೋಣ. ಇಂಥ ಪ್ರಸಂಗದಲ್ಲಿ ಲೇಖನ ಸಂಭಾವ್ಯತೆಯ ಪ್ರಯೋಜನವನ್ನು ಪಡೆಯುವುದು ಸಾಮಾನ್ಯವಾದ ಕೆಲಸವಲ್ಲ. ಪರಂಪರಾಗತ ಪಾಠದಲ್ಲಿ ನುಸುಳಿರುವ ಪಾಠಾಂತರದ ಲೇಖನ ಸಂಭಾವ್ಯತೆಯನ್ನು ಅರಿಯಬೇಕಾದಲ್ಲಿ ಹಸ್ತಪ್ರತಿ ಮತ್ತು ಮಾತೃಕೆ ಗಳ ಸರಿಯಾದ ಕಾಲ ತಿಳಿದಿರಬೇಕಾಗುತ್ತದೆ. ಇಂಥ ಪ್ರಸಂಗದಲ್ಲಿ ತಿದ್ದುಪಡಿಯೆಂಬುದು ಅದೃಷ್ಟವಶಾತ್ ಹೊಳೆಯಬಹುದಾದ ಒಂದು ಸಮರ್ಪಕವಾದ ಊಹೆಗಿಂತ ಹೆಚ್ಚಿನದೇನಲ್ಲ. ಕೆಲವು ಸಲ ಈ ಬಗೆಯ ಊಹಾಪಾಠ (Divination)ಗಳು ಸಮರ್ಪಕವಾಗಿವೆಯೆಂಬುದು ಅನಂತರ ದೊರೆತ ಹೊಸ ಸಾಕ್ಷಿಗಳಿಂದ ಧೃಡಪಡಬಹುದು.

ಹೀಗೆ ಮೂಲಪಾಠಸಂಪಾದನೆಯ ಸಲುವಾಗಿ ತಿದ್ದುಪಡಿವಿಧಾನವನ್ನು ಬಳಸುವುದರಲ್ಲಿ ಕೆಲವು ಅಪಾಯಗಳಿವೆ. ಇವುಗಳನ್ನು ಎದುರಿಸಬೇಕು, ಸಾಧ್ಯವಿದ್ದಷ್ಟೂ ದಾಟಬೇಕು. ಎರಡೂ ಸಂಭಾವ್ಯತೆಗಳು ಇದ್ದಾಗ ಕೂಡ ಊಹಾತ್ಮಕ ತಿದ್ದುಪಡಿಯು ಎಲ್ಲ ಷರತ್ತುಗಳನ್ನೂ ಪೂರ್ಣವಾಗಿ ತೃಪ್ತಿಪಡಿಸಬೇಕು. ಇಲ್ಲದಿದ್ದಲ್ಲಿ ತಿದ್ದುಪಡಿ ಹೆಚ್ಚು ಸಂಭಾವ್ಯವಾದ ಪಾಠಾಂತರ ಮಾತ್ರವೇ ಆಗಿ ಉಳಿಯುತ್ತದೆ. ಇದು ಯಾವಾಗಲೂ ಆಗುತ್ತದೆನ್ನುವಂತಿಲ್ಲ.

ಉದಾಹರಣೆಗೆ ಮಹಾಭಾರತದ ವಿಮರ್ಶಾತ್ಮಕ ಪರಿಷ್ಕರಣ ಕಾರ್ಯದಲ್ಲಿ ತಿದ್ದುಪಡಿಯ ಪಾತ್ರ ಸಾಮಾನ್ಯವಾದದ್ದು. ತಿದ್ದುಪಡಿಗಿಂತ ವಿವರಣೆಗೆ ಹೆಚ್ಚು ಪ್ರಾಧಾನ್ಯ ನೀಡಲಾಗಿದೆ. ಕೆಟ್ಟು ಹೋಗಿರುವ ಪಾಠಭಾಗಗಳಿಗೂ ಸಹ ಯಾವುದಾದರೊಂದು ಹಸ್ತಪ್ರತಿಯಲ್ಲಿ ದೊರೆಯುವ ಪಾಠಾಂತರವು ಅರ್ಥವನ್ನು ತಂದುಕೊಡುತ್ತದೆ. ಆದರೆ ಈ ಅರ್ಥ ಮೂಲಾರ್ಥವಾಗಲೀ, ತೃಪ್ತಿಕರವಾದ ಅರ್ಥವಾಗಲೀ ಆಗದೆಯೂ ಇರಬಹುದು ಎಂದು ಸುಕ್ತಂಕರ್‌ರವರು ಹೇಳು ತ್ತಾರೆ.[1] ಇಷ್ಟಾದರೂ ಆತುರದ ತಿದ್ದುಪಡಿ ವಿರೋಧಿಸಬೇಕಾದದ್ದು. ಏಕೆಂದರೆ ವಿದ್ವಾಂಸರು ಮಾಡಿದ ತಿದ್ದುಪಾಟುಗಳಲ್ಲಿ, ಕೇವಲ ಕೆಲವು ಮಾತ್ರ ನಿಜವಾದ ತಿದ್ದುಪಡಿಗಳಾಗಿವೆಯೆಂಬು ದನ್ನು ಅನುಭವ ತೋರಿಸಿಕೊಟ್ಟಿದೆ. ವಿಶೇಷವಾಗಿ ಈ ಕೃತಿಗೆ ಸಂಬಂಧಿಸಿದಂತೆ ನಮ್ಮ ಅರಿವು ತೀರಸ್ವಲ್ಪ. ಮಹಾಕಾವ್ಯದ ನುಡಿಕಟ್ಟುಗಳು, ಏಕೆ ಮಹಾಕಾವ್ಯದ ಲೋಕವೇ ನಮಗೆ ತಿಳಿಯದ್ದಾಗಿದೆ. ಮಹಾಕಾವ್ಯದ ಪಾಠದ ಕ್ರಮವಾದ ಬದಲಾವಣೆಗಳೂ ನಮಗೆ ತಿಳಿಯದು.

---

1 Prolegomena, P. XCII

ಜೊತೆಗೆ ಮೂಲಪಾಠವು ಭಾಷಾದೃಷ್ಟಿಯಿಂದ ಏಕರೀತಿಯದಾಗಿತ್ತೆಂದೂ ಯಾವುದಾದರೊಂದು ನಿರ್ದಿಷ್ಟ ಮಾನಕ್ಕೊಳಪಟ್ಟಿತ್ತೆಂದೂ ಯಾರು ಹೇಳಬಲ್ಲರು?

ಸುಕ್ತಂಕರ್‌ರವರ ಮೇಲಿನ ಮಾತು ಏಕಕರ್ತೃಕವಲ್ಲದ ಹಸ್ತಪ್ರತಿಗಳಿಗೂ ಸಮಾನವಾಗಿ ಅನ್ವಯವಾಗುತ್ತದೆ. ಶಾಸ್ತ್ರೀಯವ್ಯಾಖ್ಯಾನದ ಬೇರೆಲ್ಲರೀತಿಯ ಪರೀಕ್ಷೆಗಳೂ ವಿಫಲವಾಗಿದ್ದು ತಿದ್ದುಪಡಿಗೆ ತಕ್ಕ ಸನ್ನಿವೇಶಾನುಕೂಲವಿದ್ದಾಗ ಮಾತ್ರ ಸಂಪಾದಕನು ತಿದ್ದುಪಡಿವಿಧಾನಕ್ಕೆ ಕೈಹಾಕಬೇಕು. ಪರಸ್ಪರ ಹೊಂದಿಕೆಯಿಲ್ಲದ ಬೇರೆ ಬೇರೆ ಹಸ್ತಪ್ರತಿಸಾಕ್ಷ್ಯಗಳನ್ನು ಒಂದುಗೂಡಿಸಲು ಮಾತ್ರ ತಿದ್ದುಪಡಿ ಮಾಡಬೇಕು. ಹಸ್ತಪ್ರತಿಗಳೆಲ್ಲಕ್ಕೂ ಸಮ್ಮತವಾದ ಅಂಶಗಳಿಗೆ ವಿರುದ್ಧವಾಗಿ ತಿದ್ದುಪಡಿ ಮಾಡಲೇಕೂಡದು. ತಿದ್ದುಪಡಿ ಎನ್ನುವುದು ಈ ರೀತಿಯಲ್ಲಿ, ಹಸ್ತಪ್ರತಿಗಳಲ್ಲಿ ಕೆಲವೆಡೆ ಏನೂ ಅರ್ಥವೇ ಆಗದಿದ್ದಾಗ ಅಥವಾ ಅವುಗಳು ನೀಡುವ ಅರ್ಥ ತೃಪ್ತಿಕರವಾಗಿಲ್ಲದಾಗ ಉತ್ತಮ ಅರ್ಥಗಳನ್ನು ನೀಡಲು ಮಾಡುವ (ನಾವು ಸಾಮಾನ್ಯಾರ್ಥದಲ್ಲಿ ಬಳಸುವ) ತಿದ್ದುವಿಕೆಯೂ ಅಲ್ಲ. ಹೊಂದಿಕೆಯಿಲ್ಲದ ಪಾಠಾಂತರಗಳು ಒಮ್ಮುಖವಾಗಿ ಕೂಡುವ ಪಾಠನಾಭಿಯನ್ನು ಕಂಡುಕೊಳ್ಳುವ ಪ್ರಯತ್ನವೆಂದು ಅದನ್ನು ಕರೆಯಬಹುದು. ಈ ನಿಯಮಗಳನ್ನು ಅನುಸರಿಸಿ ಸುಕ್ತಂಕರ್‌ರವರು (7000ದಿಂದ 8000 ಶ್ಲೋಕಗಳವರೆಗಿರುವ) ವಿಸ್ತಾರವಾದ ಆದಿಪರ್ವದಲ್ಲಿ ಮೂವತ್ತಾರು ತಿದ್ದುಪಡಿಗಳನ್ನು ಮಾಡಿದ್ದಾರೆ. ಇವೆಲ್ಲ ಬಹುಮಟ್ಟಿಗೆ ಬಿಡಿಪದಗಳಿಗೆ ಸಂಬಂಧಿಸಿದ ತಿದ್ದುಪಡಿಗಳು. ನೇಪಾಳದಲ್ಲಿ ದೊರೆತ ಸಭಾಪರ್ವದ ಒಂದು ಪ್ರತಿಯು ಲಭ್ಯಪ್ರತಿಗಳಲ್ಲೆಲ್ಲಾ ಬಹುಪ್ರಾಚೀನವಾಗಿದ್ದು ಈ ತಿದ್ದುಪಡಿಗಳಲ್ಲಿ ಶೇಕಡಾ 50ರಷ್ಟು ಸರಿಯೆಂಬುದನ್ನು ತೋರಿಸಿಕೊಟ್ಟಿದೆ. ಸುಕ್ತಂಕರ್‌ರವರು ಅನುಸರಿಸಿದ ನಿಯಮಗಳ ಸಮರ್ಪಕತೆಯನ್ನು ಈ ಪ್ರತಿ ಅಸಾಧಾರಣ ರೀತಿಯಲ್ಲಿ ಸಮರ್ಥಿಸಿದೆ.

ಆದರೆ ಮೇಲೆ ಹೇಳಿದುದು ಏಕಕರ್ತೃಕ ಗ್ರಂಥಗಳಿಗೆ ಪೂರ್ತಿಯಾಗಿ ಅನ್ವಯವಾಗಬೇಕಾಗಿಲ್ಲ. ಇಲ್ಲಿಯ ಸನ್ನಿವೇಶಗಳು ಸ್ವಲ್ಪ ಭಿನ್ನವಾದವು. ಇಲ್ಲಿ ನಾವು ಕವಿಯ ಶೈಲಿ, ಶಬ್ದಯೋಜನೆ, ವಿಚಾರಸರಣಿ, ಕಡೆಗೆ ವ್ಯಕ್ತಿವೈಲಕ್ಷಣ್ಯಗಳನ್ನು ಸಹ, ಲಭ್ಯಹಸ್ತಪ್ರತಿಗಳ ಪಾಠದಲ್ಲಿ ಇನ್ನೂ ದೊರೆಯುವ ನಿರ್ದುಷ್ಟ ಪಾಠಭಾಗಗಳ ಆಧಾರಗಳಿಂದ ಅಭ್ಯಸಿಸಬಹುದು. ಅಂಥ ಪ್ರಾಚೀನ ಸಂವಾದಿ ಭಾಗಗಳು ಅವುಗಳ ಈಗಿನ ರೂಪಗಳಿಗಿಂತಲೂ ಅನೇಕಪಾಲು ಹೆಚ್ಚು ಬೆಲೆಬಾಳುವಂಥವು. ಅವುಗಳನ್ನು ಜಾಣ್ಮೆಯಿಂದ ಉಪಯೋಗಿಸಿಕೊಂಡು, ಪರಂಪರಾಗತವಾಗಿ ಬರುವಾಗ ಪಾಠದಲ್ಲಾಗಿರುವ ದೋಷಗಳನ್ನು ತೃಪ್ತಿಕರವಾಗಿ ಸರಿಪಡಿಸುವುದು ಸಾಧ್ಯವಿದೆ. ಹೀಗೆ ರೂಪಿಸಿದ ಪಾಠವು ಈ ಅಧ್ಯಾಯದಲ್ಲಿಯೇ ಪ್ರಸ್ತಾಪಿಸಿದ ಎರಡು ರೀತಿಯ ಸಂಭಾವ್ಯತೆಗಳನ್ನು ಹೊಂದಿರಬೇಕು. ಅಂಥ ಪ್ರಾಚೀನ ಸಂವಾದಿಭಾಗಗಳಿಲ್ಲದಾಗ ಮತ್ತು ಎರಡು ಭಿನ್ನ ಪಾಠಭಾಗಗಳಲ್ಲಿ ಒಂದನ್ನು ಆಯಬೇಕಾಗಿ ಬಂದಾಗ ಅವುಗಳನ್ನು ಅಂತಸ್ಸಂಭಾವ್ಯತೆಯ ಪರೀಕ್ಷೆಗೊಳಪಡಿಸಬೇಕು. ಆಗ ಯಾವುದು ಲೇಖನದ ಉದ್ದೇಶವನ್ನು ಕುರಿತ ನಮ್ಮ ತಿಳುವಳಿಕೆಗೆ ಹೊಂದುತ್ತದೆಯೋ ಅದನ್ನೇ ಆರಿಸಿಕೊಳ್ಳುತ್ತೇವೆ. ಲೇಖಕನ ಉದ್ದೇಶವನ್ನು ನಾವು ಪೂರ್ತಿಯಾಗಿ ಗ್ರಹಿಸದಿರುವ ಪ್ರಸಂಗಗಳೂ ಘಟಿಸಬಹುದು. ನಾವು ವರ್ಜಿಸಿದ ಪಾಠಾಂತರದಲ್ಲಿ ಲೇಖಕನು ಉದ್ದೇಶಿಸಿದ್ದು, ನಾವು ಗ್ರಹಿಸಲಾಗದೆ ಹೋದ ಚಿಂತನಾಂಶ ಅಥವಾ ಭಾವಾಂಶವೇನೋ ಇರಬಹುದು. ಭಿನ್ನಪಾಠಗಳ ಸಂಬಂಧದಲ್ಲಿಯೇ ಈ ರೀತಿಯಾದಲ್ಲಿ ಲೇಖಕನ ಮನೋವೃತ್ತಿ, ಲೇಖನ ವೈಲಕ್ಷಣ್ಯಗಳ ಸೂಕ್ಷ್ಮಜ್ಞಾನವಿಲ್ಲದೆ ಪಾಠ

ವನ್ನು ತಿದ್ದಿದರೆ ಇನ್ನಷ್ಟು ತಪ್ಪು ಘಟಿಸುತ್ತದೆ. ಆದ್ದರಿಂದ ತಿದ್ದುಪಡಿಯ ಪ್ರಸಂಗ ಬಂದಾಗ ಆದಷ್ಟೂ ನಾವು ವ್ಯಕ್ತಿಗತ ತೀರ್ಪುಗಳನ್ನು ಕೈಕೊಳ್ಳುವುದರ ಬದಲು ಪಾಠದ ನಿರ್ದುಷ್ಟಭಾಗ ಗಳಲ್ಲಿ ದೊರೆಯುವ ಪ್ರಾಚೀನ ಸಂವಾದಿರೂಪಗಳನ್ನು ಬಳಸಿಕೊಳ್ಳಬೇಕು.

ಇಂದಿನ ಗ್ರಂಥ ಸಂಪಾದಕರಲ್ಲಿ ಎರಡು ಭಿನ್ನ ನಿಲುವುಗಳಿವೆ. ನಮ್ಮ ಕೆಲಸವನ್ನು ಅತ್ಯಂತ ತೃಪ್ತಿಕರವಾದ ರೀತಿಯಲ್ಲಿ ನಿರ್ವಹಿಸಬೇಕಾದರೆ ನಾವು ಇವೆರಡಕ್ಕೂ ನಡುವೆ ಸಾಗಬೇಕು. ಇವುಗಳಲ್ಲಿ ಒಂದು ಸಂಪ್ರದಾಯಪಂಥ (Conservative school) ಎಂದು ಕರೆಸಿಕೊಳ್ಳುವವರ ನಿಲುವು. ಇವರು ತಿದ್ದುಪಡಿಯನ್ನು ಅದರ ಯೋಗ್ಯಸ್ಥಾನದಿಂದ ಉಚ್ಚಾಟಿಸಿಬಿಡುತ್ತಾರೆ. ಎಂದರೆ ಶಾಸ್ತ್ರೀಯ ವಿವರಣೆ (Scientific Interpretation) ಎಂದು ಕರೆಸಿಕೊಳ್ಳುವ ವಿಧಾನಗಳ ಮೂಲಕ ಪೂರ್ಣವಾಗಿ ಅಶುದ್ಧವಾದ ಭಾಗಗಳನ್ನು ಪಾಠದಿಂದ ತೆಗೆದುಬಿಡುತ್ತಾರೆ. ವಿಶೇಷ ವಾಗಿ ಇದು ಪಾಶ್ಚಾತ್ಯ ವಿದ್ವಾಂಸರಲ್ಲಿ ಕಂಡುಬರುತ್ತದೆ. ಈ ವಿಧಾನದಲ್ಲಿ ಎರಡು ರೀತಿಗ ಳಿವೆ. ಮೊದಲನೆಯದು ಪದಗಳಲ್ಲಿ ಇಲ್ಲದ, ಅಥವಾ ಸಂದರ್ಭಕ್ಕೆ ಅಗತ್ಯವೆಂದು ತೋರದಿದ್ದಲ್ಲಿ ಇಲ್ಲದಿರುತ್ತಿದ್ದ ಅರ್ಥವನ್ನು ಪರೀಕ್ಷೆಯ ಮೂಲಕ ಪ್ರಯತ್ನ ಪೂರ್ವಕವಾಗಿ ಹೊರಡಿಸುವುದು. ಒಂದು ಭಾಷೆಯಲ್ಲಿ ಪ್ರಕಟವಾಗಿರುವ ವಿಷಯವನ್ನು ಮತ್ತೊಂದು ಭಾಷೆಯ ಮೂಲಕ ಹೇಳುವಾಗ ಅಗತ್ಯಸಾಧನವಾದ ಭಾಷಾಂತರದಿಂದಾಗಿ ಇದಕ್ಕೆ ಅವಕಾಶವಾಗುತ್ತದೆ. ಆದರೆ ಅನುವಾದದ ಮೂಲಕ ಅರ್ಥವನ್ನು ಹೇಳುವ ವಿಧಾನ ಬಹಳ ಅಸಮರ್ಪಕವಾದದ್ದು. ಪ್ರಯತ್ನ ಪೂರ್ವಕವಾದ ಮತ್ತು ಅಸ್ಪಷ್ಟವಾದ ಅನುವಾದಗಳಿಂದ ಸಲ್ಲದ ಅರ್ಥಕ್ಕೆ ನಾವು ಗಂಟು ಬಿದ್ದು ಇತರರನ್ನು ನಂಬಿಸುವುದು ಕಷ್ಟವೇನಲ್ಲ. ಇದಕ್ಕೆ ಸಂಬಂಧಿಸಿದಂತೆ ವೇದ ಭಾಷ್ಯದಲ್ಲಿ ಬೇಕಾದಷ್ಟು ಉದಾಹರಣೆಗಳು ದೊರೆಯುತ್ತವೆ. ವಿಶೇಷವಾಗಿ, ಮೃತಭಾಷೆಗಳೊಡನೆ ವ್ಯವಹರಿಸುವಾಗ ನಮ್ಮನ್ನು ಬಲಿಗೊಳ್ಳಬಹುದಾದ ಮತ್ತೊಂದು ಸೂಕ್ಷ್ಮ ಅಪಾಯವಿದೆ. ಅದೆಂದರೆ ನಮಗೆ ತೃಪ್ತಿ ಯಾಗುವ, ಆದರೆ ಪ್ರಾಚೀನ ಕೃತಿಕಾರನನ್ನು ತೃಪ್ತಿಪಡಿಸದೆ ಹೋಗಬಹುದಾಗಿದ್ದ ಅರ್ಥ ವೊಂದನ್ನು ಒಪ್ಪಿಬಿಡುವುದು. ಎಲ್ಲಕ್ಕಿಂತ ಹೆಚ್ಚಾಗಿ, ಪಾಠಸಂಬಂಧವಾದ ನಮ್ಮ ನಿರ್ಣಯಗಳಿಗೆ ನಮ್ಮ ಅಭಿರುಚಿ, ಶೈಲಿ ಮತ್ತು ನೀತಿ ದೃಷ್ಟಿಗಳನ್ನೇ ಅಳತೆಗೋಲುಗಳಾಗಿ ಮಾಡಿಕೊಳ್ಳದಂತೆ ಎಚ್ಚರ ವಹಿಸಬೇಕು. ಎರಡನೆಯದು ಕೃತಿಕಾರನ ವ್ಯಕ್ತಿವೈಲಕ್ಷ್ಯಣ್ಯಗಳನ್ನು ವೈಪರೀತ್ಯ ವಕ್ರತೆಗಳೆಂದು ಆರೋಪಿಸುವುದು. ಪಾಠಪರಂಪರೆಯಲ್ಲೇನಾದರೂ ಅಸಾಂಗತ್ಯಗಳಿದ್ದಲ್ಲಿ ಅವು ಗಳನ್ನೇ ಗ್ರಂಥದೋಷಕ್ಕೆ ಕಾರಣವಾಗಿ ಹೇಳಿಬಿಡುವುದುಂಟು. ಅತ್ಯುತ್ತಮ ಬರಹಗಾರರೂ ಲೋಪದೋಷಗಳನ್ನು ಮಾಡುತ್ತಾರೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಆದರೆ ಇದನ್ನೇ ಒಂದು ಸಂದರ್ಭವಾಗಿ ಮಾಡಿಕೊಂಡು ಸತ್ಯಪಾಠವಾಗಿರುವ ಸಂಭವವುಂಟೆಂದು ಪರಂಪರಾಗತ ಪಾಠಗಳಲ್ಲಿರುವ ದೋಷಗಳನ್ನೆಲ್ಲ ಕ್ರಮವಾಗಿ ಉಳಿಸಿಕೊಳ್ಳುತ್ತ ಹೋಗಬಾ ರದು. ಏಕೆಂದರೆ ಇಂಥ ತಪ್ಪುಗಳನ್ನು ಬಿಟ್ಟದ್ದರೆ ಗ್ರಂಥಕ್ಕೆ ಎಷ್ಟು ಹಾನಿಯಾಗುತ್ತಿತ್ತೋ ಅದಕ್ಕಿಂತಲೂ ಹೆಚ್ಚಿನ ಹಾನಿಯು ಅವುಗಳ ಉಳಿಕೆಯಿಂದ ಆಗುತ್ತದೆ.

ತಿದ್ದುಪಡಿವಿಧಾನವನ್ನು ಕೀಳ್ಗಣಿಸಿ ವ್ಯಾಖ್ಯಾನ ಅಥವಾ ಭಾಷ್ಯಕ್ಕೆ ಮಹತ್ವ ನೀಡು ವುದು ಸಂಪ್ರದಾಯವಾದಿ ವಿಮರ್ಶಕರ[1] (Conservative critics) ಒಂದು ದೌರ್ಬಲ್ಯ. ಕೆಲವರಂತೂ ಪಾಠಭಾಗವೊಂದರ ಯಶಸ್ವೀ ಸಮರ್ಥನೆಯೂ ಯಶಸ್ವಿಯಾದ ತಿದ್ದುಪಡಿ

1 ಸ್ಥಿತಸ್ಯ ಗತಿಶ್ಚಿಂತನೀಯಾ ಎಂಬ ಸೂಕ್ತಿಯಿದೆ.

ಗಿಂತಲೂ ಶ್ರೇಷ್ಠತರ ಕಾರ್ಯವೆಂದು ಹೇಳುವ ಮಟ್ಟಕ್ಕೆ ಹೋಗುತ್ತಾರೆ. ಆದರೆ ಇದು ಸತ್ಯ ವಲ್ಲ. ಹಿಂದೆ ಗೂಢವಾಗಿದ್ದದ್ದನ್ನು ಈಗ ಬಿಚ್ಚಿಡುವ ಈ ಎರಡು ವಿಧಾನಗಳು ಮಾಡುವುದೂ ಒಂದೇ ಕೆಲಸವನ್ನು. ಇದಕ್ಕೆ ಪ್ರತಿಯಾಗಿ ಇನ್ನೊಂದು ಪಂಥದಲ್ಲಿರುವ ದೋಷವೇನೆಂದರೆ ವ್ಯಾಖ್ಯಾನವನ್ನು ಕೀಳ್ಗಳೆದು ತಿದ್ದುಪಡಿಯೇ ವಿದ್ವಾಂಸರು ಅನುಸರಿಸಬೇಕಾದ ಯೋಗ್ಯ ವಿಧಾನವೆಂದು ಪರಿಗಣಿಸುವುದು. ಅಹಮದಾಬಾದಿನ ದಿವಂಗತ ಕೇಶವಲಾಲ್ ಹರಿಷದ್ರೈ ಧ್ರುವರವರು ಇದಕ್ಕೆ ಉತ್ತಮ ನಿದರ್ಶನ. "ವ್ಯಾಖ್ಯಾನಕ್ಕಿಂತ ತಿದ್ದುಪಡಿ ಮೊದಲಿನದು" ಎಂಬ ಸೂತ್ರದಲ್ಲಿ ಈ ಪೂರ್ವಾಭಿಪ್ರಾಯ ಪ್ರತಿಬಿಂಬಿಸಿದೆ. ಆದರೆ ಇದು ಅರ್ಧಸತ್ಯದ ಮಾತು. ಪಾಠದ ಸಮರ್ಪಕ ವ್ಯಾಖ್ಯಾನವು ತೋರುವ ಅಪೇಕ್ಷಿತ ಅರ್ಥವನ್ನು ನೀಡದಿದ್ದಾಗ ತಿದ್ದುಪಡಿ ವಿಫಲವಾಗುತ್ತದೆ. ಸಂಪ್ರದಾಯವಾದಿ ವಿಮರ್ಶಕನ ಕಳಕಳಿಯೇನಿದ್ದರೂ ಸಾಂಪ್ರದಾಯಿಕ ಆದರಲ್ಲಿಯೂ ಪರಂಪರಾಗತ ಪಾಠವನ್ನು ರಕ್ಷಿಸುವುದರಲ್ಲಿ. ಪಾಠಬದಲಾವಣೆಯು ಒಂದು ನಿರ್ದಿಷ್ಟ ಹಂತವನ್ನು ಮೀರಿದರೆ ಅದು ತನ್ನ ತಳಪಾಯದಿಂದಲೇ ತನ್ನನ್ನು ಬೇರ್ಪಡಿಸಿಕೊಂಡಂತೆ; ಪರಿಣಾಮವಾಗಿ ಖಚಿತತೆ ಎಂಬುದೇ ಇಲ್ಲವಾಗಿ ಬಿಡುತ್ತದೆ ಎಂದು ಸಂಪ್ರದಾಯವಾದಿ ವಿಮರ್ಶಕನು ಹೇಳುವ ಮಾತು ಸತ್ಯವೇ. ವ್ಯತ್ಯಾಸ ಆದಷ್ಟು ಸ್ವಲ್ಪವಾಗಿರಲಿ ಎಂಬುದು ಅವನ ಗುರಿ.

ಸಾಂಪ್ರದಾಯಿಕ ಪಾಠಾಂತರವನ್ನೇ ಪಾಠದಲ್ಲಿ ಉಳಿಸಿಬಿಡುವ ಸಾಧು ವಿಧಾನದ ಮೂಲಕ ಸಂಶಯಾತ್ಮಕ ಪಾಠಭಾಗಗಳ ಬಗ್ಗೆ ತೀರ್ಮಾನಕ್ಕೆ ಬರುವುದನ್ನು ಪರಿಹರಿಸಬಹುದೆಂದು ಅನೇಕರು ಭಾವಿಸಿದಂತಿದೆ. ಈ ನಿಯಮ ತೀರ ಸರಳವಾಗಿದ್ದು ಅದರ ಅನ್ವಯವೂ ಬಹಳ ಸುಲಭವಾಗಿದೆ. ಆದರೆ ಮಾನವನ ಮನೋಪ್ರಕೃತಿ ಎಂಥದೆಂದರೆ ಅದರ ಫಲವಾಗಿ ನಾವು ಆಲೋಚಿಸಿರದ ಅನೇಕ ಪರಿಣಾಮಗಳಿಗೆ ಈ ನಿಯಮ ದಾರಿಮಾಡುತ್ತದೆ. ಪಾಠದಲ್ಲಿ ಸ್ಖಾಲಿತ್ಯವೊಂದು ಉಳಿದರೆ ತಾತ್ಕಾಲಿಕವಾಗಿ ಅಪೇಕ್ಷಿತ ಅರ್ಥಕೊಡುವ ಆದೇಶವೊಂದು (Substitute) ಅಲ್ಲಿ ಸೇರಿಕೊಳ್ಳಲು ಅವಕಾಶವಾಗುತ್ತದೆ. ಆಗ ಈ ಆದೇಶವು ಪಾಠಭಾಗದ ಅರ್ಥವನ್ನೇ ತೊಡೆದುಹಾಕುತ್ತದೆ ಅಥವಾ ಪಾಠದ ಉಳಿದ ಅಂಶಗಳ ಅರ್ಥವನ್ನು ತಿರುಚಿ ಬಿಡುವುದರ ಮೂಲಕ ಅಪೇಕ್ಷಿತ ಅರ್ಥವನ್ನು ಗಳಿಸಿಕೊಳ್ಳುತ್ತದೆ.

ಮತ್ತೊಂದು ವಿಧಾನದಲ್ಲಿ ಸಂಪಾದಕನು ಪಾಠಪ್ರಮಾಣದ ಬಗ್ಗೆ ಅಗತ್ಯವಾದ ವಿಷಯವನ್ನು ತನ್ನ ವಿಮರ್ಶನೋಪಕರಣಗಳ (Critical apparatus) ಟಿಪ್ಪಣಿಯಲ್ಲಿ ಒದಗಿಸುತ್ತಾನೆ. ಆದರೆ ಪಾಠದಲ್ಲಿ ಮಾತ್ರ ಪ್ರತಿಯೊಂದು ಪ್ರಸಂಗದಲ್ಲಿಯೂ ಸಂಭಾವ್ಯತೆಗಳಿಂದ ಪುಷ್ಟೀಕೃತವಾದುದನ್ನೇ ಕೊಡುತ್ತಾನೆ. ಪ್ರತಿಯೊಂದು ಪ್ರಸಂಗದಲ್ಲಿಯೂ ಅದರ ಗುಣಾವಗುಣಗಳನ್ನನುಸರಿಸಿಯೇ ತೀರ್ಮಾನಕ್ಕೆ ಬರುತ್ತಾನಲ್ಲದೆ ಹಿಂದಿನ ಇತರ ಕೆಲವು ಪ್ರಸಂಗಗಳಲ್ಲಿ ತಾನು ಮಾಡಿಕೊಂಡಿದ್ದ, ಈಗ ಎದುರಿಗಿಲ್ಲದ ನಿರ್ಣಯಗಳಿಗೆ ಸಂಬಂಧಿಸಿ ತೀರ್ಮಾನಿಸುವುದಿಲ್ಲ. ಇದಕ್ಕೆ ನಿದರ್ಶನವಾಗಿ ಮಹಾಭಾರತ 1.92.2ನ್ನು ನೋಡಬಹುದು. ಸುಕ್ತಾಂಕರ್‌ರವರು ಇಲ್ಲಿ ಎಲ್ಲ N ಪ್ರತಿಗಳಲ್ಲಿರುವ **ಸ್ತ್ರೀರೂಪಧಾರಿಣೀ** ಎಂಬ ಪಾಠಕ್ಕೆ ಪ್ರತಿಯಾಗಿ $S_1K_1$ ಗಳಲ್ಲಿರುವ **ಗಂಗಾಶ್ರೀರಿವರೂಪಿಣೀ** ಎಂಬ ಪಾಠಾಂತರವನ್ನು ಸೇರಿಸಿಕೊಂಡಿದ್ದಾರೆ. ಆದರೆ e ಯಲ್ಲಿ ಅದೇ ಎರಡು ಪ್ರತಿಗಳಲ್ಲಿರುವ ಪಾಠವನ್ನು ವರ್ಜಿಸಿಬಿಟ್ಟಿದ್ದಾರೆ. ಇತರ ಪ್ರತಿಗಳಲ್ಲಿರುವ '**ಸಲಿಲಾತ್**' ಎಂಬುದನ್ನು ಒಪ್ಪಿ '**ಶಯನಾತ್**' ಎಂಬುದನ್ನು ಬಿಟ್ಟಿದ್ದಾರೆ. 'ಎರಡನೆಯ ಸಾಲಿಗಿಂತ ಮೊದಲನೆಯ ಸಾಲಿನಲ್ಲಿ $S_1K_1$ಗಳಿಗೆ ಹೆಚ್ಚಿನ ಮಹತ್ವ ಬರುವುದೇಕೆ?' ಎಂದು

ವಿಮರ್ಶಕನೊಬ್ಬನು ಪ್ರಶ್ನಿಸಬಹುದು. ವಿಂಟರ್‌ನಿಟ್ಸ್ ಹಾಗೆ ಪ್ರಶ್ನಿಸಿದ್ದಾರೆ.[1] ಇದಕ್ಕೆ ಉತ್ತರ ಈ ಎರಡು ಸಾಲುಗಳಲ್ಲಿ ಕಂಡುಬರುವ ಪಾಠಾಂತರಗಳ ಅಂತಸ್ಸಂಭಾವ್ಯತೆ ಮತ್ತು ಹಸ್ತಪ್ರತಿಗಳ ವಿನ್ಯಾಸ ಭಿನ್ನವಾಗಿದೆ ಎಂಬುದು.[2] ಸದ್ಯದ ನಿದರ್ಶನವು ತಿದ್ದುಪಡಿಗೆ ಸಂಬಂಧಿಸಿದ್ದಲ್ಲವಾದರೂ ವಿಮರ್ಶಾತ್ಮಕ ಪರಿಷ್ಕರಣದಲ್ಲಿ ಕೂಡ ಈ ತತ್ವವು ಮಹತ್ವದ್ದಾಗಿ ಅನ್ವಯವಾಗುತ್ತದೆಂಬುದನ್ನು ಅದು ತೀರ ಪರಿಣಾಮಕರರೀತಿಯಲ್ಲಿ ಗಮನಕ್ಕೆ ತರುತ್ತದೆ. ಸಂಪಾದಕನು ಪಾಠದಲ್ಲಿ ತಿದ್ದುಪಡಿಮಾಡುವಾಗ ಈ ನಿಯಮಕ್ಕೆ ಇನ್ನೂ ಹೆಚ್ಚಿನ ಮಹತ್ವವಿದೆ. ಅವನು ತನ್ನ ಗ್ರಂಥದಲ್ಲಿ ಸಂದೇಹಪಾಠಾಂತರಗಳಿಗೆ ವಿಶೇಷ ಪರಿಗಣನೆಯನ್ನು ನೀಡಿ 'ಶಂಕಾತ್ಮಕವಾಗಿ ಒಪ್ಪಿಕೊಂಡವು' 'ಶಂಕಾತ್ಮಕವಾಗಿ ವರ್ಜಿಸಿದವು' ಎಂದು ಅವುಗಳನ್ನು ಪ್ರತ್ಯೇಕಿಸಿ ಹೇಳುತ್ತಾನೆ. ಲೇಖನ ಮತ್ತು ಅಂತಸ್ಸಂಭಾವ್ಯತೆಗಳ ಪರ ಮತ್ತು ವಿರೋಧಗಳೆರಡೂ ಸನುಸಮವಾಗಿದ್ದಾಗ, ಅಥವಾ ಲೇಖನಸಂಭಾವ್ಯತೆಯು ಒಂದನ್ನೂ ಅಂತಸ್ಸಂಭಾವ್ಯತೆಯು ಮತ್ತೊಂದನ್ನೂ ತೀವ್ರವಾಗಿ ಜಗ್ಗುವಾಗ ಅಪಶಂಕೆ (Illegitimate doubt) ಒದಗುತ್ತದೆ. ತಾನು ಎಲ್ಲ ಸಾಕ್ಷ್ಯಗಳನ್ನೂ ಪರಿಶೀಲಿಸಿರುವೆನೇ ಎಂಬ ಬಗ್ಗೆ ಅನುಮಾನವಿರುವವನಿಗೆ ಇರುವ ಅನಿಶ್ಚಯತೆಯೇ ಅಪಶಂಕೆ. ಅಂಥ ಅನುಮಾನವು ಹೇಳಿಕೊಂಡದ್ದಕ್ಕಿಂತ ಹೆಚ್ಚುಸಲ ಅನುಭವಕ್ಕೆ ತಟ್ಟಿರುತ್ತದೆ. ವಿಮರ್ಶಾತ್ಮಕ ಪರಿಷ್ಕರಣದ ಮೇಲೆ ಅದು ಮಾಡುವ ಪರಿಣಾಮ ಘಾತುಕವಾದದ್ದು. ಒಂದು ಕಡೆ ಸಾಂಪ್ರದಾಯಿಕ ಪಾಠಾಂತರಗಳ ಅವಿಮರ್ಶಿತ ಸ್ವೀಕರಣದಲ್ಲಿ ಅದು ಸೇರಬಹುದು; ಮತ್ತೊಂದು ಕಡೆ ಸಾಕಷ್ಟು ದೃಢವಲ್ಲದ ಮತ್ತು ಪರಸ್ಪರ ಮಾರಕವಾದ ಊಹೆಗಳನ್ನು ಬೆಳೆಸಬಹುದು.

ವಿಮರ್ಶಾವಿದ್ವತ್ತಿನ ಈ ಎರಡು ಅತಿರೇಕಗಳಿಗೆ ನಡುವಿನ ಮಾರ್ಗವೊಂದನ್ನು ಹಿಡಿದಲ್ಲಿ, ಸಂಪ್ರದಾಯಪಾಠ ಲಭಿಸುತ್ತದೆ. ಇದು ಪ್ರಾಚೀನಪಾಠ (Antiquarian's text)ವೂ ಆಗಿರದೆ ವಿಮರ್ಶಕನ ಪಾಠ (critic's text) ವೂ ಆಗಿರದೆ ಎರಡರ ಮಧ್ಯದ ಒಡಂಬಡಿಕೆಯಾಗಿರುತ್ತದೆ. ಈ ಪಾಠವನ್ನು ಉದ್ದೇಶಪೂರ್ವಕವಾಗಿ ರೂಪಿಸಿದರೆ ಅದು ಲೇಖನಸಂಭಾವ್ಯತೆಗಿಂತ ಅಂತಸ್ಸಂಭಾವ್ಯತೆಗೆ ದೊಡ್ಡ ತಡೆಯಾಗಿ ಪರಿಣಮಿಸಿಬಿಡುತ್ತದೆ ಅಥವಾ ಸಂಪಾದಕನ ಅಭಿಪ್ರಾಯಗಳಿಗೆ ಹೊಂದುವ ಪಾಠಾಂತರವೊಂದಕ್ಕೆ ಯೋಗ್ಯವಾಗುವ ಮಿತಪ್ರಮಾಣದ ಸಂಭಾವ್ಯತೆಯನ್ನು ಕಲ್ಪಿಸುತ್ತದೆ. ಈ ಎರಡು ವಿಧಾನಗಳೂ ನಿಯತನೀತಿಯೇನನ್ನೂ ಅನುಸರಿಸುವುದಿಲ್ಲ. ಅವುಗಳನ್ನು ಬಳಸುವುದರಿಂದ ತಪ್ಪಾಗುವ ಸಾಧ್ಯತೆ ಹೆಚ್ಚು.

ಆದ್ದರಿಂದ ಅತ್ಯುತ್ತಮಕ್ರಮವೆಂದರೆ ಪ್ರತಿಗಳಲ್ಲಿ ದೊರೆಯುವ ಭಿನ್ನಪಾಠಗಳನ್ನು ಆಧಾರವಾಗಿಟ್ಟುಕೊಂಡು ಪರಂಪರಾಗತ ಪಾಠಕ್ಕೆ ಶಾಸ್ತ್ರೀಯವಿವರಣೆಯನ್ನು ಅನ್ವಯಿಸಿ ನೋಡುವುದು; ದೂಷಿತಪಾಠಾಂತರಗಳ ಲೇಖನ ಮತ್ತು ಅಂತಸ್ಸಂಭಾವ್ಯತೆಗಳನ್ನು ಪರೀಕ್ಷಿಸುವುದು; ಅಸಂಗತವಾದ ಭಿನ್ನಪಾಠಗಳು ಒಮ್ಮುಖವಾಗಿ ಕೂಡುವ ಪಾಠನಾಭಿಯನ್ನು ಕಂಡುಕೊಂಡು ಅದನ್ನು ಊಹಾತ್ಮಕ ತಿದ್ದುಪಡಿಯಾಗಿ ಪಾಠದಲ್ಲಿ ಸೇರಿಸಿಕೊಳ್ಳುವುದು. ಪ್ರಾಚೀನವಾದ ಸಂವಾದಿಭಾಗವೊಂದು ದೊರೆತಲ್ಲಿ ನಮ್ಮ ಕಲ್ಪಿತಪಾಠವನ್ನು ಪೂರ್ತಿಯಾಗಿ ನೆಚ್ಚಬಹುದು. ಹಾಗಿಲ್ಲದಾಗ ಅದನ್ನು ತಕ್ಕಮಟ್ಟಿಗೆ ಸರಿಯೆಂದು ಭಾವಿಸಬೇಕಾಗುತ್ತದೆ.

---

1 Annals: BORI 15-167

2 ಅದೇ. 16. 102–103.

# ರುದ್ರಭಟ್ಟನ ಕಾವ್ಯದಲ್ಲಿ
# ಜಗನ್ನಾಥನ ವಸಂತವಿಲಾಸ

---

"ಕೈಪು" ಲಕ್ಷ್ಮೀನರಸಿಂಹಶಾಸ್ತ್ರೀ

ಮಹಾಕಾವ್ಯದ ಅಷ್ಟಾದಶವರ್ಣನೆಗಳಲ್ಲಿ ಋತುವರ್ಣನೆಯೂ ಒಂದು. ಆದ್ದರಿಂದಲೇ ಸಂಪ್ರದಾಯವಾದಿಗಳಾದ ಹಲವರು ಪುರಾತನ ಕವಿಗಳು ನಿರ್ಬಂಧವಾಗಿ ವರ್ಣನೆಗಳ ಮೋಹಕ್ಕೆ ಸಿಕ್ಕಿದರೆಂಬ ಆಕ್ಷೇಪಣೆಗೂ ಗುರಿಯಾಗಿದ್ದರು. ಆದರೆ ಈ ಅನಿವಾರ್ಯವಾದ ಮೋಹದ ಹಿನ್ನೆಲೆಯಲ್ಲಿ ಅಡಗಿರುವ ಧಾರ್ಮಿಕ ತತ್ತ್ವವೇನಾದರೂ ಇರಬಹುದೇ? ಪ್ರಕೃತದಲ್ಲಿ ವಸಂತಋತುವಿಗೆ ಸಂಬಂಧಿಸಿದಂತೆ ಇದನ್ನು ಕುರಿತು ಒಂದೆರಡು ಮಾತುಗಳನ್ನಾಡುವುದು ಸೂಕ್ತವೆನಿಸುತ್ತದೆ.

ಚಾಂದ್ರಮಾನ ಗಣನೆಯ ಪ್ರಕಾರ ಚೈತ್ರಮಾಸದಿಂದ ವಸಂತಋತುವಿನ ಪ್ರಾರಂಭವನ್ನು ಸೂಚಿಸಲಾಗುತ್ತದೆ. ಆದರೆ ನಿಸರ್ಗದಲ್ಲಿ ವಸಂತಋತು ಫಾಲ್ಗುಣ ಮಾಸಾಂತ್ಯದಲ್ಲೇ ಕಾಣಿಸಿಕೊಳ್ಳುತ್ತದೆ. ಮಹಾಭಾರತದಲ್ಲಿ ಇದಕ್ಕೆ ಸೂಕ್ತವಾದ ಉದಾಹರಣೆಯಿದೆ—

> ಪೂರ್ಣೇ ಚತುರ್ದಶೇ ವರ್ಷೇ ಫಾಲ್ಗುನಸ್ಯ ಚ ಧೀಮತಃ।
> ತದಾಚೋತ್ತರ ಫಲ್ಗುನ್ಯಾಂ ಪ್ರವೃತ್ತೇ ಸ್ವಸ್ತಿವಾಚನೇ॥
> ತಸ್ಮಿನ್ ಕಾಲೇ ಸಮಾಹೂಯ ಮಾದ್ರೀಂ ಮದನಮೋಹಿತಃ।
> ಸುಪುಷ್ಪಿತವನೇ ಕಾಲೇ ಕದಾಚಿನ್ಮಧು ಮಾಧವೇ।
> ಭೂತಸನ್ಮೋಹನೇ ರಾಜಾ ಸಭಾರ್ಯೋ ವ್ಯಚರದ್ ವನಂ॥

(ಗೀತಾಪ್ರೆಸ್ ಸಂಸ್ಕರಣ: ಆದಿಪರ್ವ ೧೨೪/೨)

ಅರಣ್ಯದಲ್ಲಿ ಪಾಂಡುರಾಜನು ಧರ್ಮರಾಯಾದಿ ಮಕ್ಕಳೊಡನೆ ಇದ್ದನು. ಅರ್ಜುನನ ಹದಿನಾಲ್ಕನೇ ವರ್ಷದ ಹುಟ್ಟುಹಬ್ಬದ ದಿನ ಮಾದ್ರಿಯೊಡನೆ ಕೂಡಿ ಮೃತನಾದನು. ಅರ್ಜುನನ ಜನ್ಮನಕ್ಷತ್ರ ಉತ್ತರಫಲ್ಗುನೀ ನಕ್ಷತ್ರ. ಈ ನಕ್ಷತ್ರದ ಆಗಮನ ಮತ್ತು ವಸಂತಕಾಲದ ಸೂಚನೆಯಿರುವುದರಿಂದ ಫಾಲ್ಗುಣ ಮಾಸವನ್ನು ಸೂಚಿಸಿದಂತಾಯಿತು.

ವಸಂತಋತು ಪ್ರೇಮಿಗಳ ಉತ್ಕರ್ಷದ ಕಾಲವೂ ಹೌದು. ಬಾಹ್ಯಪ್ರಪಂಚದಲ್ಲಿ ಸಸ್ಯಸಲಿಲಾದಿಗಳ ಉಲ್ಲಾಸವನ್ನು ಕಂಡು ಸ್ತ್ರೀಪುರುಷರ ಸುಪ್ತವಾದ ಸೌಖ್ಯಾಪೇಕ್ಷೆಯೂ ಸಹ ಈ

ಕಾಲದಲ್ಲಿ ಎದ್ದು ನಿಲ್ಲುತ್ತದೆ. ಲೋಕದ ಮತ್ತು ಜೀವಿಗಳ ಮೇಲೆ ಅತ್ಯಂತ ಪ್ರಭಾವವನ್ನು ಬೀರುವ ವಸಂತಋತುವಿನಲ್ಲಿ ಕಾಣಬರುವ ವೈಶಿಷ್ಟ್ಯವನ್ನು ಕಾಳಿದಾಸ ಕವಿಯು ಹೀಗೆಂದಿದ್ದಾನೆ—

ದ್ರುಮಾಃ ಸಪುಷ್ಪಾಃ, ಸಲಿಲಂ ಸಪದ್ಮಂ ।
ಸ್ತ್ರಿಯಃ ಸಕಾಮಾಃ, ಪವನಃ ಸುಗಂಧಿಃ ।
ಸುಖಾಃ ಪ್ರದೋಷಾಃ, ದಿವಸಾಶ್ಚರಮ್ಯಾಃ ।
ಸರ್ವಂ ಪ್ರಿಯೇ ಚಾರುತರಂ ವಸಂತೇ ॥

(ಋತುಸಂಹಾರ: ವಸಂತ ವರ್ಣನಂ : ೧)

"ಸ್ತ್ರಿಯಃ ಸಕಾಮಾಃ" ಎಂದು ಕವಿಯು ಮತ್ತೊಂದು ಪಕ್ಷವನ್ನು ಸೂಚಿಸದಿರುವುದು ಇಲ್ಲಿ ಗಮನಾರ್ಹ. "ವಸಂತ ಬಂದ-ಋತುಗಳ ರಾಜ ತಾಬಂದ-ಚಿಗುರನು ತಂದ-ಹೆಣ್ಗಳ ಕುಣಿಸುತ ನಿಂದ" ಎನ್ನುವಾಗಲೂ ಇದು ವ್ಯಕ್ತವಾಗಿದೆ. ಆದ್ದರಿಂದ ಗೃಹಸ್ಥಧರ್ಮಿಯಾದ ಪುರುಷನು ಪತ್ನಿಯ ಬಯಕೆಯನ್ನು ಸಫಲಗೊಳಿಸದಿದ್ದರೆ ಪಾಪಕ್ಕೆ ಭಾಗಿಯಾಗುವನೆಂದು ಸ್ಮೃತಿಕಾರರು ಹೇಳಿದ್ದಾರೆ—

ಯಥಾಕಾಮೀ ಭವೇದ್ವಾಪಿ ಸ್ತ್ರೀಣಾಂ ವರಮನುಸ್ಮರನ್ ॥
ಸ್ವದಾರ ನಿರತಶ್ಚೈವ ಸ್ತ್ರಿಯೋ ರಕ್ಷ್ಯಾ ಯತಃ ಸ್ಮೃತಾಃ ॥

(ಯಾಜ್ಞವಲ್ಕ್ಯ ಸ್ಮೃತಿ)

ಅಷ್ಟೇ ಅಲ್ಲ; ಉತ್ಸವಾದಿ ಕಾಲಗಳಲ್ಲಿ ವಸ್ತ್ರಭೂಷಣಾದಿಗಳನ್ನಿತ್ತು ಸ್ತ್ರೀಯರನ್ನು ಸಂತೃಪ್ತಿಗೊಳಿಸಬೇಕಾದುದು ಪತಿಯ ಕರ್ತವ್ಯ. ಸತಿಪತಿಯರು ಪರಸ್ಪರ ಅನುರಾಗವನ್ನು ಹೊಂದಿದ್ದರೆ ಮಾತ್ರ ಧರ್ಮಾರ್ಥ ಕಾಮಗಳು ನೆಲೆಸುತ್ತವೆ. ಸಂತಾನ ಮೂಲಕವಾಗಿ ಪತಿಯನ್ನು ಪಿತೃಋಣದಿಂದ ಮುಕ್ತನನ್ನಾಗಿ ಮಾಡುವ ಕಾರಣದಿಂದ ಸತಿಯು ಪುರುಷನ ಧರ್ಮದಗುಡಿ. ಸತಿಯ ಅತೃಪ್ತಿಯಿಂದ ಪುರುಷನು ಸಂತಾನರಹಿತನಾಗಿ ಅಥವಾ ನಿಂದಿತ ಸಂತಾನವನ್ನು ಪಡೆದು ಪುರುಷಾರ್ಥ ಸಾಧನೆಯಲ್ಲಿ ಅಸಮರ್ಥನಾಗುತ್ತಾನೆ—

ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ ।
ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಂ ॥
ಯದಿ ಹಿ ಸ್ತ್ರೀ ನ ರೋಚೇತ ಪುಮಾಂಸಂ ನ ಪ್ರಮೋದಯೇತ್ ।
ಅಪ್ರಮೋದಾತ್ ಪುನಃ ಪುಂಸಃ ಪ್ರಜನಂ ನ ಪ್ರವರ್ತತೇ ॥
ಯದಾ ಭರ್ತಾ ಚ ಭಾರ್ಯಾ ಚ ಪರಸ್ಪರ ವಶಾನುಗೌ ।
ತದಾ ಧರ್ಮಾರ್ಥ ಕಾಮಾನಾಂ ತ್ರಯಾಣಾಮಪಿ ಸಂಗತಂ ॥

(ಮನುಸ್ಮೃತಿ : ೩/೬೦-೬೨)

ಸ್ತ್ರೀಪುರುಷರ ಪರಸ್ಪರ ಅನುರಾಗ ಮೂಲಕವಾಗಿ ಲೋಕಧರ್ಮವು ಮುಂದುವರೆಯಬೇಕಾದುದು ಸೃಷ್ಟಿತತ್ವ. ಈ ಧರ್ಮವನ್ನು ನೆಲೆಗೊಳಿಸುವ ಕಾರ್ಯದಲ್ಲಿ ವಸಂತಋತುವಿನ ಪ್ರಭಾವ ಹೆಚ್ಚಿನದಾಗಿದೆ. ಪ್ರಾಯಶಃ ಈ ದೃಷ್ಟಿಯಿಂದಲೇ ಕಾವ್ಯಗಳಲ್ಲಿ ವಸಂತಋತುವಿನ ವರ್ಣನೆಗೆ ಪ್ರಾಧಾನ್ಯ ನೀಡಿರಬಹುದು. ಇದಕ್ಕೆ ಪೋಷಕವೆನಿಸುವಂತೆ ಅಲಂಕಾರ ವಿಹಾರಾದಿಗಳ ವರ್ಣನೆಯೂ ಋತುವರ್ಣನೆಯೊಡನೆ ಸೇರಿರುವುದು ಕಂಡುಬರುತ್ತದೆ.

## ಕನ್ನಡ ಕಾವ್ಯದಲ್ಲಿ

ಲೋಗರ ಕಣ್ಮನಗಳನ್ನು ಸೆಳೆಯುವ ವಸಂತಋತುವನ್ನು ವರ್ಣಿಸುವಾಗ ಭಾರತೀಯ ಕವಿಗಳು ಸಸ್ಯಶ್ಯಾಮಲಾಪೃಥ್ವಿಯ ರಮ್ಯವಾದ ತಪೋವನ ಹಾಗೂ ಪ್ರಮದವನಗಳ ಸೊಬಗನ್ನು ಕಂಡು, ಅನುಭವಿಸಿ, ಆ ವೈಭವವನ್ನು ಸಾಹಿತ್ಯದಲ್ಲಿ ತುಂಬಿರುವುದು ಆಶ್ಚರ್ಯವೇನಲ್ಲ. ಅಂದ ಮೇಲೆ 'ನಾರಿಕೇಳಾಮ್ರ ಪನಸಕದಳಿ ಖರ್ಜೂರ ಚಂಪಕ ಚಂದನಗಳ ಆರಾಮ'ಗಳಿಂದ ಪಾಂಥ ಜನಕ್ಕೆ ಪಾರಣೆಯನ್ನು ಮಾಡಿಸುವುದಾಗಿಯೂ; 'ಚಾಗದ ಭೋಗದಕ್ಕರದಗೇಯದ ಗೊಟ್ಟಿಯ ಲಂಪಿ ನಿಂಪುಗಳ್ಗೆ ಆಗರಮಾದ' ರಸಿಕರಿಂದ ಕೂಡಿರುವುದಾಗಿಯೂ; 'ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿ' ಗಳ ಬೀಡಾಗಿಯೂ ಇರುವ ಕರ್ಣಾಟಕದಲ್ಲೇ ನೆಲೆಸಿದ್ದ ಕವಿಗಳು ತಮ್ಮ ಕಾವ್ಯಗಳಲ್ಲಿ ರಸರಾಜನಾದ ಶೃಂಗಾರಕ್ಕೆ ಮಾನ್ಯತೆಯಿತ್ತಂತೆಯೇ, ಲೋಗರ ವಿಲಾಸ ಧರ್ಮಕ್ಕೆ ಅತ್ಯಗತ್ಯ ಸಮಯವೆನಿಸಿದ ಋತುರಾಜನಾದ ವಸಂತ ಋತುವಿನ ವರ್ಣನೆಗೆ ಒಂದು ಸ್ಥಾನವನ್ನು ಕೊಟ್ಟಿರುವುದು ಯೋಗ್ಯವೇ ಆಗಿದೆ.

ಸುಮಾರು ಕ್ರಿ. ಶ. ೧೨ನೇ ಶತಮಾನದಲ್ಲಿ 'ಕೃತಿಶಾರದಾಭ್ರ ಚಂದ್ರಾತಪ, ಕವಿರಾಜ' ಬಿರುದುಗಳನ್ನು ಪಡೆದು ಶ್ರೇಷ್ಠ ಕವಿಯೆನಿಸಿ, ಹೊಯ್ಸಳ ವೀರಬಲ್ಲಾಳನ ಆಸ್ಥಾನದಲ್ಲಿದ್ದ ರುದ್ರಭಟ್ಟನು ಜಗನ್ನಾಥ ವಿಜಯವೆಂಬ ಬೃಹತ್ತಾದ ಚಂಪೂಕಾವ್ಯವನ್ನು ಬರೆದಿದ್ದಾನೆ. ಹದಿನೆಂಟು ಆಶ್ವಾಸಗಳ ಈ ಕಾವ್ಯದಲ್ಲಿ ಕೃಷ್ಣಚರಿತ್ರೆಯು ಬಾಣಾಸುರಯುದ್ಧದವರೆಗೆ ವಿವರಿಸಲ್ಪಟ್ಟಿದೆ. ಪುರಾಣಗಳ ರೀತ್ಯಾ ಶ್ರೀಕೃಷ್ಣನು ಅವತಾರ ಮೂರ್ತಿಯಾಗಿ ಅಲೌಕಿಕ ಲೀಲೆಗಳನ್ನು ಲೋಕ ಜೀವನದ ನೆರಳಿನಲ್ಲೇ ಬೆಳಗಿಸಿದ ಮಹಾಪುರುಷ. ಆತನು ರುಕ್ಮಿಣೀ ಸತ್ಯಭಾಮಾಧವನಾಗಿ ಹದಿನಾರು ಸಾವಿರ ಸ್ತ್ರೀಯರನ್ನು ಪತ್ನಿಯರನ್ನಾಗಿ ಪಡೆದಿದ್ದುದಲ್ಲದೆ ಗೋಕುಲದ ಸಹಸ್ರಾರು ಗೋಪಿಯರೊಡನೆ ವ್ರಜಭೂಮಿಯ ಬೃಂದಾವನವನ್ನು ಸ್ವರ್ಗತುಲ್ಯವನ್ನಾಗಿ ಪರಿವರ್ತಿಸಿದ ಶೃಂಗಾರಮೂರ್ತಿ. ರುದ್ರಭಟ್ಟ ಕವಿಯು ಶ್ರೀಕೃಷ್ಣನ ಅದ್ಭುತ ಲೀಲೆಗಳನ್ನು ವರ್ಣಿಸುತ್ತಾ, ಪಾರಿಜಾತಹರಣಾದಿಗಳನ್ನು ವಿವರಿಸಿದನಂತರ, ಜಗನ್ನಾಥವಿಜಯದ ಚತುರ್ದಶಾಶ್ವಾಸದಲ್ಲಿ ವಸಂತಋತುವನ್ನು ಪ್ರವೇಶಗೊಳಿಸಿ, ಕೃಷ್ಣನ ಮತ್ತು ಆತನ ರಾಣಿಯರ ವಸಂತವಿಹಾರ ವೈಭವವನ್ನು ಮನೋಹರವಾಗಿ ವರ್ಣಿಸಿದ್ದಾನೆ. ಆ ಬೃಹದ್ವರ್ಣನೆಯ ಹೊಳಪಿನ ಬಿಂದುಗಳನ್ನು ಇಲ್ಲಿ ಆರಿಸಿ ಕಾಣಬಹುದು.

## ನಿಸರ್ಗದ ಹೊಸ ಕವಚ

ವಸಂತವು ಪ್ರಣಯಿಗಳ ಉತ್ಸಾಹವನ್ನು ವರ್ಧಿಸುವ ಕಾಲ. ಜೀವಿಯು ಆಜೀವ ಪರ್ಯಂತವೂ ನಿಸರ್ಗದ ಪ್ರಭಾವಕ್ಕೆ ಒಳಗಾಗಿರುತ್ತಾನೆ. ವರ್ಷದಲ್ಲಿ ಗ್ರೀಷ್ಮ ಶಿಶಿರಾದಿಗಳಿಂದ ದೈಹಿಕವಾಗಿ ಪಡೆದ ಅನುಭವವನ್ನು ಮಾನಸಿಕವಾಗಿ ಮೆಲಕುಹಾಕುತ್ತಾ ಸೌಖ್ಯವನ್ನೋ ಕ್ಲೇಶವನ್ನೋ ಕಾಣುತ್ತಾನೆ. ಆದರೆ ವಸಂತಋತುವು ಬರುತ್ತಲೇ ನಿಸರ್ಗವೆಲ್ಲವೂ ಸೊಬಗಿನ ಹೊಸ ಕವಚವನ್ನು ತೊಟ್ಟು ಎದುರಾದಾಗ ವಿಲಾಸಿಗಳ ಹೃದಯದಲ್ಲಿ ಅದುವರೆವಿಗೆ ಸುಪ್ತವಾಗಿದ್ದ ಬಯಕೆಯು ಜಾಗೃತವಾಗುತ್ತದೆ. ಕವಿಯು ವಸಂತಾರಂಭಕ್ಕೆ ದೂತಿಯನ್ನು ಹೆಸರಿಸುತ್ತಾನೆ—

"ವಸಂತ ದೆಳ್ತರಮೆ ತೋರುವವೊಲ್ ತಲೆದೋರಿದತ್ತು ವಾಸಂತಿ, ವಸಂತದೂತಿ ವೆಸರಿಂತಿದು ಸಾರ್ಥಕವಾಗಿ ತೋರ್ಪಿನಂ . . ." (೨೧).

ಈ ಕಾಲದಲ್ಲಿ ಚೂತಾಂಕುರವು ಬಹುರಮ್ಯ. ವಸಂತ ಚೂತಾಂಕುರವು ವಧುಗಳಿಗೆ ವಿಷಾಂಕುರ, ಅಂಗಜಂಗೆ ರಾಗಾಂಕುರ, ಕೋಕಿಲ ಕುಲಕ್ಕೆ ಅಮೃತಾಂಕುರ! ಮೊಗ್ಗು, ಚಿಗುರು, ಹೂವು, ಮಿಡಿ, ದೋರೆಹಣ್ಣುಗಳಿಂದ ಕೂಡಿದ ಮಾಮರವು ವಿಯೋಗಿಗಳ ಡಾಮರವಾಗಿ ವಲ್ಲಭರ ತೋಮರವಾಗುತ್ತದೆಯಂತೆ—

ಕಳಿಕೆ-ಕೊನರ್-ತಳಿರ್-ಮುಗುಳ್-ಅಲರ್-ಮಿಡಿಕಾಯ್-ನಸುದೋರೆ-ಪಣ್ |
ಬಳಸಿರಲಾಗಳ್ ಆವ ಪರಿಯಿಂ ನಡೆನೋೞ್ಪೊಡಂ ಅಂತೆ, ತಾನೆ ಕ |
ಣ್ಗೆಳಸಿರಿ, ತಾನೆ ರಮ್ಯಮೆನಿಸಿರ್ದು, ವಿಯೋಗಿಜನಕ್ಕೆ - ವಲ್ಲಭಾ |
ವಳಿಗಿದು ಡಾಮರಂ-ಮದನತೋಮರಮಾದುದು ಬಂದಮಾಮರಂ ||

(೧೪/೨೭).

ಅಳಿವಿಂಡಿನೊಡನೆ ಹಾಡುವ ಮಲ್ಲಿಕಾಲತೆಯೂ, ಪರಾಗದ ಮೀಳೆಯದೊಡನೆ ನಗುವ ಅಬ್ಜಿನಿಯೂ ವಸಂತದ ಸೊಬಗಿಗೆ ಹರ್ಷಪುಳಕಾವಳಿಯಿಂದ ಕೂಡಿದ ಆಮ್ರಕೋಮಲೆಗೆ ಮಧು ಸಂಗಮವನ್ನು ಕರುಣಿಸದಿರುವರೇ?—

ಕಲಿಕೆಗಳೆಂಬ ಹರ್ಷಪುಳಕಾವಳಿಯಂ ತಳೆದಿರ್ಪಳಾಮ್ರಕೋ |
ಮಲೆ, ಮಧುಪಾವಳೀ ನಿನದಮೆಂಬ ಕಳಧ್ವನಿಯಿಂದೆ ಮಲ್ಲಿಕಾ |
ಲಲಿತೆ ಕಡಂಗಿ ಪಾಡಿದಪಳಬ್ಜಿನಿ ತನ್ನ ಪರಾಗಮೆಂಬ ತಂ |
ಬುಲಮಿಗೆ ನಕ್ಕಪಳ್ ವಿಕೃತಿಯಂ, ಮಧುಸಂಗತಿ ಮಾಡದಿರ್ಕುಮೇ || (೧೪/೨೩)

ಪ್ರಕೃತಿಯ ಶೋಭೆಯನ್ನು ಶೃಂಗರಿಸುವುದೆಂದರೆ ಮೊದಲು ತಳಿರು; ಅನಂತರ ಪುಷ್ಪ ಸಂಕುಲ. ತಳಿರು ಹಾಗೂ ಪುಷ್ಪಗಳು ಉತ್ಸಾಹದಿಂದ ಚಿಗುರಿ ಅರಳಬೇಕಾದರೂ ಸುಂದರಿಯ ರನ್ನು ಆಶ್ರಯಿಸುತ್ತವೆ. ಲಕ್ಷಣಶಾಸ್ತ್ರದಲ್ಲಿ ಇದಕ್ಕೆ ಒಂದು ಆಧಾರವನ್ನು ಕೊಡಬಹುದು—

ಪಾದಾಹತಃ ಪ್ರಮದಯಾ ವಿಕಸತ್ಯಶೋಕಃ |
ಶೋಕಂ ಜಹಾತಿ ವ ಕುಲೋ ಮುಖಸೀಧು ಸಿಕ್ತಃ |
ಆಲಿಂಗಿತಃ ಕುರವಕಃ ಕುರುತೇ ವಿಕಾಸಂ |
ಆಲೋಕಿತಃ ತಿಲಕ ಉತ್ಕಲಿಕೋ ವಿಭಾತಿ ||

ಇಲ್ಲಿನ ಕವಿಯ ವರ್ಣನೆಯಲ್ಲೂ ಇದೇ ಅಂಶಗಳನ್ನು ಕಾಣಬಹುದು. ವಾಮಾವಾಮಾಂಘ್ರಿ ಯಿಂದ ಘಟ್ಟಿಸಲ್ಪಟ್ಟು, ಪಾದದ ಅಲಕ್ತವನ್ನು ಹೀರಿ ಕೆಂಪಡರಿದ ಅಶೋಕ; 'ಕಾಂತೆಯರ ಪೆರ್ಮೊಲೆ ಸೋಂಕಿನೊಳಾವ ಮಾನವರ್ ಪುಳಕಿತರಾಗದಿರ್ಪ' ರೆನ್ನುವಂತೆ ತನ್ವಿಯರ ಕುಚಗ ಳೊತ್ತಿನಿಂದ ಅಂಕುರಿಸಿದ ಕುರವಕ (ಗೋರಟೆ); ತನ್ವಿಯರ ಮುಖಜಲ ಸಿಂಚನದಿಂದ ಸಮಾಧಾನ ಗೊಂಡ ವಕುಳ; ಸುದತಿಯರ ನಯನ ಕಾಂತಿಯನ್ನು ಸೆರೆಹಿಡಿದು ತಾನೂ ನೋಡುವುದೆಂಬಂತೆ ಕಟಾಕ್ಷ ವೀಕ್ಷಣದಿಂದ ಹೂ ಬಿಟ್ಟ ತಿಲಕವೃಕ್ಷ! ವಸಂತನಿಗೆ ವಧುವಿತ್ತ ದೀಪದಂತಹ ಚಂಪಕ—

ಮನಸಿಜ ತೇಜದಂಕುರ–ಅನಂಗ ನೃಪಾಂಗನೆ ತೊಟ್ಟ ಚಿನ್ನದ ಪೂವು—ವನವಧು ಚೈತ್ರನಂ ನಿವಳಿ ಪುಜ್ವಲ ದೀಪವೆನಲ್!

ಅಳಿಮೆರಗಿದ ಪಾಟಲಿಯಲ್ಲಿ ಮಧುವಿಟನು ನೆರೆದ ಚಿತ್ರ ಇಂತಿದೆ—

ಎಲೆಯೆಂಬ ಚೀನ ದುಕೂಲಿಡೆ |
ತೊಲಗಿರೆ, ಮಧುನೆರೆಯೆ ತನ್ನೊಳೊಲವಿಂದ, ಈ ಪಾ |

ಟಲಿಗಾಯ್ತುದರ ಕರೆಯೆನೆ|
ಯೆಲರ್ಗೆರಗಿರ್ದಳಿ ವಿರಾಜಿಕುಂ ಪಾಟಲಿಯೊಳ್ ‖ (೧೯/೩೪)

ಇತರ ಕುಸುಮಗಳು ತಮ್ಮ ಸೌರಭವನ್ನು ಅಲ್ಪಕಾಲದಲ್ಲೇ ಕಳೆದುಕೊಂಡು ಕೊರಗುವುದರಿಂದ ಅವುಗಳಿಗಿಂತ ತಾನೇ ಶ್ರೇಷ್ಠನೆಂದು 'ಬಿರಯಿಯೆರ್ದೆ ಬಿರಿವಿನೆಗಂ' ಸುರಗಿಗಳು ಬಿರಿದುವಂತೆ! ಹಾಗೆಯೇ ಮದನನ ಸುಗಂಧ ಭಂಡಾರವನ್ನು ಸೂರೆಗೊಳ್ಳುವ ಸೇವಂತಿಗೆಗಳೂ ವನಲಕ್ಷ್ಮಿಯ ಶೋಭೆಯನ್ನು ಬೆಳಗುತ್ತವೆ.

ವಸಂತಶೋಭೆಯ ಹೊಗಳುಭಟರೆಂದರೆ ಪಕ್ಷಿಗಳು. ಈ ಭಟರು ತಳಿರು, ಸುಮಗಳ ಕೈದುಗಳೊಡನೆ ಸೌರಭ ಮಧು ಮಧುರಾಸವವನ್ನೀಂಟಿ ಮತ್ತರಾಗಿ ವಿರಹಿಗಳ ಮೇಲೆ ಧಾಳಿಮಾಡುತ್ತಾ ವಸಂತ ಸೇನಾಪತಿಯ ಪರಾಕ್ರಮವನ್ನು ಹೊಗಳುತ್ತಾರೆ. ಪಂಚಮಸ್ವರವನ್ನು ಹಾಡುವ ಕೋಗಿಲೆಯಂತೂ ಒಮ್ಮೊಮ್ಮೆ ಮದಿಸಿ ನಿಷಾದಕ್ಕೇರುತ್ತದೆ. ಎದೆ ಮುಟ್ಟದ ಕಾಮನಂಬಿಗೆ ಸರಿಯಾಗಿ ಮನಮುಟ್ಟುವ ಕುಕಿಲುಲಿಯ ಚಿತ್ರ ಇಂತಿದೆ—

ಸೊನೆವನಿ ಚಂಚುವಿಂ ಪನಿಯೆ, ಮಾಂಗೊನರಂ ನಸುಗರ್ಚಿ ಸೊರ್ಕ್ಕಿನಿಂ ।
ತನು ದಳವೇರೆ, ಕಂಠವಿವರಂ ತೊವರೇರಿ ಪಟುತ್ವವೇರೆ ।
ಕಾಮನ ನನೆಯಂಬುಗಳ್ ವಿರಹಿ ವೃಂದದ ಮೆಲ್ಲೆರ್ದೆಯುಂ ಪುಗಲ್, ನಿಜ ।
ಧ್ವನಿಬಗೆಯುಂ ಪುಗಲ್ ಬಿಡೆ ಪುಗಲ್ ಪುಗಲೆಂದುದು ಕೋಕಿಲ ವ್ರಜಂ ‖ (೧೪/೩೮)

ಎರಡನೆಯ ಸ್ಥಾನ ಗಿಳಿಗಳದು. ತಳಿರು ಮುರಿದು, ಪೂ ಮಿಡಿಗಳನ್ನು ಎಂಜಲಿಸಿ, ಹಣ್ಣುಗಳ ರಸವನ್ನೀಂಟಿ ಎಳೆಮಾವುಗಳಲ್ಲಿ ಬಣ್ಣಗೂಡಿಸುವುವು ಈ ಗಿಳಿಗಳು. ಮೂರನೆಯ ಗುಂಪು ತುಂಬಿಗಳದು! ಪಲಾಶ, ತಾವರೆ, ಮಲ್ಲಿಗೆ ಮೊದಲಾದುವುಗಳಲ್ಲಿ ಮಧುವನ್ನೀಂಟಿ ಮದಿಸಿ ವನಲಕ್ಷ್ಮಿಯ ಕಾಲ್ಗಡಗಗಳ ಸ್ವರವನ್ನೂ, ಜಳದೇವಿಯ ಕಲಕಂಠವನ್ನೂ, ಕಾಮನ ಕಣೆಯ ಧ್ವನಿಯನ್ನೂ ನೆನಪಿಗೆ ತರುವ ಈ ಚಿತ್ರ!—

ಸುರಸ ಪಲಾಶ ಪುಷ್ಪ ಚಯದೊಳ್ ವನಲಕ್ಷ್ಮಿಯ ರತ್ನನೂಪುರ ।
ಸ್ವರಮೆನೆ, ಹೇಮತಾಮರಸದೊಳ್ ಜಳದೇವಿಯ ವಕ್ತ್ರಕೂಜಿತ ।
ಸ್ವರಮೆನೆ, ಮಲ್ಲಿಕಾ ಮುಕುಳದೊಳ್ ರತಿಕಾಂತನ ಬಾಣಭೀಕೃತ ।
ಸ್ವರಮೆನೆ-ಪೊಣ್ಮಿದತ್ತು, ಮಧುರಂ ಮಧುಮತ್ತ ಮಧುವ್ರತಸ್ವರಂ ‖ (೧೪/೪೦)

ಇದು ವಸಂತನ ವೈಭವಕಾಲದ ಚಿತ್ರ. ಆತನ ವಧು ವನಲಕ್ಷ್ಮಿ. ಋತುಕಾಲದ ಧರ್ಮವನ್ನನುಸರಿಸಿ ಆ ಲಲನೆಯು ವಸಂತನನ್ನು ಸುಮ್ಮನಿರಗೊಡಳು. ವೈಭವದ ವಿಹಾರದ ಈ ಕಾಲದಲ್ಲಿ ಆಕೆಯ ಪ್ರಣಯ ಪ್ರಕೋಪಕ್ಕೆ ವಸಂತನು ಬಗ್ಗಲೇಬೇಕು. ಎಂತಹ ಕಠಿಣಸ್ವಭಾವದ ಪತಿಯನ್ನೂ ಒಲಿಸಲು ಕಾಂತೆಯರಿಗೆ ವಸಂತ ಋತುವಿಗಿಂತಲೂ ಉತ್ತಮ ಕಾಲವಿಲ್ಲ. ವನಲಕ್ಷ್ಮಿಯು ವಸಂತನನ್ನೆಳೆದು ತರುವ ಚಿತ್ರ ಇಂತಿದೆ—

ತಂಬೆಲರೆಂಬ ಸುಯ್ ನಿಮಿರೆ, ಮಲ್ಲಿಗೆಯೆಂಬ ಅಲರ್ಗಣ್ಗಳೊಳ್ ಕರಂ ।
ತುಂಬಿಗಳೆಂಬ ಕಾಡಿಗೆಯ ಕಣ್ಬನಿಪೊಣ್ಮೆ, ಬೆಡಂಗುವೆತ್ತು, ಮಾ ।
ವೆಂಬ ಲತಾಗೃಹಕ್ಕೆ ವನಲಕ್ಷ್ಮಿ ವಸಂತಕನಂ, ಪಿಕಸ್ವನಾ ।
ಡಂಬರೆ, ತಾನದೇಂ ಪಿಡಿದು ತಂದಳೊ, ಸಪ್ರಣಯ ಪ್ರಕೋಪದಿಂ ‖ (೧೪/೨೫)

ಈ ಚೈತ್ರದಲ್ಲೇ ವಿರಹಿಲೋಕದ ಮೇಲಿನ ವಿಜಯ ಯಾತ್ರೆಗೆ ವಸಂತನು ವನಲಕ್ಷ್ಮಿಯೊಡನೆ ಹೊರಡುತ್ತಾನೆ. ಅವನ ಪರಾಕ್ರಮ ಅಷ್ಟಿಷ್ಟಲ್ಲ. ಬೆಳ್ದಿಂಗಳು, ಬಿರಿಹೂವು, ತಂಗಾಳಿ, ಕುಕಿಲುಲಿ–ಇಷ್ಟೇ ಲೋಕವನ್ನು ತನ್ನ ಆಜ್ಞೆಯಿಂದ ಗೆಲ್ಲುವಾಗ, ತನ್ನ ಪರಾಕ್ರಮಕ್ಕೆ ಕೊರತೆಯಿಲ್ಲ ವೆಂದು ನಲ್ಲಳೊಡನೆ ಮಾಮರದಡಿಯಲ್ಲಿ ನಿಂತು ಅಳಿ–ಗಿಳಿವಿಂಡಿನಿಂದ ಚೈತ್ರಮಿತ್ರನು ಹೊಗಳಿಸಿ ಕೊಳ್ಳುತ್ತಾನೆ—

ಬೆಳಪೀ ಚಂದ್ರಾಂಶು, ಪೂತೀ ವಿಚಕಿಲಂ, ಅಲೆವೀ ತಂಬೆಲರ್, ಬಗ್ಗಿಪೀ ಕೋ।
ಕಿಳವೆನ್ನೊಳ್ ತಾವೆ ಮಾಳ್ಕುಂ ಭುವಜಯಮಂ, ಆಂ ಕೈದುಗೆಯ್ವನ್ನ ಮೇನೆಂ।
ದೆಳಮಾವಂ ನೆಮ್ಮಿ, ತನ್ನೋಪಳ ಮೊಲೆಗೆಲನಂ ನೋಡುತುಂ, ತುಂಬಿಯಿಂದಂ।
ಗಿಳಿಯಿಂದಂ ಬೀರಮಂ ಪಾಡಿಸಿ ಪೊಗಳಿಸುವಂ ಚೈತ್ರದೊಳ್ ಚೈತ್ರಮಿತ್ರಂ॥
(೧೪/೪೧)

## ಜಗನ್ನಾಥನ ವಿಹಾರ-ಕೇಳಿ

ಋತುಧರ್ಮದ ಹೆಸರಿನಲ್ಲಿ ಕಾಮೋದ್ದೀಪವನ್ನೂ ಜಲಕೇಳಿಯನ್ನೂ ಸಂಸ್ಕೃತ ಕಾವ್ಯಗಳ ಲ್ಲಿಯೂ ವರ್ಣಿಸಲಾಗಿದೆ. ಸೃಷ್ಟಿಯ ತತ್ವವನ್ನು ಕುರಿತು ಭಾಗವತಾದಿ ಪುರಾಣಗಳಲ್ಲಿ ಹೇಳಿರುವ ಧರ್ಮಗಳ ಬಗ್ಗೆ ಆಳವಾಗಿ ಯೋಚಿಸಿದರೆ ಇದು ಸಮಂಜಸವೆನಿಸುತ್ತದೆ. ಬ್ರಹ್ಮನು ಜೀವಿಗಳ ಸೃಷ್ಟಿಗೆ ಪ್ರಾರಂಭಿಸಿದಾಗ ಮೊದಲು ಸನಕಾದಿಗಳು ಹುಟ್ಟಿ ಸಂತಾನಾಪೇಕ್ಷೆಯಿಲ್ಲದೆ ತಪಸ್ವಿಗಳಾಗಿ ಹೋದಾಗ ಬ್ರಹ್ಮನು ಚಿಂತೆಗೀಡಾಗಿ, ಮತ್ತೆ ಸಂತಾನವನ್ನು ಪಡೆಯುವವರನ್ನೇ ಸೃಜಿಸಿದನೆಂದು ಪುರಾಣಗಳು ಹೇಳುತ್ತವೆ. ದಾಂಪತ್ಯ ಧರ್ಮದಿಂದ ಪ್ರಜಾವೃದ್ಧಿ ಮಾಡುವಂತೆ ಶಕ್ತಿಯು ಬ್ರಹ್ಮನಿಗೆ ವರವಿತ್ತಳೆಂದೂ, ಅದನ್ನೇ ಆತನು ತನ್ನ ಪುತ್ರರಿಗೂ ಆಜ್ಞಾಪಿಸಿದನೆಂದೂ ವಿರೂಪಾಕ್ಷ ಪಂಡಿತನು ತನ್ನ ಕಾವ್ಯವಾದ ಚೆನ್ನಬಸವ ಪುರಾಣದಲ್ಲಿ ಹೇಳಿದ್ದಾನೆ. ಕೃಷ್ಣನೂ ದಾಂಪತ್ಯ ಧರ್ಮಿಯಲ್ಲವೇ? ಋತುಧರ್ಮವೂ ದಾಂಪತ್ಯಧರ್ಮಕ್ಕೆ ಪೋಷಕವಾಗಿದೆ. ಈ ವಿಹಾರಾದಿಗಳು ಋತು ಧರ್ಮದ ಅಂಗಗಳಾಗಿ ಕಾವ್ಯಗಳಲ್ಲಿ ವರ್ಣಿಸಲ್ಪಡುತ್ತವೆ.

ಕಾವ್ಯಪದ್ಧತಿಯಲ್ಲಿ ಸಾಧಾರಣವಾಗಿ ವಸಂತವರ್ಣನೆಯ ನಂತರ ಫಲಪುಷ್ಪಾದಿಗಳ ಕಾಣಿಕೆ ಯೊಡನೆ ವನಪಾಲಕನು ಬಂದು ಒಡೆಯನಿಗೆ ವಿವರಿಸುವುದು ಮೊದಲ ಹಂತ! ಇಲ್ಲಿ ಸ್ತ್ರೀ ಪರಿವೃತ ನಾದ ಕೃಷ್ಣನಿಗೆ ವನಪಾಲಕನು ಇಂತು ಬಿನ್ನೈಸುತ್ತಾನೆ—

ವನಲಕ್ಷ್ಮಿಗೆ ಮಧುವಿಂ ಯೌ
ವನಲಕ್ಷ್ಮಿ ಪೊದಳ್ದು ರಂಜಿಸಿರ್ದಪುದು, ಆ ನಂ।
ದನಲಕ್ಷ್ಮಿಗೆ ಭೋಗಾನಂ।
ದನಲಕ್ಷ್ಮಿಯನುಂಟುಮಾಡು ನಿಜ ಸಂಗತಿಯಿಂ॥ (೧೪/೪೫)

ಅದರಂತೆಯೇ ರಾಣಿಯರೂ ಸಖಿಯರೂ ವಿವಿಧಾಲಂಕಾರ ವಿಭೂಷಿತರಾಗಿ ಕೃಷ್ಣನ ಮತ್ತು ಆತನ ಸಖರೊಡನೆ ವನವಿಹಾರಕ್ಕೆ ಹೊರಟರು. ಕಾವ್ಯಪದ್ಧತಿಯಲ್ಲಿ ಒಡೆಯನಿಂದ ವನದ ಶೋಭಾ ನಿರೀಕ್ಷಣೆಯು ವಿಹಾರ ವರ್ಣನೆಯ ಎರಡನೆಯ ಅಂಗ—

ವನಮಾಲೆಯೊಳ್ ವಿಹಾರಿಸಿ,॥
ವನಮಾಲೆಯೊಳೆಸಗು ವಬ್ಜಿನೀ ಮಾರುತನಿಂ।
ವನಮಾಲೆ ಪೊಳೆಯೆ, ಕೃಷ್ಣಂ।
'ವನಮಾಲಯುಮಾಯ್ತು ಲೀಲೆಗೆ' ಂದೆನೆ ಸುಳಿದಂ॥ (೧೪/೬೨)

ವನಮಾಲೆ (ಶಬ್ದಮಧುರತೆ) ಯ ವೈಚಿತ್ರ್ಯ ನೋಡಿ! ತರುಣಿಯರ ಅಪ್ಪಣೆಯಿಂದ ಅರಳಿದ ಗೋರಟೆಯನ್ನು ಕಂಡ ಕೃಷ್ಣನಿಗೆ ಕಳೆದ ರಾತ್ರಿಯ ಸ್ಮರಣೆಯಾಯಿತಂತೆ:—

ತರುಣೀ ಸ್ತನ ಸಂಗದಿ ನಂ।
ಕುರಿಸಿದ ಕುರವಕವನಚ್ಯುತಂ ವೀಕ್ಷಿಸಿ, ಪೋ।
ದಿರುಳೊಗೆದ ರುಕ್ಮಿಣೀ ಸ್ತನ।
ಪರಿರಂಭವನಲ್ಲಿ ನೆನೆದು ಪುಳಕಿತನಾದಂ॥ (೧೪/೬೮)

ಅಳಿಗಳ ಇಂಚರದೊಡನೆ ಚೈತ್ರನ ತೊಡವಾಗಿ; ವಿರಹಿಗಳ ಸೊಗಸಿಗೂ, ವಿಯುಕ್ತರ ತಲ್ಲಣಕ್ಕೂ ಕಾರಣವಾಗಿ ಕಾಮನ ಕಣೆಯಂತಿದ್ದ ಆ ಮಲ್ಲಿಗೆ!—

ಬನದ ವಿಭೂತಿ, ತಂಬೆಲರ ಪೈಸಿರಿ, ತುಂಬಿಯ ಗೀತಶಾಲೆ, ಚೈ।
ತ್ರನ ತೊಡ, ಪೋತಗಲ್ದಿರೆರ್ದಲ್ಲಣ, ಮೋಪರ ಸೈಪು, ಕಾಮನಂ।
ಬಿನ ಕಣೆ, ಪುಷ್ಪಸಾಯಕನ ಕೀರ್ತಿಯಬಿಳ್ತು, ಮೊದಲ್ ಮೃಡಾರಿವೀ।
ರನ ಜಯಶಕ್ತಿಯೆಂದಲರ್ದ ಮಲ್ಲಿಗೆಯಂ ಹರಿ ಮೆಚ್ಚಿ ನೋಡಿದಂ॥ (೪೧/೭೦)

ವಿಹಾರದ ಮೂರನೆಯ ಅಂಗವೆಂದರೆ ಅಂಗನೆಯರು ವೈಯಾರದೊಡನೆ ಹೂವುಗಳನ್ನು ಕೊಯ್ಯುವುದು. ಕೃಷ್ಣನೊಡನೆ ಬಂದ ಸುಂದರಿಯರೂ ವನದೊಳಗಿನ ವಿವಿಧ ಪುಷ್ಪಗಳನ್ನಾರಿಸುವಾಗ ತಳೆದ ಮನೋಭಾವಗಳನ್ನು ಕವಿಯ ವಾಣಿಯಲ್ಲೇ ನೋಡುವುದು ಉಚಿತ.

ಜಾಜಿಯು ಪುಷ್ಪಜಾತಿಗಳಲ್ಲಿ ಶ್ರೇಷ್ಠವಾದುದೆಂದೂ, ವಿಟೀ ವಿಟ ವಿಭೂತಿಯೆಂದೂ, ರತಿರಾಗದ ದೂತಿಯೆಂದೂ ಸಖಿಯೊಬ್ಬಳು ಆರಿಸಿಕೊಂಡಳಂತೆ—

ಜಾತಿಗೆ ಪುಷ್ಪಜಾತಿಗಳ ಜಾತಿಯದೇಂ ಸಮಜಾತಿಯಪ್ಪುದೇ?।
ಜಾತಿಯೆ ಜಾತಿ, ಮಿಕ್ಕಲರ ಜಾತಿಯದೇತರ ಜಾತಿಯೆಂದು, ತಾಂ।
ಜಾತಿಯ ಜಾತಿಯಂ, ಪೊಗಳ್ದು ಜಾತಿ ವಿಚಾರ ವಿದಗ್ಧೆ ಕೊಯ್ದಳಾ।
ಜಾತಿಯನಾ ವಿಟೀ ವಿಟ ವಿಭೂತಿಯನಾ ರತಿರಾಗ ದೂತಿಯಂ॥ (೧೪/೮೨)

ಶಂಕರಾರ್ಚನೆಗೆ ಕೇದಗೆಯ ಹೂವು ನಿಷಿದ್ಧವಂತೆ! ಒಬ್ಬ ಸಖಿಯು ಇದನ್ನು ಹೇಳುತ್ತಾಳೆ—

ಮರುಳೊಡನಾಡಿದ ಕತದಿಂ।
ಮರುಳಾದನಲ್ಲದಂದಿದ ಸೂಡನೆ ಶಂ।
ಕರ?" ನೆಂದು ಕೊಯ್ದಳೊರ್ವಳ್।
ಪರಿಮಳಮಂ ಬೀರುತಿರ್ಪ ಪೊಂಗೇದಗೆಯಂ॥ (೧೪/೮೨)

ಸಂಪಗೆಗೆ ತುಂಬಿಗಳು ಮರಣದಾಶಂಕೆಯಿಂದ ಮುತ್ತುವುದಿಲ್ಲವೆಂಬುದು ಲೋಕಪ್ರಸಿದ್ಧವಾದ ವಿಷಯ—

ಪರಿಮಳವೆಂಬುದು ಕುಸುಮೋ।
ಪರಿಮಳವೆನಿಪ ಅಳಿಂಗಳೆಂಜಲ್-ಇತರ ಪ್ರಸವೋ।
ತ್ಕರದೊಳಿನುತ ಬಲೆ, ಕೊಂಬಂ।
ಕರದೊಳ್ ತೆಗೆದಾಯ್ದಳೆಸಳ ಸಂಪಗೆಯಲರಂ॥ (೧೪/೭೮)

ತುಂಬಿಗಳು ಮುತ್ತಿದ್ದೇ ಆದರೆ ಪರಿಮಳವು ನಿಜವೆಂದು ತಿಳಿದ ಸಖಿಯು ಸಂಪಗೆಯನ್ನೇ ಅರಿಸಿದಳಂತೆ!

ವಿಹಾರದ ನಾಲ್ಕನೆಯ ಹಾಗೂ ಬಹಳ ಮುಖ್ಯವಾದ ಅಂಗವೆಂದರೆ ಜಲಕ್ರೀಡೆ. ಕನ್ನಡ ಕಾವ್ಯಗಳಲ್ಲಿ ವಸಂತವರ್ಣನೆಯೊಡನೆ ಸೂಚಿತವಾಗಿರುವ ಕಡೆಗಳಲ್ಲೆಲ್ಲಾ ಜಲಕ್ರೀಡಾವರ್ಣನೆಯು ಹೆಚ್ಚು ಸ್ಥಳವನ್ನಾಕ್ರಮಿಸಿದೆ. ಕೊಳ, ತಾವರೆ, ನೈದಿಲೆ ಎಸಳುಗಳು, ದಂಟುಗಳು, ಜಲಚರ ಪ್ರಾಣಿಗಳು–ಇವೆಲ್ಲವೂ ಜಲಕ್ರೀಡೆಯಲ್ಲಿ ಕಾಂತ-ಕಾಂತೆಯರ ವೈಸಿರಿಗೆ ಬಗ್ಗಬೇಕು. ಅಲ್ಲದೆ ವಿವಿಧ ಭಂಗಿಯ ಚೇಷ್ಟೆಗಳಿಗೆ ವಿಧವಿಧವಾದ ಅಭಿಪ್ರಾಯಗಳ ಮಾತುಗಳೊಡನೆ ಈಜಾಡಬೇಕು. ಕ್ರಿ. ಶ. ಸುಮಾರು ೧೫ನೇ ಶತಮಾನ ಹಾಗೂ ಈಚಿನ ಕಾವ್ಯಗಳಲ್ಲಂತೂ ಜೀರ್ಕೊಳವೆಗಳ ಓಕುಳಿಯ ವರ್ಣನೆಯೂ ಸೇರಿ, ಜಲಕ್ರೀಡೆಯ ವರ್ಣನೆಗೆ ಮತ್ತೂ ಸೊಗಸನ್ನು ತಂದಿವೆ. ಕೃಷ್ಣನ ಈ ಬಗೆಯ ಸುಂದರವಾದ ಓಕುಳಿಯನ್ನು ಕನಕದಾಸರ 'ಮೋಹನ ತರಂಗಿಣಿ' ಯಲ್ಲಿ ನೋಡಬಹುದು.

ಕೃಷ್ಣನ ಶೃಂಗಾರ, ಶೃಂಗಾರದಲ್ಲಿ ವಿಲಾಸ, ವಿಲಾಸದಲ್ಲಿ ವನವಿಹಾರ, ಅದರಲ್ಲಿ ಸುಂದರಿಯರು, ಸುಂದರಿಯರೊಡನೆ ಜಲಕ್ರೀಡೆ–ಈ ರೀತಿಯ ವರ್ಣನೆಯು ಯಾವುದೇ ಸಾಹಿತ್ಯಕ್ಕೂ ಹೊಸತಲ್ಲ.

ಹಿಂದೀ ಸಾಹಿತ್ಯದ ಕೃಷ್ಣಭಕ್ತಿಯ ಶಾಖೆಗೆ ಸಂಬಂಧಿಸಿದ ಕಾವ್ಯಗಳಲ್ಲಂತೂ ಜಲಕ್ರೀಡೆಯ ವಿಪುಲವಾದ ವರ್ಣನೆಗಳಿವೆ. ಅಲ್ಲಿ ಮುಕ್ತಕ ಸಾಹಿತ್ಯವನ್ನೂ ಜಲಕ್ರೀಡೆಯ ರಮ್ಯತೆಯ ವರ್ಣನೆಗಾಗಿ ಬಳಸಲಾಗಿದೆ; ಜೀರ್ಕೊಳವೆಗಳ ಬಳಕೆಯನ್ನೂ ನೋಡಬಹುದು. ರುದ್ರಭಟ್ಟನ 'ಜಗನ್ನಾಥ ವಿಜಯ' ದಲ್ಲಿ ಜೀರ್ಕೊಳವೆಗಳ ವೈಚಿತ್ರ್ಯವನ್ನು ಬಳಸಿಕೊಳ್ಳದಿದ್ದರೂ ವರ್ಣನೆಗೆ ಯಾವ ಕುಂದೂ ಬಂದಿಲ್ಲ.

ಕೃಷ್ಣನ ಜಲಕ್ರೀಡಾ ವಿಹಾರದ ಸೊಗಸನ್ನು ಬಯಸಿ, ಅಂಬರದಿಂದ ದೇವಾಂಗನೆಯರೂ ಇಳಿತಂದು, ಕೃಷ್ಣನ ರಾಣಿಯರೊಡನೆ ಅಭೇದವಾಗಿದ್ದಾರೆ. ಸಿರಿಮುಡಿಗಳ ವಿವಿಧ ಸುರಭಿಯ ಕುಸುಮ ಮಂಜರಿ, ನೈಗಂಟಿದ ವಿವಿಧ ಸುಗಂಧ ಲೇಪನಗಳೊಡನೆ ವಿಶಾಲ ಸಮುದ್ರದ ತಟದಲ್ಲಿ ಸಾಲುಗಟ್ಟಿ, ನಿಂತಾಗ ಜಲಧಿತಟದಲ್ಲಿ ವನಲತೆಗಳನ್ನು ಗೆಲ್ಲಲು ಬಂದ ಶೃಂಗಾರ ಜಲಧಿತಟದ ವನಲತೆಗಳೋ ಎಂದು ಭಾಸವಾಯಿತಂತೆ! ಇವರೆಲ್ಲರೂ ಕ್ರೀಡೆಗಾಗಿ ಜಲಧಿಯನ್ನು ಹೊಕ್ಕಾಗ, ಅದರಲ್ಲಿನ ಮೀನುಗಳೆಲ್ಲವೂ ಅಡಗಿ ಹೊಸ ಮೀನುಗಳು ಪ್ರವೇಶಿಸಿದ ರೀತಿ ಇಂತಿದೆ :—

ಅಂಗನೆಯರ್ ಜಲದೊಳ್ ಪುಗೆ ।
ಮೀಂಗಳಡಗುವುದುಂ, ಅವರ ನಯನ ಪ್ರತಿ ಬಿಂ ।
ಬಂಗಳೆ ಪೊಳೆವೆಳ ಮೀಂಗಳ ।।
ಭಂಗಿಯನನುಕರಿಸಿ ಪೊಳೆದುವಾ ತಿಳಿಗೊಳದೊಳ್ ॥ (೧೪/೯೭)

ಕೃಷ್ಣನೂ ಸಹ ಕೊಳಕ್ಕಿಳಿದು ಈಜಿದ್ದಾಗಿದೆ. ಇನ್ನು ಈಗ ಜೀರ್ಕೊಳವೆಯಿಲ್ಲದ ಓಕುಳಿಯನ್ನು ಪರಸ್ಪರ ಪ್ರಾರಂಭಿಸುತ್ತಾರೆ. (ಜೀರ್ಕೊಳವೆಗಳ ಓಕುಳಿಯನ್ನು ವಿಜಯನಗರದ ಕೃಷ್ಣ ದೇವರಾಯನ ಕಾಲದ ಮತ್ತು ಈಚಿನ ಸಾಹಿತ್ಯದಲ್ಲಿ ವಿಪುಲವಾಗಿ ಕಾಣಬಹುದು.) ಇಲ್ಲಿ ಕೊಳವೆ

ಗಳಿಲ್ಲದಿದ್ದರೂ ಕರಾಂಜಲಿಯಿಂದಲೇ ಒತ್ತಿ ಚೆಲ್ಲುವ ರಮ್ಯತೆಯು ಯಾವ ಸೌಂದರ್ಯವನ್ನೂ ಕುಂದಿಸಿಲ್ಲ—

ವನರುಹಲೋಚನಂ ನಿಜಕರಾಂಜಲಿ ವಾರಿಯಿನೊರ್ಕೆ ಪಾರ್ಶ್ವವ ।
ರ್ತಿನಿಯ ಸಮುನ್ನತ ಸ್ತನಯುಗಕ್ಕಭಿಷೇಕಮನೀಯೆ, ಕಂಡು ಮಾ ।
ನಿನಿ ತನಗೀರ್ಷ್ಯೆ ಪುಟ್ಟೆ ಮನದೊಳ್, ನಯನಾಂಜಲಿ ವಾರಿಯಿಂ ಪುನಃ ।
ಪುನರಭಿಷೇಕಮಂ ನಿಜಸುವೃತ್ತ ಕುಚಕ್ಕೆ ಪೆರಳ್ ನೆಗಳ್ಚಿದಳ್ ॥

ಇಲ್ಲಿ ಒಬ್ಬಳೊಡನೆ ನೀರಿನ ಚೆಲ್ಲಾಟವಾಡುತ್ತಿರುವುದನ್ನು ಕಂಡು ಮತ್ತೊಬ್ಬಳು ಕಣ್ಣೀರಿನಿಂದ ತನಗೆ ತಾನೇ ತೊಯ್ದುಳಿಂದಿದ್ದರೂ, ಈ ಕಣ್ಣೀರೂ ಸಹ ಸೌಂದರ್ಯವರ್ಧಕವಾಗುವಂತೆ ಕವಿಯು ಎಚ್ಚರಿಕೆ ವಹಿಸಿರುವುದು ಗಮನಾರ್ಹ.

ಜಲಕ್ರೀಡೆಯನಂತರ ವಿವಿಧ ವಸ್ತ್ರಾಲಂಕಾರಗಳನ್ನು ಮಾಡಿಕೊಂಡು ಬಂದ ಅಂಗನೆಯರಿಗೆ ಒಡೆಯನಾದ ಕೃಷ್ಣನು ಭೂಷಣಾವಳಿಗಳನ್ನಿತ್ತು ಸಂತೃಪ್ತಿಗೊಳಿಸುತ್ತಾನೆ. ಕಾವ್ಯ ಪದ್ಧತಿಯ ಪ್ರಕಾರ ವನವಿಹಾರ ವರ್ಣನೆಯಲ್ಲಿನ ಜಲಕ್ರೀಡೆಯ ನಂತರ ಇದು ಐದನೆಯ ಹಾಗೂ ಕೊನೆಯ ಅಂಗ.

ಜಗನ್ನಾಥ ಕಾವ್ಯವು ಕೃಷ್ಣಕಾವ್ಯವಾದುದರಿಂದ ಕೊಳ, ಕ್ರೀಡೆ, ವನ, ಪುಷ್ಪ, ಕೋಗಿಲೆ ಇವು ವಸಂತವರ್ಣನೆಗಾಗಿ, ಅದೊಂದೇ ಸ್ಥಳದಲ್ಲಿ ಬಂದಿವೆಯೆಂದು ಭಾವಿಸಲಾಗದು. ಒಟ್ಟಿನಲ್ಲಿ ಭೋಗಪುರುಷನೆನಿಸಿದ ಕೃಷ್ಣನು ಜಗದುದ್ಧರಣಕ್ಕಾಗಿ ಅವತರಿಸಿದ ನಿರ್ದ್ವಂದ್ವನಾದ ಪರಮಾತ್ಮನಾದರೂ ಲೋಕದ ಆದರ್ಶವನ್ನು ನೆಲೆಗೊಳಿಸಲು ಲೌಕಿಕ ಲೀಲೆಗಳನ್ನು ಪ್ರದರ್ಶಿಸಿದನು. ರುದ್ರಭಟ್ಟ ಕವಿಯು ಆತನಿಗಾಗಿಯೇ ವಸಂತ ವರ್ಣನೆಯನ್ನು ಪ್ರವೇಶಗೊಳಿಸಿರುವನೆಂದರೂ ಇದು ಸಮಂಜಸವೂ ಯೋಗ್ಯವೂ ಆಗಿದೆ.

ಶೋಭಾಯುತವಾದ ವಸಂತಕಾಲವು ಋತುರಾಜನೆನಿಸಿ, ಪ್ರೇಮದ ಕಾಲವಾಗಿದ್ದು ಧಾರ್ಮಿಕ ಹಿನ್ನೆಲೆಯನ್ನು ಪಡೆದಿದೆಯೆಂಬ ಸಿದ್ಧಾಂತವು ಇದರಿಂದ ಸ್ಥಾಪಿತವಾಗುವುದು.

---

# ಬೊಮ್ಮಣ್ಣಕವಿ—ಒಂದು ಟಿಪ್ಪಣಿ

**ಹಂಪ. ನಾಗರಾಜಯ್ಯ**

ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್‌ಬಹಾದ್ದೂರ್ ದಿ|| ರಾ. ನರಸಿಂಹಾಚಾರ್ಯರು ಕವಿಚರಿತೆಯ ಮೂರನೆಯ ಸಂಪುಟದ ಪುಟ ೫೬ ರಲ್ಲಿ ಬೊಮ್ಮಣ್ಣ ಎಂಬ ಹೆಸರಿನ ಕೆಳಗೆ "ಈತನು ನಯಸೇನನ ಧರ್ಮಾಮೃತವನ್ನು ಶಕ ೧೬೭೧ ಶುಕ್ಲವರ್ಷದಲ್ಲಿ (೧೭೪೯) ಪ್ರತಿ ಮಾಡಿದ್ದಾನೆ. ಕೆಳಗಣ ಪದ್ಯದಲ್ಲಿ ತಾನು ಕವಿಯೆಂದೂ ನಾಗೇಂದ್ರನ ಮಗನೆಂದೂ ಹೇಳಿ ಕೊಂಡಿದ್ದಾನೆ—

ಇಂದ್ರಾನ್ವಯೋದ್ಭವಂ ನಾ
ಗೇಂದ್ರನ ತನುಜಾತನಾದ ಬೊಮ್ಮಣ್ಣಕವಿ ದೇ।
ವೇಂದ್ರ ಸುಬೃಂದಾರ್ಚಿತ ಜಿನ
ಚಂದ್ರನ ಚೈತ್ಯಾಲಯದೊಳೆ ಬರೆದಂ ಮುದದಿಂ ||

ಎಂದು ತಿಳಿಸಿದ್ದಾರೆ. ಬೊಮ್ಮಣ್ಣನ ಬಗೆಗೆ ಅವರಿಗೆ ಇದಕ್ಕೂ ಹೆಚ್ಚು ತಿಳಿದು ಬಂದಿರಲಿಲ್ಲ. ಇದನ್ನು ಅವರು ಬರೆದದ್ದು ೧೯೨೯ರಲ್ಲಿ. ಅದಾದ ತರುವಾಯ ಮತ್ತೆ ಅವರು ಈ ವಿಷಯ ವನ್ನು, ಈ ಕವಿಯನ್ನು ಕುರಿತು ಪ್ರಸ್ತಾಪಿಸಿಲ್ಲ. ಆದರೆ ೧೯೩೧-೩೨ರಲ್ಲಿ ರಾ. ನರಸಿಂಹಾ ಚಾರ್ಯರ ಮೇಲಿನ ಹೇಳಿಕೆಗೆ ಪೋಷಕವಾಗಬಲ್ಲ ಕೆಲವು ಹೆಚ್ಚಿನ ಸಂಗತಿಗಳನ್ನು ಆಚಾರ್ಯ ಶ್ರೀ ದೊ. ಲ. ನರಸಿಂಹಾಚಾರ್ಯರು ಬೆಳಕಿಗೆ ತಂದರು. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೧೭ನೆಯ ಸಂಪುಟದಲ್ಲಿ ಶ್ರೀ ದೊ. ಲ. ನ. ರವರು ಬರೆದಿರುವ 'ನಾಲ್ಕನೆಯ ಮಂಗರಸ' ಎಂಬ ಲೇಖನದಲ್ಲಿ ಈ ಬೊಮ್ಮಣ್ಣನ ವಿಷಯ ಪ್ರಸ್ತಾಪಿಸಿದ್ದಾರೆ. ನಾಲ್ಕನೆಯ ಮಂಗರಸನೆಂದರೆ ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿರುವ 'ಮನ್ಮಥಮಣಿದರ್ಪಣ'ವೆಂಬ ಕಾವ್ಯವನ್ನು ಬರೆದ ರಾಯಣ್ಣಕವಿ. ಕವಿಚರಿತೆಯಲ್ಲಿ ರಾಯಣ್ಣ ಅನುಕ್ತಕವಿ, ಮನ್ಮಥಮಣಿದರ್ಪಣ ಅನುಕ್ತ ಕಾವ್ಯ. ಸ್ವಾರಸ್ಯವೆಂದರೆ ಈ ರಾಯಣ್ಣಕವಿ ಕವಿಚರಿತೆಕಾರರು ಕೇವಲ ಹೆಸರು ಮಾತ್ರ ಹೇಳಿದ್ದ ಬೊಮ್ಮಣ್ಣನ ಮಗನೆಂಬುದು. ರಾಯಣ್ಣ ತನ್ನ ಮನ್ಮಥಮಣಿದರ್ಪಣ ವೆಂಬ ಕಾವ್ಯದಲ್ಲಿ ತಂದೆಯಾದ ಬೊಮ್ಮಣ್ಣನನ್ನು ಕುರಿತು ಅಭಿಮಾನದಿಂದ ಹೀಗೆ ಹೇಳಿ ಕೊಂಡಿದ್ದಾನೆ:

ಅರುಹನಾರಾಧಿಪನ[ನಾಗನ]
ವರತನುಜ[ನಾ] ಬೊಮ್ಮಣ್ಣ ಕವಿ
ದೊರೆ ದೊರೆಗಳಿಗೆ ಪ್ರೀತಿಯಾದನು ಪೂರ್ವಸುಕೃತಿಯಲಾ।

ಪರಮಗುರು ಜಿನ ಶಾಸ್ತ್ರವಲ್ಲದೆ
ಅರಿಯಮತ್ತನ್ಯವನು ಫಣಿಸುತ
ಚರಿತೆ ಷಟ್ಪದ[ದಿ] ವಿರಚಿಸಿದನು ಧರೆಯರಿಕೆಯೊಳಗೆ ||

ಸರಸಿ ಸದ್ಗುಣವೆರಸಿ ನಗೆಮುಖ
ಬೆರಸಿ ಧರೆಯೊಳು ಕವಿತೆ ಲಕ್ಷ್ಮಿಯ
ನಿರಿಸಿ ಕೀರ್ತಿಯ [ಸಲಿಸಿ] ತತ್ವಾರ್ಥಗಳ ತಾ ಧರಿಸಿ |
ಪರಮ[ಜಿನ] ಸೂಕ್ತದೊಳು ಮನವನು
ನಿರಿಸಿಯಭಿನವ ವಾಣಿಯೆಂದೆನೆ
ಬಿರುದ ಸಲಿಸಿದ ವೇಣುಪುರಿ ಬೊಮ್ಮಣ್ಣಕವಿ ಸುಕವಿ ||

ಆತನುದರ[ದಿನೊಗೆ]ದ ರಾಯ
ಣ್ಣಾತನೊಳು ಶ್ರಾವಕರು ನಿನ್ನಯ
ತಾತ ಫಣಿಸುತ ಚರಿತ ಷಟ್ಪದಿ ವಿರಚಿಸಿದ ನೀನು |
ಆತನಂದದಿ ಸ್ಮರ . . . . . . . .
ಜಾತಕವ ಷಟ್ಪದಿಯೊಳುಸುರೆಂ
ದೋತು ಪೇಳಲು ಪೇಳಿದೆನು ಕೇಳುವುದು ಬುಧಜನರು ||

ರಾಯಣ್ಣ ಕವಿಯ ಈ ಪದ್ಯಗಳಿಂದ ಕೆಲವಾರು ಮುಖ್ಯಸಂಗತಿಗಳು ಸ್ಪಷ್ಟವಾಗಿ ತಿಳಿದು ಬರುತ್ತವೆ. ಬೊಮ್ಮಣ್ಣ ಕವಿಯೆಂದೂ, ನಾಗೇಂದ್ರನೆಂಬ ಜಿನಭಕ್ತನ ಮಗನೆಂದೂ, ಆತ ಫಣಿಸುತ ಚರಿತೆಯೆಂಬ ಷಟ್ಪದಿ ಕಾವ್ಯವನ್ನು ಬರೆದನೆಂದೂ ಪೂರ್ವಪುಣ್ಯದಿಂದ ಅವನು ದೊರೆಗಳ ಪ್ರೀತಿಗೆ ಪಾತ್ರನಾದನೆಂದೂ, ಜಿನಭಕ್ತನೂ ಜಿನಶಾಸ್ತ್ರವಿಶಾರದನೂ ಆಗಿದ್ದನೆಂದೂ ಖಚಿತವಾಗುತ್ತದೆ. ಜೊತೆಗೆ ಈ ಸುಕವಿಯಾದ ಬೊಮ್ಮಣ್ಣನಿಗೆ ಅಭಿನವವಾಣಿಯೆಂಬ ಬಿರುದು ಬಂದಿತ್ತೆಂದೂ ಆತ ವೇಣುಪುರದವನೆಂದೂ, ರಾಯಣ್ಣನೆಂಬ ಕವಿ ಆತನ ಸುತನೆಂದೂ ವಿಶದವಾಗುತ್ತದೆ. ರಾಯಣ್ಣನೂ ಈ ವೇಣುಪುರಿಯೇ ತನ್ನ ಸ್ಥಳವೆಂದು ಹೇಳಿಕೊಂಡಿದ್ದಾನೆ. ಆಚಾರ್ಯ ದೊ. ಲ. ನ. ರವರು ಈ ವೇಣುಪುರಿಯನ್ನು ಬಿದರೂರು ಆಗಿರಬಹುದೆಂದು ಊಹಿಸಿದ್ದಾರೆ. ಆದರೆ ಅವರಿಗೂ ಈ ಬೊಮ್ಮಣ್ಣನ ಕಾವ್ಯ ಉಪಲಬ್ಧವಾಗಿರಲಿಲ್ಲ.

ಈಗ ನನ್ನ ಬಳಿ ಇರುವ ಓಲೆಗರಿ ಗ್ರಂಥಗಳಲ್ಲಿ ಈ ಬೊಮ್ಮಣ್ಣ ಕವಿಯ 'ಫಣಿಸುತ ಚರಿತ ಷಟ್ಪದಿ' ಕಾವ್ಯದ ಎರಡು ಓಲೆ ಪ್ರತಿಗಳಿದ್ದು ಅದರ ನೆರವಿನಿಂದ ಬೊಮ್ಮಣ್ಣನನ್ನು ಕುರಿತು ಇನ್ನೂ ಹೆಚ್ಚು ವಿಷಯ ಸಂಗ್ರಹಿಸಲು ಸಾಧ್ಯವಾಗಿದೆ. ಆ ವಿವರಗಳನ್ನು ಅವಲೋಕಿಸುವುದರಿಂದ ಈ ಕವಿ-ಕಾವ್ಯಕ್ಕೆ ಸಂಬಂಧಿಸಿದ ವಿಷಯಕ್ಕೆ ಒಂದು ಸಮಗ್ರ ಚಿತ್ರವನ್ನೂ ಚೌಕಟ್ಟನ್ನೂ ಕೊಡಲು ಸಹಕಾರಿಯಾಗುತ್ತದೆ. ಬೊಮ್ಮಣ್ಣ ತನ್ನ ಕಾವ್ಯದ ಆರಂಭದಲ್ಲಿ ತನ್ನನ್ನು ಕುರಿತು ಹೇಳಿಕೊಂಡಿರುವ ಪದ್ಯಗಳು ಇಂತಿವೆ :

ಇಳೆಯ ಸಕಲೈಶ್ವರ್ಯ ಲಕ್ಷ್ಮಿಯ
ನಿಳಯಮೆನೆ ಶ್ರೀರಂಗಪಟ್ಟಣ
ಬಳಸಿಪರಿವುದು ಪ್ರಳಯ ಕಾವೇರಿಯು ವಿರಾಜಿಸುತ |

ಪೊಗಳುತಿಹವು ಧ್ಯಾನವನವಾ
ಪೊಳಲ ಬಳಸಿಹುದಲ್ಲಿ ಶಾಲಿಯ
ಕಳವಿಕ್ಷು ಪೂದೋಟ ಸ್ಮರ ಬಲತೀವಿರವವೆಸೆಯೆ || ೧-೬೭

ಆ ನಗರಗಧಿನಾಥನೂತನ
ಮಿಾನಕೇತನದೀನಜನಸುರ
ಧೇನು ಆನತವೈರಿನೃಪಮದಗರ್ವಭಂಜನನು |
ದಾನಗುಣನಿಧಿ ಸತ್ಕಲಾವಿದ
ಭೂನುತನು ಮಹಿಶೂರ ಘನ ಸಂ
ಸ್ಥಾನವನು ಪರಿಪಾಲಿಸುವ ಶ್ರೀ ಕೃಷ್ಣರಾಜೇಂದ್ರ || ೧-೬೮

ಆ ನಗರಿಗುತ್ತರದೊಳೆಸದಿಹು
ದೇನ ಹೇಳುವೆ ವೇಣುಪುರಿರಿಪು
ಮಾನಗರ್ವಮದೇಭಮರ್ದನ ಸಿಂಹನಂತಿಹುದು |
ಸಾನುರಾಗದಿ ಸಕಲ ಭವ್ಯರು
ದಾನಪೂಜೆಯನೆಸಗುತನುದಿನ
ಮಾನಗರ್ವವ ತೆಜಿಸಿ ಸದ್ಧರ್ಮವನೆ ನಂಬಿಹರು || ೧-೬೯

ವಂಶನಗರದಲಿಹುದು ಶ್ರೀಗುರು
ಹಂಸನಾಥನ ನಿಲಯ ಮನ್ಮಥ
ಧ್ವಂಸಿ ಕಾಸೀನಗರವುಗ್ರಾನ್ವಯದಿ ರಾಜಿಸುವ |
ಸಂಸುಖದಿ ವರಸುಪ್ರತಿಷ್ಠ ಪ್ರ
ಶಂಸೆಯಾತ್ಮಜ ಮುಕ್ತಿಯಂಬುಜ
ಹಂಸನಾಥ ಸುಪಾರ್ಶ್ವನಾಥನು ರಕ್ಷಿಸುಗೆ ಜಗವ || ೧-೭೦

ಅನವರತ ಅರಹಂತರಾರಾ
ಧನೆಯನಿಂದ್ರಾನ್ವಯದ ನಾಗೇಂ
ದ್ರನ ತನೂಭವನಾದ ಬೊಮ್ಮಣ್ಣಕವಿಯುಯೆಸಗುತವೆ |
ದಿನಚರಿಯು ಸತ್ಕೀರ್ತನೆಯ ಮಾ
ಳ್ಪನುವರಿದು ಸದ್ಬುಧರು ಪೇಳಿದ
ರ್ವಿನುತ ಭುಜಬಲಿ ವರ್ಧಮಾನ ಕವೀಂದ್ರರೆಸಗಿರುವ || ೧-೭೩

ನಾಗಕುವರನ ಚರಿತೆಯನ್ನು ಸ
ರಾಗದಿಂ ಭಾಮಿನಿಯೊಳುಸುರೆನೆ
ಸಾಗದದು ಮಹಚರಿತೆಯನ್ನಯ ಸ್ವಲ್ಪಮತಿಗೆನಲು |
ಶ್ರೀಗೆನಿಲಯನ ಚಾರು ಚರಣಕೆ
ರಾಗ ರಸದಿಂ ಬಾಗಿ ಪೇಳೆನೆ
ಶ್ರೀಗುರುವೆ ಗತಿಯೆಂದು ಪೇಳಿದೆ ತಿದ್ದಿ ಬಲ್ಲವರು || ೧-೭೪

ವರವಂಶ ನಗರಿಯಲಿ ರಾಜಿಪ
ಪರಮರುಹನಾರಾಧಿಸುತ ವಿಾ
ಚರಿತಮನು ಭಾಮಿನಿಯ ಷಟ್ಪದಿಯಿಂದ ವರ್ಣಿಸಿದೆ|
ಭರಿತವಹ ಸಂಸ್ಕೃತಿಯ ಕಾವ್ಯವು
ನಿರುತ ಜನರಿದನೋದಿ ಬರೆಯಲಿ
ನಿರುತ ಸಾಮ್ರಾಜ್ಯಾದಿ ಭಾಗ್ಯವ ಅರುಹನೀವನು ಸಕಲಜನರಿಗೆ || ೩೨-೧೨೮

ಈ ಪದ್ಯಗಳಿಂದ ಬೊಮ್ಮಣ್ಣನ ವಿಚಾರದಲ್ಲಿ ಮೊದಲು ತಿಳಿದಿದ್ದ ಕೆಲವು ವಿವರಗಳು ಸರಿಯೆಂಬುದನ್ನು ಸ್ಪಷ್ಟವಾಗಿ ತಿಳಿಯಬಹುದು. ಇಂದ್ರವಂಶಕ್ಕೆ ಸೇರಿದ ನಾಗೇಂದ್ರನ ಮಗ ಬೊಮ್ಮಣ್ಣ. ಇಂದ್ರವಂಶವೆಂದರೆ ಪುರೋಹಿತ ಮನೆತನವೆಂದು ತೋರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೈನರು ಪುರೋಹಿತರನ್ನು ಇಂದ್ರರೆಂದು ಕರೆಯುವ ವಾಡಿಕೆ ಇಂದಿಗೂ ಇದೆ. ಶ್ರೀ ಕೃಷ್ಣರಾಜೇಂದ್ರನು ಪಾಲಿಸುವ ಶ್ರೀರಂಗಪಟ್ಟಣದ ಉತ್ತರ ದಿಕ್ಕಿಗೆ ಇರುವ ವರವೇಣುಪುರಿಯಲ್ಲಿ ಪಾರ್ಶ್ವನಾಥ ತೀರ್ಥಂಕರ ಬಸದಿಯಿದ್ದು ಅಲ್ಲಿನ ಆರಾಧನೆಯನ್ನು ನಡ ಸುವ 'ಇಂದ್ರಾನ್ವಯದ ನಾಗೇಂದ್ರನ ತನೂಭವ' ನೆಂಬುದರಿಂದಲೂ ಈ ಅರ್ಥವೇ ನಿಚ್ಚಳ ವಾಗುತ್ತದೆ. ಇನ್ನು ಕವಿಯ ಸ್ಥಳವಾದ ವೇಣುಪುರಿಯ ವಿಚಾರದಲ್ಲಿ ಒಂದೆರಡು ಮಾತು ಬರೆಯಬಹುದು. ವೇಣುಪುರಿಯನ್ನು ವಂಶನಗರಿಯೆಂದೂ ಕರೆದಿದ್ದಾನೆ. ವಂಶನಗರಿ ಯೆಂಬುದು ವೇಣುಪುರಿ ಪದದ ಪರ್ಯಾಯಪದ, ಸಮಾನಾರ್ಥಕ ಪದ. ಎರಡೂ ಸಂಸ್ಕೃತ ಪದಗಳು. ಇದು ಬಿ ದ ರೂ ರು (ಕನ್ನಡಪದ) ಇರಬೇಕೆಂದು ಈ ಹಿಂದೆಯೇ ಊಹಿ ಸಿದೆ. ಆದರೆ ಬಿದರೂರು ಎಂಬ ಹೆಸರಿನ ಸ್ಥಳ ಶ್ರೀರಂಗಪಟ್ಟಣದ ಉತ್ತರಕ್ಕೆ ಯಾವುದೂ ಇರು ವುದು ಕಾಣುವುದಿಲ್ಲ. ಬಿದರೂರು ಎಂಬ ಹೆಸರು ಹಲವು ಮಾರ್ಪಾಡಿಗೆ ಒಳಗಾಗಿದ್ದು ಅದರ ವ್ಯತ್ಯಾಸಹೊಂದಿದ ರೂಪದಲ್ಲಿರುವುದೂ ಸಾಧ್ಯವಿದೆ. ಈ ನಿಟ್ಟಿನಿಂದ ಹುಡುಕಿದರೆ ತುಮಕೂರು ಬಳಿ ಬಿದರೆ ಎಂಬ ಗ್ರಾಮವಿದೆ. ವೇಣುಪುರ (ವಂಶನಗರಿ) ವೆಂಬುದು ಬಿದರೂರು ಆಗಿ, ಅದು ಈಗ ಬಿದರೆ ಆಗಿದೆ. ಬಿದರೆಯಲ್ಲಿ ಪಾರ್ಶ್ವನಾಥಸ್ವಾಮಿ ಬಸದಿ ಇಂದಿಗೂ ಇದ್ದು ಅಲ್ಲಿ ನಿತ್ಯ ಪೂಜೆ ನಡೆಯುತ್ತದೆ. ಅಲ್ಲದೆ ಒಂದು ಓಲೆಗರಿ ಪ್ರತಿಯಲ್ಲಿ "ಬಿದುರೆ ಸುಪಾರಿಶ್ವನಾಥಸ್ವಾಮಿ ಶ್ರೀಪಾದದ್ವಯಮನಾರಾಧಿಸುವ ನಾಗಪ್ಪನ ಕುಮಾರ ಬೊಮ್ಮಣ್ಣನ ಕವಿ ನಾಗಕುಮಾರನ ಪುಣ್ಯ . . . . ಭಾಮಿನಿ ಷಟ್ಪದಿಯಲ್ಲಿ ಸಂಕ್ಷೇಪ ಮಾರ್ಗದಿ ವಿರಚಿಸಿದೆ ಭದ್ರಂಭೂಯಾತ್" ಎಂದಿದೆ. ಇದರಿಂದ ಬೊಮ್ಮಣ್ಣನ ತಂದೆ ನಾಗೇಂದ್ರನನ್ನು ನಾಗಪ್ಪ ಎಂದೂ ಕರೆಯುತ್ತಿದ್ದುದೂ ಬಿದ(ದು)ರೆಯೇ ವೇಣುಪುರಿಯೆಂಬುದೂ ನಿಸ್ಸಂದೇಹವಾಗಿ ತಿಳಿಯುತ್ತದೆ. ಕವಿಯ ಕಾಲವೂ ಅನುಮಾನಕ್ಕೆ ಅವಕಾಶವಿಲ್ಲದಂತೆ ಸ್ಪಷ್ಟವಾಗಿದೆ, ೧೮ನೆಯ ಶತಮಾನದ ನಡುವಿನ ಕಾಲ: "ಸ್ಥಿರ ಪ್ರಮೋದುತಾದಿ ಸಂವ| ತ್ಸರದ ವರ ಮಾರ್ಗಶಿರ ಮಾಸದ| ಪರಶುದ್ಧ ಪಂಚಮಿಗೆ ಕೃತಿ ಸಂಪೂರ್ಣ ಮಂಗಲವು" ಎಂದಿದೆ. (೩೨-೧೨೫).

ಬೊಮ್ಮಣ್ಣಕವಿ ಪ್ರಾರಂಭದಲ್ಲಿ ಹಿಂದಿನ ಕವಿಗಳ ಕಾವ್ಯಗಳನ್ನು ಪ್ರತಿ ಎತ್ತಿಕೊಡುತ್ತಿದ್ದ ನೆಂದು ಆತ ನಯಸೇನನ ಧರ್ಮಾಮೃತ ಪ್ರತಿಮಾಡಿಕೊಟ್ಟಿರುವುದರಿಂದ ಗೊತ್ತಾಗುತ್ತದೆ. ಕನ್ನಡದ ಇತರ ಕೆಲವು ಕವಿಗಳೂ ಹೀಗೆ ಮಾಡಿದ್ದಾರೆ. ಬೊಮ್ಮಣ್ಣ ಕೇವಲ ಶುಷ್ಕ ಸಂಪ್ರತಿ ಕಾರನಲ್ಲ, ಸ್ವಯಂ ಕವಿಯಾಗಿ ಮೆರೆದವನು. ಬಸದಿಯ ಅರ್ಚಕನಾಗಿ ಅರಹಂತನ ಆರಾಧನೆ ಯಲ್ಲಿ ಕರ್ಮಯೋಗಿಯಾಗಿ ಕಾಲಕಳೆಯುವುದರ ಜೊತೆಗೆ ಬೊಮ್ಮಣ್ಣ ಕವಿಯೂ ಆಗಿ ಕಾವ್ಯ

ರಚನೆಗೈದು ಕಾವ್ಯಯೋಗವನ್ನೂ ನಡಸಿದ್ದಾನೆ. ನಾಗಕುಮಾರ ಕಾವ್ಯವನ್ನಲ್ಲದೆ ಬೇರೆ ಯಾವ ಕಾವ್ಯವನ್ನು ಬರೆದಿರುವನೋ, ಧರ್ಮಾಮೃತವನ್ನಲ್ಲದೆ ಬೇರೆ ಯಾರ ಕಾವ್ಯವನ್ನು ಪ್ರತಿಮಾಡಿದ್ದನೋ ತಿಳಿಯದು. ಆದರೆ ಕಾವ್ಯದ ಪಕ್ವವಾದ ಸುಲಲಿತ ಶೈಲಿಯನ್ನು ನೋಡಿದರೆ ಬೊಮ್ಮಣ್ಣ ಸಾಕಷ್ಟು ಕಾವ್ಯರಚನೆಯಲ್ಲಿ ಪಳಗಿರುವುದು ವ್ಯಕ್ತವಾಗುತ್ತದೆ. ಹಿಂದಿನ ಪಂಪ ಪೊನ್ನ ರನ್ನ ಜನ್ನಾದಿ ಕನ್ನಡ ಕವಿಗಳನ್ನು ಸ್ಮರಿಸಿದ್ದಾನೆ. ಬೊಮ್ಮಣ್ಣ ಕವಿಯ ಈ ಕಾವ್ಯವನ್ನು ಅವನ ತರುವಾಯದ ಕವಿಗಳಲ್ಲಿ ಯಾರು ಹೆಸರಿಸಿರುವರೊ ತಿಳಿಯದು. ಆದರೂ ಆತನ ಕಾವ್ಯ ಸಾಕಷ್ಟು ಜನಪ್ರಿಯವಾಗಿದ್ದಂತೆ ತೋರುತ್ತದೆ. ಕಾವ್ಯಾಭ್ಯಾಸಿಗಳಾದ ಕನ್ನಡಿಗರು ಈ ಕಾವ್ಯದ ಪ್ರತಿಗಳನ್ನು ಮಾಡಿಸಿಕೊಂಡು ತರಿಸಿಕೊಂಡಿದ್ದಾರೆ. ನನ್ನಲ್ಲಿರುವ ಪ್ರತಿಗಳಲ್ಲಿ ಒಂದು ಇಂಥ ಪ್ರತಿಯಿದೆ. ಅದರ ಅಂತ್ಯದಲ್ಲಿ ಈ ವಿವರಣೆಯಿದೆ: "ವಿಳಂಬಿನಾಮ ಸಂವತ್ಸರದ ಪುಷ್ಯಶುದ್ಧ ೧೨ ಭಾರ್ಗವಾರ ಸಂಕಿಘಟ್ಟದ ಶ್ರೀ ವರ್ಧಮಾನಸ್ವಾಮಿ ಚೈತ್ಯಾಲಯದಲ್ಲಿ ಶ್ರೀ ಸ್ವಾಮಿಯವರ ಪಾದಾರವಿಂದ ದ್ವಂದ್ವಾರಾಧಕನಾದ ಅನಂತಪ್ಪನ ಕುಮಾರ ಬ್ರಹ್ಮೈಯನು ಮಹಿಶೂರು ಆಣಿಕಾರು ಅಣ್ಣಯ್ಯನವರಿಗೆ ಜ್ಞಾನಾವರಣೀಯ ಕರ್ಮೋಪಶಮನಾರ್ಥವಾಗಿ ಬರೆದುಕೊಟ್ಟಂಥಾ ನಾಗಕುಮಾರ ಷಟ್ಪದಿ ಪುಸ್ತಕಕ್ಕೆ ಮಂಗಲಂ ಭಯಾದ್ವರ್ಧತಾಂ ಜಿನಶಾಸನಂ . . . ." ಎಂಬ ವಾಕ್ಯಗಳಿವೆ. ಅಂದರೆ ೧೭೫೦ನೆಯ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷದಲ್ಲಿ, ಅಂದರೆ ಕ್ರಿ. ಶ. ೧೮೨೮ರಲ್ಲಿ ಇದರ ಪ್ರತಿ ಎತ್ತಿದೆ.

ಈ ಕಾವ್ಯದಲ್ಲಿ ೩೨ ಸಂಧಿಗಳಿದ್ದು ಒಟ್ಟು ೨೭೮೮ ಪದ್ಯಗಳಿವೆ. ಬೊಮ್ಮಣ್ಣಕವಿಯ ಫಣಿಕುಮಾರ(ಸುತ)ವೆಂಬ ಕಾವ್ಯ ಈಗಾಗಲೇ ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ನಾಗಕುಮಾರ ಚರಿತೆಯೆಂಬ ಹೆಸರಿನಿಂದ ಚಿರಪರಿಚಿತವಾಗಿರುವ ವಸ್ತುವಿಗೆ ಸಂಬಂಧಿಸಿದ ಕಾವ್ಯ. ನಾಗಕುಮಾರನನ್ನು ಫಣಿಕುಮಾರನೆಂದೂ, ಫಣಿಸುತನೆಂದೂ, ಸುಖಿನಾಗದತ್ತನೆಂದೂ, ವಿಕ್ರಮಂಧರನೆಂದೂ ವಿವಿಧ ಹೆಸರುಗಳಿಂದ ಕರೆಯುವರು. ಇಪ್ಪತ್ತೆರಡನೆಯ ತೀರ್ಥಂಕರರಾದ ನೇಮಿನಾಥ (ನೇಮೀಶ್ವರ) ತೀರ್ಥಂಕರರ ತೀರ್ಥಕಾಲದಲ್ಲಿ ಪ್ರಸಿದ್ಧವೀರನಾಗಿ ಬಾಳಿದವನು ಈ ನಾಗಕುಮಾರ. ಈ ಪುಣ್ಯಪುರುಷನ ಚರಿತೆ ಜೈನಶ್ರಾವಕರಿಗೂ, ಜೈನಕವಿಗಳಿಗೂ ಅತ್ಯಂತ ಪ್ರಿಯವಾದುದೆಂದು ತೋರುತ್ತದೆ. ಇದೇ ವಿಷಯವನ್ನು ಕುರಿತು ಬರೆದ ಕೆಲವಾರು ಕಾವ್ಯಗಳು ಕನ್ನಡ, ಸಂಸ್ಕೃತ, ಪ್ರಾಕೃತಗಳಲ್ಲಿ ರಚಿತವಾಗಿವೆ. ಕನ್ನಡದಲ್ಲಿ ಕಲ್ಯಾಣಕೀರ್ತಿ (ಷಟ್ಪದಿ), ವಿಜಯಣ್ಣ (ಷಟ್ಪದಿ), ಚಂದ್ರಸಾಗರವರ್ಣಿ (ಷಟ್ಪದಿ), ಬಾಹುಬಲಿ (ಸಾಂಗತ್ಯ) ಮುಂತಾದವರೂ, ಸಂಸ್ಕೃತದಲ್ಲಿ ಮಲ್ಲಿಷೇಣ ಕವಿಯೂ ನಾಗಕುಮಾರ ಕಾವ್ಯಗಳನ್ನು ಬರೆದಿದ್ದಾರೆ. ಕನ್ನಡ ಕಾವ್ಯಗಳಲ್ಲಿ ಕಲ್ಯಾಣಕೀರ್ತಿ ಹಾಗೂ ವಿಜಯಣ್ಣಕೃತ ಕಾವ್ಯಗಳು ಇನ್ನೂ ಅಪ್ರಕಟಿತ ಕಾವ್ಯಗಳು. ಮೂಡಬಿದರೆಯ ಶ್ರುತಭಂಡಾರದಲ್ಲಿ ಅವರ ಕಾವ್ಯಗಳ ಓಲೆಗರಿ ಗ್ರಂಥಗಳಿವೆ. ಇವೆಲ್ಲಕ್ಕೂ ಪ್ರಾಚೀನ ಕಾವ್ಯವೆಂದರೆ ಅಪಭ್ರಂಶ ಭಾಷೆಯಲ್ಲಿ ರಚಿತವಾಗಿರುವ ಮಹಾಕವಿ ಪುಷ್ಪದಂತನ 'ಣಾಯಕುಮಾರ ಚರಿಉ' ಎಂಬ ಕಾವ್ಯ. ಪುಷ್ಪದಂತನ ಕಾಲ ಕ್ರಿ. ಶ. ಹತ್ತನೆಯ ಶತಮಾನ, ಪಂಪನ ರನ್ನಪೊನ್ನರ ಕಾಲ. ಆದುದರಿಂದ ಪುಷ್ಪದಂತನ ಕಾವ್ಯದ ಹಿನ್ನೆಲೆಯಲ್ಲಿ ಕನ್ನಡ ನಾಗಕುಮಾರ ಕಾವ್ಯಗಳ ವಿವೇಚನೆ ಹೆಚ್ಚು ಫಲಪ್ರದವಾಗಿರುತ್ತದೆ. ಬೊಮ್ಮಣ್ಣಕವಿಕೃತ ಕಾವ್ಯವನ್ನೂ ಆ ದೃಷ್ಟಿಯಿಂದ ವಿಮರ್ಶಿಸುವುದು ಸಾಧುವಾದ ಹಾಗೂ ಸರಿಯಾದ ಅಭ್ಯಾಸವಾದೀತು.

---

# ಬಸವಣ್ಣನವರ ವಚನಗಳಲ್ಲಿ ಕಾವ್ಯಪ್ರಜ್ಞೆ

ಆರ್. ಸಿ. ಕುಲಕರ್ಣಿ

ಕನ್ನಡದಲ್ಲಿ ವಿಮರ್ಶೆಯ ಪರಂಪರೆಯೊಂದು ಬೆಳೆದು ಬಾರದೇ ಇದ್ದದ್ದು ಕನ್ನಡ ಕಾವ್ಯೇತಿಹಾಸದ ಮೇಲೆ ಸಂದಿಗ್ಧತೆಯನ್ನು ತಂದೊಡ್ಡಿದೆ. ಕವಿ, ಯುಗಧರ್ಮಕ್ಕನುಸಾರವಾದ ಸಂವೇದನೆಯನ್ನು ಸ್ವೀಕರಿಸಿದರೂ ಅದು ಸಾಹಿತ್ಯ ಪ್ರಜ್ಞೆಯಿಂದ ಸುರಕ್ಷಿತವಾಗಿರಬೇಕಾಗುತ್ತದೆ. ಹೀಗೆ ಅಭಿಜಾತಕಾವ್ಯ ಪರಂಪರೆಯೊಂದನ್ನು ನಿರ್ಮಿಸುವ ಮಹತ್ವದ ಸನ್ನಿವೇಶದಲ್ಲಿ, ಶ್ರೇಷ್ಠ ಕಾವ್ಯದ ಕೆಲವೊಂದು ಸಾಮಾನ್ಯ ಅಂಶಗಳನ್ನಾದರೂ ಪತ್ತೆಹಚ್ಚಿ ಅದರ ಪ್ರಾಯೋಗಿಕ ವಿಮರ್ಶೆಯೊಂದು ಬೆಳೆದು ಬಂದಿದ್ದರೆ ಕನ್ನಡದಲ್ಲಿ ಕಾವ್ಯಕರ್ಮದ ನಿಶ್ಚಿತ ಬೆಳವಣಿಗೆಯೊಂದನ್ನು ಕಾಣಬಹುದಿತ್ತು. ಅದಕ್ಕಾಗಿಯೋ ಏನೋ ಪಂಪ-ರನ್ನರ ಕಾವ್ಯದ ಹಲವೊಂದು ಸಾಧಾರಣ ಅಂಶಗಳು ಕೂಡ ಈಗ ನಮಗೆ ಸೋಜಿಗ ಹಾಗೂ ವಿಶಿಷ್ಟ ರಸಾನುಭವವನ್ನು ಕೊಡುತ್ತಿವೆ. ನಿರ್ಮಾಣದ ಭರದಲ್ಲಿ ಸಂಯೋಜನೆಯನ್ನು ಮರೆತದ್ದೇ ಶ್ರೇಷ್ಠ-ಕನಿಷ್ಟ. ಎರಡೂ ಅಂಶಗಳು ಸಮಸಮವಾಗೇ ಇರುವುದನ್ನು ನಮ್ಮ ಕಾವ್ಯಗಳಲ್ಲಿ ಕಾಣಬಹುದಾಗಿದೆ. ಹಾಗಾಗಿ ಆಧುನಿಕ ವಿಮರ್ಶೆ ಆ ಕಾವ್ಯಗಳ ಬಗ್ಗೆ ಕೆಲವೊಂದು ವಿನಾಯಿತಿಗಳನ್ನು ಇಟ್ಟುಕೊಳ್ಳಬೇಕಾಗಿದೆ. ನಿಷ್ಠುರತೆಗಿಂತ ಸಹಾನುಭೂತಿಯನ್ನು ಹೆಚ್ಚು ಬಳಸಬೇಕಾಗಿದೆ. ಇಂಥ ತೊಡಕು ಮಹಾ ಕಾವ್ಯದ ಕುರಿತೇ ಇರಬೇಕಾದರೆ ಇನ್ನು ಬಸವಣ್ಣನವರ ವಚನಗಳ ಕುರಿತು ಏನಾಗಬೇಡ? ವಚನವೆಂಬುದು ಅವರ ಸಮಗ್ರ ಕೃತಿಯ ಸ್ವರೂಪವೇ, ಇಲ್ಲವೇ, ವಸ್ತು-ತಂತ್ರ-ಶೈಲಿ ಇವುಗಳ ವ್ಯತ್ಯಾಸಗಳಿಂದ ತೇಲಿಬಂದ ಒಂದು ರೂಪವೇ-ಈ ಎಲ್ಲ ಸಂದೇಹಗಳು ಈ ಕಾಲದಲ್ಲಿ ಮಾತ್ರ ಹುಟ್ಟಿಕೊಳ್ಳಬಹುದಾದವೋ ಎಂದೆನಿಸುತ್ತದೆ. ಬಸವಣ್ಣನವರು ವಚನಗಳನ್ನು ಬರೆಯುವಲ್ಲಿನ ಪ್ರಧಾನ ಉದ್ದೇಶವನ್ನು ಪತ್ತೆಹಚ್ಚದಿದ್ದಲ್ಲಿ ವಿಮರ್ಶೆಯ ಗೊಂದಲವೇ ಉಂಟಾಗುತ್ತದೆ. ವಿಷಯದಲ್ಲಿ ವೈವಿಧ್ಯ ಇರದೆ ಒಂದೇ ವಿಷಯದ ಹಲವೊಂದು ನಿರೂಪಣೆಗಳಿಂದ ಕೂಡಿದ ವಚನಗಳೇ ವಿಪುಲವಾದದ್ದು ಕಂಡು ಬರುತ್ತದೆ. ಮುಖ್ಯವಾಗಿ ಒಪ್ಪಿಕೊಂಡ ಧರ್ಮ (ಕಾವ್ಯಧರ್ಮ) ವೊಂದನ್ನು ಸ್ಥಾಯಿಯಾಗಿಟ್ಟು, ಅನುಭವಜನ್ಯವಾದ ರೂಪಕ ಪ್ರತಿಮೆಗಳಲ್ಲಿ ಮಾತ್ರ ವೈವಿಧ್ಯವನ್ನು ಕಂಡುಕೊಂಡಿರುವುದೇ (ವಚನಗಳ ಸಮಗ್ರ) ಅಭ್ಯಾಸದಲ್ಲಿ ತೇಲಿಬರುವ ಅಂಶವಾಗಿದೆ.

ವಚನಕಾರರ ವರ್ತಮಾನದ ಆಗು-ಹೋಗುಗಳ ಹಿನ್ನೆಲೆಯಲ್ಲಿ ಗತಕಾಲದ ಗುಣರೂಪಗಳ ಪರಿಣಾಮವೇನು ಎಂಬುದರ ಇತಿಹಾಸ ಬಲು ಮೋಜಿನದಾಗಿದೆ. ಬದುಕಿನ ಎಲ್ಲ ಪ್ರಕಾರಗಳಲ್ಲೂ ಬದಲಾವಣೆ ಸಿಡಿಮದ್ದಿನಂತೆ ಹಾರಲು ಕಾದು ಕುಳಿತ ಕಾಲವದು. ಗತಾನುಗತವಾದ ಪರಂಪರೆ ಪ್ರಜ್ಞಾಶೂನ್ಯವಾದ ಯುಗಧರ್ಮವನ್ನೇ ನಿರ್ಮಾಣ ಮಾಡಿತ್ತು. ಮನುಷ್ಯನ ಹಂತಹಂತಗಳ ಭಾವನೆ, ವಿಚಾರಗಳಿಗೆ, ರೀತಿನೀತಿಗಳಿಗೆ ಸಹಜವಾದ ಯಾವುದೇ ಮಾಧ್ಯಮವಿರದೆ, ಸುಮ್ಮನೇ

ಕೈಯಿಂದ ಕೈಗೆ ವರ್ಗಾಯಿಸುವ ಕುರುಡು ಮಧ್ಯಮವೊಂದು ಆಗಿನ ಸಮಾಜದಲ್ಲಿ ನೆಲೆನಿಂತಿತ್ತು. ಉಳಿಸಿಕೊಂಡುಬರಬೇಕಾದ ವೈಯಕ್ತಿಕ ಮೌಲ್ಯಗಳಾವವು, ಬೆಳೆಸಿಕೊಂಡು ಹೋಗಬೇಕಾದ ಸಾರ್ವತ್ರಿಕ ಅಂಶಗಳಾವುವು, ಈ ಯಾವುದರ ಸುಳಿವಿಲ್ಲದೆ ಪುರುಷಾರ್ಥಗಳು ತಮ್ಮ ವ್ಯಾಪಕ ಅರ್ಥದಲ್ಲಿ ನಡೆಯದ ನಾಣ್ಯಗಳಾಗಿಹೋಗಿದ್ದವು. ಮಾನವ ಮತ್ತು ಅವನ ಅಸ್ತಿತ್ವ ಈ ಸ್ಥಿತಿಯಲ್ಲಿದ್ದರೆ ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳ ರೂಪವೇ ಬೇರೆಯಾಗಿತ್ತು. ಜಾತೀಯ ವಿಷಮತೆ, ರಾಜಕೀಯ ಹಿಡಿತಗಳು ಮನುಷ್ಯನ ವೈಯಕ್ತಿಕತೆಯನ್ನೂ ವೈಚಾರಿಕ ವೇದಿಕೆಯನ್ನೂ ಎಂದೋ ವಶಪಡಿಸಿಕೊಂಡು ಗಡೀಪಾರು ಮಾಡಿಬಿಟ್ಟಿದ್ದವು. ವಾತಾವರಣದ ಸಮಗ್ರ ಸ್ವರೂಪದ ಅರಿವಾಗುವುದೂ ಆಗ ಸಾಹಸದ ಮಾತೇ ಆಗಿತ್ತು. ಮೂಲಭೂತ ಎನ್ನಬಹುದಾದ ಮಾನವನ ಕೆಲವೊಂದು ಪ್ರವೃತ್ತಿಗಳು ಮನೋಧರ್ಮಕ್ಕನುಸಾರವಾಗಿ ಪ್ರದರ್ಶನವಾಗುವುದಂತೂ ದೂರವಿರಲಿ-ಅವುಗಳ ಪ್ರತ್ಯೇಕ ಅಸ್ತಿತ್ವದ ಅರಿವನ್ನು ಜೀವಮಾನದಲ್ಲೇ ಒಂದು ಸಾರಿಯಾದರೂ ಅನುಭವಿಸುತ್ತಿದ್ದರೋ ಇಲ್ಲವೋ ಎನ್ನುವಷ್ಟು ದೂರ ಅವರ ಬದುಕು ತಲಪಿತ್ತು. ಜೀವನವೇ ಹೀಗೆ ನಕಾರಾತ್ಮಕವಾದ ಸಂವೇದನೆಗಳ ಶೂನ್ಯತೆಯಲ್ಲಿ ಬೆಳೆದು ಬರುತ್ತಿದ್ದಾಗ ಇನ್ನೂ ಅನುಭವಗಳ ವೈಯಕ್ತಿಕ ವಿಶ್ಲೇಷಣೆ, ಬದುಕಿನ ವಾಸ್ತವ ಸ್ಥಿತಿಗಳಲ್ಲಿ ದಿನದಿನದ ಬದುಕಿನಲ್ಲಿ ಮೂಡಿಬರುವುದು ಅಸಾಧ್ಯದ ಮಾತೇ ಆಗಿತ್ತು. ವ್ಯಕ್ತಿಪ್ರತಿಭೆ ಸ್ವತಂತ್ರವಾಗಿ ಇವುಗಳನ್ನೆಲ್ಲಾ ಹೀರಿ ಪರಿಣಾಮ ಸ್ವರೂಪದ ರಚನಾತ್ಮಕ ಕಾರ್ಯ ಮಾಡಬಹುದಿತ್ತೇನೋ? ಆದರೆ ವಿಕೃತ ಹಾಗು ವೈದೃಶ್ಯಗಳ ಅರ್ಥದಲ್ಲಿ ಮಾತ್ರ ಮುಂದುವರಿಯುತ್ತಿದ್ದ ಧಾರ್ಮಿಕ ರಂಗವೊಂದೇ ಇಂಥ ಪುನರುತ್ಥಾನದ ವೇದಿಕೆಯಾದ್ದರಿಂದ ನಿರೀಕ್ಷಿತ ಪರಿಣಾಮ ಮೂಡುವುದು ಸಾಧ್ಯವೇ ಇರಲಿಲ್ಲ. ಕರ್ನಾಟಕದ ಹನ್ನೆರಡನೆಯ ಶತಮಾನದ ಹಿನ್ನೆಲೆಯನ್ನು ಸಂವೇದನೆ ಮತ್ತು ಅದರ ವಿವಿಧ ಅಭಿವ್ಯಕ್ತಿಗಳ ಹಿನ್ನೆಲೆಯಲ್ಲಿ ಪರೀಕ್ಷಿಸಿದಾಗ ವಚನಕಾರರ ಉದ್ದೇಶ ಹಾಗೂ ಕಾರ್ಯರೀತಿಗಳನ್ನು ಅರ್ಥಮಾಡಿಕೊಳ್ಳಬಹುದು. ಸಾಮಾಜಿಕ ಪರಿಸರದಲ್ಲಿ ಊಹಿಸಲಾರದಷ್ಟು ಅಲ್ಪತ್ವವನ್ನು ಪಡೆದುಕೊಂಡಿದ್ದ ಸಾಮಾನ್ಯಮಾನವ ಅರಿವಿನ ಎಲ್ಲ ಬಾಗಿಲುಗಳನ್ನು ಬಡಿದ ವಚನಕಾರರ ಪ್ರಭಾವಕ್ಕೆ ಒಳಗಾಗಿ ಬಿಟ್ಟ. ಉದ್ದೇಶರಹಿತವಾದ ಯಾವುದರಲ್ಲೋ ಹರಡಿದ್ದ ಭಾವನೆ-ವಿಚಾರಗಳನ್ನು ಅವನು ಯೋಜಿತ ಹಾಗೂ ನೇಮಿತವಾದ ಕೇತ್ರದಲ್ಲಿ ತಂದುಕೊಂಡ. ಇದರ ಸಫಲ ಪರಿಣಾಮವೇ ಸಹಜ ಭಾಷೆಯ ಉಪಯೋಗ. ಹೀಗೆ ವಚನಕಾರರು ಮನುಷ್ಯನ ಅಲೌಕಿಕ ಕರ್ತೃತ್ವಶಕ್ತಿಯನ್ನು ಸಫಲವಾಗಿ ತೋರಿಸಿಕೊಟ್ಟರು. ಪರಿವರ್ತನೆಯ ಸ್ವರೂಪವನ್ನು ತಾಳುತ್ತಿದ್ದ ನಿರ್ಮಾಣಕಾರ್ಯ ಸಂಪ್ರದಾಯವನ್ನು ಸ್ಥಾಪಿಸುವ ಭರದಲ್ಲಿತ್ತು. ವಚನಕಾರರು ಮೊಟ್ಟಮೊದಲಿಗೆ ಈ ಜಾಗೃತಪ್ರಜ್ಞೆಯನ್ನು ಸುರಕ್ಷಿತವಾಗಿಡಲು ಪ್ರಾಸಂಗಿಕ ಅನುಭವಗಳ ಅಭಿವ್ಯಕ್ತಿಗೆ ವಚನಗಳನ್ನು ಉಪಯೋಗಿಸಿಕೊಂಡರು. ಬಸವಣ್ಣನವರ ವಚನಗಳ ನಿರ್ಮಾಣ ಇಂಥ ಆವೇಶಪೂರ್ಣ ಸನ್ನಿವೇಶದಲ್ಲಾಗಿವೆ. ಹಾಗಾಗಿ ಸಹಜವಾಗಿಯೇ ವಿಮರ್ಶೆಯ ದೃಷ್ಟಿಯಿಂದ ಏರುಪೇರುಗಳನ್ನು ಅವುಗಳಲ್ಲಿ ಕಾಣಬಹುದಾಗಿದೆ.

ಬಸವಣ್ಣನವರ ಮೂಲ ಪ್ರಜ್ಞೆಯಲ್ಲೇ ಕಾವ್ಯಧರ್ಮ ಬೆರೆತುಕೊಂಡದ್ದರಿಂದ ಅಭಿವ್ಯಕ್ತಿಯಲ್ಲಿ ಉನ್ನತ ಕಾವ್ಯಪ್ರಜ್ಞೆ ಕಂಡು ಬರುತ್ತದೆ. ಬಸವಣ್ಣನವರ ವಚನಗಳ ಶ್ರೇಷ್ಠತೆಯನ್ನು ಗುರುತಿಸುವ ಮಾನದಂಡವು ಕಾವ್ಯಗುಣವಾಗಬೇಕೋ ಅಥವಾ ಅವರ ಮತೀಯ ತತ್ವವಾಗಬೇಕೋ ಎಂಬುದರ ನಿರ್ದಿಷ್ಟ ಉತ್ತರದಿಂದ ವಚನಗಳ ಮೌಲ್ಯಮಾಪನ ಮಾಡಬಹುದಾಗಿದೆ. ವಚನಗಳ ಮೌಲಿಕ ನಿರ್ಧಾರ ಕೇವಲ ಅಂಗಸೌಂದರ್ಯದ ಪಾಲುಗಳಿಂದ ಗುರುತಿಸದೆ ಅಖಂಡ ವಚನದ ಭಾವ-ಭಾಷೆ, ಲಕ್ಷ್ಯ ಹಾಗೂ ನಿರ್ಧಾರಗಳ ಸಮಗ್ರತೆಯಿಂದಾಗಬೇಕು. ಆಗ ಮಾತ್ರ

ಸಮಗ್ರ ಕನ್ನಡ ಕಾವ್ಯದ ಪರಂಪರೆ ಹಾಗೂ ರೂಪಾಂತರದ ಇತಿಹಾಸವನ್ನು ಪಡೆಯಲು ಸಾಧ್ಯವಾಗುತ್ತದೆ. ಬಸವಣ್ಣನವರ ವಚನಗಳ ಉಗ್ಗಮ ಇಂಥದ್ದೆಂದು ನಿರ್ದಿಷ್ಟವಾಗಿ ಹೇಳ ಬರುವಂತಿಲ್ಲ. ಅಭ್ಯಾಸದ ದೃಷ್ಟಿಯಿಂದ ಚದುರಿ ಹೋದ ಅವರ ವಚನಗಳ ಹರಹು ಉದ್ದೇಶ ದಲ್ಲಿ ಮಾತ್ರ ತನ್ನ ಏಕ ರೂಪತೆಯನ್ನು ಪಡೆದುಕೊಳ್ಳುತ್ತದೆ. ಅನುಭವದಿಂದ ಬಿಡಿಸಿಕೊಳ್ಳ ಲಾಗದ ಅನುಭಾವವೊಂದು ಬಸವಣ್ಣನವರ ವಚನಗಳ ಕೊರಳದನಿಯಾಗಿದೆ. ಇಡೀ ವಚನಕಾರ ರಲ್ಲೇ ಇವರೊಬ್ಬರಿಗೆ ಮಾತ್ರ ಅದು ಸಾಧ್ಯವಾಗಿದೆ. ಅಕ್ಕಮಹದೇವಿಯ ವಚನಗಳಲ್ಲಿ ಇದು ಕಂಡು ಬರುತ್ತಿದೆಯೆಂದೆನಿಸಿದರೂ ಆ ಗುಣ ಅವಳ ಕೆಲ ಶ್ರೇಷ್ಠ ವಚನಗಳಲ್ಲಿ ಮಾತ್ರ ವ್ಯಕ್ತ ನಾಗುವುದರಿಂದ ಅದು ಅಕ್ಕನ ಸಮಗ್ರ ವಚನಗಳಿಗೆ ಅನ್ವಯವಾಗುವುದಿಲ್ಲ. ಪ್ರಭುದೇವರ ವಚನ ಗಳಾದರೊ ನಿರಾಕಾರಕ್ಕೆ ಶಾಬ್ದಿಕ ಚೌಕಟ್ಟನ್ನು ನಿರ್ಮಿಸುವಲ್ಲಿ ತೊಡಗಿವೆ. ಅವರ ಶಬ್ದಗಳ ವರ್ಣ ಹಾಗೂ ರೂಪಶಕ್ತಿ ಅಳಿಸಲಾರದ ಬಯಲ ಮೂರ್ತಿಯನ್ನು ಸೃಷ್ಟಿಸಬಲ್ಲದು. ಇದಕ್ಕೆಲ್ಲಾ ಒಂದೇ ಕಾರಣ, ಅವರ ಆತ್ಮನಿಷ್ಠ ಜೀವನ ಸಂವೇದನೆ ಹಾಗೂ ಭಾಷಾ ವ್ಯಕ್ತಿಯ ವ್ಯತ್ಯಾಸವನ್ನೇ ಕಾಣದ್ದು. ಮನುಷ್ಯ ಸಂವೇದನೆಯ ಸಮಗ್ರವನ್ನು ಭಾಷೆಯಲ್ಲಿ ನೈತಾಳಿಸುವ ಅಗೋಚರ ಕಲಾ ಶಕ್ತಿಯೊಂದು ಈ ಮೂವರು ವಚನಕಾರರಲ್ಲಿದ್ದದ್ದು ಕಂಡುಕೊಳ್ಳಬಹುದಾಗಿದೆ. ಸಂಯೋಜಿತ ಭಾವನೆಗಳ ಶಿಲ್ಪಬಂಧದಿಂದ ಹೊರಬಂದು ನೋಡುವ ವಿಮರ್ಶಾದೃಷ್ಟಿಗೆ ವಚನಗಳ ಬಗ್ಗೆ ಹೊಳೆ ವುದು ಮೇಲಿನ ಸತ್ಯ. ಇಲ್ಲಿ ಸಮಗ್ರ ಸಂವೇದನೆಯ ಅರ್ಥ ಮನುಷ್ಯ ಜೀವನದ ಐತಿಹಾಸಿಕ ಆಗು ಹೋಗುಗಳ ಪಾತ್ರಪ್ರಜ್ಞೆಯಲ್ಲಿ ತೋರಿಸುವ ಘಟನೆಗಳಾಗಿರದೆ, ಸಂವೇದನೆಯೇ ಭಾಷೆಯಾಗಿ ಪುನರನುಭಾವದ ಪರಿಸರವನ್ನು ನಿರ್ಮಿಸುವ ಶ್ರೇಷ್ಠ ಸಾಧನೆಯೇ ಆಗಿದೆ. ಕೂಡಲ ಸಂಗಮನನ್ನು ಸೇರುವ ಹಾದಿಯಲ್ಲಿ ಅಡ್ಡಾದ ಪ್ರಕೃತಿ-ಪುರುಷ ಇವುಗಳ ಆಕರ್ಷಣೆಯಲ್ಲಿ ತಳೆದ ವೈದೃಶ್ಯ ಬಸವಣ್ಣನವರ ಅನೇಕ ವಚನಗಳ ಅಂತರ್ಧ್ವನಿಯಾಗಿದೆ. ಒಂದು ಗೊತ್ತಾಗಿಹೋದ ಕೇಂದ್ರ ವಸ್ತುವನ್ನು ಹೇಗೆ ಸಹಜವೆನ್ನುವ ರೀತಿಯಲ್ಲಿ ತಿರುಗು ಮುರುಗಾಗಿ ಹೇಳುತ್ತಾರೆ ಎಂಬುದರ ಅಭ್ಯಾಸ ಈ ವಚನಗಳಿಂದಾಗುತ್ತದೆ. ಶ್ರೇಷ್ಠ ಕವಿತೆಯೊಂದರ ರೀತಿ ರೂಪಗಳನ್ನು ಈ ಕೆಳಗಿನ ವಚನದಿಂದ ಅರಿಯಬಹುದಾಗಿದೆ.

"ಸಂಜೆಯ ಮಂಜಿನಕಪ್ಪು
ಅಂಜಿದೊಡೆ ಶಂಕೆ ತದ್ರೂಪವಾಗಿ ನಿಂದಿತ್ತು
ತನ್ನ ಭಾವದ ನಟನೆ ನಡೆವನ್ನಕ್ಕರ ನಡೆದಿತ್ತು.
ಅದುನಿಂದಲ್ಲಿಯೇ ನಿಂದಿತ್ತು
ಅದಱಂತುವ ನರಿದೊಡೆ ಹಿಂದೆ ಹುಸಿ,
ಮುಂದೆ ಕೂಡಲಸಂಗಮದೇವರ ನಿಲುವು ತಾನೆ."

ಮಾನಸಿಕ ಭ್ರಮೆ ಅರಸುವ ವಸ್ತುವನ್ನು ಬಿಟ್ಟುಕೊಟ್ಟು ಹೇಗೆ ಅದರ ಹಿಂದುಮುಂದು ಸುತ್ತುವ ವ್ಯರ್ಥ ಅನ್ವೇಷಣೆಯಲ್ಲಿರುತ್ತದೆ, ಎಂಬುದನ್ನು ರೂಪಕವೊಂದರಿಂದ ವ್ಯಕ್ತಪಡಿಸಲಾಗಿದೆ. ಅಂಜಿಕೆಯ ದೃಷ್ಟಿಗೆ ಅನುರೂಪವಾದ ಆಕಾರವನ್ನು ತಾಳಿನಿಲ್ಲುವ ಸಂಜೆಯ ಮಂಜಿನ ಕಪ್ಪು, ವಾಸ್ತವಿಕತೆಯನ್ನರಿಯದೆ ಆ ದೃಷ್ಟಿಯಲ್ಲಿಯೇ ಮುಂದುವರಿಯುವ ಭಾವನೆಯ ಓಟ, ಈ ಬಗೆಯ ಕಾವ್ಯಚಿಂತನೆಯಿಂದ ಮೂಡಿನಿಲ್ಲುವ–ಮಾಯೆ ಹಾಗೂ ಸತ್ಯಗಳ ತಾತ್ವಿಕ ಅನುಭವವನ್ನು ಬಸವಣ್ಣ ನವರು ಕಾವ್ಯಾವರಣದಲ್ಲೇ ಮೂಡಿಸುತ್ತಾರೆ. ಈ ವಚನದ ಬಂಧದಲ್ಲಿ ಎದ್ದು ಕಾಣುವ ವೈಶಿಷ್ಟ್ಯ

ಭಾಷೆಯ-ಸುಗಮತೆ-ವಸ್ತುವಿಗೆ ಆರೋಪಿಸುವ ಕೇಂದ್ರ ರೂಪಕ-ಅದರ ಧ್ವನಿಸಾಮರ್ಥ್ಯ-ಹಾಗೂ ನಿರಾಯಾಸವಾಗಿ ಹೊಂದಿಕೊಳ್ಳುವ ಬಸವಣ್ಣನವರ ಹೇಳಿಕೆ ಎಷ್ಟೋಸಲ ಬಸವಣ್ಣನವರ ದೈನಂದಿನ ಜೀವನದ ಚಿಕ್ಕಪುಟ್ಟ ಘಟನೆಗಳ ವರದಿರೂಪವೇ ವಚನ ವಿಶೇಷವಾಗಿ ಕಾಣಬರುವುದುಂಟು. ಅದಕ್ಕಾಗಿ ವೈಯಕ್ತಿಕ ಅನುಭವದ ಆವರಣವೇ ಬಸವಣ್ಣನವರ ಬಹುಪಾಲಿನ ವಚನಗಳ ಉದ್ಗಮವಾಗಿದೆ. ಹಾಗಾಗಿ ವ್ಯಕ್ತಿನಿಷ್ಠತೆ ಸಹಜವಾಗಿಯೇ ವಚನಗಳ ಪ್ರಧಾನ ಗುಣವಾಗುತ್ತದೆ. ಕಾವ್ಯಪ್ರಜ್ಞೆಯೆಂಬುದು ಮೂಲಸೃಷ್ಟಿಯಾದ್ದರಿಂದ ಬಸವಣ್ಣನವರು ಯಾವ ಶಾಸ್ತ್ರ-ಗ್ರಂಥಗಳ ಆಧಾರವಿಲ್ಲದೇ ಅದನ್ನು ವ್ಯಕ್ತಪಡಿಸಲು ಸಾಧ್ಯವಾಗಿದೆ. ಭಾವದ ಸುಸಂಬದ್ಧ ಬೆಳವಣಿಗೆ ಕಾವ್ಯದಲ್ಲಿ ಆಗುವುದಾದರೆ ಅಭಿವ್ಯಕ್ತಿಯಲ್ಲಿ ಖಚಿತತೆ ಇರಲೇ ಬೇಕಾಗುತ್ತದೆ. ಆದರೆ ಬಸವಣ್ಣನವರ ಅಭಿವ್ಯಕ್ತಿಯಲ್ಲಿ ಖಚಿತತೆ ಇದ್ದು ವಸ್ತುವಿಲ್ಲಿ ಸೀಮಿತಭಾವ ಇದ್ದದ್ದು ಕಂಡುಬರುತ್ತದೆ. ಸೋಜಿಗದ ಅಂಶವೆಂದರೆ ಅವರು ಅನುಭವವನ್ನು ಕಲಾಪ್ರಜ್ಞೆಯಲ್ಲಿ ಬೆಳಸಿಕೊಂಡು ಹೋಗಿಬರುವುದರಿಂದ ಕಾವ್ಯದ ಉತ್ಕೃಷ್ಟ ನಿಲುವು ಅವರ ವಚನಗಳಲ್ಲಿ ತೋರ್ಪಡಿಸಿಕೊಳ್ಳುವ ಗುಣವಾಗುತ್ತದೆ. ಇದಕ್ಕೆ ನಿದರ್ಶನವಾಗಿ ಈ ಕೆಳಗಿನ ವಚನವನ್ನು ನೋಡಬಹುದು.

"ಗಿಳಿಯ ಹಂಜರವಿಕ್ಕಿ, ಸೊಡರಿಂಗೆಣ್ಣೆಯನೆರೆದು, ಬತ್ತಿಯನಿಕ್ಕಿ
ಬರುವ ಹಾರುತ್ತಿದ್ದೆನೆಲಗವ್ವಾ
ತರಗೆಲೆ ಗಿರಿಕೆಂದೊಡೆ ಹೊರಗನಾಲಿಸುವೆ
ಅಗಲಿದನೆಂದೆನ್ನಮನ ಧಿಗಿಲೆಂದಿತೆಲಗವ್ವಾ
ಕೂಡಲಸಂಗನ ಶರಣರು ಬಂದು ಬಾಗಿಲ ಮುಂದೆ ನಿಂದು
'ಶಿವಾ' ಎಂದರೆ ಸಂತೋಷಪಟ್ಟೆನೆಲಗವ್ವಾ."

ಪಾತ್ರಸೃಷ್ಟಿಯಿಂದ ವ್ಯಕ್ತಗೊಳಿಸಿದ ಭಾವರೂಪವಷ್ಟೇ ಈ ವಚನದ ಮಹತ್ವವಲ್ಲ. ಸ್ತಬ್ಧವಾದ ನಿರೀಕ್ಷೆಯಲ್ಲಿ ಗೋಚರವಾಗುವ ಮನುಷ್ಯ ಸಹಜ ಕ್ರಿಯೆಗಳು ಸಂಕೀರ್ಣ ಶಿಲ್ಪವನ್ನು ಸೃಷ್ಟಿಸುತ್ತವೆ. ಹಾಗೆಂತಲೇ ಇಲ್ಲಿ ನಿರೀಕ್ಷಣೆ ಹಾಗೂ ಅಗಲಿಕೆ ಏಕಕಾಲದ ಪ್ರಜ್ಞೆಯಲ್ಲಿ ವ್ಯಕ್ತಗೊಳ್ಳುತ್ತದೆ. ಹೀಗೆ ಬಸವಣ್ಣನವರು ಇಂಥ ಮಧುರಭಾವದ ಅಭಿವ್ಯಕ್ತಿಗೆ ಒದಗಿಸಿ ಕೊಡುತ್ತಿದ್ದ ರೂಪನಿರ್ಮಾಣ ಕಲೆಯನ್ನು ನೋಡಿದರೆ ಅವರೊಬ್ಬ ಸಹಜಕವಿಯೆಂಬ ಭಾವನೆ ಬಾರದೆ ಹೋಗದು. ಬಸವಣ್ಣನವರ ವಚನಗಳಲ್ಲಿನ ಸರಳತೆ, ಸಾಮಾನ್ಯತೆ ಹಾಗೂ ಪುನರುಕ್ತಿಗಳು ಜನಸಾಮಾನ್ಯರ ದೃಷ್ಟಿಗೆ ಗೌಣವೆಂದು ಅವನ್ನು ಒಪ್ಪಿಕೊಂಡು ಮುಂದುವರಿಯುವಂತಿಲ್ಲ. ಸ್ವೋಪಜ್ಞತೆಯನ್ನು ತೋರಿಸಿಕೊಂಡ ಬಸವಣ್ಣನವರ ವಚನಗಳು ತಮ್ಮ ಮಟ್ಟವನ್ನು ಕಂಡುಕೊಳ್ಳಲು ಸಾಹಿತ್ಯ ವಿಮರ್ಶೆಯ ದೃಷ್ಟಿಗೊಳಗಾಗಬೇಕು. ಬಸವಣ್ಣನವರ ವಚನಗಳ ಸಾರ್ಥಕ ಅಂಶಗಳ ಪರಿಶೀಲನೆಯಿಂದ ಅವರ ಕಾವ್ಯಾನುಭೂತಿಯೇ ತೀವ್ರವಾಗಿ ಗಮನಕ್ಕೆ ಬರುತ್ತದೆ. ಅದು ಪ್ರಧಾನವಾಗಿ ಭಾಷೆಯ ದೃಷ್ಟಿಯಿಂದ. ಅಭಿವ್ಯಕ್ತಿಯಲ್ಲಿ ಸಂವೇದನಾಶೀಲವಾದ ಮನಸ್ಸು ಸಹಜಭಾಷೆ ಸಹಜ ಸ್ಥಿತಿಗಳನ್ನು ಮರೆತು, ಯಾವುದೋ ಬೇರೆಯೇ ಆದ ತಾತ್ಪೂರ್ತಿಕ ವೇಷಧಾರಣೆ ಮಾಡುವ ತಪ್ಪುಗ್ರಹಿಕೆಯಿಂದಲೇ ನಮ್ಮ ಬಹುಮಟ್ಟಿನ ಕಾವ್ಯಗಳ ರಚನೆಯಾಗಿದೆ. ಇಂಥದ್ದರಲ್ಲಿ ಭಾಷೆಯನ್ನು ಬಾಯಿ ಮಾತಿಗೆ ತಿರುಗಿಸಿ ಭಾವದ ಲೀಲಾಜಾಲ ಪರಿಚಯ ಮಾಡಿಕೊಡುವ ಶ್ರೇಷ್ಠ ಮಾರ್ಗದ ಪ್ರವರ್ತಕರು ವಚನಕಾರರು ಪ್ರಧಾನವಾಗಿ ಬಸವಣ್ಣನವರು ಆಗಿದ್ದಾರೆ.

ಹೇಳಿ ಕೇಳಿ ಬಸವಣ್ಣನವರ ಮಾರ್ಗ ಸಮರ್ಥನೆಯಾದ್ದರಿಂದ ಅವರ ವಚನಗಳ ಒಟ್ಟಂದದ ನಿಲುವಿನಲ್ಲಿ, ಧಾಟಿಯಲ್ಲಿ ಧೋರಣೆಯಲ್ಲಿ ಈ ಸಮರ್ಥನಾ ಸ್ವರೂಪ ಗೋಚರವಾಗುತ್ತದೆ. ಆದರೆ ಅದು ವ್ಯಕ್ತಪಡಿಸುವ ಮಾಧ್ಯಮ ಮಾತ್ರ ಉಚ್ಚಕಲಾಪ್ರಜ್ಞೆಯಿಂದ ಕೂಡಿರುತ್ತದೆ. ಅವರು ಆಶ್ರಯಿಸುವ ಕಲಾವಂತಿಕೆಗೆ ಇದನ್ನು ಉದಾಹರಿಸಬಹುದಾಗಿದೆ.

"ತನು ಮುಟ್ಟಿ ಮನ ಮುಟ್ಟದೆ ದೂರವಾದರಯ್ಯಾ ಬೆಲೆವೆಣ್ಣಿನಂತೆ
ಸೂಳೆ ತನುಮುಟ್ಟಿ ಅಪ್ಪುವಳಲ್ಲದೆ ಮನ ಮುಟ್ಟಿ ಅಪ್ಪಳಾಗಿ
ಆಚಾರವರಿಯದ ಅರೆಮರುಳುಗಳು ಸುಖವನೆತ್ತಬಲ್ಲರು
ಕೂಡಲಸಂಗಮದೇವಾ."

ಇಡೀ ವಚನ, ಹಾಗೆ ನೋಡಿದರೆ ಅಷ್ಟೇನೂ ಶ್ರೇಷ್ಠವಾಗಿರದಿದ್ದರೂ ಬಸವಣ್ಣನವರು ಕಾವ್ಯ ಧರ್ಮವನ್ನು ಮಾತ್ರ ಪ್ರಧಾನವಾಗಿ ಪರಿಗಣಿಸುತ್ತಿದ್ದರೆಂಬುದು ಲೋಕಾನುಭವದ ಆಸರೆಯಲ್ಲಿ ತೀಕ್ಷ್ಣ ಪರಿಣಾಮದ ದೃಷ್ಟಿಯಿಂದ ಇಂಥ ಪ್ರಗತಿಶೀಲ ರೂಪಕವನ್ನು ಬಳಸಿದ್ದರಲ್ಲಿ ಗೊತ್ತಾಗುತ್ತದೆ. "ತನುಮುಟ್ಟಿ ಮನಮುಟ್ಟದೆ" ಎಂಬ ಮಾತೇ ಒಂದು ಭಾಷೆಯ ಸಂಕೀರ್ಣಾನುಭವವನ್ನು ಮಾಡಿಸುತ್ತದೆ. ಪರಂಪರೆಯಿಂದ ಸಿಡಿದು ಛಿನ್ನವಾಗಿರುವ ಅವರ ಮಾನಸಿಕ ಹೋರಾಟವೂ ಅರಿವಾಗುತ್ತದೆ. ಮೇಲಿನ ಸೂಚ್ಯತೆಗೆ ಬಿಚ್ಚು ಮಾತನ್ನು ಒದಗಿಸುವ ಸೂಳೆಯ ಪ್ರತಿಮೆ ಕಾವ್ಯ ಕಲೆಯಿಂದ ಒಂದು ಪಾವಟಿಗೆ ಇಳಿದುಬರುತ್ತದೆ. ವ್ಯಾಪಕವಾದ ಮೊದಲ ಸಾಲಿಗೆ ಇನ್ನೂ ಪರಿಣಾಮವನ್ನು ತರಲು ಸೀಮಿತ ಅರ್ಥವನ್ನು ಕಲ್ಪಿಸಿದ್ದು ತೀವ್ರತೆಯ ದೃಷ್ಟಿಯಿಂದ ದೋಷವೇ. ಆದರೆ ಉಳಿದೆರಡು ಸಾಲುಗಳು ಮಾತ್ರ ಕಾವ್ಯಶಿಲ್ಪದ ದೃಷ್ಟಿಯಿಂದ ಘನತೆಯನ್ನು ಕಳೆದುಕೊಂಡವುಗಳಾಗಿವೆ. ಇದನ್ನು ಉದಾಹರಿಸುವ ಪ್ರಧಾನ ಉದ್ದೇಶ ಹೇಗೆ ಉಚ್ಚಪ್ರಜ್ಞೆಯಲ್ಲಿ ಪ್ರಾರಂಭವಾಗುವ ಬಸವಣ್ಣನವರ ಕಾವ್ಯ ವಚನಗಳು ವಾಚ್ಯಕ್ಕಿಳಿದು ಬೇರೊಂದು ಉದ್ದೇಶವನ್ನು ಸಾಧಿಸಿಕೊಳ್ಳುತ್ತವೆ ಎಂಬುದಕ್ಕೆ. ಇದಕ್ಕೆ ಕಾರಣ ಬಸವಣ್ಣನವರ ಅಭಿವ್ಯಕ್ತಿಯ ಉದ್ದೇಶದಲ್ಲಿರುವ ದ್ವಂದ್ವವೇ ಆಗಿದೆ. ಖಂಡಿತವಾಗಿ ಅವರದು ಅನುಭವವನ್ನು ತೀವ್ರವಾಗಿ ಗ್ರಹಿಸುವ ದೃಷ್ಟಿ—ಹಾಗಾಗಿ ಅಲ್ಲಿ ಕಾವ್ಯದೃಷ್ಟಿ. ನಿಸ್ಸಂದೇಹವಾಗಿ ಅವರದು ಮತ್ತೊಬ್ಬರಿಗಾಗಿ—ಅಥವಾ ಶರಣಸಂಕುಲಕ್ಕೆ ನಿವೇದಿಸಿಕೊಳ್ಳಬೇಕಾದ ಅನಿವಾರ್ಯತೆ—ಹಾಗಾಗಿ ಅಲ್ಲಿ ಧರ್ಮದೃಷ್ಟಿ. ಹೀಗೆ ವೈಯಕ್ತಿಕ, ಸಾರ್ವತ್ರಿಕ ಅಂಶಗಳೆರಡನ್ನೂ ಗಮನದಲ್ಲಿಟ್ಟುಕೊಂಡೇ ಮುಂದುವರಿಯುತ್ತಿದ್ದ ಅವರ ವಚನ ಸೃಷ್ಟಿ ಸಂಪೂರ್ಣ ಕಾವ್ಯವಾಗಲಾರದ ಅಂಚಿಗೆ ತಲುಪುತ್ತದೆ. ಆದರೆ ಒಮ್ಮೊಮ್ಮೆ ಹಿಡಿದ ವಸ್ತುವೇ ಈ ಎರಡು ದೃಷ್ಟಿಕೋನಗಳ ಅಪೂರ್ವ ಸಂಯೋಜನೆಯದಾಗಿದ್ದರೆ ಬಸವಣ್ಣನವರು ಕಲಾದಿವ್ಯತೆಯನ್ನೇ ಪ್ರದರ್ಶಿಸುತ್ತಾರೆ.

"ಒಡೆಯರಿಗೆ ಒಡವೆಯನೊಪ್ಪಿಸಲಾರದೆ
ಮೊರೆಯಿಡುವ ಮನವ ನಾನೇನೆಂಬೆ ?
ನೆತ್ತಿಯಲಿ ಅಲಗ ತಿರುಹುವಂತಪ್ಪವೇದನೆಯಹುದೆನಗೆ
ಕೊಯಿದ ಮೂಗಿಂಗೆ ಕನ್ನಡಿಯ ತೋರುವಂತಪ್ಪ ವೇದನೆಯಹುದೆನಗೆ
ಬೆಂದ ಹುಣ್ಣು ಕಂಬಿಯಲ್ಲಿ ಕೀಸುವಂತಪ್ಪ ವೇದನೆಯಹುದೆನಗೆ
ಕೂಡಲಸಂಗಮದೇವ ಮಾಡಿನೋಡುವ ಹಗರಣವ
ನಾ ಮಾಡಿದೆನೆಂದರೆ ಮನಕ್ಕೆ ಮನ ನಾಚದೆ ಅಯ್ಯಾ."

ಇಡೀ ವಚನದಲ್ಲಿ ಅಭಿವ್ಯಕ್ತಿಯ ಮಾರ್ಗವನ್ನು ವೈಯಕ್ತಿಕವಾಗಿ ತಂದುಕೊಂಡ ಬಗೆ, ಕಾವ್ಯಾರ್ಥದ ದರ್ಶನಕ್ಕೆ ಪ್ರವೇಶದ ಧ್ವನ್ಯಾರ್ಥವನ್ನರಸುವ ರೀತಿ ಉತ್ಕಟವಾಗಿದೆ.

ಬಸವಣ್ಣನವರ ವಚನಗಳಲ್ಲಿ ವ್ಯಕ್ತವಾಗುವ ಘನಿಷ್ಟ ಕೇಂದ್ರ ಯಾವುದು ಎಂಬುದರ ಅಭ್ಯಾಸ ಬಹುಶಃ ಅವರ ವಚನಗಳ ಅರ್ಥವಂತಿಕೆಗೆ ನೇರೆಯನ್ನು ಕೊಡಬಹುದು. ವಸ್ತುವನ್ನು ಆದರ ಅರ್ಥಾಭಿವ್ಯಕ್ತಿಗೆ ಬಿಟ್ಟುಕೊಡದೆ, ಅದನ್ನು ಹಿಡಿದೆಳೆದು ಪಡಿಯಚ್ಚಿನ ಮುಕ್ತಾಯದಲ್ಲಿ ತೋರಿಸುವ ಈ ಗುಣವನ್ನು ವಚನಕಾರರ ತಂತ್ರವೈಶಿಷ್ಟ್ಯವೆಂದು ಕರೆಯಬಹುದು. ಇದೇ ವಚನಕಾರರಿಗೇ ಗೋಚರವಾದ ಈ ಪ್ರಯೋಗ ಮಾತನಾಡಿಕೊಂಡು ಬರೆದಂತೆ ಮುಕ್ತಾಯದ ಏಕತನ

ಯಿಂದ ವ್ಯಕ್ತವಾಗುತ್ತದೆ. ಬಸವಣ್ಣನವರ ಪ್ರಯೋಗಶೀಲ ಮನಸ್ಸು ವಚನಗಳಲ್ಲಿ ಹಂತಹಂತವಾದ ನಿರ್ದಿಷ್ಟ ಬೆಳವಣಿಗೆಯನ್ನು ಕಾಣದೆ ಒಂದು ಪರಿಮಿತ ಕಾಲದಲ್ಲಿ ಮಾತ್ರ ಬರೆದು ಹಾಕಿದಂತಿದೆ. ವಚನಗಳಲ್ಲಿ ಈ ದೋಷವನ್ನರಸುವುದು ಅನಪೇಕ್ಷಿತವೇ? ಭಗವಂತನ ಕುರಿತ ತೀವ್ರ ಶೋಧದ ಹಂಬಲದಲ್ಲಿ ಆದಿ-ಮಧ್ಯ ಅಂತ್ಯವೆಂಬ ನಿಲ್ದಾಣಗಳನ್ನು ತೋರಿಸಬೇಕಿತ್ತೆಂದೇನೂ ನಿಯಮವಿಲ್ಲ. ಆದರೆ ಜನ್ಮಜಾತವಾದ ಬಸವಣ್ಣನವರ ಕಾವ್ಯಪ್ರತಿಭೆ ಶಿಲ್ಪಯೋಜನೆಯ ದೃಷ್ಟಿಯಿಂದ ಸಡಿಲವಾದದ್ದು ಮಾತ್ರ ಗಮನಕ್ಕೆ ಬರುತ್ತದೆ. ಬಸವಣ್ಣನವರ ಪ್ರತಿಮಾ ಸಂಪತ್ತನ್ನು ಸಿಕ್ಕಸಿಕ್ಕೆಡೆಯಿಂದ ಹೇರಳವಾಗಿ ಆಯಬಹುದು. ಆದರೆ ಇವು ಕೇಂದ್ರಭಾವದ ಸಮಗ್ರೀಕರಣಕ್ಕೆ ಪೋಷಕವಾಗಿಯೇ ಬರುತ್ತವೆಯೆಂದು ಹೇಳಲಾಗದು.

"ಮೊನೆತಪ್ಪಿದ ಬಳಿಕ ಅಲಗೇನ ಮಾಡುವುದು?
ವಿಷತಪ್ಪಿದ ಬಳಿಕ ಹಾವೇನ ಮಾಡುವುದು?
ಭಾಷೆ ತಪ್ಪಿದ ಬಳಿಕ ದೇವಬಲ್ಲಿದ! ಭಕ್ತನೇನ ಮಾಡುವನಯ್ಯ?
ಭಾಷೆ ತಪ್ಪಿದ ಬಳಿಕ ಪ್ರಾಣದಾಸೆಯನು ಹಾರಿದರೆ
ಮೀಸಲಸೊಣಗ ಮುಟ್ಟಿದಂತೆ, ಕೂಡಲಸಂಗಮದೇವ."

ಎಂಬ ವಚನವನ್ನು ನೋಡಬೇಕು. ಭಾವದ ತೀವ್ರತೆ ಅನುಭಾವದ ಆಸರೆಗೆ ಬಂದು ಇಡೀ ವಚನ ಸಂವೇದನಾಶೀಲತೆಗೆ ಸಾಕ್ಷಿಯಾಗುತ್ತದೆ. ಭಾಷೆಯಲ್ಲಿಯ ಅರ್ಥಸಾಕ್ಷಾತ್ಕಾರ, ರೂಪಕಗಳಲ್ಲಿಯ ವ್ಯಂಜನಾ ವ್ಯಾಪಾರ ಎಲ್ಲ ಅಂತರ್ದೃಷ್ಟಿಗೆಡೆಮಾಡಿಕೊಡುತ್ತವೆಯಾದರೂ ಈ ಪುಟ್ಟ ಘಟಕದಲ್ಲಿ ಮಿಡಿಯುವ ಅನುಭವದ ಸಜೀವತೆ ಮಾತ್ರ ಮೈತುಂಬಿಕೊಳ್ಳುವುದಿಲ್ಲ. ಹಾಗೆಂದರೆ ಇಡೀ ವಚನದ ಸಾರಾಂಶ ಅರ್ಥಾತ್ ಭಾಷೆ ತಪ್ಪಬಾರದು ಎಂದಿಷ್ಟೇ ಹೇಳಬೇಕಾದರೆ ಬಸವಣ್ಣನವರು ಇಂಥಾ ಭಾವಗೋಚರ ರೂಪಗಳನ್ನು ಕೊಡಲು ಹೋಗುತ್ತಿರಲಿಲ್ಲ. ಅನುಭವದ ಸಜೀವತೆಯೆಂಬುದು ಎಂಥ ಶ್ರೇಷ್ಠ ಸಾರ್ವತ್ರಿಕ ನಿವೇದನೆಯಲ್ಲಿಯೂ ಯಾಂತ್ರಿಕ ವ್ಯಾಪಾರವನ್ನು ಬಳಸಿಕೊಳ್ಳದೆ ವಿಶಿಷ್ಟ, ವಿಚಾರದ ಬುಡಕಟ್ಟಿನ ಅರಿವನ್ನು ಹೇಗಾದರೂ ಗೋಚರಗೊಳಿಸಿಬಿಡಬೇಕು. ಮೇಲಿನ ವಚನದ ಬೆಳವಣಿಗೆಯ ಸುಗಮತೆಯಲ್ಲಿ ಎರಡು ಮಾತಿಲ್ಲ. ಬಸವಣ್ಣನವರ ಎಲ್ಲ ವಚನಗಳಂತೆ ಇಲ್ಲಿಯೂ ದೈಹಿಕ ವ್ಯಾಪಾರಕ್ಕೆ ರಕ್ತಚಲನೆಯೇ ಹಿನ್ನೆಲೆಯಾಗಿದ್ದಂತೆ ಅವರ ಅರ್ಥಧ್ವನಿ ಲಯದಲ್ಲಿ ಮಿಡಿದು, ಭಾವದಲ್ಲಿ ತೇಲಿ ಪರಿಣಾಮದಲ್ಲಿ ಆಲಾಪನೆಗೈಯ್ಯುತ್ತದೆ. ಆದರೆ ಇದೇ ಜೀವಂತ ಅರ್ಥಧ್ವನಿ ಎಲ್ಲಾ ವಚನಗಳಲ್ಲಿ ಅನುಕೂಲ ಆವರಣವನ್ನು ನಿರ್ಮಿಸಿಕೊಳ್ಳುವುದಿಲ್ಲ. ಇದಕ್ಕೆಲ್ಲಾ ಮೂಲಕಾರಣ ಒಂದೇ. ವಚನಕಾರರೆಲ್ಲಾ ಪ್ರಯೋಗದ ಮೊದಲ ಘಟ್ಟದವರು. ಭಾಷೆಯದೃಷ್ಟಿಯಿಂದ, ಭಾವದದೃಷ್ಟಿಯಿಂದ, ಅಭಿವ್ಯಕ್ತಿಯ ಮಾಧ್ಯಮದ ದೃಷ್ಟಿಯಿಂದ, ಅವರಿಗೆ ಬಹುಶಃ ಕನ್ನಡ ಕಾವ್ಯಪರಂಪರೆಯಾಗಲಿ ಉಳಿದಾವ ಪ್ರಕಾರಗಳಾಗಲೀ ಪ್ರೇರಣೆಯಾಗಿರದೇ ಅದೇ ಆಗ ಹುಟ್ಟಿಕೊಂಡ ಪರಿವರ್ತನೆಯ ಗಾಳಿಯೇ ಪ್ರೇರಕವಾಗಿತ್ತು. ಅಲ್ಲದೆ ಆ ಕಾರ್ಯ ಆ ಶತಮಾನಕ್ಕೇ ನಿಂತುಹೋದದ್ದೂ ಇನ್ನೊಂದು ಕಾರಣವಾಗಿದೆ. ಹಾಗಾಗಿ ಬಸವಣ್ಣನವರ ವಚನಗಳ ಮೌಲಿಕ ನಿರ್ಣಯವನ್ನು ಕನ್ನಡ ಸಾಹಿತ್ಯದ ಉಳಿದ ಕವಿಗಳ ತುಲನಾತ್ಮಕ ಅಧ್ಯಯನದಿಂದೇನೂ ಮಾಡಬೇಕಾಗಿಲ್ಲ. ಬಸವಣ್ಣನವರ ನೂರಾರು ವಚನಗಳ ಅಖಂಡತೆ ಕಾವ್ಯಪ್ರಜ್ಞೆಯ ವಿಮರ್ಶಾಸಾಮಗ್ರಿಯನ್ನು ಒದಗಿಸಿ ಕೊಡಬಲ್ಲದ್ದಾಗಿದೆ. ವಸ್ತುವೇ ಇಲ್ಲದ ವಚನಗಳು ಭಕ್ತಿಯಂಥ ಸ್ಥಾಯೀ ಭಾವದ ಸಾಮರ್ಥ್ಯವನ್ನು ಹೊಂದಿದ ರಸದ ನಿರೂಪಣೆಯಲ್ಲಿ ಪರಮಗುರಿಯನ್ನು ಕಂಡುಕೊಂಡಿದ್ದವು. ಈ ಉದ್ದೇಶದ ನಿರ್ವಹಣೆಯಲ್ಲಿ ವಚನ. ಕಾವ್ಯಸಂವೇದನೆಯಾಗಿ ಮಾಡಿಬಂದದ್ದು— ಊಚ್ಯಕ್ಕೆ ತಿರುಗಿಕೊಂಡು ಸರಳನಿರೂಪಣೆಯಾದದ್ದು ಇವುಗಳ ಆಸರೆಯಲ್ಲಿ ಅಭ್ಯಸಿಸುವುದು ಸಾಹಿತ್ಯದೃಷ್ಟಿಗೆ ಹೊಂದಬಲ್ಲದ್ದಾಗಿದೆ.

---

# ಸಂಪಾದಕೀಯ

ದೇಶಭಾಷೆಗಳಿಗೆ ಈಚೀಚೆಗೆ ಶಿಕ್ಷಣಕ್ಷೇತ್ರದಲ್ಲಿ ಸಲ್ಲುತ್ತಿರುವ ಪ್ರಾಮುಖ್ಯ ವಿಚಾರವಂತರಿಗೆ ತುಂಬ ಸಮಾಧಾನ ತರುವ ವಿಷಯವಾಗಿದೆ. ದೇಶ ಭಾಷೆಗಳೇ ಶಿಕ್ಷಣ ಮಾಧ್ಯಮವಾಗಬೇಕೆಂದು ಶಿಕ್ಷಣತಜ್ಞರೆಲ್ಲ ಎಂದಿನಿಂದಲೋ ಹೇಳುತ್ತ ಬಂದಿದ್ದರೂ ಅವರ ಅಭಿಪ್ರಾಯಗಳಿಗೆ ನಿಜವಾದ ಮನ್ನಣೆ ಈಗ ದೊರೆಯತೊಡಗಿದೆ. ಶ್ರೇಷ್ಠ ಶಿಕ್ಷಣತಜ್ಞರಾದ ಡಾ|| ತ್ರಿಗುಣಸೇನ್‌ರಂಥವರು ಕೇಂದ್ರದ ವಿದ್ಯಾಸಚಿವರಾಗಿ ಶಿಕ್ಷಣಕ್ಷೇತ್ರದಲ್ಲಿ ನಿಜವಾದ ಸುಧಾರಣೆಯ ಚಿಹ್ನೆ ಕಾಣತೊಡಗಿದೆ. ಮುಂದಿನ ಐದು ವರ್ಷಗಳಲ್ಲಿ ವಿಶ್ವವಿದ್ಯಾನಿಲಯದ ಎಲ್ಲ ಹಂತಗಳಲ್ಲಿಯೂ ದೇಶಭಾಷೆಯು (ಐಚ್ಛಿಕವಾಗಿ) ಶಿಕ್ಷಣಮಾಧ್ಯಮವಾಗಬೇಕು ಎಂಬ ನಿರ್ಧಾರವು ಆಗಸ್ಟ್ ತಿಂಗಳಲ್ಲಿ ಪಾರ್ಲಿಮೆಂಟಿನ ಅಂಗೀಕಾರವನ್ನು ಪಡೆಯಲಿದೆ. ಬೆಂಗಳೂರು ವಿಶ್ವವಿದ್ಯಾನಿಲಯವು ಪಿ.ಯು.ಸಿ. ತರಗತಿಗಳಲ್ಲಿ ಕನ್ನಡವನ್ನು ಐಚ್ಛಿಕ ಮಾಧ್ಯಮವಾಗಿ ಜಾರಿಗೆ ತಂದಿದೆ. ಅದಕ್ಕೆ ವಿದ್ಯಾರ್ಥಿಗಳು ತೋರಿರುವ ಪ್ರತಿಕ್ರಿಯೆಯೂ ತುಂಬ ಹರ್ಷದಾಯಕವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗವು ಯೋಗ್ಯ ಅಧ್ಯಾಪಕರಿಂದ ವಿವಿಧ ವಿಷಯಗಳ ಬಗ್ಗೆ ಬರೆಯಿಸಿದ ಪಠ್ಯಪುಸ್ತಕಗಳು ಈ ದಿಕ್ಕಿನಲ್ಲಿ ತುಂಬ ನೆರವಾಗಿವೆ.

ವಿವಿಧ ವಿಷಯಗಳನ್ನು ಪಾಠಹೇಳಲು ತಕ್ಕ ಪಠ್ಯಪುಸ್ತಕಗಳಿಲ್ಲ ಮತ್ತು ಅಧ್ಯಾಪಕರಿಗೆ ತಕ್ಕ ಶಿಕ್ಷಣವಿಲ್ಲ ಎಂದು ಸಣ್ಣಪುಟ್ಟ ಆಕ್ಷೇಪಣೆ ಮಾಡುವವರಿದ್ದಾರೆ. ಇದು ನೀರಿಗಿಳಿಯದೆ ಈಜು ಬರದು ಈಜು ಬರದೆ ನೀರಿಗೆ ಇಳಿಯಬರದು ಎಂದಂತಾಗುತ್ತದೆ. ಒಮ್ಮೆ ಕನ್ನಡವು ಶಿಕ್ಷಣ ಮಾಧ್ಯಮವಾಯಿತೆಂದರೆ ಕನ್ನಡದಲ್ಲಿ ಪಠ್ಯಪುಸ್ತಕಗಳು ಅಗತ್ಯವಾದಷ್ಟು ಸಂಖ್ಯೆಯಲ್ಲಿ ತಾನಾಗಿಯೇ ಹೊರಬರುತ್ತವೆ. ಅಗತ್ಯವನ್ನೇ ಕಲ್ಪಿಸದೆ ಕೇವಲ ಆಕ್ಷೇಪಣೆಯಷ್ಟನ್ನೇ ಮಾಡುವುದು ಯೋಗ್ಯವಲ್ಲ. ಇಂಥ ಆಕ್ಷೇಪಣೆಗಳ ಅಡ್ಡಿತಡೆಗಳಿದ್ದರೂ ಪ್ರಾದೇಶಿಕ ಭಾಷೆಗಳಿಗೆ ತಕ್ಕ ಮಾನ್ಯತೆ ಸಲ್ಲತೊಡಗಿರುವುದು ಸಮಾಧಾನದ ವಿಷಯವಾಗಿದೆ.

ನಗರದ ಕಾಲೇಜುಗಳಲ್ಲಿ ಕನ್ನಡವನ್ನು ಪ್ರಧಾನ ವಿಷಯವಾಗಿ ಅಭ್ಯಾಸ ಮಾಡಲು ಹೆಚ್ಚುಹೆಚ್ಚಾಗಿ ಅವಕಾಶಗಳನ್ನು ಕಲ್ಪಿಸಿಕೊಡಲಾಗುತ್ತಿದೆ. ವಿದ್ಯಾರ್ಥಿ ವಿದ್ಯಾರ್ಥಿನಿಯರು ನಿರೀಕ್ಷೆಗೆ ಮೀರಿದ ಸಂಖ್ಯೆಯಲ್ಲಿ ಅದನ್ನು ಮುಖ್ಯ ವಿಷಯವಾಗಿ ಅಭ್ಯಾಸಕ್ಕೆ ಆರಿಸಿಕೊಂಡಿದ್ದಾರೆ. ಕನ್ನಡ ಆನರ್ಸ್ ಮತ್ತು ಎಂ.ಎ. ತರಗತಿಗಳಿಗೂ ಸಹ ವಿದ್ಯಾರ್ಥಿಗಳು ಎಂದಿಗಿಂತ ಹೆಚ್ಚಾಗಿ ಬಂದಿದ್ದಾರೆ. ಇವೆಲ್ಲ ಕನ್ನಡದ ನಿಜವಾದ ಏಳಿಗೆಯ ಲಕ್ಷಣಗಳಾಗಿವೆ.

ಈಚೆಗೆ ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಮಾನಸ ಗಂಗೋತ್ರಿಯ ಆವರಣದೊಳಗೆ ತಲೆಯೆತ್ತುತ್ತಿರುವ 'ಕನ್ನಡ ಅಧ್ಯಯನ ಸಂಸ್ಥೆ'ಯ ಕಾರ್ಯಕ್ಷೇತ್ರ ವಿಸ್ತಾರಗೊಳ್ಳುತ್ತಿರುವುದು ಕನ್ನಡಿಗರೆಲ್ಲರಿಗೂ ಅಭಿಮಾನದ ಸಂಗತಿಯಾಗಿದೆ. ಆ ಸಂಸ್ಥೆಯ ಅಂಗಗಳಾಗಿ ಅನುವಾದ ವಿಭಾಗ, ಹರಿದಾಸ ಸಾಹಿತ್ಯ ವಿಭಾಗಗಳು ಆರಂಭವಾಗಿದ್ದು ತೀವ್ರಗತಿಯಲ್ಲಿ ಕೆಲಸ ನಡೆಯುವ ನಿರೀಕ್ಷೆ ಇದೆ. ಈ ಬಗೆಯ ಪ್ರಗತಿಗೆ ಅಲ್ಲಿ ನಿರಂತರವೂ ಶ್ರಮಿಸುತ್ತಿರುವ ಪ್ರಾಧ್ಯಾಪಕ ಶ್ರೀ ದೇ. ಜವರೇಗೌಡರು ಮತ್ತು ಉಪಕುಲಪತಿಗಳಾದ ಶ್ರೀ ಕೆ. ಎಲ್. ಶ್ರೀಮಾಲಿಯವರಿಗೆ ಇದರ ಶ್ರೇಯಸ್ಸು ಸಲ್ಲಬೇಕಾಗಿದೆ.

# ವಿನಿಮಯ ಪತ್ರಿಕೆಗಳು

**ದಿನಪತ್ರಿಕೆ :**

(೧) ಜನವಾಣಿ–ಬೆಂಗಳೂರು. (೨) ಸಂಯುಕ್ತ ಕರ್ನಾಟಕ–ಬೆಂಗಳೂರು.

**ವಾರಪತ್ರಿಕೆ :**

(೧) ಪ್ರಜಾಮತ–ಬೆಂಗಳೂರು. (೨) ಮೈಸೂರು ಗೆಜೆಟ್–ಬೆಂಗಳೂರು. (೩) ರಾಯಭಾರಿ–ಉಡುಪಿ. (೪) ವಿಕ್ರಮ–ಬೆಂಗಳೂರು. (೫) ಕಂಠೀರವ–ಮಂಗಳೂರು. (೬) ಪ್ರಭಾತ–ಮಂಗಳೂರು. (೭) ಕರ್ನಾಟಕ ವೈಭವ–ಬಿಜಾಪುರ. (೮) ಕರ್ಮವೀರ–ಹುಬ್ಬಳ್ಳಿ. (೯) ಬೆಳಕು–ಮೈಸೂರು. (೧೦) ನವಯುಗ–ಉಡುಪಿ. (೧೧) ಜನಪ್ರಗತಿ–ಬೆಂಗಳೂರು. (೧೨) ಕಾನಡಾವೃತ್ತ–ಕುಮಟ. (೧೩) ರಾಷ್ಟ್ರಮತ–ಮಂಗಳೂರು. (೧೪) ಕನ್ನಡಿಗ–ಹುಬ್ಬಳ್ಳಿ. (೧೫) ಪ್ರಪಂಚ–ಹುಬ್ಬಳ್ಳಿ. (೧೬) ಜನಸೇವಕ–ಅಂಕೋಲ. (೧೭) American Reporter–New Delhi. (೧೮) ಸಂದರ್ಶನ–ಬಿಜಾಪುರ. (೧೯) ಸಂದೇಶ–ಬೆಳಗಾಂವಿ. (೨೦) ಸತ್ಯವಾದಿ–ಮೈಸೂರು.

**ಮಾಸಪತ್ರಿಕೆ :**

(೧) ಅಧ್ಯಾತ್ಮಪ್ರಕಾಶ–ಹೊಳೇನರಸೀಪುರ. (೨) ಅಮರವಾಣಿ–ಯಾದಗಿರಿ. (೩) ಕಸ್ತೂರಿ–ಹುಬ್ಬಳ್ಳಿ. (೪) ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ–ಕಾಕಿನಾಡ. (೫) ಗುರುದೇವ–ಮೂಡಬಿದರೆ. (೬) ಜೀವನ–ಬೆಂಗಳೂರು. (೭) ಜಯಕರ್ನಾಟಕ–ಧಾರವಾಡ. (೮) ಜ್ಯೋತಿರ್ವಾಣಿ–ಬೆಂಗಳೂರು. (೯) ಜಯಂತಿ–ಧಾರವಾಡ. (೧೦) ಧನ್ವಂತರಿ–ಬಿಜಾಪುರ. (೧೧) ದಿವ್ಯಜ್ಯೋತಿ–ಮೈಸೂರು. (೧೨) ಪುಸ್ತಕ ಪ್ರಪಂಚ–ಮೈಸೂರು. (೧೩) ಧರ್ಮಬೋಧ–ಉಡುಪಿ. (೧೪) ಪ್ರಕಾಶಿನಿ–(ದ. ಕ.) (೧೫) ಪ್ರದೀಪ–ಧಾರವಾಡ. (೧೬) ಪರಿಮಳ–ನಂಜನಗೂಡು. (೧೭) ಮೈಸೂರು ವ್ಯವಸಾಯ ಸಂಶೋಧನ ಪತ್ರಿಕೆ–ಬೆಂಗಳೂರು. (೧೮) ಮೊಗವೀರ–ಬೊಂಬಾಯಿ. (೧೯) ಭಾರತ ಸರ್ಕಾರದ ಪ್ರಕಾಶನಭಾಗ–ನ್ಯೂ ಡೆಲ್ಲಿ. (೨೦) ಮಲೆನಾಡು–ಬೆಂಗಳೂರು. (೨೧) ಪಂಚಾಮೃತ–ಗದಗ. (೨೨) ಗಾಯನಗಂಗ–ಬೆಂಗಳೂರು. (೨೩) ತತ್ವವಾದ–ಬೆಂಗಳೂರು. (೨೪) ವಿನೋದ–ಬೆಂಗಳೂರು. (೨೫) ಶರಣಸಾಹಿತ್ಯ–ಬೆಂಗಳೂರು. (೨೬) ಸದ್ಧರ್ಮ ದೀಪಿಕೆ–ಮೈಸೂರು. (೨೭) ವಿವೇಕಾಭ್ಯುದಯ–ಮಂಗಳೂರು. (೨೮) ಯುಗಪುರುಷ–ಕಿನ್ನಿಗೋಳ. (೨೯) ಶ್ರೀ ಸುಧಾ–ಬೆಂಗಳೂರು. (೩೦) ಸುಬೋಧ–ಬೆಂಗಳೂರು. (೩೧) ಸೋವಿಯತ್ ದೇಶ–ಮದರಾಸು.

**ತ್ರೈಮಾಸಿಕ ಪತ್ರಿಕೆ :**

(೧) ಮೈಸೂರು ಸಕ್ಕರೆ–ಮಂಡ್ಯ. (೨) ಪ್ರಬುದ್ಧ ಕರ್ನಾಟಕ–ಮೈಸೂರು. ಪುಸ್ತಕಮಿತ್ರ–ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ, ಮದರಾಸು.

**Fortnightly** :—(1) British Information Service, Fortnightly Review of News and Events, Delhi.

**Monthly**:—1. P.E.N., Bombay. 2. Journal of Mysore State Educational Federation, Bangalore. 3. Mysore Information Bulletin, Bangalore. 4. British Book News, London. 5. The Indian Publisher and Book-seller, Bombay.

**By-Monthly**:—1. Journal of the University of Bombay, Bomby. 2. Public Affairs-Gokhale Institute Bangalore.

**Quarterly:**—1. Journal of the Mythic Society, Bangalore. 2. Journal of the Annamalai University, Annamalai Nagar. 3. Bulletin of the Deccan College Research Institute, Poona. 4. Annals of Bhandarkar Oriental Research Institute. 5. Bulletin of the School of Oriental and African Studies, London.

**Half-Yearly** :—Half-Yearly Journal of the Mysore University, Mysore.

# ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ. ಪೈ |
|---|---|---|
| ೧. | ಕನ್ನಡದ ಬಾವುಟ (ಐದನೆಯ ಮುದ್ರಣ ೧೯೫೮) .... .... | ೨=೦೦ |
| ೨. | ಜೇಮ್ಸ್ ಏಬ್ರಹಾಮ್ ಗಾರ್ಫೀಲ್ಡನ ಚರಿತ್ರೆ : ಕ್ಯಾಲಿಕೋ ಪ್ರತಿ (೧೯೩೦) .... | ೧=೫೦ |
| | (ನಾಲ್ಕನೆಯ ಮುದ್ರಣ) ಸಾದಾ ಪ್ರತಿ (೧೯೩೮) .... | ೧=೦೦ |
| ೩. | ಜ್ಯೋತಿರ್ವಿನೋದಿನಿ (೧೯೩೧) .... .... .... | ೨=೦೦ |
| ೪. | ಕನ್ನಡ ನಾಡಿನ ಚರಿತ್ರೆ: ಭಾಗ ೧ .... .... .... | |
| | ,, ಭಾಗ ೨ (ಎರಡನೆಯ ಮುದ್ರಣ ಅಚ್ಚಿನಲ್ಲಿದೆ) .... | ೨=೦೦ |
| | ,, ಭಾಗ ೩ ( ,, ೧೯೩೯) .... .... | ೧=೨೫ |
| ೫. | ಸಂಕಲನ (೧೯೪೯) .... .... .... | ೦=೬೩ |
| ೬. | ಶಿವಶರಣರ ಕೃತಿಗಳು (ಸ್ವರಪ್ರಸ್ತಾರ ಸಹಿತ ೧೯೫೨) .... .... | ೨=೦೦ |
| ೭. | ಹರಿದಾಸ ಸಾಹಿತ್ಯ–ಇಂಗ್ಲಿಷ್ ಉಪೋದ್ಘಾತದೊಡನೆ (೧೯೫೨) .... .... | ೧೦=೦೦ |
| ೮. | ,, ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ (೧೯೫೨) .... | ೮=೦೦ |
| ೯. | ಗಾಳಿಯಲ್ಲಿನ ಅಗೋಚರ ಶತ್ರುಗಳು (೧೯೫೪) .... .... .... | ೧=೨೫ |
| ೧೦. | ನಕ್ಷತ್ರದರ್ಶನ (೧೯೫೪) .... .... .... | ೧=೫೦ |
| ೧೧. | ಹರಿದಾಸ ಕೃತಿಮಂಜರಿ (೧೯೫೫) .... .... .... | ೧=೨೫ |
| ೧೨. | ಪ್ಲೇಟೋವಿನ ಆದರ್ಶರಾಜ್ಯ (೧೯೫೬) .... .... .... | ೧=೩೮ |
| ೧೩. | ಚೇರಮ ಕಾವ್ಯಂ (೧೯೫೬) .... .... .... | ೨=೦೦ |
| ೧೪. | ಅನುಭವ ಮುಕುರಂ (೧೯೫೬) .... .... .... | ೦=೩೮ |
| ೧೫. | ಆಧುನಿಕ ಗದ್ಯ ಸಾಹಿತ್ಯ (ಎರಡನೆಯ ಮುದ್ರಣ ೧೯೬೧) .... .... | ೨=೫೦ |
| ೧೬. | ಕನ್ನಡದ ಅತ್ಯುತ್ತಮ ಸಣ್ಣ ಕತೆಗಳು (ಮೂರನೆಯ ಸಂಪುಟ ೧೯೫೮) .... | ೪=೦೦ |
| ೧೭. | ಕಾದಂಬರಿ–ಸಾಮಾನ್ಯ ಮನುಷ್ಯ (೧೯೫೭) .... .... .... | ೧=೦೦ |
| ೧೮. | ಉದ್ಭಟದೇವ ಚರಿತೆ (೧೯೫೭) .... .... .... | ೧=೫೦ |
| ೧೯. | ತ್ರಿಪುರದಹನ ಸಾಂಗತ್ಯ (೧೯೫೯) .... .... .... | ೦=೭೫ |
| **೨೦.** | **ಕರ್ಣಾಟಕ ಕವಿಚರಿತೆ (೧ನೆ ಭಾಗ) .... .... ....** | **೧೨=೦೦** |
| | **,, ,, ಲೈಬ್ರರಿ ಪ್ರತಿಗಳು ....** | **೧೫=೦೦** |
| ೨೧. | ಕಾವ್ಯಗಾಯನ ಕಲಾ ಸಂಗ್ರಹ .... .... .... | ೧=೨೫ |

ಪುಸ್ತಕ ವ್ಯಾಪಾರಿಗಳಿಗೆ ಕರ್ಣಾಟಕ ಕವಿಚರಿತೆ ವಿನಾ ಮಿಕ್ಕೆಲ್ಲ ಪುಸ್ತಕಗಳಿಗೆ ಶೇ. 25ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

Half-Yearly Journal of the Kannada Literary Academy

ಶ್ರೀ ಪ್ಲವಂಗ





ಸಂಪುಟ ೫೨ ಡಿಸೆಂಬರ್ ೧೯೬೭ ಸಂಚಿಕೆ ೨

ಕನ್ನಡ ಸಾಹಿತ್ಯ ಪರಿಷತ್ತು

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ಡಿಸೆಂಬರ್ ೧೯೬೭

ಸಂಪುಟ : ೫೨  ಸಂಚಿಕೆ : ೨




ಸಂಪಾದಕರು :

ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ

ಬೆಂಗಳೂರು – ೧೮

## ಕನ್ನಡ ಸಾಹಿತ್ಯ ಪರಿಷತ್ತಿನ
## ಕಾರ್ಯಕಾರಿ ಸಮಿತಿಯ ಸದಸ್ಯರು



---


ಮುದ್ರಕರು :

**ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ**

ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ

ಬೆಂಗಳೂರು–೧೮

# ವಿ ಷ ಯ ಸೂ ಚಿ ಕೆ

# CONTENTS

# ನಮ್ಮ ಭಾಷಾಸಮಸ್ಯೆ

**ಎಸ್. ಆರ್. ಮಳಗಿ**

### ೧. ಸಮಸ್ಯೆಯ ಉಲ್ಬಣ ಸ್ವರೂಪ

ಭಾರತೀಯ ಭಾಷಾಸಮಸ್ಯೆ ಇಂದು ಬಹು ಜಟಿಲವೆನಿಸಿದೆ. ಕಾರಣವೆಂದರೆ, ಭಾರತವು ಒಂದು ಚಿಕ್ಕ ದೇಶವಾಗಿರದೆ ಒಂದು ಉಪಖಂಡವೇ ಆಗಿರುವುದು. ಇಲ್ಲಿ ಇದೀಗ ಹದಿನಾಲ್ಕು ರಾಷ್ಟ್ರೀಯ ಭಾಷೆಗಳನ್ನು ನಮ್ಮ ರಾಷ್ಟ್ರದ ಸಂವಿಧಾನವು ಸ್ವೀಕರಿಸಿದ್ದು, ಈ ಭಾಷೆಗಳಿಗನುಗುಣವಾಗಿ ಮತ್ತು ಇನ್ನಿತರ ಕಾರಣಗಳಿಗಾಗಿ ಹದಿನೇಳು ರಾಜ್ಯಗಳು ನಿರ್ಮಾಣಗೊಂಡಿವೆ. ಭಾಷಾನುಗುಣ ರಾಜ್ಯರಚನೆಯ ತತ್ತ್ವವನ್ನು ಒಮ್ಮೆ ಒಪ್ಪಿಕೊಂಡ ಮೇಲೆ, ಇತರ ಕ್ಷುಲ್ಲಕ ಭಾಷೆಗಳ ಜನಸಮೂಹಗಳೂ ಇಂದಿಲ್ಲ ನಾಳೆ ಏನೆಲ್ಲ ಒತ್ತಾಯ ತಂದು ಇನ್ನೂ ಹೆಚ್ಚಿನ ಸಂಖ್ಯೆಯ ರಾಜ್ಯಗಳ ನಿರ್ಮಾಣಕ್ಕೋಸುಗ ಹೋರಾಡುವ ಸಂಭವ ಇಲ್ಲದಿಲ್ಲ. ಭರತಖಂಡದಲ್ಲಿ ಇಂತಹ ಭಾಷೆಗಳ ಸಂಖ್ಯೆ ನಾಲ್ನೂರ ಐವತ್ತಕ್ಕೂ ಮೀರಿದ್ದಾಗಿದೆಯೆಂದರೆ ಈ ಭಾಷಾಸಮಸ್ಯೆ ಎಷ್ಟು ಉಲ್ಬಣಸ್ಥಿತಿಗೆ ತಲುಪೀತೆಂಬುದನ್ನು ಊಹಿಸಬಹುದು.

### ೨. ಭಾರತೀಯತೆಯ ಅಭಾವ

ನಮ್ಮ ಭಾಷಾಸಮಸ್ಯೆ ಇಷ್ಟೊಂದು ಗೊಂದಲಮಯವಾಗುವುದಕ್ಕೆ ಎರಡನೆಯ ಕಾರಣವೆಂದರೆ, ಸ್ವಾತಂತ್ರ್ಯೋತ್ತರ ಭಾರತ ಜನತೆ-ನಾವೆಲ್ಲ ಒಂದು ರಾಷ್ಟ್ರದ ಜನತೆ ಎಂಬ ಭಾವೈಕ್ಯದ ಅರಿವಿನಿಂದ ಜಾಗೃತವಾಗಿಲ್ಲ. ವಿಧ ವಿಧ ಭಾಷೆ, ನಾನಾ ಮತ-ಧರ್ಮ, ಬೇರೆ ಬೇರೆ ಪಕ್ಷ-ಪಂಗಡ, ಹಲವು ಪ್ರಕಾರದ ರೂಢಿ-ಪರಂಪರೆ, ವಿವಿಧ ಆಚಾರ-ವಿಚಾರ, ಭಿನ್ನ ಭಿನ್ನ ಪ್ರಾದೇಶಿಕತೆ,—ಇತ್ಯಾದಿ ವೈವಿಧ್ಯದಲ್ಲಿ ನಾವಿಂದು ಏಕಸಂಸ್ಕೃತಿ ಮತ್ತು ಏಕರಾಷ್ಟ್ರೀಯತೆಯ ಸಾಮರಸ್ಯವನ್ನು ಕಾಣುತ್ತಿಲ್ಲ. ಇದರಿಂದ ಭರತಖಂಡದ ಯಾವ ರಾಜ್ಯದವರೇ ಆಗಲಿ, ನಾವೆಲ್ಲರೂ ಮುಖ್ಯವಾಗಿ ಭಾರತೀಯರು ಎಂಬ ಭಾವ ನಮ್ಮ ಅನುಭವಕ್ಕೆ ಬರುತ್ತಿಲ್ಲ. ಈ ಕಾರಣದಿಂದಲೂ ಇಂದು ಭಾಷಾಸಮಸ್ಯೆ ಒಂದು ಭೂತದಂತೆ ಕಾಡುತ್ತಿದೆ.

### ೩. ಜಾಗತಿಕ ಪ್ರಗತಿಗೆ ಭಾರತದ ಉಪಕೃತಿ

ಭಾಷಾನುಗುಣ ರಾಜ್ಯ ರಚಿತವಾಗಿರುವ ರಾಜ್ಯಗಳೆಲ್ಲ ಇಂದು ಬೇರೆ ಬೇರೆ ರಾಷ್ಟ್ರಗಳೇನೋ ಎಂಬಂತೆ ವರ್ತಿಸುತ್ತಿವೆ! ೧೯೫೬ರಲ್ಲಿ ರಾಜ್ಯಗಳ ಪುನರ್ವಿಭಜನೆಯಾಯಿತು. ಅದರ ಪರಿಣಾಮ

ವಾಗಿ ಹುಟ್ಟಿದ ರಾಜ್ಯಗಳು ಒಂದೊಂದು ಗಡಿಯಲ್ಲೂ ಕೆಲವು ದ್ವಿಭಾಷಾಪ್ರದೇಶಗಳನ್ನು ಹೊಂದಿರುವುದು ಸಹಜ. ಇದನ್ನು ತಪ್ಪಿಸಲಿಕ್ಕಾಗದು. ಬೇರೆ ಭಾಷೆಯವರೆಂದ ಮಾತ್ರಕ್ಕೆ ಅವರನ್ನು ಬೇರೆ ಜನಾಂಗದವರೆಂದು ಕಲ್ಪಿಸುವುದಕ್ಕಾದೀತೆ? ನೆರೆಹೊರೆಯ ರಾಜ್ಯಗಳವರೆಲ್ಲರೂ ಭಾರತೀಯರೇ ಅಲ್ಲವೆ? ಸಹಜೀವನದ, ಸೋದರಭಾವದ ಉದಾತ್ತತತ್ತ್ವಕ್ಕೆ ಭಾರತೀಯರಲ್ಲೇ ಅಭಾವವುಂಟಾದರೆ, ಜಾಗತಿಕರಂಗದಲ್ಲಿ ಮೊಳೆತು ಬೆಳೆಯಬೇಕೆಂಬ ಸಹಜೀವನ ತತ್ವ, ಭ್ರಾತೃ ಭಾವ, ಸಮಾನತೆಯ ದೃಷ್ಟಿ ಇವುಗಳ ಬೆಳವಣಿಗೆಗೆ ಭಾರತೀಯರಾದ ನಮ್ಮಿಂದ ವಾಸ್ತವವಾಗಿ ಯಾವ ಉಪಕೃತಿ ಸಂದೀತು?

### ೪. ಮೂಲಭೂತ ಸಮಸ್ಯೆಗಳ ನಿವಾರಣೆ ಮುಖ್ಯ

ಜಾಗತಿಕ ಪ್ರಶ್ನೆಗಳ ಮಾತೇಕೆ? ನಮ್ಮಲ್ಲಿ ಸದ್ಯ ಸಮಸ್ಯೆಗಳಿಗೇನು ಕೊರತೆಯಿದೆಯೆ? ಸ್ವಾತಂತ್ರ್ಯ ಪ್ರಾಪ್ತಿಯ ಅನಂತರದ ಈ ಇಪ್ಪತ್ತು ವರುಷಗಳ ಅವಧಿಯಲ್ಲಿ ನಾಲ್ಕು ಪಂಚವಾರ್ಷಿಕ ಯೋಜನೆಗಳೊಳಗಿಂದ ನಮ್ಮ ರಾಷ್ಟ್ರವು ಹಾಯ್ದು ಬಂದಿದ್ದರೂ ಇನ್ನೂ ಆಹಾರ, ವಸತಿ, ನಿರಕ್ಷರತೆ, ರೋಗರುಜಿನ-ಇತ್ಯಾದಿ ಮೂಲಭೂತ ಸಮಸ್ಯೆಗಳ ನಿವಾರಣೆಗೆ ಕೊಡಬೇಕಾದಷ್ಟು ಲಕ್ಷ್ಯ ಪೂರೈಸದಿರುವಾಗ, ಇವುಗಳ ಮಧ್ಯೆ ಈ ಭಾಷೆಯ ಪ್ರಶ್ನೆಯೊಂದನ್ನು ಬಗೆಹರಿಯದ ಸಮಸ್ಯೆಯನ್ನಾಗಿಸಿರುವುದು ಹಾಸ್ಯಾಸ್ಪದವೇ ಎನ್ನಬೇಕು.

### ೫. ಪ್ರಾದೇಶಿಕ ಭಾಷೆಗೆ ಇಂಗ್ಲಿಶ್ ಭಾಷೆಯು ತೊಡಕು

ಭಾಷೆಯ ಸಮಸ್ಯೆಯಾದರೂ ಎಂಥದು? ಭಾರತದ ಸಂವಿಧಾನದಲ್ಲಿ ಹದಿನಾಲ್ಕೂ ಭಾಷೆಗಳಿಗೆ ಸಮಾನ ಸ್ಥಾನವಿತ್ತಿದ್ದು, ಆಯಾ ರಾಜ್ಯಗಳಲ್ಲಿ ಆಯಾ ಪ್ರಾದೇಶಿಕ ಭಾಷೆಗೆ ಪ್ರಥಮ ಸ್ಥಾನವಿರಬೇಕಾದುದು ಉಚಿತವೇ ಸರಿ. ಆಯಾ ರಾಜ್ಯಗಳಲ್ಲಿ ಒಳ ಆಡಳಿತಕ್ಕಾಗಿ ಮತ್ತು ಶಿಕ್ಷಣ ಮಾಧ್ಯಮಕ್ಕಾಗಿ ಆಯಾ ಪ್ರಾದೇಶಿಕ ಭಾಷೆಯನ್ನೇ ಬಳಸಬೇಕೆಂಬಲ್ಲಿ ವಿಶೇಷ ಭಿನ್ನಾಭಿಪ್ರಾಯವಿಲ್ಲ. ಈಗಾಗಲೇ ಈ ಬಗೆಗೆ ಆಯಾ ರಾಜ್ಯಗಳಲ್ಲಿ ವಿಹಿತ ಏರ್ಪಾಟುಗಳು ನಡೆದಿವೆ. ಇದಕ್ಕೂ ಅಲ್ಲಲ್ಲಿ ವಿರೋಧ ಕಂಡುಬರುತ್ತಿರುವುದು ಸೋಜಿಗವೇ ಸರಿ. ಬ್ರಿಟಿಷರ ಆಡಳಿತದಲ್ಲಿ ಇಂಗ್ಲಿಶ್ ಭಾಷೆ ಕೇಂದ್ರ ಹಾಗೂ ವಿವಿಧ ಪ್ರಾಂತಗಳ ಆಡಳಿತ ಭಾಷೆಯಾಗಿತ್ತು. ಆಳುವವರ ಅನುಕೂಲತೆಗೊಳಪಟ್ಟು ಅಂದು ಗುಲಾಮ ಜನತೆಯಾಗಿದ್ದ ನಾವು ಆಳರಸರೊಂದಿಗೆ ಹೊಂದಿಕೊಂಡು ಬಾಳಲೇಬೇಕಿತ್ತು. ಆದ್ದರಿಂದ ಇಂಗ್ಲಿಶ್ ಭಾಷೆಯನ್ನು ಕಲಿತುಕೊಳ್ಳುವುದು ಅಂದು ತೀರ ಅಗತ್ಯವೆನಿಸಿತು. ಆಗ ತೀರ ಅಪರಿಚಿತವೂ ಕಠಿನವೂ ಎನಿಸಿದ್ದ ಇಂಗ್ಲಿಶ್ ಭಾಷೆಯನ್ನು ಕಷ್ಟಪಟ್ಟು ಅಭ್ಯಸಿಸಬೇಕಾಯಿತಷ್ಟೇ ಅಲ್ಲ, ಇಂಗ್ಲಿಶ್ ಸಾಹಿತ್ಯ, ಇಂಗ್ಲಿಶ್ ಜನತೆಯ ಇತಿಹಾಸ, ಇಂಗ್ಲಿಶ್ ಸಂಸ್ಕೃತಿಯ ವ್ಯಾಸಂಗ-ಇತ್ಯಾದಿಗಳನ್ನು ನಾವು ಸ್ವಸಂತೋಷದಿಂದಲೇ ರೂಢಿಸಿಕೊಳ್ಳುತ್ತ ಬಂದೆವು. ಅವುಗಳಿಗೆ ಮಾರುಹೋದೆವು! ಆಗ ನಮ್ಮ ತಾಯ್ನುಡಿಗಳನ್ನೂ ನಾವು ಕಡೆಗಣಿಸಿದೆವು. ಒಡೆಯರಿಂದ ಒಂದು ರೀತಿಯ ಒತ್ತಾಯದಿಂದ ಹೇರಲ್ಪಟ್ಟ ಭಾರವಾದ ಪರಕೀಯ ಭಾಷೆಯೊಂದನ್ನು ಶಾಲೆ-ಕಾಲೇಜುಗಳಲ್ಲಿ ಭಾರತದಾದ್ಯಂತ ಪಠ್ಯವಿಷಯವಾಗಿಸಿ ಕೊಂಡೆವಷ್ಟೇ ಅಲ್ಲ, ಅದನ್ನು ಉಳಿದ ವಿಷಯಗಳ ವ್ಯಾಸಂಗಕ್ಕೂ ಮಾಧ್ಯಮವನ್ನಾಗಿಸಿಕೊಂಡೆವು. ಆಗ

ನಮಗೆ ಇಂಗ್ಲಿಶ್ ಭಾಷೆಯ ತೊಡಕು ಒಂದು ಸಮಸ್ಯೆ ಅನಿಸಲಿಲ್ಲ! ಕಳೆದ ಈ ಇನ್ನೂರು ವರುಷಗಳ ಪರಕೀಯ ಆಡಳಿತದಲ್ಲಿ ಭಾರತೀಯರೆಷ್ಟು ಜನ ಇಂಗ್ಲಿಶ್ ಭಾಷೆಯನ್ನು ಕರಗತಗೊಳಿಸಿಕೊಂಡಿದ್ದಾರೆ? ನೂರರಲ್ಲಿ ಇಬ್ಬರು ಮಾತ್ರವಂತೆ! ನೂರರಲ್ಲಿ ಇನ್ನು ತೊಂಬತ್ತೆಂಟರಷ್ಟು ಜನ ಕೋಟಿಗೆ ಈ ಭಾಷೆಯ ಗಂಧವಿಲ್ಲ! ಸುಶಿಕ್ಷಿತರೆನಿಸಿದ ಈ ಇಬ್ಬರು ಪಡೆದ ಇಂಗ್ಲಿಶ್ ಭಾಷಾ ಪ್ರಭುತ್ವವಾದರೂ ಎಂಥದು ? ಆಳುವ ಒಡೆಯರೊಂದಿಗೆ ವ್ಯವಹರಿಸುವಲ್ಲಿ ಹರಕು-ಮುರುಕಾಗಿ ತಮ್ಮ ಮನೋಗತವನ್ನು ತಿಳಿಯಪಡಿಸುವಷ್ಟರ ಮಟ್ಟಿನದು ಮಾತ್ರ. ಇದರಿಂದ ಭಾರತೀಯ ಕೋಟ್ಯಂತರ ಜನಸಮುದಾಯದ ಭೌದ್ಧಿಕ ಹಾಗೂ ಸಾಂಸ್ಕೃತಿಕ ಬೆಳೆವಣಿಗೆ ಕುಂಠಿತವಾಗುತ್ತ ನಡೆದು ಕೊನೆಯಲ್ಲಿ ಸ್ಥಗಿತಗೊಂಡಿತೆಂದರೂ ತಪ್ಪಿಲ್ಲ.

## ೧. ತಾಯ್ನುಡಿಯ ಮಾಧ್ಯಮ ವಿದ್ಯಾರ್ಜನೆಯ ಸಚೇತನ ತತ್ವ

ಇಂದು ಭಾರತ ಸ್ವತಂತ್ರವಾಗಿದ್ದು ವೈವಿಧ್ಯಮಯವಾದ ತನ್ನತನವನ್ನು ಅದು ಉಳಿಸಿ ಬೆಳೆಸಿಕೊಳ್ಳಬೇಕಾದುದು ಆವಶ್ಯಕ. ಇದಕ್ಕಾಗಿ ಪ್ರತಿಯೊಂದು ರಾಜ್ಯದಲ್ಲಿ ಆಡಳಿತ ಭಾಷೆ ಮತ್ತು ಶಿಕ್ಷಣ ಮಾಧ್ಯಮ ಭಾಷೆ ಎಲ್ಲರಿಗೂ ತಿಳಿಯುವ ತಾಯ್ನುಡಿಯೇ ಆಗಬೇಕೆಂಬ ಆಸೆ ಸಹಜ. ಭಾರತಕ್ಕೆ ರಾಷ್ಟ್ರೀಯ ಭಾವನೆಯ ಕಣ್ಣುಕೊಟ್ಟು ರಾಜಕೀಯ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟ ಮಹಾತ್ಮ ಗಾಂಧಿಯವರಂತಹ ನೇತಾರರೂ ಜಾಗತಿಕ ಹಾಗೂ ಭಾರತೀಯ ಶಿಕ್ಷಣತಜ್ಞರೂ ತಾಯ್ನುಡಿಯ ಮಾಧ್ಯಮವೇ ವಿದ್ಯಾರ್ಜನೆಯ ಸಚೇತನತತ್ವವೆಂದು ಹೇಳುತ್ತ ಬಂದಿದ್ದಾರೆ. ಅದನ್ನೀಗ ಪ್ರಾಥಮಿಕ ಮಟ್ಟದಿಂದ ವಿಶ್ವವಿದ್ಯಾನಿಲಯದ ಪದವೀಪರೀಕ್ಷೆಗಳ ಮಟ್ಟದ ವರೆಗೆ ರೂಢಿಸಿಕೊಳ್ಳುವ ಪ್ರಯತ್ನಗಳು ನಡೆಯಲೇ ಬೇಕು. ಈ ಇಪ್ಪತ್ತು ವರುಷಗಳಲ್ಲಿ ಕ್ರಮಕ್ರಮವಾಗಿ ಶಾಸ್ತ್ರೀಯ ದೃಷ್ಟಿಯಿಂದ ಇಂತಹ ಪ್ರಯತ್ನಗಳು ನಡೆಯದಿರುವುದಕ್ಕೆ ನಮ್ಮಲ್ಲಿ ಭಾಷೆಯ ಬಗೆಗೆ ನಿಚ್ಚಳ ದೃಷ್ಟಿ ಇಲ್ಲದಿರುವುದೇ ಮೂಲಕಾರಣವಾಗಿದೆ. ಶುದ್ಧ ತಾತ್ವಿಕ ಹಾಗೂ ಶೈಕ್ಷಣಿಕ ದೃಷ್ಟಿಯೊಂದೇ ಇಂತಹ ಪ್ರಯತ್ನಗಳಲ್ಲಿ ಮುಖ್ಯ. ಇನ್ನಿತರ ರಾಜಕಾರಣ ದೃಷ್ಟಿಗಳು ಶೈಕ್ಷಣಿಕ ರಂಗಗಳಲ್ಲಿ ಗೊಂದಲವುಂಟು ಮಾಡಿರುವುದರಿಂದ ನಮ್ಮ ಜನತೆಗೆ ದಾರಿಕಾಣದಂತಾಗಿದೆ. ಭಾಷೆಯ ಉದ್ದೇಶಗಳು ಮುಖ್ಯವಾಗಿ ಎರಡು : ಒಂದು—ಜ್ಞಾನಗ್ರಹಣ (Comprehension), ಎರಡು ಗ್ರಹಿಸಿದ ಜ್ಞಾನವನ್ನು ನಿಸ್ಸಂದಿಗ್ಧವಾಗಿ ತಿಳಿಯಪಡಿಸುವುದು (Expression). ಇವೆರಡೂ ಉದ್ದೇಶಗಳೂ ತಾಯ್ನುಡಿಯಿಂದ ಮಾತ್ರ ತೃಪ್ತಿಕರವಾಗಿ ಸಾಧ್ಯ ಎಂಬ ತತ್ವ ಶಿಕ್ಷಣತಜ್ಞರಿಗೆ ಸಮ್ಮತವಾಗಿದೆ.

## ೨. ಪ್ರಾದೇಶಿಕ ಭಾಷೆಯೇ ಆಡಳಿತ ಹಾಗೂ ಶಿಕ್ಷಣದ ಮಾಧ್ಯಮ

ತಾಯ್ನುಡಿಯೇ ಒಂದೊಂದು ರಾಜ್ಯದ ಬಹುಸಂಖ್ಯೆಯ ಜನತೆಯ ನುಡಿಯಾಗಿರುವುದರಿಂದ ಒಂದೊಂದು ರಾಜ್ಯದ ಪ್ರಾದೇಶಿಕ ಭಾಷೆಯೇ ಆಡಳಿತ ಹಾಗೂ ಶಿಕ್ಷಣ ಮಾಧ್ಯಮವಾಗುವುದು ಕ್ರಮಪ್ರಾಪ್ತ. ಒಂದೊಂದು ರಾಜ್ಯದಲ್ಲೂ ಭಾಷಾದೃಷ್ಟಿಯಿಂದ ಅಲ್ಪಸಂಖ್ಯಾಕರೆನಿಸುವವರು—ಮನೆಮಾತು ತಂತಮ್ಮ ತಾಯ್ನುಡಿಯೇ ಆಗಿದ್ದರೂ—ಸಾಮಾಜಿಕ ವ್ಯವಹಾರ ಮತ್ತು ಶಿಕ್ಷಣ ಮಾಧ್ಯಮಗಳಿಗಾಗಿ ಪ್ರಾದೇಶಿಕ ಭಾಷೆಯನ್ನೇ ಕಲಿತುಕೊಳ್ಳಬೇಕಾದುದು ಅನಿವಾರ್ಯ.

ಈ ಬಗೆಗೆ ಭಾಷಾ ಅಲ್ಪ ಸಂಖ್ಯಾಕರು ಭಿನ್ನಾಭಿಪ್ರಾಯ ತಳೆಯುವುದೂ ದ್ವಿಧಾವೃತ್ತಿಯಿಂದ ನಡೆದುಕೊಳ್ಳುವುದೂ ರಾಷ್ಟ್ರದ ಒಟ್ಟಿನ ಸಾಮರಸ್ಯಕ್ಕೆ ಬಾಧಕಪ್ರಾಯವಾಗಿದೆ.

## ೮. ಕನ್ನಡಭಾಷೆ ಸತ್ವಯುತ

ಕನ್ನಡ ನಾಡಿನ ಪ್ರಾದೇಶಿಕ ಭಾಷೆಯಾಗಿರುವ ಕನ್ನಡವು ಸುಮಾರು ಎರಡು ಸಾವಿರ ವರುಷಗಳ ಬೆಳವಣಿಗೆಯಿಂದಾಗಿ ಸತ್ವಶಾಲಿಯೂ ಶ್ರೀಮಂತವೂ ಆದ ಭಾಷೆ. ಹಳಗನ್ನಡ, ನಡುಗನ್ನಡ, ಹೊಸಗನ್ನಡ ಇತ್ಯಾದಿ ಅವಸ್ಥೆಗಳಲ್ಲಿ ಪಳಗಿ ಬೆಳೆಯುತ್ತಿರುವ ಕನ್ನಡ ಸಾಹಿತ್ಯದ ವೈವಿಧ್ಯ-ವೈಪುಲ್ಯಗಳೇ ಇದಕ್ಕೆ ಸಾಕ್ಷಿ. ಕನ್ನಡ ಭಾಷೆಗೆ ಇಂದಿನ ನೂತನ ವೈಜ್ಞಾನಿಕ ವಿಷಯಗಳ ಪ್ರತಿಪಾದನೆಗೆ ಶಕ್ತಿ ಸಾಲದು ಎಂಬ ವಾದವನ್ನು ಮುಂದೊಡ್ಡಿ ಅದಕ್ಕೆ ವಿಶ್ವವಿದ್ಯಾಲಯದ ಶಿಕ್ಷಣ ಮಾಧ್ಯಮದ ಸ್ಥಾನ ಸಲ್ಲದೆಂದು ಹೇಳುವುದು ಸಯುಕ್ತಿಕವಾಗಿಲ್ಲ. ಭಾರತೀಯ ಸಾಹಿತ್ಯ, ಸಂಸ್ಕೃತಿ, ಶಾಸ್ತ್ರ, ಪುರಾಣ, ವೇದ-ವೇದಾಂತ ತತ್ವಗಳ ಪ್ರತಿಪಾದನೆ-ನಿರೂಪಣೆಗಳಿಗಾಗಿ ದ್ರಾವಿಡ ಭಾಷೆಗಳ ಸಾಕುತಾಯಿಯೂ ಭಾರತೀಯ ಸಂಸ್ಕೃತಿವಾಹಕವೂ ಎನಿಸಿರುವ ಸಂಸ್ಕೃತ ಭಾಷೆಯನ್ನು ಕನ್ನಡವು ಮೈಗೂಡಿಸಿಕೊಂಡು ಅನರ್ಘ್ಯ ಕೃತಿರತ್ನಗಳನ್ನು ರಚಿಸಿಲ್ಲವೆ? ಹಾಗೆಯೇ ಇಂದಿನ ನೂತನ ವಿಜ್ಞಾನ ವಾಹಕವೆನಿಸಿದ ಇಂಗ್ಲಿಷ್ ಪರಿಭಾಷೆಯನ್ನೂ ಕನ್ನಡ ಮತ್ತು ಇನ್ನಿತರ ಎಲ್ಲ ಪ್ರಬುದ್ಧ ಪ್ರಾದೇಶಿಕ ಭಾಷೆಗಳು ಸಮುಚಿತ ರೀತಿಯಲ್ಲಿ ಬಳಸಿಕೊಳ್ಳುವುದು ಸಾಧ್ಯವಿದೆ. ಈ ನಿಟ್ಟಿನಲ್ಲಿ ಅಖಿಲ ಭಾರತೀಯ ತಾಂತ್ರಿಕ ಹಾಗೂ ವೈಜ್ಞಾನಿಕ ಪರಿಭಾಷಾಕೋಶವೊಂದರ ಸಿದ್ಧತೆಯ ಏರ್ಪಾಟು ಈಗಾಗಲೇ ಕೇಂದ್ರ ಸರಕಾರದ ಯೋಜನೆಗಳಲ್ಲಿದೆಯೆಂದು ತಿಳಿದುಬರುತ್ತಿದೆ. ಅಂಥದೊಂದು ಪಾರಿಭಾಷಿಕ ಶಬ್ದಕೋಶ ಪ್ರಚಲಿತವಾಗುವ ಮುನ್ನ ಆಂಗ್ಲ ಪರಿಭಾಷೆಗೆ ಪ್ರತಿಯಾಗಿ ಕ್ರಮಬದ್ಧ ರೀತಿಯಲ್ಲಿ ತದ್ಭವೀಕರಿಸಿಯೋ, ಪ್ರತಿಶಬ್ದಗಳನ್ನು ರಚಿಸಿಯೋ ಇಲ್ಲವೆ ಅನಾಮತ್ತಾಗಿ ಮೂಲ ಆಂಗ್ಲ ಪದಗಳನ್ನೇ ತಾತ್ಪೂರ್ತಿಕ ಎರವಲಾಗಿ ಸ್ವೀಕರಿಸಿಯೋ ಕನ್ನಡ ಹಾಗೂ ಇತರ ಪ್ರಾದೇಶಿಕ ಭಾಷಾಮಾಧ್ಯಮಗಳಲ್ಲಿ ರೂಢಿಸಿಕೊಳ್ಳುವುದು ಸಾಧ್ಯವಿದೆ. ಶಿಕ್ಷಕರು, ಶಾಸ್ತ್ರವೇತ್ತರು, ಸಾಹಿತಿಗಳು, ತಜ್ಞ ಬರೆಹಗಾರರು ಮನಸ್ಸು ಮಾಡಿದಲ್ಲಿ ಮತ್ತು ನಮ್ಮ ಜನತಾ ಸರಕಾರಗಳು ಕಾನೂನುಬದ್ಧ ರೀತಿಯಲ್ಲಿ ಪ್ರೋತ್ಸಾಹ ನೀಡಿದಲ್ಲಿ ಅಲ್ಪ ಕಾಲಾವಧಿಯಲ್ಲಿಯೇ ವೈಜ್ಞಾನಿಕ ಪಠ್ಯಪುಸ್ತಕಗಳ ಕೊರತೆ ಬೇಗನೆ ನೀಗದಿರದು. ಅಂತೆಯೇ ವಿಜ್ಞಾನ ವಿಷಯಗಳನ್ನು ಕನ್ನಡದಲ್ಲಿ ಪಾಠ ಹೇಳಬಲ್ಲ ಶಿಕ್ಷಕರ ಕೊರತೆಯೂ ಉಂಟಾಗಲಾರದು. ಬೇಡಿಕೆಯಿದ್ದಂತೆ ಪೂರೈಕೆ. ಕರ್ನಾಟಕದ ಕೆಲ ಭಾಗಗಳಲ್ಲಿ ಕಳೆದ ಕಾಲು ಶತಮಾನದಿಂದಲೇ ಮಾಧ್ಯಮಿಕ ಮಟ್ಟದ ಶಿಕ್ಷಣವೆಲ್ಲ ಕನ್ನಡ ಮಾಧ್ಯಮದಲ್ಲಿಯೇ ನಡೆಯುತ್ತ ಬಂದಿದೆ. ಇದರ ಪರಿಣಾಮವಾಗಿ ಕನ್ನಡ ವೈಜ್ಞಾನಿಕ ಪರಿಭಾಷಾ ಸಂಗ್ರಹವೂ ಕೆಲಮಟ್ಟಿಗೆ ಅಭಿವೃದ್ಧಿ ಹೊಂದಿದೆ. ಹಲವಾರು ವೈಜ್ಞಾನಿಕ ಪಠ್ಯಪುಸ್ತಕಗಳು ರಚಿತವಾಗಿವೆ. ಆದರೆ ಈ ನಿಟ್ಟಿನಲ್ಲಿ ಪ್ರಗತಿ ಇನ್ನೂ ಆಗಬೇಕಾಗಿದೆ. ಮಾಧ್ಯಮಿಕ ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿ ಪೂರೈಸಿಕೊಂಡ ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾಲಯ ಶಿಕ್ಷಣ ಮಾಧ್ಯಮವು ಇನ್ನೂ ಇಂಗ್ಲಿಷ್ ಭಾಷೆಯೇ ಆಗಿರುವುದು ಅಸ್ವಾಭಾವಿಕ. ಇದರಿಂದ ಮಾಧ್ಯಮಿಕ ಶಿಕ್ಷಣದ ಕೊನೆಯ ಪರೀಕ್ಷೆ (ಎಸ್. ಎಸ್. ಎಲ್. ಸಿ.)ಯಲ್ಲಿ ಪ್ರಥಮ ತರಗತಿಯಲ್ಲಿ ತೇರ್ಗಡೆಯಾದ ಎಷ್ಟೋ ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾಲಯದ ಪರೀಕ್ಷೆಗಳಲ್ಲಿ ದೊರೆಯಬೇಕಾದಷ್ಟು ಅಂಕಗಳು ದೊರೆಯದೆ, ಹಲವು

ಸಲ ಅವರ ಉಚ್ಚಮಟ್ಟದ ವಿದ್ಯಾಭ್ಯಾಸ ಯಶಸ್ವಿಯಾಗದಂತಹ ಉದಾಹರಣೆಗಳೂ ಇವೆ. ಇತ್ತೀಚೆಗೆ ವಿಶ್ವವಿದ್ಯಾಲಯದ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುವ ವಿದ್ಯಾರ್ಥಿಗಳ ಪ್ರತಿಶತ ಪ್ರಮಾಣ ಹಾಸ್ಯಾಸ್ಪದವೆನಿಸುವಷ್ಟು ಕೆಳಮಟ್ಟಕ್ಕಿಳಿದಿದೆ. ಇದೀಗ ಕನ್ನಡ ನಾಡಿನ ವಿಶ್ವವಿದ್ಯಾಲಯಗಳೆಲ್ಲವೂ ಕನ್ನಡವನ್ನೇ ವಿಶ್ವವಿದ್ಯಾಲಯದ ಶಿಕ್ಷಣ ಹಾಗೂ ಪರೀಕ್ಷೆಯ ಮಾಧ್ಯಮವಾಗಿಸುವ ಕ್ರಮಬದ್ಧ ಯೋಜನೆ ನಡೆಸಿರುದು ಸೂಕ್ತವಾಗಿದೆ.

## ೯. ಸಂಪರ್ಕ ಭಾಷೆಗಳ ನೆರವು

ನಮ್ಮ ರಾಷ್ಟ್ರದ ವಿದ್ಯಾರ್ಥಿಗಳು ಪ್ರಾದೇಶಿಕ ಭಾಷಾ ಮಾಧ್ಯಮದಲ್ಲಿಯೇ ಶಿಕ್ಷಣ ಪಡೆಯುತ್ತ ಹೋದಲ್ಲಿ, ಭಾರತದ ಇತರ ರಾಜ್ಯಗಳಿಗೆ ಮತ್ತು ವಿದೇಶಗಳಿಗೆ ಉಚ್ಚ ಶಿಕ್ಷಣಕ್ಕಾಗಿ ಹೋಗಿಬರುವ, ಕೇಂದ್ರ ಸರಕಾರದ ಸೇವಾಸಿಬ್ಬಂದಿಗಳಲ್ಲಿ ಪ್ರವೇಶ ದೊರಕಿಸುವ ಸಾಧ್ಯತೆ ಕಡಿಮೆಯಾಗುವದೆಂಬ ವಾದವೂ ಇದೆ. ಇದರಲ್ಲೂ ಅಷ್ಟೊಂದು ಹುರುಳಿಲ್ಲ. ಯಾಕೆಂದರೆ, ಅಖಿಲ ಭಾರತ ಸಂಪರ್ಕ ಭಾಷೆಯಾಗಲಿರುವ ಹಿಂದೀ ಒಂದೆಡೆ, ಅಂತರಾಷ್ಟ್ರೀಯ ಸಂಪರ್ಕ ಭಾಷೆಯಾಗಿರುವ ಇಂಗ್ಲಿಷ್ ಇನ್ನೊಂದೆಡೆ ನಮ್ಮ ವಿದ್ಯಾರ್ಥಿಗಳ ನೆರವಿಗೆ ಇದ್ದೇ ಇವೆ. ಈ ಎರಡು ಸಂಪರ್ಕ ಭಾಷೆಗಳ ಬಗೆಗೆ ನಿಚ್ಚಳ ಕಲ್ಪನೆಯಿರುವುದು ಆವಶ್ಯಕ.

## ೧೦. ಅಖಿಲ ಭಾರತದ ಸಂಪರ್ಕ ಭಾಷೆ–ಹಿಂದೀ

ರಾಜ್ಯ-ರಾಜ್ಯಗಳ ಹಾಗೂ ಕೇಂದ್ರ-ರಾಜ್ಯಗಳ ನಡುವೆ ಆಡಳಿತ ವ್ಯವಹಾರಕ್ಕಾಗಿ ಅಖಿಲ ಭಾರತ ಸಂಪರ್ಕ ಭಾಷೆ ಹಿಂದೀ ಇರಬೇಕೆಂಬ ಅಂಶ ಭಾರತ ಸಂವಿಧಾನದಲ್ಲಿ ಸೇರ್ಪಡೆಯಾಗಿದೆ. ಇದು ಯೋಗ್ಯವೇ ಸರಿ. ಯಾಕೆಂದರೆ, ಭಾರತದ ಹದಿನಾಲ್ಕು ರಾಷ್ಟ್ರೀಯ ಭಾಷೆಗಳಲ್ಲಿ ಹಿಂದೀ ಮಾತನಾಡುವ ಜನಸಂಖ್ಯೆಯೇ ಎಲ್ಲಕ್ಕೂ ದೊಡ್ಡದು. ಭಾರತದ ಒಟ್ಟು ಜನಸಂಖ್ಯೆಯ ಅರ್ಧದಷ್ಟು ಜನಕ್ಕೆ ಹಿಂದೀ ಪರಿಚಿತ ಭಾಷೆ. ಉತ್ತರ ಭಾರತದ ಭಾಷೆಗಳೆಲ್ಲ ಸಂಸ್ಕೃತ-ಪ್ರಾಕೃತ ಜನ್ಯ ಭಾಷೆಗಳೇ ಆಗಿರುವುದರಿಂದ ಉತ್ತರ ಭಾರತೀಯರಿಗೆ ಹಿಂದೀ ಕಲಿಯಲು ಬಹು ಸುಲಭ. ಇನ್ನು ದಕ್ಷಿಣ ಭಾರತದ ಭಾಷೆಗಳೆಲ್ಲವೂ ದ್ರಾವಿಡ ಗುಂಪಿಗೆ ಸೇರಿದ್ದು ದಕ್ಷಿಣ ಭಾರತೀಯರಿಗೆ ಹಿಂದಿ ಕಲಿಯುವುದು ಅಷ್ಟು ಸುಲಭವಲ್ಲ ಎಂಬುವದನ್ನು ಒಪ್ಪಬೇಕು. ಆದರೂ ದಕ್ಷಿಣ ಭಾರತೀಯರಿಗೆ ಹಿಂದಿ ಕಲಿಯುವುದು ಅಸಾಧ್ಯವೇನಲ್ಲ ಎಂಬುದೂ ಅನುಭವದ ಮಾತಾಗಿದೆ. ಇಂದು ಹಿಂದೀ ಅನೇಕ ಕಾರಣಗಳಿಂದ ಭಾರತದ ತುಂಬೆಲ್ಲ ಚಿರಪರಿಚಿತ ಭಾಷೆ ಎನಿಸುವಷ್ಟು ಪ್ರಚಾರವಾಗುತ್ತಲೇ ಇದೆ. ಭಾರತದ ಆದ್ಯಂತ-ವಾಸಿಸುತ್ತಿದ್ದ ನಮ್ಮ ಮುಸಲ್ಮಾನ ಬಂಧುಗಳ ಭಾಷೆಯಾಗಿರುವ ಉರ್ದು ಹಿಂದೀ ಭಾಷೆಗೆ ತೀರ ಹತ್ತಿರ ಸಂಬಂಧವುಳ್ಳದ್ದು. ಹಿಂದೀ ಮಾತನಾಡುವವರಿಗೆ ಉರ್ದು ತಿಳಿಯುದಿಲ್ಲ, ಉರ್ದು ಮಾತನಾಡುವವರಿಗೆ ಹಿಂದೀ ತಿಳಿದುಕೊಳ್ಳಲು ಕಷ್ಟವೆನಿಸದು. ಹಿಂದೀ-ಉರ್ದು ಮಾತುಗಳು ಒಂದಿಲ್ಲೊಂದು ಕಾರಣದಿಂದ ದಕ್ಷಿಣ ಭಾರತೀಯರ ಕಿವಿಗೆ ಪ್ರತಿನಿತ್ಯ ಬೀಳುತ್ತಲೇ ಇರುತ್ತವೆ. ಆದಕಾರಣ ಹಿಂದೀ ಭಾಷೆ ದಕ್ಷಿಣ ಭಾರತೀಯರಿಗೆ ಕಲಿತುಕೊಳ್ಳಲು ಅಸಾಧ್ಯವೆನಿಸುವಷ್ಟು ಅಪರಿಚಿತವೇನಲ್ಲ-ಅಲ್ಲದೆ, ಸ್ವಾತಂತ್ರ್ಯ ಪೂರ್ವದ ಮೂರು ನಾಲ್ಕು ದಶಕಗಳಿಂದಲೇ ಮಹಾತ್ಮರ ದೂರದರ್ಶಿ ಆಂದೋಲನದ ಪರಿಣಾಮವಾಗಿ

ಭಾರತದಾದ್ಯಂತವಾಗಿ ಹಿಂದೀ ಭಾಷೆ ಪ್ರಚಾರಗೊಳ್ಳುತ್ತಲೇ ಬಂದಿದೆ. ಅದರಲ್ಲೂ ತೆಲುಗು, ತಮಿಳು, ಮಲೆಯಾಳಂ, ಕನ್ನಡ ಮೊದಲಾದ ದ್ರಾವಿಡ ಭಾಷಾ ಪ್ರದೇಶಗಳಲ್ಲಿ ಹಿಂದೀ ಭಾಷಾ ಪ್ರಚಾರ ಕೇಂದ್ರಗಳು ವ್ಯವಸ್ಥಿತವಾಗಿ ಹಿಂದೀ ಅಧ್ಯಾಪನ ಕಾರ್ಯಗಳನ್ನು ಎಂದಿನಿಂದಲೂ ನಡೆ ಸುತ್ತಲಿವೆ. ಇವರ ಫಲವಾಗಿ ದಕ್ಷಿಣ ಭಾರತೀಯರೆನಿಸುವ ಹಲವರಲ್ಲಿ ಕಂಡುಬರುತ್ತಿರುವ ಹಿಂದೀ ಭಾಷಾ ಪ್ರಭುತ್ವ ಹಿಂದೀ ಮನೆಮಾತಾಗಿರುವ ಉತ್ತರ ಭಾರತೀಯರನ್ನೂ ಬೆರಗು ಗೊಳಿಸುವಂತಿದೆ! ಆದ್ದರಿಂದ ಹಿಂದೀ ಭಾಷೆ ಭಾರತದ ಸಂಪರ್ಕ ಭಾಷೆಯಾಗಲು ಸರ್ವಥಾ ಅರ್ಹವಾಗಿದೆ.

## ೧೧. ಇಂಗ್ಲಿಶ್ ಜತೆಗೆ ಹಿಂದೀ - ತಾತ್ಕಾಲಿಕ ವ್ಯವಸ್ಥೆ

ಆದರೆ ಈಗಲೇ ಹಿಂದಿಯನ್ನು ಇಂಗ್ಲಿಶ್ ಭಾಷೆಯ ಸ್ಥಾನದಲ್ಲಿ ಸಂಪರ್ಕ ಭಾಷೆಯೆಂದು ಚಲಾವಣೆಯಲ್ಲಿ ತರಲು ಹಲವರ ವಿರೋಧವಿದೆ. ಇದಕ್ಕೆ ಸೂಕ್ತ ಕಾರಣಗಳಿಲ್ಲದಿಲ್ಲ. ಭಾರತದ ಎಲ್ಲ ರಾಜ್ಯಗಳಲ್ಲೂ-ಅದರಲ್ಲೂ ವಿಶೇಷವಾಗಿ ದಕ್ಷಿಣ ಭಾರತದ ಎಲ್ಲೆಡೆಗಳಲ್ಲೂ ಹಿಂದೀ ಭಾಷೆ ವಿಶೇಷವಾಗಿ ಪ್ರಚಾರಗೊಂಡು ಜನತೆಗೆಲ್ಲ ಅರ್ಥವಾಗುವಷ್ಟರಮಟ್ಟಿಗೆ ಅದು ಜನಸಂಪರ್ಕವನ್ನು ನಿಕಟವಾಗಿ ಪಡೆಯುವುದು ಆವಶ್ಯಕ. ಅಲ್ಲಿಯವರೆಗೆ ಹಿಂದೀ ಭಾಷೆಯನ್ನು ಭಾರತದ ಏಕೈಕ ಸಂಪರ್ಕ ಭಾಷೆಯೆಂದು ದಕ್ಷಿಣ ಭಾರತೀಯರ ಮೇಲೆ ಒತ್ತಾಯದಿಂದ ಹೇರುವುದು ಸಮಂಜಸ ವಲ್ಲ. ದಕ್ಷಿಣ ಭಾರತೀಯರೆಲ್ಲರೂ ಸ್ವಸಂತೋಷದಿಂದ ಹಿಂದೀ ಭಾಷೆಯನ್ನು ಸಂಪರ್ಕ ಭಾಷೆ ಯೆಂದು ಸ್ವೀಕರಿಸಲೊಪ್ಪುವವರೆಗೆ ಈ ಬಗೆಗೆ ದುಡುಕು ಕೂಡದೆಂದು ಹಿಂದೊಮ್ಮೆ ದಿ|| ಜವಾ ಹರಲಾಲ್ ನೆಹ್ರೂ ಅವರು ಹೇಳಿದ ಮಾತು ಯುಕ್ತಿಯುಕ್ತವೂ ದೂರದೃಷ್ಟಿಯದೂ ಆಗಿದೆ. ಅಲ್ಲಿಯವರೆಗೆ ಸದ್ಯದ ಸಂಪರ್ಕ ಭಾಷೆಯಾಗಿರುವ ಇಂಗ್ಲಿಷ್ ಭಾಷೆಯೊಂದಿಗೆ ಹಿಂದಿಯನ್ನು ರಾಜ್ಯ-ರಾಜ್ಯಗಳ ಹಾಗೂ ಕೇಂದ್ರ-ರಾಜ್ಯಗಳ ಆಡಳಿತ ವ್ಯವಹಾರಗಳಲ್ಲಿ ರೂಢಿಸಿಕೊಂಡು ಹೋಗುವುದು ವ್ಯಾವಹಾರಿಕ. ದಕ್ಷಿಣ ಭಾರತದ ಕೆಲವು ರಾಜ್ಯಗಳಲ್ಲಿ ಹಿಂದೀ ವಿರೋಧವು ಅಸ್ವಾಭಾವಿಕ ಸ್ವರೂಪ ತಳೆದಿರುವುದು ಭಾರತ ರಾಷ್ಟ್ರದ ಭಾವೈಕ್ಯದ ದೃಷ್ಟಿಯಿಂದ ಒಳ್ಳೆಯ ಲಕ್ಷಣವಲ್ಲ. ದಕ್ಷಿಣದವರ ಈ ಹಿಂದೀ ವಿರೋಧವು ಹಿಂದೀ ಮನೆಮಾತಾಗಿರುವ ಉತ್ತರದವರ ದುಡುಕುತನದ ಅತಿರೇಕಕ್ಕೊಂದು ಉತ್ತರವಿದ್ದಂತೆಯೂ ಇದೆ. ದಕ್ಷಿಣದವರೇ ಆಗಲಿ, ಉತ್ತರ ದವರೇ ಆಗಲಿ-ಎಲ್ಲರೂ ಭಾರತೀಯರೇ ಅಲ್ಲವೆ? ಆದಕಾರಣ, ಸದ್ಯ ತಾತ್ಕಾಲಿಕವಾಗಿ ಹಿಂದೀ ಮತ್ತು ಇಂಗ್ಲಿಶ್ ಭಾಷೆಗಳೆರಡೂ ಕೆಲಕಾಲ ಕೂಡಿಯೇ ಸಂಪರ್ಕ ಭಾಷೆಗಳಾಗಿ ಚಲಾ ವಣೆಯಲ್ಲಿರುವುದರಲ್ಲಿ ದೇಶದ ಹಿತವಿದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಕ್ರಮಗ ಳಲ್ಲಿ ಹಿಂದೀ ಮತ್ತು ಇಂಗ್ಲಿಶ್ ಭಾಷೆಗಳನ್ನು ವ್ಯಾವಹಾರಿಕ ದೃಷ್ಟಿಯಿಂದ ತೃಪ್ತಿಕರವಾಗಿ ವ್ಯಾಸಂಗ ನಡೆಸುವಂತೆ ತಕ್ಕ ಏರ್ಪಾಟುಗಳನ್ನು ಒದಗಿಸಿಕೊಡುವುದು ಆವಶ್ಯಕ. ಈ ಎರಡೂ ಭಾಷೆಗಳ ವ್ಯಾವಹಾರಿಕ ಜ್ಞಾನವನ್ನು ಪ್ರತಿಯೊಬ್ಬ ದಕ್ಷಿಣ ಭಾರತೀಯನು ಅತ್ಯಗತ್ಯವಾಗಿ ಪಡೆಯಲೇಬೇಕೆಂಬ ನಿಯಮವಿರಬೇಕು, ಇಂದಿನ ಶಿಕ್ಷಣ ಕ್ರಮ (curriculum)ಗಳಲ್ಲಿ ಈ ಒಂದಂಶವೂ ಸೇರ್ಪಡೆಯಾಗಬೇಕು.

## ೧೨. ತ್ರಿಭಾಷಾಸೂತ್ರ

ತ್ರಿಭಾಷಾ ಸೂತ್ರದ ಮೂಲೋದ್ದೇಶವು ಇದೇ ಆಗಿದೆ: ಪ್ರತಿಯೊಂದು ರಾಜ್ಯದಲ್ಲಿ ಅಲ್ಲಿಯ ಪ್ರಾದೇಶಿಕ ಭಾಷೆಗೆ ಎಲ್ಲ ಕ್ಷೇತ್ರಗಳಲ್ಲಿ ಪ್ರಥಮ ಸ್ಥಾನವಿರಬೇಕು. ಅನಂತರದ ಸ್ಥಾನ ಸಂಪರ್ಕ ಭಾಷೆಯಾಗಲಿರುವ ಹಿಂದೀ ಭಾಷೆಗೆ. ಮೂರನೆಯ ಸ್ಥಾನ ಅಂತಾರಾಷ್ಟ್ರೀಯ ಸಂಪರ್ಕ ಭಾಷೆಯೆನಿಸಿರುವ ಇಂಗ್ಲಿಶ್ ಭಾಷೆಗೆ. ಇನ್ನು ಹಿಂದೀ ಪ್ರಾದೇಶಿಕ ಭಾಷೆಯಾಗಿರುವ ಉತ್ತರ ಭಾರತದ ರಾಜ್ಯಗಳಲ್ಲಿ ಭಾರತದ ಭಾವೈಕ್ಯ ದೃಷ್ಟಿಯಿಂದ ದಕ್ಷಿಣದ ಯಾವೊಂದು ಭಾಷೆಯ ವ್ಯಾಸಂಗದ ಏರ್ಪಾಟು ಅಲ್ಲಿಯ ಶಿಕ್ಷಣ ಕ್ರಮದಲ್ಲಿರಬೇಕಾದುದು ತ್ರಿಭಾಷಾಸೂತ್ರದ ಉದ್ದೇಶ ಸಾಧನೆಗೆ ಪೋಷಕವಾಗಿದೆ. ಈ ತ್ರಿಭಾಷಾ ಸೂತ್ರವನ್ನು ಎಲ್ಲ ರಾಜ್ಯಗಳವರೂ ಒಪ್ಪಿಕೊಂಡು ಭಾರತ ರಾಷ್ಟ್ರದ ಸರ್ವಾಂಗೀಣ ಪ್ರಗತಿ ಸಾಧಿಸುವ ಗುರಿ ನಮಗಿರಬೇಡವೆ? ಈ ತ್ರಿಭಾಷಾ ಸೂತ್ರದ ಪ್ರಾಮಾಣಿಕ ಅನುಸರಣೆಯಿಂದ ಅತ್ಯಲ್ಪ ಕಾಲಾವಧಿಯಲ್ಲಿಯೇ ಇಡಿಯ ಭಾರತದ ಜನತೆ ಈ ಭಾಷಾ ಸಮಸ್ಯೆಯ ತೊಡಕಿನಿಂದ ಮುಕ್ತವಾಗುವ ಸಾಧ್ಯತೆ ಇದೆ. ಮತ್ತು ಈ ತಾತ್ಪೂರ್ತಿಕ ವ್ಯವಸ್ಥೆಯ ಕಾಲಾವಧಿಯಲ್ಲಿ ಹಿಂದೀಭಾಷೆ ಇಂಗ್ಲಿಶ್ ಭಾಷೆಯಷ್ಟೇ ಸಮರ್ಥ ಸಂಪರ್ಕ ಭಾಷೆಯಾಗುವಂತೆ ಅದರ ಸರ್ವಾಂಗೀಣ ಅಭಿವೃದ್ಧಿಗೆ ತಕ್ಕ ಯೋಜನೆಗಳನ್ನು ಹೂಡಿ ಅವುಗಳಿಗೆ ಅನುಗುಣವಾಗಿ ಕಾರ್ಯಪ್ರವೃತ್ತರಾಗುವುದು ಪ್ರತಿಯೊಬ್ಬ ಭಾರತೀಯನ ಕರ್ತವ್ಯ.

## ೧೩. ಕನ್ನಡ–ಹಿಂದೀ ಪರಸ್ಪರ ಪೋಷಣೆ

ಹಿಂದೀ ಸಂಪರ್ಕಭಾಷೆಯಾದಲ್ಲಿ ಅದರ ಪ್ರಾಬಲ್ಯ ಹೆಚ್ಚಿ ದಕ್ಷಿಣ ಭಾರತದ ಇತರ ಭಾಷೆಗಳ ಬೆಳವಣಿಗೆ ಕುಗ್ಗುವುದೆಂಬ ವಾದ ಹುಸಿಹೆದರಿಕೆಯದು. ಪ್ರಾದೇಶಿಕ ಭಾಷೆಗೆ ಪ್ರತಿಯೊಂದು ರಾಜ್ಯದಲ್ಲಿ ಒಳ ಆಡಳಿತ ಹಾಗೂ ಶಿಕ್ಷಣ ಮಾಧ್ಯಮದ ಸ್ಥಾನಮಾನಗಳು ಅಬಾಧಿತವಾಗಿ ಇರಲೇಬೇಕೆಂದಿರುವಾಗ ಸಂಪರ್ಕ ಭಾಷೆಯಾಗಲಿರುವ ಹಿಂದಿಯ ಪ್ರಭಾವ ಎಷ್ಟು ಹೆಚ್ಚಿದರೂ ಪ್ರಾದೇಶಿಕ ಭಾಷೆಗೆ ಕುಂದುಬಾರದು. ಸಂಪರ್ಕಭಾಷೆಯ ಮತ್ತು ಪ್ರಾದೇಶಿಕ ಭಾಷೆಗಳ ಕಾರ್ಯವಲಯಗಳು ಮತ್ತು ಧ್ಯೇಯೋದ್ದೇಶಗಳು ಬಹುಮಟ್ಟಿಗೆ ಭಿನ್ನವಾಗಿರುವಾಗ ಸಂಪರ್ಕ ಭಾಷೆಯಿಂದ ಪ್ರಾದೇಶಿಕ ಭಾಷೆಯ ಅಸ್ತಿತ್ವಕ್ಕಾಗಲಿ ಜೀವಣಿಗೆಗಾಗಲಿ ಬಾಧೆ ತಟ್ಟೀತೆಂಬ ಭಯ ಅಪಾಸ್ತವ. ದಕ್ಷಿಣ ಭಾರತದ ಪ್ರಾದೇಶಿಕ ಭಾಷೆಗಳು ಸತ್ವದಲ್ಲಿ ಮತ್ತು ಶ್ರೀಮಂತಿಕೆಯಲ್ಲಿ ಹಿಂದೀ ಭಾಷೆಗಿಂತಲೂ ಮಿಗಿಲಾಗಿದ್ದು ಈ ಭಾಷಾಸಂಪರ್ಕ–ಸಂಸ್ಪರ್ಧೆಗಳ ಪರಿಣಾಮವಾಗಿ ಪರಸ್ಪರ ಸತ್ವಾಭಿವೃದ್ಧಿಗೂ ಪೋಷಣೆಯೇ ಒದಗೀತು. ಅಲ್ಲದೆ ಪ್ರಾದೇಶಿಕ ಭಾಷೆಗಳ ಸರ್ವಾಂಗೀಣ ಅಭಿವೃದ್ಧಿಗೂ ಕ್ರಮಬದ್ಧವಾದ ಯೋಜನೆಗಳಿರಲೇಬೇಕೆಂಬುದನ್ನು ಬೇರೆ ಹೇಳಬೇಕೆ?

## ೧೪. ಮುಖ್ಯಗುರಿ - ರಾಷ್ಟ್ರದ ಪ್ರಗತಿ

ಒಟ್ಟಿನಲ್ಲಿ, ಭಾರತರಾಷ್ಟ್ರದ ಪ್ರಜಾಪ್ರಭುತ್ವದ ಯಶಸ್ವೀಸಾಧನೆಗೆ ನಮ್ಮೀಭಾಷಾ ಸಮಸ್ಯೆ ಕಾಲ್ತೊಡಕಾಗಕೂಡದು. ಇದೀಗ ಭಾಷಾಸಮಸ್ಯೆ ಭಾರತದ ಐಕ್ಯತೆಗೆ ಗಂಡಾಂತರಕಾರಿ

ಯಾಗುತ್ತಿರುವಂತೆ ಭಾಸವಾಗುತ್ತಿರುವುದು ಒಂದು ಅನಿಷ್ಟ. ಈ ಅನಿಷ್ಟ ತೊಲಗುವಂತೆ ನೋಡಿಕೊಳ್ಳಲೆಂದೇ ತಜ್ಞರಾದವರು ತ್ರಿಭಾಷಾ ಸೂತ್ರವನ್ನು ದೇಶದ ಮುಂದೆ ಇರಿಸಿದ್ದಾರೆ. ಅದೇ ಸದ್ಯದ ನಮ್ಮ ತ್ರಿಭಾಷಾ ಸಮಸ್ಯೆಗೆ ಪರಿಹಾರ ಸೂತ್ರವೆಂದು ಕಾಣುತ್ತದೆ. ಇದರಿಂದ ಭಾಷೆಯ ಪ್ರಶ್ನೆ ಬೇಗನೆ ಬಗೆಹರಿದು ಭಾರತದ ಕೋಟ್ಯಂತರ ಜನತೆಯ ಮುಖ್ಯ ಗುರಿಯಾಗಿರುವ ಸುಖೀರಾಷ್ಟ್ರದತ್ತ ಪ್ರಗತಿಯ ಹೆಜ್ಜೆ ಇರಿಸುವುದು ಪ್ರತಿಯೊಬ್ಬ ಭಾರತೀಯನ ಪವಿತ್ರ ಕರ್ತವ್ಯವಾಗಿದೆ.*

---

* ಈ ಲೇಖನವು ದಿನಾಂಕ ೧೦-೮-೧೯೬೬ರಂದು ಬರೆದುದು.

—ಲೇಖಕ

# ಶ್ರೀ ವಿನಾಯಕರ 'ದ್ಯಾವಾಪೃಥಿವೀ'

[ಒಂದು ಸಮಾಲೋಚನೆಯ ವಿವೇಚನೆ]

---

**ಆರ್. ಜಿ. ಕುಲಕರ್ಣಿ**




## ೧. ನೀರದ

ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ೧೯೬೪ನೆಯ ಡಿಸೆಂಬರ್ ಸಂಚಿಕೆಯಲ್ಲಿ ಶ್ರೀ ಗೌರೀಶ ಕಾಯ್ಕಿಣಿಯವರು ಶ್ರೀ ವಿನಾಯಕರ "ದ್ಯಾವಾಪೃಥಿವೀ" ಕವನ ಸಂಕಲನದ ಪ್ರೌಢ ಸಮಾಲೋಚನೆ ನೀಡಿದ್ದಾರೆ. ಶ್ರೀ ಕಾಯ್ಕಿಣಿಯವರು ರಸಪ್ರಜ್ಞೆಯುಳ್ಳವರು; ತಾತ್ವಿಕ ಪರಿಭಾಷೆಯ ವಿವೇಕ ಉಳ್ಳವರು. "ದ್ಯಾವಾ ಪೃಥಿವೀ" ಕಾವ್ಯದ ರಸಸೌಂದರ್ಯ, ಪ್ರತಿಮಾಸೌರಭ ಸಾಕಷ್ಟು ಸವಿದವರು. ಅವರ ಲೇಖನದ ಪ್ರಾರಂಭ ಹಾಗೂ ಕೊನೆಯಲ್ಲಿ ರಸಾನುಭವದ ಪ್ರತ್ಯಕ್ಷ ಸಾಕ್ಷ್ಯವಿದೆ. ಇಂಥವರು ಈ "ದ್ಯಾವಾಪೃಥಿವಿಯಲ್ಲಿ" ಮೂಲಭೂತ ದೋಷಗಳನ್ನು, ವಿಸಂಗತಿಗಳನ್ನು ಕಂಡು, ಪ್ರೌಢರೀತಿಯಲ್ಲಿ ವಿಶ್ಲೇಷಣೆ ಮಾಡಿರುವದರಿಂದ ಅವರ ಸಮಾಲೋಚನೆಯನ್ನು ವಿಶ್ಲೇಷಣೆ ಮಾಡುವುದು ಅಗತ್ಯವಾಗಿದೆ. ಆದರೆ ಈ ವಿಶ್ಲೇಷಣೆ, ವಕೀಲರ ವಾದವಿವಾದದಂತೆ, ಪ್ರತಿವಾಕ್ಯ, ಪ್ರತಿಟೀಕೆಯ ಪ್ರತಿಭಟನಾರೂಪದಲ್ಲಿರುವುದು ಅಗತ್ಯವಿಲ್ಲ. ಮೂಲಭೂತ ಸಮಸ್ಯೆಗಳ ವಿವೇಚನೆಯಿಂದ ದ್ಯಾವಾಪೃಥಿವಿಯ ರಸಾನುಭವಕ್ಕೆ ಹೊಸದೊಂದು ದೃಷ್ಟಿಕೋನ ಬರಲು ಸಾಧ್ಯವಿದೆ ಎಂದು ಭಾವಿಸಿ ಈ "ಸಮಾಲೋಚನೆಯ ವಿವೇಚನೆ" ಮಾಡಲಾಗಿದೆ.

### ನೀರದ ಕಾವ್ಯದ ಅಖಂಡತ್ವ

ಪ್ರಸ್ತುತ ಸಂಚಿಕೆಯಲ್ಲಿ (೧೯೬೪ ಡಿಸೆಂಬರ್) ಶ್ರೀ ಕಾಯ್ಕಿಣಿಯವರು "ದ್ಯಾವಾಪೃಥಿವೀ" ಕವನಸಂಕಲನದ "ನೀರದ" ಕವನ, ರಸವತ್ತಾದ ಭಾಗಗಳಿಂದ ಕೂಡಿದ್ದರೂ ಅಖಂಡವಾಗಿಲ್ಲವೆಂದು ಭಾವಿಸಿರುವುದು ಪ್ರಧಾನ ಸಮಸ್ಯೆಯಾಗಿದೆ. ಆದರೆ "ದ್ಯಾವಾಪೃಥಿವೀ"ಯಲ್ಲಿ ಅಖಂಡಾನುಭವ ಪಡೆಯುವ ಸಹೃದಯನಿಗೆ ಎಂಥ ದರ್ಶನ ಹೊಳೆಯುತ್ತದೆ? ಆ ದರ್ಶನದ ಹೊಳಹು ಕಂಡು ತದನಂತರ ಶ್ರೀ ಕಾಯ್ಕಿಣಿಯವರ ಸಮಾಲೋಚನೆಯ ವಿಶ್ಲೇಷಣೆ ಮಾಡುವುದು ಉಚಿತವೆಂದು ಕಾಣುತ್ತದೆ.

"ದ್ಯಾವಾಪೃಥಿವೀ"ಯ (೧) ನೀರದ (೨) ಇಕ್ಷ್ವಾಯಣ (೩) ಇಳಾಗೀತ – ಈ ಮೂರೂ ಭಾಗಗಳು ಒಂದೇ ಒಂದು ರಸಾನುಭವದ ತ್ರಿಮುಖಗಳಾಗಿವೆ.

"ನೀರದ"ದಲ್ಲಿ ಹೊಳೆದ ಶುಭ್ರಸ್ಫಟಿಕದಂಥ ಮಾನವೀಯ ವ್ಯಕ್ತಿತ್ವವು ಶುದ್ಧವಾದರೂ ಅಪೂರ್ಣವಿದೆ.

"ಸ್ಫಟಿಕದಂತೆ ಶುಭ್ರವಿರುವಿ : ಬಣ್ಣದಾಟ ಬೇಡವೆ?
ಬರಿಯಮಂಜಿನಾಕೃತಿ : ಸುಭಗಾಕೃತಿನೋಡೆವೆ?
ಮೌನವಿದೆ; ಗಾನವೆಲ್ಲಿ? ತಂತಿಯಿದೆ; ತಾನವೆಲ್ಲಿ?
ಸಾಕ್ಷಿಯಿದೆ; ಸೃಷ್ಟಿಯೆಲ್ಲಿ? ಸುರಸವೃಷ್ಟಿಯೆಲ್ಲಿ?"

ಶುದ್ಧ – ಸಾಕ್ಷಿಯಂತಿದ್ದ ಮಾನವ ವ್ಯಕ್ತಿತ್ವವು ನವಸೃಷ್ಟಿಯ ಶಕ್ತಿಯನ್ನು ಪಡೆದು ವಿರಾಟ್ ದರ್ಶನ ಹೊಂದುವುದರಲ್ಲಿ "ಇಕ್ಷ್ವಾಯಣ"ದ ಉಗಮವಿದೆ. ಈ ವಿರಾಟ್ ದರ್ಶನವು ಮಾನವ ಕುಲದ ನವಮನ್ವಂತರಕಾರಕವಾಗುವದೆಂದು ಧ್ವನಿಸಿ ಕವನ ಮುಕ್ತಾಯಗೊಳ್ಳುತ್ತದೆ. ಈ ಎರಡು ಅಂಶಗಳನ್ನೊಳಗೊಂಡರೂ ಒಂದೇ ಗೀತವಾಗಿ ಪ್ರವಹಿಸಿರುವದು – ಇಳಾಗೀತ. ನೀರದದ ಮುಗಿಲಿನ ರಾಜ್ಯ, ಇಕ್ಷ್ವಾಯಣದ ಪುರಾಣ ಕಥನ, ಇಳಾಗೀತದ ವಾಸ್ತವ ಪ್ರಪಂಚ – ಎಲ್ಲದರಲ್ಲಿಯೂ ಧ್ವನಿಸುವುದು ಒಂದೇ ರಸದರ್ಶನ.

I ವಿಕೃತಿ – ಸುಕೃತಿಗಳ ದ್ವಂದ್ವದ ನಾಡಿನಿಂದ ಮೇಲೇಳು, ಶುಭ್ರಸ್ಫಟಿಕಸಾಕ್ಷಿಭಾವ ಪಡೆ. ಅಪೂರ್ಣದೃಷ್ಟಿ ತೊರೆ.

II ಶುಭ್ರನಾಗಿ ಸುಮ್ಮನಿರಬೇಡ. ವಿಶ್ವದ ವಿರಾಟ್‌ಸ್ವರೂಪವನ್ನು ಕಂಡು ಸೃಷ್ಟಿಯತ್ತ ತಿರುಗು. ಸುಕೃತ ಜೀವನ ನಿರ್ಮಾಣಕ್ಕೆ ತೊಡಗು.

III ಸುಕೃತ ಪ್ರಪಂಚ ನಿರ್ಮಿತಿಗೆ ಅಹಂಭಾವದ ಭೂಪತಿಯ ದೃಷ್ಟಿ ನಿರುಪಯೋಗಿ. ಅರ್ಜುನನ ಪ್ರಣತಿಭಾವ ಅಗತ್ಯ. ಆ ಪ್ರಣತಿ – ಸಮರ್ಪಣೆಯಿಂದ ನವಶಕ್ತಿ ಪಡೆದು ನವಸೃಷ್ಟಿ ಲೀಲೆಯಲ್ಲಿ ಭಾಗಿಯಾಗು.

IV ಆಗ ಸತ್ಯಸೃಷ್ಟಿಯ ಅಧಿದೈವತ ಕಾಣುವುದು. ಅಲ್ಲಿಯವರೆಗೆ ಇಲ್ಲಿಯ ಪ್ರಪಂಚದ ಹಿರಣ್ಮಯ ರೂಪುನೋಡಿ ತೃಪ್ತಿಪಡೆ. ಹಿರಣ್ಮಯ ಪಾತ್ರ ಸರಿದಾಗ ಪರಮ ಸತ್ಯ ಕಂಡೀತು.

V ಯಾವುದಕ್ಕೂ ನೆಲವೆ ಆಧಾರ . . . ಆ – ಧಾರ. ಮುಗಿಲಿಗೇರಿದರೂ ನೆಲದ ಹೊಳಹು ಕಾಣುವುದು. ನೆಲದಲ್ಲಿ ಮುಗಿಲಿನ ಸ್ವಪ್ನ ಅರಳುವದು ಹೊಳೆಯುವುದು. ಏಳು – ಸಂಚರಿಸು – ವಿಶ್ವವಿಶಾಲ ಸತ್ವಧಾರಣೆ ಮಾಡು – ಆ ಸತ್ಯವನ್ನು ಧಾರೆ ಸುರಿಸು.

ಇದು ನೀರದ – ಇಕ್ಷ್ವಾಯಣ – ಇಳಾಗೀತಗಳ ಹಿನ್ನೆಲೆಯಲ್ಲಿದ್ದ ದರ್ಶನದ ಹೊಳಹು.

## ಮೂಡಿಬಂದ ರಸಾನುಭವ

ಈ ಹೊಳಹು ರಸಾನುಭವವಾಗಿ, ಸೌಂದರ್ಯದ ಪಾಕಸೃಷ್ಟಿಯಾಗಿ ಮೂಡಿಬಂದಿರುವಲ್ಲಿ ಶ್ರೀ ವಿನಾಯಕರ ಪ್ರತಿಭಾಮಹಿಮೆ ಇದೆ. ಶ್ರೀ ಕಾಯ್ಕಿಣಿಯವರೇ ಹೇಳುವಂತೆ ವಿನಾಯಕರದು "ಸಮುಜ್ವಲ ಪ್ರತಿಭೆ". "ನೀರದ" ಕವನವು ಪ್ರತಿಭೆಯ ನವನವೋನ್ಮೇಷಶಾಲಿತ್ವಕ್ಕೆ ಸಾಕ್ಷಿ

ಯಾಗಿದೆ. ಮೇಘವನ್ನು ಕುರಿತು, ಸಂದೇಶವಾಹಕತ್ವವನ್ನು ಕುರಿತು ಎಷ್ಟು ಜನ ಕವಿಗಳು ಹಾಡಿಲ್ಲ! ವಾಲ್ಮೀಕಿಯ ಆಂಜನೇಯನ ಸಾಗರೋಲ್ಲಂಘನ, ಕಾಳಿದಾಸನ ಮೇಘದೂತ, ನಳ-ದಮಯಂತಿಯರ ಹಂಸದೂತ – ಇವು ಪ್ರೇಮಶಕ್ತಿ – ಪ್ರೇಮಸಂದೇಶಗಳ ವಾಹನಗಳಾಗಿ ಅಪೂರ್ವಸೌಂದರ್ಯದ ಚಿರಪ್ರತಿಮೆಗಳಾಗಿವೆ. ಸಂಚಲನದ ದ್ವೈವಿಕತೆಯ ದರ್ಶನ ಶೆಲ್ಲಿ ಕವಿಯ ಮೇಘದಲ್ಲಿಯೂ ಅಭಿವ್ಯಕ್ತವಾಗಿ, ಬದಲಾದರೂ ಬಯಲಾಗದ ಶಾಶ್ವತ ವ್ಯಕ್ತಿತ್ವವನ್ನು ಹೊಳೆಯಿಸುತ್ತದೆ.

ವಿನಾಯಕರಲ್ಲಿಯಾದರೋ ಈ ಮೇಘವು ಪ್ರಥಮ ದರ್ಶನದಲ್ಲಿಯೇ "ಅಭೂತಪೂರ್ವ" ಪ್ರತಿಮೆಯನ್ನು ಕಾಣುತ್ತದೆ. ಪ್ರಾಚೀನ ಮಹಾಕವಿಗಳ ದರ್ಶನವನ್ನು ಅಲ್ಲಗಳೆಯದೆ ತನ್ನದೊಂದು ಹೊಸದಾದರೂ ಸತ್ಯವಾದ ಕಾಣ್ಕೆಯಿಂದ "ದ್ಯಾವಾಪೃಥಿವೀ" ಕಾವ್ಯಲೋಕದ ಸುವರ್ಣ ದ್ವಾರವನ್ನು ತೆರೆಯುತ್ತದೆ.

"ನೀರದ" ಕವನದ ಹತ್ತು ಭಾಗಗಳಲ್ಲಿ ಮೊದಲನೆಯದರಲ್ಲಿ ಮೇಘಲೀಲೆಯ ವಾಸ್ತವ ಚೆಲ್ವಿಕೆ ಕಂಗೊಳಿಸುತ್ತದೆ. ಎರಡನೆಯ ಭಾಗದಲ್ಲಿ ತತ್ವಸ್ಪರ್ಶಿಯಾದ ಕವಿಪ್ರತಿಭೆಯು ಅದ್ಭುತ ಪ್ರತಿಮಾಸೃಷ್ಟಿಗೆ ತೊಡಗುತ್ತದೆ:

"ಉದಧಿಯುಕ್ಕೆಮರ ಮುಗಿಲುದ್ದಕೆ ಬೆಳೆದು
ಉದುರಿದೆಲೆಯೆ ಮೋಡ?
ಸೌಂದರ್ಯದ ನಿರ್ಜರ-ಶಿಶು ಮೇಲೊರಗಿ
ತೇಲಿದಾಲದೆಲೆಯೆ ಓಡ!"

ಸಮುದ್ರದ ಉಕ್ಕೇರುವಿಕೆಯೇ ಒಂದು ಮರದಂತೆ ಕಂಡು ಅದರಲ್ಲಿ ಮೇಘವೊಂದು "ಎಲೆ" ಯಾಗಿರುವುದೇ ಅದ್ಭುತವಾಗಿದೆ. ಅದರಲ್ಲಿ ಈ "ಎಲೆ"ಯು "ಆಲದೆಲೆಯಾಗಿ" "ಸೌಂದರ್ಯದ ನಿರ್ಜರ-ಶಿಶು" ತೇಲುವ "ಓಡ"ವಾಗಿ ಪರಿವರ್ತನ ಹೊಂದಿದಾಗ – ವಟಪತ್ರಶಾಯಿಯಾದ ಬಾಲ ಮುಕುಂದನ ಚಿತ್ರ ಮೂಡಿಸಿದಾಗ–ಈ ಪ್ರತಿಮೆಯ ಸೌಂದರ್ಯದ ಘನತೆಗೆ, ರಸಧ್ವನಿಯ ಪೌರಾಣಿಕ ಮೌಲ್ಯಕ್ಕೆ ಸಹೃದಯ ಮಾರು ಹೋಗುತ್ತಾನೆ. ಆಲದೆಲೆಯು ಪರಮಾತ್ಮನ "ಪರಂಧಾಮ"ವಾದ ಲಕ್ಷ್ಮಿಯ ದಿವ್ಯ ಪ್ರತೀಕ.

ಮೇಘವನ್ನು ಇಂಥ ಸೌಂದರ್ಯ ಸಂಕೇತಗಳಿಗೆ ನೆಲೆಯಾಗಿಸಿದ ವರ್ಣನಾವೈಖರಿಯನ್ನೂ "ಶುಷ್ಕ"ವೆಂದು ಶ್ರೀ ಕಾಯ್ಕಿಣಿಯವರು ನಿರಾಕರಿಸಿರುವದು ಆಶ್ಚರ್ಯಕರವಾಗಿದೆ.

ಈ ಸೌಂದರ್ಯದ ನಿರ್ಜರ-ಶಿಶುವಿನ "ಪರಂಧಾಮ"ವಾಗಿ ತೇಲುವ ಮೋಡವು ಏಕಾಂಗಿಯಾಗಿ, ಮೌನವ್ರತ ಹಿಡಿದು ಪ್ರಪಂಚಕ್ಕೆ ಕರುಣೆಯ ಧಾರೆಸುರಿವ "ವಿಶ್ವಪ್ರೇಮಿಯಾಗಿ" ಸಂಚರಿಸುತ್ತಿದೆ.

"ಗಗನ ವಿಹಾರಿ, ತ್ರಿಭುವನ ಸಂಚಾರಿ
ನೀಲಾಂತರ್ಯಾಮಿ, ವಿಶ್ವಪ್ರೇಮಿ
ಏಕಾಕಿ – ಆದರೂ ವಿವೇಕಿ
ಅದುವೇ ನೀರದ, ಅದುವೇ ನಾರದ."

ಗಾಳಿ ಬೀಸಿದತ್ತ ಹಾರಿಹೋಗುವ ಮೋಡದ ತುಂಡಿನಲ್ಲಿ "ವ್ಯಕ್ತಿತ್ವ"ವನ್ನು ಅರಸುತ್ತಿರುವುದೇ "ನೀರದ" ಕವನದ ಅಖಂಡತ್ವದ ಪ್ರಥಮ ಸೂತ್ರ. ಬರಿ ಮೋಡವಾದ ನೀರದದಲ್ಲಿ ವ್ಯಕ್ತಿತ್ವವು

ಮೂಡಿದಾಗಲೇ "ನಾರದತ್ವ" ಕಾಣುತ್ತದೆ. ಮಾನವ ಜೀವನಕ್ಕೆ ಈ ಮಾತು ಅನ್ವಯಿಸಿದಾಗ ನಾನಾ ವಿಚಾರ, ನಾನಾ ಅನುಭವ, ಅರ್ಧಮರ್ಧ ತತ್ವಜ್ಞಾನಗಳಲ್ಲಿ ಸಿಲುಕಿ ತೇಲಾಡುವ ಮಾನವನಿಗೆ "ಮೋಡವು" ಪ್ರತೀಕವಾಗುತ್ತದೆ. ಇದೇ ಮಾನವನು ಈ ಎಲ್ಲ ಅನುಭವ ಜ್ಞಾನಗಳ ಬಂಧನದಿಂದ ಕಡೆಗಾಗಿ ಅವನಲ್ಲಿ "ಶುಭ್ರಸ್ಫಟಿಕ"ದಂಥ ಸಾಕ್ಷಿಮಯ ವ್ಯಕ್ತಿತ್ವ ಕಂಗೊಳಿಸುತ್ತದೆ. ಆಗ ನೀರದವು ನಾರದವಾದಂತೆ ಮಾನವನು ತನ್ನತನದ "ಸ್ವಗತತೃಪ್ತಿ" ಹೊಂದುತ್ತಾನೆ. ಈ ಸ್ವಗತ ತೃಪ್ತಿಯಲ್ಲೂ ವಿಶ್ವಪ್ರೇಮದ "ಧಾರೆ" ಇರುವುದೇ "ನಾರದತ್ವದ" ಪ್ರತೀಕಧ್ವನಿ.

## ಮೋಡದ ವಿಕೃತ-ಸುಕೃತ ರೂಪ

"ನೀರದ" ಕವನದ ಮೂರನೆಯ ಭಾಗದಲ್ಲೆಲ್ಲ ವ್ಯಕ್ತಿತ್ವವನ್ನು ತೋರಗೊಡದ ಮೋಡದ ನಾನಾ ರೂಪಗಳ ವರ್ಣನೆ ಇದೆ. ಈ ವರ್ಣನಾಭಾಗವು ಮಾನವ ಜೀವನದ ವಿಕಾರರೂಪ, ಸುಂದರ ರೂಪಗಳೆರಡರ ಚಿತ್ರಣಕ್ಕೂ ಅವಕಾಶ ನೀಡಿದೆ. ಶ್ರೀ ಕಾಯ್ಕಿಣಿಯವರಿಗೂ ಮೆಚ್ಚಿಗೆಯಾದ ರಸಪೂರ್ಣ ಭಾಗವಿದು. ರಂಗುರಂಗಾದ ಮೇಘ ರೂಪಗಳಲ್ಲಿ ಮಾನವ ಜೀವನ ಮೂಡುವ ಒಂದು ಮಾಟಗಾರಿಕೆ ಇಲ್ಲಿ ಬಹು ಸೊಗಸಾಗಿದೆ.

"ಎಲ್ಲವು ನೀಲಿಮದೊಡಲಲಿ ತಂಗಿತ್ತು
ಅನಾಥಬಾಲೆಯ ನಿಟ್ಟುಸಿರು
ಬವಣೆಬಟ್ಟವರು ಬಿಟ್ಟುಸಿರು
ಸಾಯಲಾರದೆ ಸತ್ತವರುಸಿರು . . ."

ಮೇಘ ರಾಜ್ಯದಲ್ಲಿ-ಮೇಘದ ವರ್ಣ-ಉಸಿರು-ರೂಪಗಳಲ್ಲಿ "ಎಲ್ಲವೂ ತಂಗಿತ್ತು."

"ಡೊಂಕುತನ, ಡೋಕಾರಿತನದ ತಂಬಾಕು ಹೊಗೆ ಇರುವುದರ ಜೊತೆಗೆ—

"ಕುಸುಮ ಕೋಮಲ ಜೀವದೂದಬತ್ತಿಯ ಕಂಪು
ಎಳೆಬಾಳ ಹೂಗಂಪಿನಾ ಸ್ವಪ್ನ ಸೌರಭವು;
ಸಮರ್ಪಣ ಭಾವದೀಪ್ತವಿಹ ಕರ್ಪೂರ;"

ಎಲ್ಲವೂ ತಂಗಿತ್ತು. ಈ ಉಸಿರು, ಈ ವರ್ಣಗಳೊಡನೆ ಮೂಡಿದ ರೂಪರಾಜ್ಯದಲ್ಲಿಯೂ ದ್ವಂದ್ವವಿದೆ.

"ಪಡುವಣದಡವಿಯ ರಾಜಕಾರಣಪಟು
ಬಂದಿತಾ ಸೃಗಾಲ . . ."

ಎಂದು ನರಿರೂಪ ತಾಳಿದ ಮೋಡವನ್ನು ಪಾಶ್ಚಿಮಾತ್ಯ ರಾಜಕಾರಣೆಗಳಿಗೆ ಪ್ರತೀಕಗೊಳಿಸಿರುವುದು ಅತ್ಯಂತ ಉಚಿತವಾಗಿದೆ.

ಈ ಸೃಗಾಲ ಚಿತ್ರದ ಸಂಗಡ ದುರ್ಗಾಸಿಂಹವೂ ಉಂಟು.

"ದುರ್ಗಾಮಾತೆಯ ವಾಹನದೊಲು ಮೆರೆದು
ಆಯಾಲನು ಕೊಡವಿ
ಮುನ್ನಡೆದಿಹುದೇ ಪಂಚಾನನ ಮೇಘ
ಮರಿಗಳ ಮೈದಡವಿ."

ಇಂಥ ರೂಪಗಳ ದ್ವಂದ್ವಪ್ರಪಂಚದ "ನೀರದ ಸೃಷ್ಟಿ"ಯನ್ನು ಕಾಣಿಸಿ ಮೂರನೆಯ ವಿಭಾಗ ಕೊನೆಗೊಳ್ಳುತ್ತದೆ.

## ಪಯೋಧರ ಪ್ರತಿಮೆ

ದ್ವಂದ್ವಚಿತ್ರಣ ಕೇವಲ ಮೇಘರಾಜ್ಯದ್ದಲ್ಲ; ಅದು ಮಾನವ ಜೀವನದ ದ್ವಂದವನ್ನೇ ಪ್ರತಿ ಚಿತ್ರಣ ಮಾಡುತ್ತದೆ ಎಂದು ಈ ಭಾಗದಲ್ಲಿ ಹೇಳಿ-ನೆಲಮುಗಿಲಿನ ಈ ದ್ವಂದ್ವ ಪ್ರಪಂಚವನ್ನಾಳಲು "ನಾರದನುಜ್ವಲ ದೃಷ್ಟಿ" ಬೇಕೆಂದು ಅದೇ ವಿಭಾಗದ ಕೊನೆಯ ಚರಣದಲ್ಲಿ ಕವಿಗಳು ಧ್ವನಿಸುತ್ತಾರೆ. ನಾಲ್ಕನೆಯದರಲ್ಲಿ "ನಾರದನುಜ್ವಲ ದೃಷ್ಟಿ" ಏನೆಂಬುದನ್ನು ಅರಳಿಸುತ್ತಾರೆ.

ಮೂರನೆಯ ವಿಭಾಗದಲ್ಲಿ ನೀರದವು "ನೀರದ" ಮಾತ್ರವಾಗಿತ್ತು. ನಾಲ್ಕನೆಯದರಲ್ಲಿ ನೀರದವು "ನಾರದ" ಸ್ವರೂಪ ಪಡೆಯುವುದರಿಂದ "ನೀರದ-ನಾರದರ ಸೂತ್ರ" ಪ್ರಕಾಶಗೊಳ್ಳುತ್ತದೆ. ಶ್ರೀ ಕಾಯ್ಕಿಣಿಯವರು ಇಲ್ಲಿಯೇ ಗೊಂದಲಕ್ಕೊಳಗಾಗಿದ್ದಾರೆ.

ನಾನಾ ವರ್ಣ, ಉಸಿರು, ರೂಪತಾಳಿದ ಮೋಡ (ನೀರದ)ವು, ನಾನಾ ವಿಕಾರ ಹಾಗೂ ಸುಂದರ ಜೀವನ ಪಡೆದ ಮಾನವನಂತೆ ಸಂಚರಿಸುತ್ತಿರುವಾಗ ಬಾಹ್ಯ ವಿಕೃತಿ-ಸುಕೃತಿಗಳಿಗೆ ಮೀರಿದ ತನ್ನತನವನ್ನು ಕಾಣುವುದು. ವಿಕೃತಿ-ಸುಕೃತಿಗಳೊಳಗಿಂದ-ನಾನಾ ಅನುಭವಗಳೊಳಗಿಂದ ಹಾಯ್ದು ಶುದ್ಧ ಸ್ಫಟಿಕದಂಥ ವ್ಯಕ್ತಿತ್ವದತ್ತ ಸಂಚರಿಸಿ ಗುರಿ ತಲುಪುವುದು. ಈ ಭಾಗದಲ್ಲಿ "ನಾರದ" ದರ್ಶನವಾಗಿದೆ.

> "ಇಲ್ಲಿದೆ ನೀರದ ಮೂಲತತ್ವದುಗಮ
> ಊರ್ಧ್ವಮುಖ ಬಾಷ್ಪ
> ಸ್ವಚ್ಛಂದದಿ, ಬಾನ್ ಬಯಲನೆಲ್ಲ ತಿರುಗಿ
> ಆಗಿ ಗಗನ ಪುಷ್ಪ,
> ಸೂರ್ಯೋದಯ-ಸೂರ್ಯಾಸ್ತ ವೃಕ್ಷದಲಿ
> ಮಾಗಿ ಪಯೋಧರ ಫಲವು
> ಅವತರಿಸಿದೆ ರಸಗಂಗೆಯಾಗಿ ಮತ್ತೆ-
> ನೆಲಸುತ ನೆಲದೊಳಗದರೊಲವು !
> ಇದೇ ನೀರದ-ನಾರದರ ಸೂತ್ರ :
> ಊರ್ಧ್ವತೆ, ಚಲನ, ಧಾರಣ, ಅವತರಣ."

ಇಲ್ಲಿ ಬಹು ಅರ್ಥಪೂರ್ಣವಾಗಿ ಸುಂದರವಾಗಿ ಅಭಿವ್ಯಕ್ತಗೊಂಡ ನೀರದ ವ್ಯಕ್ತಿತ್ವದರ್ಶವು ಅತ್ಯಂತ ಸಮುಚಿತವಾಗಿದ್ದರೂ ಶ್ರೀ ಕಾಯ್ಕಿಣಿಯವರಿಗೆ ಗೊಂದಲವನ್ನುಂಟುಮಾಡಿದೆ.

ಮೋಡವೊಂದು ಗಗನಪುಷ್ಪವಾಗಿ ನೀಲಿಮದಲ್ಲಿ ಸಂಚಾರ ಮಾಡುವುದು. ಆ ಪುಷ್ಪವು "ಸೂರ್ಯೋದಯ-ಸೂರಾಸ್ತ"ಗಳೆಂಬ ವೃಕ್ಷದಲ್ಲಿ "ಪಯೋಧರ ಫಲ"ವಾಗಿ ರಸಗಂಗೆಯನ್ನು ನೆಲಕ್ಕೆ ಸುರಿಸುವುದು-ಈ ರಸಗಂಗೆ "ಒಲವಿನ" ರೂಪವೆಂದು ಕವಿಗಳು ಸ್ಪಷ್ಟವಾಗಿ ಸೂಚಿಸಿರುವುದು ಯಾವ ಸಂಶಯಕ್ಕೂ ಎಡೆಯಿರದ ಚಿತ್ರಣವಾಗಿದೆ.

ಹಿಂದೆ "ಆಲದೆಲೆಯ" ಚಿತ್ರಣದಲ್ಲಿಯೇ ಬಾಲಮುಕುಂದನ "ಧಾಮ"ವಾದ ಮೇಘವು ಇಲ್ಲಿ ಆ ಪರಾತ್ಪರಕೃತಿಯ ಒಲವಿನ "ಪಯೋಧರ"ವಾಗಿ "ವಿಕಾಸ" ಹೊಂದಿದ್ದರೆ ಪ್ರತಿಮಾ

ವಿಕಾಸದ ಸಾರ್ಥಕತೆ ಸಾಧಿಸಿದೆ ಎನ್ನಬೇಕು. ಅಂಥದರಲ್ಲಿ "ಪಯೋಧರ ಫಲ"ದ ಪ್ರತಿಮೆ "ಮೆಣಸಿನಂತೆ ಪವಣಿಸಿಬಿಟ್ಟಿದೆ" ಎಂದು ಶ್ರೀ ಕಾಯ್ಕಿಣಿಯವರಂಥ ಸಹೃದಯರು ಹೇಳಿದರೆ ಏನೆನ್ನಬೇಕು ?

ನೀರದದ ವ್ಯಕ್ತಿತ್ವದಲ್ಲಿ "ಅವತರಣ"ವೇ ಪರಮ ಸಾರ್ಥಕ ಅಂಶ. "ಪಯೋಧರ ಫಲ"ದ ಒಲವಿನ ರಸಗಂಗೆಯು ಈ ಅವತರಣದ ಪ್ರತೀಕ. ಇದರಲ್ಲಿ ಸೊಗಸನ್ನಲ್ಲದೆ ಕುಂದು ಕೊರತೆಯನ್ನು ಸಹೃದಯ ಪ್ರತಿಭೆ ಕಾಣಲಾರದು-ಕಾಣಬಾರದು.

ಶುದ್ಧ ಸ್ಫಟಿಕಮಯ ವ್ಯಕ್ತಿತ್ವ ಪಡೆದ ಈ ನೀರದ ಹೇಗೆ ಕಾಣುತ್ತದೆ?

## ಚಿನ್‌ನಭದ ಔಚಿತ್ಯ

"ಚಿನ್‌ನಭವಿದು ಗುಣರಹಿತ, ವರ್ಣರಹಿತ
ಸೌಂದರವದಕಿಹ ನವಿಲ್ಗರಿ ತಲೆದುಡುಗೆ ;
ಪ್ರೇಮವು ಸುತ್ತಿದಮಾಯೆಯ ಜವ್ವನಿಕೆಯು ;
ಸತ್ಯವು ವಜ್ರದ ಕವಚ, ರನ್ನದೊಡಿಗೆ ;
ಸಾತ್ವಿಕತೆಯದುಚಂದ್ರಿಕೆಯಾವರಣ ;
ಆನಂದವು ನಾವ್ ಕಲ್ಪಿಸಿದೆಳೆಬಿಸಿಲು
ಶಕ್ತಿಯು ನಾವದಕಾರೋಪಿಸಿದಲಗು
ಅದಿಲ್ಲ ಇದಿಲ್ಲ-ಬಯಲಿಗೆಲ್ಲಿ ಬಿಸಿಲು ?

ಅಹುದು ನಭವು ಗುಣರಹಿತ, ವರ್ಣರಹಿತ
ಸ್ವಾರ್ಥವದಕೆ ನಾವ್ ಕುಡಿಸಿದಂಥ ನಂಜು
ಮೋಸವದಕೆ ನಾವ್ ಹಾಕಿದ ಮೊಗವಾಡ
ಕ್ರೌರ್ಯ ನಾವೇ ಎರೆದೆಣ್ಣೆಯುರಿವ ಪಂಜು ;
ಅನೃತ ನಾವೇ ಬೀಸಿರುವ ಕೃಷ್ಣ ಜಾಲ
ದ್ವೇಷ ನಾವೆ ಹೊತ್ತಿಸಿದ ಧೂಮಮಾಲೆ
ತಮವು ನಾವೆ ಅಂಟಿಸಿದ ಶ್ಯಾಮ ಲೇಪ
ರಜವು ನಾವೆ ಇಡಿಸಿರುವ ಸಿಂಪಿನೋಲೆ.

ಅಂತೇ ದುರ್ಗಾದೇವಿಯ ಸಿಂಹ
ಅಂತೇ ಮೇಘ ಮಯೂರ
ಅಂತೇ ಕುರಿಮರಿ, ಕೂರ್ಮ, ಸಾರಂಗ
ಅಂತೇ ವಿದ್ಯಾಧರ, ಘೋರ
ವ್ಯಾಘ್ರ, ವರಾಹ, ಸರ್ಪ, ಶೃಗಾಲ
ತಿಮಿಂಗಲ, ಏಡಿ :
ನೆನಿಸಿದ ರೂಪವ ತಳೆವುದು ನೀರದ
ನಾವ್ ಬಂದೊಲು ಬೇಡಿ !"

ಈ ಸುಂದರ ಭಾಗವು "ನೀರದ" ಕವನದ ಬಹು ಮುಖ್ಯಾಂಗವಾಗಿದೆ. ಅಂಥದನ್ನು ಶ್ರೀ ಕಾಯ್ಕಿಣಿಯವರು "ಮೂಲದ ಪ್ರವಾಹಕ್ಕೆ ಬೇರೆ ನೀರಾಗಿ ಕಾಣುತ್ತದೆ" ಎಂದಿರುವುದು ವಿಲಕ್ಷಣ ವಾಗಿದೆ.

ಇಲ್ಲಿ "ಚಿನ್‌ನಭ"ವೆಂದರೆ ಚಿದಾಕಾಶ. ತ್ರಿಗುಣಹಿತವಾದ ಶುದ್ಧ ಚೈತ್ಯದ ನೆಲೆ. ನೋಡದಲ್ಲಿ ಸಿಂಹ, ಹುಲಿ, ಏಡಿ, ತಿಮಿಂಗಲ–ಎಲ್ಲ ಕಂಡರೂ ಮೂಲತಃ ಅದು ವರ್ಣರಹಿತ ಉಗಿಯಾಗಿದೆ. ಮೇಘಕ್ಕೆ ಸ್ವತಃ ಬಣ್ಣವಿಲ್ಲ. ಇದು ಮೇಘದ ಮೂಲವ್ಯಕ್ತಿತ್ವದ ಸ್ವರೂಪ. ಈ ಸ್ವರೂಪದಲ್ಲಿ ರಸಗಂಗಾಸತ್ವವಿರುವುದು ಇನ್ನೊಂದು ಲಕ್ಷಣ. ಆದ್ದರಿಂದ ನೀರದವನ್ನು "ಚಿನ್‌ನಭ" (ಚಿನ್ನದನಭವಲ್ಲ) ವೆಂಬ ಶಬ್ದದಿಂದ ವರ್ಣಿಸುವುದೂ, ಅದರ ರಸಾವತರಣ ಶಕ್ತಿಯನ್ನು "ಪಯೋಧರ ಫಲ" ಪ್ರತಿಮೆಯಿಂದ ಚಿತ್ರಿಸುವದೂ ಪರಸ್ಪರ ವಿರೋಧಿಯಲ್ಲ; "ಮೆಣಸು ಪೋಣಿಸಿ"ದಂತೆ ಅಲ್ಲ. ಕಾವ್ಯದ ಮೂಲಧಾರೆಗೆ "ಬೇರೆ ನೀರಾಗಿ" ಕೂಡಿಸುವದಿಲ್ಲ. ಏಕೆಂದರೆ ಮೇಘದ ವ್ಯಕ್ತಿತ್ವದಲ್ಲಿ ಶ್ರೀ ವಿನಾಯಕರು ಪ್ರಧಾನ ಅಂಶವೆಂದು ಕಾಣುವುದು "ಈ ಗುಣ ರಾಹಿತ್ಯ – ವರ್ಣರಾಹಿತ್ಯ."

ಆದ್ದರಿಂದಲೇ "ನೆನಿಸಿದ ರೂಪತಳೆವುದು ನೀರದ." ಇದು ಹೇಗೆ ಸಾಧ್ಯವೆಂದರೆ ನಾವು – ರೂಪರಹಿತರಾದಾಗಲೂ ದೇವನಲ್ಲಿ "ಬೇಡಿಕೊಂಡು ಬಂದ" ಜೀವನ "ಪಡೆಯುವಂತೆ" ಎಂದು ಹೇಳಿ ಮಾನವನ ಶುಭ್ರವ್ಯಕ್ತಿತ್ವದಲ್ಲಿರುವ ಸಂಕಲ್ಪ ಶಕ್ತಿಯ ಮಹತ್ವವನ್ನು ಸ್ಪಷ್ಟಪಡಿಸಿದ್ದಾರೆ.

ಈ ಬಯಕೆಯ ಬಲದ ಉಪಯೋಗ – ದುರುಪಯೋಗ – ಸದುಪಯೋಗಗಳ ಕತೆಯಲ್ಲಿಯೇ "ಇಕ್ಷ್ವಾಯಣ"ದುಗಮವಿದೆ. ಈ ಇಕ್ಷ್ವಾಯಣದ ಸೂಚಕ ಧ್ವನಿಯೇ "ನೀರದ" ಕವನದ ಆರನೆಯ ವಿಭಾಗದಲ್ಲಿದೆ.

ಐದನೆಯ ವಿಭಾಗದಲ್ಲಿ ನೀರದವು ತನ್ನ ಶುದ್ಧ ವ್ಯಕ್ತಿತ್ವ ತಿಳಿದುಕೊಳ್ಳುತ್ತದೆ. ಅದರಿಂದೇನು ಫಲ? ಸೃಷ್ಟಿಯಲ್ಲೇನು ಬದಲಾವಣೆಯಾದೀತು? ಮನುಷ್ಯನು "ತಾನು ಶುದ್ಧ ಆತ್ಮನೆಂದು" ತಿಳಿದರಷ್ಟೇ ಸಾಕೆ? ಈ ತಿಳಿವಳಿಕೆಯಿಂದ ಪ್ರಪಂಚದ ವಿಕೃತಿ ತೊಲಗಿ ಹೊಸಸೃಷ್ಟಿ ಮೂಡೀತೆ? ಇದು ಆರನೆಯ ವಿಭಾಗದ ಭಾವ:

> "ಬಯಕೆಯೊಳಗಿಂದ, ಬಣ್ಣದೊಳಗಿಂದ
> . . . . . . . . .
> ಬಿಡಿಸಿಕೊಂಡು ಬಾ
> ಬಿಡಿಸಲೆನ್ನ ಬಾ . . . . . ."

ಎಂದು ಪ್ರಾರ್ಥಿಸಿದ ಕವಿ ಜೀವ ಈಗ ಸ್ವಪ್ರಜ್ಞೆಯಿಂದ ಬಲಗೊಂಡು ಒಳಿತಿನ ಸೃಷ್ಟಿ ಕಾಣಲು – ಮೂಡಿಸಲು ಹವಣಿಸುತ್ತದೆ.

> "ಮೌನವಿದೆ; ಗಾನವೆಲ್ಲಿ? ತಂತಿಯಿದೆ ತಾನವೆಲ್ಲಿ?
> ಸಾಕ್ಷಿಯಿದೆ; ಸೃಷ್ಟಿಯೆಲ್ಲಿ? ಸುರಸವೃಷ್ಟಿಯಲ್ಲಿ?
> . . . . , . . . .
> ಎಲ್ಲ ಬೇಕು; ಬಣ್ಣ ಬೇಕು. ಕಣ್ಣದೊಂದೆ ಸಲ್ಲದು.
> ಬರಿಗಣ್ಣಾಗಿರುವಪ್ರಾಣ ಕೃತಿಯನೆಂದು ಬಲ್ಲದು?"

ಮೊದಲು ನೀರದವು ಗುಣ – ವರ್ಣರಹಿತವಾಗಿ ಮುಕ್ತವ್ಯಕ್ತಿತ್ವಪಡೆದುಕೊಂಡು ಈಗ ಮುಕ್ತವ್ಯಕ್ತಿತ್ವದ ಸಾಫಲ್ಯಕ್ಕಾಗಿ ಪುನಃ ಶುಭಸೃಷ್ಟಿಗೆಳಸುತ್ತದೆ. ಒಳಿತು ಕೆಡಕಿನ ರಸಮಿಶ್ರಣ ತಪ್ಪಿ, ಶುದ್ಧ ಒಳಿತಿನ – ಶಿವಸೃಷ್ಟಿ ಬಂದೀತೆ?

ಅಂತೆಯೇ ಕವಿ ಹೃದಯ ಪ್ರಾರ್ಥಿಸುತ್ತದೆ :

“ ಕೆಡಕದೆಲ್ಲ ಕುಳ್ಳುಬಾನದಂತೆ ಚಿತೆಯನೇರಲಿ ;
ಒಳಿತು ಮಾತ್ರ ಇಂದ್ರಧನುವಿನಂತೆ ಒಸಗೆ ಬೀರಲಿ.”

ನೀರದದಲ್ಲಿ – ನಾರದದೊಡನೆ ಒಂದಾದ ಕವಿ ಹೃದಯದಲ್ಲಿ ಈ ಪ್ರಾರ್ಥನೆ ಮೂಡಿದಾಗ ನೀರದದ ಶುದ್ಧ ವ್ಯಕ್ತಿತ್ವದಲ್ಲಿ ಮತ್ತೆರಡು ಶಕ್ತಿಗಳು ಉದ್ಭವಿಸುತ್ತವೆ :

೧. ವಿಕೃತ – ಸುಕೃತ, ಸಮಸ್ತ ಸೃಷ್ಟಿಯ ಸಂಹಾರಕ ಶಕ್ತಿಯು “ ಮಿಂಚಿನ ” ರೂಪದಲ್ಲಿ, ಇಂದ್ರನ ವಜ್ರಾಯುಧದ ಪ್ರತಿಮೆಯಲ್ಲಿ ವ್ಯಕ್ತವಾಗಿದೆ.

೨. ನವಸೃಷ್ಟಿಯ ಶಕ್ತಿಯನ್ನು ಕವಿಯು : “ ಎಂದಾದರು ಮೂಡಬಹುದೆ ಬೆಳ್ಳಿಯು ಈ ಶುಕ್ರ ? ” ಎಂಬ ನುಡಿಯಲ್ಲಿ ಧ್ವನಿಸುತ್ತದೆ.

ಪಯೋಧರದ ರಸಧಾರೆಯಲ್ಲಿಯೇ ನವಜೀವನದ ಸೃಷ್ಟಿ ಶಕ್ತಿ ಅಡಗಿದೆ. ಆಗ “ ನವ ನೀರದ ”ದ ಉದಯವಾಗಿ ಅದು “ ನವಮಾನವ ಸಂಸಾರದ ವಿಸ್ತಾರದ ನೌಕೆ ”ಯಾಗಿ ಕವಿ ಪ್ರತಿಭೆಯಲ್ಲಿ ಅಭಿವ್ಯಕ್ತಗೊಳ್ಳುತ್ತದೆ.

ಆದ್ದರಿಂದಲೇ ಕವಿ ಹಾಡಿದ್ದಾರೆ :

“ ಬಣ್ಣವಿದ್ದರೂನು ಸ್ಫಟಿಕ
ಜಡವೆಂದೊರೆದರು ಚಿನ್ಮಯ (ಚಿನ್ನವಲ್ಲ–ಚಿತ್‌ಮಯ)
ಮರ್ತ್ಯವಿದ್ದರೂನು ಅಮರ
ಚಲಿಸಿದರೂ ಶಾಂತಿಮಯ ;
ತಾನೊಂದೇ ಒಂದು ; ಆದರೂ ನೂರೊಂದು
ಲೀಲೆಗಾಗಿ ವಿಕಸನವೆಂಬರಿವನಾಂತು ಬಂದು
ಮಾಯೆಯ ಸೋಂಕಿಲ್ಲದಂತೆ
ವಿಕೃತಿಯ ಕೊಂಕಿಲ್ಲದಂತೆ
. . . . . , .
ನೀರದ ತಾನಲೆಯುತಿದೆ
ಧ್ರುವಪಥದಲಿ ಕಾಂತಿಬೀರಿ . . . ”

ಇದು ಚಿನ್‌ನಭ – ಚಿನ್ಮಯ ನೀರದಕ್ಕಿರುವ **ಸಾಫಲ್ಯ** ರೂಪ, ಈ ಸಾಫಲ್ಯವು ಅಮೃತ ರಸಪೂರ್ಣ ವಾದ “ ಪಯೋಧರ ”ವಾದರೆ ಸಹೃದಯರು ಅಚ್ಚರಿಪಡಬೇಕಿಲ್ಲ ; ಸಂಭ್ರಮಿಸಬೇಕು.

## ಇಕ್ಷ್ವಾಯಣದ ಸುಸಂಗತಿ

ನೀರದದಲ್ಲಿ ಮೂಡಿದ ಶುದ್ಧ ವ್ಯಕ್ತಿತ್ವದ ಸೃಷ್ಟಿಕಾರಕ ಸ್ವರೂಪದ ಅಭಿವ್ಯಕ್ತಿಯೇ ಇಕ್ಷ್ವಾಯಣ ದಲ್ಲಿ ಪುರಾಣ ಕಥನದ ರೂಪದಲ್ಲಿ ಒಡಮೂಡಿದೆ. ಇಕ್ಷ್ವಾಯಣದ ಮೂಲದರ್ಶನ ನೀರದದಲ್ಲಿರುವುದ ರಿಂದಲೇ “ ಇಕ್ಷ್ವಾಯಣವು ” **ಉಪಾಖ್ಯಾನ**ವೆನ್ನಿಸಿಕೊಂಡಿದೆ. ಮೂಲ ದರ್ಶನವನ್ನು ಕಥಾ ರೂಪದಲ್ಲಿ ಅಭಿವ್ಯಕ್ತಮಾಡುವದೇ ಉಪಾಖ್ಯಾನ.

ತನ್ನತನವನ್ನು ಕಾಣುವದರಲ್ಲಿ ಯಶಸ್ವಿಯಾದ ಮಾನವನು ವಿಶ್ವಸತ್ಯವನ್ನು ಕಾಣಲು ಹೋಗಿ ತಾತ್ಕಾಲಿಕ ಪತನಹೊಂದಿ ದೈವೀಕೃಪೆಯಿಂದ ಉದ್ಧಾರಗೊಂಡು ಈ ಸೃಷ್ಟಿಯಲ್ಲಿಯೇ ಶುಭವನ್ನು ತರುವ ಉಪಾಸನೆ ಮಾಡುತ್ತಾನೆ. ತದನಂತರ ಅವನಿಗೆ ಈ ಸೃಷ್ಟಿಯ ಮಂಗಲ ಸ್ವರೂಪದ ಹಿರಣ್ಮಯ ಪಾತ್ರೆಯು ತನ್ನಲ್ಲಿ ನಿಹಿತವಾದ ಗುಪ್ತ ಆದಿಶಕ್ತಿಯನ್ನು ಪ್ರಕಾಶಗೊಳಿಸುತ್ತದೆ.

"ಇಕ್ಷು" ಇಂಥದೊಂದು ಅನುಭವದೊಳಗಿಂದ ಹಾಯ್ದು ಹೋಗುತ್ತಾನೆ.

ನೀರವದಲ್ಲಿಯೇ ಮಿಂಚು ಅಡಗಿದಂತೆ ಮಾನವನ ಶುದ್ಧವ್ಯಕ್ತಿತ್ವದಲ್ಲಿಯೇ "ಇಂದ್ರ"ನ ಸಂಕಲ್ಪಬಲವು ಅಡಗಿದೆ. ಇಕ್ಷು ಆ ಸಂಕಲ್ಪ ದೇವತೆಯ ಬಳಿ ಹೋಗಿ ಪರಮ ಸತ್ಯವನ್ನು "ಅತಿಮಾನಸ ಸತ್ಯವನ್ನು" ತೋರಿಸೆಂದು ಕೇಳುತ್ತಾನೆ.

ಇಂದ್ರನು ಆಗ ಹೇಳುವುದು ಇಷ್ಟು :

> "... ಕಡಲನು ಕುಡಿದವರುಂಟೆ ?
> ಸನಿಯದ ಲೋಕದ ಮಾತೆಯು ತಿಳಿ ಮೊದಲು
> ಶಚಿದೇವಿ, ಮಮಮಃಡದಿಯನ್ನು ತೋರ್ವೆ,
> ನೋಡು ಕಣ್ತುಂಬ. ಅವಳಡಿಯಲಿ ತೊದಲು."

ಶುಭ ಸಂಕಲ್ಪದ ಶಕ್ತಿಗೆ ಶಚಿದೇವಿ ಪ್ರತೀಕವಾಗಿದ್ದಾಳೆ. ಶುಭಸಂಕಲ್ಪದ ಪರಿಣಾಮವನ್ನು ಅನುಭವಿಸಿ, ಆ ಅನುಭವದೊಳಗಿಂದ ಹೊಸ ವ್ಯಕ್ತಿತ್ವವನ್ನು ನವ ಮಾನವನು ಮೊದಲು ಪಡೆಯಬೇಕು – ಇದು ಇಂದ್ರನು ಇಕ್ಷುವಿಗೆ ಹೇಳುವ ಮಾತಿನ ಭಾವ.

ಶುದ್ಧ ಮಾನವನಲ್ಲಿ ಅಭಿವ್ಯಕ್ತವಾದ "ಶುಭಸಂಕಲ್ಪ ಶಕ್ತಿ" ದೇವೇಂದ್ರನದು. ಅದರ ರುಚಿರರೂಪ, ಶುಚಿರೂಪ, ಮಧುರರೂಪ ಕಂಡು ಮರುಳಾಗದೆ ಉಳಿಯುವ ಸಾಧನೆ ಮಾನವನಿಗೆ ಅಗತ್ಯವಿದೆ. ಈ ಸಾಧನೆಯಲ್ಲಿ ಇಕ್ಷು ಪ್ರಾರಂಭದಲ್ಲಿ ಸೋಲುತ್ತಾನೆ. ಶುಭ ಸಂಕಲ್ಪಶಕ್ತಿಯನ್ನು ಆಸೆಗಣ್ಣಿನಿಂದ ಮಾನವನು ನೋಡಿದಾಗ ಅದನ್ನು ಬಳಸುವ ಅಧಿಕಾರ ಅವನಿಂದ ಹೊರಟು ಹೋಗುತ್ತದೆ. "ನಿಷ್ಕಾಮ ಸಂಕಲ್ಪಶಕ್ತಿ" ನವಮಾನವನಿಗೆ ಬೇಕು. ಸಂಕಲ್ಪ ಸ್ವಾತಂತ್ರ್ಯದಲ್ಲಿ "ನಿಷ್ಕಾಮ ಪ್ರಣತಿಭಾವ"ವಿಲ್ಲದಿದ್ದರೆ ಇಕ್ಷುವಿನ "ನೆಳಲಿನ ಸೃಷ್ಟಿ – ಛಾಯಾಸಂತತಿ"ಯೇ ಫಲ.

ಈ ಸಂದರ್ಭದಲ್ಲಿ ಶ್ರೀ ಕಾಯ್ಕಿಣಿಯವರು ವಿನಾಕಾರಣವಾಗಿ ಗೊಂದಲಕ್ಕೀಡಾಗಿದ್ದಾರೆ. "ಈಡಿಪಸ್ ಕಾಂಪ್ಲೆಕ್ಸ್" ಮಾತೆಯನ್ನು ವಧುವಾಗಿಸುವ ಮನೋವಿಕೃತಿ – ಇತ್ಯಾದಿಗಳ ಗೊಂದಲ ತಂದು ಅವುಗಳನ್ನು ಸಮರ್ಥನೆ ಮಾಡಲೂ ಹವಣಿಸಿದ್ದಾರೆ! ಅದಕ್ಕಾಗಿ ಪ್ರಜಾಪತಿ ಬ್ರಹ್ಮನ ಕಥೆ, ಶಿವಮೋಹಿನಿಯವರ ಕಥೆ ಉದಹರಿಸಿದ್ದಾರೆ.

ಆದರೆ ಶ್ರೀ ವಿನಾಯಕರ ಇಕ್ಷ್ವಾಯಣದಲ್ಲಿ ಇಂಥ ಮನೋವಿಕೃತಿಯ ಚಿತ್ರಣವೇ ಪ್ರಧಾನವಾಗಿಲ್ಲ. ಇಲ್ಲಿ ಮುಖ್ಯವಾಗಿರುವುದು : "ಸಂಕಲ್ಪ ಶಕ್ತಿಯನ್ನು ಸಕಾಮವಾಗಿ ಬಳಸಬೇಕೆ ? ನಿಷ್ಕಾಮವಾಗಿ ಬಳಸಬೇಕೆ ? ದೇವಮಾನವನುದಯಕ್ಕೆ ನಿಷ್ಕಾಮ ಶಿಶುಭಾವದ ಅಗತ್ಯ ಮಾನವನಿಗುಂಟೆ ? ಇಲ್ಲವೆ ?—ಎಂಬ ಸಮಸ್ಯೆ.

ನಿಷ್ಕಾಮ ರಸಾವತರಣವೃತ್ತಿ ನೀರದದ ಪರಮಸುಂದರ ಸಾರ್ಥಕತೆಯಾಗಿದೆ. ಇಕ್ಷುವಿಗೆ ಈ ಬುದ್ಧಿ, ಶಚಿಯ ಛಾಯಾಸಂಬಂಧದಿಂದ ಬರುತ್ತದೆ.

ವ್ಯಕ್ತಿಯು ತನ್ನ ಅಲ್ಪ ಪೌರುಷವನ್ನು ನವಸೃಷ್ಟಿಗೆ ಬಳಸಲು ಹೋಗುವದೇ "ಭೂಪಟತ್ವ" ವಾಗಿದೆ. ಪೂರ್ಣತ್ವ, —ಪೂರ್ಣ ಪೌರುಷವೆಂಬುದು ಪರಮಾತ್ಮನಿಗೆ ಮೀಸಲು. ಪರಮಾತ್ಮ ನಿಗೆ ವ್ಯಕ್ತಿಯ ಪ್ರಣಿತಿಯಾಗುವದೆಂದರೆ ತನ್ನ ಪೌರುಷವನ್ನು ಪರಮ ಪುರುಷನಿಗೆ ಅರ್ಪಿಸುವದು.

ಈ ಪರಮಪುರುಷನೇ "ಗರುಡವಾಹನವಾಗಿ" ಇಕ್ಷುವಿಗೆದುರು ಪ್ರಕಟನಾಗಿ ಅನುಗ್ರಹಿ ಸಿದ್ದಾನೆ. ಅರ್ಜುನನಿಗೆ "ಕಾಲದ ಅನಂತ" ಸ್ವರೂಪ ತೋರಿದರೆ ಈ ಗರುಡವಾಹನನು ಇಕ್ಷುವಿಗೆ "ಸ್ಥಳದ ಅನಂತ"ವನ್ನು ತೋರಿಸಿದ್ದಾನೆ. ಅಂದರೆ ಅನಂತಸೃಷ್ಟಿಯನ್ನು ತೋರಿ ಸಿದ್ದಾನೆ. ತನ್ನ ವ್ಯಕ್ತಿತ್ವದ ಪರಿಮಿತವಲಯದಿಂದ ಕಡೆಗೆ ಬಂದು, ಸೃಷ್ಟಿಯ ಅನಂತ ರೂಪ ಕಂಡಾಗ ವ್ಯಕ್ತಿ ಶಿಶುವಾಗದೆ ಏನು ಮಾಡಿಯಾನು ?

ಅರ್ಧಮರ್ಧ ತತ್ವಜ್ಞಾನಿಗಳೂ, ವಿಜ್ಞಾನಿಗಳೂ, ಚಕ್ರವರ್ತಿಗಳಾಗಿ ಮೆರೆಯುವ ಭೂಪರೂ, ನಿಜವಾಗಿ "ಭೂಮಿಯ" ಅನಂತತ್ವವನ್ನು ಕಂಡಿಲ್ಲ. ಇದನ್ನಾಳುವ ನಿಜವಾದ "ಭೂಪ"ನನ್ನು ಕಂಡಿಲ್ಲ. ಆ ಮಹಾಭೂಪನ ದರ್ಶನವಾದಾಗಲೇ ಇಕ್ಷುವಿಗೆ ಶಿಶುಭಾವ ಬರುತ್ತದೆ. ಈ ಭೌತ ಪ್ರಪಂಚದಾಚೆ ಏನಿದೆ ಎಂಬುದನ್ನು ಕಾಣಲು ವಿರಾಟ್‌ಪುರುಷನ ಅಂತಶ್ಚಕ್ಷು ತೆರೆಯಬೇಕು. ಆಗ ಅತಿಮಾನಸದ ಆದಿಶಕ್ತಿಯು ಕಂಗೊಳಿಸುತ್ತಾಳೆ. ಅವಳ ಅವತರಣವಾಗುವವರೆಗೆ ಶುಭ ಸಂಕಲ್ಪವನ್ನು ನಿಷ್ಕಾಮ ಭಾವದಿಂದ ಮಾನವನು ಅಭಿವ್ಯಕ್ತಗೊಳಿಸುತ್ತಿರಲಿ ಎಂದು ಇಕ್ಷ್ವಾ ಯಣದ ಉಪಾಖ್ಯಾನ ಧ್ವನಿಸುತ್ತದೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಮಾತುಗಳೆಂದರೆ (೧) ಸಾಕ್ಷಿದೃಷ್ಟಿ (೨) ವಿರಾಟ್ ದೃಷ್ಟಿ. ಈ ಎರಡು ದೃಷ್ಟಿಗಳ ಸಂಗಮದಿಂದ ಭೂಮಿಯಲ್ಲಿ ದೇವಮಾನವ ಸಂತತಿ ಉದಯ ವಾಗುತ್ತದೆ.

ಈ ಸಂದರ್ಭದಲ್ಲಿ ಮಾಯೆ – ಛಾಯೆ – ಸತ್ಯ – ಅಸತ್ಯಗಳ ಗೊಂದಲಕ್ಕೆ ಸ್ವಲ್ಪವೂ ಅವ ಕಾಶವಿಲ್ಲ. ಮನುಷ್ಯನಲ್ಲಿದ್ದ ಸಕಾಮ ದೃಷ್ಟಿಯಿಂದ ಪರಮಾತ್ಮನ ಸೃಷ್ಟಿಕಾರಕ ಶಕ್ತಿ (ಅವಳು ಮಾಯೆಯಾಗಲಿ, ಶಕ್ತಿಯಾಗಲಿ, ಪ್ರಕೃತಿಯಾಗಲಿ) ಛಾಯಾರೂಪತಾಳುತ್ತದೆ. ಅಂದರೆ ಅದರ ಸಂಬಂಧದಿಂದ ಸತ್ಯಾನುಭವ ಬರುವುದಿಲ್ಲವೆಂದು ಅರ್ಥ. ಆ ದೃಷ್ಟಿಯಿಂದಲೇ ಇಕ್ಷುವಿಗೆ ಶಚಿಕಂಡರೂ ಕೈಗೆ ಸಿಕ್ಕಲಿಲ್ಲ. ಇದು ಇಕ್ಷ್ವಾಯಣದ ಪ್ರಧಾನ ದರ್ಶನ. ಈ ದರ್ಶನದ ಹೊಳಹು ಕಂಡಾಗ ಇಕ್ಷಾಯಣವು ನೀರದದ ನೈಜಉಪಾಖ್ಯಾನವಾಗಿ ಬೆಳಗುತ್ತದೆ.

ಇದರಲ್ಲಿ ಇಂದ್ರನ ಪಾಪವೇನು? ಇಕ್ಷುವಿನ ಪತನಕ್ಕೆ ಇಂದ್ರನೇ ಹೊಣೆಗಾರನೆ? ಇತ್ಯಾದಿ ಪ್ರಶ್ನೆಗಳು ತೀರ ಆನುಷಂಗಿಕವಾದವು. ಶ್ರೀ ಕಾಯ್ಕಿಣಿಯವರು ಅವುಗಳನ್ನು ಪ್ರಬಲ ಸಮಸ್ಯೆ ಗಳನ್ನಾಗಿಸಿ ಕಾವ್ಯಕ್ಕೆ ವಿಸಂಗತಿಯ ಬಣ್ಣ ಬಳೆಯಲು ತೊಡಗಿರುವುದು ಅನುಚಿತವಾಗಿದೆ.

ಅಹಲ್ಯಾಜಾರನೆಂಬ ಪುರಾಣ ಕತೆಯ ಧ್ವನಿಯು ಸೂಕ್ಷ್ಮವಾಗಿ "ಹಿಂದಕಿಂದ್ರನೆಸಗಿದ ಪಾಪದ ಫಲವೊ" ಎಂಬ ಮಾತಿನಲ್ಲಿದ್ದರೆ ಅದರ ಉಪಯೋಗ ಅಷ್ಟಕ್ಕಷ್ಟೇ. ಅದನ್ನೇ ಹೆಚ್ಚಿಗೆ ಳೆದು ಇಕ್ಷು, ಶಚಿಯನ್ನು ಆಶೆ ಮಾಡಲು ಅದೇ ಕಾರಣವೆಂದು ಹೇಳಿ, ಇಕ್ಷುವಿನ ಪತನಕ್ಕೆ ಇಂದ್ರನೇ ನೈತಿಕವಾಗಿ ಹೊಣೆಗಾರನೆಂದು ತೀರ್ಮಾನಿಸಲು ಹೊರಟರೆ ಮೂಲದರ್ಶನವೇ ಕಣ್ಮರೆ ಯಾಗುತ್ತದೆ.

ಇದೇ ರೀತಿ "ಅಶ್ವಮಧ್ಯ ಸಂತತಿ" ಎಂದು ಅರ್ಧ ಪ್ರಾಣಿಕ, ಅರ್ಧ ಮಾನಸಿಕವಾಗಿ ಅಪೂರ್ಣ ವ್ಯಕ್ತಿತ್ವ ಪಡೆದ ಮಾನವನ ಇಂದಿನ ಸ್ಥಿತಿ–ಅವಸ್ಥೆಯನ್ನು ಕವಿಗಳು ಬಣ್ಣಿಸಿದ್ದು

ಉಚಿತವಾಗಿದ್ದರೂ ಶ್ರೀ ಕಾಯ್ಕಿಣಿಯವರಿಗೆ ದೋಷವಾಗಿ ಕಂಡಿದೆ. ಇಷ್ಟೇ ಅಲ್ಲದೆ, ಅರ್ಥ ಮರ್ಥ ಪ್ರಜ್ಞೆಯೇ ಅನಿವಾರ್ಯ-ಸಹಜವೆಂದೂ ಪ್ರತಿಪಾದಿಸಿದ್ದಾರೆ. ಪೂರ್ಣ ದೃಷ್ಟಿ, ಪೂರ್ಣಾನು ಭವ ಎಂಬುದಿದೆ. ಪ್ರಸ್ತುತ ಪೂರ್ಣದೃಷ್ಟಿ ಎಂದರೆ, ಭೂಮಿ, ಆಕಾಶ, ಪಾರ್ಥಿವ ಜೀವನ-ಆಧ್ಯಾತ್ಮಿಕ ಜೀವನ-ಇವೆರೆಡರ ಸಮನ್ವಯ ಸಾಧಿಸುವ ದೃಷ್ಟಿಯೆಂದು ಅರ್ಥ. ಇದಿಲ್ಲದ್ದು ಅರ್ಧಾನುಭವ; ಅರ್ಧತತ್ವಜ್ಞಾನ. ಇಕ್ಷು ಇಂಥ ಅರ್ಧಪ್ರಜ್ಞೆಯ "ಅಶ್ವಮಧ್ಯ (ನರಸಿಂಹ ನಂತೆ ಇವರು ಅಶ್ವನರರು!) ಸಂತತಿಕಂಡು ಭ್ರಮವಿರಸನ ಹೊಂದಿದನೆಂದು ಅರ್ಥ.

## ಇಕ್ಷ್ವಾಯಣದ ರಸಸಂಪತ್ತು

ಶ್ರೀ ವಿನಾಯಕರಿಗೆ ನೆಲ-ಮುಗಿಲುಗಳೆರಡೂ ಏಕ ಸತ್ಯದ ವಿವಿಧ ಮುಖಗಳನ್ನೇ ಅಭಿ ವ್ಯಕ್ತಗೊಳಿಸುತ್ತವೆ. ಮುಗಿಲಿನಲ್ಲಿ ನೀರದ-ನಾರದ ಸೂತ್ರ ಕಂಡ ಕವಿಗಳು ಭೂಮಿಯಲ್ಲಿಯೂ ಅಂಥ ಸೂತ್ರ ಕಾಣುತ್ತದೆ. ಈ ಸೂತ್ರಕ್ಕೆ ಇಷ್ಟು ಪ್ರತೀಕವಾಗಿ ನಿಲ್ಲುತ್ತವೆ:

"ನವನೀರದವದು ಮುಗಿಲೊಳಲೆಯುವಂತೆ
ಬುವಿಯೊಳಲೆದನಿಕ್ಷು
ಅವನಾಂತರ್ಯದಿ ಮುಗಿಲೆ ವಾಸಿಸಿತ್ತು
ತೆರೆದನಂತಶ್ಚಕ್ಷು . . . . ,

ಅಂತಶ್ಚಕ್ಷು ತೆರೆದ ಈ ಭೂಪತಿಗೆ ತಾನು ಅತ್ಯಂತ "ನಿಸ್ಪೃಹ"ನೆಂಬ ಭ್ರಾಂತಿ ಇತ್ತು. "ರೂಪ ವಿದ್ದರೂ ನಿರಾಕಾರ ನಾನು" ಎಂದು ಹೇಳಿಕೊಂಡು "ನೋಂಪಿಯ ನೋಂತರು ಮೂಲದಿ ನಿಸ್ಪೃಹನು" ಎಂದು ತಿಳಿವಳಿಕೆ ಮಾಡಿಕೊಂಡಿದ್ದಾನೆ. ಇದು ಕೆಲಮಟ್ಟಿಗೆ ಸತ್ಯವಾದರೂ ಈ ತಿಳಿವಳಿಕೆ "ಸ್ಥಿರ-ಸ್ಥಿತ"ವಾದುದಲ್ಲ. ಆದ್ದರಿಂದಲೇ ಇಂದ್ರನು ಎಚ್ಚರ ನೀಡುತ್ತಾನೆ:

"ಇಂದ್ರನೆಂದ: ಓ ಇಕ್ಷು ಸಾವಧಾನ
ಆದಿಶಕ್ತಿಯನು ಕಾಂಬ ಕಣ್ಣ ಪರಿಯು
ತೀರ ಬೇರೆ ಇದೆ. ನಿನ್ನ ಕಣ್ಣಗೊಂಬೆ
ಎಳಿಕದ ಮಾದರಿ ಕಾಣದು ಐಸಿರಿಯು."

ಇಂದ್ರನ ಮಾತನ್ನು ಇಕ್ಷು ಕೇಳಲಿಲ್ಲ. ತನ್ನ "ನಿಸ್ಪೃಹತೆ"ಯ ಬಗೆಗೆ ಬಲವಾಗಿ ನಂಬಿದಾಗ ಭೂಪತಿಗೆ ಅನುಭವದಿಂದಲೇ ಬುದ್ಧಿ ಬೇಕಿತ್ತು.

ಇಕ್ಷು ಅತಿಮಾನಸದ ಆದಿಶಕ್ತಿಯನ್ನು ಕಾಣಬಯಸಿದ್ದ. ಅತಿಮಾನಸದ ಕೆಳಗಿನ ಮನಸ್ಸಿ ನಲ್ಲಿಯೇ ಉನ್ನತನೆಲೆಯಾದ "ಘನಮನ"ದ ಅಧಿದೇವತೆ-ಶಚಿಯನ್ನು ಇಂದ್ರನು ತೋರಿಸಿದ. ಅವಳ "ರುಚಿರ ರೂಪ, ಶುಚಿರೂಪ, ಮಧುರರೂಪ" ಇಕ್ಷುವಿನೆದುರು ಸುಳಿದಾಗ ಆತ ತತ್ತರಿ ಸಿದ. ಅವಳನ್ನು ಆಶೆಮಾಡಿದ.

ಇಲ್ಲಿ ಕಾಯ್ಕಿಣಿಯವರು ಗೊಂದಲಕ್ಕೀಡಾಗಿದ್ದಾರೆ.

ಪುರಾಣದಲ್ಲಿ ರಾವಣನು ಪಾರ್ವತಿಯನ್ನು ಮೋಹಿಸಿ ಕಾಳಿಯನ್ನು ಪಡೆದ ಕತೆ ಬರುವ ದನ್ನು ಇಲ್ಲಿ ನೆನೆಯಬಹುದು. ಅದೇ ರೀತಿ ಶಚಿಯ ಮಂಗಲರೂಪವನ್ನು ನಿಷ್ಕಾಮಭಾವದಿಂದ ಕಾಣದ ಇಕ್ಷುಪಿಗೆ ಇಂದ್ರನು ಶಚಿಯ ಛಾಯೆಯನ್ನು ಒದಗಿಸಿದರೆ ಆಶ್ಚರ್ಯವಲ್ಲ.

ನೀರದದಲ್ಲಿ ತಿಮಿಂಗಲ, ಏಡಿ, ಶೃಗಾಲಗಳುದಯವಾಗಲು ಅವಕಾಶವಿದೆ. ನಮ್ಮ ಸ್ವಾರ್ಥವನ್ನೆ ಆ ಶುಭ್ರತೆಗೆ ನಂಜಿನಂತೆ ಕುಡಿಸಿ ವಿಕಾಸ ಸೃಷ್ಟಿಗೆ ಅವಕಾಶ ಕೊಡುವೆವೆಂದು ನೀರದದ ನಾಲ್ಕನೆಯ ಭಾಗದಲ್ಲಿ ಕವಿಗಳು ಬಣ್ಣಿಸಿದ್ದನ್ನು ಇಲ್ಲಿ ನೆನೆಯಬೇಕು.

ನೀರದವನ್ನು ಕಾಣುವ ಎರಡು ದೃಷ್ಟಿಗಳಿರುವಂತೆ ಶಚಿಯನ್ನು ಕಾಣುವ ಎರಡು ದೃಷ್ಟಿಗಳಿವೆ. ಇಕ್ಷುವಿನ ವಿಕಾರದೃಷ್ಟಿಗೆ ಶಚಿಯ ಛಾಯಾರೂಪಮಾತ್ರ ಕಂಡು ಅದೇ ಕೈಗೆ ಸಿಕ್ಕುತ್ತದೆ.

ಛಾಯಾಸೃಷ್ಟಿ–ಭಗವದನುಮತಿ ಇಲ್ಲದ ಅಹಂಕಾರದ ಸೃಷ್ಟಿ. ಇವು ಶ್ರೀ ವಿನಾಯಕರ ಕಾವ್ಯ ರಸದಲ್ಲಿ ಅನೇಕ ಕಡೆಗೆ ಸುಳಿದಿವೆ. "ತ್ರಿಶಂಕುವಿನ ಪ್ರಜ್ಞಾ ಪ್ರಭಾವ"ದಲ್ಲಿ ವಿಶ್ವಾಮಿತ್ರನ ಸೃಷ್ಟಿಯೂ ಇಂಥದೇ ವಿಕಾರ ಸೃಷ್ಟಿಯಾಗಿದೆ. ಇಷ್ಟೇ: ವಿಶ್ವಾಮಿತ್ರನಲ್ಲಿ ಕೋಪ, ಭಗವದನುಮತಿ ಇಲ್ಲದ ತಪಶ್ಶಕ್ತಿ ಇದೆ. ಇಕ್ಷುವಿನಲ್ಲಿ ಕಾಮ–ಅಪೂರ್ಣಪ್ರಜ್ಞೆ ಇದೆ.

ವಿಶ್ವಾಮಿತ್ರರಿಗೆ ಬ್ರಹ್ಮದೇವನ ಕರುಣೆಯಿಂದ ಎಚ್ಚರವಾಗುತ್ತದೆ. ಭಗವತ್ ಸಂಕಲ್ಪಕ್ಕೆ ತಲೆಬಾಗುವ ಪ್ರಣತಿಭಾವ ತಲೆದೋರುತ್ತದೆ. ಇಕ್ಷುವಿಗೆ "ಗರುಡವಾಹನ"ನ ವಿರಾಟ್‌ರೂಪದ ಅನುಗ್ರಹವಾಗುತ್ತದೆ.

ವಿಶ್ವಾಮಿತ್ರ ಸೃಷ್ಟಿಯಂತೆ ಇಕ್ಷುವಿನ ಛಾಯಾಸೃಷ್ಟಿ ವಿಕಾರವಾಗಿದೆ.

"ಅರ್ಧಮಾನಸರು, ಅರ್ಧಕುದುರೆಮೆಯ್ಯ,
ಅಶ್ವಮುಧ್ಯದಾ ಸಂತತಿ ಹುಟ್ಟಿದೊಲು
ಅರ್ಧನೆಳಲು, ಅರ್ಧ ತಿಳಲದಾಗಿ
ಔರಸರೊಗೆತಂದರು ಗುರಿಮುಟ್ಟಿದೊಲು."

ಇಲ್ಲಿ "ಅಶ್ವಮುಧ್ಯ" ಸಂತತಿ ಬಹು ಸುಂದರವಾದ ನೂತನ ಪ್ರತಿಮವಾಗಿದೆ. ಅರ್ಧ ಪಶು, ಅರ್ಧ ಮಾನವತೆಯ ಇನ್ನೊಂದು ಮುಖವಿದು. ಇದೇ ಮಾತನ್ನು ಅರ್ಧಪ್ರಜ್ಞೆಯ ದಾರ್ಶನಿಕರ ವಿಷಯದಲ್ಲಿಯೂ ಕವಿಗಳು ಹೇಳುತ್ತಾರೆ.

"ಅನುಭವದರ್ಧಕೆ ತತ್ತ್ವದರ್ಧವನ್ನು
ಕೀಲಿಸಿ ತೇಲಲು ಬಯಸಿ ಮುಳುಗಿದವರು"

ಇಲ್ಲಿ "ಅರ್ಧ ಅನುಭವ"ವೆಂದರೆ ಮುಕ್ತಿ ಪ್ರಧಾನ ಅನುಭವವೆಂದು ಅರ್ಥ; ಅರ್ಧತತ್ತ್ವವೆಂದರೆ ಮುಕ್ತಿಪ್ರಧಾನ ತತ್ತ್ವಜ್ಞಾನವೆಂದು ಅರ್ಥ. ಇವರು ಸಂಸಾರವಲ್ಲಿ ತೇಲಲು ಬಯಸಿ ತತ್ತ್ವಜ್ಞಾನದ ಹಾದಿ ಹಿಡಿದರು. ಆದರೆ ಸಂಸಾರವನ್ನು ತ್ಯಜಿಸಿ ದೂರಹೋದರು. ನವಜೀವನ ಸೃಷ್ಟಿಗೆ ಕಾರಣವಾಗಲಿಲ್ಲ. ಭೂಮಿಯನ್ನು ಅದರ ಪಾಲಿಗೆ ಬಿಟ್ಟು ತಮ್ಮ ದಾರಿ ಹಿಡಿದರು.

ಇದೇ ರೀತಿ ನಾನಾ ವಿಚಾರ, ನಾನಾ ದರ್ಶನ, ನಾನಾ ಪ್ರಯತ್ನಗಳು ಅಪೂರ್ಣ–ಅರ್ಧ ಸತ್ಯ ದೃಷ್ಟಿಯುಳ್ಳವಾಗಿವೆ. ಇಂಥ ಸೃಷ್ಟಿದರ್ಶನದಿಂದ ವ್ಯಥೆಗೊಂಡ ಇಕ್ಷು, ಪಶ್ಚಾತ್ತಾಪದಗ್ಧನಾದಾಗ "ಸಹಸ್ರಾಕ್ಷ, ಸಹಸ್ರಬಾಹು" ಗರುಡವಾಹನನು ಪ್ರತ್ಯಕ್ಷವಾಗಿ ಹೊಸ ದೃಷ್ಟಿ ನೀಡುತ್ತಾನೆ. ಸೃಷ್ಟಿಯ ಅನಂತ ವೈಭವವನ್ನು ತೆರೆದು ತೋರಿಸುತ್ತಾನೆ.

ಭೂಮಿಯ ನದಿನದ, ಗಿರಿಶೃಂಗಶ್ರೇಣಿ, ಪ್ರಾಣಿಪ್ರಪಂಚ, ಮಾನವ ಪ್ರಪಂಚ–ಇದರ ಅನಂತತೆಗೆ ಮಣಿಯದವರುಂಟೆ? ಪ್ರಕಾಶ ವೈಭವ, ಮುರಲೀಧರನ ಸುತ್ತ ಗೋಪಿಯರು ತಿರುಗುವಂತೆ ಕಾಣುವ ಸೂರ್ಯಮಂಡಲಗಳ ಅದ್ಭುತ ಪ್ರಪಂಚ–ಎಲ್ಲವನ್ನೂ ಇಕ್ಷು ಕಾಣುತ್ತಾನೆ.

"ಓರ್ವ ರವಿ ತಂಪಾಗಿರಲು, ಕೆಂಪಾಗಿಹುದು
ಬಾನಂಗಳವು ಬೇರೆ ರವಿಯು ತೋರೆ."

ಎಂದು ವರ್ಣಿಸಿ ಇಂದಿನ ಮಾನವನಿಗೆ ಕಾಣುತ್ತಿರುವ ನಕ್ಷತ್ರಮಂಡಲವ ವರ್ಣನೆ ಮಾಡಿದ್ದಾರೆ. ಮುಂದೆ ಇದಕ್ಕೆ ಕೊನೆಯಂತೆ ಕಾಣುವ ಆಕಾಶಗಂಗೆಯ ಸೀಮೆಗೆ ಇಕ್ಷುವಿನ ದೃಷ್ಟಿ ತಿರುಗಿಸುತ್ತಾರೆ.

"ಮಾಂತ್ರಿಕನ ರತ್ನಗಂಬಳಯಂತೆ ಸರಿಯುವದು
ಮೆಲ್ಲ ಮೆಲ್ಲನೆ ಇವಳ ಹಂಸತಲ್ಪ
ಇವಳನಂತಾನಂತದೊಂದು ವಿದ್ಯುಲ್ಲತೆಯ
ಕುಸುಮವರಳಲು ಬೇಕು ಒಂದು ಕಲ್ಪ."

ಎಂದು ಆಕಾಶಗಂಗೆಯ ನಕ್ಷತ್ರಪುಂಜದ ಅದ್ಭುತ ವರ್ಣನೆ ಅತ್ಯಂತ ರಸಕಾಂತಿಯಿಂದ ಬೆಳಗುತ್ತದೆ. ಆಧುನಿಕ ಮಾನವನು ನಕ್ಷತ್ರ ಮಂಡಲದ ಅಭ್ಯಾಸ ಮಾಡುತ್ತಿರುವಾಗ ಈ ಆಕಾಶ ಗಂಗೆಯೇ ಆತನ ಜ್ಞಾನಸೀಮೆಯಾಗುತ್ತದೆ.

"ಇಲ್ಲಿ ಗೆರೆಯೆಳೆಯುವದು ಮರ್ತ್ಯಪ್ರಜ್ಞೆಯಸೀಮೆ" ಈ ದೃಷ್ಟಿಯಿಂದಲೇ ಇದು "ಹಿರಣ್ಮಯಪಾತ್ರೆ." ಏಕೆಂದರೆ ಇಲ್ಲಿಯ ಅದ್ಭುತ ಪ್ರಕಾಶವೇ ನಮಗೆ ಕತ್ತಲುಕವಿಸಿ ಅದರಾಚೆ ಗಿರುವದನ್ನು ಕಾಣದಂತಾಗಿಸುವದು.

"ಬೆಳಕೆ ಕತ್ತಲೆಯಿಹುದು; ಬೆಳಕು ನೋಡವದಾಗಿ
ಆಕಾಶಗಂಗೆ ಕವಿಯುವಳೆಮ್ಮ ಕಂಗಳನು

ಇದರಾಚೆಗಿನ ನಾಡು ಕಾಣಲು ಹಣೆಗಣ್ಣು ಅರಳಬೇಕು.

"ಮೂರ್ಧ್ನನೇತ್ರಕೆ ವಿದತವೀ ವಿರಾಟತೆಯ ಸಿರಿ"

ಆಗ ಇಕ್ಷುವಿನ ಪರಮಗುರಿ ಕೈಗೆಟಕುವದು.

"ಅಂದು ತೆರೆವುದುಬಾಗ್ಯ ನಿನ್ನದಾಗುವದು ಗುರಿ
ಆದಿಶಕ್ತಿಯು ಬಹಳು ನೆಲ-ಮುಗಿಲ ಹೊಂದಿಸುತ"

ಹೀಗೆ ದ್ಯಾವಾಪೃಥಿವೀ ಸಮ್ಮಿಲನದ ಶಕ್ತಿ ಈ ಹೃದಯಾಕ್ಷಿ, ಮೂರ್ಧ್ನಾಕ್ಷಿಗಳ ಸಿದ್ಧಿಯಲ್ಲಿದೆ. ಅವರ ಡರಿಂದ ಕಾಂಬ ಅಧಿದೈವತವನ್ನು ಆರಾಧಿಸಬೇಕು; ಸಂಶೋಧಿಸಬೇಕು. ಇಲ್ಲವೆ ರೋದಿಸಬೇಕು.

ಗರುಡವಾಹನನು ಆಯ್ಕೆಯನ್ನು ಇಕ್ಷುವಿಗೇ ಬಿಟ್ಟನು. ಗೀತೆಯ ಕೊನೆಯಲ್ಲಿ ಅರ್ಜುನನಿಗೆ "ವಿಮರ್ಶೆಮಾಡಿ ನಿನಗೆ ತಿಳಿದಂತೆ ಮಾಡು" ಎಂದು ಶ್ರೀಕೃಷ್ಣನು ಹೇಳಲಿಲ್ಲವೆ ಹಾಗೆ. ಇಕ್ಷು ಸರಿಯಾದ ಆಯ್ಕೆ ಮಾಡಿದ. ಆದ್ದರಿಂದಲೇ ಅವನ ಜೀವನದಲ್ಲಿ

"ಆಗ ಬೆಳಗಾಗಿತ್ತು
ಬೆಳ್ಳ ಬೆಳಗಾಗಿತ್ತು
ಎಲ್ಲ ತಲೆಕೆಳಗಾಗಿ
ನನಸು ಕನಸಾಗಿತ್ತು
ಕನಸು ನನಸಾಗಿತ್ತು."

ಈ ದರ್ಶನದಲ್ಲಿ ಪುನಃ ನೋಡವು "ಆಕಾಶಗಂಗೆಯ ರೂಪ" ತಾಳಿರುವದನ್ನು ಸಹೃದಯರು

ಗಮನಿಸಬೇಕು. ಹೆಜ್ಜೆಹೆಜ್ಜೆಗೆ ಬೆಳಕು – ಕತ್ತಲು – ಎರಡಕ್ಕೂ ನೀರದವು ಏಕಕಾಲಕ್ಕೆ ಪ್ರತೀಕವಾಗುತ್ತ ಸಾಗುತ್ತದೆ.

ದೂರನಿಂತಾಗ ಮೋಡವಾಗಿ, ದೃಷ್ಟಿವಿಕಾರವಾದಾಗ ವಿಕಾರ ರೂಪತಾಳಿ, ಸನಿಯಕ್ಕೆ ಬಂದಾಗ ಶುಭ್ರಸ್ಫಟಿಕವಾಗಿ, ಅಂತರಾರ್ಥ ಅರಿತಾಗ ಬೆಳಕಾಗಿ, ನವಜೀವನ ಸೃಷ್ಟಿಯ ಅಧಿಶಕ್ತಿಯಾಗಿ ಕಂಗೊಳಿಸುತ್ತದೆ ಈ ನೀರದ! ಕೊನೆಯಲ್ಲಿ ಅದು

"ಸೌಂದರ್ಯದ ನಿರ್ಜರ-ಶಿಶು-ಮೇಲೊರಗಿ
ತೇಲದಾಲದೆಲೆ ಒಡ! . . ."

ಇಕ್ಷುವಿಗೂ ಆಕಾಶಗಂಗೆಯಲ್ಲಿ ಕಂಡದ್ದು ದಿವ್ಯ ಓಡವೇ. ಆದ್ದರಿಂದಲೇ ಇಕ್ಷ್ವಾಯಣವು ನೀರದ ಕಾವ್ಯದ ಸಾರಭೂತ ಉಪಾಖ್ಯಾನವಾಗಿದೆ; ವೇದಗಳಿಗೆ ಇತಿಹಾಸ ಪುರಾಣಗಳಿದ್ದಂತೆ ಇಕ್ಷ್ವಾಯಣವು ನಾರದ ಕಾವ್ಯವನ್ನು, "ಸಮುಪಬೃಂಹಣ" ಮಾಡುವದು. ಇದೇ ಮಾತು ಇಳಾಗೀತಕ್ಕೂ ಅನ್ವಯಿಸುತ್ತದೆ. ಅದರ ವಿವೇಚನೆ ಸ್ವತಂತ್ರ ಲೇಖನದಲ್ಲಿಯೇ ಆಗುವದು ಉಚಿತ.

# ಸಿರಸಿ-ಸಿದ್ದಾಪುರ ತಾಲ್ಲೂಕಿನಲ್ಲಿ ಬಳಕೆಯಲ್ಲಿರುವ ಕೆಲವು ವಿಶಿಷ್ಟ ಕನ್ನಡ ಶಬ್ದಗಳು

**ಅನಂತಶರ್ಮ ಭುವನಗಿರಿ**

ಈ ಮುಂದೆ ಕೊಟ್ಟಿರುವ ಶಬ್ದಗಳು ಉತ್ತರ ಕನ್ನಡ ಜಿಲ್ಲೆಯ ಸಿರ್ಸಿ–ಸಿದ್ದಾಪುರ ತಾಲ್ಲೂಕುಗಳಲ್ಲಿ ವಿಶೇಷವಾಗಿ ಬಳಕೆಯಲ್ಲಿರುವ ಶಬ್ದಗಳು. ಇಲ್ಲಿ ವಾಸಿಸುತ್ತಿರುವ ಜನ ಸಾಮಾನ್ಯವಾಗಿ ಹವ್ಯಕ ಬ್ರಾಹ್ಮಣರು ಹಾಗೂ ನಾಮಧಾರೀ ಒಕ್ಕಲಿಗರು. ಭತ್ತದ ಗದ್ದೆ ಅಡಿಕೆ ತೋಟಗಳೇ ಇವರ ಜೀವನಾಧಾರ. ಇವರ ವೃತ್ತಿಗೆ ಸಂಬಂಧಪಟ್ಟ ಹಾಗೂ ಮಲೆನಾಡಿನ ಪರಿಸರಕ್ಕೆ ಅವಶ್ಯಕವಾದ ಎಷ್ಟೋ ಶಬ್ದಗಳು ಬಹು ಹಿಂದಿನಿಂದಲೂ ಇವರ ಮಾತುಗಳಲ್ಲಿ ಉಳಿದುಕೊಂಡು ಬಂದಿವೆ. ಅವುಗಳಲ್ಲಿ ಕೆಲವು ಶಬ್ದಗಳ ಪರಿಚಯವನ್ನು ಮಾತ್ರ ನೀಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಅಂತರಿಕೆ : ಕೆರೆಯ ಸುತ್ತಲೂ ಇರುವ ಮೆಟ್ಟಲು.

ಅಡ್ಡಬಡಿಗೆ, ಅಡ್ಡಬಡಚಿಗೆ : ಕೋಲು ; ಮರದಲ್ಲಿರುವ ಮಾವಿನಕಾಯಿ ಮುಂತಾದುವುಗಳನ್ನು ಉದುರಿಸಲು ಕೆಳಗೆ ನಿಂತು ಅಡ್ಡವಾಗಿ ಬೀಸುವ ಕೋಲಿಗೆ ಈ ಹೆಸರು. (ಪ್ರಯೋಗ : "ನಾನು ಅಡ್ಡಬಡಿಗೆಯಿಂದ ಮಾವಿನಕಾಯಿ ಉದುರಿಸಿದೆ."

ಅಟ್ಟಲು : ಚಿಕ್ಕ ಅಟ್ಟ. ಹೊಗೆ ಅಟ್ಟಲು : ಅಡುಗೆ ಮನೆಯಲ್ಲಿ ಹೊಗೆ ಹೋಗುವ ಮಾರ್ಗದಲ್ಲಿ ಬಿದಿರು ಮುಂತಾದವುಗಳಿಂದ ಮಾಡಿಕೊಂಡಿರುವ ಜಾಲರಿಯ.ಂತಹ ಅಟ್ಟ. ಬೆಚ್ಚಗಿಡ ಬೇಕಾದ ವಸ್ತುಗಳನ್ನು ಈ ಅಟ್ಟದ ಮೇಲಿಡುತ್ತಾರೆ. ಸೋಗೆ ಅಟ್ಟಲು : ಸೋಗೆಗಳನ್ನು ಪ್ರತಿದಿನವೂ ಒಟ್ಟು ಸೇರಿಸಿ ಇಡುವ ಅಟ್ಟ.

ಅವಳಿ : ಚಿಕ್ಕ ಕಾಲುವೆ. (ಹಾಯುವ ಹೊಳೆ>ಹಾಯ್ವೊಳೆ>ಅವಳಿ ?)

ಅಳಿಗೆ : ಪಾತ್ರೆ. ಗುಂಡಳಿಗೆ–ಗುಂಡಾದ ಪಾತ್ರೆ.

ಅಂಡುಕೊಕ್ಕೆ : ನಡುಪಟ್ಟಿಗೆ ಬೆನ್ನ ಹಿಂದೆ ಇರುವ ಕೊಕ್ಕೆ. ಇದಕ್ಕೆ ಕತ್ತಿಯನ್ನು ಸಿಕ್ಕಿಸಿಕೊಳ್ಳುತ್ತಾರೆ.

ಅಂಡೆ : (೧) ಮಧ್ಯೆ ರಂಧ್ರವಿರುವ ಬಿದಿರಿನ ಅಥವಾ ಅದೇ ಜಾತಿಯ ವನಸ್ಪತಿಯ ತುಂಡು (೨) ಬಿದಿರಿನ ಒಂದು ಕಡೆಯ ಗನ್ನು ಕೊಯ್ದು ಇನ್ನೊಂದು ಕಡೆಯದನ್ನು ಹಾಗೇ ಇಟ್ಟು ಮಾಡಿರುವ ಪಾತ್ರೆ.

ಅಂಟೆ : ಗಿಡಗಂಟಿಗಳಿಂದ ದಟ್ಟವಾದ ಕಾಡಿನ ಭಾಗ.

ಅರುಗು, ಅರಗು : ಪಕ್ಕ. ಅರಗ್ಗ್‌ಬಚ್ಚು–ಮುಂದಿರುವ ವಾಹನವನ್ನು ಹಿಂದಕ್ಕೆ ಹಾಕು. [Overtake] (ಪ್ರ. ನಾನು ಅವನ ಬಂಡಿಯನ್ನು ಅರಗ್ಗ್‌ಬಚ್ಚುತ್ತೇನೆ).

ಆಣೆ : ಗುಡ್ಡ. ಆಣೇನೆತ್ತಿ–ಗುಡ್ಡದ ತುದಿ.

ಆಪಿ : ಒಂದು ಜಾತಿಯ ಅಡಿಕೆ. ಎಳೆಯ ಅಡಿಕೆಯನ್ನು ಕೊಯ್ದು ಬೇಯಿಸಿದಾಗ ಚೊಗರಿನ ಭಾಗವು ಕಡಿಮೆಯಾಗಿ ಅಡಿಕೆಯ ಒಳ ಭಾಗವು ಬೆಳ್ಳಗಾಗುವುದು. ಇದಕ್ಕೆ ಆಪಿ ಎನ್ನುತ್ತಾರೆ.

ಇರಸಲು, ಇಡಸಲು : ಮನೆಯ ಮಾಡಿನಿಂದ ಬೀಳುವ ನೀರು ಗಾಳಿಯ ಹೊಡೆತಕ್ಕೆ ಪಕ್ಕದ ಗೋಡೆಗೆ ಬಂದು ಬಡಿಯುತ್ತದೆ. ಇದಕ್ಕೆ ಇಡಸಲು ಹೊಡೆಯುವುದು ಎಂದು ಹೆಸರು. "ಇಡಸಲು ತಟ್ಟೆ" ಈ ನೀರಿನಿಂದ ಗೋಡೆಯನ್ನು ರಕ್ಷಿಸಲು ತಡಿಕೆ, ಸೋಗೆ ಮುಂತಾದುವು ಗಳಿಂದ ಮಾಡಿದ ಮನೆ.

ಇಡಿಕೆ : ಕೊಡವನ್ನು ಇಡುವುದಕ್ಕಾಗಿ ಹುಲ್ಲಿನಿಂದ ಮಾಡಿದ ಬಳೆ.

ಇಚ್ಚಾಲು : ಗದ್ದೆಯನ್ನು ಎರಡನೇ ಸಾರಿ ಹೂಳುವಿಕೆ. (ಇರ್‌ಸಾಲು) ಪ್ರ–"ನಾವು ಇಚ್ಚಾಲು ಹೊಡೆದೆವು."

ಉಣುಗು : ಹಸು ಎಮ್ಮೆಗಳ ದೇಹದಲ್ಲಿ ಅಂಟಿಕೊಂಡಿರುವ ಚಿಕ್ಕ ಕ್ರಿಮಿ.

ಉಂಬಳ : ಮಲೆನಾಡಿನ ಕೆಲವು ಭಾಗಗಳಲ್ಲಿ ಮಳೆಗಾಲದಲ್ಲಿ ಮಾತ್ರ ಕಂಡುಬರುವ ಜಿಗಳೆ ಜಾತಿಗೆ ಸೇರಿದ ಒಂದು ಕ್ರಿಮಿ. ಒಂದರಿಂದ ಒಂದೂವರೆ ಇಂಚು ಉದ್ದವಿರುವ ಈ ಕ್ರಿಮಿ ಮನುಷ್ಯನ ರಕ್ತವನ್ನು ಅವನಿಗೆ ಗೊತ್ತಾಗದಂತೆ ಹೀರಬಲ್ಲದು.

ಉಪ್ಪಗೆ : ಜೋಗದ ಸುತ್ತಮುತ್ತಲು ಸಿಗುವ ಒಂದು ಜಾತಿಯ ಮರ. ಇದರ ಹಣ್ಣಿನಲ್ಲಿರುವ ಬೀಜಗಳಿಂದ ತುಪ್ಪವನ್ನು ತಯಾರಿಸುತ್ತಾರೆ. ಇದಕ್ಕೆ "ಉಪ್ಪಗೆ ತುಪ್ಪ"ವೆಂದು ಹೆಸರು.

ಓಳೆ : ಸಸಿ ನೆಡುವುದಕ್ಕೆ ಅಥವಾ ನೀರು ಹಾಯಿಸುವದಕ್ಕೆ ಮಣ್ಣಿನಲ್ಲಿ ಅಗೆದು ಮಾಡಿದ ಸಾಲು.

ಕಟ್ಲು : ಕಟ್ಟೆ. ಮನೆಯ ಹೊರಗೋಡೆಯ ಸುತ್ತಲೂ ಇರುವ ಸುಮಾರು ಎರಡು ಫೂಟು ಅಗಲದ ಕಟ್ಟೆಗೇ ಈ ಹೆಸರು.

ಕಂಟ್ಲೆ : ಮನೆಯ ಸುತ್ತು ಗೋಡೆ. (< ಕಟ್ಟಣೆ).

ಕಂದ್ನ, ಕಂದ್ಲ : ನೀರು ತರುವ ದೊಡ್ಡ ಕೊಡ.

ಕಂದ್ಲೆ : ಗಿಡಮರಗಳನ್ನು ಕತ್ತರಿಸುವ ದೊಡ್ಡ ಕತ್ತಿ.

ಕಚ್ಚಲಿಗೆ : ಅಡಿಗೆ ಮನೆಯಲ್ಲಿ ಸಾಮಾನುಗಳನ್ನಿಡಲು ಹಲಗೆಯಿಂದ ಮಾಡಿಕೊಂಡ ಚಿಕ್ಕ ಅಟ್ಟ.

ಕಡವಾರ : ಮನೆಯ ಸುತ್ತಮುತ್ತಲಿನ ಕಾಲುವೆ.

ಕಲ್ಲಿ : ಬೆತ್ತದ ಬಲೆಬಲೆಯಾದ ದೊಡ್ಡ ಬುಟ್ಟಿ.

ಕವಳಿಗೆ : ೧. ಲೋಟ. ೨. ಐವತ್ತು ವೀಳ್ಯದೆಲೆಗಳ ಕಟ್ಟು.

ಕಳಲೆ : ಎಳೆಯ ಬಿದಿರು, ಕಳಲೆಪಲ್ಯ, ಕಳಲೇ ಹುಳಿ–ಎಳೇ ಬಿದಿರಿನಿಂದ ಮಾಡಿದ ಪದಾರ್ಥಗಳು.

ಕಸ್ತ್ರ : ಕುಡಿ. ಯಾಲಕ್ಕಿಕಸ್ತ್ರ : ಮುಂದೆ ಕಾಯಿಗಳನ್ನು ಹೊರತರುವ ಯಾಲಕ್ಕಿಯ ಬೇರುಗಳು.

ಕಡಕಟ್ಟು : ಕಟ್ಟಿಗೆ ಅಥವಾ ಕಬ್ಬಿಣದ ಗೂಟಗಳಿಂದ ಮಾಡಿದ ಜಾಲರಿ.

ಕಪಿ : ತೊಲೆ ಜಂತಿ ಮುಂತಾದವುಗಳಿಗೆ ಕಂಬಗಳನ್ನು ಕೊಡಬೇಕಾದರೆ ಅಥವಾ ಅವುಗಳಿಂದ ಕಂಬಗಳನ್ನು ತಪ್ಪಿಸಬೇಕಾದರೆ ಬೇರೆ ಉದ್ದವಾದ ಗೂಟಗಳನ್ನು ಅವುಗಳಿಗೆ ಆಧಾರವಾಗಿ ಕೊಡುತ್ತಾರೆ. ಆ ಗೂಟಗಳಿಗೆ "ಕಪಿ" ಎಂದು ಹೆಸರು. ಪ್ರ-ಸದ್ಯಕ್ಕೆ ಆ ತೊಲೆಯನ್ನು ಕಪಿಕೊಟ್ಟು ನಿಲ್ಲಿಸಿದ್ದೇವೆ. ನಾಳೆ ಕಂಬ ಕೊಡುವೆವು.

ಕಾದಿಗೆ : ಅಡಿಕೆ ತೋಟದ ಭರಣಗಳ ಮಧ್ಯದಲ್ಲಿರುವ ಕಾಲುವೆ. (ಸಂ. ಖಾತಿಕಾ > ಕಾದಿಗೆ).

ಕುಕ್ಕಿ : ಚಿಕ್ಕ ಬುಟ್ಟಿ.

ಕುಂಡಿಗೆ : ಬಾಳೆಗೊನೆಯ ಮೂಲೆ. ಕೇದಿಕಿ ಕುಂಡಿಗೆ : ತಾಳೇಹೂ.

ಕೊಂತ : ಅಡಿಕೆ ಮರದ ತುದಿಯ ಭಾಗ.

ಕೋಕಾ : ಅಡಿಕೆಯ ಒಂದು ವಿಭಾಗ. ಹಣ್ಣಡಿಕೆಯನ್ನು ಒಣಗಿಸಿ ಸುಲಿದ ಮೇಲೆ ಅದರಲ್ಲಿ ಬರುವ ಕೆಡುಕು ಅಥವಾ ಕನಿಷ್ಠವರ್ಗದ ಅಡಿಕೆಗೆ ಈ ಹೆಸರು.

ಕೊನ್ನಡಕ : ಗೋಡೆಯಲ್ಲಿ ಮಾಡಿದ ಗೂಡು.

ಕೊಟ್ಟೆ : (೧) ಮಳೆಗಾಲದಲ್ಲಿ ಅಡಿಕೆಗೊನೆಯ ರಕ್ಷಣೆಗಾಗಿ ಅಡಿಕೆ ಪಟ್ಟೆಯನ್ನು ಕತ್ತರಿಸಿ ಮಾಡಿದ ರಕ್ಷಾಕವಚ. (೨) ಅಡಿಕೆ ಪಟ್ಟೆಯನ್ನು ಮಡಿಸಿ ಹೊಲಿದು ಮಾಡಿದ ಚೀಲ.

ಕೊಡ್ಲು : ಅಕೃತ್ರಿಮವಾದ ದೊಡ್ಡ ಕಾಲುವೆ ಅಥವಾ ದರೆ.

ಕೋಳು : ಮನೆಯ ಮೇಲ್ಗಡೆ ಎರಡೂ ಮಾಡುಗಳೂ ಸೇರುವ ಸ್ಥಳದಲ್ಲಿ ಎರಡಕ್ಕೂ ಆಧಾರವಾಗಿ ಒಂದು ತೊಲೆಯನ್ನು ಅಡ್ಡವಾಗಿ ಮಲಗಿಸಿಡುತ್ತಾರೆ. ಇದೇ ಕೋಳು. ಕೋಳುಗಂಬ : ಕೋಳನ್ನು ಹೊತ್ತು ನಿಂತಿರುವ ಕಂಭಗಳು.

ಗಟಾಗಿ : ಹೆಚ್ಚಾಗಿ ತುಂಬ. ಪ್ರ-ಆ ಮರದಲ್ಲಿ ಗಟಾಗಿಕಾಯಿ ಬಂದಿವೆ.

ಗುರಕೆ : ಚಿಕ್ಕ ಹುಲಿ ಅಥವಾ ತೋಳ.

ಗುಬ್ಬೆ : ಅಡುಗೆ ಮನೆ.

ಗೊರಬು : ಮಳೆಯಿಂದ ರಕ್ಷಿಸಿಕೊಳ್ಳಲು ತಾಳೆ ಎಲೆಯಿಂದ ಅಥವಾ ಅಡಿಕೆ ಪಟ್ಟೆಯಿಂದ ಮಾಡಿದ ವೈಮರೆ.

ಗೊಟ್ಟ : ಕರುಗಳಿಗೆ ಔಷಧ ಕುಡಿಸಲು ಉಪಯೋಗಿಸುವ ಬಿದಿರಿನ ನಳಿಕೆ.

ಗೋಟು : ಹಣ್ಣಡಿಕೆ.

ಚಾಲಿ : ಹಣ್ಣಡಿಕೆಯನ್ನು ಒಣಗಿಸಿ ಸುಲಿದರೆ ಅದು ಚಾಲಿಯೆಂದೆನಿಸಿಕೊಳ್ಳುತ್ತದೆ.

ಚಿಕಣಿ : ಅಡಿಕೆ ತುಂಬ ಎಳೆಯದಾಗಿದ್ದರೆ ಅದನ್ನು ಬೇಯಿಸಿ ಒಣಗಿಸಿದ ಕೂಡಲೇ ಸುರುಟಿ ಕೊಂಡುಬಿಡುತ್ತದೆ. ಇಂಥ ಅಡಿಕೆಗೆ ಚಿಕಣಿ ಎಂದು ಹೆಸರು.

ಚಿಟ್ಟೆ : ಮನೆಯ ಮುಂದಿನ ಕಟ್ಟೆ. (ನೋ. ಕಟ್ಟಲು)

ಚೂಳಿ : ತರಗೆಲೆಗಳನ್ನು ತರಲು ಉಪಯೋಗಿಸುವ ಹಗ್ಗದ ಬಲೆ.

ಚೌಡಿ : ಹೆಣ್ಣು ಪಿಶಾಚಿ.

ಜಟಿಗ : ಒಂದು ಜಾತಿಯ ಭೂತ.

ತಳಿ : ಜಾಲರಿ (ನೋ. ಕಡಕಟ್ಟು)

ತಳೆ : (೧) ಮರವನ್ನೇರಲು ಅನುಕೂಲವಾಗುವಂತೆ ಕಾಲಿಗೆ ಹಾಕಿಕೊಳ್ಳುವ ಹಗ್ಗದ ಬಳೆ.
(೨) ಮರೆ, ತಳೆಹಿಡಿಯುವುದು-ಮದುಮಗ ಬರುವಾಗ ಅವನ ಹಿಂದೆ ಮುಂದೆ ಇಬ್ಬರು ನಿಂತು ಒಂದು ಬಟ್ಟೆಯನ್ನು ಅವನ ಮೇಲಕ್ಕೆ ಅಗಲವಾಗಿ ಹಿಡಿದಿರುತ್ತಾರೆ. ಇದೇ ತಳೆ ಹಿಡಿಯುವದು.

ತಾಸ್ಮರ : ಒಂದು ಬಗೆಯ ಚರ್ಮ ವಾದ್ಯ. ಬುಟ್ಟಿಯಂತೆ ಅಗಲ ಬಾಯುಳ್ಳ ಮರದ ಪಾತ್ರೆಗೆ ಚರ್ಮ ಜೋಡಿಸಿ ಮಾಡಿರುತ್ತಾರೆ. ಇದರ ಸಪ್ಪಳ ಚಂಡೆಯಂತೆ ತೀಕ್ಷ್ಣ.

ತರುಪ್ಪ : ಕರುಹಾಕಿ ಒಂದು ವರ್ಷವಾದ ಮೇಲೆ ಎಮ್ಮೆ ಅಥವಾ ಹಸುಗಳು "ತರುಪಿನ ಎಮ್ಮೆ ತರುಪಿನ ಹಸು" ಎಂದು ಕರೆಯಲ್ಪಡುತ್ತವೆ.

ತೋಡ್ಲು : ಓಳಿ.

ತುಬಾರು : ನೆಲದಲ್ಲಿ ನೀರು ಹೋಗುವಂತೆ ಮಾಡಿದ ರಂಧ್ರ. ಬಚ್ಚಲು ರಂಧ್ರ.

ದರಕು : ತರಗೆಲೆ.

ದಣಪೆ : ಒಂದು ರೀತಿಯ ಗೇಟು. ಬಾಗಿಲಿನ ಎರಡೂ ಕಡೆಗೂ ನಾಲ್ಕು ಫೂಟು ಎತ್ತರದ ಎರಡು ಕಂಬಗಳನ್ನು ನಿಲ್ಲಿಸಿ ಅವುಗಳಿಗೆ ಸಮಾನಾಂತರದಲ್ಲಿ ಮೂರು ರಂಧ್ರಗಳನ್ನು ಕೊರೆಯುತ್ತಾರೆ. ಆ ರಂಧ್ರಗಳಿಗೆ ಮೂರು ಕೋಲುಗಳನ್ನು ಅಡ್ಡವಾಗಿ ಇಡುತ್ತಾರೆ. ಬೇಕಾದಾಗ ಆ ಕೋಲುಗಳನ್ನು ಒಂದು ಕಡೆ ಸರಿಸಿಕೊಂಡು ಒಳಗೆ ಹೋಗಬಹುದು.

ದಬ್ಬೆ : ಅಡಿಕೆಮರ ಬಿದಿರು ಮುಂತಾದವುಗಳನ್ನು ಸೀಳಿ ಮಾಡಿದ ಪಟ್ಟಿಗಳು.

ದಾಬು : ಹಸುವನ್ನು ಕಟ್ಟುವ ಕಣ್ಣಿ.

ದೀಗೆ : ದೀಪ.

ದೀಪಾಗುಡ್ನ, ದೀಪಾಗುಡ್ಡು : ದೀಪಸ್ತಂಭ.

ದುಣ್ಣ : ದಪ್ಪ, ದೊಡ್ಡ, ಭಾರೀ. ಪ್ರ-ಅವನೊಬ್ಬ ದುಣ್ಣ ಮನುಷ್ಯ.

ದುಂಡಗೆ : ಬೆತ್ತಲೆಯಾಗಿ ಪ್ರ-ಮಗು ದುಂಡಗಿದೆ ಅಂಗಿತೊಡಿಸು.

ನಾಗಂದಿಗೆ, ನಾಗವಂದಿಗೆ : ಸಾಮಾನುಗಳನ್ನಿಡಲು ಗೋಡೆಗೆ ತಗಲಿಸಿಟ್ಟಿರುವ ಮರದ ಹಲಗೆ.

ನ್ಯಾಲೆ : ಬಟ್ಟೆ ಮುಂತಾದವುಗಳನ್ನು ಒಣಗಿಸಲು ಕಟ್ಟಿರುವ ಹಗ್ಗ ಅಥವಾ ಬಿದಿರಿನ ಕೋಲು.

ನೇರು : ಕೊಟ್ಟೆಗಳನ್ನು ಮೇಲಕ್ಕೆ ಕಳಿಸು. ಒಬ್ಬನು ಮರವನ್ನು ಹತ್ತಿ ಅಡಿಕೆಯ ಗೊನೆಗಳಿಗೆ ಕೊಟ್ಟೆಗಳನ್ನು ತಗಲಿಸುತ್ತಾನೆ. ಇನ್ನೊಬ್ಬನು ಕೆಳಗೆ ನಿಂತು ಹಗ್ಗದ ಸಹಾಯದಿಂದ ಕೊಟ್ಟೆಗಳನ್ನು ನೇರುತ್ತಾನೆ. (ಮೇಲಕ್ಕೆ ಕಳುಹಿಸುತ್ತಾನೆ)

ಪಳ : ಮೃದಂಗದಂಥ ಒಂದು ಚರ್ಮವಾದ್ಯ. ಉದ್ದದಲ್ಲಿ ಇದು ಮೃದಂಗದ ಎರಡರಷ್ಟಿರತ್ತದೆ.

ಪಾವತೀಕಾಯು : ಹೊಂಚಿ ಕುಳಿತು ಕಾಯು. ಪ್ರ—ನಾನು ಪಾವತೀ ಕಾದದ್ದರಿಂದ ಕಳ್ಳ ಸಿಕ್ಕಿಬಿದ್ದ.

ಪೋಸಣಿಗೆ : ದೀಪದ ಹಣತೆಯನ್ನು ಇಡಲೋಸುಗ ಗೋಡೆಗೆ ತಗಲಿಸಿರುವ ಮರದ ಸ್ಟ್ಯಾಂಡ್.

ಬದ್ಧ : ನಿಜವಾಗಿ (< ಬದ್ಧ (ಸಂ).

ಬಂಡು, ಬಂಡ : ಎಳೆನೀರು. ಕೆಲವು ಅಡಕೆಗಳನ್ನು ಸುಲಿದಾಗ ಅದರ ಒಳಭಾಗ ಗಟ್ಟಿಯಾಗಿರದೇ ನೀರಿನ ರೂಪದಲ್ಲಿಯೇ ಇರುತ್ತದೆ. ಇದನ್ನೂ ಬಂಡ ಎಂದು ಕರೆಯುತ್ತಾರೆ.

ಬರಡು : ಬರಡೆಮ್ಮೆ, ಬರಡು ಹಸು—(ನೋ. ತರುಪು)

ಬಾನ : ಅನ್ನ. (ಬೋನ. ಹ. ಗ).

ಬಿಂಗಿಯವರು : ದೀಪಾವಳಿಯ ದಿನ ರಾತ್ರಿ ಮಲೆನಾಡಿನ ಕೆಲ ರೈತರು ಗುಂಪುಕಟ್ಟಿಕೊಂಡು ಮನೆಮನೆಗೆ ಹೋಗಿ ಹಾಡುಗಳನ್ನು ಹೇಳಿ ತಿಂಡಿಪದಾರ್ಥಗಳನ್ನು ಬೇಡುತ್ತಾರೆ. ಇವರಿಗೆ ಬಿಂಗಿಯವರೆಂದು ಹೆಸರು. ಬಿಂಗೀಪದಗಳು : ಇವರು ಹಾಡುವ ಪದಗಳು.

ಬೂರೆ : ದೀಪಾವಳಿ ಅಮಾವಾಸ್ಯೆಯ ಮುಂಚಿನ ದಿನ. (ಅಶ್ವಿನಿಬಹುಳ ಚತುರ್ದಶಿ) ಬೂರೆ ಆಟ : ಆ ದಿನ ಆಡುವ ಒಂದು ಆಟ. ಇದು ಸಾಮಾನ್ಯವಾಗಿ ಕ್ರಿಕೆಟ್ ಆಟವನ್ನು ಹೋಲುತ್ತದೆ. ಬೂರೆಗಳು : ಈ ದಿನ ರಾತ್ರಿ ಬೇರೆಯವರ ತೋಟಕ್ಕೆ ನುಗ್ಗಿ ಹಣ್ಣುಹಂಪಲುಗಳನ್ನು ಕದಿಯಬೇಕೆಂದು ಸಂಪ್ರದಾಯ. ಇದಕ್ಕೆ ಬೂರೆಗಳು ಎಂದು ಹೆಸರು.

ಬೆಚ್ಚು : ಗದ್ದೆಗಳಲ್ಲಿ ಪ್ರಾಣಿಗಳನ್ನು ಹೆದರಿಸಲು ಮಾಡಿ ನಿಲ್ಲಿಸಿದ ಮನುಷ್ಯಾಕೃತಿ.

ಬೆಟ್ಟೆ : ಗಟ್ಟಿಯಾದ ಅಡಿಕೆ.

ಬೇಣ : ಹುಲ್ಲುಗಾವಲು.

ಬೋನ : ಮೃದಂಗದ ಎಡಭಾಗಕ್ಕೆ ಹಚ್ಚುವ ಅನ್ನ ಹಾಗೂ ಬೂದಿಯ ಮಿಶ್ರಣ < ಭೋಜನ (ಸಂ).

ಬೋಳುಕಾಳು : ತೊಳೆದು ಒಣಗಿಸಿದ ಹಣ್ಣು ಮೆಣಸಿನ ಕಾಳು.

ಬೈನೆ : ಈಚಲು ಜಾತಿಗೆ ಸೇರಿದ ಒಂದು ಮರ. ಇದರಿಂದ ಹೆಂಡವನ್ನು ತಯಾರಿಸುತ್ತಾರೆ.

ಮಲ್ಲಂಡೆ : ಮೊಣಕಾಲು. ಮಲ್ಲಂಡೆಚಿಪ್ಪು : ಮೊಣಕಾಲು ಗಂಟು.

ಮಾಡಗುಳಿ : ಕಿಟಕಿ.

ಮಾಸ್ತಿ : ಒಂದು ಪಿಶಾಚಿ.

ಮಾಳ : ಗದ್ದೆಕಾಯುವವನು ರಾತ್ರಿ ಮಲಗಲು ಗದ್ದೆಯ ಮಧ್ಯದಲ್ಲಿ ಮಾಡಿಕೊಂಡ ಅಟ್ಟ.

ಮೀಡ : ಅಗಳಿ.

ಮುಟ್ಟೆ : ದೊಡ್ಡ ಬುಟ್ಟಿ.

ಮೋರಿ, ಮೌರಿ : ನಾಗಸ್ವರ. ಶಹನಾಯಿ.

ಮುಂಡಗಾದಿಗೆ : ಅಡಿಕೆ ತೋಟಗಳ ಮಧ್ಯದಲ್ಲಿ ಹಾದಿರುವ ದೊಡ್ಡ ಕಾಲುವೆ.

ಮಿಳ್ಳೆ : ತೆಂಗಿನ ಚಿಕ್ಕ ಕಾಯಿ.

ಯಜ್ಞ : ನಾವು. ಯಜ್ಞ ಎಂದಾಗ ನಾನು ಮತ್ತು ಅವನು ಎಂದೇ ಅರ್ಥ. ಇದು ಮಧ್ಯಮ ಪುರುಷನನ್ನು (ನೀನು) ಸಂಪೂರ್ಣವಾಗಿ ಬಿಟ್ಟಿರುತ್ತದೆ. ಇದೇ ನಾವು ಹಾಗೂ ಯಜ್ಞ ಶಬ್ದಗಳಿಗಿರುವ ವ್ಯತ್ಯಾಸ.

ರವದಿ: ಒಣಗಿದ ಬಾಳೆ ಅಥವಾ ಕಬ್ಬಿನ ಎಲೆಗಳು.
ವರಕು: ನಿದ್ದೆ (< ವರಗು) ಪ್ರ. ನನಗೆ ವರಕು ಬರುತ್ತದೆ.
ವಾಟೆ: ಬಿದಿರಿನ ಪಾತ್ರೆ.
ವಾಟೆ: ಬಿದಿರಿನ ಜಾತಿಗೆ ಸೇರಿದ ಚಿಕ್ಕ ವನಸ್ಪತಿ.
ಶಿಬ್ಲು, ಚಿಬ್ಲು: ಬಿದಿರು ಅಥವಾ ಹುಲ್ಲಿನಿಂದ ಮಾಡಿದ ಚಿಕ್ಕ ಬುಟ್ಟಿ.
ಶೀಕೆ: ಅಡಿಕೆ ಅಥವಾ ಬಿದಿರಿನ ಚಿಕ್ಕ ಚಿಕ್ಕ ಕಡ್ಡಿಗಳು.
ಶಮೆ: ಬಿದಿರಿನ ಜಾತಿಗೆ ಸೇರಿದ ವನಸ್ಪತಿ.
ಹಗರು: ಅಡಿಕೆ ಮರದ ಒಳಭಾಗ. ಹಗರಿನದಬ್ಬೆ: ಇದರಿಂದ ಮಾಡಿದ ಪಟ್ಟೆ.
ಹಳು: ಸಣ್ಣ ಸಣ್ಣ ಗಿಡಗಂಟೆಗಳಿಂದ ದಟ್ಟವಾದ ಹಾಗೂ ಒದ್ದೆಯಾದ ಪ್ರದೇಶ.
ಹಾಗು: ಒಂದು ಜಾತಿಯ ಮರ. ಸುಡುವುದಕ್ಕೆ ಮಾತ್ರ ಇದರ ಉಪಯೋಗ. ಇದರ ಕಾಯಿಗಳಲ್ಲಿ "ಉಣುಗು" ಎಂಬ ಕ್ರಿಮಿಯಿರುತ್ತದೆ.
ಹಾಳೆ: ಅಡಿಕೆಪಟ್ಟೆ. ಹಾಳೀಕುಂಟು: ಮನೆಯನ್ನು ಸಾರಿಸಲು ಪಟ್ಟೆಯನ್ನು ಕತ್ತರಿಸಿ ಮಾಡಿಕೊಂಡ ಸಣ್ಣ ತುಂಡುಗಳು.
ಹಾಳಿ: ಓಳಿ.
ಹಚ್ಚಿಗೆ: ಬೆತ್ತದಿಂದ ತಯಾರಿಸಿದ ನಾಜೂಕಾದ ಬುಟ್ಟಿ.
ಹಕ್ಕಲು: ಬಯಲು.
ಹಾನಬ್ಬಿ: ಸದಾ ನೀರು ಹರಿಯುತ್ತಿರುವ ರಸ್ತೆ.
ಹಿತ್ತಂಡೆ: ಒಂದು ಜಾತಿಯ ಹುಲ್ಲು. ಇದರಿಂದ ಪೊರಕೆಯನ್ನು ತಯಾರಿಸುತ್ತಾರೆ.
ಹಿಡಿ: ಪೊರಕೆ.
ಹೆರೆ: ೧. ಕೊಂಬೆ. ೨. ಗಟ್ಟಿಯಾಗು. ಪ್ರ: ತುಪ್ಪ ಹೆರೆಗಟ್ಟಿದೆ.
ಹೇಡಿಗೆ: ಮನೆಮುಂದಿನ ಕಟ್ಟೆ.
ಹ್ವಾರ್ಯ: ಕೆಲಸ (=ಹೋರೆ.)
ಹ್ವಾಕೆ: ಗದ್ದೆಯನ್ನು ಮೊದಲನೇ ಸಾರಿ ಹೂಡುವಿಕೆ. ಪ್ರ: ನಮ್ಮದು ಹ್ವಾಕೆ ಮುಗಿಯಿತು.
ಹೊದ್ದು: ಅಂಚು, ತುದಿ, ಪಕ್ಕ. ಪ್ರ: ನಮ್ಮ ಮನೇ ಹೊದ್ದೀಗೇ ಅವನ ಮನೆಯಿದೆ.
ಹೊದಕಲು: ಮೇಲು ಹೊದಿಕೆ. ಹೊದ್ದುಕೊಳ್ಳುವ ಬಟ್ಟೆ.
ಸವುಡಿ, ಸೌಡಿ, ಸೌಡು: ಪುರಸೊತ್ತು. ಪ್ರ: ನನಗಿಂದು ಸೌಡಿ ಇಲ್ಲ.
ಸಂಕ, ಸಾರ: ಹೊಳೆಗಳಿಗೆ ಕಟ್ಟಿಗೆಯಿಂದ ಮಾಡಿದ ಸೇತುವೆ.
ಸರಗೋಲು: ಸರಿಸುವ ಕೋಲಿನ ಬಾಗಿಲು (ನೋ-ದಣಪೆ.)
ಸಿಂಗಾರ, ಹಿಂಗಾರ: ಅಡಿಕೆಯ ಹೂ.
ಸುರಕು: ಪಾತ್ರೆಗಳ ರಂಧ್ರ ಅಥವಾ ರಂಧ್ರಗಳುಳ್ಳ ಪಾತ್ರೆ. ಪ್ರ: ಈ ಪಾತ್ರೆ ತುಂಬಾ ಸುರಕು.
ಸೂರು: ಮನೆಯ ಮಾಡಿನ ಅಂಚು. ನೀರು ಬೀಳುವ ಸ್ಥಳ. ಸೂರುಹನಿ: ಅಲ್ಲಿಂದ ಬೀಳುವ ನೀರು.
ಸೆಳೆ: ಬತ್ತದ ತೆನೆಗಳನ್ನು ಕಲ್ಲಿಗೆ ಹೊಡೆದು ಬತ್ತವನ್ನು ಬೇರ್ಪಡಿಸುವದು. ಪ್ರ: ನಾವು ಇಂದು ಸೆಳೆದೆವು.

---

# ಆಂಡಯ್ಯನ ಅಚ್ಚಗನ್ನಡ

**ರಾ. ಕು.**

"ಅಚ್ಚಗನ್ನಡಂ ಬಗಿವೊಂದಿರೆ" ತನ್ನ ಕಾವ್ಯವನ್ನು ರಚಿಸುತ್ತೇನೆಂದು ಆಂಡಯ್ಯನು ಹೇಳಿದುದು ಹಟಮಾರಿತನವಲ್ಲ. ಕಾವ್ಯಶೈಲಿ ಪ್ರೌಢವಾಗಬೇಕೆಂಬ ಹೆಬ್ಬಯಕೆಯಿಂದ ಕನ್ನಡ ಚಂಪುಗಳಲ್ಲಿ "ಮಿಸುಕದ ಸಕ್ಕದಮನಿಕ್ಕುವ" ಒಲವು ಬೆಳೆದು ಬಂದಿತ್ತು. ಬರುಬರುತ್ತ ಸಕ್ಕದದೊಂದು ಚೆಲ್ವು ಮೇಲೆನಿಸಿ, ಅದನ್ನು ಬಿಟ್ಟರೆ ಕಾವ್ಯರಚನೆಯೆ ಅಸಾಧ್ಯವೆಂಬ ಭಾವನೆ ಕೂಡ ಬಂದಿರಬೇಕು. ಸಾಮಾನ್ಯ ಕವಿಗಳ ಮಾತಂತಿರಲಿ; "ಪೆಂಪನಾಳ್ದ ಕಬ್ಬಿಗ"ರು ಕೂಡ "ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ ಬಗೆಗೊಳೆ ಪೇಟಲಾಱರ್" ಎಂದು "ತಮತಮಗೆ ಬಲ್ಲವರ್" ಎಂದರಂತೆ. ಈ ಮಾತನ್ನು ಆಂಡಯ್ಯ ಚೆಂದಕ್ಕಾಗಿ ಹೇಳಲಿಲ್ಲ. ೧೧-೧೨ನೇ ಶತಮಾನದ ಕೆಲವು ಚಂಪೂ ಕಾವ್ಯಗಳಲ್ಲಿ ಕಂಡುಬರುವ ಸಂಸ್ಕೃತದ ಹಾವಳಿಯನ್ನು ನೋಡಿದರೆ ಆಂಡಯ್ಯನಿಗೆ "ಬಲ್ಲವರ್" ಹೇಳಿದ ಮಾತು ನಿಜವೆಂದು ಗೊತ್ತಾಗುತ್ತದೆ. ಕನ್ನಡದಲ್ಲಿ ಘನವಾದ ಕಾವ್ಯರಚನೆಗೆ ಕೈಯಿಕ್ಕಿದ ಈ ಕವಿಗಳಿಗೆ ಕನ್ನಡದಲ್ಲಿ "ಬಲ್ಪು ನೆಟ್ಟಗೆ ದೊರೆಕೊಂಡುದು" ಇಲ್ಲವೆಂದು ಹೇಳಲಾಗದು. "ಕನ್ನಡಮಂ ಚಿಂತಿಸಿ ಕೂಡಲಾಱದೆ" ಹೋದರೆಂದು ಅವರನ್ನು ಸುಮ್ಮನೆ ತೆಗಳುವುದಕ್ಕಿಂತ ಸಂಸ್ಕೃತ ಭೂಯಿಷ್ಠವಾದ ಶೈಲಿ ಅವರಲ್ಲಿ ಏಕೆ ರೂಢವಾಯಿತೆಂಬುದನ್ನು ತಿಳಿದುಕೊಳ್ಳುವುದಕ್ಕೆ ಯತ್ನಿಸುವುದು ಶ್ರೇಯಸ್ಕರವಾದದ್ದು.

ನಮ್ಮ ಚಂಪೂ ಕವಿಗಳು ಸಾಮಾನ್ಯವಾಗಿ ಉಭಯಭಾಷಾ ವಿಶಾರದರಾದುದರಿಂದ ಅವರ ವಾಣಿಯಲ್ಲಿ ಕನ್ನಡ ಸಂಸ್ಕೃತಗಳೆರಡೂ ಸಂಗಮವಾಗಿರುವುದು ಸ್ವಾಭಾವಿಕ. ಆದರೆ ಅದೇ ಅವರ ಶೈಲಿಗೆ ಕಾರಣವಾಗಿರಲಾರದು. ಸಂಸ್ಕೃತದ ಉದ್ಗ್ರಂಥಗಳನ್ನು ಓದಿ ಮೆಚ್ಚಿದ ಈ ಕವಿಗಳು ಅವುಗಳ ಸತ್ವ-ಸ್ವಾರಸ್ಯಗಳನ್ನು ಕನ್ನಡಕ್ಕೆ ಇಳಿಸಬೇಕೆಂದು ಬುದ್ಧಿಪೂರ್ವಕವಾಗಿ ಪ್ರಯತ್ನಪಟ್ಟಿರಬಹುದು; ಎಂತಲೆ ಈ ಪ್ರಯತ್ನದಲ್ಲಿ ಮೂಲಸಂಸ್ಕೃತದ ಪ್ರಭಾವ ಅವರ ಕನ್ನಡ ಶೈಲಿಯಲ್ಲಿಯೂ ಬೆರೆತು ಬಂದಿರುವುದು ಸಂಭವನೀಯ. ಅವರಿಗೆ ತಿಳಿಯದಂತೆ ಸಂಸ್ಕೃತಾಭ್ಯಾಸದ ಫಲ ಅವರ ಬರೆಹದಲ್ಲಿ ಮೂಡಿದ್ದರೆ ಅದೇನು ಸೋಜಿಗದ ಸಂಗತಿಯಲ್ಲ. ಹೀಗೆ ಹೇಳಿದ ಮಾತ್ರಕ್ಕೆ ಅವರ ಸಂಸ್ಕೃತಭೂಯಿಷ್ಠವಾದ ಶೈಲಿಗೆ ಸಮರ್ಪಕವಾದ ಕಾರಣವನ್ನೇನೂ ಹೇಳಿದಂತಾಗಲಿಲ್ಲ. ಅವರು ಬಾಳಿದ ಕಾಲ ಅವರ ಶೈಲಿಗೆ ಮುಖ್ಯವಾದ ಕಾರಣವಾಗಿದೆ.

ನಮಗೆ ತಿಳಿದಮಟ್ಟಿಗೆ ಕನ್ನಡ ಚಂಪುವಿನ ಪ್ರೌಢಪರಂಪರೆ ಮೊದಲಾದದ್ದು ಕ್ರಿ.ಶ. ೧೦ನೇ ಶತಮಾನಕ್ಕೆ ತುಸು ಮುಂಚೆ. ಎಂದರೆ ಸಂಸ್ಕೃತ ಸಾಹಿತ್ಯದಲ್ಲಿ ಓಜಃಪ್ರಧಾನವಾದ ಕಾವ್ಯಗಳ ಯುಗ. ಭಾರತದ ಇತರ ಸಭಾಸ್ಥಾನಗಳಲ್ಲೆಲ್ಲಾ ವ್ಯಾಪಿಸಿಕೊಂಡಂತೆ ಕನ್ನಡ ರಾಜಾಸ್ಥಾನ

ಗಳಲ್ಲಿಯೂ ಸಂಸ್ಕೃತ ವ್ಯಾಪಿಸಿಕೊಂಡು ಮನ್ನಣೆ ಹೊಂದುತ್ತಿದ್ದ ಕಾಲವದು. ಕನ್ನಡ ರಾಜ್ಯದಲ್ಲಿಯೆ ದಂಡಿ, ಭಾರವಿಯಂಥ ಸಂಸ್ಕೃತ ಕವಿಗಳು ಪ್ರೋತ್ಸಾಹ ಹೊಂದಿರುವುದನ್ನು ನೋಡಿದರೆ ಅವರ ಪ್ರಭಾವವು ನಮ್ಮ ಕವಿಗಳ ಮೇಲಾಗುವುದು ಎಷ್ಟು ಸಹಜವೆಂಬುದನ್ನು ತಿಳಿಯಬಹುದು. ಈ ಗೌಡೀ ಶೈಲಿಯ ಪ್ರೌಢಿಕನ್ನಡ ಕವಿಗಳ ಮನಸ್ಸಿನಲ್ಲಿ ಅಚ್ಚೊತ್ತಿದ್ದರೆ ಆಶ್ಚರ್ಯವಲ್ಲ. ಓಜಃಪ್ರಧಾನವಾದ ಈ ಶೈಲಿಗೆ ಸಂಸ್ಕೃತದ ಗೀರ್ಗುಂಫ, ಬಿಂಕದ, ಜೆಡಗಿನ ನಡೆಯುಳ್ಳ ದೊಡ್ಡ ಹೆಜ್ಜೆಯ ಸಮಸ್ತ ಪದರಚನೆ ಸರಿಯಾಗಿ ಹೊಂದಿಕೊಂಡಿದ್ದರಿಂದ ಸಂಸ್ಕೃತ "ಮಾರ್ಗ"ವೆನಿಸಿ ಸ್ವೀಕೃತವಾಯಿತು. ಕನ್ನಡ ಅರಸರಿಗೆ ಕನ್ನಡದ ಮೇಲಿದ್ದಂತೆ ಸಂಸ್ಕೃತದ ಮೇಲೂ ಪ್ರೇಮ. ಪಂಪನಿಗೆ ಆಶ್ರಯದಾತನಾದ ಅರಿಕೇಸರಿಯೆ ಸೋಮದೇವನೆಂಬ ಸಂಸ್ಕೃತ ಕವಿಗೂ ಆಸರೆಯಿತ್ತು, ಅವನಿಂದ "ಯಶಸ್ತಿಲಕಚಂಪು"ವೆಂಬ ಸಂಸ್ಕೃತ ಚಂಪೂಕಾವ್ಯವನ್ನು ಬರೆಯಿಸಿದುದು ಈ ಮಾತಿಗೆ ಸ್ಪಷ್ಟವಾದ ಸಾಕ್ಷಿಯಾಗಿದೆ. ದೊರೆಗಳಂತೆ ಪಂಡಿತರಿಗೂ ಸಂಸ್ಕೃತದಲ್ಲಿ ವಿಶ್ವಾಸ ಹೆಚ್ಚಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಆಗ ಕನ್ನಡ ಅದೇ ತಲೆಯೆತ್ತಿ ತನ್ನದೊಂದು ಪ್ರೌಢವಾದ ಪರಂಪರೆಯನ್ನು ನಿರ್ಮಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯಿಂದ ಕನ್ನಡದ ಪ್ರತಿಭಾವಂತ ಕವಿಗಳನ್ನು ಪ್ರೇರಿಸುತ್ತಿತ್ತು. ಕನ್ನಡಸಾಹಿತ್ಯ ನಾಡಿನ ಹಿರಿಯರ, ದೊರೆಗಳ ಮನ್ನಣೆಯನ್ನು ಪಡೆಯಬೇಕಾದರೆ ಅದು ಸಾಧ್ಯವಾದಷ್ಟು ಸರ್ವತೋಮುಖವಾಗಿ ಸಂಸ್ಕೃತವನ್ನು ಸರಿಗಟ್ಟದೆ ಗತಿಯಿಲ್ಲವೆಂದು ಆಗಿನ ಕನ್ನಡ ಕವಿಗಳ ಅನುಭವಕ್ಕೆ ಬಂದಿರಬೇಕು. ಶೈಲಿಯ ಪ್ರೌಢಿಯಲ್ಲಿ ಸಂಸ್ಕೃತ ಕಾವ್ಯಗಳೊಡನೆ ಸ್ಪರ್ಧಿಸುವ ಹವಣಿಕೆಯಲ್ಲಿ ಸಂಸ್ಕೃತ ಶಬ್ದಗಳನ್ನು ಸ್ವಲ್ಪ ಹೆಚ್ಚಾಗಿಯೆ ಬಳಸಿಕೊಂಡಿದ್ದರೆ ಅದು ಕವಿಗಳ ತಪ್ಪಲ್ಲ. ಹಾಗಾಗದೆ ಗತಿಯಿರಲಿಲ್ಲ. ಅಲ್ಲದೆ ಸಂಸ್ಕೃತವನ್ನು ಬಳಸುವುದು ಕನ್ನಡಕ್ಕೆ ಕುಂದೆಂದು ಅವರು ಭಾವಿಸಿರಲಿಲ್ಲ.

ಹೀಗೆ ಮಾಡುವುದರಿಂದ ಕನ್ನಡ ಕವಿಗಳೆಲ್ಲರೂ ಕನ್ನಡಕ್ಕೆ ಎರವಾದರೆಂದು ಭಾವಿಸಲಾಗದು. ಕನ್ನಡದಲ್ಲಿ ಮಾರ್ಗವನ್ನು ಒಪ್ಪಿಕೊಂಡರೂ ಅವರು ದೇಸಿಯನ್ನು ಕಡೆಗಣಿಸಲಿಲ್ಲ. "ಒಂದಿ ದೇಸಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ" ಎಂದು ಆದಿಕವಿ ಪಂಪನು ಹೇಳಿದುದು ಅವನ ಶೈಲಿಯ ಸಮದೃಷ್ಟಿಗೆ ಸೂತ್ರವಾಗಿದೆ. ಉಜ್ವಲವಾದ ಮಾರ್ಗ, ಅಪೂರ್ವವಾದ ದೇಸಿ ಇವೆರಡನ್ನೂ ತೂಕ ತಪ್ಪದಂತೆ ತುಂಬಿಕೊಂಡು ಬರೆಯುವುದು ಬಲ್ಪು ನೆಟ್ಟಗೆ ದೊರೆಕೊಂಡವರಿಗೆ ಮಾತ್ರ ಸಾಧ್ಯ. ಪಂಪನಂಥ ಕವಿ ಸಾವಿರಕ್ಕೊಬ್ಬ. ಅವನ ಸತ್ವವಿಲ್ಲದೆ ಅವನನ್ನು ಅನುಕರಿಸಲು ಎಳಸಿದ ಕೆಲವರು ಸಾಮಾನ್ಯ ಕವಿಗಳ ಕೈಯಲ್ಲಿ ಸಂಸ್ಕೃತ-ಕನ್ನಡಗಳ ಪಾಕ ಕೆಟ್ಟು ಶೈಲಿ ವಿದ್ರೂಪವಾದಂತಾಯಿತು. ಪ್ರತಿಯೊಬ್ಬ ಕವಿಯೂ ಪೊಸದೇಸೆಯಲ್ಲಿ ಕಾವ್ಯವನ್ನು ಹೇಳಬೇಕೆಂಬ ಆದರ್ಶವನ್ನು ಇಟ್ಟುಕೊಂಡಂತೆ ತೋರಿದರೂ, ಅನೇಕರ ಪ್ರತ್ಯಕ್ಷ ಕೃತಿಯಲ್ಲಿ ಆ ಆದರ್ಶ ಈಡೇರಿದಂತೆ ಕಾಣುವುದಿಲ್ಲ. ಸಂಸ್ಕೃತದ ಆಳತೆ ಮೀರಿದ ಬೆರಕೆಯಿಂದ ಕನ್ನಡದ ಹದ ಕೆಡುತ್ತ ಹೋಗುವುದನ್ನು ಕಂಡ ಕೆಲವು ಕನ್ನಡಾಭಿಮಾನಿಗಳಾದ ಕವಿಗಳು ಆಗಾಗ್ಗೆ ಎಚ್ಚರಿಕೆ ಕೊಡುತ್ತಲೆ ಬಂದುದನ್ನು ಕಾಣುತ್ತೇವೆ. ಕನ್ನಡಕ್ಕೆ ಸಂಸ್ಕೃತವನ್ನು ಸಿಕ್ಕಸಿಕ್ಕಂತೆ ಬೆರಸುವುದು "ನೆಲ್ಲುಂ ಮೊಸರುಂ ಗುಡಿದಂತೆ", "ಜಾಣ್‌ಕಿಡೆ ಮುತ್ತುಂ ಮೆಟಿಸುಂ ಗೋದಂತೆ", "ಕೊಳೆಸಕ್ಕದಮುಂ ತಗುಳ್ಚಿ ಕನ್ನಡದೊಳ್" ಹದಗೆಡಿಸಬಾರದು, ಎಂದು ಮುಂತಾಗಿ ಸಾಮಾನ್ಯವಾದ ಮಾತಿನಿಂದ ಹೇಳಿದ್ದಕ್ಕೆ ಸಕ್ಕಬದ ಮೋಹ ಕರಗಲಿಲ್ಲ. "ಪೇಟ್ದನೆಸೆಯೆ ಪೊಸಗನ್ನಡದಿಂ" ಎಂದು ಹೇಳಿಕೊಂಡ ಕವಿಯೆ ಸಂಸ್ಕೃತಮಯವಾಗಿ ಬರೆಯತೊಡಗಿರುವುದನ್ನು ಕಂಡು, ನಯಸೇನ ಕವಿ ಅವನ ಮಾತನ್ನೆ ಎತ್ತಿಟ್ಟು, ಚುಚ್ಚಿ,

> “ ಪೊಸಗನ್ನಡದಿಂ ವ್ಯಾವ
> ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ-
> ತಿಸಿ ಕೂಡಲಾಱದಕ್ಕಟ
> ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ? ”

ಎಂದು ಹಂಗಿಸಬೇಕಾಯಿತು. ಸಂಸ್ಕೃತವನ್ನು ಬಲ್ಲೆವೆಂಬ ಅಹಂಕಾರದಿಂದ, ಆಡಂಬರಕ್ಕಾಗಿ ಸಕ್ಕದವನ್ನು ಕನ್ನಡದಲ್ಲಿ ತುಂಬುತ್ತಿದ್ದೀರೋ? ನಿಮಗೆ ಸಂಸ್ಕೃತದಲ್ಲಿ ಬಲವಿದ್ದರೆ ಶುದ್ಧ ಸಂಸ್ಕೃತ ಕಾವ್ಯವನ್ನೇ ಬರೆಯಿರಿ :

> “ ಸಕ್ಕದಮಂ ಪೇೞ್ವೊಡೆ ನೆಱೆ
> ಸಕ್ಕದಮಂ ಪೇೞ್ಗೆ ; ಸುದ್ದಗನ್ನಡದೊಳ್ ತಂ-
> ದಿಕ್ಕುವುದೇ ಸಕ್ಕದಮಂ ?
> ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ? ”

(ನಯಸೇನನೇನು ಅಚ್ಚಗನ್ನಡದ ಪುರಸ್ಕರ್ತನಲ್ಲ; ಸಂಸ್ಕೃತದ ಅತಿರೇಕವನ್ನು ತಾಳಲಾರದೆ ಈ ಮಾತನ್ನು ಅವನು ಹೇಳಿದ್ದಾನೆ) ನಯಸೇನನ ಪ್ರತಿಭಟನೆ ಅವನ ಕಾಲದಲ್ಲಿ ಉಂಟಾದ ಜಾಗೃತಿಯ ಪ್ರತೀಕವಾಗಿದೆ. ನಯಸೇನ, ಬ್ರಹ್ಮಶಿವ, ವೃತ್ತವಿಲಾಸ ಮೊದಲಾದ ಜೈನ ಕವಿಗಳು ಕೈಕೊಂಡ ಮತಪ್ರಚಾರದ ವ್ಯಾಪಕ ಕಾರ್ಯವನ್ನು ನೋಡಿದರೆ ನಯಸೇನನು ಸಂಸ್ಕೃತದ ಬಾಹುಲ್ಯಕ್ಕೆ ಎದುರಾಗಿ ಹಾಗೆ ಜಡಿದು ನುಡಿದುದು ಸಹಜವೆನಿಸುತ್ತದೆ. ಜನಸಾಮಾನ್ಯರ ಮನೆಮನೆಗೂ ಮತತತ್ವಗಳನ್ನು ಮುಟ್ಟಿಸಬೇಕೆಂದು ಹೊರಟ ಕವಿಗಳು ಜನಸಾಮಾನ್ಯರ ಬುದ್ಧಿಗೆ ನಿಲುಕುವ ಹಾಗೆ ಬರೆಯಬೇಕೆಂಬುದನ್ನು ಅವರು ತಿಳಿದವರಾಗಿದ್ದರು. ಸಂಸ್ಕೃತ–ಮಿಶ್ರವಾದ ಘನವಾದ ಪುರಾಣಗಳು ಅಪಂಡಿತರಾದ ಜನಸಾಮಾನ್ಯರಿಗೆ ಗಹನವಾದುವು. ಅವರಿಗೆ ತಿಳಿಯತಕ್ಕದ್ದು ಬಳಕೆಯ ಮಾತು, ಸುದ್ದಗನ್ನಡ. ಅದರಲ್ಲಿ ಅರ್ಥವಾಗದ ಸಕ್ಕದವನ್ನು ತಂದಿಕ್ಕಬಾರದು ; ಇಕ್ಕಿದರೆ ಕಾವ್ಯದ ಉದ್ದೇಶ, ಮತಪ್ರಚಾರ ಎರಡೂ ನಿಷ್ಫಲವಾದಾವು. ಜೈನ ಕವಿಗಳು ತೋರಿಸಿಕೊಟ್ಟ ಈ ತತ್ವವನ್ನೇ ಮುಂದಿನ ಇತರ ಮತಗಳೂ ಎತ್ತಿಕೊಂಡು ತಮ್ಮ ಮತಪ್ರಚಾರಕ್ಕೆ ಬಳಸಿಕೊಂಡರು. ವೀರಶೈವರ ಪ್ರಭಾವ ಆಂಡಯ್ಯನ ಮೇಲೆ ಆಗಿದ್ದರೂ ಆಗಿರಬಹುದು. ಹೀಗೆ ಕನ್ನಡದ ಜಾಗೃತಿ ಒಂದೆಡೆ ಬೆಳೆಯುತ್ತಿದ್ದರೂ ಹಿಂದಿನಿಂದ ನಡೆದು ಬಂದ ಚಂಪೂ ಪರಂಪರೆಯ ಸಂಸ್ಕೃತಪುಷ್ಟಶೈಲಿ ಇನ್ನೊಂದೆಡೆಗೆ ಪ್ರಚುರವಾಗಿಯೆ ಇತ್ತು. ಕನ್ನಡತನದ ಅರಿವಾದಾಗಲೂ ಕನ್ನಡ ಕಬ್ಬಿಗರು ಸಕ್ಕದವನ್ನು ಏಕೆ ಬಿಡಲಾರರೆಂಬುದೊಂದು ಆಂಡಯ್ಯನಿಗೆ ಸಮಸ್ಯೆಯೆ ಆಗಿರಬೇಕು. ಬಹುಶಃ ಅವನ ಸಮಕಾಲೀನನಾದ ಜನ್ನಕವಿ ಮನಬಂದಾಗ ತಿರುಳ್ಗನ್ನಡದಲ್ಲಿ ಬರೆಯಬಲ್ಲನಾದರೂ ಸಂಸ್ಕೃತದ ಆವೇಶ ತುಂಬಿದಾಗ ಉಸಿರು ಸಾಲದಂತೆ ಸಾಲುಸಾಲು ಸಕ್ಕದಮನಿಕ್ಕುವುದಕ್ಕೆ ಎಷ್ಟೂ ಅನುಮಾನಿಸುವುದಿಲ್ಲ. ಸಂಸ್ಕೃತವನ್ನು ಬಿಟ್ಟರೆ ಕಾವ್ಯವೇ ಅಸಾಧ್ಯವೆ? ಕನ್ನಡ ಅಷ್ಟು ನಿಃಸತ್ವವೆ? ಕನ್ನಡದ ಬಲ್ಪನ್ನು ತೋರುವುದಕ್ಕಾಗಿ “ ಸಕ್ಕದಮಂ ಮುಱಿಗೊಳ್ಳದೆ ಚೊಕ್ಕಳಿಕೆಯಿನಚ್ಚಗನ್ನಡ ”ದಿಂದ ತಾನೇ ಒಂದು ಇಡಿಯ ಕಾವ್ಯವನ್ನು ಬರೆದು ಕನ್ನಡ ಕಬ್ಬಿಗರ ಮೇಲಿನ ಆರೋಪವನ್ನು ಏಕೆ ಕಿತ್ತೊಗೆಯಬಾರದು ಎಂದು ಆಂಡಯ್ಯನಿಗೆ ಎನಿಸಿದುದು ಸ್ವಾಭಾವಿಕವೆ. ಈ ಅಭಿಪ್ರಾಯವನ್ನು ಅವನು ಕಾವ್ಯಾರಂಭದಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ.

ಈ ಹಿನ್ನೆಲೆಯಲ್ಲಿ ನೋಡಿದರೆ ಆಂಡಯ್ಯನ "ಅಚ್ಚಗನ್ನಡ"ದ ಔಚಿತ್ಯ ಸ್ಪಷ್ಟವಾಗುತ್ತದೆ. ಹಿರಿಯ ಕವಿಗಳಲ್ಲಿ ಶೈಲಿ ಸಂಸ್ಕೃತಮಿಶ್ರವಾದರೂ ಅದೆಲ್ಲವನ್ನೂ ಮರೆಮಾಡಿ ನಮ್ಮ ಕಣ್ಣು ಕುಕ್ಕುವ ಒಂದು ಸತ್ವಶಾಲಿಯಾದ ಉಜ್ವಲತೆಯುಂಟು. ಸಾಮಾನ್ಯ ತರಗತಿಯ ಕವಿಗಳಲ್ಲಿ ಆ ಸಾಮರ್ಥ್ಯವಿಲ್ಲದಿರುವುದರಿಂದ ಅವರ ಶೈಲಿಯಲ್ಲಿಯ ಆಡಂಬರ ಎದ್ದು ಕಾಣುತ್ತದೆ. ಆಂಡಯ್ಯನು ಪ್ರತಿಭಟಿಸಿರುವುದು ಕಾವ್ಯೋನ್ನತಿಯಿರದ ಸಾಮಾನ್ಯ ಕವಿಗಳ ಸಂಸ್ಕೃತಾತಿರೇಕವನ್ನು ಮಾತ್ರ. "ಸಕ್ಕದಂ ಬೆರಸಿದಲ್ಲದ" ಕಾವ್ಯವನ್ನು ರಚಿಸುತ್ತೇನೆಂದು ಹೊರಟನಾದುದರಿಂದ ಸಂಸ್ಕೃತದ ಮೇಲೆ ಅವನಿಗೆ ದ್ವೇಷವಿದೆಯೆಂದಲ್ಲ. ಸಂಸ್ಕೃತದ ಅವನಿಗೆ "ಸೊಗಯಿಪ ಸಕ್ಕದಂ" ಆಗಿದೆ. ತಾನು ಹೊಗಳಿದ ರನ್ನ, ಕಣ್ಣಮಯ್ಯ, ಜನ್ನಿಗ ಮೊದಲಾದ ಕವಿಗಳು ಸಂಸ್ಕೃತ ಮಿಶ್ರವಾದ ಶೈಲಿಯಲ್ಲಿಯೇ ಬರೆದರೆಂಬುದು ಅವನಿಗೆ ಗೊತ್ತಿರಲಿಕ್ಕೆ ಸಾಕು. ಆದರೂ ಅವರು ಅವನಿಗೆ ಪೂಜ್ಯರು. "ಅಚ್ಚಗನ್ನಡಂ ಬಿಗಿವೊಂದಿರೆ ಬರೆದೆಂ" ಎನ್ನುವುದರಲ್ಲಿ 'ಕನ್ನಡವಿದ್ದರೆ ಸಾಕು, ಸಂಸ್ಕೃತದಲಿನ್ನೇನು' ಎನ್ನುವ ಬಿಂಕಕ್ಕಿಂತ ಕನ್ನಡವೂ ಸಮರ್ಥವಾಗಿದೆ, ಸ್ವತಂತ್ರವಾಗಿದೆ ಎಂಬ ಆತ್ಮವಿಶ್ವಾಸವೆ ಹೆಚ್ಚಾಗಿದೆ.

"ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ" ಮುನ್ನಿನ ಕಬ್ಬಿಗರು ಪೇೞಲಾಱರೆಂಬ ಆರೋಪದ ನಿವಾರಣೆಗಾಗಿ ಕವಿ "ಕಬ್ಬಿಗರ ಕಾವ"ವನ್ನು ಬರೆದನಂತೆ; ಈ ಮಾತನ್ನು ಕವಿ ತಾನೆ ಹೇಳದೆ ಬಲ್ಲವರು ಹೇಳಿದರೆಂದು ತಿಳಿಸುತ್ತಾನೆ. ಮುನ್ನಿನ ಪೆಂಪನಾಳ್ದ ಕಬ್ಬಿಗರು ಕನ್ನಡದಲ್ಲಿ ಹೇಳಲೇ ಆರರೆಂದಲ್ಲ; ಆದರೆ ಒಂದು ಇಡಿಯ ಕಾವ್ಯವನ್ನು "ಇನಿತುಂ"— ಆಂಡಯ್ಯನಷ್ಟು ಚೆನ್ನಾಗಿ–"ಬಲ್ಪು ನೆಟ್ಟಗೆ ದೊರೆಕೊಂಡುದಿಂತಿವನೊಳ್" ಎಂಬಂತೆ ಬಗೆಗೊಳೆ ಪೇೞಲಾಱರ್ ಎಂದು ತಮತಮಗೆ ಬಲ್ಲವರ್ ಎಂದರಂತೆ. "ನಾನವರ ಬಯಕೆಯಂ ಸಲಿಸುವೆನಿನ್ನೆಂದು ಅಚ್ಚಗನ್ನಡಂ ಬಿಗಿವೊಂದಿರೆ ಕಬ್ಬಿಗರ ಕಾವನೊಲವಿಂದೊರೆದೆಂ" ಎಂದು ಕವಿ ಹೇಳುತ್ತಾನೆ. ಅವನು ಈ ಉದ್ದೇಶವನ್ನು ಎಷ್ಟರಮಟ್ಟಿಗೆ ಈಡೇರಿಸಿದ್ದಾನೆಂದು ನೋಡುವುದಕ್ಕಿಂತ ಮುಂಚೆ ಅವನು ಹೇಳುವ ಅಚ್ಚಗನ್ನಡವೆಂದರೇನೆಂಬುದನ್ನು ಸ್ಪಷ್ಟ ಮಾಡಿಕೊಳ್ಳುವುದು ಅಗತ್ಯ.

ಆಂಡಯ್ಯನ ಅಚ್ಚಗನ್ನಡವೆಂದರೆ ಶುದ್ಧ ದೇಶ್ಯ ಅಥವಾ ಕೇವಲ ಕನ್ನಡವಲ್ಲ. ತದ್ಭವ ಅದರಲ್ಲಿ ಹೇರಳವಾಗಿ ಸೇರುತ್ತವೆ; ಪಟ್ಟ, ತೋರಣ, ಅಟ್ಟ, ಸಬಳ, ಬಲ, ಅಂಗಣ, ಬಂದಿ, ಮಾಲೆ, ಗಂಡ, ಗಲ್ಲ, ತಳ ಮುಂತಾದ "ತತ್ಸಮ"ಗಳಿಗೂ ಅಲ್ಲಿ ಅವಕಾಶವುಂಟು.* ಓಜೆ, ಜಗ, ರೂಪು ಎಂಬ ಶಬ್ದಗಳು ರೂಪಸಾಮ್ಯದಿಂದ ಸಂಸ್ಕೃತದಂತೆ ಕಂಡರೂ ಅವು ಮೂಲ ಸಂಸ್ಕೃತ ಶಬ್ದಗಳಿಂದ (ಓಜಸ್, ಜಗತ್, ರೂಪ) ಭಿನ್ನವಾದ ತದ್ಭವಗಳು. ಮಾದೇವಿ, ಮೂಲೋಕಂ, ಮೊದಲಾದ ರೂಪಗಳು ಸಂಸ್ಕೃತ ರೂಪಗಳಲ್ಲ; ಈ ಸಮಾಸಗಳಲ್ಲಿರುವ 'ಮಾ', 'ಮೂ' ಎಂಬ ಅಂಶಗಳಿಂದ ಅವು ಕನ್ನಡವಾದುವು. ಒಟ್ಟಾರೆ, ಕನ್ನಡದ ಸಂಸ್ಕಾರ ಪಡೆದ ಶಬ್ದ ಅಚ್ಚಗನ್ನಡಕೋಶಕ್ಕೆ ಸೇರಿದುದು. ಶುದ್ಧ ಸಂಸ್ಕೃತ ರೂಪದಲ್ಲಿರುವ ಶಬ್ದಕ್ಕೆ ಅಚ್ಚಗನ್ನಡದ ಸೀಮೆಯಲ್ಲಿ ಪ್ರವೇಶವಿಲ್ಲ. ಆದರೆ ಈ ಅಭಿಪ್ರಾಯಕ್ಕೆ ಬಾಧೆ ಬರುವಂಥ ಕೆಲ ಶಬ್ದಗಳು ಆಂಡಯ್ಯನ ಕನ್ನಡದಲ್ಲಿ ದೊರೆಯುತ್ತವೆ. "ಅವಸರ" ಎಂಬ ಶಬ್ದವನ್ನು ಆಂಡಯ್ಯನು ಬೇರೆ

---

* ೨೬೯ನೆಯ ಪದ್ಯದಲ್ಲಿ ಝಾರೇ, ಝುಜರೆ, ಹಳುರೇ, ಹೋಹೋ, ವಝಾ ಎಂಬಿವು ಮರಾಠಿಯಂತೆ ಕಾಣುತ್ತವೆ. ಇದರ ಮೇಲಿಂದ ಅನ್ಯದೇಶ್ಯಗಳಿಗೂ ಅಚ್ಚಗನ್ನಡದಲ್ಲಿ ಸ್ಥಾನವಿದೆಯೆಂದು ಹೇಳುವುದು ಧಾರ್ಷ್ಟ್ಯವಾದೀತು. ಇವು ಕವಿಯ ಕಣ್ಣು ತಪ್ಪಿ ಬಂದಿವೆಯೆಂದು ಹೇಳಬೇಕೆ? ಬಹುಶಃ ಇವು ಉದ್ಗಾರವಾಚಕಗಳಾದುದರಿಂದ ಮಹತ್ವದವಲ್ಲವೆಂದು ಕವಿ ಅವುಗಳ ಬಗ್ಗೆ ಏನೂ ಆಕ್ಷೇಪ ತೆಗೆದುಕೊಂಡಿರಲಿಕ್ಕಿಲ್ಲ.

ಅರ್ಥದಲ್ಲಿಯಾದರೂ ಶುದ್ಧ ಸಂಸ್ಕೃತರೂಪದಿಂದಲೆ ಬಳಸಿದ್ದಾನೆ. ಅಲ್ಲದೆ ತೇಜಿ, ಕಲಿ, ಸರ ಎಂಬ ಶಬ್ದಗಳನ್ನು ಅನುಮಾನವಿಲ್ಲದೆ ಪ್ರಯೋಗಿಸಿದ್ದಾನೆ. ಇವು ಕನ್ನಡವೆಂದು ಅವನು ಭಾವಿಸಿರಲಾರ. (ಆಧುನಿಕರಲ್ಲಿ ಕೆಲವರು ಈ ಶಬ್ದಗಳು ದ್ರಾವಿಡ ವರ್ಗಕ್ಕೆ ಸಂಬಂಧಪಟ್ಟು ವೆಂದು ಊಹಿಸುತ್ತಾರೆ.) ತೇಜಿ, ಕಲಿ, ಸರ ಅವಸರ ಎಂಬೀ ಶಬ್ದಗಳು "ಸಮಸಂಸ್ಕೃತ"ಗಳು,— "ಸ್ವಭಾವದಿಂ ಲಿಂಗಮುಪ್ಪುವು."* ಸಮಸಂಸ್ಕೃತಗಳನ್ನು ಇಟ್ಟುಕೊಂಡರೆ ಸಕ್ಕದಂ ಬೆರಸದ ಪ್ರತಿಜ್ಞೆಗೆ ಭಂಗಬರುತ್ತದೆ. ಬಹುಶಃ ಈ ಶಬ್ದಗಳು ಪ್ರಮಾದವಶದಿಂದ, ಅವನ ಕಣ್ಣು ತಪ್ಪಿ ಕಬ್ಬಿಗರ ಕಾವದ ಭಾಷೆಯಲ್ಲಿ ಸೇರಿಕೊಂಡುವೆಂದು ಊಹಿಸುವುದು ಸಮಂಜಸವಾದೀತು. ಅವನ ಸಮಕಾಲೀನನಾದ ಅಥವಾ ಅವನ ಕಾಲಕ್ಕೆ ಸಮೀಪದವನಾದ ಕೇಶಿರಾಜನು ಹೇಳುವ ಅಚ್ಚ ಗನ್ನಡವನ್ನು ಆಂಡಯ್ಯನ ಅಚ್ಚಗನ್ನಡಕ್ಕೆ ಹೋಲಿಸಿ ನೋಡುವುದು ಫಲಕಾರಿಯೆನಿಸುತ್ತದೆ.

ಆಂಡಯ್ಯ "ಅಚ್ಚಗನ್ನಡಂ ಬಗಿವೊಂದಿರೆ" ಎಂದು ಹೇಳಿದನಲ್ಲದೆ ಅಚ್ಚಗನ್ನಡದ ಲಕ್ಷಣ ವನ್ನೇನೂ ಹೇಳಲಿಲ್ಲ. ವ್ಯಾಖ್ಯೆ ಹೇಳುವುದು ವ್ಯಾಕರಣದ ಕೆಲಸ; ಕಾವ್ಯವನ್ನು ಬರೆದು, "ಮುನ್ನಿದಱೊಳೆ ನೋಡಿ ತಿಳಿದುಕೊಳ್ವುದು ಚದುರಂ" ಎಂದು ಹೇಳಿಬಿಟ್ಟಿದ್ದಾನೆ. ಅವನ ಕಾಲದ ಜನಕ್ಕೆ ಅಚ್ಚಗನ್ನಡವೆಂದರೇನೆಂಬುದನ್ನು ವ್ಯಾಖ್ಯೆಮಾಡಿ ತಿಳಿಸಿಕೊಡಬೇಕಾದ ಅಗತ್ಯ ವಿದ್ದಿರಲಿಕ್ಕಿಲ್ಲ. ಅಚ್ಚಗನ್ನಡದ ಬಗ್ಗೆ ನಿರ್ದಿಷ್ಟವಾದ ಹಾಗು ಸ್ಪಷ್ಟವಾದ ಕಲ್ಪನೆ ಆಂಡಯ್ಯನ ಕಾಲದಲ್ಲಿ ಪ್ರಚಲಿತವಾಗಿರಬೇಕು. ಕೇಶಿರಾಜನು ಹೇಳುವ ಅಚ್ಚಗನ್ನಡ ಹೊಸದೇನೂ ಆಗಿರದೆ ಜನರಲ್ಲಿ ಗಟ್ಟಿಗೊಂಡ ಈ ಕಲ್ಪನೆಯದೇ ಶಾಸ್ತ್ರೀಯವಾದ ರೂಪವೆಂದು ಹೇಳಬಹುದು. ಕೇಶಿ ರಾಜನಾದರೂ ಅದರ ವ್ಯಾಖ್ಯೆಯನ್ನು ಕೊಡುವುದಿಲ್ಲ. ಆದರೆ ಅವನ ಸೂತ್ರಗಳಲ್ಲಿ ಅದರ ಅರ್ಥ ಸ್ಪಷ್ಟವಾಗಿದೆ. ಅಪಭ್ರಂಶ ಪ್ರಕರಣದ ಕೊನೆಯಲ್ಲಿ ಅವನು ಹೇಳಿದ ಪದ್ಯವನ್ನು ಇಲ್ಲಿ ಉದ್ಧರಿಸ ಬಹುದು.

ಸಕ್ಕದಮುಂ ಮಱೆಗೊಳ್ವದೆ
ಚೊಕ್ಕಳಿಕೆಯಿನಚ್ಚಗನ್ನಡಂ ಬೇಟ್ಪರ ಕೆ- ।
ಯ್ವೊಕ್ಕ ನಿಧಿಯೆನಿಪಪಭ್ರಂ-
ಶಕ್ಕಂ ದೇಶಿಯ ಪದಕಮುಂಟು ಸಮಾಸಂ ॥ (೮–೩೧೪)

ಅಚ್ಚಗನ್ನಡಕ್ಕೆ ತದ್ಭವ ಗ್ರಾಹ್ಯವಷ್ಟೆ ಅಲ್ಲ; ಅದು ಕಯ್ವೊಕ್ಕ ನಿಧಿ. ಸಕ್ಕದಮುಂ ಮಱೆಗೊಳ್ವದೆ ಬರೆಯುವ ಹಟವಿದ್ದವರು ತದ್ಭವಗಳನ್ನು ಸ್ವೀಕರಿಸುವುದೆಂದರೆ ಕೈಸಾಗದೆ ಒಪ್ಪಿಕೊಂಡ ಪರ್ಯಾಯದ ಸೋಲು ಎಂದೆನಿಸಬಹುದು. ಆದರೆ ಹಾಗೆ ಭಾವಿಸುವುದು ತಪ್ಪು. ಏಕೆಂದರೆ ಆಂಡಯ್ಯನು ಮೊದಲು ಕೇವಲ ಕನ್ನಡದಲ್ಲಿ ಬರೆಯಹೊರಟು ಆಮೇಲೆ ಕೈಗೆಟ್ಟು, ಸಂಕಟಕ್ಕೆ ಬಿದ್ದು, ಸಂಸ್ಕೃತವನ್ನು ತಪ್ಪಿಸುವುದಕ್ಕಾಗಿ ತದ್ಭವಗಳಿಗೆ ಶರಣು ಹೊಕ್ಕನೆಂದು ಭಾವಿಸುವುದಕ್ಕೆ ಅವಕಾಶವೇ ಇಲ್ಲ. ಮೊದಲ ಪದ್ಯವನ್ನು ಬರೆಯುವುದಕ್ಕಿಂತ ಮುಂಚಿತವಾಗಿಯೆ ಅವನು ನಿಶ್ಚಯಿಸಿದ್ದಾನೆ; ಆ ನಿಶ್ಚಯದಂತೆ ಅವನ ಅಚ್ಚಗನ್ನಡ ಬಂದಿದೆ. ಮೊದಲ ಪದ್ಯದ ನಾಲ್ಕು

---

* ಸಮುದಿತಸಂಖ್ಯಾನ್ವಯರಹಿ-
ತಮೆನಿಸಿ ವರ್ತಿಪ ನಿಘಂಟುವಿನ ನಾಮಪದೋ- ।
ತ್ತಮ ವರ್ಣಪ್ರಕೃತಿಗಳಂ
ಸಮಸಂಸ್ಕೃತವೆಸರನಿಟ್ಟು ಲಿಂಗಂ ಮಾಡ್ಪರ್ ॥
—ಶಬ್ದಮಣಿದರ್ಪಣ (೩–೯೦).

ಸಾಲಿನಲ್ಲಿ ಐದು ತದ್ಭವಗಳುಂಟು. ಅದೇಕೆ, ಕಾವ್ಯದ ತಲೆಯಮೇಲಿರುವ ಹೆಸರಿನಲ್ಲಿಯ 'ಕಬ್ಬಿಗ' ಶಬ್ದ ತದ್ಭವದಿಂದ ಸಾಧಿತವಾದ ತದ್ಧಿತ. (ಕಾವ್ಯ>ಕಬ್ಬ+ಇಗ)

ಕನ್ನಡಿಗರಿಗೆ ಸಂಸ್ಕೃತವನ್ನು ಬಿಟ್ಟರೆ ಒಂದು ವೇಳೆ ನಡೆದೀತು; ತದ್ಭವಗಳನ್ನು ಬಿಟ್ಟರೆ ನಡೆಯುವುದಿಲ್ಲ. ದೇಶ್ಯನುಡಿಯಲ್ಲಿ ಎಂದಿನಿಂದಲೊ ಬೆರೆತುಹೋದ ತದ್ಭವಗಳನ್ನು ಹೊಡೆದು ಹಾಕಿದರೆ ಆ ಕೊರತೆಯನ್ನು ತುಂಬಿಕೊಳ್ಳುವುದು ಹೇಗೆ? ಮಾತುಮಾತಿಗೆ ದೇಸಿಯನ್ನು ಹುಡುಕುತ್ತಾ ಹೋದರೆ ಮಾತಾಡುವುದೆ ಕಷ್ಟವಾದೀತು. ಭಾಷಾಶುದ್ಧಿಯ ಹಾಗೂ ಮಾರ್ದವದ ದೃಷ್ಟಿಯಿಂದ ಕರ್ಣಕಠೋರವಾದ ಹಾಗೂ ಕನ್ನಡದ ನಾಲಗೆಗೆ ಒಗ್ಗದ ಉಚ್ಚಾರವನ್ನು ಕನ್ನಡದ ಸೊಲ್ಲಿಗೆ ಸಲ್ಲುವಂತೆ ಮಾರ್ಪಡಿಸಿಕೊಳ್ಳುವುದು ವಿಹಿತ. ಇದು ತದ್ಭವದ ಹಾದಿ. ಈ ಬಗೆಯ ತದ್ಭವಗಳು ತಾವಾಗಿ ಜನರ ಮಾತಿನಲ್ಲಿ ತೇಲಿ ಬಂದಂಥವು. ಇದೇ ಮಾದರಿಯಲ್ಲಿ ಪೂರ್ವಕವಿಗಳು ಕೆಲವು ತದ್ಭವಗಳನ್ನು ಸ್ವತಂತ್ರವಾಗಿ ನಿರ್ಮಿಸಿಕೊಳ್ಳುತ್ತ ಬಂದಿದ್ದರು. ಇದು ವಿಹಿತವಾಗಿದ್ದ ಪಕ್ಷದಲ್ಲಿ ಈ ಹಾದಿಯಲ್ಲಿ ಇನ್ನೂ ನಾಲ್ಕು ಹೆಜ್ಜೆ ಇಡಬಾರದೇಕೆ? ಆಂಡಯ್ಯ ನಾಲ್ಕು ಹೆಜ್ಜೆ ಹೆಚ್ಚಾಗಿಯೆ ಇಟ್ಟು ನೋಡಿದನು. ತದ್ಭವಗಳ ಸ್ವೀಕಾರದಲ್ಲಿ ಔಚಿತ್ಯವಿಲ್ಲವೆ ಇಲ್ಲ; ಹೊಸ ಸೃಷ್ಟಿಗಿಂತಲೂ ಹಳೆಯದರ ಸೌಕರ್ಯ ಹೆಚ್ಚು. ತದ್ಭವ ಮೂಲ ಸಂಸ್ಕೃತ ರೂಪಕ್ಕೆ ಸಮೀಪವಾದುದರಿಂದ ಬೇಗನೆ ಅರ್ಥವಾಗುತ್ತದೆ. ಸಂಸ್ಕೃತ ಶಬ್ದಕ್ಕೆ ಪ್ರತಿಶಬ್ದವನ್ನು ನಿರ್ಮಿಸುವುದು ಅನ್ವರ್ಥಕ ಶಬ್ದಗಳಲ್ಲಿ ಅಥವಾ ಅರ್ಥಪೂರ್ಣವಾದ ಶಬ್ದಗಳಲ್ಲಿ ಸುಲಭವಾಗಬಹುದು. ಸಹಸ್ರಾಕ್ಷನು ಪಲಗಣ್ಣನಾದಾನು; ಇಂದ್ರನು ಇಂದ್ರನಾಗಿಯೆ ಉಳಿಯಬೇಕು. ಇಲ್ಲವೆ 'ಇಂದರ' 'ಇಂದಿರ' ಎಂದಾಗಬೇಕು. ಈ 'ಇಂದರ' ಅಥವಾ 'ಇಂದಿರ' ಇಂದ್ರನಿಗೆ ಸಮೀಪದವನು. ಈ ಬಗೆಯಾಗಿ ತದ್ಭವಗಳನ್ನು ಸಮರ್ಥಿಸಬಹುದು. ಆದರೆ ಕೆಲವು ಸಲ ಈ ಹಾದಿ ಕಾಡಿಗೆ ಬೀಳುತ್ತದೆ. ರೂಢಿಯಲ್ಲಿರುವ ಸಂಸ್ಕೃತ ಪದಗಳಿಗೆ ತದ್ಭವಗಳ ಅಗತ್ಯವೆನಿಸುವುದಿಲ್ಲ. "ಮಠ"ವನ್ನು "ಮಡ"ವನ್ನಾಗಿ ಮಾಡುವುದರ ಔಚಿತ್ಯವೇನು? ಕನ್ನಡ ಸಂಸ್ಕೃತಗಳ ಸಂಬಂಧ ಸಾವಿರಾರು ವರ್ಷದ್ದು. ಕನ್ನಡದಲ್ಲಿ ಬೇರು ಬಿಟ್ಟು, ಭದ್ರವಾಗಿ ನಿಂತ ಸಂಸ್ಕೃತ ಶಬ್ದಗಳನ್ನು ಹೀಗೆ ವಿಕೃತಗೊಳಿಸುವುದರಿಂದಾಗುವ ಸೌಕರ್ಯವೇನು? ಆಂಡಯ್ಯನಲ್ಲಿ ಇಂಥ ಕೆಲವು ತದ್ಭವಗಳು ಕಂಡುಬರುತ್ತವೆ. ಇಂಥವನ್ನು ಆರಿಸಿ ಇಟ್ಟು ಆಂಡಯ್ಯ ಅಚ್ಚಗನ್ನಡದ ಹಟಕ್ಕೆ ಬಿದ್ದು ವಿಚಿತ್ರ ತದ್ಭವಗಳನ್ನು ಹೊಸೆದಿದ್ದಾನೆಂದು ಆಕ್ಷೇಪಿಸುವುದು ಬಹಳ ಸುಲಭವಾದ ಕೆಲಸ. ಆದರೆ ಪೂರ್ವಕವಿಗಳು ಮಾಡಿಕೊಂಡ ಕೆಲವು ಅಂಥ ತದ್ಭವಗಳನ್ನೂ ನಾವು ನೋಡಬಹುದು.

**೧. ನಾಗವರ್ಮನ ಕಾದಂಬರಿ:**

ಅರ್ಘ್ಯ—ಅಗ್ಗ; ಅಪ್ಸರಸ್—ಅಚ್ಚರಸಿ, ಅಚ್ಚರಸೆ; ಉತ್ಕಟ—ಉಗ್ಗಡ; ಉದ್ದೇಶ—**ಉದ್ದೆಸ;** ಘೋಷಣಾ – ಗೋಸನೆ; ಧೂಮ – ದೂವೆ; ನಿಶ್ಚಯ–ನಿಕ್ಕುವ; ವರ–ಬರ, **ವಂಶ - ಬಂಚ;** ಸಂದೇಹ – ಸಂದೆಗ; ಸಾಕ್ಷಿ– ಸಕ್ಕಿ.

**೨. ನಾಗವರ್ಮನ ಅಭಿಧಾನ ವಸ್ತುಕೋಶ:**

ಗೋಧೂಮ – ಗೋದುವೆ; ದೂತಿ – ದೂದವಿ; **ವಾತಾಯನ – ಬಾದವಣ.**

**೩. ನಾಗಚಂದ್ರನ ರಾಮಚರಿತ ಪುರಾಣ:**

**ಅಸ್ಥಿರ – ಅಂಚಿರ;** ಹನೂಮತ್ –**ಅಣುವ; ಇಂದ್ರಜಿತ್ – ಇಂದಗಿ;** ಉನ್ಮತ್ತ – **ಉಮ್ಮಚ್ಚ** : ಖಂಡ – **ಕಂಡು; ವಾಲಿ – ಬಾಳಿ;** ವಿಸ್ತೃತ – ಬಿಚ್ಚತ; ಶಲಾಕಾ–ಸಲಗು,

**೪. ಕರ್ಣಪಾರ್ಯನ ನೇಮಿನಾಥಪುರಾಣ :**

ದಿಗ್ದಂತಿ – ದಿಗುದಂತಿ ; ವಿಸ್ತರಕ – ಬಿತ್ತರಿಗೆ ; ಸ್ವಯಂವರ – ಸೊಯಂಬರ.

**೫. ನೇಮಿಚಂದ್ರನ ಅರ್ಧನೇಮಿಪುರಾಣ :**

**ಕ್ರಮು – ಕವ ;** ಧರ್ಮ – ದಮ್ಮ , **ಯಶೋದೆ – ಜಸದೆ ;** ಫಣ – ಪಣ.

**೬. ರಾಘವಾಂಕನ ಸಿದ್ಧರಾಮಚಾರಿತ್ರ ಹಾಗು ಹರಿಶ್ಚಂದ್ರಕಾವ್ಯ :**

**ಹಿಂಸೆ – ಇಂಚೆ ;** ಗೋಪ್ಯ – ಗೊಪೆ ; ತ್ವರಿತ – ಚರಿತ ; ಪ್ರಾಭೃತ – ಪಾವುಡ ; **ವಾತಾಯನ–ಬಾದಣ ; ದ್ವಾದಶ – ಬಾರಸ ; ಸೂಚೀಯಾನ – ಸೂಯಾಣ ; ತಮಂಗ–ತವಗ ; ಪಾಶ – ಹಾಸ.**

ತದ್ಭವಗಳ ಹಠವೆ ಇಲ್ಲದ್ದರಿಂದ ಪೂರ್ವಕವಿಗಳು ಇಂಥ ಶಬ್ದಗಳನ್ನು ಹೆಚ್ಚಾಗಿ ನಿರ್ಮಿಸಲಿಲ್ಲ. ಆಂಡಯ್ಯನಿಗೆ ತದ್ಭವಗಳ ಅಗತ್ಯವಿದ್ದುದರಿಂದ ಕೆಲವನ್ನು ಅವನು ಸಾಧಿಸಿಕೊಳ್ಳಬೇಕಾಯಿತು. ಅವನ ತದ್ಭವಗಳೆಲ್ಲ ಎಕ್ಕಸಕ್ಕವಾಗಿಲ್ಲ. ಅವುಗಳ ಸಾಧನೆಯಲ್ಲಿ ಒಂದು ಕ್ರಮವಿದೆ ; ಉಚ್ಚಾರಸೌಲಭ್ಯದ ದೃಷ್ಟಿಯಿದೆ. ಸ್ಥೂಲವಾಗಿ ಕೆಲವು ಹೆಜ್ಜೆಗಳನ್ನು ಅದರಲ್ಲಿ ಹೀಗೆ ಗುರುತಿಸಬಹುದು.

(೧) ಶ, ಷ–ಸ (ಸಬುದ, ಸಬರಿ, ಸಂಕೆ, ಸೌರಿ, ಸರಣ್, ಸಸಿ, ಸಾಪ, ಕುಳಿಸ, ಕೇಸ, ತಿರಿಸುಳಿ, ಗೋಸ, ಈಸ, ಗೋಸಣೆ, ಮಾನಿಸ)

(೨) ಕ್ಷ–ಚ್ಚ, ಕ್ಕ (ಅಚ್ಚಿ, ಲಚ್ಚಣ ; ಬಕ್ಕಣ, ರಕ್ಕೆ)

(೩) ಮ–ವ (ಚಂದವ, ಹಿವಗದಿರ, ಜವ, ಕುಂಕುವ)

(೪) ವ–ಬ (ಬಾಸುಗಿ, ಬಲ್ಲಹ, ಬನ್ನ, ಬಾಡ, ಬಚ್ಚಣೆ)

(೫) ಕ–ಗ (ದಪ್ಪಗ, ಬಾಸುಗಿ, ಸಾಸಿಗ)

(೬) ಮಹಾಪ್ರಾಣ–ಅಲ್ಪಪ್ರಾಣ (ಕಡುಗ, ಸಿರಿಕಂಡ, ಗೋಸ, ಮುಟ್ಟ, ರೂಡಿ, ಮಡ, ತಿರ, ಕುಂಬ)

(೭) ವಿಜಾತೀಯ ದ್ವಿತ್ವ–ಸಜಾತೀಯ ದ್ವಿತ್ವ (ಗೊಟ್ಟಿ, ಉಗ್ಗಡ, ಗೊಟ್ಟ, ದಪ್ಪ, ನಿಬ್ಬರ)

(೮) ದ್ವಿತ್ವಾಕ್ಷರದ ಅವಯವಗಳ ನಡುವೆ ಇಕಾರ, ಅಕಾರ, ಉಕಾರಾಗಮ (ಸಿರಿ, ಇಂದಿರ, ತಿರಿಸುಳಿ, ಇಂದರ ; ಸಬುದ, ಕಡುಗ, ಅರುಹ)

(೯) ಯ–ಜ (ಜೋಗಿಣಿ, ಜವ, ಜನ್ನ)

ಇತ್ಯಾದಿ, ಇತ್ಯಾದಿ.

ತದ್ಭವಸಿದ್ಧಿಯ ಎಲ್ಲ ನಿಯಮಗಳನ್ನೂ ಇಲ್ಲಿ ಉದ್ಧರಿಸುವ ಆವಶ್ಯಕತೆಯಿಲ್ಲ. ಕೇಶಿರಾಜನು ಅಪಭ್ರಂಶ ಪ್ರಕರಣದಲ್ಲಿ ಹೇಳಿದ ನಿಯಮಗಳಿಗೆ ಆಂಡಯ್ಯನ ತದ್ಭವಗಳು ಎಷ್ಟೂ ವಿರುದ್ಧವಾಗಿಲ್ಲ. ಶಬ್ದಮಣಿದರ್ಪಣದಲ್ಲಿ ನಿಯಮಾನುಸಾರವಾಗಿ ಕೊಟ್ಟ ಈ ಕೆಲವು ತದ್ಭವಗಳನ್ನು ನೋಡಿರಿ :

ಅಮಾವಾಸ್ಯೆ – ಅವಸಿ ; ಮರ್ಕಟಂ – ಮಂಕಡಂ ; ಸೃಷ್ಟಿ – ಸಿಟ್ಟಿ ; ಆಷಾಢಂ – ಅಸಡಿ ;

ವ್ಯಥೆ – ಬೆದೆ; ಮೂಢಂ – ವೋಡಂ; ಮುಕ್ತಿ – ಜುತ್ತಿ; ಪ್ರಾಕಾರಂ – ಪಾಗಲ್ ; ಮುಂಜಂ – ಮೊದೆ; ಸಪ್ತಮಿ – ಸತ್ತವೆ; ಗಹನಂ – ಗಾಸಂ; ಕುಮಾರಂ – ಕೋರಂ.

ಪ್ರಮಾಣಭೂತವಾದ ವ್ಯಾಕರಣಗ್ರಂಥದಲ್ಲಿ ಲಕ್ಷ್ಯವಾಗಿ ಬಂದ ಈ ತದ್ಭವಗಳ ರೂಪ ವೈಚಿತ್ರ್ಯಕ್ಕೆ ಏನೆನ್ನಬೇಕು? ಕೇಶಿರಾಜನೇ ಇವುಗಳನ್ನು ಹೊಸೆದನೆಂದು ಹೇಳಲಾಗದು. ಅವನು ಸ್ಥಿತಿಪ್ರಿಯನಾದ ವೈಯಾಕರಣ, ಪ್ರಯೋಗಶರಣ; ಪೂರ್ವಕವಿಗಳ ಪ್ರಸಿದ್ಧ ಗ್ರಂಥಗಳಿಂದ ಉದಾಹರಣೆಗಳನ್ನು ಎತ್ತಿಕೊಡತಕ್ಕವನು. (ನೋ. ಪೀಠಿಕೆ ಪದ್ಯ ೫, ಶಬ್ದಮಣಿದರ್ಪಣ). ಕೇಶಿರಾಜನಂಥ ನಿಷ್ಠುರವಾದಿಯಾದ ವೈಯಾಕರಣ ಈ ತದ್ಭವಗಳನ್ನು ಒಪ್ಪಿ ಸ್ವೀಕರಿಸಿದನು. ಆಂಡಯ್ಯನಲ್ಲಿ ಇಂಥ ವಿಚಿತ್ರ ತದ್ಭವಗಳಿಲ್ಲ. ಹೀಗಿರಲು ಅವನ ಕೆಲವು ತದ್ಭವಗಳ ಬಗ್ಗೆ ಎತ್ತುವ ಆಕ್ಷೇಪ ಎಷ್ಟು ಸಮಂಜಸವಾದೀತು? (ಮೇಲಾಗಿ, ಅಂಕೆ ಸಂಖ್ಯೆಗಳಿಂದ ಸಿದ್ಧ ಮಾಡುವುದಾದರೆ ಆಂಡಯ್ಯನು ಬಳಸಿರುವ ಶಬ್ದಗಳಲ್ಲಿ ಮುಕ್ಕಾಲುಪಾಲು ದೇಶ್ಯವಿದ್ದು ಒಕ್ಕಾಲು ಮಾತ್ರ ತದ್ಭವ ಗಳುಂಟು). ಭಾಷೆ ಸ್ವಯಂಭುವಾಗಿ ತಂತಾನೆ ಬೆಳೆಯುತ್ತಾ ಬರುತ್ತದೆ. ಅನ್ಯದೇಶ್ಯಗಳೂ, ತದ್ಭವಗಳೂ, ನವ್ಯೋನವ ರೂಪಗಳೂ ಅದರಲ್ಲಿ ಇಂದೇ ಬಂದುವು ಎಂದು ಹೇಳುವುದು ಕಷ್ಟದ ಕೆಲಸ. ಆದರೆ ಕಾರ್ಯಕ್ಷಮನಾದ ವ್ಯಕ್ತಿಯೊಬ್ಬನು ಭಾಷೆಗೆ ತನ್ನದೊಂದು ಉಪಕೃತಿಯನ್ನು ನೀಡಬೇಕೆಂದು ಬುದ್ಧಿಪೂರ್ವಕವಾಗಿ ಹೊರಟರೆ ಅವನ ಕೃತಿಯ ಯುಕ್ತಾಯುಕ್ತತೆಯ ಹೊಣೆ ಅವನ ತಲೆಗೆ ಕಟ್ಟಿಟ್ಟದ್ದೆ. ಆಂಡಯ್ಯನ ತದ್ಭವಗಳೆಲ್ಲವೂ ಸಮುಚಿತವೆಂದು ಹೇಳುವುದೂ ಒಪ್ಪ ಲಾಗದ ಮಾತು. ಬಳಕೆಯಲ್ಲಿರುವ ಸುಲಭವಾದ ಸಂಸ್ಕೃತ ಶಬ್ದಗಳನ್ನು ತದ್ಭವದ ಎರಕದಲ್ಲಿ ಎದ್ದಿ ತೆಗೆದರೆ, ಅವುಗಳ ರೂಪ ಬದಲಾಗಿ, ಅರ್ಥ ಶ್ರಮಸಾಧ್ಯವಾಗುತ್ತದೆ; ಮೂಲ ಶಬ್ದಕ್ಕಿರುವ ಸೌಂದರ್ಯ, ಶಕ್ತಿ, —"ಸಂಸ್ಕೃತಿ" ಅದರ ವಿಕೃತರೂಪಕ್ಕೆ ಇರುವುದು ಅಸಂಭವ. ಸಂಸ್ಕೃತ ತದ್ಭವವಾಗುವಲ್ಲಿ ಮಾರ್ದವ ಗುಣವನ್ನು ಪಡೆಯಬಹುದಾದರೂ ಮೂಲದಲ್ಲಿಯ ಗಂಭೀರವಾದ ಶಬ್ದಗುಣವನ್ನು ಅದು ಕಳೆದುಕೊಳ್ಳುವುದರಲ್ಲಿ ಸಂದೇಹವಿಲ್ಲ. ಫಣಿಧರ, ಕುಂಭಸ್ಥಲ, ಮಹಾಶಬ್ದ, ಭೀತಿಗಳೆಲ್ಲಿ? ಪಣಿದರ, ಕುಂಬತಳ, ಮಾಸಬುದ, ಬಿತ್ತಿಗಳೆಲ್ಲಿ? ಈ ಬಗೆಯ ಶಬ್ದಗುಣವನ್ನು ಕನ್ನಡದಲ್ಲಿ ಬೇರಾವ ರೀತಿಯಿಂದಲಾದರೂ ತುಂಬಬಹುದು. ಭಾಷೆಗೊಂದು ವೈಶಿಷ್ಟ್ಯ; ನುಡಿಗೊಂದು ರೀತಿ. ಆದರೆ ಫಣಿಧರ – ಕುಂಭಸ್ಥಳಗಳನ್ನು ಸೀಳಿ ಸಪ್ಪಗೆ ಮಾಡಿ, ಮಹಾಶಬ್ದ ವನ್ನು ಅಡಗಿಸುವುದರಿಂದ ಆಂಡಯ್ಯನಿಗೇನು ಲಾಭವಾಯಿತು? ಇಂಥ ಒಂದೆರಡು ಶಬ್ದಗಳ ವಿಷಯದಲ್ಲಿ ಕವಿ ತಾನೆ ಮಾಡಿಕೊಂಡ ಸ್ವರ್ಣಶೃಂಖಲೆಯಲ್ಲಿ ಸಿಕ್ಕು ಪೇಚಾಡಿದ್ದಾನೆ. ಬಂದವರಿ ಗೆಲ್ಲಾ ಭಾಂಡಾರ ಬಳಿದು ಕುಲದೀಕ್ಷೆಯನ್ನು ಕೊಟ್ಟನೆನ್ನುವಂತೆ ಕೈಗೆ ಸಿಕ್ಕ ಶಬ್ದಕ್ಕೆ ತದ್ಭವದ ಸಂಸ್ಕಾರ ಕೊಟ್ಟು ಅಚ್ಚಗನ್ನಡವೆಂದರೆ ಆದೀತೆ? ಸಂಸ್ಕೃತದಿಂದ ಹೀಗೆ ಶಬ್ದಗಳನ್ನು ದೋಚಿ ಕೊಂಡು, ಕದ್ದ ಎತ್ತಿನ ಕೋಡು ತಿರುವಿಟ್ಟಂತೆ, ಶಬ್ದಾಕ್ಷರಗಳನ್ನು ಪಲ್ಲಟಿಸಿ, ಮಾರ್ಪಡಿಸಿ, ಇಡುವುದು ಎಂಥ ಅಚ್ಚಗನ್ನಡ? ಹೀಗೆ ಕೇಳುವುದು ಸಹಜವಾದದ್ದು. ಆದರೆ ಹೀಗೆ ಕೇಳುವುದ ಕ್ಕಿಂತ ಮುಂಚೆ, ಆಂಡಯ್ಯ, ಈ ಜುಲುಮೆಯ ದೀಕ್ಷೆ ಕೊಟ್ಟು ಬಲವಂತ ಮಾಘಸ್ನಾನ ಮಾಡಿಸಿದ್ದು ಎಷ್ಟು ಶಬ್ದಗಳಿಗೆ ಎಂಬುದನ್ನು ನಾವು ವಿಚಾರಿಸಬೇಕು. ಇಂಥ ಶಬ್ದ ಎಂಟೋ ಹತ್ತೋ ಅಷ್ಟೆ. ಇದಲ್ಲದೆ ಆಂಡಯ್ಯನ ಅಚ್ಚಗನ್ನಡ ಕೇವಲ ತದ್ಭವಗಳ ಮೇಲೆ ಕೈಯೂರಿ ನಿಂತಿಲ್ಲ. "ಕನ್ನಡದೊಳ್ಪಿನ ನುಡಿ" ಅವನ ಅಚ್ಚಗನ್ನಡದ ಬೆನ್ನುಹುರಿ. ಕನ್ನಡದ ದೇಸಿ, ನಾಣ್ನುಡಿ ಅದರ ಜೀವಾಳ. ಡಾ. ಕಾಲ್ಡ್‌ವೆಲ್ಲರ ಉಪಮೆಯನ್ನು ತೆಗೆದುಕೊಳ್ಳುವುದಾದರೆ ತದ್ಭವಗಳು ಇಟ್ಟಿಗೆ; ಅವುಗಳನ್ನು ಕೂಡಿಸಿ ಕಟ್ಟಿ ನಿಲ್ಲಿಸಿದ ಗಚ್ಚು ದೇಸಿ. ಇದಕ್ಕೆ ಆಂಡಯ್ಯನಲ್ಲೇನೂ ಕೊರತೆಯಿಲ್ಲ.

ತದ್ಭವಗಳನ್ನು ಸ್ವೀಕರಿಸುವುದು ಸಂಸ್ಕೃತಕ್ಕೆ ಒಪ್ಪಿಕೊಂಡ ಸೋಲೂ ಅಲ್ಲ, ಗೆಲವೂ ಅಲ್ಲ. ಸಂಸ್ಕೃತವನ್ನು ಕೆಡಿಸಿ ತದ್ಭವಗಳನ್ನು ಮಾಡಿಕೊಳ್ಳಲಿಲ್ಲ. ತದ್ಭವಗಳಾದದ್ದು ಭಾಷೆಯ ನಿಯಮ ದಿಂದ. ನುಡಿನುಡಿಗೆ ಒಂದೊಂದು ವೈಶಿಷ್ಟ್ಯ. ಭಾಷೆಯ ರೂಪ, ಗತಿ, ಧ್ವನಿಗಳಲ್ಲಿ ಒಂದು ವಿಶಿಷ್ಟವಾದ ಸಾಂಗತ್ಯ ಅಥವಾ ಸಾಮರಸ್ಯವಿರುತ್ತದೆ. ಪರಭಾಷೆಯ ಶಬ್ದಗಳು ಅದರಲ್ಲಿ ಬರ ಬೇಕಾದರೆ ಅದಕ್ಕೆ ಹೊಂದಿಕೊಳ್ಳದೆ ಗತಿಯಿಲ್ಲ. ಈ ತತ್ವವನ್ನನುಸರಿಸಿಯೆ ತದ್ಭವಗಳಾದುವು. ಹೀಗೆ ಕನ್ನಡಕ್ಕೆ ಹೊಂದಿಕೊಂಡ ತದ್ಭವಗಳು ಅಚ್ಚಗನ್ನಡವೆಂಬ ಹೆಸರಿಗೆ ಅರ್ಹವಾದರೆ ತಪ್ಪೇನು? ಭಾಷಾಭಿವೃದ್ಧಿಗೆ ಇದು ಹಿತವಾದ ಹಾದಿ. ಪರಭಾಷೆಯ ಶಬ್ದಗಳನ್ನು ನಮ್ಮ ನುಡಿಯಲ್ಲಿ ಸೇರಿಸಿಕೊಳ್ಳಲೇಬೇಕಾದ ಸಂದರ್ಭದಲ್ಲಿ ಸಾಧ್ಯವಾದ ಮಟ್ಟಿಗೆ ಅವುಗಳಿಗೆ ಕನ್ನಡದ ಸಂಸ್ಕಾರ ಕೊಡಲೇಬೇಕು; ಇಲ್ಲವಾದರೆ ಹಿಟ್ಟಿನಲ್ಲಿಯ ಹರಳಿನಂತೆ ಅವು ಗಂಟಲಿಗೆ ಇಳಿಯಲಿಕ್ಕಿಲ್ಲ. ಈ ಬಗೆಯಾಗಿ ಸಂಸ್ಕಾರ ಹೊಂದಿ ಕನ್ನಡದ ಅಚ್ಚಿನಲ್ಲಿ ಹಾದು ಬಂದ ಶಬ್ದ ಅಚ್ಚಗನ್ನಡ.

ಕಬ್ಬಿಗರ ಕಾವದ ೩೪೯ ಪದ್ಯಗಳಲ್ಲಿ ಬಳಕೆಯಾದ ತದ್ಭವ ಶಬ್ದಗಳ ಒಟ್ಟು ಸಂಖ್ಯೆ ಸುಮಾರು ೨೫೦. ಅವುಗಳಲ್ಲಿ ಆಂಡಯ್ಯನು ಸ್ವತಂತ್ರವಾಗಿ ನಿರ್ಮಿಸಿಕೊಂಡ ತದ್ಭವಗಳು ಮೂವತ್ತರಷ್ಟು; ಮಿಕ್ಕುವೆಲ್ಲಾ ಪೂರ್ವಕವಿಗಳಿಂದ ಬಂದುವು. ಮೇಲಾಗಿ ಕೇವಲ ತದ್ಭವಗಳ ಮೇಲೆಯೆ ಅವನು ಕೈಯೂರಿ ನಿಂತಿಲ್ಲವೆಂದು ಹಿಂದೆಯೆ ಹೇಳಿದೆ. ಸಂಸ್ಕೃತಕ್ಕೆ ಸಕ್ಕಸಮನಾಗಿ ಕನ್ನಡ ಸಮಾಸಗಳನ್ನು ಹುಟ್ಟಿಸುವ ಹದವನ್ನು ಪೂರ್ವಕವಿಗಳೆ ಅವನಿಗೆ ಕಲಿಸಿದ್ದರು. ನಾಗವರ್ಮ "ಅನಾಮಿಕಾ" ಎಂಬುದಕ್ಕೆ "ಪೆಸರಿಲಿ" ಎಂದಿದ್ದಾನೆ; ರನ್ನನ ಗದಾಯುದ್ಧದಲ್ಲಿ ಧರ್ಮಸೂನು, ಗಂಗಾಪುತ್ರರಿಗೆ ಬದಲಾಗಿ "ಅಜನಮಗಂ," "ಬಾಂದೊಜೆಯಮಗಂ" ಎಂಬುವು ಬಂದಿವೆ. ಆಂಡಯ್ಯ ಈ ಮಾದರಿಯಲ್ಲಿ ನುಡಿವೆಣ್ (ವಾಕ್), ಪೂವಿಲ್ಲಂ, ಬಿಸುಗಣ್ಣಂ, ಆನೆಮೆಯ್ಯಾತಂ (ಗಜಾಸುರ), ಪೊನ್ನೊಡೆಯಂ (ಧನಪತಿ, ಕುಬೇರ), ಮುಕ್ಕಣ್ಣಂ, ಲೇಸಲ್ಲರ್ (ಅಹಿತರು), ಸಿರಿಯರಸಂ, ಮೆಯ್ಗಣ್ಣಂ (ಇಂದ್ರ), ಪೊಡೆಯಲರಂ (ಬ್ರಹ್ಮ) ಮುಂತಾದ ಶಬ್ದಗಳನ್ನು ಸಿದ್ಧಪಡಿಸಿಕೊಂಡಿದ್ದಾನೆ. ಇಂತಹ ಕೆಲವು ಒಳ್ಳೆಯ ಶಬ್ದಗಳೊಡನೆ ಮೇಲೂರ್ (ಊರ್ಧ್ವಲೋಕ, ಸ್ವರ್ಗ), "ಸಮೆದಿರ್ಪ ಬೆಟ್ಟ" (ಕೃತಕಾಚಲ) ಎಂಬ ವಿಚಿತ್ರ ಶಬ್ದಗಳನ್ನೂ ಮಾಡಿಕೊಂಡಿದ್ದಾನೆ. ಕೆಲವು ಸಲ ಸಂಸ್ಕೃತದ ಸಮಸ್ತ ಪದಗಳಿಗೆ ಪ್ರತಿಯಾಗಿ ಉದ್ದುದ್ದವಾದ ಮಾತನ್ನೂ ಹೇಳಿದ್ದುಂಟು: ಗಾಳಿವಟ್ಟೆಯೊಳ್ ನಡೆವಂ (ಸೂರ್ಯ), ಜನ್ನಮನುಂಬಣ್ಣರ್ (ದೇವತೆಗಳು), ಕಡಲೊಳ್ ಪಟ್ಟಂ (ವಿಷ್ಣು), ಬಿಸುಗಣ್ಣೊಳೊಗೆದ ಬೀರಂ (ವೀರಭದ್ರ), ಜೊನ್ನಮನುಣ್ಬ ಪಕ್ಕಿ (ಚಕೋರ), ಮೂರಡಿಯಿಟ್ಟಂ (ತ್ರಿವಿಕ್ರಮ) ಇತ್ಯಾದಿ. ಈ ಬಗೆಯ ಪ್ರಯೋಗಗಳಲ್ಲಿ ಅತಿ ವಿಸ್ತರ ತೋರಿಬಂದರೂ ಎಷ್ಟೋ ಸಲ ಅವು ಧ್ವನಿಪೂರ್ಣವಾಗಿರುತ್ತವೆ. ಕನ್ನಡಮೆನಿಪ್ಪಾ ನಾಡಿನ ಸಂದರ್ಭದಲ್ಲಿ ಶೇಷನಿಗೆ "ಪಲವುಂ ನಾಲಗೆಯುಳ್ಳವಂ" ಎಂದುದು ಸಾಭಿಪ್ರಾಯವಾದ ಪ್ರಯೋಗವಾಗಿದೆ. ಶಿವ, ವಿಷ್ಣು ಮೊದಲಾದ "ಜನ್ನಮನುಂಬಣ್ಣ"ರನ್ನು ಉದ್ದೇಶಿಸುವ ಹೆಸರುಗಳಲ್ಲಿ ಒಂದು ಬಗೆಯ ಕಟಕಿ ಅಥವ ಪರಿಹಾಸವಿದ್ದಂತೆ ಕಾಣುತ್ತದೆ. ಸನೆವಿಲ್ಲಬಲ್ಲಹನನ್ನು ಎದುರಿಸುವ ದುಟ್ಟ ಗೊರವನನ್ನು "ಐದುಂ ಮೊಗಮುಳ್ಳಂ", "ನೆತ್ತಿಗಣ್ಣಂ" ಎಂಬಲ್ಲಿ ಪಂಚಾಸ್ಯ, ಫಾಲನೇತ್ರ ಎಂಬುದಷ್ಟೆ ಅರ್ಥವಿರಲಿಕ್ಕಿಲ್ಲ; ಜಗಜ್ಜೇತೃವಾದ ಕಾವನನ್ನೂ ಧಿಕ್ಕರಿಸುವುದೆಂದರೆ, ಈ ಶಿವನಿಗೆ ತನಗೆ ಐದು ಮುಖವೆಂಬ ಬಿಂಕವೊ, ಅವನ ಕಣ್ಣೇ ನೆತ್ತಿಗೇರಿದುದೊ, ತನಗೊಂದು ಕಣ್ಣು ಹೆಚ್ಚೆಂಬ (ಮುಕ್ಕಣ್ಣಂ) ಅಭಿಮಾನವೊ? ಪೂವಿಲ್ಲನ ಮುಂದೆ ದೇವತೆಗಳೇನು ಲೆಕ್ಕ? ವಿಷ್ಣುವೇನು ದೊಡ್ಡವನು? "ಮೂರಡಿಯಿಟ್ಟಂ"

(ತ್ರಿವಿಕ್ರಮ) ; ಮೂರು ಹೆಜ್ಜೆ ಇಟ್ಟು ಸಮುದ್ರದಲ್ಲಿ ಮುಲಗಿಕೊಂಡನು ("ಕಡಲೊಳ್ ಪಟ್ಟಂ") (ಕವಿ ಜೈನನಾದುದರಿಂದ ವೈದಿಕ ದೇವತೆಗಳನ್ನು ಈ ರೀತಿ ಹೀಗಳೆಯುತ್ತಾನೆಂದು ಹೇಳಲಾಗದು. ಕಾವ್ಯಾರಂಭದಲ್ಲಿ ತ್ರಿಮೂರ್ತಿಗಳನ್ನು ಕೊಂಡಾಡಿದವನೆ ಕಾವ್ಯಗರ್ಭದಲ್ಲಿ ತಾನಾಗಿ ಅವರನ್ನು ತುಚ್ಛೀಕರಿಸಲಾರನು. ಕಾವನ ಗೆಲ್ಲವನ್ನು ಕುರಿತ ಕಾವ್ಯದಲ್ಲಿ ಕಾವನ ಪಕ್ಷಪಾತದಿಂದ ಕವಿಯೆ ಆಗಲಿ, ಇತರ ಪಾತ್ರಗಳೆ ಆಗಲಿ ಈ ಮಾತನ್ನು ಆಡಿದರೆ ಅದು ಅಪ್ರಸ್ತುತವೇನೂ ಅಲ್ಲ.)

ಆಂಡಯ್ಯನ ಕನ್ನಡತನ ಈ ಶಬ್ದಸೃಷ್ಟಿಗೇ ಮುಗಿಯಲಿಲ್ಲ. ಅವನು ಬಳಸುವ ಹೆಸರು ಕೂಡ ಸಕ್ಕದವಿರಕೂಡದು. ಕನ್ನಡವೆನಿಪ್ಪಾ ನಾಡಿನಲ್ಲಿರುವುದು ಪೂವಿನ ಪೊಳಲ್ ; ಅಲ್ಲಿಯ ಅರಸು ನನೆಯಂಬ ; ಅವನ ಗೆಳೆಯ ನಗೆಗಾರ. ಕಂಪಿನ ಪೊಳಲಲ್ಲಿ ಕರ್ವುವಿಲ್ಲ ; ಅವನ ಹೆಂಡತಿ ಇಚ್ಚೆಗಾರ್ತಿ. ಅವನ ಎದುರಾಳಿ ಗೊರವ. ಇಂದ್ರನ ರಾಜಧಾನಿ "ಅಮರಾವತಿ" ಯೆಂದರೆ ಸಂಸ್ಕೃತವಾಯಿತು ; ಅದಕ್ಕೆ "ಇಂದಿರನ ಪೊಳಲ್" ಎನ್ನಬೇಕು. ಪೂರ್ವದ ಕವಿಗಳು ಕನ್ನಡದ ಹೂ, ಗಿಡ, ಬಳ್ಳಿ, ಗಾಳಿಗಳನ್ನೆ ಬಣ್ಣಿಸಿದರೂ ಅವರು ಬಳಸುವ ಹೆಸರು ಮಾಕಂದ, ಮಂದಾರ, ರಸಾಲ, ನಂದ್ಯಾವರ್ತ, ಕುರವಕ ಇತ್ಯಾದಿ ಸಂಸ್ಕೃತ. ಹೆಸರಿನ ನಾದಸೌಖ್ಯ ಉಂಟು, ನಿಜ. ಆದರೆ ಆಂಡಯ್ಯ ಕೊಡುವ ಹೆಸರುಗಳು ಕೇವಲ ಕನ್ನಡ : ಕೊಸಗು, ಇರವಂತಿ, ತಾವರೆ, ಸೇವಂತಿ, ಕಣಿಗಿಲೆ, ಜಾದಿ, ಮರುಗ, ದವನ, ನೈದಿಲೆ, ಸುರಹೊನ್ನೆ, ಮುಳ್ತುಗ, ಪಲಸು, ಪಡ್ಡಳಿ, ಮಾದಲ, ಸುರಗಿ ಇತ್ಯಾದಿ.

ಕವಿಗೆ ಕನ್ನಡದ ಮೇಲೆ ಪ್ರಭುತ್ವವುಂಟು, ಅಚ್ಚಗನ್ನಡದಲ್ಲಿ ಅವನು ಸಲೀಲವಾಗಿ ಶ್ಲೇಷೆಯನ್ನು ಬಳಸಬಲ್ಲನೆಂಬುದಕ್ಕೆ ವಚನ ೨೫ ಹಾಗೂ ೧೪೮ ಉದಾಹರಣೆಗಳು. ಸಾಧಾರಣವಾಗಿ ವಕ್ರೋಕ್ತಿ, ಶ್ಲೇಷೆ, ಪ್ರೌಢಿಗಳಿಗಾಗಿ ಸಂಸ್ಕೃತ ಪದಪ್ರಯೋಗ ಹೆಚ್ಚಾಗುವುದು ಕನ್ನಡ ಕಾವ್ಯಗಳಲ್ಲಿಯ ರೂಢಿ. ಆಂಡಯ್ಯನಲ್ಲಿ ಕೊಂಕು, ಬರ್ದು, ಜಾಣ್ನುಡಿ, ಮೆಯ್ಸಿರಿ ಇವೆಲ್ಲಕ್ಕೂ ಕನ್ನಡದೊಳ್ಪಿನ ನುಡಿಯೆ ಮೀಸಲಾಗಿದೆ. ತನ್ನ ಅಗ್ಗದ ಕನ್ನಡಂಗಳಲ್ಲಿ ದೋಸದ ಮಾತು ಪೊರ್ದದೆಂದು ಕವಿಗೆ ವಿಶ್ವಾಸವುಂಟು. ಮೇಲಾಗಿ "ತಪ್ಪೊಂದುಂ ತಲೆದೋಱದಂತೆ ಪಲರೆಲ್ಲರ್ ತಿರ್ದಿದ" ಕಬ್ಬ ಕಬ್ಬಿಗರ ಕಾವ. ಅದು ದೇಸೆಯ ಗೊತ್ತು. ಅವನ ದೇಸೆಯನ್ನು ಉದಾಹರಣೆಗಳಿಂದ ತೋರಿಸಬೇಕಾದ ಅಗತ್ಯವಿಲ್ಲ. ಕಾವ್ಯದುದ್ದಕ್ಕೂ ಅದನ್ನು ಕಾಣಬಹುದು.

ಇಷ್ಟೆಲ್ಲ ಹೇಳಿದಮೇಲೆ ಕವಿ ಹೇಳಿಕೊಂಡ "ಮಾತನಾಡಿದವೊಲಂದಮನಾಳ್ದಿರೆ," "ಬಗೆಗೊಳೆ," "ತಪ್ಪೊಂದಂ ತಲೆದೋಱದಂತೆ" ಮುಂತಾದ ಮಾತು ಎಷ್ಟು ಸಾರ್ಥಕವೆಂಬ ಪ್ರಶ್ನೆ ಏಳಬಹುದು. ಈ ಮಾತು ಯಾವ ಕವಿಯಾದರೂ ತನ್ನ ಕಾವ್ಯಶೈಲಿಯ ಬಗ್ಗೆ ಹೇಳಿಕೊಳ್ಳಬಹುದಾದ ಸಾಂಪ್ರದಾಯಿಕ ಮಾತು. ಆಂಡಯ್ಯ ಅಚ್ಚಗನ್ನಡವನ್ನು ಕುರಿತೇ ಈ ಮಾತನ್ನು ಹೇಳಿದನೆಂದು ತೋರುವುದಿಲ್ಲ. ನೆಟ್ಟಗೆ ದೊರೆಕೊಂಡ ಅವನ ಕನ್ನಡದ ಬಲ್ಪು "ಬಗೆಗೊಳೆ" ಅಂದವಾಗಿದೆಯೆಂದು ಆಗಿನ "ಬಲ್ಲವರಿ"ಗೆ ಎನಿಸಿದ್ದರೆ ಸೋಜಿಗವಲ್ಲ. ಸಂಸ್ಕೃತ ಪುಷ್ಟವಾದ ಕನ್ನಡ ಚಂಪೂಕಾವ್ಯಗಳು ಪ್ರಚುರವಾದ ಕಾಲದಲ್ಲಿ, ಕಬ್ಬಿಗರ ಕಾವದ ಭಾಷೆ "ಇದೇನೋ ಮಾತನಾಡಿದ ಹಾಗೆ ಇದೆಯಲ್ಲಾ" ಎಂದೆನಿಸಿರಬಹುದು. ಈಗಲಾದರೂ ಆ ಗ್ರಂಥಗಳೊಡನೆ ಕಬ್ಬಿಗರ ಕಾವವನ್ನು ಹೋಲಿಸಿ ನೋಡಿದರೆ, ಅವುಗಳ ಸಂಸ್ಕೃತಭೂಯಿಷ್ಠವಾದ ಭಾಷೆಯ ಎದುರಿಗೆ ಆಂಡಯ್ಯನ ಭಾಷೆ "ಮಾತನಾಡಿದವೊಲ್" ಸರಳವಾದ ಕನ್ನಡವಾಗಿದೆಯೆಂದು ಹೇಳಬಹುದು.

ಆಂಡಯ್ಯನ ಪ್ರತಿಜ್ಞೆ ಸಾರ್ಥಕವಾಗಿದೆಯೆ ಎಂದರೆ ಅಹುದೆಂದೇ ಹೇಳಬೇಕು. ಅವನ ಅಚ್ಚಗನ್ನಡದಲ್ಲಿ ಕೃತಕತೆಯಿಲ್ಲವೆಂಬುದನ್ನು ಹಿಂದೆಯೆ ಹೇಳಿದೆ. ಮೇಲಾಗಿ ಅವನ ಭಾಷೆ ದೇಶ್ಯಭೂಯಿಷ್ಠವಾಗಿದೆ. (ತದ್ಭವರಹಿತವಾದ ಪದ್ಯಗಳನ್ನು ಬರೆಯಬೇಕೆಂದು ಆಂಡಯ್ಯ ಹೊರಟವನಲ್ಲದಿದ್ದರೂ ಅಂತಹ ಮೂವತ್ತು ಪದ್ಯಗಳು ಕಬ್ಬಿಗರ ಕಾವದಲ್ಲಿ ದೊರೆಯುತ್ತವೆ. ಒಂದೊ ಎರಡೊ ತದ್ಭವ, ಉಳಿದುದೆಲ್ಲಾ ದೇಶ್ಯ ಪದಗಳುಳ್ಳ ಪದ್ಯಗಳು ೧೪೦ ಕ್ಕೆ ಮೇಲ್ಪಟ್ಟು ಉಂಟು. ಮೂರರಿಂದ ಆರರವರೆಗೆ ತದ್ಭವಗಳನ್ನೊಡಗೊಂಡ ಪದ್ಯ ಸುಮಾರು ಮೂವತ್ತು).* "ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ ಬಗೆಗೊಳೆ ಪೇೞಲಾಱರಿನಿತುಂ ಸಲೆ ಮುನ್ನಿನ ಪೆಂಪನಾಳ್ದ ಕಬ್ಬಿಗರ್" ಎಂಬ ಮಾತು ಸತ್ಯ; ಅವನಂತೆ ಅಚ್ಚಗನ್ನಡದಲ್ಲಿ ಇಡಿಯ ಒಂದು ಕಾವ್ಯವನ್ನು ಯಾರೂ ಬರೆದಿರಲಿಲ್ಲ. ಅಂತಹ "ಬಲ್ಪು ನೆಟ್ಟಗೆ ದೊರೆಕೊಂಡುದಿಂತಿವನೊಳಲ್ಲದೆ ಕೇಳ್ ದೊರೆಕೊಳ್ಳದಾರೊಳಂ" ಎಂಬುದೂ ನಿಜವೆ ಎನಿಸುವಂತೆ ಆಯಿತು; ಏಕೆಂದರೆ ಅವನ ತರುವಾಯ ಬಂದ ಕವಿಗಳಾರೂ ಅವನ ಹಾಗೆ ಬರೆಯಲಿಲ್ಲ. ಅಚ್ಚಗನ್ನಡದ ಬಲ್ಪು ಸಾಲದೆಂದು ಬಿಟ್ಟರೋ, ಅದು ಸಲ್ಲದೆಂದು ಬಿಟ್ಟರೋ, ಅವನ ಹಾದಿಯನ್ನು ಅವನಿಗೇ ಬಿಟ್ಟುಬಿಟ್ಟರು. ಭಾಷಾ ಚರಿತ್ರೆಯಲ್ಲಿ ಅಚ್ಚಗನ್ನಡದ ಏಕಮೇವ ಪ್ರತಿನಿಧಿಯಾಗಿ ಉಳಿದಿರುವುದು ಆಂಡಯ್ಯನ ಕಾವ್ಯ.

ಆಂಡಯ್ಯನ ಬಿಗಿವೊಂದಿದ ಅಚ್ಚಗನ್ನಡವನ್ನು ಯಾರೂ ಮುಂದರಿಸಲಿಲ್ಲ; ಮುಂದರಿಸಬೇಕಾದ ಆವಶ್ಯಕತೆಯೂ ಇರಲಿಲ್ಲ. ಅದು ಒಂದು ಉದ್ದೇಶಕ್ಕಾಗಿ ಬಂದದ್ದು; ಅದನ್ನು ನೆರವೇರಿಸಿ ಸಫಲವಾಯಿತು. ಕನ್ನಡದ ಬಲ್ಪನ್ನು ತೋರಿ ಕನ್ನಡ ಕಬ್ಬಿಗರ ಮೇಲಿನ ಆರೋಪವನ್ನು ನಿವಾರಿಸುವುದಕ್ಕೆ ಕಬ್ಬಿಗರ ಕಾವ ಹುಟ್ಟಿತು. ಆಂಡಯ್ಯನ ಅಚ್ಚಗನ್ನಡ ಕೇವಲ ಭಾಷಾವೈಚಿತ್ರ್ಯವಲ್ಲ; ಚಮತ್ಕೃತಿಯಲ್ಲ; ಕನ್ನಡ ಸಾಹಿತ್ಯ ಚರಿತ್ರೆಯ ಸಂಧಿಕಾಲದಲ್ಲಿ ಬಹುಮುಖವಾಗಿ ಒಡಮೂಡಿದ ಸ್ವಾತಂತ್ರ್ಯದ ಒಂದು ಮುಖ ಅದು; ಕನ್ನಡ ಕವಿಗಳ ಸ್ವಾಭಿಮಾನದ ಪ್ರತೀಕ; ಸಂಸ್ಕೃತ ಬಾಹುಲ್ಯಕ್ಕೆ ಪ್ರತಿಕ್ರಿಯೆಯಾಗಿ ಬಂದ ಸ್ವಾಭಾವಿಕ ಪ್ರತಿಭಟನೆ.

ಆಂಡಯ್ಯನ ಈಚೆಗೆ ಬಂದ ಕವಿಗಳ ಮೇಲೆ ಅವನ ಪ್ರಭಾವವಾಗಿರುವುದು ನಿಃಸಂದೇಹವಾಗಿದೆ. ಮುಂದಿನವರು ಅಚ್ಚಗನ್ನಡದ ಔಚಿತ್ಯವನ್ನು ಕಂಡು ಅದರ ಗುಣವನ್ನು ಮಾತ್ರ ಗ್ರಹಿಸಿಕೊಂಡರು. ಸಂಸ್ಕೃತವಾಗಲಿ ಕನ್ನಡವಾಗಲಿ ಅತಿರೇಕವಾಗಬಾರದು; ಸರಳವಾದ ಮಧ್ಯಮ ಮಾರ್ಗವೆ ವಿಹಿತವೆಂದರು. ಸಂಸ್ಕೃತವೆನ್ನದೆ ಕನ್ನಡವೆನ್ನದೆ ಎರಡೂ ಹಿತವಾಗಿ ಬೆರೆತ ಒಂದು ಪಕ್ವವಾದ "ಸುದ್ದಗನ್ನಡ" ಶೈಲಿಗಾಗಿ ಮುಂದಿನ ಕವಿಗಳು ಹವಣಿಸಿದರು. ಅತಿಸಂಸ್ಕೃತದ ಮೋಹಕ್ಕೆ ಸಾರುವೋದ ಕನ್ನಡ ಕಾವ್ಯಶೈಲಿ ಈ ಹದಕ್ಕೆ ಬರಬೇಕಾದರೆ ಆಂಡಯ್ಯ ಅಚ್ಚಗನ್ನಡದಲ್ಲಿ ಹಾಯ್ದು ಬರದೆ ಗತಿಯಿರಲಿಲ್ಲ. ಕನ್ನಡ ಕಾವ್ಯಭಾಷೆಯ ಪ್ರಗತಿ ಮಾರ್ಗದಲ್ಲಿ ಆಂಡಯ್ಯನ ಕೃತಿ ಒಂದು ಮೈಲುಗಲ್ಲು.

## ಪರಿಶಿಷ್ಟ

### (ಅ) ಸಂಪೂರ್ಣ ತದ್ಭವರಹಿತವಾದ ಪದ್ಯಗಳು (ಒಟ್ಟು ೩೦)

ಪದ್ಯಗಳ ಸಂಖ್ಯೆ: ೨೮, ೪೫, ೫೭, ೬೯, ೭೧, ೭೪, ೮೨, ೯೫, ೧೧೭, ೧೩೯, ೧೫೫, ೧೭೯, ೧೮೨, ೧೮೯, ೧೯೮, ೨೧೬, ೨೪೬, ೨೪೭, ೨೬೦, ೨೬೫, ೨೭೧, ೨೮೧, ೨೯೭, ೩೦೨, ೩೧೪, ೩೧೭, ೩೨೯, ೩೩೮, ೩೪೨.

* ಪರಿಶಿಷ್ಟ ನೋಡಿರಿ.

ವಚನದ ಸಂಖ್ಯೆ : ೬೪, ೬೬. ೭೦.

## (ಬ) ಒಂದೋ ಎರಡೋ ತದ್ಭವವಿದ್ದು ಉಳಿದವು ದೇಶ್ಯಪದಗಳಿದ್ದ ಪದ್ಯಗಳು (ಒಟ್ಟು ೧೪೦)

ಪದ್ಯಗಳ ಸಂಖ್ಯೆ : ೧, ೫, ೭, ೨೯, ೩೦, ೩೨, ೩೩, ೩೭, ೪೮, ೫೦, ೫೩, ೫೫, ೫೮, ೫೯, ೬೨, ೬೩, ೬೫, ೭೩, ೭೫, ೭೬, ೭೭, ೭೮, ೭೯, ೮೦, ೮೧, ೮೬, ೯೦, ೯೨, ೯೩, ೯೬, ೯೮, ೧೦೧–೧೦೯, ೧೧೧, ೧೧೨, ೧೨೩, ೧೨೬, ೧೨೮–೧೩೧, ೧೩೬, ೧೩೭, ೧೪೧, ೧೪೪, ೧೫೧, ೧೬೩, ೧೬೬, ೧೭೦, ೧೭೧, ೧೭೩, ೧೭೪, ೧೭೭, ೧೮೦, ೧೮೪, ೧೮೬, ೧೯೦, ೧೯೨, ೧೯೪, ೧೯೭, ೧೯೯, ೨೦೩, ೨೦೪, ೨೦೫, ೨೦೮–೨೧೨, ೨೧೪, ೨೧೫, ೨೧೮, ೨೨೩–೨೨೫, ೨೪೦, ೨೪೧, ೨೫೧, ೨೫೪, ೨೫೮, ೨೫೯, ೨೬೧, ೨೬೨, ೨೬೭, ೨೬೮, ೨೬೯, ೨೭೦, ೨೭೫, ೨೭೭, ೨೮೨, ೨೮೪, ೨೮೫, ೨೮೭, ೨೯೮–೩೦೨, ೩೦೪, ೩೦೫, ೩೦೭, ೩೦೯, ೩೧೧, ೩೧೮, ೩೨೦, ೩೨೫, ೩೨೮, ೩೩೦–೩೩೨, ೩೩೪–೩೪೦, ೩೪೨–೩೪೪.

ವಚನ : ೧೮.

## (ಕ) ಮೂರರಿಂದ ಆರರವರೆಗೆ ತದ್ಭವವಿದ್ದ ಪದ್ಯಗಳು (ಒಟ್ಟು ೩೦)

ಪದ್ಯಗಳ ಸಂಖ್ಯೆ : ೨, ೩, ೪. ೬, ೩೬, ೪೨, ೪೩, ೪೬, ೪೭, ೫೧, ೫೪, ೬೧, ೬೭, ೮೫, ೯೧, ೯೪, ೯೯, ೧೧೪, ೧೧೯, ೧೨೦, ೧೩೪, ೧೩೮, ೧೫೨, ೧೬೮, ೧೭೫, ೧೯೪, ೨೦೬, ೨೧೯, ೨೨೧.

---

# ಇಂದಿನ ನಮ್ಮ ಕನ್ನಡ ರಂಗಭೂಮಿ

ಕ. ವೆಂ. ರಾಜಗೋಪಾಲ

ಇಂದಿನ ಕನ್ನಡ ರಂಗಭೂಮಿಯನ್ನು ಕುರಿತು ವಿಚಾರಮಾಡುವಾಗ ಒಂದು ಬಗೆಯ ಸಮ್ಮಿಶ್ರಣ ಅನುಭವವಾಗುತ್ತದೆ. ಒಳ್ಳೆಯ ನಾಟಕಕಾರರಿದ್ದಾರೆ, ನಾಟಕಗಳಿವೆ. ನಾಟ್ಯದಲ್ಲಿ ಅಭಿರುಚಿ, ಆಸಕ್ತಿಯುಳ್ಳವರಿದ್ದಾರೆ. ಆದರೆ ಪ್ರೇಕ್ಷಕರು ಸಾಲದು. ಇದರಿಂದ ನಾಟಕಕಾರನಿಗೆ ನಿರಾಶೆ, ಆಡುವವರಿಗೆ ಉತ್ಸಾಹಭಂಗ. ಕಳೆದ ಮಹಾಯುದ್ಧ ಮುಗಿದಮೇಲೂ ನಮ್ಮ ನಾಟಕಕಾರ ಸರ್ವಾಧಿಕಾರಿಯಂತೆ, ನಟನಾಗುತ್ತಿದ್ದ, ನಿರ್ದೇಶಕನಾಗಿದ್ದ, ಎಲ್ಲ ಹೊಣೆಗಾರಿಕೆಯಿಂದ ಬಂದ ಕೀರ್ತಿಯನ್ನೂ ಕೂಡಿಸಿಕೊಳ್ಳುತ್ತಿದ್ದ. ಆದರೆ ಇಂದು ನಮ್ಮ ಒಳ್ಳೆಯ ನಾಟಕಕಾರರೇ ಕನ್ನಡದಲ್ಲಿ ರಂಗಭೂಮಿ ಜೀವಂತವಾಗಿಲ್ಲ ; ಪ್ರಗತಿ ಸಾಧ್ಯವಿಲ್ಲ ; ಇತ್ಯಾದಿ . . . ಹೇಳುವಂತಾಗಿದೆ. ವೃತ್ತಿರಂಗಭೂಮಿಯಂತೂ ನಿರ್ನಾಮವಾದಂತಾಗಿದೆ. ಒಂದು ಕಾಲದಲ್ಲಿ ಅದಕ್ಕೆ ಮುಸುಕುತ್ತಿದ್ದ ಪ್ರೇಕ್ಷಕರು ಇಂದು ಸಿನಿಮಾ ಪ್ರೇಮಿಗಳಾಗಿದ್ದಾರೆ. ಇಷ್ಟಾದರೂ ' ನಾಟಕ ಮತ್ತು ರಂಗಭೂಮಿ ' ಉಳಿದಿವೆಯೆನ್ನುವುದಾದರೆ – ಅದು ಕೇವಲ ಅರೆಜೀವಿಯಾಗಿರುವ ವಿಲಾಸಿ ರಂಗಭೂಮಿಯಿಂದ. ಹೀಗೆ ಕನ್ನಡ ರಂಗಭೂಮಿಯ ಅವನತಿ ಸ್ಪಷ್ಟವಾಗಿದೆ.

ಸನ್ ೧೯೫೮ ರಲ್ಲಿ ' ರಘುಸುತ 'ರು ಮಾಡಿದ ಶೋಧೆಯಿಂದ ನಮ್ಮಲ್ಲಿ ವಿಲಾಸೀ ಸಂಸ್ಥೆಗಳು ಸಾಕಷ್ಟಿವೆಯೆಂಬುದು ಖಚಿತವಾಗುತ್ತದೆ. (ಪ್ರಜಾಮತ ಪತ್ರಿಕೆಯಲ್ಲಿ ಈ ಲೇಖನಗಳು ಆ ವರ್ಷ ಪ್ರಕಟವಾಗಿವೆ). ನಮ್ಮಲ್ಲಿ ನಾಟ್ಯವಿಲಾಸಿಗಳು ಹೇರಳವಾಗಿದ್ದರೂ ಅವರ ಸಂಸ್ಥೆಗಳು ಪ್ರಬಲವಾಗಿಲ್ಲ. ಅಂದರೆ ಹಣಕಾಸಿನ ಕೊರತೆಯಲ್ಲದೆ ವಿಲಾಸೀ ನಟರು ಅನಿಶ್ಚಿತವೆನ್ನುವಂತಾಗಿದೆ. ಇದರಿಂದಾಗಿ ಕೈಲಾಸಂ ದೊರಕಿಸಿಕೊಟ್ಟ ಪ್ರೇಕ್ಷಕರು ಇಂದು ಜಾರಿಹೋಗಿದ್ದಾರೆನ್ನಬಹುದು. ಇವಕ್ಕೆ ಮತ್ತೊಂದು ಕಾರಣವೂ ಇರುವಂತಿದೆ : ನಮ್ಮ ಪ್ರೇಕ್ಷಕರನ್ನು ಸೆರೆಹಿಡಿದು ನಿಲ್ಲಿಸಬಲ್ಲ ಶ್ರೇಷ್ಠ ಪ್ರದರ್ಶನಗಳೂ ವಿರಳವಾಗಿವೆ. ಇಂದಿಗೆ ಕನ್ನಡ ನಾಟಕದ ಪ್ರೇಕ್ಷಕರೆಂದರೆ ವಿಲಾಸೀ ಸಂಸ್ಥೆಗಳ ನಟನಟಿಯರೇ ಮುಕ್ಕಾಲು ಮೂರುವೀಸಪಾಲೆಂದು ಧಾರಾಳವಾಗಿ ಹೇಳಬಹುದು. ಒಟ್ಟಿನಲ್ಲಿ ನಾಟಕದ ಒಂದಲ್ಲ ಒಂದು ಬಗೆಯ ಚಟವಿರುವವರೇ ಇಂದಿನ ಕನ್ನಡ ನಾಟ್ಯಪ್ರೇಮಿಗಳು ಮತ್ತು ಪ್ರೇಕ್ಷಕರು.

ನಿಜವಾದ ಪ್ರೇಕ್ಷಕರ ಕೊರತೆಯಿಂದಾಗಿ ನಮ್ಮ ರಂಗಭೂಮಿ ಅವನತಿಯನ್ನು ಕಂಡಿದೆ. ನಾಟಕನೆಂದರೆ ಶಾಲಾಕಾಲೇಜುಗಳಲ್ಲಿ ಅಥವಾ ಯಾವುದೇ ಇತರ ಸಂಸ್ಥೆಗಳ ಹಬ್ಬಗಳಲ್ಲಿ ಒಂದೊಂದು ಬಾರಿ ತೋರುವ ಪ್ರದರ್ಶನವೆನ್ನುವಂತಾಗಿದೆ. ಈ ಪ್ರದರ್ಶನಗಳು ಕೇವಲ ಮನರಂಜನೆಗಾಗಿ. ಈ ದೃಷ್ಟಿಯಿಂದ ದಿ| ಕೈಲಾಸಂ ನಮ್ಮ ಅತ್ಯಂತ ಯಶಸ್ವೀ ನಾಟಕಕಾರ–ನಟ–ನಿರ್ದೇಶಕರಾಗಿದ್ದರು. ಅವರ ಮುಂದಿನ ತಲೆಮಾರಿನವರು ಇಷ್ಟನ್ನೂ ಸಾಧಿಸಲಾರದವರಾದರು ;

ಅಲ್ಲದೆ ಅವರ ನಾಟಕಗಳೂ ಇನ್ನೂ ದುರ್ಬಲವಾದುವು. ಇಂದು ನಿಧಿಯ ಬೆಂಬಲವಿಲ್ಲದೆ ನಮ್ಮ ವಿಲಾಸೀ ಸಂಸ್ಥೆಗಳು ಹೆಸರಿಗೆ ಮಾತ್ರ ಹಳೆಯ ಬೋರ್ಡುಗಳಂತೆ ಆಗಿವೆ. ಒಳ್ಳೆಯ ನಾಟಕಗಳೇ ಕನ್ನಡದಲ್ಲಿಲ್ಲವೆಂಬ ಸೊಲ್ಲು ನಮ್ಮ ವಿಲಾಸೀ ಸಂಸ್ಥೆಗಳಿಂದಲ್ಲದೆ ಯುವಕ ನಾಟಕಕಾರರಿಂದ ಕೇಳಿಬರುತ್ತಿದೆ.

ಪ್ರೇಕ್ಷಕರ ಸಂಖ್ಯೆ ಬೆಳೆಯದೆ ನಾಟಕ ಉಳಿಯಲಾರದು. ವಿಮರ್ಶಕನಿಗಿಂತಲೂ ಮೊದಲು ಇದು ಬೇಕು. ಪ್ರಾಮಾಣಿಕವಾದ ಅಭಿನಯ ಮತ್ತು ನಿರ್ದೇಶನಗಳು ಬೇಕು. ಇದರಿಂದಾಗಿ ಎಂತಹ ನಾಟಕವಾಗಲಿ ತನ್ನ ದೌರ್ಬಲ್ಯಗಳನ್ನು ಬಚ್ಚಿರಿಸಿಕೊಳ್ಳಲಾರದು. ಅದರ ಶಕ್ತಿಯಂತೂ ಉತ್ತಮ ಪ್ರಯತ್ನದಿಂದ ಮರೆಯಲಾಗದ ಅನುಭವವಾಗಿ (ವಿಮರ್ಶಕನಿಂದ) ಮೊಟ್ಟಮೊದಲೇ ಪ್ರೇಕ್ಷಕರಿಂದ ಹೊಗಳಿಸಿಕೊಳ್ಳದೇ ಉಳಿಯುವುದಿಲ್ಲ. ಆದುದರಿಂದ ಯಾವುದೇ ನಾಟಕವಾದರೂ ಉತ್ತಮ ಪ್ರದರ್ಶನವಾಗಬೇಕು. ಇದರ ಜೊತೆಗೆ ನಾಟಕ ಕಲೆಯನ್ನು ಸಿನಿಮಾ ಪ್ರಭಾವದಿಂದ ಬೇರೆಯಿರಿಸಬೇಕು. ಹೀಗಾದರೆ ಮಾತ್ರ ನಾಟಕದ ವಿಶಿಷ್ಟತೆ ಜೀವಂತ ಅನುಭವವಾಗಿ ಉಳಿಯುತ್ತದೆ ಮತ್ತು ನಮ್ಮ ರಂಗಭೂಮಿ ಬದುಕಿಕೊಳ್ಳುತ್ತದೆ.

ನಮ್ಮ ರಾಜಧಾನಿಗೆ ಪಾಶ್ಚಿಮಾತ್ಯ ಸಂಸ್ಥೆಗಳು ಪ್ರತಿವರ್ಷವೂ ಬಂದು ಪ್ರದರ್ಶನಗಳನ್ನು ನೀಡಿ ಹೊಗಳಿಸಿಕೊಂಡು ಹೋಗುತ್ತಿವೆ. ಇವುಗಳಿಗೆ ಪ್ರೇಕ್ಷಕರು ಹೇರಳವಾಗಿದ್ದಾರೆ. ಆದರೆ ಕನ್ನಡ ನಾಟಕಕ್ಕೆ ಈ ಬಗೆಯಿಲ್ಲ. ನಮ್ಮಲ್ಲಿ ಕಲಿತವರೂ ನಮ್ಮ ನಾಟಕಗಳಿಗೆ ದುಡ್ಡುಕೊಟ್ಟು ನೋಡಲು ಹಿಂಜರಿಯುತ್ತಾರೆ. ನಮ್ಮ ನಾಟಕ ಮತ್ತು ನಮ್ಮ ನಾಟಕಕಾರರೆಂಬ ಅಭಿಮಾನದ ಬುಡಕ್ಕೇ ಪೆಟ್ಟುಬಿದ್ದಂತೆ ಕಂಡುಬರುತ್ತದೆ. ರಂಗಭೂಮಿಯ ಮಾತುಕತೆ ಇನ್ನಾದರೂ ಅಭಿವೃದ್ಧಿಯಾಗಬೇಕೆನ್ನುವುದು ನಮ್ಮ ಜನದ ಆಶೆಯಾಗುವುದಲ್ಲದೆ ಒಂದು ಅಭ್ಯಾಸದ ಗುರಿಯಾಗಬೇಕು. ಒಂದೊಂದು ನಾಟ್ಯಸಂಸ್ಥೆಯೂ ತನ್ನದೇ ಆದ ಒಂದು ರಂಗಮಂದಿರವನ್ನೂ ತಕ್ಕಷ್ಟು ಪ್ರೇಕ್ಷಕರನ್ನೂ ಮಾಡಿಕೊಳ್ಳಬೇಕು. ನಮ್ಮ ನಾಟ್ಯಸಂಘವನ್ನು ಅಭಿವೃದ್ಧಿಗೊಳಿಸುವುದರಿಂದಲ್ಲದೆ ಬೇರೆ ಮಾರ್ಗದಿಂದ ನಮ್ಮ ರಂಗಭೂಮಿಯನ್ನು ಉಳಿಸಿಕೊಳ್ಳುವುದು ಸಾಧ್ಯವಿಲ್ಲ.

ಇಂತಹ ನಿರಾಶೆಯಲ್ಲಿಯೂ ನಾಟಕಗಳನ್ನು ಹೊಸ ಹೊಸ ಆಸಕ್ತಿಗಳಿಂದ ಬರೆಯುವ ತರುಣರಿದ್ದಾರೆ. ಒಂದೊಂದು ಪ್ರದರ್ಶನಕ್ಕಾದರೂ ವರ್ಷಗಟ್ಟಲೆ ಕಾಯ್ದು ಕುಳಿತವರಿದ್ದಾರೆ. ಮಾಮೂಲು ನಷ್ಟಕ್ಕೆ ಹಿಂಜರಿಯದ ವಿಲಾಸಿಗಳೂ ಇರುವುದರಿಂದ ನಮ್ಮ ರಂಗಭೂಮಿಯ ನಂದಾದೀಪ ಇನ್ನೂ ಇದೆ. ಸಣ್ಣಗೆ ಉರಿಯುತ್ತಿದೆ – ಎನ್ನಬಹುದು. ದಿ| ಕೈಲಾಸಂ ದೊರಕಿಸಿ ಕೊಟ್ಟ ಪುಕ್ಕಟೆ ಪ್ರೇಕ್ಷಕರೂ ಇರುವುದರಿಂದ ಇಷ್ಟಾದರೂ 'ನಮ್ಮ ರಂಗಭೂಮಿ' ಉಳಿದಂತಿದೆ.

ನಮ್ಮ ಹಿರಿಯ ನಾಟಕಕಾರರಾಗಿ ಶ್ರೀರಂಗರು ಬರೆದ ಈಚಿನ ನಾಟಕಗಳನ್ನು ಮುಂಬಯಿ ಮತ್ತು ದೆಹಲಿಯ ಕನ್ನಡ ಪ್ರೇಮಿಗಳು ಅಭಿನಯಿಸಿ ಅವುಗಳ ಪ್ರಸಿದ್ಧಿಯನ್ನು ಹರಡುತ್ತಿದ್ದಾರೆ. 'ಕೇಳು ಜನಮೇಜಯ'–ಹಿಂದಿಗೆ ಅನುವಾದವಾಗಿ ಅದು ಪ್ರಸಿದ್ಧಿಯಾದಮೇಲೆ ತಮ್ಮ ಅಭಿಪ್ರಾಯಗಳನ್ನೇ ಬದಲಿಸಿಕೊಂಡವರಿದ್ದಾರೆ. ಗಿರೀಶ್ ಕಾರ್ನಾಡರ 'ತುಘಲಕ್' ಹೀಗೆಯೇ ಮೊದಲ ಬಾರಿ ರಂಗಭೂಮಿಯನ್ನು ಕಂಡಿತು. ಹೀಗೆ ಒಳ್ಳೆಯ ನಾಟಕಗಳು ನಮ್ಮಲ್ಲಿದ್ದರೂ ಅವುಗಳ ಪ್ರದರ್ಶನಗಳನ್ನು ಯಶಸ್ವಿಯಾಗಿ ಸಾಧಿಸುವವರು ಇಂದು ಹೇರಳವಾಗಿ ಬೇಕಾಗಿದ್ದಾರೆ.

ಕನ್ನಡದಲ್ಲಿ ಒಳ್ಳೆಯ ನಾಟಕಗಳೆಂದಾಗ ಇಂದಿಗೆ ಶ್ರೀರಂಗರ ನಾಟಕಗಳು ಮುಖ್ಯವಾಗಿವೆ. ಅವುಗಳಲ್ಲಿ ಕೆಲವು ಇನ್ನೂ ರಂಗಭೂಮಿಯನ್ನು ಎದುರು ನೋಡುತ್ತಿವೆ. 'ಕೇಳು ಜನಮೇಜಯ'ದ ಯಶಸ್ಸು ಶ್ರೀರಂಗರ ಉಳಿದ ನಾಟಕಗಳನ್ನೂ ದೆಹಲಿಯ ಹಿಂದೀ ರಂಗಭೂಮಿಗೆ ಸೆಳೆದಂತಾಗಿದೆ.

ಅವರ 'ತೇಲಿಸೋ ರಂಗ ಇಲ್ಲ ಮುಳುಗಿಸೊ'– ಹಿಂದಿಗೆ ಅನುವಾದವಾಗಿ ಪ್ರಯೋಗವೂ ನಡೆದಿದೆ. ಇದಕ್ಕೆ ಮಿಶ್ರಿತ ಪ್ರತಿಕ್ರಿಯೆಯುಂಟಾದರೂ ' ದಾರಿ ಯಾವುದಯ್ಯಾ ವೈಕುಂಠಕೆ '– ಕನ್ನಡದಲ್ಲಿ ಯಶಸ್ವೀ ಪ್ರಯೋಗವಾಗಿದೆ. ಸಾಗರದ ಉದಯ ಕಲಾವಿದರು ಕಳೆದ ವರ್ಷ ' ಕೇಳು ಜನಮೇಜಯ 'ವನ್ನು ಆಡಿದ್ದವರು ಈಚೆಗೆ ' ಸಿರಿಪುರಂದರ ' ವನ್ನು ಅಭಿನಯಿಸಿರುತ್ತಾರೆ. ಅವರು ಧಾರವಾಡದಲ್ಲಿ ' ರಂಗಭಾರತ ' ವನ್ನು ಅಭಿನಯಿಸಿದ್ದರು. ' ರಂಗಭಾರತ ' ವನ್ನು ಬೆಂಗಳೂರಿನ ಲಲಿತಕಲಾನಿಕೇತನದವರು ಎರಡು ಬಾರಿ ಅಭಿನಯಿಸಿದರಾದರೂ ಅದರ ಪೂರ್ಣ ಯಶಸ್ವಿಗಾಗಿ ಮತ್ತೆ ಪ್ರಯೋಗ ನಡೆಯಿಸಬೇಕಾಗಿದೆ. ' ಅಮೃತರಂಗ 'ದ ಮೂರು ಕೃತಿಗಳಲ್ಲಿ ' ಸಂಜೀವನೀ '* ಮತ್ತು 'ಸಾವಿತ್ರೀ ' ಇನ್ನೂ ರಂಗಭೂಮಿಯನ್ನು ಕಾಣಬೇಕಾದ ಕೃತಿಗಳಾಗಿವೆ. 'ರಂಗಭಾರತ'ವು ಶ್ರೀರಂಗರ ಕಲಾಭಿರುಚಿಯು ಒಂದು ವಿಶಿಷ್ಟವಾದ ಹಂತವನ್ನು ಮುಟ್ಟಿದೆಯೆಂದು ಸಾರಿ ಹೇಳುತ್ತಿದೆ. ಮಾನವನ ಅವನತಿಯನ್ನು ದುರಂತದ ಛಾಯೆಯಲ್ಲಿ ರೂಪಿಸುತ್ತಾ ಬಂದಿರುವ ಅವರ ಕೃತಿಗಳಲ್ಲಿ ಸುಸಂಸ್ಕೃತ ಸಾಮಾಜಿಕ ಪ್ರಜ್ಞೆಯು ಒಡಮೂಡಿರುತ್ತದೆ. ಅವರ ನಾಟಕಗಳಲ್ಲಿರುವ ' ನಾಟ್ಯದ ತೀಕ್ಷ್ಣತೆ 'ಯನ್ನು ಅರಿಯುವುದು ಸುಲಭ. ಅಭಿನಯ ಕಲೆಗೆ ಎಷ್ಟೆಷ್ಟು ಆಧುನಿಕತೆ ಬಂದರೂ ಶ್ರೀರಂಗರ ನಾಟಕಗಳು ಹಿಂದುಳಿಯದಂತೆ ಸರಳ ರೀತಿಯಲ್ಲಿ ರಚಿತವಾಗಿವೆ. ಈ ಕೃತಿಗಳ ಮಾರ್ಮಿಕತೆ ಅಚ್ಚಳಿಯದೆ ಉಳಿಯಬಲ್ಲುದಾಗಿದೆ.

ಶ್ರೀರಂಗ ಬರಿಯ ನಾಟಕಕಾರರಾಗದೆ ಕನ್ನಡ ರಂಗಭೂಮಿಯ ಆಚಾರ್ಯರಾಗಿ ದುಡಿಯುತ್ತಿದ್ದಾರೆ. ಈ ಜವಾಬುದಾರಿಯನ್ನು ಅವರೇ ಹೊತ್ತಿರುವುದಕ್ಕೆ ಅವರ ಏಕಾಂಕಗಳೂ ಸಾಕ್ಷಿಗಳಾಗಿವೆ. ' ಸ್ವಾಗತ ಸಂಭಾಷಣೆ 'ಯಲ್ಲಿ ಪ್ರೇಕ್ಷಾಗೃಹಕ್ಕೂ ರಂಗಭೂಮಿಗೂ ಯಾವ ಅಂತರವೂ ಇಲ್ಲವೆಂಬ ವಿಚಾರಧಾರೆ ಒಂದು ರೂಪಕವಾಗಿದೆ. ಪ್ರೇಕ್ಷಕರ ನಟ್ಟನಡುವೆ ಕೂಡ ಈ ನಾಟಕವನ್ನು ಆಡಬಹುದು. ಅಭಿನಯ ನಿರ್ದೇಶನ, ರಂಗಭೂಮಿಯ ಚಿಂತನೆಗಳಲ್ಲಿ ಹಣ್ಣಾಗಿದ್ದಾರೆ, ಶ್ರೀರಂಗರು. ಕನ್ನಡ ರಂಗಭೂಮಿಯ ಜೀವಂತ ಆಸ್ತಿ ಅವರೊಬ್ಬರೇ ಎಂದರೆ ತಪ್ಪಾಗಲಾರದು.

ದಿವಂಗತ ಕೈಲಾಸಂ ಕನ್ನಡ ನಾಟಕವು ಜನ್ಮ ತಾಳಲು ಕಾರಣರಾಗಿ ಅದಕ್ಕೆ ಪುಕ್ಕಟೆ ಪ್ರೇಕ್ಷಕರನ್ನು ಹೇರಳವಾಗಿ ಒದಗಿಸಿಕೊಟ್ಟರು. ಇದರಿಂದ ಕನ್ನಡ ರಂಗಭೂಮಿಯೂ ಹುಟ್ಟಿಕೊಂಡಿತು. ಇವರ ಅನಂತರ ಕನ್ನಡ ರಂಗಭೂಮಿಗೆ ಸಾಕಷ್ಟು ಮಣ್ಣು ಹೊತ್ತವರಲ್ಲಿ ಪರ್ವತವಾಣಿ – ಮುಖ್ಯರು. ಕೈಲಾಸಂರ ಹೆಜ್ಜೆಯ ಗುರುತುಗಳ ಮೇಲೆ ನಡೆದವರಂತೆ ಇವರ ಧೋರಣೆಯಾಗಿದೆ. ಇವರ ಈಚಿನ ನಾಟಕಗಳಲ್ಲಿ ' ಕವಿಭಿಕ್ಷೆ' ಒಂದು ದೊಡ್ಡ ನಾಟಕ. ಹಳೆಯ ನಟರನ್ನು ಮತ್ತೆ ಸಂಗ್ರಹಿಸಿ ' ತಾರಾಮಂಡಲ ' ಎಂಬ ಸಂಸ್ಥೆಯನ್ನು ಮಾಡಿದರು. ತಮ್ಮ ಮೊದಲ ನಾಟಕಗಳನ್ನು ಸುರೂಪಗೊಳಿಸಲು ಪ್ರಯತ್ನಿಸಿದ್ದಾರೆ. ಇದರಿಂದ ಬಹದ್ದೂರ್ ಗಂಡ – ಇನ್ನೂ ದೀರ್ಘವಾಯಿತು. ' ಬಣ್ಣದ ಬೊಂಬೆಯು ' ಗೀತರಾಕ್ಷಸ ಎಂಬ ಹೊಸ ಹೆಸರಿನಿಂದ ಅಚ್ಚಾಯಿತು. ಇವು ದೊಡ್ಡ ಯೋಜನೆಯ ಪ್ರಯತ್ನಗಳಾಗಿವೆ. ಮನರಂಜನೆಯೊಂದೇ ಇವುಗಳಿಂದಾಗುವ ಲಾಭ. ಅಲ್ಲದೆ ಕಥೆಯು ಅಂಶ ಸೇರಿದ್ದರೂ ಕೈಲಾಸಂ ಕೃತಿಗಳನ್ನು ಮೀರಲಾರವು. ಪಾಶ್ಚಿಮಾತ್ಯ ನಾಟಕಗಳು ಇವುಗಳ ಮೂಲ ಪ್ರತಿಮೆಗಳಾಗಿರುವುದರಿಂದ

* ಬೇಸಿಗೆ ರಜಾಪಕ್ಷ ಶಿಕ್ಷಕರ ನಾಟ್ಯಾಭ್ಯಾಸದ ಗುಂಪಿನವರು ೨೯ ಮತ್ತು ೩೧ನೇ ಮೇ ೬೭ರಲ್ಲಿ ಮೈಸೂರು ಮತ್ತು ಬೆಂಗಳೂರು (ರವೀಂದ್ರ ಕಲಾಕ್ಷೇತ್ರದಲ್ಲಿ) ಸಂಜೀವನೀ – ನಾಟಕದ ಪ್ರದರ್ಶನಗಳನ್ನು ನೀಡಿದರು.

ಕಲಿತ ಪ್ರೇಕ್ಷಕನಿಗೆ ಅವುಗಳು ತಟ್ಟನೆ ನೆನಪಾಗುತ್ತವೆ. ಇದು ಬರಿಯ ರೂಪಾಂತರದಂತೆ ಪರಿಣಾಮ ಮಾಡುವುದರಿಂದ ನಾಟಕವು ದುರ್ಬಲವಾಗುತ್ತದೆ. ಕೈಲಾಸಂರಲ್ಲಿದ್ದ ಜೀವನವನ್ನು ಒಂದು ವಿಶಿಷ್ಟಕೋಣದಿಂದ ನೋಡುವ 'ಪರ್ಪಸ್' ಇವರಲ್ಲಿ ಇಲ್ಲದೇ ಹೋದ ಕಾರಣದಿಂದ ಯಾವ ಕೃತಿಯೂ ಕೈಲಾಸಂ ಮಟ್ಟಕ್ಕೇರಲಿಲ್ಲ. ಸಂಭಾಷಣೆಯಲ್ಲಿರುವ ಹೊಸತನವೊಂದೇ ಈ ನಾಟಕಗಳನ್ನು ರಕ್ಷಿಸಿಕೊಂಡು ಬಂದಿದೆ. ಕನ್ನಡ ರಂಗಭೂಮಿಯೂ ಸುರಕ್ಷಿತವಾಗಿದೆ.

ಇವರೊಡನೆ ಎ. ಎಸ್. ಮೂರ್ತಿ, ದಾಶರಥಿ ದೀಕ್ಷಿತ್, ನವರತ್ನರಾಂ ಮತ್ತು ಗುಂಡಣ್ಣ ಮುಂತಾದವರನ್ನು ಗಣಿಸಬಹುದು. ನೂರಕ್ಕೂ ಹೆಚ್ಚು ಕೃತಿಗಳ ರಚನೆಮಾಡಿದವರೆಂದು ಎ. ಎಸ್. ಮೂರ್ತಿಯವರನ್ನು ಗುರುತಿಸಬಹುದು. ಆದರೆ ಯಾವ ಕೃತಿಯಲ್ಲಿಯೂ ಒಂದು ವಿಶಿಷ್ಟತೆಯಿಲ್ಲ. ನಾಟಕಕ್ಕೆ ಬೇಕಾದ ಘಟನಾ ಸಾಮರ್ಥ್ಯವಿಲ್ಲ. ಇರುವುದೆಲ್ಲ ಅತ್ಯಂತ ಸರಳ ಸಾಮಾನ್ಯ ಹಾಸ್ಯದ ರಂಜಕತೆ. ಇಷ್ಟರಿಂದಲೇ ಅವು ಜನಪ್ರಿಯವಾದಂತೆ ತೋರುತ್ತಿವೆ. ಆದರೆ ಉಳಿದ ಸಮಕಾಲಿಕ ತರುಣ ನಾಟಕಕಾರರ ತೀಕ್ಷ್ಣ ಪ್ರಯೋಗಗಳ ಜಳದಿಂದ ತಮ್ಮ ಕೃತಿಗಳಿಗೆ ಹೆಚ್ಚು ಜೀವತುಂಬುವ ಪ್ರಯತ್ನ ಮಾಡಿದುದರ ಫಲವಾಗಿ 'ಅಯ್ಯಾ ನಾನು ಯಾರು?' 'ಜೇಡನ ಬಲೆ'-ಯಂಥ ಕೃತಿಗಳು ರಚಿತವಾಗಿವೆ. ಇವು ಕೈಲಾಸಂ ಪ್ರಭಾವವನ್ನು ಮೀರಿದುವು. ಆದರೂ ಧುರ್ಬಲವೆಂದೇ ಹೇಳಬೇಕು. ಇವು ನಗೆನಾಟಕಗಳಲ್ಲ; ಆದರೆ ಹಿರಿಮೆಯೇನೂ ಇಲ್ಲ. ಜೊತೆಗೆ ಕಲಾತ್ಮಕತೆ ಸಾಲದು. ಇವು ಸ್ವತಂತ್ರ ಕೃತಿಗಳೆನ್ನುವುದು – ಒಂದು ಗುಣ. ನಮ್ಮ ಮಧ್ಯಮ ವರ್ಗದ ಸಾಮಾನ್ಯ ಜನತೆಗೆ ಸಾಮಾನ್ಯ ಘಟನೆಗಳಲ್ಲಿಯೇ ಅಸಾಮಾನ್ಯತೆಯನ್ನು ತೋರುವ ವಸ್ತುವಿನಿಂದ ಇವರ ಕೃತಿಗಳು ಜನಪ್ರಿಯವಾದಂತೆ ತೋರುತ್ತವೆ. ಪರ್ವತವಾಣಿಯಂತೆ ಇವರೂ ನಮ್ಮ ರಂಗಭೂಮಿಯನ್ನು ರಕ್ಷಿಸಿಕೊಂಡು ಬಂದವರೆನ್ನಬಹುದು.

ಉಳಿದ ಕೈಲಾಸಂ ಅನುಯಾಯಿಗಳಲ್ಲಿ ದಾಶರಥಿ ದೀಕ್ಷಿತ್ ಮತ್ತು ನವರತ್ನರಾಂ ಉತ್ತಮ ಪ್ರಯತ್ನಗಳನ್ನು ಮಾಡಿದರೆನ್ನಬಹುದು. ಹಾಸ್ಯ ಘಟನೆಯೊಂದನ್ನು ಹಾಸ್ಯಗಾರನಾಗಿ ನಿರೂಪಿಸುವ ಜಾಣ್ಮೆಯಿಂದ ದೀಕ್ಷಿತರ ಕೃತಿಗಳಿಗೆ ಒಂದು ಹಿರಿಮೆಯುಂಟಾಗಿದೆ. ಕೈಲಾಸಂ ಜನಪ್ರಿಯತೆಯನ್ನು ನಂಬಿಕೊಂಡು ಅವರ ಅನುಯಾಯಿಗಳೆಲ್ಲರೂ ಜನಪ್ರಿಯತೆಯನ್ನೇ ಗಳಿಸಲು ಪ್ರಯೋಗಶೀಲರಾದರು. ಮತ್ತು ಅಭಿನಯದಲ್ಲಿ ಹಗುರವಾದ 'ಪ್ರಹಸನರೀತಿ'ಯನ್ನೇ ನಂಬಿಕೊಂಡವರಂತೆ ನಾಟಕಗಳನ್ನಾಡತೊಡಗಿದರು. ಇದರಿಂದ 'ಅಳಿಯದೇವರು' ನಾಟಕದಲ್ಲಿ ಒಂದು ಒಳ್ಳೆಯ ಗುಣವನ್ನೂ ಮರೆತರೆನ್ನಬಹುದು. ನಗಾರಿ ನರಸಿಂಹಯ್ಯ – ಒಬ್ಬ ಹಳೆಯ ಕಂಪನಿಯ ನಟನ ನೆನಪು ತರುವ ಪಾತ್ರವಾಗಿ ಕಾಣಬಹುದು. ಇದನ್ನು ಪ್ರದರ್ಶನಕಾರರು ಮರೆತು ಬರಿಯ ಹಾಸ್ಯದ ಪಾತ್ರವಾಗಿಸಿ ತೋರುವುದು ವಾಡಿಕೆಯಾಗಿದೆ. ಆದರೂ ಒಳ್ಳೆಯ ಹಾಸ್ಯದ ಚೌಕಟ್ಟು ಇವರ ಕೃತಿಗಳಿಗಿರುವುದರಿಂದ ಮನರಂಜನೆಗೆ ಒಂದು ಕಳೆಯಿದೆ. ಹೀಗೆಯೇ ನವರತ್ನರಾಂರವರ 'ಅಕ್ಕಪಕ್ಕ'ದಲ್ಲಿ ಹಾಸ್ಯದ ಒಂದು ಕಥಾನಕವಿದೆ, ಸಂಭಾಷಣೆ ಒಂದು ಹದದಲ್ಲಿ ಹತೋಟಿಯಲ್ಲಿದೆ. ಗುಟ್ಟಾಗಿ ಉಳಿದಿರುವ ಸೇವಕನ ಪ್ರೇಮ ಮನಸೆಳೆಯುವುದಲ್ಲದೆ ನಾಟಕದ ಸತ್ವವಾಗಿದೆ. ಇವರ ಇತ್ತೀಚಿನ 'ಮೀಸಿನ ಹೆಜ್ಜೆ' ನಾಟಕದಲ್ಲಿಯೂ ಇಂಥ ಗುಟ್ಟಿನ ವಿಷಯವಿದೆ. ಆದರೆ ಹರಿತವಿಲ್ಲ. ಹಾಸ್ಯ ರಹಸ್ಯ ಒಡೆಯುವ ವೇಳೆಗೆ ಕಾಲವಿಳಂಬ ನಾಟಕವನ್ನು ದುರ್ಬಲವಾಗಿಸಿದೆ. ಹಾಸ್ಯದ ಚೌಕಟ್ಟನ್ನು ಯಶಸ್ವಿಯಾಗಿ ಬಳಸುವ ಜಾಣತನ ಇವರಿಬ್ಬರಿಗೂ ಸಾಮಾನ್ಯವಾದ ಗುಣ. ದೀಕ್ಷಿತರಾಗಲೀ ಹಳಬರು. ಅವರ 'ಸಿಡಿಲಮರಿ' ಒಂದು ಸಮಕಾಲೀನ ಕುಚೋದ್ಯವನ್ನು

ಬಲೂನೊಡೆದಂತೆ ತೋರುವುದರಲ್ಲಿ ಯಶಸ್ವಿಯಾಗಿದೆ. ಇವರಿಬ್ಬರೂ ಮನಸ್ಸುಮಾಡಿದರೆ ಕನ್ನಡ ರಂಗಭೂಮಿಗೆ ಒಳ್ಳೆಯ ' ನಗೆನಾಟಕ 'ಗಳು ದೊರಕಬಹುದು.

* * * *

ಕೈಲಾಸಂ ಪ್ರಭಾವ ತುಂಬ ಅಪಾಯಕಾರಿಯೆಂದು ಮೊದಲೇ ಅರಿತವರು ಶ್ರೀರಂಗರು. ಅವರ ಪ್ರಯೋಗಗಳೆಲ್ಲವೂ ಈ ಮಾತಿಗೆ ಉದಾಹರಣೆಯಾಗಿವೆ. ನಮ್ಮ ಆಧುನಿಕ ತರುಣ ನಾಟಕಕರೂ ವಿಮರ್ಶೆಯ ಬಲದಿಂದ ಈ ಗುಟ್ಟನ್ನರಿತವರು. ತಮ್ಮ ಹಿಂದಿನ ನಾಟಕಗಳೂ ಸಮಕಾಲಿಕ ಇತರ ನಾಟಕಗಳೂ ರಂಗಭೂಮಿಯ ಮೇಲೆ ಬಂದಾಗ ಅವುಗಳ ದೌರ್ಬಲ್ಯಗಳನ್ನು ಅರಿತುದಲ್ಲದೆ ಮುಖ್ಯವಾಗಿ ಇಂಗ್ಲಿಷ್ ಭಾಷೆಯಲ್ಲಿರುವ ನಾಟಕಗಳ ರೀತಿ ನೀತಿಗಳನ್ನು ಅರಿತು ಕೊಂಡು ನಾಟಕಕಾರರಾದರೆನ್ನಬಹುದು. ಸದ್ಯಕ್ಕೆ ಮೂವರು ಇಂಥ ಸಮರ್ಥ ನಾಟಕಕಾರರಿದ್ದಾರೆ: ಗಿರೀಶ್ ಕಾರ್ನಾಡ್, ಪಿ. ಲಂಕೇಶ್ ಮತ್ತು ಪೂಚಂತೇ.

ಗಿರೀಶ ಕಾರ್ನಾಡ್‌ರ ನಾಟಕದ ವಸ್ತುವಿನ ಹರಹು ವಿಶಾಲವಾದುದು. ಮುಖ್ಯವಾಗಿ ಸಾಮಾಜಿಕವಲ್ಲದಿದ್ದರೂ ಮಾನವನ ಅಂತರಂಗದ ಎಲ್ಲ ಹಂತಗಳನ್ನೂ ಒಳಗೊಂಡಂತಹವು. ಸರ್ವಕಾಲಿಕವಾದ ಮಾನವೀಯ ಸಮಸ್ಯೆಗಳನ್ನು ಇವರು ತಮ್ಮ ನಾಟಕಗಳಲ್ಲಿ ಸೇರಿಸಿರುವುದೇ ಇವರ ಹಿರಿಮೆಗೆ ಕಾರಣವಾಗಿದೆ. ಯಯಾತಿ, ತುಘಲಕ್, ಮಾನಿಷಾದ, ಮತ್ತು ಹಿಟ್ಟಿನ ಹುಂಜ – ಇವುಗಳಲ್ಲಿ ' ಮಾನಿಷಾದ ' ಏಕಾಂಕ ಮತ್ತು ಚಿಕ್ಕದು. ಹಾಗೆಯೇ ' ತುಘಲಕ್ ' ದೊಡ್ಡದು ಮತ್ತು ಪ್ರಚಂಡ ಕೃತಿ. ಇವರ ಮೊಟ್ಟಮೊದಲ ಕೃತಿ ' ಯಯಾತಿ ' ಕಳೆದ ಬೇಸಿಗೆಯ ವರೆಗೂ ರಂಗಭೂಮಿಯನ್ನು ಕಂಡಿರಲಿಲ್ಲ. ತುಘಲಕ್ – ಇನ್ನೂ ಕನ್ನಡನಾಡಿನಲ್ಲಿ ರಂಗ ಭೂಮಿಗೆ ಬಂದಿಲ್ಲ. ಹಿಟ್ಟಿನ ಹುಂಜ – ಎರಡು ಬಾರಿ ಪ್ರದರ್ಶಿತವಾಗಿದ್ದರೂ ಅದು ಪ್ರೇಕ್ಷಕ ರನ್ನು ಕೆರಳಿಸಿತಲ್ಲದೆ ಅರ್ಥವಾಗಿಲ್ಲ. ಒಟ್ಟಿನಲ್ಲಿ ಇವರ ಕೃತಿಗಳ ನಾಟ್ಯಸತ್ವ ಪ್ರಚಂಡವಾದು ದಲ್ಲದೆ ಶ್ರೀರಂಗರ ಕೃತಿಗಳಂತೆ ಪ್ರಭಾವಶಾಲಿಯಾದುವೆಂದು ಹೇಳಬಹುದು.

ಇವರ ಕೃತಿಗಳಲ್ಲಿ ಅಡಕವಾಗಿರುವ ಸಂಕೀರ್ಣತೆ ಆಧುನಿಕತೆಯ ಹೆಗ್ಗುರುತಾಗಿ ರಂಗ ಭೂಮಿಯು ಸಿನಿಮಾಕ್ಕಿಂತ ಎಷ್ಟೋ ಪಟ್ಟು ಶ್ರೇಷ್ಠವಾದುವೆಂದು ಸಾರಿ ಹೇಳುವಂತಿದೆ. ' ಯಯಾತಿ ' ಯೊಂದೇ ಇವರಿಂದ ಕನ್ನಡ ರಂಗಭೂಮಿಗೆ ಶ್ರೇಷ್ಠಕೃತಿಗಳು ಸಾಕಷ್ಟು ದೊರಕುತ್ತವೆಯೆಂಬ ಭರವಸೆಯನ್ನು ನೀಡಿದೆ.

ಲಂಕೇಶರು ಮತ್ತೊಂದು ಬಗೆಯ ಆಧುನಿಕ ನಾಟಕಕಾರರು. ಮುಖ್ಯವಾಗಿ ಸಾಮಾಜಿಕ ಲಕ್ಷಣಗಳ ನಾಟಕಕಾರರು. ಇವರ ನಾಟಕಗಳು ಏಕಾಂಕಗಳಾದರೂ ಯಾವ ದೊಡ್ಡ ನಾಟಕಕ್ಕೂ ಯೋಗ್ಯತೆಯಲ್ಲಿ ಕಡಮೆಯಾದುವಲ್ಲವೆನ್ನಬಹುದು. ನಿರ್ಲಿಪ್ತವಾದ ಆಧುನಿಕ ಸಾಮಾಜಿಕ ಪ್ರಜ್ಞೆ ಮತ್ತು ಭಾವಗೀತೆಯಸತ್ವ – ಇವರ ಕೃತಿಗಳ ಸತ್ವಯುತ ಪ್ರಭಾವಕ್ಕೆ ಕಾರಣ ವಾಗಿವೆ. ಇವರ ಮೂರೂ ನಾಟಕಗಳು ರಂಗಭೂಮಿಯಮೇಲೆ ಯಶಸ್ವಿಯಾಗಿವೆ. ' ಟಿ. ಪ್ರಸನ್ನನ ಗೃಹಸ್ಥಾಶ್ರಮ 'ದ ಆರೋಗ್ಯಕರವಾದ ಧೋರಣೆ, ' ನನ್ನ ತಂಗಿಗೊಂದು ಗಂಡು ಕೊಡಿ 'ಯ ಜಗನ್ನಾಥ ಬದುಕನ್ನು ಆರೋಗ್ಯಕರವಾಗಿ ನೋಡಬೇಕೆಂಬ ಛಲವಾದಿಯಾಗಿರು ವುದು ನಾಟಕಕಾರರ ಆರೋಗ್ಯಕರ ಧೋರಣೆಯನ್ನು ಸಾರಿಹೇಳುತ್ತವೆ. ' ತೆರೆಗಳು ' (ವ್ಯಗಗಳಿಗಂಜಿದೊಡೆಂತಯ್ಯ) ಆತ್ಮಶೋಧದ ಹಲವು ಪದರಗಳ ನಾಟಕ, ಏಕಾಂಕ. ಇದರ

ನಾಯಕ ಸ್ಮರಣೆಯಿಂದ ತನ್ನ ಭೂತಕಾಲದ ಘರ್ಷಣೆಗಳನ್ನು ತನಗಾಗಿಯೇ ಪರಿಶೀಲನೆಗೆ ತಂದುಕೊಂಡು ತನ್ನ ಶಿಕ್ಷೆಯನ್ನು ತಾನೇ ವಿಧಿಸಿಕೊಳ್ಳುವುದು ಆರೋಗ್ಯಕರವಾಗಿದೆ. ಇದರಿಂದ ನಾಟಕವು ಬರಿಯ ಕಥೆಯಾಗಿರದೆ, ಸಾಧಾರಣೀಕರಣದಿಂದ ಪ್ರತಿಯೊಬ್ಬ ಪ್ರೇಕ್ಷಕನ ಅಂತರಂಗದ ನಾಟಕವಾಗಿ ಪರಿಣಮಿಸಿ ಅರ್ಥಪೂರ್ಣವಾಗುತ್ತದೆ. ಹೀಗೆ ಈ ಕೃತಿ ಅಂತರಂಗ ಬಹಿರಂಗಗಳೆರಡನ್ನೂ ವ್ಯಾಪಿಸಿಕೊಳ್ಳಬಲ್ಲ ಸತ್ವದಿಂದ ಕೂಡಿದೆ. ಇವರ ಕೃತಿಗಳನ್ನು ಪ್ರಯೋಗಗಳಿಂದ ತಿದ್ದಬೇಕಾದ ಆವಶ್ಯಕತೆಯೂ ಇಲ್ಲ. ಭಾವಗೀತೆಯಂತೆ ಚೊಕ್ಕವಾದ ಚೌಕಟ್ಟಿನಲ್ಲಿ ವಸ್ತು ನಿರ್ದೇಶನ ಯಶಸ್ವಿಯಾಗಿರುವುದು ಈ ನಾಟಕಗಳ ಹಿರಿಮೆಯೆನ್ನಬಹುದು.

ಪೂಚಂತೇ, ಮತ್ತೊಂದು ಬಗೆಯ ಆಧುನಿಕತೆಯ ನಾಟಕಕಾರರು. ಇವರಿಗೆ ಪೂರ್ವಭಾವಿಯಾದ ಒಂದು ‘ವ್ಯಕ್ತಿ ವಿಶಿಷ್ಟ ಸಿದ್ಧಾಂತ’ ವಿದೆ. ಬದುಕಿಗೆ ವ್ಯಕ್ತಿಯನ್ನು ಕೇಂದ್ರಮಾಡಿ ಅವನ ಸಕಲ ಚಟುವಟಿಕೆಯನ್ನೂ ಪ್ರಶ್ನಿಸುವ ಸಿದ್ಧಾಂತವಿರುವುದರಿಂದ ಇವರ ‘ಯಮುಳಪ್ರಶ್ನೆ’ ಒಂದು ವಿಲಕ್ಷಣಕೃತಿ. ಸಾವು ಮತ್ತು ವ್ಯಕ್ತಿ ಇದರ ವಸ್ತುವೆನ್ನಬಹುದು. ಅದಕ್ಕಿಂತಲೂ ಅವರ ಸಿದ್ಧಾಂತವೇ ವಸ್ತುವೆನ್ನಬಹುದು. ಇದರ ಶೋಧನೆಯೇ ನಾಟಕದ ರೂಪ ತಾಳಿದಂತಾಗಿದೆ. ಇದರಲ್ಲಿ ‘ಒಂದು ಕೆಟ್ಟ ಮೋಟಾರ್‌ಬೈಕ್ ಕೂಡ ರಂಗಭೂಮಿಯ ಮೇಲೆ ಒಂದು ಪಾತ್ರವಾಗಿ’ ಪರಿಣಮಿಸುತ್ತದೆ. ನಾಟಕವು ಹಂತಹಂತವಾಗಿ ಜೀವಂತವಾಗಿ ಭಯಾನಕವಾಗುತ್ತಾ ಬೆಳೆಯುತ್ತದೆ. ಇದರ ಯಶಸ್ಸು ಕಟ್ಟಿಟ್ಟ ಬುತ್ತಿ; ಬರಿಯ ಮನರಂಜನೆಯಲ್ಲ, ಪ್ರಚೋದಕ. ಇವರ ಮುಂದಿನ ನಾಟಕಗಳಿಗೆ ಕಾಯಬೇಕು.

ಈ ತರುಣರ ‘ಶೋಧನೆಯ ಜಳ’ ಪ್ರಭಾವಕಾರಿಯಾದುದಲ್ಲದೆ ಕನ್ನಡ ನಾಟಕದ ಹಾದಿಯನ್ನು ಮತ್ತೊಂದು ದಿಕ್ಕಿಗೆ ತಿರುಗಿಸುವುದಾಗಿದೆ. ಈ ಹಿಂದಿನ ನಾಟಕಕಾರರು ನಟ–ನಿರ್ದೇಶಕ–ಪ್ರೇಕ್ಷಕರಾಗುತ್ತಿದ್ದರೆ ಈ ಆಧುನಿಕರು ನಾಟಕಕಾರರೂ ಪ್ರೇಕ್ಷಕರೂ ಆಗಿ ಬೆಳೆಯುತ್ತಾರೆ. ಈ ಶೋಧನೆಯಲ್ಲಿ ಜೀವಂತ ಹಾಸ್ಯವೂ ಇದೆ; ಬದುಕಿನ ವಿಮರ್ಶೆಯೂ ಸೇರಿದೆ. ಇದರಿಂದಾಗಿ ಇಂದಿನ ಜೀವನದ ಸಂಕೀರ್ಣತೆಯನ್ನು ಹಲವು ಕೋನಗಳಿಂದ ಪರಿಶೀಲಿಸಿ ನಾಟಕದ ಜೀವಸತ್ವವನ್ನು ಹೆಚ್ಚಿಸುವ ಪ್ರಯೋಗಗಳಲ್ಲಿ ಇಂದಿನ ನಾಟಕಕಾರರು ಯಶಸ್ವಿಗಳಾಗಿರುವುದರಲ್ಲಿ ಕನ್ನಡ ನಾಟಕದ ಭವಿಷ್ಯವೂ ಇದೆ.

ಈ ಮೂವರು ತರುಣ ನಾಟಕಕಾರರೊಡನೆ ಮತ್ತೊಬ್ಬ ತರುಣರನ್ನೂ ಸೇರಿಸಬಹುದೆಂದು ತೋರುತ್ತದೆ. ‘ಶಾಪ’– ವಿ. ಎಸ್. ಕೃಷ್ಣಮೂರ್ತಿಯವರ ಏಕಾಂಕ. ಇವರಲ್ಲಿ ನಾಟಕದ ವ್ಯಂಗ್ಯಸತ್ವ ಪ್ರಚಂಡವಾಗಿದೆ. ಇನ್ನೂ ಹಸ್ತಪ್ರತಿಯಾಗಿಯೇ ಉಳಿದಿರುವುದರಿಂದ ರಂಗಭೂಮಿಯ ಮೇಲೆ ಬಂದಲ್ಲದೆ ಬಿಡಿಸಿ ಹೇಳುವಂತಿಲ್ಲ. ನೀತಿಯುತ ಧೋರಣೆಯಾದರೂ ನಿಯಮಗಳನ್ನು ಹಾದು ಬದುಕಿನ ಸಂಕೀರ್ಣತೆಯನ್ನು ನೋಡಿದಾಗ ಕಾಣಬಹುದಾದ ಭಯಾನಕ ಚಿತ್ರಣ ಒಂದು ರೂಪಕವಾಗಿದೆ.

ನಾಟಕಕಾರರೆಂದು ಕರೆಯಬಹುದಾದ ತರುಣರಲ್ಲಿ ಆರ್. ಡಿ. ಕಾಮತ್ (ಮುಂಬಯಿ), ಜಿ. ವಿ. ಕುಲಕರ್ಣಿ (ಮುಂಬಯಿ), ಚಂದ್ರಶೇಖರ ಕಂಬಾರ (ಸಾಗರ) ಮತ್ತು ಹರಿಜಿತ್ (ಬೆಂಗಳೂರು) ಇವರನ್ನು ಹೆಸರಿಸಬಹುದು. ಕಾಮತ್‌ರ ‘ಹೃದಯ ದೇಗುಲ’ ‘ಸಹ್ಯಾದ್ರಿಯ ಮಡಿಲಲ್ಲಿ’ ಮತ್ತು ‘ಕನಕನ ಕಿಂಡಿ’– ಅವರ ಪ್ರಸಿದ್ಧ ಕೃತಿಗಳು; ಸರಳಸುಂದರ ಭಾವಗೀತೆಗಳಂತೆ ನೇರವಾಗಿವೆ. ಅಭಿನಯಕ್ಕೆ ಅನುಕೂಲವಾಗಿವೆ. ಜಿ. ವಿ. ಕುಲಕರ್ಣಿ ಮತ್ತು

ಚಂದ್ರಶೇಖರ ಕಂಬಾರರ ಒಂದೊಂದು ಸಂಕಲನಗಳು ರಂಗಭೂಮಿಯನ್ನು ಕಂಡಿವೆ. ಈಚೆಗೆ ಅವರಿಂದ ನಾಟಕಗಳು ರಚಿತವಾದಂತಿಲ್ಲ. ಆದರೆ ಹರಿಜಿತ್ ನಾಟಕಗಳನ್ನು ಪ್ರಕಟಿಸುತ್ತಾ ಬಂದಿದ್ದಾರೆ. ಇವರ 'ಏರಿಳಿತ' ರಂಗಭೂಮಿಯ ಮೇಲೂ 'ಮಂಜಿನ ಮನುಷ್ಯ' ರೇಡಿಯೋದಲ್ಲೂ ಬೆಳಕು ಕಂಡಿವೆ. 'ಏರಿಳಿತ'ವಿನ್ನೂ ತೀವ್ರತೆ ಸಾಲದ ನಾಟಕವೆನ್ನಬಹುದು. ಮಂಜಿನ ಮನುಷ್ಯ ರೇಡಿಯೋದಲ್ಲೂ ಪೂರ್ಣ ಯಶಸ್ವಿಯಾದ ಕೃತಿ. ಇತ್ತೀಚೆಗೆ 'ಜೀವಚ್ಛವ' ಅಚ್ಚಾಗಿದೆ. ರಂಗಭೂಮಿಯ ಮಿತಿ ಇವರಿಗೆ ಪರಿಚಿತವಾದಂತಿದ್ದರೂ ನಾಟಕವನ್ನು ಎಷ್ಟೊಂದು ಪ್ರಬಲ ವಾಗಿ ಮಾಡಬಹುದೆಂಬುದು ಇವರಿಗೆ ಇನ್ನೂ ಸ್ಪಷ್ಟವಾದಂತಿಲ್ಲ. ನಾಟಕವನ್ನೇ ತಮ್ಮ ಮಾಧ್ಯಮ ವನ್ನಾಗಿ ಮಾಡಿಕೊಂಡಿರುವುದರಿಂದ ಗಮನಾರ್ಹರಾಗಿದ್ದಾರೆ.

ಕಾದಂಬರಿಕಾರರಾಗಿ ನಾಟಕದ ಪ್ರಕಾರಕ್ಕೆ ಕೈಯಿಟ್ಟವರಲ್ಲಿ ಚದುರಂಗ ಮತ್ತು ಶೇಷ ನಾರಾಯಣ ಈಚಿನವರು. ಕ್ರಮವಾಗಿ 'ಕುಮಾರ ರಾಮ' ಮತ್ತು 'ವಿಭೀಷಣ' ಅಚ್ಚಾಗಿರುವ ದೊಡ್ಡ ನಾಟಕಗಳು. ಇದರ ಜೊತೆಗೆ ಕೋಣಂದೂರು ಲಿಂಗಪ್ಪನವರ 'ಮಹಾನಾಯಕ ಸುಭಾಷ್ ಚಂದ್ರಬೋಸ್'- ಮುಖ್ಯವಾದುದು. 'ಮಹಾನಾಯಕ'ದಲ್ಲಿ ನೂರಾರು ಪಾತ್ರಗಳು ಬರುತ್ತವೆ, ಇದೊಂದು ಐತಿಹಾಸಿಕ ಚಿತ್ರಣವೂ ಆಗಿರುವುದರಿಂದ ಪ್ರಯೋಗವೇನೂ ಸುಲಭ ಸಾಧ್ಯವಲ್ಲ. ನಾಟಕ ಮೂರು ರಾಷ್ಟ್ರಗಳ ಹಿನ್ನೆಲೆಯಲ್ಲಿ ಜರುಗುತ್ತದೆ. ಇದು ರಂಗಭೂಮಿಯ ಮೇಲೆ ಯಶಸ್ವಿ ಯಾದರೆ ಮಹಾನಾಟಕವೂ ಆಗಬಹುದಾಗಿದೆ! ಅಂತಹ ಚಾರಿತ್ರಿಕ ಹಿನ್ನೆಲೆ ಒಳಗೂ ಹೊರಗೂ ಇವರಲ್ಲಿದೆ. ಓದಿದಾಗ ಈ ನಾಟಕ ದೊಡ್ಡ ಆಸೆಯನ್ನೇನೂ ಮೂಡಿಸುವುದಿಲ್ಲ. ಆದರೆ ತ. ರಾಸು ಅವರ 'ರಕ್ತರಾತ್ರಿ' ಕಾದಂಬರಿಯು 'ಮೃತ್ಯುಸಿಂಹಾಸನ' ಎಂದು ದೊಡ್ಡ ನಾಟಕವಾಗಿದೆ. ರಂಗಭೂಮಿಯ ಮೇಲೆ ಎರಡು ಬಾರಿ ಪ್ರಯೋಗವೂ ಆಗಿದೆ. ಇದು ಯಶಸ್ವಿಯಾದರೂ ಎರಡು ಕಾದಂಬರಿಗಳ ನಡುವಿನ ಕಥೆಯಾದ ಕಾರಣ ಪೂರ್ಣವಾಗದೆ ಭಾವಾತಿರೇಕದಿಂದ ಬೀಭತ್ಸವೂ ಆಗಿ ನಿಲ್ಲುತ್ತದೆ. ಉಳಿದ ವಿಚಾರಗಳಲ್ಲಿ ಇದೊಂದು ಉತ್ತಮ ಕೃತಿಯಾಗಿದೆ. ಹೀಗೆಯೇ ಮ್ಮೆ. ಸು. ಶೇ. ಯವರ ಚಂದ್ರ ಚಕೋರಿಯಾಗಿದೆ. ಇದು ಆರೇಳು ಬಾರಿ ರಂಗಭೂಮಿಯನ್ನು ಕಂಡಿದೆ. ಕಾದಂಬರಿಕಾರರ ನಾಟಕಗಳಲ್ಲಿ ಸಹಜವಾಗಿ ರಚನಾದೌರ್ಬಲ್ಯ ಕಾಣಿಸಿಕೊಳ್ಳುತ್ತದೆ. ಆದರೆ ವಸ್ತು ವೈವಿಧ್ಯ ಇವರ ಕಾಣಿಕೆಯೆನ್ನಬಹುದು. ಅದರಿಂದ ನಾಟಕವೂ ಒಂದು ಕಾದಂಬರಿ ಯಂತಾಗಿರುತ್ತದೆ.

ಮನೋಹರ ಗ್ರಂಥಮಾಲಾದವರು ಪ್ರಕಟಿಸಿರುವ 'ಸಂಗ್ಯಾ ಬಾಳ್ಯಾ' ಒಂದು ಉದ್ಧಾರಿತ ಜಾನಪದ ನಾಟಕವೆನ್ನಬಹುದು. ಇದನ್ನು ಚಂದ್ರಶೇಖರ ಕಂಬಾರ ಮತ್ತು ಕೀರ್ತಿನಾಥ ಕುರ್ತ ಕೋಟಿಯವರು ಸಂಪಾದಿಸಿದ್ದಾರೆ. ಉತ್ತರ ಕರ್ನಾಟಕದ ಜಾನಪದ ನಾಟಕವಾಗಿ ಇದು ಒಂದು ಆಶ್ಚರ್ಯಕರ ಕೃತಿಯಾಗಿರುವುದಲ್ಲದೆ ಒಂದು 'ಸಂಪ್ರದಾಯ'ವೆನ್ನಬಹುದಾಗಿದೆ. ಅನಾಮ ಧೇಯರ 'ಕದಡಿದ ನೀರು' ಮನೋಹರ ಗ್ರಂಥಮಾಲೆಯಿಂದ ಪ್ರಕಟವಾಗಿ ದೆಹಲಿಯಲ್ಲಿ ಕನ್ನಡ ಪ್ರೇಮಿಗಳಿಂದ ರಂಗಭೂಮಿಯ ಮೇಲೆ ಪ್ರಯೋಗವಾಗಿದೆ. ಗೀತನಾಟಕಗಳ ಸಂಪ್ರದಾಯ ಕನ್ನಡ ದಲ್ಲಿ ಪ್ರಸಿದ್ಧವಾಗಿದೆ. ಪುತಿನರವರ ಕೃತಿಗಳು ಒಟ್ಟಿಗೆ ಸಂಗ್ರಹವಾಗಿ ಅವರಿಗೆ ರಾಷ್ಟ್ರಪ್ರಶಸ್ತಿಯನ್ನೂ ತಂದುಕೊಟ್ಟಿವೆ. ಗ್ರೀಕ್ ನಾಟಕಗಳ ಅನುವಾದ ಇಂದಿಗೂ ನಡೆಯುತ್ತಿದೆ. ಇದರಲ್ಲಿ ಹಳಗನ್ನಡ ರೂಪದಲ್ಲಿ 'ಅಂತಿಗೊನೆ'ಯಂತೆ 'ಬದ್ಧ ಪ್ರೊಮೀಥಿಯಸ್'- ಟಿ. ವೆಂಕಟಾಚಲಶಾಸ್ತ್ರಿಗಳಿಂದ ರಚಿತವಾಗಿದೆ. ಹೀಗೆಯೇ ಸುಜನಾರವರ ಅನುವಾದಗಳಿವೆ. ಆದರೆ ಕೆ. ಎಸ್. ನರಸಿಂಹಸ್ವಾಮಿ

ಯವರ 'ಮೀಡಿಯ' ಹೊಸಗನ್ನಡದ ಒಂದು ಸುಂದರ ಅನುವಾದವಾಗಿದೆ. ಭಾಷೆಯ ಸರಳ ಬೆಡಗಿನಿಂದ ಇದು ಹಿಂದಿನ ಈ ಬಗೆಯ ಅನುವಾದಗಳನ್ನೆಲ್ಲಾ ಹಿಂದಿಕ್ಕಿದೆಯೆನ್ನಬಹುದು. ಇದೊಂದು ರಂಗಭೂಮಿಯ ಪ್ರಯೋಗಕ್ಕೆ ಅನುಕೂಲವಾದ ಕೃತಿಯಾಗಿದೆ.

ಹಳೆಯ ನಾಟಕಗಳಾದರೂ ಹೊಸರೀತಿಯಲ್ಲಿ ಬೆಂಗಳೂರಿನ ರಂಗಭೂಮಿಯ ಮೇಲೆ ಕಾಣಿಸಿಕೊಂಡ ಯಶಸ್ವಿ ಪ್ರಯೋಗಗಳನ್ನು ಗಮನಿಸಿದಾಗ ಕುವೆಂಪು ಕೃತಿಗಳು ಮುಖ್ಯವಾಗಿವೆ. 'ಬಿರುಗಾಳಿ'- ಸಾಧನ ಕಲಾವಿದರಿಂದ 'ರಕ್ತಾಕ್ಷಿ' ಸೆಕ್ರಟೇರಿಯೆಟ್ ಕ್ಲಬ್ಬಿನವರಿಂದ ಮತ್ತು 'ವಾಲ್ಮೀಕಿಯ ಭಾಗ್ಯ' ಮೆಡಿಕಲ್ ಕಾಲೇಜ್ ವಿದ್ಯಾರ್ಥಿಗಳಿಂದ ಬೆಳಕಿಗೆ ಬಂದಿವೆ. ಇಂತಹ ಪುನರುದ್ಧಾರಕ್ಕೆ ಪಾಶ್ಚಿಮಾತ್ಯ ಸಂಸ್ಥೆಗಳು ಬೆಂಗಳೂರಿನಲ್ಲಿ ಷೇಕ್ಸ್‌ಪಿಯರ್ ಮೊದಲಾದವರ ಕೃತಿಗಳನ್ನು ಪ್ರದರ್ಶಿಸುತ್ತಾ ಬಂದಿರುವುದು ಒಂದು ಮುಖ್ಯ ಕಾರಣವೆನ್ನಬಹುದು.

ಪಾಕಿಸ್ಥಾನದೊಡನೆ ಮತ್ತು ಚೀಣದೊಡನೆ ನಡೆದ ಯುದ್ಧಗಳ ಕಾರಣವಾಗಿ ಕೆಲವು ನಾಟಕಗಳು ಹುಟ್ಟಿಕೊಂಡವು, ರಂಗಭೂಮಿಯನ್ನು ಕಂಡುವು. ಇವುಗಳಲ್ಲಿ ಎಚ್. ಕೆ. ರಂಗನಾಥರ 'ಜಾಗೃತ ಭಾರತೀ' ಮತ್ತು ಸಿದ್ದಯ್ಯ ಪುರಾಣಿಕರ 'ಭಾರತವೀರ' ಮುಖ್ಯವೆನ್ನಬಹುದು. ದೇಶಪ್ರೇಮವೇ ಮುಖ್ಯ ವಸ್ತುವಾದ ಈ ಕೃತಿಗಳು ರಂಗಭೂಮಿಯ ಮೇಲೆ ಯಶಸ್ವಿಯಾಗಿವೆ. ರೇಡಿಯೋ ನಾಟಕವಾಗಿ ಬಂದ ನಿರಂಜನರ 'ಪಾಪಾಸುಗಳ್ಳಿ'ಯಂತೆ ಪ್ರಸಾರಿತವಾದ ನಾಟಕಗಳಲ್ಲಿ 'ಹಳದಿಮಿಡತೆ' (ಎಂ. ನಾಗರಾಜ್) ಮತ್ತು 'ಚೈನಾಪಿಶಾಚಿ'ಯನ್ನು ಹೆಸರಿಸಬಹುದು. ತರುಣಕವಿ ನಿಸ್ಸಾರ್ ಅಹಮದ್‌ರಿಂದ ರಚಿತವಾದ 'ಆತ್ಮಾರ್ಪಣೆ' ಎಂಬ ಗೀತರೂಪಕ ಪ್ರಸಾರವಾಗಿದೆ.

* * * *

ಪ್ರಯೋಗಶೀಲತೆಯೇ ಮುಖ್ಯ ಗುಣವಾದ ಕೃತಿಗಳಿಗೆ ಜಿ. ವಿ. ಶಿವಾನಂದ್ ಗಮನಾರ್ಹರು. ಇವರ 'ಬೆಂಬಿಡದ ಭೂತ' ಒಂದು ಪತ್ತೇದಾರಿ ಪ್ರಯೋಗವಾದರೆ 'ಭ್ರಮೆ' ಅನುವಾದವಾದರೂ ಒಂದು ಕಠಿಣ ಪ್ರಯೋಗವಾಗಿರುವಂತೆಯೇ ದಾರುಣ ಚಿತ್ರವೂ ಆಗಿದೆ. ಸರಳವಾದ ಆಧುನಿಕ ಸಿದ್ಧತೆಯಿಂದ ಪ್ರಯೋಗ ನಡೆಸುವುದರಲ್ಲಿ ಜಿ. ವಿ. ಶಿವಾನಂದ್ ಒಳ್ಳೆಯ ನಟರೂ ಆಗಿ, ಪ್ರಸಿದ್ಧರಾಗಿದ್ದಾರೆ. ಈಚೆಗೆ ಇವರು ಕೈಲಾಸಂರ 'ಬಹಿಷ್ಕಾರ'ವನ್ನು ಅಭಿನಯಿಸಿದರು. ನಮ್ಮ ರಂಗಭೂಮಿಯ ಬಡತನಕ್ಕೆ ಇವರ ಪ್ರಯೋಗಗಳು ಹೊಸ ಆಸೆಯನ್ನುಂಟುಮಾಡುತ್ತಿವೆಯೆನ್ನಬಹುದು. ಇವರೊಡನೆ 'ಸಮುಯಕ್ಕೊಂದ್ಸುಳ್ಳು' ಎಂಬ ಕೆ. ಎಸ್. ಸುಬ್ಬನರಸಿಂಹ-ಪ್ರಹಸನ ಒಂದು ಹೊಸ ಹಾದಿಯನ್ನು ಹಿಡಿಯುತ್ತದೆ.

ಮಕ್ಕಳ ರಂಗಭೂಮಿ ಕನ್ನಡದಲ್ಲಿ ಯಾವ ರೂಪವನ್ನೂ ತಾಳಿಲ್ಲವೆನ್ನಬಹುದು. ಆದರೆ ಕೆಲವು ನಾಟಕಗಳಿವೆ. ಕುವೆಂಪುರವರ 'ನನ್ನ ಗೋಪಾಲ' ಒಂದು ಒಳ್ಳೆಯ ಕೃತಿ. ಹೀಗೆಯೇ ಕೆ. ವಿ. ಅಯ್ಯರ್‌ರವರ 'ಚೇಳು ಅಜ್ಜ ಚೇಳು', ಬೇಂದ್ರೆಯವರ 'ಜಾತ್ರೆ' ಮುಂತಾದುವಲ್ಲದೆ ಮಕ್ಕಳ ಸಹಯೋಗದಿಂದ ಪ್ರಯೋಗ ನಡಸಿದ ನಾಟಕಗಳೂ ಇವೆ. ಪಾಂಡುರಂಗರಾಯರ 'ತಾಯಿಯೇ ದೇವರು' ಮತ್ತು ಇತರ ಕಿರುನಾಟಕಗಳು ಈಚೆಗೆ ಅಚ್ಚಾಗಿವೆ. 'ಸುಧಾ' ವಾರ

ಪತ್ರಿಕೆಯಲ್ಲಿ ಬಂದ ಕಮಲಾ ಸುಬ್ರಹ್ಮಣ್ಯಂ ಅವರ 'ನವಿಲುಗರಿ' ಒಂದು ಶ್ರೇಷ್ಠ ಮಕ್ಕಳ ನಾಟಕ. ಈಚೆಗೆ ಸಿ. ಎನ್. ಲಕ್ಷ್ಮೀದೇವಿಯವರ 'ಮಕ್ಕಳ ಮೂರು ನಾಟಕಗಳು' ಪ್ರಕಟವಾಗಿದೆ. ಇದರಲ್ಲಿ 'ನರವಾನರ', 'ನಾಯಕಪಟ್ಟ' ಮತ್ತು 'ಪರೋಪಕಾರಿ' ಎಂಬ ಕೃತಿಗಳು ಮಕ್ಕಳ ಅಭಿನಯಕ್ಕೆ ಸಾಕಷ್ಟು ಸರಳವಾಗಿ ರಮ್ಯವಾಗಿವೆ.

ವೃತ್ತಿರಂಗಭೂಮಿ ಇಂದಿಗೆ ಬರಿಯ ತಡಿಕೆಯ ರಂಗಮಂದಿರಗಳ ರೂಪದಲ್ಲಿ ಗತ ವೈಭವವನ್ನು ನೆನಪಿಗೆ ತರುತ್ತಿದೆ. ಅದರ ನಟನಟಿಯರು ಹೆಚ್ಚಾಗಿ ಸಿನಿಮಾದವರೇ ಆಗಿದ್ದಾರೆ. ಒಂದೆರಡು ಹಳೆಯ ಸಾಮಾಜಿಕ ಮತ್ತು ಐತಿಹಾಸಿಕ ನಾಟಕಗಳು ಆಗಾಗ್ಗೆ ಪ್ರದರ್ಶನವಾಗುತ್ತವೆಯಾದರೂ ಯಾವುದೊಂದು ಹಳೆಯ ನೆನಪು ತರುವಂತಹುದೇ ಆಗಿದೆಯಷ್ಟೆ. ಇಂತಹ ಗತ ವೈಭವದ ಇತಿಹಾಸವನ್ನು ಚಿತ್ರಿಸುವಂತೆ 'ಸುಧಾ' ಪತ್ರಿಕೆ ಹಳೆಯ ನಟರಿಂದ ಬಣ್ಣದ ಬದುಕಿನ ಚಿತ್ರಣಗಳನ್ನು ಪ್ರಕಟಿಸುತ್ತಾ ಬಂದಿದೆ. ಈಚೆಗೆ ಇವುಗಳೇ ಪುಸ್ತಕ ರೂಪದಲ್ಲಿ ಬರುತ್ತಿವೆ. ಸಿ. ಬಿ. ಜಯರಾಯರ 'ಬಣ್ಣದ ಬದುಕು' ಬೆಳಕಿಗೆ ಬಂದಿದೆ. ಮುಂದಾಜಿಯ ರಂಗನಾಥ ಭಟ್ಟರು ತಮ್ಮ ಕಥೆಯನ್ನು ಹೀಗೆಯೇ ಬರೆದುಕೊಂಡಿದ್ದಾರೆ. ನಾಗೇಂದ್ರರಾಯರು, ಗುಬ್ಬಿ ವೀರಣ್ಣನವರು, ತಮ್ಮ ಕಥೆಗಳನ್ನು ಹೇಳಿದ್ದಾರೆ. ಈಚೆಗೆ ಯಕ್ಷಗಾನದ ಬಣ್ಣದ ಬದುಕಿನ ಪುಟಗಳೂ ಬರುತ್ತಿವೆ. 'ರಂಗಭೂಮಿ ಕಲಾವಿದರು'–ಎಂಬ ನಟ ನಟಿಯರ ಪರಿಚಯದ ಕೃತಿಯನ್ನು ಹ. ವೆಂ. ಸೀತಾರಾಮಯ್ಯನವರು ಪ್ರಕಟಿಸಿದ್ದಾರೆ. ರಂಗಭೂಮಿಯ ಸುಪ್ರಸಿದ್ಧ ಬರಹಗಾರರಾಗಿದ್ದ ಬಿ. ಪುಟ್ಟಸ್ವಾಮಯ್ಯನವರು 'ಬಿಡುಗಡೆಯ ಬಿಚ್ಚುಗತ್ತಿ' ಎಂಬ ಐತಿಹಾಸಿಕ ನಾಟಕವನ್ನು ರಚಿಸಿಕೊಟ್ಟಿದ್ದಾರೆ. ಏನಾದರೂ ನಮ್ಮ ಹಳೆಯ ವೃತ್ತಿರಂಗಭೂಮಿ 'ಲಂಚಾವತಾರ'ದಿಂದ ತನ್ನ ಕೊನೆಯ ಹಾಡನ್ನು ಹಾಡಿಕೊಳ್ಳುತ್ತಿದೆ.

ಇಂದು ಕನ್ನಡ ನಾಟಕ ಮತ್ತು ಕನ್ನಡ ರಂಗಭೂಮಿ–ಇರುತ್ತವೆಯೆಂದು ಹೇಳಿಕೊಳ್ಳಲು ವಿಲಾಸೀ ರಂಗಭೂಮಿಯೊಂದೇ ಉಳಿದಿದೆ ಅಥವಾ ಉಳಿಯಲು ಹೆಣಗುತ್ತಿದೆ ಎನ್ನಬಹುದು. ಇಂದಿನ ನಟನಿಗೆ ಬದುಕಿನ ಭರವಸೆಯಿಲ್ಲ. ಅವನ ವೃತ್ತಿ ಬೇರೆ ವಿಲಾಸ ಬೇರೆ ಆಗಿವೆ. ನಮ್ಮ ಸಾಮಾನ್ಯ ಜನತೆ ಸಿನಿಮಾ ಮಂದಿರಗಳನ್ನು ಬಯಸುವಂತೆ ರಂಗಮಂದಿರವನ್ನು ಇಚ್ಛಿಸುವುದಿಲ್ಲ. ನಮ್ಮ ಕನ್ನಡ ರಂಗಭೂಮಿಗೆ ನಮ್ಮದೆನ್ನುವ ಒಂದು ರಂಗಮಂದಿರವಿಲ್ಲ; ಬಯಲು ಕೂಡ ಇಲ್ಲ. ಕನ್ನಡ ನಾಟಕದ ಹೊಣೆ ಹೊತ್ತಿರುವ ಏಕೈಕ ಸಂಸ್ಥೆ ನಾಟ್ಯ ಸಂಘ–ಥಿಯೇಟರ್ ಸೆಂಟರ್ (ಮೈಸೂರು)–ಇದಕ್ಕೆ ಸ್ವಂತ ಮಂದಿರವಿಲ್ಲ, ಪ್ರಯೋಗಗಳಿಗೆ ಬೇಕಾದ ಒಂದು ಸಣ್ಣ ರಂಗಮಂದಿರವೂ ಇಲ್ಲ.

ನಮ್ಮ ವಿಲಾಸೀ ಸಂಸ್ಥೆಗಳು ಹೆಸರಿಗೆ ಸಾಕಷ್ಟಿವೆ. ಕೆಲವು ಪ್ರಸಿದ್ಧವಾದುವು ಈಚೆಗೆ ನಾಟಕವಾಡಿ ಕಡೆಯಪಕ್ಷ ಎರಡು ವರ್ಷಗಳೇ ಆಗಿರಬಹುದು. ಇಂಥವುಗಳ ಚರಿತ್ರೆಯನ್ನು 'ರಘುಸುತ'ರು ೧೯೫೮ರ ವೇಳೆಗೇ ವಿಚಾರಿಸಿ ಲೇಖನಗಳನ್ನು ಪ್ರಕಟಿಸಿದರು. 'ಸ್ಟೇಜಬಲ್ ಪ್ಲೇಸ್ ಇನ್ ಇಂಡಿಯನ್ ಲ್ಯಾಂಗ್ವೇಜಸ್, ಎಂಬ ಸಿ. ಸಿ. ಮೆಹತಾ–ಎಂಬುವರು ಎರಡು ಭಾಗಗಳಲ್ಲಿ ಪ್ರಕಟಿಸಿದ್ದಾರೆ. ಇದರ ಎರಡನೇ ಭಾಗದಲ್ಲಿ ಶ್ರೀರಂಗರ ಪ್ರಯತ್ನದಿಂದ ಕನ್ನಡ ನಾಟಕಗಳ ಒಂದು ಪಟ್ಟಿಯು ಸೇರಿದೆ. ಇಂತಹ ಪಟ್ಟಿಯೊಂದು ಕನ್ನಡದಲ್ಲಿ ಕೂಡ ಇರುವುದಿಲ್ಲ.

ಅದೃಷ್ಟವಶಾತ್ 'ರವೀಂದ್ರ ಕಲಾಕ್ಷೇತ್ರ' ವೆಂಬ ರಂಗಮಂದಿರವನ್ನು ಕಟ್ಟಲಾಗಿದೆ. ಆದರೆ ಧ್ವನಿ ಪ್ರತಿಧ್ವನಿಗಳನ್ನು ಪರೀಕ್ಷಿಸದೆ ಕಟ್ಟಿದ ಕಾರಣವಾಗಿ ಎಷ್ಟೊಂದು ಉಪಯೋಗಕರ

ವಾಗಬೇಕಿತ್ತೋ ಆಗಿಲ್ಲ. ಇದರ ಮೇಲ್ವಿಚಾರಕರಿಗೆ ರಂಗಮಂದಿರದ ಅವಶ್ಯಕತೆಯ ಅರಿವೇ ಇಲ್ಲದಂತೆ ಬಳಸುವವರ ಅನುಭವಕ್ಕೆ ಪೆಟ್ಟು ತಾಕುತ್ತಲೇ ಇದೆ. ನಮ್ಮ ಬಡವಿಲಾಸೀ ರಂಗ ಸಂಸ್ಥೆಗಳು ಇದರ ಒಂದು ದಿನದ ಬಾಡಿಗೆಯನ್ನೂ ಕೊಡಲಾರವು.

ನಮ್ಮ ವಿಲಾಸೀ ಸಂಸ್ಥೆಗಳಲ್ಲಿ ತನ್ನದೇ ಆದ ಒಂದು ಪುಟ್ಟ ರಂಗಮಂದಿರವನ್ನುಳ್ಳ ಎರಡು ಮೂರು ನೂರು ಕಲಿತ ಪ್ರೇಕ್ಷಕರನ್ನುಳ್ಳ ಸಂಸ್ಥೆಯಾದ 'ರವಿ ಕಲಾವಿದರು' ಪ್ರಸಿದ್ಧವಾಗಿದೆ. ಮಾಸ್ತಿ ವೆಂಕಟೇಶಯ್ಯಂಗಾರ್ಯರ 'ಕಾಕನಕೋಟೆ' ರಂಗಭೂಮಿಯನ್ನು ಕಂಡುದು ಇಲ್ಲಿ. ಈಚೆಗೆ ಪು. ಲ. ದೇಶಪಾಂಡೆಯವರ ಮರಾಠಿ ನಾಟಕಗಳನ್ನು ಕನ್ನಡಿಸಿಕೊಂಡು ಮೆರೆಸಿದ್ದಾರೆ- ಒಂದು 'ವಿಠ್ಠಲ ಬಂದ,' ಏಕಾಂಕವಾದರೆ 'ತನು ನಿನ್ನದು ಮನ ನಿನ್ನದು' ಎಂಬ ದೊಡ್ಡ ನಾಟಕ ಎರಡನೆಯದು. ಸುಮಾರು ಇಪ್ಪತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿರುವ ಈ ಸಂಸ್ಥೆ ಮಡಿವಂತವಾಗಿಯೂ ಉಳಿದಿದೆ.

ಕನ್ನಡ ನಾಟಕಗಳೂ ಕನ್ನಡ ರಂಗಭೂಮಿಯೂ ಉಳಿಯಬೇಕಾದರೆ ಆಧುನಿಕ ರಂಗ ಮಂದಿರಬೇಕು. ನಮ್ಮ ವಿಲಾಸೀ ಸಂಸ್ಥೆಗಳೆಲ್ಲವೂ ಒಂದಾಗಬೇಕು. ಒಬ್ಬರಿಗೊಬ್ಬರಿಗೆ ನೆರವಾಗಬೇಕು. ಆಧುನಿಕ ಪ್ರೇಕ್ಷಕರಿಗೆ ತಕ್ಕಂತೆ ಶ್ರೇಷ್ಠಮಟ್ಟದ ಕಲಾತ್ಮಕ ಕೃತಿಗಳ ಪ್ರದರ್ಶನವನ್ನು ನೀಡಬೇಕು. ಇದಕ್ಕೆ ಒಳ್ಳೆಯ ನಿರ್ದೇಶಕರು ಬೇಕು. ಇಂತಹ ಬೇಕುಗಳ ಪಟ್ಟಿಯಿಂದ ನಮ್ಮ ಕನ್ನಡ ರಂಗಭೂಮಿ ಗರಿಬಿಚ್ಚಬೇಕು.




---

# ಭಾರತೀಯ ಗ್ರಂಥಸಂಪಾದನ ಪರಿಚಯ

**ಮೂಲ: ಡಾ. ಎಸ್. ಎಂ. ಕತ್ರೆ**

**ಅನುವಾದ: ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ**

(ಹಿಂದಿನ ಸಂಚಿಕೆಯಿಂದ)

## ಅಧ್ಯಾಯ VII : ಗ್ರಂಥಸಂಪಾದನೆಯ ಕೆಲವು ಸೂತ್ರಗಳು

ಹಸ್ತಪ್ರತಿಗಳೇನಿದ್ದರೂ ಮಾನವರಿಂದ ಲಿಖಿತವಾದವು. ಆದ್ದರಿಂದ ಅವು ಕೆಲವು ಮಿತಿಗೊಳಪಟ್ಟಿರುವುದು ಸಹಜ. ಅಂಥ ಲೇಖನಗಳನ್ನು ಆಧಾರವಾಗಿಟ್ಟುಕೊಂಡು ವಿಚಾರ ಮಾಡುವವರಿಗೆ ವಿಶಿಷ್ಟರೀತಿಯ ಸಮಸ್ಯೆಗಳು ಎದುರಾಗುತ್ತವೆ. ಈ ಸಮಸ್ಯೆಗಳನ್ನು ಪರಿಹರಿಸಲು ಸಂಪಾದಕನು ವ್ಯವಸ್ಥಿತ ರೀತಿಯಲ್ಲಿ ಮಾಡುವ ಕೌಶಲ್ಯಪೂರ್ಣವಾದ ಸಾಮಾನ್ಯ ವಿವೇಚನೆ ವಾಸ್ತವವಾಗಿ ಒಂದು ಕಲೆ. ಗ್ರಂಥಸಂಪಾದನೆ ಇಂಥ ಒಂದು ಕಲೆ ಎಂಬುದು ಕಳೆದ ಅಧ್ಯಾಯಗಳ ವಿವರಗಳಿಂದ ಈಗ ಸ್ಪಷ್ಟವಾಗಿದೆ. ಆದ್ದರಿಂದ ನಮಗೆ ತಿಳಿದಿರುವ ಸ್ಖಾಲಿತ್ಯರೂಪಗಳ ಅಥವಾ ಸ್ವೇಚ್ಛಾಪ್ರಯೋಗಗಳ ಆಧಾರದ ಮೇಲೆ ರೂಪುಗೊಂಡು 'ಸಂಪಾದನಾ ವಿಧಿ' ಗಳು ಎನ್ನಿಸಿಕೊಂಡಿರುವ ಸಾಮಾನ್ಯ ಸೂತ್ರಗಳನ್ನು ಬಳಸುವಾಗ ಸಂಪಾದಕನು ಅವುಗಳ ಪ್ರಯೋಜನದ ಮಿತಿಗಳನ್ನು ತಿಳಿದಿರಬೇಕು.

'ಕಷ್ಟತರ ಪಾಠಕ್ಕೇ ಹೆಚ್ಚಿನ ಪ್ರಾಶಸ್ತ್ಯ'—ಇದು ಎಲ್ಲರೂ ಅಂಗೀಕರಿಸಿರುವ ಸೂತ್ರಗಳಲ್ಲಿ ಒಂದು. ಇದನ್ನೇ ಪಾರಿಭಾಷಿಕವಾಗಿ 'ಕಷ್ಟಪಾಠ' (Lectio difficilior) ಎಂದು ಕರೆಯುತ್ತಾರೆ. ಅರ್ಥವನ್ನು ಹೆಚ್ಚು ಪ್ರಿಯವಾಗಿಸುವ ಉದ್ದೇಶದಿಂದ ಲಿಪಿಕಾರನು ಮಾತೃಕೆಯಲ್ಲಿರುವ ಪಾಠವನ್ನು ಬೇಕೆಂದೇ ಬದಲಾಯಿಸುವುದು ಸಾಮಾನ್ಯ. ಇಂಥ ಪ್ರಸಂಗಗಳಲ್ಲಿ—ಎಲ್ಲ ಪ್ರಸಂಗಗಳಲ್ಲಿ ಅಲ್ಲದಿದ್ದರೂ ಹೆಚ್ಚಿನವಕ್ಕೆ—ಈ ಸೂತ್ರ ಅನ್ವಯವಾಗುತ್ತದೆ. ಆಕಸ್ಮಿಕ ಸ್ಖಾಲಿತ್ಯದ ಹೊರತು ಇಂಥ ಉದ್ದಿಷ್ಟ ವ್ಯತ್ಯಾಸಗಳು ಸಾಮಾನ್ಯವಾಗಿ ತಿಳಿದುಹೋಗುತ್ತವೆ. ಆದರೆ ಆಕಸ್ಮಿಕ ಸ್ಖಾಲಿತ್ಯಕ್ಕೆ ಈ ಸೂತ್ರ ಅನ್ವಯವಾಗುವುದಿಲ್ಲ. ಏಕೆಂದರೆ ಆಕಸ್ಮಿಕ ಸ್ಖಾಲಿತ್ಯದಿಂದಾದ ಪಾಠವು—ಅದೇನಾದರೂ ಅರ್ಥವಾಗುವಂತಿದ್ದಲ್ಲಿ—ನಿಜವಾದ ಪಾಠಕ್ಕಿಂತಲೂ ಕಷ್ಟವಾಗಿರಬಹುದು. ಮಹಾಭಾರತದ ಪರಂಪರಾಗತ ಪಾಠದಲ್ಲಿ ಕಂಡುಬರುವ ಬಹುಸಂಖ್ಯೆಯ ವ್ಯತ್ಯಸ್ತರೂಪಗಳು ಈ ಜಾತಿಗೆ ಸೇರಿದವು. ಪಾಠಸಂಪಾದನೆಯ ಸಾಮಾನ್ಯ ವಿಧಾನಗಳಿಂದ ಸುಲಭವಾಗಿ ವಿವರಿಸಲಾಗದ ಈ ಪಾಠಾಂತರಗಳೆಲ್ಲ ಕಷ್ಟಪಾಠದಿಂದಾಗಿ ಆದಂಥವು. ಈ ಕಷ್ಟಪಾಠವು

ಒಂದು ಪ್ರಾಚೀನ ಪ್ರಯೋಗವೋ, ಭಾಷಾರೂಢಿಯೋ ಅಥವಾ ನಿರ್ದಿಷ್ಟಪ್ರತಿಯ ರಚನೆಯ ಕಾಲಕ್ಕಾಗಲೇ ಅಳಿಸಿಹೋದ ವಿಶಿಷ್ಟರಚನೆಯೋ ಆಗಿರಬಹುದು. ಪ್ರಯೋಗದಲ್ಲಾಗಿರುವ ವ್ಯತ್ಯಾಸವು ಅವುಗಳನ್ನು ಪಾಠದಿಂದ ಹೊರಹಾಕಲು ಕಾರಣವಾಗಿರುತ್ತದೆ.

ಹಸ್ತಪ್ರತಿಗಳ ನಡುವಿನ ವಂಶಸಂಬಂಧಕ್ಕೆ ಸೇರಿದಂತೆ ಒಂದು ಸೂತ್ರವಿದೆ. "ಭಿನ್ನ ಪಾಠಾಂತರಗಳನ್ನು ಹೋಲಿಸುವಾಗ ಹೆಚ್ಚು ಹಸ್ತಪ್ರತಿಗಳ ಗುಂಪು ಪ್ರಾಚೀನವಾದ ಪಾಠವನ್ನು ಪ್ರತಿನಿಧಿಸುತ್ತದೆ; ಕಿರಿಯ ಗುಂಪಿನ ಪಾಠಭಿನ್ನತೆ ಈಚಿನದಾಗಿರುತ್ತದೆ." ಇದನ್ನು ಒಂದು ಸಂಖ್ಯಾತ್ಮಕ ನಿದರ್ಶನದಿಂದ ತಿಳಿಯಬಹುದು. ಇಪ್ಪತ್ತು ಹಸ್ತಪ್ರತಿಗಳ ಸಮೂಹದಲ್ಲಿ ಭಿನ್ನಪಾಠಾಂತರಗಳ ಫಲವಾಗಿ ಒಂಬತ್ತು ಹಸ್ತಪ್ರತಿಗಳು ಒಂದು ಗುಂಪೂ ಹನ್ನೊಂದು ಹಸ್ತಪ್ರತಿಗಳು ಮತ್ತೊಂದು ಗುಂಪೂ ಆಗುತ್ತವೆ ಎನ್ನೋಣ. ಆಗ ಹನ್ನೊಂದು ಪ್ರತಿಗಳಿಗೆ ಸಾಮಾನ್ಯವಾದ ಮೂಲಪ್ರತಿಯಲ್ಲಿ ಒಂದು ಪಾಠಾಂತರವೂ ಒಂಬತ್ತು ಹಸ್ತಪ್ರತಿಗಳಿಗೆ ಸಾಮಾನ್ಯವಾದ ಮೂಲದಲ್ಲಿ ಮತ್ತೊಂದು ಪಾಠಾಂತರವೂ ಇದ್ದಿತೆಂದು ಹೇಳಬಹುದು. ಈ ಪಾಠ ಭಿನ್ನತೆಯನ್ನು ಹಿಡಿದುಹೋದರೆ ಅವು ನಮ್ಮನ್ನು ಭಿನ್ನಪಾಠಶಾಖೆಗಳು ಆರಂಭವಾದ ಘಟ್ಟಕ್ಕೆ ಕೊಂಡೊಯ್ಯುತ್ತವೆ. ಪುನಃ ಈ ಒಂಬತ್ತು ಹಸ್ತಪ್ರತಿಗಳನ್ನು ವಿಂಗಡಿಸಿದರೆ ಅವುಗಳಲ್ಲಿ ಹನ್ನೊಂದು ಪ್ರತಿಗಳಿಂದ ಬೇರೆಯಾಗಿರುವ ನಾಲ್ಕು ಪ್ರತಿಗಳ ಒಂದು ಗುಂಪೂ ಐದು ಪ್ರತಿಗಳ ಇನ್ನೊಂದು ಗುಂಪೂ ಕಂಡುಬರಬಹುದು. ಪ್ರತಿಶ್ರೇಣಿಯ ಆರಂಭದ ಭಾಗದಲ್ಲಿ ಈ ನಾಲ್ಕು ಮತ್ತು ಐದರ ಗುಂಪಿನ ಸದ್ಯಪೂರ್ವಪ್ರತಿಗಳು (immediate ancestors) ಒಂಬತ್ತು ಪ್ರತಿಗಳ ಸಾಮಾನ್ಯ ಮೂಲದಿಂದ ಪ್ರತ್ಯೇಕಗೊಂಡುದನ್ನು ಇದು ಸೂಚಿಸುತ್ತದೆ. ಭಿನ್ನಪಾಠ ಸಂತತಿಗಳು ಒಂದರಿಂದೊಂದು ಸ್ವತಂತ್ರವಾಗಿದ್ದು ವಿಮರ್ಶಾತ್ಮಕ ಪರಿಷ್ಕರಣಕ್ಕೆ ಬಳಸಿದ ಹಸ್ತಪ್ರತಿಗಳ ಪೀಳಿಗೆಯನ್ನು ರಚಿಸಬೇಕಾದ ಹಿರಿಯ ಮತ್ತು ಕಿರಿಯ ಹಸ್ತಪ್ರತಿ ಶ್ರೇಣಿಗಳನ್ನು ತಿಳಿಯಲು ಮೇಲೆ ಹೇಳಿದ ಸೂತ್ರವು ಸಹಾಯಮಾಡುತ್ತದೆ.

ಪಾಠವಿಮರ್ಶೆಗೆ ಸಂಬಂಧಿಸಿದ ಎರಡು ಪಂಥಗಳಿವೆ ಎಂಬುದನ್ನೂ ಅವುಗಳಲ್ಲಿ ಸಂಪ್ರದಾಯವಾದಿಗಳ ಪಂಥವು ಶಾಸ್ತ್ರೀಯ ವಿವರಣೆಗೆ ಸಲ್ಲದ ಪ್ರಾಮುಖ್ಯವಿತ್ತರೆ ಮತ್ತೊಂದು ಪಂಥವು ಊಹಾತ್ಮಕ ತಿದ್ದುಪಡಿಗೆ ಅಷ್ಟೇ ಪ್ರಾಶಸ್ತ್ಯ ಕೊಡುತ್ತದೆ ಎಂಬುದನ್ನೂ ಕಳೆದ ಅಧ್ಯಾಯದಲ್ಲಿ ಹೇಳಿದೆ. ಪಾಠಪರಿಷ್ಕರಣದಲ್ಲಿ ಸಂದೇಹಪಾಠಗಳ ವಿಷಯ ಬಂದಾಗ ಅಂಥ ಪ್ರತಿಯೊಂದು ಪಾಠಾಂತರದ ಬಗ್ಗೆಯೂ ಏನಾದರೊಂದು ನಿರ್ಣಯಕ್ಕೆ ಬರಲೇಬೇಕು. ಪಾಠಪರಂಪರೆಯಲ್ಲಿ ಸಾಗಿಬಂದ ಸಂದೇಹ ಪಾಠಾಂತರಗಳನ್ನು, ಲಬ್ಧಸಾಕ್ಷ್ಯಗಳ ಬಲದಮೇಲೆ ಕೆಲವು ಸಲ 'ಸಂದೇಹಾತ್ಮಕ ಸ್ವೀಕರಣ'ಗಳಾಗಿ ತೆಗೆದುಕೊಂಡರೆ ಮತ್ತೆ ಕೆಲವು ಸಲ 'ಸಂದೇಹಾತ್ಮಕ ವರ್ಜನ'ಗಳಾಗಿ ಬಿಡಲಾಗುತ್ತದೆ. ಬಿಟ್ಟ ಪಾಠಾಂತರಗಳನ್ನು ಅವುಗಳಿಗೆ ಬದಲಾಗಿ ಒಪ್ಪಿಕೊಂಡ ಪಾಠಾಂತರಗಳೊಂದಿಗೆ ಗ್ರಂಥದಲ್ಲಿ ತೋರಿಸಲಾಗುತ್ತದೆ. ಪೂರ್ಣವಾಗಿ ನಿಶ್ಚಿತವಲ್ಲದ ತಿದ್ದುಪಡಿಯ ಬಗ್ಗೆ ಸಂಪ್ರದಾಯವಾದಿಗಳ ದೃಷ್ಟಿ ಸ್ವಲ್ಪ ಕಟುವಾಗಿಯೇ ಇದ್ದರೂ ಸ್ಪಷ್ಟವಾಗಿದೆ. ಒಂದು ಪಾಠಾಂತರ ಮೂಲಪಾಠವಾಗಿರದಿದ್ದರೆ ಹೋಗಲಿ, ಕಡೆಗೆ ಗ್ರಂಥದಲ್ಲಿ ಈಗಿರುವ ರೂಪದಲ್ಲಿಯಾದರೂ ಅದನ್ನು ಬಿಡುವುದು ಎಷ್ಟೋ ಉತ್ತಮ ಎಂಬುದು ಅವರ ನೀತಿ. ಇಂಥ ಸಂದೇಹಪಾಠವು ಮತ್ತೊಂದು ಪಂಥ ಸೂಚಿಸುವ ತಿದ್ದುಪಡಿಗಿಂತ ಮೂಲಕ್ಕೆ ಹತ್ತಿರವಾದದ್ದು—ಎಂಬ ಅಭಿಪ್ರಾಯದ ಮೇಲೆ ಈ ಸೂತ್ರ ನಿಂತಿರುವಂತೆ ತೋರುತ್ತದೆ.

ಮೇಲಿನ ಸೂತ್ರಕ್ಕೆ ಪ್ರತಿಯಾಗಿ ಮತ್ತೊಂದು ಪಂಥದ ವಿಮರ್ಶಕರ ಮತ ಹೀಗಿದೆ: ಭಗ್ನ

ಪಾಠಕ್ಕಿಂತ ತಾತ್ಕಾಲಿಕ ಪಾಠವೇ (Stop gap) ಉತ್ತಮ ಎಂಬುದು ಅವರ ನೀತಿ. ಎಂದರೆ
ವಿಮರ್ಶಾತ್ಮಕ ಪರಿಷ್ಕರಣದ ಯೋಜಿತಪಾಠವು (constituted reading) ಸಂದೇಹಾಸ್ಪದವಾಗಿದೆ
ಎನ್ನೋಣ. ಆಗ ಲೇಖಕನು ಏನು ಬರೆದಿರಲಾರನೋ ಅದಕ್ಕಿಂತ ಏನು ಬರೆದಿರಬಹುದೋ
ಅದನ್ನು ಇಡುವುದು ಉತ್ತಮವೆಂದು ಈ ಪಂಥದ ಅಭಿಪ್ರಾಯ. ಉದಾಹರಣೆಗೆ ಮಹಾಭಾರತದ
ಔತ್ತರೇಯ ಮತ್ತು ದಾಕ್ಷಿಣಾತ್ಯ ಪಾಠಸಂಪ್ರದಾಯಗಳಲ್ಲಿ ಕಂಡುಬಂದ ಕೆಲವು ಭಿನ್ನಪಾಠಾಂತರ
ಗಳಿಗೆ ಲೇಖನ ಮತ್ತು ಅಂತಸ್ಸಂಭಾವ್ಯತೆಗಳೆರಡೂ ಸಮಾನವಾಗಿದ್ದುವು. ಆಗ ಸುಕ್ತಂಕರರು
ಹೆಚ್ಚು ಶುದ್ಧವಾದ ಮತ್ತು ಪ್ರಕ್ಷಿಪ್ತ ಭಾಗಗಳಿಗೆ ಹೊರತಾದ N ಪ್ರತಿಯ ಪಾಠಾಂತರಗಳನ್ನೇ
ಆರಿಸಿದ್ದನ್ನು ನೋಡಿದ್ದೇವೆ. ಇದು ಪರಿಷ್ಕೃತ ಪಾಠದಲ್ಲಿ ಸೇರಲು ಬೇಕಾದ ಅರ್ಹತೆಗಳನ್ನು
ಸಮಾನವಾಗಿ ಪಡೆದ ಎರಡು ಸಂಭಾವ್ಯ ಪಾಠಗಳಿಗೆ ಸಂಬಂಧಿಸಿದ ಪ್ರಸಂಗ. ಸುಕ್ತಂಕರರು
ಅಂಗೀಕರಿಸಿದಂಥ ಸೂತ್ರವೊಂದರ ಆಧಾರವಿಲ್ಲದೆ ಇಂಥ ಆಯ್ಕೆಯನ್ನು ಮಾಡಿದರೆ ಅದರ ಫಲ
ವಾಗಿ ಯಾವ ನಿರ್ದಿಷ್ಟ ತತ್ವಗಳೂ ಆಧಾರವಾಗಿರದ ಸಮಷ್ಟಿಪಾಠ (Eclectic text) ದೊರೆ
ಯುತ್ತದೆ. ಇದು ವಾಸ್ತವವಾಗಿ ಎಲ್ಲ ಬಗೆಯ ಪಾಠಾಂತರಗಳ ಒಂದು ಸಮೂಹ. ತಿದ್ದು
ಪಡಿಗೆ ಸಂಬಂಧಿಸಿದ ಸೂತ್ರವಂತೂ ಇನ್ನೂ ಪರಿಣಾಮಕಾರಿಯಾಗಿದೆ. ಏಕೆಂದರೆ ಲೇಖನ
ಮತ್ತು ಅಂತಸ್ಸಂಭಾವ್ಯತೆಗಳೆರಡೂ ಇದ್ದಾಗ ಪರಂಪರಾಗತವಾದ ಸಂದೇಹಪಾಠವನ್ನು ಯಶಸ್ವಿ
ಯಾಗಿ ತಿದ್ದುವುದು ಸಾಧ್ಯ. ಅಂತಸ್ಸಂಭಾವ್ಯತೆಯೊಂದರ ಆಧಾರದ ಮೇಲೆಯೇ ಪರೀಕ್ಷಿಸಿದಾಗ
ಊಹಾಪಾಠ ಕೂಡ ಅನ್ಯಪಾಠವಾಗಿರದೆ ಕರ್ತೃಪಾಠವಾಗಿರುವ ಸಂಭವವೇ ಹೆಚ್ಚು. ಅಂಥ
ಸಂದರ್ಭದಲ್ಲಿ ಪರಂಪರಾಗತವಾಗಿ ಬಂದ ಅಪಪಾಠಾಂತರಕ್ಕೆ ಬದಲಾಗಿ ತಿದ್ದುಪಡಿಯೊಂದನ್ನು
ಬಳಸಬೇಕು. ಈ ತಿದ್ದುಪಡಿ ತಾತ್ಕಾಲಿಕ ಪಾಠವೇ ಆಗಿದ್ದರೂ ಅದಕ್ಕೆ ಲೇಖನ ಸಂಭಾವ್ಯತೆ
ಮತ್ತು ಅಂತಸ್ಸಂಭಾವ್ಯತೆಗಳು ಯೋಗ್ಯಪ್ರಮಾಣದಲ್ಲಿ ಇಲ್ಲದೆ ಇದ್ದರೂ ಹಾಗೆ ಮಾಡಬಹುದು.

ಒಂದು ಕೃತಿಯಲ್ಲಿ ಕೆಲವು ದೋಷ, ಅಸಾಮಂಜಸ್ಯಗಳನ್ನು ಗುರುತಿಸಿದ್ದೇವೆ ಎಂದು
ಭಾವಿಸೋಣ. ಇವುಗಳಲ್ಲಿ ಲೇಖಕನೇ ಮಾಡಿದ ತಪ್ಪುಗಳು ಎಂದು ಪರಿಗಣಿಸಿ ಉಳಿಸಬೇಕಾ
ದವು ಯಾವುವು? ಲಿಪಿಕಾರ ಮಾಡಿದುದು ಎಂದು ಭಾವಿಸಿ ತೆಗೆಯಬೇಕಾದವು ಯಾವುವು?
ಇದು ಗ್ರಂಥಸಂಪಾದನೆಯ ಕಠಿಣ ಸಮಸ್ಯೆಗಳಲ್ಲಿ ಒಂದು. ಇಲ್ಲಿ ಯಾವ ಒಂದು ಸಾರ್ವತ್ರಿಕ
ನಿಯಮವನ್ನು ಮಾಡುವುದೂ ಸಾಧ್ಯವಿಲ್ಲ. ಪ್ರತಿಯೊಂದು ಪ್ರಸಂಗವನ್ನೂ ಅದರ ಗುಣ
ಅವಗುಣಗಳ ಮೇಲೆ ಪರಿಗಣಿಸಬೇಕು; ಅಲ್ಲದೆ ವಿಮರ್ಶಕನು ಸಮಷ್ಟಿಪಾಠಕ್ರಮವನ್ನೇ
ಅನುಸರಿಸಬೇಕು. ಪೋಸ್ಟ್‌ಗೇಟ್‌ರವರ ದೃಷ್ಟಿಯಲ್ಲಿ ಈ 'ಸಮಷ್ಟಿ' ಎಂಬುದು, ಸುಲಭವಾಗಿ
ತಿಳಿಯಲಾಗದ ವಿಷಯಕ್ಕೆ ಬೇಸರಭಾವದಿಂದ ಬಳಸುವ ಒಂದು ವಿಶೇಷಣ. ಸ್ವಹಸ್ತಪ್ರತಿಯು
ಲಭ್ಯವಿಲ್ಲದಿದ್ದಲ್ಲಿ ಲಿಪಿಕಾರನ ಉದ್ದಿಷ್ಟ ದೋಷಗಳನ್ನು ಲೇಖಕನ ಅನುದ್ದಿಷ್ಟ ಅಥವಾ ಆಕಸ್ಮಿಕ
ತಪ್ಪುಗಳಿಂದ ಪ್ರತ್ಯೇಕಿಸುವ ಸಾಧನವೇ ಇಲ್ಲ. ಕೃತಿಕಾರನೂ ತನ್ನ ಗ್ರಂಥದ ಒಬ್ಬ ಲಿಪಿಕಾರ
ನಾಗಿರುವುದರಿಂದ ಇವೆಲ್ಲವೂ ವಾಸ್ತವವಾಗಿ ಲಿಪಿಕಾರದೋಷಗಳೇ. ದೋಷ, ಅಸಾಮಂಜಸ್ಯ
ಗಳು ಇಲ್ಲದ ಪ್ರಾಚೀನ ಸಂವಾದಿಭಾಗಗಳು ಅದೃಷ್ಟವಶಾತ್ ದೊರೆತರೆ ಆಗ ಈ ಸಮಸ್ಯೆ ಸ್ವಲ್ಪ
ಮಟ್ಟಿಗೆ ಪರಿಹಾರವಾಗಬಹುದು. ಇಷ್ಟೊಂದು ಪರಿಮಿತಿಗಳನ್ನು ಹಾಕಿಕೊಳ್ಳುವುದಕ್ಕೆ ಕಾರಣ
ವೇನೆಂದರೆ ಲೇಖಕನಿಗೆ ಯಾವುದು ಸ್ಪಷ್ಟವಾಗಿ ತಪ್ಪೆಂದು ಅಥವಾ ದೂಷಿತವೆಂದು ತೋರು
ತ್ತದೆಯೋ ಅದನ್ನು ಲೇಖಕ ತಿಳಿದೇ ಬಳಸಿರುವುದು ಸಾಧ್ಯ. ಅದನ್ನು ಸಂಪಾದಕನು ತೆಗೆದು
ಹಾಕುವಂತಿಲ್ಲ. ತಪ್ಪನ್ನು ಎಷ್ಟು ಸಮರ್ಪಕವಾಗಿ ತಿದ್ದಲು ಸಾಧ್ಯವಿದೆಯೆಂಬುದು ಬಹಳ

ಮುಖ್ಯ. ಆದರೆ ಇದನ್ನು ಮಾಡಲು ಒಂದಕ್ಕಿಂತ ಹೆಚ್ಚು ರೀತಿಗಳಿರುವಾಗ ದೂಷಿತರೂಪವನ್ನೇ ಉಳಿಸಬೇಕೆಂಬುದು ಸಾಮಾನ್ಯವಾಗಿ ಅನುಸರಿಸುವ ಸೂತ್ರ.

ಒಂದೇ ಮಾತೃಕೆಯಿಂದ ಹೊರಟ ಹಸ್ತಪ್ರತಿ ಪರಂಪರೆಯಲ್ಲಿ ಒಂದಕ್ಕಿಂತ ಹೆಚ್ಚು ಕವಲುಗಳು ಹುಟ್ಟಿಕೊಳ್ಳಬಹುದು. ಇವು ಕೆಲವು ಬಾರಿ ಮೂಲಪಾಠಾಂತರಗಳನ್ನೂ ಕೆಲವು ಸಲ ಮೂಲದ್ದಲ್ಲದ ಪಾಠಾಂತರಗಳನ್ನೂ ಒಳಗೊಂಡಿರುತ್ತವೆ. ಎಲ್ಲ ಶಾಖೆಗಳಿಗೂ ಸಮ್ಮತವಾದ ಪಾಠವು ಮೂಲಪಾಠವೇ ಆಗಿರುತ್ತದೆ. ಆದರೆ ಪಾಠಪರಂಪರೆಯ ಮೊದಲ ಶಾಖೆಗಳಲ್ಲಿ ದೊರೆಯುವ ಪಾಠಾಂತರಗಳಲ್ಲಿ ಯಾವುದೋ ಒಂದು ಮಾತ್ರ ಮೂಲಪಾಠಾಂತರವೂ ಉಳಿದವು ಅನ್ಯಪಾಠಾಂತರಗಳೂ ಆಗಿದ್ದು ಇವು ಬೇರೆ ಬೇರೆ ಶಾಖೆಗಳಲ್ಲಿ ಯಾವ ಪ್ರಮಾಣದಲ್ಲಿಯಾದರೂ ಹಂಚಿಹೋಗಿರಬಹುದು. ಈ ಒಂದೊಂದು ಶಾಖೆಯೂ ಪ್ರತಿರಚನೆ ನಡೆಯುತ್ತ ಹೋದಂತೆ ಇನ್ನಷ್ಟು ಶಾಖೆಗಳಾಗಿ ಒಡೆಯಬಹುದು. ಮೊದಲ ಘಟ್ಟದ ಕವಲುಗಳಿಗೆ ಸಂಬಂಧಿಸಿ ಹೇಳಿದ ಮಾತು ಎರಡನೆಯ ಘಟ್ಟದ ಕವಲುಗಳಿಗೂ ಅನ್ವಯಿಸುತ್ತದೆ. ಆದರೆ 'ಮೂಲ' (original) ಎಂಬ ಪದವನ್ನು ಪಾಠಪರಂಪರೆಯ ಪ್ರಥಮಘಟ್ಟದ ಭಿನ್ನಪಾಠಭಾಗಗಳಿಗೆ ಮಾತ್ರ ಅನ್ವಯಿಸಬೇಕಾಗುತ್ತದೆ. ಪರಂಪರಾಗತ ಪಾಠಲೇಖನದ ಇಡಿಯ ಚರಿತ್ರೆಯ ಬಗ್ಗೆ ನಾವು ಚರ್ಚಿಸುತ್ತಿದ್ದೆವಷ್ಟೆ. ಆ ವಿಷಯಕ್ಕೆ ಮತ್ತೆ ಬರುವುದಾದರೆ (ಈ ನಿರ್ದಿಷ್ಟ ಪಾಠಸಂತತಿಗೆ ಸೇರಿದ ಬೇರೆ ಬೇರೆ ಹಸ್ತಪ್ರತಿಗಳು ತೋರಿಸುವಂತೆ) ಈ ಶಾಖೆಯು ಕಟ್ಟಕಡೆಗೆ ಪರಂಪರಾಗತ ಪಾಠದಲ್ಲಿರುವ ಸ್ವಲ್ಪ 'ಮೂಲ' ಪಾಠಭಾಗವನ್ನೂ ಸ್ವಲ್ಪ 'ಮೂಲೇತರ' ಪಾಠಭಾಗವನ್ನೂ ನೀಡುತ್ತದೆ. ಈ ಭಾಗಗಳು ಉಪಮಾತೃಕೆಗೆ ಸಂಬಂಧಿಸಿದಂತೆ 'ಮೂಲ' ಭಾಗಗಳೂ ಮಾತೃಕೆಗೆ ಸಂಬಂಧಿಸಿದಂತೆ 'ಮೂಲೇತರ' ಭಾಗಗಳೂ ಆಗಿರುತ್ತವೆ. ಉಳಿದವು ಮಾತೃಕೆ ಮತ್ತು ಉಪಮಾತೃಕೆಗಳೆರಡರ ದೃಷ್ಟಿಯಿಂದಲೂ 'ಮೂಲೇತರ' ವಾಗಿರುತ್ತವೆ. ಉಪಮಾತೃಕೆಗೆ ಸಂಬಂಧಿಸಿ 'ಮೂಲ' ವೂ ಮಾತೃಕೆಗೆ ಸಂಬಂಧಿಸಿ 'ಮೂಲೇತರ' ವೂ ಆಗಿರುವುದನ್ನು ಈ ಪಾಠಸಂತತಿಗೆ ಸೇರಿದ ಹಸ್ತಪ್ರತಿಗಳ ಆನುಷಂಗಿಕ ಲಕ್ಷಣವೆಂದು ಹೇಳಬಹುದು. ಈ ನಿರ್ದಿಷ್ಟ ಪಾಠಸಂತತಿಯ ಭಿನ್ನಪಾಠಶಾಖೆ (version) ಗಳಲ್ಲಿ ಕಾಣುವ ಅಂಥ 'ಮೂಲೇತರ' ಪಾಠಾಂತರಗಳ ಹೊಂದಿಕೆಯನ್ನೂ 'ಆನುಷಂಗಿಕ' ವೆಂದು ಕರೆಯಬಹುದು.

ಈ ಆನುಷಂಗಿಕ ಅಂತಸ್ಸಂಬಂಧದ (Secondary Interrelation) ಬಗ್ಗೆ ಎರಡು ರೀತಿಗಳಲ್ಲಿ ವಿಚಾರಮಾಡಬಹುದು. ಒಂದರ ಸೂತ್ರವನ್ನು ಮೇಲೆ ಹೇಳಿದೆ. ಎರಡನೆಯದನ್ನು ಈ ರೀತಿಯಾಗಿ ಸೂತ್ರಿಸಬಹುದು. ಮಾತೃಕೆಗಿಂತಲೂ ಹಳೆಯದಾದ ಒಂದು ಸಾಮಾನ್ಯ ಮೂಲದಿಂದ ಎರಡು ಪಾಠಶಾಖೆಗಳು ಪೂರ್ಣವಾಗಿ ಅಥವಾ ಭಾಗಶಃ ಬೆಳೆದು ಬಂದಿದ್ದು, ಆ ಕಾರಣದಿಂದ ಅವುಗಳಿಗೂ ಸಾಮಾನ್ಯ ಮೂಲಕ್ಕೂ ಇರುವ ಸಂಬಂಧವು ಗೌಣವಾಗಿದ್ದರೆ ಆ ಎರಡು ಪಾಠಶಾಖೆಗಳೂ ಆನುಷಂಗಿಕವಾಗಿ ಸಂಬಂಧಿಸಿರುತ್ತವೆ.

ಪಾಠಶಾಖೆಗಳ ಮೂಲ ಮತ್ತು ಆನುಷಂಗಿಕ ಸಂಬಂಧಗಳ ನಡುವೆ ಹೀಗೆ ತೋರಿಸಿರುವ ಭೇದವು ಕೇವಲ ಹಸ್ತಪ್ರತಿಗಳ ವಂಶಸಂಬಂಧದ ತತ್ವಕ್ಕೆ ಅನುಸಾರವಾದದ್ದು. ಮಾತೃಕೆಯ ಪಾಠವನ್ನು ಅಥವಾ 'ಪರಂಪರಾಗತಪಠ'ವನ್ನು ಪಡೆಯುವ ಕಾರ್ಯದಲ್ಲಿ ಅದರಿಂದ ಸಹಾಯವಾಗುತ್ತದೆ. ಪಾಠಶಾಖೆಗಳು ಶುದ್ಧವಾದುವಾಗಿರಲಿ ಅಥವಾ ಮಿಶ್ರವಾದುವಾಗಿರಲಿ ಅವುಗಳ ನಡುವೆ ಅಂಥ ಆನುಷಂಗಿಕ ಅಂತಸ್ಸಂಬಂಧಗಳಿದ್ದಾಗ ಆ ಸಂಬಂಧದ ತಿಳಿವು ಇರಬೇಕು. ಈ

ಅರಿವು ಭಿನ್ನ ಪಾಠಶಾಖೆಗಳ ನಡುವಿನ ಸಾಂಗತ್ಯವು 'ಮೂಲ'ವೇ ಅಥವಾ 'ಆನುಷಂಗಿಕ'ವೇ ಎಂಬುವನ್ನು ನಿರ್ಧರಿಸಲು ಸಾಮರ್ಥ್ಯ ನೀಡುತ್ತದೆ.

ಅಂಥ ಆನುಷಂಗಿಕ ಸಂಬಂಧವನ್ನು ನಿರ್ಧರಿಸುವುದಕ್ಕೆ ಸಾಮಾನ್ಯವಾಗಿ ಈ ಎರಡು ಪ್ರಮಾಣಗಳು ಆಧಾರವಾಗಿರುತ್ತವೆ. (1) ನಮ್ಮ ಪರಿಶೀಲನೆಯಲ್ಲಿರುವ ಪಾಠಶಾಖೆಗಳಲ್ಲಿ ಮುಖ್ಯವೂ ಎದ್ದುಕಾಣುವಂಥವೂ ಆದ ಕೆಲವು ವೈಲಕ್ಷಣ್ಯಗಳು ಅಲಕ್ಷಿಸಲಾಗದಷ್ಟು ಸಂಖ್ಯೆಯಲ್ಲಿವೆ ಎನ್ನೋಣ. ಇವುಗಳನ್ನು ಮಾತೃಕೆಯ ವೈಶಿಷ್ಟ್ಯಗಳಿಂದಾಗಲೀ ಅಥವಾ ಅನೇಕ ಶಾಖೆಗಳಲ್ಲಿ ಸಮಾನಸ್ಥಾನಗಳಲ್ಲಿ ಕಾಣಿಸಿಕೊಂಡಿರುವ ಈ ವೈಲಕ್ಷಣ್ಯಗಳನ್ನು ಸ್ವತಂತ್ರವಾದ ಪ್ರಕ್ಷೇಪ ಇಲ್ಲವೆ ಲೋಪಗಳಿಂದಾಗಲೀ ಭಾವಿಸಲು ಸಾಧ್ಯವಾಗದಿದ್ದಾಗ ಅದು ಮೇಲೆ ಹೇಳಿದ ಆನುಷಂಗಿಕ ಸಂಬಂಧ ನಿರ್ಣಯಕ್ಕೆ ಒಂದು ಪ್ರಮಾಣವಾಗುತ್ತದೆ. ಈ ಪ್ರಕ್ಷೇಪ ಅಥವಾ ಲೋಪಗಳು ದೀರ್ಘವಾಗುತ್ತಾ ಹೋದಷ್ಟೂ ಅವುಗಳ ನಡುವಿನ ಸಂಬಂಧವೂ ಸ್ಪಷ್ಟವಾಗುತ್ತಾ ಹೋಗುತ್ತದೆ. ಏಕೆಂದರೆ ಇಬ್ಬರು ಪರಿಷ್ಕಾರಕರು ಒಂದು ಗ್ರಂಥದ ನಿರ್ದಿಷ್ಟ ಸ್ಥಳದಿಂದ ಮತ್ತೊಂದು ನಿರ್ದಿಷ್ಟ ಸ್ಥಳದವರೆಗೆ ನಿರ್ದಿಷ್ಟ ಬರೆಹವೊಂದನ್ನು (ದೂರ ಸದೃಶಾಕ್ಷರ ಲೋಪ ಲೇಖನದ ಪ್ರಸಂಗದಲ್ಲಿ ಹೊರತು) ಪರಸ್ಪರ ಸ್ವತಂತ್ರವಾಗಿ ಸೇರಿಸುತ್ತಾರೆಂದಾಗಲೀ ಅಥವಾ ಬಿಟ್ಟುಬಿಡುತ್ತಾರೆ ಎಂದಾಗಲೀ ಊಹಿಸುವುದು ಕಷ್ಟ. (2) ಈ ಪಾಠಶಾಖೆಗಳು ಒಂದೇ ಪಾಠ ಸಂತತಿಗೆ ಸಂಬಂಧಿಸಿದವು ಎಂಬುದನ್ನು ತೋರಿಸುವಂಥ ನಿದರ್ಶನಗಳು ಉದ್ದಕ್ಕೂ ಸಿಗಬೇಕು ಮತ್ತು ಅಂತಿಮ ಪರಿಣಾಮಗಳಲ್ಲಿ ಹೊಂದಿಕೆ ಇರಬೇಕು. ಈ ಸಾಕ್ಷ್ಯಗಳು ಸಾಕಷ್ಟು ಬಲವತ್ತರವಾಗಬೇಕಾದರೆ ಅವು ಸಣ್ಣ ಸಣ್ಣ ಶಬ್ದಸಂಬಂಧವಾದ ವಿವರಗಳಿಗೂ ಸಂಬಂಧಿಸಿರಬೇಕು. ಮೇಲಿನ ಎರಡು ಅನುಮಿತಿ(Presumption)ಗಳು ದೊಡ್ಡ ಪಾಠಭಾಗಗಳ ವಿಷಯಕ್ಕೆ ಬಲವಾದ ಪ್ರಮಾಣಗಳು. ಚಿಕ್ಕ ಚಿಕ್ಕ ವಾಕ್ಯಾಂಶಗಳ ವಿಷಯಕ್ಕೆ ಇವು ಅಷ್ಟು ಬಲವಾದ ಆಧಾರಗಳಲ್ಲ. ಬಿಡಿ ಪದಗಳ ವಿಷಯಕ್ಕಂತೂ ಅವುಗಳನ್ನು ಗಣಿಸುವಂತೆಯೇ ಇಲ್ಲ. ಉಳಿದಿರುವ ವಿಸಂಗತ ಪಾಠಶಾಖೆ (Discordant version) ಗಳಲ್ಲಿ ಹೊಂದಿಕೆ ಕಾಣದಿದ್ದರೆ ಆಗ ಈ ಅನುಮಿತಿಗಳು ದೃಢಪಡುತ್ತವೆ.

ಆನುಷಂಗಿಕ ಅಂತಸ್ಸಂಬಂಧಕ್ಕೂ ಪಾಠಮಿಶ್ರಣಕ್ಕೂ ವ್ಯತ್ಯಾಸವಿದೆ. ಮೊದಲನೆಯದು ಯಾವ ಪಾಠದ ವಿಷಯದಲ್ಲಿ ಈ ಸಂಬಂಧ ಕಂಡುಬರುವುದೋ ಆ ಪಾಠದ ಒಂದು ಭಾಗ ಅಥವಾ ಪೂರ್ತಿಪಾಠವು ಉಪಪ್ರಧಾನಮಾತೃಕೆಯೊಂದರಿಂದ ಏಕರೀತಿಯಲ್ಲಿ ಸಾಗಿಬಂದಿರುವುದನ್ನು ತೋರಿಸುತ್ತದೆ. ಎರಡನೆಯದು ಪರಸ್ಪರ ಸ್ವತಂತ್ರ ಪಾಠಪರಂಪರೆಗಳಿಗೆ ಸೇರಿದ ಬೇರೆ ಬೇರೆ ಉಪಶಾಖೆಗಳ ಅಸಂಬದ್ಧ ಮಿಶ್ರಣವನ್ನು ತೋರಿಸುತ್ತದೆ. ಅಂಥ ಮಿಶ್ರಣದಲ್ಲಿ ಆನುಷಂಗಿಕ ಲಕ್ಷಣಗಳನ್ನೂ, ಎಂದರೆ 'ಪರಂಪರಾಗತಪಾಠ'ಕ್ಕೆ ಸೇರಿದಂತೆ 'ಮೂಲೇತರ'ವಾದುದನ್ನೂ ಸೇರಿಸಬಹುದು. ಹೀಗೆ ಮಾಡುವುದರಿಂದ ಪಾಠಪರಂಪರೆಯು ಎರಡು ಸ್ವತಂತ್ರಶಾಖೆಗಳಿಗೆ ಸೇರಿದ ಹಸ್ತಪ್ರತಿಗಳ ಮಿಶ್ರಣವಾಗಿದ್ದಾಗ ಅಂಥ ಆನುಷಂಗಿಕ ಸಂಬಂಧಗಳನ್ನು ಪಾಠಮಿಶ್ರಣದಲ್ಲಿ ಸೇರಿಸಬಿಡಬಹುದು. ಆದ್ದರಿಂದ ಶುದ್ಧವಾದ ಸಂಪ್ರದಾಯವೇ ಆಗಲಿ ಮಿಶ್ರಪಾಠ ಸಂಪ್ರದಾಯವೇ ಆಗಲಿ ಅವುಗಳಲ್ಲಿ ಇರುವ ಆನುಷಂಗಿಕ ಸಾಂಗತ್ಯಗಳನ್ನು ನಿವಾರಿಸಲು ಎಲ್ಲ ಯತ್ನಗಳನ್ನೂ ಮಾಡುವುದು ಅಗತ್ಯ. ಪರಿಷ್ಕೃತಪಾಠದಲ್ಲಿ 'ಮೂಲ' ಸಾಂಗತ್ಯಗಳನ್ನು ಮಾತ್ರ ಉಳಿಸಬೇಕು.

ಒಂದು ಗ್ರಂಥದ ಭಿನ್ನಪಾಠಶಾಖೆಗಳನ್ನು ಪರಿಶೀಲಿಸಿದಾಗ ಪೂರ್ಣವಾಗಿ ಉಳಿದುಬಂದ ಪಾಠಶಾಖೆಗಳ ವ್ಯಾಪ್ತಿಯಲ್ಲಿ ಸಾಮಾನ್ಯವಾಗಿ ಅನೇಕ ವ್ಯತ್ಯಾಸಗಳಿರುತ್ತವೆ. ಈ ಪಾಠಶಾಖೆಗಳಲ್ಲಿ ಒಂದು ಅತಿ ದೊಡ್ಡದೂ ಇನ್ನೊಂದು ಅತಿ ಚಿಕ್ಕದೂ ಆಗಿದ್ದು ಮತ್ತೆ ಕೆಲವು ಈ ಎರಡಕ್ಕೂ ಮಧ್ಯಸ್ಥವಾದ ಸಂಪ್ರದಾಯಗಳಾಗಿರಬಹುದು. ಇವುಗಳಲ್ಲಿ ಸಂಕ್ಷಿಪ್ತವಾದ ಸಂಪ್ರದಾಯಕ್ಕೆ ‘ಸರಳಪಾಠ’ (Textus Simplicior) ಎಂದೂ ವಿವರವಾದ ಸಂಪ್ರದಾಯಕ್ಕೆ ವಿಸ್ತೃತಪಾಠ (Textus Ornatior) ಎಂದೂ ಹೆಸರು. ಇವುಗಳಲ್ಲಿ ಕಾಲದೃಷ್ಟಿಯಿಂದ ಸರಳಪಾಠವು ಮುಂಚಿನದೂ ವಿಸ್ತೃತಪಾಠವು ನಂತರದ್ದೂ ಆಗಿರುತ್ತದೆಂಬುದು ಸಂಪಾದನಾಶಾಸ್ತ್ರದ ಒಂದು ಸಾಮಾನ್ಯ ನಿಯಮ. ಆದರೆ ಗ್ರಂಥಸಂಪಾದನಾಶಾಸ್ತ್ರದ ಇತರ ನಿಯಮಗಳಿಗೆ ಹೇಗೋ ಹಾಗೆಯೇ ಇದಕ್ಕೂ ಅತಿಮಾನ್ಯತೆ ನೀಡಕೂಡದು. ಸಂಪಾದಕನು ಅದೊಂದು ಕಟ್ಟುನಿಟ್ಟಾದ ನಿಯಮವಾಗಿ ತಿಳಿದು ಅಪಾಯಕ್ಕೆ ದಾರಿಯಾಗುವ ಮಟ್ಟಿಗೆ ಅದನ್ನು ಅನುಸರಿಸುವ ಪ್ರಸಂಗವುಂಟು. ಏಕೆಂದರೆ ಉದ್ದೇಶಪೂರ್ವಕವಾದುದಾಗಿರಲಿ ಆಕಸ್ಮಿಕವಾದುದಾಗಿರಲಿ ಲೋಪ ಅಥವಾ ಪ್ರಕ್ಷೇಪಗಳಿರದ ಪಾಠಶಾಖೆಯೇ ಇಲ್ಲ. ಕೆಲವು ಒಂದು ದಿಕ್ಕಿಗೆ ಹೆಚ್ಚು ಒಲಿದರೆ ಮತ್ತೆ ಕೆಲವು ಇನ್ನೊಂದು ದಿಕ್ಕಿಗೆ ಹೆಚ್ಚು ಒಲಿದಿರುತ್ತವೆ. ಯಾವ ಪಾಠಶಾಖೆಯೂ ಈ ವ್ಯತ್ಯಾಸಗಳೇ ಇಲ್ಲದೆ ಏಕರೀತಿಯಲ್ಲಿರುವುದಿಲ್ಲ. ಆದರೂ ಈ ನಿಯಮವು ಸರಳಪಾಠ ಮತ್ತು ವಿಸ್ತೃತಪಾಠಗಳ ಆಧಾರದ ಮೇಲೆ ಲೋಪ ಅಥವಾ ಪ್ರಕ್ಷೇಪಗಳನ್ನು ಗುರುತಿಸಲು ಸಹಾಯಮಾಡುತ್ತದೆ. ಮಹಾಭಾರತದ $S_1K$ ಪಾಠಶಾಖೆಯು ಸರಳಪಾಠವನ್ನು ನೀಡುತ್ತದೆ. ಇದರಲ್ಲಿ ಸೇರಿಸಿರುವ ಕೆಲವು ಭಾಗಗಳು ಇದ್ದುದನ್ನು ತಿದ್ದಿ ಸುಧಾರಿಸಲು ಸೇರಿಸಿದವು ಎನ್ನುವುದು ಹಸ್ತಪ್ರತಿ ಸಾಕ್ಷ್ಯಗಳಿಂದ ಸ್ಪಷ್ಟಪಡುತ್ತದೆ. ಇಷ್ಟಾಗಿಯೂ ಪ್ರಧಾನ ಮಾತೃಕೆಯ ಪಾಠಸಂಯೋಜನೆಗೆ ಈ ಸಂಪ್ರದಾಯವು ಉಳಿದ ಪಾಠಸಂಪ್ರದಾಯಗಳಿಗಿಂತ ಹೆಚ್ಚು ಸಹಾಯವಾಗುತ್ತದೆ. ಇದೇ ರೀತಿಯಲ್ಲಿ ದಾಕ್ಷಿಣಾತ್ಯ ಪಾಠಸಂಪ್ರದಾಯವು ವಿಸ್ತೃತಪಾಠವನ್ನು ನೀಡುತ್ತದೆ. ಇದರಲ್ಲಿ ಅನೇಕ ಪ್ರಕ್ಷೇಪಗಳು ಸೇರಿವೆ. ಇಷ್ಟಾದರೂ ಪರಿಷ್ಕೃತಪಾಠವನ್ನು ರಚಿಸುವಾಗ ಔತ್ತರೇಯ ಪಾಠಸಂಪ್ರದಾಯವು ಅನುಮಾನಕೆ ಎಡೆಕೊಟ್ಟಲ್ಲೆಲ್ಲ ಈ ಪಾಠಕ್ಕೆ ತುಂಬ ಪ್ರಾಮುಖ್ಯ ಸಲ್ಲುತ್ತದೆ.

## ಅಧ್ಯಾಯ VIII : ಗ್ರಂಥಸಂಪಾದನೆಯನ್ನು ಕುರಿತು ಕೆಲವು ಪ್ರಾಯೋಗಿಕ ಸೂಚನೆಗಳು

ಒಂದು ಗ್ರಂಥದ ಲಬ್ಧ ಹಸ್ತಪ್ರತಿಗಳು ನೀಡುವ ಪ್ರಮಾಣಗಳನ್ನು ಮತ್ತು ಗ್ರಂಥಕ್ಕೆ ಸಂಬಂಧಿಸಿದ ಸಾಕ್ಷ್ಯಗಳನ್ನು ಆಧಾರವಾಗಿಟ್ಟುಕೊಂಡು ಆ ಗ್ರಂಥವನ್ನು ಹೇಗೆ ವಿಮರ್ಶಾತ್ಮಕವಾಗಿ ಸಂಪಾದಿಸಬೇಕೆಂಬುದನ್ನೂ ಮತ್ತು ಯಾವ ರೀತಿಯಲ್ಲಿ ಪರಿಷ್ಕೃತಪಾಠವನ್ನು ಪಡೆಯಬೇಕೆಂಬುದನ್ನೂ ನೋಡಿದೆವು. ಗ್ರಂಥದ ಲಭ್ಯಹಸ್ತಪ್ರತಿಗಳು ಇರುವ ಸ್ಥಳ ತಿಳಿದೊಡನೆಯೇ ಅವುಗಳನ್ನು ಪಡೆದುಕೊಳ್ಳುವುದು ಸಂಪಾದಕನ ಕರ್ತವ್ಯ. ಒಂದು ವೇಳೆ ಹಸ್ತಪ್ರತಿಗಳನ್ನು ಪಡೆಯುವುದು ಸಾಧ್ಯವಾಗದಿದ್ದಲ್ಲಿ ಪಾಠಸಂಪಾದನೆಯ ಸಲುವಾಗಿ ಅವುಗಳ ಸುರುಳಿಯಚ್ಚು (rotograph) ಅಥವಾ ಮೈಕ್ರೋಫಿಲಂ ಇಲ್ಲವೆ ಫೋಟೋ ಪ್ರತಿಗಳನ್ನು ಪಡೆದುಕೊಳ್ಳಬೇಕು. ಕೈಯಿಂದ ಅವುಗಳ ಪ್ರತಿಗಳನ್ನು ತಯಾರಿಸದ ಪಕ್ಷಕ್ಕೆ ಆ ಪ್ರತಿಗಳನ್ನೂ ಮತ್ತು ಅವುಗಳ ಮೂಲವನ್ನೂ, ಸಾಧ್ಯವಾದರೆ ಸಂಪಾದಕನೇ ಹೋಲಿಸಿನೋಡಬೇಕು ; ಪ್ರತಿಮಾಡುವಾಗ ಘಟಿಸಿರುವ ಮತ್ತು ಪ್ರತಿಕಾರನ ವ್ಯಕ್ತಿವೈಲಕ್ಷಣ್ಯಗಳ ಫಲವಾಗಿ ಆಗಿರುವ ತಪ್ಪುಗಳನ್ನು ತಿದ್ದಬೇಕು. ಪ್ರತಿಕಾರನ ವ್ಯಕ್ತಿವೈಲಕ್ಷಣವು ಹೇಗೆ ಹೆಜ್ಜೆ ಹೆಜ್ಜೆಗೂ ನಮಗೆ ಎದುರಾಗುತ್ತದೆ ಎಂಬುದನ್ನೂ ಅವನ ಮಾತೃಕೆಯಲ್ಲಿ ಇದ್ದಿರಬಹುದಾದ ಪಾಠವನ್ನು ತಿಳಿಯಲು ಹೇಗೆ ಅವನನ್ನು ಅನುಸರಿಸಬೇಕಾಗುತ್ತದೆ ಎಂಬುದನ್ನೂ ಆಗಲೇ ನೋಡಿದ್ದೇವೆ. ಅಂಥ ಸಾಮಗ್ರಿಯಿಂದ ಪಾಠಾಂತರ ಸಂಕಲನವು ಆರಂಭವಾಗುತ್ತದೆ. ಕ್ರಮುಕ್ರಮೇಣವಾಗಿ ಅದು ಹಸ್ತಪ್ರತಿಗಳ ಆಳವಾದ ವ್ಯಾಸಂಗದಲ್ಲಿ ಪರಿಣಮಿಸುತ್ತದೆ. ವೈಲಕ್ಷಣ್ಯ ಮತ್ತು ವಂಶಸಂಬಂಧಗಳ ನಿರ್ಣಯ, ಹಸ್ತಪ್ರತಿಗಳ ಪ್ರಾಮಾಣ್ಯವನ್ನು ಕುರಿತ ತೀರ್ಮಾನ, ಪಾಠಸಂಪ್ರದಾಯಗಳ ರಚನೆ, ಸಾಧ್ಯವಿರುವಲ್ಲೆಲ್ಲಾ ಮೂಲಪಾಠದ ಪುನಸ್ಸಂಯೋಜನೆ—ಇವುಗಳೆಲ್ಲ ಸಾಧ್ಯವಾಗುತ್ತವೆ. ಪರಿಷ್ಕೃತ ಮುದ್ರಣದಲ್ಲಿ ಅಗತ್ಯವಾಗಿ ಇರಬೇಕಾದ ವಿಷಯಗಳ ಬಗ್ಗೆ ಕೆಲವು ಉಪಯುಕ್ತ ಸೂಚನೆಗಳನ್ನು ಈ ಅಧ್ಯಾಯದಲ್ಲಿ ಕೊಡಲಾಗುವುದು.

ಸಂಪಾದಕನು ಪರಿಷ್ಕೃತ ಮುದ್ರಣದ ಕೆಲಸಕ್ಕೆ ಬಳಸುವ ವಿಮರ್ಶನೋಪಕರಣಗಳ ವಿವರಣೆಯೊಂದಿಗೆ ಈ ವಿಷಯವನ್ನು ಆರಂಭಿಸಬೇಕು. ಮೊದಲನೆಯದಾಗಿ ಹಸ್ತಪ್ರತಿಗಳ ಸಾಮಾನ್ಯ ವಿವರಣೆ. ದೊರೆತಿರುವ ಹಸ್ತಪ್ರತಿಗಳು, ಗ್ರಂಥಪರಿಷ್ಕರಣದಲ್ಲಿ ಬಳಸುವುದಕ್ಕಾಗಿ ಪರಿಶೀಲಿಸಿರುವ ಪ್ರತಿಗಳು, ಪೂರ್ಣವಾಗಿ ಅಥವಾ ಭಾಗಶಃ ಪಾಠಾಂತರ ಸಂಕಲನಕ್ಕೆ ಒಳಪಟ್ಟ ಪ್ರತಿಗಳು ಮತ್ತು ಪಾಠಾಂತರ ಸಂಕಲನಕ್ಕೆ ಆ ಕೆಲವು ಪ್ರತಿಗಳನ್ನೇ ಆರಿಸಿದುದರ ಕಾರಣಗಳು—ಇವುಗಳೆಲ್ಲವೂ ಹಸ್ತಪ್ರತಿಗಳ ಸಾಮಾನ್ಯವಿವರಣೆಗೆ ಸಂಬಂಧಿಸುತ್ತವೆ. ದೊರೆತಿರುವ ಪ್ರತಿಗಳಿಂದಲೇ ನಕಲಾಗಿರುವ ಹಸ್ತಪ್ರತಿಗಳನ್ನು ಬಿಟ್ಟು ಉಳಿದ ಎಲ್ಲ ಸ್ವತಂತ್ರ ಹಸ್ತಪ್ರತಿಗಳನ್ನೂ ಪರಿಷ್ಕರಣ ಕೆಲಸದಲ್ಲಿ ಬಳಸಿಕೊಳ್ಳಬೇಕು.

ವಿಮರ್ಶನೋಪಕರಣಗಳ ಆಯ್ಕೆಯು ಅನೇಕ ಅಂಶಗಳನ್ನು ಅವಲಂಬಿಸಿದೆ. ಹಸ್ತಪ್ರತಿಗಳನ್ನು ಬರೆಯಲು ಬಳಸಿದ ಲಿಪಿಗಳು, ಮೂಲಪ್ರತಿಗಳ ಸ್ಥಳಗಳು, ಪ್ರತಿಗಳಿಗಿರುವ ಕಾಲದ ಪರಸ್ಪರ ಅಂತರ, ಪಾಠಶಾಖೆಯಲ್ಲಿ ಸದೃಶ ಹಸ್ತಪ್ರತಿಗಳಿಗೆ ಬದಲಾಗಿ ಪಾಠವ್ಯತ್ಯಾಸವಿರುವ ಪ್ರತಿ

ಗಳಿರುವುದು—ವಿಮರ್ಶನ ಉಪಕರಣಗಳ ಆಯ್ಕೆಯನ್ನು ನಿರ್ಧರಿಸುವ ಈ ಎಲ್ಲ ಅಂಶಗಳನ್ನೂ ಮೇಲೆ ತಿಳಿಸಿದ ಸಾಮಾನ್ಯ ವಿವರಣೆಯಲ್ಲಿ ಸ್ಪಷ್ಟವಾಗಿ, ಸಂಕ್ಷೇಪವಾಗಿ ತಿಳಿಸಬೇಕು.

ಅನಂತರ ಸಂಪಾದಕನು ಸಂಕಲಿತ ಪಾಠವನ್ನು ಆಧಾರವಾಗಿಟ್ಟುಕೊಂಡು ಹಸ್ತಪ್ರತಿಗಳನ್ನು ಪಾಠಶಾಖೆ (Versions) ಮತ್ತು ಪಾಠಸಂಪ್ರದಾಯಗಳಾಗಿ ವರ್ಗೀಕರಿಸಿದುದನ್ನು ಸಂಕ್ಷಿಪ್ತವಾಗಿ ಸೂಚಿಸಬೇಕು. ಅನಂತರ ಈ ವರ್ಗೀಕರಣಕ್ಕೆ ಅನುಗುಣವಾಗಿ ತನ್ನ ವಿಮರ್ಶನೋಪಕರಣಗಳಾಗಿ ಬಳಸಿಕೊಳ್ಳುವ ಹಸ್ತಪ್ರತಿಗಳ ಪಟ್ಟಿಯನ್ನು ಕೊಡಬೇಕು. ಪ್ರತಿಯೊಂದು ಸಂಪ್ರದಾಯದ ಮತ್ತು ಶಾಖೆಗಳ ಕೆಳಭಾಗದಲ್ಲಿಯೂ ಒಂದು ಪಟ್ಟಿ ಇರುತ್ತದೆ. ಈ ಪಟ್ಟಿಯ ಆರಂಭದಲ್ಲಿ ಒಂದು ಸಂಕೇತಚಿಹ್ನೆ ಇರುತ್ತದೆ. ವಿಮರ್ಶನ ವಿಭಾಗದಲ್ಲಿ ಸೂಚಿತವಾದ ಪಾಠಾಂತರಗಳು ಯಾವುದರಲ್ಲಿವೆಯೋ ಆ ಹಸ್ತಪ್ರತಿ, ಅದನ್ನು ಸಂಗ್ರಹಿಸಿಟ್ಟ ಸ್ಥಳದ ವಿವರ, ಗ್ರಂಥಭಂಡಾರದ ಹೆಸರು, ಆ ಗ್ರಂಥಭಂಡಾರದ ಪುಸ್ತಕಪಟ್ಟಿಯಲ್ಲಿ ಅದಕ್ಕೆ ಕೊಟ್ಟಿರುವ ಸಂಖ್ಯೆ ಮತ್ತು (ಗೊತ್ತಿದ್ದಲ್ಲಿ) ಪ್ರತಿಯ ಕಾಲ-ಇವುಗಳೆಲ್ಲವನ್ನೂ ಆ ಸಂಕೇತಾಕ್ಷರ ಅಥವಾ ಚಿಹ್ನೆ ಸೂಚಿಸುತ್ತದೆ.

ಹಸ್ತಪ್ರತಿಗಳಿಗೆ ಸಂಕೇತಾಕ್ಷರಗಳನ್ನು ಕೊಡುವಾಗ ಸಂಪಾದಕನು ತನಗೆ ಇಷ್ಟಬಂದ ಅಕ್ಷರಗಳನ್ನು ಕೊಡಕೂಡದು. ಅದು ಯಾವ ಹಸ್ತಪ್ರತಿಯನ್ನು ಸೂಚಿಸಲು ಬಳಸಲಾಗಿದೆಯೋ ಆ ಹಸ್ತಪ್ರತಿಯನ್ನು ನೆನಪಿಸುವ ಯಾವುದಾದರೊಂದು ಅಂಶ ಅದರಲ್ಲಿರಬೇಕು. ಸಂಕೇತ ಚಿಹ್ನೆಯು ಹಸ್ತಪ್ರತಿಯ ಮೂಲಸ್ಥಳಕ್ಕೆ ಸಂಬಂಧಿಸಿರಬಹುದು; ಅಥವಾ ಹಸ್ತಪ್ರತಿಯು ಒಂದಕ್ಕಿಂತ ಹೆಚ್ಚು ಲಿಪಿಗಳಲ್ಲಿ ಉಳಿದು ಬಂದಿರದಿದ್ದಲ್ಲಿ ಲಿಪಿಯ ಹೆಸರಿಗೆ ಸಂಬಂಧಿಸುವ ಚಿಹ್ನೆಯಾಗಿರಬಹುದು. ಒಂದು ಲಿಪಿಯಲ್ಲಿ ರಚಿತವಾದ ಅಥವಾ ಒಂದೇ ಸ್ಥಳವಲ್ಲಿ ದೊರೆತ ಹೆಚ್ಚು ಹಸ್ತಪ್ರತಿಗಳಿದ್ದಲ್ಲಿ ಸಂಕೇತಾಕ್ಷರಗಳ ಕೆಳಗೆ ಅಂಕೆಗಳನ್ನಿಟ್ಟು ಅವುಗಳನ್ನು ಸೂಚಿಸಬಹುದು. ಹೀಗೆ $g_1$ $g_2$ $g_3$ . . . gr—ಈ ಸಂಕೇತಗಳು (ಸಂಕೇತವು ಲಿಪಿಗೆ ಸಂಬಂಧಿಸಿದ್ದಲ್ಲಿ) ಗ್ರಂಥಲಿಪಿಯಲ್ಲಿ ಬರೆದ r ಪ್ರತಿಗಳೆಂಬುದನ್ನು ಸೂಚಿಸುತ್ತವೆ; ಹಾಗಲ್ಲದೆ ಹಸ್ತಪ್ರತಿಯನ್ನು ಸಂಗ್ರಹಿಸಿಟ್ಟದ್ದ ಸ್ಥಳಕ್ಕೆ ಸಂಬಂಧಿಸಿದ್ದಲ್ಲಿ ಗ್ವಾಲಿಯರ್‌ನಲ್ಲಿ ದೊರೆತ r ಹಸ್ತಪ್ರತಿಗಳೆಂಬುದನ್ನು ತಿಳಿಸುತ್ತವೆ. ಹಸ್ತಪ್ರತಿಗಳ ದೋಷದ ಪ್ರಮಾಣವನ್ನು ಸೂಚಿಸುವಂತೆ ಆರೋಹಣಕ್ರಮವಲ್ಲಿ ಸಂಖ್ಯೆಗಳನ್ನು ಬಳಸುವುದರ ಮೂಲಕ ಸಂಕೇತಾಕ್ಷರ ಮತ್ತು ಸಂಖ್ಯೆಗಳ ಜೋಡಣೆಯು ಹೆಚ್ಚು ಅರ್ಥಪೂರ್ಣವಾಗುವಂತೆ ಮಾಡಬಹುದು. ಆ ಪ್ರಕಾರ $g_1$ ಎಂಬುದ $g_2$ ಗಿಂತ ಉತ್ತಮವಾದ ಪ್ರತಿ. $g_2$ ಎಂಬುದು $g_3$ ಗಿಂತ ಉತ್ತಮವಾದ ಪ್ರತಿ.

ಮೇಲೆ ಕೊಟ್ಟ ಪಟ್ಟಿಯಲ್ಲಿ ಸೂಚಿಸಿರುವ ಕ್ರಮಕ್ಕೆ ಅನುಗುಣವಾಗಿ ಹಸ್ತಪ್ರತಿಗಳ ವಿವರಣೆಯನ್ನು ಈಗ ಕೊಡಬೇಕಾಗುತ್ತದೆ. ಈ ವಿವರಣೆಯಲ್ಲಿ ಹಸ್ತಪ್ರತಿಯ ಸಂಕೇತಾಕ್ಷರ, ಹಸ್ತಪ್ರತಿ ಇದ್ದ ಸ್ಥಳ, ಗ್ರಂಥಭಂಡಾರದ ಹೆಸರು ಮತ್ತು ಚಿಹ್ನೆ, ಪತ್ರಗಳ ಸಂಖ್ಯೆ, ಪ್ರತಿಪತ್ರದಲ್ಲಿನ ಸಾಲುಗಳ ಸಂಖ್ಯೆ ಮತ್ತು ಮತ್ತು ಪ್ರತಿ ಸಾಲಿನಲ್ಲಿನ ಅಕ್ಷರಗಳ ಸಂಖ್ಯೆ, ಬರೆಯಲು ಬಳಸಿರುವ ಪತ್ರ ಮತ್ತು ಕೈಬರಹದ ಶೈಲಿ ಇವುಗಳನ್ನು ಪ್ರಸ್ತಾಪಿಸಿರುತ್ತದೆ. ಹಸ್ತಪ್ರತಿಗಳ ಈ ಬಾಹ್ಯವಿವರಣೆಯಲ್ಲಿ ಹಸ್ತಪ್ರತಿಯಲ್ಲಿನ ಅಕ್ಷರ ಸಂಯೋಜನೆಯ (Orthographical) ವೈಶಿಷ್ಟ್ಯಗಳು, ಹಸ್ತಪ್ರತಿಯ ಪ್ರಕೃತಿ ಮತ್ತು ಸ್ಥಿತಿ, ಪತ್ರದ ಅಂಚಿನಲ್ಲಿ ಮತ್ತು ಸಾಲುಗಳ ನಡುವೆ ಇರುವ ತಿದ್ದುಪಾಟುಗಳು. ಪತ್ರಗಳ ಎಣಿಕೆಯಲ್ಲಿನ ವೈಶಿಷ್ಟ್ಯಗಳು, ಅಧ್ಯಾಯಗಳ ಸಂಖ್ಯೆ, ಇರಬಹುದಾದ ಲೋಪದೋಷಗಳು—ಇನ್ನೆಲ್ಲವನ್ನೂ ಹೇಳಬೇಕು. ಪಾಠದ ಆರಂಭ ಮತ್ತು ಅಂತ್ಯಗಳನ್ನೂ ತಿಳಿಸಬೇಕು.

ಮಧ್ಯದಲ್ಲಿ ಬರುವ ಪ್ರತಿರಚನೆಗೆ ಸಂಬಂಧಿಸಿದ ವಿಷಯಗಳು ಪಾಠಪರಂಪರೆಯ ಚರಿತ್ರೆಯನ್ನು ತಿಳಿಸುವಂತಿದ್ದಲ್ಲಿ ಅವುಗಳನ್ನೂ ಸೂಚಿಸಬೇಕು. ಹಸ್ತಪ್ರತಿಯನ್ನು ಬರೆಯಿಸಿರಬಹುದಾದ ಆಶ್ರಯದಾತನ ಹೆಸರು, ಲಿಪಿಕಾರನ ಹೆಸರು, ಹಸ್ತಪ್ರತಿ ರಚನೆಯಾದ ಸ್ಥಳ ಮತ್ತು ಕಾಲಗಳು ಸಂಪಾದಕನಿಗೆ ತಿಳಿಯಲು ಸಾಧ್ಯವಿದ್ದಾಗ ಅವುಗಳನ್ನು ಈ ವಿವರಣೆಯಲ್ಲಿ ಸೇರಿಸಬೇಕು. ಕೈಬರಹದ ಶೈಲಿಯನ್ನು ಕುರಿತು ಹೇಳುವಾಗ ಹಸ್ತಪ್ರತಿಯ ಉದ್ದಕ್ಕೂ ಒಂದೇ ಕೈಬರೆಹವಿದೆಯೋ ಅಥವಾ ಹಲವರು ಅದನ್ನು ಬರೆದಿರುವಂತೆ ತೋರುತ್ತದೆಯೋ ಎಂಬುದನ್ನು ತಿಳಿಸಬೇಕು. ಅದರಂತೆಯೇ ಅಂಚಿನಲ್ಲಿ ಅಥವಾ ಸಾಲುಗಳ ನಡುವೆ ಕಂಡುಬರುವ ಪ್ರಕ್ಷಿಪ್ತಲೇಖನ ಅಥವಾ ತಿದ್ದುಪಡಿಗಳ ವಿಷಯ. ಮೊದಲು ಬರೆದವನ ಕೈಬರೆಹದಲ್ಲಿರುವ ತಿದ್ದುಪಡಿಗಳು ಅನಂತರದವನ ತಿದ್ದುಪಡಿಗಳಿಗಿಂತ ಭಿನ್ನವಾದ (ಮತ್ತು ಶ್ರೇಷ್ಠವೂ ಆದ) ತಿದ್ದುಪಡಿಗಳೆಂಬುದನ್ನು ನಾವು ಆಗಲೇ ನೋಡಿದ್ದೇವೆ. ಓದುಗನಿಗೆ ತನ್ನ ವಿಮರ್ಶಾತ್ಮಕ ಉದ್ದೇಶಗಳಿಗೆ ಸಹಾಯವಾಗುವಂತೆ ಹಸ್ತಪ್ರತಿಯ ಸ್ಥಿತಿ ಮತ್ತು ಯೋಗ್ಯತೆಗಳನ್ನು ಕಣ್ಣಮುಂದೆ ಚಿತ್ರಿಸಿಕೊಳ್ಳಲು ಬೇಕಾಗುವ ಎಲ್ಲ ವಿಷಯಗಳನ್ನೂ ಈ ವಿವರಣೆಯಲ್ಲಿ ಸೇರಿಸಬೇಕು.

ಕೆಲವು ಹಸ್ತಪ್ರತಿಗಳನ್ನು ಪರಿಷ್ಕರಣಕಾರ್ಯಕ್ಕೆ ಬಳಸದೆ ಬಿಟ್ಟಿದ್ದಲ್ಲಿ ಏಕೆ ಹಾಗೆ ಬಿಡಲಾಯಿತೆಂಬುದನ್ನು ಪ್ರಸ್ತಾಪಿಸಬೇಕು. ಅದರಂತೆ ಹಸ್ತಪ್ರತಿಗಳ ಕೆಲವು ಭಾಗಗಳನ್ನು ಮಾತ್ರವೇ ಪಾಠಾಂತರ ಸಂಕಲನಕ್ಕೆ ಬಳಸಿದ್ದಾಗ ಅಂಥ ಭಾಗಗಳು ಹಸ್ತಪ್ರತಿಯಲ್ಲಿ ಎಲ್ಲಿ ಆರಂಭಗೊಂಡು ಎಲ್ಲಿ ಮುಗಿಯುತ್ತವೆ ಎಂಬುದನ್ನೂ ಹೇಳಬೇಕು.

ಈ ದೀರ್ಘ ವಿವರಣೆಯಲ್ಲಿ ಸೇರಬೇಕಾದ ಮತ್ತೊಂದು ಅಂಶವೆಂದರೆ ಹಸ್ತಪ್ರತಿಯನ್ನು ಎಷ್ಟರಮಟ್ಟಿಗೆ ಅವಲಂಬಿಸಬಹುದೆಂಬ ಬಗ್ಗೆ ಸಂಪಾದಕನ ತೀರ್ಪು.

ಅನೇಕ ಹಸ್ತಪ್ರತಿಗಳಲ್ಲಿ ಮಧ್ಯೆ ಅಥವಾ ಅಧ್ಯಾಯದ ಆರಂಭಭಾಗದಲ್ಲಿ ಲಿಪಿಕಾರನು ಬರೆದ 'ಪ್ರಶಸ್ತಿ'ಗಳಿರುತ್ತವೆ. ಅವುಗಳಲ್ಲಿ ಅನೇಕವೇಳೆ ಚಾರಿತ್ರಿಕಾಂಶಗಳಿರುತ್ತವೆ. ಆದರೆ ಅವುಗಳಿಗೂ ಗ್ರಂಥಪಾಠಕ್ಕೂ ಸಂಬಂಧವಿರುವದಿಲ್ಲ. ಅಂಥ ಪ್ರಶಸ್ತಿಗಳನ್ನು ವಿಮರ್ಶನ ವಿಭಾಗದಲ್ಲಿ ಕೊಡುವ ಬದಲು ಹಸ್ತಪ್ರತಿ ವಿವರಣೆಯಲ್ಲಿ ಕೊಡುವುದು ಉತ್ತಮ. ಪಾಠಾಂತರಸಂಕಲನ ಭಾಗಶಃ ನಡೆದಿದ್ದಾಗ ಗ್ರಂಥದ ಬೇರೆ ಬೇರೆ ಭಾಗಗಳಿಗೆ ಯಾವ ಯಾವ ಹಸ್ತಪ್ರತಿಗಳನ್ನು ಬಳಸಿದೆಯೆಂದು ತೋರಿಸಿರುವ ಒಂದು ಪಟ್ಟಿಯನ್ನು ಕೊಡಬೇಕು. ವಿಮರ್ಶಾದೃಷ್ಟಿಯುಳ್ಳ ಓದುಗರು ಸಂಯೋಜಿತಪಾಠವನ್ನೂ ಮತ್ತು ವಿಮರ್ಶನ ವಿಭಾಗದಲ್ಲಿ ಕೊಟ್ಟಿರುವ ಟಿಪ್ಪಣಿಗಳನ್ನೂ ಅಭ್ಯಾಸ ಮಾಡುವಾಗ ಮೇಲಿನ ವಿಷಯ ಅವರಿಗೆ ಸುಲಭವಾಗಿ ತಿಳಿಯಲು ಇದರಿಂದ ಸಹಾಯವಾಗುತ್ತದೆ. ಪಟ್ಟಿಯ ರೂಪದಲ್ಲಿರುವುದರಿಂದ ನೋಡಬೇಕಾದ ವಿಷಯ ಸುಲಭವಾಗಿ ಸಿಗುತ್ತದೆಯಲ್ಲದೆ ಓದುಗನ ಶ್ರಮ ಎಷ್ಟೋ ಕಡಿಮೆಯಾಗುತ್ತದೆ.

ಹಸ್ತಪ್ರತಿಗಳನ್ನು ಕುರಿತು ವಿವರವಾಗಿ ಹೇಳಿದನಂತರ ಉಪಲಬ್ಧವಿರುವ ಮತ್ತು ಗ್ರಂಥದ ಅಭ್ಯಾಸಕ್ಕೆ ಬಳಸಲಾದ ಪ್ರಾಚೀನ ವ್ಯಾಖ್ಯಾನಗಳು, ಸಾರಸಂಗ್ರಹಗಳು, ರೂಪಾಂತರಗಳು ಮತ್ತು ಕಾವ್ಯಮಂಜರಿಗಳಂಥ ಸಾಕ್ಷ್ಯಸಾಮಗ್ರಿಗಳ ವಿವರವಾದ ಪರಿಚಯವನ್ನು ಮಾಡಿಕೊಡಬೇಕು.

ಇದಾದಮೇಲೆ ಹಸ್ತಪ್ರತಿಗಳ ಪರಸ್ಪರ ವಂಶಸಂಬಂಧವನ್ನು ಸಾಧ್ಯವಾದರೆ ಒಂದು ವಂಶನಕ್ಷೆಯ ರೂಪದಲ್ಲಿ ತೋರಿಸಬೇಕು. ಉಪಲಬ್ಧವಾಗಿರುವ ಪ್ರತಿಗಳಿಂದ ದೊರೆಯುವ ಆಧಾರಗಳ

*

ಮೇಲೆ, ಕೆಲವು ಹಸ್ತಪ್ರತಿಗಳು ಈಗ ಅಸ್ತಿತ್ವದಲ್ಲಿಲ್ಲದಿದ್ದರೂ ಒಂದು ಕಾಲದಲ್ಲಿ ಇದ್ದುವೆಂದು ಊಹಿಸುವುದು ಸಾಧ್ಯವಿರುತ್ತದೆ. ಅಂಥ ಹಸ್ತಪ್ರತಿಗಳನ್ನು ಈಗ ಉಪಲಬ್ಧವಿರಲಿ ಇಲ್ಲದಿರಲಿ, ಹಿಂದೆ ಇದ್ದುದೆಂದು ಖಚಿತವಾಗಿ ಗೊತ್ತಿರುವ ಹಸ್ತಪ್ರತಿಗಳಿಂದ ಬೇರ್ಪಡಿಸಿ ತೋರಿಸುವ ಯಾವುದಾದರೊಂದು ವಿಧಾನವನ್ನು ಅಳವಡಿಸಿಕೊಳ್ಳಬೇಕು. ಮೊದಲಿನದನ್ನು ಚುಕ್ಕೆಗಳ ಸಾಲಿನಿಂದಲೂ ಎರಡನೆಯದನ್ನು ನೇರವಾದ ಗೆರೆಗಳಿಂದಲೂ ಗುರುತಿಸುವುದು ಅತ್ಯಂತ ಸುಲಭವಾದ ವಿಧಾನ.

ದೊರೆತಿಲ್ಲದ ಪ್ರತಿಗಳನ್ನು ಅಥವಾ ಈಗ ಅಸ್ತಿತ್ವದಲ್ಲಿಯೇ ಇಲ್ಲದಿದ್ದರೂ ವಂಶಸಂಬಂಧವನ್ನು ವಿವರಿಸುವಾಗ, ಹಿಂದೆ ಇದ್ದುವೆಂದು ಊಹಿಸಬೇಕಾಗಿ ಬರುವ ಪ್ರತಿಗಳನ್ನು ಗ್ರೀಕ್ ಅಕ್ಷರಗಳ ($\alpha\beta\gamma$) ಮೂಲಕ ಅಥವಾ ನಕ್ಷತ್ರಾಕ್ಷರಗಳ (A* B* C* *a** *b** *c**) ಮೂಲಕ ಸೂಚಿಸಬೇಕು. ಭಾಷಾವಿಜ್ಞಾನದಲ್ಲಿ ಜ್ಞಾತಿ ಶಬ್ದಗಳ ಸಂಬಂಧವನ್ನು ವಿವರಿಸುವಾಗ ಅನುಸರಿಸುವ ವಿಧಾನವನ್ನು ನಕ್ಷತ್ರಾಕ್ಷರಗಳ ವಿಧಾನವು ಹೋಲುವುದರಿಂದ ಅದನ್ನೇ ಬಳಸಬಹುದು.

ಹಸ್ತಪ್ರತಿಯ ಸಂಭಾವ್ಯವಾದ ಅಥವಾ ಖಚಿತವಾದ ಕಾಲ ತಿಳಿದಿದ್ದ ಪಕ್ಷದಲ್ಲಿ ಸಂಪಾದಕನು ಅದನ್ನು ಅಂಕೆಗಳಿಂದ ತಿಳಿಸಬೇಕು. ಆ ಅಂಕೆಗಳನ್ನು ಹಸ್ತಪ್ರತಿಗಳ ಸಂಕೇತಚಿಹ್ನೆಯ ಮೇಲ್ಭಾಗದಲ್ಲಿ ಸೇರಿಸಬೇಕು. $M^{11}$ ಎಂಬುದು ಈ ಪ್ರಕಾರ M ಎಂಬ ಸಂಕೇತದಿಂದ ಸೂಚಿತವಾದ ಕ್ರಿ. ಶ. ಹನ್ನೊಂದನೆಯ ಶತಮಾನದ ಹಸ್ತಪ್ರತಿ ಎನಿಸಿಕೊಳ್ಳುತ್ತದೆ. ಹಾಗೆಯೇ $K^{13\text{-}14}$ ಎಂಬ ಸಂಕೇತವು K ಹಸ್ತಪ್ರತಿಯ ಕಾಲವು ಕ್ರಿ. ಶ. ಹದಿಮೂರು ಮತ್ತು ಹದಿನಾಲ್ಕನೆಯ ಶತಮಾನಗಳ ಮಧ್ಯದಲ್ಲಿ ಎಲ್ಲೋ ಇದೆಯೆಂಬುದನ್ನು ಸೂಚಿಸುತ್ತದೆ. ಹಸ್ತಪ್ರತಿಯ ಕಾಲ ಇಂಥದೇ ಎಂಬುದನ್ನು ಹೇಳಲು ಖಚಿತ ಆಧಾರಗಳಿಲ್ಲದೆ, ಬಾಹ್ಯಸಾಕ್ಷ್ಯಗಳ ಆಧಾರದ ಮೇಲೆ ಅದರ ಕೆಳಗಿನ ಗಡುವನ್ನು ಮಾತ್ರ ನಿರ್ಧರಿಸುವುದು ಸಾಧ್ಯವಿದ್ದಾಗ ಆ ಗಡುವನ್ನು ಸೂಚಿಸುವ ಅಂಕೆಯ ಮುಂದೆ ನಕ್ಷತ್ರಚಿಹ್ನೆಯನ್ನು ಸೇರಿಸಬೇಕು. (ಆ ಪ್ರಕಾರ K XIII*)

ಮೇಲೆ ಹೇಳಿದ ವಂಶನಕ್ಷೆಯು ಮುಗಿದಕೂಡಲೇ ಆ ನಕ್ಷೆಯಲ್ಲಿ ಬಳಸಿರುವ ಸಂಕೇತಾಕ್ಷರಗಳ ವಿವರಣೆಯನ್ನು ಕೊಡಬೇಕು. ಅನಂತರ ಸಂಪ್ರದಾಯಗಳ ಮತ್ತು ಅವುಗಳ ಪಾಠಶಾಖೆಗಳ ಸಮೀಕ್ಷೆ ಇರಬೇಕು. ಈ ವಿಮರ್ಶಾತ್ಮಕ ಸಮೀಕ್ಷೆಯಲ್ಲಿ ಬೇರೆ ಬೇರೆ ಸಂಪ್ರದಾಯಗಳ ನಡುವೆ ಕಂಡುಬರುವ ಗಮನಾರ್ಹವಾದ ಹೊಂದಿಕೆ ಮತ್ತು ವಿರೋಧಗಳು ಯಾವುವು ಎಂಬುದನ್ನು ಸಂಪಾದಕನು ಸೂಚಿಸಬೇಕು. ಹಾಗೆಯೇ ಬೇರೆ ಬೇರೆ ಪಾಠಶಾಖೆಗಳಿಗೆ ಇರುವ ಹೊಂದಿಕೆ ವಿರೋಧಗಳನ್ನು ತಿಳಿಸಬೇಕು. ಜನಪ್ರಿಯವಾಗಿರುವ ಮತ್ತು ಸಾಮಾನ್ಯ ಸ್ವರೂಪಕ್ಕೆ ತಿರುಗಿಬಿಟ್ಟಿರುವ ಪಾಠವೊಂದು ಇದ್ದಲ್ಲಿ ಸಂಪಾದಕನು ಪಾಠಸಂಪ್ರದಾಯಗಳಿಗೂ ಜನಪ್ರಿಯಪಾಠಕ್ಕೂ ಇರುವ ಮುಖ್ಯವ್ಯತ್ಯಾಸಗಳನ್ನು ಹೇಳಬೇಕು. ವಿಭಿನ್ನಪಾಠಾಂತರಗಳಲ್ಲಿ ತೋರಿಬರುವ ಏಕತೆ ಮತ್ತು ಬಹು ಸಂಖ್ಯಾಕವೂ ಬಹುವಿಧವೂ ಆದ ಪಾಠಾಂತರಗಳ ಭಿನ್ನತೆ—ಇವುಗಳ ಆಧಾರದ ಮೇಲೆ ಪಾಠಸಂಪ್ರದಾಯಗಳು ಪರಸ್ಪರ ಬೇರೆಯಾಗುತ್ತವೆ. ಈ ವ್ಯತ್ಯಾಸಗಳನ್ನು ವರ್ಗೀಕರಿಸಿ ಮುನ್ನುಡಿಯಲ್ಲಿ ಸೂಚಿಸಬೇಕು. ಏಕೆಂದರೆ ಸಂಪಾದಕನು ಪಾಠಸಂಪ್ರದಾಯಗಳನ್ನು ಅಂಗೀಕರಿಸುವುದು ಅಂಥ ಆಧಾರದ ಮೇಲೆ. ಅಲ್ಲದೆ ಸಂಪಾದಕನ ಆಧಾರಪೂರ್ಣವಾದ ತೀರ್ಮಾನಗಳು ವಿಮರ್ಶಕ-ವಾಚಕನ (critical reader) ಎದುರಿಗೆ ಇರಬೇಕು.

ಪಾಠಸಂಪ್ರದಾಯಗಳನ್ನು ಕುರಿತು ಹೇಳಿದ ಮೇಲೆ ಸಂಪಾದಕನು ಮಾಡಬೇಕಾದ ಕೆಲಸವೆಂದರೆ ಬೇರೆ ಬೇರೆ ಪಾಠಶಾಖೆಗಳ ಮತ್ತು ಅವುಗಳ ಹಸ್ತಪ್ರತಿಗಳ ಪರಸ್ಪರ ಸಂಬಂಧವನ್ನೂ

ವೈಶಿಷ್ಟ್ಯಗಳನ್ನೂ ನಿರ್ಧರಿಸುವುದು. ಈ ನಿರೂಪಣೆಯು ಸಂಪಾದಕನು ಮಾಡಿದ ಹಸ್ತಪ್ರತಿಗಳ ವರ್ಗೀಕರಣವು ಸಮರ್ಪಕವೆಂದು ತೋರಿಸುವಷ್ಟು ವಿವರವಾಗಿರಬೇಕು. ಪಾಠಶಾಖೆಗಳಿಗಿರುವ ಪರಸ್ಪರ ಸಂಬಂಧ ವ್ಯತ್ಯಾಸಗಳನ್ನು ಸಾಕ್ಷ್ಯಸಹಿತವಾಗಿ ಸಮರ್ಪಕವಾಗಿ ಚರ್ಚಿಸಿರಬೇಕು. ಎಲ್ಲಿ ಪಾಠಸಂಪ್ರದಾಯಕ್ಕೂ ಮತ್ತು ಅವರ ಉಪವಿಭಾಗಗಳಾದ ಪಾಠಶಾಖೆಗಳಿಗೂ ಮಧ್ಯೆ ಉಪ ಪಾಠಸಂಪ್ರದಾಯ (Sub-recension)ಗಳು ಇರುವವೋ ಇಲ್ಲಿ ಉಪಪಾಠ ಸಂಪ್ರದಾಯಗಳನ್ನು ವಿವರವಾಗಿ ಅಭ್ಯಾಸಮಾಡಿ ಅವರ ಫಲಿತಾಂಶಗಳನ್ನು ಓದುಗನ ಮುಂದಿಡಬೇಕು. ಸಂಪಾದಕನು ತಾನು ನೀಡುತ್ತಿರುವುದು ವಿವರವಾದ ಅಭ್ಯಾಸಕ್ಕೆ ಸಂಬಂಧಿಸಿದ ಕೆಲವು ಮಾದರಿಗಳೆಂಬುದನ್ನು ನೆನಪಿನಲ್ಲಿಟ್ಟುಕೊಂಡು ಮಾದರಿಯಾದ ಮತ್ತು ಮುಖ್ಯವಾದ ನಿದರ್ಶನಗಳನ್ನು ತುಂಬ ಎಚ್ಚರಿಕೆ ಯಿಂದ ಆರಿಸಬೇಕು. ಹೀಗೆ ಸಂಪಾದಕನು ಎರಡು ಹಸ್ತಪ್ರತಿಗಳು ಅಥವಾ ಪಾಠರೂಪಗಳು ಒಂದೇ ಆಕರಕ್ಕೆ ಸೇರಿದ್ದೆಂದು ತೋರಿಸಬೇಕು. ಅಷ್ಟೇ ಅಲ್ಲ, ಒಂದು ಮತ್ತೊಂದರ ಬರಿಯ ನಕಲಾಗಿರದೆ ಪಾಠಪರಂಪರೆಯ ನಿರ್ದಿಷ್ಟ ಎಳೆಯೊಂದಕ್ಕೆ ಸೇರುವ ಸ್ವತಂತ್ರಪ್ರತಿ ಎಂಬುದನ್ನು ಕೇವಲ ಅವಿವಾದಸ್ಪದ ಆಧಾರಗಳ ಮೇಲೆ ದೃಢಪಡಿಸಬೇಕು. ಅದರಂತೆಯೇ ಬೇರೆ ಬೇರೆ ಪಾಠ ಶಾಖೆಗಳಲ್ಲಿ ಮಿಶ್ರಹಸ್ತಪ್ರತಿಗಳು ಇರುವುದಾದಲ್ಲಿ ಮಿಶ್ರಪಾಠದ ನಿದರ್ಶನಗಳನ್ನು ತೋರಿಸಬೇಕು.

ಈವರೆಗೆ ಸಂಪಾದಕ ಹೇಳಿರುವುದೆಲ್ಲ ಅವನು ಬಳಸಿರುವ ಹಸ್ತಪ್ರತಿ ಸಾಮಗ್ರಿಗಳ ಸ್ವರೂಪದ ಮತ್ತು ಪಾಠಯೋಜನೆಯ ಸಂಬಂಧದಲ್ಲಿ ಅವುಗಳನ್ನು ಎಷ್ಟು ನೆಚ್ಚಬಹುದೆಂಬ ಬಗ್ಗೆ ಅವನು ಕೊಡುವ ತೀರ್ಪಿನ ವಿಷಯವಾಯಿತು. ಈಗ ಅವನು ಮಾಡಬೇಕಾದದ್ದು ಪಾಠಯೋಜನೆ ಮಾಡುವಾಗ ತಾನು ಅನುಸರಿಸಿದ ವಿಮರ್ಶಾತತ್ವಗಳನ್ನು, ವಿಶೇಷವಾಗಿ ತನ್ನೆದುರು ಇರುವ ಸಾಮಗ್ರಿಗೆ ಸಂಬಂಧಿಸಿದಂತೆ, ನಿರೂಪಿಸುವುದು. ಹೀಗೆಂದಾಗ ಅವನು ಗ್ರಂಥಸಂಪಾದನೆಯ ಬಗ್ಗೆ ಒಂದು ಗ್ರಂಥ ಬರೆಯಬೇಕೆಂದು ಅರ್ಥವಲ್ಲ. ಒಂದು ಗ್ರಂಥಕ್ಕೆ ಅನ್ವಯಿಸಿದ ಸಾಮಾನ್ಯ ನಿಯಮಗಳನ್ನು ತಾನು ಸಂಪಾದಿಸುತ್ತಿರುವ ಗ್ರಂಥಕ್ಕೆ ಅನ್ವಯಿಸಿದ ಸಾಮಾನ್ಯನಿಯಮಗಳನ್ನು ಹೇಳಬೇಕು. ಪ್ರಸಿದ್ಧವಾದ ಸಂಪಾದನಾತತ್ವಗಳಿಗೆ ಹೊರತಾದ ನಿಯಮಗಳನ್ನು ಅವನು ಅನುಸರಿಸಿದ್ದಲ್ಲಿ ಅದಕ್ಕೆ ಕಾರಣವಾದ ಹಸ್ತಪ್ರತಿಸಾಮಗ್ರಿಯ ಸ್ವರೂಪವನ್ನು ಸೂಚಿಸಬೇಕು. ಅವುಗಳನ್ನು ಅನ್ವಯಿಸುವ ವಿಷಯದಲ್ಲಿ ತೊಂದರೆಗಳಿದ್ದರೆ ಆ ತೊಂದರೆಗಳನ್ನು ಪ್ರಸ್ತಾಪಿಸ ಬೇಕು. ತಾನು ಬಳಸಿದ ಹಸ್ತಪ್ರತಿಗಳನ್ನು ಹೀಗೆ ತೂಗಿದ ಮೇಲೆ ಮೂಲಪಾಠವನ್ನು ಹೇಗೆ ಸಂಯೋಜಿಸಲಾಯಿತೆಂದು ಹೇಳಬೇಕು. ಆ ರೀತಿ ಸಂಪಾದಿಸಿದ ಪರಂಪರಾಗತಪಾಠವನ್ನು ಎಲ್ಲಿಯಾದರೂ ತಾನು ತಿದ್ದಿದ್ದರೆ ಮೂಲಪಾಠಾಂತರದ ಬಗ್ಗೆ ಹಾಗೆ "ಊಹೆ'ಮಾಡಿದುದಕ್ಕೆ ಕಾರಣಗಳೇನು ಎಂದು ತಿಳಿಸಬೇಕು. ದೀರ್ಘವಾದ ಪ್ರಕ್ಷೇಪಭಾಗಗಳೇನಾದರೂ ಇದ್ದಲ್ಲಿ ಅವು ಗಳನ್ನು ಪಾಠದಲ್ಲಿ ಸೇರಿಸದಿರುವುದಕ್ಕೆ ಕಾರಣಗಳನ್ನು ಸ್ಪಷ್ಟವಾಗಿ ಸೂಚಿಸಬೇಕು. ಸಣ್ಣ ಪ್ರಕ್ಷೇಪಗಳ ಬಗ್ಗೆ ವಿಶೇಷವಾಗಿ ಚರ್ಚಿಸಬೇಕಾದುದಿಲ್ಲ.

ತಾನು ಸಂಪಾದಿಸುತ್ತಿರುವ ಕೃತಿಯ ಬೇರೆ ಮುದ್ರಣಗಳು ಇದ್ದಲ್ಲಿ ಸಂಪಾದಕನು ಅವು ಗಳನ್ನು ಚರ್ಚಿಸಬೇಕು. ಆ ಕೃತಿಯ ಸಂಪಾದನೆಗೆ ತಾನು ಬಳಸಿರುವ ಸಾಮಗ್ರಿಗಳ ಬೆಳಕಿನಲ್ಲಿ ಇತರ ಮುದ್ರಣಗಳ ಮಿತಿಗಳೇನೆಂಬುದನ್ನು ಹೇಳಬೇಕು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಅವುಗಳನ್ನು ನಿಷ್ಪಾಕ್ಷಿಕವಾಗಿ ತೂಗಬೇಕು.

ಕೃತಿಕಾರನ ಮತ್ತು ಕೃತಿಯ ಬಗ್ಗೆ ತಿಳಿದುಬಂದಿರುವ ಚರಿತ್ರೆ, ಕೃತಿಕಾರನದೆಂದು ಹೇಳ ಲಾದ ಇತರ ಗ್ರಂಥಗಳು, ಅವನ ಸಾಹಿತ್ಯದ ಕ್ರಿಯಾಕೃತಿ, ಅವನ ವೈಶಿಷ್ಟ್ಯಗಳು ಮತ್ತು ಶೈಲಿಕ್ರಮ

ಗಳು—ಇವುಗಳನ್ನು ಸಂಪಾದಕನು ಸಾಧ್ಯವಿದ್ದ ಪ್ರಸಂಗಗಳಲ್ಲೆಲ್ಲ ತಿಳಿಸುತ್ತ ಹೋಗಬೇಕು. ಉನ್ನತ ವಿಮರ್ಶೆಯ ಸಮಸ್ಯೆಯನ್ನು ಕುರಿತು ನಾವು ಪ್ರಸ್ತಾಪಿಸಿಲ್ಲ. ಆದ್ದರಿಂದ ಕೃತಿಕಾರನು ಬಳಸಿಕೊಂಡಿರುವ ಮೂಲಗಳನ್ನು ಪ್ರತ್ಯೇಕಿಸಿ ನೋಡುವ ವಿಧಾನಗಳನ್ನು ಕುರಿತು ಇಲ್ಲಿ ಏನನ್ನೂ ಹೇಳುವುದಿಲ್ಲ. ಆದರೆ ಸಂಪಾದಕನು ಈ ವಿಷಯದಲ್ಲಿ ಮಾಡಬಹುದಾದುದೆಂದರೆ ಲಭ್ಯವಿರುವ ಇತರ ಪಾಠರೂಪವನ್ನು ವಿಮರ್ಶನ ವಿಭಾಗದಲ್ಲಿ, ತಕ್ಕ ಕಡೆಯಲ್ಲಿ ಸೂಚಿಸುವುದು ಮತ್ತು ಮುನ್ನುಡಿಯಲ್ಲಿ ಅವುಗಳ ಮುಖ್ಯಾಂಶಗಳನ್ನು ಕೊಡುವುದು. ಕೃತಿಕಾರನು ತನ್ನ ಗ್ರಂಥದಲ್ಲಿ ಇತರ ಆಧಾರಕೃತಿಗಳ ಬಗ್ಗೆ ಮಾಡಿರುವ ಎಲ್ಲ ಪ್ರಸ್ತಾಪಗಳನ್ನೂ, ಅವು ತಿಳಿದಿರಲಿ ತಿಳಿಯದ್ದಾಗಿರಲಿ, ಕಷ್ಟಪಟ್ಟು ಸಂಗ್ರಹಿಸಬೇಕು. ಅಲ್ಲದೆ ಕೃತಿಯಲ್ಲಿ ಅಲ್ಲಲ್ಲಿ ಹರಡಿಹೋಗಿರುವ ಬೇರೆ ಕವಿಗಳ ಮತ್ತು ಕೃತಿಗಳ ಹೆಸರುಗಳು, ಚಾರಿತ್ರಿಕ ಪ್ರಾಮುಖ್ಯವುಳ್ಳ ರಾಜಸಂತತಿಗಳು, ರಾಜರ ಹೆಸರುಗಳು ಮೊದಲಾದುವನ್ನು ಕಲೆಹಾಕಬೇಕು. ಕೃತಿಕಾರನು ಪ್ರಸ್ತಾಪಿಸಿರುವ ವಿಷಯಗಳ ಮೂಲವನ್ನು ಸಾಧ್ಯವಾದ ಮಟ್ಟಿಗೂ ಪತ್ತೆಮಾಡಿ ಮುನ್ನುಡಿಯಲ್ಲಿ ಅವುಗಳನ್ನು ಸೂಚಿಸಬೇಕು. ಅದರಂತೆಯೇ ತಾನು ಸಂಪಾದಿಸುತ್ತಿರುವ ಗ್ರಂಥವನ್ನು ಕುರಿತು ವ್ಯಾಖ್ಯಾನಗಳು ಇದ್ದಲ್ಲಿ ಸಂಪಾದಕನು ಅವುಗಳನ್ನು ಬರೆದವರ ಸಂಕ್ಷಿಪ್ತ ಚರಿತ್ರೆಯನ್ನು ಕೊಟ್ಟು ಅವರ ವಿಮರ್ಶೆಯನ್ನು ತೂಗಬೇಕು. ಇದರಿಂದ ಕೃತಿಯ ಬಗ್ಗೆ ಯೋಗ್ಯ ತಿಳಿವಳಿಕೆ ಮೂಡುತ್ತದೆ. ಸಾಹಿತ್ಯ ದೃಷ್ಟಿಯಿಂದ ಕೃತಿಯನ್ನು ತೂಗಿ,ಆ ನಿರ್ದಿಷ್ಟ ಸಾಹಿತ್ಯಪ್ರಕಾರಕ್ಕೆ ಕೃತಿಕಾರನ ಕೊಡುಗೆ ಎಂಥದು, ಅದರಲ್ಲಿ ಅವನ ಸ್ಥಾನವೇನು, ಅವನ ಆಲೋಚನೆ ಅಭಿವ್ಯಕ್ತಿಗಳನ್ನು ರೂಪಿಸಿದ ಪ್ರಭಾವಗಳು ಯಾವುವು, ಕೃತಿಕಾರನು ಮುಂದಿನ ಕಾಲದ ಮೇಲೆ ಬೀರಿದ ಪ್ರಭಾವವೇನು—ಇವೆಲ್ಲವನ್ನೂ ಕುರಿತು ಸಂಪಾದಕನು ಸಂಕ್ಷಿಪ್ತವಾಗಿ ಆದರೆ ವಿಮರ್ಶಾತ್ಮಕವಾಗಿ ಬರೆಯಬೇಕು.

ಇನ್ನು ಗ್ರಂಥವನ್ನೇ ಕುರಿತು ಹೇಳುವುದಾದಲ್ಲಿ ಪರಿಷ್ಕೃತ ಮುದ್ರಣವನ್ನು ಹೊರತರುವಾಗ ಬೇರೆ ಬೇರೆ ಸಂಪಾದಕರು ಅನೇಕ ಮಾರ್ಗಗಳನ್ನು ಅನುಸರಿಸಿದ್ದಾರೆ. ಸ್ವೀಕರಣ, ಶಂಕಾತ್ಮಕ ಸ್ವೀಕರಣ, ಶಂಕಾತ್ಮಕ ವರ್ಜನ ಮತ್ತು ವರ್ಜನ—ಈ ನಾಲ್ಕು ಕ್ರಮಗಳಲ್ಲಿ ಸಿದ್ಧವಾಗಿ ಪ್ರಕಟಗೊಂಡ ಪಾಠದ ವ್ಯತ್ಯಾಸಪ್ರಕೃತಿಯನ್ನು ಕುರಿತು ಯಾವ ಖಚಿತ ನಿಯಮಗಳನ್ನೂ ನೀಡುವುದು ಸಾಧ್ಯವಿಲ್ಲ. ಸಂಪಾದಕನು ತಾನು ಅನುಸರಿಸಿದ ವಿಧಾನವನ್ನು ಸಂಕೇತಗಳ ಮತ್ತು ಉಚ್ಚಾರಚಿಹ್ನೆಗಳ ಪಟ್ಟಿಯಲ್ಲಿ ಸೂಚಿಸಬೇಕು. ಊಹಾತ್ಮಕ ತಿದ್ದುಪಡಿಯನ್ನು ಕೊಡುವಾಗ ಆ ಪಾಠಾಂತರದ ಹಿಂದೆ ಒಂದು ನಕ್ಷತ್ರಚಿಹ್ನೆಯನ್ನು ಇಡುವುದು ಎಲ್ಲೆಡೆಗೂ ಸಾಮಾನ್ಯವಾದ ಕ್ರಮ. ಉಳಿದ ವಿಷಯಗಳಲ್ಲಿ ಏಕಮತವಿಲ್ಲ. ಎಲ್ಲರೂ ಬಳಸಬಹುದಾದ ಸಿಶಿತಚಿಹ್ನೆಗಳೆಂದು ಪಾಲ್‌ಮಾಸ್ ಕೆಳಕಂಡ ಸಂಕೇತಗಳನ್ನು ಕೊಟ್ಟಿದ್ದಾರೆ. ಕಲ್ಪಿತಪಾಠಗಳನ್ನು < > ಚಿಹ್ನೆಗಳಿಂದ ಸೂಚಿಸಬೇಕು. ಅವರೊಳಗೆ ಕಲ್ಪಿತಪಾಠವನ್ನು ಬರೆಯಬೇಕು. ಉದ್ದೇಶಪೂರ್ವಕ ಬಿಟ್ಟದ್ದೆಂದು ಊಹಿಸಿದ ಭಾಗಗಳಿಗೆ ಎರಡು ಕಂಸಗಳು ([ ]). ಯಾಂತ್ರಿಕ ದೋಷಗಳಿಗೆ ಚೌಕ ಕಂಸಗಳು. ಸ್ಥಳೀಯ ದೋಷಗಳನ್ನು ಕಠಾರಿ ಗುರುತಿನಿಂದ ಸೂಚಿಸಬೇಕು. ಚೌಕ ಕಂಸಗಳಿಗೂ ಮತ್ತು < > ಚಿಹ್ನೆಗಳಿಗೂ ಇರುವ ವ್ಯತ್ಯಾಸ ಬಹು ಮುಖ್ಯವಾದದ್ದು. ನಿರ್ದಿಷ್ಟ ಪಾಠಭಾಗವೊಂದನ್ನು ಲೋಪವೆಂದು ತೀರ್ಮಾನಿಸುವುದಕ್ಕೆ ಊಹೆಯೇ ಆಧಾರ ಎಂಬುದನ್ನು ಮೊದಲ ಚಿಹ್ನೆಯು ಸೂಚಿಸುತ್ತದೆ. ಸಾಕ್ಷ್ಯಗಳಿಂದ ದೃಢಪಟ್ಟ ಲೋಪವೊಂದನ್ನು ತುಂಬಿರುವುದನ್ನೂ ಕಲ್ಪಿತ ಪಾಠಕ್ಕೆ ಉಳಿದ ಪಾಠಭಾಗದೊಡನೆ ಅಂತಸ್ಸಂಭಾವ್ಯತೆ ಇರುವುದನ್ನೂ ಎರಡನೆಯ ಚಿಹ್ನೆಯು ಸೂಚಿಸುತ್ತದೆ. ಮಾತೃಕೆಯಲ್ಲಿ ಲೋಪ ಇತ್ತೆಂಬುದು ಪಾಠಪರಂಪರೆಯಿಂದ ದೃಢಪಟ್ಟ ಪ್ರಸಂಗ

ಗಳಲ್ಲಿಯೂ ಈ ಚಿಹ್ನೆಯನ್ನು ಬಳಸಲಾಗುತ್ತದೆ. ಎಡ್ಗರ್‌ಟನ್ನರು ತಮ್ಮ ಪುನರ್‌ರಚಿತ ಪಂಚತಂತ್ರದಲ್ಲಿ ಶಾಬ್ದಿಕವಾಗಿ ಖಚಿತವಲ್ಲದ ಪಾಠಭಾಗಗಳನ್ನು ಸೂಚಿಸಲು ಅವುಗಳನ್ನು ಓರೆ ಅಕ್ಷರಗಳಲ್ಲಿ ಇಟ್ಟಿದ್ದಾರೆ. ಮೂಲಪಾಠದಲ್ಲಿ ಸಾಮಾನ್ಯಾರ್ಥದಲ್ಲಿಯೂ ಇದ್ದಿರಲಾರದ ಪಾಠಭಾಗಗಳನ್ನು ವರ್ತುಲಕಂಸ ( ) ದೊಳಗೆ ಇಟ್ಟಿದ್ದಾರೆ. ಸುಕ್ತಂಕರರು ಮೂಲದಲ್ಲಿ ಖಚಿತವಾಗಿ ಇತ್ತೆಂದು ಹೇಳಲು ಸಾಧ್ಯವಿಲ್ಲದ ಪಾಠಭಾಗಗಳ ಕೆಳಗೆ ತರಂಗರೇಖೆಯನ್ನೂ ಕಲ್ಪಿತ ತಿದ್ದುಪಡಿಗೆ ನಕ್ಷತ್ರಚಿಹ್ನೆಯನ್ನೂ ಬಳಸಿದ್ದಾರೆ.

ಪ್ರತಿಯೊಂದು ಪಾಠಸಂಪ್ರದಾಯದ ಎಲ್ಲ ಪಾಠಶಾಖೆಗಳ ಸಾಕ್ಷ್ಯಾಧಾರಗಳಮೇಲೆ ಪಾಠಯೋಜನೆ ಮಾಡಿರುವುದರಿಂದಲೂ ಮತ್ತು ಪ್ರತಿಯೊಂದು ಪಾಠಾಂತರಕ್ಕೂ ಸಂಭಾವ್ಯತೆಗಳ ಸಮತೋಲನದ ಬಲವಿರುವುದರಿಂದಲೂ ಮುಖ್ಯವಾದ ಎಲ್ಲ ಪಾಠ ಭಿನ್ನತೆಗಳನ್ನೂ ವಿಮರ್ಶನ ವಿಭಾಗದಲ್ಲಿ ಕೊಡಬೇಕು. ಇದರಿಂದ ವಿಮರ್ಶನ ಬಲವುಳ್ಳ ಪ್ರತಿಯೊಬ್ಬ ಓದುಗನಿಗೂ ಅಗತ್ಯವಾದ ಕಡೆಗಳಲ್ಲಿ ಯೋಜಿತ ಪಾಠವನ್ನು ಹಿಡಿತದಲ್ಲಿಡಲು, ತಿದ್ದಲು ಪೂರ್ಣಸಾಮಗ್ರಿಯನ್ನು ಒದಗಿಸಿದಂತಾಗುತ್ತದೆ. ಇದು ನ್ಯಾಯಾಲಯದಲ್ಲಿ ದೊರೆತ ಪರ-ವಿರೋಧಸಾಕ್ಷ್ಯಗಳೆಲ್ಲದರ ಬಲದಮೇಲೆ ನ್ಯಾಯಾಧಿಕಾರಿಗಳು ಕೊಡುವ ತೀರ್ಪಿನಂತೆ. ಅದೇ ಸಾಕ್ಷ್ಯಗಳನ್ನು ಬೇರೆ ನ್ಯಾಯಾಧಿಕಾರಿಗಳು ಬೇರೆ ರೀತಿಯಲ್ಲಿ ವ್ಯಾಖ್ಯಾನಿಸಬಹುದು. ಹಾಗೆಯೇ ಸಂಪಾದಕನಷ್ಟೇ ಅರ್ಹತೆಯಿದ್ದೂ ಸಂಪಾದನೆ ಮಾಡುವ ಅವಕಾಶಗಳು ಇಲ್ಲದೆ ಇರಬಹುದಾದ ವಿಮರ್ಶಕ-ವಾಚಕರು ಇರುತ್ತಾರೆ. ಇವರು ಸಂಪಾದಕನು ಯೋಜಿಸಿದ ಪಾಠವನ್ನು ಒಪ್ಪಬಹುದು ಅಥವಾ ಒಪ್ಪದಿರಬಹುದು. ಪರಿಷ್ಕೃತ ಮುದ್ರಣವನ್ನು ಪ್ರಕಟಿಸುವುದೇ ಇಂಥ ವಾಚಕರಿಗಾಗಿ. ಆದ್ದರಿಂದ ಪಾಠಕ್ಕೆ ಹೊಂದಿಕೊಂಡಿರುವ ವಿಮರ್ಶನ ವಿಭಾಗದಲ್ಲಿ ಮುಖ್ಯವಾದ ಭಿನ್ನಪಾಠಗಳನ್ನೆಲ್ಲ ಕೊಡಬೇಕಾದುದು ಸಂಪಾದಕನ ಕರ್ತವ್ಯ. ಹೀಗೆ ಪಾಠದ ಕೆಳಭಾಗದಲ್ಲಿ ಕ್ರಮವಾಗಿ ತೋರಿಸಬೇಕಾದ ವಿಷಯಗಳೆಂದರೆ: (೧) ಪಾಠದಲ್ಲಿ ಆಗಲೇ ಸೇರಿಹೋಗಿರುವುದನ್ನು ಬಿಟ್ಟು ಪ್ರಧಾನ ಮಾತೃಕೆಗೂ ಉಳಿದ ಹಸ್ತಪ್ರತಿಗಳಿಗೂ ಇರುವ ಎಲ್ಲ ಪಾಠಭೇದಗಳು (೨) ಲಿಪಿಕಾರನ ಸ್ಖಾಲಿತ್ಯಗಳನ್ನೂ ಸೇರಿಸಿಕೊಂಡು ಎಲ್ಲ ತಿರಸ್ಕೃತ ಭಿನ್ನಪಾಠಗಳು. ಇದನ್ನು ತೋರಿಸುವುದೇನಿದ್ದರೂ ಈ ನಿರ್ದಿಷ್ಟಭಾಗದಲ್ಲಿ ಪಾಠವು ಪ್ರಧಾನ ಮಾತೃಕೆಯವರೆಗೆ ಸಾಗದೆ ಪಾಠಪರಂಪರೆಯ ಯಾವುದೋ ಒಂದು ಕೆಳಘಟ್ಟದವರೆಗೆ ಹೋಗುತ್ತದೆಯೆಂಬುದನ್ನು ತಿಳಿಸುವುದಕ್ಕೆ ಮಾತ್ರವೇ ಹೊರತು ಪಾಠನಿರ್ಣಯಕ್ಕೆ ಅವು ಪ್ರಯೋಜಕವಲ್ಲವೆಂದು ಸೂಚಿಸುವುದಕ್ಕಲ್ಲ. (೩) ಪರಸ್ಪರವಾಗಿ ಮತ್ತು ಪ್ರಧಾನ ಭಿನ್ನಪಾಠಗಳ ಜೊತೆಯಲ್ಲಿ ಹೊಂದದ ಭಿನ್ನೋಪಪಾಠಗಳು. (೪) ಹೆಚ್ಚು ಸಂಖ್ಯೆಯ ಭಿನ್ನಪಾಠಗಳಿಗೆ ಸಾಮಾನ್ಯವಾದ ಪಾಠಾಂತರಗಳು. ಬಿಡಿ ಹಸ್ತಪ್ರತಿಗಳಲ್ಲಿ ಅಥವಾ ಹಸ್ತಪ್ರತಿ ಗುಂಪಿನಲ್ಲಿ ಕಂಡುಬರುವ ಚಿಕ್ಕ ಪ್ರಕ್ಷೇಪಗಳನ್ನು ವಿಮರ್ಶನ ವಿಭಾಗದಲ್ಲಿ ಸೇರಿಸಬೇಕು; ದೊಡ್ಡ ಪ್ರಕ್ಷೇಪಗಳನ್ನು ಅನುಬಂಧವಲ್ಲಿ ಉಳಿಸಿಕೊಳ್ಳಬೇಕು. ಒಂದೇ ಒಂದು ಹಸ್ತಪ್ರತಿಯಲ್ಲಿ ಅಥವಾ ಅಮುಖ್ಯವಾದ ಹಸ್ತಪ್ರತಿಗಳ ಚಿಕ್ಕ ಗುಂಪೊಂದರಲ್ಲಿ ಕಂಡುಬರುವ ಸಣ್ಣ ಪ್ರಕ್ಷೇಪಗಳನ್ನೋ ಇಲ್ಲವೆ ಅಧಿಕ ಪಾಠಭಾಗಗಳನ್ನೋ ಅನುಬಂಧದಲ್ಲಿ ಸೇರಿಸಬಹುದು. ಅಂಥ ಅಧಿಕ ಪಾಠಭಾಗಗಳು ಪಾಠದ ಯಾವ ಭಾಗದಲ್ಲಿ ಬಂದಿವೆ ಎಂಬುದನ್ನೂ ವಿಮರ್ಶನ ವಿಭಾಗದ ಟಿಪ್ಪಣಿಯಲ್ಲಿ ಸೂಚಿಸಬೇಕು. ಹೀಗೆ ಅಧಿಕ ಪಾಠಭಾಗಗಳು ಮತ್ತು ಪ್ರಕ್ಷೇಪಗಳಿರುವ ಅನುಬಂಧವೂ ಸೇರಿ ಪಾಠಸಂಯೋಜನೆಗೆ ಲಭ್ಯವಿರುವ ಸಮಸ್ತ ಹಸ್ತಪ್ರತಿ ಸಾಮಗ್ರಿಯನ್ನೂ ವಿಮರ್ಶನ ವಿಭಾಗವು ನೀಡುತ್ತದೆ. ಇಲ್ಲಿಗೆ ವಿಮರ್ಶಾತ್ಮಕ ಪರಿಷ್ಕರಣಕ್ಕೆ ಸಂಬಂಧಿಸಿ

ದಂತೆ ಉಚಿತವಾದ ಎಲ್ಲ ವಿಷಯಗಳನ್ನೂ ಮತ್ತು ಪಾಠಯೋಜನೆಯಲ್ಲಿ ಬಳಸಿದ ತತ್ವಗಳನ್ನೂ ಸಂಪಾದಕನು ಮುನ್ನುಡಿಯಲ್ಲಿ ಕೊಟ್ಟಿದ್ದಾಯಿತು. ಇನ್ನು ಪರಿಷ್ಕೃತಪಾಠವಿರುವ ಭಾಗದಲ್ಲಿ ಯೋಜಿತಪಾಠ ಇರುವುದಲ್ಲದೆ ಒಂದೊಂದು ಬಿಡಿ ಪ್ರಸಂಗದಲ್ಲಿಯೂ ಬಾಹ್ಯ ಮತ್ತು ಅಂತ ಸ್ಸಂಭಾವ್ಯತೆಗಳು ಎಷ್ಟರ ಮಟ್ಟಿಗೆ ಹೊಂದುತ್ತವೆ ಎಂಬುದು ಸೂಚಿತವಾಗಿರುತ್ತದೆ. ಅಲ್ಲದೆ ಹಸ್ತಪ್ರತಿ ಸಾಮಗ್ರಿಯೆಲ್ಲವನ್ನೂ ಚೆನ್ನಾಗಿ ವಿಮರ್ಶಿಸಿ ಖಚಿತ ತತ್ವಗಳಿಗೆ ಅನುಗುಣವಾಗಿ ಮಂಡಿಸಿರುವ ವಿಮರ್ಶನ ವಿಭಾಗವಿರುತ್ತದೆ. ಈಗ ವಿಮರ್ಶಕ-ವಾಚಕನ ಎದುರಿಗೆ ಎಲ್ಲ ಮಹತ್ವದ ಸಾಮಗ್ರಿಯೂ ಇವೆ. ಇವುಗಳ ಬಲದ ಮೇಲೆ ಅವನು ಸಂಪಾದಕನ ಯೋಜಿತ ಪಾಠವನ್ನು ಒಪ್ಪಬಹುದು ಅಥವಾ ಎದುರಿಗಿರುವ ಸಾಮಗ್ರಿಯನ್ನು ಆಧರಿಸಿ ತನ್ನ ಅನುಭವದ ಬೆಳಕಿನಲ್ಲಿ ಅನ್ಯಪಾಠವೊಂದನ್ನು ಯೋಜಿಸಬಹುದು.

ನಾವು ಈಗ ವಿಮರ್ಶಾತ್ಮಕ ಸಂಪಾದನೆಯ ಮತ್ತೊಂದು ವಿಷಯಕ್ಕೆ ಬರುತ್ತೇವೆ. ನಿಘಂಟು ವ್ಯಾಸಂಗಕ್ಕೆ ಮತ್ತು ಶೈಲಿಯ ಅಧ್ಯಯನಕ್ಕೆ ಬಹಳ ಮುಖ್ಯವಾದ ಆದರೆ ಕಟ್ಟು ನಿಟ್ಟಾಗಿ ಗಮನಿಸಿದಾಗ ಗ್ರಂಥಸಂಪಾದನೆಯ ಒಂದು ಅಂಗವೇ ಅಲ್ಲವೆನ್ನುವಂಥ ವಿಷಯ ಅದು. ಸಂಪಾದಕನು ಕೊಡುವ ಅನುಬಂಧ ಮತ್ತು ಸೂಚಿ (Index)ಗಳಲ್ಲಿ ಈ ಕೆಲವು ವಿಷಯಗಳಿರುತ್ತವೆ. (೧) ಯೋಜಿತಪಾಠದಲ್ಲಿರಲಿ, ವಿಮರ್ಶನ ಭಾಗದಲ್ಲಿರಲಿ ಅಥವಾ ಅಧಿಕ ಪಾಠಭಾಗಗಳಿರುವ ಅನುಬಂಧದಲ್ಲಿಯೇ ಇರಲಿ ಪಾಠದ ಕಾವ್ಯಭಾಗದಲ್ಲಿರುವ ಎಲ್ಲ ಪಾದಗಳ ಒಂದು ಸೂಚಿ. (೨) ಎಲ್ಲ ಶಬ್ದಗಳ ಒಂದ ಸೂಚಿ. ಅದು ಸಾಧ್ಯವಾಗದಿದ್ದರೆ ವಿಶಿಷ್ಟ ಶಬ್ದಗಳ ಸೂಚಿ. (೩) ಪಾಠದಲ್ಲಿ ಮತ್ತು ವಿಮರ್ಶನ ವಿಭಾಗದಲ್ಲಿ ಬರುವ ಎಲ್ಲ ಪದಗಳ ಪಟ್ಟಿಯಿದ್ದು ಒಂದೆರಡು ಪದಗಳಿಗೆ ಮಾತ್ರ ಅವು ಎಲ್ಲಿ ಬರುತ್ತವೆ ಎಂಬ ವಿವರಗಳು. (೪) ಅಂಕಿತನಾಮಗಳ ಪೂರ್ಣಸೂಚಿಯೂ ಸೇರಿ ಪಾಠದಲ್ಲಿರುವ ಎಲ್ಲ ಚಾರಿತ್ರಿಕ ಮತ್ತು ಭೌಗೋಳಿಕ ಅಂಶಗಳು. ಗ್ರಂಥದ ಬೇರೆ ಬೇರೆ ಪರಿಷ್ಕರಣಗಳು ಆಗಲೇ ಪ್ರಕಟವಾಗಿದ್ದರೆ ಅವುಗಳಲ್ಲಿ ಒಂದು ಹೊಂದಿಕೆ ಇರಬೇಕು. ಆಗ ಈ ಮುದ್ರಣದ ಸಂಬಂಧ ನಿರ್ದೇಶನ (Reference) ಗಳನ್ನು ಮತ್ತೊಂದು ಮುದ್ರಣದ ಸಂಬಂಧ ನಿರ್ದೇಶನಗಳಿಗೆ ಸುಲಭವಾಗಿ ಪರಿವರ್ತಿಸಿಕೊಳ್ಳಬಹುದು. ಇವೆಲ್ಲವೂ ವಿಮರ್ಶಾತ್ಮಕ ಸಂಪಾದನೆಯ ಅಗತ್ಯಾಂಶಗಳು.

ಬೇರೆ ಗ್ರಂಥಗಳಲ್ಲಿ ಸಮಾನ ಪಾಠಗಳಿದ್ದರೆ ಸಂಪಾದಕನು ಅವುಗಳನ್ನು ಪ್ರತ್ಯೇಕ ಅನುಬಂಧದಲ್ಲಿ ಕೊಡಬೇಕಾಗುತ್ತದೆ ಮತ್ತು ಅವುಗಳಲ್ಲಿ ಪರಸ್ಪರ ಸಂಬಂಧವಿರುವ ಅಂಶಗಳನ್ನು ತೋರಿಸಬೇಕಾಗುತ್ತದೆ. ಈ ಪಾಠರೂಪಗಳ ವ್ಯಾಖ್ಯಾನವು ಉನ್ನತ ವಿಮರ್ಶೆಯ ಒಂದು ಭಾಗವಾಗುತ್ತದೆ. ಆದುದರಿಂದ ಈ ಗ್ರಂಥದಲ್ಲಿ ಅದನ್ನು ಕುರಿತು ಹೇಳುವುದಿಲ್ಲ.

ಸಾಮಗ್ರಿ ಸಂಕಲನ, ಪಾಠಸಂಪ್ರದಾಯ ನಿರ್ಣಯ ಮತ್ತು ಪಾಠಸಂಯೋಜನೆ-ಇವುಗಳಿಗೆ ಮಾತ್ರವೇ ನಮ್ಮ ಕಾರ್ಯದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡು ಪಾಠದ 'ಸಾಮಾನ್ಯ ವಿಮರ್ಶೆ' (Lower criticism) ಎಂದು ಕರೆಸಿಕೊಳ್ಳಬಹುದಾದುದನ್ನು ಮಾತ್ರ ನಾವು ಮಾಡಿದ್ದೇವೆ. ಉನ್ನತವಿಮರ್ಶೆಯ ವಿಷಯವನ್ನು ಪ್ರತ್ಯೇಕ ಗ್ರಂಥಕ್ಕೆ ಬಿಡುವುದು ಉತ್ತಮ. ಒಂದು ಕಡೆ ಖಚಿತವಾದ ಕಾಲಸೂಚಿಯ ಅಭಾವ ಮತ್ತೊಂದು ಕಡೆ ಬೇರೆ ಬೇರೆ ಕಾಲದ ಸಾಹಿತ್ಯಗಳ ಆಳವಾದ ಅಧ್ಯಯನದ ಕೊರತೆ-ಹೀಗಾಗಿ ಭಾರತದಲ್ಲಿ ಈವರೆಗೂ ಅಂಥ ಕೆಲಸಕ್ಕೆ ಅನುಕೂಲವಾದ ಪರಿಸ್ಥಿತಿಯೇ ನಿರ್ಮಾಣವಾಗಿಲ್ಲ.

ವಿಮರ್ಶನಾಂಶಗಳನ್ನು ಪ್ರಕಟಿಸುವ ಬೇರೆ ಬೇರೆ ವಿಧಾನಗಳ ಬಗ್ಗೆ ಕಡೆಯದಾಗಿ ಒಂದು ಮಾತು ಹೇಳಬಹುದು. ಕೆಲವರು ಈ ಅಂಶಗಳನ್ನು ಸಂಬಂಧಿಸಿದ ಪಾಠವಿರುವ ಪುಟದಲ್ಲಿಯೇ ಕೊಡಲು ಇಚ್ಛಿಸುತ್ತಾರೆ. ಆ ಪ್ರಕಾರ ಯೋಜಿತಪಾಠವು ಪುಟದ ಮೇಲಿನ ಅರ್ಧ ಭಾಗದಲ್ಲೂ ವಿಮರ್ಶನಾಂಶವು ಕೆಳಗಿನ ಅರ್ಧಭಾಗದಲ್ಲೂ ಬರುತ್ತವೆ. ಉಳಿದವರು ವಿಮರ್ಶನ ವಿಭಾಗ ವನ್ನು ಭಿನ್ನ ಪಾಠಾಂತರಗಳೆಂಬ ಹೆಸರಿನಲ್ಲಿ ಗ್ರಂಥದ ಕಡೆಯಲ್ಲಿ ಕೊಡುತ್ತಾರೆ. ವಿಮರ್ಶಾತ್ಮಕ ಟಿಪ್ಪಣಿಗಳಿಗೆ ಸಂಬಂಧಿಸಿದ ವಿದ್ವತ್ತೆಂದರೆ ಕೇವಲ ಭಿನ್ನಪಾಠಗಳನ್ನು ಕೊಡುವುದಕ್ಕಿಂತ ಬೇರೆ ಯಾವದ್ದು. ಪಾಠಯೋಜನೆಯಲ್ಲಿ ಬಳಸಿದ ವಿಮರ್ಶನಾಂಶಗಳೆಲ್ಲವೂ ಪಾಠವು ಮುದ್ರಿತವಾಗಿ ರುವ ಪುಟದಲ್ಲಿಯೇ ದೊರೆತರೆ ಓದುಗನಿಗೆ ಸಹಾಯವಾಗುತ್ತದೆ. ಹೆಚ್ಚು ಸಂಖ್ಯೆಯ ವಿಮರ್ಶಾ ತ್ಮಕ ಪಾಠಸಂಪಾದನೆಗಳು ಈ ವಿಧಾನವನ್ನೇ ಅನುಸರಿಸಿವೆ.

ಇಲ್ಲಿ ನಾವು ಪರಿಶೀಲಿಸದೆ ಬಿಟ್ಟ ವಿಷಯವೊಂದಿದೆ. ಕರ್ತೃವಿನ ಸ್ವಹಸ್ತಪ್ರತಿಗೂ ಮತ್ತು ಅದರ ಒಂದು ಪ್ರತಿಗೂ (ಈ ಪ್ರತಿ ಸದ್ಯಪ್ರತಿಯಾಗಿರಬಹುದು ಇಲ್ಲವೆ ಮಧ್ಯ ಪ್ರತಿಯಾಗಿರ ಬಹುದು) ಕಾಲದಲ್ಲಿ ಹೆಚ್ಚು ಅಂತರವಿಲ್ಲದೆ ಇದ್ದು ಆ ಪ್ರತಿಯು ಲಭ್ಯವಾಗಿರುವ ಎಲ್ಲ ಪ್ರತಿಗಳಿ ಗಿಂತಲೂ ಶ್ರೇಷ್ಠವಾಗಿದೆ ಎನ್ನೋಣ. ಆಗ ಅದನ್ನು ಹೆಚ್ಚು ತಿದ್ದದೆ ಲಿಪಿಕಾರ ದೋಷಗಳೆಂದು ಸ್ಪಷ್ಟ ವಾಗಿ ತಿಳಿದಿರುವ, ಅನಿವಾರ್ಯವಾದ ಸ್ಖಾಲಿತ್ಯಗಳನ್ನು ಮಾತ್ರವೇ ಸರಿಪಡಿಸಿ ಇತರ ಮುಖ್ಯ ಹಸ್ತಪ್ರತಿಗಳಲ್ಲಿ ಇರುವ ಬಿನ್ನಪಾಠಾಂತರಗಳನ್ನು ವಿಮರ್ಶನ ವಿಭಾಗದಲ್ಲಿ ಕೊಟ್ಟು ಮುದ್ರಿಸಿ ಬಿಡುವುದು ಅತ್ಯುತ್ತಮ ಮಾರ್ಗ. ಮಿತಪ್ರಯೋಜನದಿಂದ ಕೂಡಿದ ಈ ವಿಧಾನ ಕಳೆದ ಏಳೆಂಟು ನೂರು ವರ್ಷಗಳೊಳಗೆ ಬಾಳಿಹೋದ ಲೇಖಕರ ಕೃತಿಗಳಿಗೆ ಅನ್ವಯಿಸುತ್ತದೆ. ಜ್ಞಾನದೇವನ ಉಕ್ತಲೇಖನಕಾರನಾದ ಸಚ್ಚಿದಾನಂದ ಬಾಬಾ ಎಂಬಾತನ ಶಿಷ್ಯನು ಶಕೆ ೧೨೭೨ (ಕ್ರಿ. ಶ. ೧೩೫೦)[1]ರಲ್ಲಿ, ಎಂದರೆ ಸ್ವಹಸ್ತಪ್ರತಿ ರಚಿತವಾದ ಅರವತ್ತು ವರ್ಷಗಳಲ್ಲಿ ಮಾಡಿದ್ದೆಂದು ಹೇಳಲಾದ ಜ್ಞಾನೇಶ್ವರೀ ಗ್ರಂಥದ ಒಂದು ಪ್ರತಿಯಿದೆ. ಏಕನಾಥನಿಗಿಂತ ಮುಂಚಿನಕಾಲದ ಜ್ಞಾನೇಶ್ವರೀ ಹಸ್ತಪ್ರತಿಗಳೇ ಸಿಕ್ಕಿಲ್ಲದಿರುವಾಗ ಗ್ರಂಥಸಂಪಾದಕನಿಗೆ ಇರುವ ದಾರಿ ಒಂದೇ. ಅದೆಂದರೆ ಲಿಪಿಕಾರ ಸ್ಖಾಲಿತ್ಯಗಳೆಂದು ಸ್ಪಷ್ಟವಾಗಿ ತಿಳಿಯುವ ದೋಷಗಳನ್ನು ಸರಿಪಡಿಸಿ ಆ ಹಸ್ತಪ್ರತಿಯ ಪಾಠವನ್ನೇ ಮುದ್ರಿಸಿಬಿಡುವುದು ಅಲ್ಲದೆ ಕಾಲ ತಿಳಿದು ಬಂದಿರುವ ಮತ್ತು ಕಾಲ ತಿಳಿಯದಿದ್ದರೂ ಹಳೆಯ ದೆಂದು ತೋರುವ ಹಸ್ತಪ್ರತಿಗಳಲ್ಲಿ ಮುಖ್ಯವಾದವುಗಳ ಪಾಠಭೇದಗಳನ್ನು ವಿಮರ್ಶನವಿಭಾಗದಲ್ಲಿ ಕೊಡುವುದು. ಒಂದು ವೇಳೆ ಇನ್ನೂ ಮುಂಚಿನ ಹಸ್ತಪ್ರತಿಯೊಂದು ಪತ್ತೆಯಾಗಿ ಮೇಲಿನ ಹಸ್ತಪ್ರತಿಗಿಂತ ಅದು ಶ್ರೇಷ್ಠವಾದುದೆಂದು ಕಂಡುಬಂತು ಎನ್ನೋಣ. ಆಗ ನಾವು ಮಾಡ ಬೇಕಾದ ಕೆಲಸವೆಂದರೆ ಮುಂಚಿನ ಹಸ್ತಪ್ರತಿಯ ಪಾಠವನ್ನು ಸ್ವೀಕರಿಸಿ ಎರಡನೆಯ ಹಸ್ತಪ್ರತಿಯ ನೆರವಿನಿಂದ ಅದರ ಪಾಠ ಅಧಿಕೃತವಾದುದೆಂದು ತೋರಿಸುವುದು ಮತ್ತು ಮೊದಲಿನ ವಿಮರ್ಶನ ವಿಭಾಗದಲ್ಲಿ ಎಲ್ಲ ಪಾಠಭೇದಗಳನ್ನೂ ಗುರುತಿಸುವುದು. ಕ್ರಿ. ಶ. ೧೨೦೦ರ ನಂತರ ಬಾಳಿಹೋದ ಲೇಖಕರ ಗ್ರಂಥಸಂಪಾದನೆ ಅಂಥ ದೊಡ್ಡ ಸಮಸ್ಯೆಯೇನಲ್ಲ. ಸ್ವಹಸ್ತಪ್ರತಿಗೂ ಮತ್ತು ಬಹು

1 ಈ ಹಸ್ತಪ್ರತಿಯ ಮೈಕ್ರೊಫಿಲಂ ಡೆಕ್ಕನ್ ಕಾಲೇಜಿನ ಸಂಶೋಧನ ಸಂಸ್ಥೆಯಲ್ಲಿದೆ. ಅದರ ತಾರೀಖಿನ ಎರಡನೆಯ ಅಂಕೆಯನ್ನು ಒರೆಸಿಹಾಕಿದೆ. ಆದರೆ ಪಾಠಾಂತರಗಳ ಆಧಾರದ ಮೇಲೆ ಹಸ್ತಪ್ರತಿಯು ಕ್ರಿ. ಶ. ೧೩೫೦ರಲ್ಲಿ ಬರೆದ ಮೂಲಗ್ರಂಥದ ನೇರಪ್ರತಿಯೆಂಬುದಾಗಿ ತೋರಿಬರುತ್ತದೆ. ಈ ಹಸ್ತಪ್ರತಿಯ ಶೋಧನೆ ಮತ್ತು ಅದರ ಮೈಕ್ರೊಫಿಲಂ ಇವುಗಳಿಗೆ ಮೇಲಿನ ಸಂಸ್ಥೆಯ ರಿಜಿಸ್ಟ್ರಾರರಾದ ಡಾ|| ಆರ್. ಜಿ. ಹರ್ಷೆಯವರ ಸಾಹಸೋದ್ಯಮ ಕಾರಣ.

ಹಳೆಯದಾದ ಅತ್ಯುತ್ತಮ ಹಸ್ತಪ್ರತಿಗೂ ಇರುವ ಕಾಲದ ಅಂತರ ಹೆಚ್ಚಾಗಿರದಿದ್ದಲ್ಲಿ ಮೇಲೆ ತಿಳಿಸಿದ ವಿಧಾನವನ್ನು ಅನುಸರಿಸಬಹುದು. ಧಾರ್ಮಿಕರುಚಿಯಿಂದ ಕೂಡಿದ ಗ್ರಂಥಗಳು ಪರಂಪರಾಗತವಾಗಿ ನಕಲುಗೊಂಡು ಬರುವಾಗ ದೊಡ್ಡ ವ್ಯತ್ಯಾಸಗಳಿಗೆ ಎಡೆಕೊಟ್ಟಿರುತ್ತವೆ. ಆದ್ದರಿಂದ ಇಲ್ಲಿ ಸೂಚಿಸಿದ ವಿಧಾನವು ಅವುಗಳಿಗೆ ಅನುಕೂಲಕರವಾದುದಲ್ಲ. ಲೀಲಾಶುಕಬಿಲ್ವ ಮಂಗಳನ ಕೃತಿಯು ಎರಡು ಸಂಪ್ರದಾಯಗಳಾಗಿ ಉಳಿದುಬಂದಿದೆ. ಲಭ್ಯ ಪ್ರತಿಗಳಲ್ಲಿ ಅತ್ಯುತ್ತಮ ವಾದ ಪ್ರತಿಗಳ ಪಾಠಾಂತರಗಳನ್ನು ಯಥಾರ್ಥಪಾಠವೆಂದು ಸ್ಥಾಪಿಸಿಯೂ ಅವನ ಕೃತಿಯ ಮೂಲಪಾಠವನ್ನು ಪಡೆಯುವುದು ಸಾಧ್ಯವಿಲ್ಲವಾಗಿದೆ. ಸಾಕಷ್ಟು ಕಾಲ ಆ ಗ್ರಂಥದಲ್ಲಿ ವ್ಯವಸ್ಥಿತ ವಾಗಿ ಪಾಠಮಿಶ್ರಣ ನಡೆದಿದೆಯೆಂಬ ಸಾಮಾನ್ಯ ಕಾರಣದಿಂದಾಗಿ ಈ ಪರಿಸ್ಥಿತಿ ಒದಗಿದೆ. ಅಂಥ ಪ್ರಸಂಗಗಳಲ್ಲಿ ಸಾಮಗ್ರಿಸಂಕಲನ, ಪಾಠ ಸಂಪ್ರದಾಯ ನಿರ್ಣಯ ಮತ್ತು ಪಾಠ ಸಂಯೋಜನೆಯ ನಿಯತ ವಿಧಾನವನ್ನೇ ಬಳಸಬೇಕು. ಇನ್ನು ಕೆಲವು ಸಾಮಾನ್ಯಮಟ್ಟದ ಕೃತಿಗಳ ವಿಷಯ. ಅವುಗಳ ಲಭ್ಯಪ್ರತಿಗಳು ಎರಡು ಅಥವಾ ಮೂರಕ್ಕಿಂತ ಹೆಚ್ಚಾಗಿರುವುದಿಲ್ಲ. ಇದರಿಂದ ಪಾಠ ಪರಿಷ್ಕರಣದ ಸಮಸ್ಯೆ ತೀರ ಸರಳವಾಗುತ್ತದೆ. ಗಮನಿಸಬಹುದಾದ ಸಂಪ್ರದಾಯವು ಒಂದೇ ಇದ್ದಲ್ಲಿ ಅತ್ಯುತ್ತಮ ಹಸ್ತಪ್ರತಿಯನ್ನು ಪ್ರಮಾಣವಾಗಿ ತೆಗೆದುಕೊಂಡು ಆದರ ಪಾಠಾಂತರಗಳನ್ನು ಉಳಿದ ಹಸ್ತಪ್ರತಿಗಳ ನೆರವಿನಿಂದ ದೃಢೀಕರಿಸುವುದು ; ಎರಡು ಸಂಪ್ರದಾಯಗಳು ಇದ್ದಲ್ಲಿ ವಂಶಾ ವಳಿ ವಿಧಾನದಿಂದ ವಿಮರ್ಶಾತ್ಮಕ ಪಾಠವನ್ನು ಸಿದ್ಧಪಡಿಸುವುದು.

ವೈದಿಕಗ್ರಂಥಗಳಲ್ಲದ ಮಹಾಕಾವ್ಯ ಮತ್ತು ಪುರಾಣಗಳನ್ನು ಸಂಪಾದಿಸಬೇಕಾಗಿ ಬಂದಾಗ ಸಂಪಾದಕನಿಗೆ ದೊಡ್ಡ ಕಷ್ಟ ಒದಗುತ್ತದೆ. ಏಕೆಂದರೆ ಅಂಥ ಗ್ರಂಥಗಳಲ್ಲಿ ಹೆಚ್ಚಿನ ಸಂಖ್ಯೆಯ ಪಾಠಶಾಖೆ, ಉಪಪಾಠಶಾಖೆಗಳಿದ್ದು ಅವುಗಳಲ್ಲಿ ಬಹುಕಾಲದಿಂದ ಪಾಠಮಿಶ್ರಣವಾಗುತ್ತಾ ಬಂದಿರುತ್ತದೆ. ಅಂಥ ಗ್ರಂಥಗಳ ಸಂಪಾದನೆಗೆ ಮಾದರಿಕೃತಿ ಎಂದರೆ ಪೂನಾದ ಭಂಡಾರ್‌ಕರ್ ಪ್ರಾಚ್ಯ ಸಂಶೋಧನಾ ಸಂಸ್ಥೆಯವರು ಕೈಗೊಂಡಿರುವ ಭಾರತದ ವಿಮರ್ಶಾತ್ಮಕ ಪರಿಷ್ಕರಣ ಕಾರ್ಯ. ಪುರಾಣಗಳ ಅಥವಾ ಅಷ್ಟೇ ಕಷ್ಟಕರವಾದ ಇತರ ಕೃತಿಗಳ ಸಂಪಾದನೆಗೆ ತೊಡಗಿರುವ ಯಾವ ಸಂಪಾದಕನೂ ಸುಕ್ತಂಕರರು ಆದಿಪರ್ವದ ವಿಮರ್ಶಾತ್ಮಕ ಪರಿಷ್ಕರಣದಲ್ಲಿ ಬಳಸಿ ಖಚಿತ ಗೊಳಿಸಿದ ತತ್ವಗಳನ್ನು ಮತ್ತು ವಿಧಾನಗಳನ್ನು ಅಲಕ್ಷಿಸುವುದು ಸಾಧ್ಯವಿಲ್ಲ.

---



# ವಿನಿಮಯ ಪತ್ರಿಕೆಗಳು

**ದಿನಪತ್ರಿಕೆ :**

(೧) ಜನವಾಣಿ–ಬೆಂಗಳೂರು. (೨) ಸಂಯುಕ್ತ ಕರ್ನಾಟಕ–ಬೆಂಗಳೂರು.

**ವಾರಪತ್ರಿಕೆ :**

(೧) ಪ್ರಜಾಮತ–ಬೆಂಗಳೂರು. (೨) ಮೈಸೂರು ಗೆಜೆಟ್–ಬೆಂಗಳೂರು. (೩) ರಾಯಭಾರಿ–ಉಡುಪಿ. (೪) ವಿಕ್ರಮ–ಬೆಂಗಳೂರು. (೫) ಕಂಠೀರವ–ಮಂಗಳೂರು. (೬) ಪ್ರಭಾತ–ಮಂಗಳೂರು. (೭) ಕರ್ನಾಟಕ ವೈಭವ–ಬಿಜಾಪುರ. (೮) ಕರ್ಮವೀರ–ಹುಬ್ಬಳ್ಳಿ. (೯) ಬೆಳಕು–ಮೈಸೂರು. (೧೦) ನವಯುಗ–ಉಡುಪಿ. (೧೧) ಜನಪ್ರಗತಿ–ಬೆಂಗಳೂರು. (೧೨) ಕಾನಡಾವೃತ್ತ–ಕುಮಟ. (೧೩) ರಾಷ್ಟ್ರಮತ–ಮಂಗಳೂರು. (೧೪) ಕನ್ನಡಿಗ–ಹುಬ್ಬಳ್ಳಿ. (೧೫) ಪ್ರಪಂಚ–ಹುಬ್ಬಳ್ಳಿ. (೧೬) ಜನಸೇವಕ–ಅಂಕೋಲ. (೧೭) American Reporter–New Delhi. (೧೮) ಸಂದರ್ಶನ–ಬಿಜಾಪುರ. (೧೯) ಸಂದೇಶ–ಬೆಳಗಾಂವಿ. (೨೦) ಸತ್ಯವಾದಿ–ಮೈಸೂರು.

**ಮಾಸಪತ್ರಿಕೆ :**

(೧) ಅಧ್ಯಾತ್ಮಪ್ರಕಾಶ–ಹೊಳೇನರಸೀಪುರ. (೨) ಅಮರವಾಣಿ–ಯಾದಗಿರಿ. (೩) ಕಸ್ತೂರಿ–ಹುಬ್ಬಳ್ಳಿ. (೪) ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ–ಕಾಕಿನಾಡ. (೫) ಗುರುದೇವ–ಮೂಡಬಿದರೆ. (೬) ಜೀವನ–ಬೆಂಗಳೂರು. (೭) ಜಯಕರ್ನಾಟಕ–ಧಾರವಾಡ. (೮) ಜ್ಯೋತಿರ್ವಾಣಿ–ಬೆಂಗಳೂರು. (೯) ಜಯಂತಿ–ಧಾರವಾಡ. (೧೦) ಧನ್ವಂತರಿ–ಬಿಜಾಪುರ. (೧೧) ದಿವ್ಯಜ್ಯೋತಿ–ಮೈಸೂರು. (೧೨) ಪುಸ್ತಕ ಪ್ರಪಂಚ–ಮೈಸೂರು. (೧೩) ಧರ್ಮಬೋಧ–ಉಡುಪಿ. (೧೪) ಪ್ರಕಾಶಿನಿ–(ದ. ಕ.) (೧೫) ಪ್ರದೀಪ–ಧಾರವಾಡ. (೧೬) ಪರಿಮಳ–ನಂಜನಗೂಡು. (೧೭) ಮೈಸೂರು ವ್ಯವಸಾಯ ಸಂಶೋಧನ ಪತ್ರಿಕೆ–ಬೆಂಗಳೂರು. (೧೮) ಮೊಗವೀರ–ಬೊಂಬಾಯಿ. (೧೯) ಭಾರತ ಸರ್ಕಾರದ ಪ್ರಕಾಶನಭಾಗ–ನ್ಯೂ ಡೆಲ್ಲಿ. (೨೦) ಮಲೆನಾಡು–ಬೆಂಗಳೂರು. (೨೧) ಪಂಚಾಮೃತ–ಗದಗ. (೨೨) ಗಾಯನಗಂಗ–ಬೆಂಗಳೂರು. (೨೩) ತತ್ವವಾದ–ಬೆಂಗಳೂರು. (೨೪) ವಿನೋದ–ಬೆಂಗಳೂರು. (೨೫) ಶರಣಸಾಹಿತ್ಯ–ಬೆಂಗಳೂರು. (೨೬) ಸದ್ಧರ್ಮ ದೀಪಿಕೆ–ಮೈಸೂರು. (೨೭) ವಿವೇಕಾಭ್ಯುದಯ–ಮಂಗಳೂರು. (೨೮) ಯುಗಪುರುಷ–ಕಿನ್ನಿಗೋಳಿ. (೨೯) ಶ್ರೀ ಸುಧಾ–ಬೆಂಗಳೂರು. (೩೦) ಸುಬೋಧ–ಬೆಂಗಳೂರು. (೩೧) ಸೋವಿಯತ್ ದೇಶ–ಮದರಾಸು.

**ತ್ರೈಮಾಸಿಕ ಪತ್ರಿಕೆ :**

(೧) ಮೈಸೂರು ಸಕ್ಕರೆ–ಮಂಡ್ಯ. (೨) ಪ್ರಬುದ್ಧ ಕರ್ನಾಟಕ–ಮೈಸೂರು. ಪುಸ್ತಕಮಿತ್ರ–ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ, ಮದರಾಸು.

**Fortnightly :**—(1) British Information Service, Fortnightly Review of News and Events, Delhi.

**Monthly:**—1. P.E.N., Bombay. 2. Journal of Mysore State Educational Federation, Bangalore. 3. Mysore Information Bulletin, Bangalore. 4. British Book News, London. 5. The Indian Publisher and Book-seller, Bombay.

**By-Monthly:**—1. Journal of the University of Bombay, Bomby. 2. Public Affairs-Gokhale Institute Bangalore.

**Quarterly:**—1. Journal of the Mythic Society, Bangalore. 2. Journal of the Annamalai University, Annamalai Nagar. 3. Bulletin of the Deccan College Research Institute, Poona. 4. Annals of Bhandarkar Oriental Research Institute. 5. Bulletin of the School of Oriental and African Studies, London.

**Half-Yearly :**—Half-Yearly Journal of the Mysore University, Mysore.

# ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | | | | ರೂ. ಪೈ |
|---|---|---|---|---|---|
| ೧. | ಕನ್ನಡದ ಬಾವುಟ ಐದನೆಯ ಮುದ್ರಣ (೧೯೫೮) | | .... | .... | ೨=೦೦ |
| ೨. | ಜೇಮ್ಸ್ ಏಬ್ರಹಾಮ್ ಗಾರ್‌ಫೀಲ್ಡನ ಚರಿತ್ರೆ : ಕ್ಯಾಲಿಕೋ ಪ್ರತಿ (೧೯೩೦) | | | .... | ೧=೫೦ |
| | (ನಾಲ್ಕನೆಯ ಮುದ್ರಣ) ಸಾದಾ ಪ್ರತಿ (೧೯೩೮) | | | .... | ೧=೦೦ |
| ೩. | ಜ್ಯೋತಿರ್ವಿನೋದಿನಿ (೧೯೩೧) | .... | .... | .... | ೨=೦೦ |
| ೪. | ಕನ್ನಡ ನಾಡಿನ ಚರಿತ್ರೆ: ಭಾಗ ೧ | .... | .... | .... | |
| | ,, ಭಾಗ ೨ (ಎರಡನೆಯ ಮುದ್ರಣ ಅಚ್ಚಿನಲ್ಲಿದೆ) | | | .... | ೨=೦೦ |
| | ,, ಭಾಗ ೩ ( ,, ೧೯೫೯).... | | | .... | ೧=೨೫ |
| ೫. | ಹರಿದಾಸ ಸಾಹಿತ್ಯ-ಇಂಗ್ಲಿಷ್ ಉಪೋದ್ಘಾತದೊಡನೆ (೧೯೫೨) | | .... | .... | ೧೦=೦೦ |
| ೬. | ,, ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ (೧೯೫೨) | | | .... | ೮=೦೦ |
| ೭. | ಗಾಳಿಯಲ್ಲಿನ ಅಗೋಚರ ಶತ್ರುಗಳು (೧೯೫೪) | .... | .... | .... | ೧=೨೫ |
| ೮. | ನಕ್ಷತ್ರದರ್ಶನ (೧೯೫೪) | .... | .... | .... | ೧=೫೦ |
| ೯. | ಹರಿದಾಸ ಕೃತಿಮಂಜರಿ (೧೯೫೫) | .... | .... | .... | ೧=೨೫ |
| ೧೦. | ಪ್ಲೇಟೋವಿನ ಆದರ್ಶರಾಜ್ಯ (೧೯೫೬) | .... | .... | .... | ೧=೩೮ |
| ೧೧. | ಚೇರಮ ಕಾವ್ಯಂ (೧೯೫೬) | .... | .... | ... | ೨=೦೦ |
| ೧೨. | ಅನುಭವ ಮುಕುರಂ (೧೯೫೬) | .... | .... | ... | ೦=೩೮ |
| ೧೩. | ಕನ್ನಡದ ಅತ್ಯುತ್ತಮ ಸಣ್ಣ ಕತೆಗಳು (ಮೂರನೆಯ ಸಂಪುಟ ೧೯೫೮) | | | .... | ೪=೦೦ |
| ೧೪. | ಕಾದಂಬರಿ-ಸಾಮಾನ್ಯ ಮನುಷ್ಯ (೧೯೫೭) | .... | .... | .... | ೧=೦೦ |
| ೧೫. | ಉದ್ಭಟದೇವ ಚರಿತೆ (೧೯೫೭) | .... | .... | .... | ೧=೫೦ |
| ೧೬. | ತ್ರಿಪುರದಹನ ಸಾಂಗತ್ಯ (೧೯೫೯) | .... | .... | .... | ೦=೭೫ |
| ೧೭. | ಕಾವ್ಯಗಾಯನ ಕಲಾ ಸಂಗ್ರಹ | .... | .... | .... | ೧=೨೫ |
| ೧೮. | ಗಮಕ ಗೀತೆಗಳು | .... | .... | .... | ೧=೨೫ |
| ೧೯. | ಗಮಕಪ್ರವೇಶದಾಯಿನಿ | .... | .... | .... | ೧=೫೦ |
| ೨೦. | ಗಮಕಪ್ರಚಾರಬೋಧಿನಿ | .... | .... | .... | ೦=೭೫ |
| ೨೧. | ಕಾಳಿದಾಸನ ದೃಷ್ಟಿ-ಸೃಷ್ಟಿ | .... | .... | .... | ೨=೦೦ |

ಪುಸ್ತಕ ವ್ಯಾಪಾರಿಗಳಿಗೆ ಕರ್ಣಾಟಕ ಕವಿಚರಿತೆ ವಿನಾ ಮಿಕ್ಕೆಲ್ಲ ಪುಸ್ತಕಗಳಿಗೆ ಶೇ. 25ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

